ಭಾಗ - 10

# ಪರಿಪೂರ್ಣ ಚಂದ್ರಿಕಾ

ಸೂತ್ರ - ಭಾಷ್ಯ - ಟೀಕಾ - ಟಿಪ್ಪಣಿ - ಮೊದಲಾದ ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ



ಪ್ರಥಮಾಧ್ಯಾಯದ ಚತುರ್ಥಪಾದ ಆಕಾಶಾಧಿಕರಣದಿಂದ -
ಎರಡನೆಯ ಅಧ್ಯಾಯ ಪ್ರಥಮಪಾದ ಅಸದಧಿಕರಣದ ತನಕ

ಪ್ರಕಾಶನ :
ಶ್ರೀಪಾದರಾಜಮಠ
ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ಭಾಗ -೧೦

# ಪರಿಪೂರ್ಣಚಂದ್ರಿಕಾ

ಪ್ರಥಮಾಧ್ಯಾಯದ ಚತುರ್ಥಪಾದ ಆಕಾಶಾಧಿಕರಣದಿಂದ -
ಎರಡನೆಯ ಅಧ್ಯಾಯ ಪ್ರಥಮಪಾದ ಅಸದಧಿಕರಣದ ತನಕ

ಬ್ರಹ್ಮಸೂತ್ರ , ಬ್ರಹ್ಮಸೂತ್ರಭಾಷ್ಯ, ಸೂತ್ರದೀಪಿಕಾ, ತತ್ವಪ್ರಕಾಶಿಕಾ,
ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಅಣುಭಾಷ್ಯ, ತತ್ವಮಂಜರೀ, ತಂತ್ರದೀಪಿಕಾ, ನ್ಯಾಯಮುಕ್ತಾವಳಿ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

\- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

ಪ್ರಕಾಶನ : ಶ್ರೀಪಾದರಾಜಮಠ, ಮುಳುಬಾಗಿಲು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2016

ಬೆಲೆ : 1000

ಪ್ರತಿಗಳು : 1000





ಅಕ್ಷರಜೋಡಣೆ :

ನಾಗಲತಾ(ಸುಧಾ) ಗಿರಿ,
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು.
ದೂರವಾಣಿ : 9141197485

ಮುದ್ರಣ
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

# ಹತ್ತನೆಯ ಸಂಪುಟಕ್ಕೆ ಸಂಪೂರ್ಣ ಸೇವೆ ಸಲ್ಲಿಸಿದ ಮೋಹನ್ ಇವರಿಗೆ ಕೃತಜ್ಞತೆಗಳು



ತಾಯಿ ಶ್ರೀಮತಿ ರಮಾಬಾಯೀ, (೧೦೮ ಶ್ರೀ ಸಿಂಧುತೀರ್ಥರ ಪೂರ್ವಾಶ್ರಮದ ಮೊಮ್ಮಗಳು) ತಂದೆ ಶ್ರೀ ನರಸೀಪುರ ಕೇಶವರಾವ್ ಇವರ ಸಂತೋಷಕ್ಕಾಗಿ ಈ ಸಂಪುಟದ ಸಂಪೂರ್ಣ ವೆಚ್ಚವನ್ನು ಭರಿಸಿ ಶ್ರೀಮತಿ ಗೀತಾ ಮತ್ತು ಶ್ರೀ ಎನ್.ಕೆ. ಮೋಹನ್ ಅವರು ಜ್ಞಾನಪ್ರಪಂಚಕ್ಕೆ ಅತ್ಯದ್ಭುತ ಕೊಡುಗೆಯನ್ನು ನೀಡಿದ್ದಾರೆ. ಈ ಗ್ರಂಥದ ಮೂಲಕ ಪ್ರಸಾರವಾಗುವ ತತ್ವಜ್ಞಾನದ ಪುಣ್ಯದ ರಾಶಿಯು ಶ್ರೀಯುತ ಎನ್.ಕೆ. ಮೋಹನ್ ಅವರಿಗೆ ತಲುಪಿ, ಶ್ರೀಹರಿವಾಯುಗುರುಗಳ ಪೂರ್ಣಾನುಗ್ರಹವಾಗಲಿ. ವಿಶೇಷವಾಗಿ ಶ್ರೀ ವ್ಯಾಸತೀರ್ಥಗುರುಸಾರ್ವಭೌಮರು ಹಾಗೂ ಶ್ರೀಮದ್ ರಾಘವೇಂದ್ರಗುರುಸಾರ್ವಭೌಮರು ಈ ಜೀವನದ ಸಾಧನೆಯನ್ನು ಪರಿಪೂರ್ಣ ಮಾಡಿಸಲಿ.

# ಒಂದು ಬಿನ್ನಹ

ಭಗವದ್ಭಕ್ತರಲ್ಲಿ ನನ್ನ ನಮಸ್ಕಾರಗಳನ್ನು ಅರ್ಪಿಸುತ್ತಾ ಕೆಲವು ಅನಿಸಿಕೆ ಹಾಗೂ ಭಾವನೆಗಳನ್ನು ಹಂಚಿಕೊಳ್ಳಲು ಬಯಸುತ್ತೇನೆ.

ನಾನು ಬೆಮ್ಮತ್ತಿ ವೇಂಕಟೇಶಾಚಾರ್ಯರನ್ನು ಭೇಟಿ ಮಾಡಿದ್ದು ಆಕಸ್ಮಿಕ ಮತ್ತು ದೈವಸಂಕಲ್ಪ. ಅವರ ಈ ಬೃಹತ್ ಯೋಜನೆ ನನ್ನನ್ನು ಬಹಳ ಅವರ ಕಡೆಗೆ ಸೆಳೆಯಿತು. ಈ ಕಾರ್ಯಕ್ಕೆ ನನ್ನನ್ನು ತೊಡಗಿಸಿಕೊಂಡಿದ್ದಕ್ಕೆ ಅವರಿಗೆ ನನ್ನ ಅನಂತ ವಂದನೆಗಳು.

ಮೊದಲನೆಯದಾಗಿ ನನಗೆ ಜನ್ಮ ಕೊಟ್ಟ ನನ್ನ ಮಾತಾ-ಪಿತೃಗಳಿಗೆ ನಾನು ಆಭಾರಿ. ನನ್ನ ತಾಯಿ ದಿ ॥ ರಮಾಬಾಯಿ ಸೋಸಲೆ ವ್ಯಾಸರಾಯರ ಪರಂಪರೆಯಲ್ಲಿ ಬಂದ ೧೦೮ ಶ್ರೀ ಸಿಂಧುತೀರ್ಥರ ಪೂರ್ವಾಶ್ರಮದ ಮೊಮ್ಮಗಳು (ಸೋಸಲೆ ಪಟ್ಟಾಭಿರಾಮಾಚಾರ್ಯರ ಪುತ್ರಿ). ನನ್ನ ತಂದೆ ದಿ॥ ಕೇಶವರಾಯರು ಪರೋಪಕಾರಿಗಳಾಗಿ ಜೀವನ ಸಾಗಿಸಿದರು.

ನನ್ನ ತಾತ ಎನ್. ಸುಬ್ಬರಾಯರು ಇಂಜಿನೀಯರ್ ಆಗಿ ಸರ್. ಎಂ. ವಿಶ್ವೇಶ್ವರಯ್ಯನವರ ಕೈಕೆಳಗೆ ಕೆಲಸ ಮಾಡಿ ಇವತ್ತು ಸಾವಿರಾರು ಜನರು ಮತ್ತು ರೈತರಿಗೆ ನೀರು ಒದಗಿಸುತ್ತಿರುವ ಕೆ.ಆರ್.ಎಸ್. ಆಣೆಕಟ್ಟನ್ನು ಕಟ್ಟಲು ಶ್ರಮವಹಿಸಿದ್ದಾರೆ. ಮತ್ತು ಬೆಂಗಳೂರಿನ ಸಮೀಪವಿರುವ ನಂದಿ ಬೆಟ್ಟಕ್ಕೆ ದಾರಿ ಅನುಕೂಲ ಮಾಡಿದ್ದಾರೆ. ಇವತ್ತಿಗೂ ನನ್ನ ತಾತನವರ ಹೆಸರು ಕೆತ್ತಿಸಿರುವ ಫಲಕವನ್ನು ಕೆ.ಆರ್.ಎಸ್. ಡ್ಯಾಮ್ ಮತ್ತು ನಂದೀಬೆಟ್ಟದಲ್ಲಿ ಕಾಣಬಹುದು.

ಇನ್ನು ಶ್ರೀ ಶ್ರೀಪಾದರಾಯರ ಮಠದ ಪರಂಪರೆಯಲ್ಲಿ ಬಂದ ೧೦೮ ಶ್ರೀ ಸತ್ಯನಿಧಿತೀರ್ಥರ ಪೂರ್ವಾಶ್ರಮದ ಸೊಸೆಯಾಗಿ ನನ್ನ ಸೋದರತ್ತೆ ದಿ॥ ಸುಮಿತ್ರಾ (ಭಾಗೀರಥಿ) ಆಗಿದ್ದು ಅವರ ಗಂಡ ದಿ॥ ಬಾದರಾಯಣಾಚಾರ್ಯರು ಶ್ರೀಪಾದ ಪುತ್ರರು.

ಪ್ರಸಕ್ತ ಪೀಠಾಧಿಪತಿಗಳಾದ ೧೦೮ ಶ್ರೀ ಕೇಶವನಿಧಿತೀರ್ಥರಿಗೆ ಪೂರ್ವಾಶ್ರಮದಲ್ಲಿ ಪಾಠ ಹೇಳಿದ ಭಾಗ್ಯ ನನ್ನ ಅಕ್ಕ ಶ್ರೀಮತಿ ಉಮಾ ಅವರ ಗಂಡ ಶ್ರೀ ಬಿ.ಎನ್.ಎಲ್. ರಾವ್ ಅವರಿಗೆ ಸೇರುತ್ತದೆ.

ಈ ಮೇಲಿನ ನಿಕಟ ಸಂಬಂಧದಿಂದ ನನಗೆ ಕಿಂಚಿತ್ ಸಹಾಯ ಮಾಡಲು ಭಗವಂತನ ಕೃಪೆ ಆಯಿತೆಂದು ನನ್ನ ಭಾವನೆ. ಈ ಜ್ಞಾನಕಾರ್ಯದಿಂದ ದೊರೆಯುವ ಮಹಾಫಲವು ನನ್ನ ತಂದೆ ನರಸೀಪುರ ಕೇಶವರಾವ್, ತಾಯಿ ಶ್ರೀಮತಿ ರಮಾಬಾಯಿ ಇವರಿಗೆ ದೊರಕಲಿ. ನನಗೆ ಗುರುಹಿರಿಯರ ಅನುಗ್ರಹವಾಗಲಿ.

ಎನ್.ಕೆ. ಮೋಹನ್
ಬಸವನಗುಡಿ, ಬೆಂಗಳೂರು.

# ವಿಷಯಾನುಕ್ರಮಣಿಕೆ

## ಪ್ರಥಮಾಧ್ಯಾಯ
## ಆಕಾಶಾಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೧-೧೪ |
| ತಾತ್ಪರ್ಯಚಂದ್ರಿಕಾ | ೧೫-೫೮ |
| ಆಕಾಶಾಧಿಕರಣದ ಪರಿಶಿಷ್ಟಗ್ರಂಥಗಳು | ೫೯-೭೨ |


## ಸಮಾಕರ್ಷಾಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೭೩-೧೨೮ |
| ತಾತ್ಪರ್ಯಚಂದ್ರಿಕಾ | ೧೨೯-೨೧೬ |
| ಸಮಾಕರ್ಷಾಧಿಕರಣದ ಪರಿಶಿಷ್ಟಗ್ರಂಥಗಳು | ೨೧೭-೨೩೪ |


## ಪ್ರಕೃತ್ಯಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೨೩೫-೨೭೨ |
| ತಾತ್ಪರ್ಯಚಂದ್ರಿಕಾ | ೨೭೩-೩೬೨ |
| ಪ್ರಕೃತ್ಯಧಿಕರಣದ ಪರಿಶಿಷ್ಟಗ್ರಂಥಗಳು | ೩೬೫-೩೭೬ |


## ಏತೇನಾಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೩೭೭-೩೯೦ |
| ತಾತ್ಪರ್ಯಚಂದ್ರಿಕಾ | ೩೯೧-೪೪೮ |
| ಏತೇನಾಧಿಕರಣದ ಪರಿಶಿಷ್ಟಗ್ರಂಥಗಳು | ೪೫೧-೪೬೦ |

## ಎರಡನೆಯ ಅಧ್ಯಾಯ - ಸ್ಮೃತ್ಯಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೪೬೧-೪೮೨ |
| ತಾತ್ಪರ್ಯಚಂದ್ರಿಕಾ | ೪೮೩-೫೭೪ |
| ಸ್ಮೃತ್ಯಧಿಕರಣದ ಪರಿಶಿಷ್ಟಗ್ರಂಥಗಳು | ೫೭೫-೫೯೪ |


## ನ ವಿಲಕ್ಷಣತ್ವಾಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೫೯೫-೬೧೬ |
| ತಾತ್ಪರ್ಯಚಂದ್ರಿಕಾ | ೬೧೭-೬೪೦ |


## ಅಭಿಮಾನ್ಯಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೬೪೧-೬೫೬ |
| ತಾತ್ಪರ್ಯಚಂದ್ರಿಕಾ | ೬೫೭-೬೯೦ |


## ಅಸದಧಿಕರಣ


| | |
|---|---|
| ಭಾಷ್ಯ ತತ್ವಪ್ರಕಾಶಿಕಾ | ೬೯೧-೭೧೮ |
| ತಾತ್ಪರ್ಯಚಂದ್ರಿಕಾ | ೭೧೯-೭೮೮ |

# ಹತ್ತನೆಯ ಸಂಪುಟಕ್ಕೆ
# ಮುನ್ನುಡಿ

ಅಜ್ಞಾನದ ಎಡಬಿಡದ ತುಳಿತ..... ಭಾವನೆಗಳ ಒತ್ತಡ ...... ಬೇಕು ಬೇಕು ಎಂಬ ಬೆಂಕಿಯ ಕಾವು..... ತಡೆದುಕೊಳ್ಳಲಾಗದಂತಹ ನೂರಾರು ನೋವುಗಳು ......... ಇಂಥೆಲ್ಲಾ ದುಃಖಗಳಿಗೆ ಸುಂದರ ಕವಚದಂತಿರುವ ಮುಖ. ನಿಬಿಡವಾಗಿ ಭದ್ರವಾಗಿ ದುಃಖಗಳನ್ನು ತುಂಬಿಕೊಂಡು ''ನನಗೇನೂ ಕಷ್ಟವೇನು ಇಲ್ಲಪ್ಪಾ'' ಎನ್ನುವ ಸುಂದರ ಮುಖವಾಡದ ಮುಖವಿದು.....!!!

ಪರಿಪೂರ್ಣಚಂದ್ರಿಕಾ

ಮೊದಲು ತಲೆ ಸರಿಯಾಗಬೇಕು, ಅದಕ್ಕೆ ಅಂತರಂಗದ ಕಣ್ಣು ತೆರೆಯಬೇಕು.....!!

ಆದರೆ ಮನಸ್ಸು ಕತ್ತಲಲ್ಲಿ ಮಲಗಿ ನಿದ್ರಿಸುತ್ತಿದೆ. ಬೆಳಕು, ಮಿಂಚು, ಚೆಲುವುಗಳು ಇದ್ದರೆ ನಿದ್ದೆ ಬರುವುದಿಲ್ಲ. ಕಣ್ಣಿಗೆ ಬಿಡುವೂ ಇರುವುದಿಲ್ಲ......!!

ಮೊದಲಿಂದಲೂ ಕತ್ತಲೆ ಸೆರೆಮನೆಯಲ್ಲಿ ಬಂಧಿಸಿದ ಒಳಗಣ್ಣಿಗೆ ಬೆಳಕಿನ ಪರಿಚಯ ಎಂತು....?

ಒಮ್ಮೆ ಪರಿಚಯವಾದರೆ ಮುಂದೆ ಹೆಜ್ಜೆ ಮೂಡದ ಎದೆಯಲ್ಲಿ ಗೆಜ್ಜೆ ಕಟ್ಟಿ ಕುಣಿಯುತ್ತದೆ. ಕತ್ತಲ ಕೋಣೆಗೆ ಬೀಗಮುದ್ರೆ ಜಡಿಯುತ್ತದೆ. ತಲೆಯಲ್ಲಿ ವಿವೇಕ ತುಂಬುತ್ತದೆ. ನೋಡಿದಲ್ಲೆಲ್ಲಾ ಕಣ್ಣಿನಿಂದ ತುಳುಕಿದ ಹಾಲು ಹರಿಯುತ್ತದೆ. ತುಟಿಯಂಚಿನಲ್ಲೂ ಹಾಲು ನಗೆ ತುಳುಕುತ್ತದೆ......!!!!

ಒಳಗೀಗ ಒಡಂಬಡಿಕೆಯ ಹೊಸದಾರಿ ..... ಮುಗಿಲನಷ್ಟೇ ಕುತೂಹಲ..... ನಡುಹಗಲಿನಲ್ಲಿ ಅಚ್ಚುಮೆಚ್ಚಾದ ಕನಸುಗಳು ....... ಅದಕ್ಕಾಗಿ ವಿನಯದಿಂದ ಬಾಗಿದ ದೇಹ ......

ಬೆಳದಿಂಗಳ ಹಾಲು ಹರಿಯುತ್ತಿದೆ. ಅದರ ಪಾನಕ್ಕಾಗಿ ವೇಗದ ಓಟ ...... ವೇಗವೂ ಸಹ ಮಿಂಚಿನದು ......

ಬೆಳದಿಂಗಳ ಹಿಂದೊಂದು ವಿಶಾಲ ಚಂದ್ರಮಂಡಲ ..... ಈಗ ಸೂರ್ಯನತ್ತ ಚಂದ್ರನ ಹೆಜ್ಜೆ ..... ಅಪರಂಪಾರ ಮುಗಿಲ ಸಮುದ್ರದಲ್ಲಿ ಸೂರ್ಯನ ಹೆಜ್ಜೆ ...... !!!!

ಗಾಳಿ ನೆಲ ಗುಡಿಸಿದೆ, ಮುಗಿಲು ತಳಿ ಹಾಕಿದೆ, ಹಕ್ಕಿಗಳು ಸುಪ್ರಭಾತ ಎಂದಿವೆ. ದಿಕ್ಕು-ವಿದಿಕ್ಕುಗಳಲ್ಲಿ ಹೂವುಗಳು ಗಂಧಚೆಮ್ಮಿವೆ. ಗಿಡ-ಮರ-ಬಳ್ಳಿಗಳು ಜಳಕ ಮಾಡಿವೆ..... !!!!

ಇಲ್ಲಿ ಗೊಬ್ಬರದ ಗಿಡಮರಗಳು, ವಿಷಮಿಶ್ರಿತ ಆಹಾರ ಪದಾರ್ಥಗಳು, ಪ್ಲಾಸ್ಟಿಕ್ ಹೂವುಗಳು, ಕಾಂಕ್ರೀಟಿನ ಕಟ್ಟಡಗಳು, ಇಂಥ ವಿಕೃತಿಯ ಪ್ರಕೃತಿಗೆ ಅವಕಾಶವಿಲ್ಲ.....!!!!

ಓಹೋ....... !!!! ಎಲ್ಲೂ ......... ಜನಸಂದಣಿ ಇಲ್ಲ, ಇರುವವರು ಕೆಲವರೇ. ಪ್ರತಿಯೊಬ್ಬರಿಗೂ ಹಸಿವೆಯೋ, ಹಸಿವೆ. ಹಸಿವೆಗಾಗಿ ಅಭಿರುಚಿ ಹೆಚ್ಚಿಸಿಕೊಳ್ಳುವ ಪ್ರವೃತ್ತಿ ಇವರದ್ದು. ಹೊಟ್ಟೆ ತುಂಬಿಸಿಕೊಂಡಷ್ಟು ಹೆಚ್ಚುವ ಹಸಿವು ಇವರದ್ದು......!!!!

ಅಂದಹಾಗೆ ...... ನಿಸ್ಸಾರ, ನಿರ್ವೀರ್ಯ, ಬಗೆ-ಬಗೆಯ ಚರಟಗಳನ್ನು ಮೂಗಿನ ತನಕ ತುರುಕಿ, ಉಳಿದ ಹಳಸಿದ್ದನ್ನು ರಾತ್ರಿಗೆ ಮುಚ್ಚಿಟ್ಟುಕೊಳ್ಳುವ ಹೊಟ್ಟೆ ಬಾಕರು ಇವರಲ್ಲ........!!!!

ಸೂರ್ಯ, ಚಂದ್ರರ ಬೆಳಕುಗಳು ಬೀಸುವ ಗಾಳಿ, ಇವುಗಳೇ ಇವರ ಆಹಾರ. ಪಕ್ಷಿಗಳ ಕಲರವ ಇವರಿಗೆ ಉಪ್ಪಿನಕಾಯಿ. ಗ್ರಹ-ನಕ್ಷತ್ರಗಳ ಬೆಳಕುಗಳು ಬಗೆ ಬಗೆಯ ರಸಾಯನ.....!!!!

ಇದು ಸ್ವರ್ಗವಲ್ಲ. ಇದು ಮೋಕ್ಷ ಅಲ್ಲವೇ ಅಲ್ಲ. ಇಲ್ಲಿಯಂತೆ ಪ್ರತಿಯೊಬ್ಬರೂ ಲೌಕಿಕ ಸುಖ-ದುಃಖಗಳಿಂದ ಬಾಧ್ಯರು.....!!!!

ಹಾಗಾದರೆ ...... ಇದು ...... ಏನು ...... ? ಎಂತು ..... ? ಎಂಬ ವಿಸ್ಮಯವೇ ..... !!!!

ಪರಿಪೂರ್ಣಚಂದ್ರಿಕಾ

ಇದು ಬೇರೇನೂ ಅಲ್ಲ. ವಾಙ್ಮಯ ಪ್ರಪಂಚದ ಒಂದು ಪಕ್ಷಿನೋಟ. ಮೋಕ್ಷಸಾಧಕ ಜ್ಞಾನಪಿಪಾಸುಗಳೇ ಇಲ್ಲಿನ ಪ್ರಜೆಗಳು. ಬ್ರಹ್ಮಸೂತ್ರಗಳೇ ಮುಗಿಲು. ಸರ್ವಮೂಲಗ್ರಂಥಗಳೇ ಗಾಳಿ. ತತ್ತ್ವಪ್ರಕಾಶಿಕೆಯೇ ಸೂರ್ಯ. ತಾತ್ಪರ್ಯಚಂದ್ರಿಕೆಯೇ ಚಂದ್ರ. ರಾಯರ ಪ್ರಕಾಶವೇ ಬೆಳದಿಂಗಳು. ಅನೇಕ ಟಿಪ್ಪಣಿಗಳೇ ಚಿಲಿ-ಪಿಲಿಗುಟ್ಟುವ ಹಕ್ಕಿಗಳ ನಾದ-ನಿನಾದ. ಕನ್ನಡದ ಭಾಷಾಂತರವೇ ಗ್ರಹ-ನಕ್ಷತ್ರಗಳ ಬೆಳಕು.

ಈಗ 'ತತ್ತ್ವಪ್ರಕಾಶಿಕಾ' 'ತಾತ್ಪರ್ಯಚಂದ್ರಿಕಾ' ಎಂಬ ಸೂರ್ಯ-ಚಂದ್ರರು ನಮ್ಮ ಅಧ್ಯಾತ್ಮ ಪ್ರಪಂಚದಲ್ಲಿ ಬೆಳಗುತಿಹರು. ಇವರ ಬೆಳಕು ಕುಡಿದು ಹೊಟ್ಟೆ ತುಂಬಿಸಿಕೊಳ್ಳೋಣ. ಮಿಂಚುಹುಳುವಾದರೂ ಅಡ್ಡಿಯಿಲ್ಲ. ಬೆಳಕು ಕುಡಿದು ಬೆಳಕಿನ ಮಕ್ಕಳಾಗೋಣ.

## ಆಯಿತು ಹತ್ತು
## ಉಳಿಯಿತು ಎರಡು

''ಹತ್ತು'' ಪರಿಪೂರ್ಣತೆಯ ಹೆಸರು. ಇಟ್ಟ ಹೆಸರೀಗ ಅನ್ವರ್ಥಕ. ತಾತ್ಪರ್ಯಚಂದ್ರಿಕಾ ಕನ್ನಡದಲ್ಲಿ ಪರಿಪೂರ್ಣಚಂದ್ರಿಕಾ ಎನಿಸಿತು. ''ಹತ್ತು'' ಪರಿಪೂರ್ಣ ಹೌದು; ಆದರೆ ಇದೇ ಕೊನೆಯಲ್ಲ. ಹಾಗಾದಲ್ಲಿ ಹನ್ನೊಂದುಗಳೇ ಇಲ್ಲವಾದಾವು.

ಪರಿಪೂರ್ಣಚಂದ್ರಿಕೆಯು ಇಲ್ಲಿಗೆ ಕೊನೆ ಕಂಡಿಲ್ಲ. ಬಾಕಿ ಎರಡು ತುಂಬಲೇ ಬೇಕು. ಆಗ ಇದು ಪರಿಪೂರ್ಣ, ಚಂದ್ರಿಕೆಯೂ ಪರಿಪೂರ್ಣ, ಸಂಕಲ್ಪಿತ ಯೋಜನೆಯೂ ಪರಿಪೂರ್ಣ, ಗ್ರಂಥವೂ ಪರಿಪೂರ್ಣ. ''ಎತ್ತಲಾಗದ ಪರಿಪೂರ್ಣಚಂದ್ರಿಕಾ'' ಗ್ರಂಥಗಳು ಇಲ್ಲಿಗೆ ಮುಗಿದವು ಎಂದು ನಿಟ್ಟುಸಿರು ಬಿಡಬಹುದು. ಕಪಾಟಿನಲ್ಲಿ ಜೋಡಿಸಿಟ್ಟು ಬೀಗಮುದ್ರೆಯನ್ನು ಜಡಿಯಲೂ ಬಹುದು......!!!!

ಊಹ್ಞೂಂ..... ಇಲ್ಲ ....... ಇಲ್ಲವೇ ಇಲ್ಲ........ ಮುಗಿದಿಲ್ಲ ........ಮುಗಿಯುವುದೂ ಇಲ್ಲ.

ಹ್ಞಾ' ಅಯ್ಯೋ ..... ನಮ್ಮಿಂದ ಸಾಧ್ಯವಿಲ್ಲ. ಇನ್ನು ದುಡ್ಡುಕೊಟ್ಟು ಕೊಳ್ಳಲು ಆಗುವುದೇ ಇಲ್ಲ.....'

ಇಲ್ಲಿ 'ಕೊಡುವವನೂ ಅವನೇ, ಕೊಂಬುವವನು ಅವನೇ' ಅವನಿಗೇ ಇಲ್ಲದ ಚಿಂತೆ ನಮಗೇಕೆ ?

ಹಾಗಾದರೆ ಹನ್ನೆರಡಕ್ಕೂ ಮುಗಿಯದಿದ್ದರೆ ಎಷ್ಟಕ್ಕೆ ಮುಗಿತ...... ?

ಶ್ರೀವ್ಯಾಸತೀರ್ಥರು ಎರಡು ಅಧ್ಯಾಯಗಳಿಗೆ ಮಾತ್ರ ಚಂದ್ರಿಕೆ ಬರೆದರು. ಆದರೆ ಉಳಿದೆರಡಕ್ಕೆ ಶೇಷಚಂದ್ರಿಕಾಚಾರ್ಯರು ಬರೆದಿರುವರು. ಅವರದ್ದನ್ನೂ ಪೂರ್ಣ ಮಾಡಿದಾಗಲೇ ಶೇಷ ನಿಶ್ಶೇಷ. ಇದು ಪರಿಪೂರ್ಣ. ಒಳಗಿದ್ದು ಅವನು ಮಾಡಿಸಿದರೆ ಮಾತ್ರ ಇದು ಪರಿಪೂರ್ಣ. ಇಲ್ಲದಿದ್ದರೆ ನಿಂತಲ್ಲೇ ಪರಿಪೂರ್ಣ. ಪರಿಪೂರ್ಣ ಮಾಡಿಸಲಿ ಎಂದು ಆ ಪರಿಪೂರ್ಣನಲ್ಲಿ ಪರಿಪೂರ್ಣವಾದ ಇದೊಂದು ಬಿನ್ನಹ.

# ಕೃತಜ್ಞತೆಗಳು

ಶ್ರೀಪಾದರಾಜಮಠದ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ ಕೇಶವನಿಧಿತೀರ್ಥಶ್ರೀಪಾದಂಗಳವರ ತುಂಬು ಹೃದಯದ ಆಶೀರ್ವಾದದ ಬಲದಿಂದ ಈ ಸಂಪುಟವು ಮುದ್ರಣವಾಗುತ್ತಿದೆ. ಶ್ರೀಪಾದಂಗಳವರಿಗೆ ನನ್ನ ಅನಂತ ನಮಸ್ಕಾರಗಳು.

ಪರಿಪೂರ್ಣಚಂದ್ರಿಕೆ ಎಂಬ ಯೋಜನೆಯ ಸಾರಥ್ಯವನ್ನು ವಹಿಸಿಕೊಂಡಿರುವ ಶ್ರೀಯುತ ಹೆಚ್.ಬಿ. ನಾರಾಯಣಾಚಾರ್ಯರಿಗೆ ಅನಂತ ಕೃತಜ್ಞತೆಗಳು. ಇವರ ಉತ್ಸಾಹ-ಪ್ರೋತ್ಸಾಹಗಳಿಗೆ ಎಂದೆಂದೂ ಚಿರಋಣಿಯಾಗಿರುವೆ. ಇವರ ಅಪೇಕ್ಷೆ ಹಾಗೂ ಉತ್ಸಾಹಗಳಂತೆ ಈ ಸಂಪುಟವು ಸುಮಾರು ಎರಡು ವರ್ಷಗಳ ಹಿಂದೆಯೇ ಮುದ್ರಣವಾಗಬೇಕಿತ್ತು. ಆದರೆ ಅದು ನನ್ನಿಂದ ತಡವಾಗಿದೆ. ಇನ್ನು ಎರಡು ಸಂಪುಟಗಳು ಇವರ ಸಾರಥ್ಯದಲ್ಲಿ ಆದಷ್ಟು ಬೇಗ ಮುದ್ರಣವಾಗುವಂತೆ ಪ್ರಯತ್ನಿಸುವೆ.

ಪ್ರತಿಯೊಂದು ಸಂಪುಟಕ್ಕೂ ಸಹಯೋಗ ನೀಡಿದ ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧, ಯು.ಎಸ್.ಎ. ಇವರಿಗೆ ಅನಂತ ಕೃತಜ್ಞತೆಗಳು. ಶ್ರೀಹರಿವಾಯುಗುರುಗಳು ಶ್ರೀನಿವಾಸಪ್ರಹ್ಲಾದ ಇವರಿಗೆ ಜ್ಞಾನಭಕ್ತಿ ವೈರಾಗ್ಯಗಳನ್ನು ಅನುಗ್ರಹಿಸಲಿ. ಹಾಗೂ ಶ್ರೀವ್ಯಾಸತೀರ್ಥರು ವಿಶೇಷ ಅನುಗ್ರಹವನ್ನು ಉಂಟುಮಾಡಲಿ.

# ಹತ್ತನೆಯ ಸಂಪುಟದ ಪ್ರಕಾಶನಕ್ಕೆ ಕಾರಣರಾದರು
# ಮೋಹನ್

''ನೋಡಲು ಅವರೊಬ್ಬ ತೀರಾ ಸಾಧಾರಣ ವ್ಯಕ್ತಿ. ಆಗಾಗ ಮನೆಗೆ ಬಂದು ಇಷ್ಟಪಟ್ಟು ಪುಸ್ತಕ ತೆಗೆದುಕೊಳ್ಳುವುದು ಇವರ ಹವ್ಯಾಸ. ಹೆಚ್ಚು ಮಾತಿಲ್ಲ. ಕೆಲಸ ಮುಗಿಯಿತೆಂದರೆ ಕ್ಷಣಕಾಲವೂ ವ್ಯರ್ಥ ಮಾಡುವ ಸ್ವಭಾವ ಇವರದ್ದಲ್ಲ. ನಿವೃತ್ತಜೀವನದಲ್ಲಿದ್ದರೂ ಜ್ಞಾನದ ಅಭಿರುಚಿ ಬೆಳೆಸಿಕೊಳ್ಳುತ್ತಲೇ ಇರುವ ಸ್ವಭಾವ ಇವರದು''.

ಇವರನ್ನು ಕಂಡಾಗಲೆಲ್ಲಾ ನನಗೆ ಹೀಗನಿಸುತ್ತಿತ್ತು. ಇಷ್ಟು ಬಿಟ್ಟು ಹೆಚ್ಚಿನ ಪರಿಚಯ ನನಗಿರಲಿಲ್ಲ. ಆದರೆ ಇವರೇ ಮುಂದೆ ಪರಿಪೂರ್ಣಚಂದ್ರಿಕಾ ಬೃಹತ್ ಯೋಜನೆಯ ಅವಭೃಥವನ್ನು ಮಾಡಿಸುವವರೆಂದು ಕನಸಿನಲ್ಲೂ ಊಹಿಸಿರಲಿಲ್ಲ. ಅದೊಂದು ದಿನ ಘಂಟೆ ಸುಮಾರು ಹನ್ನೊಂದಾಗಿತ್ತು. ಪುಸ್ತಕ

ತೆಗೆದುಕೊಳ್ಳಲು ಇದೇ ಮೋಹನ್ ಅವರು ಮನೆಗೆ ಆಗಮಿಸಿದರು. ಆಕಸ್ಮಿಕವಾಗಿ ''ವರ್ಷಗಳುರುಳಿದರೂ ಪರಿಪೂರ್ಣಚಂದ್ರಿಕೆಯ ಮುಂದಿನ ಭಾಗಗಳು ಏಕೆ ಬರೆಯುತ್ತಿಲ್ಲ ?'' ಎಂದು ಪ್ರಶ್ನಿಸಿದರು.

''ಬರೆದದ್ದು ಮುಗಿದಿದೆ. ಹಣದ ಮುಗ್ಗಟ್ಟಿನಿಂದ ಯೋಜನೆ ನಿಂತಿದೆ'' ಎಂದು ಉತ್ತರಿಸಿ ಸುಮ್ಮನಾದೆ. ಆಗ ಮೋಹನ್ ಅವರು 'ಆಚಾರ್ಯರೇ ! ನಿಮ್ಮ ಕಷ್ಟ ಅರ್ಥವಾಯಿತು. ಮುಂದಿನ ಸಂಪುಟಗಳಿಗೆ ಚಿಂತಿಸಬೇಡಿರಿ. ದೇವರನ್ನು ನಂಬಿ ಮುಂದುವರೆಯುತ್ತೇನೆ. ನಿಮ್ಮ ಮುದ್ರಣದ ಹಣದ ಮುಗ್ಗಟ್ಟನ್ನು ಪರಿಹರಿಸಲು ಪ್ರಯತ್ನಿಸುತ್ತೇನೆ' ಎಂದು ಉತ್ತರಿಸಿದರು.

ನಿವೃತ್ತಜೀವನದಲ್ಲಿದ್ದರೂ ಇವರ ಮನೋಧೈರ್ಯ, ತ್ಯಾಗ, ಜ್ಞಾನನಿಷ್ಠೆ, ಪರೋಪಕಾರ ಬುದ್ಧಿ, ಈ ಎಲ್ಲಾ ಗುಣಗಳನ್ನು ಕಂಡು ನಾನು ವಿಸ್ಮಿತನಾದೆ. ಭಗವಂತನಿಗೆ ಶರಣೆಂದು ಮುಂದಿನ ಸಂಪುಟದ ಪ್ರಕಾಶನವನ್ನು ಕೈಗೆತ್ತಿಕೊಂಡೆ.

ಶ್ರೀಮತಿ ರಮಾಬಾಯೀ, ಮತ್ತು ಶ್ರೀ ನರಸೀಪುರ ಕೇಶವರಾವ್ ಇವರ ಪುತ್ರರಾದ ಮೋಹನ್ ಅವರ ಜನ್ಮ ಸಾರ್ಥಕವಾಗಲಿ. ಅವರಿಗೆ ಶ್ರೀಹರಿವಾಯುಗುರುಗಳು ಪರಿಪೂರ್ಣವಾಗಿ ಅನುಗ್ರಹವನ್ನುಂಟು ಮಾಡಿ ಮುಂದಿನ ಜನ್ಮಗಳೇ ಬಾರದಂಥ ಅಪಾರ ಪುಣ್ಯರಾಶಿಯನ್ನು ಶ್ರೀವ್ಯಾಸತೀರ್ಥರು ಕರುಣಿಸಲೆಂದಷ್ಟೇ ಪ್ರಾರ್ಥಿಸುತ್ತೇನೆ.

ಇತಿ ಲೇಖಕ

ವಿ. ಬೆಮ್ಮತ್ತಿ ವೇಂಕಟೇಶಾಚಾರ್ಯ

# ಚತುರ್ಥಪಾದದ ಸಾರಾಂಶ
# ಆಕಾಶಾಧಿಕರಣ

### ಆನಂತರ್ಯಸಂಗತಿ ಹಾಗೂ ಸಂಶಯಪರಂಪರೆ

ಆಕಾಶಾಧಿಕರಣದಲ್ಲಿ ಪರಮಾತ್ಮನು ಅವಾಂತರಕಾರಣನಾಗಿದ್ದಾನೆಂದು ಸಮರ್ಥಿಸಲಾಗಿದೆ. ಈ ಅಧಿಕರಣದಲ್ಲಿ 'ಆಕಾಶ' ಎಂಬ ಶಬ್ದದ ಸಮನ್ವಯವು ಮುಖ್ಯವಾದ ಉದ್ದೇಶವಲ್ಲ. ತೈತ್ತಿರೀಯಶ್ರುತಿಯ ಬ್ರಹ್ಮವಲ್ಲಿಯಲ್ಲಿ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ' ಇತ್ಯಾದಿಯಾದ ವಾಕ್ಯಗಳು ಶ್ರುತವಾಗಿವೆ. ಆತ್ಮನಿಂದ ಆಕಾಶವು ಹುಟ್ಟಿತು. ಆಕಾಶದಿಂದ ವಾಯುವು ಹುಟ್ಟಿತು ಎಂಬುದು ಇದರ ಅಭಿಪ್ರಾಯ. ಆತ್ಮನಿಂದ ಹುಟ್ಟಿದ ಆಕಾಶವು ಕಾರ್ಯರೂಪವನ್ನು ತಾಳಿದೆ. ಆದರೆ ವಾಯುವಿನ ಹುಟ್ಟುವಿಕೆಗೆ ಕಾರಣವಾದ್ದರಿಂದ, ಕಾರಣಸ್ವರೂಪವನ್ನೂ ಕೂಡ ತಾಳಿದೆ. ಯಾವ ಪದಾರ್ಥವು ಕಾರ್ಯವೂ, ಕಾರಣವೂ ಆಗಿರುತ್ತದೋ, ಅದನ್ನೇ ಅವಾಂತರಕಾರಣವೆಂದು ಕರೆಯುತ್ತಾರೆ. ಪ್ರಕೃತ ಆಕಾಶವು ಆತ್ಮನಿಂದ ಹುಟ್ಟಿ, ವಾಯುವಿಗೆ ಕಾರಣವೂ ಆಗಿರುವುದರಿಂದ ಅವಾಂತರಕಾರಣವೆಂದು ಇದನ್ನು ಕರೆಯಬೇಕು. ಈ ತೈತ್ತಿರೀಯಶ್ರುತಿಯಲ್ಲಿ ಅವಾಂತರ ಕಾರಣತ್ವವು ಆಕಾಶಕ್ಕೆ ನೇರವಾಗಿ ಹೇಳಲ್ಪಡದಿದ್ದರೂ ಅರ್ಥಾತ್ ತಿಳಿಯುತ್ತಿದೆ. ಅರ್ಥಾತ್‌ಸಿದ್ಧವಾದ ಅವಾಂತರ ಕಾರಣತ್ವ ಎಂಬ ಧರ್ಮವೂ ಕೂಡ ಮಹಾವಿಷ್ಣುವಿನಲ್ಲೇ ಇರುತ್ತದೆ. ಈ ಭೂತಾಕಾಶಾದಿಗಳಲ್ಲಿರಲು ಸಾಧ್ಯವಿಲ್ಲ ಎಂಬುದು ಈ ಅಧಿಕರಣದ ಉದ್ದೇಶ.

ಹಿಂದಿನ ಅಧಿಕರಣದಲ್ಲಿ ಒಬ್ಬನೇ ಪರಮಾತ್ಮನಿಗೆ ಆಧಾರಾಧೇಯಭಾವವನ್ನು ಸಮರ್ಥಿಸಲಾಯಿತು. ಕಾಲವು ಯಾವಾಗಲೂ ಇರುತ್ತದೆ ಎಂದು ಶಬ್ದಪ್ರಯೋಗಿಸಿದಾಗ ಕಾಲದಲ್ಲಿಯೇ ಕಾಲವನ್ನು ಎಲ್ಲರೂ ಒಪ್ಪುತ್ತಾರೆ. ಅದರಂತೆ ಒಬ್ಬನೇ ಪರಮಾತ್ಮನು ತನ್ನಲ್ಲಿ ತಾನು ನೆಲೆಸಬಹುದು. ಆದರೆ ಯಾವುದೇ ಒಂದು ಪದಾರ್ಥ ಕಾರ್ಯವೂ ಹಾಗೂ ಕಾರಣವೂ ಆಗಿರುವುದು ಕಂಡಿರುವುದಿಲ್ಲ. ಯಾವಾಗ ಪರಮಾತ್ಮನು ಜಗತ್ತಿಗೆ ಕಾರಣನೆಂದಾಗುತ್ತಾನೋ, ಅದೇ ಪರಮಾತ್ಮನು ಪುನಃ ಕಾರ್ಯಸ್ವರೂಪವನ್ನು ತಾಳಲು ಸಾಧ್ಯವಿಲ್ಲ. ಹೀಗಿರುವಾಗ ಪರಮಾತ್ಮನಲ್ಲಿ ಅವಾಂತರಕಾರಣತ್ವವೆಂಬ ಧರ್ಮವನ್ನು ಹೇಗೆ ಸಮನ್ವಯ ಮಾಡುತ್ತೀರಿ? ಎಂಬುದಾಗಿ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದ ಮೇಲೆ ಪ್ರತ್ಯುದಾಹರಣ ರೂಪವಾದ ಸಂಗತಿಯು ಈ ಅಧಿಕರಣಕ್ಕಿರುತ್ತದೆಂಬುದನ್ನು ಗಮನಿಸಬೇಕು.

ಒಂದೇ ಪದಾರ್ಥಕ್ಕೆ ಜನ್ಯಜನಕಭಾವವು ಯುಕ್ತವಾಗದ ಕಾರಣ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬೇಕಾಗುತ್ತದೆ. ಆದ್ದರಿಂದ ಆಕಾಶಾದಿಶಬ್ದಗಳು ಅನ್ಯಪರವಾಗುತ್ತದೆಂಬ ಸಮರ್ಥನೆಯು ಪೂರ್ವಪಕ್ಷಕಾರರ ಉದ್ದೇಶ.

ಪರಿಪೂರ್ಣಚಂದ್ರಿಕಾ

ಒಂದೇ ಪದಾರ್ಥದಲ್ಲಿ ಜನ್ಯಜನಕಭಾವವು ಯುಕ್ತವಾಗಬಹುದಾದ್ದರಿಂದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕುಚಿತವಾದ ಅರ್ಥವನ್ನು ಮಾಡಲು ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ 'ಆತ್ಮನಃ ಆಕಾಶಃ' ಇತ್ಯಾದಿ ಶ್ರುತಿಯಲ್ಲಿರುವ ಆಕಾಶಶಬ್ದವು ಅನ್ಯಪರವಾಗುವುದಿಲ್ಲ, ಬ್ರಹ್ಮಪರವೇ ಆಗುತ್ತದೆ.

## ಆಕಾಶಶಬ್ದದಿಂದ ಭೂತಾಕಾಶಾದಿಗಳೇ ಪ್ರತಿಪಾದ್ಯವೆಂದು ಪೂರ್ವಪಕ್ಷ ಮಹಾವಿಷ್ಣುವೇ ಪ್ರತಿಪಾದ್ಯನೆಂದು ಸಿದ್ಧಾಂತ

ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ 'ಆತ್ಮನಃ ಆಕಾಶ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ' ಇತ್ಯಾದಿಯಾದ ವಾಕ್ಯಗಳು ಶ್ರುತವಾಗಿವೆ. ಆತ್ಮನಿಂದ ಆಕಾಶವು, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ಹೀಗೆ ಸೃಷ್ಟಿಯ ಕ್ರಮವನ್ನು ಹೇಳಲಾಗಿದೆ. ಇಲ್ಲಿರುವ ಆತ್ಮಶಬ್ದದಿಂದ ವಿಷ್ಣು ಪ್ರತಿಪಾದ್ಯನೆಂಬುದರಲ್ಲಿ ವಿವಾದವಿಲ್ಲ. ಇಂತಹ ವಿಷ್ಣುವಿನಿಂದ ಆಕಾಶವು ಹುಟ್ಟುತ್ತಿದೆಯೆಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ವಿಷ್ಣುವೇ ಪುನಃ ಆಕಾಶಶಬ್ದದಿಂದ ಪ್ರತಿಪಾದ್ಯನಾಗಲಾರನು. ಒಂದು ವೇಳೆ ಮಹಾವಿಷ್ಣುವೇ ಪ್ರತಿಪಾದ್ಯನಾದರೆ, ತನ್ನಿಂದಲೇ ತಾನು ಹುಟ್ಟಿದನೆಂದು ಶ್ರುತಿ ಹೇಳಿದಂತಾಗುತ್ತದೆ. ತನ್ನಿಂದಲೇ ತಾನು ಹುಟ್ಟಬೇಕಾದರೆ ತನಗಿಂತ ತಾನು ಮೊದಲು ಇದ್ದಾನೆಂದು ಒಪ್ಪಬೇಕು. ಭಗವದ್ರೂಪದ ಅಭಿವ್ಯಕ್ತಿಯ ದೃಷ್ಟಿಯಿಂದ ಹೇಳಿದರೂ ಇಂತಹ ಪೌರ್ವಾಪರ್ಯವನ್ನು ಒಬ್ಬನೇ ವ್ಯಕ್ತಿಯಲ್ಲಿ ಹೇಳುವುದು ಅನಿವಾರ್ಯ. ಆದ್ದರಿಂದ ಆಕಾಶಾದಿಶಬ್ದಗಳಿಂದ ಭೌತಿಕಪದಾರ್ಥಗಳೇ ಪ್ರತಿಪಾದ್ಯವಾಗುತ್ತವೆ. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಇಂತಹ ಶಬ್ದಗಳನ್ನು ಬಿಟ್ಟು, ಬೇರೆ ಶಬ್ದಗಳಿಂದ ಪ್ರತಿಪಾದ್ಯನೆಂದು ಸಂಕುಚಿತವಾದ ಅರ್ಥವನ್ನು ಹೇಳಬೇಕು. ಆದ್ದರಿಂದ ಸಮನ್ವಯಸೂತ್ರದಲ್ಲಿ ಮಾಡಿದ ಸಕಲಶಬ್ದಸಮನ್ವಯದ ಪ್ರತಿಜ್ಞೆಯು ಅಸಾಧುವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತ - ಇಲ್ಲಿರುವ ಆಕಾಶಶಬ್ದದಿಂದಲೂ ಮಹಾವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನು. ಆತ್ಮರೂಪಿಯಾದ ವಿಷ್ಣುವಿನಿಂದ ಆಕಾಶರೂಪಿಯಾದ ವಿಷ್ಣುವು ಅಭಿವ್ಯಕ್ತನಾಗುತ್ತಾನೆ. ಭೂತಾಕಾಶಾದಿಗಳಿಗೆ ನಿಯಾಮಕವಾದ ಭಗವದ್ರೂಪಕ್ಕೆ 'ಆಕಾಶ' ಎಂದು ಹೆಸರು. ಇಂತಹ ಭಗವದ್ರೂಪದ ಅಭಿವ್ಯಕ್ತಿಯನ್ನು ಹೇಳುವುದೇ ಶ್ರುತಿಯ ಮುಖ್ಯ ಉದ್ದೇಶ. ಇದರಂತೆ ಆಕಾಶ ಎಂಬ ವಿಷ್ಣುವಿನ ರೂಪದಿಂದ ವಾಯುವಿಗೆ ನಿಯಾಮಕವಾದ ವಾಯು ಎಂಬ ವಿಷ್ಣುವಿನ ರೂಪವು ಅಭಿವ್ಯಕ್ತವಾಗುತ್ತದೆ. ಆದ್ದರಿಂದ ಆತ್ಮ ಎಂಬ ರೂಪದಿಂದ ವಿಷ್ಣು ಮುಖ್ಯಕಾರಣನಾಗಿದ್ದಾನೆ. ಆಕಾಶ ಮೊದಲಾದ ರೂಪದಿಂದ ಕಾರ್ಯಸ್ವರೂಪನಾಗಿದ್ದಾನೆ. ಮತ್ತು ಮುಂದಿನ ವಾಯುವಿಗೆ ಕಾರಣಸ್ವರೂಪನಾಗಿದ್ದಾನೆ ಹೀಗೆ ಒಬ್ಬನೇ ಪರಮಾತ್ಮನು ಕಾರ್ಯನೂ, ಕಾರಣನೂ ಆಗಿದ್ದಾನೆಂದು ತಿಳಿಯಬೇಕು. ಒಬ್ಬನೇ ಮಹಾವಿಷ್ಣುವಿನಲ್ಲಿ ಇಂತಹ ಕಾರ್ಯತ್ವ, ಕಾರಣತ್ವಗಳೆರಡೂ ಅಚಿಂತ್ಯಾದ್ಭುತಶಕ್ತಿಯಿಂದ ಕೂಡುತ್ತವೆ. ತನಗಿಂತ ತಾನೇ ಮೊದಲು ಇರುತ್ತಾನೆಂದು ಹೇಳಿದರೆ ವ್ಯಾಹತವಾಗುವುದೇ ಇಲ್ಲ. ಯಾವ ಪದಾರ್ಥದಲ್ಲಿ ಕಾರ್ಯತ್ವ, ಕಾರಣತ್ವಗಳೆರಡೂ ಇರುತ್ತವೋ ಅದನ್ನು ಅವಾಂತರಕಾರಣವೆಂದು ಕರೆಯುತ್ತಾರೆ. ಆಕಾಶವೆಂಬ

ಭಗವದ್ರೂಪವು ಆತ್ಮರೂಪದ ಕಾರ್ಯವಾಗಿದೆ. ವಾಯುರೂಪಕ್ಕೆ ಕಾರಣವಾಗಿದೆ. ಆದ್ದರಿಂದ ಅವಾಂತರಕಾರಣತ್ವ ಎಂಬ ಧರ್ಮವೂ ವಿಷ್ಣುವಿನಲ್ಲಿ ಹೇಳಿದಂತಾಗುತ್ತದೆ. ಇಂತಹ ಧರ್ಮದ ಸಮನ್ವಯವೇ ಈ ಅಧಿಕರಣದ ಉದ್ದೇಶ. ಸೂತ್ರದಲ್ಲಿರುವ 'ಚ'ಶಬ್ದವು ವಿಷ್ಣು ಪ್ರಧಾನಕಾರಣನಷ್ಟೇ ಅಲ್ಲ, ಅವಾಂತರಕಾರಣನೂ ಆಗಿದ್ದಾನೆಂದು ತಿಳಿಸುತ್ತಿದೆ.

ಭೂತಾಕಾಶದಲ್ಲಿ ವಿಷ್ಣುವಿನ ಆಕಾಶ ಎಂಬ ರೂಪವಿಶೇಷವಿದೆ ಎನ್ನಲು ಆಧಾರವನ್ನು 'ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದ ಭಾಗದಿಂದ ಹೇಳಿದ್ದಾರೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯ ಆಕಾಶೇ ತಿಷ್ಠನ್ ಆಕಾಶಸ್ಯ ಅಂತರಃ ಯಮ್ ಆಕಾಶೋ ನ ವೇದ ಯಸ್ಯ ಆಕಾಶಃ ಶರೀರಮ್ ಯ ಆಕಾಶಮಂತರೋ ಯಮಯತಿ ಸ ತೇ ಆತ್ಮಾ ಅಂತರ್ಯಾಮ್ಯಮೃತಃ' ಹೀಗೆ ಆಕಾಶಾದಿಗಳಲ್ಲಿ ನಿಯಾಮಕವಾಗಿ ಭಗವದ್ರೂಪವಿದೆ ಎಂದು ಹೇಳಲಾಗಿದೆ. ಈ ಬೃಹದಾರಣ್ಯಕೋಪನಿಷತ್ತಿನಲ್ಲಿ ಪರಮಾತ್ಮನೇ ಅಂತರ್ಯಾಮಿಯಾಗಿ ವಿವಕ್ಷಿತನಾಗಿದ್ದಾನೆನ್ನಲು ಐತರೇಯ ಆರಣ್ಯಕದಲ್ಲಿ 'ಸ ಯೋತೋಽಶ್ರುತಃ ಎಂದು ವಿಷ್ಣು ಅಜ್ಞೇಯನಾಗಿದ್ದಾನೆಂದು ಹೇಳಲಾಗಿದೆ. ಅಂತಹ ಅಜ್ಞೇಯತ್ವವನ್ನೇ ಇಲ್ಲಿಯೂ ಕೂಡ 'ಯಂ ಆಕಾಶೋ ನ ವೇದ' ಎಂದು ಹೇಳಲಾಗಿದೆ. ಆದ್ದರಿಂದ ಬೃಹದಾರಣ್ಯಕೋಪನಿಷತ್ತು ನಿಯಾಮಕವಾದ ರೂಪವನ್ನೇ ಹೇಳುತ್ತಿದೆಯೆಂದು ನಿರ್ಣಯವಾಗುತ್ತದೆ. ಅದರಂತೆ ಪ್ರಕೃತದಲ್ಲಿಯೂ 'ಆತ್ಮನಃ ಆಕಾಶಸ್ಸಂಭೂತಃ' ಇತ್ಯಾದಿ ವಾಕ್ಯಗಳಲ್ಲಿ ಅಂತರ್ಯಾಮಿಯಾದ ವಿಷ್ಣುವೇ ಆಕಾಶಾದಿ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಇಷ್ಟು 'ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದ ಭಾಗದ ಅಭಿಪ್ರಾಯ.

## ಅದ್ವೈತಿಗಳ ಅಧಿಕರಣ ವಿಮರ್ಶೆ

'ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' 'ಸಮಾಕರ್ಷಾತ್' ಎಂಬೆರಡು ಸೂತ್ರಗಳು ಸೇರಿ ಒಂದೇ ಅಧಿಕರಣವಾಗಿದೆಯೆಂದು ಅದ್ವೈತಿಗಳು ಹೇಳುತ್ತಾರೆ. ಸಮಸ್ತ ಜಗತ್ತಿಗೆ ಕಾರಣನಾದವನು ಬ್ರಹ್ಮನೊಬ್ಬನೇ ಆಗಿದ್ದಾನೆ. ಆದರೆ ಇಂತಹ ಬ್ರಹ್ಮನಿಂದ ನಡೆಯುವಂತಹ ಸೃಷ್ಟಿಕಾರ್ಯವು ವಿಭಿನ್ನಸ್ವರೂಪವನ್ನು ತಾಳಿದೆ. ತೈತ್ತಿರೀಯೋಪನಿಷತ್ತಿನಲ್ಲಿ 'ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಮೊದಲು ಆಕಾಶದ ಸೃಷ್ಟಿಯನ್ನುಛಾಂದೋಗ್ಯೋಪನಿಷತ್ತಿನಲ್ಲಿ 'ತತ್ತೇಜೋಽಸೃಜತ' ಎಂಬುದಾಗಿ ತೇಜಸ್ಸಿನ ಸೃಷ್ಟಿಯನ್ನೇ ಮೊದಲು ಹೇಳಲಾಗಿದೆ. ಅದರಂತೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ 'ಸ ಪ್ರಾಣಮಸೃಜತ' ಎಂಬುದಾಗಿ ಪ್ರಾಣನ ಸೃಷ್ಟಿಯನ್ನು ಮೊದಲು ಐತರೇಯೋಪನಿಷತ್ತಿನಲ್ಲಿ 'ಸ ಇಮಾನ್ ಲೋಕಾನ್ ಅಸೃಜತ' ಎಂಬುದಾಗಿ ಲೋಕದ ಸೃಷ್ಟಿಯನ್ನೇ ಮೊದಲು ಹೇಳಲಾಗಿದೆ. ಕೆಲವೆಡೆ 'ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ' ಎಂದು ಬೇರೆ ರೀತಿಯಲ್ಲಿಯೇ ಸೃಷ್ಟಿಕ್ರಮವನ್ನು ನಿರೂಪಣೆ ಮಾಡಲಾಗಿದೆ. ಆದ್ದರಿಂದ ಜಗತ್‌ಕಾರಣನಾದ ಬ್ರಹ್ಮನ ಬಗ್ಗೆ ವಿವಾದವಿಲ್ಲದಿದ್ದರೂ ಸೃಜ್ಯವಾದ ವಸ್ತುವಿನ ಬಗ್ಗೆ ಪರಸ್ಪರ ವಿರೋಧ ಇದೆಯಲ್ಲವೇ? ಹೀಗಿರುವಾಗ ಜಗತ್‌ಕಾರಣನಾದ ಬ್ರಹ್ಮನಲ್ಲಿ ಇಂತಹ ವಾಕ್ಯಗಳ ಸಮನ್ವಯವನ್ನು ಮಾಡಲು ಹೇಗೆ ಸಾಧ್ಯವಾಗುತ್ತದೆ ? ಎಂಬ ಪೂರ್ವಪಕ್ಷವು ಪ್ರಾಪ್ತವಾಗುತ್ತದೆ.

ಸೃಜ್ಯವಾದ ವಸ್ತುವಿನ ಬಗ್ಗೆ ಅಭಿಪ್ರಾಯಭೇದವಿದ್ದರೂ ಸೃಷ್ಟಿಕರ್ತನಾದ ಬ್ರಹ್ಮನ ಬಗ್ಗೆ ಯಾವುದೇ ವೇದಭಾಗದಲ್ಲಿ ಪರಸ್ಪರ ವಿರೋಧವಿರುವುದಿಲ್ಲ. ಆಕಾಶಾದಿಗಳಿಗೆ ಕಾರಣನಾಗಿ ಯಾವ ಬ್ರಹ್ಮನು ತೈತ್ತಿರೀಯದಲ್ಲಿ ನಿರೂಪಿತನಾಗಿದ್ದಾನೋ, ಅವನೇ ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಆತ್ಮನೆಂದು, ಸತ್ ಎಂದೂ, ಆಕಾಶನೆಂದು ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಳ್ಳುತ್ತಾನೆ. ಜಗತ್ಕಾರಣನಾದ ಬ್ರಹ್ಮನ ಬಗ್ಗೆ ಯಾವುದೇ ವಿವಾದವಿಲ್ಲದ ಕಾರಣ, ವೇದಾಂತಗಳ ಸಮನ್ವಯಕ್ಕೆ ವಿರೋಧವು ಬರುವುದಿಲ್ಲ.

ಸೂತ್ರದಲ್ಲಿ 'ಕಾರಣತ್ವೇನ' ಎಂಬ ಪದವನ್ನು 'ಕಾರಣತ್ವೇ - ನ' ಎಂಬುದಾಗಿ ಪದಚ್ಛೇದವನ್ನು ತಿಳಿಯಬೇಕು. 'ಚ'ಶಬ್ದಕ್ಕೆ 'ತು' ಎಂಬರ್ಥವನ್ನು ವಿವಕ್ಷಿಸಿದಾಗ, ಆಕಾಶಾದಿಗಳ ಕಾರಣವಿಷಯದಲ್ಲಿ ವಿಪ್ರತಿಪತ್ತಿಯಿರುವುದಿಲ್ಲ. ಏಕೆಂದರೆ 'ಕಾರಣತ್ವೇನ ಯಥಾ ವ್ಯಪದಿಷ್ಟೋಕ್ತೇಃ' ಒಂದು ಶಾಖೆಯಲ್ಲಿ ಕಾರಣಸ್ವರೂಪವನ್ನು ಹೇಳಿದಂತೆಯೇ, ಮತ್ತೊಂದು ಶಾಖೆಯಲ್ಲಿಯೂ ಹೇಳಲಾಗಿದೆ ಎಂದು ಸೂತ್ರಕ್ಕೆ ಅರ್ಥವನ್ನು ತಿಳಿಯಬೇಕು. ಇಷ್ಟು ಅದ್ವೈತಿಗಳ ಅಧಿಕರಣಶರೀರ ಹಾಗೂ ಸೂತ್ರಾರ್ಥ.

ಇವರ ಈ ಅಧಿಕರಣಶರೀರವು ಅತ್ಯಂತ ಹೇಯವಾಗಿದೆ. ಏಕೆಂದರೆ

ಅಧ್ಯಾಯಸಂಗತೇಃ ಪಾದಸಂಗತೇರಪ್ಯಭಾವತಃ ।
ಪೂರ್ವಪಕ್ಷಾನುತ್ಥಿತೇಶ್ಚ ಸಿದ್ಧಾಂತಸ್ಯಾಪ್ಯಯೋಗತಃ ॥೧॥

ಈ ಅಧಿಕರಣಕ್ಕೆ ಅಧ್ಯಾಯಸಂಗತಿಯಿರುವುದಿಲ್ಲ. ಪಾದಸಂಗತಿಯೂ ಇರುವುದಿಲ್ಲ. ಪೂರ್ವಪಕ್ಷವೂ ಹುಟ್ಟುವುದಿಲ್ಲ, ಸಿದ್ಧಾಂತವೂ ಅಯುಕ್ತವಾಗಿದೆ. ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲು ಎರಡನೆಯ ಅಧ್ಯಾಯವು ಹೊರಟಿದೆ. ಎರಡನೆಯ ಅಧ್ಯಾಯದ ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ಶ್ರುತಿಗಳಲ್ಲೇ ಬರುವಂತಹ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಹೀಗೆ ಶಾಂಕರಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿಯೂ ನೀವು ಶ್ರುತಿಗಳಲ್ಲಿ ಜಗತ್ ಕಾರಣತ್ವ ಪ್ರತಿಪಾದಕವಾದ ವಾಕ್ಯಗಳ ಪರಸ್ಪರ ವಿರೋಧವನ್ನು ಪರಿಹರಿಸುತ್ತಿದ್ದೀರಿ. ಹಾಗಾದರೆ ಇದರ ವಿಚಾರವನ್ನು ಎರಡನೆಯ ಅಧ್ಯಾಯದಲ್ಲಿ ಮಾಡುವುದು ಸಂಗತವಾಗುತ್ತದೆ. ಸಮನ್ವಯಾಧ್ಯಾಯದಲ್ಲಿ ಇದಕ್ಕೆ ಸಂಗತಿಯಿರುವುದಿಲ್ಲ. ಒಂದು ವೇಳೆ ಎರಡನೆಯ ಅಧ್ಯಾಯದಲ್ಲಿ ಸಮಯವಿರೋಧವಷ್ಟೇ ಮುಖ್ಯವಿಷಯ. ಶ್ರುತಿಗಳ ಪರಸ್ಪರವಿರೋಧವು ಪ್ರಾಸಂಗಿಕವೆಂದು ಹೇಳಿ, ಮೂರು ನಾಲ್ಕನೆಯ ಪಾದಗಳಿಗೆ ಪ್ರಾಸಂಗಿಕತ್ವವನ್ನು ಹೇಳುವುದಾದರೆ ವಿಪರೀತವಾಗಿ ನಾವೂ ಆಕ್ಷೇಪ ಮಾಡುತ್ತೇವೆ. ಶ್ರುತಿಗಳ ಪರಸ್ಪರ ವಿರೋಧವೇ ಮುಖ್ಯವಾದ ಪ್ರಮೇಯ. ಸಮಯವಿರೋಧವು ಕೇವಲ ಪ್ರಾಸಂಗಿಕವಾಗಿ ಪ್ರಾಪ್ತವಾಗಿದೆಯೆಂದು ಆಕ್ಷೇಪಿಸಿದರೆ ವಿನಿಗಮಕವಿಲ್ಲದ ಕಾರಣ ನಿಮ್ಮಿಂದ ಉತ್ತರಿಸಲಾಗದು. ಮತ್ತು ಪ್ರಾಸಂಗಿಕವಾಗಿ ಶ್ರುತಿಗಳ ವಿರೋಧವನ್ನು ಎರಡನೆಯ ಅಧ್ಯಾಯದಲ್ಲಿ ಪರಿಹರಿಸಿದಂತೆ ಈ ಅಧಿಕರಣದಲ್ಲಿ ಪ್ರಾಪ್ತವಾದ ಶ್ರುತಿಗಳ ಪರಸ್ಪರ ವಿರೋಧವನ್ನೂ ಕೂಡ ಪ್ರಾಸಂಗಿಕವಾಗಿ ಅಲ್ಲಿಯೇ ಸಮರ್ಥಿಸಿರಿ. ಏನೇ ಆದರೂ ಈ ಅಧಿಕರಣಕ್ಕೆ ಅಧ್ಯಾಯಸಂಗತಿಯಿರುವುದಿಲ್ಲ.

## ಅದ್ವೈತಿಗಳ ಪ್ರಕಾರ ಈ ಅಧಿಕರಣವು ಅನಾರಂಭಣೀಯ

ಅಧ್ಯಾಯ ಸಂಗತಿಯು ಹೇಗೆ ಕೂಡುವುದಿಲ್ಲವೋ, ಅದರಂತೆ ಪಾದಸಂಗತಿಯೂ ಕೂಡುವುದಿಲ್ಲ. ನಾಲ್ಕನೆಯ ಈ ಪಾದವು ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವದ ನಿರಾಕರಣೆಗಾಗಿ ಹೊರಟಿದೆ. ಹೀಗಿರುವಾಗ ಮಧ್ಯದಲ್ಲಿ ಈ ಅಧಿಕರಣವು ಕಾರ್ಯವಿಷಯಕವಾದ ವಾಕ್ಯಗಳ ವಿರೋಧವನ್ನು ಏಕೆ ಪರಿಹಾರ ಮಾಡುತ್ತಿದೆ? ಎಂದು ಅದ್ವೈತಿಗಳಿಗೆ ತಿಳಿದಿರುವುದಿಲ್ಲ. ಮತ್ತು ಪೂರ್ವಪಕ್ಷವೂ ಕೂಡ ಸರಿಯಿಲ್ಲ. ಪೂರ್ವಪಕ್ಷ ಮಾಡುವಾಗ ಅದ್ವೈತಿಗಳು 'ತತ್ತೇಜೋಽಸೃಜತ' 'ಆತ್ಮನ ಆಕಾಶಃ ಸಂಭೂತಃ' ಎಂಬೆರಡು ವಾಕ್ಯಗಳಿಗೆ ವಿರೋಧವನ್ನು ಆಕ್ಷೇಪ ಮಾಡಿದ್ದರು. ಆದರೆ 'ತತ್ತೇಜೋಽಸೃಜತ' ಎಂಬ ವಾಕ್ಯವು ಕೇವಲ ತೇಜಸ್ಸಿನ ಸೃಷ್ಟಿಯ ಬಗ್ಗೆ ಹೇಳಿದೆ ಹೊರತು, ಆಕಾಶದ ಸೃಷ್ಟಿಯ ಬಗ್ಗೆ ಅದು ಏನನ್ನೂ ಹೇಳುತ್ತಿಲ್ಲ. ಮೊದಲು ತೇಜಸ್ಸು ಹುಟ್ಟಿತು ಎಂದಾಗಲಿ, ಆಕಾಶವು ಮೊದಲು ಹುಟ್ಟಿಲ್ಲ ಎಂದಾಗಲೀ, ಈ ಶ್ರುತಿಯ ಅಭಿಪ್ರಾಯವೇ ಅಲ್ಲ. ಹಾಗೇನಾದರೂ ಪರಮಾತ್ಮನಿಂದ ಮೊದಲು ತೇಜಸ್ಸೇ ಹುಟ್ಟಿತೆಂದು ಹೇಳಿದ್ದಲ್ಲಿ, 'ಆತ್ಮನ ಆಕಾಶಃ ಸಂಭೂತಃ' ಎಂಬುದರಿಂದ ವಿರೋಧ ಬರುತ್ತಿತ್ತು. ಆಕಾಶಸೃಷ್ಟಿಯ ಬಗ್ಗೆ ಹೇಳದ ಮಾತ್ರಕ್ಕೆ ವಿರೋಧವನ್ನು ಆಕ್ಷೇಪಿಸುವುದು ಮೂಢತನ. ಇನ್ನು 'ತತ್ತೇಜೋಽಸೃಜತ' ಎಂಬ ವಾಕ್ಯವು ತೇಜಸ್ಸಿನ ಸೃಷ್ಟಿಯೂ ಪರಮಾತ್ಮನಿಂದ ಆಯಿತೆಂದು ಹೇಳುತ್ತಿದೆ. ಆದರೆ 'ವಾಯೋರಗ್ನಿಃ' ಎಂಬ ವಾಕ್ಯವು ವಾಯುವಿನಿಂದ ಅಗ್ನಿಯು ಹುಟ್ಟಿತೆಂದು ಹೇಳುತ್ತಿದೆ. ಈ ಎರಡು ವಾಕ್ಯಗಳಿಗೆ ವಿರೋಧ ಬರುತ್ತಿದೆಯಲ್ಲವೇ? ಎಂದು ಆಕ್ಷೇಪ ಮಾಡಬೇಕು. ಈ ಆಕ್ಷೇಪದ ಪರಿಹಾರಕ್ಕಾಗಿ ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿರುವ 'ತೇಜೋತಸ್ತಥಾ ಹ್ಯಾಹ' ಎಂಬ ಸೂತ್ರವು ಹೊರಟಿದೆ. ಪುನಃ ಅದೇ ವಿಷಯವನ್ನು ಇಲ್ಲಿ ಸಮರ್ಥಿಸುವ ಅವಶ್ಯಕತೆಯಿರುವುದಿಲ್ಲ.

ಸಿದ್ಧಾಂತವೂ ಸಹ ಸರಿಯಿಲ್ಲ. ಸಿದ್ಧಾಂತ ಮಾಡುವಾಗ ಶುದ್ಧಬ್ರಹ್ಮನ ಬಗ್ಗೆ ಹೇಳದೇ ಕಾಮಯಿತೃತ್ವಾದಿ ಧರ್ಮಗಳನ್ನು ವಿವಕ್ಷಿಸಿ ವಿಶಿಷ್ಟಬ್ರಹ್ಮನ ಬಗ್ಗೆ ಹೇಳಿದ್ದಾರೆ. ಇದು ಅಸಂಗತ. ಮತ್ತು ಸೂತ್ರಾರ್ಥವನ್ನು ಹೇಳುವಾಗ ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವೇ ಇರುವುದಿಲ್ಲ ಎಂದರು. 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ವಾಕ್ಯವು ಸತ್‌ಪದಾರ್ಥವು ಜಗತ್ಕಾರಣವೆಂದು, 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವು ಅಸತ್ ಪದಾರ್ಥವು ಜಗತ್ಕಾರಣವೆಂದು ಹೇಳುತ್ತಿರುವಾಗ, ಜಗತ್‌ಕಾರಣವಿಷಯದಲ್ಲಿ ವಿರೋಧವಿಲ್ಲವೆಂದು ಹೇಗೆ ಹೇಳಿದಿರಿ? ಮತ್ತು ಯಾವ ಕಾರ್ಯವಿಷಯಕವಾಕ್ಯಗಳಲ್ಲಿ ವಿರೋಧವಿದೆಯೆಂದು ಆಶಂಕೆ ಮಾಡಿದರೋ, ಅದರ ಪರಿಹಾರವನ್ನೇ ಸಿದ್ಧಾಂತದಲ್ಲಿ ಮಾಡಿಲ್ಲ. ಕಲ್ಪಿತವಾದ ಕಾರ್ಯವಿಷಯದಲ್ಲಿ ಪರಿಹಾರವನ್ನೇಕೆ ಮಾಡಬೇಕು ಎನ್ನುವುದಾದರೆ ವಿಯತ್ಪಾದದಲ್ಲಿಯೂ ಕೂಡ ಅದರ ಪರಿಹಾರವು ಅನಾವಶ್ಯಕ. ಮತ್ತು ಕಾಮಯಿತೃತ್ವಾದಿಗಳಿಂದ ವಿಶಿಷ್ಟನಾದ ಬ್ರಹ್ಮನೂ ಕಲ್ಪಿತನಾದ್ದರಿಂದ ತದ್ವಿಷಯಕವಾದ ವಿರೋಧಪರಿಹಾರ ಮಾಡಿದ್ದೂ ಕೂಡ ಅಸಂಗತವಾಗುತ್ತದೆ.

## ರಾಮಾನುಜಭಾಷ್ಯದ ಅಧಿಕರಣ ವಿಮರ್ಶೆ

ರಾಮಾನುಜರ ಅಧಿಕರಣಶರೀರ ಹಾಗೂ ಸೂತ್ರವ್ಯಾಖ್ಯಾನ ಹೀಗಿದೆ - ಸಮಸ್ತ ಜಗತ್ತಿಗೆ ಬ್ರಹ್ಮನು ಕಾರಣನೇ ಅಲ್ಲ. ಏಕೆಂದರೆ ಛಾಂದೋಗ್ಯೋಪನಿಷತ್ತಿನಲ್ಲಿ 'ಸದೇವ ಸೌಮ್ಯೇದಮಗ್ರ ಆಸೀತ್' ಎಂಬುದಾಗಿ 'ಸತ್' ಎಂಬ ವಸ್ತುವಿನಿಂದ, 'ಅಸದೇವ ಇದಮಗ್ರ ಆಸೀತ್'ಎಂಬುದಾಗಿ ತೈತ್ತಿರೀಯೋಪನಿಷತ್ತಿನಲ್ಲಿ 'ಅಸತ್' ಎಂಬ ವಸ್ತುವಿನಿಂದ ಜಗತ್ತು ಹುಟ್ಟುತ್ತದೆ ಎಂದು ಹೇಳಲಾಗಿದೆ. ಒಬ್ಬನೇ ಬ್ರಹ್ಮನು ಸತ್ ಸ್ವರೂಪನು, ಹಾಗೂ ಅಸತ್ ಸ್ವರೂಪನು ಆಗಲು ಸಾಧ್ಯವಿಲ್ಲ. ಆದ್ದರಿಂದ ಪ್ರಕೃತಿಯನ್ನೇ ಜಗತ್‌ಕಾರಣವೆನ್ನಬೇಕು. ಈ ಪ್ರಕೃತಿಯು ನಿತ್ಯವಾದ್ದರಿಂದ 'ಸತ್' ಎನಿಸಿಕೊಳ್ಳುತ್ತದೆ. ಸೃಷ್ಟಿಕಾಲದಲ್ಲಿ ಪರಿಣಾಮವನ್ನು ಹೊಂದುವುದರಿಂದ 'ಅಸತ್' ಎಂದು ಕರೆಸಿಕೊಳ್ಳುತ್ತದೆ. ಮತ್ತು 'ತದ್ಧೇದಂ ಅವ್ಯಾಕೃತಮಾಸೀತ್' ಎಂಬುದಾಗಿ ಪ್ರಕೃತಿಯಲ್ಲಿ ಎಲ್ಲಾ ವಸ್ತುಗಳ ಪ್ರಳಯವನ್ನು ಹೇಳಿ, 'ತತ್ ನಾಮರೂಪಾಭ್ಯಾಂ ವ್ಯಾಕ್ರಿಯತೇ' ಅಂತಹ ಪ್ರಕೃತಿಯಿಂದಲೇ ಸಮಸ್ತ ಜಗತ್ತು ಹುಟ್ಟುತ್ತದೆಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ. ಆದ್ದರಿಂದ 'ಆತ್ಮನ ಆಕಾಶಃ ಸಂಭೂತಃ' ಎಂಬ ವಾಕ್ಯದಲ್ಲಿರುವ ಆತ್ಮಶಬ್ದಕ್ಕೂ ಕೂಡ ಎಲ್ಲೆಡೆ ವ್ಯಾಪ್ತವಾದ್ದರಿಂದ ಪ್ರಕೃತಿಯನ್ನೇ ಪ್ರತಿಪಾದ್ಯವೆಂದು ಹೇಳಬೇಕು. ಹೀಗೆ ಪ್ರಕೃತಿಯು ಜಗತ್ ಕಾರಣವೆಂದು ಪೂರ್ವಪಕ್ಷ.

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಬ್ರಹ್ಮನ ಸ್ವರೂಪವನ್ನು ಹೇಳಿ, ಪುನಃ ಮುಂದೆ 'ತಸ್ಮಾದ್ ವಾ ಏತ್‌ಸ್ಮಾತ್ ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಅಂತಹ ಬ್ರಹ್ಮನನ್ನೇ ಪರಾಮರ್ಶ ಮಾಡಲಾಗಿದೆ. ಆದ್ದರಿಂದ ಅಲ್ಲಿ ಹೇಗೆ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಇಲ್ಲಿಯೂ ಕೂಡ 'ತದ್ಧೇದಂ ಅವ್ಯಾಕೃತಮಾಸೀತ್' ಎಂಬಲ್ಲಿರುವ 'ತತ್' ಪದದಿಂದ ಬ್ರಹ್ಮನನ್ನೇ ಪರಾಮರ್ಶ ಮಾಡಬೇಕು. ಆದ್ದರಿಂದ ಜಗತ್‌ಕಾರಣಪ್ರತಿಪಾದಕ ವಾಕ್ಯಗಳೂ ಕೂಡ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಪ್ರಕೃತಿಯನ್ನಲ್ಲ. ಇಷ್ಟು ಸಿದ್ಧಾಂತ.

ರಾಮಾನುಜರ ಈ ಅಧಿಕರಣ ಶರೀರವು ಅಸಾಧುವಾಗಿವೆ. ಏಕೆಂದರೆ 'ತದ್ಧೇದಂ ಅವ್ಯಾಕೃತ ಆಸೀತ್' ಎಂಬ ಶ್ರುತಿಯ ಮುಂದಿನ ವಾಕ್ಯದಲ್ಲಿ 'ಪಶ್ಯಂಶ್ಚಕ್ಷುಃ ಶೃಣ್ವಾನ್ ಶ್ರೋತ್ರಮ್' ಎಂಬುದಾಗಿ ದರ್ಶನ-ಶ್ರವಣಾದಿಗಳನ್ನು ಸ್ಪಷ್ಟವಾಗಿ ಹೇಳಲಾಗಿದೆ. ಈ ಎಲ್ಲವೂ ಕೂಡ ಚೇತನಧರ್ಮವಾದ್ದರಿಂದ ಬ್ರಹ್ಮನಲ್ಲೇ ಬರುತ್ತವೆ, ಜಡವಾದ ಪ್ರಕೃತಿಯಲ್ಲಿ ಸರ್ವಥಾ ಬರುವುದಿಲ್ಲ. ಇಂತಹ ಬಹುಶ್ರುತಿಗಳಿಂದ ಏಕಶ್ರುತಿಗೆ ಬಾಧವನ್ನು ಹೇಳಬೇಕು. ಈಗಾಗಲೇ ಈಕ್ಷತ್ಯಧಿ- ಕರಣದಲ್ಲಿಯೂ ಈಕ್ಷಣವು ಬ್ರಹ್ಮನ ಧರ್ಮವೆಂದು ನಿರ್ಣಯವಾಗಿರುವಾಗ ಪುನಃ ಈ ಅಧಿಕರಣದಲ್ಲಿ ಪೂರ್ವಪಕ್ಷ ಹುಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ ಪೂರ್ವಪಕ್ಷವು ಹುಟ್ಟದ ಕಾರಣ ಸಿದ್ಧಾಂತವೂ ಕೂಡ ಹುಟ್ಟುವುದಿಲ್ಲ. ಮತ್ತು ಈ ಅಧಿಕರಣಕ್ಕೆ ಪಾದಸಂಗತಿಯೂ ಕೂಡ ಇರುವುದಿಲ್ಲ. ಏಕೆಂದರೆ ಸ್ಪಷ್ಟವಾದ ಜೀವಾದಿಲಿಂಗ ಪ್ರತಿಪಾದಕವಾದ ಛಾಯೆ ಇದ್ದರೆ ಅಂತಹ ವಾಕ್ಯಗಳ ಸಮನ್ವಯಕ್ಕಾಗಿ ಈ ಪಾದವು ಹೊರಟಿದೆಯೆಂದು

ನೀವು ಹೇಳುತ್ತೀರಿ. ಪ್ರಕೃತ 'ತದ್ಧೇದಂ ಅವ್ಯಾಕೃತಮ್ ಎಂಬ ವಾಕ್ಯದಲ್ಲಿ ಸ್ಪಷ್ಟವಾದ ಪ್ರಕೃತಿ ಪರವಾದ ಲಿಂಗಗಳು ಯಾವುದೂ ಸಹ ಕಾಣಿಸುತ್ತಿಲ್ಲ. ಆದ್ದರಿಂದ ಪಾದಸಂಗತಿಯು ಇರುವುದಿಲ್ಲ. ಹೀಗೆ ಸೃಷ್ಟಿ-ಪ್ರಳಯಗಳನ್ನು ಹೇಳುವ ವಾಕ್ಯದಲ್ಲಿ ಪ್ರಧಾನಕ್ಕೆ ಪೂರಕವಾದ ಅಸಾಧಾರಣವಾದ ಲಿಂಗವಾಗಲೀ, ರೂಢಶಬ್ದವಾಗಲೀ ಇರುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣಶರೀರವು ಅಸಾಧುವಾಗಿದೆ.

*****

# ಸಮಾಕರ್ಷಾಧಿಕರಣ

## ಸಮಾಕರ್ಷಾಧಿಕರಣವು ಪ್ರತ್ಯೇಕವೋ, ಅಲ್ಲವೋ ?

ತತ್ವಪ್ರದೀಪಕಾರರು ಸಮಾಕರ್ಷಾಧಿಕರಣವನ್ನು ಪ್ರತ್ಯೇಕವೆಂದು ಪರಿಗಣಿಸಿಯೇ ಇಲ್ಲ. 'ಕಾರಣತ್ವೇನ ಚ ಆಕಾಶಾದಿಷು' ಇತ್ಯಾದಿ ಹಿಂದಿನ ಅಧಿಕರಣದ ಸೂತ್ರದ ಅಂಗವಾಗಿದೆಯೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಎಂಟು ಸೂತ್ರಗಳನ್ನು ಸೇರಿಸಿ ಇದನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬೇಕೆಂದು ಟೀಕಾಕಾರರು ಅಭಿಪ್ರಾಯ ಪಡುತ್ತಾರೆ. ಹೀಗೆ ತತ್ವಪ್ರದೀಪಕಾರರ ಪಕ್ಷಕ್ಕೂ, ಟೀಕಾಕಾರರ ಪಕ್ಷಕ್ಕೂ ಮೇಲ್ನೋಟಕ್ಕೆ ವಿರೋಧ ಕಾಣಿಸುತ್ತದೆ. ಈ ವಿರೋಧವನ್ನು ಪ್ರಕೃತ ಗ್ರಂಥಕಾರರು ಪರಿಹರಿಸಲು ಹೊರಟಿದ್ದಾರೆ.

ಅನುವ್ಯಾಖ್ಯಾನದಲ್ಲಿ 'ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್' ಎಂಬ ಶ್ಲೋಕದಿಂದ ನಾಲ್ಕನೇ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಉಪಾಧಿಯನ್ನು ಸಂಗ್ರಹಿಸಿದ್ದಾರೆ. ಆ ಸಂದರ್ಭದಲ್ಲಿ ಸಮಾಕರ್ಷಾಧಿಕರಣದಲ್ಲಿ ಸಂಬಂಧಪಟ್ಟ ಉಪಾಧಿಯನ್ನು ಸಂಗ್ರಹಿಸಿಲ್ಲ. ಅಷ್ಟೇ ಅಲ್ಲದೇ 'ಸರ್ವಮಾನೈರ್ವಿರೋಧಶ್ಚ' ಇತ್ಯಾದಿ ಶ್ಲೋಕದಿಂದ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸುವಾಗಲೂ, ಸಮಾಕರ್ಷಾಧಿಕರಣದ ಯುಕ್ತಿಯನ್ನು ಸಂಗ್ರಹಿಸಿರುವುದಿಲ್ಲ. ಹೀಗೆ ಶ್ರೀಮದಾಚಾರ್ಯರ ವಾಕ್ಯಗಳನ್ನು ಗಮನಿಸಿದಾಗಲೂ ತತ್ವಪ್ರದೀಪಕಾರರ ಪಕ್ಷವೇ ಸಾಧುವಾಗಿದೆಯೆಂದು ತಿಳಿಯುತ್ತದೆ. ಭಾಷ್ಯದಲ್ಲಿಯೂ ಕೂಡ ಈ ಅಧಿಕರಣದಲ್ಲಿ ಸಮನ್ವಯ ಮಾಡಲ್ಪಡುವ ಶಬ್ದಗಳನ್ನು ಪ್ರತ್ಯೇಕವಾಗಿ ಉಲ್ಲೇಖ ಮಾಡಿಲ್ಲ. ಆದ್ದರಿಂದ ಹೇಗೆ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಇತ್ಯಾದಿ ಸೂತ್ರಗಳನ್ನು ವೈಶ್ವಾನರಾಧಿಕರಣದ ಅಂಗಸೂತ್ರಗಳೆಂದು ಪರಿಗಣಿಸಿದ್ದರೋ, ಅದರಂತೆ ಹಿಂದಿನ ಆಕಾಶಾಧಿಕರಣದ ಅಂಗಸೂತ್ರಗಳೆಂದು ಈ ಎಂಟು ಸೂತ್ರಗಳನ್ನು ಪರಿಗಣಿಸಬೇಕು ಹೊರತು, ಪ್ರತ್ಯೇಕ ಅಧಿಕರಣವೆಂದು ಹೇಳಬಾರದು. ಇಷ್ಟು ವಿಚಾರವು ತತ್ವಪ್ರದೀಪವನ್ನು ನೋಡಿದಾಗ ಭಾಸವಾಗುತ್ತದೆ.

ತತ್ವಪ್ರದೀಪಕಾರರು ಹೇಳುವಂತೆ ಹಿಂದಿನ ಅಧಿಕರಣದ ಅಂಗಸೂತ್ರಗಳೆಂದೇ ಇವುಗಳನ್ನು ಪರಿಗಣಿಸುವುದು ತಪ್ಪಾಗುವುದಿಲ್ಲ. ಆದರೂ ಕೂಡ ಟೀಕಾಕಾರರು ಪ್ರತ್ಯೇಕ ಅಧಿಕರಣವೆಂದು

ಹೇಳಿದ್ದಾರೆ. ಟೀಕಾಕಾರರ ಪಕ್ಷವೂ ಕೂಡ ಸಾಧುವೇ ಆಗಿದೆ. ಹೇಗೆಂದರೆ ಪೂರ್ವಮೀಮಾಂಸೆಯಲ್ಲಿ 'ಹೇತುದರ್ಶನಾಚ್ಚ' ಎಂಬ ಸೂತ್ರವನ್ನು ವಿರೋಧಾಧಿಕರಣದ ಅಂಗಸೂತ್ರವೆಂದು ಕೆಲವರು ಹೇಳಿದರೆ ಬೇರೆ ಕೆಲವರು ಪ್ರತ್ಯೇಕ ಅಧಿಕರಣವೆಂದೇ ಪರಿಗಣಿಸುತ್ತಾರೆ. ಅಭಿಪ್ರಾಯಭೇದದಿಂದ 'ಹೇತುದರ್ಶನಾಚ್ಚ' ಎಂಬ ಒಂದೇ ಸೂತ್ರವು ಹಿಂದಿನ ಅಧಿಕರಣದ ಅಂಗವೂ ಆಗುತ್ತದೆ. ಪ್ರತ್ಯೇಕ ಅಧಿಕರಣವೂ ಆಗುತ್ತದೆ. ಅದರಂತೆ 'ಸಮಾಕರ್ಷಾತ್' ಇವೇ ಮೊದಲಾದ ಸೂತ್ರಗಳು ತ್ರಿವಿಕ್ರಮಪಂಡಿತರ ಅಭಿಪ್ರಾಯದಂತೆ ಹಿಂದಿನ ಅಧಿಕರಣದ ಅಂಗಸೂತ್ರಗಳೂ ಆಗುತ್ತವೆ. ಟೀಕಾಕಾರರ ಅಭಿಪ್ರಾಯದಂತೆ ಪ್ರತ್ಯೇಕ ಅಧಿಕರಣವೂ ಕೂಡ ಆಗುತ್ತವೆ. ಆದ್ದರಿಂದ ಇಬ್ಬರ ಅಭಿಪ್ರಾಯದಲ್ಲಿ ವಿರೋಧವನ್ನು ತಿಳಿಯಬಾರದು.

## ಸಂದೇಹ ಹಾಗೂ ಪೂರ್ವಪಕ್ಷ

ಈ ಅಧಿಕರಣದಲ್ಲಿ ಯಾವುದೇ ಶಬ್ದವನ್ನು ಸಮನ್ವಯ ಮಾಡುತ್ತಿಲ್ಲ ಹೊರತಾಗಿ ಸಮನ್ವಯದ ವಿಷಯದಲ್ಲಿರುವ ಆಕ್ಷೇಪವನ್ನಷ್ಟೇ ಪರಿಹರಿಸುತ್ತಿದ್ದಾರೆ.

'ಕಲ್ಪನೋಪದೇಶಾತ್' ಎಂಬ ಸೂತ್ರವು ಪ್ರತಿಯೊಂದು ಶಬ್ದಗಳು ಲೋಕದಲ್ಲಿಯೂ ಕೂಡ ಮುಖ್ಯವೃತ್ತಿಯಿಂದಲೇ ಇರುತ್ತವೆಂದು ಸಮರ್ಥಿಸಿತು. ಹಾಗಾದರೆ ಯಾವುದೇ ಶಬ್ದವನ್ನು ಕೇಳಿದಾಗ ಪರಮಾತ್ಮನನ್ನು ಹಾಗೂ ಲೌಕಿಕಪದಾರ್ಥವನ್ನು ಅದು ಪ್ರತಿಪಾದನೆ ಮಾಡುತ್ತದೆಂದು ಹೇಳಿದಂತಾಯಿತು. ಆದರೆ ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನು ಪ್ರತಿಪಾದನೆ ಮಾಡಿ, ಮುಖ್ಯವೃತ್ತಿಯಿಂದಷ್ಟೇ ಲೌಕಿಕವಸ್ತುವೊಂದನ್ನು ಪ್ರತಿಪಾದನೆ ಮಾಡುತ್ತವೆಂದು ತಿಳಿಯಬೇಕು. ಹೀಗೆ ಹೇಳಿದಾಗ ಲೌಕಿಕ ಪದಾರ್ಥಗಳಲ್ಲಿ ಶಬ್ದವೃತ್ತಿಯು ಹೀನವಾಗಿದೆಯೆಂದು ಹೇಳಿದಂತಾಗುತ್ತದೆ. ಹಾಗಾದರೆ ಲಕ್ಷಣಾವೃತ್ತಿ ಮೊದಲಾದವು ಮುಖ್ಯವೃತ್ತಿಯ ಪ್ರಭೇದವೆಂದೇ ಒಪ್ಪಬೇಕಾಗುತ್ತದೆಂಬುದು ಪೂರ್ವಪಕ್ಷಕಾರರ ಆಕ್ಷೇಪ. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದೇನೋ ಒಪ್ಪಿರಿ. ತದ್ಗತತ್ವಕ್ಕಿಂತ ಮುಖ್ಯತ್ವವನ್ನು ಸ್ವಾತಂತ್ರ್ಯದಲ್ಲಿ ಹೇಳಲು ಸರ್ವಥಾ ಸಾಧ್ಯವಿಲ್ಲ. ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯವಾದ ಶಬ್ದಗಳು ಲೌಕಿಕಪದಾರ್ಥಗಳಲ್ಲಿ ನೀಚವೃತ್ತಿಯಿಂದ ಇರುತ್ತವೆಂದು ಹೇಳಬಾರದು. ಪರಮಾತ್ಮನನ್ನು ಪ್ರತಿಪಾದನೆ ಮಾಡಿದಂತೆ ಲೌಕಿಕಪದಾರ್ಥಗಳನ್ನೂ ಕೂಡ ಪ್ರತಿಪಾದನೆ ಮಾಡುತ್ತವೆಂಬುದು ಪೂರ್ವಪಕ್ಷ.

## ಸಕಲ ಶಬ್ದಗಳು ಪರಮಮುಖ್ಯವೃತ್ತಿಯಿಂದ ಮಹಾವಿಷ್ಣುವನ್ನೇ ಪ್ರತಿಪಾದಿಸುತ್ತವೆ

ಶಬ್ದಗಳು ಪರಮಾತ್ಮನನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವಂತೆ ಲೌಕಿಕಪದಾರ್ಥಗಳನ್ನೂ ಕೂಡ ಮುಖ್ಯವಾಗಿಯೇ ಪ್ರತಿಪಾದಿಸುತ್ತವೆ. ಹಾಗಾದರೆ ಅಕ್ಷಾದಿಶಬ್ದಗಳಂತೆ ಪ್ರತಿಯೊಂದು ಶಬ್ದಗಳೂ ಕೂಡ ಅನೇಕಾರ್ಥಗಳಾಗಬೇಕಾದೀತಲ್ಲವೇ? ಎಂಬ ಆಶಂಕೆಗೆ ಹೀಗೆ ಉತ್ತರಿಸಬೇಕು. ಮುಖ್ಯವೃತ್ತಿಯಲ್ಲಿ ಪರಸ್ಪರ ತಾರತಮ್ಯವಿದೆ. ಅದರಲ್ಲಿಯೂ ಕೂಡ ರೂಢಿಯಲ್ಲಿ ತಾರತಮ್ಯವಿದೆ. ಯೋಗದಲ್ಲಿಯೂ ತಾರತಮ್ಯವಿದೆ. ಯಾವರೀತಿಯಾಗಿ ಗೌಣೀವೃತ್ತಿ, ಲಕ್ಷಣಾವೃತ್ತಿಗಳಲ್ಲಿ ತಾರತಮ್ಯವಿದೆಯೋ, ಲಕ್ಷಣಾವೃತ್ತಿಯಲ್ಲಿಯೂ ಕೂಡ ಅಂತರಂಗಲಕ್ಷಣಾ, ಬಹಿರಂಗಲಕ್ಷಣಾಗಳಲ್ಲಿ ತಾರತಮ್ಯವಿದೆಯೋ, ಉಪಚಾರ ರೂಢೋಪಚಾರಗಳಲ್ಲಿ ತಾರತಮ್ಯವಿದೆಯೋ, ಅದರಂತೆ ಅವಿದ್ವದ್ರೂಢಿ,

ವಿದ್ವದ್ರೂಢಿಗಳಲ್ಲಿಯೂ ತಾರತಮ್ಯವಿದೆ. ಅಂದರೆ ಮತ್ತು ಅವಿದ್ವದ್ರೂಢಿಗಿಂತಲೂ ವಿದ್ವದ್ರೂಢಿಯು ಪ್ರಬಲವಾಗಿರುತ್ತದೆ. ಮತ್ತು ಯೋಗಕ್ಕಿಂತಲೂ ಮಹಾಯೋಗವು ಪ್ರಬಲವಾಗಿರುತ್ತದೆ. ಹಾಗಾಗಿ ಲೋಕದಲ್ಲಿ ಶಬ್ದಗಳು ಅವಿದ್ವದ್ರೂಢಿಯಿಂದ ಪ್ರಸಿದ್ಧವಾಗಿರುತ್ತವೆ. ಮತ್ತು ಕೇವಲ ಯೋಗರೂಢಿಯಿಂದ ಪ್ರಸಿದ್ಧವಾಗಿರುತ್ತದೆ. ಆದರೆ ಮಹಾವಿಷ್ಣುವಿನಲ್ಲಿ ವಿದ್ವದ್ರೂಢಿಯಿಂದ ಮತ್ತು ಮಹಾಯೋಗದಿಂದಷ್ಟೇ ಶಬ್ದಗಳು ಸಮನ್ವಯಗೊಳ್ಳುತ್ತವೆ. ಪರಮಾತ್ಮನಲ್ಲಿ ಶಬ್ದಗಳು ವಿದ್ವದ್ರೂಢಿಯಿಂದ ಇರುತ್ತವೆಂದು ಹೇಳಿದಾಗಲೇ ಪ್ರಾಬಲ್ಯವು ಸಿದ್ಧವಾಗುತ್ತದೆ. ಮಹಾಯೋಗವೃತ್ತಿಯಿಂದಲೂ ಇರುತ್ತದೆಂದು ಹೇಳಿದಾಗ ಪ್ರಾಬಲ್ಯವು ಸುತರಾಂ ಸಿದ್ಧವಾಗುತ್ತದೆ. ಆದ್ದರಿಂದ ಅಕ್ಷಾದಿಶಬ್ದಗಳಂತೆ ಎಲ್ಲಾ ಶಬ್ದಗಳೂ ಅನೇಕಾರ್ಥಗಳಾಗಲೀ ಎಂಬ ಆಶಂಕೆಯು ಉದಯವಾಗುವುದಿಲ್ಲ.

ಮೇಲೆ ಹೇಳಿದ ಈ ವಿಷಯವನ್ನು ಅನೇಕ ಸೂತ್ರಗಳಲ್ಲಿ ಸಮರ್ಥಿಸಲಾಗಿದೆ. ಆದ್ದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂಬ ಆಶಂಕೆಯು ಆಪಾತತಃ ಪ್ರಾಪ್ತವಾಗುತ್ತದೆ. ಆದರೆ ಸೂತ್ರಕಾರರ ವಿಭಿನ್ನವಾದ ವಿವಕ್ಷೆಗಳನ್ನು ಏಕಾಗ್ರತೆಯಿಂದ ಗಮನಿಸಬೇಕು. 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಸೂತ್ರಕಾರರು ಹಾನಾದಿ ವ್ಯವಹಾರಕ್ಕೋಸ್ಕರ ಮಾತ್ರ ಶಬ್ದಗಳನ್ನು ಬೇರೆಡೆ ಉಪಯೋಗಿಸುತ್ತಾರೆ ಎಂದು ಹೇಳಿದ್ದಾರೆ. 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಸೂತ್ರದಲ್ಲಿ ಈಶ್ವರನ ಸಂಬಂಧದಿಂದಷ್ಟೇ ಶಬ್ದಗಳು ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಿದ್ದಾರೆ. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಲೌಕಿಕಪದಾರ್ಥಗಳಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುವುದಿಲ್ಲವೆಂದು ಸಮರ್ಥಿಸಿದ್ದಾರೆ. 'ಸಮಾಕರ್ಷಾತ್' ಎಂಬ ಈ ಅಧಿಕರಣದ ಸೂತ್ರದಲ್ಲಿ ಅಕ್ಷಾದಿಶಬ್ದಗಳಂತೆ ಸಕಲಶಬ್ದಗಳು ನಾನಾರ್ಥಕಗಳಾಗುವುದಿಲ್ಲವೆಂದು ಸಮರ್ಥಿಸಿದ್ದಾರೆ. 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ ಬಾಲಕರು ಚಿತ್ರಲಿಖಿತ ಸಿಂಹವನ್ನು ನೋಡಿ, ಸಿಂಹವೆಂದು ಪ್ರಯೋಗಿಸುವಂತೆ ಅಜ್ಞರು ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಲೋಕದಲ್ಲಿ ವ್ಯವಹರಿಸುತ್ತಾರೆ ಎಂದು ಸಮರ್ಥಿಸುತ್ತಾರೆ. 'ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇತ್ ನ' ಎಂಬ ಸೂತ್ರದಲ್ಲಿ ತದಧೀನತ್ವನ್ಯಾಯದಿಂದ ಸಕಲ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಾದರೆ, ಮುಖ್ಯಪ್ರಾಣ ದೇವರನ್ನೂ ಕೂಡ ಪ್ರತಿಪಾದನೆ ಮಾಡಲಿ ಎಂಬ ಆಶಂಕೆಯನ್ನು ನಿರಾಕರಿಸಿದ್ದಾರೆ. 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರದಲ್ಲಿ ಬ್ರಹ್ಮಜ್ಞಾನಕ್ಕೋಸ್ಕರವೇ ಜ್ಞಾನಿಗಳು ಭಗವತ್ ಪ್ರತಿಪಾದಕ ಶಬ್ದಗಳನ್ನು ಕರ್ಮಾದಿಗಳಲ್ಲಿ, ದೇವತಾದಿಗಳಲ್ಲಿ ಪ್ರತಿಪಾದನೆ ಮಾಡುತ್ತಾರೆ ಎಂದು ಸಮರ್ಥಿಸಿದ್ದಾರೆ. ಹೀಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಭಿನ್ನ-ಭಿನ್ನವಾದ ಅಭಿಪ್ರಾಯವನ್ನು ತಾಳಿರುವುದರಿಂದ ಪರಸ್ಪರ-ಸೂತ್ರಗಳಲ್ಲಿ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.

## ಬ್ರಹ್ಮಪ್ರತಿಪಾದಕ ಶಬ್ದಗಳ ಸಮಾಕರ್ಷಣ ಅನಿವಾರ್ಯ

ಪ್ರತಿಯೊಂದು ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಅಂತಹ ಶಬ್ದಗಳನ್ನು ಸಮಾಕರ್ಷಣ ಮಾಡಿ, ಕರ್ಮ, ದೇವತಾದಿಗಳನ್ನು ತಿಳಿಯಬೇಕು. ಕರ್ಮ, ದೇವತೆ ಮೊದಲಾದವುಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳಿಗೆ ಪರಮಾತ್ಮನನ್ನು ತಿಳಿಯುವುದರಲ್ಲೇ ಮುಖ್ಯತಾತ್ಪರ್ಯವಿರುತ್ತದೆ. ಹೇಗೆಂದರೆ ಒಂದು ಮಣ್ಣಿನ ಮುದ್ದೆಯನ್ನು ತಿಳಿದರೆ ಮಣ್ಣಿನಿಂದಾಗುವ ಎಲ್ಲ ವಸ್ತುಗಳು ತಿಳಿಯುತ್ತವೆ. ಅದರಂತೆ

ಪರಮಾತ್ಮನ ಜ್ಞಾನದಿಂದ ಎಲ್ಲಾ ಕರ್ಮಾದಿಗಳನ್ನು ತಿಳಿದಂತಾಗುತ್ತದೆ. ಒಂದುವೇಳೆ ವೈದಿಕಶಬ್ದಗಳನ್ನು ಹೀಗೆ ಬೇರೆಡೆ ಸಮಾಕರ್ಷಣ ಮಾಡದಿದ್ದರೆ, ಬ್ರಹ್ಮನನ್ನಷ್ಟೇ ಪ್ರತಿಪಾದನೆ ಮಾಡುವುದಾದರೆ, ಮಂದರು ವೇದವನ್ನು ಅಧ್ಯಯನ ಮಾಡಲು ತೊಡಗುವುದೇ ಇಲ್ಲ. ಅಷ್ಟೇ ಅಲ್ಲದೇ ಪ್ರತಿಯೊಂದು ಪದಗಳು ಬ್ರಹ್ಮನ ಹೆಸರುಗಳಾದ್ದರಿಂದ ಪರಸ್ಪರ ಅನ್ವಯವನ್ನು ಹೊಂದದೇ ವಾಕ್ಯದ ಅರ್ಥವೇ ಸಿದ್ಧವಾಗದಿರಬೇಕಾದೀತು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಮತ್ತು 'ಯತೋ ವಾಚೋ ನಿವರ್ತಂತೇ' ಇತ್ಯಾದಿ ವಾಕ್ಯವು ಸರ್ವಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ಪ್ರತಿಪಾದನೆ ಮಾಡದಿರಬೇಕಾದೀತು. ಅಷ್ಟೇ ಅಲ್ಲದೇ ವೇದವು ವಿಧಿಸುವ ಶ್ರವಣಾದಿಗಳ ಜ್ಞಾನವು ಬಾರದಿರಬೇಕಾದೀತು. ಕರ್ಮದೇವತೆಗಳ ಜ್ಞಾನವೂ ಉಂಟಾಗದಿರಬೇಕಾದೀತು. ಇಂತಹವರು ಉತ್ತಮಾಧಿಕಾರಿಗಳು, ಇವರು ಅಧಮಾಧಿಕಾರಿಗಳು ಎಂಬ ವಿಷಯವೂ ಕೂಡ ತಿಳಿಯದಿರಬೇಕಾದೀತು. ಈ ಎಲ್ಲಾ ಕಾರಣಗಳಿಂದ ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಬೇರೆಡೆ ಸಮಾಕರ್ಷಣ ಮಾಡಿ, ಅರ್ಥವನ್ನು ನಾವು ತಿಳಿಯಲೇ ಬೇಕು. ಆದ್ದರಿಂದ ಯಾವುದೇ ಶಬ್ದಗಳು ಸ್ವಾರ್ಥವನ್ನು ಮೊದಲು ಪ್ರತಿಪಾದನೆ ಮಾಡಿ, ಅನಂತರ ಏಕವಾಕ್ಯತ್ವವನ್ನು ಹೊಂದಿ ವಾಕ್ಯಾರ್ಥಜ್ಞಾನವನ್ನು ತಂದುಕೊಡುತ್ತವೆ. ಅಂತಹ ಮಹಾವಾಕ್ಯದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ವೈದಿಕವಾಕ್ಯಗಳಲ್ಲಿರುವ ಪ್ರತ್ಯೇಕ ಪದಗಳು ಬ್ರಹ್ಮಭಿನ್ನವಾದ ಅರ್ಥವನ್ನು ಹೇಳುತ್ತಿದ್ದರೂ ಸಮಗ್ರವಾಕ್ಯವು ಪರಮಾತ್ಮನೊಂದಿಗೆ ಅನ್ವಯವನ್ನು ಹೊಂದುತ್ತದೆಂಬುದು 'ವಾಕ್ಯಾನ್ವಯಾತ್' ಎಂಬ ಸೂತ್ರದ ಅಭಿಪ್ರಾಯ.

## ರಾಮಾನುಜ ಪಂಥದವರ ಸೂತ್ರಾರ್ಥ ವಿಮರ್ಶೆ

'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ' ಎಂಬ ಸೂತ್ರದಲ್ಲಿ ಮೋಕ್ಷಕ್ಕೆ ಜ್ಞಾನದ ಹೊರತು ಬೇರೆ ಸಾಧನ ಇರುವುದಿಲ್ಲ ಎಂಬ ಪ್ರತಿಜ್ಞೆಯ ಸಾಧನೆಗಾಗಿ, ಕರ್ಮಾದಿಗಳನ್ನು ಹೇಳಲಾಗಿದೆ. ಆದ್ದರಿಂದ ಕರ್ಮಾದಿಗಳನ್ನು ವೇದವು ಪ್ರತಿಪಾದನೆ ಮಾಡಿದರೂ ಕ್ಷುದ್ರಫಲಕ್ಕೋಸ್ಕರ ಮುಮುಕ್ಷು ಆದವನು ಪ್ರಯತ್ನಿಸಬಾರದು. ಶಾಶ್ವತ ಫಲವನ್ನು ನೀಡುವ ಬ್ರಹ್ಮಜ್ಞಾನದಲ್ಲಿಯೇ ಪ್ರಯತ್ನಿಸಬೇಕು ಎಂಬುದಾಗಿ ವೈರಾಗ್ಯಕ್ಕೋಸ್ಕರ ಕರ್ಮಕಾಂಡವು ಕರ್ಮವನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' ಎಂಬ ಸೂತ್ರದಲ್ಲಿ ಧ್ಯಾನಕ್ಕಾಗಿ ಅಂತಃಕರಣವನ್ನು ಶುದ್ಧಿ ಮಾಡಬೇಕು. ಅಂತಃಕರಣಸಿದ್ಧಿಗೋಸ್ಕರ ಕರ್ಮಾಚರಣೆಯಲ್ಲಿ ತೊಡಗಬೇಕು. ಆವಾಗ ಅಂತಃಕರಣಶುದ್ಧಿಯಿಂದ ತತ್ವಜ್ಞಾನವನ್ನು ಸಂಪಾದನೆ ಮಾಡಿ, ಧ್ಯಾನದಲ್ಲಿ ತೊಡಗಬಹುದು. ಹೀಗೆ ಕರ್ಮಗಳೆಲ್ಲವೂ ಧ್ಯಾನಕ್ಕೆ ಸಾಧನವಾಗಿ ಆಚರಿಸಬೇಕೆಂದು ತಿಳಿಸಲು ಕರ್ಮಕಾಂಡವು ಹೊರಟಿರುತ್ತದೆಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ.

ಸಮಗ್ರ ಜಗತ್ತು ಬ್ರಹ್ಮನ ಅಧೀನವಾಗಿದೆ. ಕರ್ಮಗಳೂ ಕೂಡ ಬ್ರಹ್ಮನ ಅಧೀನವಾಗಿದೆ. ಎಲ್ಲವೂ ಕೂಡ ಬ್ರಹ್ಮನಲ್ಲಿ ಆಶ್ರಿತವಾಗಿವೆ. ಇದನ್ನು ತಿಳಿಯಬೇಕೆಂದರೆ ಜಗತ್ತನ್ನು ಹಾಗೂ ಕರ್ಮಗಳನ್ನು ತಿಳಿಯಲೇಬೇಕು. ಅದಕ್ಕಾಗಿ ಕರ್ಮಕಾಂಡವು ಸಾರ್ಥಕವಾಗಿದೆ ಎಂದು ಕಾಶಕೃತ್ಸ್ನಾಚಾರ್ಯರು ಹೇಳುತ್ತಾರೆ.

ಈ ವ್ಯಾಸರ ಶಿಷ್ಯರ ಅಭಿಪ್ರಾಯದಲ್ಲಿ ಮತ್ತು ಕರ್ಮವು ಬ್ರಹ್ಮಜ್ಞಾನಕ್ಕೆ ಅವಶ್ಯಕವೆಂದು ಹೇಳುವುದರಲ್ಲಿ ಅಂತರಂಗತ್ವವು ಇರುವುದರಿಂದ ಸೂತ್ರಕ್ರಮವಿನ್ಯಾಸವು ಸಾರ್ಥಕವಾಗಿದೆ. ಆಶ್ಮರಥ್ಯಾಚಾರ್ಯರಿಗಿಂತ ಔಡುಲೋಮಿಚಾರ್ಯರು, ಅವರಿಗಿಂತಲೂ ಕಾಶಕೃತ್ಸ್ನಾಚಾರ್ಯರು ಕರ್ಮಕ್ಕೆ ಹೆಚ್ಚಿನ ಅಂತರಂಗತ್ವವನ್ನು ಒಪ್ಪಿರುತ್ತಾರೆ. ಆದ್ದರಿಂದ ಸೂತ್ರಕ್ರಮವಿನ್ಯಾಸವು ಅತ್ಯಂತ ಸ್ವರಸವಾಗಿದೆ.

'ಸಮಾಕರ್ಷಾತ್' ಇತ್ಯಾದಿ ಸೂತ್ರಗಳನ್ನು ಅಧ್ಯಾಯದ ಕೊನೆಯಲ್ಲಿ ಹೇಳಬೇಕಿತ್ತಲ್ಲವೇ? ಏಕೆಂದರೆ ಪರಮಾತ್ಮನಲ್ಲಿ ಪ್ರತಿಯೊಂದು ಶಬ್ದಗಳ ಸಮನ್ವಯವನ್ನು ಮಾಡುವಾಗ ಬರುವಂತಹ ಬಾಧಕಗಳನ್ನು ಪರಿಹರಿಸಲಾಗಿದೆ. ಆದ್ದರಿಂದ ಅಧ್ಯಾಯದ ಕೊನೆಯಲ್ಲಿ ಇದನ್ನು ಹೇಳುವುದು ಹೆಚ್ಚು ಸ್ವರಸವಾಗುತ್ತಿತ್ತು ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಆದರೆ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಸೂತ್ರದಲ್ಲಿ 'ಏತೇನ' ಎಂಬುದರಿಂದ ಹಿಂದೆ ಹೇಳಲ್ಪಟ್ಟ ಸಮಸ್ತ ಹೇತುಗಳನ್ನು ಪರಾಮರ್ಶಿಸುವುದರ ಜೊತೆಗೆ ಬಾಧಕೋದ್ಧಾರ ಪ್ರಕಾರವನ್ನೂ ಕೂಡ ಪರಾಮರ್ಶಿಸಲಾಗಿದೆ. ಒಂದುವೇಳೆ ಈ ಸಮಾಕರ್ಷಾಧಿಕರಣವನ್ನು ಅಧ್ಯಾಯದ ಕೊನೆಯಲ್ಲಿ ಹೇಳಿದ್ದರೆ 'ಏತೇನ' ಎಂಬ ಪದದಿಂದ ಈ ಬಾಧಕೋದ್ಧಾರ ಪ್ರಕಾರವನ್ನು ಪರಾಮರ್ಶಿಸಲು ಸಾಧ್ಯವಾಗುತ್ತಿರಲಿಲ್ಲ. ಅಷ್ಟೇ ಅಲ್ಲದೇ 'ಆತ್ಮನಃ ಆಕಾಶ ಸಂಭೂತಃ' ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಆಕಾಶಾದಿಶಬ್ದಗಳು ಬ್ರಹ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುವುದಾದರೆ, ಭೂತಾಕಾಶಾದಿಗಳ ಉತ್ಪತ್ತಿಯೇ ಸಿದ್ಧವಾಗದಿರಬೇಕಾದೀತು ಎಂಬ ಪ್ರಬಲ ಬಾಧಕವು ಪ್ರಾಪ್ತವಾಗಿದೆ. ಅದನ್ನು ಪರಿಹರಿಸುವ ಜವಾಬ್ದಾರಿ ಈ ಸಮಾಕರ್ಷಾಧಿಕರಣಕ್ಕೆ ಇದ್ದಾಗ ಅಧ್ಯಾಯದ ಕೊನೆಯಲ್ಲಿ ಇದು ಅಸಂಗತವೇ ಆಗುತ್ತದೆ.

## ಶಾಂಕರಭಾಷ್ಯದಲ್ಲಿ ಅಧಿಕರಣಶರೀರ

ಇಲ್ಲಿಯ ತನಕ ಪ್ರಧಾನವು ಶಬ್ದಪ್ರತಿಪಾದ್ಯವಲ್ಲ ಎಂಬುದನ್ನು ಸಮರ್ಥಿಸಿ ಪ್ರಕೃತ ಶ್ರುತಿಗಳಲ್ಲಿ ತೋರುವ ಕಾರಣವಾಕ್ಯಗಳ ವಿರೋಧವನ್ನು ಪರಿಹರಿಸಲಾಗುತ್ತಿದೆ. 'ಆತ್ಮನಃ ಆಕಾಶಃ ಸಂಭೂತಃ' ಎಂಬುದಾಗಿ ತೈತ್ತಿರೀಯಶ್ರುತಿಯು ಆತ್ಮನಿಂದ ಆಕಾಶವು ಮೊದಲು ಹುಟ್ಟಿತೆಂದು ಹೇಳಿದರೆ ಛಾಂದೋಗ್ಯೋಪನಿಷತ್ತು 'ತತ್ತೇಜೋಽಸೃಜತ' ಎಂಬುದಾಗಿ ತೇಜಸ್ಸೇ ಮೊದಲು ಹುಟ್ಟಿತು ಎಂದು ಹೇಳುತ್ತಿದೆ. ಹೀಗೆ ಕಾರ್ಯಗಳಲ್ಲಿ ಯಾವುದು ಮೊದಲು ಹುಟ್ಟಿತೆಂಬ ವಿಷಯದಲ್ಲಿ ವಿರೋಧವು ಬಂದರೆ ಹಿಂದಿನ 'ಕಾರಣತ್ವೇನ ಚ' ಎಂಬ ಸೂತ್ರವು ಅದನ್ನು ಪರಿಹರಿಸಿತು. ಪ್ರಕೃತ 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಅಸತ್ತಿನಿಂದ ಜಗತ್ತು ಹುಟ್ಟಿತೆಂದು ಹೇಳಿದರೆ 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯು ಸತ್‌ಪದಾರ್ಥದಿಂದ ಜಗತ್ತಿನ ಹುಟ್ಟುವಿಕೆಯನ್ನು ಹೇಳುತ್ತಿದೆ. ಹೀಗೆ ಕಾರಣವಾಕ್ಯಗಳಲ್ಲಿ ಬರುವ ಪರಸ್ಪರ ವಿರೋಧವನ್ನು 'ಸಮಾಕರ್ಷಾತ್' ಎಂಬ ಎರಡನೆಯ ಸೂತ್ರವು ಪರಿಹರಿಸುತ್ತಿದೆ. ಬ್ರಹ್ಮನೊಬ್ಬನೇ ಜಗತ್ತಿಗೆ ಸೃಷ್ಟಿಕರ್ತನಾಗಿದ್ದಾನೆ. 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿರುವ 'ಸತ್'ಶಬ್ದದಿಂದ ಯಾವ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ, ಅವನೇ 'ಅಸದ್ವಾ ಇದಮಗ್ರ' ಎಂಬ ಶ್ರುತಿಯಲ್ಲಿರುವ 'ಅಸತ್' ಪದದಿಂದಲೂ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಅಸ್ತಿ ಬ್ರಹ್ಮೇತಿ ಚೇದ್ವೇದ' ಎಂಬುದಾಗಿ ಹಿಂದೆ ಅಂತಹ ಬ್ರಹ್ಮನು ಪ್ರಕೃತನಾಗಿರುವುದರಿಂದ. ಆದ್ದರಿಂದ

ಶ್ರುತಿವಾಕ್ಯಗಳಲ್ಲಿ ಪರಸ್ಪರ ವೈಮತ್ಯ ಬರಲು ಸಾಧ್ಯವಿಲ್ಲ. ಹೀಗೆ 'ಸಮಾಕರ್ಷಾತ್' ಎಂಬ ಸೂತ್ರವು 'ಕಾರಣತ್ವೇನ ಚ' ಎಂಬ ಹಿಂದಿನ ಸೂತ್ರಕ್ಕೆ ಗುಣಸೂತ್ರವೆನಿಸುತ್ತದೆ. ಇಷ್ಟು ಅದ್ವೈತಿಗಳ ಸಿದ್ಧಾಂತ.

ಹೀಗೆ ಅಧಿಕರಣವನ್ನು ಸ್ಥಾಪನೆ ಮಾಡುವುದಾದರೆ ಅಧ್ಯಾಯದಿಂದಾಗಲೀ, ಪಾದದಿಂದಾಗಲೀ, ಅಥವಾ ಅಧಿಕರಣದಿಂದಾಗಲೀ ಸಂಗತಿಯು ದೊರೆಯುವುದಿಲ್ಲ. ಏಕೆಂದರೆ ಶ್ರುತಿವಿರೋಧದ ಪರಿಹಾರಕ್ಕಾಗಿ ಎರಡನೆಯ ಅಧ್ಯಾಯವು ಹೊರಟಿರುವಾಗ ಈ ಪ್ರಥಮಪಾದದಲ್ಲಿ ಅದರ ಅವಶ್ಯಕತೆಯಿರುವುದಿಲ್ಲ. ಮತ್ತು ಈ ನಾಲ್ಕನೆಯ ಪಾದವು ಪ್ರಕೃತಿಗೆ ಶಾಬ್ದತ್ವವನ್ನು ನಿರಾಕರಣೆ ಮಾಡುತ್ತಿದೆ. ಹಿಂದಿನ ಮುಂದಿನ ಸೂತ್ರಗಳಲ್ಲೂ ಪ್ರಕೃತಿಗೆ ಶಾಬ್ದತ್ವವನ್ನು ನಿರಾಕರಣೆ ಮಾಡುತ್ತಿರುವಾಗ ಮಧ್ಯದ ಈ ಸೂತ್ರವು 'ಅಸತ್' ಎಂಬ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲು ಹೊರಟರೆ ಅಸಂಗತವಾಗುತ್ತದೆ. ಅಧಿಕರಣದಿಂದಲೂ ಕೂಡ ಸಂಗತಿಯಿರುವುದಿಲ್ಲ. ಈ ಅಧಿಕರಣವು ಕಾರಣವಾಕ್ಯಗಳಲ್ಲಿರುವ ಪರಸ್ಪರ ವಿರೋಧ ಪರಿಹಾರಕ್ಕಾಗಿ ಹೊರಟಿದೆ ಎಂದು ನೀವೇ ಹೇಳಿದ್ದೀರಿ. ಆದರೆ ಅಸತ್ ಶಬ್ದವನ್ನು ಸಮನ್ವಯ ಮಾಡುತ್ತಿದ್ದೀರಿ. ಹೀಗಿರುವಾಗ ಅಧಿಕರಣಸಂಗತಿಯನ್ನಾದರೂ ಹೇಗೆ ಹೇಳಲು ಸಾಧ್ಯ. ಆದ್ದರಿಂದ ಅದ್ವೈತಿಗಳ ಸಿದ್ಧಾಂತವು ಅತ್ಯಂತ ದುರ್ಬಲವಾಗಿದೆ.

## ಪರಮತದವರ 'ಜಗದ್ವಾಚಿತ್ವಾತ್' ಎಂಬ ಸೂತ್ರಾರ್ಥ ನಿರಾಕರಣೆ

ಅದ್ವೈತಿಗಳು ಹಾಗೂ ರಾಮಾನುಜರು 'ಜಗದ್ವಾಚಿತ್ವಾತ್' ಎಂಬಲ್ಲಿಂದ ಪ್ರಾರಂಭಿಸಿ, ಮೂರು ಸೂತ್ರಗಳನ್ನು ಒಂದೇ ಅಧಿಕರಣವೆಂದು ಹೇಳುತ್ತಾರೆ. 'ವಾಕ್ಯಾನ್ವಯಾತ್' ಎಂಬಲ್ಲಿಂದ ಪ್ರಾರಂಭಿಸಿ ನಾಲ್ಕು ಸೂತ್ರಗಳು ಮತ್ತೊಂದು ಅಧಿಕರಣವೆನ್ನುತ್ತಾರೆ. ಜಗದ್ವಾಚಿತ್ವಾಧಿಕರಣದಲ್ಲಿ 'ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ಚೈತತ್ ಕರ್ಮ ಸ ವೇದಿತವ್ಯಃ' ಎಂಬುದು ವಿಷಯವಾಕ್ಯ. ಇಲ್ಲಿ ವೇದಿತವ್ಯತ್ವೇನ ಪ್ರತಿಪಾದ್ಯನಾದವನು ಜೀವನೆಂದು ಪೂರ್ವಪಕ್ಷ. ಏಕೆಂದರೆ 'ಯಸ್ಯ ಚ ಏತತ್ ಕರ್ಮ' ಎಂಬುದಾಗಿ ಧರ್ಮಾಧರ್ಮಗಳೆಂಬ ಕರ್ಮವನ್ನು ಶ್ರುತಿ ಹೇಳುತ್ತಿದೆ. ಇದು ಜೀವನ ಅಸಾಧಾರಣ ಲಿಂಗವಾಗಿರುವುದರಿಂದ ಜೀವನೇ ಪ್ರತಿಪಾದ್ಯನಾಗಬೇಕೆಂಬುದು ಮೊದಲನೆಯ ಪೂರ್ವಪಕ್ಷ.

ಅಥವಾ ಮುಂದಿನ ವಾಕ್ಯದಲ್ಲಿ 'ಪ್ರಾಣ ಏವ ಏಕಧಾ' ಎಂಬುದಾಗಿ ಮುಖ್ಯಪ್ರಾಣನಲ್ಲಿ ಅಸಾಧಾರಣವಾಗಿ ಶ್ರುತವಾದ ಪ್ರಾಣಶಬ್ದವೂ ಇರುವುದರಿಂದ ಮುಖ್ಯಪ್ರಾಣನು ವೇದಿತವ್ಯತ್ವೇನ ಪ್ರತಿಪಾದ್ಯನಾಗುತ್ತಾನೆಂಬುದು ಎರಡನೆಯ ಪೂರ್ವಪಕ್ಷ.

ಈ ಎರಡು ಪೂರ್ವಪಕ್ಷಗಳೂ ಕೂಡ ಅಸಾಧುವಾಗಿದೆ. 'ಏತತ್ ಕರ್ಮ' ಎಂಬಲ್ಲಿರುವ 'ಏತತ್' ಶಬ್ದವು ಪ್ರತ್ಯಕ್ಷಾದಿ ಸಿದ್ಧವಾದ ಜಗತ್ತನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು 'ಜಗದ್ವಾಚಿತ್ವಾತ್' ಎಂಬ ಸೂತ್ರ ಹೇಳುತ್ತಿದೆ. ಆದ್ದರಿಂದ ಕರ್ಮಶಬ್ದಕ್ಕೆ 'ಕ್ರಿಯತೇ ಅನೇನ ಇತಿ ಕರ್ಮ' ಎಂಬ ವ್ಯುತ್ಪತ್ತಿಯನ್ನು ಅವಲಂಬಿಸಿ, ಬ್ರಹ್ಮನೇ 'ಏತತ್ ಕರ್ಮ' ಎಂಬ ಉಕ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಈ ಜಗತ್ತನ್ನು ನಿರ್ಮಾಣ ಮಾಡುವ ಬ್ರಹ್ಮನು ಶ್ರುತಿಪ್ರತಿಪಾದ್ಯನಾಗಿದ್ದಾನೆಂಬುದು ಅಭಿಪ್ರಾಯ. ಆದ್ದರಿಂದ ಜೀವನಾಗಲೀ, ಮುಖ್ಯಪ್ರಾಣನಾಗಲೀ, ವೇದಿತವ್ಯತ್ವೇನ ಪ್ರತಿಪಾದ್ಯರಾಗುವುದಿಲ್ಲ ಎಂಬುದು ಸಿದ್ಧಾಂತ.

ಇವರ ಈ ಅಧಿಕರಣಶರೀರವು ಅಸಾಧುವಾಗಿದೆ. ಏಕೆಂದರೆ ನಾಲ್ಕನೆಯ ಪಾದದ ಪ್ರಾರಂಭದಲ್ಲಿ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡುತ್ತೇವೆಂದು ಪ್ರತಿಜ್ಞೆಗೈದ ನೀವು ಕೇವಲ ಮೂರು ಪಾದಗಳಲ್ಲಷ್ಟೇ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡಿದಿರಿ. ನಾಲ್ಕನೆಯ ಅಧಿಕರಣದಲ್ಲಿ ಶ್ರುತಿಗಳ ಪರಸ್ಪರವಿರೋಧವನ್ನು ಪರಿಹರಿಸಿದಿರಿ. ಈ ಅಧಿಕರಣದಲ್ಲಿ ಪುನಃ ಬ್ರಹ್ಮನಲ್ಲಿ ಶಬ್ದಗಳ ಸಮನ್ವಯವನ್ನೇ ಮಾಡಲು ಹೊರಟಿದ್ದೀರಿ. ಹೀಗೆ ಅವ್ಯವಸ್ಥೆಯಿಂದ ನಾಲ್ಕನೆಯ ಪಾದವನ್ನು ನೀವು ರಚನೆ ಮಾಡುತ್ತಿದ್ದೀರಿ. ಇದು ಅತ್ಯಂತ ಅಸಂಗತವಾಗಿದೆ. ಮತ್ತು 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ 'ಸಮಾಕರ್ಷಾತ್' ಎಂಬ ಹಿಂದಿನ ಸೂತ್ರವನ್ನು ಅನ್ವಯ ಮಾಡಿಕೊಳ್ಳಲು ಬರುವಾಗ, 'ಏತತ್' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ಅಯುಕ್ತವಾಗಿದೆ.

## ಮತದ್ವಯದಲ್ಲಿ ವಾಕ್ಯಾನ್ವಯಾಧಿಕರಣದ ವಿಮರ್ಶೆ

'ವಾಕ್ಯಾನ್ವಯಾತ್' 'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ' 'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಈ ನಾಲ್ಕು ಸೂತ್ರಗಳನ್ನು ಸೇರಿಸಿ ವಾಕ್ಯಾನ್ವಯಾಧಿಕರಣವೆಂದು ಶಾಂಕರರು ಮತ್ತು ರಾಮಾನುಜೀಯರು ವಿವಕ್ಷಿಸುತ್ತಾರೆ. ಇದನ್ನು ಪ್ರಕೃತ ವಿಮರ್ಶಿಸಲಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ' 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' 'ಆತ್ಮಾ ವಾ ಅರೇ ದ್ರಷ್ಟವ್ಯ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬುದಾಗಿ ಹೇಳಲಾಗಿದೆ. ಪತಿ, ಪತ್ನಿ, ಪುತ್ರ ಮೊದಲಾದವು ಜೀವನಿಗೆ ಪ್ರಿಯವಾಗಿರುವುದರಿಂದ, ಜೀವನೇ ಈ ಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ. 'ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ' ಎಂಬುದಾಗಿ ಆತ್ಮನ ಜ್ಞಾನದಿಂದ ಸಕಲವೂ ವಿದಿತವಾಗುತ್ತವೆಂದು ಹೇಳಿರುವುದರಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ. ಮತ್ತು ಅದೇ ಪ್ರಕರಣದಲ್ಲಿರುವ ಅನೇಕ ವಾಕ್ಯಗಳು ಪರಮಾತ್ಮನಲ್ಲಿ ಮಾತ್ರ ಅನ್ವಯಿಸುವುದರಿಂದ ಬ್ರಹ್ಮನೇ ಈ ಪ್ರಕರಣದಿಂದ ಪ್ರತಿಪಾದ್ಯನಾಗಿದ್ದಾನೆ.

ಇವರ ಈ ಅಧಿಕರಣಶರೀರವು ಅಸಾಧುವಾಗಿದೆ. ಏಕೆಂದರೆ 'ವಾಕ್ಯಾನ್ವಯಾತ್' ಮೊದಲಾದ ನಾಲ್ಕು ಸೂತ್ರಗಳನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಲು ಯಾವುದೇ ಆಧಾರಗಳಿಲ್ಲ. ಸೂತ್ರಕಾರರು ಸಮನ್ವಯ ಮಾಡಬೇಕಾದ ಯಾವುದೇ ಶಬ್ದವಿಶೇಷಗಳನ್ನು ಉಲ್ಲೇಖ ಮಾಡಿಲ್ಲ. ಆದ್ದರಿಂದ ಹಿಂದಿನ ಸೂತ್ರಕ್ಕೆ ಅಂಗಸೂತ್ರಗಳೆಂದೇ ಪರಿಗಣಿಸುವುದು ಸ್ವರಸವಾಗುತ್ತದೆ.

'ಪ್ರತಿಜ್ಞಾಸಿದ್ಧೇಃ ಲಿಂಗಮಾಶ್ಮರಥ್ಯಃ' - 'ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂಬುದಾಗಿ ಪ್ರತಿಜ್ಞಾ ವಾಕ್ಯವಿದೆ. ಇಲ್ಲಿರುವ ಆತ್ಮನು ಪರಮಾತ್ಮನಿಗಿಂತ ಭಿನ್ನನಾದರೆ ಪರಮಾತ್ಮನ ವಿಜ್ಞಾನದಿಂದ ಅವನ ಜ್ಞಾನ ಬಾರದ ಕಾರಣ ಪ್ರತಿಜ್ಞಾವಿರೋಧ ಬರುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿ ದ್ರಷ್ಟವ್ಯನಾಗಿ ಹೇಳಲ್ಪಟ್ಟವನು ಬ್ರಹ್ಮನೇ ಆಗಿದ್ದಾನೆ. ಜೀವಬ್ರಹ್ಮರಿಗೆ ಭೇದಾಭೇದವಿದ್ದರೂ ಅಭೇದದ

ವಿವಕ್ಷೆಯಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯು ಯುಕ್ತವಾಗುತ್ತದೆ ಎಂಬುದು ಆಶ್ಮರಥ್ಯರ ಅಭಿಪ್ರಾಯ.

'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' - ಸಂಸಾರಾವಸ್ಥೆಯಲ್ಲಿ ಜೀವನು ಬ್ರಹ್ಮನಿಗಿಂತ ಭಿನ್ನನಾಗಿದ್ದರೂ ಮೋಕ್ಷಾವಸ್ಥೆಯಲ್ಲಿ ಬ್ರಹ್ಮನಿಗಿಂತ ಅಭಿನ್ನನಾಗಿದ್ದಾನೆ. ಮೋಕ್ಷಾವಸ್ಥೆಯ ಅಭೇದವನ್ನು ವಿವಕ್ಷಿಸಿ, ಪ್ರಾರಂಭದಲ್ಲಿ ಬ್ರಹ್ಮಾಭಿನ್ನನಾದ ಜೀವನನ್ನು ಪ್ರಸ್ತಾಪ ಮಾಡಲಾಗಿದೆ. ಇದು ಔಡೋಲೋಮಿ ಆಚಾರ್ಯರ ಅಭಿಪ್ರಾಯ.

'ಅವಸ್ಥಿತೇರಿತಿ ಕಾಶಕೃತ್ಸ್ನಃ' - ಪರಮಾತ್ಮನೇ ಪ್ರತಿಬಿಂಬರೂಪನಾದ ಜೀವಸ್ವರೂಪವನ್ನು ಹೊಂದಿದ್ದಾನೆ. ಆದ್ದರಿಂದ ಭೇದವು ಕಾಲ್ಪನಿಕ, ಅಭೇದವು ಪಾರಮಾರ್ಥಿಕವೆಂದು ಕಾಶಕೃತ್ಸ್ನರ ಅಭಿಪ್ರಾಯ.

ಹೀಗೆ ಶಾಂಕರಭಾಷ್ಯದಲ್ಲಿ ಮೂರು ಋಷಿಗಳ ಅಭಿಪ್ರಾಯವನ್ನು ಉಲ್ಲೇಖ ಮಾಡಿ, ಕೊನೆಯಲ್ಲಿ ಕಾಶಕೃತ್ಸ್ನಾಚಾರ್ಯರ ಮತವನ್ನಷ್ಟೇ ಅಂಗೀಕರಿಸಲಾಗಿದೆ. ಏಕೆಂದರೆ ಜೀವಬ್ರಹ್ಮರಿಗೆ ಆತ್ಯಂತಿಕ ಅಭೇದವನ್ನು, ಕಾಶಕೃತ್ಸ್ನಾಚಾರ್ಯರು ಮಾತ್ರ ಹೇಳುವುದರಿಂದ ಶ್ರುತಿ-ಸ್ಮೃತಿಗಳು ಅನುಗುಣವಾಗುತ್ತವೆ.

ಶಾಂಕರಭಾಷ್ಯದ ಈ ವ್ಯಾಖ್ಯಾನವು ಅಸಾಧುವಾಗಿದೆ. ಏಕೆಂದರೆ ಪ್ರಾರಂಭದಲ್ಲಿ ಜೀವನು ಪ್ರಸಕ್ತನಾಗಿದ್ದಾನೆಂದು ಹೇಳುವುದೇ ತಪ್ಪು. ಆತ್ಮಪದವೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ 'ಆತ್ಮನಸ್ತು ಕಾಮಾಯ' ಎಂದರೆ ಪರಮಾತ್ಮನ ಇಚ್ಛೆಯಿಂದ ಎಂದೇ ಅರ್ಥ. ಹೊರತು, ಜೀವನು ತನ್ನ ಕಾಮನೆಗಾಗಿ ಎಲ್ಲವೂ ಪ್ರಿಯವಾಗುತ್ತದೆ ಎಂಬರ್ಥವನ್ನು ತಿಳಿಯಬಾರದು. ಪತಿ, ಪತ್ನ್ಯಾದಿಗಳು ಸ್ವತಃ ಅವರಿಗಾಗಿ ಪ್ರಿಯರಾಗಿರುವುದಿಲ್ಲ. ಸ್ವತಃ ಇಚ್ಛೆಪಟ್ಟು ಪತಿಯು ಪತ್ನಿಗೆ ಪ್ರಿಯನಾಗಿರುವುದಿಲ್ಲ. ಪರಮಾತ್ಮನ ಇಚ್ಛೆಯಿಂದಷ್ಟೇ ಪತಿಯು ಪತ್ನಿಗೆ ಪ್ರಿಯನಾಗಿರುತ್ತಾನೆ. ಅಷ್ಟೇ ಅಲ್ಲದೇ ಸ್ವತಃ ತನಗೆ ತಾನೂ ಕೂಡ ಪರಮಾತ್ಮನ ಇಚ್ಛೆಯಿಂದಷ್ಟೇ ಪ್ರಿಯನಾಗಿರುತ್ತಾನೆ. ಯಾವಾಗ ಪರಮಾತ್ಮನ ಇಚ್ಛೆಯು ತಪ್ಪುತ್ತದೋ ಆವಾಗ ಪತಿಯು ಪತ್ನಿಗೆ ಶತ್ರುವಾಗುತ್ತಾನೆ. ತನ್ನಲ್ಲಿ ಬೇಕಾದಷ್ಟು ಸಂಪತ್ತು ಸೌಂದರ್ಯ ಮೊದಲಾದವುಗಳಿದ್ದರೂ ಪತ್ನಿಯು ಪತಿಯನ್ನು ಇಚ್ಛಿಸಲಾರಳು. ಪತಿಯು ಬಡತನದಲ್ಲಿದ್ದರೂ ಸೌಂದರ್ಯದಿಂದ ರಹಿತನಾಗಿದ್ದರೂ ಪರಮಾತ್ಮನ ಇಚ್ಛೆಯಿದ್ದರೆ ಪತ್ನಿಗೆ ಪ್ರಿಯನೇ ಆಗುತ್ತಾನೆ. ಆದ್ದರಿಂದ ಸುಖ-ದುಃಖಾದಿಗಳೆಲ್ಲವೂ ಕೂಡ ನಮಗೆ ಪರಮಾತ್ಮನ ಇಚ್ಛೆಯಿಂದಷ್ಟೇ ದೊರಕಲು ಸಾಧ್ಯ ಹೊರತು, ಸ್ವತಃ ಯಾವುದೇ ಪದಾರ್ಥಗಳು ಸುಖಸ್ವರೂಪವಾಗಲೀ, ದುಃಖಸ್ವರೂಪವಾಗಲೀ ಆಗಿರುವುದಿಲ್ಲ. ಹೀಗೆಯೇ ಶ್ರುತಿಗೆ ವ್ಯಾಖ್ಯಾನ ಮಾಡಬೇಕು. ಆದ್ದರಿಂದ ಉಪಕ್ರಮದಲ್ಲಿ ಪ್ರಸಕ್ತನಾದವನು ಪರಮಾತ್ಮನೇ ಹೊರತು, ಜೀವಾತ್ಮನಲ್ಲ.

### ಅದ್ವೈತಿಗಳು ಹೇಳುವ 'ಆತ್ಮನಸ್ತು ಕಾಮಾಯ' ಎಂಬ ಶ್ರುತ್ಯರ್ಥ ವಿಮರ್ಶೆ

ಎಲ್ಲವೂ ಕೂಡ ಪರಮಾತ್ಮನ ಇಚ್ಛೆಯಿಂದಷ್ಟೇ ಪ್ರಿಯವಾಗುತ್ತದೆ. ಪರಮಾತ್ಮನ ಇಚ್ಛೆಯಿಂದಲೇ ಅಪ್ರಿಯವಾಗುತ್ತದೆಂದು 'ಆತ್ಮನಸ್ತು ಕಾಮಾಯ' ಎಂಬ ಶ್ರುತಿಗೆ ನಾವು ವ್ಯಾಖ್ಯಾನ ಮಾಡಿದೆವು.

ಆದರೆ ಅದ್ವೈತಿಗಳು ಹೀಗೆ ಹೇಳುವುದಿಲ್ಲ. ಸ್ವಾರ್ಥಕ್ಕಾಗಿ ಎಲ್ಲವೂ ಪ್ರಿಯವಾಗುತ್ತವೆ. ಮತ್ತು ಅಪ್ರಿಯವಾಗುತ್ತವೆಂದು ವ್ಯಾಖ್ಯಾನ ಮಾಡುತ್ತಾರೆ. ಹಾಗೆಯೇ ವ್ಯಾಖ್ಯಾನಿಸುವ ಅದ್ವೈತಿಗಳಿಗೆ 'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ' ಎಂಬ ಹಿಂದಿನ ವಾಕ್ಯದಿಂದಲೇ ವಿರೋಧವು ಪ್ರಾಪ್ತವಾಗುತ್ತದೆ. 'ಆತ್ಮನಸ್ತು ಕಾಮಾಯ' ಎಂಬಲ್ಲಿ ನಿರುಪಾಧಿಕಪ್ರಿಯತ್ವವನ್ನು ಹೇಳಿ, ಅದಕ್ಕೆ ವಿರುದ್ಧವಾಗಿ 'ನ ವಾ ಅರೇ ಪತ್ಯುಃ ಕಾಮಾಯ' ಎಂಬ ವಾಕ್ಯದಲ್ಲಿ ಇನ್ನೊಬ್ಬರಿಗೋಸ್ಕರ ಪ್ರಿಯರಾಗಿರುತ್ತಾರೆ ಎಂದು ಹೇಳಿದರೆ ವಿರೋಧವು ಸ್ಪಷ್ಟ. ಮತ್ತು ತನಗಾಗಿ ಎಲ್ಲವೂ ಪ್ರಿಯವಾಗುತ್ತದೆಂಬ ವಿಷಯವನ್ನು ಉಪನಿಷತ್ತು ಏಕೆ ಪ್ರತಿಪಾದನೆ ಮಾಡಬೇಕು? ಅಷ್ಟೇ ಅಲ್ಲದೇ 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂಬ ವಿಧಿ ವಾಕ್ಯವು ಬ್ರಹ್ಮವಿಷಯಕವೆಂದು ಅದ್ವೈತಿಗಳೇ ಹೇಳಿದ್ದಾರೆ. ಆದರೆ ಅರ್ಥವಾದ ವಾಕ್ಯವೆನಿಸಿದ 'ಆತ್ಮನಸ್ತು ಕಾಮಾಯ' ಎಂಬ ವಾಕ್ಯವನ್ನು ಜೀವವಿಷಯಕವೆನ್ನುತ್ತಾರೆ. ವಿಧಿ ಹಾಗೂ ಅರ್ಥವಾದ ವಾಕ್ಯಗಳೆರಡೂ ಸಮಾನ ವಿಷಯಕವೇ ಆಗಿರಬೇಕೆಂಬುದು ಪೂರ್ವಮೀಮಾಂಸೆಯಲ್ಲಿ ಸಿದ್ಧವಾದ ವಿಚಾರ.

## ಅದ್ವೈತಿಗಳ ಉಳಿದ ಸೂತ್ರವ್ಯಾಖ್ಯಾನ ವಿಮರ್ಶೆ

'ವಾಕ್ಯಾನ್ವಯಾತ್' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ 'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' ಎಂಬ ಸೂತ್ರವ್ಯಾಖ್ಯಾನವೂ ಕೂಡ ಅಸಾಧುವಾಗಿದೆ. ಜೀವನು ಸಂಸಾರ ಕಾಲದಲ್ಲಿ ಭಿನ್ನನಾಗಿದ್ದರೂ ಮೋಕ್ಷಾವಸ್ಥೆಯಲ್ಲಿ ಪರಮಾತ್ಮನಿಂದ ಅಭಿನ್ನನಾಗಿದ್ದಾನೆ. ಹೀಗೆ ಮೋಕ್ಷಕಾಲದ ಅಭೇದವನ್ನು ವಿವಕ್ಷಿಸಿ, ಪ್ರಾರಂಭದಲ್ಲಿ ಜೀವನನ್ನು ಪ್ರಸ್ತಾಪ ಮಾಡಲಾಗಿದೆ ಎಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ ಎಂಬುದು ಅದ್ವೈತಿಗಳ ವ್ಯಾಖ್ಯಾನ.

ಹೀಗೆ ಹೇಳುವುದಾದರೆ ಸೂತ್ರದಲ್ಲಿ 'ಉತ್ಕ್ರಾಂತಸ್ಯ' ಎಂದು ಹೇಳಿದರೆ ಮೋಕ್ಷಾವಸ್ಥೆಯಲ್ಲಿ ಜೀವನು ಪರಮಾತ್ಮನಿಂದ ಅಭಿನ್ನನಾಗಿದ್ದಾನೆಂದು ತಿಳಿಯುತ್ತದೆ. 'ಉತ್ಕ್ರಮಿಷ್ಯತಃ' ಎಂದು ಹೇಳಿದರೆ ಸಂಸಾರಕಾಲದಲ್ಲಿಯೇ ಅಭಿನ್ನನಾಗಿದ್ದಾನೆಂದು ಹೇಳಿದಂತಾಗುತ್ತದೆ.

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ. ಉಪನಿಷತ್ತುಗಳಲ್ಲಿ ತೇಜಸ್ಸು ಮೊದಲಾದ ಸೃಷ್ಟಿಯನ್ನು ಹೇಳಿದಂತೆ ಜೀವರ ಸೃಷ್ಟಿಯನ್ನೂ ಕೂಡ ಹೇಳಲಾಗಿದೆ. 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ' ಎಂಬುದಾಗಿ ಬ್ರಹ್ಮನು ಜೀವಸ್ವರೂಪನಾಗಿದ್ದಾನೆ ಎಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದವೇ ಇಲ್ಲದ ಕಾರಣ. ಬ್ರಹ್ಮನ ಪ್ರಕರಣದಲ್ಲಿ ಜೀವನ ಉಪಕ್ರಮವು ಯುಕ್ತವಾಗುತ್ತದೆ. ಇದು ಕಾಶಕೃತ್ಸ್ನಾಚಾರ್ಯರ ಅಭಿಪ್ರಾಯ.

ಅದ್ವೈತಿಗಳ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. 'ಅವಸ್ಥಿತೇಃ' ಎಂದು ಹೇಳಿದಾಗ 'ಕುತ್ರ' ಎಂಬುದಾಗಿ ಧರ್ಮಿಯ ಆಕಾಂಕ್ಷೆಯು ಸಹಜವಾಗಿ ಬರುತ್ತದೆ. ಹೊರತು, 'ಕಥಂ' ಎಂಬುದಾಗಿ ಪ್ರಕಾರದ ಆಕಾಂಕ್ಷೆಯು ಸಹಜವಾಗಿ ಬರುವುದಿಲ್ಲ. ಆದ್ದರಿಂದ ಉತ್ಥಿತ ಆಕಾಂಕ್ಷೆಯನ್ನೇ ವಿವಕ್ಷಿಸಲು ಬರುವಾಗ, ಉತ್ಥಾಪಿತ ಆಕಾಂಕ್ಷೆಯನ್ನು ವಿವಕ್ಷಿಸಬಾರದು. ಈ ಮೂರು ಸೂತ್ರಾರ್ಥಗಳಲ್ಲಿ ಮೊದಲೆರಡು ಸೂತ್ರಗಳ ಅರ್ಥವನ್ನು ಸ್ವತಃ ಅದ್ವೈತಿಗಳೇ ನಿರಾಕರಣೆ ಮಾಡಿದ್ದಾರೆ. ಮೂರನೆಯ

ಸೂತ್ರವು ಆತ್ಯಂತಿಕವಾದ ಅಭೇದವನ್ನು ಹೇಳುತ್ತಿರುವುದರಿಂದ ಅದು ಸೂತ್ರಕಾರರಿಗೆ ಅಭಿಪ್ರೇತವೆಂದು ಅದ್ವೈತಿಗಳು ಹೇಳಿದ್ದಾರೆ. ಆದರೆ 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಿ ಸೂತ್ರಕಾರರೇ ಜೀವಬ್ರಹ್ಮನಿಗೆ ಭೇದವನ್ನು ಸಮರ್ಥನೆ ಮಾಡಿರುವುದರಿಂದ ಈ ಸೂತ್ರಕ್ಕೆ ಅಭೇದವಿವಕ್ಷೆಯಿಂದ ವ್ಯಾಖ್ಯಾನ ಮಾಡಬಾರದೆಂದು ಸ್ಪಷ್ಟವಾಗುತ್ತದೆ.

# ಪ್ರಕೃತ್ಯಧಿಕರಣ

## ಆಕ್ಷೇಪಿಕೀ ಸಂಗತಿ ಹಾಗೂ ತದರ್ಥಚಿಂತೆಗಳು

ಪ್ರಕೃತ್ಯಧಿಕರಣದಲ್ಲಿ ಎಲ್ಲಾ ಬಗೆಯ ಸ್ತ್ರೀಲಿಂಗಶಬ್ದಗಳನ್ನು ಶ್ರೀಹರಿಯಲ್ಲಿ ಪ್ರತಿಪಾದನೆ ಮಾಡಲಾಗಿದೆ. ಇದರ ಹಿಂದಿನ ಅಧಿಕರಣ ಸಮಾಕರ್ಷಾಧಿಕರಣ. ಆದರೆ ಗ್ರಂಥಕಾರರು ಆಕಾಶಾಧಿಕರಣದಿಂದ ಸಂಗತಿ ತೋರಿಸಿದ್ದಾರೆ. ಕಾರಣವೇನೆಂದರೆ ಸಮಾಕರ್ಷಾಧಿಕರಣದಲ್ಲಿರುವ ಸೂತ್ರಗಳು ಹೊಸ ನ್ಯಾಯವನ್ನು ಹೇಳುತ್ತಿರುವುದರಿಂದ ಪ್ರತ್ಯೇಕ ಅಧಿಕರಣವಾಗಿದ್ದರೂ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರಕ್ಕೆ ಅಂಗಭೂತವೇ ಆಗಿವೆ. ಆದ್ದರಿಂದ ಸಮಾಕರ್ಷಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸದೇ ಆಕಾಶಾಧಿಕರಣದಿಂದ ಸಂಗತಿ ತೋರಿಸಿರುತ್ತಾರೆ. ಆಕಾಶಾಧಿಕರಣದ ರೂಪಗಳಲ್ಲಿ ಭಗವಂತನ ಅಭಿವ್ಯಕ್ತಿತ್ವ ಹಾಗೂ ಅನಭಿವ್ಯಕ್ತಿತ್ವ ಎಂಬೆರಡು ವಿರುದ್ಧ ಧರ್ಮಗಳನ್ನು ಸಮರ್ಥಿಸಿ, 'ಆತ್ಮನಃ ಆಕಾಶ ಸಂಭೂತಃ' ಇತ್ಯಾದಿ ಶ್ರುತಿಗಳಲ್ಲಿರುವ ಆಕಾಶಾದಿಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ಸಮರ್ಥಿಸಲಾಯಿತು. ಇದನ್ನು ಒಪ್ಪಬಹುದು. ಆದರೆ ಒಬ್ಬನೇ ಪರಮಾತ್ಮನಲ್ಲಿ ಸ್ತ್ರೀತ್ವ ಹಾಗೂ ಪುರುಷತ್ವ ಎರಡು ಬಗೆಯ ವಿರುದ್ಧಧರ್ಮಗಳು ಇರಲು ಸಾಧ್ಯವಿಲ್ಲ. ಲೋಕದಲ್ಲಿ ಸ್ತ್ರೀತ್ವವಿದ್ದಲ್ಲಿ ಪುರುಷತ್ವವು ಎಲ್ಲಿಯೂ ಕಂಡಿಲ್ಲ. ಈ ಆಕ್ಷೇಪದ ಪರಿಹಾರಕ್ಕಾಗಿ ಪ್ರಕೃತ್ಯಧಿಕರಣವು ಹೊರಟಿದೆ. ಪರಮಾತ್ಮನು ರಾಮ, ಕೃಷ್ಣ ಮೊದಲಾದ ಪುರುಷರೂಪಗಳನ್ನು ಹೇಗೆ ಪಡೆದಿದ್ದಾನೋ, ಅದರಂತೆ ನಾರಾಯಣೀ, ಮೋಹಿನೀ, ವಡವಾ ಮೊದಲಾದ ಅನೇಕ ಸ್ತ್ರೀರೂಪಗಳನ್ನೂ ಕೂಡ ಪಡೆದಿರುತ್ತಾನೆ. ಭಗವಂತನಿಗೆ ಪುರುಷರೂಪಗಳು ಎಷ್ಟು ಇವೆಯೋ, ಅಷ್ಟೇ ಸ್ತ್ರೀರೂಪಗಳು ನಮ್ಮ ದೇಹದಲ್ಲಿಯೂ ಕೂಡ ಇರುತ್ತವೆಂದು ಉಪನಿಷತ್ತುಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಒಬ್ಬನೇ ಪರಮಾತ್ಮನು ಸ್ತ್ರೀಲಿಂಗನೂ ಆಗುತ್ತಾನೆ. ಪುಲ್ಲಿಂಗನೂ ಆಗುತ್ತಾನೆ. ಶ್ರುತಿಯಲ್ಲಿ 'ಏಷಾ ಹ್ಯೇವ ಪ್ರಕೃತಿಃ' ಇತ್ಯಾದಿಯಾಗಿ ಪ್ರಕೃತ್ಯಾದಿ ಶಬ್ದಗಳು ಕೇಳಿಸುತ್ತಿವೆ. ಈ ಪ್ರಕೃತಿ ಮೊದಲಾದ ಶಬ್ದಗಳು ಸ್ತ್ರೀಯಾದ ಲಕ್ಷ್ಮೀದೇವಿಯನ್ನು ಮಾತ್ರ ಪ್ರತಿಪಾದನೆ ಮಾಡುತ್ತಿರುವುದಲ್ಲ. ಅದಕ್ಕಿಂತಲೂ ಮುಖ್ಯವಾಗಿ ಶ್ರೀಹರಿಯನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಸಮರ್ಥಿಸುವುದೇ ಈ ಅಧಿಕರಣದ ಉದ್ದೇಶ.

ಪ್ರಕೃತ್ಯಾದಿಶಬ್ದಗಳ ಸ್ತ್ರೀತ್ವವೆಂಬ ಪ್ರವೃತ್ತಿನಿಮಿತ್ತವು ಅರ್ಥಸಾಧುತ್ವಕ್ಕೆ ಕಾರಣವಾಗಿದೆ ಎಂದು ಸಿದ್ಧವಾದರೆ ಬ್ರಹ್ಮನಲ್ಲಿ ಅರ್ಥಸಾಧುತ್ವವು ಯುಕ್ತವಾಗದ ಕಾರಣ ಲಕ್ಷ್ಮ್ಯಾದಿಗಳೇ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧವಾಗುತ್ತದೆ. ಇದು ಪೂರ್ವಪಕ್ಷಿಗಳ ಅಭಿಪ್ರಾಯ. ಪ್ರಸಿದ್ಧವಾದ ಸ್ತ್ರೀತ್ವಕ್ಕಿಂತ

ವಿಭಿನ್ನವಾದ ಪ್ರವೃತ್ತಿನಿಮಿತ್ತವು ಇರುವುದರಿಂದ ಅರ್ಥಸಾಧುತ್ವವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ ಆದ್ದರಿಂದ ಪ್ರಕೃತ್ಯಾದಿಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

## ಭಗವಂತನ ಪುರುಷರೂಪದಲ್ಲಿ ಸ್ತ್ರೀತ್ವವಿಲ್ಲವೆಂದು ಪೂರ್ವಪಕ್ಷ

ಭಗವಂತನ ಪುರುಷರೂಪದಲ್ಲಿ ಸ್ತ್ರೀತ್ವವು ಇರುವುದಿಲ್ಲ. ಆದ್ದರಿಂದ ಪುರುಷರೂಪಗಳು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. 'ಕಲತ್ರಂ' ಎಂಬ ನಪುಂಸಕಲಿಂಗದ ಶಬ್ದಕ್ಕೆ 'ಪತ್ನಿ' ಎಂಬರ್ಥವಿದೆ. ಆದರೆ ಆ ಶಬ್ದವಾಚ್ಯಳಾದ ಸ್ತ್ರೀಯಲ್ಲಿ ನಪುಂಸಕತ್ವವು ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಲಿಂಗವು ಕೇವಲ ಶಬ್ದಸ್ವಭಾವ ಎಂದು ಒಪ್ಪುವುದು ಅನಿವಾರ್ಯ. ಆದರೆ ಪ್ರಕೃತ ಲಕ್ಷ್ಮೀದೇವಿಯು ಸ್ತ್ರೀಲಿಂಗಶಬ್ದಗಳೆನಿಸಿದ ಪ್ರಕೃತಿ ಮೊದಲಾದ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದಲೇ ಪ್ರತಿಪಾದ್ಯಳಾಗುತ್ತಾಳೆ. ಅವಳಲ್ಲಿ ಸ್ತ್ರೀತ್ವವೂ ಇದೆ. ಪ್ರಕೃತಿತ್ವವೂ ಕೂಡ ಇದೆ. ಹೀಗೆ ಲಕ್ಷ್ಮೀದೇವಿಯಲ್ಲಿಯೇ ಪರಮಮುಖ್ಯವೃತ್ತಿಯಿಂದ ಶಬ್ದಪ್ರತಿಪಾದ್ಯತ್ವವು ಸಂಭವಿಸುತ್ತಿರುವಾಗ ಪರಮಾತ್ಮನಲ್ಲಿ ಪ್ರಕೃತಿತ್ವವು ಮತ್ತು ಸ್ತ್ರೀತ್ವವು ಇಲ್ಲದಿರುವಾಗ ಕಷ್ಟದಿಂದ ಏಕೆ ಶಬ್ದವನ್ನು ಸಮನ್ವಯ ಮಾಡಬೇಕು.

ಪರಮಾತ್ಮನ ಸ್ತ್ರೀರೂಪಗಳು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯವಾಗಿವೆ ಎಂಬುದನ್ನು ಪೂರ್ವಪಕ್ಷಿಯು ಒಪ್ಪಿರುತ್ತಾನೆ. ಆದರೆ ಪರಮಾತ್ಮನ ಪುರುಷರೂಪಗಳಿಗೆ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವು ಹೇಗೆ ಬರುತ್ತದೆಂಬುದೇ ವಿಚಾರ ಮಾಡುವ ವಿಷಯ.

ಬ್ರಹ್ಮ ಮೊದಲಾದ ಶಬ್ದಗಳು ನಪುಂಸಕಲಿಂಗವಾಗಿದ್ದರೂ ಬ್ರಹ್ಮನು ನಪುಂಸಕನಾಗಿರುವುದಿಲ್ಲ. ಪರಮಾತ್ಮನು ನಪುಂಸಕನಾಗದಿದ್ದರೂ, ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯವಾಗುವಂತೆ ಸ್ತ್ರೀಯಾಗದಿದ್ದರೂ, ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಬಹುದಲ್ಲವೇ? ಎಂದು ಪ್ರಶ್ನಿಸಿದರೆ ಪೂರ್ವಪಕ್ಷಿಯು ಹೀಗೆ ಉತ್ತರಿಸುತ್ತಾನೆ- ನಪುಂಸಕಲಿಂಗಶಬ್ದಗಳಿಗೆ ಅರ್ಥಸಾಧುತ್ವವು ಇರುವುದೇ ಇಲ್ಲ. ಯಾರು ನಪುಂಸಕರಿರುತ್ತಾರೋ, ಅವರೇ ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯರಾಗಬೇಕೆಂಬ ನಿಯಮ ಇರುವುದಿಲ್ಲ. ಕಲತ್ರ, ಅಪತ್ಯ ಮೊದಲಾದ ಶಬ್ದಗಳೆಲ್ಲವೂ ನಪುಂಸಕಲಿಂಗಗಳಾಗಿವೆ. ಆದರೆ ಸ್ತ್ರೀ, ಪುತ್ರ ಮೊದಲಾದವರೇ ಇದರಿಂದ ಪ್ರತಿಪಾದ್ಯರಾಗಿದ್ದಾರೆ. ಆದ್ದರಿಂದ ನಪುಂಸಕಲಿಂಗಶಬ್ದವು ಪ್ರಾಯಃ ಪ್ರಯೋಗಮಾತ್ರದಿಂದಲೇ ಸಾಧುವಾಗುತ್ತದೆ. ಆದರೆ ಸ್ತ್ರೀಲಿಂಗಶಬ್ದಗಳಿಗೆ ಹೀಗಲ್ಲ. ಅರ್ಥಸಾಧುತ್ವವೂ ಕೂಡ ಇರುತ್ತದೆ. ಪ್ರಯೋಗಸಾಧುತ್ವವೂ ಕೂಡ ಇರುತ್ತದೆ. ಪ್ರಕೃತ್ಯಾದಿಶಬ್ದಗಳನ್ನು ಲಕ್ಷ್ಮ್ಯಾದಿಗಳಲ್ಲಿ ಪ್ರಯೋಗ ಮಾಡಿದರೆ ಅರ್ಥಸಾಧುತ್ವ ಹಾಗೂ ಪ್ರಯೋಗಮಾತ್ರಸಾಧುತ್ವ ಎರಡೂ ಲಭಿಸುತ್ತದೆ. ಇದನ್ನು ಬಿಟ್ಟು ಪರಮಾತ್ಮನಲ್ಲಿ ಕೇವಲ ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸುವುದು ಸೂಕ್ತವಲ್ಲ. ಒಂದುವೇಳೆ ಅರ್ಥಸಾಧುತ್ವವನ್ನು ವಿವಕ್ಷಿಸದೇ ಪ್ರಯೋಗಸಾಧುತ್ವವನ್ನು ಮಾತ್ರ ವಿವಕ್ಷಿಸಿ, ಪರಮಾತ್ಮನಲ್ಲಿ ಸ್ತ್ರೀಶಬ್ದಗಳನ್ನು ವಿವಕ್ಷಿಸುವುದಾದರೆ ಪೂರ್ವಮೀಮಾಂಸೆಯ ವಿರೋಧವು ಬರುತ್ತದೆ. 'ಪಶುನಾ ಯಜೇತ' ಎಂದು ಹೇಳಿದಾಗ ಸ್ತ್ರೀಲಿಂಗಶಬ್ದವನ್ನು ನೋಡಿ, ಪುರುಷಪಶುವನ್ನೇ ಯಾಗಸಾಧನವೆಂದು ಹೇಳುತ್ತಾರೆ. 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿ ಸ್ತ್ರೀಲಿಂಗಶಬ್ದವನ್ನು ನೋಡಿ ಸ್ತ್ರೀಪಶುವನ್ನೇ ತೆಗೆದುಕೊಳ್ಳುತ್ತಾರೆ. ಈ ಶ್ರುತಿವಾಕ್ಯಗಳಲ್ಲಿ ಏಕತ್ವವು ವಿವಕ್ಷಿತವಾದಂತೆ ಲಿಂಗವೂ ಕೂಡ ವಿವಕ್ಷಿತವೆಂದು ಜೈಮಿನ್ಯಾಚಾರ್ಯರು ಹೇಳಿರುತ್ತಾರೆ.

ಪ್ರಕೃತ ನೀವು ಅರ್ಥಸಾಧುತ್ವದ ಅವಶ್ಯಕತೆಯಿಲ್ಲ ಪ್ರಯೋಗಸಾಧುತ್ವವು ಇದ್ದರೆ ಸಾಕೆಂದು ಹೇಳುವುದಾದರೆ, 'ಪಶುನಾ ಯಜೇತ' ಎಂಬಲ್ಲಿಯೂ ಸ್ತ್ರೀಪಶುವನ್ನೂ ಕೂಡ ತೆಗೆದುಕೊಳ್ಳಬೇಕಾದೀತು. 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿ ಪುರುಷಪಶುವನ್ನು ತೆಗೆದುಕೊಳ್ಳಬೇಕಾದೀತು. ಆದರೆ ಇದು ಪೂರ್ವಮೀಮಾಂಸಕರಿಗೆ ವಿರುದ್ಧವಾಗಿದೆ. ಆದ್ದರಿಂದ ಪ್ರಯೋಗಸಾಧುತ್ವವನ್ನು ಮುಖ್ಯವಾಗಿ ವಿವಕ್ಷಿಸಬಾರದು.

## ಪೂರ್ವಪಕ್ಷ
## ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದ ಹಾಗೂ ನಪುಂಸಕಲಿಂಗಶಬ್ದಗಳು ಸರ್ವಥಾ ಸಮನ್ವಯಗೊಳ್ಳುವುದಿಲ್ಲ

'ಪ್ರಕೃತಿಃ' ಮೊದಲಾದ ಸ್ತ್ರೀಲಿಂಗಾಂತವಾದ ಶಬ್ದಗಳನ್ನು ಪ್ರಯೋಗತಃ ಸಾಧುವೆಂದು ಸಮರ್ಥಿಸಬಹುದು. ಆದರೆ 'ಸ್ತ್ರೀ', 'ಯೋಷಿತ್', 'ನಾರೀ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲು ಸಾಧ್ಯವೇ ಇಲ್ಲ. ಈ ಎಲ್ಲಾ ಶಬ್ದಗಳ ಪ್ರಾತಿಪದಿಕಾರ್ಥವು ಸ್ತ್ರೀವ್ಯಕ್ತಿಯೇ ಆಗಿರುತ್ತದೆ. ಪುರುಷನಾದ ಪರಮಾತ್ಮನು ಸ್ತ್ರೀಯಾಗಲು ಸಾಧ್ಯವಿಲ್ಲ. ಆದ್ದರಿಂದಲೇ ಅವನನ್ನು 'ಸ್ತ್ರೀ'ಯೆಂದಾಗಲೀ, 'ನಾರೀ' ಎಂದಾಗಲು ಕರೆಯಲು ಸಾಧ್ಯವಿಲ್ಲ.

ಪೂರ್ವಮೀಮಾಂಸೆಯಲ್ಲಿ ಉದ್ದೇಶ್ಯವಿಶೇಷಣವಾದದ್ದು, ಅವಿವಕ್ಷಿತವಾಗುತ್ತದೆಂದು ತೀರ್ಮಾನಿಸಲಾಗಿದೆ. 'ಸ್ವರ್ಗಕಾಮಃ ಯಜೇತ' ಎಂಬಲ್ಲಿ ಸ್ವರ್ಗವನ್ನು ಬಯಸುವವನು ಯಾಗ ಮಾಡಬೇಕು ಎಂದು ಆಪಾತತಃ ಕಾಣಿಸುತ್ತದೆ. ಸ್ವರ್ಗವನ್ನು ಬಯಸುವವನು ಪುರುಷನಾಗಬೇಕೆಂದೇನೂ ಇಲ್ಲ. ಸ್ತ್ರೀಯೂ ಕೂಡ ಸ್ವರ್ಗವನ್ನು ಬಯಸಬಹುದು. ಅಂತಹ ಬಯಕೆಯುಳ್ಳ ಸ್ತ್ರೀಗೂ ಕೂಡ ಪುರುಷನ ಜೊತೆಗೆ ಯಾಗಾಧಿಕಾರವಿರುತ್ತದೆಂದು ಪೂರ್ವಮೀಮಾಂಸೆಯ ಅಧಿಕಾರಾಧಿಕರಣದಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ 'ಸ್ವರ್ಗಕಾಮಃ' ಎಂಬಲ್ಲಿರುವ ಪುಲ್ಲಿಂಗವು ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವಾಗುತ್ತದೆ. 'ಬ್ರಾಹಣೋ ನ ಹಂತವ್ಯಃ' ಎಂಬಲ್ಲಿಯೂ ಕೂಡ ಪುಲ್ಲಿಂಗವು ಅವಿವಕ್ಷಿತ. ಬ್ರಾಹ್ಮಣನನ್ನು ಕೊಲ್ಲಬಾರದು ಎಂದರೆ ಬ್ರಾಹ್ಮಣಸ್ತ್ರೀಯನ್ನೂ ಕೂಡ ಕೊಲ್ಲಬಾರದೆಂದೇ ಎಲ್ಲರೂ ತಿಳಿಯುತ್ತಾರೆ. ಅದರಂತೆ 'ಪ್ರಕೃತಿಃ' ಎಂಬಲ್ಲಿರುವ ಸ್ತ್ರೀಲಿಂಗವು ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವಾಗುತ್ತದೆ. ಪ್ರತ್ಯಯಾರ್ಥ ಮಾತ್ರ ಉದ್ದೇಶ್ಯವಿಶೇಷಣವಾಗಬೇಕಾಗಿಲ್ಲ. ಕೆಲವೊಮ್ಮೆ ಪ್ರಾತಿಪದಿಕಾರ್ಥವೂ ಕೂಡ ಉದ್ದೇಶವಿಶೇಷಣವಾಗುತ್ತದೆ. ಆದ್ದರಿಂದ 'ಸ್ತ್ರೀ', 'ನಾರೀ' ಇತ್ಯಾದಿ ಶಬ್ದಗಳ ಅರ್ಥವೂ ಕೂಡ ಉದ್ದೇಶ್ಯ ವಿಶೇಷಣವಾಗಬಹುದಾದ್ದರಿಂದ ಅವಿವಕ್ಷಿತವಾಗಬಹುದಲ್ಲವೇ? ಎಂದು ಪ್ರಶ್ನಿಸಬಹುದು.

ಇದು ಸರಿಯಲ್ಲ. 'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿ ಪುಲ್ಲಿಂಗವು ಉದ್ದೇಶ್ಯವಿಶೇಷಣವಾಗಿದೆ. ಅದರಂತೆ ಪ್ರಕೃತಿ ಎಂಬುದು ಉದ್ದೇಶ್ಯವಿಶೇಷಣವಾಗಿಲ್ಲ. ಹೊರತಾಗಿ ವಿಧೇಯವಿಶೇಷಣವಾಗಿದೆ. ವಿಧೇಯವಿಶೇಷಣವಾದದ್ದು ವಿವಕ್ಷಿತವಾಗಬಹುದಾದ್ದರಿಂದ ಪ್ರಕೃತಿಯೆಂಬಲ್ಲಿರುವ ಸ್ತ್ರೀಲಿಂಗವು ಅವಿವಕ್ಷಿತವೆಂದು ಸಮರ್ಥಿಸಲಾಗದು. ಮತ್ತು ಬ್ರಾಹ್ಮಣತ್ವವು ಬ್ರಾಹ್ಮಣಶಬ್ದದ ಪ್ರಾತಿಪದಿಕಾರ್ಥವಾಗಿರುವಂತೆ, ಸ್ತ್ರೀತ್ವವು 'ಸ್ತ್ರೀ'

ಎಂಬ ಪ್ರಾತಿಪದಿಕಾರ್ಥದ ಅರ್ಥವಾಗಿದೆ. ಇದೂ ಕೂಡ ಉದ್ದೇಶ್ಯವಿಶೇಷಣವಾಗಲು ಸಾಧ್ಯವಿಲ್ಲ. ಇಂತಹ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನೆಂದು ಸಮರ್ಥಿಸುವುದು ಸುಲಭದ ಮಾತಲ್ಲ.

ಆದ್ದರಿಂದ ಸ್ತ್ರೀಲಿಂಗಾಂತವಾದ ಪ್ರಕೃತಿಃ, ವಿಕೃತಿಃ ಮೊದಲಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲಾರ. 'ಸ್ತ್ರೀ', 'ನಾರೀ', 'ಯೋಷಿತ್' ಮೊದಲಾದ ಸ್ತ್ರೀತ್ವವೇ ಪ್ರಾತಿಪಾದಿಕಾರ್ಥವಾಗಿವುಳ್ಳ ಶಬ್ದಗಳಿಂದಲೂ ಕೂಡ ಪರಮಾತ್ಮನು ಪ್ರತಿಪಾದ್ಯನಾಗಲಾರ. ಇವೆರಡರ ಜೊತೆಗೆ 'ನಪುಂಕಸಂ' ಮೊದಲಾದ ಶಬ್ದಗಳಿಂದಲೂ ಕೂಡ ಪರಮಾತ್ಮನು ಪ್ರತಿಪಾದ್ಯನಾಗಲಾರ. ಸ್ತ್ರೀಯರಿಂದಾಗಲೀ, ಪುರುಷರಿಂದಾಗಲೀ, ಪರಮಾತ್ಮನು ಆಕರ್ಷಿತನಲ್ಲದ ಕಾರಣ ನಪುಂಸಕನಾಗಿದ್ದಾನೆ ಎಂದು ಯೌಗಿಕಾರ್ಥವನ್ನು ತಿಳಿಯಬಹುದು. ಏನೇ ಆದರೂ ನಪುಂಸಕ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ನಪುಂಸಕತ್ವವು ಪರಮಾತ್ಮನಲ್ಲಿ ಸರ್ವಥಾ ಬರುವುದಿಲ್ಲ. ಈ ಅಧಿಕರಣದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನಾಗಲೀ, ಯೌಗಿಕಾರ್ಥವನ್ನಾಗಲೀ ವಿವಕ್ಷಿಸಿ, ಶಬ್ದಸಮನ್ವಯವನ್ನು ಆಕ್ಷೇಪ ಮಾಡುತ್ತಿಲ್ಲ. ಹೊರತಾಗಿ, ಪ್ರಕೃತಸ್ಯ ಎಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ರೂಢವಾದ ಅರ್ಥವನ್ನು ಉದ್ದೇಶಿಸಿ ಆಕ್ಷೇಪ ಮಾಡಲಾಗಿದೆ. ಯಾವಾಗ ತದ್ಗತತ್ವವನ್ನೇ ಅನುಸರಿಸಲಾಗುತ್ತದೋ, ಆವಾಗ ನಪುಂಸಕ ಮೊದಲಾದ ಶಬ್ದದಿಂದಾಗಲೀ, 'ಸ್ತ್ರೀ' ಮೊದಲಾದ ಶಬ್ದಗಳಿಂದಾಗಲೀ, ಪರಮಾತ್ಮನು ಪ್ರತಿಪಾದ್ಯನೆಂದು ಸಮರ್ಥಿಸುವುದು ಅತ್ಯಂತ ಕಠಿಣವಾದ ವಿಷಯ. ಹೀಗಿರುವಾಗ 'ತತ್ತು ಸಮನ್ವಯಾತ್' ಎಂಬ ಅಧಿಕರಣದಲ್ಲಿ ಪರಮಾತ್ಮನು ಸಕಲ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ನಿರ್ಧರಿಸುತ್ತಿರಿ? ಇಷ್ಟು ಈ ಪ್ರಕೃತ್ಯಧಿಕರಣದ ಪೂರ್ವಪಕ್ಷ.

### ನೇರವಾಗಿ ಅಪತ್ಯೋತ್ಪಾದಕನಾದ ಪರಮಪುರುಷನು ಸ್ತ್ರೀ ಆಗಿದ್ದಾನೆ

ಪ್ರಕೃತ್ಯಧಿಕರಣದ ಸಿದ್ಧಾಂತ ಹೀಗಿದೆ -

ಸ್ವದೇಹಾತ್ ಪ್ರಾಣಿನಾಂ ಸೂತಿಹೇತುತ್ವಂ ಸ್ತ್ರೀತ್ವಮುಚ್ಯತೇ ।
ಯಚ್ಚಾಸ್ತಿ ಬ್ರಹ್ಮಣಸ್ತಸ್ಮಾತ್ ಸ್ತ್ರೀಶಬ್ದಾಸ್ತಸ್ಯ ವಾಚಕಾಃ ॥

ತನ್ನ ದೇಹದಿಂದ ನೇರವಾಗಿ ಪುತ್ರೋತ್ಪತ್ತಿಗೆ ಕಾರಣವಾದರೆ, 'ಸ್ತ್ರೀ' ಎಂದು ಲೋಕದಲ್ಲಿ ಕರೆಯುತ್ತಾರೆ. ಪರಮಾತ್ಮನು ತನ್ನ ದೇಹದಿಂದ ನೇರವಾಗಿ ಪ್ರಾಣಿಗಳನ್ನು ಹುಟ್ಟಿಸುವುದರಿಂದ ಅವನೂ ಕೂಡ 'ಸ್ತ್ರೀ' ಎಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ ಸ್ತ್ರೀಲಿಂಗವಾದ ಶಬ್ದಗಳಿಂದ ಪರಮಾತ್ಮನು ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ.

ಜಗದೊಡೆಯನಾದ ಈಶ್ವರನು ಪ್ರಲಯಕಾಲದಲ್ಲಿ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡ ಬ್ರಹ್ಮ, ರುದ್ರ ಮೊದಲಾದ ಸಮಸ್ತ ಪ್ರಾಣಿಗಳನ್ನು ತನ್ನ ದೇಹದಿಂದ ಹುಟ್ಟಿಸುತ್ತಾನೆ. ಅಂದರೆ ಬ್ರಹ್ಮಾದಿ ದೇವತೆಗಳಿಗೆ ಸ್ಥೂಲದೇಹವನ್ನು ನೀಡಿ, ಅವರ ಉತ್ಪತ್ತಿಗೆ ಕಾರಣನಾಗಿದ್ದಾನೆ. ಇದನ್ನು ಶ್ರುತಿವಾಕ್ಯ ಹೀಗೆ ಹೇಳುತ್ತದೆ -

ಸ್ವದೇಹಾದಿಚ್ಛಯಾ ವಿಶ್ವಂ ಭುಕ್ತಪೂರ್ವಂ ಜನಾರ್ದನಃ ।
ಸಸರ್ಜ ಮಾತಾಪಿತೃವದೂರ್ಣಾನಾಭಿವದೇವ ಚ ॥
ಪರಿಪೂರ್ಣಚಂದ್ರಿಕಾ

ಹಿಂದಿನ ಕಲ್ಪದಲ್ಲಿ ಯಾವ ಸಮಸ್ತ ಜಗತ್ತನ್ನು ಪರಮಾತ್ಮನು ತಿಂದಿದ್ದನೋ, ಅದಕ್ಕೆ ಸರಿಸಮಾನವಾದ ಮತ್ತೊಂದು ಜಗತ್ತನ್ನು ತನ್ನ ದೇಹದಿಂದ ಇಚ್ಛಾಪೂರ್ವಕವಾಗಿ ಪುನಃ ಸೃಷ್ಟಿ ಮಾಡುತ್ತಾನೆ. ಜೇಡರ ಹುಳವು ಹೇಗೆ ತನ್ನ ಉಗುಳಿನಿಂದ ಬಲೆಯನ್ನು ಕಟ್ಟಿ ಪುನಃ ನುಂಗುತ್ತದೋ, ಅದರಂತೆ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸಿ, ಪುನಃ ತಿನ್ನುತ್ತಾನೆ. ತನ್ನ ತಂದೆ-ತಾಯಿಯಂದಿರು ಮಕ್ಕಳನ್ನು ಹುಟ್ಟಿಸುವಂತೆ ಪರಮಾತ್ಮನೊಬ್ಬನೇ ಈ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆ.

### ಸೂತ್ರಕ್ರಮ ವಿನ್ಯಾಸ ಸ್ವಾರಸ್ಯ

ಈ ಪ್ರಕೃತ್ಯಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಇವುಗಳ ಜೋಡಣೆಯು ಅತ್ಯಂತ ಅರ್ಥಪೂರ್ಣವಾಗಿದೆ. 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬುದು ಮೊದಲನೆಯ ಸೂತ್ರ. ಈ ಸೂತ್ರದಲ್ಲಿ ಪ್ರತಿಜ್ಞೆ ಹಾಗೂ ದೃಷ್ಟಾಂತವಾಕ್ಯಗಳಿಗೆ ವಿರೋಧವು ಬರಬಾರದೆಂದರೆ ಪರಮಾತ್ಮನು ಪುಲ್ಲಿಂಗಶಬ್ದದಂತೆ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದದಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಗಬೇಕು. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಅರ್ಥಸಂಕೋಚ ಮಾಡಬಾರದು. ಪರಮಾತ್ಮನಲ್ಲಿ ಸ್ತ್ರೀತ್ವವು ಇರುವಂತೆ ಪುರುಷತ್ವವೂ ಕೂಡ ಇರುತ್ತದೆ. ಹೀಗೆ ಪ್ರಕೃತಿಶಬ್ದವನ್ನು ಉಪಲಕ್ಷಣಯಾ ವಿವಕ್ಷಿಸಿ ಸಕಲ ಸ್ತ್ರೀವಾಚಕ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಗಿದೆ.

'ಅಭಿಧ್ಯೋಪದೇಶಾಚ್ಚ' ಎಂಬುದು ಎರಡನೆಯ ಸೂತ್ರ. ಪರಮಾತ್ಮನ ಇಚ್ಛೆಯನ್ನು ಸ್ಮೃತಿಯಲ್ಲಿ ಪ್ರಕೃತಿ ಎಂದು ಕರೆಯಲಾಗಿದೆ. 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾಽನಂತ ಕಥ್ಯತೇ' ಎಂಬ ಸ್ಮೃತಿಯಲ್ಲಿ ಕರೆಯಲಾಗಿದೆ. ಈ ಇಚ್ಛೆಯು ಪರಮಾತ್ಮನ ಸ್ವರೂಪವೇ ಆಗಿದೆಯೆಂದು 'ಸೋಽಭಿಧ್ಯಾ ಸ ಜೂತಿಃ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದ ಪರಮಾತ್ಮನು ಪ್ರಕೃತಿಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಸಮರ್ಥಿಸಲು ಎರಡನೆಯ ಸೂತ್ರ ಹೊರಟಿದೆ.

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಮೂರನೆಯ ಸೂತ್ರದಲ್ಲಿ ಇಚ್ಛೆಯ ವ್ಯವಧಾನವಿಲ್ಲದೇ ಮತ್ತು 'ನಾಮಾನಿ ಸರ್ವಾಣಿ' ಎಂಬಲ್ಲಿ ನೇರವಾಗಿಯೇ ಪರಮಾತ್ಮನು ಪ್ರಕೃತಿ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಗಿದೆ. ಆದ್ದರಿಂದ ಪ್ರಕೃತಿಶಬ್ದದ ಉದಾಹರಣೆಯಿಂದ ಸಕಲ ಸ್ತ್ರೀಶಬ್ದಗಳು ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ.

'ಆತ್ಮಕೃತೇಃ ಪರಿಣಾಮಾತ್' ಎಂಬುದು ನಾಲ್ಕನೆಯ ಸೂತ್ರ. ಸಕಲಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾದ ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಬರುವುದೇ ಇಲ್ಲವೆಂಬ ಬಾಧಕವನ್ನು ಈ ಸೂತ್ರವು ಪರಿಹರಿಸಿದೆ. ಮೊದಲ ಮೂರು ಸೂತ್ರಗಳಲ್ಲಿ ಸಾಧಕಪ್ರಮಾಣಗಳನ್ನು ಹೇಳಿದ ಮೇಲೆ ನಾಲ್ಕನೆಯ ಸೂತ್ರವು ಬಾಧಕೋದ್ಧಾರಕ್ಕಾಗಿ ಹೊರಟಿದೆ. ಪ್ರಕೃತಿಯಲ್ಲಿ ಪ್ರವೇಶ ಮಾಡಿರುವ ಪರಮಾತ್ಮನು ಮಹದಾದಿರೂಪದಿಂದ ಪರಿಣಾಮವನ್ನು ಉಂಟುಮಾಡಿ, ಅವುಗಳನ್ನು ನಿಯಂತ್ರಣ ಮಾಡಲು ಪುನಃ

ಅನೇಕ ರೂಪಗಳನ್ನು ತಾಳಿ, ಅವುಗಳಲ್ಲಿ ಪ್ರವೇಶಿಸುತ್ತಾನೆ. ಆದ್ದರಿಂದ 'ಪ್ರಕೃತಿ' ಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆಂಬುದು ಈ ಸೂತ್ರದ ಅಭಿಪ್ರಾಯ.

'ಯೋನಿಶ್ಚ ಹಿ ಗೀಯತೇ' ಎಂಬುದು ಐದನೆಯ ಸೂತ್ರ. ಪ್ರಕೃತಿಶಬ್ದದಲ್ಲಿ ಬಾಧಕೋದ್ಧಾರವನ್ನು ಹಿಂದಿನ ಸೂತ್ರದಲ್ಲಿ ಮಾಡಲಾಯಿತು. ಉಳಿದ ಎಲ್ಲಾ ಸ್ತ್ರೀಲಿಂಗಶಬ್ದಗಳ ಸಮನ್ವಯ ವಿಷಯದಲ್ಲಿ ಬರುವ ಬಾಧಕಪ್ರಮಾಣವನ್ನು ಈ ಕೊನೆಯ ಸೂತ್ರವು ಮಾಡುತ್ತಿದೆ. 'ಯದ್ ಭೂತಯೋನಿಂ' ಎಂಬ ಶ್ರುತಿಯಲ್ಲಿ ವಿಷ್ಣುವು ತನ್ನ ದೇಹದಿಂದಲೇ ನೇರವಾಗಿ ಪುತ್ರೋತ್ಪಾದಕನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಪ್ರಕೃತಿ ಸ್ತ್ರೀ ಮೊದಲಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು.

## ಶಾಂಕರಭಾಷ್ಯ, ರಾಮಾನುಜಭಾಷ್ಯಗಳ ವಿಮರ್ಶೆ

ಶಾಂಕರಭಾಷ್ಯದಲ್ಲಿ ಹಾಗೂ ರಾಮಾನುಜಭಾಷ್ಯದಲ್ಲಿ ಸೂತ್ರಗಳ ವ್ಯಾಖ್ಯಾನ ಒಂದೇ ರೀತಿಯಾಗಿದೆ-

ಬ್ರಹ್ಮನು ಜಗತ್ತಿಗೆ ಕೇವಲ ನಿಮಿತ್ತಕಾರಣನಾಗಿದ್ದಾನೆ ಹೊರತು, ಉಪಾದಾನಕಾರಣನಲ್ಲ. ಕುಲಾಲನು ಮಣ್ಣಿನಿಂದ ಘಟವನ್ನು ನಿರ್ಮಾಣ ಮಾಡುತ್ತಾನೆ. ಮಣ್ಣು ವಿಕಾರವನ್ನು ಹೊಂದಿ, ಕಾರ್ಯರೂಪವನ್ನು ಪಡೆಯುವುದರಿಂದ ಉಪಾದಾನಕಾರಣ ಎನಿಸುತ್ತದೆ. ಇಚ್ಛಾಪೂರ್ವಕವಾಗಿ ಪ್ರಯತ್ನಪಡುವ ಕುಲಾಲನು ನಿಮಿತ್ತಕಾರಣನೆನಿಸುತ್ತಾನೆ. ಅದೇರೀತಿಯಾಗಿ ಬ್ರಹ್ಮನು ಪ್ರಕೃತಿಯಿಂದ ಜಗತ್ತನ್ನು ನಿರ್ಮಿಸುತ್ತಾನೆ. ಕಾರ್ಯರೂಪವನ್ನು ಪಡೆಯುವ ಪ್ರಕೃತಿಯು ಉಪಾದಾನಕಾರಣವೆನಿಸುತ್ತದೆ. ಇಚ್ಛಾಪೂರ್ವಕವಾಗಿ ಪ್ರಯತ್ನಪಡುವ ಬ್ರಹ್ಮನು ನಿಮಿತ್ತಕಾರಣನೆನಿಸುತ್ತಾನೆ. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷದ ನಿರಾಕರಣೆಗೆ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರವು ಹೊರಟಿದೆ. ಬ್ರಹ್ಮನು ಜಗತ್ತಿಗೆ ಪ್ರಕೃತಿಃ = ಉಪಾದಾನಕಾರಣನಾಗಿದ್ದಾನೆ. ಚ = ನಿಮಿತ್ತಕಾರಣನೂ ಆಗಿದ್ದಾನೆ. ಆದ್ದರಿಂದ ಜಗತ್ತಿಗೆ ಬ್ರಹ್ಮನು ಅಭಿನ್ನನಿಮಿತ್ತೋಪಾದಾನ ಎನಿಸುತ್ತಾನೆ. ಈ ವಿಷಯದಲ್ಲಿ ಶ್ರುತಿಯಲ್ಲಿರುವ ಪ್ರತಿಜ್ಞಾ ಮತ್ತು ದೃಷ್ಟಾಂತಗಳು ಆಧಾರವಾಗಿವೆ. ಛಾಂದೋಗ್ಯದಲ್ಲಿ 'ಯೇನಾಶ್ರುತಂ ಶ್ರುತಂ ಭವತಿ' ಎಂಬುದಾಗಿ ಬ್ರಹ್ಮನ ಜ್ಞಾನದಿಂದ ಸಮಸ್ತ ಜಗತ್ತು ತಿಳಿಯುತ್ತದೆ ಎಂದು ಉದ್ದಾಲಕರು ಪ್ರತಿಜ್ಞೆಮಾಡುತ್ತಾರೆ. ಆವಾಗ ಶ್ವೇತಕೇತು 'ಕಥಂ ನು ಭಗವಃ ಸ ಆದೇಶಾ ಭವತಿ' ಅದು ಹೇಗೆ ಸಾಧ್ಯ ? ಎಂದು ಕೇಳುತ್ತಾನೆ. ಅದರ ಸಮರ್ಥನೆಗಾಗಿ ಪುನಃ ಉದ್ದಾಲಕರು ಹೀಗೆ ಉತ್ತರಿಸುತ್ತಾರೆ - 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ವಿಜ್ಞಾತೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್' ಎಂಬುದಾಗಿ ದೃಷ್ಟಾಂತವನ್ನು ಹೇಳಿರುತ್ತಾರೆ. ಮಣ್ಣಿನಿಂದ ಘಟ-ಶರಾವ ಮೊದಲಾದವುಗಳು ಹುಟ್ಟುತ್ತವೆ. ಇದೆಲ್ಲವೂ ಮಣ್ಣಿನ ಆಕಾರ ವಿಶೇಷಗಳು. ಆದ್ದರಿಂದ ಈ ಘಟಾದಿಗಳೆಲ್ಲವೂ ಮಣ್ಣೇ ಆಗಿರುತ್ತವೆ. ಘಟ ಎಂಬುದು ಕೇವಲ ಹೆಸರು ಮಾತ್ರ. ಅದರಂತೆ ಈ ಜಗತ್ತೆಲ್ಲವೂ ಬ್ರಹ್ಮನೇ ಆಗಿರುತ್ತದೆ. ಜಗತ್ತು ಎಂಬುದು ಕೇವಲ ಹೆಸರು ಮಾತ್ರ. ಬ್ರಹ್ಮನನ್ನು ತಿಳಿದಾಗ ಈ ಸಮಸ್ತ ಜಗತ್ತನ್ನೂ ಕೂಡ ತಿಳಿದಂತೆ ಆಗುತ್ತದೆ. ಹೀಗೆ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ ಎಂದು ತಿಳಿಯಬೇಕು. ಇಷ್ಟು ಸಿದ್ಧಾಂತ.

ಪರರ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಇದು ಸಮನ್ವಯಾಧ್ಯಾಯವಾದ್ದರಿಂದ ಪ್ರಕೃತಿ ಎಂಬ ಶಬ್ದದ ಸಮನ್ವಯವೇ ಸೂತ್ರಕಾರರಿಗೆ ಅಭಿಪ್ರೇತವಾಗಿರುತ್ತದೆ. ಅದನ್ನು ಬಿಟ್ಟು ಬ್ರಹ್ಮನಿಗೆ ಉಪಾದಾನತ್ವವನ್ನು ಸಮರ್ಥನೆ ಮಾಡುವುದು ಅನುಚಿತ. ಮತ್ತು ಅದ್ವೈತಿಗಳ ಪ್ರಕಾರ ಈ ಪಾದದ ಪ್ರಾರಂಭದ ಮೂರು ಅಧಿಕರಣಗಳಲ್ಲಿ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯನ್ನು ನಿರಾಕರಿಸಿದ ಮೇಲೆ ಜಗತ್ತಿಗೆ ಉಪಾದಾನಕಾರಣವೇ ಇಲ್ಲವಾಗುತ್ತದಲ್ಲವೇ? ಎಂಬ ಆಶಂಕೆಯನ್ನು ನಿರಾಕರಣೆ ಮಾಡಲು ನಾಲ್ಕನೆಯ ಅಧಿಕರಣವನ್ನಾಗಿ ಇದನ್ನು ಪರಿಗಣಿಸಬೇಕಿತ್ತು. ಮಧ್ಯದಲ್ಲಿ 'ಜಗದ್ವಾಚಿತ್ವಾತ್' 'ವಾಕ್ಯಾನ್ವಯಾತ್' ಎಂಬೆರಡು ಅಧಿಕರಣಗಳು ಅಸಂಗತವಾಗುತ್ತವೆ.

ಒಂದು ವೇಳೆ 'ಪ್ರಕೃತಿಶ್ಚ' ಇತ್ಯಾದಿ ಸೂತ್ರವು ಪ್ರಕೃತಿಯೆಂಬ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡದೇ ಪ್ರಕೃತಿ ಶಬ್ದದ ಅರ್ಥವೆನಿಸಿದ ಉಪಾದಾನತ್ವವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡುವುದಾದರೆ 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದಲ್ಲಿರುವ ಸೂತ್ರವೂ ಕೂಡ ಬ್ರಹ್ಮನಲ್ಲಿ 'ಆಕಾಶ' ಎಂಬ ಶಬ್ದವನ್ನು ಸಮನ್ವಯ ಮಾಡದೇ, 'ಆಕಾಶ' ಎಂಬ ಶಬ್ದದ ಅರ್ಥವೆನಿಸಿದ ಆಕಾಶತ್ವವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡಬೇಕಾದೀತು.

ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆ ಆದ್ದರಿಂದ ಬ್ರಹ್ಮನಿಗೂ ಜಗತ್ತಿಗೂ ಅಭೇದವನ್ನು ಹೇಳಬೇಕೆಂಬ ವಿಚಾರವನ್ನು ಆರಂಭಣಾಧಿಕರಣದಲ್ಲಿ ನಿರಾಕರಣೆ ಮಾಡುವವರಿದ್ದಾರೆ. ಮತ್ತು ಈ ಸೂತ್ರವು ನಿಮ್ಮ ಪ್ರಕಾರ ಉಪಾದಾನತ್ವವನ್ನಷ್ಟೇ ಸಮರ್ಥನೆ ಮಾಡುತ್ತಿದೆ. ಚಶಬ್ದದಿಂದ ಹೇಳಲ್ಪಟ್ಟ ನಿಮಿತ್ತತ್ವವನ್ನು ಸಮರ್ಥನೆ ಮಾಡಲು ಯಾವುದೇ ಹೇತು ಕಾಣಿಸುತ್ತಿಲ್ಲ.

ಅನಾದಿಯಾದ ಅವಿದ್ಯಾ, ಪ್ರಾಗಭಾವ ಮೊದಲಾದವುಗಳು ಬ್ರಹ್ಮನಿಂದ ಅಭಿನ್ನವಾಗಿರುವುದಿಲ್ಲ. ಆದರೂ ಕೂಡ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತೀತಿಯಲ್ಲಿ ಅವಿದ್ಯಾದಿಗಳನ್ನೂ ಕೂಡ ನೀವು ತೆಗೆದುಕೊಳ್ಳುತ್ತೀರಿ. ಅದೇ ರೀತಿಯಾಗಿ ಜಗತ್ತಿಗೆ ಉಪಾದಾನಕಾರಣವೇ ಬೇರೆ ಆಗಲಿ, ನಿಮಿತ್ತಕಾರಣನೇ ಮತ್ತೊಬ್ಬನಿರಲಿ, ಇಬ್ಬರಿಗೆ ಅಭೇದವಿಲ್ಲದಿದ್ದರೂ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯು ಏಕೆ ಉಪಪನ್ನವಾಗಬಾರದು? ಆದ್ದರಿಂದ ಅದ್ವೈತಿಗಳ ಪ್ರಥಮಸೂತ್ರ ವ್ಯಾಖ್ಯಾನವು ಅಸಾಧುವಾಗಿದೆ.

### ಶ್ರುತಿಬಲದಿಂದ ಬ್ರಹ್ಮನು ನಿಮಿತ್ತಕಾರಣನೆಂದೇ ಸಿದ್ಧವಾಗುತ್ತದೆ

ಏಕಜ್ಞಾನೇನ ಸರ್ವಸ್ಯ ವಿಜ್ಞಾನಾತ್ ಬ್ರಹ್ಮ ಚೇತ್ ಭವೇತ್ ।
ಉಪಾದಾನಂ ತರ್ಹಿ ಭವೇತ್ತತ ಏವಾನಿಮಿತ್ತತಾ ॥

ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆ ಎಂಬ ಶ್ರುತಿಯ ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಬ್ರಹ್ಮನು ಉಪಾದಾನಕಾರಣನಾಗುತ್ತಾನೆ ಎಂದು ನೀವು ಹೇಳುತ್ತಿದ್ದೀರಿ. ಹಾಗಾದರೆ ಅದೇ ಪ್ರತಿಜ್ಞಾವಾಕ್ಯದ ಬಲದಿಂದಲೇ ಬ್ರಹ್ಮನು ನಿಮಿತ್ತಕಾರಣನಲ್ಲವೆಂದೂ ಕೂಡ ಆಗಬೇಕಾದೀತು.

ಅದ್ವೈತಿಗಳು ಬ್ರಹ್ಮನನ್ನು ಉಪಾದಾನಕಾರಣನೂ ಆಗಿದ್ದಾನೆ, ನಿಮಿತ್ತಕಾರಣನೂ ಆಗಿದ್ದಾನೆಂದು ಹೇಳುತ್ತಾರೆ. ಆದರೆ ಬ್ರಹ್ಮನು ನಿಮಿತ್ತಕಾರಣನಾದ ಮೇಲೆ ಜಗತ್ತಿನಿಂದ ಭಿನ್ನನೆಂದೇ ಹೇಳಿದಂತಾಗುತ್ತದೆ. ಹೀಗಿರುವಾಗ ಭಿನ್ನನಾದ ಬ್ರಹ್ಮನ ಜ್ಞಾನದಿಂದ ಸಮಸ್ತ ಜಗತ್ತು ತಿಳಿದಂತಾಗುತ್ತದೆಂದು ಅವರಿಗೆ ಸಮರ್ಥಿಸಲಾಗದು. ಆದ್ದರಿಂದ ಬ್ರಹ್ಮನು ಪ್ರಧಾನನಾಗಿದ್ದಾನೆ ಉಳಿದೆಲ್ಲ ಜಗತ್ತು ಅಪ್ರಧಾನವಾಗಿದೆ. ಪ್ರಧಾನಭೂತನಾದ ಬ್ರಹ್ಮನನ್ನು ತಿಳಿಯುವುದರಿಂದ ಅಪ್ರಧಾನವಾದ ಸಮಸ್ತ ಜಗತ್ತನ್ನು ತಿಳಿದಂತಾಗುತ್ತದೆ ಎಂಬುದಾಗಿಯೇ ಏಕವಿಜ್ಞಾನೇನ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ಕೂಡಿಸಬೇಕು.

### ಅದ್ವೈತಮತದ ಮತ್ತು ರಾಮಾನುಜಮತದ ಸೂತ್ರಾರ್ಥವಿಮರ್ಶೆ

ಭಾಮತಿಯಲ್ಲಿ 'ಉಪಾದಾನತ್ವ' ಎಂದರೆ ಭ್ರಮಕ್ಕೆ ಅಧಿಷ್ಠಾನವಾಗಿರುವಿಕೆ ಎಂಬರ್ಥವನ್ನು ಹೇಳಲಾಗಿದೆ. ಆದ್ದರಿಂದ ಸಮಸ್ತ ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿರುವ ಕಾರಣ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ ಎಂಬುದಾಗಿ ವ್ಯಾಖ್ಯಾನ ಮಾಡಲಾಗಿದೆ. ಇದು ಸರಿಯಲ್ಲ. ಏಕೆಂದರೆ ಹಗ್ಗವನ್ನು ನೋಡಿ ಹಾವು ಎಂಬ ಭ್ರಾಂತಿ ನಮಗೆ ಬರುತ್ತದೆ. ಇಲ್ಲಿ ಹಾವಿನ ಆರೋಪಕ್ಕೆ ಅಧಿಷ್ಠಾನವಾದದ್ದು ಹಗ್ಗ. ಆದರೆ ಯಾರೂ ಸಹ ಹಗ್ಗವು ಉಪಾದಾನಕಾರಣವೆಂದು ಹೇಳುವುದಿಲ್ಲ.

ಇದರಂತೆ ಎರಡನೆಯ ಸೂತ್ರ ವ್ಯಾಖ್ಯಾನವೂ ಕೂಡ ಸರಿಯಲ್ಲ. 'ಸೋಽಕಾಮಯತ ಬಹು ಸ್ಯಾಮ್' ಇತ್ಯಾದಿಯಾಗಿ ಶ್ರುತಿಯಲ್ಲಿ ಇಚ್ಛಾಪೂರ್ವಕವಾದ ಬಹುಭವನವು ಶ್ರುತವಾಗಿದೆ. ಇಚ್ಛೆಯು ಬರಬೇಕೆಂದರೆ ನಿಮಿತ್ತಕಾರಣನಾಗಿರಬೇಕು. ಬಹುಭವನವನ್ನು ಹೇಳಬೇಕೆಂದರೆ ಉಪಾದಾನಕಾರಣನಾಗಿರಬೇಕೆಂಬುದು ಎರಡನೆಯ ಸೂತ್ರದ ಅರ್ಥ. ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ಬ್ರಹ್ಮನು ಅನೇಕ ರೂಪಗಳನ್ನು ತಾಳುತ್ತಾನೆಂದಷ್ಟೇ ಶ್ರುತಿಯಲ್ಲಿ ಹೇಳಲಾಗಿದೆ. ಹೊರತು, ನೀನು ಹೇಳುವಂತೆ ಆರೋಪಕ್ಕೆ ಅಧಿಷ್ಠಾನಾಗಿದ್ದಾನೆಂಬ ಅರ್ಥವು ಇದರಿಂದ ತೋರುವುದೇ ಇಲ್ಲ. ಸ್ಥಾಣುವಿನಲ್ಲಿ ಪುರುಷನು ಆರೋಪಿತನಾದಾಗ ಮೊದಲು ಸ್ಥಾಣುವು ನಾನು ಪುರುಷನಾಗಬೇಕು ಎಂದು ಇಚ್ಛಿಸುವುದಿಲ್ಲವಷ್ಟೆ.

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಮೂರನೆಯ ಸೂತ್ರಕ್ಕೆ 'ಸರ್ವಾಣಿ ಹವಾ ಇಮಾನಿ ಭೂತಾನಿ' ಇತ್ಯಾದಿ ಛಾಂದೋಗ್ಯಶ್ರುತಿಯಲ್ಲಿ ನೇರವಾಗಿಯೇ ಬ್ರಹ್ಮನಲ್ಲಿ ಪ್ರಪಂಚದ ಉತ್ಪತ್ತಿ, ಲಯಗಳೆರಡನ್ನೂ ಹೇಳಲಾಗಿದೆ. ಸಸ್ಯ ಮೊದಲಾದವುಗಳ ಹುಟ್ಟುವಿಕೆಗೆ, ಮತ್ತು ಲಯಕ್ಕೆ ಅಧಿಷ್ಠಾನವಾದ್ದರಿಂದ ಘಟ-ಪಟಾದಿ ಪ್ರಪಂಚಕ್ಕೆ ಬ್ರಹ್ಮನು ಉಪಾದಾನಕಾರಣನಾಗುತ್ತಾನೆ, ನಿಮಿತ್ತಕಾರಣನೂ ಆಗುತ್ತಾನೆಂದು ವ್ಯಾಖ್ಯಾನಿಸಲಾಗಿದೆ. ಇದು ಸರಿಯಲ್ಲ. ಏಕೆಂದರೆ ಶುಕ್ತಿಯಲ್ಲಿ ಹುಟ್ಟುತ್ತದೆ ಎಂದಾಗಲೀ, ಶುಕ್ತಿಯಲ್ಲಿ ಲಯ ಹೊಂದುತ್ತವೆಂದಾಗಲೀ ಯಾರೂ ಕೂಡ ಹೇಳುವುದಿಲ್ಲ. ಆದ್ದರಿಂದ ಉತ್ಪತ್ತಿಲಯಗಳನ್ನು ಹೇಳಿದ್ದರಿಂದ ಆರೋಪಾಧಿಷ್ಠಾನತ್ವವನ್ನು ಸಮರ್ಥಿಸಲಾಗದು.

'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೆಯ ಸೂತ್ರಕ್ಕೆ ಹೀಗರ್ಥ - 'ತದಾತ್ಮಾನಂ ಸ್ವಯಮಕುರುತ' ಎಂಬುದಾಗಿ ಬ್ರಹ್ಮನು ಆತ್ಮವಿಷಯಕವಾದ, ಮತ್ತು ಆತ್ಮಕರ್ಮಕವಾದ ಕೃತಿಯುಳ್ಳವನು

ಎನ್ನಲಾಗಿದೆ. ಬ್ರಹ್ಮನು ತನ್ನ ಪ್ರಯತ್ನದಿಂದ ತನ್ನನ್ನೇ ಅನೇಕ ರೂಪಗಳನ್ನಾಗಿ ನಿರ್ಮಿಸಿಕೊಳ್ಳುತ್ತಾನೆ. ಇದು ಹೇಗೆ ಎಂದರೆ - 'ಪರಿಣಾಮಾತ್' ತಾನು ಜಗತ್ತಿನ ರೂಪವಾಗಿ ತೋರಿಸಿಕೊಳ್ಳುವುದರಿಂದ, ಹಗ್ಗವು ಹಾವಿನ ರೂಪವಾಗಿ ಪರಿಣಾಮವು ಹೊಂದುವಂತೆ ಬ್ರಹ್ಮನೂ ಕೂಡ ಜಗತ್ತಿನ ರೂಪದಲ್ಲಿ ಪರಿಣಾಮ ಹೊಂದುತ್ತಾನೆ. ಇಲ್ಲಿ ಪ್ರಯತ್ನವನ್ನು ಹೇಳಿರುವುದರಿಂದ ನಿಮಿತ್ತಕಾರಣನೆಂದು, ಪರಿಣಾಮವನ್ನು ಹೇಳಿರುವುದರಿಂದ ಉಪಾದಾನಕಾರಣನೆಂದು ತಿಳಿಯುತ್ತದೆ. 'ಆತ್ಮಕೃತೇಃ' ಎಂಬ ಸೂತ್ರವೇ ಬೇರೆ, ಅದರ ಮೇಲೆ ಬರುವ ಆಶಂಕೆಯ ನಿವಾರಣೆಗಾಗಿ, 'ಪರಿಣಾನಾತ್' ಎಂಬ ಸೂತ್ರವೇ ಬೇರೆ ಎಂಬುದು ಇಬ್ಬರ ಅಭಿಪ್ರಾಯವಾಗಿದೆ. 'ಪರಿಣಾಮಾತ್' ಎಂಬುದನ್ನು ಪ್ರತ್ಯೇಕ ಸೂತ್ರವೆಂದು ಪರಿಗಣಿಸಿದಾಗ, 'ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿಯು ಬ್ರಹ್ಮನು ಸದಾದಿಪ್ರಪಂಚರೂಪನಾಗಿದ್ದಾನೆಂದು ಹೇಳುತ್ತಿದೆ. ಇದರಿಂದ ಅವನು ಉಪಾದಾನಕಾರಣನೆಂದು ತಿಳಿಯುತ್ತದೆ.

'ಯೋನಿಶ್ಚ ಹಿ ಗೀಯತೇ' ಎಂಬುದು ಐದನೆಯ ಸೂತ್ರ. 'ಯದ್ ಭೂತಯೋನಿಂ' ಎಂದು ಉಪನಿಷತ್ತಿನಲ್ಲಿ ಬ್ರಹ್ಮನನ್ನು ಯೋನಿಶಬ್ದದಿಂದ ಕರೆಯಲಾಗಿದೆ. ಯೋನಿಶಬ್ದಕ್ಕೆ ಉಪಾದಾನಕಾರಣ ಎಂಬರ್ಥ ಪ್ರಸಿದ್ಧವಾದ್ದರಿಂದ ಬ್ರಹ್ಮನು ಉಪಾದಾನನೆಂದು ಸಿದ್ಧವಾಗುತ್ತದೆ. ಹೀಗೆ ವ್ಯಾಖ್ಯಾನಿಸುತ್ತಾರೆ.

ಇದು ಸರಿಯಲ್ಲ. ಏಕೆಂದರೆ ವಿವರ್ತಮತದಲ್ಲಿ ಶ್ರುತಿ ಹಾಗೂ ಸೂತ್ರಗಳಲ್ಲಿರುವ ಪ್ರಕೃತಿ, ಪರಿಣಾಮ, ಯೋನಿ ಮೊದಲಾದ ಶಬ್ದಗಳೆಲ್ಲವೂ ಕೂಡ ಅಸ್ವರಸವಾಗುತ್ತವೆ. ಏಕೆಂದರೆ ಹಗ್ಗವು ಹಾವನ್ನು ಮಾಡಿತು ಎಂದಾಗಲೀ, ಹಗ್ಗವು ಹಾವಿನ ರೂಪದಲ್ಲಿ ಪರಿಣಾಮ ಹೊಂದಿತು ಎಂದಾಗಲೀ, ಹಾವಿಗೆ ರಜ್ಜುವು ಕಾರಣವಾಗಿದೆ ಎಂದಾಗಲೀ ಯಾರೂ ಹೇಳುವುದಿಲ್ಲ. ಆದ್ದರಿಂದ ಬ್ರಹ್ಮನು ನಿಮಿತ್ತಕಾರಣ-ನಾಗಿದ್ದಾನೆಂದಷ್ಟೇ ಹೇಳಲು ಬರುವಾಗ, ಅವನಿಗೆ ಉಪಾದಾನತ್ವವನ್ನೂ ಹೇಳಿ, ಸೂತ್ರಗಳಿಗೆ ಬಹಳ ಕಷ್ಟದಿಂದ ವ್ಯಾಖ್ಯಾನಿಸಿರುವುದು ಅತ್ಯಂತ ಅಸಾಧುವಾಗಿದೆ.

# ಏತೇನಾಧಿಕರಣ

## ಪೂರ್ವಪಕ್ಷ ನಿರಾಕರಣೆಯೊಂದಿಗೆ ಅಸತ್, ಶೂನ್ಯ ಮೊದಲಾದ ಶಬ್ದಗಳ ಸಮನ್ವಯ

ಹಿಂದಿನ ಪ್ರಕೃತ್ಯಧಿಕರಣದಲ್ಲಿ 'ಅವ್ಯವಧಾನೇನ ಸೂತಿಹೇತುತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೂಲಕ ಸ್ತ್ರೀಲಿಂಗಶಬ್ದಗಳೆನಿಸಿದ ಪ್ರಕೃತಿ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಇದರಿಂದ ಮಹಾವಿಷ್ಣುವಿನ ಸ್ವರೂಪಕ್ಕೆ ಯಾವುದೇ ರೀತಿ ಚ್ಯುತಿ ಬರಲಿಲ್ಲ. ಎಲ್ಲಾ ಶಬ್ದಗಳನ್ನೂ ಸಮನ್ವಯ ಮಾಡಬೇಕೆಂಬ ಧೋರಣೆಯಿಂದ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲು ಸಾಧ್ಯವೇ ಇಲ್ಲ. ಹಾಗೇನಾದರೂ ಅಂತಹ ಶಬ್ದಗಳನ್ನು ಸಮನ್ವಯ ಮಾಡಿದರೆ, ಭಗವಂತನು ನಿಃಸ್ವರೂಪನೆಂದಾಗಬೇಕಾದೀತು. ಆದ್ದರಿಂದ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಲ್ಲಿರುವ 'ಅಸತ್' ಮೊದಲಾದ ಶಬ್ದಗಳು

ಮಹಾವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. ಅಷ್ಟೇ ಅಲ್ಲದೇ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಗದು. ಏಕೆಂದರೆ ಅಸತ್‌ಪದಾರ್ಥಗಳು ನಿಃಸ್ವರೂಪಗಳಾದ್ದರಿಂದ ಅವುಗಳ ಸೃಷ್ಟಿ, ನಿಯಮನ ಮೊದಲಾದವುಗಳನ್ನು ಮಾಡಲು ಸಾಧ್ಯವಿಲ್ಲದ ಕಾರಣ, ಈಶಾಧೀನತ್ವವನ್ನು ಅವುಗಳಿಗೆ ಹೇಳಲು ಹೇಗೆ ಸಾಧ್ಯ ? ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಶೂನ್ಯ, ಅಸತ್ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿದ ಮಾತ್ರಕ್ಕೆ ಭಗವಂತನು ನಿಃಸ್ವರೂಪನೆಂದಾಗಬೇಕಾಗಿಲ್ಲ. ಹೊರತಾಗಿ, 'ಶಮೂನಂ ಕುರುತೇ' 'ದುರ್ಜನರಿಗೆ ಬರುವಂತಹ ಆನಂದಾದಿಗಳನ್ನು ಮೊಟಕುಗೊಳಿಸುತ್ತಾನೆ' ಎಂಬುದಾಗಿ ಭಗವಂತನು ಶೂನ್ಯನೆನಿಸುತ್ತಾನೆ. ದುರ್ಜನರಿಗೆ ಅವ್ಯಕ್ತನಾದ ಕಾರಣ 'ಅಸತ್' ಎನಿಸುತ್ತಾನೆ. ಹೀಗೆ ಯೋಗವೃತ್ತಿಯಿಂದ ಶೂನ್ಯಾದಿಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ತಿಳಿದುಕೊಳ್ಳಬೇಕು. ಮತ್ತು ಲೋಕಪ್ರಸಿದ್ಧವಾದ ಶೂನ್ಯತ್ವಾದಿಗಳನ್ನೇ ಶೂನ್ಯಾದಿ ಶಬ್ದಗಳ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಿದರೂ ಕೂಡ ಅವುಗಳು ಭಗವದಧೀನವಾಗಿವೆ. ಯಾವುದೇ ಕಾಲದಲ್ಲೂ ಭಗವಂತನು ಶಶವಿಷಾಣಾದಿಗಳನ್ನು ಸೃಷ್ಟಿ ಮಾಡಲಾರ. ಅವನಿಗೆ ಸೃಷ್ಟಿ ಮಾಡುವ ಸಾಮರ್ಥ್ಯವಿದೆ. ಆದರೂ ಕೂಡ ಅಸತ್‌ಪದಾರ್ಥವನ್ನು ಸೃಷ್ಟಿಮಾಡುವುದಿಲ್ಲ ಎಂಬ ಕಾರಣದಿಂದಲೇ ಅಸತ್ ಪದಾರ್ಥವು ಭಗವದಧೀನವಾಗುತ್ತದೆ. ಹೀಗೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಶೂನ್ಯ, ಅಸತ್ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಬಹುದೆಂದು ಸಿದ್ಧಾಂತ.

ಉತ್ಪಾದಯಿಷೇದೀಶೋ ಯದಿ ಶೃಂಗಂ ಶಶಾದಿಕೇ ।
ಗವಾದಾವಿವ ಜಾಯೇತ ತದಭಾವಾದಭೂದಸತ್ ॥೧॥

ಒಂದುವೇಳೆ ಈಶ್ವರನು ಮೊಲದಲ್ಲಿ ಕೊಂಬನ್ನು ಸೃಷ್ಟಿ ಮಾಡಬೇಕೆಂದು ಬಯಸಿ, ಹಸು, ಎಮ್ಮೆ ಮೊದಲಾದವುಗಳಿಗೆ ಕೊಂಬು ಇರುವಂತೆ, ಮೊಲ, ಕುದುರೆ ಇವುಗಳಿಗೂ ಕೊಂಬು ಬರುತ್ತದೆ. ಆದರೆ ಹಾಗೆ ಈಶ್ವರನು ಯಾವ ಕಾಲದಲ್ಲಿಯೂ ಇಚ್ಛೆಯನ್ನು ಮಾಡಲಾರ. ಆ ಕಾರಣದಿಂದಲೇ ಶಶವಿಷಾಣಾದಿಗಳು ಅತ್ಯಂತ ಅಸತ್ತಾಗಿವೆ. ಅತ್ಯಂತಾಭಾವಪ್ರತಿಯೋಗಿ ಎನಿಸುತ್ತವೆಂದಭಿಪ್ರಾಯ.

## ಅದ್ವೈತಿಗಳ ಸೂತ್ರಾರ್ಥ ವಿಮರ್ಶೆ

ಅದ್ವೈತಿಗಳ ಪ್ರಧಾನಕಾರಣತ್ವವನ್ನು ಈ ಹಿಂದೆ ನಿರಾಕರಿಸಿದ್ದಾಯಿತು. ಈಗ ಪರಮಾಣ್ವಾದಿಕಾರಣತ್ವವನ್ನು ನಿರಾಕರಿಸುತ್ತಿದ್ದಾರೆಂದು ವ್ಯಾಖ್ಯಾನ ಮಾಡುತ್ತಾರೆ. ಇದು ಸರಿಯಲ್ಲ. ಏಕೆಂದರೆ ಪ್ರಧಾನಕಾರಣತ್ವವಾದವನ್ನಾಗಲೀ, ಪರಮಾಣ್ವಾದಿಕಾರಣತ್ವವಾದವನ್ನಾಗಲೀ, ಸಮಯಪಾದದಲ್ಲಿ ನಿರಾಕರಿಸುವುದು ಸಂಗತವಾಗುತ್ತದೆ. ಈ ಸಮನ್ವಯಾಧ್ಯಾಯದಲ್ಲಿ ಶಬ್ದಗಳ ಸಮನ್ವಯವನ್ನಷ್ಟೇ ಮಾಡಬೇಕು. ಶ್ರುತಿಗಳಲ್ಲಿ ಪ್ರಸಕ್ತವಾದ ವಾದವನ್ನಷ್ಟೇ ನಿರಾಕರಿಸುತ್ತಿದ್ದೇವೆಂದು ಉತ್ತರಿಸಬಹುದು. ಆದರೆ ಈಗಾಗಲೇ ಅದ್ವೈತಿಗಳೇ ವ್ಯಾಖ್ಯಾನಿಸಿದಂತೆ ಎಲ್ಲಾ ಶ್ರುತಿಭಾಗಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದ್ದಾಗಿದೆ. ಪುನಃ ಪರಮಾಣ್ವಾದಿಗಳು ಜಗತ್ತಿಗೆ ಕಾರಣವಾಗಬಹುದೆಂಬ ಆಶಂಕೆ ಹುಟ್ಟಲು ಸಾಧ್ಯವೇ ಇಲ್ಲ. ಯಾವುದಾದರೂ ವಾಕ್ಯಗಳಿಗೆ ಬ್ರಹ್ಮಪರತ್ವವು ನಿರ್ಣೀತವಾಗದಿದ್ದಲ್ಲಿ, ಬ್ರಹ್ಮಪರತ್ವವನ್ನಷ್ಟೇ

ಆ ವಾಕ್ಯಗಳಿಗೆ ಸಮರ್ಥನೆ ಮಾಡಿದರೆ ಸಾಕು. ಅದನ್ನು ಬಿಟ್ಟು ಪರಮಾಣ್ವಾದಿಪರತ್ವವನ್ನು ನಿರಾಕರಣೆ ಮಾಡುವುದು ಅಸಂಗತವಾಗುತ್ತದೆ.

ಅಧ್ಯಾಯದ ಕೊನೆಯಲ್ಲಿ 'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬ ಸೂತ್ರವು ಉಲ್ಲೇಖಿಸಲ್ಪಟ್ಟಿದೆ. ಇಲ್ಲಿರುವ 'ಏತೇನ' ಎಂಬ ಪದದಿಂದ ಅಧ್ಯಾಯದ ಪ್ರಾರಂಭದಲ್ಲಿ ಮತ್ತು ಮಧ್ಯದಲ್ಲಿ ಮಾಡಲ್ಪಟ್ಟ ಎಲ್ಲಾ ಸಮನ್ವಯಶಬ್ದಗಳನ್ನು ವಿವಕ್ಷಿಸಬೇಕು. ಆದರೆ ಅದ್ವೈತಿಗಳು ಕೇವಲ ಪ್ರಧಾನನಿರಾಸನ್ಯಾಯವನ್ನಷ್ಟೇ ವಿವಕ್ಷಿಸುತ್ತಾರೆ. ಇದು ಅಯುಕ್ತವಾಗಿದೆ. ಮತ್ತು 'ಸರ್ವೇ' ಎಂಬ ಪದದಿಂದ ಹಿಂದೆ ಸಮನ್ವಯ ಮಾಡಲ್ಪಟ್ಟ ಶಬ್ದಗಳಿಗೆ ಸಮಾನಜಾತೀಯವಾದ ಶಬ್ದಗಳನ್ನು ವಿವಕ್ಷಿಸಬೇಕು. ಆದರೆ ಪರಮಾಣ್ವಾದಿವಾದಪರತ್ವವನ್ನು ಸರ್ವಶಬ್ದದಿಂದ ಅದ್ವೈತಿಗಳು ವಿವಕ್ಷಿಸುತ್ತಾರೆ. ಇದೂ ಕೂಡ ಸರಿಯಲ್ಲ. ವ್ಯಾಖ್ಯಾತಾಃ' ಎಂಬ ಪದಕ್ಕೆ 'ವ್ಯಾಖ್ಯಾನ ಮಾಡಲ್ಪಟ್ಟವು' ಎಂಬರ್ಥವನ್ನೇ ಹೇಳಬೇಕು. ಆದರೆ ಅದ್ವೈತಿಗಳು 'ನಿರಾಕೃತವಾದವು' ಎಂಬರ್ಥವನ್ನು ಹೇಳುತ್ತಾರೆ. ಇದೂ ಕೂಡ ಅಸ್ವರಸ. 'ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬುದಾಗಿ ದ್ವಿರುಕ್ತಿಯಿದೆ. ಈ ದ್ವಿರುಕ್ತಿಯು ಅಧ್ಯಾಯಸಮಾಪ್ತಿಗೋಸ್ಕರ ಎಂದು ಅದ್ವೈತಿಗಳು ಹೇಳುತ್ತಾರೆ. ಹೇಗೆ ಪಾದವು ಮುಗಿಯಿತೆಂದು ಸ್ವತಃ ತಿಳಿಯುತ್ತದೋ, ಅದರಂತೆ ಅಧ್ಯಾಯವು ಮುಗಿಯಿತೆಂದು ಸ್ವತಃ ತಿಳಿಯುತ್ತಿರುವಾಗ ದ್ವಿರುಕ್ತಿಗೆ ಸಾರ್ಥಕ್ಯವನ್ನು ಹೇಳಲು ಸಾಧ್ಯವಿಲ್ಲ. 'ಆದ್ದರಿಂದ ಇದುವರೆಗೂ ಮಾಡಲ್ಪಟ್ಟ ಸಮನ್ವಯವು ಸಕಲ ಶ್ರುತಿ-ಸ್ಮೃತಿಗಳಿಂದ ಸ್ಪಷ್ಟವಾಗಿ ಸಿದ್ಧವಾಯಿತು' ಎಂಬ ದಾರ್ಢ್ಯಕ್ಕೋಸ್ಕರವೇ ದ್ವಿರುಕ್ತಿಯೆಂದು ವಿವಕ್ಷಿಸುವುದು ಸೂಕ್ತ.

### ಕೊನೆಯ ಸೂತ್ರದಲ್ಲಿರುವ ದ್ವಿರುಕ್ತಿಯ ಪ್ರಯೋಜನ ಚಿಂತನೆ

ರಾಮಾನುಜರು ದ್ವಿರುಕ್ತಿಯ ಸಾರ್ಥಕ್ಯವನ್ನು ಹೀಗೆ ಚಿಂತಿಸುತ್ತಾರೆ - ಬ್ರಹ್ಮಕಾಂಡದ ಪ್ರತಿಯೊಂದು ಅಧ್ಯಾಯಗಳ ಕೊನೆಯಲ್ಲಿ ದ್ವಿರುಕ್ತಿ ಇರಲೇ ಬೇಕು. ಏಕೆಂದರೆ ಪ್ರತಿಯೊಂದು ವಿದ್ಯೆಗಳು ಮೋಕ್ಷಕ್ಕೆ ಪ್ರತ್ಯೇಕವಾಗಿ ಸಾಧಕವಾಗುತ್ತದೆ. ಈ ಪ್ರಮೇಯವನ್ನು ತಿಳಿಸಲು ಸೂತ್ರಕಾರರು ಬ್ರಹ್ಮಕಾಂಡದ ಪ್ರತಿಯೊಂದು ಅಧ್ಯಾಯಗಳ ಕೊನೆಯಲ್ಲಿ ದ್ವಿರುಕ್ತಿಯನ್ನು ಮಾಡಿರುತ್ತಾರೆ. ಆದರೆ ಕರ್ಮಕಾಂಡದ ಯಾವುದೇ ಪ್ರಮೇಯಗಳು ಮೋಕ್ಷಕ್ಕೆ ಸಾಧಕವಲ್ಲ. ಆದ್ದರಿಂದ ಅಲ್ಲಿರುವ ಅಧ್ಯಾಯಗಳ ಕೊನೆಯಲ್ಲಿ ಎಲ್ಲಿಯೂ ಕೂಡ ಅಭ್ಯಾಸ ಇರುವುದಿಲ್ಲ.

ರಾಮಾನುಜರಈವಿಮರ್ಶೆಸರಿಯಿಲ್ಲ.ಏಕೆಂದರೆಪ್ರತಿಯೊಂದುಅಧಿಕರಣಗಳಲ್ಲಿಯೂಜಿಜ್ಞಾಸುವಿಗೆ ಒಂದೊಂದುವಿದ್ಯೆಯಸಂಪಾದನೆಉಂಟಾಗುತ್ತದೆ.ಹಾಗಾದರೆಅದುಕೂಡಮೋಕ್ಷಸಾಧಕವಾದ್ದರಿಂದಎಲ್ಲಾ ಅಧಿಕರಣಗಳ ಕೊನೆಯಲ್ಲಿಯೂ ಅಭ್ಯಾಸವಿರಬೇಕಿತ್ತು. ಮತ್ತು ಮೊದಲನೆಯ ಅಧ್ಯಾಯದಿಂದಲೇ ಮೋಕ್ಷಸಾಧಕವಾದ ಜ್ಞಾನವನ್ನು ಸಂಪಾದನೆ ಮಾಡಿದ ಮೇಲೆ ಉಳಿದ ಅಧ್ಯಾಯಗಳ ಅಧ್ಯಯನವು ವ್ಯರ್ಥವಾಗುತ್ತದೆ. ಅಷ್ಟೇ ಅಲ್ಲದೇ, ಛಾಂದೋಗ್ಯೋಪನಿಷತ್ತಿನ ಕೊನೆಯಲ್ಲಿ ಅಭ್ಯಾಸವಿರಬಹುದು. ಆದರೆ ಬೃಹದಾರಣ್ಯಕೋಪನಿಷತ್ತಿನ ಕೊನೆಯಲ್ಲಿ ದ್ವಿರುಕ್ತಿಯಿರುವುದೇ ಇಲ್ಲ. ಕರ್ಮಕಾಂಡದ

'ಸಂಧಿಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ಸರ್ವಮಾಯುರೇತಿ' ಎಂಬಲ್ಲಿ ದ್ವಿರುಕ್ತಿ ಇದೆ. ಕರ್ಮಕಾಂಡವೆನಿಸಿದ ಋಗ್ವೇದ ಬ್ರಾಹ್ಮಣದಲ್ಲಿಯೂ ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿ ಇದೆ. ಆದ್ದರಿಂದ ರಾಮಾನುಜರ ವಾದದಲ್ಲಿ ಯಾವುದೇ ಹುರುಳಿಲ್ಲ.

ಅರ್ಥಸಮಾಪ್ತಿಯಿಂದಲೇ ದ್ವಿತೀಯಾಧ್ಯಾಯದ ಅರ್ಥವು ಮುಗಿಯಿತೆಂಬ ವಿಚಾರದಿಂದಲೇ ಅಧ್ಯಾಯವು ಮುಗಿಯಿತೆಂದು ತಿಳಿಯುತ್ತದೆಂದು ನಾವು ಅದ್ವೈತಿಗಳಿಗೆ ಹಿಂದೆ ಉತ್ತರಿಸಿದ್ದೆವು. ಅದಕ್ಕೆ ಅದ್ವೈತಿಗಳು ಪುನಃ ಆಶಂಕಿಸುತ್ತಾರೆ. 'ಕಾಷ್ಟೈಃ ಸ್ಥಾಲ್ಯಾಮ್' 'ಕಟ್ಟಿಗೆಗಳಿಂದ ಪಾತ್ರೆಯಲ್ಲಿ' ಎಂದಷ್ಟೇ ಪ್ರಯೋಗ ಮಾಡಿದರೆ, ವಾಕ್ಯವು ಪೂರ್ಣವಾಗಿರುವುದಿಲ್ಲ. ಆದ್ದರಿಂದ ವಾಕ್ಯದ ಅರ್ಥವೂ ಕೂಡ ಪೂರ್ಣವಾಗಿ ತಿಳಿಯುವುದಿಲ್ಲ. ಅದರಂತೆ ಅಧ್ಯಾಯವು ಮುಗಿಯಿತೆಂದು ತಿಳಿಯದೇ, ಅಧ್ಯಾಯದ ಅರ್ಥವು ಮುಗಿಯಿತೆಂದು ತಿಳಿಯುವುದಿಲ್ಲ. ಅಧ್ಯಾಯದ ಅರ್ಥವು ಮುಗಿಯಿತೆಂದು ತಿಳಿಯದೇ, ಅಧ್ಯಾಯ ಮುಗಿಯಿತೆಂದು ತಿಳಿಯುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಸೂತ್ರಕಾರರು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿ ಮಾಡುತ್ತಾರೆ. ಆವಾಗ ಎಲ್ಲಿ ದ್ವಿರುಕ್ತಿ ಇರುತ್ತದೋ ಅಲ್ಲಿ ಅಧ್ಯಾಯ ಮುಗಿಯಿತೆಂದು ನಮಗೆ ತಿಳಿಯುತ್ತದೆ ಅನ್ಯೋನ್ಯಾಶ್ರಯವೂ ಕೂಡ ಪರಿಹಾರವಾಗುತ್ತದೆಂದು ಸಮರ್ಥಿಸುತ್ತಾರೆ.

ಈ ಸಮರ್ಥನೆಯೂ ಸರಿಯಿಲ್ಲ. ಹಾಗಾದರೆ ಪ್ರತಿಯೊಂದು ಪಾದಗಳು ಮುಗಿಯಿತೆಂದೂ ಕೂಡ ತಿಳಿಸಲು ಸೂತ್ರಕಾರರು ದ್ವಿರುಕ್ತಿಯನ್ನು ಅಲ್ಲಿಯೂ ಹೇಳಬೇಕಿತ್ತು. 'ಕಾಷ್ಟೈಃ ಸ್ಥಾಲ್ಯಾಮ್ 'ಎಂಬ ಉದಾಹರಣೆಯು ವಿಷಮವಾಗಿದೆ. ಅಲ್ಲಿರುವ ಪದಗಳಲ್ಲಿ ಆಕಾಂಕ್ಷೆಯು ಗೋಚರವಾಗುತ್ತಿದೆ. ಆದರೆ ನಾಲ್ಕು ಪಾದಗಳಿಂದ ಸಮಗ್ರವೇದದ ಪ್ರತಿಯೊಂದು ಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಸಾಧಿಸಿದ ಮೇಲೆ ಪುನಃ ಆಕಾಂಕ್ಷೆ ಹುಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ ಅದ್ವೈತಿಗಳ ವಿಚಾರವಾಗಲೀ, ರಾಮಾನುಜರ ವಿಚಾರವಾಗಲೀ, ಅತ್ಯಂತ ಅಸಾಧುವಾಗಿದೆ. ಅಂತಿಮವಾಗಿ ಭಾಷ್ಯದಲ್ಲಿ ಉದಾಹರಿಸಿದ 'ಅವಧಾರಣಾರ್ಥಂ ಸರ್ವಸ್ಯ' ಎಂಬ ಸ್ಮೃತಿಯ ವಚನದಂತೆ ಸಮಗ್ರ ಸಮನ್ವಯಾಧ್ಯಾಯದ ವಿಚಾರವು ದೃಢವಾಯಿತು ಎಂದು ತಿಳಿಸುವುದಕ್ಕಾಗಿ ಸೂತ್ರಕಾರರು ದ್ವಿರುಕ್ತಿಯನ್ನು ಮಾಡಿರುತ್ತಾರೆ ಎಂಬ ಪ್ರಯೋಜನವನ್ನೇ ಹೇಳಬೇಕು.

### ನಾಲ್ಕು ಪಾದಗಳ ಸಾರ ಸಂಗ್ರಹ

ನಾಮಾನಿ ಲಿಂಗಾನ್ಯಪಿ ಚೇತರತ್ರ ಪ್ರಸಿದ್ಧಿಯುಕ್ತಾನಿ ತಥೋಭಯತ್ರ ।
ಪ್ರಸಿದ್ಧಿಭಾಂಜ್ಯನ್ಯಪದಾರ್ಥ ಏವ ಪ್ರಸಿದ್ಧಿಯುಕ್ತಾನಿ ಸಮನ್ವಿತಾನಿ ।

ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಪ್ರಥಮಪಾದದಲ್ಲಿ, ಇತರತ್ರ ಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳನ್ನು ದ್ವಿತೀಯಪಾದದಲ್ಲಿ, ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳನ್ನು ತೃತೀಯಪಾದದಲ್ಲಿ, ಅನ್ಯಪದಾರ್ಥದಲ್ಲೇ ಪ್ರಸಿದ್ಧವಾದ ಶಬ್ದಗಳನ್ನು ನಾಲ್ಕನೆಯ ಪಾದಗಳಲ್ಲಿ ಸಮನ್ವಯ ಮಾಡಲಾಗಿದೆ.

ಅನ್ಯತ್ರಪ್ರಸಿದ್ಧಿ ಮತ್ತು ಉಭಯತ್ರಪ್ರಸಿದ್ಧಿ, ಅಸ್ಪಷ್ಟತ್ವಪ್ರಸಿದ್ಧಿ ಈ ಮೂರು ಬಗೆಯ ಶಬ್ದಗಳಲ್ಲಿ ಇರುವ ವ್ಯತ್ಯಾಸಹೀಗಿದೆ- ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ವಾಕ್ಯವು ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವನ್ನು ಹೊಂದಿರುವಾಗಲೇ 'ಬ್ರಹ್ಮಣ್ಯಪಿ ತದಧೀನತ್ವಾತ್' ಎಂಬ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಸಮನ್ವಯವನ್ನು ಮಾಡಲಾಗಿದೆ. ಅನ್ಯತ್ರೈವಪ್ರಸಿದ್ಧದಲ್ಲಿ ಮಾಡುವ ಸಮನ್ವಯವು ಎರಡು ಬಗೆ - ಒಂದು ತದಧೀನತ್ವ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಮತ್ತೊಂದು 'ಜ್ಯೋತಿರುಪಕ್ರಮಾತ್' ಎಂಬ ಸೂತ್ರಸಲ್ಲಿ ಹೇಳಿದ ನ್ಯಾಯದಂತೆ, ಶ್ರುತಿಯಲ್ಲಿ ಹೇಳಿದ ಯೋಗದಿಂದಲೇ ಬ್ರಹ್ಮನಲ್ಲಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಏನೇ ಆದರೂ ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವಿದ್ದೇ ಇರುತ್ತದೆಂಬುದನ್ನು ಗಮನಿಸಬೇಕು. ಮತ್ತು ಅನ್ಯತ್ರೈವಪ್ರಸಿದ್ಧವಾದ ಪಾದದಲ್ಲಿ ವಾಕ್ಯಸಮನ್ವಯವನ್ನೂ ಕೂಡ ಮಾಡಲಾಗಿದೆ. ಯಾವ ವಾಕ್ಯವು ಬ್ರಹ್ಮಪರವೆಂದು ನಿಶ್ಚಯವಾಗಿದೆಯೋ, ಅವುಗಳ ಮಧ್ಯದಲ್ಲಿರುವಂತಹ ಮತ್ತೊಂದು ವಾಕ್ಯವೂ ಕೂಡ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆಂಬುದು ವಾಕ್ಯಸಮನ್ವಯದ ಕ್ರಮ. ಹೀಗೆ ಪದಸಮನ್ವಯ ಹಾಗೂ ವಾಕ್ಯಸಮನ್ವಯಗಳೆರಡನ್ನೂ ಈ ಪಾದದಲ್ಲಿ ಮಾಡಿದ್ದಾರೆ.

ಉಭಯತ್ರಪ್ರಸಿದ್ಧವಾದ ಶಬ್ದಗಳಲ್ಲಿಯೂ ಯಾವ ವಿಷಯವಾಕ್ಯವನ್ನು ತಿಳಿದುಕೊಳ್ಳುತ್ತಾರೋ, ಆ ವಾಕ್ಯಗಳಿಗೆ ಅನ್ಯಪರತ್ವವನ್ನು ಸರ್ವಥಾ ಒಪ್ಪದೇ ಕೇವಲ ಬ್ರಹ್ಮನಲ್ಲಿ ಮಾತ್ರ ಸಮನ್ವಯ ಮಾಡುವುದೇ ಉದ್ದೇಶವಾಗಿರುತ್ತದೆ.

ಅದರಲ್ಲಿಯೂ ಒಂದು ಅವಾಂತರ ವೈಲಕ್ಷಣ್ಯವಿದೆ. ಉಭಯತ್ರಪ್ರಸಿದ್ಧವಾದ ಒಂದು ವಾಕ್ಯವನ್ನು ಉದಾಹರಿಸಿದರೆ, ಪೂರ್ವಪಕ್ಷಿಯು ವಾಕ್ಯಾಂತರದಲ್ಲಿ ಬ್ರಹ್ಮಪರತ್ವವನ್ನು ಒಪ್ಪಿ, ತಾನು ಉದಾಹರಿಸಿದ ವಾಕ್ಯದಲ್ಲಿ ಸರ್ವಥಾ ಬ್ರಹ್ಮಪರತ್ವವಿಲ್ಲವೆಂದು ಆಕ್ಷೇಪಿಸುತ್ತಾನೆ. ಅದರ ನಿರಾಸೆಯನ್ನೂ ಕೂಡ ಉಭಯತ್ರಪ್ರಸಿದ್ಧ ಪಾದದಲ್ಲಿ ಮಾಡಲಾಗಿದೆ.

ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುವಾಗ ಶ್ರುತಿಯಲ್ಲಿ ಯಾವುದೇ ವಾಕ್ಯವಿದ್ದರೂ, ಅದಕ್ಕೆ ಬ್ರಹ್ಮಪರತ್ವವನ್ನು ಸರ್ವಥಾ ಒಪ್ಪುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ ಅದನ್ನು ನಿರಾಸ ಮಾಡುತ್ತಾ ಬ್ರಹ್ಮಲಿಂಗಗಳಿರುವ ಕಾರಣ ಬ್ರಹ್ಮಪರತ್ವವನ್ನು ಒಪ್ಪಲೇಬೇಕೆಂದು ಸಿದ್ಧಾಂತ ಮಾಡುತ್ತಾರೆ. ಹೀಗೆ ಪಾದಗಳಲ್ಲಿರುವ ಅವಾಂತರವ್ಯತ್ಯಾಸವನ್ನು ಗಮನಿಸಬೇಕು.

ಯಾವುದೇ ಶಬ್ದಗಳನ್ನು ಕೇಳಿದಾಗ ಮೊದಲು ಲೌಕಿಕಾರ್ಥದ ಪ್ರತೀತಿಯೇ ಬರುತ್ತದೆ. ಅನಂತರ ಈಗ ನಾಲ್ಕು ಪಾದಗಳಲ್ಲಿ ಸಮರ್ಥನೆ ಮಾಡಿದ ಬ್ರಹ್ಮನೆಂಬ ಅರ್ಥವು ತಿಳಿಯುತ್ತದೆ. ಪ್ರಥಮಪ್ರತೀತವಾದದ್ದು, ಪ್ರಬಲವಾಗಿರುವುದರಿಂದ ಅದನ್ನೇ ಸ್ವೀಕರಿಸಬೇಕಲ್ಲವೇ ? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ ಪ್ರಥಮಪ್ರತೀತವಾದ ಅರ್ಥವೇ ಮುಖ್ಯವಾಗಿರುತ್ತದೆ ಎಂದು ಪ್ರಾಭಾಕರರಾಗಲೀ, ಭಾಟ್ಟರಾಗಲಿ ಅಂಗೀಕರಿಸಿಲ್ಲ. ಲೌಕಿಕವ್ಯವಹಾರದಲ್ಲಿಯೂ ಕೆಲವೊಮ್ಮೆ ಸಿಂಹದ ಚಿತ್ರವನ್ನು ನೋಡಿ, 'ಸಿಂಹ' ಎಂದು ಕರೆಯುತ್ತಾರೆ. ಅನಂತರ ಸಿಂಹಶಬ್ದದಿಂದ ಇದು ಪ್ರತಿಪಾದ್ಯವಲ್ಲ. ನಿಜವಾದ ಕಾಡಿನಲ್ಲಿರುವ ಸಿಂಹವೇ

ಪ್ರತಿಪಾದ್ಯವೆಂಬ ಜ್ಞಾನೋದಯವಾಗುತ್ತದೆ. ಇಂತಹ ಸ್ಥಳದಲ್ಲಿ ಅನಂತರ ಪ್ರತೀತವಾದ ಅರ್ಥವನ್ನೇ ಮುಖ್ಯವಾಗಿ ಲೌಕಿಕರೂ ಕೂಡ ಸ್ವೀಕರಿಸಿದ್ದಾರೆ. ಆದ್ದರಿಂದ ಈ ನಾಲ್ಕು ಪಾದಗಳಲ್ಲಿ ಸಮರ್ಥಿಸಿದ ಶಬ್ದಗಳ ಪರಮಮುಖ್ಯಾರ್ಥ ಬ್ರಹ್ಮನೇ ಆಗಿದ್ದಾನೆಂಬ ವಿಚಾರವೇ ಮುಖ್ಯವಾದದ್ದು. ಸಕಲಸಜ್ಜನರೂ ಇದನ್ನೇ ಮನದಟ್ಟು ಮಾಡಿಕೊಳ್ಳಬೇಕು.

ಅಪರ್ಯಾಯಾನಂತಶಬ್ದೈರ್ಯೌಗಿಕೈರ್ಗುಣವಾಚಕೈಃ ।
ವಾಚ್ಯತ್ವಾತ್ ಬ್ರಹ್ಮಣಃ ಸಿದ್ಧಾ ಸಮಸ್ತಗುಣಪೂರ್ಣತಾ ॥೧॥

ಈ ಎಲ್ಲಾ ಕಾರಣಗಳಿಂದ ಯಾವ ಶಬ್ದಗಳೆಲ್ಲವೂ ಯೌಗಿಕವೂ, ಗುಣವಾಚಕವೂ ಆಗಿರುವುದರಿಂದ ಅಪರ್ಯಾಯವಾದ ಅನಂತ ಶಬ್ದಗಳಿಂದ ಮಹಾವಿಷ್ಣು ಒಬ್ಬನೇ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಅವನಲ್ಲಿ ಸಮಸ್ತಗುಣಪರಿಪೂರ್ಣತ್ವವು ಸಿದ್ಧವಾಯಿತು.

## ವಾಚ್ಯತ್ವವಿಷಯದಲ್ಲಿ ಅದ್ವೈತಮತ ನಿರಾಕರಣೆ

ಇಲ್ಲಿಯ ತನಕ ನಾಲ್ಕು ಪಾದಗಳಲ್ಲಿ ಪ್ರತಿಯೊಂದು ಶಬ್ದಗಳಿಗೆ ಶಕ್ತಿವೃತ್ತಿಯನ್ನು ಶ್ರೀಹರಿಯಲ್ಲಿ ನಾವು ಸಮನ್ವಯ ಮಾಡಿದೆವು. ಆದರೆ ಅದ್ವೈತಿಗಳು ಯಾವುದೇ ಒಂದು ಅಧಿಕರಣದಲ್ಲಿಯೂ ಶಬ್ದವಾಚ್ಯತ್ವವನ್ನು ಸಮರ್ಥನೆ ಮಾಡುವುದಿಲ್ಲ. ಅನೇಕ ಅಧಿಕರಣಗಳಲ್ಲಿ ಆಯಾಶಬ್ದಗಳು ಬ್ರಹ್ಮನಲ್ಲಿ ತಾತ್ಪರ್ಯ ಹೊಂದಿವೆ ಎಂದಷ್ಟೇ ಸಮರ್ಥಿಸುತ್ತಾರೆ. ಅಂತಹ ಅದ್ವೈತಿಗಳು ಇಲ್ಲಿ ಪ್ರಶ್ನಿಸುತ್ತಿದ್ದಾರೆ -

ಶಬ್ದಗಳ ಸಮನ್ವಯಕ್ಕೆ ಶಕ್ತಿವೃತ್ತಿಯನ್ನೇ ಏಕೆ ಆಶ್ರಯಿಸಬೇಕು. ಕೇವಲ ತಾತ್ಪರ್ಯವನ್ನು ಹೇಳಿದರೂ ಸಾಕಲ್ಲವೇ? ಬ್ರಹ್ಮನು ಆಯಾ ಶಬ್ದಗಳಿಂದ ಶಕ್ತಿವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ಪ್ರಮಾಣಗಳಿಲ್ಲ. ಮತ್ತು ಪ್ರಯೋಜನವೂ ಇಲ್ಲ ಎಂದು.

ಅದ್ವೈತಿಗಳ ಈ ಆಕ್ಷೇಪ ಸರಿಯಿಲ್ಲ. ಏಕೆಂದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ', 'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಇವೇ ಮೊದಲಾದ ಶ್ರುತಿಗಳು ಸ್ಪಷ್ಟವಾಗಿ ಪರಮಾತ್ಮನಲ್ಲಿ ಶಬ್ದಗಳು ಯೋಗವೃತ್ತಿಯಿಂದಲೇ ಇರುತ್ತವೆಂದು ಸಮರ್ಥಿಸುತ್ತಿವೆ. ಮತ್ತು 'ಆಸಮಂತಾತ್ ಕಾಶತೇ ಯದಾಕಾಶಃ' ಎಂಬ ಸ್ಮೃತಿಯು ಪರಮಾತ್ಮನಲ್ಲಿ ಯೋಗಾರ್ಥವನ್ನು ಹೇಳುವ ಮೂಲಕ, ಆಕಾಶಶಬ್ದವನ್ನು ಸಮನ್ವಯ ಮಾಡುತ್ತಿದೆ. ಶಾಂಕರಭಾಷ್ಯದಲ್ಲಿಯೂ ಕೂಡ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಗೆ ಯೌಗಿಕಾರ್ಥವನ್ನು ಸಮರ್ಥಿಸಿದ್ದಾರೆ. 'ಅಂತರ್ಯಾಮಿ', 'ಭೂಮಾ' ಮೊದಲಾದ ಶಬ್ದಗಳಿಗಂತೂ ಯೌಗಿಕಾರ್ಥವನ್ನು ಒಪ್ಪುವುದು ಅನಿವಾರ್ಯ. ಬೇರೆ ಅರ್ಥವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಪ್ರತಿಯೊಂದು ಶಬ್ದಗಳೂ ಪರಮಾತ್ಮನಲ್ಲಿ ಯೋಗವೃತ್ತಿಯಿಂದ ಮುಖ್ಯವಾಗಿವೆ ಎಂದು ಹೇಳಬೇಕು. ಭಾಷ್ಯಕಾರರು ಪ್ರತಿಯೊಂದು ಅಧಿಕರಣಗಳಲ್ಲಿಯೂ ಶಬ್ದಗಳನ್ನು ಸಮನ್ವಯ ಮಾಡುವಾಗ ಅನೇಕ ಶ್ರುತಿ-ಸ್ಮೃತಿ, ಪುರಾಣಗಳ ಆಧಾರವನ್ನು ನೀಡಿ, ಆಯಾ ಶಬ್ದಗಳಿಗೆ ಯೋಗವೃತ್ತಿಯನ್ನು ಸಮರ್ಥಿಸುತ್ತಾರೆ. ಇಷ್ಟೆಲ್ಲಾ ಪ್ರಮಾಣಗಳಿರುವುದರಿಂದ ಮತ್ತು ಅನಂತಗುಣಪರಿಪೂರ್ಣತ್ವವು ಸಿದ್ಧಿಸಬೇಕೆಂಬ ಮಹಾಪ್ರಯೋಜನವು ಇರುವುದರಿಂದಲೂ ಅದ್ವೈತಿಗಳ ತಿಳುವಳಿಕೆ ಅಯುಕ್ತವಾಗಿದೆ.

## ಸಮನ್ವಯ ವಿಷಯದಲ್ಲಿ ರಾಮಾನುಜಮತ ನಿರಾಕರಣೆ

ಶರೀರವಾಚಕವಾದ ಶಬ್ದಗಳೇ, ಶರೀರಿಯನ್ನು ಹೇಳುತ್ತವೆಂಬುದು ಲೋಕದಲ್ಲಿ ಕಂಡಿದೆ. 'ದೇವತೆಯು ಮಾತನಾಡಿದನು' 'ಮನುಷ್ಯನು ಬಂದನು' ಹೀಗೆಲ್ಲಾ ಪ್ರಯೋಗಿಸುವಾಗ ದೇವ, ಮನುಷ್ಯ ಮೊದಲಾದ ಶಬ್ದಗಳು ಶರೀರವನ್ನೇ ಹೇಳುತ್ತವಾದರೂ, ಕ್ರಿಯೆಗೆ ಆಶ್ರಯನಾದವನು ಚೇತನನಾದ್ದರಿಂದ ಶರೀರಿಯಲ್ಲಿ ಪ್ರಯೋಗಿಸಲಾಗುತ್ತದೆ. ಅದರಂತೆ ಜಗತ್ತಿನಲ್ಲಿರುವ ಸಕಲ ಪದಾರ್ಥಗಳು ಬ್ರಹ್ಮನ ಶರೀರವೇ ಆಗಿವೆ. ಇವುಗಳೆಲ್ಲವೂ ಶರೀರಿಯಾದ ಬ್ರಹ್ಮನಲ್ಲೇ ಪರ್ಯವಸಾನವಾಗುತ್ತವೆ. ಇದನ್ನು ಸಮರ್ಥಿಸುವುದೇ ಸಮನ್ವಯಾಧ್ಯಾಯದ ಮುಖ್ಯ ಉದ್ದೇಶ.

ರಾಮಾನುಜರ ಈ ಧೋರಣೆ ಸರಿಯಿಲ್ಲ. ಭಾಟ್ಟರು ವ್ಯಕ್ತಿಯಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿ, ಜಾತಿಯಲ್ಲಿ ಶಕ್ತಿವೃತ್ತಿಯನ್ನು ಒಪ್ಪುತ್ತಾರೆ. ಅದರಂತೆ ರಾಮಾನುಜರೂ ಕೂಡ ಹೇಳಿದರೆ ಅಪಸಿದ್ಧಾಂತ ಬರುತ್ತದೆ. ಇನ್ನು ಪ್ರಾಭಾಕರರು ಜಾತಿಯಲ್ಲಿ ಶಕ್ತಿ ಇದ್ದರೂ ವ್ಯಕ್ತಿಯ ಜ್ಞಾನವೂ ಕೂಡ ಬರುತ್ತದೆ ಎನ್ನುತ್ತಾರೆ. ತುಲ್ಯವೃತ್ತಿವೇದ್ಯತಯಾ ಜಾತಿಜ್ಞಾನ  ಬರುವಾಗಲೇ ವ್ಯಕ್ತಿಜ್ಞಾನ ಬರುತ್ತದೆಂಬುದೇ ಇವರ ಅಭಿಪ್ರಾಯ. ಅದರಂತೆ ಬ್ರಹ್ಮಘಟಿತಮೂರ್ತಿಕವಾದ ಪದಾರ್ಥಗಳನ್ನು ಬೋಧಿಸುವ ಶಬ್ದಗಳು ಬ್ರಹ್ಮನನ್ನೂ ಕೂಡ ಬೋಧಿಸುತ್ತವೆ ಎಂದು ಹೇಳಬೇಕು. ಇದೂ ಕೂಡ ಸರಿಯಿಲ್ಲ. ಏಕೆಂದರೆ ಸಕಲಪದಾರ್ಥಗಳು ಬ್ರಹ್ಮಪರತಂತ್ರಸ್ವಭಾವಭೂತವಾಗಿವೆಯೆಂದು ಹೇಳುತ್ತಿದ್ದೀರಿ. 'ಬ್ರಹ್ಮಪರತಂತ್ರ ಸ್ವಭಾವ' ಎಂದರೆ 'ತತ್ ಸಂಘಟಿತತಯೈವ ಪ್ರತೀತಿಯೋಗ್ಯತ್ವ' ಎಂದರ್ಥ. ಆದರೆ ವೃಶ್ಚಿಕ, ವಾಯು ಮೊದಲಾದ ಶಬ್ದಗಳನ್ನು ಕೇಳಿದಾಗ, ಅವುಗಳಿಗೆ ಉಪಾದಾನಕಾರಣವಾದ ಗೋಮಯ, ಆಕಾಶ ಮೊದಲಾದವುಗಳ ಜ್ಞಾನ ಬರುವುದು ಕಂಡಿಲ್ಲ. ಆದ್ದರಿಂದ ತದುಪಾದಾನಕತ್ವವನ್ನು ಬ್ರಹ್ಮಪರತಂತ್ರಸ್ವಭಾವವೆಂದು ಹೇಳಲಾಗದು. ಅದರಂತೆ ಗಂಧ ಮೊದಲಾದ ಶಬ್ದಗಳನ್ನು ಕೇಳುವುದರಿಂದ, ಗಂಧಾದಿಗಳಿಗೆ ಆಶ್ರಯವಾದ ಪ್ರತಿವಾದಿಗಳ ಜ್ಞಾನ ಬರುವುದು ಕಂಡಿಲ್ಲ. ಆದ್ದರಿಂದ ತದಾಶ್ರಿತತ್ವವನ್ನು ಬ್ರಹ್ಮಪರತಂತ್ರಸ್ವಭಾವವೆಂದು ಹೇಳಲಾಗದು. ಹೊರತಾಗಿ 'ತತ್‌ಸಂಘಟಿತತಯೈವ ಪ್ರತೀತಿಯೋಗ್ಯತ್ವಮ್' ಎಂದು ಹೇಳಬೇಕು. ಹೀಗೆ ಹೇಳಿದರೆ ಗವಾದಿಶಬ್ದಗಳಿಂದ ಗೋ ಮೊದಲಾದ ವ್ಯಕ್ತಿಗಳಿಂದ ಘಟಿತವಾದ ಜಾತಿಯ ಜ್ಞಾನ ಬರುವಂತೆ ಘಟಾದಿ ಶಬ್ದಗಳಿಂದ ಬ್ರಹ್ಮಘಟಿತವಾದ ಘಟಾದಿಗಳ ಜ್ಞಾನ ಬರುತ್ತದೆಂಬುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ವೇದದಲ್ಲಿಯೂ ಕೂಡ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ವಾಕ್ಯವನ್ನು ಕೇಳಿದಾಗ ಬ್ರಹ್ಮನ ಜ್ಞಾನವಷ್ಟೇ ಬರುತ್ತಿದೆ. ಆದ್ದರಿಂದ ಲೋಕದಲ್ಲಿ ಎಲ್ಲಿಯೂ ಕೂಡ ಆಕಾಶಾದಿ ಶಬ್ದಗಳಿಂದ ಬ್ರಹ್ಮಘಟಿತವಾದ ಆಕಾಶಾದಿಗಳ ಜ್ಞಾನ ಬರುವುದು ಕಂಡಿಲ್ಲ. ಆದ್ದರಿಂದ ರಾಮಾನುಜರ ಸಮರ್ಥನೆ ಅಸಾಧುವಾಗಿದೆ.

## ರಾಮಾನುಜಮತದ ಸಂಪೂರ್ಣ ನಿರಾಕರಣೆ

ಪ್ರತಿಯೊಂದು ಶಬ್ದಗಳಿಂದಲೂ ವಿಶಿಷ್ಟನಾದ ಬ್ರಹ್ಮನೇ ಪ್ರತಿಪಾದ್ಯನೆನ್ನುವುದಾದಲ್ಲಿ 'ಅಹಂ ಬ್ರಹ್ಮಾಸ್ಮಿ', 'ತತ್ತ್ವಮಸಿ' ಎಂಬ ಶ್ರುತಿಯಲ್ಲಿಯೂ ಅಹಮರ್ಥಾದಿವಿಶಿಷ್ಟನಾದ ಬ್ರಹ್ಮನೇ

ಪ್ರತಿಪಾದ್ಯನಾಗುತ್ತಾನೆನ್ನಬೇಕು. ಆವಾಗ ಸ್ವತಃ ಪರಮಾತ್ಮನೇ ಹೇಳಿಕೊಳ್ಳುವ 'ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯಲ್ಲಿರುವ 'ಅಹಂ' ಶಬ್ದಕ್ಕೂ ಅಹಮರ್ಥವಿಶಿಷ್ಟನಾದ ಬ್ರಹ್ಮನೇ ಅರ್ಥವೆನ್ನಬೇಕು. ಇದೂ ಕೂಡುವುದಿಲ್ಲ. ಆದಕ್ಕಾಗಿ ನೀವು ಈ ಶ್ರುತಿಯಲ್ಲಿರುವ 'ಅಹಂ' ಶಬ್ದಕ್ಕೆ ಲಕ್ಷಣಾ ಮಾಡಬೇಕು. ಹೀಗೆ ಎಲ್ಲೆಡೆಯೂ ಅಹಮರ್ಥಾದಿವಿಶಿಷ್ಟನಾದ ಬ್ರಹ್ಮನಲ್ಲಿ ಮುಖ್ಯಾರ್ಥತ್ವವನ್ನು ಹೇಳಿ, ಅಹಮಾದ್ಯರ್ಥಗಳಲ್ಲಿ ಲಕ್ಷಣಾ ಮಾಡುವುದಕ್ಕಿಂತ ವಿಪರೀತವಾಗಿ ಲೋಕ ಹಾಗೂ ವೇದಗಳಲ್ಲಿರುವ 'ಅಹಂ' ಶಬ್ದಕ್ಕೆಲ್ಲಾ ಅಹಮರ್ಥನಲ್ಲಿಯೇ ಮುಖ್ಯಾರ್ಥತ್ವವನ್ನು ಒಪ್ಪಿ, ಕೆಲವೆಡೆ ಅಹಮರ್ಥವಿಶಿಷ್ಟನಲ್ಲಿ ಲಕ್ಷಣಾ ಮಾಡುವುದೇ ಲೇಸು.

ಇನ್ನು ದೇವ, ಮನುಷ್ಯ ಮೊದಲಾದ ಶಬ್ದಗಳು ಕೇವಲ ಶರೀರವನ್ನು ಪ್ರತಿಪಾದನೆ ಮಾಡುವುದೇ ಇಲ್ಲ. ಶರೀರವಿಶಿಷ್ಟನಾದ ಆತ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಕೇವಲ ದೇಹವನ್ನಾಗಲೀ, ಕೇವಲ ಚೇತನನ್ನಾಗಲೀ, ದೇವ, ಮನುಷ್ಯ ಮೊದಲಾದ ಶಬ್ದಗಳಿಂದ ಯಾರೂ ಪ್ರಯೋಗ ಮಾಡುವುದಿಲ್ಲ. ಆದ್ದರಿಂದ ದೇವ, ಮನುಷ್ಯಾದಿ ಶಬ್ದಗಳಂತೆ ಪ್ರತಿಯೊಂದು ಶಬ್ದಗಳೂ ಕೂಡ ವಿಶಿಷ್ಟನನ್ನೇ ಪ್ರತಿಪಾದನೆ ಮಾಡುತ್ತವೆ ಎಂದು ನೀವು ದೃಷ್ಟಾಂತ ಹೇಳಿದ್ದು ವಿಷಮವಾಗಿದೆ.

ಮತ್ತು ಪ್ರಾಕೃತವಾದ ಪದಾರ್ಥಗಳನ್ನು ರಾಮಾನುಜರು ಈಶ್ವರನ ಶರೀರವೆನ್ನುತ್ತಾರೆ. 'ನೈವ ಪ್ರಕೃತಿಜಾಃ ಕ್ವಚಿತ್' ಇವೇ ಮೊದಲಾದ ಸ್ಮೃತಿಗಳಿಂದ 'ಅಶರೀರಃ ಪ್ರಜ್ಞಾತ್ಮಾ' ಮೊದಲಾದ ಶ್ರುತಿಗಳಿಂದ ಈಶ್ವರನಿಗೆ ಪ್ರಾಕೃತ ಪದಾರ್ಥಗಳ ಸಂಪರ್ಕವೇ ಇಲ್ಲವೆಂದು ಸ್ಪಷ್ಟವಾಗುತ್ತಿದೆ. ಕೆಲವೆಡೆ ಶ್ರುತಿಯಲ್ಲಿ ಪೃಥಿವ್ಯಾದಿಗಳನ್ನು ಈಶ್ವರನ ಶರೀರವೆಂದು ಹೇಳಿರಬಹುದು. ಆದರೆ ಅಲ್ಲಿರುವ ಪೃಥಿವೀ ಮೊದಲಾದ ಶಬ್ದಗಳಿಗೆ ಪ್ರಾಕೃತವಾದ ಪದಾರ್ಥಗಳು ಪ್ರತಿಪಾದ್ಯವಲ್ಲ. ಹೊರತಾಗಿ ಪೃಥಿವ್ಯಾದ್ಯಭಿಮಾನಿದೇವತೆಗಳು ಈಶ್ವರನ ಅಧೀನವಾಗಿರುವುದರಿಂದ ಅವನ ಶರೀರವೆನಿಸಿಕೊಳ್ಳುತ್ತಾರೆ. ಆದ್ದರಿಂದ ರಾಮಾನುಜರು ಸಕಲ ಪದಾರ್ಥಗಳು ಈಶ್ವರನ ಶರೀರವಾಗಿದೆ ಎಂದು ಹೇಳುವುದು ಅತ್ಯಂತ ಅಸಾಧುವಾಗಿದೆ.

ಇಲ್ಲಿಗೆ ಸಮನ್ವಯಾಧ್ಯಾಯವು ಮುಗಿಯಿತು.

# ಎರಡನೆಯ ಅಧ್ಯಾಯ - ಪ್ರಥಮಪಾದ
# ಸ್ಮೃತ್ಯಧಿಕರಣ

### ಅಧ್ಯಾಯಸಂಗತಿ ಹಾಗೂ ಪಾದಭೇದ ವಿಚಾರ

ವೇದದಲ್ಲಿರುವ ಸಮಗ್ರ ಶಬ್ದಗಳು ಮಹಾವಿಷ್ಣುವಿನಲ್ಲಿಯೇ ಸಮನ್ವಯವಾಗುತ್ತವೆ. ಆದ್ದರಿಂದ ಅವನೇ ಜಗಜ್ಜನ್ಮಾದಿಕರ್ತೃವಾಗಿದ್ದಾನೆ. ಆದ್ದರಿಂದಲೇ ಸಕಲಗುಣಪರಿಪೂರ್ಣನಾಗಿದ್ದಾನೆ ಎಂಬುದಾಗಿ ಪ್ರಥಮಾಧ್ಯಾಯದಲ್ಲಿ ಸಾಧಿಸಲಾಯಿತು. ಈ ಸಮರ್ಥನೆಯ ಮೇಲೆ ಅನೇಕ ಬಗೆಯ ವಿರೋಧಗಳು ಎದುರಾಗುತ್ತವೆ. ಆ ಎಲ್ಲಾ ಬಗೆಯ ವಿರೋಧಗಳನ್ನು ಪರಿಹರಿಸುವುದಕ್ಕಾಗಿಯೇ ಎರಡನೆಯ ಅಧ್ಯಾಯವು ಪ್ರಾರಂಭವಾಗುತ್ತಿದೆ. ಆದ್ದರಿಂದಲೇ ಇದನ್ನು 'ಅವಿರೋಧಾಧ್ಯಾಯ' ಎಂದು ಕರೆಯುತ್ತಾರೆ. ಎರಡನೆಯ ಅಧ್ಯಾಯಕ್ಕೆ ಪ್ರಥಮಾಧ್ಯಾಯದಿಂದ ಎರಡು ಬಗೆಯ ಸಂಗತಿಗಳನ್ನು ತಿಳಿಯಬಹುದು. ಈ ಅಧ್ಯಾಯದಲ್ಲಿ ವಿರೋಧದ ಪರಿಹಾರವನ್ನು ಮಾಡುತ್ತಿದ್ದಾರೆ. ಯಾವುದರ ವಿರೋಧ ? ಎಂಬ ಪ್ರಶ್ನೆಯು ಬಂದರೆ ಸಮನ್ವಯ ವಿಷಯದಲ್ಲಿ ಬರುವಂತಹ ವಿರೋಧದ ಪರಿಹಾರವೆಂದು ಉತ್ತರಿಸಬೇಕು. ಆದ್ದರಿಂದ ಮೊದಲನೆಯ ಅಧ್ಯಾಯದಲ್ಲಿ ಮಾಡಿದ ಸಮನ್ವಯವೇ ಹೇತುವಾಗುತ್ತದೆ. ಈ ಅಧ್ಯಾಯದಲ್ಲಿ ಸಮರ್ಥಿಸುತ್ತಿರುವ ಅವಿರೋಧವು ಹೇತುಮತ್ ಆಗುತ್ತದೆ. ಆದ್ದರಿಂದ ಹೇತುಹೇತುಮದ್ಭಾವ ಸಂಗತಿಯನ್ನು ತಿಳಿಯಬಹುದು.

ಅಥವಾ ಎಲ್ಲಾ ಬಗೆಯ ವಿರೋಧವನ್ನು ಪರಿಹರಿಸಿದ ಮೇಲೆ ಪ್ರಥಮಾಧ್ಯಾಯದ ಸಮನ್ವಯವು ಸ್ಥಿರವಾಗುತ್ತದೆ. ಆವಾಗ ಅವಿರೋಧವೇ ಹೇತುವಾಗುತ್ತದೆ. ಸಮನ್ವಯವು ಹೇತುಮತ್ತಾಗುತ್ತದೆ. ಹೀಗೂ ಹೇತುಹೇತುಮದ್ಭಾವ ಸಂಗತಿಯನ್ನು ತಿಳಿಯಬಹುದು. ಏನೇ ಆಗಲಿ. ಸಮನ್ವಯ ವಿಷಯದಲ್ಲಿ ಮಾಡುತ್ತಿರುವ ಆಕ್ಷೇಪಕ್ಕೆ ಸಮಾಧಾನ ನೀಡಲು ಎರಡನೆಯ ಅಧ್ಯಾಯವು ಹೊರಟಿದೆ. ಆದ್ದರಿಂದ ಪ್ರಥಮಾಧ್ಯಾಯದ ಆನಂತರ್ಯವು ಇದಕ್ಕೆ ಯುಕ್ತವಾಗುತ್ತದೆ.

ಯುಕ್ತಿಭಿಃ ಸಮಯೈಃ ಶುದ್ಧವೇದೈರ್ಯುಕ್ತ್ಯುಪಬೃಂಹಿತೈಃ ।
ವೇದೈಶ್ಚಾಪ್ಯವಿರೋಧೋಽತ್ರ ಕ್ರಮಾತ್ಪಾದೇಷು ಕೀರ್ತ್ಯತೇ ॥೧॥

೧. ಯುಕ್ತಿಗಳ ವಿರೋಧಪರಿಹಾರ, ೨. ಸಮಯಗಳ ವಿರೋಧಪರಿಹಾರ, ೩. ಕೇವಲ ಶ್ರುತಿಗಳ ವಿರೋಧಪರಿಹಾರ, ೪. ಯುಕ್ತಿಸಹಿತವಾದ ಶ್ರುತಿಗಳ ವಿರೋಧಪರಿಹಾರ. ಈ ನಾಕು ಬಗೆಯ ವಿರೋಧ ಪರಿಹಾರವನ್ನು ಕ್ರಮವಾಗಿ ನಾಕು ಪಾದಗಳಲ್ಲಿ ಸೂತ್ರಕಾರರು ಮಾಡುತ್ತಿದ್ದಾರೆ.

ಮೂರನೆಯ ಪಾದದಲ್ಲಿ ಕೆಲವು ಶ್ರುತಿಗಳು ಸ್ವತಂತ್ರವಾದ ಯುಕ್ತಿಗಳಿಂದ ಕೂಡಿರುತ್ತದೆ. ನಾಲ್ಕನೆಯ ಪಾದವು ಶ್ರುತಿಗಳಲ್ಲಿಯೇ ಸೇರಿರುವ ಯುಕ್ತಿಗಳಿಂದ ಬಲಿಷ್ಠವಾಗಿರುತ್ತವೆ. ಕೇವಲ ಯುಕ್ತಿಗಳು ಶ್ರುತಿಯಲ್ಲಿ ಹೇಳಲ್ಪಟ್ಟ ಯುಕ್ತಿಗಳಿಗಿಂತ ದುರ್ಬಲವಾದ ಕಾರಣ ಮೂರು ಹಾಗೂ ನಾಕನೆಯ ಪಾದಗಳಲ್ಲಿ ಅವಾಂತರಭೇದವಿರುತ್ತದೆ.

## ಎರಡನೆಯ ಅಧ್ಯಾಯದ ನಾಕು ಪಾದಗಳಲ್ಲಿರುವ ತಾರತಮ್ಯಕ್ಕೆ ನಾಕು ಕಾರಣಗಳು

ಎರಡನೆಯ ಅಧ್ಯಾಯದಲ್ಲಿ ನಾಕು ಬಗೆಯ ವಿರೋಧಗಳನ್ನು ಪರಿಹರಿಸುತ್ತಿದ್ದಾರೆಂದು ತಿಳಿಯಿತು. ಮೊದಲು ಯುಕ್ತಿವಿರೋಧವನ್ನು ಪರಿಹರಿಸಿ ಅನಂತರ ಸಮಯವಿರೋಧವನ್ನೇ ಏಕೆ ಪರಿಹರಿಸಬೇಕು? ಅನಂತರವೇ ಶ್ರುತಿವಿರೋಧವನ್ನು, ತದನಂತರ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಲು ಏನು ಕಾರಣ? ವಿಪರೀತವಾಗಿ ಏಕೆ ಪಾದಗಳ ವಿನ್ಯಾಸವಿರಬಾರದು ? ಈ ಜಿಜ್ಞಾಸೆಗೆ ನಾಕು ಬಗೆಯಲ್ಲಿ ಉತ್ತರವನ್ನು ತಿಳಿಯಬಹುದು-

ಪದಾತ್ಯಾದಿಷು ಭಂಗೇಷು ಗಜಾಶ್ವಾದಿಪ್ರವೃತ್ತಿವತ್ ।
ಯುಕ್ತ್ಯಾದಿಷು ನಿರಸ್ತೇಷು ಸಮಯಾದಿಪ್ರವೃತ್ತಿತಃ ॥೧॥

ಮಹಾಯುದ್ಧದಲ್ಲಿ ಮೊದಲು ಸೈನಿಕರು ಸತ್ತ ಮೇಲೆ ಆನೆ, ಕುದುರೆ ಮೊದಲಾದವುಗಳು ಪ್ರವೃತ್ತಿ ಮಾಡುತ್ತವೆ. ಕಡಿಮೆ ಶಕ್ತಿಯಿರುವವರು ಮೊದಲು ಯುದ್ಧ ಮಾಡಿ, ಹೆಚ್ಚಿನ ಶಕ್ತಿಯಿರುವವರು ಅನಂತರ ಯುದ್ಧಕ್ಕೆ ಬರುತ್ತಾರೆ. ಅದೇ ರೀತಿಯಲ್ಲಿ ದುರ್ಬಲವಾದ ಯುಕ್ತಿ ಮೊದಲಾದವುಗಳನ್ನು ಮೊದಲು ನಿರಾಕರಣೆ ಮಾಡಿದ ಮೇಲೆ ಹೆಚ್ಚು ಬಲಿಷ್ಠವಾದ ಸಮಯ, ಶ್ರುತಿ ಇವುಗಳ ವಿರೋಧವು ಪ್ರವೃತ್ತವಾಗುತ್ತವೆ. ಅತ್ಯಂತ ದುರ್ಬಲವಾದ ಅನುಮಾನವಿರೋಧವು ಮೊದಲು ನಿರಸ್ತವಾಗುತ್ತದೆ. ಅದಕ್ಕಿಂತ ಹೆಚ್ಚು ಪ್ರಬಲವಾದ ಸಮಯವಿರೋಧವು ಅನಂತರ ಪ್ರಾಪ್ತವಾಗುತ್ತದೆ. ಅದಕ್ಕಿಂತಲೂ ಹೆಚ್ಚು ಬಲಿಷ್ಠವಾದ ಶ್ರುತಿವಿರೋಧವು ತದನಂತರ ಪ್ರಸಕ್ತವಾಗುತ್ತದೆ. ಈ ಎಲ್ಲದಕ್ಕಿಂತ ಅತ್ಯಂತ ಬಲಶಾಲಿಯಾದ ಯುಕ್ತಿಸಹಿತವಾದ ಶ್ರುತಿವಿರೋಧವು ಕೊನೆಯಲ್ಲಿ ಪ್ರಾಪ್ತವಾಗುತ್ತದೆ. ಸೋಪಾನಾರೋಹಣ ಕ್ರಮದಿಂದಲೇ ದುರ್ಬಲವಾದ ವಿರೋಧಗಳನ್ನು ಮೊದಲು ಪರಿಹರಿಸಿ, ಬಲಿಷ್ಠವಾದ ವಿರೋಧವನ್ನು ಅನಂತರ ಪರಿಹರಿಸಿದ್ದಾರೆ.

ಮತ್ತೊಂದು ಬಗೆಯಲ್ಲಿಯೂ ಪಾದಕ್ರಮದ ವಿನ್ಯಾಸದ ಸ್ವಾರಸ್ಯವನ್ನು ತಿಳಿಯಬಹುದು -

ಬಹಿರಂಗೈರ್ವಿರೋಧೋ ಹಿ ಝಟಿತ್ಯೇವ ಪ್ರತೀಯತೇ ।
ಅಂತರಂಗೈಃ ಸ್ವಗೌತ್ರೈಸ್ತು ವಿಲಂಬೇನ ಪ್ರತೀಯತೇ ॥೧॥

ನಮ್ಮ ಜೀವನದಲ್ಲಿ ಬೇರೆಯವರು ವಿರೋಧ ಮಾಡಿದರೆ ಕೂಡಲೇ ತಿಳಿಯುತ್ತದೆ. ಆದರೆ ನಮ್ಮ ಗೋತ್ರದವರೇ ಆದ ಮನೆಮಂದಿಯೇ ವಿರೋಧ ಮಾಡಿದರೆ ಕೂಡಲೇ ತಿಳಿಯುವುದಿಲ್ಲ. ವಿಳಂಬವಾಗಿ

ಅರ್ಥವಾಗುತ್ತದೆ. ಹೀಗೆ - ಬಹಿರಂಗವಿರೋಧಕ್ಕಿಂತ ಅಂತರಂಗವಿರೋಧವು ಬಲಿಷ್ಠವಾಗಿದೆ. ಅನುಮಾನವು ಶಬ್ದಕ್ಕಿಂತ ಬರ್ಹಿರ್ಭೂತವಾದ್ದರಿಂದ ಬಹಿರಂಗವಾಗಿದೆ. ಅತ್ಯಂತ ಬಹಿರಂಗವಾದ ಅನುಮಾನದಲ್ಲಿ ಯಾವುದೇ ಪ್ರಾಬಲ್ಯವಿರುವುದಿಲ್ಲ. ಆದ್ದರಿಂದ ಮೊದಲು ಇದರ ವಿರೋಧವನ್ನು ಪರಿಹರಿಸಿದ್ದಾರೆ. ಅನಂತರ ಸಮಯಗಳು ಶಬ್ದದಲ್ಲಿಯೇ ಸೇರುತ್ತವೆ. ಆದರೆ ಅಪೌರುಷೇಯವಲ್ಲದ ಕಾರಣ ಒಂದು ರೀತಿಯಲ್ಲಿ ಬಹಿರಂಗವೇ ಆಗುತ್ತದೆ. ಆದ್ದರಿಂದ ಅನುಮಾನವನ್ನು ನಿರಾಕರಣೆ ಮಾಡಿದ ಮೇಲೆ ಸಮಯಗಳ ವಿರೋಧವನ್ನು ಪರಿಹರಿಸಿದ್ದಾರೆ. ಕೇವಲ ಶ್ರುತಿಗಳು ಶಬ್ದಪ್ರಮಾಣದಲ್ಲಿ ಸೇರುವುದರಿಂದ ಅಂತರಂಗವಾಗಿವೆ. ಆದರೂ ಕೂಡ ಯಾವುದೇ ಯುಕ್ತಿಗಳ ಬೆಂಬಲವಿಲ್ಲದ ಕಾರಣ ಅಂತರಂಗವಾಗಿದ್ದರೂ ಕೂಡ ದುರ್ಬಲವೇ ಆಗಿವೆ. ಸಮಯಗಳಿಗಿಂತಲೂ ಹೆಚ್ಚು ಬಲಿಷ್ಠವಾದ್ದರಿಂದ ಮೂರನೆಯ ಪಾದದಲ್ಲಿ ಶ್ರುತಿವಿರೋಧವನ್ನು ಪರಿಹರಿಸಿದ್ದಾರೆ. ಕೇವಲ ಶ್ರುತಿಗಳಿಗಿಂತಲೂ ಯುಕ್ತಿಸಹಿತವಾದ ಶ್ರುತಿಗಳು ಇನ್ನೂ ಹೆಚ್ಚು ಬಲಿಷ್ಠವಾದ್ದರಿಂದ ನಾಕನೆಯ ಪಾದದಲ್ಲಿ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಿದ್ದಾರೆ. ಹೀಗೆ ಬಹಿರಂಗವಿರೋಧದ ಅನಂತರವೇ ಬಲಿಷ್ಠವಾದ ಅಂತರಂಗವಿರೋಧವನ್ನು ಪರಿಹರಿಸುವ ಉದ್ದೇಶದಿಂದ ಪಾದಗಳ ವಿನ್ಯಾಸಕ್ರಮವು ಇರುತ್ತದೆ.

ಅಥವಾ ಯುಕ್ತಿಗಳನ್ನು ಅತ್ಯಂತ ದುರ್ಬಲವೆಂದು, ಅಥವಾ ಯುಕ್ತಿಗಳೇ ಹೆಚ್ಚು ಬಲಿಷ್ಠವೆಂದೂ ಕೂಡ ತಿಳಿಯಬಹುದು. ಕಾರಣವೇನೆಂದರೆ ಎಲ್ಲಾ ವಿರೋಧಗಳೂ ಕೂಡ ಯುಕ್ತಿ ಮೂಲಕವೇ ಆಗಿರುತ್ತವೆ. ಬ್ರಹ್ಮಮೀಮಾಂಸಾಶಾಸ್ತ್ರವೂ ಕೂಡ ಯುಕ್ತಿಯ ಮೂಲಕವೇ ಹೊರಟರುತ್ತದೆ. ಸಮಯಗಳೂ ಕೂಡ ಯುಕ್ತಿಮೂಲಕವೇ ಆಗಿದೆ. ಶ್ರುತಿಗಳೂ ಕೂಡ ಯುಕ್ತಿಮೂಲಕವೇ ಆಗಿವೆ. ಆದ್ದರಿಂದ ಎಲ್ಲವೂ ಕೂಡ ಯುಕ್ತಿಯನ್ನೇ ಆಶ್ರಯಿಸಿರುವುದರಿಂದ ಯುಕ್ತಿಯು ಅತ್ಯಂತ ಬಲಿಷ್ಠ. ಮತ್ತು ಈ ಯುಕ್ತಿಯಿಂದ ಸಮಗ್ರ ವೇದವನ್ನೇ ಅಪ್ರಮಾಣವೆಂದು ಸಾಧಿಸಲು ಬರುತ್ತದೆ. 'ವೇದಃ ಅಪ್ರಮಾಣಂ ಆಪ್ತ-ಅಪ್ರಣೀತತ್ವಾತ್' ಎಂಬ ಒಂದೇ ಯುಕ್ತಿಯಿಂದ ಸಮಗ್ರ ವೇದಕ್ಕೆ ಅಪ್ರಾಮಾಣ್ಯ ಬರುತ್ತದ. ಅಷ್ಟೇ ಅಲ್ಲದೇ ಎಲ್ಲಾ ದಾರ್ಶನಿಕರೂ ಕೂಡ ಯುಕ್ತಿಯನ್ನು ಪ್ರಮಾಣವೆಂದು ಒಪ್ಪಿರುತ್ತಾರೆ. ಆದ್ದರಿಂದ ಸಮಯವಿರೋಧಕ್ಕಿಂತಲೂ ಯುಕ್ತಿವಿರೋಧವು ಹೆಚ್ಚು ಬಲಿಷ್ಠ. ಅತ್ಯಂತ ಬಲಿಷ್ಠವಾದ ಯುಕ್ತಿವಿರೋಧವನ್ನು ಪ್ರಥಮಪಾದದಲ್ಲಿ ನಿರಾಕರಣೆ ಮಾಡುವುದು ಹೆಚ್ಚು ಸೂಕ್ತ. ಅನಂತರ ಸಮಯವಿರೋಧವೂ ಪ್ರಸಕ್ತವಾಗುತ್ತದೆ. ಏಕೆಂದರೆ ವೇದವು ಅಪೌರುಷೇಯವಾದ್ದರಿಂದ ಆಪ್ತಪ್ರಣೀತವಲ್ಲದ ಕಾರಣ ಪ್ರಾಮಾಣ್ಯವನ್ನು ಸುಲಭವಾಗಿ ಸಮರ್ಥಿಸಲು ಬರುವುದಿಲ್ಲ. ಆದರೆ ಎಲ್ಲಾ ಸಮಯಿಗಳು ರಚನೆ ಮಾಡಿರುವ ಶಾಸ್ತ್ರಗಳು ಅಪ್ತೋಕ್ತವಾದ್ದರಿಂದ ಪ್ರಮಾಣವಾಗುತ್ತದೆ. ಮತ್ತು ಬಹುಜನಪರಿಗೃಹೀತವಾಗಿಯೂ ಅನಾದಿಕಾಲದಿಂದ ಅವಿಚ್ಛಿನ್ನಪರಂಪರೆಯಿಂದಲೂ ಬಂದಿರುತ್ತವೆ. ಮತ್ತು ಶ್ರುತಿಗಳಲ್ಲಿ ತೋರುವ ವಿರೋಧವು ಕೇವಲ ಆಪಾತತಃ ಭಾಸವಾಗುತ್ತದೆ ಹೊರತು, ಸ್ಪಷ್ಟವಾಗಿ ವಿರೋಧವು ಕಾಣಸುವುದಿಲ್ಲ. ಆದರೆ ಸಮಯಗಳ ವಿರೋಧವು ಅತ್ಯಂತ ಸ್ಪಷ್ಟವಾಗಿರುವುದರಿಂದ ಶ್ರುತಿವಿರೋಧಕ್ಕಿಂತಲೂ ಸಮಯವಿರೋಧವು ಹೆಚ್ಚು ಬಲಿಷ್ಠವಾಗಿರುತ್ತದೆ. ಆದ್ದರಿಂದ ಶ್ರುತಿವಿರೋಧಕ್ಕಿಂತ ಮೊದಲು ಎರಡನೆಯ ಪಾದದಲ್ಲಿ

ಸಮಯವಿರೋಧವನ್ನು ಪರಿಹರಿಸಿದ್ದಾರೆ. ಅನಂತರ ಶ್ರುತಿವಿರೋಧವನ್ನು ಮೂರನೆಯ ಪಾದದಲ್ಲಿ ಪರಿಹರಿಸಿದ್ದಾರೆ. ಹೀಗೆ ಮಹಾಮಲ್ಲಭಂಗನ್ಯಾಯದಿಂದ ಪಾದಕ್ರಮವನ್ನು ತಿಳಿಯಬೇಕು. ನಾಕನೆಯ ಪಾದವನ್ನು ಬಿಟ್ಟು, ಉಳಿದ ಮೂರು ಪಾದಗಳಲ್ಲಷ್ಟೇ ಈ ಮಹಾಮಲ್ಲಭಂಗನ್ಯಾಯವನ್ನು ವಿವಕ್ಷಿಸಬೇಕು. ಏಕೆಂದರೆ ನಾಕನೆಯ ಪಾದವು ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಇವೆಲ್ಲದಕ್ಕಿಂತಲೂ ಶ್ರೇಷ್ಠವಾಗಿದೆ. ಮತ್ತು ಮುಮುಕ್ಷು ಆದವನು ಅಂತಿಮವಾಗಿ ತಿಳಿಯಬೇಕಾದ ಅಧ್ಯಾತ್ಮವಿಷಯದಲ್ಲಿ ಪ್ರವೃತ್ತವಾಗುವುದರಿಂದ ಕೊನೆಯಲ್ಲಿಯೇ ಅದು ಪ್ರಸಕ್ತವಾಗುತ್ತದೆ.

ಅಥವಾ ಸೋಪಾನಾರೋಹಣಕ್ರಮನ್ಯಾಯದಿಂದಲಾಗಲೀ, ಮಹಾಮಲ್ಲಭಂಗನ್ಯಾಯದಿಂದಾಗಲೀ, ಪಾದಕ್ರಮವನ್ನು ಚಿಂತಿಸುವ ಅಗತ್ಯವಿಲ್ಲ. ಪ್ರಪಂಚ್ಯಪ್ರಪಂಚಕಭಾವಸಂಗತಿಯಿಂದ 'ಲೇ ಪಾದಕ್ರಮವನ್ನು ತಿಳಿಯಬಹುದು. ಯುಕ್ತಿವಿರೋಧವಂತೂ ಈಗಾಗಲೇ ಹೇಳಿದಂತೆ ಬಹಳ ಬಲಿಷ್ಠವಾಗಿರುತ್ತದೆ ಆದ್ದರಿಂದ ಮೊದಲು ಅದರ ಪರಿಹಾರವನ್ನು ಮಾಡುವುದು ಸಂಗತವೇ ಆಗಿದೆ ಎಂಬ ವಿಷಯದಲ್ಲಿ ವಿವಾದವಿಲ್ಲ. ಅನಂತರ ಸಮಯವಿರೋಧವೇ ಏಕೆ ಪ್ರಸಕ್ತವಾಗಿದೆ ಎಂದರೆ ಸ್ಮೃತ್ಯಧಿಕರಣದಲ್ಲಿಯೇ ಇರುವ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾರೆ. ಇದರ ವಿವರಣೆಗಾಗಿಯೇ ಸಮಯಪಾದ ಹೊರಟಿದೆ. ಅನಂತರ 'ವಿಪ್ರತಿಷೇಧಾಚ್ಚ' ಎಂಬ ಸಮಯಪಾದದ ಕೊನೆಯ ಸೂತ್ರದಲ್ಲಿ ಪರಸ್ಪರ ಎಲ್ಲಾ ಮತಗಳಲ್ಲಿ ವಿರೋಧವನ್ನು ಹೇಳಿ, ಅಪ್ರಾಮಾಣ್ಯವನ್ನು ಸಾಧಿಸಿದ್ದಾರೆ. ಇದೇ ನ್ಯಾಯದಿಂದ ಶ್ರುತಿಗಳಲ್ಲಿಯೂ ಕೂಡ ಅಪ್ರಾಮಾಣ್ಯವು ಬರುತ್ತದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಲು ಶ್ರುತಿವಿರೋಧಪರಿಹಾರಕ್ಕಾಗಿ ಮೂರನೆಯ ಪಾದ ಹೊರಟಿದೆ. ಅನಂತರ 'ಯಾವದ್ವಿಕಾರಂ ತು ವಿಭಾಗೋ ಲೋಕವತ್' ಎಂಬ ಸೂತ್ರದಲ್ಲಿ ಯುಕ್ತಿಸಹಿತವಾದ ಶ್ರುತಿಯಿಂದ ಮತ್ತೊಂದು ಶ್ರುತಿಗೆ ಗೌಣಾರ್ಥವನ್ನು ಮಾಡುವುದಾದರೆ, ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳುವ ಶ್ರುತಿಗೂ ಕೂಡ ಗೌಣಾರ್ಥವನ್ನು ಮಾಡಬೇಕಾಗುತ್ತದೆ ಎಂಬ ಆಶಂಕೆಯು ಉದಯವಾಗುತ್ತದೆ. ಅದರ ಪರಿಹಾರಕ್ಕಾಗಿ ನಾಕನೆಯ ಪಾದವು ಹೊರಟಿರುತ್ತದೆ. ಹೀಗೆ ಪಾದಗಳ ಕ್ರಮದಲ್ಲಿ ಇರುವ ಸ್ವಾರಸ್ಯವನ್ನು ತಿಳಿಯಬೇಕು.

## ಅದ್ವೈತಿಗಳ ಪಾದಕ್ರಮ ವಿಮರ್ಶೆ

ಅದ್ವೈತಿಗಳ ಪಾದಪ್ರಮೇಯ ಮತ್ತು ಪಾದಕ್ರಮ ವಿಚಾರ ಹೀಗಿದೆ - ಸಾಂಖ್ಯಾದಿಸ್ಮೃತಿಗಳಿಂದ ಉನ್ನೀತವಾದ ತರ್ಕಗಳಿಂದ ಬರುವಂತಹ ವಿರೋಧ ಪರಿಹಾರಕ್ಕಾಗಿ ಪ್ರಥಮಪಾದ ಹೊರಟಿದೆ. ಸಾಂಖ್ಯಾದಿ ಮತಗಳಲ್ಲಿ ದೋಷವನ್ನು ಎತ್ತಿ ಹಿಡಿಯಲು ಎರಡನೆಯ ಪಾದ ಹೊರಟಿದೆ. ಪಂಚಮಹಾಭೂತಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ಮೂರನೆಯ ಪಾದದ ಪೂರ್ವಭಾಗ ಹೊರಟಿದೆ. ಜೀವವಿಷಯಕವಾದ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ತೃತೀಯಪಾದದ ಉತ್ತರಭಾಗ ಹೊರಟಿದೆ. ಲಿಂಗಶರೀರವಿಷಯಕವಾದ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ನಾಕನೆಯ ಪಾದ ಹೊರಟಿದೆ.

ಇದು ತಪ್ಪು. ಮೊದಲನೆಯ ಪಾದದಲ್ಲಿ ಸ್ಮೃತಿವಿರೋಧ ಮತ್ತು ತರ್ಕವಿರೋಧ ಎಂಬ ಎರಡು ಉಪಾಧಿಗಳನ್ನು ಹೇಳಿದಂತಾಯಿತು. ಇದರಂತೆ ಮೂರನೆಯ ಪಾದದಲ್ಲಿ ಪಂಚಮಹಾಭೂತಗಳ ಶ್ರುತಿವಿರೋಧ ಪರಿಹಾರ ಜೀವವಿಷಯಕವಾದ ಶ್ರುತಿಗಳ ವಿರೋಧಪರಿಹಾರ ಎಂಬ ಎರಡು ಉಪಾಧಿಗಳನ್ನು ಹೇಳಿದಂತಾಯಿತು. ಒಂದು ಪಾದದಲ್ಲಿ ಎರಡು ಉಪಾಧಿಗಳನ್ನು ವಿವಕ್ಷಿಸಿದರೆ ಪಾದಭೇದದೋಷವು ಬರುತ್ತದೆ. ಅಂದರೆ ಅದ್ವೈತಿಗಳ ಪ್ರಕಾರ ನಾಲ್ಕೇ ಪಾದ ಎಂದು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಮೊದಲನೆಯ ಪಾದದಲ್ಲಿಯೂ ದ್ವೈವಿಧ್ಯ ಮೂರನೆಯ ಪಾದದಲ್ಲಿಯೂ ದ್ವೈವಿಧ್ಯ ಬರಬೇಕಾದೀತು. ಮತ್ತು ಸಾಂಕರ್ಯದೋಷವೂ ಇದೆ. ಪರಮತದ ದೋಷವನ್ನು ಎತ್ತಿಹಿಡಿಯಲು ಎರಡನೆಯ ಪಾದ ಹೊರಡುತ್ತಿದೆಯೆಂದು ಹೇಳುವ ಅದ್ವೈತಿಗಳು ಪ್ರಥಮಪಾದದಲ್ಲಿಯೇ ಅನೇಕಬಾರಿ ಪರಮಮತದೋಷವನ್ನು ಎತ್ತಿ ತೋರಿಸಿದ್ದಾರೆ. ಆದ್ದರಿಂದ ಎರಡನೆಯ ಪಾದವು ಪ್ರಥಮಪಾದದಲ್ಲಿಯೇ ಅಂತರ್ಭಾವ ಹೊಂದಬೇಕಾಗುತ್ತದೆ.

ಎರಡನೆಯ ವಾದದಲ್ಲಿ ಕೇವಲ ಪರಮತದೋಷವನ್ನಷ್ಟೇ ಹೇಳದೇ ತರ್ಕವಿರೋಧಗಳನ್ನೂ ಕೂಡ 'ಮಹದ್ದೀರ್ಘವದ್ವಾ' ಇತ್ಯಾದಿ ಸೂತ್ರಗಳಲ್ಲಿ ಪರಿಹರಿಸಿದ್ದಾರೆ. ಮೂರನೆಯ ಪಾದದ ಪೂರ್ವಭಾಗದಲ್ಲಿ ಪಂಚಮಹಾಭೂತವಿಷಯವಾದ ಶ್ರುತಿಗಳ ವಿರೋಧವನ್ನಷ್ಟೇ ಪರಿಹರಿಸದೆ ಇಂದ್ರಿಯಾದಿವಿಷಯಕವಾದ ಶ್ರುತಿಗಳ ವಿರೋಧವನ್ನೂ ಕೂಡ ಪರಿಹರಿಸಿದ್ದಾರೆ. ನಾಲ್ಕನೆಯ ಪಾದದಲ್ಲಿ ಲಿಂಗಶರೀರವಿಷಯಕವಾದ ಶ್ರುತಿಗಳ ವಿರೋಧವನ್ನು ಮಾತ್ರ ಪರಿಹರಿಸಬೇಕಿತ್ತು. ಆದರೆ 'ಸಂಜ್ಞಾಮೂರ್ತಿಕ್ಲೃಪ್ತಿಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಬ್ರಹ್ಮನಿಗೆ ಕರ್ತೃತ್ವವನ್ನು ಸಮರ್ಥನೆ ಮಾಡಿದ್ದಾರೆ. ಹೀಗೆ ತಾವೇ ಹಾಕಿಕೊಂಡ ನಿಯಮವನ್ನು ಪಾಲಿಸದೇ ಎಡವಿದ್ದಾರೆ.

ಅದ್ವೈತಮತದಲ್ಲಿ ಪಾದಪ್ರಮೇಯಗಳಷ್ಟೇ ಅಸಾಧುವಲ್ಲ, ಪಾದಕ್ರಮಗಳೂ ಕೂಡ ಅಸಾಧುವಾಗಿದೆ. ಮೊದಲು ಸ್ವಪಕ್ಷಸ್ಥಾಪನೆ ಮಾಡಿ, ಅನಂತರ ಪರಪಕ್ಷವನ್ನು ನಿರಾಕರಿಸಬೇಕು. ಪ್ರಥಮಪಾದದಲ್ಲಿ ಸ್ವಪಕ್ಷಸ್ಥಾಪನೆ ಮಾಡಿದಂತೆ ಮೂರನೆಯ ಮತ್ತು ನಾಲ್ಕನೆಯ ಪಾದದಲ್ಲಿಯೂ ಸ್ವಪಕ್ಷಸ್ಥಾಪನೆಯನ್ನೇ ಮಾಡಿರುತ್ತಾರೆ. ಆದ್ದರಿಂದ ಪ್ರಥಮಪಾದದ ಅನಂತರ ಮೂರು ಮತ್ತು ನಾಲ್ಕನೆಯ ಪಾದಗಳು ಸಂಗತವಾಗುತ್ತವೆ. ಎರಡನೆಯ ಪಾದದಲ್ಲಿ ಪರಪಕ್ಷದ ಪ್ರತಿಕ್ಷೇಪವನ್ನು ಮಾಡಿರುವುದರಿಂದ ಕೊನೆಯಲ್ಲಿಯೇ ಸಂಗತವಾಗುತ್ತದೆ. ಆದ್ದರಿಂದ ಅದ್ವೈತಿಗಳ ಪಾದಪ್ರಮೇಯಗಳಾಗಲೀ, ಪಾದಕ್ರಮಗಳಾಗಲೀ ಸಾಧುವಾಗಿರುವುದಿಲ್ಲ.

## ರಾಮಾನುಜರ ಪಾದೋಪಾಧಿಯ ವಿಮರ್ಶೆ

ರಾಮಾನುಜರು ಪಾದೋಪಾಧಿಗಳ ಬಗ್ಗೆ ಹೀಗೆ ತಮ್ಮ ಗ್ರಂಥಗಳಲ್ಲಿ ಹೇಳಿರುತ್ತಾರೆ - ಸ್ವಪಕ್ಷದಲ್ಲಿ ಕಾರಣವಿಷಯದಲ್ಲಿರುವ ಬಾಧಕಗಳನ್ನು ಪರಿಹರಿಸಲು ಸ್ವಪಕ್ಷಸ್ಥಾಪನೆಗಾಗಿ ಪ್ರಥಮಪಾದ ಹೊರಟಿದೆ. ಪರಮತನಿರಾಕರಣೆ ಮಾಡುವ ಮೂಲಕ ಕಾರಣವಿಷಯದಲ್ಲಿರುವ ದೋಷವನ್ನು ಹೇಳಲು ಎರಡನೆಯ

ಪಾದವು ಹೊರಟಿದೆ. ಮೂರು ಮತ್ತು ನಾಕನೆಯ ಪಾದಗಳಲ್ಲಿ ಕಾರ್ಯವಿಷಯಕವಾದ ದೋಷವನ್ನು ಪರಿಹರಿಸುವ ಮೂಲಕ ಸ್ವಪಕ್ಷವನ್ನು ಸ್ಥಾಪನೆ ಮಾಡಲು ಮೂರು ಮತ್ತು ನಾಕನೆಯ ಪಾದಗಳು ಹೊರಟಿವೆ. ಹೀಗೆ ಪಾದೋಪಾಧಿಗಳನ್ನು ಹೇಳುತ್ತಾರೆ.

ಇದು ತಪ್ಪು. ಹಾಗಾದರೆ ಪ್ರಥಮಪಾದದಲ್ಲಿ ಪರಪಕ್ಷವನ್ನು ಪ್ರತಿಕ್ಷೇಪ ಮಾಡಿಲ್ಲವೆಂದು ಹೇಳಿದಂತಾಯಿತು. ಆದರೆ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ರಾಮಾನುಜಭಾಷ್ಯದಲ್ಲಿ ಸ್ಪಷ್ಟವಾಗಿ ಪರಪಕ್ಷಪ್ರತಿಕ್ಷೇಪವನ್ನು ಮಾಡಿರುತ್ತಾರೆ. ಎರಡನೆಯ ಪಾದದಲ್ಲಿ 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಸ್ವಪಕ್ಷದಲ್ಲಿ ಬರುವ ದೋಷವನ್ನೂ ಕೂಡ ಪರಿಹರಿಸಿಕೊಂಡಿದ್ದಾರೆ. ಆದ್ದರಿಂದ ಪ್ರಥಮಪಾದದ ಉಪಾಧಿ, ಎರಡನೆಯ ಪಾದಲ್ಲಿ, ಎರಡನೆಯ ಪಾದದ ಉಪಾಧಿಯು ಪ್ರಥಮಪಾದದಲ್ಲಿ ಬರುವುದರಿಂದ ಪರಸ್ಪರ ಸಾಂಕರ್ಯದೋಷವು ಪ್ರಾಪ್ತವಾಗುತ್ತದೆ. ಅಷ್ಟೇ ಅಲ್ಲದೇ ಎರಡನೆಯ ಪಾದದಲ್ಲಿ ಬರುವ 'ಸಮವಾಯಾಭ್ಯುಪಗಮಾಚ್ಚ' ಇತ್ಯಾದಿ ಅನೇಕ ಸೂತ್ರಗಳಲ್ಲಿ ಕಾರಣವಿಷಯದ ಬಗ್ಗೆ ದೋಷವನ್ನು ಪರಿಹರಿಸುವುದಷ್ಟೇ ಅಲ್ಲದೇ ಸಮವಾಯಾದಿಗಳ ಬಗ್ಗೆಯೂ ದೋಷ ಪರಿಹಾರವನ್ನು ಮಾಡಿರುತ್ತಾರೆ. ಮೂರನೆಯ ಪಾದದಲ್ಲಿ ಕಾರ್ಯವಿಷಯದ ಬಗ್ಗೆ ಮಾತ್ರ ದೋಷವನ್ನು ಪರಿಹಾರ ಮಾಡದೇ, ಜೀವಾದಿಗಳ ಬಗ್ಗೆಯೂ ದೋಷವನ್ನು ಪರಿಹಾರ ಮಾಡಿದ್ದಾರೆ. ಆಶ್ಚರ್ಯವೆಂದರೆ ಮೂರು ಹಾಗೂ ನಾಕನೆಯ ಪಾದಭೇದವಿಷಯದಲ್ಲಿ ಉಪಾಧಿಭೇದವನ್ನೇ ಇವರು ಹೇಳಿರುವುದಿಲ್ಲ.

ಆದ್ದರಿಂದ ಆಮೂಲಾಗ್ರವಾಗಿ ರಾಮಾನುಜರ ಪಾದೋಪಾಧಿಗಳು ಅಸಮೀಚೀನವಾಗಿವೆ. ಅಷ್ಟೇ ಅಲ್ಲದೇ ಪಾದಕ್ರಮಗಳ ವಿಚಾರವೂ ಕೂಡ ಸರಿಯಿಲ್ಲ. ಏಕೆಂದರೆ ಸ್ವಪಕ್ಷಸ್ಥಾಪನೆಗಾಗಿ ಪ್ರಥಮಪಾದವು ಹೊರಟಿರುವಂತೆ, ಮೂರು ಹಾಗೂ ನಾಕನೆಯ ಪಾದಗಳು ಹೊರಟಿವೆ. ಎರಡನೆಯ ಪಾದದಲ್ಲಿ ಪರಪಕ್ಷಪ್ರತಿಕ್ಷೇಪವನ್ನು ಮಾಡಿದ್ದಾರೆ. ಆದ್ದರಿಂದ ಎರಡನೆಯ ಪಾದವನ್ನು ಕೊನೆಯಲ್ಲಿಯೇ ಹೇಳಬೇಕಿತ್ತು.

## ಸಂಗತಿ ಹಾಗೂ ಸಂಶಯಕೋಟಿಗಳು

ಸ್ಮೃತ್ಯಧಿಕರಣದಲ್ಲಿ ಅವೈದಿಕವಾದ ಎಲ್ಲಾ ಸ್ಮೃತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಇಲ್ಲಿ ಒಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಇದು ಯುಕ್ತಿಪಾದ. ಸ್ಮೃತಿವಿರೋಧದ ಪರಿಹಾರವು ಅಸಂಗತವಲ್ಲವೇ? ಎಂದು.

ಎರಡು ವಿಧದಲ್ಲಿ ಇದಕ್ಕೆ ಉತ್ತರಿಸಬಹುದು. ಪಾಶುಪತಾದಿ ಸ್ಮೃತಿಗಳು ಎಂದರೆ ರುದ್ರಾದಿಗಳು ಕಲ್ಪಿಸಿರುವ ಒಂದೊಂದು ಸಮಯಗಳು ಎಂದೇ ಅರ್ಥವಾಗಿರುತ್ತದೆ. ಮತ್ತು ತಾವು ಸಮರ್ಥಿಸಿದ ವಿಷಯದಲ್ಲಿ ಶ್ರುತಿ ಹಾಗೂ ಯುಕ್ತಿಗಳನ್ನು ಆಧಾರವನ್ನಾಗಿ ನೀಡುತ್ತಾರೆ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಯುಕ್ತಿ, ಶ್ರುತಿ, ಸಮಯ, ಯುಕ್ತಿಸಹಿತ ಶ್ರುತಿ ಹೀಗೆ ನಾಕು ಪಾದೋಪಾಧಿಗಳನ್ನು ಹೊಂದಿರುತ್ತವೆ. ನಾಕು ಪಾದೋಪಾಧಿಗಳನ್ನು ಹೊಂದಿರುವ ಸ್ಮೃತಿವಿರೋಧವನ್ನು ಪರಿಹರಿಸಲು ನಾಕು ಪಾದಗಳಲ್ಲಿಯೂ

ಕೂಡ ಸಂಗತಿ ದೊರೆಯುವುದಿಲ್ಲ. ಅಧ್ಯಾಯದ ಪ್ರಾರಂಭದಲ್ಲಿಯೋ, ಅಥವಾ ಕೊನೆಯಲ್ಲಿಯೋ ಸ್ಮೃತಿವಿರೋಧವನ್ನು ಪರಿಹಾರ ಮಾಡಬೇಕು. 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಪ್ರಾರಂಭದಲ್ಲಿಯೇ ಸ್ಮೃತ್ಯಧಿಕರಣವು ಹೊರಟಿದೆ. ಮತ್ತು ನಾಲ್ಕು ಪಾದೋಪಾಧಿಗಳನ್ನು ಹೊಂದಿರುವ ಕಾರಣ, ಅತ್ಯಂತ ಪ್ರಬಲವಾಗಿದೆ. ಮಹಾಮಲ್ಲಭಂಗನ್ಯಾಯದಿಂದ ಬಲಿಷ್ಠವಾದದ್ದನ್ನು ಮೊದಲೇ ನಿರಾಕರಣೆ ಮಾಡುತ್ತಿದ್ದಾರೆ.

ಅಥವಾ ನಾಕು ಪಾದೋಪಾಧಿಗಳನ್ನು ಹೂಂದಿರುವುದರಿಂದ ಸ್ಮೃತ್ಯಧಿಕರಣಕ್ಕೆ ನಾಕು ಪಾದಗಳಲ್ಲಿಯೂ ಸಂಗತಿಯಿರುತ್ತದೆ. 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಎಂಬ ನ್ಯಾಯದಿಂದ ಮತ್ತು ನಾಕು ಪಾದೋಪಾಧಿ- ಗಳನ್ನು ಹೊಂದಿರುವ ಕಾರಣ ಬಲಿಷ್ಠವಾಗಿರುವುದರಿಂದಲೂ ಅಧ್ಯಾಯದ ಪ್ರಾರಂಭದಲ್ಲಿಯೇ ಸ್ಮೃತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಈ ಎರಡು ಕಾರಣಗಳಿಂದ ಸ್ಮೃತ್ಯಧಿ-ಕರಣವು ಅಧ್ಯಾಯದ ಮತ್ತು ಪಾದದ ಪ್ರಾರಂಭದಲ್ಲಿ ಅತ್ಯಂತ ಸಮ್ಮತವಾಗುತ್ತದೆ.

ಸ್ಮೃತ್ಯಧಿಕರಣದಿಂದ ಪ್ರಾರಂಭಿಸಿ ಗ್ರಂಥಕಾರರು ತಮ್ಮ ವ್ಯಾಖ್ಯಾನವನ್ನು ಮೊಟಕುಗೊಳಿಸಿದ್ದಾರೆ. ಇಲ್ಲಿಂದ ಸ್ವತಃ ಅವರೇ ಹೇಳುವ ಮಾತು ಹೀಗಿದೆ -

ಇತಃ ಪರಂ ಪೂರ್ವಪಕ್ಷಾದಿಕಂ ನ ಪೃಥಗುಚ್ಯತೇ ।
ಗ್ರಂಥಗೌರವಭೀತ್ಯಾ ಚ ಟೀಕಾದೌ ಚ ಸ್ಫುಟತ್ವತಃ ॥೧॥

ಇನ್ನು ಮುಂದೆ ಪ್ರತಿಯೊಂದು ಅಧಿಕರಣಗಳಲ್ಲಿಯೂ ಪೂರ್ವಪಕ್ಷ, ಸಿದ್ಧಾಂತ, ಅನ್ಯಮತೀಯ ಅಧಿಕರಣದ ಅನುವಾದ, ಅದರ ನಿರಾಕರಣೆ ಇವುಗಳನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ. ಈಗಾಗಲೇ ಗ್ರಂಥವು ಬಹಳಷ್ಟು ಬೆಳೆದಿದೆ. ಗ್ರಂಥಗೌರವ ಬರಬಾರದೆಂಬ ಭಯದಿಂದ ವ್ಯಾಖ್ಯಾನವನ್ನು ಮೊಟಕುಗೊಳಿಸಿದ್ದೇವೆ. ಮತ್ತು ಟೀಕಾದಿಗಳಲ್ಲಿಯೇ ಪೂರ್ವಪಕ್ಷಾದಿಗಳನ್ನು ಸ್ಫುಟವಾಗಿ ಹೇಳಿರುತ್ತಾರೆ.

ಹಿಂದಿನ ಅಧ್ಯಾಯದಲ್ಲಿ ಮಹಾವಿಷ್ಣು ಜಗಜ್ಜನ್ಮಕಾರಣನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಸಮನ್ವಯವನ್ನು ಮಾಡಲಾಯಿತು. ಅದು ಪಾಶುಪತಾದಿ ಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಅಯುಕ್ತವಾಗಿದೆಯೆಂಬ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ಸಂಶಯಪರಂಪರೆಯನ್ನು ಹೀಗೆ ತಿಳಿಯಬೇಕು - ಶ್ರುತಿಸಮನ್ವಯವು ಜಗತ್‌ಕಾರಣತ್ವಾದಿವಿಷಯದಲ್ಲಿ ಅಯುಕ್ತವೋ, ಯುಕ್ತವೋ? ಅದಕ್ಕಾಗಿ ಪಾಶುಪತಾದಿಸ್ಮೃತಿಗಳಿಗನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೋ? ಬೇಡವೋ ? ಅದಕ್ಕಾಗಿ ಪಾಶುಪತಾದಿಸ್ಮೃತಿಗಳು ಪ್ರಬಲವೋ, ಅಲ್ಲವೋ?

ಒಂದುವೇಳೆ ಪಾಶುಪತಾದಿಸ್ಮೃತಿಗಳು ಪ್ರಬಲವೆಂದು ನಿರ್ಣಯವಾದರೆ, ಪಾಶುಪತಾದಿ ಸ್ಮೃತಿಗಳಿ- ಗನುಸಾರಿಯಾಗಿಯೇ ಶ್ರುತಿಗಳನ್ನು ವ್ಯಾಖ್ಯಾನ ಮಾಡಬೇಕು. ಆವಾಗ ಶ್ರುತಿಸಮನ್ವಯವು ಮಹಾವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷದ ಫಲ. ಪಾಶುಪತಾದಿಶ್ರುತಿಗಳು

ದುರ್ಬಲವಾದ ಕಾರಣ ಅವುಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕಾಗಿಲ್ಲ. ಆದ್ದರಿಂದ ಶ್ರುತಿಸಮನ್ವಯವು ಮಹಾವಿಷ್ಣುವಿನಲ್ಲಿ ಯುಕ್ತವಾಗುತ್ತದೆ ಎಂಬುದು ಸಿದ್ಧಾಂತದ ಫಲ.

## ರುದ್ರನು ಜಗತ್ಕಾರಣನೆಂದು ಪೂರ್ವಪಕ್ಷ

ಶ್ರುತಿವಿರುದ್ಧವಾದ ಸ್ಮೃತಿಗಳು ಅಪ್ರಮಾಣ ಎಂಬುದು ಪೂರ್ವಮೀಮಾಂಸೆಯಲ್ಲಿ ಕಂಡಿದೆ - 'ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್' ಎಂಬ ಶ್ರುತಿಯು ಅತ್ತಿ ಮರದ ಯೂಪವನ್ನು ಮುಟ್ಟಿ ಗಾನ ಮಾಡಬೇಕು ಎನ್ನುತ್ತಿದೆ. ಆದರೆ ಇದಕ್ಕೆ ವಿರುದ್ಧವಾಗಿ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಅತ್ತಿಮರದ ಯೂಪವನ್ನು ಪೂರ್ತಿಯಾಗಿ ಬಟ್ಟೆಯಿಂದ ಮುಚ್ಚಬೇಕು ಎಂದು ಸ್ಮೃತಿ ಹೇಳುತ್ತಿದೆ. ಇಲ್ಲಿ ಶ್ರುತಿಗೆ ವಿರುದ್ಧವಾದ್ದರಿಂದ ಸ್ಮೃತಿಗೆ ಅರ್ಥಾಂತರವನ್ನು ಮಾಡಬೇಕೆಂದು ಭಾಟ್ಟರು ಹೇಳುತ್ತಾರೆ. ಪ್ರಾಭಾಕರರು ಶ್ರುತಿಗೆ ವಿರುದ್ಧವಾದ್ದರಿಂದ ಸ್ಮೃತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆನ್ನುತ್ತಾರೆ.

ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ ದೃಷ್ಟಾಂತವು ವಿಷಮವಾಗಿದೆ. ಯಾವ ಸ್ಮೃತಿಗಳನ್ನು ನೀವು ಉದಾಹರಿಸುತ್ತಿದ್ದೀರೋ, ಅವು ಶ್ರುತಿಯನ್ನೇ ಮೂಲಪ್ರಮಾಣವನ್ನಾಗಿಸಿಕೊಂಡು ಹೊರಟಿವೆ. ಆದ್ದರಿಂದ ಅವು ಶ್ರುತಿಯಲ್ಲಿ ಹೇಳಿದ್ದನ್ನೇ ಹೇಳಿದಾಗ ಅದಕ್ಕೆ ಮೂಲವಾಗಿ ಬೇರೆ ಶ್ರುತಿಯನ್ನು ಅನುಮಾನ ಮಾಡುವ ಮೂಲಕ ಪ್ರಮಾಣವೆಂದು ಸಿದ್ಧವಾಗುತ್ತವೆ. ಆದರೆ ಶ್ರುತಿಯಲ್ಲಿ ಹೇಳಿದ್ದಕ್ಕೆ ವಿರುದ್ಧವಾಗಿ ಸ್ಮೃತಿಯನ್ನು ಹೇಳಿದಾಗ ಅದಕ್ಕೆ ಮೂಲಭೂತವಾದ ಬೇರೆ ಶ್ರುತಿಯನ್ನು ಅನುಮಾನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಮಾಣವಾಗುತ್ತವೆಂಬುದು ಯುಕ್ತವೇ ಆಗಿದೆ. ಇದನ್ನೇ ಜೈಮಿನ್ಯಾಚಾರ್ಯರು 'ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್' ಎಂದು ಅನುಮಾನವನ್ನು ಹೇಳಿರುತ್ತಾರೆ. ಶ್ರುತಿಯ ವಿರೋಧವಿದ್ದರೆ ಸ್ಮೃತಿಗೆ ಪ್ರಾಮಾಣ್ಯವು ಅನಪೇಕ್ಷಿತವಾಗಿರುತ್ತದೆ. ಶ್ರುತಿವಿರೋಧವಿಲ್ಲದೇ ಇದ್ದಾಗ ಅದು ಮೂಲಶ್ರುತಿಗೆ ಅನುಮಾಪಕವಾಗುತ್ತದೆ. ಆದ್ದರಿಂದ ಪ್ರಮಾಣ.

ಆದರೆ ಪ್ರಕೃತದಲ್ಲಿ ಅದರಂತೆ ಹೇಳಲಾಗದು. ಪಾಶುಪತಾದಿಸ್ಮೃತಿಗಳು ಶ್ರುತಿಮೂಲಕವೇ ಆಗಿಲ್ಲ. ಹೊರತಾಗಿ ಶಿವನೇ ಮೊದಲಾದ ಆಪ್ತರ ಪ್ರತ್ಯಕ್ಷ ಮೂಲವಾಗಿದೆ ಎಂದು ಹೇಳುತ್ತಿದ್ದೀರಿ. ಆದ್ದರಿಂದ ಶ್ರುತಿಗಳ ಅಪೇಕ್ಷೆಯೇ ಇಲ್ಲದಾಗ ಅಪ್ರಾಮಾಣ್ಯವನ್ನೇ ಅವುಗಳಿಗೆ ಹೇಳಬೇಕಾಗುತ್ತದೆ. ಶಿವಾದಿಪ್ರತ್ಯಕ್ಷಮೂಲಕವಾದ್ದರಿಂದ ಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಪೂರ್ವಪಕ್ಷಿಗಳು ಒಪ್ಪಿಕೊಂಡಿದ್ದಾರೆ. ಹೊರತು ಶ್ರುತಿ ಮೂಲಕವಾಗಿ ಅಲ್ಲ.

## ರುದ್ರನು ಜಗತ್ಕಾರಣನೆಂದು ಪೂರ್ವಪಕ್ಷ

ಸ್ಮೃತ್ಯಧಿಕರಣದ ಪೂರ್ವಪಕ್ಷ ಹೀಗಿದೆ - ಹಿಂದಿನ ಅಧ್ಯಾಯದಲ್ಲಿ ಎಲ್ಲಾ ಶ್ರುತಿಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೂಲಕ ಜಗತ್ಕಾರಣತ್ವವನ್ನು ಸಮರ್ಥಿಸಲಾಯಿತು. ಏಕೆಂದರೆ ಪಾಶುಪತಾದಿಸ್ಮೃತಿಗಳೆಲ್ಲವೂ ರುದ್ರನಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸುತ್ತಿವೆ.

ಶ್ರುತಿಗಳು ವಿಷ್ಣುವನ್ನು ಜಗತ್‌ಕಾರಣವೆನ್ನುತ್ತಿದೆ, ಸ್ಮೃತಿಗಳು ರುದ್ರನನ್ನು ಜಗತ್‌ಕಾರಣವೆನ್ನುತ್ತಿದೆ. ಈ ಎರಡು ಪಕ್ಷಗಳಲ್ಲಿ ಯಾವುದೇ ಒಂದು ಪಕ್ಷವನ್ನು ಒಪ್ಪಿದರೂ ಶ್ರುತಿಗಾಗಲೀ, ಸ್ಮೃತಿಗಾಗಲೀ ಅಪ್ರಾಮಾಣ್ಯವನ್ನು ಹೇಳುವಂತಹ ಪರಿಸ್ಥಿತಿ ಬರುತ್ತದೆ. ಆದಕ್ಕಾಗಿ ರುದ್ರ ಹಾಗೂ ವಿಷ್ಣು ಇವರಿಬ್ಬರಲ್ಲಿ ಯಾರಾದರೂ ಕೂಡ ಜಗತ್‌ಕಾರಣರಾಗಬಹುದೆಂಬ ವಿಕಲ್ಪವನ್ನು ಆಶ್ರಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪುರುಷಾಧೀನವಾದ ಕಾರ್ಯಗಳಲ್ಲಿ ವಿಕಲ್ಪವನ್ನು ಆಶ್ರಯಿಸಬಹುದೇ ಹೊರತು, ಸಿದ್ಧವಾದ ವಿಷಯದಲ್ಲಿ ವಿಕಲ್ಪವು ಎಂದೂ ಕೂಡುಪುಗಿಲ್ಲ. ಜಗತ್ತಿಗೆ ಕಾರಣನಾದ ಒಬ್ಬ ವ್ಯಕ್ತಿಯು ಈಗಾಗಲೇ ಸಿದ್ಧನಾಗಿದ್ದಾನೆ. ಅವನ ಬಗ್ಗೆ ತಿಳಿಯಬೇಕಾದದ್ದಷ್ಟೇ ನಮ್ಮ ಕರ್ತವ್ಯ. ಆದನ್ನು ಬಿಟ್ಟು ಸಮಾಧಾನಕ್ಕಾಗಿ ವಿಕಲ್ಪಪಕ್ಷವನ್ನು ಆಶ್ರಯಿಸಬಾರದು.

ವಿಷ್ಣು ಹಾಗೂ ರುದ್ರ ಇವರಿಬ್ಬರೂ ಕೂಡ ಜಗತ್‌ಕಾರಣರೆಂದು ಒಪ್ಪಬಹುದಲ್ಲವೇ? ಕೆಲವು ದೇಶಗಳಲ್ಲಿ ಶ್ರುತಿ-ಸ್ಮೃತಿಗಳಲ್ಲಿ ನಿರಪೇಕ್ಷಿತವಾಗಿ ಒಬ್ಬೊಬ್ಬರೇ ಜಗತ್‌ಕಾರಣರೆಂದು ಹೇಳಿರಬಹುದು. ಆ ವಿರೋಧವನ್ನು ದೇಶಭೇದ, ಕಾಲಭೇದ ಮತ್ತು ಕಾರ್ಯಭೇದಗಳಿಂದ ಪರಿಹರಿಸಲು ಬರುತ್ತದೆ. ಈ ಬಗೆಯ ವಿಚಾರವೂ ಕೂಡ ಸರಿಯಿಲ್ಲ. ಏಕೆಂದರೆ ಶ್ರುತಿಯಲ್ಲಿ ವಿಷ್ಣುವೇ ಸರ್ವದೇಶ, ಸರ್ವಕಾಲಗಳಲ್ಲಿ ಸಕಲವಿಧಕಾರ್ಯಗಳಿಗೆ ಕಾರಣನಾಗಿದ್ದಾನೆಂದು ಹೇಳಲಾಗಿದೆ. ಸ್ಮೃತಿಯಲ್ಲಿ ರುದ್ರದೇವರೇ ಸಕಲದೇಶ, ಸಕಲಕಾಲಗಳಲ್ಲಿ ಸಕಲವಿಧಕಾರ್ಯಗಳಿಗೆ ಕಾರಣರಾಗಿದ್ದಾರೆಂದು ಹೇಳಲಾಗಿದೆ. ಅಷ್ಟೇ ಅಲ್ಲದೇ ಶ್ರುತಿಯಲ್ಲಿ ವಿಷ್ಣುವನ್ನು ಹೊರತಾಗಿ, ಬೇರೆ ಯಾರೂ ಕೂಡ ಜಗತ್‌ಕಾರಣರಾಗಲು ಸ್ವಾಧವಿಲ್ಲವೆಂಬ ನಿಷೇಧ ವಚನವಿದೆ. ಸ್ಮೃತಿವಾಕ್ಯದಲ್ಲೂ ಕೂಡ ರುದ್ರನನ್ನು ಹೊರತಾಗಿ, ಬೇರೆ ಯಾರೂ ಕೂಡ ಜಗತ್ ಕಾರಣರಾಗಲು ಸ್ವಾಧವಿಲ್ಲವೆಂಬ ವಚನವಿದೆ. ಆದ್ದರಿಂದ ವಿಕಲ್ಪವನ್ನು ಆಶ್ರಯಿಸಲು ಹೇಗೆ ಸಾಧ್ಯವಿಲ್ಲವೋ? ಇಬ್ಬರೂ ಒಟ್ಟಿಗೆ ಸೇರಿ ಜಗತ್‌ಕಾರಣರಾಗುತ್ತಾರೆಂಬ ಸಮುಚ್ಚಯಪಕ್ಷವೂ ಕೂಡ ಸಾಧುವಲ್ಲ. ಪೂರ್ವಮೀಮಾಂಸೆಯ ವಿರೋಧಾಧಿಕರಣ ನ್ಯಾಯದಿಂದ ಸ್ಮೃತಿಗೆ ಅಪ್ರಾಮಾಣ್ಯವನ್ನು ಹೇಳಲಾಗದು. ಏಕೆಂದರೆ ಶ್ರುತಿಗಳು ಅಪೌರುಷೇಯವಾದ್ದರಿಂದ ನಿರ್ಮೂಲವಾಗಿವೆ. ಸ್ಮೃತಿಗಳು ಪೌರುಷೇಯವಾಗಿ ಆಪ್ತೋಕ್ತವಾದ್ದರಿಂದ ಸಮೂಲವಾಗಿವೆ. ಸಮೂಲವಾದ ಸ್ಮೃತಿಗಳಿಗೆ ಅನುಸಾರಿಯಾಗಿಯೇ ನಿರ್ಮೂಲವಾದ ವೇದಗಳನ್ನು ನಯನ ಮಾಡಬೇಕು. ಹೀಗೆ ಪ್ರಬಲವಾದ ಪಾಶುಪತಾದಿ ಸ್ಮೃತಿಗಳು ರುದ್ರನಿಗೆ ಜಗತ್‌ಕಾರಣತ್ವವನ್ನು ಸಮರ್ಥಿಸುತ್ತಿವೆ.

## ಸ್ಮೃತಿಗಳೇ ಅತ್ಯಂತ ಪ್ರಬಲವಾಗಿವೆಯೆಂದು ಪೂರ್ವಪಕ್ಷ

ಸುಂದೋಪಸುಂದನ್ಯಾಯದಿಂದ ಶ್ರುತಿ-ಸ್ಮೃತಿಗಳೆರಡೂ ಪರಸ್ಪರ ವಿರುದ್ಧವಾಗಿವೆ. ಈ ಕಾರಣದಿಂದ ಎರಡಕ್ಕೂ ಅಪ್ರಾಮಾಣ್ಯವನ್ನು ಹೇಳಬೇಕು ಎಂಬ ಆಕ್ಷೇಪವನ್ನು ಶೈವರೇ ಪರಿಹರಿಸುತ್ತಾರೆ. ಸ್ಮೃತಿಗಳು ಅತ್ಯಂತ ಸ್ಪಷ್ಟವಾದ ವಿಷಯಗಳನ್ನು ಮಂಡಿಸುತ್ತವೆ. ಯಾವ ಶಿವಾದಿಗಳು ಸ್ಮೃತಿಗಳನ್ನು ರಚನೆ ಮಾಡಿರುತ್ತಾರೋ, ಅವರೇ ತಮ್ಮ ಶಿಷ್ಯಂದಿರಿಗೆ ಅದರ ಅರ್ಥವನ್ನು ಉಪದೇಶಿಸಿರುತ್ತಾರೆ.

ಆದರೆ ಶ್ರುತಿಗಳಾದರೋ, ಎಲ್ಲಾ ವಿಷಯಗಳನ್ನು ಅಸ್ಪಷ್ಟವಾಗಿ ಹೇಳುತ್ತವೆ. ಒಂದು ವಿಷಯವನ್ನು ಹೇಳಲು ಪ್ರಾರಂಭಿಸಿ, ಅರ್ಧದಲ್ಲಿ ಆ ವಿಚಾರವನ್ನು ಕೈಬಿಟ್ಟು ಮತ್ತೊಂದು ವಿಚಾರದಲ್ಲಿ ತೊಡಗುತ್ತವೆ. ಅವ್ಯವಸ್ಥಿತವಾದ ಪ್ರಕರಣಗಳಿಂದ ಕೂಡಿವೆ. ಬಹಳ ವಿಸ್ತಾರವಾಗಿ ಅಧ್ಯಯನವನ್ನು ಮಾಡಲಾರದಷ್ಟು ವಾಕ್ಯಸಂದರ್ಭಗಳನ್ನು ಹೊಂದಿವೆ. ಅರ್ಥವಿಶೇಷದಲ್ಲಿ ನಿಷ್ಠವಾಗಿಲ್ಲ. ಯಾರೂ ಕೂಡ ರಚನೆ ಮಾಡದ ಕಾರಣ ಅದರ ಅರ್ಥವನ್ನು ಅವರಿಂದ ತಿಳಿಯಲೂ ಕೂಡ ಸಾಧ್ಯವಾಗುವುದಿಲ್ಲ. ಸ್ವತಃ ತಾವು ಯಾವುದೇ ಅರ್ಥವನ್ನು ಬೋಧನೆ ಮಾಡುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಶ್ರುತಿಗಳು ದುರ್ಬಲವಾಗಿವೆ. ಈ ಶ್ರುತಿಗಳ ಅರ್ಥವು ಸ್ಮೃತಿಯನ್ನೇ ಅವಲಂಬಿಸಿರುವುದರಿಂದ, ಸ್ಮೃತಿಗಳಿಗೆ ವಿರುದ್ಧವಾಗಿ ಏನನ್ನಾದರೂ ಹೇಳಲು ಹೊರಟರೆ ಉಪಜೀವ್ಯವಿರೋಧವು ಬರುತ್ತದೆ.

ಸಮೂಲವಾದ ಸ್ಮೃತಿಗಳ ವಿರೋಧವು ಪ್ರಾಪ್ತವಾದರೆ. ನಿರ್ಮೂಲವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆಂಬುದು ಪೂರ್ವಪಕ್ಷಿಗಳ ಬಲವಾದ ಆಕ್ಷೇಪ. ಈ ಅಧಿಕರಣದಲ್ಲಿ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡುತ್ತಿಲ್ಲ. ಹೊರತಾಗಿ, ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ಅರ್ಥೈಸಬೇಕೆಂದು ಆಕ್ಷೇಪಿಸಲಾಗಿದೆ. ಆದ್ದರಿಂದಲೇ ಸೂತ್ರದಲ್ಲಿ ಪ್ರಸಂಗಶಬ್ದವು ಇರುತ್ತದೆ. ಭಾಷ್ಯದಲ್ಲಿ 'ಸ್ಯಾತ್' ಎಂಬ ಶಬ್ದವು, ಟೀಕೆಯಲ್ಲಿ 'ಪ್ರಸಂಗ' ಶಬ್ದವೂ ಕೂಡ ಇದೇ ಅಭಿಪ್ರಾಯದಲ್ಲಿ ಉಲ್ಲೇಖಿತವಾಗಿದೆ. ಇನ್ನು ಕಣಾದಾದಿಗಳ ಮತದಲ್ಲಿ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಹಾಗೂ ಪೌರುಷೇಯತ್ವವನ್ನು ಒಪ್ಪಿರುವುದರಿಂದ, ಸ್ಮೃತಿಯಂತೆ ಶ್ರುತಿಗಳು ಸಮಬಲವಾಗುತ್ತವೆ. ಆದರೆ ಅವರನ್ನು ಪೂರ್ವಪಕ್ಷಿಗಳನ್ನಾಗಿ ಇಲ್ಲಿ ವಿವಕ್ಷಿಸಬಾರದು.

ಒಂದುವೇಳೆ ಕಣಾದಾದಿಗಳೂ ಕೂಡ ಪೂರ್ವಪಕ್ಷಿಗಳಾದರೆ ಕಣಾದಾದಿಸ್ಮೃತಿಗಳು ಯುಕ್ತಿಬದ್ಧವಾಗಿ ವಿಚಾರವನ್ನು ಪ್ರತಿಪಾದನೆ ಮಾಡುತ್ತಿವೆ. ಶ್ರುತಿಗಳು ಹಾಗಿಲ್ಲದ ಕಾರಣ ದುರ್ಬಲವಾಗಿವೆಯೆಂದು ಪೂರ್ವಪಕ್ಷವನ್ನು ತಿಳಿಯಬೇಕಾಗುತ್ತದೆ.

ಬೌದ್ಧಾದಿಗಳೂ ಕೂಡ ವೇದವನ್ನು ಅಪ್ರಮಾಣವೆನ್ನುತ್ತಾರೆ. ಅವರ ಪ್ರಕಾರ ಆಪ್ತಪ್ರಣೀತವಾದ ಬೌದ್ಧಾಗಮಗಳ ವಿರೋಧ ಬರುವುದರಿಂದ ವೇದವು ಅಪ್ರಮಾಣವಾಗುತ್ತದೆಂಬ ಪೂರ್ವಪಕ್ಷವನ್ನು ತಿಳಿಯಬೇಕು. ಆದ್ದರಿಂದ ತತ್ವಪ್ರಕಾಶಿಕೆಯ ಪ್ರಕಾರ ಸೂತ್ರಕ್ಕೆ ಹೀಗರ್ಥ - ಸಾಂಖ್ಯಾದಿಸ್ಮೃತಿಗಳು ನಿರವಕಾಶವಾದ್ದರಿಂದ ಶ್ರುತಿಗಳಿಗೆ ಅರ್ಥಾಂತರ ಮಾಡಬೇಕೆಂದು ಆಕ್ಷೇಪ. ಪಂಚರಾತ್ರಾದಿಸ್ಮೃತಿಗಳೂ ಕೂಡ ನಿರವಕಾಶವಾಗಿರುವುದರಿಂದ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯ ಬರುತ್ತದೆಂದು ಸಿದ್ಧಾಂತ ಎಂದು. ನ್ಯಾಯಸುಧೆಯ ಮತ್ತು ತತ್ವಪ್ರದೀಪದ ಪ್ರಕಾರ ಬೌದ್ಧಾದಿಸ್ಮೃತಿಗಳು ನಿರವಕಾಶವಾಗಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡಿ, ಪಂಚರಾತ್ರಾದಿಸ್ಮೃತಿಗಳಿಗೆ ನಿರವಕಾಶತ್ವವನ್ನು ಸಮರ್ಥಿಸುವ ಮೂಲಕ, ಬೌದ್ಧಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಸಮರ್ಥಿಸಬೇಕೆಂಬ ಸಿದ್ಧಾಂತದ ಅರ್ಥವನ್ನು ತಿಳಿಯಬೇಕು. ಹೀಗೆ ವ್ಯವಸ್ಥಿತವಾಗಿ ಸೂತ್ರದ ಅರ್ಥವನ್ನು ಎರಡು ಬಗೆಯಲ್ಲಿ

ಗಮನಿಸಬೇಕು. ಶ್ರುತಿಗಳೆಲ್ಲವೂ ಅಪ್ರಮಾಣವಾಗಿವೆಯೆಂದು ಪೂರ್ವಪಕ್ಷ ಮಾಡಿದಾಗ, ಶ್ರುತಿಗಳಿಗೆ ಸಂಪೂರ್ಣವಾಗಿ ಸ್ಮೃತಿವಿರೋಧವನ್ನು ಆಕ್ಷೇಪ ಮಾಡಬೇಕು. ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿದಾಗ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಅರ್ಥವನ್ನು ಕೈಬಿಡಬೇಕಾಗುತ್ತದೆಂದು ಆಕ್ಷೇಪ ಮಾಡಬೇಕು. ಎರಡೂ ಪಕ್ಷಗಳಲ್ಲಿಯೂ ಶ್ರುತಿಗಳಿಗೆ ಸ್ಮೃತಿವಿರೋಧವು ಬರುವುದರಿಂದ ಸ್ಮೃತ್ಯಧಿಕರಣಕ್ಕೆ ಅಧ್ಯಾಯದಲ್ಲಿ ಅಸಾಂಗತ್ಯವಿರುವುದಿಲ್ಲ.

## ಪಾಶುಪತಾದಿಸ್ಮೃತಿಗಳಿಗೆ ಐದು ಬಗೆಯ ಬಾಧದೋಷ
## (ಸಿದ್ಧಾಂತ)

ಪ್ರತಿರುಂಧೇ ಸ್ಮೃತಿಸ್ತಾವತ್ ಪರಾಮರ್ಶೇ ತು ಬಾಧತೇ ।
ಶ್ರುತಿಃ ಸಸ್ಮೃತಿಕಾऽತ್ಯಂತಂ ಬಾಧತೇऽನ್ಯಸ್ಮೃತೀಃ ಪುನಃ ॥

ಪಾಶುಪತಾದಿ ಸ್ಮೃತಿಗಳನ್ನು ಪಂಚರಾತ್ರಾದಿ ಸ್ಮೃತಿಗಳು ಆಪಾತತಃ ಪ್ರತಿರೋಧ ಮಾಡುತ್ತದೆ. ಸ್ವಲ್ಪ ವಿಮರ್ಶೆ ಮಾಡಿದರೆ, ಪಂಚರಾತ್ರಾದಿ ಸ್ಮೃತಿಗಳು ಪಾಶುಪತಾದಿ ಸ್ಮೃತಿಗಳನ್ನು ಬಾಧಿಸುತ್ತದೆ. ಅದೇ ಪಂಚರಾತ್ರಾದಿ ಸ್ಮೃತಿಗಳು ಅಪೌರುಷೇಯವಾದ ಶ್ರುತಿಗಳ ಬೆಂಬಲ ಪಡೆದಾಗ ಸರ್ವಾತ್ಮನಾ ಪಾಶುಪತಾದಿಸ್ಮೃತಿಗಳನ್ನು ಬಾಧಿಸುತ್ತದೆ.

ಆಪಾತತಃ ನೋಡಿದರೆ ಶೈವಸ್ಮೃತಿಗಳು ಹೇಗೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಸ್ಪಷ್ಟವಾಗಿಯೇ ವಿಷಯಗಳನ್ನು ಪ್ರತಿಪಾದನೆ ಮಾಡುತ್ತಿವೆ. ಸರ್ವಜ್ಞನಾದ ವಿಷ್ಣುವಿನಿಂದಲೇ ರಚಿತವಾಗಿವೆ. ಆದ್ದರಿಂದ ಶೈವಾದಿಸ್ಮೃತಿಗಳಿಂದ ಸಮಾನಬಲವನ್ನು ಹೊಂದಿರುತ್ತವೆ. ಇಂತಹ ಪಂಚರಾತ್ರಾದಿಸ್ಮೃತಿಗಳಿಂದ ಶೈವಾದಿಸ್ಮೃತಿಗಳು ಪ್ರತಿರುದ್ಧವಾಗುತ್ತವೆ. ಆವಾಗ ಶೈವಾದಿಸ್ಮೃತಿಗಳ ವಿರೋಧವಿಲ್ಲದ ಶ್ರುತಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆಂಬ ಸಿದ್ಧಾಂತಿಗಳ ಅಭಿಲಾಷೆಯು ಪೂರೈಸುತ್ತದೆ.

ಸ್ವಲ್ಪ ವಿಮರ್ಶೆ ಮಾಡಿದರೆ ವಿಷ್ಣುವಿನಲ್ಲಿ ರುದ್ರಾದಿಗಳಿಗಿಂತ ಹೆಚ್ಚಿನ ಸಾರ್ವಜ್ಞವಿದೆ. ವಿಷ್ಣುವಿನಿಂದ ಹೇಳಲ್ಪಟ್ಟ ಪಂಚರಾತ್ರಾದಿಸ್ಮೃತಿಗಳಿಗೆ ಶ್ರುತಿಗಳ ಸಂವಾದವೂ ಇದೆ. ರುದ್ರಾದಿಗಳಿಗಿಂತಲೂ ವಿಷ್ಣು ಹೆಚ್ಚು ಆಪ್ತನೆಂದು ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಶೈವಾದಿಸ್ಮೃತಿಗಳಿಗಿಂತಲೂ ಪಂಚರಾತ್ರಾದಿಸ್ಮೃತಿಗಳೇ ಪ್ರಬಲ ಎನಿಸುತ್ತವೆ. ಯುಕ್ತಿಯ ಸಂವಾದವಿಲ್ಲದೇ ಸುಮ್ಮನೆ ವಾಕ್ಯ ಪ್ರಯೋಗವನ್ನು ಮಾಡುವವನಿಗಿಂತಲೂ ಯುಕ್ತಿಬದ್ಧವಾಗಿ ಅರ್ಥಪೂರ್ಣವಾದ ವಾಕ್ಯಗಳನ್ನು ರಚನೆ ಮಾಡುವವನು ಹೇಗೆ ಬಲಿಷ್ಠನೋ ? ಅದರಂತೆ ಶ್ರುತಿಗಳ ಸಂವಾದವಿರುವ ಅರ್ಥಪೂರ್ಣವಾದ ಪಂಚರಾತ್ರಾದಿಸ್ಮೃತಿಗಳು ಬಲಿಷ್ಠವಾಗುತ್ತವೆ.

ಇನ್ನೂ ಹೆಚ್ಚು ವಿಮರ್ಶೆ ಮಾಡಿದರೆ ಶೈವಾದಿಸ್ಮೃತಿಗಳು ಶ್ರುತಿಗಳಿಂದಲೇ ಅತ್ಯಂತವಾಗಿ ಬಾಧಿತವಾಗುತ್ತವೆ. ಏಕೆಂದರೆ ಶೈವಾದಿಸ್ಮೃತಿಗಳಂತೆ ಸಮಾನಬಲಹೊಂದಿರುವ ಅಥವಾ ಹೆಚ್ಚು

ಆದರೆ ಶ್ರುತಿಗಳಾದರೋ, ಎಲ್ಲಾ ವಿಷಯಗಳನ್ನು ಅಸ್ಪಷ್ಟವಾಗಿ ಹೇಳುತ್ತವೆ. ಒಂದು ವಿಷಯವನ್ನು ಹೇಳಲು ಪ್ರಾರಂಭಿಸಿ, ಅರ್ಧದಲ್ಲಿ ಆ ವಿಚಾರವನ್ನು ಕೈಬಿಟ್ಟು ಮತ್ತೊಂದು ವಿಚಾರದಲ್ಲಿ ತೊಡಗುತ್ತವೆ. ಅವ್ಯವಸ್ಥಿತವಾದ ಪ್ರಕರಣಗಳಿಂದ ಕೂಡಿವೆ. ಬಹಳ ವಿಸ್ತಾರವಾಗಿ ಅಧ್ಯಯನವನ್ನು ಮಾಡಲಾರದಷ್ಟು ವಾಕ್ಯಸಂದರ್ಭಗಳನ್ನು ಹೊಂದಿವೆ. ಅರ್ಥವಿಶೇಷದಲ್ಲಿ ನಿಷ್ಠವಾಗಿಲ್ಲ. ಯಾರೂ ಕೂಡ ರಚನೆ ಮಾಡದ ಕಾರಣ ಅದರ ಅರ್ಥವನ್ನು ಅವರಿಂದ ತಿಳಿಯಲೂ ಕೂಡ ಸಾಧ್ಯವಾಗುವುದಿಲ್ಲ. ಸ್ವತಃ ತಾವು ಯಾವುದೇ ಅರ್ಥವನ್ನು ಬೋಧನೆ ಮಾಡುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಶ್ರುತಿಗಳು ದುರ್ಬಲವಾಗಿವೆ. ಈ ಶ್ರುತಿಗಳ ಅರ್ಥವು ಸ್ಮೃತಿಯನ್ನೇ ಅವಲಂಬಿಸಿರುವುದರಿಂದ, ಸ್ಮೃತಿಗಳಿಗೆ ವಿರುದ್ಧವಾಗಿ ಏನನ್ನಾದರೂ ಹೇಳಲು ಹೊರಟರೆ ಉಪಜೀವ್ಯವಿರೋಧವು ಬರುತ್ತದೆ.

ಸಮೂಲವಾದ ಸ್ಮೃತಿಗಳ ವಿರೋಧವು ಪ್ರಾಪ್ತವಾದರೆ. ನಿರ್ಮೂಲವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆಂಬುದು ಪೂರ್ವಪಕ್ಷಿಗಳ ಬಲವಾದ ಆಕ್ಷೇಪ. ಈ ಅಧಿಕರಣದಲ್ಲಿ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡುತ್ತಿಲ್ಲ. ಹೊರತಾಗಿ, ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ಅರ್ಥೈಸಬೇಕೆಂದು ಆಕ್ಷೇಪಿಸಲಾಗಿದೆ. ಆದ್ದರಿಂದಲೇ ಸೂತ್ರದಲ್ಲಿ ಪ್ರಸಂಗಶಬ್ದವು ಇರುತ್ತದೆ. ಭಾಷ್ಯದಲ್ಲಿ 'ಸ್ಯಾತ್' ಎಂಬ ಶಬ್ದವು, ಟೀಕೆಯಲ್ಲಿ 'ಪ್ರಸಂಗ' ಶಬ್ದವೂ ಕೂಡ ಇದೇ ಅಭಿಪ್ರಾಯದಲ್ಲಿ ಉಲ್ಲೇಖಿತವಾಗಿದೆ. ಇನ್ನು ಕಣಾದಾದಿಗಳ ಮತದಲ್ಲಿ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಹಾಗೂ ಪೌರುಷೇಯತ್ವವನ್ನು ಒಪ್ಪಿರುವುದರಿಂದ, ಸ್ಮೃತಿಯಂತೆ ಶ್ರುತಿಗಳು ಸಮಬಲವಾಗುತ್ತವೆ. ಆದರೆ ಅವರನ್ನು ಪೂರ್ವಪಕ್ಷಿಗಳನ್ನಾಗಿ ಇಲ್ಲಿ ವಿವಕ್ಷಿಸಬಾರದು.

ಒಂದುವೇಳೆ ಕಣಾದಾದಿಗಳೂ ಕೂಡ ಪೂರ್ವಪಕ್ಷಿಗಳಾದರೆ ಕಣಾದಾದಿಸ್ಮೃತಿಗಳು ಯುಕ್ತಿಬದ್ಧವಾಗಿ ವಿಚಾರವನ್ನು ಪ್ರತಿಪಾದನೆ ಮಾಡುತ್ತಿವೆ. ಶ್ರುತಿಗಳು ಹಾಗಿಲ್ಲದ ಕಾರಣ ದುರ್ಬಲವಾಗಿವೆಯೆಂದು ಪೂರ್ವಪಕ್ಷವನ್ನು ತಿಳಿಯಬೇಕಾಗುತ್ತದೆ.

ಬೌದ್ಧಾದಿಗಳೂ ಕೂಡ ವೇದವನ್ನು ಅಪ್ರಮಾಣವೆನ್ನುತ್ತಾರೆ. ಅವರ ಪ್ರಕಾರ ಆಪ್ತಪ್ರಣೀತವಾದ ಬೌದ್ಧಾಗಮಗಳ ವಿರೋಧ ಬರುವುದರಿಂದ ವೇದವು ಅಪ್ರಮಾಣವಾಗುತ್ತದೆಂಬ ಪೂರ್ವಪಕ್ಷವನ್ನು ತಿಳಿಯಬೇಕು. ಆದ್ದರಿಂದ ತತ್ವಪ್ರಕಾಶಿಕೆಯ ಪ್ರಕಾರ ಸೂತ್ರಕ್ಕೆ ಹೀಗರ್ಥ - ಸಾಂಖ್ಯಾದಿಸ್ಮೃತಿಗಳು ನಿರವಕಾಶವಾದ್ದರಿಂದ ಶ್ರುತಿಗಳಿಗೆ ಅರ್ಥಾಂತರ ಮಾಡಬೇಕೆಂದು ಆಕ್ಷೇಪ. ಪಂಚರಾತ್ರಾದಿಸ್ಮೃತಿಗಳೂ ಕೂಡ ನಿರವಕಾಶವಾಗಿರುವುದರಿಂದ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯ ಬರುತ್ತದೆಂದು ಸಿದ್ಧಾಂತ ಎಂದು. ನ್ಯಾಯಸುಧೆಯ ಮತ್ತು ತತ್ವಪ್ರದೀಪದ ಪ್ರಕಾರ ಬೌದ್ಧಾದಿಸ್ಮೃತಿಗಳು ನಿರವಕಾಶವಾಗಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡಿ, ಪಂಚರಾತ್ರಾದಿಸ್ಮೃತಿಗಳಿಗೆ ನಿರವಕಾಶತ್ವವನ್ನು ಸಮರ್ಥಿಸುವ ಮೂಲಕ, ಬೌದ್ಧಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಸಮರ್ಥಿಸಬೇಕೆಂಬ ಸಿದ್ಧಾಂತದ ಅರ್ಥವನ್ನು ತಿಳಿಯಬೇಕು. ಹೀಗೆ ವ್ಯವಸ್ಥಿತವಾಗಿ ಸೂತ್ರದ ಅರ್ಥವನ್ನು ಎರಡು ಬಗೆಯಲ್ಲಿ

ಗಮನಿಸಬೇಕು. ಶ್ರುತಿಗಳೆಲ್ಲವೂ ಅಪ್ರಮಾಣವಾಗಿವೆಯೆಂದು ಪೂರ್ವಪಕ್ಷ ಮಾಡಿದಾಗ, ಶ್ರುತಿಗಳಿಗೆ ಸಂಪೂರ್ಣವಾಗಿ ಸ್ಮೃತಿವಿರೋಧವನ್ನು ಆಕ್ಷೇಪ ಮಾಡಬೇಕು. ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿದಾಗ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಅರ್ಥವನ್ನು ಕೈಬಿಡಬೇಕಾಗುತ್ತದೆಂದು ಆಕ್ಷೇಪ ಮಾಡಬೇಕು. ಎರಡೂ ಪಕ್ಷಗಳಲ್ಲಿಯೂ ಶ್ರುತಿಗಳಿಗೆ ಸ್ಮೃತಿವಿರೋಧವು ಬರುವುದರಿಂದ ಸ್ಮೃತ್ಯಧಿಕರಣಕ್ಕೆ ಅಧ್ಯಾಯದಲ್ಲಿ ಅಸಾಂಗತ್ಯವಿರುವುದಿಲ್ಲ.

## ಪಾಶುಪತಾದಿಸ್ಮೃತಿಗಳಿಗೆ ಐದು ಬಗೆಯ ಬಾಧದೋಷ
## (ಸಿದ್ಧಾಂತ)

ಪ್ರತಿರುಂಧೇ ಸ್ಮೃತಿಸ್ತಾವತ್ ಪರಾಮರ್ಶೇ ತು ಬಾಧತೇ ।
ಶ್ರುತಿಃ ಸಸ್ಮೃತಿಕಾऽತ್ಯಂತಂ ಬಾಧತೇऽನ್ಯಸ್ಮೃತೀಃ ಪುನಃ ॥

ಪಾಶುಪತಾದಿ ಸ್ಮೃತಿಗಳನ್ನು ಪಂಚರಾತ್ರಾದಿ ಸ್ಮೃತಿಗಳು ಆಪಾತತಃ ಪ್ರತಿರೋಧ ಮಾಡುತ್ತದೆ. ಸ್ವಲ್ಪ ವಿಮರ್ಶೆ ಮಾಡಿದರೆ, ಪಂಚರಾತ್ರಾದಿ ಸ್ಮೃತಿಗಳು ಪಾಶುಪತಾದಿ ಸ್ಮೃತಿಗಳನ್ನು ಬಾಧಿಸುತ್ತದೆ. ಅದೇ ಪಂಚರಾತ್ರಾದಿ ಸ್ಮೃತಿಗಳು ಅಪೌರುಷೇಯವಾದ ಶ್ರುತಿಗಳ ಬೆಂಬಲ ಪಡೆದಾಗ ಸರ್ವಾತ್ಮನಾ ಪಾಶುಪತಾದಿಸ್ಮೃತಿಗಳನ್ನು ಬಾಧಿಸುತ್ತದೆ.

ಆಪಾತತಃ ನೋಡಿದರೆ ಶೈವಸ್ಮೃತಿಗಳು ಹೇಗೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಸ್ಪಷ್ಟವಾಗಿಯೇ ವಿಷಯಗಳನ್ನು ಪ್ರತಿಪಾದನೆ ಮಾಡುತ್ತಿವೆ. ಸರ್ವಜ್ಞನಾದ ವಿಷ್ಣುವಿನಿಂದಲೇ ರಚಿತವಾಗಿವೆ. ಆದ್ದರಿಂದ ಶೈವಾದಿಸ್ಮೃತಿಗಳಿಂದ ಸಮಾನಬಲವನ್ನು ಹೊಂದಿರುತ್ತವೆ. ಇಂತಹ ಪಂಚರಾತ್ರಾದಿಸ್ಮೃತಿಗಳಿಂದ ಶೈವಾದಿಸ್ಮೃತಿಗಳು ಪ್ರತಿರುದ್ಧವಾಗುತ್ತವೆ. ಆವಾಗ ಶೈವಾದಿಸ್ಮೃತಿಗಳ ವಿರೋಧವಿಲ್ಲದ ಶ್ರುತಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆಂಬ ಸಿದ್ಧಾಂತಿಗಳ ಅಭಿಲಾಷೆಯು ಪೂರೈಸುತ್ತದೆ.

ಸ್ವಲ್ಪ ವಿಮರ್ಶೆ ಮಾಡಿದರೆ ವಿಷ್ಣುವಿನಲ್ಲಿ ರುದ್ರಾದಿಗಳಿಗಿಂತ ಹೆಚ್ಚಿನ ಸಾರ್ವಜ್ಞವಿದೆ. ವಿಷ್ಣುವಿನಿಂದ ಹೇಳಲ್ಪಟ್ಟ ಪಂಚರಾತ್ರಾದಿಸ್ಮೃತಿಗಳಿಗೆ ಶ್ರುತಿಗಳ ಸಂವಾದವೂ ಇದೆ. ರುದ್ರಾದಿಗಳಿಗಿಂತಲೂ ವಿಷ್ಣು ಹೆಚ್ಚು ಆಪ್ತನೆಂದು ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಶೈವಾದಿಸ್ಮೃತಿಗಳಿಗಿಂತಲೂ ಪಂಚರಾತ್ರಾದಿಸ್ಮೃತಿಗಳೇ ಪ್ರಬಲ ಎನಿಸುತ್ತವೆ. ಯುಕ್ತಿಯ ಸಂವಾದವಿಲ್ಲದೇ ಸುಮ್ಮನೆ ವಾಕ್ಯ ಪ್ರಯೋಗವನ್ನು ಮಾಡುವವನಿಗಿಂತಲೂ ಯುಕ್ತಿಬದ್ಧವಾಗಿ ಅರ್ಥಪೂರ್ಣವಾದ ವಾಕ್ಯಗಳನ್ನು ರಚನೆ ಮಾಡುವವನು ಹೇಗೆ ಬಲಿಷ್ಠನೋ ? ಅದರಂತೆ ಶ್ರುತಿಗಳ ಸಂವಾದವಿರುವ ಅರ್ಥಪೂರ್ಣವಾದ ಪಂಚರಾತ್ರಾದಿಸ್ಮೃತಿಗಳು ಬಲಿಷ್ಠವಾಗುತ್ತವೆ.

ಇನ್ನೂ ಹೆಚ್ಚು ವಿಮರ್ಶೆ ಮಾಡಿದರೆ ಶೈವಾದಿಸ್ಮೃತಿಗಳು ಶ್ರುತಿಗಳಿಂದಲೇ ಅತ್ಯಂತವಾಗಿ ಬಾಧಿತವಾಗುತ್ತವೆ. ಏಕೆಂದರೆ ಶೈವಾದಿಸ್ಮೃತಿಗಳಂತೆ ಸಮಾನಬಲಹೊಂದಿರುವ ಅಥವಾ ಹೆಚ್ಚು

ಬಲಹೊಂದಿರುವ ಪಂಚರಾತ್ರಾದಿಸ್ಮೃತಿಗಳ ಬೆಂಬಲ ಶ್ರುತಿಗಳಿಗಿದೆ. ಕೇವಲ ಶ್ರುತಿಯು ಪೂರ್ವಪಕ್ಷಿಗಳು ಹೇಳುವಂತೆ ದುರ್ಬಲವಾಗಿರಬಹುದು. ಆದರೆ ಪಂಚರಾತ್ರಾದಿ ಸ್ಮೃತಿಗಳಿಂದ ಸಹಿತವಾದ ಶ್ರುತಿಯು ಬಹಳ ಬಲಿಷ್ಠವಾಗುತ್ತದೆ. ಕುದುರೆಯನ್ನು ಎದುರಿಸಲು ಕೇವಲ ಕಾಲಾಳುವಿಗೆ ಸಾಧ್ಯವಾಗದಿರಬಹುದು. ಆದರೆ ಮತ್ತೊಂದು ಕುದುರೆಯ ಮೇಲೆ, ಅಥವಾ ಆನೆಯ ಮೇಲೆ ಕುಳಿತಾಗ ಅದೇ ಕಾಲಾಳುವಿಗೆ ಹೆಚ್ಚಿನ ಬಲ ಬರುವಂತೆ ಶ್ರುತಿಗಳಿಗೂ ಪಾಶುಪತಾದಿಸ್ಮೃತಿಗಳಿಗಿಂತ ಹೆಚ್ಚಿನ ಬಲವಿರುತ್ತದೆ.

ಅಥವಾ ಮುಂದೆ ನವಿಲಕ್ಷಣತ್ವಾಧಿಕರಣದಲ್ಲಿ ಯಾವುದೇ ದೋಷಗಳ ಆಶಂಕೆಯಿಲ್ಲದ ಶ್ರುತಿಗಳು ಸಹಜವಾಗಿ ಪ್ರಬಲವಾಗಿರುತ್ತವೆಂದು ಸಮರ್ಥಿಸುತ್ತಾರೆ. ಅದನ್ನು ವಿವಕ್ಷಿಸಿದಾಗ ಪಾಶುಪತಾದಿಸ್ಮೃತಿಗಳಿಗೆ ಇನ್ನೂ ಹೆಚ್ಚಿನ ಬಾಧದೋಷವು ಬರುತ್ತದೆ. ಅಥವಾ ಅನೇಕ ಪ್ರಮಾಣಗಳಿಂದ ಶೈವಾದಿಸ್ಮೃತಿಗಳೆಲ್ಲವೂ ಅಪ್ರಮಾಣವಾಗಿವೆ ಎಂದು ನೇರವಾಗಿಯೇ ತೀರ್ಮಾನವಾಗುತ್ತಿದೆ. 'ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ' ಇತ್ಯಾದಿ ವಾಕ್ಯವನ್ನು ಗಮನಿಸಿದಾಗ ಕೇವಲ ದುರ್ಜನರಿಗೆ ದಿಕ್ಕು ತಪ್ಪಿಸುವುದಕ್ಕಾಗಿಯೇ ಶೈವಾದಿಸ್ಮೃತಿಗಳು ರಚಿತವಾಗಿವೆ ಎಂದು ತಿಳಿಯುವುದರಿಂದ ಸ್ವತಃ ಅಪ್ರಮಾಣಗಳಾಗಿವೆ. ಇಂತಹ ಶೈವಾದಿಸ್ಮೃತಿಗಳಿಗೆ ಯಾವುದೇ ರೀತಿಯಲ್ಲಿಯೂ ಪ್ರಾಬಲ್ಯ ಬರಲು ಸಾಧ್ಯವಿಲ್ಲ. ಹೊರತಾಗಿ ಅತಿತಮವಾದ ಬಾಧದೋಷವೇ ಬರುತ್ತದೆ.

## ಶೈವಾದಿ ಶಾಸ್ತ್ರಗಳು ಅಪ್ರಮಾಣ

ಪಾಶುಪತಾದಿಸ್ಮೃತಿಗಳಿಂದ ವೇದ, ಪಂಚರಾತ್ರಗಳಲ್ಲಿ ಹೇಳಲ್ಪಟ್ಟ ವಿಷ್ಣುಪಾರಮ್ಯವನ್ನು ನಿರಾಕರಣೆ ಮಾಡಬೇಕಾದರೆ ಮೊದಲು ಪಾಶುಪತಾದಿ ಸ್ಮೃತಿಗಳಿಗೆ ಪ್ರಾಮಾಣ್ಯವನ್ನ ನಿರ್ಧಾರ ಮಾಡಬೇಕು. ಆದರೆ ಇದು ಸಾಧ್ಯವಿಲ್ಲ. ಶೈವ, ಪಂಚರಾತ್ರ, ಸೌರ ಮೊದಲಾದ ಆಗಮಗಳು ಏಕರೂಪವಾಗಿ ಯಾವುದೇ ವಿಷಯವನ್ನು ಪ್ರತಿಪಾದನೆ ಮಾಡುತ್ತಿಲ್ಲ. ಒಂದು ಆಗಮದಲ್ಲಿ ಯಾವ ವಿಚಾರವನ್ನು ಪ್ರತಿಪಾದನೆ ಮಾಡಲಾಗಿರುತ್ತದೋ, ಅದಕ್ಕೆ ವಿರುದ್ಧವಾಗಿ ಇನ್ನೊಂದು ಆಗಮವು ವಿಷಯವನ್ನು ಪ್ರತಿಪಾದನೆ ಮಾಡುತ್ತದೆ. ಶಿವಪಾರಮ್ಯವನ್ನು ಶೈವಶಾಸ್ತ್ರವು ನಿರೂಪಣೆ ಮಾಡಿದರೆ, ಕಾಪಿಲಾದಿ ಆಗಮಗಳು ಅದನ್ನು ನಿರಾಕರಣೆ ಮಾಡುತ್ತವೆ. ಪರಸ್ಪರ ವಿರೋಧಿಯಾದ ನಿರೂಪಣೆಯಿರುವ ಈ ಎರಡು ಆಗಮಗಳು ಪ್ರಮಾಣವಾಗಲಾರವು. ಇವುಗಳಲ್ಲಿ ಒಂದು ಮಾತ್ರ ಸಾಧುವಾಗುತ್ತದೆ.ಇದಕ್ಕೆ ವಿರೋಧಿಯಾಗಿರುವ ಉಳಿದ ಆಗಮಗಳು ಅಸಾಧುವಾಗಿವೆಯೆಂದು ನಿರ್ಧಾರ ಮಾಡಲು ಹೇಗೆ ಸಾಧ್ಯ? ಆಯಾ ಪಂಥದವರು ತಮ್ಮ ತಮ್ಮ ಗುರುಗಳನ್ನೇ ಸರ್ವಜ್ಞರೆಂದು, ಆಪ್ತರೆಂದು ಹೇಳುತ್ತಾರೆ. ಪ್ರತಿಯೊಬ್ಬರೂ ಕೂಡ ಹೀಗೆಯೇ ಹೇಳುವುದರಿಂದ ಇವನೇ ಸರ್ವಜ್ಞನಾಗಿದ್ದಾನೆ, ಇವನೇ ವಿಶ್ವಾಸಕ್ಕೆ ಅರ್ಹನಾಗಿದ್ದಾನೆ ಎಂಬ ನಿರ್ಧಾರವು ಬಹಳ ಕಷ್ಟವಾಗುತ್ತದೆ. ಏಕೆಂದರೆ ಆಯಾ ಆಗಮಗಳು ಅನುಯಾಯಿಗಳು ತಮ್ಮ ಮೂಲಪುರುಷರ ಬಗ್ಗೆ ಹೇಳುವ ಚರಿತ್ರೆ ಮಹಾತ್ಮ್ಯಗಳನ್ನು ಉಳಿದವರು ಒಪ್ಪುವುದಿಲ್ಲ. ಹೀಗೆ ಎಲ್ಲಾ ಸ್ಮೃತಿಗಳು ಸಮಾನವಾಗಿರುವಾಗ ಇವುಗಳಲ್ಲಿ ಯಾವುದನ್ನು ಪ್ರಮಾಣವೆಂದು ಸ್ವೀಕಾರ ಮಾಡಬೇಕು, ಯಾವುದನ್ನು

ಅಪ್ರಮಾಣವೆಂದು ಪರಿತ್ಯಾಗ ಮಾಡಬೇಕು ಎಂಬ ನಿರ್ಧಾರವೇ ಕಷ್ಟವಾಗುತ್ತದೆ. ಅಂತಿಮವಾಗಿ ಇದರ ಪರಿಹಾರಕ್ಕಾಗಿ ಅಪೌರುಷೇಯವಾದ ವೇದವನ್ನೇ ಅವಲಂಬಿಸಬೇಕು. ಅಪೌರುಷೇಯವಾದ ವೇದವು ಸ್ವತಃಪ್ರಮಾಣವಾಗಿದೆ. ಈ ದೃಷ್ಟಿಯಿಂದ ವೇದದ ಸಂವಾದವಿರುವ ಪಂಚರಾತ್ರ ಮೊದಲಾದ ಆಗಮಗಳು ಪ್ರಮಾಣವಾಗುತ್ತವೆಂದು ನಿರ್ಧಾರ ಮಾಡಬಹುದು.

ಮತ್ತು ಶೈವಾದಿ ಆಗಮಗಳು ಹೇಳುವ ರೀತಿಯಲ್ಲಿ ಕರ್ಮಾನುಷ್ಠಾನಗಳನ್ನು ಮಾಡಿದರೂ ಕೂಡ ಕೆಲವು ವೇಳೆ ಮಾತ್ರ ಫಲ ದೊರೆಯುತ್ತದೆ. ಅನೇಕ ಬಾರಿ ಅನುಷ್ಠಾನಗಳು ವಿಫಲವಾಗುವುದನ್ನು ನಾವು ಕಂಡಿದ್ದೇವೆ. ನಮ್ಮ ಲೋಪದೋಷಗಳಿಂದ ಫಲವು ದೊರೆಯುತ್ತಿಲ್ಲವೋ, ಅಥವಾ ಆಯಾ ಆಗಮಪ್ರವರ್ತಕರೇ ಸುಳ್ಳು ಹೇಳಿ ವಂಚನೆ ಮಾಡಿದ್ದಾರೋ, ಎಂಬ ಸಂದೇಹ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಆವಾಗ ಆಯಾ ಗ್ರಂಥಗಳ ಪ್ರಾಮಾಣ್ಯವನ್ನೂ ಕೂಡ ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ. ಇದರಂತೆ ವೇದ ಪಂಚರಾತ್ರಗಳಲ್ಲಿ ಹೇಳಿದ ಕರ್ಮಾನುಷ್ಠಾನಗಳನ್ನು ಮಾಡಿದರೂ ಅನೇಕ ಬಾರಿ ನಮಗೆ ಫಲ ದೊರೆಯುತ್ತಿಲ್ಲ. ಆದ್ದರಿಂದ ವೇದ ಪಂಚರಾತ್ರಗಳನ್ನೂ ಕೂಡ ನೀವು ಅಪ್ರಮಾಣವೆಂದು ಹೇಳಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ವೇದದಲ್ಲಿ ಹೇಳಿದ ಕರ್ಮಾನುಷ್ಠಾನ ಬಹಳ ಕಠಿಣ. ಕುಲಶುದ್ಧಿ, ಬಾಲ್ಯದಿಂದ ಅನುಷ್ಠಾನ ಮಾಡಬೇಕಾದ ಎಲ್ಲಾ ವೈದಿಕಸಂಸ್ಕಾರಗಳ ಸಂಪನ್ನತೆ, ಸ್ವಲ್ಪವೂ ಲೋಪವಿಲ್ಲದ ಕರ್ಮಾನುಷ್ಠಾನ ಮುಂತಾದವುಗಳು ಪರಿಪೂರ್ಣವಾಗಿದ್ದರೆ ಮಾತ್ರ ಫಲವು ದೊರೆಯುತ್ತದೆ. ಕಠಿಣನಿಯಮನಿಬಂಧನೆಗಳನ್ನೊಳಗೊಂಡ ವೈದಿಕ ಕರ್ಮಾನುಷ್ಠಾನಗಳಿಂದ ಅನೇಕ ಬಾರಿ ಫಲವು ದೊರೆಯಲಿಲ್ಲವೆಂದು ವೇದಗಳನ್ನು ಅಪ್ರಮಾಣವೆಂದು ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಇಷ್ಟೊಂದು ಕಠಿಣನಿಯಮಗಳು ಆಗಮದಲ್ಲಿ ಹೇಳಿರುವುದಿಲ್ಲ. ಶೈವಾದಿ ಆಗಮಗಳಲ್ಲಿ ಹೇಳಲ್ಪಟ್ಟ ನಿಯಮಗಳೆಲ್ಲವೂ ಬಹಳ ಸುಲಭ ಹಾಗೂ ಸರಳ. ಹೀಗಿದ್ದರೂ ಕೂಡ ಅವುಗಳಿಂದ ಫಲವು ದೊರಯದಿದ್ದಾಗ ಅವುಗಳ ಪ್ರಾಮಾಣ್ಯದ ಬಗ್ಗೆಯೇ ಸಂದೇಹವುಂಟಾಗುತ್ತದೆ. ಕರ್ಮಾನುಷ್ಠಾನಗಳು ವಿಫಲವಾಗಿರುವುದೇ ಹೆಚ್ಚು ಕಂಡಿರುವುದರಿಂದ ಪಾಶುಪತ ಮುಂತಾದ ಆಗಮಗಳಿಗೆ ಪ್ರಾಮಾಣ್ಯವನ್ನು ನಿರ್ಧರಿಸುವುದು ಸಾಧ್ಯವಿಲ್ಲ.

ವೇದದಲ್ಲಿ ಹೇಳಿದಂತೆ ಕರ್ಮಗಳನ್ನು ಆಚರಣೆ ಮಾಡಿದಾಗ ಫಲವು ದೊರೆಯದಿದ್ದರೂ ವೇದದ ಪ್ರಾಮಾಣ್ಯಕ್ಕೆ ಯಾವುದೇ ಚ್ಯುತಿಯಿಲ್ಲ ಎನ್ನಲು ಇನ್ನೂ ಒಂದು ಕಾರಣವಿದೆ. ಯಾವುದೇ ಒಂದು ವಾಕ್ಯವು ಅಪ್ರಮಾಣವೆನಿಸಬೇಕಾದರೆ ಅದನ್ನು ರಚನೆ ಮಾಡಿರುವ ವ್ಯಕ್ತಿಯಲ್ಲಿ ಅಜ್ಞಾನ, ಭ್ರಾಂತಿ ಮೊದಲಾದ ಮಾನಸಿಕ ದೋಷಗಳಿರಬೇಕು. ವಸ್ತುಗಳನ್ನು ಸರಿಯಾಗಿ ತಿಳಿದುಕೊಳ್ಳದಿರುವಾಗ ಅದನ್ನು ತಪ್ಪಾಗಿ ಗ್ರಹಿಸಿ, ಇನ್ನೊಬ್ಬರಿಗೆ ಭ್ರಾಂತಿಯನ್ನು ಹುಟ್ಟಿಸಿ, ಮೋಸಗೊಳಿಸಬೇಕೆಂಬ ಉದ್ದೇಶವಿದ್ದಾಗ ವಾಕ್ಯಗಳು ಭ್ರಮೆಯನ್ನುಂಟು ಮಾಡಿ, ಅಪ್ರಮಾಣವಾಗುತ್ತವೆ. ಇದು ಪೌರುಷೇಯ ಗ್ರಂಥಗಳಲ್ಲಿ ಮಾತ್ರ ಮನೋದೋಷದಿಂದ ಬರುವಂತಹ ಅಪ್ರಾಮಾಣ್ಯದೋಷ. ಆದರೆ ವೇದಗಳು ಅಪೌರುಷೇಯವಾದ್ದರಿಂದ ಇಂತಹ ಮಾನಸಿಕದೋಷ ದೌರ್ಬಲ್ಯಗಳಿಗೆ ಅವಕಾಶವೇ ಇಲ್ಲ. ಯಾವುದೇ

ವ್ಯಕ್ತಿಯು ವೇದವನ್ನು ರಚನೆ ಮಾಡಿಲ್ಲ. ಆದ್ದರಿಂದ ವೇದವನ್ನು ಅಪ್ರಮಾಣವೆಂದು ಸಾಧಿಸಲಾಗದು. ಅಪೌರುಷೇಯವಾದ್ದರಿಂದಲೇ ಅದು ಪ್ರಮಾಣವೆಂದು ಸಿದ್ಧವಾಗಿದೆ.

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರವನ್ನು ಬೇರೆ ಮತದವರು ಪ್ರತ್ಯೇಕ ಅಧಿಕರಣವೆನ್ನುತ್ತಾರೆ. ಅಭ್ಯಧಿಕಾಶಂಕೆಯಿದ್ದ ಮಾತ್ರಕ್ಕೆ ಪ್ರತ್ಯೇಕ ಅಧಿಕರಣವಾಗುವುದಿಲ್ಲ. ಸೂತ್ರಗಳಲ್ಲಿ ಹೇಳಲ್ಪಟ್ಟ ಪ್ರಧಾನ ಹೇತುವಿನ ಮೇಲೆ ಅಭ್ಯಧಿಕಾಶಂಕೆ ಬಂದರೆ ಮಾತ್ರ ಅದರ ಪರಿಹಾರಕ್ಕಾಗಿ ಮತ್ತೊಂದು ಅಧಿಕರಣ ಹೊರಡಬೇಕು. ಆದರೆ 'ಇತರೇಷಾಂ ಚಾನುಪಲಬ್ಧೇಃ' ಎಂಬಲ್ಲಿ ಅಪ್ರಮಾಣವಾದ ಫಲದ ಅನುಪಲಂಭವೆಂಬ ಹೇತುವಿನ ಮೇಲೆ ಅಭ್ಯಧಿಕಾಶಂಕೆಯು ಪ್ರಾಪ್ತವಾದಾಗ ಅದರ ಪರಿಹಾರಕ್ಕಾಗಿ ಅತಿದೇಶ ಮಾಡುತ್ತಾ 'ಏತೇನ ಯೋಗಃ' ಎಂಬ ಸೂತ್ರವು ಹೊರಟಿದೆ, ಹೊರತು ಪಾಶುಪತಾದಿಸ್ಮೃತಿಗಳಿಗೆ ಯಾವ ಬಾಧಾದಿದೋಷಗಳನ್ನು ಪ್ರಥಮಸೂತ್ರವು ಹೇಳುತ್ತಿದೆಯೋ, ಅದರ ಮೇಲೆ ಅಭ್ಯಧಿಕಾಶಂಕೆಯ ಪರಿಹಾರಕ್ಕಾಗಿ ಹೊರಟಿಲ್ಲ. ಆದ್ದರಿಂದ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬಾರದು.

## ಮಾಯಾವಾದದಲ್ಲಿ ಸೂತ್ರಾರ್ಥ

ಮಾಯಾವಾದಿಗಳ ಅಧಿಕರಣ ರಚನೆ ಹೀಗಿದೆ - ಶ್ರುತಿಗಳಿಂದ ವೇದಾಂತ ತತ್ವಗಳನ್ನು ತಿಳಿಯುವುದು ಬಹಳ ಕಷ್ಟ. ಶ್ರುತಿಗಳ ವ್ಯಾಖ್ಯಾನದಿಂದ ಮಾತ್ರ ಅವುಗಳ ಅರ್ಥವನ್ನು ನಾವು ತಿಳಿಯಬಹುದು. ಸ್ವತಂತ್ರವಾಗಿ ನಮ್ಮಿಂದ ಶ್ರುತಿಯ ಅರ್ಥಗಳನ್ನು ತಿಳಿಯಲು ಸಾಧ್ಯವಿಲ್ಲ. ಶ್ರುತಿಗಳ ವ್ಯಾಖ್ಯಾನವೆಂದರೆ ಸ್ಮೃತಿಗಳೇ ಆಗಿವೆ. ಆದರೆ ಮನುಸ್ಮೃತಿ ಮೊದಲಾದವು ಷೋಡಶಸಂಸ್ಕಾರಾದಿ ಆಚರಣೆಯಲ್ಲಿಯೇ ಕೃತಕೃತ್ಯವಾಗಿವೆ. ಆದ್ದರಿಂದ ಮನ್ವಾದಿ ಶ್ರುತಿಗಳ ಆಧಾರದಿಂದ ಸ್ಮೃತಿಗಳ ಅರ್ಥವನ್ನು ತಿಳಿಯಲಾಗದು. ಕಾಪಿಲಸ್ಮೃತಿಯು ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟಿಯು ಆಗುತ್ತದೆಂದು ನಿರೂಪಣೆ ಮಾಡುತ್ತಿದೆ. ಈ ಕಾಪಿಲಸ್ಮೃತಿಗೆ ಬೇರೆ ಅರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ. ಮತ್ತು ಕಪಿಲನಂತಹ ಮಹರ್ಷಿಗಳು ರಚನೆ ಮಾಡಿರುವುದರಿಂದ ಸರ್ವಥಾ ಅಪ್ರಾಮಾಣ್ಯವನ್ನು ಹೇಳಬಾರದು. ಈ ಸ್ಮೃತಿಗಳಿಗೆ ಅವಿರುದ್ಧವಾಗಿ ವೇದಾಂತವಾಕ್ಯಗಳಿಗೆ ಅರ್ಥವನ್ನು ಹೇಳಬೇಕು. ಹೊರತಾಗಿ ವಿರುದ್ಧವಾಗಿ ಬ್ರಹ್ಮನೇ ಜಗತ್ತಿಗೆ ಕಾರಣನೆಂದು ಹೇಳಬಾರದು. ಇಷ್ಟು ಪೂರ್ವಪಕ್ಷ.

ಮನ್ವಾದಿಸ್ಮೃತಿಗಳಲ್ಲಿ ಇತರ ಪುರಾಣಾದಿಗಳಲ್ಲಿ ಬ್ರಹ್ಮನೇ ಜಗತ್ತಿಗೆ ಕಾರಣವೆಂಬ ಅನೇಕ ವಾಕ್ಯಗಳಿವೆ. ಕಾಪಿಲಸ್ಮೃತಿಯ ಪ್ರಾಮಾಣ್ಯಕ್ಕಾಗಿ ಪ್ರಕೃತಿಯನ್ನು ಜಗತ್ಕಾರಣವೆಂದು ಒಪ್ಪಿದರೆ ಈ ಎಲ್ಲಾ ಸ್ಮೃತಿಗಳ ಪ್ರಾಮಾಣ್ಯವನ್ನು ಕೈಬಿಡಬೇಕಾಗುತ್ತದೆ. ಮನ್ವಾದಿಸ್ಮೃತಿಗಳು ವೇದಗಳಿಗೆ ಅನುಸಾರಿಯಾಗಿವೆ. ಆದ್ದರಿಂದ ಮನ್ವಾದಿಸ್ಮೃತಿಗಳಲ್ಲಿ ಹೇಳಿದ್ದನ್ನೇ ಒಪ್ಪಿ, ವಿರುದ್ಧವಾದ ಸ್ಮೃತಿಗಳನ್ನೇ ಪರಿತ್ಯಾಗ ಮಾಡಬೇಕು. ಪ್ರಧಾನಕಾರಣತ್ವವಾದವನ್ನು ಸಮರ್ಥಿಸುವ ಕಾಪಿಲಸ್ಮೃತಿಯನ್ನು ಅಪ್ರಮಾಣವೆನ್ನಬೇಕು. ಅಂತಹ ಸ್ಮೃತಿಯನ್ನು ರಚನೆ ಮಾಡಿದ ಕಪಿಲಾದಿಗಳು ಸರ್ವಜ್ಞರೂ ಆಗಿರುವುದಿಲ್ಲ. ಹೀಗಿರುವಾಗ ಅಪ್ರಮಾಣವೆನ್ನಲು ಏಕೆ ಸಂಕೋಚ. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ಮಂಡನೆಯು ಅಸಾಧುವಾಗಿದೆ. ಏಕೆಂದರೆ ಶ್ರುತಿಗಳ ಅರ್ಥವನ್ನು ತಿಳಿಯುವುದು ಕ್ಲಿಷ್ಟವೆಂಬ ಉಪಪಾದನೆಯೇ ತಪ್ಪು. ಈಗಾಗಲೇ ಈಕ್ಷತ್ಯಧಿಕರಣದಲ್ಲಿ 'ಗತಿಸಾಮಾನ್ಯಾತ್' ಎಂಬ ಸೂತ್ರದಲ್ಲಿ

ಸಕಲ ವೇದಾಂತಗಳು ಒಂದೇ ಅಭಿಪ್ರಾಯವುಳ್ಳವುಗಳು ಎಂದು ಸಮರ್ಥಿಸಿದ್ದೇವೆ. ಬ್ರಹ್ಮನೇ ಜಗತ್ತಿಗೆ ಕಾರಣನಾಗಿದ್ದಾನೆಂಬ ವಿಷಯವನ್ನು ಸಂಪೂರ್ಣ ಸಮನ್ವಯಾಧ್ಯಾಯದಲ್ಲಿ ಸ್ಪಷ್ಟವಾಗಿ ಉಪಪಾದನೆ ಮಾಡಿದ್ದೇವೆ. ಹೀಗಿರುವಾಗ ಶ್ರುತಿಗಳೆಲ್ಲವು ಬಹುಮುಖವಾಗಿರುವುದರಿಂದ ಕ್ಲಿಷ್ಟ ಎಂಬ ವಾದವೇ ತಪ್ಪು.

ಮತ್ತು ಪೂರ್ವಮೀಮಾಂಸೆಯಲ್ಲಿ ಶ್ರುತಿವಿರುದ್ಧವಾದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ನಿಶ್ಚಯಿಸಿದ್ದಾಗಿದೆ. ಹೀಗಿರುವಾಗ ಪುನಃ ಉತ್ತರಮೀಮಾಂಸೆಯ ಈ ಸ್ಮೃತ್ಯಧಿಕರಣದಲ್ಲಿ ಅದೇ ಆಕ್ಷೇಪ ಮಾಡಲು ಸಾಧ್ಯವಿಲ್ಲ. ಮತ್ತು ಸೂತ್ರದಲ್ಲಿರುವ ಸ್ಮೃತಿಯೆಂಬ ಶಬ್ದವು ಅವೈದಿಕವಾದ ಸಕಲ ಸ್ಮೃತಿಗಳನ್ನು ಹೇಳುತ್ತಿದೆ. ಆದರೆ ನೀವು ಅವೈದಿಕ ಸ್ಮೃತಿಗಳಲ್ಲಿ ಸಾಂಖ್ಯಸ್ಮೃತಿಯೆಂಬುದನ್ನು ಮಾತ್ರ ವಿವಕ್ಷಿಸಿ ವ್ಯಾಖ್ಯಾನಿಸುತ್ತಿದ್ದೀರಿ. ಇದು ತಪ್ಪು.

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಸಾಂಖ್ಯಸಿದ್ಧಾಂತ ಹೇಳುವ ಪ್ರಕೃತಿಯಿಂದ ಹುಟ್ಟುವ ಮಹತ್ತತ್ತ್ವ ಅಹಂಕಾರತತ್ತ್ವಗಳ ಉಲ್ಲೇಖ ಯಾವುದೇ ಶ್ರುತಿಗಳಲ್ಲಿ ಕಾಣಸುವುದಿಲ್ಲ. ಆದ್ದರಿಂದಲೂ ಕಾಪಿಲಸ್ಮೃತಿಯು ಅಪ್ರಮಾಣವೆಂದು.

ಇದೂ ಕೂಡ ಸರಿಯಲ್ಲ. ಕಾಠಕೋಪನಿಷತ್ತಿನಲ್ಲಿ 'ಮಹತಃ ಪರಮವ್ಯಕ್ತಮ್' ಎಂಬುದಾಗಿ ಮಹತ್ತತ್ತ್ವದ ಉಲ್ಲೇಖವಿರುವುದು ಸ್ಪಷ್ಟವಾಗಿ ಗೋಚರವಾಗುತ್ತಿದೆ.

'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರವನ್ನು ಶಾಂಕರಭಾಷ್ಯದಲ್ಲಿ ಪ್ರತ್ಯೇಕ ಅಧಿಕರಣವೆಂದಿದ್ದಾರೆ. ಸಾಂಖ್ಯಸ್ಮೃತಿಯನ್ನು ನಿರಾಕರಣೆ ಮಾಡಿರುವುದರಿಂದ ಯೋಗಸ್ಮೃತಿಯೂ ಕೂಡ ವೇದವಿರುದ್ಧವಾಗಿರುವ ಕಾರಣದಿಂದಲೇ ನಿರಾಕರಿಸಲ್ಪಟ್ಟಿದೆ ಎಂಬುದು ಅವರ ವ್ಯಾಖ್ಯಾನ.

ಇದೂ ಕೂಡ ತಪ್ಪು. ಯೋಗ ದರ್ಶನದ ನಿರಾಕರಣೆಗಾಗಿ ಪ್ರತ್ಯೇಕ ಅಧಿಕರಣದ ಅವಶ್ಯಕತೆಯಿಲ್ಲ. 'ತತ್ ಕಾರಣಂ ಸಾಂಖ್ಯಯೋಗಾಧಿಮ್ಯಂ' ಎಂದು ಸಾಂಖ್ಯವೂ ಕೂಡ ವೇದಾಂತದರ್ಶನವೆಂದೇ ಪರಿಗ್ರಹೀತವಾಗಿದೆ. ಒಂದು ವೇಳೆ ಸಾಂಖ್ಯಶಬ್ದಕ್ಕೆ ತತ್ತ್ವಜ್ಞಾನ ಎಂಬರ್ಥವನ್ನು ವಿವಕ್ಷಿಸಿ ವ್ಯಾಖ್ಯಾನ ಮಾಡುವುದಾದರೆ, ನಾವೂ ಕೂಡ ಯೋಗಶಬ್ದಕ್ಕೆ ಜ್ಞಾನೋಪಾಯ ಎಂಬ ಅರ್ಥವನ್ನು ಸ್ವೀಕರಿಸಿ, ಯೋಗದರ್ಶನವಲ್ಲವೆಂದು ಸಮರ್ಥಿಸುತ್ತೇವೆ. ಆದ್ದರಿಂದ

ಪೂರ್ವಪಕ್ಷಸಮುತ್ಥಾನಮಾದ್ಯೇ ಹೇತೋರಸಿದ್ಧತಾ ।
ದ್ವಿತೀಯೇಽಭ್ಯಧಿಕಾಶಂಕಾನುಪಪತ್ತಿಸ್ತೃತೀಯಕೇ ॥

ಅದ್ವೈತಿಗಳ ಅಧಿಕರಣಶರೀರದಲ್ಲಿ ಮೊದಲನೇ ಸೂತ್ರದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಎರಡನೆಯ ಸೂತ್ರದ ಹೇತು ಅಸಿದ್ಧವಾಗಿದೆ. ಅಭ್ಯಧಿಕಾಶಂಕೆಯೇ ಹುಟ್ಟದ ಕಾರಣ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ.

* * * *

# ನ ವಿಲಕ್ಷಣತ್ವಾಧಿಕರಣ

## ಸಂಗತಿ, ಸಂಶಯ, ಪೂರ್ವಪಕ್ಷಗಳು

ಹಿಂದಿನ ಸ್ಮೃತ್ಯಧಿಕರಣದಲ್ಲಿ ಎಲ್ಲಾ ಬಗೆಯ ಸ್ಮೃತಿಗಳ ವಿರೋಧವನ್ನು ಪರಿಹರಿಸಿದರು. ಈಗ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಫಲವ್ಯಭಿಚಾರವಿರುವುದರಿಂದ ಸ್ಮೃತಿಗಳೆಲ್ಲವೂ ಅಪ್ರಮಾಣವಾಗುತ್ತವೆ ಎಂಬುದನ್ನು ಸಿದ್ಧಾಂತ ಮಾಡಲಾಯಿತು. ಅದೇ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಶ್ರುತಿಗಳೂ ಕೂಡ ಫಲವ್ಯಭಿಚರಿತವಾದ್ದರಿಂದ ಅಪ್ರಮಾಣವಾಗಬೇಕಲ್ಲವೇ? ಎಂಬ ಆಕ್ಷೇಪ ಬರುತ್ತದೆ. ಅದರ ಪರಿಹಾರಕ್ಕಾಗಿ ಈ ಅಧಿಕರಣ ಹೊರಡುತ್ತಿದೆ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಈ ಅಧಿಕರಣದ ಪೂರ್ವಪಕ್ಷ ಹೊರಡುತ್ತಿರುವುದರಿಂದ ಆಪವಾದಿಕೀ ಸಂಗತಿಯನ್ನು ತಿಳಿಯಬೇಕು.

ಮೂಲದಲ್ಲಿ 'ಯುಕ್ತಿವಿರುದ್ಧಂ' ಎಂದಿದ್ದಾರೆ. 'ಫಲಾನುಪಲಂಭ' ಎಂಬ ಯುಕ್ತಿವಿರುದ್ಧವಾಗಿದೆ ಎಂದು ಇದರ ಅರ್ಥ. 'ಸಂವಾದಾತ್' ಎಂಬಲ್ಲಿ 'ಜ್ಞಾಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ವೇದಪ್ರಾಮಾಣ್ಯವು ಸಂವಾದದಿಂದ ತಿಳಿಯುತ್ತದೋ, ಅಥವಾ ಸ್ವಾಭಾವಿಕವಾಗಿ ತಿಳಿಯುತ್ತದೋ ಎಂದು ಸಂಶಯ. ಒಂದು ವೇಳೆ ವೇದಪ್ರಾಮಾಣ್ಯವು ಸಂವಾದೈಕನಿಬಂಧನವಾದರೆ ಕಾರೀರ್ಯಾದ್ಯನುಷ್ಠಾನಗಳಿಂದ ದೃಷ್ಟ್ಯಾದಿಗಳ ಕಾಣದಿರುವಿಕೆಯು ವ್ಯಭಿಚರಿತವಾಗಿದೆ ಎಂದು ಸಿದ್ಧವಾಗುತ್ತದೆ. ವೇದದ ಏಕದೇಶವಾದ ಕಾರೀರ್ಯಾದಿ ವಾಕ್ಯಗಳು ಯುಕ್ತಿವಿರುದ್ಧವೆಂದು ಸಿದ್ಧವಾಗುವುದರಿಂದ ವೇದವು ಅಪ್ರಮಾಣವಾಗುತ್ತದೆ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಫಲ.

ಒಂದು ವೇಳೆ ವೇದಪ್ರಾಮಾಣ್ಯವು ಸಹಜವಾಗಿ ಸಿದ್ಧವಾಗುವುದಾದರೆ, ಕಾರೀರ್ಯಾದ್ಯನುಷ್ಠಾನ ಮಾಡಿದಾಗ ವೃಷ್ಟ್ಯಾದಿಗಳ ಅದೃಷ್ಟವು ಕರ್ತೃವೈಗುಣ್ಯನಿಮಿತ್ತಕವೆಂದು ಸಿದ್ಧವಾಗುತ್ತದೆ. ಆದ್ದರಿಂದ ವೇದದ ಏಕದೇಶರೂಪವಾದ ಕಾರೀರ್ಯಾದಿವಾಕ್ಯಗಳು ಯುಕ್ತಿವಿರುದ್ಧವಲ್ಲವೆಂದು ಸಿದ್ಧವಾಗುವುದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಲಾಗದು. ಆವಾಗ ಪ್ರಥಮಾಧ್ಯಾಯದಲ್ಲಿ ಸಮನ್ವಯ ಮಾಡಿದ ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುತ್ತದೆ. ಇಷ್ಟು ಸಿದ್ಧಾಂತದ ಫಲ.

ಶ್ರುತಿಗಳಿಗೆ ಅಪೌರುಷೇಯತ್ವವನ್ನು ಮತ್ತು ಪ್ರಾಮಾಣ್ಯವನ್ನು ಒಪ್ಪುವುದಾದರೂ, ದುರ್ಬಲವಾಗಿವೆ. ಇವುಗಳನ್ನು ಪ್ರಬಲವಾದ ಸ್ಮೃತಿವಾಕ್ಯಗಳು ಪರಿಹರಿಸುತ್ತವೆ ಎಂದು ಹಿಂದಿನ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದರು. ಆದರೆ ಈ ಅಧಿಕರಣದಲ್ಲಿ ವೇದವು ಅಪೌರುಷೇಯವಾಗಿದ್ದರೂ ಶೈವಾದಿಸ್ಮೃತಿಗಳಂತೆ ವಿಸಂವಾದಿಯಾಗಿರುವುದರಿಂದ ಅಪ್ರಮಾಣವಾಗುತ್ತದೆ. ಅಥವಾ ಅಪೌರುಷೇಯವೇ ಆಗಿರುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಮಾಡುತ್ತಿದ್ದಾರೆ. ಹೀಗೆ ಪೂರ್ವಪಕ್ಷದಲ್ಲಿ ವೈಲಕ್ಷಣ್ಯವಿರುವುದರಿಂದ ಈ ಅಧಿಕರಣವು ಪ್ರತ್ಯೇಕವಾಗಿ ಹೊರಡಲೇ ಬೇಕು.

## ವೇದಕ್ಕೆ ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥಿಸುವ ಮೂಲಕ ಸಿದ್ಧಾಂತ ಸ್ಥಾಪನೆ

ಅಪೌರುಷೇಯವಾದ ವೇದವನ್ನು ಅಪ್ರಮಾಣವೆಂದು ಹೇಳಲು ಸಾಧ್ಯವೇ ಇಲ್ಲ. ವೇದದಲ್ಲಿ ಹೇಳಿದ ಅನುಷ್ಠಾನಗಳನ್ನು ಮಾಡಿದಾಗ ಕೆಲವೊಮ್ಮೆ ಫಲವು ದೊರೆಯುವುದಿಲ್ಲವೆಂಬ ಕಾರಣದಿಂದ ವೇದವನ್ನು ಅಪ್ರಮಾಣವೆಂದು ತಿಳಿಯಬಾರದು. ಅಪೌರುಷೇಯವಾದ ವೇದದಲ್ಲಿ ಪುರುಷನ ದೋಷಗಳಿಗೆ ಅವಕಾಶವೇ ಇಲ್ಲ. ಆದ್ದರಿಂದ ಅಪ್ರಾಮಾಣ್ಯಕ್ಕೆ ಕಾರಣವಾದ ಯಾವುದೇ ದೋಷವು ಇರುವುದಿಲ್ಲ.

ಗುಣಾಭಾವೇಽಪಿ ವೇದಸ್ಯ ಪ್ರಾಮಾಣ್ಯಂ ಸಾಕ್ಷಿವತ್ ಸ್ವತಃ ।
ಅಪವಾದಕದೋಷಸ್ಯ ರಾಹಿತ್ಯಾದೇವ ಹಿ ಸ್ಥಿತಮ್ ॥

ಸಾಕ್ಷಿಯು ಯಾವುದೇ ದೋಷವಿಲ್ಲವೆಂಬ ಕಾರಣದಿಂದ ಗುಣವಿಲ್ಲದಿದ್ದರೂ ಸ್ವತಃ ಪ್ರಮಾಣವಾಗುತ್ತದೆ. ಅದರಂತೆ ವೇದದಲ್ಲಿಯೂ ಯಾವುದೇ ಅಪವಾದಕವಾದ ದೋಷವಿಲ್ಲದಿರುವುದರಿಂದ ಆಪ್ತೋಕ್ತತ್ವ ಮೊದಲಾದ ಗುಣಗಳಿಲ್ಲದಿದ್ದರೂ ಸ್ವತಃ ಪ್ರಮಾಣವಾಗುತ್ತದೆ ಎಂಬುದು ಸಿದ್ಧವಾಯಿತು.

ಕೆಲವೊಮ್ಮೆ ವೇದದಲ್ಲಿ ಹೇಳಿದ ಕರ್ಮವನ್ನು ಅನುಷ್ಠಾನ ಮಾಡಿದಾಗಲೂ ವಿಫಲವಾಗಬಹುದು. ಅದಕ್ಕೆ ಕಾರಣ ಕರ್ತೃವಿನ ದೋಷವೇ ಹೊರತು, ವೇದದ ದೋಷವಲ್ಲ. ಕಾರೀರಿ ಎಂಬ ಯಾಗವನ್ನು ಅನುಷ್ಠಾನ ಮಾಡಿದಾಗ ಕರ್ತೃವಿನಲ್ಲಿ ದೋಷವಿದ್ದರೆ ಮಳೆ ಬರುವುದಿಲ್ಲ. ಕರ್ತೃವಿನಲ್ಲಿ ದೋಷವಿಲ್ಲದಿದ್ದಾಗ ಅಂತಹ ಯಾಗವನ್ನು ಅನುಷ್ಠಾನ ಮಾಡಿದಾಗ ಮಳೆ ಬರುವುದು ಅನೇಕ ಕಡೆ ಕಂಡಿದೆ. ವೇದವನ್ನು ಸ್ವತಃ ಪ್ರಮಾಣವೆಂದು ಹೇಳುವಂತೆ ಶೈವರೂ ಕೂಡ ಶೈವಾದಿಶಾಸ್ತ್ರಗಳನ್ನು ಸ್ವತಃ ಪ್ರಮಾಣವೆನ್ನಬಹುದು. ಆದರೆ ಅಪವಾದಕವಾದ ದೋಷಾಭಾವವಿದ್ದರೆ ಮಾತ್ರ ನಾವು ಪ್ರಾಮಾಣ್ಯಸ್ವತಸ್ತ್ವನ್ನು ಒಪ್ಪುತ್ತೇವೆ. ಶೈವಶಾಸ್ತ್ರಗಳಲ್ಲಿ ಅಪವಾದಕವಾದ ದೋಷಗಳಿರುವುದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥಿಸಲು ಅವರಿಗೆ ಸಾಧ್ಯವಿಲ್ಲ.

ಭೇಷಜತ್ವೇನ ನಿರ್ಣೀತಾದಪಿ ದೈವಾತ್ ಕ್ವಚಿದ್ಗುಣಃ ।
ಚೇನ್ನ ದೃಶ್ಯತೇ ಕಿಂ ತಸ್ಯ ತಾವತಾ ತದಹೇತುತಾ ॥೧॥

ಯಾವುದು ರೋಗಕ್ಕೆ ಔಷಧಿಯೆಂದು ನಿರ್ಣಯವಾಗಿರುತ್ತದೋ, ಅಂತಹ ಔಷಧಿಯನ್ನು ಸೇವನೆ ಮಾಡಿದಾಗ ಕೆಲವೊಮ್ಮೆ ಕೆಲವು ರೋಗಿಗಳಿಗೆ ಗುಣವಾಗುವುದಿಲ್ಲ. ಅಂದಮಾತ್ರಕ್ಕೆ ರೋಗಕ್ಕೆ ಅದು ಔಷಧಿಯೇ ಅಲ್ಲವೆಂದು ಯಾರೂ ಹೇಳುವುದಿಲ್ಲ.

ಅಪಥ್ಯತ್ವೇನ ನಿರ್ಣೀತಾದಪಿ ದೈವಾತ್ ಕ್ವಚಿದ್ಗುಣಃ ।
ದೃಶ್ಯತೇ ವದ ಕಿಂ ತಸ್ಯ ತಾವತಾ ತತ್ರ ಹೇತುತಾ ॥೨॥

ಅಪಥ್ಯಸೇವನೆಯಿಂದ ರೋಗವೇ ಬರುತ್ತದೆ ಹೊರತು ಆರೋಗ್ಯವು ಬರಲು ಸಾಧ್ಯವಿಲ್ಲ. ಕೆಲವೊಮ್ಮೆ ಯಾವುದನ್ನು ಅಪಥ್ಯವೆಂದು ನಿರ್ಣಯ ಮಾಡಿರುತ್ತಾರೋ, ಅದನ್ನು ಸೇವನೆ ಮಾಡಿದಾಗಲೂ

ರೋಗವು ಬಾರದೇ ಆರೋಗ್ಯವಂತನಾಗಿಯೇ ಇರುತ್ತಾನೆ. ಅಂದಮಾತ್ರಕ್ಕೆ ಅಪಥ್ಯವಾದ ವಸ್ತುವನ್ನು ಯಾರೂ ಕೂಡ ಆರೋಗ್ಯಕ್ಕೆ ಕಾರಣವೆಂದು ಹೇಳುವುದಿಲ್ಲ.

ಅದರಂತೆ ವೇದದಲ್ಲಿ ಕೆಲವೊಮ್ಮೆ ಫಲಸ್ವರೂಪವಿದ್ದ ಮಾತ್ರಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದು. ಶೈವಾದಿಸ್ಮೃತಿಗಳಲ್ಲಿ ಕೆಲವೊಮ್ಮೆ ಫಲ ದೊರೆತಿದೆ ಎಂಬ ಕಾರಣಕ್ಕೆ ಪ್ರಾಮಾಣ್ಯವನ್ನೂ ಕೂಡ ಹೇಳಬಾರದು.

### ವೇದವು ಅಪೌರುಷೇಯ ಅಲ್ಲವೆಂಬ ಪಕ್ಷದ ನಿರಕಾರಣೆ

ವೇದವು ಅಪೌರುಷೇಯವೇ ಅಲ್ಲವೆಂದು ಹೇಳಲಾಗದು. ಏಕೆಂದರೆ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯು ವೇದವು ನಿತ್ಯವಾಗಿದೆ ಮತ್ತು ಪ್ರಮಾಣವಾಗಿದೆ ಎಂದು ಸಮರ್ಥನೆ ಮಾಡುತ್ತಿದೆ. ಹಾಗಾದರೆ ವೇದಪ್ರಾಮಾಣ್ಯಸಿದ್ಧವಾದರೆ ತದಂತರ್ಗತವಾದ 'ವಾಚಾ ವಿರೂಪ ನಿತ್ಯಯಾ' ಎಂಬ ವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಈ ವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ಮಾತ್ರ, ಸಮಗ್ರವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆಂಬ ಅನ್ಯೋನ್ಯಾಶ್ರಯದೋಷ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

ವಿಸಂವಾದವಿಹೀನೇನ ಶ್ರುತಿವಾಕ್ಯೇನ ಸಾಧಿತಾ ।
ನಿತ್ಯತಾ ಸರ್ವವೇದಾನಾಂ ವಿಸಂವಾದಂ ಧುನೋತಿ ಹಿ ॥೧॥

ವಿಸಂವಾದವಿಲ್ಲದ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿವಾಕ್ಯದಿಂದ ಸಕಲ ವೇದಕ್ಕೆ ನಿತ್ಯತ್ವವು ಸಿದ್ಧವಾಗುತ್ತದೆ. ಅದರಿಂದಲೇ ಸಕಲ ವೇದಗಳಲ್ಲಿ ವಿಸಂವಾದವಿಲ್ಲವೆಂಬುದೂ ಕೂಡ ನಿಶ್ಚಯವಾಗುತ್ತದೆ.

'ವೇದಃ ಅಪ್ರಮಾಣಂ ಫಲವಿಸಂವಾದಿತ್ವಾತ್' ಎಂದು ಪೂರ್ವಪಕ್ಷಿಯು ಅನುಮಾನ ಮಾಡಿದ್ದನು. ಈ ಅನುಮಿತಿಗೆ ಬಾಧದೋಷವನ್ನು 'ಫಲವಿಸಂವಾದಿತ್ವ' ಎಂಬ ಹೇತುವಿಗೆ ಅನ್ಯಥಾಸಿದ್ಧಿದೋಷವನ್ನು ಗ್ರಂಥಕಾರರು ಇಲ್ಲಿ ಸಮರ್ಥಿಸಿದ್ದಾರೆ. ಹೀಗೆ ಪೂರ್ವಪಕ್ಷಿಗೆ ವೇದದಲ್ಲಿ ಅಪ್ರಾಮಾಣ್ಯವನ್ನು ಸಮರ್ಥನೆ ಮಾಡಲು ಸಾಧ್ಯವೇ ಇಲ್ಲ.

* * * *

## ಅಭಿಮಾನ್ಯಧಿಕರಣ

### ದೃಢವಾದ ಯುಕ್ತಿಗಳ ಪರಿಹಾರಕ್ಕಾಗಿ ಅಭಿಮಾನ್ಯಧಿಕರಣ

ಹಿಂದಿನ ಅಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಈ ಅಭಿಮಾನ್ಯಧಿಕರಣದಲ್ಲಿ ಬಲಿಷ್ಠವಾದ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಯುಕ್ತಿಗಳು ದೃಢವಾಗಿವೆ ಎಂಬುದನ್ನು ಉಪಪಾದನೆ ಮಾಡಲು ಶ್ರುತಿಗೆ ಅಪ್ರಾಮಾಣ್ಯವೆನ್ನೇನೂ ಅಂಗೀಕರಿಸಬೇಕಾಗಿಲ್ಲ. ಶ್ರುತಿಯು ಆಪಾತತಃ ಯಾವ ಅರ್ಥವನ್ನು ಹೇಳುತ್ತಿದೆಯೋ, ಅದನ್ನು ಪರಿತ್ಯಾಗ ಮಾಡಿ, ಅನ್ಯಾರ್ಥವನ್ನು ಕಲ್ಪಿಸಬೇಕು ಎಂದು ಅಂಗೀಕರಿಸಿದರೆ ಸಾಕು. 'ಮೃದಬ್ರವೀತ್' ಇತ್ಯಾದಿ ಶ್ರುತಿವಾಕ್ಯಗಳು 'ಮಣ್ಣು ಮಾತನಾಡಿತು' ಇತ್ಯಾದಿಯಾಗಿ ಜಡಪದಾರ್ಥಗಳಲ್ಲಿ ವಕ್ತೃತ್ವಾದಿಗಳನ್ನು ಪ್ರತಿಪಾದನೆ ಮಾಡುತ್ತಿವೆ.

'ಮೃತ್ ನವಕ್ತ್ರೀ ಜಡತ್ವಾತ್' ಎಂಬ ಪ್ರಬಲವಾದ ಯುಕ್ತಿಯ ವಿರೋಧವಿರುವುದರಿಂದ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗಮಾಡಬೇಕು. ಮೃದಭಿಮಾನಿ ದೇವತೆಗಳು ಮಾತನಾಡುತ್ತಾರೆ ಎಂದರ್ಥವನ್ನು ಮಾಡಬೇಕು. ಯಾವುದೇ ಶ್ರುತಿಗಳಿಗೂ ಪ್ರಬಲವಾದ ಯುಕ್ತಿಯ ವಿರೋಧ ಬಂದರೆ ಹೀಗೆಯೇ ಅರ್ಥಾಂತರವನ್ನು ಹೇಳಲೇಬೇಕೆಂಬುದು ಈ ಅಧಿಕರಣದ ಮುಖ್ಯ ಉದ್ದೇಶ. ಆದ್ದರಿಂದ ಪ್ರಬಲ ಯುಕ್ತಿವಿರೋಧವನ್ನು ಸಿದ್ಧಾಂತದಲ್ಲಿಯೂ ಕೂಡ ಒಪ್ಪಿದ್ದಾರೆ.

ಶರೀರಾದಿಗಳನ್ನು ಹೊಂದಿರುವ ಮೃದಭಿಮಾನಿ ದೇವತೆಗಳು ಇಲ್ಲವಾದ್ದರಿಂದಲೇ ಅವರು ಕಾಣಿಸುತ್ತಿಲ್ಲ. ಹಾಗಾಗಿ ಮೃದಾದಿ ಶಬ್ದಗಳು ಜಡವಾದ ಪದಾರ್ಥವನ್ನೇ ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ 'ಮೃದಬ್ರವೀತ್' ಎಂಬ ವೇದದ ಏಕದೇಶವು ಯುಕ್ತಿವಿರುದ್ಧವಾದ್ದರಿಂದ ಅಪ್ರಮಾಣವಾಗುತ್ತದೆ. ಇದೇ ದೃಷ್ಟಾಂತದಿಂದ ಸಮಗ್ರ ವೇದವೂ ಕೂಡ ಅಪ್ರಮಾಣವಾಗುತ್ತದೆ. ಆದ್ದರಿಂದ ಸಮಗ್ರ ಶ್ರುತಿಗಳ ಸಮನ್ವಯದಿಂದ ಬ್ರಹ್ಮನಲ್ಲಿ ಜಗತ್‌ಕಾರಣತ್ವವನ್ನು ಸಮರ್ಥನೆ ಮಾಡಿದ್ದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷದ ಸಾರ.

ಶರೀರಾದಿಗಳನ್ನು ಹೊಂದಿರುವ ಮೃದಭಿಮಾನಿ ದೇವತೆಗಳು ಅಂತರ್ಧಾನಶಕ್ತಿಯನ್ನು ಹೊಂದಿರುವುದರಿಂದ ನಮಗೆ ಕಾಣಿಸುತ್ತಿಲ್ಲ. ಆದ್ದರಿಂದ ಮೃದಾದಿಗಳಿಗೆ ಅಭಿಮಾನಿಯಾದ ದೇವತೆಗಳನ್ನೇ ಪ್ರತಿಪಾದನೆ ಮಾಡುತ್ತಿವೆ. ಹಾಗಾಗಿ 'ಮೃದಬ್ರವೀತ್' ಇತ್ಯಾದಿ ವೇದದ ವಾಕ್ಯೈಕದೇಶಕ್ಕೆ ಯುಕ್ತಿವಿರೋಧವು ಬರುವುದಿಲ್ಲ. ಆದ್ದರಿಂದ ಈ ದೃಷ್ಟಾಂತದಿಂದ ಸಮಗ್ರ ವೇದಕ್ಕೆ ಅಪ್ರಾಮಾಣ್ಯವನ್ನೂ ಕೂಡ ಹೇಳಲು ಸಾಧ್ಯವಿಲ್ಲ. ಪ್ರಥಮಾಧ್ಯಾಯದಲ್ಲಿ ಸಮಗ್ರ ಶ್ರುತಿಗಳ ಸಮನ್ವಯದಿಂದ ಬ್ರಹ್ಮನಿಗೆ ಜಗತ್ ಕಾರಣತ್ವವನ್ನು ಸಮರ್ಥಿಸಿದ್ದು ಯುಕ್ತವೇ ಆಗಿದೆ. ಇಷ್ಟು ಸಿದ್ಧಾಂತದ ಸಾರ.

ಈ ಅಧಿಕರಣವು ಹೇಗೆ ಆರಂಭಣೀಯವಾಗುತ್ತದೆ? ಹಿಂದಿನ ಅಧಿಕರಣದಲ್ಲಿ ವೇದಾಪೌರುಷೇಯತ್ವವನ್ನು ಸಮರ್ಥನೆ ಮಾಡಿದ್ದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳುವ ಮೂಲಕ ಪೂರ್ವಪಕ್ಷವನ್ನು ಇಲ್ಲಿ ಮಾಡಲು ಹೇಗೆ ಸಾಧ್ಯವಾಗುತ್ತದೆ ? ಎಂಬ ಪ್ರಶ್ನೆ ಬರುತ್ತದೆ. ಅಪೌರುಷೇಯತ್ವವು ಪ್ರಾಮಾಣ್ಯವಿಲ್ಲದಿದ್ದರೂ ಯುಕ್ತವಾಗಬಹುದು. ಅಥವಾ ಪಿಪೀಲಿಕಾಲಿಪಿಯಂತೆ ಅಥವಾ ಅನುಕರಿಸುವ ಗಿಳಿಯ ಮಾತುಗಳಂತೆ ವೇದಾಪೌರುಷೇಯತ್ವವಿದ್ದರೂ ಪ್ರಾಮಾಣ್ಯವನ್ನು ಒಪ್ಪಬೇಕಾಗಿಲ್ಲ. ಪಿಪೀಲಿಕಾಲಿಪಿಯಲ್ಲಿ ಪುರುಷದೋಷವಿಲ್ಲದಿದ್ದರೂ ಪ್ರಾಮಾಣ್ಯವಿರುವುದಿಲ್ಲ. ಗಿಳಿಯ ಮಾತುಗಳಲ್ಲಿಯೂ ಪುರುಷದೋಷವಿಲ್ಲದಿದ್ದರೂ ಪ್ರಾಮಾಣ್ಯವಿರುವುದಿಲ್ಲ. ಅದರಂತೆ ವೇದವೂ ಕೂಡ ಅಪ್ರಮಾಣವಾಗಬಹುದೆಂಬ ಪೂರ್ವಪಕ್ಷವು ಇಲ್ಲಿ ಉದಯವಾಗುತ್ತದೆ. ಆದ್ದರಿಂದ ಈ ಅಧಿಕರಣವು ಆರಂಭಣೀಯವೇ ಆಗಿದೆ

## ಅಧಿಕರಣಕ್ಕೆ ಗತಾರ್ಥತ್ವ ಪರಿಹಾರ, ಸಿದ್ಧಾಂತ ಸ್ಥಾಪನೆ

'ಮೃದಬ್ರವೀತ್' 'ಮಣ್ಣು ಮಾತನಾಡಿತು' 'ಆಪೋಽಬ್ರುವನ್' 'ನೀರುಗಳು ಮಾತನಾಡಿದವು' 'ತತ್ತೇಜ ಐಕ್ಷತ' 'ಬೆಂಕಿಯು ನೋಡಿತು' 'ಶೃಣೋತ ಗ್ರಾವಾಣಃ' 'ಕಲ್ಲುಗಳು ಕೇಳಿದವು'

'ವಿದುಶೋನುಪ್ರಾಣಾಃ ಅಹಂ ಶ್ರೇಯಸಿ ವ್ಯೂದಿರೇ' 'ಇಂದ್ರಿಯಗಳು ನಾನು ಶ್ರೇಷ್ಠವೆಂದು ವಿವಾದ ಮಾಡಿದವು'. 'ಆಪೋ ವಾ ಅಕಾಮಯಂತ' 'ನೀರುಗಳು ಬಯಸಿದವು' ಇವೇ ಮೊದಲಾದ ವೇದವಾಕ್ಯಗಳು ಜಡಪದಾರ್ಥಗಳಿಗೆ ಚೇತನಧರ್ಮವನ್ನು ಹೇಳುತ್ತಿವೆ. ಯುಕ್ತಿವಿರುದ್ಧವಾದ ವಿಷಯವನ್ನು ಹೇಳುತ್ತಿರುವುದರಿಂದ 'ನೀಲಂ ನಭಃ' ಎಂಬ ಪ್ರತ್ಯಕ್ಷದಂತೆ ಇವುಗಳು ಅಪ್ರಮಾಣವಾಗುತ್ತವೆ. 'ಆಕಾಶವು ವಿಭುವಾದ್ದರಿಂದ ರೂಪರಹಿತವಾಗಿದೆ' ಎಂಬ ಯುಕ್ತಿಗೆ ವಿರುದ್ಧವಾದ್ದರಿಂದ 'ಆಕಾಶವು ನೀಲವಾಗಿದೆ' ಎಂಬ ಪ್ರತ್ಯಕ್ಷವು ಹೇಗೆ ಅಪ್ರಮಾಣವಾಗುತ್ತದೋ, ಅದರಂತೆ, ಮಣ್ಣು ಮಾತನಾಡಿತು. ನೀರುಗಳು ಮಾತನಾಡಿದವು, ತೇಜಸ್ಸು ನೋಡಿತು, ಇತ್ಯಾದಿ ವಾಕ್ಯಗಳೂ ಕೂಡ ಅಪ್ರಮಾಣವಾಗುತ್ತವೆ. ಮಣ್ಣು ಮಣ್ಣಾದ್ದರಿಂದ ಅಥವಾ ಜಡವಾದ್ದರಿಂದ ಘಟಾದಿಗಳಂತೆ ಮಾತನಾಡುವುದಿಲ್ಲ ಎಂಬ ಯುಕ್ತಿಗೆ ವಿರುದ್ಧವಾದ್ದರಿಂದ ಶ್ರುತಿಯು ಅಪ್ರಮಾಣವಾಗುತ್ತದೆ. ಏಕದೇಶವಾದ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾದರೆ ಸಮಗ್ರ ವೇದಭಾಗಕ್ಕೂ ಕೂಡ ಅಪ್ರಾಮಾಣ್ಯವನ್ನು ಸಾಧಿಸಬಹುದು.

ನ ವಿಲಕ್ಷಣತ್ವಾಧಿಕರಣದಲ್ಲಿ ಹೇಳಿದ ನ್ಯಾಯದಿಂದಲೇ ಈ ವಿರೋಧವೂ ಕೂಡ ಪರಿಹಾರವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಈ ಅಧಿಕರಣದಲ್ಲಿ ಹೇಳುತ್ತಿರುವ ನ್ಯಾಯಕ್ಕೆ ಅಲ್ಲಿ ವ್ಯಭಿಚಾರವಿಲ್ಲ. ನ ವಿಲಕ್ಷಣತ್ವಾಧಿ- ಕರಣದಲ್ಲಿ ವೇದದಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೂ ಕೂಡ ಫಲವು ದೊರೆಯುತ್ತಿಲ್ಲ. ಕಾರೀರ್ಯಾದಿವಾಕ್ಯಗಳೇ ಈ ವಿಷಯದಲ್ಲಿ ದೃಷ್ಟಾಂತವಾಗಿವೆ ಎಂದು ಸಾಧಿಸಲಾಗಿತ್ತು. ಕಾರೀರ್ಯಾದಿಯಾಗಗಳನ್ನು ಪ್ರತಿಪಾದಿಸುವ ವಾಕ್ಯಗಳು ವೃಷ್ಟ್ಯಾದಿಗಳಿಗೆ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ. ಅಂತಹ ವಾಕ್ಯಗಳಿಗೆ ಪ್ರತ್ಯಕ್ಷ ವಿರೋಧವು ಬರುತ್ತದೆಂದು ಅಲ್ಲಿ ಸಮರ್ಥನೆ ಮಾಡಿದ ವಿಚಾರ. ಆದರೆ ಈ ಅಧಿಕರಣದಲ್ಲಿ 'ಮಣ್ಣು ಮಾತನಾಡಿತು' ಇತ್ಯಾದಿ ವಾಕ್ಯಗಳು ಪ್ರತ್ಯಕ್ಷಕ್ಕೆ ವಿರುದ್ಧವಾದ ವಿಷಯಗಳನ್ನು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಶ್ರುತಿಗೆ ಪ್ರತ್ಯಕ್ಷವಿರೋಧ ಬರುತ್ತದೆಂಬ ಆಕ್ಷೇಪವನ್ನು ಮಾಡಲಾಗಿದೆ. ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಹೇಳುತ್ತಿಲ್ಲ. ನ ವಿಲಕ್ಷಣತ್ವಾಧಿಕರಣದಲ್ಲಿ ಪ್ರತ್ಯಕ್ಷವಿರೋಧವನ್ನು ಹೇಳುತ್ತಿಲ್ಲ. ಹೀಗೆ ಈ ಅಧಿಕರಣದಲ್ಲಿ ಪ್ರತ್ಯಕ್ಷವಿರೋಧವನ್ನು ಪರಿಹರಿಸಲಾಗಿದೆ. ನ ವಿಲಕ್ಷಣತ್ವಾಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ಅಧಿಕರಣಕ್ಕೆ ಸಾರ್ಥಕ್ಯವು ಬರುತ್ತದೆ. (ತತ್ವಪ್ರಕಾಶಿಕೆಯಲ್ಲಿ ಜಡತ್ವವನ್ನು ಹೇತುವೆಂದು ಹೇಳಿರುವುದರಿಂದ ಇಲ್ಲಿ ಜಡತ್ವವು ಹೇತು. ಇದು ಪಕ್ಷದಲ್ಲಿ ಬಾರದ ಕಾರಣ ಅಸಿದ್ಧಿದೋಷ ಹೇಳುವುದು ಹೇಗೆ ? ಎಂದು ಆಶಂಕಿಸಬಾರದು. ಮೃತ್ತ್ವರೂಪ ಹೇತುವಿನಿಂದ ಜಡತ್ವವನ್ನು ಅನುಮಾನ ಮಾಡಬೇಕೆಂದು ಹೇಳಿರುವುದರಿಂದ ಅಸಿದ್ಧಿಗೆ ಅವಕಾಶವಿಲ್ಲ.) ನ್ಯಾಯಸುಧೆಯಲ್ಲಿ ಮೃತ್ತ್ವವನ್ನು ಹೇತು ಮಾಡಿರುವ ಹಾಗೇ, ತತ್ವಪ್ರಕಾಶಿಕೆಯಲ್ಲಿ ಮೃತ್ತ್ವವನ್ನು ಏಕೆ ಹೇತುವನ್ನಾಗಿ ಮಾಡಿಲ್ಲ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ವಕ್ತೃತ್ವಾದಿಗಳಿಂದ ಹೇಗೆ ವಿರೋಧವು ಸ್ಪಷ್ಟವಾಗಿ ತೋರುತ್ತದೋ, ಹಾಗೇ ಮೃತ್ತ್ವಾದಿಗಳಿಗೆ ವಿರೋಧವು ತೋರುವುದಿಲ್ಲ. ಆದ್ದರಿಂದ ಅವಕ್ತೃತ್ವಾದಿಗಳಿಂದ ಮೃತ್ತ್ವಾದಿಗಳಿಗೆ ವ್ಯಾಪ್ತಿಯು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದಲೇ ಇಲ್ಲಿ ವ್ಯಾಪ್ತಿಯನ್ನು ಉಪಪಾದನೆ ಮಾಡಲಾಗಿದೆ.

ವ್ಯಾಪ್ತಿಯು ಅಲ್ಲಿ ಸ್ಪಷ್ಟವಾಗಿದ್ದರೂ ಪಕ್ಷಧರ್ಮತಾವನ್ನು ಉಪಪಾದನೆ ಮಾಡುವ ಆವಶ್ಯಕತೆಯಿದೆ. ನ್ಯಾಯಸುಧೆಯಲ್ಲಿ ಪಕ್ಷಧರ್ಮತಾವು ಸ್ಫುಟವಾಗಿದ್ದರೂ ವ್ಯಾಪ್ತಿಯು ಸ್ಪಷ್ಟವಾಗಿರುವುದಿಲ್ಲ. ಹೀಗೆ ಎರಡೂ ಕಡೆ ಒಂದೊಂದರ ಅಗತ್ಯವು ಸಮಾನವಾಗಿರುತ್ತದೆ.

ಈ ಅಧಿಕರಣದ ಸಿದ್ಧಾಂತ ಹೀಗಿದೆ -

ಪ್ರಸಿದ್ಧಸ್ಯ ಪೃಥಿವ್ಯಾದೇಃ ಪಕ್ಷತ್ವೇ ಸಿದ್ಧಸಾಧನಮ್ ।
ದೇವತಾಯಾಸ್ತು ಪಕ್ಷತ್ವೇ ಹೇತ್ವಸಿದ್ಧ್ಯಾದಿಕಂ ಭವೇತ್ ॥

ಪ್ರಸಿದ್ಧವಾದ ಜಡಭೂತವಾದ ಪೃಥಿವ್ಯಾದಿಗಳನ್ನು ಪಕ್ಷವನ್ನಾಗಿ ಮಾಡಿ, ವಕ್ತೃತ್ವಾಭಾವವನ್ನು ಜಡತ್ವ ಹೇತುವಿನಿಂದ ಸಾಧನೆ ಮಾಡಿದರೆ ಸಿದ್ಧಸಾಧನದೋಷವು ಬರುತ್ತದೆ. ಮೃದಭಿಮಾನಿ ದೇವತೆಗಳನ್ನು ಪಕ್ಷವನ್ನಾಗಿ ಮಾಡಿ, ಜಡತ್ವಹೇತುವಿನಿಂದ ವಕ್ತೃತ್ವಾಭಾವವನ್ನು ಸಾಧನೆ ಮಾಡಿದರೆ ಅಸಿದ್ಧ್ಯಾದಿದೋಷಗಳು ಬರುತ್ತವೆ. ಏಕೆಂದರೆ ದೇವತೆಗಳಲ್ಲಿ ಜಡತ್ವವಾಗಲೀ, ಮೃತ್ತ್ವವಾಗಲೀ ಇರುವುದಿಲ್ಲ.

ಪ್ರಮಿತಸ್ಯ ಪ್ರಮಾತ್ವಸ್ಯ ಸಿದ್ಧಯೇ ಬಹುಕಲ್ಪನಾ ।
ಯುಕ್ತಾ ತತ್ ತತೋ ಭೀತ್ಯಾ ಪ್ರಮಿತಸ್ಯಾಪ್ಯಪಹ್ನವಃ ॥

ಪ್ರಮಾಣಸಿದ್ಧವಾದ ವೇದಕ್ಕೆ ಪ್ರಾಮಾಣ್ಯದ ಸಂರಕ್ಷಣೆಗೋಸ್ಕರ ಅನೇಕ ವಿಷಯಗಳನ್ನು ಕಲ್ಪನೆ ಮಾಡುವುದೇ ಯುಕ್ತ. ಅದನ್ನು ಬಿಟ್ಟು, ವೇದಪ್ರಾಮಾಣ್ಯದ ಭಯದಿಂದ ಪ್ರಮಿತವಾದದ್ದನ್ನು ತಿರಸ್ಕರಿಸುವುದು ಅಯುಕ್ತವಾಗುತ್ತದೆ.

## ಪ್ರಬಲವಾದ ಶ್ರುತಿ, ದುರ್ಬಲವಾದ ಯುಕ್ತಿ, ಎರಡರ ಗುರಿ ಬೇರೆ ಬೇರೆ

'ಮೃದಬ್ರವೀತ್' ಎಂಬ ವಾಕ್ಯವು ಜಡವಾದ ಮಣ್ಣಿನಲ್ಲಿ ವಕ್ತೃತ್ವವನ್ನು ಹೇಳುತ್ತಿದೆ ಎಂಬ ಉದ್ದೇಶದಿಂದ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿಯು ಶ್ರುತ್ಯರ್ಥವನ್ನು ಬಾಧಿಸಲು ಹೊರಟಿದೆ. ವಿಚಾರ ಮಾಡಿದರೆ ಶ್ರುತಿಯು ಜಡವಾದ ಮಣ್ಣಿಗೆ ವಕ್ತೃತ್ವವನ್ನು ಹೇಳಲು ಹೊರಟಿಲ್ಲ. ತದಭಿಮಾನಿಚೇತನರಲ್ಲಿ ವಕ್ತೃತ್ವವನ್ನು ಸಾರಲು ಹೊರಟಿದೆ. ತಾನು ಕಾಣುತ್ತಿರುವ ವಿಷಯದಲ್ಲಿ ಯುಕ್ತಿಗೆ ಪ್ರವೇಶವೇ ಇಲ್ಲವೆಂಬ ದೃಷ್ಟಿಯಿಂದ ಶ್ರುತಿಯು ಅದನ್ನು ವಿರೋಧ ಮಾಡಲು ಕೂಡ ಹೋಗುವುದಿಲ್ಲ.

ಪ್ರಬಲೈರ್ಬಾಧ್ಯತಾಯಾಂ ಹಿ ಹೇತುರ್ದುರ್ಬಲತೈವ ನ ।
ಕಿಂತು ತತ್ಪ್ರತಿಕೂಲತ್ವವಿಶಿಷ್ಟಾSತ್ರ ಚ ನಾಸ್ತಿ ಸಾ ॥೧॥

ಪ್ರಬಲವಾದ ಪ್ರಮಾಣದಿಂದ ಪ್ರಮಾಣಾಭಾಸವು ಬಾಧಿತವಾಗಬೇಕೆಂದರೆ ದುರ್ಬಲತ್ವವಷ್ಟೇ ಕಾರಣವಲ್ಲ. ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವೇ ಕಾರಣವಾಗಿದೆ. ಯುಕ್ತಿಯಲ್ಲಿ ದುರ್ಬಲತ್ವವಿದ್ದರೂ ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವು ಇರುವುದಿಲ್ಲ.

ಅಭಿಪ್ರಾಯವಿಷ್ಟು - ಯುಕ್ತಿಯು ಜಡವಾದ ಪದಾರ್ಥಗಳಿಗೆ ವಕ್ತೃತ್ವವನ್ನು ನಿಷೇಧ ಮಾಡುತ್ತಿದೆ. ಶ್ರುತಿಯು ಚೇತನರಾದ ಅಭಿಮಾನಿದೇವತೆಗಳಲ್ಲಿ ವಕ್ತೃತ್ವವನ್ನು ವಿಧಿಸುತ್ತಿದೆ. ಭಿನ್ನಭಿನ್ನ

ವಿಷಯಕವಾದ್ದರಿಂದ ಪರಸ್ಪರ ವಿರೋಧವೇ ಇರುವುದಿಲ್ಲ. 'ಮೃದಬ್ರವೀತ್'ಎಂಬ ವಾಕ್ಯದಲ್ಲಿರುವ 'ಮೃತ್' ಎಂಬ ಶಬ್ದದಿಂದ ಲೋಕಪ್ರಸಿದ್ಧಿಯಂತೆ ಜಡಪದಾರ್ಥವನ್ನು ವಿವಕ್ಷಿಸಬೇಕೋ? ಅಥವಾ ತದಧೀನತ್ವನ್ಯಾಯದಂತೆ ಅಭಿಮಾನಿಚೇತನರನ್ನು ವಿವಕ್ಷಿಸಬೇಕೋ ? ಎಂಬ ಗೊಂದಲವುಂಟಾದರೆ ಮುಖ್ಯಾಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ ಅಭಿಮಾನಿಚೇತನರೆಂಬ ಅರ್ಥವನ್ನೇ ವಿವಕ್ಷಿಸಬೇಕು. ಯಾವಾಗ ಶ್ರುತಿಗಳಿಂದ ಮುಖ್ಯವಾದ ಅಭಿಮಾನಿಚೇತನರೆಂಬ ಅರ್ಥವನ್ನು ಸ್ವೀಕರಿಸುತ್ತೇವೋ ಆವಾಗ ಯುಕ್ತಿಯು ದುರ್ಬಲವಾಗಿದ್ದರೂ ಕೂಡ ಶ್ರುತಿಯನ್ನು ವಿರೋಧ ಮಾಡಿದಂತಾಗುವುದಿಲ್ಲ. ರಾಜಕುಮಾರನು ತನ್ನ ಸ್ವಚ್ಛಂದಪ್ರವೃತ್ತಿಗೆ ಪ್ರತಿಬಂಧಕರಾದ ದುರ್ಬಲರನ್ನು ನಿಗ್ರಹಿಸುತ್ತಾನೆ ಹೊರತು, ಪ್ರತಿಬಂಧಕವಾಗದ ದುರ್ಬಲನಾದ ಭಿಕ್ಷುಕನನ್ನು ನಿಗ್ರಹಿಸುವುದಿಲ್ಲ.

* * * * *

# ಅಸದಧಿಕರಣ

## ಪ್ರಾಗಭಾಗವಕರ್ತೃತ್ವ ನಿರಾಕರಣೆಗಾಗಿ ಅಸದಧಿಕರಣ

'ನ ವಿಲಕ್ಷಣತ್ವಾಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಯಿತು. ಅ'ನ ವಿಲಕ್ಷಣತ್ವಾಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಯಿತು. ಅಭಿಮಾನ್ಯಧಿಕರಣದಲ್ಲಿ ಬಲಿಷ್ಠವಾದ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಈಗ ಈ ಅಸದಧಿಕರಣದಲ್ಲಿ ಶ್ರುತಿಯ ಸಂವಾದವನ್ನು ಹೊಂದಿರುವ ಅತ್ಯಂತ ಬಲಿಷ್ಠವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಕೆಲವರು ಶೂನ್ಯಮತದ ನಿರಾಕರಣೆಗಾಗಿ ಈ ಅಧಿಕರಣ ಹೊರಟಿದೆ ಎನ್ನುತ್ತಾರೆ. ಆದರೆ ಎರಡನೆಯ ಪಾದದಲ್ಲಿ ಶೂನ್ಯಮತನಿರಾಕರಣೆಯು ಪ್ರಸಕ್ತವಾಗುವುದರಿಂದ ಇಲ್ಲಿ ಅದರ ನಿರಾಕರಣೆ ಅಪ್ರಸ್ತುತ. ಶೂನ್ಯಮತವು ಸಮಯದಿಂದ ಪ್ರಾಪ್ತವಾದರೆ ಅದರ ನಿರಾಕರಣೆಗಾಗಿ ಎರಡನೆಯ ಪಾದವಿದೆ. ಶ್ರುತಿಯಿಂದ ಪ್ರಾಪ್ತವಾದ ಶೂನ್ಯಮತನಿರಾಕರಣೆಗಾಗಿ ಈ ಅಧಿಕರಣವು ಸಾರ್ಥಕವಲ್ಲವೇ? ಎಂದು ಪ್ರಶ್ನಿಸಬಾರದು. ಅದಕ್ಕಾಗಿ ಮೂರನೆಯ ಪಾದವೇ ಇರುತ್ತದೆ. ಇದರಂತೆ ಯುಕ್ತಿಯ ಬೆಂಬಲ ಪಡೆದ ಶ್ರುತಿಯಿಂದ ಪ್ರಾಪ್ತವಾದ ಶೂನ್ಯಮತದ ನಿರಾಕರಣೆಯನ್ನು ಈ ಅಧಿಕರಣದ ಉದ್ದೇಶವೆಂದು ಹೇಳಬಾರದು. ಇದೂ ಕೂಡ ನಾಲ್ಕನೆಯ ಪಾದದಲ್ಲಷ್ಟೇ ಸಂಗತವಾಗುತ್ತದೆ. ಯುಕ್ತ್ಯಾದಿಗಳಿಂದ ಪ್ರಾಪ್ತವಾದ ಪ್ರಾಗಭಾವಕ್ಕೆ ಜಗತ್ಕಾರಣತ್ವವು 'ಅಸತಃ ಸದಜಾಯತೇ' ಎಂಬ ವಾಕ್ಯದಿಂದ ಪ್ರತೀತವಾಗುತ್ತಿದೆ. ಇದರ ನಿರಾಕರಣೆಯೇ ಅಧಿಕರಣದ ಉದ್ದೇಶ.

ಶ್ರುತಿ, ಸೂತ್ರ ಮತ್ತು ಭಾಷ್ಯಗಳಲ್ಲಿರುವ ಅಸತ್ ಶಬ್ದಕ್ಕೆ ಭಾವಪ್ರಧಾನನಿರ್ದೇಶ ಮಾಡಿದಾಗ, ಅಭಾವ ಎಂಬರ್ಥವು ದೊರೆಯುತ್ತದೆ. ಆದ್ದರಿಂದ ಪ್ರಾಗಭಾವಕರ್ತೃತ್ವಪಕ್ಷದ ನಿರಾಕರಣೆಯೇ ಈ ಅಧಿಕರಣದ ಮುಖ್ಯಉದ್ದೇಶವೆಂದು ತಿಳಿಯಬೇಕು. ಕೆಲವರು ಶೂನ್ಯಮತದ ನಿರಾಕರಣೆಗಾಗಿ ಈ ಅಧಿಕರಣವೆನ್ನುತ್ತಾರೆ. ಈ ವಿಷಯದಲ್ಲಿ ಪ್ರಬಲವಾದ ಆಧಾರಗಳಿರುವುದಿಲ್ಲ.

## ಪ್ರಾಗಭಾವವು ಜಗತ್ತಿಗೆ ಕಾರಣವಷ್ಟೇ ಅಲ್ಲ, ಕರ್ತೃವೂ ಆಗಿದೆಯೆಂದು ಪೂರ್ವಪಕ್ಷ

'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯ ಸಂವಾದದಿಂದ ಪ್ರಳಯಕಾಲದಲ್ಲಿ ಇರುವ ಪ್ರಾಗಭಾವವೇ ಜಗತ್ತಿಗೆ ಕಾರಣವಾಗುತ್ತದೆಂಬ ಯುಕ್ತಿಯು ಅತ್ಯಂತ ಬಲಿಷ್ಠವಾಗಿದೆ. ಇಂತಹ ಯುಕ್ತಿಯಿಂದ ಜನ್ಮಾಧಿಕರಣದಲ್ಲಿ ಸಮರ್ಥಿಸಲ್ಪಟ್ಟ ವಿಷ್ಣುವಿನ ಜಗತ್ಕರ್ತೃತ್ವವು ವಿರುದ್ಧವಾಗುತ್ತದೆಂದು ಪೂರ್ವಪಕ್ಷ ಮಾಡಲಾಗಿದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಪ್ರಾಗಭಾವವು ಸಂಕಲ್ಪಪೂರ್ವಕವಾಗಿ ಜಗತ್ತನ್ನು ಸೃಷ್ಟಿ ಮಾಡುತ್ತಿದೆ ಎಂದು ಹೇಳುತ್ತಿರುವುದರಿಂದ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಮರ್ಥನೆ ಮಾಡುವ ಯುಕ್ತಿಯು ಶ್ರುತಿಸಂವಾದಿಯಾಗಿದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದಲೇ ವಿಶ್ವಪ್ರಾಗಭಾವವೇ ವಿಶ್ವಕ್ಕೆ ಕರ್ತೃವಾಗಿದೆ, ವಿಷ್ಣುವಿನ ಜಗತ್ಕರ್ತೃತ್ವವು ಯುಕ್ತಿವಿರುದ್ಧವಾಗುತ್ತದೆಂಬುದು ಪೂರ್ವಪಕ್ಷದ ಸಾರ.

'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಪ್ರಾಗಭಾವಕ್ಕೆ ಸಂಕಲ್ಪಾದಿಗಳಿರುತ್ತವೆಂದು ಸಮರ್ಥನೆ ಮಾಡುತ್ತಿಲ್ಲ. ಆದ್ದರಿಂದ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಮರ್ಥಿಸಲು ಯುಕ್ತಿಯು ಶ್ರುತಿಸಂವಾದಿಯಾಗುವುದಿಲ್ಲವೆಂದು ತಿಳಿಯಬೇಕು. ಆದ್ದರಿಂದಲೇ ವಿಶ್ವಪ್ರಾಗಭಾವವು ಜಗತ್ತಿಗೆ ಕರ್ತೃವಾಗುವುದಿಲ್ಲ. ವಿಷ್ಣುವಿನ ಜಗತ್ಕರ್ತೃತ್ವಕ್ಕೆ ಯುಕ್ತಿವಿರೋಧವೂ ಕೂಡ ಬರುವುದಿಲ್ಲವೆಂಬುದು ಸಿದ್ಧಾಂತದ ಸಾರ.

ಯಾವುದೇ ಪದಾರ್ಥವು ಹುಟ್ಟಬೇಕಾದರೆ ಅದರ ಮೊದಲು ಅದರ ಪ್ರಾಗಭಾವವು ಇದ್ದೇ ಇರುತ್ತದೆ. ಪ್ರತಿಯೊಂದು ಪದಾರ್ಥಗಳ ಹುಟ್ಟುವಿಕೆಯ ಹಿನ್ನೆಲೆಯಲ್ಲಿ ಆಯಾಪದಾರ್ಥಗಳ ಪ್ರಾಗಭಾವವನ್ನು ಒಪ್ಪಲೇಬೇಕು. ಹೀಗೆ ಸಿದ್ಧವಾದ ಪ್ರಾಗಭಾವಕ್ಕೆ ಕಾರಣತ್ವವನ್ನೂ ಕೂಡ ಒಪ್ಪುವುದು ಅನಿವಾರ್ಯ. ಇಲ್ಲದಿದ್ದರೆ ಒಮ್ಮೆ ಹುಟ್ಟಿದ ಘಟವು ಪುನಃ ಹುಟ್ಟಬೇಕಾಗುತ್ತದೆ. ಪ್ರಾಗಭಾವವನ್ನು ಕಾರಣವೆಂದಾಗ, ಘಟ ಹುಟ್ಟಿದ ಮೇಲೆ ಪ್ರಾಗಭಾವವು ನಷ್ಟವಾಗಿರುವುದರಿಂದ ಇನ್ನೊಮ್ಮೆ ಘಟ ಹುಟ್ಟಲು ಸಾಧ್ಯವಿಲ್ಲವೆಂದು ಉತ್ತರಿಸಲು ಬರುತ್ತದೆ. ಅಷ್ಟೇ ಅಲ್ಲದೇ ಪ್ರಾಗಭಾವವು ಕಾರಣವಲ್ಲವೆಂದು ಹೇಳಿದರೆ ಕಾರ್ಯಗಳಲ್ಲಿರುವ ವೈಚಿತ್ರ್ಯವೇ ಯುಕ್ತವಾಗುವುದಿಲ್ಲ. ಕಾರಣದ ವೈಚಿತ್ರ್ಯದಿಂದಷ್ಟೇ ಕಾರ್ಯಗಳಲ್ಲಿ ವೈಚಿತ್ರ್ಯ ಬರುತ್ತದೆ. ಪ್ರತಿಯೊಂದು ಕಾರ್ಯಗಳಿಗೂ ಭಿನ್ನ-ಭಿನ್ನವಾದ ಪ್ರಾಗಭಾವಗಳು ಕಾರಣವಾಗಿರುತ್ತವೆ. ಇಲ್ಲದಿದ್ದರೆ ರೂಪರಸಗಳ ಉತ್ಪತ್ತಿಗೆ ಕೇವಲ ಪಾಕವು ಕಾರಣವೆಂದು ಒಪ್ಪಬೇಕು. ಆವಾಗ ಕಾರ್ಯಗಳಲ್ಲಿ ವೈಚಿತ್ರ್ಯವಿದೆ. ಪಾಕವೆಂಬ ಕಾರಣದಲ್ಲಿ ವೈಚಿತ್ರ್ಯವನ್ನು ಹೇಳಿದಂತಾಗುವುದಿಲ್ಲ. ಆವಾಗ ರೂಪರಸಾದಿಗಳಲ್ಲಿಯೂ ವೈಚಿತ್ರ್ಯವನ್ನು ಏಕೆ ಒಪ್ಪಬೇಕು? ಎಂಬ ಪ್ರಶ್ನೆಗೆ ಉತ್ತರವೂ ಕೂಡ ಸಿಗುವುದಿಲ್ಲ. ಏಕೆಂದರೆ ಕಾರ್ಯವೈಚಿತ್ರ್ಯವು ಕಾರಣವೈಚಿತ್ರ್ಯದ ಅಧೀನವೇ ಆಗಿರುತ್ತದೆ. 'ಅಸದ್ವಾಇದಮಗ್ರ ಆಸೀತ್' ಎಂಬ ಶ್ರುತಿ ಸ್ಪಷ್ಟವಾಗಿ ಪ್ರಾಗಭಾವಕ್ಕೆ ಹೇತುತ್ವವನ್ನು ಸಮರ್ಥನೆ ಮಾಡುತ್ತಿದೆ. ಹೀಗೆ ಪ್ರಾಗಭಾವಕ್ಕೆ ಶ್ರುತಿಯಿಂದ ಕಾರಣತ್ವವು ಸಿದ್ಧವಾದ ಮೇಲೆ 'ವಿಮತಾ ಭಾವಾಃ ಪ್ರಲಯೇಽಸಂತಃ ಭಾವತ್ವಾತ್ ಕಾರ್ಯವತ್' ಎಂಬ ಪರಿಶೇಷಾನುಮಾನದಿಂದ ವಿಶ್ವಪ್ರಾಗಭಾವಕ್ಕೆ ಕರ್ತೃತ್ವವು ಸಿದ್ಧವಾಗುತ್ತದೆ. ಆದ್ದರಿಂದ ವಿಶ್ವಪ್ರಾಗಭಾವವೇ

ಕಾರಣವೆನ್ನಬೇಕು ಹೊರತು, ವಿಷ್ಣುವನ್ನು ಜಗತ್ತಿಗೆ ಕರ್ತೃವೆಂದು ಹೇಳಬಾರದು. ಪ್ರಮಾಣಸಿದ್ಧವಾದ ಪ್ರಾಗಭಾವಕ್ಕೆ ಕರ್ತೃತ್ವವೆಂಬ ಒಂದು ಧರ್ಮವನ್ನು ಕಲ್ಪನೆ ಮಾಡಿದರೆ ಸಾಕು. ಈಶ್ವರನಲ್ಲಿ ಕರ್ತೃತ್ವವನ್ನು ಒಪ್ಪುವುದಾದರೆ ಧರ್ಮಿಯನ್ನು ಹಾಗೂ ಧರ್ಮ ಎರಡನ್ನೂ ಕೂಡ ಕಲ್ಪನೆ ಮಾಡಬೇಕಾಗುತ್ತದೆ. ಪ್ರಾಗಭಾವವು ಜಗತ್ತಿಗೆ ಕರ್ತೃವಾಗುವುದಾದರೆ ಜ್ಞಾನೇಚ್ಛಾದಿಗಳನ್ನೂ ಕೂಡ ಒಪ್ಪಲೇ ಬೇಕು. ಅಭಾವದಲ್ಲಿ ಜ್ಞಾನೇಚ್ಛಾದಿಗಳನ್ನು ಒಪ್ಪುವುದು ಬಹಳ ಕಷ್ಟವಾಗುತ್ತದೆಂಬ ಗೊಂದಲಕ್ಕೆ ಅವಕಾಶವಿಲ್ಲ. ಅಲೌಕಿಕಾರ್ಥದಲ್ಲಿ ವೇದವು ಹೇಳಿದಂತೆ ಕೇಳಬೇಕು. ವೇದವು ಸ್ಪಷ್ಟವಾಗಿ ಜ್ಞಾನೇಚ್ಛಾದಿಗಳನ್ನು 'ತದಸದೇವ ಸನ್ ಮನೋಕುರುತ' ಇತ್ಯಾದಿಯಾಗಿ ಹೇಳುತ್ತಿರುವಾಗ ಪುನಃ ಗೊಂದಲ ಮಾಡಿಕೊಂಡು ಪ್ರಾಗಭಾವವು ಕರ್ತೃವಲ್ಲವೆಂದು ಸಾಧನೆ ಮಾಡಬಾರದು. ಆದ್ದರಿಂದ ಪ್ರಾಗಭಾವವೇ ವಿಶ್ವಕ್ಕೆ ಕರ್ತೃ ಎಂದು ಪೂರ್ವಪಕ್ಷ.

### ಪ್ರಾಗಭಾವದಲ್ಲಿ ಕರ್ತೃತ್ವವು ಕೂಡುವುದಿಲ್ಲವೆಂದು ಸಿದ್ಧಾಂತ

ನ ತೃತೀಯಾದಿಯೋಗಿತ್ವಂ ಕರ್ತೃತೇಹ ವಿವಕ್ಷ್ಯತೇ ।
ಕಿಂತು ಜ್ಞಾನಾದಿಯೋಗಿತ್ವಂ ತಚ್ಚಾಭಾವೇನ ಯುಜ್ಯತೇ ॥೧॥

ತೃತೀಯಾದಿ ವಿಭಕ್ತಿಗಳ ಪ್ರಯೋಗಕ್ಕೆ ಕಾರಣವಾದ ಕರ್ತೃತ್ವವನ್ನು ಶ್ರುತಿಯಲ್ಲಿ ವಿವಕ್ಷಿಸಲಾಗದು. ಅಪರೋಕ್ಷಜ್ಞಾನಚಿಕೀರ್ಷಾದಿಮತ್ವರೂಪವಾದ ಕರ್ತೃತ್ವವೇ ವಿವಕ್ಷಿತವಾಗಿರುತ್ತದೆ. ಇದು ಜಡಭೂತವಾದ ಅಭಾವದಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ.

ಯಾವುದೇ ಒಂದು ಪದಾರ್ಥವು ನಾಶವಾದ ಮೇಲೆ ಅದರ ಅವಶೇಷವು ಇದ್ದೇ ಇರುತ್ತದೆ. ಅದರಂತೆ ಸಮಗ್ರವಿಶ್ವವು ನಾಶವಾದ ಮೇಲೆ ಇದರ ಅವಶೇಷಭಾಗವು ಪ್ರಳಯಕಾಲದಲ್ಲಿರಲೇಬೇಕು ಎಂಬುದಾಗಿ ಯುಕ್ತಿಯಿಂದ ಪ್ರಳಯಕಾಲದಲ್ಲಿ ಭಾವಪದಾರ್ಥವಿರುತ್ತದೆಂದು ಸಾಧಿಸುತ್ತೇವೆ. ಮತ್ತು ಎಲ್ಲಾ ಕಾಲದಲ್ಲಿಯೂ ಭಾವಪದಾರ್ಥವಿರುವುದರಿಂದ ಪ್ರಳಯಕಾಲದಲ್ಲಿಯೂ ಭಾವಪದಾರ್ಥವಿರಬೇಕು ಎಂದು ಸಾಧಿಸುತ್ತೇವೆ. 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯು ಪ್ರಾಗಭಾವದ ಜಗತ್ ಕರ್ತೃತ್ವವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಈ ಶ್ರುತಿಗೆ ವಿರುದ್ಧವಾದ 'ಸದೇವ ಸೋಮ್ಯ ಇದಮಗ್ರ ಆಸೀತ್' 'ಏಕೋ ನಾರಾಯಣ ಆಸೀತ್' ಇತ್ಯಾದಿ ಶ್ರುತಿಗಳು ಸತ್ಯಪದಾರ್ಥವೇ ಜಗತ್ತಿಗೆ ಕರ್ತೃವಾಗಿದೆ. ನಾರಾಯಣನೇ ಜಗತ್ತಿಗೆ ಕರ್ತೃವಾಗಿದ್ದಾನೆ ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಿವೆ.

ಯುಕ್ತೇಶ್ಚ ಯುಕ್ತಿಬಾಹುಲ್ಯಮಾಗಮಾದಾಗಮಸ್ಯ ಚ ।
ಕಥಂ ನ ನಿರ್ಣಯಂ ಕುರ್ಯಾದಿತ್ಯಸತ್ಕಾರಣಂ ನಹಿ ॥

ಪೂರ್ವಪಕ್ಷಿಯುಕ್ತಿಯು ಬಲಿಷ್ಠವಾದ ಯುಕ್ತಿಗಳಿಂದ ವಿರುದ್ಧವಾಗಿದೆ. ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶ್ರುತಿಯು ಬಲಿಷ್ಠವಾದ ಅನೇಕಾಗಮಗಳಿಂದ ವಿರುದ್ಧವಾಗಿದೆ. ಆದ್ದರಿಂದ ಯುಕ್ತಿಯಾಗಲೀ, ಆಗಮವಾಗಲೀ, ನಿರ್ಣಯ ಮಾಡಲು ಸಮರ್ಥವಲ್ಲವೆಂದು ಹೇಳಲು ಹೇಗೆ ಸಾಧ್ಯ ? ಅಸತ್ ಪದಾರ್ಥವು ಜಗತ್ತಿಗೆ ಕರ್ತೃವಾಗುವುದಿಲ್ಲವೆಂದು ಹೀಗೆ ಸಿದ್ಧವಾಗುತ್ತದೆ.

## ಸೂತ್ರಗಳ ಶಬ್ದಸ್ವಾರಸ್ಯ

ಪ್ರಥಮಸೂತ್ರದಲ್ಲಿ ಭಾವಬೋಧಕಾರರ ಪ್ರಕಾರ 'ಅಸತ್' ಎಂಬ ಶಬ್ದವು ಸ್ವರಸವಾಗುತ್ತದೆ. ಆದರೆ ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಣೆ ಮಾಡುವ ಉದ್ದೇಶವನ್ನು ಹೊಂದುವುದಾದರೆ ಅಸ್ವರಸವಾಗುತ್ತದೆಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಇದನ್ನು ಚಂದ್ರಿಕೆಯಲ್ಲಿ ವಿಮರ್ಶಿಸಲಾಗಿದೆ. ಅಭಾವಶಬ್ದವನ್ನುಸೂತ್ರದಲ್ಲಿಹೇಳದೇ, ಅಸತ್‌ಶಬ್ದವನ್ನುಏಕೆಪ್ರಯೋಗಿಸಿದ್ದಾರೆಂದರೆ'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯ ಅನುಕರಣೆಗಾಗಿ, ಅಥವಾ ಸಕಲ ಭಾವಪದಾರ್ಥಗಳು ಪ್ರಳಯಕಾಲದಲ್ಲಿ ಭಾವಪದಾರ್ಥವಾದ್ದರಿಂದ ಅಸತ್ತಾಗಿವೆ ಎಂಬ ಯುಕ್ತಿಯನ್ನು ಸೂಚನೆ ಮಾಡುವುದಕ್ಕಾಗಿಯೂ 'ಅಸತ್' ಶಬ್ದವನ್ನೇ ಪ್ರಯೋಗಿಸಿದ್ದಾರೆ. ಎರಡನೆಯ ಸೂತ್ರದಲ್ಲಿ 'ಅಪೀತೌ' ಎಂಬ ಪದದಿಂದ ಪ್ರಾಗಭಾವಪಕ್ಷಕರ್ತೃತ್ವದಲ್ಲಿ ಪ್ರಳಯಕಾಲವು ಇಲ್ಲದಿರಬೇಕಾದೀತು ಎಂಬ ಆಕ್ಷೇಪವು ಸೂಚಿತವಾಗಿದೆ. ಅದ್ವೈತಿಗಳು 'ಏತೇನ ಶಿಷ್ಟಾ ಅಪರಿಗ್ರಹಾ' ಇತ್ಯಾದಿ ಸೂತ್ರವನ್ನು ಪ್ರತ್ಯೇಕ ಅಧಿಕರಣವೆನ್ನುತ್ತಾರೆ. ಆದರೆ ಸಿದ್ಧಾಂತದ ಮುಖ್ಯಯುಕ್ತಿಯ ಮೇಲೆ ಯಾವಾಗ ಅಭ್ಯಧಿಕಾಶಂಕೆಯು ಬರುವುದಿಲ್ಲವೋ, ಆವಾಗ ಅಧಿಕರಣಾಂತರವೆಂದು ಪರಿಗಣಿಸಬಾರದು. ಪ್ರಕೃತ ದೃಷ್ಟಾಂತಾಭಾವ ಎಂಬ ಸಿದ್ಧಾಂತಯುಕ್ತಿಯ ಮೇಲೆ ಯಾವುದೇ ಅಧಿಕಾಶಂಕೆಯನ್ನು ಮಾಡಿಕೊಂಡು, 'ಏತೇನ ಶಿಷ್ಟಾ' ಇತ್ಯಾದಿ ಸೂತ್ರವು ಉತ್ತರಿಸುತ್ತಿಲ್ಲ. ಹೀಗಿರುವಾಗ ಇದನ್ನು ಅಧಿಕರಣಾಂತರವೆಂದು ಪರಿಗಣಿಸಬಾರದು. ಅಷ್ಟೇ ಅಲ್ಲದೇ ಈ ಅಧಿಕರಣದಲ್ಲಿ ಕೇವಲ ಪ್ರಾಗಭಾವಕ್ಕೆ ಮಾತ್ರ ಕರ್ತೃತ್ವವನ್ನು ನಿರಾಕರಣೆ ಮಾಡುವ ಉದ್ದೇಶವಿಲ್ಲ. ಜೀವಕರ್ತೃತ್ವಪಕ್ಷವನ್ನು ಅಚೇತನಕರ್ತೃತ್ವಪಕ್ಷವನ್ನೂ ಕೂಡ ನಿರಾಕರಣೆ ಮಾಡುವ ಉದ್ದೇಶವಿದೆ. ಆದ್ದರಿಂದ 'ಶ್ರುತ್ಯುಪಸರ್ಜನಯುಕ್ತಿವಿರೋಧಿತ್ವ' ಎಂಬ ಈ ಅಧಿಕರಣದ ಉಪಾಧಿಯನ್ನೇ 'ಏತೇನ ಶಿಷ್ಟಾ' ಇತ್ಯಾದಿ ಸೂತ್ರವೂ ಕೂಡ ಹೊಂದಿರುವುದರಿಂದ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬೇಕಾಗಿಲ್ಲ.

## ಅದ್ವೈತಿಗಳ ವಿಲಕ್ಷಣತ್ವಾಧಿಕರಣದ ನಿರಾಕರಣೆ

ಅದ್ವೈತಿಗಳ ಅಧಿಕರಣಶರೀರವು ಮತ್ತು ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ನಮ್ಮಸಿದ್ಧಾಂತದಲ್ಲಿ ಸ್ಮೃತ್ಯಧಿಕರಣದ ಅನಂತರ 'ನ ವಿಲಕ್ಷಣತ್ವಾತ್' ಎಂಬ ಸೂತ್ರದಿಂದ ಪ್ರಾರಂಭಿಸಿ, 'ಏತೇನ ಶಿಷ್ಟಾ' ಎಂಬ ಸೂತ್ರದ ತನಕ ಮೂರು ಅಧಿಕರಣಗಳನ್ನಾಗಿ ವಿಂಗಡಣೆ ಮಾಡಿದ್ದೇವೆ. ಆದರೆ ಅದ್ವೈತಮತದಲ್ಲಿ ಮತ್ತು ವಿಶಿಷ್ಟಾದ್ವೈತಮತದಲ್ಲಿ ಕೇವಲ ಎರಡು ಅಧಿಕರಣವೆಂಬ ವಿಂಗಡಣೆ ಇದೆ. ನಮ್ಮ ಪ್ರಕಾರ ನ ವಿಲಕ್ಷತ್ವಾಧಿಕರಣದಲ್ಲಿ ಎರಡು ಸೂತ್ರಗಳು, ಅಭಿಮಾನ್ಯಧಿಕರಣದಲ್ಲಿ ಎರಡು ಸೂತ್ರಗಳು, ಅಸದಧಿ-ಕರಣದಲ್ಲಿ ಆರು ಸೂತ್ರಗಳಿವೆ. ಆದರೆ ಅದ್ವೈತಮತದಲ್ಲಿ 'ನ ವಿಲಕ್ಷಣತ್ವಾತ್' ಎಂಬ ಸೂತ್ರದಿಂದ ಪ್ರಾರಂಭಿಸಿ, 'ತರ್ಕ ಅಪ್ರತಿಷ್ಠಾನಾತ್' ಇತ್ಯಾದಿ ಸೂತ್ರದ ಅಧಿಕರಣದ ತನಕ ಒಂದೇ ಅಧಿಕರಣವೆಂದು ಹೇಳಿದ್ದಾರೆ. ಅದಕ್ಕೆ 'ವಿಲಕ್ಷಣತ್ವಾಧಿಕರಣ' ಎಂಬ ಹೆಸರನ್ನಿಟ್ಟಿದ್ದಾರೆ. ಮತ್ತು 'ಏತೇನ ಶಿಷ್ಟಾ ಅಪರಿಗ್ರಹಃ' ಇತ್ಯಾದಿ ಸೂತ್ರವನ್ನು ನಾವು ಅಸದಧಿಕರಣದಲ್ಲೇ ಸೇರಿಸಿದ್ದರೆ, ಅದ್ವೈತಿಗಳು ಶಿಷ್ಟಪರಿಗ್ರಹಾಧಿಕರಣವೆಂಬ ಪ್ರತ್ಯೇಕ ಅಧಿಕರಣವೆಂದು ಹೇಳಿದ್ದಾರೆ. ರಾಮಾನುಜರೂ ಕೂಡ ಹೀಗೆಯೇ.

ಅದ್ವೈತಭಾಷ್ಯದಲ್ಲಿ 'ನ ವಿಲಕ್ಷಣತ್ವಾತ್' ಎಂಬ ಸೂತ್ರದ ಅನಂತರ 'ದೃಶ್ಯತೇ ತು' ಎಂಬ ಸೂತ್ರದ ಪಾಠ ಇರುವುದಿಲ್ಲ. ಮತ್ತು 'ಅಭಿಮಾನಿವ್ಯಪದೇಶಾಚ್ಚ' ಎಂಬ ಸೂತ್ರದ ಅನಂತರವಿರುವ 'ದೃಶ್ಯತೇ ಚ ' ಎಂಬ ಪಾಠದ ಬದಲು 'ದೃಶ್ಯತೇ ತು' ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ವಿಶಿಷ್ಟಾದ್ವೈತಮತದಲ್ಲಿಯೂ ಹೀಗೆಯೇ.

ಮತ್ತು 'ನ ವಿಲಕ್ಷಣತ್ವಾತ್' ಇತ್ಯಾದಿ ಸೂತ್ರವನ್ನು 'ದೃಶ್ಯತೇ ಚ' ಎಂಬ ಸೂತ್ರವನ್ನು ಅದ್ವೈತಿಗಳು ಪೂರ್ವಪಕ್ಷಸೂತ್ರವೆಂದು ಪರಿಗಣಿಸಿದ್ದಾರೆ. ಬ್ರಹ್ಮನು ಚೇತನನಾಗಿದ್ದಾನೆ, ಜಗತ್ತು ಜಡವಾಗಿದೆ ಇವೆರಡಕ್ಕೆ ಉಪಾದಾನ ಉಪಾದೇಯಭಾವವು ಹೇಗೆ ತಾನೇ ಯುಕ್ತವಾಗುತ್ತದೆ ? ಎಂಬ ಆಕ್ಷೇಪವನ್ನು ಇವೆರಡು ಸೂತ್ರಗಳಲ್ಲಿ ಮಾಡಿದ್ದಾರೆ. ಮುಂದಿನ ಮೂರನೆಯ ಹಾಗೂ ನಾಲ್ಕನೆಯ ಸೂತ್ರಗಳಲ್ಲಿ ಸಿದ್ಧಾಂತ ಮಾಡಿದ್ದಾರೆ. ಪುನಃ 'ಅಪೀತೌ ತದ್ವತ್' ಇತ್ಯಾದಿಯಾಗಿ ಐದನೆಯ ಸೂತ್ರದಲ್ಲಿ ಪೂರ್ವಪಕ್ಷವನ್ನೇ ಮಾಡಿದ್ದಾರೆ.

ಇವರ ಈ ಪರಿಕಲ್ಪನೆ ಅಸಾಧುವಾಗಿದೆ. ಈ ಹಿಂದೆ ಸ್ಮೃತ್ಯಧಿಕರಣದಲ್ಲಿ ಪರಕೀಯರ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ನಾವು ಆಶಂಕಿಸಿದಾಗ ಪ್ರತಿಯಾಗಿ ನಾವು ಒಪ್ಪಿರುವ ಶ್ರುತಿಗಳಲ್ಲಿಯೂ ಪೂರ್ವಪಕ್ಷಿಗಳು ಆಕ್ಷೇಪ ಮಾಡುತ್ತಾರೆ. ಅದಕ್ಕೆ ಉತ್ತರವನ್ನು ನೀಡದೇ ಅಪ್ರಸ್ತುತವಾಗಿ ಜಗತ್ತಿಗೂ ಬ್ರಹ್ಮನಿಗೂ ಉಪಾದಾನ ಉಪಾದೇಯಭಾವ ಕೂಡುವುದಿಲ್ಲವೆಂದು ವಿಚಾರ ಮಾಡುವುದು ತಪ್ಪಾಗುತ್ತದೆ. ನವಿಲಕ್ಷಣತ್ವಾಧಿ-ಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಲು ಉಪಯುಕ್ತವಾದ ಉಪಾಧಿಯು ಇರುತ್ತದೆ. ಮುಂದಿನ ಮತ್ತು 'ಅಭಿಮಾನಿವ್ಯಪದೇಶಃ' ಎಂಬ ಇತ್ಯಾದಿ ಎರಡು ಸೂತ್ರಗಳಲ್ಲಿ ದೃಢವಾದ ಯುಕ್ತಿವಿರೋಧವನ್ನು ಪರಿಹರಿಸಲು ಉಪಯುಕ್ತವಾದ ಉಪಾಧಿಯು ಇರುತ್ತದೆ. 'ಅಸದಿತಿಚೇತ್' ಇತ್ಯಾದಿ ಆರು ಸೂತ್ರಗಳಲ್ಲಿ ಶ್ರುತಿಸಂವಾದಿಯಾದ ಯುಕ್ತಿವಿರೋಧವನ್ನು ಪರಿಹರಿಸಲು ಉಪಯುಕ್ತವಾದ ಉಪಾಧಿಯು ಇರುತ್ತದೆ. ಇವುಗಳನ್ನೆಲ್ಲಾ ಸಿದ್ಧಾಂತಸೂತ್ರವನ್ನಾಗಿ ಪರಿಗಣಿಸಿ ಪ್ರತ್ಯೇಕ ಅಧಿಕರಣವೆಂದೇ ಹೇಳಲು ಬರುತ್ತದೆ. ಇದನ್ನು ಬಿಟ್ಟು ಮೊದಲೆರಡು ಸೂತ್ರಗಳು ಮತ್ತು ಐದನೆಯ ಸೂತ್ರಗಳು ಪೂರ್ವಪಕ್ಷವನ್ನಷ್ಟೇ ಹೇಳುತ್ತಿವೆ ಎಂದು ಪರಿಕಲ್ಪನೆ ಮಾಡಿ, ಉಳಿದ ಸೂತ್ರಗಳು ಬ್ರಹ್ಮನ ಉಪಾದಾನಕಾರಣತ್ವವನ್ನು ಸಮರ್ಥನೆ ಮಾಡುತ್ತಿವೆ ಎಂಬ ಕಲ್ಪನೆಯು ಅತ್ಯಂತ ಅಯುಕ್ತವಾದುದು. ವಿಚಾರ ಮಾಡಿದರೆ ಅದ್ವೈತಿಗಳಾಗಲೀ, ವಿಶಿಷ್ಟಾದ್ವೈತಿಗಳಾಗಲೀ, ಬ್ರಹ್ಮನಿಗೂ ಜಗತ್ತಿಗೂ ವಿಕಾರಿವಿಕಾರ್ಯಭಾವವನ್ನೇ ಒಪ್ಪಿರುವುದಿಲ್ಲ. ಅದ್ವೈತಿಗಳಾದ ನೀವು ಬ್ರಹ್ಮನನ್ನು ಆರೋಪಾಧಿಷ್ಠಾನನ್ನೆನ್ನುತ್ತೀರಿ. ವಿಶಿಷ್ಟಾದ್ವೈತಿಗಳು ಜಗತ್ತೆಂಬ ಶರೀರಕ್ಕೆ ಬ್ರಹ್ಮನು ಶರೀರಿಯಾಗಿದ್ದಾನೆಂದು ಒಪ್ಪಿರುತ್ತಾರೆ. ಹೀಗಿರುವಾಗ ಈ ಅಧಿಕರಣದ ಸಾರ್ಥಕ್ಯವೇನೆಂದೇ ನಿಮ್ಮಿಂದ ಸಾಧಿಸಲಾಗದು.

'ದೃಶ್ಯತೇ ತು' ಎಂಬ ಮೂರನೆಯ ಸೂತ್ರದಲ್ಲಿ 'ತು' ಶಬ್ದವಿರುವುದರಿಂದ ಹಿಂದಿನ ಎರಡು ಸೂತ್ರಗಳು ಪೂರ್ವಪಕ್ಷ ಸೂತ್ರವಾಗುತ್ತವೆಂದು ಅದ್ವೈತಭಾಷ್ಯದಲ್ಲಿ 'ತುಶಬ್ದಃ ಪೂರ್ವಪಕ್ಷಂ ವ್ಯಾವರ್ತಯತಿ' ಎಂದು ಹೇಳಲಾಗಿದೆ. ಹೀಗೆ ಹೇಳುವುದಾದರೆ, 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರದಲ್ಲಿಯೂ 'ತು'ಶಬ್ದವಿದೆ. ಆದರಿಂದ ಈ ಸೂತ್ರದ ಹಿಂದಿನ ಸೂತ್ರವಾದ 'ನ ವಿಲಕ್ಷಣತ್ವಾತ್' ಎಂಬ ಸೂತ್ರವಷ್ಟೇ

ಪೂರ್ವಪಕ್ಷಸೂತ್ರವೆಂದಾಗಬೇಕಾದೀತು.'ನವಿಲಕ್ಷಣತ್ವಾತ್'ಇತ್ಯಾದಿಸೂತ್ರವು'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರವು ಪೂರ್ವಪಕ್ಷಸೂತ್ರವೆಂದು ಸಿದ್ಧವಾಗದಿರಬೇಕಾದೀತು.

ಬ್ರಹ್ಮಮೀಮಾಂಸಾಶಾಸ್ತ್ರದ ಯಾವುದೇ ಒಂದು ಸೂತ್ರ ಸಮಗ್ರವಾಗಿ ಪೂರ್ವಪಕ್ಷವನ್ನು ಮಾಡುತ್ತಲೇ ಇಲ್ಲ. ಪ್ರತಿಯೊಂದು ಸೂತ್ರಗಳೂ ಕೂಡ ಸಿದ್ಧಾಂತಸ್ಥಾಪಕವಾಗಿಯೇ ಆಗಿರುತ್ತವೆ. ಕಲ್ಪಸೂತ್ರದಲ್ಲಿ, ವ್ಯಾಕರಣಸೂತ್ರದಲ್ಲಿ ಪ್ರತ್ಯೇಕವಾಗಿ ಪೂರ್ವಪಕ್ಷಸೂತ್ರವೆಂಬ ವಿಭಾಗವಿರುವುದಿಲ್ಲ. ಅದೇ ರೀತಿಯಾಗಿ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಯೂ ಕೂಡ ಯಾವುದೇ ಒಂದು ಸೂತ್ರವು ಪೂರ್ವಪಕ್ಷಸೂತ್ರಗಳಾಗಿಲ್ಲ. ವಾಸ್ತವಿಕವಾಗಿ ಪೂರ್ವಮೀಮಾಂಸಾಶಾಸ್ತ್ರದಲ್ಲಿ ಕೆಲವು ಪೂರ್ವಪಕ್ಷ-ಸೂತ್ರಗಳಿವೆ. ಆದರೆ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿಯೇ ಜೈಮಿನಿಋಷಿಗಳು ಕೆಲವು ಪೂರ್ವಪಕ್ಷಸೂತ್ರಗಳನ್ನು ಬರೆದಿದ್ದಾರೆ. ಆದ್ದರಿಂದ ಮುಂದಿನ ಪಾದಗಳಲ್ಲಿ ಮತ್ತು ಅಧ್ಯಾಯಗಳಲ್ಲಿ ಅಂತಹ ಪೂರ್ವಪಕ್ಷಸೂತ್ರಗಳಿವೆ ಎಂಬ ಕಲ್ಪನೆಯು ಅವರ ಶೈಲಿಯಿಂದಲೇ ನಮಗೆ ತೀರ್ಮಾನವಾಗುತ್ತದೆ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಥಮಪಾದದಲ್ಲಾಗಲೀ, ಅಥವಾ ಪ್ರಥಮಾಧ್ಯಾಯದಲ್ಲಾಗಲೀ, ಯಾವುದೇ ಒಂದು ಪೂರ್ವಪಕ್ಷಸೂತ್ರಗಳೇ ಇರುವುದಿಲ್ಲವೆಂದು ನೀವೇ ಒಪ್ಪಿದ್ದೀರಿ. ಸಂಪೂರ್ಣ ಪ್ರಥಮಾಧ್ಯಾಯದಲ್ಲಿ ಪೂರ್ವಪಕ್ಷಸೂತ್ರಗಳಿಲ್ಲವೆಂದು ಅಧ್ಯಯನ ಮಾಡುವಾಗ ಮುಂದಿನ ಅಧ್ಯಾಯಗಳಲ್ಲಿಯೂ ಪೂರ್ವಪಕ್ಷಸೂತ್ರಗಳು ಇರುವುದಿಲ್ಲವೆಂಬ ಅಭಿಪ್ರಾಯವು ಸೂತ್ರಕಾರರಿಗಿರುತ್ತದೆ ಎಂದು ಅವರ ಶೈಲಿಯಿಂದಲೇ ನಿರ್ಣಯವಾಗುತ್ತದೆ. ಇಷ್ಟಾದರೂ ಕೂಡ ಪೂರ್ವಪಕ್ಷಸೂತ್ರಗಳಿವೆ ಎಂಬ ಆಗ್ರಹವನ್ನು ಮಾಡುವುದಾದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ನಿಮ್ಮ ಪ್ರಕಾರ ವ್ಯರ್ಥವಾಗುತ್ತದೆ.

ಪೂರ್ವವಾದಿಮತಂ ಕಿಂಚಿತ್ ಕಿಂಚಿಚ್ಚಾತತ್ತ್ವವೇದಕಮ್ ।
ಉಪಾಸನಾಪರಂ ಕಿಂಚಿತ್ ಇತಿ ಕಸ್ಮಾತ್ ವಿನಾಶ್ಯತೇ ॥೧॥

ಅದ್ವೈತಿಗಳ ಪ್ರಕಾರ ಕೆಲವು ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ. ಇನ್ನು ನೂರಾರು ಸೂತ್ರಗಳು ಅತತ್ತ್ವಾವೇದಕವಾಗಿವೆ. ಉಳಿದ ನೂರಾರು ಸೂತ್ರಗಳು ಉಪಾಸನಾಪರವಾಗಿದೆ. ಹೀಗೆ ಸಮಗ್ರ ಬ್ರಹ್ಮಸೂತ್ರಗಳೇ ಸತ್ಯವಾದ ವಿಷಯವನ್ನು ಹೇಳಲು ಸೋತುಬಿದ್ದು ವ್ಯರ್ಥವೆನಿಸುತ್ತವೆ. ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವೇ ಅದ್ವೈತಿಗಳ ಪ್ರಕಾರ ನಾಶವಾಯಿತು.

ಪ್ರಾರಂಭದ ಎರಡು ಸೂತ್ರಗಳಲ್ಲಿ ಮಾಡಲ್ಪಟ್ಟ ಪೂರ್ವಪಕ್ಷವೂ ಕೂಡ ಹುರುಳಿಲ್ಲದ್ದು. ಏಕೆಂದರೆ ಜಗತ್ತಿಗಿಂತ ಬ್ರಹ್ಮನು ವಿಲಕ್ಷಣನಾಗಿದ್ದಾನೆಂಬ ಕಾರಣದಿಂದ ಉಪಾದಾನನಲ್ಲ ಎಂಬ ಶಂಕೆಯನ್ನು ಈಗಾಗಲೇ ಅದೃಶ್ಯತ್ವಾಧಿಕರಣದಲ್ಲಿ ನೀವು ಮಾಡಿ ಪರಿಹರಿಸಿದ್ದೀರಿ. ಅದೇ ವಿಷಯವನ್ನು ವಿಲಕ್ಷಣತ್ವಾಧಿಕರಣದಲ್ಲಿಯೂ ಸಮರ್ಥನೆ ಮಾಡುವುದಾದರೆ ಪುನರುಕ್ತಿ ಬರುವುದಿಲ್ಲವೇ ? ಮತ್ತು ಪ್ರಥಮಸೂತ್ರದಲ್ಲಿ ಬ್ರಹ್ಮನಿಗಿಂತ ಜಗತ್ತು ವಿಲಕ್ಷಣವಾಗಿರುವುದರಿಂದ ಬ್ರಹ್ಮನು ಉಪಾದಾನಕಾರಣನಲ್ಲವೆಂದು ಪೂರ್ವಪಕ್ಷವನ್ನು ಮಾಡಿದಾಗ ಏಕೆ ವಿಲಕ್ಷಣನಾಗಿದ್ದಾನೆ ? ಎಂಬ ಪ್ರಶ್ನೆಯು ಬರುತ್ತದೆ ಇದಕ್ಕೆ ಸೂತ್ರಕಾರರು ಉತ್ತರಿಸುತ್ತಾ 'ತಥಾತ್ವಂ ಚ ಶಬ್ದಾತ್' ಜಗತ್ತು ಬ್ರಹ್ಮವಿಲಕ್ಷಣವಾಗಿದೆ ಎಂದು ಹೇಳುತ್ತಿದೆ ಎಂದು ಉತ್ತರಿಸಿದ್ದಾರೆ.

ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ ಎಂಬ ವಿಚಾರವು ಪ್ರತ್ಯಕ್ಷದಿಂದಲೇ ತಿಳಿಯುತ್ತಿರುವಾಗ ವೇದದ ಆಧಾರವನ್ನು ಸೂತ್ರಕಾರರು ಹೇಳಬೇಕಾಗಿಲ್ಲ. ಸೂತ್ರಾಕ್ಷರಗಳ ಅರ್ಥದಲ್ಲಿಯೂ ಬಹಳಷ್ಟು ತಪ್ಪುಗಳಿವೆ.

## ಅದ್ವೈತಿಗಳ ಸೂತ್ರವ್ಯಾಖ್ಯಾನ ಅಸಾಧು

ಎರಡನೆಯ 'ಅಭಿಮಾನಿವ್ಯಪದೇಶಸ್ತು' ಎಂಬುದೂ ಕೂಡ ಪೂರ್ವಪಕ್ಷಸೂತ್ರವೆಂದು ಅದ್ವೈತಿಗಳು ಹೇಳಿದ್ದಾರೆ. ಚೇತನನಾದ ಬ್ರಹ್ಮನು ಜಡವಾದ ಜಗತ್ತಿಗೆ ಉಪಾದಾನಕಾರಣವಾಗುವುದಿಲ್ಲವೆಂಬ ಪೂರ್ವಪಕ್ಷವನ್ನೇ ಖಚಿತ ಪಡಿಸಲು ಈ ಸೂತ್ರ ಹೊರಟಿದೆ ಎಂದು ವ್ಯಾಖ್ಯಾನ ಮಾಡುತ್ತಾರೆ. ಆದರೆ ಈ ಸೂತ್ರಕ್ಕೆ ಪ್ರಸಕ್ತಿಯೇ ಇಲ್ಲ. 'ಮೃದಬ್ರವೀತ್' ಎಂಬ ಅಭಿಮಾನಿದೇವತೆಯನ್ನು ಹೇಳದಿದ್ದರೂ, ಬ್ರಹ್ಮನು ಶುದ್ಧನಾಗಿದ್ದಾನೆ, ಜಗತ್ತು ಅಶುದ್ಧವಾಗಿದೆ ಆದ್ದರಿಂದ ಬ್ರಹ್ಮನಿಗೂ, ಜಗತ್ತಿಗೂ ವೈಲಕ್ಷಣ್ಯವಿದೆಯೆಂಬುದು ಪ್ರತ್ಯಕ್ಷದಿಂದಲೇ ಸಿದ್ಧವಾಗಿರುವಾಗ ಇದರ ಸಮರ್ಥನೆಗಾಗಿ ಎರಡನೆಯ ಸೂತ್ರವು ಅನಗತ್ಯ. ಚೇತನತ್ವ, ಜಡತ್ವ ಎಂಬ ವಿರುದ್ಧ ಧರ್ಮಗಳು ಮಾತ್ರ ಉಪಾದಾನ ಉಪಾದೇಯಭಾವಕ್ಕೆ ವಿರುದ್ಧವಾಗಿವೆ. ಬ್ರಹ್ಮನು ಶುದ್ಧನಾಗಿಯೂ, ಜಗತ್ತು ಅಶುದ್ಧವಾಗಿಯೂ ಇರುವ ಮಾತ್ರದಿಂದ ಉಪಾದಾನ ಉಪಾದೇಯಭಾವವು ಕೂಡಬಾರದೆಂದೇನೂ ಇಲ್ಲ ಎಂದಾದರೆ ಮೂರನೆಯ ಸೂತ್ರವು ಅಯುಕ್ತವಾಗುತ್ತದೆ. ಗೋಮಯದಿಂದ ಚೇಳು ಹುಟ್ಟುತ್ತದೆ. ಆ ಚೇಳಿನ ಶರೀರಕ್ಕೆ ಗೋಮಯವು ಉಪಾದಾನಕಾರಣ. ಆದರೂ ಕೂಡ ಚೇಳಿನ ಶರೀರವು ಚೇತನಕ್ಕೆ ಅಧಿಷ್ಠಾನವಾಗಿದೆ. ಗೋಮಯವು ಚೇತನದಿಂದ ಅಧಿಷ್ಠಿತವಾಗಿಲ್ಲ. ಹೀಗೆ ಎರಡಕ್ಕೂ ವೈಲಕ್ಷಣ್ಯವಿದ್ದರೂ ಉಪಾದಾನ ಉಪಾದೇಯಭಾವವು ಇರುತ್ತದೆ. ಅದರಂತೆ ಬ್ರಹ್ಮನು ಚೇತನನಾಗಿದ್ದು, ಜಗತ್ತು ಅಚೇತನವಾಗಿದ್ದರೂ ಉಪಾದಾನ ಉಪಾದೇಯಭಾವವು ಯುಕ್ತವಾಗುತ್ತದೆಂದು ಸಿದ್ಧಾಂತ ಮಾಡಲಾಗಿದೆ. ಇದೂ ಕೂಡ ಅಸಂಗತ. ಏಕೆಂದರೆ ಚೇತನ ಅಚೇತನಗಳಿಗೆ ಉಪಾದಾನ ಉಪಾದೇಯಭಾವವೇ ಇಲ್ಲವೆಂದು ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿರುವಾಗ ಅಂತಹ ಎರಡು ವಸ್ತುಗಳಿಗೂ ಉಪಾದಾನ ಉಪಾದೇಯಭಾವವನ್ನೇ ತೋರಿಸಬೇಕು. ಹಾಗೇ ತೋರಿಸಿದರೆ ಬೇರೆ ರೀತಿಯ ವೈಲಕ್ಷಣ್ಯವಿರುವ ಎರಡು ವಸ್ತುಗಳಿಗೆ ಉಪಾದಾನ ಉಪಾದೇಯಭಾವವನ್ನು ಹೇಳಿ ಅದರ ಆಧಾರದಿಂದ ಚೇತನನಾದ ಬ್ರಹ್ಮನಿಗೂ, ಅಚೇತನನಾದ ಜಗತ್ತಿಗೂ ಉಪಾದಾನ ಉಪಾದೇಯಭಾವವನ್ನು ಸಾಧಿಸುವುದು ಅಸಂಗತವಾಗುತ್ತದೆ.

'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ನಾಲ್ಕನೆಯ ಸೂತ್ರದಲ್ಲಿ ಸತ್ಕಾರ್ಯವಾದವನ್ನು ಸಮರ್ಥನೆ ಮಾಡುತ್ತಾ ಅಸತ್ಕಾರ್ಯವಾದದ ಆಕ್ಷೇಪವನ್ನು ನಿರಾಕರಿಸಿದ್ದೀರಿ. ಈ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಅಸತ್' ಶಬ್ದಕ್ಕೆ 'ಅಸದಿತಿಚೇನ್ನ' ಎಂಬಲ್ಲಿ ಪ್ರಸಜ್ಯೇತ ಎಂಬ ಪದವನ್ನು 'ಪ್ರತಿಷೇಧಮಾತ್ರತ್ವಾತ್' ಎಂಬಲ್ಲಿ ಸತ್ಕಾರ್ಯವಾದ ಪ್ರತಿಷೇಧಸ್ಯ, ಸತ್ಕಾರ್ಯಪ್ರತಿಷೇಧಮಾತ್ರತ್ವಾತ್' ಎಂಬುದನ್ನು ನೀವು ಅಧ್ಯಾಹಾರ ಮಾಡಿಕೊಳ್ಳಬೇಕು. ನಮ್ಮ ಸಿದ್ಧಾಂತದ ಪ್ರಕಾರ ಬ್ರಹ್ಮನ ಜಗತ್ ಕಾರಣತ್ವವನ್ನೇ ನೇರವಾಗಿ ಸೂತ್ರವು ಆಕ್ಷೇಪ ಮಾಡುತ್ತಿದೆ. ನಿಮ್ಮ ಮತದಲ್ಲಿ ಅಸತ್‌ಕಾರ್ಯವಾದವನ್ನು ಆಕ್ಷೇಪ ಮಾಡಲಾಗಿದೆ. ನೇರವಾಗಿ ಬ್ರಹ್ಮಕಾರಣತ್ವವನ್ನೇ ಆಕ್ಷೇಪ ಮಾಡಲು ಬರುವಾಗ, ಅಪ್ರಸ್ತುತವಾದ ಅಸತ್‌ಕಾರ್ಯವಾದವನ್ನು ಆಕ್ಷೇಪ ಮಾಡುವುದು ಅಸಮಂಜಸ.

'ಅಪೀತೌ ತದ್ವತ್ಪ್ರಸಂಗಾದಸಮಂಜಸಮ್' ಎಂಬ ಐದನೆಯ ಸೂತ್ರವು ಕೇವಲ ಪೂರ್ವಪಕ್ಷ ಪ್ರಾಪಕವಾಗಿದೆ ಎಂದು ಹೇಳುತ್ತೇವೆ. ಜಗತ್ತು ಬ್ರಹ್ಮನಿಂದ ಹುಟ್ಟುವುದಾದರೆ ಜಗತ್ತನ್ನು ಹೇಳುವ ಗುಣದೋಷಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾದೀತು. ಆವಾಗ ಬ್ರಹ್ಮನು ನಿರ್ವಿಕಾರನು, ಸರ್ವಜ್ಞನು, ಶುದ್ಧನು ಇತ್ಯಾದಿ ಶ್ರುತಿಗಳ ವಿರೋಧವೂ ಬರುತ್ತದೆ ಎಂಬುದು ನಿಮ್ಮ ವ್ಯಾಖ್ಯಾನ. ಇದೂ ಕೂಡ ಸರಿಯಿಲ್ಲ. ಕಾರ್ಯಭೂತವಾದ ಜಗತ್ತಿನಲ್ಲಿರುವ ಧರ್ಮಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾಗುತ್ತದೆ ಎನ್ನಲು ಕಾರ್ಯದ ನಾಶವೇ ಕಾರಣವೋ, ಅಥವಾ ಕಾರ್ಯಕಾರಣಗಳಿಗಿರುವ ಅಭೇದವು ಕಾರಣವೋ? ಮೊದಲನೆಯ ಪಕ್ಷದಲ್ಲಿ ಕಾರ್ಯವೇ ನಾಶವಾದ ಮೇಲೆ ಅವುಗಳ ಧರ್ಮವೂ ಕೂಡ ನಾಶವಾಗುತ್ತವೆಂದು ಉತ್ತರ. ಎರಡನೆಯ ಪಕ್ಷದಲ್ಲಿ ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಸ್ಥಿತಿಕಾಲದಲ್ಲಿಯೂ ಕೂಡ ಕಾರ್ಯದಲ್ಲಿರುವ ಧರ್ಮವು ಕಾರಣದಲ್ಲಿ ಬರುತ್ತದೆಂಬ ಆಕ್ಷೇಪವು ಇದ್ದೇ ಇದೆ. ಆದ್ದರಿಂದ ಐದನೆಯ ಸೂತ್ರವು ಯಾವುದೇ ಪೂರ್ವಪಕ್ಷದ ಯುಕ್ತಿಯನ್ನು ಉಪೋದ್ಬಲನೆ ಮಾಡುವುದಿಲ್ಲ.

'ನತು ದೃಷ್ಟಾಂತಭಾವಾತ್' ಎಂಬ ಆರನೆಯ ಸೂತ್ರದಲ್ಲಿ ಕಾರ್ಯಕಾರಣಗಳಿಗೆ ಅಭೇದವಿದ್ದರೂ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುವುದಿಲ್ಲವೆನ್ನಲು ಅನೇಕ ದೃಷ್ಟಾಂತಗಳಿವೆ ಎಂದು ವ್ಯಾಖ್ಯಾನ ಮಾಡಿದ್ದೀರಿ. ಇದೂ ಕೂಡ ಅಯುಕ್ತ. ಈಗಾಗಲೇ 'ದೃಶ್ಯತೇ ತು' ಎಂಬ ಸೂತ್ರದಿಂದಲೇ ಗೋಮಯದ ಕಾರ್ಯವಾದ ಚೇಳಿನಲ್ಲಿರುವ ಧರ್ಮಗಳು ಕಾರಣವಾದ ಗೋಮಯದಲ್ಲಿ ಬರುವುದಿಲ್ಲವೆಂದು ದೃಷ್ಟಾಂತದಿಂದ ಹೇಳಿದ ಮೇಲೆ ಅದೇ ವಿಷಯವನ್ನು ಈ ಸೂತ್ರವು ಹೇಳಿದರೆ ಪುನರುಕ್ತವಾಗುತ್ತದೆ.

'ಸ್ವಪಕ್ಷದೋಷಾಚ್ಚ'ಎಂಬ ಏಳನೆಯ ಸೂತ್ರದಲ್ಲಿ ಜಲಾಹರಣಾದಿಗಳಿಗೆ ಸಮರ್ಥವಾದ ಘಟವನ್ನು ಕುರಿತು ಜಲಾಹರಣಾದಿಗಳಿಗೆ ಸಮರ್ಥವಾಗದ ಮಣ್ಣು ಹೇಗೆ ಉಪಾದಾನವಾಗಿದೆಯೋ, ಅದರಂತೆ ರೂಪರಸಾದಿಗುಣಗಳನ್ನು ಹೊಂದಿರುವ ಜಗತ್ತಿಗೆ ರೂಪರಸಾದಿಗುಣಗಳನ್ನು ಹೊಂದಿರದ ಪ್ರಕೃತಿಯು ಕಾರಣವಾಗುತ್ತದೆ ಎಂದು ಸಾಂಖ್ಯನು ಆಕ್ಷೇಪ ಮಾಡಿದಾಗ ಪ್ರಧಾನವು ಉಪಾದಾನಕಾರಣವಾಗುತ್ತದೆ, ಆದರೆ ಅಚೇತನವಾದ ಜಗತ್ತಿಗೆ ಚೇತನವಾದ ಬ್ರಹ್ಮನು ಉಪಾದಾನಕಾರಣನಾಗುವುದಿಲ್ಲ ಎಂಬ ಸಾಂಖ್ಯರ ಆಕ್ಷೇಪಕ್ಕೆ ನಿಮ್ಮಿಂದ ಉತ್ತರಿಸಲಾಗದು. ಏಕೆಂದರೆ ಅಚೇತನಪದಾರ್ಥಕ್ಕೆ ಚೇತನವು ಉಪಾದಾನಕಾರಣವಾಗಿರುವುದು ಎಲ್ಲಿಯೂ ಕಂಡಿಲ್ಲ. ಅಷ್ಟೇ ಅಲ್ಲದೇ ಬ್ರಹ್ಮನನ್ನು ನೀವು ನಿರ್ವಿಕಾರನೆಂದೂ ಕೂಡ ಹೇಳಿರುತ್ತೀರಿ.

'ತರ್ಕಾಪ್ರತಿಷ್ಠಾನಾದಪ್ಯನ್ಯಥಾऽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷ-ಪ್ರಸಂಗಃ' ಎಂಬ ಎಂಟನೆಯ ಸೂತ್ರದಲ್ಲಿ 'ತರ್ಕಾಪ್ರತಿಷ್ಠಾನಾತ್' ಎಂಬುದನ್ನು ಸಿದ್ಧಾಂತಶೇಷವನ್ನಾಗಿ 'ಅನ್ಯಥಾನುಮೇಯಮ್' ಎಂಬುದನ್ನು ಪೂರ್ವಪಕ್ಷ ಶೇಷವನ್ನಾಗಿ, 'ಅನಿರ್ಮೋಕ್ಷಪ್ರಸಂಗಃ' ಎಂಬುದನ್ನು ಪುನಃ ಸಿದ್ಧಾಂತಶೇಷವನ್ನಾಗಿ ಹೇಳುತ್ತೀರಿ. ಹೀಗೆ ವ್ಯಾಖ್ಯಾನ ಮಾಡಿದಾಗ ವಾಕ್ಯಭೇದ ದೋಷವು ಬರುತ್ತದೆ. ಸೂತ್ರದಲ್ಲಿರುವ 'ಅಪಿ' ಶಬ್ದ, 'ಪ್ರಸಂಗ' ಶಬ್ದಗಳಿಗೆ ವೈಯರ್ಥ್ಯ ಬರುತ್ತದೆ. 'ಅನ್ಯಥಾನುಮೇಯಮ್' ಎಂಬ ಸಾಧ್ಯಕ್ಕೆ ಹೇತುಸಮರ್ಪಕವಾಗಿ 'ತರ್ಕಾಪ್ರತಿಷ್ಠಾನಾತ್' ಎಂಬುದನ್ನೇ

ಹೇಳಲು ಬರುವಾಗ ಶ್ರುತಿಸಿದ್ಧವಾದ ವಿಚಾರದಲ್ಲಿ ತರ್ಕಕ್ಕೆ ಅವಕಾಶವಿಲ್ಲ ಎಂಬ ಅಧ್ಯಾಹೃತವಾದ ಸಾಧ್ಯದಲ್ಲಿ ಅನ್ವಯ ಮಾಡುವುದು ಅಯುಕ್ತವಾಗುತ್ತದೆ. ಅಷ್ಟೇ ಅಲ್ಲದೇ ತರ್ಕವು ಅಪ್ರತಿಷ್ಠಿತವೆಂದು ನಿಮ್ಮಿಂದ ಸಾಧನೆ ಮಾಡಲೂ ಕೂಡ ಆಗುವುದಿಲ್ಲ. ಸಕಲವಿಧ ತರ್ಕಗಳು ದುಷ್ಟವಾಗಿವೆ ಎನ್ನುವುದಾದರೆ ಮೀಮಾಂಸಾಶಾಸ್ತ್ರವೇ ಅನಾರಂಭಣೀಯವಾಗಬೇಕಾಗುತ್ತದೆ. ಮತ್ತು 'ಯಃ ತರ್ಕೇನ ಅನುಸಂಧತ್ತೇ' ಇತ್ಯಾದಿ ಶ್ರುತಿವಾಕ್ಯಗಳು 'ಶ್ರೋತವ್ಯಃ ಮಂತವ್ಯಃ' ಇತ್ಯಾದಿ ಶ್ರುತಿವಾಕ್ಯಗಳು ಸತ್ತರ್ಕಗಳಿಂದ ಬ್ರಹ್ಮನನ್ನು ತಿಳಿಯಬೇಕೆಂದು ಹೇಳುತ್ತಿವೆ. ಆದ್ದರಿಂದ ಶ್ರುತ್ಯಾದಿಗಳ ಅನುಗ್ರಹವಿಲ್ಲದ ತರ್ಕವನ್ನು ದುಷ್ಟವೆಂದು ನೀವು ಹೇಳಬೇಕು. ಆದರೆ ಬ್ರಹ್ಮನು ಉಪಾದಾನನಲ್ಲ ಎನ್ನಲು ಯಾವ ವೈಲಕ್ಷಣ್ಯರೂಪವಾದ ತರ್ಕವನ್ನು ನೀವು ಹೇಳುತ್ತಿದ್ದೀರೋ ಅದು 'ನಿರ್ವಿಕಾರಃ' ಇತ್ಯಾದಿ ಶ್ರುತಿಗಳ ಅನುಗ್ರಹವನ್ನು ಹೊಂದಿರುವುದಿಲ್ಲ. ಆದ್ದರಿಂದ ನಿಮ್ಮ ತರ್ಕವೂ ಕೂಡ ದುಷ್ಟವಾಗಿದೆ ಎಂದಂತಾಯಿತು. ಹೀಗೆ ವಿಲಕ್ಷಣತ್ವಾಧಿಕರಣದಲ್ಲಿರುವ ಎಂಟು ಸೂತ್ರಗಳ ವ್ಯಾಖ್ಯಾನವೂ  ಕೂಡ ಅತ್ಯಂತ ಅಯುಕ್ತವಾಗಿದೆ. ವಿಶಿಷ್ಟಾದ್ವೈತಮತದಲ್ಲಿಯೂ ಕೂಡ ಇದರಂತೆ ತಿಳಿಯಬೇಕು.

''ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬುದನ್ನು ಶಿಷ್ಟಪರಿಗ್ರಹಾಧಿಕರಣವೆಂದು ಪರಿಗಣಿಸಿದ್ದೀರಿ. ಬ್ರಹ್ಮಕಾರಣತಾವಾದವು ವೈದಿಕವಾಗಿರುವುದರಿಂದ ಅದಕ್ಕೆ ಹತ್ತಿರವಾಗಿರುವ ಸಾಂಖ್ಯಮತವು ಶಿಷ್ಟರಾದ ಮನು, ವ್ಯಾಸ ಮೊದಲಾದವರಿಂದ  ಸ್ವಲ್ಪವಾದರೂ ಪರಿಗ್ರಹಿತವಾಗಿದೆ. ಆದರೆ ವೈಶೇಷಿಕರ ಪರಮಾಣುಕಾರಣತಾವಾದವು ವೈದಿಕವಲ್ಲದ ಕಾರಣ ಶಿಷ್ಟರಾದ ಮನು, ವ್ಯಾಸ ಮೊದಲಾದವರಿಂದ ತಿರಸ್ಕರಿಸಲ್ಪಟ್ಟಿದೆ ಎಂದು ಈ ಸೂತ್ರಕ್ಕೆ ನೀವು ವ್ಯಾಖ್ಯಾನ ಮಾಡಿದ್ದೀರಿ. ಇದೂ ಕೂಡ ಅಯುಕ್ತ. ಈಗಾಗಲೇ 'ಏತನೇ ಸರ್ವೇ ವ್ಯಾಖ್ಯಾತಾಃ ಎಂಬ ಪ್ರಥಮಾಧ್ಯಾಯದ ಕೊನೆಯ ಸೂತ್ರದಲ್ಲಿ ವೈಶೇಷಿಕರ ಪರಮಾಣುಕಾರಣತಾವಾದವನ್ನು ನಿರಾಕರಣೆ ಮಾಡಿದ ಮೇಲೆ ಅದೇ ವಿಷಯವನ್ನು ಈ ಸೂತ್ರವೂ ಕೂಡ ಹೇಳಿದರೆ ಪುನರುಕ್ತಿ ಬರುತ್ತದೆ. ವಿಚಾರ ಮಾಡಿದರೆ ಸೇಶ್ವರರಾದ ವೇಶೇಷಿಕರಿಗಿಂತಲೂ ನಿರೀಶ್ವರರಾದ ಸಾಂಖ್ಯರು ಶಿಷ್ಟರಿಂದ ತಿರಸ್ಕರಿಸಲ್ಪಡುತ್ತಾರೆ. ವೈಶೇಷಿಕರು ಈಶ್ವರನನ್ನು ಒಪ್ಪಿರುತ್ತಾರೆಂಬ ಕಾರಣದಿಂದ ಸ್ವಲ್ಪವಾದರೂ ಅವರಲ್ಲಿ ವೈದಿಕತ್ವವು ಕಾಣಸುತ್ತದೆ. ಆದರೆ ಈಶ್ವರನನ್ನೇ ಒಪ್ಪದ ಸಾಂಖ್ಯರಲ್ಲಿ ವೈದಿಕತ್ವವು ಸ್ವಲ್ಪವೂ ಕೂಡ ಇರುವುದಿಲ್ಲ. ಮತ್ತು ಪ್ರತ್ಯೇಕ ಅಧಿಕರಣವೆಂದು ಕಲ್ಪನೆ ಮಾಡಲು ಹಿಂದಿನ ಸಿದ್ಧಾಂತದ ವಿಷಯದಲ್ಲಿ ಯಾವುದೇ ಪೂರ್ವಪಕ್ಷಯುಕ್ತಿಗಳು ಗೋಚರವಾಗುತ್ತಿಲ್ಲ ಮತ್ತು ಹೊಸದಾದ ಸಿದ್ಧಾಂತ ಯುಕ್ತಿಯೂ ಕೂಡ ಈ ಸೂತ್ರದಲ್ಲಿ ಕಾಣಿಸುತ್ತಿಲ್ಲ. ಆದ್ದರಿಂದ ಶಿಷ್ಟಪರಿಗ್ರಹಾಧಿಕರಣವೆಂಬ ಕಲ್ಪನೆಯೇ ಅಸಾಧುವಾಗಿದೆ.

*******

# ಆಕಾಶಾಧಿಕರಣ

(೧-೪-೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ತತ್ವಪ್ರಕಾಶಿಕಾ, ಭಾವದೀಪ
ಇವುಗಳ ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

ಪ್ರಥಮಧ್ಯಾಯ ಚತುರ್ಥಪಾದ

# ಆಕಾಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಪರಮಾತ್ಮನು ಪ್ರಧಾನಕಾರಣನಷ್ಟೇ ಅಲ್ಲ ಅವಾಂತರಕಾರಣನೂ ಹೌದು

।। अथ आकाशाधिकरणम् ।।

**सूत्रम् – ।। कारणत्वेन चाऽकाशादिषु यथाव्यपदिष्टोक्तेः।। १ ।।**

ಸೂತ್ರಾರ್ಥ - ಪರಮಾತ್ಮನು ಪ್ರಧಾನಕಾರಣನು, ಅದರಂತೆ ಅವಾಂತರಕಾರಣನೂ ಆಗಿದ್ದಾನೆಂದು ಶ್ರುತಿ ಪ್ರತಿಪಾದಿಸುತ್ತಿದೆ. ಆಕಾಶಾದಿಗಳು ಅವಾಂತರಕಾರಣವೆಂದು ಲೋಕಪ್ರಸಿದ್ಧವಾಗಿವೆ. ಆದರೆ ಅಂತಹ ಆಕಾಶಾದಿಗಳಲ್ಲಿಯೂ ಅಂತರ್ಯಾಮಿಯಾದವನು ಪರಮಾತ್ಮನೇ ಆಗಿದ್ದಾನೆಂದು 'ಸ ಯೋ ಅತಃ ಅಶ್ರುತಃ' ಇತ್ಯಾದಿ ಐತರೇಯೋಪನಿಷತ್ತು ಹೇಳುತ್ತಿದೆ. ಮತ್ತು 'ಯ ಆಕಾಶೇ ತಿಷ್ಠನ್' ಎಂಬ ಬೃಹದಾರಣ್ಯಕದಲ್ಲಿಯೂ ಅವನೇ ಆಕಾಶಾದಿಗಳಲ್ಲಿ ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಆಕಾಶಾಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – 'आत्मनः आकाशः सम्भूतः आकाशाद् वायुः' इत्यादौ कार्यत्वे सति कारणत्वरूपावान्तरकारणवाचकाकाशादिशब्दैराकाशादिषु स्थितो विष्णुरेव । कारणत्वेन चशब्दात् कार्यत्वेन चोच्यते न भूतम् । कुतः **यथाव्यपदिष्टत्वोक्तेः** 'स योऽतोऽश्रुतः' इत्यादौ विष्णुर्यथा यादृशेनाविदितत्वादिरूपेण व्यपदिष्टः उक्तः । तद्रूपयुक्तस्यैवाकाशादिषु 'यमाकाशो न वेद' इत्यादिवाक्येनोक्तत्वादित्यर्थः।।१।।

ಅರ್ಥ -- ಆಕಾಶಾದಿಷು = 'ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ' ಇತ್ಯಾದಿ ಶ್ರುತಿಯಲ್ಲಿರುವ ಆಕಾಶಾದಿಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. 'ಕಾರ್ಯತ್ವೇ ಸತಿ ಕಾರಣತ್ವಂ' ಎಂಬುದು ಅವಾಂತರಕಾರಣದ ಲಕ್ಷಣ. ಭೂತಾಕಾಶವು ಅವಾಂತರಕಾರಣವೆಂದು ಲೋಕಪ್ರಸಿದ್ಧವಾಗಿದ್ದರೂ, ಇಂತಹ ಆಕಾಶಾದಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿದವನು ಮಹಾವಿಷ್ಣುವೇ ಆಗಿದ್ದಾನೆ. ಕಾರಣತ್ವೇನ ಚ = ಕಾರ್ಯನು, ಕಾರಣನೂ ಆದವನು ವಿಷ್ಣುವೇ ಹೊರತು, ಭೂತಾಕಾಶವಲ್ಲ. ಏಕೆಂದರೆ, ಯಥಾ ವ್ಯಪದಿಷ್ಟೋಕ್ತೇಃ = 'ಸ ಯೋಽತೋಽಶ್ರುತಃ' ಇತ್ಯಾದಿ ಶ್ರುತಿಯಲ್ಲಿ ಅವಿದಿತತ್ವ ಮೊದಲಾದ ವಿಷ್ಣುವಿನ ಅಸಾಧಾರಣ ಲಕ್ಷಣಗಳನ್ನು ಹೇಳಿ, ಅದನ್ನೇ ಆಕಾಶವೆಂದು 'ಯಮಾಕಾಶೋ ನ ವೇದ' ಇತ್ಯಾದಿ ವಾಕ್ಯಗಳಲ್ಲಿ ಹೇಳಲಾಗಿದೆ. ಆದ್ದರಿಂದ ವಿಷ್ಣು ಪ್ರಧಾನಕಾರಣನಾದಂತೆ ಅವಾಂತಕಾರಣನೂ ಆಗಿದ್ದಾನೆಂದು ಸಿದ್ಧವಾಯಿತು.

॥ ಸೂತ್ರದೀಪಿಕೆಯಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – अवान्तरकारणत्वेनापि स एवोच्यत इति वक्ति -**

**।। कारणत्वेन चाऽकाशादिषु यथाव्यपदिष्टोक्तेः ।।**

ಅನುವಾದ - ಆಕಾಶಾದಿಗಳಲ್ಲಿ ಅವಾಂತರಕಾರಣನಾಗಿ ವಿಷ್ಣುವೇ ನೆಲೆಸಿದ್ದಾನೆ. ಆದ್ದರಿಂದ ಆಕಾಶಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂದು ಸಮರ್ಥಿಸಲು ಸೂತ್ರ ಹೊರಟಿದೆ.

ಆಕಾಶಾಧಿಕರಣ (೧-೪-೪)

॥ ಶ್ರೀಗುರುಭ್ಯೋ ನಮಃ ॥

ಪ್ರಥಮಧ್ಯಾಯ ಚತುರ್ಥಪಾದ

# ಆಕಾಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಪರಮಾತ್ಮನು ಪ್ರಧಾನಕಾರಣನಷ್ಟೇ ಅಲ್ಲ ಅವಾಂತರಕಾರಣನೂ ಹೌದು

**।। अथ आकाशाधिकरणम् ।।**

## सूत्रम् – ।। कारणत्वेन चाऽकाशादिषु यथाव्यपदिष्टोक्तेः।। १ ।।

ಸೂತ್ರಾರ್ಥ - ಪರಮಾತ್ಮನು ಪ್ರಧಾನಕಾರಣನು, ಅದರಂತೆ ಅವಾಂತರಕಾರಣನೂ ಆಗಿದ್ದಾನೆಂದು ಶ್ರುತಿ ಪ್ರತಿಪಾದಿಸುತ್ತಿದೆ. ಆಕಾಶಾದಿಗಳು ಅವಾಂತರಕಾರಣವೆಂದು ಲೋಕಪ್ರಸಿದ್ಧವಾಗಿವೆ. ಆದರೆ ಅಂತಹ ಆಕಾಶಾದಿಗಳಲ್ಲಿಯೂ ಅಂತರ್ಯಾಮಿಯಾದವನು ಪರಮಾತ್ಮನೇ ಆಗಿದ್ದಾನೆಂದು 'ಸ ಯೋ ಅತಃ ಅಶ್ರುತಃ' ಇತ್ಯಾದಿ ಐತರೇಯೋಪನಿಷತ್ತು ಹೇಳುತ್ತಿದೆ. ಮತ್ತು 'ಯ ಆಕಾಶೇ ತಿಷ್ಠನ್' ಎಂಬ ಬೃಹದಾರಣ್ಯಕದಲ್ಲಿಯೂ ಅವನೇ ಆಕಾಶಾದಿಗಳಲ್ಲಿ ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಆಕಾಶಾಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – 'आत्मनः आकाशः सम्भूतः आकाशाद् वायुः' इत्यादौ कार्यत्वे सति कारणत्वरूपावान्तरकारणवाचकाकाशादिशब्दैराकाशादिषु स्थितो विष्णुरेव । कारणत्वेन चशब्दात् कार्यत्वेन चोच्यते न भूतम् । कुतः **यथाव्यपदिष्टत्वोक्तेः** 'स योऽतोऽश्रुतः' इत्यादौ विष्णुर्यथा यादृशेनाविदितत्वादिरूपेण व्यपदिष्टः उक्तः । तद्रूपयुक्तस्यैवाकाशादिषु 'यमाकाशो न वेद' इत्यादिवाक्येनोक्तत्वादित्यर्थः।।१।।

ಅರ್ಥ -- ಆಕಾಶಾದಿಷು = 'ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ' ಇತ್ಯಾದಿ ಶ್ರುತಿಯಲ್ಲಿರುವ ಆಕಾಶಾದಿಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. 'ಕಾರ್ಯತ್ವೇ ಸತಿ ಕಾರಣತ್ವಂ' ಎಂಬುದು ಅವಾಂತರಕಾರಣದ ಲಕ್ಷಣ. ಭೂತಾಕಾಶವು ಅವಾಂತರಕಾರಣವೆಂದು ಲೋಕಪ್ರಸಿದ್ಧವಾಗಿದ್ದರೂ, ಇಂತಹ ಆಕಾಶಾದಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿದವನು ಮಹಾವಿಷ್ಣುವೇ ಆಗಿದ್ದಾನೆ. ಕಾರಣತ್ವೇನ ಚ = ಕಾರ್ಯನು, ಕಾರಣನೂ ಆದವನು ವಿಷ್ಣುವೇ ಹೊರತು, ಭೂತಾಕಾಶವಲ್ಲ. ಏಕೆಂದರೆ, ಯಥಾ ವ್ಯಪದಿಷ್ಟೋಕ್ತೇಃ = 'ಸ ಯೋಽತೋಽಶ್ರುತಃ' ಇತ್ಯಾದಿ ಶ್ರುತಿಯಲ್ಲಿ ಅವಿದಿತತ್ವ ಮೊದಲಾದ ವಿಷ್ಣುವಿನ ಅಸಾಧಾರಣ ಲಕ್ಷಣಗಳನ್ನು ಹೇಳಿ, ಅದನ್ನೇ ಆಕಾಶವೆಂದು 'ಯಮಾಕಾಶೋ ನ ವೇದ' ಇತ್ಯಾದಿ ವಾಕ್ಯಗಳಲ್ಲಿ ಹೇಳಲಾಗಿದೆ. ಆದ್ದರಿಂದ ವಿಷ್ಣು ಪ್ರಧಾನಕಾರಣನಾದಂತೆ ಅವಾಂತಕಾರಣನೂ ಆಗಿದ್ದಾನೆಂದು ಸಿದ್ಧವಾಯಿತು.

॥ ಸೂತ್ರದೀಪಿಕೆಯಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – अवान्तरकारणत्वेनापि स एवोच्यत इति वक्ति -**

**।। कारणत्वेन चाऽकाशादिषु यथाव्यपदिष्टोक्तेः ।।**

ಅನುವಾದ - ಆಕಾಶಾದಿಗಳಲ್ಲಿ ಅವಾಂತರಕಾರಣನಾಗಿ ವಿಷ್ಣುವೇ ನೆಲೆಸಿದ್ದಾನೆ. ಆದ್ದರಿಂದ ಆಕಾಶಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂದು ಸಮರ್ಥಿಸಲು ಸೂತ್ರ ಹೊರಟಿದೆ.

ಆಕಾಶಾಧಿಕರಣ (೧-೪-೪)

ಪ್ರತಿಪದಾರ್ಥ --ಈ ಅಧಿಕರಣದಲ್ಲಿ ಅವಾಂತರಕಾರಣವಾಚಕವಾದ ಆಕಾಶ ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳಿರುತ್ತವೆ.

'ತತ್ತು ಸಮನ್ವಯಾತ್' ಎಂಬ ಅಧಿಕರಣದಲ್ಲಿ ಸಕಲಶಬ್ದ ಸಮನ್ವಯ ಪ್ರತಿಜ್ಞೆ ಮಾಡಿದ್ದು, ಯುಕ್ತವಲ್ಲ. ಏಕೆಂದರೆ ಅವಾಂತರಕಾರಣವಾಚಕವಾದ ಆಕಾಶಾದಿ ಶಬ್ದಗಳಿಂದ ಬೇರೆ ಪದಾರ್ಥಗಳೇ ಪ್ರತಿಪಾದ್ಯವಾಗುತ್ತವೆ ಹೊರತು, ವಿಷ್ಣುವಲ್ಲ. ವಿಷ್ಣು ಕೇವಲ ಕಾರಣನಾಗಿದ್ದಾನೆ ಹೊರತು, ಕಾರ್ಯತ್ವವು ಅವನಲ್ಲಿ ಬರುವುದಿಲ್ಲ. ಹೀಗೆ ಹಿಂದಿನ ಅಧಿಕರಣದ ವಾಕ್ಯದ ಜೊತೆ ಸಂಯೋಜನೆ ಮಾಡುತ್ತಾ, ಶ್ರುತ್ಯಾದಿಸಂಗತಿಗಳು ವಿಷಯ, ಪೂರ್ವಪಕ್ಷ ಮೊದಲಾದವುಗಳನ್ನು ಸ್ವತಃ ಶಿಷ್ಯಂದಿರೇ ತಿಳಿದುಕೊಳ್ಳುತ್ತಾರೆಂಬ ಅಭಿಪ್ರಾಯದಿಂದ ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆಯನ್ನು ನೀಡುತ್ತಿದ್ದಾರೆ –

ಅವಾಂತರಕಾರಣತ್ವೇನಾಪಿ = ಆಕಾಶಾದಿಗಳಲ್ಲಿ ಅವಾಂತರಕಾರಣನಾಗಿಯೂ ಕೂಡ, ಸ ಏವ = ಮಹಾವಿಷ್ಣುವೇ, ಉಚ್ಯತೇ = ಪ್ರತಿಪಾದ್ಯನಾಗಿದ್ದಾನೆ, ಇತಿ = ಹೀಗೆ, ವಕ್ತಿ = ಸೂತ್ರಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – आकाशादिष्ववान्तरकारणत्वेन स एव स्थितः । यथाव्यपदिष्टस्यैव परस्य 'य आकाशे तिष्ठन्' इत्यादिना आकाशादिषूक्तेः ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये आकाशाधिकरणम् ।। ४ ।।**

ಅನುವಾದ - ಆಕಾಶಾದಿಗಳಲ್ಲಿ ಅವಾಂತರಕಾರಣತ್ವೇನ ಸ್ಥಿತನಾದವನು ಮಹಾವಿಷ್ಣುವೇ ಆಗಿದ್ದಾನೆ. 'ಸ ಯೋ ಅತಃ ಅಶ್ರುತಃ' ಎಂಬುದಾಗಿ ಐತರೇಯದಲ್ಲಿ ವಿಷ್ಣುವನ್ನು ಅಜ್ಞೇಯನನ್ನಾಗಿ ಹೇಳಲಾಗಿದೆ. ಅದರಂತೆ ಬೃಹದಾರಣ್ಯಕದಲ್ಲಿಯೂ 'ಯ ಆಕಾಶೇ ತಿಷ್ಠನ್' ಎಂದು ಅವೇದ್ಯನಾದವನನ್ನು ಆಕಾಶದಲ್ಲಿರುವವನನ್ನಾಗಿ ಹೇಳಲಾಗಿದೆ. ಆದ್ದರಿಂದ ಅವಾಂತರಕಾರಣವಾದ ಆಕಾಶಾದಿಶಬ್ದಗಳಿಂದ ವಾಚ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧವಾಯಿತು.

ಪ್ರತಿಪದಾರ್ಥ --ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ಆಕಾಶಾದಿಷು= ಆಕಾಶಾದಿಗಳಲ್ಲಿ, ಅವಾಂತಕಾರಣತ್ವೇನ= ಅವಾಂತರಕಾರಣರೂಪನಾಗಿ, ಸ ಏವ = ಮಹಾವಿಷ್ಣುವೇ, ಸ್ಥಿತಃ = ನೆಲೆಸಿದ್ದಾನೆ. ಯಥಾ ವ್ಯಪದಿಷ್ಟಸ್ಯೈವ = 'ಸ ಯೋ ಅತಃ ಅಶ್ರುತಃ' ಐತರೇಯದಲ್ಲಿ ಯಾವ ಗುಣಗಳಿಂದ ವಿಷ್ಣುವು ಹೇಳಲ್ಪಟ್ಟಿದ್ದಾನೋ, ಅದೇ ಗುಣಗಳುಳ್ಳವನನ್ನಾಗಿ, ಪರಸ್ಯ = ವಿಷ್ಣುವು, ಯ ಆಕಾಶೇ ತಿಷ್ಠನ್ ಇತ್ಯಾದಿನಾ = ಬೃಹದಾರಣ್ಯಕದಲ್ಲಿರುವ ಈ ಶ್ರುತಿಯಿಂದಲೂ, ಆಕಾಶಾದಿಷು = ಆಕಾಶಾದಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿದ್ದಾನೆಂದು, ಉಕ್ತೇಃ = ಹೇಳಲ್ಪಟ್ಟಿದೆ.

ಇಲ್ಲಿಗೆ ಆಕಾಶಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**अत्रोत्पत्तिमत्त्वलिङ्गेनान्यत्रैव प्रसिद्धानामाकाशादिशब्दानां परमात्मनि समन्वयप्रतिपादनादस्ति शास्त्रादिसङ्गतिः ।**

ಈ ಆಕಾಶಾಧಿಕರಣದಲ್ಲಿ 'ಉತ್ಪತ್ತಿಮತ್ವ' ಎಂಬ ಲಿಂಗದಿಂದ ಅನ್ಯತ್ರೈವಪ್ರಸಿದ್ಧವಾದ ಆಕಾಶ ಮೊದಲಾದ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿರುವ ಕಾರಣ, ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

**तत्वप्रकाशिका – समन्वयसूत्रे सर्वशब्दानां परमात्मवाचित्वमुक्तम् । सर्वमध्यपतिताश्चाकाशादिशब्दास्तैत्तिरीयादिश्रुतौ पठ्यन्ते –**

ಸಮನ್ವಯಸೂತ್ರದಲ್ಲಿ ಸಕಲ ಶಬ್ದಗಳು ಪರಮಾತ್ಮವಾಚಕಗಳಾಗಿವೆಯೆಂದು ಪ್ರತಿಜ್ಞೆ ಮಾಡಲಾಗಿದೆ. ಸಕಲ ಶಬ್ದಗಳ ಮಧ್ಯದಲ್ಲಿ 'ಆಕಾಶ' ಮೊದಲಾದ ಶಬ್ದಗಳು ತೈತ್ತಿರೀಯಶ್ರುತಿಯಲ್ಲಿ ಪಠಿತವಾಗಿವೆ.

**तत्वप्रकाशिका – 'आत्मन आकाशः सम्भूतः, आकाशाद्वायुः, वायोरग्निः, अग्नेरापः, अद्भ्यः पृथिवी, पृथिव्या ओषधयः, ओषधीभ्योऽन्नम्, अन्नात् पुरुषः' इति ।**

'ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ, ಪೃಥಿವೀ, ಪೃಥಿವ್ಯಾ ಓಷಧಯಃ, ಓಷಧೀಭ್ಯೋಽನ್ನಮ್, ಅನ್ನಾತ್‌ಪುರುಷಃ' ಆತ್ಮನಿಂದ ಆಕಾಶವು, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಓಷಧಿಗಳು, ಓಷಧಿಗಳಿಂದ ಅನ್ನವು, ಅನ್ನದಿಂದ ಪುರುಷನ ಸೃಷ್ಟಿಯು ಆಗಿರುತ್ತದೆಂಬುದು ಈ ಅಧಿಕರಣದ ವಿಷಯವಾಕ್ಯ.

**तत्वप्रकाशिका – तद्वाच्यस्य विष्णोरन्यत्वे न तस्याशेषशास्त्रयोनित्वं सम्भवतीत्यवश्यं निर्धार्यता । तदाकाशादिशब्दवाच्यं विषयः । विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देहबीजम् । न विष्णुरिति पूर्वः पक्षः ।**

ಈ ಆಕಾಶಾದಿ ಶಬ್ದಗಳ ಮುಖ್ಯಾರ್ಥ ವಿಷ್ಣುವಿಗಿಂತ ಬೇರೆಯೇ ಆದರೆ ಸಮನ್ವಯಸೂತ್ರವು ಅಯುಕ್ತವಾಗುತ್ತದೆ. ಸಕಲ ಶಾಸ್ತ್ರಗಳು ಪರಮಾತ್ಮನ ವಿಷಯದಲ್ಲಿ ಪ್ರಮಾಣವಾಗಿವೆ ಎಂಬುದು ನಿರ್ಧಾರವಾಗುವುದಿಲ್ಲ. ಆದ್ದರಿಂದ ಇಂತಹ ಆಕಾಶಾದಿಶಬ್ದಗಳು ಯಾರನ್ನು ಹೇಳುತ್ತವೆ ಎಂಬುದನ್ನು ಅವಶ್ಯವಾಗಿ ನಿರ್ಧಾರ ಮಾಡಲೇ ಬೇಕು. ಅಂತಹ ಆಕಾಶಾದಿ ಶಬ್ದಗಳಿಂದ ವಾಚ್ಯವಾದ ಪದಾರ್ಥವೇ

ಈ ಅಧಿಕರಣದ ವಿಷಯವಾಗಿದೆ. ವಿಷ್ಣುವೋ ಅಥವಾ ಬೇರೆ ಪದಾರ್ಥವೋ ? ಎಂಬುದು ಸಂದೇಹ. ಸಮನ್ವಯಸೂತ್ರ ಹಾಗೂ ಅನ್ಯತ್ರಪ್ರಸಿದ್ಧಿಯು ಸಂದೇಹಬೀಜ. ವಿಷ್ಣು ಆಕಾಶಶಬ್ದದಿಂದ ಪ್ರತಿಪಾದ್ಯನಲ್ಲ ಎಂಬುದು ಪೂರ್ವಪಕ್ಷ.

**तत्वप्रकाशिका – आकाशादीनां आत्मादिकार्यत्वश्रवणात्; परमात्मनश्च कार्यत्वायोगात् । 'न जायते म्रियते' इत्यादेः ।**

ಆಕಾಶಾದಿ ಪದಾರ್ಥಗಳು ಆತ್ಮನಿಂದ ಹುಟ್ಟಿವೆ ಎಂದು ಶ್ರುತಿಯು ಹೇಳುತ್ತಿದೆ. ಮತ್ತು ಪರಮಾತ್ಮನು ಯಾರಿಂದಲೂ ಕೂಡ ಹುಟ್ಟಲು ಸಾಧ್ಯವಿಲ್ಲ. ಏಕೆಂದರೆ 'ನ ಜಾಯತೇ ಮ್ರಿಯತೇ' ಎಂಬ ಗೀತಾವಾಕ್ಯವು ಪರಮಾತ್ಮನು ಸರ್ವಥಾ ಹುಟ್ಟಲಾರ ಎಂದು ಹೇಳುತ್ತಿದೆ.

**तत्वप्रकाशिका – यदा तु भगवति कार्यत्वमेवायुक्तं तदा स्वस्यैव कार्यकारणभावो लोकेऽप्यसम्भावितो नितरां विरुद्धः स्यात् ।**

ಯಾವಾಗ ವಿಷ್ಣುವಿಗೆ ಕಾರ್ಯತ್ವವು ಅಯುಕ್ತವಾಗುತ್ತದೋ, ಆವಾಗ ಲೋಕದಲ್ಲಿ ಅತ್ಯಂತ ಅಸಂಭಾವಿತವಾದ ಒಬ್ಬನೇ ವ್ಯಕ್ತಿಯಲ್ಲಿ ಕಾರ್ಯಕಾರಣಭಾವವು ಅತ್ಯಂತ ವಿರುದ್ಧವಾಗುತ್ತದೆ.

**तत्वप्रकाशिका – नच आकाशादिसम्भवस्य तदधीनत्वेन सम्भूतशब्दोपपत्तिः। सुतोत्पत्तौ जनके जातशब्दप्रयोगादर्शनात् ।**

ಆಕಾಶಾದಿ ಪದಾರ್ಥಗಳ ಉತ್ಪತ್ತಿಯು ವಿಷ್ಣುವಿನ ಅಧೀನವಾದ್ದರಿಂದ 'ಸಂಭೂತಃ' ಎಂಬ ಶಬ್ದವು ಅವನಲ್ಲಿ ಯುಕ್ತವಾಗುತ್ತದೆಂದು ಆಕ್ಷೇಪ ಮಾಡಬಾರದು. ಏಕೆಂದರೆ ಮಗನು ಹುಟ್ಟಿದಾಗ ತಂದೆಯು ಹುಟ್ಟಿದನೆಂದು ಹೇಳುವುದು ಎಲ್ಲಿಯೂ ಕಂಡಿಲ್ಲ.

**तत्वप्रकाशिका – निमित्तविशेषादर्शनाच्च । वाक्ययोजनानुपपत्तेश्च । तस्मादात्मशब्दोदितस्य मुख्यकारणस्यैव विष्णुत्वं, न त्ववान्तरकारणानामाकाशादीनामिति न समन्वयसूत्रं युक्तमिति ।**

ಮತ್ತು ಪರಮಾತ್ಮನೇ 'ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯಗಳಿಂದ ಪ್ರತಿಪಾದ್ಯನೆನ್ನಲು ಯಾವುದೇ ವಿಶೇಷಕಾರಣವಿರುವುದಿಲ್ಲ. ಮತ್ತು 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯದಲ್ಲಿ ಉಕ್ತವಾಗಿರುವ ಕ್ರಮವೂ ಅನುಪಪನ್ನವಾಗುತ್ತದೆ. ಆವಾಗ ವಾಕ್ಯಯೋಜನೆಯು ಅನುಪಪನ್ನವಾಗುತ್ತದೆ. ಆದ್ದರಿಂದ ಆತ್ಮಶಬ್ದದಿಂದ ಪ್ರತಿಪಾದ್ಯನಾದ ವಿಷ್ಣುವೇ ಮುಖ್ಯಕಾರಣನು. ಅವಾಂತರಕಾರಣವನ್ನು ಹೇಳುವ ಆಕಾಶಾದಿ ಶಬ್ದಗಳು ಆಕಾಶಾದಿ ಭೂತಪದಾರ್ಥವನ್ನೇ ಪ್ರತಿಪಾದನೆ ಮಾಡುತ್ತವೆ ಹೊರತು ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲ. ಆದ್ದರಿಂದ ಸಕಲ ಶಬ್ದಗಳು ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂಬ ಸಮನ್ವಯ ಸೂತ್ರದ ಪ್ರತಿಜ್ಞೆಯು ಅಯುಕ್ತವಾಗುತ್ತದೆ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – एवं प्राप्ते सिद्धान्तयत् सूत्रमवतारयति – अवान्तरेति ।। एतत्पूर्वपक्षनिरासायावान्तरकारणत्वेन विष्णुरेवाकाशादिशब्दैरुच्यत इति सूत्रकारो वक्तीत्यर्थः ।**

ಈ ಪೂರ್ವಪಕ್ಷವನ್ನು ನಿರಾಕರಿಸಿ ಸಿದ್ಧಾಂತ ಸ್ಥಾಪನೆಗಾಗಿ ಸೂತ್ರಕ್ಕೆ ಅವತಾರಿಕೆ ನೀಡುತ್ತಿದ್ದಾರೆ 'ಅವಾಂತರ' ಇತ್ಯಾದಿಯಾಗಿ. ಮೇಲಿನ ಪೂರ್ವಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ ವಿಷ್ಣುವೇ ಅವಾಂತರಕಾರಣನಾಗಿದ್ದಾನೆಂದು ಸೂತ್ರಕಾರರು ಸಮರ್ಥನೆ ಮಾಡುತ್ತಿದ್ದಾರೆಂದರ್ಥ.

**तत्वप्रकाशिका – सूत्रं व्याचष्टे – आकाशादिष्विति ।। न केवलं मूलकारण-वाचकात्मशब्दवाच्यो हरिः, अपि तु कार्यत्वे सति कारणम् = अवान्तरकारणं, तद्वाचकाकाशादिशब्दवाच्यश्च ।**

ಸೂತ್ರವನ್ನು ಭಾಷ್ಯಕಾರರು 'ಆಕಾಶಾದಿಷು' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಸಕಲ ಪದಾರ್ಥಗಳಿಗೆ ಮೂಲಕಾರಣವನ್ನು ಹೇಳುವಂತಹ ಆತ್ಮಶಬ್ದದಿಂದಷ್ಟೇ ಶ್ರೀಹರಿಯು ಪ್ರತಿಪಾದ್ಯನೆಂದಲ್ಲ. ಕಾರ್ಯವಾಗಿದ್ದು ಕಾರಣವೂ ಆಗಿರುವಂತಹ ಅವಾಂತರಕಾರಣವನ್ನು ಪ್ರತಿಪಾದನೆ ಮಾಡುವಂತಹ ಆಕಾಶ ಮೊದಲಾದ ಶಬ್ದಗಳಿಂದಲೂ ಶ್ರೀಹರಿಯು ಪ್ರತಿಪಾದ್ಯನಾಗಿದ್ದಾನೆ.

**तत्वप्रकाशिका – नच कार्यकारणभावविरोधः । आकाशादिषु तस्य स्थितत्वात् । 'य आकाशे तिष्ठन्' 'यो वायौ तिष्ठन्' 'यस्तेजसि तिष्ठन्' 'योऽप्सु तिष्ठन्' 'यः पृथिव्यां तिष्ठन्' इत्यादिनाऽऽकाशादिषु स्थितत्वोक्तेः ।**

ಒಬ್ಬನೇ ವ್ಯಕ್ತಿಯು ಕಾರ್ಯ ಹಾಗೂ ಕಾರಣ ಎರಡೂ ಕೂಡ ಆಗಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಆಕಾಶ ಮೊದಲಾದ ಭೂತಪದಾರ್ಥಗಳಲ್ಲಿ ಪರಮಾತ್ಮನು ನೆಲೆಸಿರುವ ಕಾರಣ ಕಾರ್ಯವಾಚಕಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಈ ವಿಷಯದಲ್ಲಿ 'ಯ ಆಕಾಶೇ ತಿಷ್ಠನ್' 'ಯೋ ವಾಯೌ ತಿಷ್ಠನ್' 'ಯಃ ತೇಜಸಿ ತಿಷ್ಠನ್' 'ಯೋಽಪ್ಸು ತಿಷ್ಠನ್' 'ಯಃ ಪೃಥಿವ್ಯಾಂ ತಿಷ್ಠನ್' ಇವೇ ಮೊದಲಾದ ಶ್ರುತಿಗಳು ಆಕಾಶ, ವಾಯು, ತೇಜಸ್ಸು, ನೀರು, ಪೃಥ್ವೀ ಇವುಗಳಲ್ಲಿ ಪರಮಾತ್ಮನು ನೆಲೆಸಿದ್ದಾನೆಂದು ಹೇಳುತ್ತಿವೆ.

**तत्वप्रकाशिका – नच तत्रापि विष्णुः कुतः? इति वाच्यम् । यथा 'स योऽतोऽश्रुतः' इत्यादौ विष्णुरविदितत्वादिरूपेण व्यपदिष्टस्तादृशस्यैवाकाशादिषु 'यमाकाशो न वेद' इत्यादिनोक्तत्वात् । तथा चाऽऽकाशाद्युत्पत्तावाकाशा-द्यन्तर्गतत्वेन भगवतोऽभिव्यक्त्या वाय्वादिगतस्वरूपाभिव्यक्तिहेतुत्वेन चावान्तर-कारणत्वमुपपन्नम् ।**

ಈ ಬೃಹದಾರಣ್ಯಕ ವಾಕ್ಯಗಳಲ್ಲಿ ವಿಷ್ಣುವೇ ಹೇಳಲ್ಪಟ್ಟಿದ್ದಾನೆ ಎಂದು ಹೇಗೆ ನಿಶ್ಚಯಿಸುತ್ತೀರಿ? ಎಂದು ಶಂಕಿಸಬಾರದು. ಯಾವರೀತಿಯಾಗಿ 'ಸ ಯೋಽತೋಽಶ್ರುತಃ' ಇತ್ಯಾದಿ ಐತರೇಯ ಶ್ರುತಿಗಳಲ್ಲಿ ವಿಷ್ಣುವು ಅವಿದಿತನು ಅಶ್ರುತನು, ಅದೃಷ್ಟನು ಇತ್ಯಾದಿಯಾಗಿ ಅವಿದಿತತ್ವ, ಅಶ್ರುತತ್ವ ಮೊದಲಾದ ಧರ್ಮಗಳುಳ್ಳವನೆಂದು ಹೇಳಲಾಗಿದೆ. 'ಯಮಾಕಾಶೋ ನ ವೇದ' ಇತ್ಯಾದಿ ಬೃಹದಾರಣ್ಯಕದ ವಾಕ್ಯದಲ್ಲಿಯೂ 'ನ ವೇದ' ಎಂಬುದಾಗಿ ಅವಿದಿತತ್ವಧರ್ಮವನ್ನು ಆಕಾಶಾಂತರ್ಗತನಲ್ಲಿ ಹೇಳಲಾಗಿದೆ. ಆದ್ದರಿಂದ ಬೃಹದಾರಣ್ಯಕದಲ್ಲಿರುವ ಆಕಾಶ ಶಬ್ದದಿಂದ ವಿಷ್ಣುವೇ ವಾಚ್ಯನಾಗುತ್ತಾನೆ. ಆದ್ದರಿಂದ ಆಕಾಶಾದಿಗಳು ಹುಟ್ಟುವಾಗ ಅಂತರ್ಗತವಾದ ಪರಮಾತ್ಮನು ಅಭಿವ್ಯಕ್ತನಾಗುತ್ತಾನೆ. ಆಕಾಶದಲ್ಲಿ ನೆಲೆಸಿರುವ ಭಗವಂತನ ಯಾವ ಅಭಿವ್ಯಕ್ತರೂಪವಿದೆಯೋ, ಅದು ವಾಯುವಿನಲ್ಲಿರುವ ಭಗವದ್ರೂಪಕ್ಕೆ ಕಾರಣವಾಗಿದೆ. ಆಕಾಶದ ಅಂತರ್ಗತವಾದ ಭಗವದ್ರೂಪವು ಆತ್ಮನ ಕಾರ್ಯರೂಪವಾಗಿದೆ. ಹೀಗೆ ವಿಷ್ಣುವಿಗೆ ಅವಾಂತರಕಾರಣತ್ವವು ಯುಕ್ತವಾಗುತ್ತದೆ.

**तत्वप्रकाशिका – अतोऽवान्तरकारणाभिधायकशब्दवाच्यत्वात् विष्णोर्युक्तं समन्वयसूत्रमिति भावः ।**

ಆದ್ದರಿಂದ ಅವಾಂತರಕಾರಣತ್ವವನ್ನು ಸಮರ್ಥನೆ ಮಾಡುವಂತಹ ಆಕಾಶ ಮೊದಲಾದ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂಬುದು ಯುಕ್ತವಾಗುತ್ತದೆ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಮಾಡಿದ ಸಕಲ ಶಬ್ದಗಳ ಸಮನ್ವಯಪ್ರತಿಜ್ಞೆಯು ಅತ್ಯಂತ ಸಾಧುವಾಗಿದೆ. ಇಷ್ಟು ಸಿದ್ಧಾಂತದ ಅಭಿಪ್ರಾಯ.

**तत्वप्रकाशिका – स्थितः 'तच्छब्दैरुच्यते' इति शेषः । नच वक्तव्यम् 'अस्त्वेवमवान्तरकारणत्वं विष्णोर्युक्तम्; तथापि तच्छब्दवाच्यत्वे विशेषहेतुर्वाच्यः' इति । 'नामानि सर्वाणि' इत्याद्युक्तरीत्या परमात्मनि सिद्धेऽखिलशब्दसमन्वये, तत्र प्रतीतविरोधाभासनिरासेनैव सूत्रकृतश्चरितार्थत्वात् ।**

ಭಾಷ್ಯದಲ್ಲಿ 'ಸ್ಥಿತಃ' ಎಂಬಲ್ಲಿ 'ತಚ್ಛಬ್ದೈರುಚ್ಯತೇ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಕಾಶ ಮೊದಲಾದ ಭೂತಪದಾರ್ಥಗಳಲ್ಲಿರುವ ಪರಮಾತ್ಮನು ಆಕಾಶ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ ಎಂದರ್ಥ. ಆದ್ದರಿಂದಲೇ ವಿಷ್ಣು ಅವಾಂತರಕಾರಣನೂ ಆಗುತ್ತಾನೆ.

ಅವಾಂತರ ಕಾರಣತ್ವವನ್ನು ಪ್ರತಿಪಾದನೆ ಮಾಡುವಂತಹ ಆಕಾಶಾದಿ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂಬ ವಿಷಯದಲ್ಲಿ ಯಾವುದಾದರೂ ವಿಶೇಷ ಕಾರಣವನ್ನು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಪರಮಾತ್ಮನಲ್ಲಿ ಸಕಲಶಬ್ದಗಳ ಸಮನ್ವಯವನ್ನು ಪ್ರತಿಜ್ಞೆ ಮಾಡುತ್ತಿದೆ. ಪರಮಾತ್ಮನು ಸಕಲಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬ ವಿಷಯವು ಸಿದ್ಧವಾದ ಮೇಲೆ ಈ ವಿಷಯದಲ್ಲಿ ತೋರುವಂತಹ

ವಿರೋಧಾಭಾಸಗಳನ್ನು ನಿರಾಕರಣೆ ಮಾಡಲು ಸೂತ್ರದಲ್ಲಿ ವಿಶೇಷಹೇತುವನ್ನು ಹೇಳಲಾಗಿದೆ. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯ ಮೇಲೆ ಬರುವಂತಹ ವಿರೋಧಗಳನ್ನು ಪರಿಹರಿಸಲು ಸೂತ್ರಕಾರರು ಚರಿತಾರ್ಥರಾಗಿದ್ದಾರೆ. ಪುನಃ ಪ್ರತ್ಯೇಕವಾಗಿ ಸಮನ್ವಯದಲ್ಲಿ ಕಾರಣವನ್ನು ತೋರಿಸಬೇಕಾಗಿಲ್ಲ.

**तत्वप्रकाशिका –** यत्तु युक्तिविशेषं च वक्ति स त्वधिको लाभः । अतोऽवान्तरकारणवाचिनामपि शब्दानां परमात्मपरत्वाद्युक्तं समन्वयसूत्रमिति सिद्धम् ।।१९।।

।। इति श्रीमज्जयतीर्थभिक्षुविरचितायां तत्वप्रकाशिकायाम् आकाशाधिकरणम् ।।

ಕೆಲವು ಸ್ಥಳಗಳಲ್ಲಿ 'ಪ್ರಾಣಾದಯೋ ವಾಕ್ಯಶೇಷಾತ್' ಇತ್ಯಾದಿ ಕಡೆ ಸೂತ್ರಕಾರರು ವಿಶೇಷ ಯುಕ್ತಿಯನ್ನು ಹೇಳಿದರೂ ಅದು ಕೇವಲ ವಿಶೇಷ ಲಾಭವೆಂದಷ್ಟೇ ತಿಳಿಯಬೇಕು. ಆದ್ದರಿಂದ ಅವಾಂತರಕಾರಣವನ್ನು ಪ್ರತಿಪಾದನೆ ಮಾಡುವಂತಹ ಆಕಾಶಾದಿ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಪ್ರತಿಜ್ಞೆ ಮಾಡಿದ ಸಕಲಶಬ್ದಗಳ ಸಮನ್ವಯವು ಅತ್ಯಂತ ಸಮಂಜಸವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು

## ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

# ಭಾವದೀಪ

व्यत्त्यपेक्षया कार्यत्वं चेति न्यायविवरणेन अवान्तरेण इत्यादिभाष्येण वा सूचितलिङ्गेनान्यत्रैव प्रसिद्धिमाह – **अत्रोत्पत्तिमत्त्वेति** ।।

'ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂ ಚ' ಎಂಬ ನ್ಯಾಯವಿವರಣದಿಂದ 'ಅವಾಂತರೇಣ' ಎಂಬ ಭಾಷ್ಯದ ಮಾತಿನಿಂದ ಸೂಚಿತವಾದ ಲಿಂಗವನ್ನು ಉಲ್ಲೇಖ ಮಾಡುವ ಮೂಲಕ ಅನ್ಯತ್ರೈವ ಪ್ರಸಿದ್ಧಿಯನ್ನು 'ಅತ್ರ ಉತ್ಪತ್ತಿಮತ್ವಲಿಂಗೇನ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**भावदीपः –** यद्यपि द्युभ्वादिनय एव प्रादुर्भावरूपा हरेरुत्पत्तिर्निर्णीता । अन्यथा तत्र श्रुतजायमानशब्दस्योक्तरूपजन्मवति विष्णौ सावकाशत्वाभावे अतच्छब्दात् प्राणभृच्च नेति जीवनिरासायोगात् । उक्तं च भाष्ये । अजायमानो बहुधा विजायत इति तस्यैव बहुधा जन्मोक्तेरिति ।

ಪ್ರಶ್ನೆ - ದ್ಯುಭ್ವಾದ್ಯಧಿಕರಣದಲ್ಲಿ ಭಗವಂತನ ಉತ್ಪತ್ತಿಯು ಪ್ರಾದುರ್ಭಾವರೂಪವಾಗಿದೆ ಎಂದು ಈಗಾಗಲೇ ನಿರ್ಣಯಿಸಲ್ಪಟ್ಟಿದೆ. ಹೀಗೆ ಒಪ್ಪದೆ ಶ್ರುತಿಯಲ್ಲಿ ಕೇಳಿಸುತ್ತಿರುವ ಜಾಯಮಾನ ಶಬ್ದಕ್ಕೆ ಜನ್ಮವುಳ್ಳವನು ಎಂದು ಅರ್ಥೈಸುವುದಾದರೆ "ಅತಚ್ಛಬ್ದಾತ್" ಎಂಬುದರಿಂದ ಮತ್ತು 'ಪ್ರಾಣಭೃಚ್ಚ' ಎಂಬ ಪದದಿಂದ ಜೀವನನ್ನು ನಿರಾಸ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಅಂಥ ಉತ್ಪತ್ತಿಯು ಜೀವನಲ್ಲಿಯೂ ಕೂಡ ಇರುತ್ತದೆ. ಭಾಷ್ಯದಲ್ಲಿಯೂ ಕೂಡ 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬುದಾಗಿ ಪರಮಾತ್ಮನಿಗೆ ಅನೇಕ ಬಗೆಯ ಜನ್ಮವನ್ನು ಹೇಳಿದ್ದಾರೆ. ಆದ್ದರಿಂದ ಪ್ರಾದುರ್ಭಾವರೂಪವಾದ ಜನ್ಮವನ್ನೇ ಒಪ್ಪಬೇಕು. ಪುನಃ ಈ ಅಧಿಕರಣ ಹೊರಟದ್ದು ಏಕೆ?

**भावदीपः** – तथाप्येकदेशोक्त्या कारणत्वे सत्युत्पत्तिमत्त्वरूपावान्तरकारणत्वलिङ्गेन इत्यत्र तात्पर्यम् । कारणत्वांशस्तु अविरुद्ध इति नोक्तः । कार्यत्वायोगादित्याद्यग्रेतनटीकावाक्यं तु प्रादुर्भावरूपं जन्मेति पूर्वं भाष्ये स्पष्टमुक्तत्वात् व्यक्त्यपेक्षया कार्यत्वमिति स्पष्टमत्रन्यायविवरणेऽभिहितत्वात् तद्व्यावर्त्योक्त्यर्थं नतु उत्पत्तिमत्त्वमेवायुक्तमिति भावेन । अत एवानुभाष्यविरोधः कार्यतद्वतोरित्येव पूर्वपक्षयुक्तिरुक्ता । नतु कार्यत्वविरोध इति ।

ಉತ್ತರ - ಆದರೂ ಕೂಡ ಈ ಅಧಿಕರಣ ಸಾರ್ಥಕ. ಏಕೆಂದರೆ 'ಕಾರಣತ್ವೇ ಸತಿ ಉತ್ಪತ್ತಿಮತ್ತ್ವ' ಎಂಬ ಅವಾಂತರಕಾರಣತ್ವಲಿಂಗದಿಂದ ಪರಮಾತ್ಮನಲ್ಲಿ ಶಬ್ದವನ್ನು ಸಮರ್ಥನೆ ಮಾಡುವ ತಾತ್ಪರ್ಯವಿದೆ. ಹಾಗಾದರೆ ಟೀಕೆಯಲ್ಲಿ ಕಾರಣತ್ವ ಅಂಶವನ್ನು ಏಕೆ ಉಲ್ಲೇಖಿಸಿಲ್ಲ ಎಂದರೆ ಕಾರಣತ್ವವಿಷಯದಲ್ಲಿ ಯಾವುದೇ ವಿವಾದವಿಲ್ಲದ ಕಾರಣ ಉಲ್ಲೇಖಿಸಿರುವುದಿಲ್ಲ. 'ಕಾರ್ಯತ್ವಾಯೋಗಾತ್' ಎಂಬ ಮುಂದಿನ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಪ್ರಾದುರ್ಭಾವರೂಪವಾದ ಜನ್ಮವನ್ನು ಪರಮಾತ್ಮನಲ್ಲಿ ವಿವಕ್ಷಿಸಬೇಕೆಂದು ದ್ಯುಭ್ವಾದ್ಯಧಿಕರಣದ ಭಾಷ್ಯದಿಂದ ಸ್ಪಷ್ಟವಾಗುತ್ತದೆ. ಅಭಿವ್ಯಕ್ತಿಯ ಅಪೇಕ್ಷೆಯಿಂದ ಕಾರ್ಯತ್ವವನ್ನು ಪರಮಾತ್ಮನಲ್ಲಿ ಹೇಳಬೇಕೆಂದು ಈ ಅಧಿಕರಣದ ನ್ಯಾಯವಿವರಣದಿಂದ ಸ್ಪಷ್ಟವಾಗುತ್ತದೆ. ಇದರಿಂದ ವ್ಯಾವರ್ತ್ಯವಾದುದನ್ನು ತೋರಿಸುವ ಉದ್ದೇಶದಿಂದ 'ಕಾರ್ಯತ್ವಾಯೋಗಾತ್' ಎಂಬ ಮುಂದಿನ ಟೀಕಾವಾಕ್ಯ ಹೊರಟದೆ ಹೊರತು ಪರಮಾತ್ಮನಲ್ಲಿ ಉತ್ಪತ್ತಿಮತ್ತ್ವವೇ ಅಯುಕ್ತವಾಗಿದೆ ಎಂಬ ಅಭಿಪ್ರಾಯದಿಂದಲ್ಲ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ವಿರೋಧಃ ಕಾರ್ಯತದ್ವತೋಃ' ಎಂಬುದಾಗಿಯೇ ಪೂರ್ವಪಕ್ಷ ಯುಕ್ತಿಯನ್ನು ಹೇಳಿದ್ದಾರೆ. ಹೊರತು ಕೇವಲ 'ಕಾರ್ಯತ್ವವಿರೋಧಃ' ಎಂದು ಹೇಳಿರುವುದಿಲ್ಲ.

**भावदीपः** – श्रुत्यादिसङ्गतिमाह – **समन्वयेति** ।। व्यक्त्यपेक्षया कार्यत्वमिति न्यायविवरणस्वारस्याय तद्व्यावर्त्यमाह – **आकाशादीनामिति** ।। 'विरोधः कार्यतद्वतोः' इत्यनुभाष्योक्तमाह – **स्वस्यैवेति** ।।

ಶ್ರುತಿಸಂಗತಿ, ಅಧಿಕರಣಸಂಗತಿ ಮೊದಲಾದವನ್ನು ಸಮರ್ಥಿಸಲು 'ಸಮನ್ವಯ' ಇತ್ಯಾದಿ ವಾಕ್ಯವು ಹೊರಟದೆ. ಅಭಿವ್ಯಕ್ತಿಯ ಅಪೇಕ್ಷೆಯಿಂದ ಭಗವಂತನಲ್ಲಿ ಕಾರ್ಯತ್ವವು ಯುಕ್ತವಾಗುತ್ತದೆ ಎಂಬುದಾಗಿ

ನ್ಯಾಯವಿವರಣಕ್ಕೆ ಸ್ವಾರಸ್ಯವಾದ ಅರ್ಥವನ್ನು ಸಮರ್ಥಿಸಲು ವ್ಯಾವೃತ್ತವಾಗುವ ಪೂರ್ವಪಕ್ಷವನ್ನು 'ಆಕಾಶಾದೀನಾಮ್' ಎಂಬ ವಾಕ್ಯದಿಂದ ಸಮರ್ಥಿಸಿದ್ದಾರೆ. 'ವಿರೋಧಃ ಕಾರ್ಯತದ್ವತೋಃ' ಎಂಬ ಅನುವ್ಯಾಖ್ಯಾನದ ಮಾತನ್ನು 'ಸ್ವಸ್ಯೈವ' ಎಂಬ ಮಾತಿನಿಂದ ವ್ಯಾಖ್ಯಾನಿಸಿದ್ದಾರೆ.

**भावदीपः – 'तदधीनत्वादर्थवत्' इत्यनेन गतार्थतामाशङ्क्य निराह – नचेति ।। सुतोत्पत्ताविति पूर्वोक्ताशयोरत्राप्यनुसन्धेयः ।**

'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರದಿಂದ ಈ ಅಧಿಕರಣಕ್ಕೆ ಪುನರುಕ್ತಿದೋಷ ಬರುತ್ತದೆಂದು ಆಶಂಕಿಸಿ 'ನಚ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. 'ಸುತೋತ್ಪತ್ತೌ' ಎಂಬಲ್ಲಿ ಹಿಂದಿನ ಎರಡು ಅಭಿಪ್ರಾಯಗಳನ್ನು ಅನುಸಂಧಾನ ಮಾಡಿಕೊಳ್ಳಬೇಕು.

**भावदीपः – अवरादिशब्दवदन्यत्रादृष्टत्वेऽपि वृत्तिः किं न स्यादित्यत आह – निमित्तेति ।। विशेषकारणाभावाच्चेत्यर्थः । नामानि सर्वाणीत्यादि श्रुतीनां साधारण्येन सङ्कोचसम्भवादिति भावः ।।**

ಅವರಾದಿಶಬ್ದಗಳು ಬೇರೆ ಎಲ್ಲೂ ಕಾಣದಿದ್ದರೂ ಅವರಾದಿಶಬ್ದಗಳು ಹೇಗೆ ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೋ, ಅದರಂತೆ ಆಕಾಶಾದಿಶಬ್ದಗಳೂ ಕೂಡ ಪರಮಾತ್ಮನಲ್ಲಿ ಸಮನ್ವಯವಾಗಬಹುದಲ್ಲವೇ? ಎಂಬ 'ಪ್ರಶ್ನೆಗೆ ನಿಮಿತ್ತ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅವಾಂತರಕಾರಣತ್ವ ಪ್ರತಿಪಾದಕವಾದ ಆಕಾಶಾದಿ ಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆನ್ನಲು ಯಾವುದೇ ವಿಶೇಷ ಕಾರಣವಿರುವುದಿಲ್ಲ ಎಂದರ್ಥ. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯನ್ನು ವಿಶೇಷ ಕಾರಣವೆಂದು ಉಲ್ಲೇಖಿಸಲು ಸಾಧ್ಯವಿಲ್ಲ. ಏಕೆಂದರೆ ಇದು ಸಾಧಾರಣಶ್ರುತಿಯಾಗಿರುವುದರಿಂದ ಸಂಕೋಚ ಮಾಡಬಹುದು ಎಂಬುದು ಟೀಕೆಯ ಅಭಿಪ್ರಾಯ.

**भावदीपः – वाक्ययोजनेति ।। हरेरेवात्माकाशादि शब्दवाच्यत्वे तस्यैकत्वेन क्रमाभावादात्मन आकाश आकाशाद्वायुरित्यादिक्रमप्रतिपादकवाक्ययोजनानुपपत्तेश्चेत्यर्थः ।।**

'ವಾಕ್ಯಯೋಜನಾ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - ಶ್ರೀಹರಿಯೇ ಆತ್ಮ, ಆಕಾಶ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುವುದಾದರೆ ಅವನು ಒಬ್ಬನೇ ಆಗಿರುವುದರಿಂದ ಆತ್ಮನಿಂದ ಆಕಾಶ ಹುಟ್ಟಿತು, ಆಕಾಶದಿಂದ ವಾಯು ಹುಟ್ಟಿತು ಇತ್ಯಾದಿ ಸೃಷ್ಟಿಯ ಕ್ರಮವೇ ಅಯುಕ್ತವಾಗುತ್ತವೆ. ಆದ್ದರಿಂದ 'ಆತ್ಮನಃ ಆಕಾಶಃ' 'ಆಕಾಶಾದ್ವಾಯುಃ' ಇತ್ಯಾದಿ ಕ್ರಮಪ್ರತಿಪಾದಕವಾಕ್ಯಯೋಜನೆಯು ಅನುಪಪನ್ನವಾಗುತ್ತದೆ ಎಂದು.

**भावदीपः – तस्मादिति ।। विशेषहेत्वभावात् । बाधकभावाच्चेत्यर्थः ।। अवान्तरेति ।। कार्यत्वे सति कारणानामित्यर्थः ।**

ಟೀಕೆಯಲ್ಲಿ 'ತಸ್ಮಾತ್' ಎಂಬುವುದಕ್ಕೆ ವಿಶೇಷ ಕಾರಣವಿರುವುದಿಲ್ಲ ಎಂದರ್ಥ. ಮತ್ತು ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯನೆಂದು ಹೇಳಿದರೆ ಬಾಧಕವೂ ಕೂಡ ಇರುತ್ತದೆಂಬುದನ್ನೂ ಕೂಡ

ವಿವಕ್ಷಿಸಬೇಕು. 'ಅವಾಂತರಕಾರಣ' ಎಂದರೆ 'ಕಾರ್ಯತ್ವೇ ಸತಿ ಕಾರಣತ್ವಂ' ಎಂದರ್ಥ. 'ಮತ್ತೊಂದರ ಕಾರ್ಯವಾಗಿರಬೇಕು, ಮುಂದಿನದಕ್ಕೆ ಕಾರಣವಾಗಿರಬೇಕು'. ಇದನ್ನು ಅವಾಂತರಕಾರಣವೆಂದು ಕರೆಯುತ್ತಾರೆ.

**भावदीपः** – वायुकारणाकाशकारणस्य वायुकारणत्वं विरुद्धमिति चोद्यं तु आनुमानिकनयोक्तन्यायेन महतः परस्मात् परस्य महतः परत्ववत् परिहृतमिति नैवोद्धाटितम् ।।

ಆಕಾಶಕ್ಕೆ ಕಾರಣವಾದದ್ದನ್ನು ವಾಯುವಿಗೆ ಕಾರಣವೆಂದು ಹೇಳಲಾಗದು. ವಾಯುವಿಗೆ ಆಕಾಶವು ಕಾರಣವಾಗಿದೆ. ಆಕಾಶಕ್ಕೆ ಆತ್ಮನು ಕಾರಣನಾಗಿದ್ದಾನೆ. ಈ ಆತ್ಮನನ್ನು ವಾಯುವಿಗೆ ಕಾರಣನೆಂದು ಹೇಳುವುದು ವಿರುದ್ಧವಲ್ಲವೇ? ಎಂಬ ಪ್ರಶ್ನೆಗೆ ಮಹತ್ತತ್ವಕ್ಕಿಂತಲೂ ಶ್ರೇಷ್ಠವಾದ ಪದಾರ್ಥಕ್ಕಿಂತ ಯಾವುದು ಶ್ರೇಷ್ಠವಾಗಿದೆಯೋ ಅದು ಮಹತ್ತತ್ವಕ್ಕಿಂತ ಶ್ರೇಷ್ಠವಾಗಿದೆಯೆಂದು ಹೇಗೆ ಕರೆಸಿಕೊಳ್ಳುತ್ತದೋ ಅದರಂತೆ ಇಲ್ಲಿಯೂ ಪರಿಹಾರವನ್ನು ತಿಳಿದುಕೊಳ್ಳಬೇಕು. ಹೀಗೆ ಆನುಮಾನಿಕ ನ್ಯಾಯದಿಂದಲೇ ಉತ್ತರವನ್ನು ತಿಳಿಯಬಹುದಾದ್ದರಿಂದ ಇಲ್ಲಿ ಪ್ರಶ್ನೆಯನ್ನಾಗಲಿ, ಉತ್ತರವನ್ನಾಗಲಿ ಟೀಕೆಯಲ್ಲಿ ಉಲ್ಲೇಖಿಸಿಲ್ಲ.

**भावदीपः** – हरेरवान्तरकारणत्ववचनं सूत्रे न सङ्गतमिति भ्रमनिरासाय शेषपूर्त्या सम्बन्धभाष्यं व्याचष्टे – **न केवलमिति** ।।

ಶ್ರೀಹರಿಯು ಅವಾಂತರಕಾರಣನಾಗಿದ್ದಾನೆಂದು ಸೂತ್ರದಲ್ಲಿ ಹೇಳಿಲ್ಲವಲ್ಲ ? ಎಂಬ ಭ್ರಾಂತಿಯನ್ನು ನಿರಾಸ ಮಾಡಲು ಶೇಷಪೂರಣ ಮಾಡುವ ಮೂಲಕ ಸಂಬಂಧಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಕೇವಲಮ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः** – सौत्रकारणत्वशब्दः अवान्तरकारणत्वपर इति वा कार्यत्वेन चेत्यपि समुच्चीयत इति वा भावेन 'अवान्तरकारणत्वेन' इत्युक्तं भाष्ये, इत्यभिप्रेत्यार्थमाह – **कार्यत्वे सतीति** ।।

ಸೂತ್ರದಲ್ಲಿರುವ ಕಾರಣತ್ವ ಶಬ್ದವು ಅವಾಂತರಕಾರಣತ್ವಪರವಾಗಿವೆ ಅಥವಾ ಕಾರ್ಯತ್ವಕ್ಕೆ ಸಮುಚ್ಚಾಯಕವಾಗಿದೆ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಅವಾಂತರಕಾರಣತ್ವೇನ' ಎಂದು ಹೇಳಿದ್ದಾರೆ ಈ ಅಭಿಪ್ರಾಯದಿಂದ 'ಕಾರ್ಯತ್ವೇ ಸತಿ' ಎಂಬ ವಾಕ್ಯವು ಹೊರಟಿದೆ.

**भावदीपः** – **वाच्यश्चेति** ।। एतेन भाष्ये 'अपि' शब्दो व्याख्यातः । 'आकाशादिषु' इत्यादिभाष्यं व्याकुर्वन् सूत्रशेषमवतार्य व्याचष्टे – **नचेति** ।।

'ತದ್ವಾಚಕ ಆಕಾಶಾದಿ ಶಬ್ದವಾಚ್ಯಶ್ಚ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿರುವ 'ಅಪಿ' ಶಬ್ದಕ್ಕೆ ವ್ಯಾಖ್ಯಾನ ಮಾಡಿದಂತಾಯಿತು.

'ಆಕಾಶಾದಿಷು' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡುವವರಾಗಿ ಉಳಿದ ಸೂತ್ರಕ್ಕೆ ಅವತಾರಿಕೆಯನ್ನು ನೀಡುತ್ತಾ ವ್ಯಾಖ್ಯಾನಿಸಲು 'ನ ಚ' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः – भाष्ये 'स एव स्थितः' इत्येतत् 'तस्य स्थितत्वात्' इति व्याख्यातम् । सूत्रेऽध्याहृतहेतोरसिद्धिनिरासाय 'आकाशे तिष्ठन्' इत्यादिभाष्यं व्याचष्टे – य इति ।।**

ಭಾಷ್ಯದಲ್ಲಿರುವ 'ಸ ಏವ ಸ್ಥಿತಃ' ಎಂಬ ವಾಕ್ಯಕ್ಕೆ 'ತಸ್ಯ ಸ್ಥಿತತ್ವಾತ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಂಡ ಹೇತುವಿಗೆ ಅಸಿದ್ಧಿ ಪರಿಹಾರಕ್ಕಾಗಿ 'ಆಕಾಶೇ ತಿಷ್ಠನ್' ಎಂಬ ಭಾಷ್ಯವು ಹೊರಟಿದೆ. ಅದನ್ನು ವ್ಯಾಖ್ಯಾನಿಸಲು 'ಯ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः – एतेनानाकाशादिषूक्तेरित्यपि सूत्रेऽन्वयो दर्शितः । यथेत्यादिभाष्यं व्याचष्टे – न चेत्यादिना ।।**

ಹೀಗೆ ಹೇಳಿದ್ದರಿಂದ ಸೂತ್ರದಲ್ಲಿರುವ 'ಆಕಾಶಾದಿಷು' ಎಂಬ ಪದಕ್ಕೆ 'ಉಕ್ತೇಃ' ಎಂಬ ಅಧ್ಯಾಹೃತವಾದ ಪದದ ಜೊತೆಗೆ ಅನ್ವಯವನ್ನು ತಿಳಿಸಿದ್ದಾರೆ. 'ಯಥಾ' ಇತ್ಯಾದಿ ಮುಂದಿನ ಭಾಷ್ಯವಾಕ್ಯವನ್ನು 'ನ ಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಬೃಹದಾರಣ್ಯಕೋಪನಿಷತ್ತಿನಲ್ಲಿರುವ ಶ್ರುತಿ ವಾಕ್ಯ ಹೀಗಿದೆ - "ಯ ಆಕಾಶೇತಿಷ್ಠನ್ ಆಕಾಶದಂತರೋ, ಯಮಾಕಾಶೋ ನ ವೇದ, ಯಸ್ಯಾಕಾಶಃ ಶರೀರಮ್, ಯ ಆಕಾಶಮಂತರೋ ಯಮಯತಿ, ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ" "ಯಾರು ಆಕಾಶಾಭಿಮಾನಿದೇವತೆಯಲ್ಲಿ ನೆಲೆಸಿ ಅವನಿಂದ ಭಿನ್ನನಾಗಿ ಆಕಾಶಾಭಿಮಾನಿಯಿಂದ ತಿಳಿಯಲು ಸಾಧ್ಯವಿಲ್ಲದವನಾಗಿ, ಆಕಾಶಾಭಿಮಾನಿಯು ಅವನಿಗೆ ಶರೀರದಂತೆ ಇರುವನೋ, ಯಾವಾತನು ಆಕಾಶಾಭಿಮಾನಿಯನ್ನು ನಿಯಮನ ಮಾಡುವನೋ, ಅವನೇ ನಿನ್ನ ನಿಯಾಮಕನಾದ ಅಂತರ್ಯಾಮಿಯಾಗಿದ್ದಾನೆ". ಇದೇ ರೀತಿಯಲ್ಲಿ 'ಯೋ ವಾಯೌ ತಿಷ್ಠನ್' ಇತ್ಯಾದಿ ವಾಕ್ಯಗಳೂ ಕೂಡ ಅದೇ ಸಂದರ್ಭದಲ್ಲಿ ಪ್ರಸ್ತಕವಾಗಿದೆ. ಇಲ್ಲಿರುವ ಆಕಾಶ, ವಾಯು, ಅಗ್ನಿ, ಅಪ್, ಪೃಥ್ವೀ ಮೊದಲಾದ ಶಬ್ದಗಳು ಭಗವಂತನನ್ನೇ ಪ್ರತಿಪಾದಿಸುತ್ತಿವೆ.

'ಆತ್ಮಾ' ಎಂಬ ಭಗವಂತನ ರೂಪದಿಂದ 'ಆಕಾಶ' ಎಂಬ ಭಗವದ್ರೂಪವು ಅಭಿವ್ಯಕ್ತವಾಗುತ್ತದೆ. 'ಆಕಾಶ' ಎಂಬ ಭಗವದ್ರೂಪವು 'ವಾಯು' ಎಂಬ ಭಗವದ್ರೂಪಕ್ಕೆ ಅಭಿವ್ಯಂಜಕವಾಗಿದೆ. ಆದ್ದರಿಂದ 'ಆಕಾಶ' ಎಂಬ ಭಗವಂತನ ಒಂದೇ ರೂಪವು ಕಾರ್ಯವು ಹಾಗೂ ಕಾರಣವೂ ಆಗಿರುತ್ತದೆ. ಆದ್ದರಿಂದ ಅವಾಂತರ ಕಾರಣವಾಚಕವಾದ ಆಕಾಶಶಬ್ದದಿಂದ ತದಂತರ್ಯಾಮಿಯಾದ ಆಕಾಶನೆಂದು ಕರೆಸಿಕೊಳ್ಳುವ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆ.

**भावदीपः – तावता कथमुक्तविरोधनिरासः? इत्यतो 'व्यक्त्यपेक्षया कार्यत्वञ्च' इति न्यायविवरणोक्तदिशा कार्यत्वविरोधं परिहरन् आकाशादिषु स्थित इत्यादिभाष्यतात्पर्योक्त्या कार्यकारणभावविरोधं च निराह – तथाचेति ।।**

ಒಬ್ಬನೇ ವಿಷ್ಣುವಿನಲ್ಲಿ ಕಾರ್ಯತ್ವ ಮತ್ತು ಕಾರಣತ್ವಗಳು ಹೇಗೆ ಬರುತ್ತವೆ ? ಎಂಬ ಪ್ರಶ್ನೆಗೆ ಹೀಗೆ ಉತ್ತರವನ್ನು ತಿಳಿಯಬೇಕು - ಅಭಿವ್ಯಕ್ತಿಯ ಅಪೇಕ್ಷೆಯಿಂದ ಕಾರ್ಯತ್ವವು ಯುಕ್ತವಾಗುತ್ತದೆ ಎಂದು 'ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂ ಚ' ಎಂಬ ನ್ಯಾಯವಿವರಣದ ಮಾತಿನಲ್ಲಿ ಹೇಳಿದ್ದಾರೆ. ಹೀಗೆ ಕಾರ್ಯತ್ವದ

ವಿರೋಧವನ್ನು ಪರಿಹರಿಸಬೇಕು. 'ಆಕಾಶಾದಿಷು ಸ್ಥಿತಃ' ಇತ್ಯಾದಿ ಭಾಷ್ಯವಾಕ್ಯದ ತಾತ್ಪರ್ಯವನ್ನು ಹೇಳುವ ಮೂಲಕ ಕಾರ್ಯಕಾರಣಗಳ ವಿರೋಧವನ್ನು ನಿರಾಕರಣೆ ಮಾಡಲು 'ತಥಾಚ' ಎಂಬ ವಾಕ್ಯವು ಹೊರಟಿದೆ.

**भावदीपः – अत इति ।।** विरोधाभावादित्यर्थः । सूत्रस्य समन्वयपरत्वस्फोरणाय भाष्ये शेषमाह – **स्थित इति ।।** भाष्यस्थानुवादः । तच्छब्दैराकाशादिशब्दैरित्यर्थः ।

'ಅತಃ' ಎಂಬ ಪದಕ್ಕೆ 'ವಿರೋಧವಿಲ್ಲದ್ದರಿಂದ' ಎಂದರ್ಥ. 'ಕಾರಣತ್ವೇನ' ಎಂಬ ಸೂತ್ರವು ಆಕಾಶಶಬ್ದದ ಸಮನ್ವಯಕ್ಕಾಗಿ ಹೊರಟಿದೆಯೆಂದು ಸ್ಪಷ್ಟವಾಗಿ ತೋರಿಸಲು ಭಾಷ್ಯದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕಾದ ಪದಗಳನ್ನು 'ಸ್ಥಿತಃ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿರುತ್ತಾರೆ 'ಸ್ಥಿತಃ' ಎಂಬ ಪದವು ಭಾಷ್ಯದ ಅನುವಾದವಾಗಿದೆ. 'ತಚ್ಛಬ್ದೈಃ' ಎಂದರೆ 'ಆಕಾಶಾದಿ ಶಬ್ದಗಳಿಂದ' ಎಂದರ್ಥ.

**भावदीपः – 'अवान्तरं कारणञ्च'** इति सङ्क्षेपभाष्ये अवान्तरकारणत्वलिङ्ग-समन्वयोक्तावपीह नामसमन्वयपरत्वोक्तिः 'नामानि सर्वाणि' इति वक्ष्यमाणसमाधानाय समाकर्षाद्युक्त्युपयोगाय चेत्याहुः ।

'ಅವಾಂತರಂ ಕಾರಣಂ ಚ' ಎಂಬುದಾಗಿ ಅಣುಭಾಷ್ಯದಲ್ಲಿ ಅವಾಂತರಕಾರಣತ್ವಲಿಂಗದ ಸಮನ್ವಯವನ್ನು ಮಾಡಿದ್ದರೂ ಕೂಡ ಪ್ರಕೃತ ನಾಮಸಮನ್ವಯಕ್ಕಾಗಿ ಸೂತ್ರ ಹೊರಟಿದೆ ಎಂದು ಹೇಳಿದ್ದಾರೆ. ಏಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯ ಆಧಾರದಿಂದ ಮುಂದೆ ಯಾವ ಸಮಾಧಾನವನ್ನು ಹೇಳುತ್ತಾರೂ ಅದರ ಸಮಾಕರ್ಷಕ್ಕಾಗಿ ಹೀಗೆ ನಾಮಸಮನ್ವಯನ್ನು ಹೇಳಿರುತ್ತಾರೆಂದು ತಿಳಿಯಬೇಕು.

**भावदीपः –** निमित्तविशेषादर्शनाच्चेति प्रागुक्तचोद्यमनूद्य निराह – **नच वक्तव्यमिति ।। इत्याद्युक्तेति ।।** आकाशनय आदिपदार्थः ।

ಹಿಂದೆ 'ನಿಮಿತ್ತವಿಶೇಷಾದರ್ಶನಾಚ್ಚ' ಎಂಬುದಾಗಿ ಪರಮಾತ್ಮನು ಅವಾಂತರಕಾರಣನಾಗಿದ್ದಾನೆನ್ನಲು ಯಾವುದೇ ವಿಶೇಷಕಾರಣ ಇರುವುದಿಲ್ಲ ಎಂದು ಆಕ್ಷೇಪ ಮಾಡಲಾಗಿತ್ತು. ಅದನ್ನು 'ನ ಚ ವಕ್ತವ್ಯಮ್' ಎಂಬ ಟೀಕಾಮಾತಿನಿಂದ ನಿರಾಕರಣೆ ಮಾಡಿದ್ದಾರೆ.

**भावदीपः –** नन्वेवं पूर्वत्र प्राणप्राणदत्वादिविशेषहेतुरग्रे प्रतिज्ञादृष्टान्तानुपरोधादिश्च न वाच्यः स्यादित्यत आह – **यत्तु विशेषं च वक्तीति ।।१।।**

।। इति श्रीराघवेन्द्रयतिकृते भावदीपे आकाशाधिकरणम् ।।

ಹಿಂದೆ ಹೇಳಲ್ಪಟ್ಟ 'ಪ್ರಾಣಪ್ರಾಣದತ್ವ' ಮೊದಲಾದ ವಿಶೇಷ ಹೇತುವನ್ನು ಮುಂದೆ ಹೇಳಲ್ಪಡುವ ಪ್ರತಿಜ್ಞಾದೃಷ್ಟಾಂತಾನುಪರೋಧವು ಮೊದಲಾದ ವಿಶೇಷ ಹೇತುವನ್ನು ಹೇಳದಿರಬೇಕಾದೀತು ಎಂಬ ಪ್ರಶ್ನೆಗೆ 'ಯತ್ತು ವಿಶೇಷಂ ಚ ವಕ್ತಿ' ಎಂಬ ಟೀಕಾ ಮಾತಿನಿಂದ ಉತ್ತರಿಸಿದ್ದಾರೆ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು

ಆಕಾಶಾಧಿಕರಣ

(೧-೪-೪)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ आकाशाधिकरणम्

### ಆನಂತರ್ಯಸಂಗತಿ ಹಾಗೂ ಸಂಶಯಪರಂಪರೆ

**।। कारणत्वेन चाकाशादिषु यथा व्यपदिष्टोक्तेः ।। अस्त्वेकस्यैवाधाराधेयभावः, कालस्सदास्तीत्यादौ दर्शनात्, नतु कार्यकारणभावः, क्वाप्यदर्शनादित्याक्षेपादनन्तर-सङ्गतिः ।**

ಅನುವಾದ - 'ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಒಂದು ಸೂತ್ರದಿಂದ ಕೂಡಿರುವ ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ.

ಹಿಂದಿನ ಅಧಿಕರಣದ ನ್ಯಾಯದಂತೆ ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವನ್ನು ಒಪ್ಪಬಹುದು. ಲೋಕದಲ್ಲಿಯೂ ಇದಕ್ಕೆ ದೃಷ್ಟಾಂತ ಕಂಡಿದೆ. ದೇಶವು ಎಲ್ಲೆಡೆಯಿರುತ್ತದೆ. ಕಾಲವು ಯಾವಾಗಲೂ ಇರುತ್ತದೆ ಎಂಬ ವ್ಯವಹಾರವು ಲೋಕದಲ್ಲಿದೆ. ದೇಶದಲ್ಲಿ ದೇಶದ ಇರುವಿಕೆಯನ್ನು, ಕಾಲದಲ್ಲಿ ಕಾಲದ ಇರುವಿಕೆಯನ್ನು ಎಲ್ಲರೂ ಒಪ್ಪಿರುತ್ತಾರೆ. ಅದರಂತೆ ಪರಮಾತ್ಮನು ತನಗೇ ತಾನೇ ಆಧಾರನಾಗಬಹುದು. ಆದರೆ ಒಂದೇ ಪದಾರ್ಥವು ಕಾರ್ಯವೂ ಕಾರಣವೂ ಆಗಿರುವುದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಜಗತ್ತಿಗೆ ಕಾರಣನಾಗಿರುವಂತಹ ಪರಮಾತ್ಮನು ಕಾರ್ಯಸ್ವರೂಪವನ್ನು ತಾಳಲು ಸಾಧ್ಯವಿಲ್ಲ. ಹೀಗೆ ಆಕ್ಷೇಪ ಮಾಡಿ ಅಧಿಕರಣವು ಹೊರಡುತ್ತಿರುವುದರಿಂದ ಆನಂತರ್ಯರೂಪವಾದ ಸಂಗತಿಯನ್ನು ತಿಳಿದುಕೊಳ್ಳಬೇಕು.

**अत्र ''आत्मन आकाशः'' इत्यादिवाक्यस्थाकाशादिशब्दाः किमन्यपराः किं वा ब्रह्मपरा इति चिन्ता । तदर्थं ''नामानि सर्वाणि'' इत्यादिश्रुतिस्थसर्वशब्दस्य सङ्कोचे हेतुरस्ति न वेति । तदर्थं जन्यजनकभावः किमेकस्य न युक्त उत युक्त इति ।**

'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯಗಳಲ್ಲಿರುವ ಆಕಾಶ ಮೊದಲಾದ ಶಬ್ದಗಳು ಭೂತಾಕಾಶಾದಿಗಳನ್ನು ಪ್ರತಿಪಾದನೆ ಮಾಡುತ್ತವೆಯೋ, ಅಥವಾ ಬ್ರಹ್ಮನನ್ನೂ ಕೂಡ ಪ್ರತಿಪಾದನೆ ಮಾಡುತ್ತವೆಯೋ? ಎಂಬುದು ಈ ಅಧಿಕರಣದ ಪ್ರಧಾನ ಸಂದೇಹ.

ಅದಕ್ಕೋಸ್ಕರ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಪದಕ್ಕೆ ಸಂಕುಚಿತವಾದ ಅರ್ಥವನ್ನು ಮಾಡಬೇಕೆನ್ನಲು ಕಾರಣವಿದೆಯೋ, ಅಥವಾ ಇಲ್ಲವೋ ? ಎಂಬ ಅವಾಂತರಸಂಶಯವು ಪರಿಹಾರವಾಗಬೇಕು.

ಅದಕ್ಕಾಗಿ ಜನ್ಯಜನಕಭಾವವು ಒಬ್ಬನೇ ವ್ಯಕ್ತಿಯಲ್ಲಿ ಯುಕ್ತವಾಗುವುದಿಲ್ಲವೋ, ಅಥವಾ ಯುಕ್ತವಾಗುತ್ತದೋ ? ಎಂಬ ಕೊನೆಯ ಸಂಶಯವು ಪರಿಹಾರವಾಗಬೇಕು.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – कारणत्वेन चाकाशादिषु यथाव्यपदिष्टोक्तेः** ।। अत्राकाशादीनामुभयत्रप्रसिद्धत्वगतार्थत्वशङ्कासमाधानादिकं सर्वं प्रागेवोक्तमिति भावेन ''कार्यकारणभावो लोकेप्यसम्भावितः'' इति टीकासूचितसङ्गतिमाह – **अस्त्विति** ।।

ವಿವರಣೆ - 'ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ' ಎಂಬ ಸೂತ್ರವುಳ್ಳ ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಆಕಾಶಶಬ್ದದ ಸಮನ್ವಯ ಮೂಲಕ 'ಅವಾಂತರಕಾರಣತ್ವ' ಎಂಬ ಧರ್ಮವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ವಾಸ್ತವಿಕವಾಗಿ ಪ್ರಥಮಪಾದದಲ್ಲಿಯೇ 'ಆಕಾಶ' ಎಂಬ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿರುವುದರಿಂದ ಇಲ್ಲಿ ಸಮನ್ವಯ ಮಾಡುತ್ತಿರುವ ಆಕಾಶಶಬ್ದವು ಉಭಯತ್ರಪ್ರಸಿದ್ಧವೆಂದು ಸಹಜವಾಗಿ ತಿಳಿಯುತ್ತದೆ. ಆದ್ದರಿಂದ ಆಕಾಶಶಬ್ದವು ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಮತ್ತು ಉಭಯತ್ರಪ್ರಸಿದ್ಧವಾದರೂ ಮೂರನೆಯ ಪಾದದಲ್ಲಿಯೇ ಆಕಾಶಶಬ್ದವನ್ನು ಸಮನ್ವಯ ಮಾಡಿದ ಮೇಲೆ ಈ ಅಧಿಕರಣಕ್ಕೆ ಗತಾರ್ಥತ್ವ ದೋಷವು ಬರುತ್ತದಲ್ಲವೇ? ಈ ಎರಡು ಆಶಂಕೆಗಳನ್ನು ಈ ಹಿಂದೆ ಆನುಮಾನಿಕಾಧಿಕರಣದ ಪ್ರಾರಂಭದಲ್ಲಿಯೇ ನಿರಾಕರಿಸಲಾಗಿದೆ. ಅಂದರೆ ಮೂರನೆಯ ಪಾದದಲ್ಲಿ ಸಮನ್ವಯ ಮಾಡಿರುವ ಆಕಾಶಶಬ್ದದ ಕ್ರಮವೇ ಬೇರೆ. ಇಲ್ಲಿ ಸಮನ್ವಯ ಮಾಡುತ್ತಿರುವ ಆಕಾಶಶಬ್ದದ ಕ್ರಮವೇ ಬೇರೆ. ಈ ಪಾದದಲ್ಲಿ 'ಅವಾಂತರಕಾರಣತ್ವ' ಎಂಬ ಧರ್ಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲು ಆಕಾಶಶಬ್ದದ ಸಮನ್ವಯವನ್ನು ಮಾಡುತ್ತಿರುವುದರಿಂದ ಉಭಯತ್ರಪ್ರಸಿದ್ಧ ಎಂದಾಗುವುದಿಲ್ಲ. ಹಾಗೂ ಗತಾರ್ಥತ್ವ ಶಂಕೆಯೂ ಬರುವುದಿಲ್ಲ. ಮತ್ತು ಅನ್ಯತ್ರೈವಪ್ರಸಿದ್ಧವೆನ್ನಲು ಪ್ರಬಲವಾದ ಶ್ರುತಿಲಿಂಗಗಳಿರುವುದರಿಂದ ಉಭಯತ್ರಪ್ರಸಿದ್ಧವೆಂದೂ ಕೂಡ ಹೇಳಲು ಸಾಧ್ಯವಾಗುವುದಿಲ್ಲ.

'ಕಾರ್ಯಕಾರಣಭಾವಃ ಲೋಕೇಪ್ಯಸಂಭಾವಿತಃ' 'ಒಂದೇ ವಸ್ತುವು ಕಾರ್ಯ ಹಾಗೂ ಕಾರಣ ಎರಡೂ ಕೂಡ ಆಗಿರುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ' ಎಂಬ ಟೀಕಾ ವಾಕ್ಯದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ಸೂಚಿಸಲಾಗಿದೆ. ಒಂದೇ ವಸ್ತುವಿಗೆ ಆಧಾರಾಧೇಯಭಾವವು ಯುಕ್ತವಾಗಬಹುದು. ಏಕೆಂದರೆ 'ದೇಶಃ ಸರ್ವತ್ರಾಸ್ತಿ ಕಾಲಃ ಸದಾಸ್ತಿ' ಇತ್ಯಾದಿ ಪ್ರಯೋಗಗಳು ಲೋಕದಲ್ಲಿ ಕಂಡಿರುತ್ತವೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಕಾರ್ಯಕಾರಣಭಾವವು ಒಂದೇ ವಸ್ತುವಿನಲ್ಲಿ ಯುಕ್ತವಾಗಬಹುದು. ಆದರೆ ಒಂದೇ ವಸ್ತುವಿಗೆ ಕಾರ್ಯಕಾರಣಭಾವವು ಸುತರಾಂ ಸಿದ್ಧವಾಗುವುದಿಲ್ಲ. ಹೀಗಿರುವಾಗ ಒಬ್ಬನೇ ವಿಷ್ಣುವು ಕಾರ್ಯನು, ಕಾರಣನೂ ಆಗುತ್ತಾನೆಂದು ಹೇಗೆ ಹೇಳುತ್ತೀರಿ? ಹಾಗೇನಾದರೂ ಕಾರ್ಯಕಾರಣಭಾವವೆರಡೂ ಮಹಾವಿಷ್ಣುವಿನಲ್ಲಿ ಬಂದರೆ ಅವಾಂತರಕಾರಣತ್ವವನ್ನು ಅವನಲ್ಲಿ ಕೂಡಿಸಬಹುದು. ಈ ಆಶಂಕೆಗೆ ಉತ್ತರಿಸಲು ಆಕಾಶಾಧಿಕರಣವು ಹೊರಡುತ್ತಿದೆ. ಈ ಬಗೆಯ ಸಂಗತಿಯು ಮೇಲಿನ ಟೀಕಾವಾಕ್ಯದಿಂದ ಸೂಚಿತವಾಗಿದೆ. ಅದನ್ನೇ ಗ್ರಂಥಕಾರರು 'ಅಸ್ತು' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ.

**प्रकाशः** – एतेनैकस्यैवोर्ध्वाधरीभाववत् पौर्वापर्यमपि पूर्वन्यायेनैव सिद्धमिति प्रत्युक्तम् । **क्वाप्यदर्शनादिति ।**

'ಅಸ್ತು' ಇತ್ಯಾದಿ ವಾಕ್ಯದಿಂದ ಸಂಗತಿಯನ್ನು ತೋರಿಸಿರುವುದರಿಂದ ಮತ್ತೊಂದು ಬಗೆಯ ಆಶಂಕೆಯನ್ನು ಪರಿಹರಿಸಿದಂತಾಯಿತು.

ಆಶಂಕೆ - ಈ ಅಧಿಕರಣ ಹೊರಟಿದ್ದೇ ವ್ಯರ್ಥ. ಏಕೆಂದರೆ ಹಿಂದಿನ ಅಧಿಕರಣದಿಂದಲೇ ಈ ಅಧಿಕರಣವು ಗತಾರ್ಥವಾಗಿದೆ. ಒಬ್ಬನೇ ವ್ಯಕ್ತಿಯಲ್ಲಿ ಕಾರ್ಯಕಾರಣಭಾವವನ್ನು ಸಮರ್ಥಿಸುವುದು ಈ ಅಧಿಕರಣದ ಉದ್ದೇಶ. ಕಾರಣ ಎಂದರೆ ನಿಯಮೇನ ಪೂರ್ವಭಾವಿಯಾಗಿರುವಿಕೆ, ಕಾರ್ಯ ಎಂದರೆ ನಿಯಮೇನ ಅನಂತರ ಇರುವಿಕೆ ಒಬ್ಬನೇ ವ್ಯಕ್ತಿಯಲ್ಲಿ ಇದು ಅಸಂಭಾವಿತವಲ್ಲವೇ? ಎಂಬ ಆಕ್ಷೇಪ ಬಂದರೆ ಇದನ್ನು ಹಿಂದಿನ ಅಧಿಕರಣದ ನ್ಯಾಯದಿಂದಲೇ ಪರಿಹರಿಸಿದ್ದಾಗಿದೆ. ಏಕೆಂದರೆ ಒಬ್ಬನೇ ವ್ಯಕ್ತಿಗೆ ಆಧಾರಾಧೇಯಭಾವವು ಯುಕ್ತವಾಗುತ್ತದೆಂದು ಸಮರ್ಥಿಸಲಾಯಿತು. ಅದೇ ನ್ಯಾಯದಿಂದಲೇ ಪೌರ್ವಾಪರ್ಯವನ್ನೂ ಕೂಡ ಸಮರ್ಥಿಸಿದಂತಾಯಿತು. ಹೀಗೆ ಪೂರ್ವಾಧಿಕರಣದಿಂದಲೇ ಕಾರ್ಯಕಾರಣಭಾವವು ಸಿದ್ಧವಾಗಿರಬೇಕಾದರೆ ಪುನಃ ಈ ಅಧಿಕರಣ ಹೊರಟಿರುವುದು ವ್ಯರ್ಥವಲ್ಲವೇ.

ಸಮಾಧಾನ - ಒಂದೇ ಪದಾರ್ಥಕ್ಕೆ ಆಧಾರಾಧೇಯಭಾವವಿರುವಿಕೆಯು 'ದೇಶಃ ಸರ್ವತ್ರ ಅಸ್ತಿ' ಇತ್ಯಾದಿ ಪ್ರಯೋಗಗಳಿಂದ ಲೋಕದಲ್ಲಿ ಕಂಡಿದೆ. ಆದರೆ ಒಂದೇ ಪದಾರ್ಥಕ್ಕೆ ಕಾರ್ಯಕಾರಣಭಾವವಿರುವುದು ಲೋಕದಲ್ಲಿ ಎಲ್ಲಿಯೂ ಕೂಡ ಕಂಡಿರುವುದಿಲ್ಲ. ಆದ್ದರಿಂದ ಪೂರ್ವಾಧಿಕರಣದಿಂದ ಈ ಪೂರ್ವಪಕ್ಷವು ನಿರಾಕೃತವಾಯಿತೆಂದು ಗತಾರ್ಥತ್ವವನ್ನು ಹೇಳಲು ಸಾಧ್ಯವಿಲ್ಲ.

**प्रकाशः** – **सङ्गतिः** प्रत्युदाहरणरूपा । ''समन्वयसूत्र'' इत्यादिटीकातु फलाशयेति भावः । विषयादिपरटीकां व्यनक्ति – **अत्रेति ।।**

ಪರಿಪೂರ್ಣಚಂದ್ರಿಕಾ

'ಸಂಗತಿಃ' ಎಂದರೆ ಹಿಂದಿನ ಅಧಿಕರಣದಿಂದ ಪ್ರತ್ಯುದಾಹರಣರೂಪವಾದ ಸಂಗತಿ ಎಂದರ್ಥ. ಒಬ್ಬನೇ ವ್ಯಕ್ತಿಯಲ್ಲಿ ಆಧಾರಾಧೇಯಭಾವವು ಯುಕ್ತವಾಗಬಹುದು; ಪೌರ್ವಾಪರ್ಯರೂಪವಾದ ಕಾರ್ಯಕಾರಣ-ಭಾವವು ಸರ್ವಥಾ ಯುಕ್ತವಾಗುವುದಿಲ್ಲ ಎಂಬ ಪೂರ್ವವೈಷಮ್ಯರೂಪವಾದ ಸಂಗತಿ ಎಂದಭಿಪ್ರಾಯ.

ಟೀಕೆ ಹಾಗೂ ಭಾಷ್ಯಗಳಲ್ಲಿ ಸಮನ್ವಯಸೂತ್ರದಿಂದ ಸಂಗತಿಯನ್ನು ತೋರಿಸಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು. ಅದು ಕೇವಲ ಅಧಿಕರಣದ ಫಲವೆಂದು ತಿಳಿಯಬೇಕು. ಸಮನ್ವಯಸೂತ್ರದ ಆಕ್ಷೇಪವೇ ಪೂರ್ವಪಕ್ಷದ ಫಲ. ಸಮನ್ವಯಸೂತ್ರದ ಸಮರ್ಥನೆಯೇ ಸಿದ್ಧಾಂತದ ಫಲವೆಂದು ಆ ವಾಕ್ಯಗಳ ಅಭಿಪ್ರಾಯ. ವಾಸ್ತವಿಕವಾಗಿ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತಿಳಿಯಬೇಕು.

ವಿಷಯ ಸಂಶಯ ಮೊದಲಾದವುಗಳನ್ನು ಸಮರ್ಥಿಸುವ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – तैत्तिरीये ब्रह्मवल्ल्यां श्रूयते ''आत्मन आकाशः सम्भूतः आकाशाद्वायुः वायोरग्निः अग्नेरापः अद्भ्यः पृथिवी पृथिव्या ओषधयः ओषधीभ्योऽन्नम् अन्नात् पुरुषः'' इति ।

ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ ಬರುವ ಪ್ರಕರಣ ಹೀಗಿದೆ - 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ ಓಷಧೀಭ್ಯೋಽನ್ನಮ್ ಅನ್ನಾತ್ ಪುರುಷಃ' ಆತ್ಮನಿಂದ ಆಕಾಶವು, ಆಕಾಶದಿಂದ ವಾಯುವು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ನೀರು, ನೀರಿನಿಂದ ಪೃಥಿವೀ, ಪೃಥಿವಿಯಿಂದ ಸಸ್ಯಗಳು, ಸಸ್ಯಗಳಿಂದ ಅನ್ನವು, ಅನ್ನದಿಂದ ಪುರುಷನು ಹುಟ್ಟುತ್ತಾನೆಂಬುದಾಗಿ ಸೃಷ್ಟಿಯ ಕ್ರಮವನ್ನು ನಿರೂಪಣೆ ಮಾಡಲಾಗಿದೆ.

**प्रकाशः** – तत्रावान्तरकारणत्वार्थकाकाशादिशब्दा उदाहरणमिति प्रागेव व्यक्तमिति भावः ।

ಈ ಶ್ರುತಿವಾಕ್ಯದಲ್ಲಿರುವ ಅವಾಂತರಕಾರಣರೂಪವಾದ ಆಕಾಶ, ವಾಯು ಮೊದಲಾದ ಶಬ್ದ'ಳು ಈ ಅಧಿಕರಣದ ವಿಷಯವಾಗಿವೆ. ಆತ್ಮನು ಕೇವಲ ಕಾರಣನಾಗಿರುತ್ತಾನೆ. ಪುರುಷನು ಕೇವಲ ಕಾರ್ಯನಾಗಿರುತ್ತಾನೆಂದು ಈ ವಾಕ್ಯದಲ್ಲಿ ತಿಳಿಯುತ್ತಿದೆ. ಮಧ್ಯದಲ್ಲಿರುವ ಆಕಾಶ, ವಾಯು, ಅಗ್ನಿ ಇವೆಲ್ಲವೂ ಕಾರ್ಯವೂ ಹಾಗೂ ಕಾರಣವೂ ಆಗಿರುವುದು ಕಾಣಸುತ್ತಿದೆ. ಇಂತಹ ಅವಾಂತರಕಾರಣತ್ವವಾಚಕವಾದ ಶಬ್ದಗಳ ಸಮನ್ವಯವು ಈ ಅಧಿಕರಣದ ಉದ್ದೇಶವೆಂದು ತಿಳಿಯಬೇಕು.

**प्रकाशः** – तेनाकाशवाय्वादिशब्दानां यत्रकच स्थितानां ब्रह्मणि प्रवृत्तिहेतुमत्ता-व्युत्पादनेन समन्वयोक्तौ तच्छब्दनिमित्तगुणलाभादत्रत्याकाशादिशब्दसमन्वयो विफल इति निरस्तम् । अवान्तरकारणत्वरूपगुणलाभार्थत्वात् मुमुक्षुणा ज्ञातव्यत्वाच्चेति ।

ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವನ್ನು ನಿರಾಕರಿಸಿದಂತಾಯಿತು.

ಆಕಾಶಾಧಿಕರಣ (೧-೪-೪)

ಆಶಂಕೆ - ಬೇರೆ ಬೇರೆ ಶ್ರುತಿವಾಕ್ಯಗಳಲ್ಲಿರುವ ಭೂತವಾಚಕವಾದ ಆಕಾಶ, ವಾಯು ಮೊದಲಾದ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದರೆ ಸಾಕು. ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಮುಖ್ಯವಾಗಿರುತ್ತದೆಂದು ಸಿದ್ಧವಾಗಿರುವ ಕಾರಣ ಗುಣಪರಿಪೂರ್ಣತ್ವವು ಅವನಲ್ಲಿ ಲಾಭವಾಗುತ್ತದೆ. ಹೀಗಿರುವಾಗ 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯದಲ್ಲಿರುವ ಆಕಾಶಾದಿಶಬ್ದಗಳ ಸಮನ್ವಯವನ್ನು ಮಾಡುವುದು ವ್ಯರ್ಥವಲ್ಲವೇ?

ಸಮಾಧಾನ - ಬೇರೆ ಶ್ರುತಿಗಳಲ್ಲಿರುವ ಆಕಾಶಾದಿಶಬ್ದಗಳಿಂದ ಅವಾಂತರಕಾರಣತ್ವ ಎಂಬ ಗುಣವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಗುವುದಿಲ್ಲ. ಕೇವಲ ಆಕಾಶಾದಿಶಬ್ದಗಳ ಪ್ರವೃತ್ತಿನಿಮಿತ್ತವನ್ನಷ್ಟೇ ಸಮನ್ವಯ ಮಾಡಿದಂತಾಗುತ್ತದೆ. ಅದನ್ನು ಈಗಾಗಲೇ ಪ್ರಥಮಪಾದದಲ್ಲಿ ಮಾಡಿದ್ದಾಗಿದೆ. ಆದರೆ ಪ್ರಕೃತ ಈ ಅಧಿಕರಣದಲ್ಲಿ ಅವಾಂತರಕಾರಣತ್ವ ಎಂಬ ಗುಣದ ಸಮನ್ವಯಕ್ಕಾಗಿ ಬ್ರಹ್ಮವಲ್ಲಿಯ 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿವಾಕ್ಯದ ಸಮನ್ವಯವನ್ನೇ ಮಾಡುವುದು ಅತ್ಯಂತ ಅನಿವಾರ್ಯವಾಗಿದೆ. ಮತ್ತು ಮೋಕ್ಷವನ್ನು ಬಯಸುವವನು ವಿಷ್ಣುವಿನಲ್ಲಿ ಅವಾಂತರಕಾರಣತ್ವ ಎಂಬ ಗುಣವನ್ನು ಅವಶ್ಯವಾಗಿ ತಿಳಿಯಲೇ ಬೇಕಾದ್ದರಿಂದಲೂ ಈ ಅಧಿಕರಣವು ಸಾರ್ಥಕವಾಗಿದೆ.

**प्रकाशः –** एतेनैतेषामपि शब्दानां ज्योतिर्नयन्यायेन पदवर्णादिरूपेण हरौ वृत्तिसम्भवेन समन्वयसूत्राक्षेपेण पुनरिह विचारो व्यर्थ इति प्रत्युक्तम् । मन्दाधिकार्यपेक्षितवाक्यमर्यादामुपेत्यैवेह विचार्यत्वात् ।

ಇದರಿಂದ ಮತ್ತೊಂದು ಆಕ್ಷೇಪದ ಪರಿಹಾರವೂ ಆಯಿತು.

ಆಕ್ಷೇಪ - ಇಲ್ಲಿ ಸಮನ್ವಯ ಮಾಡುತ್ತಿರುವ ಶಬ್ದಗಳೆಲ್ಲವೂ ಜ್ಯೋತಿರಧಿಕರಣದ ನ್ಯಾಯದಿಂದಲೇ ಸಮನ್ವಯಗೊಂಡಿವೆ. ಹಿಂದಿನ ಜ್ಯೋತಿರುಪಕ್ರಮಾಧಿಕರಣದಲ್ಲಿ ವೇದದಲ್ಲಿರುವ ಪ್ರತಿಯೊಂದು ಶಬ್ದಗಳು ಪದ, ವರ್ಣ ಮೊದಲಾದ ಸ್ವರೂಪದಿಂದ ಶ್ರೀಹರಿಯನ್ನೇ ಪ್ರತಿಪಾದಿಸುತ್ತದೆಂದು ಸಮರ್ಥಿಸಲಾಗಿದೆ. ಆದ್ದರಿಂದ ಇಲ್ಲಿ ಸಮನ್ವಯ ಮಾಡಲು ಹೊರಟಿರುವ 'ಆತ್ಮನಃ ಆಕಾಶ ಸಂಭೂತಃ' ಇತ್ಯಾದಿ ಶ್ರುತಿವಾಕ್ಯದ ಸಮನ್ವಯವು ಸಿದ್ಧವಾದಂತಾಯಿತು. ಹೀಗಿರುವಾಗ ಪುನಃ ಸಮನ್ವಯ ಸೂತ್ರವನ್ನು ಆಕ್ಷೇಪ ಮಾಡಿ ಈ ಅಧಿಕರಣದಲ್ಲಿ ವಿಚಾರ ಮಾಡುತ್ತಿರುವುದು ವ್ಯರ್ಥವಲ್ಲವೇ?

ಸಮಾಧಾನ - ಈ ಆಕ್ಷೇಪವು ಈಗಾಗಲೇ ಪರಿಹೃತವಾಗಿದೆ. ಮಂದಾಧಿಕಾರಿಗಳನ್ನು ವಿವಕ್ಷಿಸಿ, ಶ್ರುತಿಯ ವಾಕ್ಯಮಾರ್ಯಾದೆಯನ್ನು ಅವಲಂಬಿಸಿ ಸಮನ್ವಯವನ್ನು ಮಾಡಬೇಕಾಗುತ್ತದೆ. ಹಿಂದಿನ ಜ್ಯೋತಿರುಪಕ್ರಮಾಧಿಕರಣದಲ್ಲಿ ಪದವರ್ಣಾದಿಸ್ವರೂಪದಿಂದ ಶ್ರುತಿಸಮನ್ವಯವನ್ನು ಮಾಡಿದ್ದರೂ ವಾಕ್ಯಮರ್ಯಾದೆಯಿಂದ ಸಮನ್ವಯವನ್ನು ಮಾಡಿರುವುದಿಲ್ಲ. ಮಂದಾಧಿಕಾರಿಗಳು ವಾಕ್ಯದ ಅರ್ಥವನ್ನೇ ತಿಳಿಯುತ್ತಾರೆ ಹೊರತು, ಪದವರ್ಣಾದಿಗಳ ಅರ್ಥವನ್ನು ತಿಳಿಯಲಾರರು. ಅವರ ದೃಷ್ಟಿಯಿಂದ 'ಆತ್ಮನ ಆಕಾಶ ಸಂಭೂತಃ' ಇತ್ಯಾದಿ ಶ್ರುತಿಗಳು ಅನ್ಯಪರವೇ ಆಗುತ್ತವೆ. ಅಂತಹ ಮಂದಾಧಿಕಾರಿಗಳಿಗೆ ಈ ವಾಕ್ಯದಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸಬೇಕಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः** – पदादिसमन्वयेऽवान्तरकारणत्वरूपगुणस्य वाक्यलभ्यस्याप्राप्तेश्च । भूतोत्पत्त्याद्यसिद्धेश्च ।

ಒಂದುವೇಳೆ ಪದಸಮನ್ವಯ ಮಾಡುವ ಮೂಲಕವೇ, ಶ್ರುತಿಸಮನ್ವಯವಾಯಿತೆಂದು ತಿಳಿದುಬಿಟ್ಟರೆ ಅವಾಂತರಕಾರಣತ್ವವೆಂಬ ವಾಕ್ಯದಿಂದ ದೊರೆಯುವ ಅರ್ಥವು ತಿಳಿಯುವುದೇ ಇಲ್ಲ. ಮತ್ತು ಎಲ್ಲಾ ಪದಗಳು ಶ್ರೀಹರಿಯನ್ನೇ ಹೇಳುತ್ತವೆಂದು ಪದವರ್ಣಾದಿ ಸ್ವರೂಪದಿಂದ ಸಮನ್ವಯವನ್ನು ತಿಳಿಯುವುದಾದರೆ ಭೂತಾಕಾಶಾದಿಗಳ ಉತ್ಪತ್ತಿಯೇ ಸಿದ್ಧವಾಗದಿರಬೇಕಾದೀತು. ಏಕೆಂದರೆ ಎಲ್ಲವು ಪದಸ್ವರೂಪದಿಂದ ವಿಷ್ಣುವನ್ನು ಪ್ರತಿಪಾದಿಸುತ್ತವೆಂದು ನೀವೇ ಹೇಳುತ್ತಿದ್ದೀರಿ. ಹೀಗಿರುವಾಗ ಭೂತೋತ್ಪತ್ತಿಯನ್ನು ಹೇಳುವಂತಹ ವಾಕ್ಯಗಳೇ ಇಲ್ಲದಾಗುತ್ತವೆ.

**प्रकाशः** – वाक्यविधित्वेतु ''कल्पनोपदेशात्'' इत्युक्तन्यायेन

इति बुद्धौ समारोहादुभयोर्योगरूढयोः ।
त्यागे च कारणाभावादुभयार्थत्वमिष्यते ।।

इत्यनुभाष्योक्तन्यायेन चान्यपरत्वस्यापि भावाच्च ।

ಯಾವಾಗ ವಾಕ್ಯದ ಅರ್ಥವನ್ನು ವಿವಕ್ಷಿಸುತ್ತೇವೋ, ಆವಾಗ ಶ್ರುತಿಗೆ ಅನ್ಯಪರತ್ವವೂ ಕೂಡ ಸಿದ್ಧವಾಗುತ್ತದೆ. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಮತ್ತು

ಇತಿ ಬುದ್ಧೌ ಸಮಾರೋಹಾದುಭಯೋರ್ಯೋಗರೂಢಯೋಃ।
ತ್ಯಾಗೇ ಚ ಕಾರಣಾಭಾವಾದುಭಯಾರ್ಥತ್ವಮಿಷ್ಯತೇ ॥

ಶ್ರುತಿಯನ್ನು ನೋಡಿದಾಗ ಯೋಗಾರ್ಥ ಹಾಗೂ ರೂಢ್ಯರ್ಥಗಳೆರಡು ಬುದ್ಧಿಯಲ್ಲಿ ಆರೂಢವಾಗುತ್ತವೆ. ಆರೂಢವಾದ ಈ ಎರಡೂ ಅರ್ಥಗಳನ್ನು ಬಿಡಲು ಯಾವುದೇ ಕಾರಣವಿರುವುದಿಲ್ಲ. ಹಾಗಾಗಿ ಎರಡೂ ಬಗೆಯ ಅರ್ಥಗಳನ್ನು ಅಂಗೀಕರಿಸಬೇಕು ಎಂಬ ಅನುವ್ಯಾಖ್ಯಾನದ ನ್ಯಾಯದಂತೆ ವಾಕ್ಯಗಳಿಗೆ ಅನ್ಯಪರತ್ವವೂ ಕೂಡ ತಿಳಿಯುತ್ತದೆ.

**प्रकाशः** – **अन्येति** ।। भूताकाशादिमात्रपरा, ब्रह्मपरा अपि वेत्यर्थः । यद्वा परममुख्यवृत्त्येत्यर्थः ।।

ಸಂಶಯಕೋಟಿಯನ್ನು ತೋರಿಸುವಾಗ ಗ್ರಂಥದಲ್ಲಿ 'ಕಿಂ ಅನ್ಯಪರಾಃ ಕಿಂವಾ ಬ್ರಹ್ಮಪರಾಃ' ಎಂದು ಹೇಳಿರುತ್ತಾರೆ. ಭೂತಾಕಾಶಾದಿಗಳನ್ನು ಮಾತ್ರ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಭೂತಾಕಾಶಪರವಾಗಿ ಮತ್ತು ಬ್ರಹ್ಮಪರವಾಗಿ ಹೇಳುತ್ತಿದೆಯೋ? ಎಂಬರ್ಥವನ್ನು ವಿವಕ್ಷಿಸಬೇಕು. ಅಥವಾ ಪರಮಮುಖ್ಯವೃತ್ತಿಯಿಂದ ಭೂತಾಕಾಶಪರವೋ, ಪರಮಮುಖ್ಯವೃತ್ತಿಯಿಂದ ಬ್ರಹ್ಮಪರವೋ? ಎಂಬ ಪ್ರಕಾರದಿಂದಲೂ ಸಂಶಯವನ್ನು ತಿಳಿಯಬೇಕು. ಹೀಗೆ ತಿಳಿಯದಿದ್ದರೆ ಪೂರ್ವಪಕ್ಷಕೋಟಿಯು ಸ್ಪಷ್ಟವಾಗುವುದಿಲ್ಲ.

**प्रकाशः – नामानीति ।। तस्या एव चमससूत्रे साधकत्वेनोक्तत्वादिति भावः । आदिपदेन ''सर्वे वेदाः'' इत्यादिग्रहः । अत्र फलफलिभावः स्पष्टः ।**

'ಚಮಸವದವಿಶೇಷಾತ್' ಎಂಬ ಸೂತ್ರದಲ್ಲಿ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯನ್ನೇ ಸಾಧಕಪ್ರಮಾಣವನ್ನಾಗಿ ಹೇಳಲಾಗಿದೆ. ಆದ್ದರಿಂದ ಆ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬೇಕು ಎಂಬುದು 'ನಾಮಾನಿ' ಇತ್ಯಾದಿ ವಾಕ್ಯದ ಅಭಿಪ್ರಾಯ. ಆದಿಪದದಿಂದ 'ಸರ್ವೇ ವೇದಾಃ' ಎಂಬ ಶ್ರುತಿಯನ್ನು ವಿವಕ್ಷಿಸಬೇಕು. ಪೂರ್ವಪಕ್ಷ ಹಾಗೂ ಸಿದ್ಧಾಂತದ ಫಲಫಲಿಭಾವಗಳು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಹೇಳಿರುವುದಿಲ್ಲ.




ಆಕಾಶಾಧಿಕರಣದಲ್ಲಿ ಪರಮಾತ್ಮನು ಅವಾಂತರಕಾರಣನಾಗಿದ್ದಾನೆಂದು ಸಮರ್ಥಿಸಲಾಗಿದೆ. ಈ ಅಧಿಕರಣದಲ್ಲಿ 'ಆಕಾಶ' ಎಂಬ ಶಬ್ದದ ಸಮನ್ವಯವು ಮುಖ್ಯವಾದ ಉದ್ದೇಶವಲ್ಲ. ತೈತ್ತಿರೀಯಶ್ರುತಿಯ ಬ್ರಹ್ಮವಲ್ಲಿಯಲ್ಲಿ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ' ಇತ್ಯಾದಿಯಾದ ವಾಕ್ಯಗಳು ಶ್ರುತವಾಗಿವೆ. ಆತ್ಮನಿಂದ ಆಕಾಶವು ಹುಟ್ಟಿತು. ಆಕಾಶದಿಂದ ವಾಯುವು ಹುಟ್ಟಿತು ಎಂಬುದು ಇದರ ಅಭಿಪ್ರಾಯ. ಆತ್ಮನಿಂದ ಹುಟ್ಟಿದ ಆಕಾಶವು ಕಾರ್ಯರೂಪವನ್ನು ತಾಳಿದೆ. ಆದರೆ ವಾಯುವಿನ ಹುಟ್ಟುವಿಕೆಗೆ ಕಾರಣವಾದ್ದರಿಂದ, ಕಾರಣಸ್ವರೂಪವನ್ನೂ ಕೂಡ ತಾಳಿದೆ. ಯಾವ ಪದಾರ್ಥವು ಕಾರ್ಯವೂ, ಕಾರಣವೂ ಆಗಿರುತ್ತದೋ, ಅದನ್ನೇ ಅವಾಂತರಕಾರಣವೆಂದು ಕರೆಯುತ್ತಾರೆ. ಪ್ರಕೃತ ಆಕಾಶವು ಆತ್ಮನಿಂದ ಹುಟ್ಟಿ, ವಾಯುವಿಗೆ ಕಾರಣವೂ ಆಗಿರುವುದರಿಂದ ಅವಾಂತರಕಾರಣವೆಂದು ಇದನ್ನು ಕರೆಯಬೇಕು. ಈ ತೈತ್ತಿರೀಯಶ್ರುತಿಯಲ್ಲಿ ಅವಾಂತರ ಕಾರಣತ್ವವು ಆಕಾಶಕ್ಕೆ ನೇರವಾಗಿ ಹೇಳಲ್ಪಡದಿದ್ದರೂ ಅರ್ಥಾತ್ ತಿಳಿಯುತ್ತಿದೆ. ಅರ್ಥಾತ್‌ಸಿದ್ಧವಾದ ಅವಾಂತರ ಕಾರಣತ್ವ ಎಂಬ ಧರ್ಮವೂ ಕೂಡ ಮಹಾವಿಷ್ಣುವಿನಲ್ಲೇ ಇರುತ್ತದೆ. ಈ ಭೂತಾಕಾಶಾದಿಗಳಲ್ಲಿರಲು ಸಾಧ್ಯವಿಲ್ಲ ಎಂಬುದು ಈ ಅಧಿಕರಣದ ಉದ್ದೇಶ.

ಹಿಂದಿನ ಅಧಿಕರಣದಲ್ಲಿ ಒಬ್ಬನೇ ಪರಮಾತ್ಮನಿಗೆ ಆಧಾರಾಧೇಯಭಾವವನ್ನು ಸಮರ್ಥಿಸಲಾಯಿತು. ಕಾಲವು ಯಾವಾಗಲೂ ಇರುತ್ತದೆ ಎಂದು ಶಬ್ದಪ್ರಯೋಗಿಸಿದಾಗ ಕಾಲದಲ್ಲಿಯೇ ಕಾಲವನ್ನು ಎಲ್ಲರೂ ಒಪ್ಪುತ್ತಾರೆ. ಅದರಂತೆ ಒಬ್ಬನೇ ಪರಮಾತ್ಮನು ತನ್ನಲ್ಲಿ ತಾನು ನೆಲಸಬಹುದು. ಆದರೆ ಯಾವುದೇ ಒಂದು ಪದಾರ್ಥ ಕಾರ್ಯವೂ ಹಾಗೂ ಕಾರಣವೂ ಆಗಿರುವುದು ಕಂಡಿರುವುದಿಲ್ಲ. ಯಾವಾಗ ಪರಮಾತ್ಮನು ಜಗತ್ತಿಗೆ ಕಾರಣನೆಂದಾಗುತ್ತಾನೋ, ಅದೇ ಪರಮಾತ್ಮನು ಪುನಃ ಕಾರ್ಯಸ್ವರೂಪವನ್ನು ತಾಳಲು ಸಾಧ್ಯವಿಲ್ಲ. ಹೀಗಿರುವಾಗ ಪರಮಾತ್ಮನಲ್ಲಿ ಅವಾಂತರಕಾರಣತ್ವವೆಂಬ ಧರ್ಮವನ್ನು ಹೇಗೆ ಸಮನ್ವಯ ಮಾಡುತ್ತೀರಿ? ಎಂಬುದಾಗಿ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದ ಮೇಲೆ ಪ್ರತ್ಯುದಾಹರಣ ರೂಪವಾದ ಸಂಗತಿಯು ಈ ಅಧಿಕರಣಕ್ಕಿರುತ್ತದೆಂಬುದನ್ನು ಗಮನಿಸಬೇಕು.

ಒಂದೇ ಪದಾರ್ಥಕ್ಕೆ ಜನ್ಯಜನಕಭಾವವು ಯುಕ್ತವಾಗದ ಕಾರಣ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬೇಕಾಗುತ್ತದೆ. ಆದ್ದರಿಂದ ಆಕಾಶಾದಿಶಬ್ದಗಳು ಅನ್ಯಪರವಾಗುತ್ತದೆಂಬ ಸಮರ್ಥನೆಯು ಪೂರ್ವಪಕ್ಷಕಾರರ ಉದ್ದೇಶ.

ಪರಿಪೂರ್ಣಚಂದ್ರಿಕಾ

ಒಂದೇ ಪದಾರ್ಥದಲ್ಲಿ ಜನ್ಯಜನಕಭಾವವು ಯುಕ್ತವಾಗಬಹುದಾದ್ದರಿಂದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕುಚಿತವಾದ ಅರ್ಥವನ್ನು ಮಾಡಲು ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ 'ಆತ್ಮನಃ ಆಕಾಶಃ' ಇತ್ಯಾದಿ ಶ್ರುತಿಯಲ್ಲಿರುವ ಆಕಾಶಶಬ್ದವು ಅನ್ಯಪರವಾಗುವುದಿಲ್ಲ, ಬ್ರಹ್ಮಪರವೇ ಆಗುತ್ತದೆ.



## ಆಕಾಶಶಬ್ದದಿಂದ ಭೂತಾಕಾಶಾದಿಗಳೇ ಪ್ರತಿಪಾದ್ಯವೆಂದು ಪೂರ್ವಪಕ್ಷ ಮಹಾವಿಷ್ಣುವೇ ಪ್ರತಿಪಾದ್ಯನೆಂದು ಸಿದ್ಧಾಂತ

## तात्पर्यचन्द्रिका

**पूर्वपक्षस्तु । नैत आकाशादिशब्दा ब्रह्मपराः ।**

ಅನುವಾದ - ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ 'ಆತ್ಮನಃ ಆಕಾಶಸ್ಸಂಭೂತಃ' 'ಆಕಾಶದ್ವಾಯುಃ' ಇತ್ಯಾದಿ ವಾಕ್ಯಗಳು ಶ್ರುತವಾಗಿವೆ. ಇಲ್ಲಿರುವ ಆತ್ಮಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾದರೂ ಕೂಡ ಆಕಾಶ, ವಾಯು ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಲಾರ. ಆಯಾ ಭೌತಿಕಪದಾರ್ಥಗಳೇ ಪ್ರತಿಪಾದ್ಯವಾಗುತ್ತವೆ.

**अकार्ये ब्रह्मणि कार्यत्वस्य विरोधात् ।**

ಆತ್ಮಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾದಂತೆ ಆಕಾಶಶಬ್ದದಿಂದಲೂ ಪ್ರತಿಪಾದ್ಯನಾದರೆ, ತನ್ನಿಂದಲೇ ತಾನು ಹುಟ್ಟಿದನು ಎಂದು ಹೇಳಿದಂತಾಗುತ್ತದೆ. ಯಾರಿಂದಲೂ ಹುಟ್ಟದ ಬ್ರಹ್ಮನಲ್ಲಿ ಕಾರ್ಯತ್ವ ಎಂಬ ಹುಟ್ಟುವಿಕೆಯೇ ವಿರುದ್ಧವಾದದ್ದು. ಅಕಾರ್ಯನಲ್ಲಿ ಕಾರ್ಯತ್ವವು ವಿರುದ್ಧವಲ್ಲವೇ?

**स्वकार्यत्वस्य तु सुतरां विरोधात् ।**

ಬ್ರಹ್ಮನು ತನ್ನಿಂದಲೇ ಹುಟ್ಟಬಹುದಲ್ಲವೇ? ಎಂಬ ಪ್ರಶ್ನೆಯೂ ಕೂಡ ಸರಿಯಲ್ಲ. ಏಕೆಂದರೆ ಯಾರಿಂದಲೂ ಹುಟ್ಟದ ಬ್ರಹ್ಮನಲ್ಲಿ ಕಾರ್ಯತ್ವವೇ ವಿರುದ್ಧವಾದ ಮೇಲೆ ಸ್ವಕಾರ್ಯತ್ವವಂತೂ ಸುತರಾಂ ವಿರುದ್ಧವಾಗುತ್ತದೆ. ತನ್ನಿಂದಲೇ ತಾನು ಹುಟ್ಟುತ್ತಾನೆಂಬುದು ಅತ್ಯಂತ ವ್ಯಾಹತವಾಗಿದೆ.

**व्यंग्यव्यञ्जकभावस्याप्येकस्मिन् विरोधात् ।**

ಪ್ರಶ್ನೆ - 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿರುವ ಆತ್ಮಶಬ್ದದಿಂದ ಪ್ರತಿಪಾದ್ಯನಾದ ಪರಮಾತ್ಮನಿಂದ ಆಕಾಶಶಬ್ದಪ್ರತಿಪಾದ್ಯನಾದ ಪರಮಾತ್ಮನು ಅಭಿವ್ಯಕ್ತನಾಗುತ್ತಾನೆ. ಹೀಗೆ ವ್ಯಂಗ್ಯವ್ಯಂಜಕಭಾವವನ್ನು ವಿವಕ್ಷಿಸಿ ಆಕಾಶಾದಿಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನೆಂದು ಹೇಳಬಹುದಲ್ಲವೇ?

ಉತ್ತರ - ಹೀಗೂ ಕೂಡ ಪ್ರಶ್ನಿಸಬಾರದು. ಕಾರ್ಯಕಾರಣಭಾವವು ಹೇಗೆ ಪೌರ್ವಾಪರ್ಯವನ್ನು ಅಪೇಕ್ಷಿಸುತ್ತದೋ, ಅದರಂತೆ ವ್ಯಂಗ್ಯವ್ಯಂಜಕಭಾವವೂ ಕೂಡ ಪೌರ್ವಾಪರ್ಯವನ್ನು ಅಪೇಕ್ಷಿಸುತ್ತದೆ. ಆಕಾಶರೂಪದ ಅಭಿವ್ಯಕ್ತಿಗೆ ಆತ್ಮ ಎಂಬ ರೂಪವು ಅಭಿವ್ಯಂಜಕವಾಗಿದೆ ಎಂದು ಹೇಳಬೇಕು. ಆವಾಗ ತನಗಿಂತ ಮೊದಲು ತಾನೇ ಇದ್ದಾನೆಂದು ಹೇಳಿದಂತಾಯಿತು. ಇದೂ ಸಹ ವ್ಯಾಹತವಾದ್ದರಿಂದ ಕಾರ್ಯಕಾರಣಭಾವವು ಬ್ರಹ್ಮನಲ್ಲಿ ಹೇಗೆ ಕೂಡುವುದಿಲ್ಲವೋ, ಅದರಂತೆ ವ್ಯಂಗ್ಯವ್ಯಂಜಕಭಾವವೂ ಕೂಡ ಬ್ರಹ್ಮನಲ್ಲಿ ಕೂಡುವುದಿಲ್ಲ.

**उक्तबाधकेन च ''नामानि सर्वाणि'' इत्यादेरन्यविषयत्वेन सङ्कोचादिति ।**

ಪ್ರಶ್ನೆ - 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಪ್ರತಿಯೊಂದು ಶಬ್ದಗಳಿಂದಲೂ ಬ್ರಹ್ಮನು ಪ್ರತಿಪಾದ್ಯನೆಂದು ಹೇಳುತ್ತಿರುವಾಗ ಇಲ್ಲಿರುವ ಆಕಾಶಾದಿಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಲ್ಲವೆಂದು ಹೇಗೆ ಹೇಳುತ್ತೀರಿ?

ಉತ್ತರ - ಈಗಾಗಲೇ ಹೇಳಿದಂತೆ ಒಬ್ಬನೇ ವ್ಯಕ್ತಿಯ ಪೌರ್ವಾಪರ್ಯವು ಸುತಾರಾಂ ಬಾರದ ಕಾರಣ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕುಚಿತವಾದ ಅರ್ಥವನ್ನು ಮಾಡಬೇಕು. 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯಗಳಲ್ಲಿರುವ ಆಕಾಶಾದಿಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳಿಂದಷ್ಟೇ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೆಂದು ಅನಿವಾರ್ಯವಾಗಿ ಹೇಳಬೇಕು.

ಆದ್ದರಿಂದ ಆಕಾಶ, ವಾಯು, ಅಗ್ನಿ ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗದಿರುವಾಗ ಎಲ್ಲಾ ಶಬ್ದಗಳು ಅವನಲ್ಲಿ ಸಮನ್ವಯಗೊಳ್ಳುತ್ತವೆಂದು ಹೇಳಿದ್ದು ಹೇಗೆ ಸರಿಯಾಗುತ್ತದೆ. ಇಷ್ಟು ಪೂರ್ವಪಕ್ಷ.

**सिद्धान्तस्तु । आकाशादिशब्दानां ब्रह्मपरत्वे न तावत् साधकान्तरं वाच्यम् ।**

ಸಿದ್ಧಾಂತ ಹೀಗಿದೆ - ಆಕಾಶ, ವಾಯು ಮೊದಲಾದ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ. ಈ ವಿಷಯದಲ್ಲಿ ಪ್ರತ್ಯೇಕವಾದ ಸಾಧಕಪ್ರಮಾಣವನ್ನೇನೂ ನಾವು ಸಮರ್ಥಿಸಬೇಕಾಗಿಲ್ಲ.

**''तल्लिङ्गात्'' इत्यत्रानुव्याख्यानोक्तन्यायेनेशाधीनत्वे सिद्धे 'तदधीनत्वात्' 'ज्ञेयत्वावचनात्' 'चमसवदविशेषात्' इत्यादिभिरेव तत्सिद्धेः ।**

'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದ ಸೂತ್ರದಲ್ಲಿ 'ನಭೋ ದಧಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದತಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ನ್ಯಾಯದಂತೆ ಭೌತಿಕವಾದ ಆಕಾಶವು ಈಶಾಧೀನವಾಗಿದೆ. ಆದ್ದರಿಂದ 'ತದಧೀನತ್ವಾತ್', 'ಜ್ಞೇಯತ್ವಾವಚನಾತ್', 'ಚಮಸವದವಿಶೇಷಾತ್'

ಇವೇ ಮೊದಲಾದ ಸೂತ್ರಗಳಲ್ಲಿ ಹೇಳಿದ ನ್ಯಾಯದಂತೆ ಆಕಾಶಾದಿಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

**नापि कार्यत्वं बाधकम् । द्युभ्वाद्यधिकरणे ब्रह्मण्यपि प्रादुर्भावरूपजनेरुक्तत्वात्।**

ಒಬ್ಬನೇ ವ್ಯಕ್ತಿಯಲ್ಲಿ ಕಾರ್ಯತ್ವ ಹಾಗೂ ಕಾರಣತ್ವಗಳೆರಡೂ ಬಾರದಿರಲು ಕಾರ್ಯತ್ವವು ಬಾಧಕವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ದ್ಯುಭ್ವಾದ್ಯಧಿಕರಣದಲ್ಲಿ 'ಜಾಯಮಾನತ್ವ' 'ಹುಟ್ಟುವಿಕೆಯು' ಬ್ರಹ್ಮನಲ್ಲಿಯೂ ಇರುತ್ತದೆಂದು ಸಮರ್ಥಿಸಿದ್ದೇವೆ. ಪರಮಾತ್ಮನು ಆಯಾ ರೂಪಗಳಿಂದ ಪ್ರಾದುರ್ಭೂತನಾಗುವ ಕಾರಣ ಜಾಯಮಾನತ್ವಾದಿಗಳು ಅವನಲ್ಲಿರುತ್ತವೆಂದು ಸಮರ್ಥಿಸಲಾಗಿದೆ.

**नापि वायुकारणाकाशकारणस्य ब्रह्मणो वायुकारणत्वायोगो बाधकः ।**

ಶ್ರುತಿಯಲ್ಲಿ ವಾಯುವಿಗೆ ಆಕಾಶವು ಕಾರಣವೆಂದು ತಿಳಿಯುತ್ತಿದೆ. ಈಗ ನೀವು ಆಕಾಶಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನೆಂದು ಹೇಳಿದರೆ ವಾಯುವಿಗೆ ಬ್ರಹ್ಮನು ಕಾರಣನೆಂದು ಹೇಳಿದಂತಾಗುತ್ತದೆ. ಆದ್ದರಿಂದ ಬ್ರಹ್ಮನಿಗೆ ವಾಯುಕಾರಣತ್ವವು ಕೂಡುವುದಿಲ್ಲವೆಂಬ ಬಾಧಕವಿರುವ ಕಾರಣ ಆಕಾಶಶಬ್ದಕ್ಕೆ ಬ್ರಹ್ಮನೆಂದು ಹೇಗೆ ಅರ್ಥೈಸುತ್ತೀರಿ ? ಎಂದು ಪ್ರಶ್ನಿಸಬಾರದು.

**''आनुमानिकम्'' इत्यत्रोक्तन्यायेन महतः परस्मात् परस्यापि महतः परत्ववद्वायुकारणकारणस्यापि वायुकारणत्वोपपत्तेः ।**

ಏಕೆಂದರೆ 'ಆನುಮಾನಿಕಮಪಿ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಮಹತ್ತತ್ತ್ವಕ್ಕಿಂತ ಯಾವುದು ಶ್ರೇಷ್ಠವಾಗಿದೆಯೋ, ಅದಕ್ಕಿಂತಲೂ ಶ್ರೇಷ್ಠವಾದ ವಸ್ತುವಿನಲ್ಲಿ ಮಹತ್‌ಪರತ್ವವೂ ಕೂಡ ಯುಕ್ತವಾಗುತ್ತದೆಂದು ಸಿದ್ಧವಾಗಿದೆ. ಅದರಂತೆ ವಾಯುವಿಗೆ ಕಾರಣವಾದ ಪದಾರ್ಥಕ್ಕೆ ಕಾರಣನಾದ ಬ್ರಹ್ಮನಲ್ಲಿ ವಾಯುಕಾರಣತ್ವವೂ ಕೂಡ ಯುಕ್ತವಾಗುತ್ತದೆ.

**नहि यथा स्वपितामहः स्वपितुरेव जनको नतु स्वस्य तथा ब्रह्म आकाशस्यैव हेतुर्नतु वाय्वादेरित्यस्ति, सर्वकारणत्वात् ।**

ಪ್ರಶ್ನೆ - ತನ್ನ ಪಿತಾಮಹನು ತನ್ನ ತಂದೆಗಷ್ಟೇ ಜನಕನಾಗುತ್ತಾನೆ, ತನಗೆ ಜನಕವಾಗುವುದಿಲ್ಲ. ಅದರಂತೆ ಬ್ರಹ್ಮನು ಆಕಾಶಕ್ಕಷ್ಟೇ ಕಾರಣನಾಗುತ್ತಾನೆ. ವಾಯುವಿಗೆ ಕಾರಣನಾಗುವುದಿಲ್ಲವಲ್ಲವೇ?

ಉತ್ತರ - ಈ ಲೌಕಿಕನಿಯಮವು ಬ್ರಹ್ಮನಲ್ಲಿ ಅನ್ವಯವಾಗುವುದಿಲ್ಲ. ಏಕೆಂದರೆ 'ಸ ಇದಂ ಸರ್ವಮಸೃಜತ' ಇತ್ಯಾದಿ ಶ್ರುತಿಗಳು ಹೇಳುವಂತೆ ಸಕಲಪದಾರ್ಥಗಳಿಗೂ ಕಾರಣನಾದ ಬ್ರಹ್ಮನು ಆಕಾಶಕ್ಕೆ ಕಾರಣನಾದಂತೆ ವಾಯುವಿಗೂ ಕೂಡ ಕಾರಣನಾಗುತ್ತಾನೆ.

**नाप्येकस्यैव कार्यकारणभावानुपपत्तिर्बाधिका ।**

ಒಬ್ಬನೇ ಬ್ರಹ್ಮನಲ್ಲಿ ಕಾರ್ಯಕಾರಣಭಾವವನ್ನು ಹೇಳಿದರೆ ಪೌರ್ವಾಪರ್ಯವನ್ನು ಹೇಳಿದಂತಾಗುತ್ತದೆ. ತನಗಿಂತಲೂ ತಾನೇ ಮೊದಲು ಇದ್ದಾನೆಂದು ಒಪ್ಪಿದಂತಾಗುತ್ತದೆ, ಇದು ವ್ಯಾಹತವಲ್ಲವೇ? ಎಂದು ಪ್ರಶ್ನಿಸಬಾರದು.

**आकाशवाय्वादिगतत्वेनाभिव्यक्तभगवद्रूपाद्वाय्वग्न्यादिगतरूपान्तराभिव्यक्त्या व्यंग्यव्यञ्जकभावरूपस्य कार्यकारणभावस्य बहुरूपत्वेनोपपत्तेः ।**

ಏಕೆಂದರೆ ಆತ್ಮನೆಂಬ ಭಗವದ್ರೂಪದಿಂದ ಭೂತಾಕಾಶದಲ್ಲಿರುವ ಆಕಾಶ ಎಂಬ ಭಗವದ್ರೂಪವು ಅಭಿವ್ಯಕ್ತವಾಗುತ್ತದೆ. ಈ ರೂಪದಿಂದ ವಾಯುವಿನಲ್ಲಿರುವ ವಾಯು ಎಂಬ ಭಗವದ್ರೂಪವು ಅಭಿವ್ಯಕ್ತವಾಗುತ್ತದೆ. ಇಂತಹ ವಾಯುರೂಪದಿಂದ ಅಗ್ನಿಯಲ್ಲಿರುವ ಅಗ್ನಿಯೆಂಬ ರೂಪವಿಶೇಷವು ಅಭಿವ್ಯಕ್ತವಾಗುತ್ತದೆ. ಹೀಗೆ ಭಗವದ್ರೂಪಗಳ ಅಭಿವ್ಯಕ್ತಿಯ ದೃಷ್ಟಿಯಿಂದ ಶ್ರುತಿಯು ಹೊರಟಿರುತ್ತದೆ. ಇಂತಹ ವ್ಯಂಗವ್ಯಂಜಕಭಾವರೂಪವಾದ ಕಾರ್ಯಕಾರಣಭಾವವನ್ನು ಅನೇಕರೂಪಗಳನ್ನು ವಿವಕ್ಷಿಸಿ ಕೂಡಿಸಬಹುದು. ಒಂದೇ ರೂಪದಿಂದ ವ್ಯಂಗ್ಯವ್ಯಂಜಕಭಾವವನ್ನು ಹೇಳಿದ್ದಲ್ಲಿ ನೀವು ಹೇಳಿದ ಬಾಧಕವು ಬರುತ್ತಿತ್ತು. ಆದರೆ ಬೇರೆ ಬೇರೆ ರೂಪಗಳಿಗೆ ವ್ಯಂಗ್ಯವ್ಯಂಜಕಭಾವವನ್ನು ಹೇಳುತ್ತಿರುವುದರಿಂದ ವ್ಯಾಹತಿಗೆ ಅವಕಾಶವಿಲ್ಲ. ವಿಶೇಷದ ಬಲದಿಂದ ಪರಮಾತ್ಮನ ರೂಪಗಳಲ್ಲಿ ಬಹುತ್ವವನ್ನು ನಾವು ಸಮರ್ಥಿಸುತ್ತೇವೆ.

**तदुक्तं न्यायविवरणे ''व्यक्त्यपेक्षया कार्यत्वं च'' इति ।**

ಇದನ್ನೇ ನ್ಯಾಯವಿವರಣದಲ್ಲಿ 'ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂ ಚ' ಭಗವದ್ರೂಪಗಳ ಅಭಿವ್ಯಕ್ತಿಯ ದೃಷ್ಟಿಯಿಂದ ಕಾರ್ಯತ್ವವನ್ನು ಶ್ರುತಿ ಹೇಳುತ್ತದೆ ಎಂದು ಹೇಳಿದ್ದಾರೆ.

**अत्र सौत्रश्चशब्दो न केवलमात्मशब्दवाच्यो हरिः । अपि त्वाकाशादिशब्दवाच्यश्चेति टीकायामेव व्याख्यातः ।**

ಸೂತ್ರದಲ್ಲಿ ಚಶಬ್ದವಿದೆ. ಇದರ ಅಭಿಪ್ರಾಯವೇನೆಂದರೆ ಆತ್ಮಶಬ್ದದಿಂದಷ್ಟೇ ಶ್ರೀಹರಿಯು ಪ್ರತಿಪಾದ್ಯನೆಂದಲ್ಲ. ಆಕಾಶಾದಿಶಬ್ದಗಳಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ ಎಂದು. ಹೀಗೆ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**यद्वा न केवलं कार्यत्वेन, कारणत्वेन चेत्यर्थः । एवंच कार्यत्वे सति कारणत्वरूपावान्तरकारणत्वं भाष्योक्तं सूत्रारूढं भवति ।**

ಅಥವಾ ಮತ್ತೊಂದು ರೀತಿಯಲ್ಲಿಯೂ ಇದರ ಅರ್ಥವನ್ನು ತಿಳಿಯಬಹುದು. ಪರಮಾತ್ಮನಲ್ಲಿ ಕೇವಲ ಕಾರ್ಯತ್ವವಷ್ಟೇ ಅಲ್ಲ, ಕಾರಣತ್ವವೂ ಕೂಡ ಇರುತ್ತದೆ. ಯಾವ ಪದಾರ್ಥದಲ್ಲಿ ಕಾರ್ಯತ್ವವಿದ್ದೂ ಕಾರಣತ್ವವೂ ಇರುತ್ತದೋ, ಅದನ್ನು ಅವಾಂತರಕಾರಣವೆಂದು ಹೇಳುತ್ತಾರೆ. ಆದ್ದರಿಂದ ಪರಮಾತ್ಮನು ಮುಖ್ಯಕಾರಣನು ಹೇಗೆ ಆಗಿದ್ದಾನೋ, ಅದರಂತೆ ಅವಾಂತರಕಾರಣನೂ ಕೂಡ ಆಗಿರುತ್ತಾನೆ. ಇಂತಹ ಅವಾಂತರಕಾರಣತ್ವ ಎಂಬ ಧರ್ಮವನ್ನು ಈ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಇದನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಅದನ್ನು ಸೂತ್ರಾರೂಢ ಮಾಡಿದಂತಾಯಿತು.

**सूत्रे यथाव्यपदिष्टशब्दस्त्वन्तर्याम्यधिकरणोक्तन्यायस्मारणार्थमिति टीकायामेवोक्तम् ।**

ಸೂತ್ರದಲ್ಲಿ 'ಯಥಾವ್ಯಪದಿಷ್ಟೋಕ್ತೇಃ' ಎಂದು ಹೇಳಿದ್ದಾರೆ. ಇದರಿಂದ ಅಂತರ್ಯಾಮ್ಯಧಿಕರಣದಲ್ಲಿ ಹೇಳಿದ ನ್ಯಾಯವನ್ನು ಸ್ಮರಣೆಗೆ ತಂದುಕೊಟ್ಟಂತಾಯಿತು. ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯೋ ಆಕಾಶೇ ತಿಷ್ಠನ್' ಇತ್ಯಾದಿಯಾಗಿ ಅಂತರ್ಯಾಮಿತ್ವೇನ ಪರಮಾತ್ಮನು ಹೇಗೆ ಪ್ರತಿಪಾದ್ಯನಾಗಿದ್ದಾನೋ ಅದರಂತೆ ಇಲ್ಲಿಯೂ ಕೂಡ ಅಂತರ್ಯಾಮಿತ್ವೇನ ಪ್ರತಿಪಾದ್ಯನಾಗಿದ್ದಾನೆಂದು ಅಂತರ್ಯಾಮ್ಯಧಿಕರಣದ ನ್ಯಾಯವನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಇದನ್ನು ಟೀಕೆಯಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ.

**प्रकाशः –**

पूर्वपक्षटीकां व्यनक्ति – **नैत इति** ।। देहोत्पादादिरूपोत्पत्तिं सम्भूतपदार्थं मत्वाऽऽह – **अकार्य इति** ।। ''न जायते म्रियते वा'' इत्यादेरिति भावः ।

ವಿವರಣೆ - ಪೂರ್ವಪಕ್ಷ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ನೈತೇ' ಇತ್ಯಾದಿ ವಾಕ್ಯದಿಂದ. 'ಆತ್ಮನಃ ಆಕಾಶಸ್ಸಂಭೂತಃ' ಎಂಬ ಶ್ರುತಿಯಲ್ಲಿರುವ ಸಂಭೂತಪದಕ್ಕೆ 'ಅಭಿವ್ಯಕ್ತಿ' ಎಂಬರ್ಥವನ್ನು ವಿವಕ್ಷಿಸಬಾರದು. ಹೊರತಾಗಿ ದೇಹದಿಂದ ಹುಟ್ಟುವಿಕೆ ಎಂಬರ್ಥವನ್ನು ವಿವಕ್ಷಿಸಿ 'ಅಕಾರ್ಯೇ' ಎಂಬ ವಾಕ್ಯವು ಹೊರಟಿರುತ್ತದೆ. ಪರಮಾತ್ಮನಿಗೆ 'ದೇಹೋತ್ಪತ್ತಿ' 'ಹುಟ್ಟುವಿಕೆಯು' ಇರುವುದಿಲ್ಲವೆಂದು 'ನ ಜಾಯತೇ ಮ್ರಿಯತೇ ವಾ' ಎಂಬ ಗೀತಾವಾಕ್ಯದಿಂದ ತಿಳಿಯುತ್ತಿದೆ. ಆದ್ದರಿಂದ ಹುಟ್ಟೇ ಇಲ್ಲದ ಪರಮಾತ್ಮನಲ್ಲಿ ಸಂಭೂತತ್ವವನ್ನು ಹೇಳಲು ಸಾಧ್ಯವಿಲ್ಲ ಎಂದಭಿಪ್ರಾಯ.

**प्रकाशः** – ननु सम्भूतशब्दस्याभिव्यक्तिरित्यर्थोऽस्तु । ब्रह्मण्यभिव्यक्तिरूपसम्भवश्च द्युभ्वादिनये व्युत्पादित इत्याह – **व्यंग्येति** ।।

ಸಂಭೂತಪದಕ್ಕೆ 'ಅಭಿವ್ಯಕ್ತಿ' ಎಂಬರ್ಥವನ್ನು ವಿವಕ್ಷಿಸಬಹುದು. ಬ್ರಹ್ಮನಲ್ಲಿ ಅಭಿವ್ಯಕ್ತಿರೂಪವಾದ ಸಂಭೂತತ್ವವನ್ನು ಹೇಳಬಹುದೆಂದು ಈಗಾಗಲೇ ದುಭ್ಯಾದ್ಯಧಿಕರಣದ ನ್ಯಾಯದಿಂದ ಸಮರ್ಥಿಸಲಾಗಿದೆ. ಆದ್ದರಿಂದ ಸಂಭೂತತ್ವವು ಯುಕ್ತವಾಗುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಗ್ರಂಥದಲ್ಲಿ 'ವ್ಯಂಗ್ಯವ್ಯಂಜಕ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**ಪ್ರಕಾಶಃ – तस्यापि पौर्वापर्यनिमित्तत्वादेकस्य स्वापेक्षयैव तदयोगादिति भावः।**

ಕಾರ್ಯಕಾರಣಭಾವವು ಹೇಗೆ ಪೌರ್ವಾಪರ್ಯವನ್ನು ಅಪೇಕ್ಷಿಸಿರುತ್ತದೋ, ಅದರಂತೆ ವ್ಯಂಗ್ಯವ್ಯಂಜಕಭಾವವೂ ಕೂಡ ಪೌರ್ವಾಪರ್ಯವನ್ನು ಅಪೇಕ್ಷಿಸಿರುತ್ತದೆ. ಒಬ್ಬನೇ ವ್ಯಕ್ತಿಯಲ್ಲಿ ಇಂತಹ ಪೌರ್ವಾಪರ್ಯವು ಅಸಂಭಾವಿತವಾದ್ದರಿಂದ ಕಾರ್ಯಕಾರಣಭಾವದಂತೆ ವ್ಯಂಗ್ಯವ್ಯಂಜಕಭಾವವೂ ಕೂಡ ಒಬ್ಬನಲ್ಲಿ ಯುಕ್ತವಾಗುವುದಿಲ್ಲ ಎಂಬುದು 'ವ್ಯಂಗ್ಯವ್ಯಂಜಕ' ಇತ್ಯಾದಿ ವಾಕ್ಯದ ಅಭಿಪ್ರಾಯ.

**ಪ್ರಕಾಶಃ – ''न चाकाशादिसम्भवस्य तदधीनत्वेन'' इत्यादि टीकातात्पर्यं पूर्वमेव प्रदर्शितमिति भावः ।**

'ನ ಚಾಕಾಶಾದಿಸಂಭವಸ್ಯ ತದಧೀನತ್ವೇನ' ತದಧೀನತ್ವನ್ಯಾಯದಿಂದ ಆಕಾಶಾದಿಶಬ್ದವಾಚ್ಯತ್ವವನ್ನು ಹೇಳಬಹುದೆಂಬ ಟೀಕಾವಾಕ್ಯದ ಅಭಿಪ್ರಾಯವನ್ನು ಈ ಹಿಂದೆಯೇ ಸ್ಪಷ್ಟಪಡಿಸಿದ್ದಾಗಿದೆ.

**ಪ್ರಕಾಶಃ – अत्र टीकायां सूत्र आकाशादिशब्दवाच्यत्वे साधकविशेषानुक्तिं ''नच वाच्यम्'' इत्यादिना आशङ्क्य ''नामानि सर्वाणि'' इत्यादिना समाहितम् । तद्विवृण्वन् बाधकोद्धारप्रकारं च व्यनक्ति – आकाशेति ।।**

ಪೂರ್ವಪಕ್ಷದ ಟೀಕೆಯಲ್ಲಿ ಹೀಗೆ ಆಕ್ಷೇಪಿಸಿ ಉತ್ತರಿಸಿದ್ದಾರೆ - ಪರಮಾತ್ಮನು ಆಕಾಶಶಬ್ದವಾಚ್ಯ-ನಾಗಿದ್ದಾನೆನ್ನಲು ಯಾವುದೇ ಸಾಧಕವಿಶೇಷವನ್ನು ಹೇಳಿಯೇ ಇಲ್ಲವಲ್ಲ ಎಂಬುದಾಗಿ 'ನಚ ವಾಚ್ಯಮ್' ಇತ್ಯಾದಿ ವಾಕ್ಯದಿಂದ ಆಶಂಕಿಸಿದ್ದಾರೆ. ಅನಂತರ 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಗಳೇ ಸಾಧಕಪ್ರಮಾಣಗಳಾಗಿವೆ ಎಂಬುದಾಗಿ ಸಮಾಧಾನವನ್ನು ನೀಡಿರುತ್ತಾರೆ. ಅದನ್ನು ವಿವರಿಸುವವರಾಗಿ ಬಾಧಕೋದ್ಧಾರಪ್ರಕಾರವನ್ನು 'ಆಕಾಶ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಸಾಧಕವಿಶೇಷವನ್ನು ಹೇಳದಿದ್ದರೂ ಬಾಧಕೋದ್ಧಾರಪ್ರಕಾರವನ್ನು ಟೀಕೆಯಲ್ಲಿ ಹೇಳಿದ್ದಾರೆಂದು ಇದರ ಅಭಿಪ್ರಾಯ.

**ಪ್ರಕಾಶಃ – कारणस्य ब्रह्मणः कार्यत्वं विरुद्धम् ? उत कार्यान्तरं प्रति कारणस्य तज्जन्यकार्यं प्रति कारणत्वं विरुद्धम् ? उत कार्यत्वं कारणत्वमेकस्य विरुद्धम् ? इति त्रेधा विकल्प्य क्रमेण निराह – नापीत्यादिना ।।**

ಸರ್ವಕ್ಕೂ ಕಾರಣನಾದ ಬ್ರಹ್ಮನು ಕಾರ್ಯನಾಗಲು ಸಾಧ್ಯವೇ ಇಲ್ಲ. ಏಕೆಂದರೆ ಯಾವುದಕ್ಕೆ ಕಾರ್ಯ ಎನ್ನುತ್ತೀವೋ, ಅದಕ್ಕೂ ಕೂಡ ಇವನೇ ಕಾರಣನಾಗಿರುವಾಗ ಪುನಃ ಕಾರ್ಯತ್ವವನ್ನು ಹೇಳುವುದು ವಿರುದ್ಧವಾಗುತ್ತದೆ. ಇದನ್ನು ಬಾಧಕವನ್ನುತ್ತೀರೋ, ಅಥವಾ ಆಕಾಶಕ್ಕೆ ಕಾರಣನಾದವನು ಆಕಾಶಜನ್ಯವಾದ

ವಾಯುವಿಗೆ ಕಾರಣನಾಗುತ್ತಾನೆಂದು ಬಾಧಕವೆನ್ನುತ್ತೀರೋ, ಅಥವಾ ತನ್ನನ್ನು ಕುರಿತು ಕಾರ್ಯನಾದ ಮೇಲೆ ಪುನಃ ತನಗೆ ಕಾರಣನಾಗುವುದು ವಿರುದ್ಧವೆಂದು ಹೇಳುತ್ತೀರೋ? ಹೀಗೆ ಮೂರು ಬಗೆಯ ವಿಕಲ್ಪಗಳನ್ನು ಆಶ್ರಯಿಸಿ ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ನಾಪಿ' ಇತ್ಯಾದಿ ವಾಕ್ಯದಿಂದ.

**प्रकाशः** – तृतीये टीकाद्युक्तमेवाह – **आकाशवाय्वादिगतत्वेनेति** ।। ''आकाशाद्यन्तर्गतत्वेन भगवतोऽभिव्यक्त्या'' इत्यादिटीकोक्तेर्मूलमाह – **तदुक्तमिति** ।।

ಮೂರನೆಯ ಪಕ್ಷದ ಟೀಕೆಯಲ್ಲಿ ಹೇಳಿದ ಸಮಾಧಾನವನ್ನೇ ವಿವಕ್ಷಿಸಬೇಕೆಂಬುದನ್ನು 'ಆಕಾಶವಾಯ್ವಾದಿಗತತ್ವೇನ' ಎಂಬುದರಿಂದ ಹೇಳಿರುತ್ತಾರೆ. 'ಆಕಾಶಾದ್ಯಂತರ್ಗತತ್ವೇನ ಭಗವತ ಅಭಿವ್ಯಕ್ತ್ಯಾ' ಆಕಾಶಾದ್ಯಂತರ್ಗತನಾಗಿ ಭಗವಂತನು ಅಭಿವ್ಯಕ್ತನಾಗುವುದರಿಂದ ಕಾರ್ಯಸ್ವರೂಪನಾಗಿದ್ದಾನೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದಕ್ಕೆ ಮೂಲವನ್ನು 'ತದುಕ್ತಮ್' ಎಂಬುದರಿಂದ ತೋರಿಸಿದ್ದಾರೆ.

**प्रकाशः** – कार्यत्वं च व्यक्त्यपेक्षयेति कार्यत्वस्य व्यक्तिरूपगतिसूचकश्चशब्दः । यद्वा चशब्दः कारणत्वं चेति समुच्चयार्थः । स्वाभिव्यक्त्यपेक्षया कार्यत्वमन्याभिव्यक्त्यपेक्षया कारणत्वम्, तद्धेतुत्वादिति भावः ।

'ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂ ಚ' ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದಾರೆ. ಇಲ್ಲಿ 'ಕಾರ್ಯತ್ವಂ ಚ ವ್ಯಕ್ತ್ಯಪೇಕ್ಷಯಾ' ಎಂಬುದಾಗಿ ಅನ್ವಯವನ್ನು ತಿಳಿಯಬೇಕು. 'ಚ'ಶಬ್ದವು 'ವ್ಯಕ್ತಿ' ಎಂಬ ಗತಿಗೆ ಸೂಚಕ-ವಾಗಿದೆಯೆಂದು ತಿಳಿಯಬೇಕು. ಪರಮಾತ್ಮನು ಕಾರ್ಯನಾಗಿದ್ದಾನೆ ಎಂದರೆ ಆಕಾಶಾದ್ಯಂತರ್ಗತರೂಪದಿಂದ ಅಭಿವ್ಯಕ್ತನಾಗುತ್ತಾನೆ ಎಂಬುದನ್ನು ವಿವಕ್ಷಿಸಬೇಕು. ಅಥವಾ ಕಾರ್ಯತ್ವ ಹಾಗೂ ಕಾರಣತ್ವಗಳೆರಡನ್ನು ವ್ಯಕ್ತ್ಯಪೇಕ್ಷೆಯಿಂದ ವಿವಕ್ಷಿಸಬೇಕು. ತಾನೇ ಅಭಿವ್ಯಕ್ತನಾಗುತ್ತಾನಾದ್ದರಿಂದ ಕಾರ್ಯನೆನಿಸುತ್ತಾನೆ. ಮತ್ತೊಂದರ ಅಭಿವ್ಯಕ್ತಿಯ ವಿವಕ್ಷೆಯಿಂದ ಕಾರಣನಾಗುತ್ತಾನೆಂದು ಅಭಿಪ್ರಾಯ.

**प्रकाशः** – तदुक्तं टीकायां ''आकाशाद्यन्तर्गतत्वेन भगवतोऽभिव्यक्त्या वाय्वादिगतस्वरूपाभिव्यक्तिहेतुत्वेन च'' इत्यादि ।।

ಇದನ್ನೇ ಟೀಕೆಯಲ್ಲಿ ''ಆಕಾಶಾದ್ಯಂತರ್ಗತತ್ವೇನ ಭಗವತೋಽಭಿವ್ಯಕ್ತ್ಯಾ ವಾಯ್ವಾದಿಗತಸ್ವರೂಪಾಭಿವ್ಯಕ್ತಿ-ಹೇತುತ್ವೇನ ಚ'' ಆಕಾಶ್ಯಾದ್ಯಂತರ್ಗತತ್ವೇನ ಭಗವಂತನು ಅಭಿವ್ಯಕ್ತನಾಗುವುದರಿಂದ ಕಾರ್ಯನೆಂದು, ವಾಯ್ವಾದಿಗಳಲ್ಲಿರುವ ರೂಪದ ಅಭಿವ್ಯಕ್ತಿಗೆ ಕಾರಣನಾದ್ದರಿಂದ ಕಾರಣಸ್ವರೂಪನೆಂದು ಕರೆಸಿಕೊಳ್ಳುತ್ತಾನೆ ಇತ್ಯಾದಿಯಾಗಿ ಹೇಳಿರುತ್ತಾರೆ.

**प्रकाशः** – स्वयमर्थान्तरमाह – **यद्वेति** ।। **न्यायेति** ।। अविदितत्वादिन्यायेत्यर्थः। यद्वा स्वरूपसत्ताप्रतीतिप्रवृत्तीनामीशाधीनत्वव्युत्पादनरूपन्यायेत्यर्थः । सूत्रार्थष्टीकायां व्यक्तः । विवृतश्च तन्त्रदीपिकायाम् ।

ಸ್ವತಃ ಗ್ರಂಥಕಾರರೇ ಮತ್ತೊಂದು ಅರ್ಥವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. 'ನ್ಯಾಯ' ಎಂದರೆ ಅಂತರ್ಯಾಮ್ಯಧಿಕರಣದಲ್ಲಿ ಹೇಳಲ್ಪಟ್ಟ ಅವಿದಿತತ್ವನ್ಯಾಯವನ್ನು ವಿವಕ್ಷಿಸಬೇಕು. ಅಧಿಕರಣದ ನ್ಯಾಯವನ್ನು ವಿವಕ್ಷಿಸಬಾರದು. ಅಥವಾ ಯಾವುದೇ ವಸ್ತುವಿನ ಸತ್ತಾ, ಪ್ರತೀತಿ, ಪ್ರವೃತ್ತಿಗಳು ಈಶಾಧೀನವಾಗಿರುವುದರಿಂದ ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬ ನ್ಯಾಯವನ್ನು ಅಂತರ್ಯಾಮ್ಯಧಿಕರಣದಲ್ಲಿ ಹೇಳಿರುತ್ತಾರೆ. ಅದನ್ನು ಇಲ್ಲಿ ವಿವಕ್ಷಿಸಬಹುದು. ಸೂತ್ರದ ಅರ್ಥವು ಟೀಕೆಯಲ್ಲಿ ಸ್ಪಷ್ಟವಾಗಿಯೇ ಇದೆ. ಅದನ್ನೇ ನಾವು ತಂತ್ರದೀಪಿಕೆಯಲ್ಲಿ ವಿವರಿಸಿದ್ದೇವೆ. ಹೆಚ್ಚಿನ ವಿಚಾರವನ್ನು ಅಲ್ಲಿ ತಿಳಿದುಕೊಳ್ಳಬೇಕು.

**प्रकाशः** – अत्राह कश्चित् रामानुजः । पूर्वाधिकरणे रूपविशिष्टस्यैवाधाराधेयभावोक्त्या तथैव कार्यकारणभावस्यापि सम्भवात् पूर्वपक्षो न युक्तः ।

ರಾಮಾನುಜನೊಬ್ಬನು ನಮ್ಮ ಅಧಿಕರಣಶರೀರವನ್ನು ಹೀಗೆ ವಿಮರ್ಶಿಸಿದ್ದಾನೆ. ಹಿಂದಿನ 'ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ರೂಪವಿಶೇಷದಿಂದ ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವು ಉಪಪನ್ನವಾಗುತ್ತದೆಂದು ಸಮರ್ಥಿಸಿದ್ದೀರಿ. ಅಂತಹ ರೂಪವಿಶೇಷಗಳನ್ನೇ ವಿವಕ್ಷಿಸಿ ಕಾರ್ಯಕಾರಣಭಾವವನ್ನೂ ಕೂಡ ಹೇಳಬಹುದು. ಒಂದು ರೂಪವಿಶೇಷದಿಂದ ಕಾರ್ಯನಾಗಿದ್ದರೆ, ಮತ್ತೊಂದು ರೂಪವಿಶೇಷದಿಂದ ಕಾರಣನಾಗಿದ್ದಾನೆಂದು ಹೇಳಲು ಬರುವಾಗ ಪುನಃ ಪೂರ್ವಪಕ್ಷದ ಉದಯವಾಗಲು ಸಾಧ್ಯವೇ ಇಲ್ಲ.

**प्रकाशः** – सिद्धान्तोऽप्ययुक्तः । ''य आकाशे तिष्ठन्'' इत्यादौ रूपविशेषाप्रतीतेस्सूत्रे 'यथाव्यपदिष्ट' इति व्यर्थम् । ''य आकाशे तिष्ठन्'' इत्यादौ सर्वनियन्तृत्वादिप्रतीत्याऽब्रह्मत्वशङ्कानुदयादिति ।

ಸಿದ್ಧಾಂತವೂ ಕೂಡ ಸಮಂಜಸವಲ್ಲ. ಏಕೆಂದರೆ 'ಯ ಆಕಾಶೇ ತಿಷ್ಠನ್' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ರೂಪವಿಶೇಷದ ಪ್ರತೀತಿಯು ಬರುತ್ತಿಲ್ಲ. ಆದ್ದರಿಂದ ಸೂತ್ರದಲ್ಲಿ 'ಯಥಾವ್ಯಪದಿಷ್ಟ' ಎಂಬ ಮಾತು ವ್ಯರ್ಥವಾಗಿದೆ. ಮತ್ತು 'ಯ ಆಕಾಶೇ ತಿಷ್ಠನ್' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಬ್ರಹ್ಮನು ಆಕಾಶಾದಿಗಳಲ್ಲ ಎಂಬ ಆಶಂಕೆಯೇ ಬರುವುದಿಲ್ಲ. 'ಯ ಆಕಾಶೇ ತಿಷ್ಠನ್' ಇತ್ಯಾದಿ ವಾಕ್ಯಗಳಲ್ಲಿ ಸರ್ವನಿಯಂತೃತ್ವ ಮೊದಲಾದ ಬ್ರಹ್ಮನ ಅಸಾಧಾರಣ ಧರ್ಮಗಳು ಶ್ರುತವಾದ್ದರಿಂದ ಆಕಾಶಾದಿ ಶಬ್ದಗಳು ಬ್ರಹ್ಮನನ್ನು ಹೇಳಲಾರವೆಂಬ ಶಂಕೆಯೇ ಹುಟ್ಟುವುದಿಲ್ಲ. ಆದರೆ 'ಆತ್ಮನಃ ಆಕಾಶಸ್ಸಂಭೂತಃ' ಇತ್ಯಾದಿ ಸ್ಥಳದಲ್ಲಿ ಅಂತಹ ಯಾವುದೇ ಬ್ರಹ್ಮನ ಅಸಾಧಾರಣಧರ್ಮಗಳು ಶ್ರುತವಾಗದ ಕಾರಣ ಬ್ರಹ್ಮನು ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯನಾಗಲಾರ. ಹೀಗಿರುವಾಗ 'ಯಥಾವ್ಯಪದಿಷ್ಟೋಕ್ತೇಃ' ಎಂಬುದಾಗಿ ಸೂತ್ರದಲ್ಲಿ 'ಯ ಆಕಾಶೇ ತಿಷ್ಠನ್' ಇತ್ಯಾದಿ ವಾಕ್ಯಗಳನ್ನು ದೃಷ್ಟಾಂತವನ್ನಾಗಿ ವಿವಕ್ಷಿಸಿದ್ದು ಹೇಗೆ ಸಮಂಜಸವಾಗುತ್ತದೆ.

**प्रकाशः** – तदपेशलम् । कालस्सदास्तीत्यादौ दर्शनादित्यादिना मूलग्रन्थ एव पूर्ववैषम्यस्योक्तत्वेन त्वया तथा क्वचिदेकस्य दर्शनमुदाहृत्यैव पूर्वसाम्यस्य वाच्यत्वेन

तदनुदाहृत्य ग्रन्थोक्तवैषम्यमज्ञात्वा दोषोत्कीर्तनस्यायुक्तत्वात् । अदर्शनादिति वदन्तं प्रति न्यायेनोपपादनीयत्वात्तस्य । अत एव टीकायां ''अवान्तरकारणत्वमुपपन्नम्'' इत्युपपत्तिसिद्धत्वमुक्तम् ।

ರಾಮಾನುಜರ ಈ ಆಕ್ಷೇಪವು ಅತ್ಯಂತ ತುಚ್ಛವಾಗಿದೆ. ಏಕೆಂದರೆ ಪ್ರಾರಂಭದಲ್ಲಿ ಗ್ರಂಥಕಾರರು ಹೇಳಿದಂತೆ 'ಕಾಲಃ ಸದಾ ಅಸ್ತಿ' ಕಾಲವು ಯಾವಾಗಲೂ ಇರುತ್ತದೆ, ಇವೇ ಮೊದಲಾದ ದೃಷ್ಟಾಂತಗಳು ಕಂಡಿರುವುದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ಆಧಾರಾಧೇಯಭಾವವು ಒಬ್ಬನೇ ಪರಮಾತ್ಮನಲ್ಲಿ ಯುಕ್ತವಾಗಬಹುದು. ಆದರೆ ಈ ಅಧಿಕರಣದಲ್ಲಿ ಸಮರ್ಥಿಸುತ್ತಿರುವ ಒಬ್ಬನೇ ವ್ಯಕ್ತಿಗೆ ಕಾರ್ಯಕಾರಣಭಾವವು ಸರ್ವಥಾ ಯುಕ್ತವಾಗುವುದಿಲ್ಲ. ಏಕೆಂದರೆ ಒಬ್ಬನೇ ವ್ಯಕ್ತಿಯಲ್ಲಿ ಕಾರ್ಯಕಾರಣಭಾವವಿರುವುದು ಲೋಕದಲ್ಲಿ ಎಲ್ಲಿಯೂ ಕೂಡ ಕಂಡಿರುವುದಿಲ್ಲ. ಹೀಗೆ ಹಿಂದಿನ ಅಧಿಕರಣದಿಂದ ಪ್ರತ್ಯುದಾಹರಣರೂಪವಾದ ಸಂಗತಿಯನ್ನು ಗ್ರಂಥಕಾರರು ತೋರಿಸಿದ್ದಾರೆ. ಇದರಿಂದಲೇ ಸ್ಪಷ್ಟವಾಗಿ ರೂಪವಿಶೇಷದಿಂದ ಕಾರ್ಯಕಾರಣಭಾವವನ್ನು ಕೂಡಿಸಲಾಗದೆಂದು ತಿಳಿಯುತ್ತದೆ. ಹಿಂದಿನ ಅಧಿಕರಣದಂತೆ ಈ ಅಧಿಕರಣದಲ್ಲಿ ಉತ್ತರಿಸಲು ಸಾಧ್ಯವಿಲ್ಲ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಾಮ್ಯವನ್ನು ಹೇಳಲು ಹೊರಟಿರುವ ನೀನು ಮೊದಲು ಒಂದೇ ಪದಾರ್ಥದಲ್ಲಿ ಕಾರ್ಯಕಾರಣಭಾವವೆರಡೂ ಇರುತ್ತದೆಂಬುದಕ್ಕೆ ದೃಷ್ಟಾಂತವನ್ನು ಮೊದಲು ತೋರಿಸಬೇಕು. ಯಾವರೀತಿಯಾಗಿ ಕಾಲವು ಯಾವಾಗಲೂ ಇರುತ್ತದೆ ಎಂಬುದಾಗಿ ತನ್ನಲ್ಲೇ ತಾನು ಇರುವುದು ಕಾಲದಲ್ಲಿ ಕಂಡಿದೆಯೋ, ಅದರಂತೆ ಒಂದೇ ಪದಾರ್ಥವು ಕಾರ್ಯವೂ ಕಾರಣವೂ ಆಗಿರುತ್ತದೆನ್ನಲು ದೃಷ್ಟಾಂತವನ್ನು ನೀನು ತೋರಿಸಬೇಕು. ಆದರೆ ನೀನು ಅಂತಹ ದೃಷ್ಟಾಂತವನ್ನು ನೀಡುತ್ತಿಲ್ಲ. ಅಷ್ಟೇ ಅಲ್ಲದೇ ಗ್ರಂಥಕಾರರು ಪ್ರತ್ಯುದಾಹರಣರೂಪವಾದ ಸಂಗತಿಯನ್ನು ಸ್ಪಷ್ಟವಾಗಿ ತೋರಿಸಿದ್ದಾರೆ. ಅದನ್ನು ತಿಳಿಯದೇ ದೋಷವನ್ನು ಹೇಳುವುದೂ ಕೂಡ ಅಯುಕ್ತವಾಗಿವೆ. ಆದ್ದರಿಂದ ಒಬ್ಬನೇ ವ್ಯಕ್ತಿಯಲ್ಲಿ ರೂಪವಿಶೇಷದಿಂದ ಆಧಾರಾಧೇಯಭಾವವು ಯುಕ್ತವಾಗಬಹುದು. ಆದರೆ ಕಾರ್ಯಕಾರಣಭಾವ ಮಾತ್ರ ಯುಕ್ತವಾಗುವುದಿಲ್ಲ ಎಂಬುದಾಗಿ ಯಾವ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಾನೋ, ಅಂತಹವನನ್ನು ಕುರಿತು ನಾವು ನ್ಯಾಯದಿಂದ ಕಾರ್ಯಕಾರಣಭಾವವನ್ನು ಒಬ್ಬನೇ ವ್ಯಕ್ತಿಯಲ್ಲಿ ಸಮರ್ಥಿಸುತ್ತೇವೆ. ಆದ್ದರಿಂದಲೇ ಟೀಕೆಯಲ್ಲಿ 'ಅವಾಂತರಕಾರಣತ್ವಮ್ ಉಪಪನ್ನಮ್' ಎಂಬುದಾಗಿ ಉಪಪತ್ತಿಯಿಂದ ಅವಾಂತರಕಾರಣತ್ವವನ್ನು ಸಮರ್ಥಿಸಿದ್ದಾರೆ. ಹಿಂದಿನ ಅಧಿಕರಣದಲ್ಲಿ ದೃಷ್ಟಾಂತದ ಮೂಲಕ ಆಧಾರಾಧೇಯಭಾವವನ್ನು ಒಬ್ಬನೇ ಪರಮಾತ್ಮನಲ್ಲಿ ಸಮರ್ಥಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ದೃಷ್ಟಾಂತವನ್ನು ಹೇಳುತ್ತಿಲ್ಲ ಹೊರತಾಗಿ, ನ್ಯಾಯದಿಂದ ಕಾರ್ಯಕಾರಣಭಾವವನ್ನು ಒಬ್ಬನೇ ಪರಮಾತ್ಮನಲ್ಲಿ ಸಮರ್ಥಿಸುತ್ತಿದ್ದೇವೆ ಎಂಬುದನ್ನು ಗಮನಿಸಬೇಕು.

**प्रकाशः –** यदप्याकाशे तिष्ठन्नित्यनेन रूपविशेषाप्रतीतेरिति तदज्ञानमूलम् । ''शरीररूपकविन्यस्तगृहीतेः'' इत्यत्रोक्तन्यायेनाकाशगतस्य तत्स्वभावादिनियामकस्य तच्छब्दवाच्यस्य व्यक्त्यात्मना तन्मात्रनिष्ठस्य रूपविशेषत्वात् । अन्यथा ''आकाशे तिष्ठन् वायौ तिष्ठन् तेजसि तिष्ठन्'' इति विशिष्योक्तेर्वैयर्थ्यात् ।

ಇದರಂತೆ 'ಆಕಾಶೇ ತಿಷ್ಠನ್' ಎಂಬುದರಿಂದ ಯಾವುದೇ ರೂಪವಿಶೇಷದ ಪ್ರತೀತಿಯು ಬರುತ್ತಿಲ್ಲವೆಂದು ಇದೇ ರಾಮಾನುಜರು ಆಕ್ಷೇಪಿಸಿದ್ದಾರೆ. ಇದೂ ಕೂಡ ಅಜ್ಞಾನಮೂಲಕವಾಗಿದೆ. ಏಕೆಂದರೆ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಸೂತ್ರದ ನ್ಯಾಯದಂತೆ ಪರಮಾತ್ಮನು ಆಯಾ ಪದಾರ್ಥಗಳ ಸ್ವಭಾವಗಳಿಗೆ ನಿಯಾಮಕನಾಗಿ ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗಿ, ಆಯಾ ರೂಪದಿಂದ ಅಭಿವ್ಯಕ್ತನಾಗಿ ಬೇರೆ ಎಲ್ಲಿಯೂ ಕೂಡ ಇಲ್ಲದೇ ಅದೇ ವಸ್ತುವಿನಲ್ಲೇ ನೆಲೆಸಿರುತ್ತಾನೆ. ಹೀಗೆ ರೂಪವಿಶೇಷದ ಪ್ರತೀತಿಯು 'ಆಕಾಶೇ ತಿಷ್ಠನ್' ಎಂಬ ವಾಕ್ಯದಿಂದ ಬರುತ್ತದೆ. ಹೀಗೊಪ್ಪದಿದ್ದರೆ 'ಆಕಾಶೇ ತಿಷ್ಠನ್ ವಾಯೌ ತಿಷ್ಠನ್ ತೇಜಸಿ ತಿಷ್ಠನ್' ಎಂಬುದಾಗಿ ಪ್ರತ್ಯೇಕಪ್ರತ್ಯೇಕವಾಗಿ ಪ್ರತಿಯೊಂದು ಪದಾರ್ಥಗಳಲ್ಲಿಯೂ ಇರುತ್ತಾನೆಂದು ಹೇಳಿದ್ದೇ ತಪ್ಪಾಗುತ್ತಿತ್ತು.

**ಪ್ರಕಾಶः** – अत एवाकाशादितत्तत्स्वभावनियामकत्वस्य प्रागुक्तस्य स्फुरणाय यथा व्यपदिष्टेत्यस्य सार्थक्यम् ।

ಹೀಗೆ ಆಕಾಶಾದಿ ಪದಾರ್ಥಗಳ ಸ್ವಭಾವಗಳಿಗೆಲ್ಲಾ ನಿಯಾಮಕನಾಗಿ ಪ್ರತ್ಯೇಕ-ಪ್ರತ್ಯೇಕರೂಪಗಳಿಂದ ನೆಲೆಸಿದ್ದಾನೆಂದು ತಿಳಿಯಬೇಕು. ಆದ್ದರಿಂದ ಒಬ್ಬನೇ ಪರಮಾತ್ಮನಲ್ಲಿ ಕಾರ್ಯಕಾರಣಭಾವವು ಯುಕ್ತವಾಗುತ್ತದೆಂದು ಇಲ್ಲಿ ಸಮರ್ಥಿಸಲಾಗಿದೆ. ಹಿಂದಿನ ಅಂತರ್ಯಾಮ್ಯಧಿಕರಣದಲ್ಲಿ ಈ ವಿಷಯವನ್ನು ಸಮರ್ಥಿಸಲಾಗಿದೆ. ಆದ್ದರಿಂದಲೇ ಸೂತ್ರದಲ್ಲಿ 'ಯಥಾ ವ್ಯಪದಿಷ್ಟೋಕ್ತೇಃ' ಎಂದು ಹೇಳಿದ್ದು ಸಾರ್ಥಕವಾಗಿದೆ. ಅಂದರೆ ಆಕಾಶಾದಿ ಪ್ರತಿಯೊಂದು ಪದಾರ್ಥಗಳಲ್ಲಿಯೂ ಆಯಾ ಸ್ವಭಾವಗಳಿಗೆ ನಿಯಾಮಕನಾಗಿ ಪರಮಾತ್ಮನು ಇರುತ್ತಾನೆಂದು ಅಂತರ್ಯಾಮ್ಯಧಿಕರಣದಲ್ಲಿ ಹೇಳಿದ ನ್ಯಾಯದಂತೆ ಇಲ್ಲಿಯೂ ಕೂಡ ತಿಳಿದುಕೊಂಡು ಕಾರ್ಯಕಾರಣಭಾವವನ್ನು ಉಪಪಾದನೆ ಮಾಡಬೇಕು ಎಂಬುದು ಸೂತ್ರದ ಅಭಿಪ್ರಾಯ.

**ಪ್ರಕಾಶः** – अथवा कुतोऽत्र सम्भूतवाक्ये श्रुताकाशादौ हरिरुपेय इति शङ्कायामाकाशादिषूक्तेरित्यवश्यं वाच्ये सति आकाशादौ ब्रह्मणोऽवस्थानमेव मास्त्विति वदतोऽन्तर्यामिवाक्योक्तिमात्रेणापरितुष्यतस्तत्रत्यन्यायस्मारणस्यावश्यकतया 'यथाव्यपदिष्ट' इत्यस्य सार्थक्यात् । न चापरितोषो निर्बीजः । शरीरत्वादिश्रवणेन तत्सम्भवात् ।

'ಯಥಾವ್ಯಪದಿಷ್ಟೋಕ್ತೇಃ' ಎಂಬ ಸೂತ್ರದ ಭಾಗಕ್ಕೆ ಮತ್ತೊಂದು ಬಗೆಯಲ್ಲಿ ಸಮಾಧಾನವನ್ನು ಹೇಳಬಹುದು - 'ಆತ್ಮನಃ ಆಕಾಶಃ ಸಂಭೂತಃ' ಎಂಬ ವಾಕ್ಯದಲ್ಲಿರುವ ಆಕಾಶಶಬ್ದದಿಂದ ಆಕಾಶಾದ್ಯಂತರ್ಗತನಾದ ಪರಮಾತ್ಮನನ್ನು ನಾವು ತೆಗೆದುಕೊಳ್ಳುತ್ತೇವೆ. ಆವಾಗ ಪೂರ್ವಪಕ್ಷಿಯು ಆಕಾಶಾದಿಗಳಲ್ಲಿ ಪರಮಾತ್ಮನು ಇದ್ದಾನೆಂದು ಹೇಗೆ ಒಪ್ಪುತ್ತೀರಿ? ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಶ್ರುತಿಗಳಲ್ಲಿ ಸ್ಪಷ್ಟವಾಗಿ ಆಕಾಶಾದಿಗಳಲ್ಲಿ ಪರಮಾತ್ಮನು ಇದ್ದಾನೆಂದು ನಾವು ಉತ್ತರಿಸಬೇಕು. ಆದರೆ ಪುನಃ ಪೂರ್ವಪಕ್ಷಿಯು ಆಕಾಶಾದಿಗಳಲ್ಲಿ ಪರಮಾತ್ಮನು ಏಕೆ ಇರಬೇಕು? ಎಂದು ಪ್ರಶ್ನಿಸಿದಾಗ ಅಂತರ್ಯಾಮ್ಯಧಿಕರಣದ ನ್ಯಾಯವನ್ನು ನಾವು ನೆನಪಿಸಬೇಕು. ಪೃಥಿವ್ಯಾದ್ಯವಿದಿತತ್ವ ಮೊದಲಾದ ಲಿಂಗಗಳೆಂಬ ಪ್ರಮಾಣಗಳ

ಆಧಾರದಿಂದ ಪರಮಾತ್ಮನೇ ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಮತ್ತು ಆಯಾ ಪದಾರ್ಥಗಳ ಸ್ವಭಾವಗಳನ್ನು ನಿಯಮನ ಮಾಡುತ್ತಾನಾದ್ದರಿಂದಲೂ ಅವನೇ ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಆಕಾಶಾದಿಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನೆನ್ನಲು ಪೃಥಿವ್ಯಾದ್ಯವಿದಿತತ್ವ ಮೊದಲಾದ ಲಿಂಗಗಳೆಂಬ ಪ್ರಮಾಣವನ್ನು ಆಯಾ ಸ್ವಭಾವಗಳ ನಿಯಮನ ಮಾಡುವಿಕೆ ಎಂಬ ಪ್ರಯೋಜನವನ್ನು ಹೇಳಿದಾಗ ಪೂರ್ವಪಕ್ಷಿಯ ಆಕ್ಷೇಪವು ದುರ್ಬಲವಾಗುತ್ತದೆ. ಆದಕ್ಕಾಗಿ ಸೂತ್ರದಲ್ಲಿ 'ಯಥಾ ವ್ಯಪದಿಷ್ಟೋಕ್ತೇಃ' ಎಂದು ಹೇಳಿದ್ದು ಅತ್ಯಂತ ಸಾರ್ಥಕವಾಗಿದೆ.

ಪೂರ್ವಪಕ್ಷಿಗೆ ಅಂತರ್ಯಾಮ್ಯಧಿಕರಣದ ವಾಕ್ಯವನ್ನು ಹೇಳಿದ ಮೇಲೆ ಏಕೆ ಸಂತೋಷವಾಗುವುದಿಲ್ಲ. ಎಂದರೆ ಆ ಅಧಿಕರಣದ ಪೂರ್ವಪಕ್ಷದಲ್ಲಿ ಹೇಳಿದಂತೆ 'ಅಶರೀರಃ ಪ್ರಜ್ಞಾತ್ಮಾ' ಎಂಬುದಾಗಿ ಶರೀರರಹಿತನಾಗಿ ಶ್ರುತನಾದ ಪರಮಾತ್ಮನಿಗೆ ಆಕಾಶಾದಿಗಳು ಶರೀರವೆಂದು ಹೇಳಲು ಹೇಗೆ ಸಾಧ್ಯ? ಪ್ರಕೃತಿಯನ್ನೋ, ಅಥವಾ ಜೀವನನ್ನೋ ತೆಗೆದುಕೊಂಡಾಗ, ಪ್ರಕೃತಿ ಪ್ರತಿಯೊಂದು ಪದಾರ್ಥಗಳಿಗೂ ಕಾರಣವಾಗಿರುವುದರಿಂದ ಅದರ ಕಾರ್ಯವೇ ಶರೀರವೆನಿಸಿಕೊಳ್ಳುತ್ತದೆ. ಇನ್ನು ಜೀವನನ್ನು ತೆಗೆದುಕೊಂಡಾಗ ಆಕಾಶಾದಿಗಳ ಅಭಿಮಾನಿಗಳಾದ ಜೀವರಿಗೆ ಆಕಾಶಾದಿಗಳು ಶರೀರವಾಗುತ್ತವೆ. ಹೀಗೆ ಪೂರ್ವಪಕ್ಷಿಗೆ ಸಂಶಯವು ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ನ್ಯಾಯವನ್ನು ಸಮರ್ಥಿಸಲು 'ಯಥಾ ವ್ಯಪದಿಷ್ಟೋಕ್ತೇಃ' ಎಂದು ಹೇಳಲೇಬೇಕು.

**प्रकाशः – किञ्च पूर्वनयेष्विन्द्रियार्थादिनियन्तृरूपाणां प्राणादिनियन्तृरूपाणामत्र चाकाशादिनियन्तृरूपाणामुक्तं कुतस्तन्नियामकतया तत्रावस्थानमिति शङ्कायामन्तर्यामिनये सर्वसत्तादेरीशाधीनत्वोक्त्या तत्र तत्रावस्थानं हरेस्तत्र सिद्धमिति वक्तुं तत्पूर्वपक्षन्यायादिना तत्रापि विवदमानं प्रत्यविदितत्वादिब्रह्मलिङ्ग-स्मारणस्यावश्यकत्वाच्च ।**

ಮತ್ತು ಹಿಂದಿನ ಅಧಿಕರಣಗಳಲ್ಲಿ 'ಇಂದ್ರಿಯೇಭ್ಯಃ ಪರಾಹ್ಯರ್ಥಾಃ' ಇತ್ಯಾದಿ ವಾಕ್ಯಗಳಲ್ಲಿರುವ ಇಂದ್ರಿಯಾದಿ ಪದಾರ್ಥಗಳಿಗೆ ಭಗವಂತನು ನಿಯಾಮಕರೂಪದಿಂದ ಆಯಾಶಬ್ದಗಳಿಂದ ಪ್ರತಿಪಾದ್ಯನಾಗಿ ನೆಲೆಸಿರುತ್ತಾನೆ ಎಂದು ತಿಳಿಯುತ್ತದೆ. ಮತ್ತು 'ಯಸ್ಮಿನ್ ಪಂಚ ಪಂಚ ಜನಾಃ' ಎಂಬಲ್ಲಿ ಪಂಚ ಜನ ಶಬ್ದದಿಂದಲೂ ಆಯಾ ಪ್ರಾಣಾದಿಗಳ ನಿಯಾಮಕ ಭಗವದ್ರೂಪವನ್ನು ತೆಗೆದುಕೊಳ್ಳಬೇಕು. ಪ್ರಕೃತ ಈ ಅಧಿಕರಣದಲ್ಲಿ ಆಕಾಶಾದಿಗಳಿಗೆ ನಿಯಾಮಕವಾದ ಭಗವದ್ರೂಪವನ್ನು ತೆಗೆದುಕೊಳ್ಳಬೇಕು. ಹೀಗೆ ಆಯಾ ವಸ್ತುಗಳಲ್ಲಿ ಭಗವಂತನು ನಿಯಾಮಕರೂಪದಿಂದ ಇರುತ್ತಾನೆಂದು ಹೇಗೆ ಸಮರ್ಥಿಸುತ್ತೀರಿ? ಎಂದು ಪೂರ್ವಪಕ್ಷಿಯು ಆಕ್ಷೇಪ ಮಾಡಿದರೆ ಈಗಾಗಲೇ ಅಂತರ್ಯಾಮ್ಯಧಿಕರಣದಲ್ಲಿ ಹೇಳಿದಂತೆ ಪ್ರತಿಯೊಂದು ಪದಾರ್ಥಗಳ ಇರುವಿಕೆಯು ಭಗವದಧೀನವಾದ್ದರಿಂದ ಎಲ್ಲೆಡೆಯೂ ಅವನು ನೆಲೆಸಿರುತ್ತಾನೆ. ಆದ್ದರಿಂದ ಆಯಾ ಶಬ್ದಗಳಿಂದಲೂ ಪ್ರತಿಪಾದ್ಯನಾಗಿರುತ್ತಾನೆ ಎಂದು ಇಲ್ಲಿ ಸಮರ್ಥಿಸಲಾಗಿದೆ. ಆದಕ್ಕಾಗಿ ಹಿಂದಿನ ಅಧಿಕರಣದ ಪೂರ್ವಪಕ್ಷನ್ಯಾಯದಲ್ಲಿ ಯಾರು ಸಂಶಯ ಪಡುತ್ತಾನೋ, ಅಂತಹವನನ್ನು ಕುರಿತು ಅವಿದಿತತ್ವ ಮೊದಲಾದ ಬ್ರಹ್ಮನ ಲಿಂಗವನ್ನು ಸ್ಮರಣೆ ತಂದುಕೊಡಲು 'ಯಥಾ ವ್ಯಪದಿಷ್ಟೋಕ್ತೇಃ' ಎಂದು ಹೇಳಿದ್ದು ಸಾರ್ಥಕವಾಗಿದೆ.

**प्रकाशः –** किं चैकस्य लोके पौर्वापर्यस्यादर्शनेऽपि हरावविदितत्वाद्युक्तयभिमता चिन्त्यवैभवत्वेनोपपन्नत्वादिति वक्तुं तस्य सार्थक्याच्च । तथा च वक्ष्यति भगवान् भाष्यकारः "न स्थानतोऽपि" इत्यत्र तृतीये "अभेदेऽपि भेदव्यपदेशः स्थानभेदादैश्वर्ययोगाच्च युज्यत" इति ।

ಮತ್ತು ಒಂದೇ ಪದಾರ್ಥದಲ್ಲಿ ಪೌರ್ವಾಪರ್ಯವಿರುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ಆದರೆ ಎಲ್ಲಾ ಶಬ್ದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನೆಂದು ಹೇಳುವುದಾದರೆ ಇಂತಹ ಪೌರ್ವಾಪರ್ಯವನ್ನು ಪರಮಾತ್ಮನಲ್ಲಿ ಒಪ್ಪಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅವಿದಿತತ್ವ' ಎಂಬ ಅಚಿಂತ್ಯವೈಭವವೂ ಪರಮಾತ್ಮನಲ್ಲಿರುವುದರಿಂದ ಇಂತಹ ಪೌರ್ವಾಪರ್ಯವು ಅವನಲ್ಲಿ ಮಾತ್ರ ಯುಕ್ತವಾಗುತ್ತದೆ. ಇದನ್ನು ತಿಳಿಸುವುದಕ್ಕಾಗಿಯೂ 'ಯಥಾವ್ಯಪದಿಷ್ಟೋಕ್ತೇಃ' ಎಂಬ ಪದವು ಸಾರ್ಥಕವಾಗಿದೆ. ಆದ್ದರಿಂದ ಭಾಷ್ಯಕಾರರು 'ನ ಸ್ಥಾನತೋಽಪಿ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ 'ಅಭೇದೇಽಪಿ ಭೇದವ್ಯಪದೇಶಃ ಸ್ಥಾನಭೇದಾದೈಶ್ವರ್ಯಯೋಗಾಚ್ಚ ಯುಜ್ಯತೇ' ಎಂದು ಹೇಳಿರುತ್ತಾರೆ. ಪರಮಾತ್ಮನ ಎಲ್ಲಾ ರೂಪಗಳಿಗೂ ಅಭೇದವಿದ್ದರೂ ಭೇದವ್ಯಪದೇಶವು ವಿಶೇಷದ ಬಲದಿಂದ ಮತ್ತು ಅಚಿಂತ್ಯಾದ್ಭುತಶಕ್ತಿಯಿಂದ ಸಮಂಜಸವಾಗುತ್ತದೆ ಎಂದು ಹೇಳಿರುತ್ತಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – कारणत्वेन ।। उक्तन्यायेनेति ।।** अन्यस्वभावस्यापि भगवदधीनत्वन्यायेनेत्यर्थः । ननु स्वपितामहस्य स्वपितृत्वाभाववद्वायुकारणकारणाकाशस्य वायुकारणत्वाभावः किं न स्यादित्यत आह **– आकाशवाय्वादिगतत्वेनेति ।।** अत्राकाशगतत्वेनाभिव्यक्तभगवद्रूपाद्वायुगतरूपान्तराभिव्यक्तिः वायुगतत्वेनाभिव्यक्तरूपान्तरादग्निगतरूपान्तराभिव्यक्तिरित्यर्थः । भाष्योक्तावान्तरकारणत्वस्य सूत्रारूढत्वसिद्ध्यर्थं सौत्रचशब्दस्य व्याख्यानं कर्तुं टीकोक्तमनुवदति ।। **चशब्द इति ।।**




ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ 'ಆತ್ಮನಃ ಆಕಾಶ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ' ಇತ್ಯಾದಿಯಾದ ವಾಕ್ಯಗಳು ಶ್ರುತವಾಗಿವೆ. ಆತ್ಮನಿಂದ ಆಕಾಶವು, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ಹೀಗೆ ಸೃಷ್ಟಿಯ ಕ್ರಮವನ್ನು ಹೇಳಲಾಗಿದೆ. ಇಲ್ಲಿರುವ ಆತ್ಮಶಬ್ದದಿಂದ ವಿಷ್ಣು ಪ್ರತಿಪಾದ್ಯನೆಂಬುದರಲ್ಲಿ ವಿವಾದವಿಲ್ಲ. ಇಂತಹ ವಿಷ್ಣುವಿನಿಂದ ಆಕಾಶವು ಹುಟ್ಟುತ್ತಿದೆಯೆಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ವಿಷ್ಣುವೇ ಪುನಃ ಆಕಾಶಶಬ್ದದಿಂದ ಪ್ರತಿಪಾದ್ಯನಾಗಲಾರನು. ಒಂದು ವೇಳೆ

ಮಹಾವಿಷ್ಣುವೇ ಪ್ರತಿಪಾದ್ಯನಾದರೆ, ತನ್ನಿಂದಲೇ ತಾನು ಹುಟ್ಟಿದನೆಂದು ಶ್ರುತಿ ಹೇಳಿದಂತಾಗುತ್ತದೆ. ತನ್ನಿಂದಲೇ ತಾನು ಹುಟ್ಟಬೇಕಾದರೆ ತನಗಿಂತ ತಾನು ಮೊದಲು ಇದ್ದಾನೆಂದು ಒಪ್ಪಬೇಕು. ಭಗವದ್ರೂಪದ ಅಭಿವ್ಯಕ್ತಿಯ ದೃಷ್ಟಿಯಿಂದ ಹೇಳಿದರೂ ಇಂತಹ ಪೌರ್ವಾಪರ್ಯವನ್ನು ಒಬ್ಬನೇ ವ್ಯಕ್ತಿಯಲ್ಲಿ ಹೇಳುವುದು ಅನಿವಾರ್ಯ. ಆದ್ದರಿಂದ ಆಕಾಶಾದಿಶಬ್ದಗಳಿಂದ ಭೌತಿಕಪದಾರ್ಥಗಳೇ ಪ್ರತಿಪಾದ್ಯವಾಗುತ್ತವೆ. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಇಂತಹ ಶಬ್ದಗಳನ್ನು ಬಿಟ್ಟು, ಬೇರೆ ಶಬ್ದಗಳಿಂದ ಪ್ರತಿಪಾದ್ಯನೆಂದು ಸಂಕುಚಿತವಾದ ಅರ್ಥವನ್ನು ಹೇಳಬೇಕು. ಆದ್ದರಿಂದ ಸಮನ್ವಯಸೂತ್ರದಲ್ಲಿ ಮಾಡಿದ ಸಕಲಶಬ್ದಸಮನ್ವಯದ ಪ್ರತಿಜ್ಞೆಯು ಅಸಾಧುವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತ - ಇಲ್ಲಿರುವ ಆಕಾಶಶಬ್ದದಿಂದಲೂ ಮಹಾವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನು. ಆತ್ಮರೂಪಿಯಾದ ವಿಷ್ಣುವಿನಿಂದ ಆಕಾಶರೂಪಿಯಾದ ವಿಷ್ಣುವು ಅಭಿವ್ಯಕ್ತನಾಗುತ್ತಾನೆ. ಭೂತಾಕಾಶಾದಿಗಳಿಗೆ ನಿಯಾಮಕವಾದ ಭಗವದ್ರೂಪಕ್ಕೆ 'ಆಕಾಶ' ಎಂದು ಹೆಸರು. ಇಂತಹ ಭಗವದ್ರೂಪದ ಅಭಿವ್ಯಕ್ತಿಯನ್ನು ಹೇಳುವುದೇ ಶ್ರುತಿಯ ಮುಖ್ಯ ಉದ್ದೇಶ. ಇದರಂತೆ ಆಕಾಶ ಎಂಬ ವಿಷ್ಣುವಿನ ರೂಪದಿಂದ ವಾಯುವಿಗೆ ನಿಯಾಮಕವಾದ ವಾಯು ಎಂಬ ವಿಷ್ಣುವಿನ ರೂಪವು ಅಭಿವ್ಯಕ್ತವಾಗುತ್ತದೆ. ಆದ್ದರಿಂದ ಆತ್ಮ ಎಂಬ ರೂಪದಿಂದ ವಿಷ್ಣು ಮುಖ್ಯಕಾರಣನಾಗಿದ್ದಾನೆ. ಆಕಾಶ ಮೊದಲಾದ ರೂಪದಿಂದ ಕಾರ್ಯಸ್ವರೂಪನಾಗಿದ್ದಾನೆ. ಮತ್ತು ಮುಂದಿನ ವಾಯುವಿಗೆ ಕಾರಣಸ್ವರೂಪನಾಗಿದ್ದಾನೆ ಹೀಗೆ ಒಬ್ಬನೇ ಪರಮಾತ್ಮನು ಕಾರ್ಯನೂ, ಕಾರಣನೂ ಆಗಿದ್ದಾನೆಂದು ತಿಳಿಯಬೇಕು. ಒಬ್ಬನೇ ಮಹಾವಿಷ್ಣುವಿನಲ್ಲಿ ಇಂತಹ ಕಾರ್ಯತ್ವ, ಕಾರಣತ್ವಗಳೆರಡೂ ಅಚಿಂತ್ಯಾದ್ಭುತಶಕ್ತಿಯಿಂದ ಕೂಡುತ್ತವೆ. ತನಗಿಂತ ತಾನೇ ಮೊದಲು ಇರುತ್ತಾನೆಂದು ಹೇಳಿದರೆ ವ್ಯಾಹತವಾಗುವುದೇ ಇಲ್ಲ. ಯಾವ ಪದಾರ್ಥದಲ್ಲಿ ಕಾರ್ಯತ್ವ, ಕಾರಣತ್ವಗಳೆರಡೂ ಇರುತ್ತವೋ ಅದನ್ನು ಅವಾಂತರಕಾರಣವೆಂದು ಕರೆಯುತ್ತಾರೆ. ಆಕಾಶವೆಂಬ ಭಗವದ್ರೂಪವು ಆತ್ಮರೂಪದ ಕಾರ್ಯವಾಗಿದೆ. ವಾಯುರೂಪಕ್ಕೆ ಕಾರಣವಾಗಿದೆ. ಆದ್ದರಿಂದ ಅವಾಂತರಕಾರಣತ್ವ ಎಂಬ ಧರ್ಮವೂ ವಿಷ್ಣುವಿನಲ್ಲಿ ಹೇಳಿದಂತಾಗುತ್ತದೆ. ಇಂತಹ ಧರ್ಮದ ಸಮನ್ವಯವೇ ಈ ಅಧಿಕರಣದ ಉದ್ದೇಶ. ಸೂತ್ರದಲ್ಲಿರುವ 'ಚ'ಶಬ್ದವು ವಿಷ್ಣು ಪ್ರಧಾನಕಾರಣನಷ್ಟೇ ಅಲ್ಲ, ಅವಾಂತರಕಾರಣನೂ ಆಗಿದ್ದಾನೆಂದು ತಿಳಿಸುತ್ತಿದೆ.

ಭೂತಾಕಾಶದಲ್ಲಿ ವಿಷ್ಣುವಿನ ಆಕಾಶ ಎಂಬ ರೂಪವಿಶೇಷವಿದೆ ಎನ್ನಲು ಆಧಾರವನ್ನು 'ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದ ಭಾಗದಿಂದ ಹೇಳಿದ್ದಾರೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯ ಆಕಾಶೇ ತಿಷ್ಠನ್ ಆಕಾಶಸ್ಯ ಅಂತರಃ ಯಮ್ ಆಕಾಶೋ ನ ವೇದ ಯಸ್ಯ ಆಕಾಶಃ ಶರೀರಮ್ ಯ ಆಕಾಶಮಂತರೋ ಯಮಯತಿ ಸ ತೇ ಆತ್ಮಾ ಅಂತರ್ಯಾಮ್ಯಮೃತಃ' ಹೀಗೆ ಆಕಾಶಾದಿಗಳಲ್ಲಿ ನಿಯಾಮಕವಾಗಿ ಭಗವದ್ರೂಪವಿದೆ ಎಂದು ಹೇಳಲಾಗಿದೆ. ಈ ಬೃಹದಾರಣ್ಯಕೋಪನಿಷತ್ತಿನಲ್ಲಿ ಪರಮಾತ್ಮನೇ ಅಂತರ್ಯಾಮಿಯಾಗಿ ವಿವಕ್ಷಿತನಾಗಿದ್ದಾನೆನ್ನಲು ಐತರೇಯ ಆರಣ್ಯಕದಲ್ಲಿ 'ಸ ಯೋತೋಽಶ್ರುತಃ ಎಂದು ವಿಷ್ಣು ಅಜ್ಞೇಯನಾಗಿದ್ದಾನೆಂದು ಹೇಳಲಾಗಿದೆ. ಅಂತಹ ಅಜ್ಞೇಯತ್ವವನ್ನೇ ಇಲ್ಲಿಯೂ ಕೂಡ 'ಯಂ ಆಕಾಶೋ ನ ವೇದ' ಎಂದು ಹೇಳಲಾಗಿದೆ. ಆದ್ದರಿಂದ ಬೃಹದಾರಣ್ಯಕೋಪನಿಷತ್ತು ನಿಯಾಮಕವಾದ ರೂಪವನ್ನೇ ಹೇಳುತ್ತಿದೆಯೆಂದು ನಿರ್ಣಯವಾಗುತ್ತದೆ. ಅದರಂತೆ ಪ್ರಕೃತದಲ್ಲಿಯೂ 'ಆತ್ಮನಃ ಆಕಾಶಸ್ಸಂಭೂತಃ' ಇತ್ಯಾದಿ ವಾಕ್ಯಗಳಲ್ಲಿ ಅಂತರ್ಯಾಮಿಯಾದ ವಿಷ್ಣುವೇ ಆಕಾಶಾದಿ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಇಷ್ಟು 'ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದ ಭಾಗದ ಅಭಿಪ್ರಾಯ.

● ● ● ● ●

## ಆಕಾಶಾಧಿಕರಣ (೧-೪-೪)

## ಅದ್ವೈತಿಗಳ ಅಧಿಕರಣ ವಿಮರ್ಶೆ

### तात्पर्यचन्द्रिका

**अन्येतु । वेदान्तेषु कचिदाकाशादिका सृष्टिरुच्यते ''आत्मन आकाशः सम्भूतः '' इति । कचित्तेजआदिका ''तत्तेजोसृजत'' इति । तथाच वेदान्तानां विरोध इति प्राप्ते**

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಉಪನಿಷತ್ತುಗಳಲ್ಲಿ ಕೆಲವೆಡೆ ಆಕಾಶವೇ ಮೊದಲಾದ ಸೃಷ್ಟಿಯನ್ನು ಹೇಳಲಾಗಿದೆ. 'ಆತ್ಮನ ಆಕಾಶಃ ಸಂಭೂತಃ' ಆತ್ಮನಿಂದ ಮೊದಲು ಆಕಾಶ ಹುಟ್ಟಿತು ಇತ್ಯಾದಿಯಾಗಿ. ಕೆಲವೆಡೆ ತೇಜಸ್ಸೇ ಮೊದಲಾದ ಸೃಷ್ಟಿಯನ್ನು ಹೇಳಲಾಗಿದೆ. 'ತತ್ತೇಜೋಸೃಜತ' ಬ್ರಹ್ಮನಿಂದ ಮೊದಲು ತೇಜಸ್ಸು ಹುಟ್ಟಿತು ಎಂಬುದಾಗಿ ಹೇಳಲಾಗಿದೆ. ಆದ್ದರಿಂದ ವೇದಾಂತಗಳಲ್ಲಿ ಪರಸ್ಪರ ವಿರೋಧ ಬರುತ್ತದೆ.

**कार्येष्वाकाशादिष्वेव सृष्टिक्रमादिद्वारकं विगानम् । कारणत्वे तु न विगानम्। कुतः । यथा व्यपदिष्टोक्तेः । यथा ह्येकस्मिन् वेदान्ते चेतनः कारणत्वेन व्यपदिष्टः ''सोकामयत बहुःस्याम्'' इति तथैव ''तदैक्षत तत्तेजोऽसृजत'' इति वेदान्तान्तरेष्वप्युक्त इति सिद्धान्तः ।**

ಕಾರ್ಯಸ್ವರೂಪವಾದ ಆಕಾಶ, ತೇಜಸ್ಸು ಇವುಗಳ ಸೃಷ್ಟಿಕ್ರಮದಲ್ಲಿ ಪರಸ್ಪರ ವಿರೋಧವಿದೆ. ಕಾರಣಸ್ವರೂಪನಾದ ಬ್ರಹ್ಮನ ವಿಷಯದಲ್ಲಿ ಯಾವುದೇ ವಿರೋಧವಿರುವುದಿಲ್ಲ. ಸೃಷ್ಟಿಯು ಆಕಾಶದಿಂದ ಪ್ರಾರಂಭವಾಯಿತೆಂದು ಕೆಲವೆಡೆ ಹೇಳಿರಬಹುದು. ತೇಜಸ್ಸಿನಿಂದ ಪ್ರಾರಂಭವಾಯಿತೆಂದು ಕೆಲವೆಡೆ ಹೇಳಿರಬಹುದು. ಆದರೆ ಎಲ್ಲಾ ಬಗೆಯ ಸೃಷ್ಟಿಗೂ ಬ್ರಹ್ಮನೇ ಕಾರಣನಾಗಿದ್ದಾನೆಂಬ ವಿಷಯದಲ್ಲಿ ಯಾವುದೇ ವಿರೋಧವಿರುವುದಿಲ್ಲ. ಏಕೆಂದರೆ 'ಯಥಾ ವ್ಯಪದಿಷ್ಟೋಕ್ತೇಃ' - ವೇದಾಂತಗಳಲ್ಲಿ ಚೇತನನಾದ ಬ್ರಹ್ಮನೇ ಕಾರಣನಾಗಿದ್ದಾನೆಂದು ಒಂದೇ ರೀತಿಯಲ್ಲಿ ಹೇಳಲಾಗಿದೆ. 'ಸೋಕಾಮಯತ ಬಹುಃಸ್ಯಾಮ್' ಎಂಬುದಾಗಿ ಒಂದು ವೇದಭಾಗದಲ್ಲಿ ಹೇಗೆ ಹೇಳಲಾಗಿದೆಯೋ, ಅದರಂತೆ ಮತ್ತೊಂದು ವೇದಭಾಗದಲ್ಲಿ 'ತದೈಕ್ಷತ ಬಹುಃಸ್ಯಾಮ್ ಪ್ರಜಾಯೇಯ ತತ್ತೇಜೋऽಸೃಜತ' ಎಂಬುದಾಗಿ ಹೇಳಲಾಗಿದೆ. ಆದ್ದರಿಂದ ಬ್ರಹ್ಮನೇ ಜಗತ್ಕಾರಣನೆಂಬ ವಿಷಯದಲ್ಲಿ ಯಾವ ವಿವಾದವೂ ಇರುವುದಿಲ್ಲ. ಇಷ್ಟು ಸಿದ್ಧಾಂತ.

**एवञ्च सूत्रे कारणत्वेनेत्येतद्विच्छिद्य सप्तम्यन्तत्वेन अविच्छिद्य तृतीयान्तत्वेन च व्याख्येयमित्याहुः ।**

ಆದ್ದರಿಂದ 'ಕಾರಣತ್ವೇನ ಚ ಆಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ 'ಕಾರಣತ್ವೇನ' ಎಂಬ ಪದವನ್ನು 'ಕಾರಣತ್ವೇ-ನ' ಎಂಬುದಾಗಿ ಮತ್ತು 'ಕಾರಣತ್ವೇನ'

ಎಂಬುದಾಗಿಯೂ ಪದಚ್ಛೇದವನ್ನು ಮಾಡಿಕೊಂಡು ಅರ್ಥೈಸಿಕೊಳ್ಳಬೇಕು. 'ಕಾರಣತ್ವೇ ನ' ಎಂದು ಪದಚ್ಛೇದ ಮಾಡಿದಾಗ 'ಚ' ಶಬ್ದಕ್ಕೆ 'ತು' ಎಂದರ್ಥ. ಆಕಾಶಾದಿಗಳ ಕಾರಣದ ವಿಷಯದಲ್ಲಿ ವಿಪ್ರತಿಪತ್ತಿಯಿರುವುದಿಲ್ಲ. ಏಕೆಂದರೆ ಕಾರಣತ್ವೇನ 'ಯಥಾವ್ಯಪದಿಷ್ಟೋಕ್ತೇಃ' ಒಂದು ವೇದಭಾಗದಲ್ಲಿ ಕಾರಣಸ್ವರೂಪವನ್ನು ಹೇಳಿದಂತೆಯೇ, ಮತ್ತೊಂದು ವೇದಭಾಗದಲ್ಲಿಯೂ ಹೇಳಲಾಗಿದೆ. ಇಷ್ಟು ಸೂತ್ರಾರ್ಥ.

**तन्न । सौत्रचशब्दे तुशब्दार्थत्वस्य कारणत्वेनेत्यस्य विच्छेदाविच्छेदाभ्यामुभयपरत्वस्य च क्लिष्टत्वात् । आकाशादिष्वित्यस्यान्वयार्थं सृष्टिक्रमादिद्वारकविगानशब्दस्याप्यध्याहार्यत्वाच्च ।**

ಅದ್ವೈತಿಗಳ ಈ ಸೂತ್ರಾರ್ಥವು ಅಸಾಧುವಾಗಿದೆ. ಏಕೆಂದರೆ ಸೂತ್ರದಲ್ಲಿರುವ 'ಚ' ಶಬ್ದಕ್ಕೆ 'ತು' ಎಂಬ ಶಬ್ದದ ಅರ್ಥವನ್ನು ಹೇಳಬೇಕು. ಮತ್ತು 'ಕಾರಣತ್ವೇನ' ಎಂಬ ಪದವನ್ನು ಒಮ್ಮೆ ವಿಭಾಗ ಮಾಡಿಕೊಂಡು, ಮತ್ತೊಮ್ಮೆ ವಿಭಾಗ ಮಾಡದೇ ಎರಡೂ ಅರ್ಥವನ್ನು ಒಂದೇ ಪದಕ್ಕೆ ಹೇಳುವಂತದ್ದು, ಬಹಳ ಕ್ಲಿಷ್ಟಕರವಾಗಿದೆ. ಅಷ್ಟೇ ಅಲ್ಲದೇ 'ಆಕಾಶಾದಿಷು' ಎಂಬ ಪದಕ್ಕೆ ಅನ್ವಯವನ್ನು ತೋರಿಸಿಕೊಡಲು 'ಸೃಷ್ಟಿಕ್ರಮದ ಮೂಲಕ ವಿರೋಧವಿದೆ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ.

**अध्यायसङ्गतेः पादसङ्गतेरप्यभावतः ।**
**पूर्वपक्षानुत्थितेश्च सिद्धान्तस्याप्ययोगतः ।। १ ।।**

ಅದ್ವೈತಿಗಳ ಅಧಿಕರಣಶರೀರ ಅಸಾಧುವಾಗಿದೆ. ಏಕೆಂದರೆ

ಅಧ್ಯಾಯಸಂಗತೇಃ ಪಾದಸಂಗತೇರಪ್ಯಭಾವತಃ ।
ಪೂರ್ವಪಕ್ಷಾನುತ್ಥಿತೇಶ್ಚ ಸಿದ್ಧಾಂತಸ್ಯಾಪ್ಯಯೋಗತಃ ॥೧ ॥

ಈ ಅಧಿಕರಣಕ್ಕೆ ಅಧ್ಯಾಯಸಂಗತಿಯಿರುವುದಿಲ್ಲ. ಪಾದಸಂಗತಿಯೂ ಇರುವುದಿಲ್ಲ. ಪೂರ್ವಪಕ್ಷವೇ ಹುಟ್ಟುವುದಿಲ್ಲ. ಸಿದ್ಧಾಂತವೂ ಅಯುಕ್ತವಾಗಿದೆ.

**विरोधनिरासो हि द्वितीय एव सङ्गतः ।**

ಶ್ರುತಿಗಳ ಪರಸ್ಪರವಿರೋಧವನ್ನು ಈ ಅಧಿಕರಣದಲ್ಲಿ ನಿರಾಸ ಮಾಡುತ್ತಿದ್ದೀರಿ. ಆದರೆ ಎರಡನೆಯ ಅಧ್ಯಾಯದಲ್ಲೇ ಇದು ಸಂಗತವಾಗುತ್ತದೆ. ಮೊದಲನೆಯ ಸಮನ್ವಯಾಧ್ಯಾಯದಲ್ಲಿ ಈ ಅಧಿಕರಣವು ಅಸಂಗತವಾಗಿದೆ.

**ननु तत्र वेदानां मानान्तराविरोधो व्युत्पाद्यः । अत्र तु परस्परम्**

ಆಕ್ಷೇಪ - ದ್ವಿತೀಯಾಧ್ಯಾಯದಲ್ಲಿ ಬೇರೆ ಪ್ರಮಾಣಗಳ ವಿರೋಧಪರಿಹಾರವನ್ನಷ್ಟೇ ಮಾಡಲಾಗಿದೆ. ಈ ಅಧ್ಯಾಯದಲ್ಲಿ ಕೆಲವೆಡೆ ಶ್ರುತಿಗಳ ಪರಸ್ಪರವಿರೋಧವನ್ನು ಮಾಡಲಾಗಿದೆ. ಶ್ರುತಿಗಳಿಗಿರುವ ಪರಸ್ಪರ ವಿರೋಧದ ಪರಿಹಾರವನ್ನು ಮಾಡುತ್ತಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಹೇಗೆ ಸೇರುತ್ತದೆ ?

**इति चेन्न । अविरोधे ह्यवान्तरभेदस्तस्मिन्नध्याये पादादिभेदे हेतुर्न तु तस्माद्बहिर्भावे । अन्यथा समन्वयादिभेदाः द्वितीयादौ व्युत्पाद्याः स्युः ।**

ಸಮಾಧಾನ - ಇದು ಸರಿಯಲ್ಲ. ಏಕೆಂದರೆ ವಿರೋಧವಿಲ್ಲ ಎಂಬ ವಿಷಯದಲ್ಲೇ ಶ್ರುತಿಗಳ ಪರಸ್ಪರ ವಿರೋಧ ಪರಿಹಾರವು ಒಂದು ಅವಾಂತರ ಭೇದವಾಗಿದೆ. ಇಂತಹ ಅವಾಂತರಭೇದದಿಂದ ಎರಡನೆಯ ಅಧ್ಯಾಯದಲ್ಲಿ ಪಾದಭೇದಕ್ಕೆ ಇದು ಕಾರಣವಾಗುತ್ತದೆ. ಎರಡನೆಯ ಅಧ್ಯಾಯಕ್ಕಿಂತ ಬಹಿರ್ಭೂತವಾದ ಸಂಗತಿಯನ್ನು ಹೊಂದುವುದಿಲ್ಲ. ಹೀಗೊಪ್ಪದೇ ಇಂತಹ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡುವ ಮೂಲಕ ಸಮನ್ವಯಕ್ಕೆ ಈ ಅಧಿಕರಣವು ಪೂರಕವಾಗುತ್ತದೆಂದು ಭಾವಿಸುವುದಾದರೆ ಸಮನ್ವಯದಲ್ಲೇ ಅನೇಕ ಪ್ರಭೇದವಿದೆಯೆಂದು ನೀವೇ ಹೇಳುತ್ತೀರಿ. ಸ್ಪಷ್ಟ ಬ್ರಹ್ಮಲಿಂಗ ಸಮನ್ವಯವನ್ನು, ಅಸ್ಪಷ್ಟ ಬ್ರಹ್ಮಲಿಂಗ ಸಮನ್ವಯವನ್ನು ಬೇರೆ ಬೇರೆ ಪಾದಗಳಲ್ಲಿ ಮಾಡಿದ್ದೀರಿ. ಅವುಗಳನ್ನೂ ಕೂಡ ಎರಡನೆಯ ಅಧ್ಯಾಯದಲ್ಲೋ, ಮೂರನೆಯ ಅಧ್ಯಾಯದಲ್ಲೋ ಹೇಳಬೇಕಾಗುತ್ತದೆ.

**किञ्च द्वितीयेऽपि ''न वियदश्रुतेः'' इत्यादिपादद्वयं वेदान्तानां परस्पराविरोधपरमिति तेऽपि मतम् ।**

ಮತ್ತು ಎರಡನೆಯ ಅಧ್ಯಾಯದಲ್ಲಿ 'ನ ವಿಯದಶ್ರುತೇಃ' ಎಂಬ ಸೂತ್ರದಿಂದ ಪ್ರಾರಂಭವಾಗುವ ಎರಡು ಪಾದಗಳು ವೇದಾಂತಗಳಲ್ಲಿರುವ ಪರಸ್ಪರ ವಿರೋಧಗಳನ್ನು ಪರಿಹಾರ ಮಾಡಲು ಹೊರಟಿರುತ್ತದೆಂದು ಅದ್ವೈತಿಗಳೇ ಒಪ್ಪಿರುತ್ತಾರೆ.

**ननु मानान्तराविरोध एव द्वितीये व्युत्पाद्यः । परस्पराविरोधस्तु प्रासङ्गिकः । विप्रतिषेधात् परपक्षाणामप्रामाण्य उक्ते तर्हि वेदान्तानामपि विप्रतिषेधात्तदिति शङ्कायां तन्निरासात्**

ಎರಡನೆಯ ಅಧ್ಯಾಯದಲ್ಲಿ ಪ್ರಮಾಣಾಂತರದ ವಿರೋಧವನ್ನಷ್ಟೇ ಪರಿಹರಿಸಲಾಗಿದೆ. ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ಮಾಡುವಂತಹ ಪರಸ್ಪರ ವಿರೋಧ ಪರಿಹಾರವು ಕೇವಲ ಪ್ರಾಸಂಗಿಕವಾಗಿ ಪ್ರಸಕ್ತವಾಗಿವೆ. ವಿಪ್ರತಿಷೇಧವಿರುವುದರಿಂದ ಅನ್ಯಪಕ್ಷಗಳು ಪ್ರಮಾಣವಾಗಿವೆಯೆಂದು ಎರಡು ಪಾದದಲ್ಲಿ ಸಮರ್ಥಿಸಿದ ಮೇಲೆ ಅಂತಹ ವಿಪ್ರತಿಷೇಧವು ಪರಸ್ಪರ ವಿರೋಧವು ವೇದಾಂತಗಳಲ್ಲಿಯೂ ಸಮಾನವಾಗಿದೆ. ಆದ್ದರಿಂದ ಸಮಯಗಳಂತೆ ವೇದಾಂತಗಳೂ ಕೂಡ

ಅಪ್ರಮಾಣವಾಗಬೇಕಲ್ಲವೇ? ಎಂಬ ಶಂಕೆಯು ಪ್ರಾಪ್ತವಾದರೆ ಮುಂದಿನ ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ಅದನ್ನು ಪರಿಹರಿಸಿದ್ದೇವೆ.

**इति चेन्न । पादद्वयव्युत्पाद्यत्वादविरोधत्वोपहितत्वाच्च साक्षात्सङ्गतिसम्भवे प्रासङ्गिकत्वायोगात् । अन्यथा वैपरीत्यापातात् । समं हि मानान्तर विरोधपरस्परविरोधयोरप्रामाण्यादिपर्यन्तत्वम् ।**

ಸಮಾಧಾನ - ಇದು ತಪ್ಪು. ಎರಡು ಪಾದಗಳಲ್ಲಿ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸುತ್ತಿದ್ದೀರಿ. ಮತ್ತು 'ಅವಿರೋಧತ್ವ' ಎಂಬ ಎರಡನೆಯ ಅಧ್ಯಾಯದ ಅವಚ್ಛೇದಕಧರ್ಮವು ಶ್ರುತಿಗಳ ಪರಸ್ಪರ ವಿರೋಧದಲ್ಲಿಯೂ ಇರುತ್ತದೆ. ಈ ಎರಡು ಕಾರಣಗಳಿಂದ ನೇರವಾಗಿಯೇ ಸಂಗತಿಯನ್ನು ಪಾದದ್ವಯಗಳಿಗೆ ಹೇಳಲು ಬರುವಾಗ ಪ್ರಾಸಂಗಿಕವೆಂದು ಹೇಳುವುದು ಅಯುಕ್ತವಾಗಿದೆ. ಹೀಗೊಪ್ಪದಿದ್ದರೆ ಶ್ರುತಿಗಳ ಪರಸ್ಪರ ವಿರೋಧವೇ ಎರಡನೆಯ ಅಧ್ಯಾಯದ ಮುಖ್ಯಉದ್ದೇಶ; ಸಮಯವಿರೋಧವು ಪ್ರಾಸಂಗಿಕವಾಗಿದೆಯೆಂದು ವಿಪರೀತವಾಗಿ ನಾವು ಆಕ್ಷೇಪ ಮಾಡಿದರೆ ನಿಮ್ಮಿಂದ ಉತ್ತರಿಸಲಾಗದು. ಏಕೆಂದರೆ ಮಾನಾಂತರವಿರೋಧವು ಹೇಗೆ ಅಪ್ರಾಮಾಣ್ಯದಲ್ಲೇ ಪರ್ಯವಸಾನವಾಗುತ್ತದೋ, ಅದರಂತೆ ಶ್ರುತಿಗಳ ಪರಸ್ಪರ ವಿರೋಧವೂ ಕೂಡ ಅಪ್ರಾಮಾಣ್ಯದಲ್ಲೇ ಪರ್ಯವಸಾನವಾಗುತ್ತದೆ. ಹೀಗೆ ಅಪ್ರಮಾಣ್ಯಪರ್ಯವಸಾಯಿತ್ವವು ಎರಡೂ ಕಡೆ ಸಮಾನವಾದ್ದರಿಂದ ಪರಸ್ಪರ ವಿರೋಧವನ್ನು ಪ್ರಾಸಂಗಿಕವೆಂದು ಹೇಳಲಾಗದು.

**किं चायमप्यविरोधः प्रसङ्गात् तत्रैवोच्यताम् । तस्मान्नाध्यायसङ्गतिः ।**

ಅಷ್ಟೇ ಅಲ್ಲದೇ ಈ ಅಧಿಕರಣದಲ್ಲಿ ಪ್ರಾಸಂಗಿಕವಾಗಿ ಯಾವ ಪರಸ್ಪರವಿರೋಧವನ್ನು ಪರಿಹರಿಸುತ್ತಿದ್ದೀರೋ ಇದನ್ನೂ ಕೂಡ ಪ್ರಾಸಂಗಿಕವಾಗಿ ಮೂರು ಅಥವಾ ನಾಲ್ಕನೆಯ ಪಾದದಲ್ಲಿಯೇ ಹೇಳಬಹುದಲ್ಲವೇ? ಆದ್ದರಿಂದ ಯಾವುದೇ ಕಾರಣದಿಂದಲೂ ಈ ಆಕಾಶಾಧಿಕರಣಕ್ಕೆ ಅದ್ವೈತಿಗಳ ಪ್ರಕಾರ ಅಧ್ಯಾಯಸಂಗತಿಯು ಇರುವುದಿಲ್ಲ.

**प्रकाशः –**

मतद्वयेऽपि ''कारणत्वेन'' इत्यादिसूत्रद्वयमेकमधिकरणम् । तत्र कारणवाक्यानि ब्रह्मणि प्रमाणं न वेति कल्पतरूक्तदिशा सन्देहे

ವಿವರಣೆ - ಅದ್ವೈತಿಗಳು ಹಾಗೂ ರಾಮಾನುಜರು ಇಬ್ಬರೂ ಸಹ 'ಕಾರಣತ್ವೇನಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' 'ಸಮಾಕರ್ಷಾತ್' ಎಂಬೆರಡು ಸೂತ್ರಗಳನ್ನು ಸೇರಿಸಿ ಒಂದೇ ಅಧಿಕರಣವೆನ್ನುತ್ತಾರೆ. ಈ ಅಧಿಕರಣದಲ್ಲಿ ಕಾರಣವಾಕ್ಯಗಳು ಬ್ರಹ್ಮನಲ್ಲಿ ಪ್ರಮಾಣವಾಗಿಯೋ ಇಲ್ಲವೋ ಎಂಬ ಸಂದೇಹವು ಕಲ್ಪತರುವಿನಲ್ಲಿ ಹೇಳಿದಂತೆ ಪ್ರಾಪ್ತವಾದರೆ ವಿಚಾರ ಮಾಡಲಾಗಿದೆ.

**प्रकाशः –**

वाक्यानां कारणे कार्ये परस्परविरोधतः ।
समन्वयो जगद्योनौ न सिध्यति परात्मनि ।।

इति भामत्युक्तं हृदि कृत्वा प्रथमसूत्रनिरस्यं कार्यविषयवाक्यविरोधमात्र मनुवदति – **आकाशादिकेति** ।।

ವಾಕ್ಯಾನಾಂ ಕಾರಣೇ ಕಾರ್ಯೇ ಪರಸ್ಪರವಿರೋಧತಃ।
ಸಮನ್ವಯೋ ಜಗದ್ಯೋನೌ ನ ಸಿಧ್ಯತಿ ಪರಾತ್ಮನಿ ॥

ವೇದಾಂತಗಳಲ್ಲಿರುವ ಜಗತ್ಕಾರಣತ್ವ ಪ್ರತಿಪಾದಕವಾದ ವಾಕ್ಯಗಳಲ್ಲಿ ಪರಸ್ಪರ ವಿರೋಧವಿದೆ. ಮತ್ತು ಜಗತ್ಕರ್ತೃವಿನ ಬಗ್ಗೆಯೂ ಪರಸ್ಪರ ವಿರೋಧವಿದೆ. ಆದ್ದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ವೇದಾಂತಗಳ ಸಮನ್ವಯವೂ ಸಿದ್ಧವಾಗುವುದಿಲ್ಲವೆಂದು ಪೂರ್ವಪಕ್ಷ.

ಹೀಗೆ ಭಾಮತಿಯಲ್ಲಿ ಹೇಳಲಾಗಿದೆ - ಪ್ರಕೃತ ಗ್ರಂಥಕಾರರು ಭಾಮತಿಯ ಈ ಮಾತನ್ನೇ ಹೃದಯದಲ್ಲಿಟ್ಟುಕೊಂಡು 'ಕಾರಣತ್ವೇನ' ಎಂಬ ಮೊದಲನೆಯ ಸೂತ್ರದಿಂದ ನಿರಾಕೃತವಾಗುವ ಕಾರ್ಯವಿಷಯವಿರೋಧವನ್ನಷ್ಟೇ ಅನುವಾದ ಮಾಡುತ್ತಿದ್ದಾರೆ. ಮೊದಲನೆಯ ಸೂತ್ರದಲ್ಲಿ ಜಗತ್ಕರ್ತೃವಿನ ಬಗ್ಗೆ ಇರುವಂತಹ ವಾಕ್ಯಗಳ ವಿರೋಧವನ್ನು ಪರಿಹರಿಸಿ ಎರಡನೆಯ ಸೂತ್ರದಲ್ಲಿ ಜಗತ್ಕಾರಣ-ವಿಷಯದಲ್ಲಿರುವ ವಾಕ್ಯಗಳ ವಿರೋಧವನ್ನು ಪರಿಹರಿಸುತ್ತಾರೆ. ಪ್ರಥಮ ಸೂತ್ರದಿಂದ ನಿರಾಕೃತವಾಗುವ ವಿರೋಧಕ್ರಮವನ್ನು 'ಆಕಾಶಾದಿಕಾ' ಎಂಬ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ.

**प्रकाशः – विरोध इति** ।। तथा च कर्तृप्रतिपादनेन कर्मविधिपरतयोपचरितार्था अविवक्षितार्था वा जपोपयोगिन इति भावः ।

ಗ್ರಂಥದಲ್ಲಿ ಹೇಳಲ್ಪಟ್ಟ 'ವಿರೋಧಃ' ಎಂಬುದರ ಅಭಿಪ್ರಾಯ ಹೀಗಿದೆ - ವೇದಾಂತವಾಕ್ಯಗಳು ಕೇವಲ ಕರ್ತೃವನ್ನು ಪ್ರತಿಪಾದನೆ ಮಾಡುವ ಮೂಲಕ ಅಥವಾ ಕರ್ಮದ ವಿಧಾನವನ್ನು ಮಾತ್ರ ಪ್ರತಿಪಾದನೆ ಮಾಡುವ ಮೂಲಕ ಉಪಚರಿತಾರ್ಥಗಳಾಗಿವೆ. ಆದ್ದರಿಂದಲೇ ವಿವಕ್ಷಿತವಾದ ಅರ್ಥವನ್ನು ಪ್ರತಿಪಾದನೆ ಮಾಡುವುದಿಲ್ಲ. ಅಥವಾ ಕೇವಲ ಜಪಪರಾಯಣಾದಿಗಳಿಗಷ್ಟೇ ಉಪಯುಕ್ತವಾಗುವ ಮೂಲಕ ಸಾರ್ಥಕವಾಗುತ್ತವೆ.

**प्रकाशः** – तन्निरासकतयाऽऽद्यसूत्रार्थमनुवदति – **कार्येष्विति** ।। चशब्दस्तुशब्दार्थः कारणत्व इति सप्तम्यन्तेनान्वेतीति भावेनाह – **कारणत्वे त्विति** ।।

ಕಾರ್ಯವಿಷಯಕವಾದ ವಾಕ್ಯಗಳ ವಿರೋಧವನ್ನು ಪರಿಹರಿಸಲು ಮೊದಲನೆಯ ಸೂತ್ರವು ಹೊರಟಿದೆಯೆಂದು ಪ್ರಥಮಸೂತ್ರಾರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ಕಾರ್ಯೇಷು' ಎಂಬ

ಗ್ರಂಥದಿಂದ. ಸೂತ್ರದಲ್ಲಿರುವ 'ಚ' ಶಬ್ದಕ್ಕೆ 'ತು'ಶಬ್ದದ ಅರ್ಥವನ್ನು ವಿವಕ್ಷಿಸಬೇಕು. 'ಕಾರಣತ್ವೇ' ಎಂಬುದಾಗಿ ಸಪ್ತಮ್ಯಂತವಾದ ಪದದ ಜೊತಗೆ ಅನ್ವಯವನ್ನು ಮಾಡಬೇಕು. ಈ ಅಭಿಪ್ರಾಯದಿಂದ 'ಕಾರಣತ್ವೇತು' ಎಂದು ಹೇಳಿರುತ್ತಾರೆ.

**प्रकाशः** – उक्तं च भामत्यां ''सर्गक्रमविवादेऽपि न स स्रष्टरि विद्यते'' इति । कारणत्वेनेति तृतीयान्तपक्षेऽन्वयदर्शनमेतत् ।।

ಇದನ್ನೇ ಭಾಮತಿಯಲ್ಲಿ 'ಸರ್ಗಕ್ರಮವಿವಾದೇऽಪಿ ನ ಸ ಸ್ರಷ್ಟರಿ ವಿದ್ಯತೇ' ಜಗತ್ತಿನ ಸೃಷ್ಟಿಕ್ರಮಗಳಲ್ಲಿ ಪರಸ್ಪರ ವಿರೋಧವಿದ್ದರೂ ಜಗತ್‌ಸ್ರಷ್ಟೃವಾದ ಬ್ರಹ್ಮನ ಬಗ್ಗೆ ಯಾವುದೇ ವಿವಾದವಿರುವುದಿಲ್ಲ ಎಂದು. ಸೂತ್ರದಲ್ಲಿ 'ಕಾರಣತ್ವೇನ' ಎಂಬುದಾಗಿ ತೃತೀಯಾಂತಪದವೆಂದು ವಿಭಾಗ ಮಾಡಿದರೆ ಆವಾಗ ಅನ್ವಯ ತಿಳಿಯುವ ಕ್ರಮವನ್ನು ಹೀಗೆ ಹೇಳಿದ್ದಾರೆ -

**प्रकाशः** – **विच्छिद्येति** ।। कारणत्व इत्येकं पदम् । नेत्यपरमित्यर्थः । अध्यायसङ्गतेरभावत इत्यादेः पञ्चम्यन्तस्य तन्नेत्यनेनान्वयः । अध्यायासङ्गतिं तावद्व्यनक्ति – **विरोधेति** ।।

ಸೂತ್ರದಲ್ಲಿ 'ಕಾರಣತ್ವೇ' ಎಂಬುದೇ ಬೇರೆ ಪದ. 'ನ' ಎಂಬುದು ಮತ್ತೊಂದು ಪದ. ಪಂಚಮ್ಯಂತವಾದ 'ಅಧ್ಯಾಯಸಂಗತೇರಭಾವತಃ' ಎಂಬುದಕ್ಕೆ 'ತನ್ನ' ಎಂಬುದರಲ್ಲಿ ಅನ್ವಯವನ್ನು ತಿಳಿಯಬೇಕು. ಅಧ್ಯಾಯಸಂಗತಿಯಿಲ್ಲವೆಂದು 'ವಿರೋಧ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – ''इदानीं स्मृतिन्यायविरोधपरिहारः'' इत्यादिना त्वद्भाष्ये द्वितीयस्य विरोधनिरासकत्वाभ्युपगमादिति भावः ।

'ಇದಾನೀಂ ಸ್ಮೃತಿನ್ಯಾಯವಿರೋಧಪರಿಹಾರಃ' ಇತ್ಯಾದಿಯಾಗಿ ಶಾಂಕರಭಾಷ್ಯದಲ್ಲಿಯೇ ಎರಡನೆಯ ಅಧ್ಯಾಯವು ವಿರೋಧಪರಿಹಾರಕ್ಕೋಸ್ಕರ ಹೊರಟದೆಯೆಂದು ಅಂಗೀಕರಿಸಲಾಗಿದೆ. ಇಲ್ಲಿಯೂ ವಾಕ್ಯಗಳ ಪರಿಹಾರ ಮಾಡುತ್ತಿರುವುದರಿಂದ ಎರಡನೆಯ ಅಧ್ಯಾಯದಲ್ಲಿಯೇ ಈ ಅಧಿಕರಣವು ಸೇರಬೇಕು ಎಂದಭಿಪ್ರಾಯ.

**प्रकाशः** – नन्वेतदेवाशङ्क्य भामत्यां ''प्रमाणान्तरविरोधेन वाक्यार्थावगतेरप्रामाण्यमाशङ्क्याविरोधव्युत्पादनेन प्राप्तप्रामाण्यस्थापनमविरोधलक्षणस्यार्थः । इह तु वाक्यानां सृष्टिप्रतिपादकानां परस्परं विरोधे ब्रह्मणि जगद्योनौ न समन्वयस्सोढुमर्हति'' इत्यादिना समाहितमित्यतस्तदनुवादेन निराह – **नन्विति** ।।

ಇದೇ ವಿಷಯವನ್ನು ಆಶಂಕಿಸಿ ಭಾಮತಿಯಲ್ಲಿ ಹೀಗೆ ಉತ್ತರಿಸಲಾಗಿದೆ - 'ಪ್ರಮಾಣಾಂತರವಿರೋಧೇನ ವಾಕ್ಯಾರ್ಥಾವಗತೇರಪ್ರಾಮಾಣ್ಯಮಾಶಂಕ್ಯಾವಿರೋಧವ್ಯುತ್ಪಾದನೇನ ಪ್ರಾಪ್ತಪ್ರಾಮಾಣ್ಯಸ್ಥಾಪನಮವಿರೋಧ ಲಕ್ಷಣಸ್ಯಾರ್ಥಃ । ಇಹ ತು ವಾಕ್ಯಾನಾಂ ಸೃಷ್ಟಿಪ್ರತಿಪಾದಕಾನಾಂ ಪರಸ್ಪರಂ ವಿರೋಧೇ ಬ್ರಹ್ಮಣಿ ಜಗದ್ಯೋನೌ

ನ ಸಮನ್ವಯಃ ಸೋಢುಮರ್ಹತಿ' ''ಪ್ರಮಾಣಾಂತರದಿಂದ ವಿರೋಧವು ಪ್ರಾಪ್ತವಾದರೆ ವೇದವಾಕ್ಯಗಳ ಅರ್ಥವೇ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದ ವೇದಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ ಪ್ರಮಾಣಾಂತರದ ವಿರೋಧವನ್ನು ಪರಿಹರಿಸಿ ಪ್ರಾಮಾಣ್ಯವನ್ನು ಸ್ಥಾಪನೆ ಮಾಡುವುದೇ ಅವಿರೋಧಾಧ್ಯಾಯದ ಪ್ರಮೇಯ. ಪ್ರಥಮಾಧ್ಯಾಯದಲ್ಲಿ ಸೃಷ್ಟಿಪ್ರತಿಪಾದಕವಾದ ವೇದವಾಕ್ಯಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದರೆ ಜಗತ್ಕಾರಣನಾದ ಬ್ರಹ್ಮನಲ್ಲಿ ವೇದದ ಸಮನ್ವಯವನ್ನು ಮಾಡಲು ಸಾಧ್ಯವಾಗುವುದಿಲ್ಲ'' ಇತ್ಯಾದಿಯಾಗಿ ಸಮಾಧಾನವನ್ನು ನೀಡಲಾಗಿದೆ. ಭಾಮತಿಯ ಈ ಅಭಿಪ್ರಾಯವನ್ನು ಅನುವಾದ ಮಾಡಿ 'ನನು' ಎಂಬ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः – तेऽपि मतमिति ।।** ''सर्ववेदान्तगतसृष्टिश्रुत्यर्थनिर्मलत्वाय परः प्रपञ्च आरभ्यते'' इत्यादिना वियदधिकरणे त्वया भाषितत्वादिति भावः । तथा च परस्परविरोधपरिहारपरत्वेऽपि तत्रैव निवेशस्स्यादिति भावः ।

'ಸರ್ವವೇದಾಂತಗತಸೃಷ್ಟಿಶ್ರುತ್ಯರ್ಥನಿರ್ಮಲತ್ವಾಯ ಪರಃ ಪ್ರಪಂಚ ಆರಭ್ಯತೇ' ಸಕಲ ವೇದಗಳಲ್ಲಿರುವ ಸೃಷ್ಟಿಪ್ರತಿಪಾದಕವಾದ ಶ್ರುತ್ಯರ್ಥದ ನೈರ್ಮಲ್ಯಕ್ಕಾಗಿ ಮುಂದಿನ ಗ್ರಂಥಸಂದರ್ಭವು ಆರಂಭವಾಗುತ್ತಿದೆ ಇತ್ಯಾದಿಯಾಗಿ ವಿಯದಧಿಕರಣದಲ್ಲಿ ಅದ್ವೈತಿಗಳಾದ ನೀವೇ ಹೇಳಿರುತ್ತೀರಿ. ಆದ್ದರಿಂದ ಶ್ರುತಿಗಳ ಪರಸ್ಪರ ವಿರೋಧ ಪರಿಹಾರವನ್ನೂ ಕೂಡ ಎರಡನೆಯ ಅಧ್ಯಾಯದಲ್ಲೇ ಮಾಡಬೇಕು.

**प्रकाशः –** नन्वेतदप्याशङ्क्योक्तं भामत्यां ''प्रासङ्गिकं तु तत्र सृष्टिविषयाणां वाक्यानां परस्पराविरोधप्रतिपादनम् । नतु लक्षणार्थ'' इति ।

ಈ ಆಶಂಕೆಯನ್ನೂ ಕೂಡ ಮಾಡಿಕೊಂಡು ಭಾಮತಿಯಲ್ಲಿ ಉತ್ತರಿಸಲಾಗಿದೆ - 'ಪ್ರಾಸಂಗಿಕಂ ತು ತತ್ರ ಸೃಷ್ಟಿವಿಷಯಾಣಾಂ ವಾಕ್ಯಾನಾಂ ಪರಸ್ಪರಾವಿರೋಧಪ್ರತಿಪಾದನಮ್ । ನತು ಲಕ್ಷಣಾರ್ಥಃ' 'ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಸೃಷ್ಟಿವಿಷಯಕವಾದ ವಾಕ್ಯಗಳ ಪರಸ್ಪರ ವಿರೋಧದ ಪರಿಹಾರ ಮಾಡಿದ್ದು ಪ್ರಾಸಂಗಿಕವಾಗಿದೆ. ಎರಡನೆಯ ಅಧ್ಯಾಯದ ಮುಖ್ಯವಾದ ಪ್ರಮೇಯವಾಗಿರುವುದಿಲ್ಲ' ಎಂದು.

**प्रकाशः –** कल्पतरौ च

''परैरुद्भावितो दोष उद्धर्तव्यः स्वदर्शने ।
इति शिक्षार्थमत्रत्यचिन्तां तत्राकरोन्मुनिः ।।''

इत्युक्तमित्यतस्तदाशङ्क्याह – **नन्विति ।।**

ಕಲ್ಪತರುವಿನಲ್ಲೂ ಕೂಡ

'ಪರೈರುದ್ಭಾವಿತೋ ದೋಷ ಉದ್ಧರ್ತವ್ಯಃ ಸ್ವದರ್ಶನೇ।
ಇತಿ ಶಿಕ್ಷಾರ್ಥಮತ್ರತ್ಯಚಿಂತಾಂ ತತ್ರಾಕರೋನ್ಮುನಿಃ॥

ಪರಿಪೂರ್ಣಚಂದ್ರಿಕಾ

ಪರಸ್ಪರ ವ್ಯಾಹತಿ ಬರುವುದರಿಂದ ಸಮಯಗಳೆಲ್ಲವೂ ಅಪ್ರಮಾಣ ಎಂಬುದಾಗಿ ಎರಡನೆಯ ಅಧ್ಯಾಯದ ಮೊದಲನೆಯ ಎರಡು ಪಾದಗಳಲ್ಲಿ ಸಮರ್ಥಿಸಲಾಯಿತು. ಈ ವ್ಯಾಹತಿದೋಷವು ನಮ್ಮ ಅದ್ವೈತಮತದಲ್ಲಿಯೂ ಕೂಡ ಬರುತ್ತದಲ್ಲವೆ? ಎಂಬ ಆಶಂಕೆಯು ಪ್ರಾಪ್ತವಾದರೆ ಇತರ ಮತದವರಿಗೆ ಬರುವಂತಹ ಸ್ವಹತ್ಯಾದಿದೋಷಗಳು ನಮ್ಮ ಮತದಲ್ಲಿ ಬರುವುದಿಲ್ಲವೆಂಬುದಾಗಿ ಪ್ರಾಸಂಗಿಕವಾಗಿ ಮೂರು ಮತ್ತು ನಾಲ್ಕನೆಯ ಪಾದಗಳು ಹೊರಟವೆ. ಹೀಗೆ ಕಲ್ಪತರುವಿನಲ್ಲಿ ಹೇಳಿದ ಅಭಿಪ್ರಾಯವನ್ನು 'ನನು' ಎಂಬ ಗ್ರಂಥದಿಂದ ಆಶಂಕಿಸುತ್ತಿದ್ದಾರೆ.

**प्रकाशः – अविरोधत्वोपहितत्वादिति** ।। अविरोधत्वरूपाध्यायोपाधिग्रस्तत्वादित्यर्थः ।। **वैपरीत्येति** ।। परस्पराविरोधस्तत्र साक्षात् सङ्गतः । मानान्तराविरोधस्तु प्रासङ्गिक इति स्यात् । विनिगमनाभावादित्यर्थः । तमेव व्यनक्ति – **सममिति** ।।

'ಅವಿರೋಧತ್ವೋಪಹಿತತ್ವಾತ್' ಎಂದರೆ ಅವಿರೋಧತ್ವವೆಂಬ ಅಧ್ಯಾಯದ ಉಪಾಧಿಯಿಂದ ಗ್ರಸ್ತವಾಗಿರುವುದರಿಂದ ನೇರವಾದ ಸಂಗತಿಯನ್ನೇ ಹೇಳಲು ಬರುತ್ತದೆ. ಪ್ರಾಸಂಗಿಕಸಂಗತಿಯನ್ನು ಹೇಳಬೇಕಾಗಿಲ್ಲ. ಎಂದಭಿಪ್ರಾಯ. 'ವೈಪರೀತ್ಯೇ' ಎಂದರೆ ವಾಕ್ಯಗಳ ಪರಸ್ಪರ ಅವಿರೋಧವು ಎರಡನೆಯ ಅಧ್ಯಾಯದಲ್ಲಿ ನೇರವಾದ ಸಂಗತಿಯನ್ನು ಪಡೆದಿದೆ. ಪ್ರಮಾಣಾಂತರದ ವಿರೋಧಪರಿಹಾರವು ಪ್ರಾಸಂಗಿಕವಾಗಿ ಪಡೆದಿದೆ ಎಂದು ನಾವು ಆಕ್ಷೇಪಿಸಿದರೆ ನಿಮ್ಮಿಂದ ಉತ್ತರಿಸಲಾಗದು. ಏಕೆಂದರೆ ಎರಡು ಸಮಾನವಾಗಿರುವಾಗ ಮಾನಾಂತರವಿರೋಧವೇ ಎರಡನೆಯ ಅಧ್ಯಾಯದ ಮುಖ್ಯತಾತ್ಪರ್ಯವೆಂಬುದರಲ್ಲಿ ಯಾವುದೇ ವಿನಿಗಮಕ ಪ್ರಮಾಣವಿರುವುದಿಲ್ಲ ಎಂದಭಿಪ್ರಾಯ. ವೈಪರೀತ್ಯವನ್ನೇ ಸ್ಪಷ್ಟವಾಗಿ 'ಸಮಮ್' ಎಂಬ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.




'ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' 'ಸಮಾಕರ್ಷಾತ್' ಎಂಬೆರಡು ಸೂತ್ರಗಳು ಸೇರಿ ಒಂದೇ ಅಧಿಕರಣವಾಗಿದೆಯೆಂದು ಅದ್ವೈತಿಗಳು ಹೇಳುತ್ತಾರೆ. ಸಮಸ್ತ ಜಗತ್ತಿಗೆ ಕಾರಣನಾದವನು ಬ್ರಹ್ಮನೊಬ್ಬನೇ ಆಗಿದ್ದಾನೆ. ಆದರೆ ಇಂತಹ ಬ್ರಹ್ಮನಿಂದ ನಡೆಯುವಂತಹ ಸೃಷ್ಟಿಕಾರ್ಯವು ವಿಭಿನ್ನಸ್ವರೂಪವನ್ನು ತಾಳಿದೆ. ತೈತ್ತಿರೀಯೋಪನಿಷತ್ತಿನಲ್ಲಿ 'ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಮೊದಲು ಆಕಾಶದ ಸೃಷ್ಟಿಯನ್ನುಛಾಂದೋಗ್ಯೋಪನಿಷತ್ತಿನಲ್ಲಿ 'ತತ್ತೇಜೋऽಸೃಜತ' ಎಂಬುದಾಗಿ ತೇಜಸ್ಸಿನ ಸೃಷ್ಟಿಯನ್ನೇ ಮೊದಲು ಹೇಳಲಾಗಿದೆ. ಅದರಂತೆ ಷಟ್ ಪ್ರಶ್ನೋಪನಿಷತ್ತಿನಲ್ಲಿ 'ಸ ಪ್ರಾಣಮಸೃಜತ' ಎಂಬುದಾಗಿ ಪ್ರಾಣನ ಸೃಷ್ಟಿಯನ್ನು ಮೊದಲು ಐತರೇಯೋಪನಿಷತ್ತಿನಲ್ಲಿ 'ಸ ಇಮಾನ್ ಲೋಕಾನ್ ಅಸೃಜತ' ಎಂಬುದಾಗಿ ಲೋಕದ ಸೃಷ್ಟಿಯನ್ನೇ ಮೊದಲು ಹೇಳಲಾಗಿದೆ. ಕೆಲವೆಡೆ 'ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ' ಎಂದು ಬೇರೆ ರೀತಿಯಲ್ಲಿಯೇ ಸೃಷ್ಟಿಕ್ರಮವನ್ನು ನಿರೂಪಣೆ ಮಾಡಲಾಗಿದೆ. ಆದ್ದರಿಂದ ಜಗತ್ಕಾರಣನಾದ ಬ್ರಹ್ಮನ ಬಗ್ಗೆ ವಿವಾದವಿಲ್ಲದಿದ್ದರೂ ಸೃಜ್ಯವಾದ ವಸ್ತುವಿನ ಬಗ್ಗೆ

ಪರಸ್ಪರ ವಿರೋಧ ಇದೆಯಲ್ಲವೇ? ಹೀಗಿರುವಾಗ ಜಗತ್‌ಕಾರಣನಾದ ಬ್ರಹ್ಮನಲ್ಲಿ ಇಂತಹ ವಾಕ್ಯಗಳ ಸಮನ್ವಯವನ್ನು ಮಾಡಲು ಹೇಗೆ ಸಾಧ್ಯವಾಗುತ್ತದೆ ? ಎಂಬ ಪೂರ್ವಪಕ್ಷವು ಪ್ರಾಪ್ತವಾಗುತ್ತದೆ.

ಸೃಜ್ಯವಾದ ವಸ್ತುವಿನ ಬಗ್ಗೆ ಅಭಿಪ್ರಾಯಭೇದವಿದ್ದರೂ ಸೃಷ್ಟಿಕರ್ತನಾದ ಬ್ರಹ್ಮನ ಬಗ್ಗೆ ಯಾವುದೇ ವೇದಭಾಗದಲ್ಲಿ ಪರಸ್ಪರ ವಿರೋಧವಿರುವುದಿಲ್ಲ. ಆಕಾಶಾದಿಗಳಿಗೆ ಕಾರಣನಾಗಿ ಯಾವ ಬ್ರಹ್ಮನು ತೈತ್ತಿರೀಯದಲ್ಲಿ ನಿರೂಪಿತನಾಗಿದ್ದಾನೋ, ಅವನೇ ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಆತ್ಮನೆಂದು, ಸತ್ ಎಂದೂ, ಆಕಾಶನೆಂದು ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಳ್ಳುತ್ತಾನೆ. ಜಗತ್‌ಕಾರಣನಾದ ಬ್ರಹ್ಮನ ಬಗ್ಗೆ ಯಾವುದೇ ವಿವಾದವಿಲ್ಲದ ಕಾರಣ, ವೇದಾಂತಗಳ ಸಮನ್ವಯಕ್ಕೆ ವಿರೋಧವು ಬರುವುದಿಲ್ಲ.

ಸೂತ್ರದಲ್ಲಿ 'ಕಾರಣತ್ವೇನ' ಎಂಬ ಪದವನ್ನು 'ಕಾರಣತ್ವೇ - ನ' ಎಂಬುದಾಗಿ ಪದಚ್ಛೇದವನ್ನು ತಿಳಿಯಬೇಕು. 'ಚ'ಶಬ್ದಕ್ಕೆ 'ತು' ಎಂಬರ್ಥವನ್ನು ವಿವಕ್ಷಿಸಿದಾಗ, ಆಕಾಶಾದಿಗಳ ಕಾರಣವಿಷಯದಲ್ಲಿ ವಿಪ್ರತಿಪತ್ತಿಯಿರುವುದಿಲ್ಲ. ಏಕೆಂದರೆ 'ಕಾರಣತ್ವೇನ ಯಥಾ ವ್ಯಪದಿಷ್ಟೋಕ್ತೇಃ' ಒಂದು ಶಾಖೆಯಲ್ಲಿ ಕಾರಣಸ್ವರೂಪವನ್ನು ಹೇಳಿದಂತೆಯೇ, ಮತ್ತೊಂದು ಶಾಖೆಯಲ್ಲಿಯೂ ಹೇಳಲಾಗಿದೆ ಎಂದು ಸೂತ್ರಕ್ಕೆ ಅರ್ಥವನ್ನು ತಿಳಿಯಬೇಕು. ಇಷ್ಟು ಅದ್ವೈತಿಗಳ ಅಧಿಕರಣಶರೀರ ಹಾಗೂ ಸೂತ್ರಾರ್ಥ.

ಇವರ ಈ ಅಧಿಕರಣಶರೀರವು ಅತ್ಯಂತ ಹೇಯವಾಗಿದೆ. ಏಕೆಂದರೆ

ಅಧ್ಯಾಯಸಂಗತೇಃ ಪಾದಸಂಗತೇರಪ್ಯಭಾವತಃ ।
ಪೂರ್ವಪಕ್ಷಾನುತ್ಥಿತೇಶ್ಚ ಸಿದ್ಧಾಂತಸ್ಯಾಪ್ಯಯೋಗತಃ ॥೧॥

ಈ ಅಧಿಕರಣಕ್ಕೆ ಅಧ್ಯಾಯಸಂಗತಿಯಿರುವುದಿಲ್ಲ. ಪಾದಸಂಗತಿಯೂ ಇರುವುದಿಲ್ಲ. ಪೂರ್ವಪಕ್ಷವೂ ಹುಟ್ಟುವುದಿಲ್ಲ, ಸಿದ್ಧಾಂತವೂ ಅಯುಕ್ತವಾಗಿದೆ. ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲು ಎರಡನೆಯ ಅಧ್ಯಾಯವು ಹೊರಟಿದೆ. ಎರಡನೆಯ ಅಧ್ಯಾಯದ ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ಶ್ರುತಿಗಳಲ್ಲೇ ಬರುವಂತಹ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಹೀಗೆ ಶಾಂಕರಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿಯೂ ನೀವು ಶ್ರುತಿಗಳಲ್ಲಿ ಜಗತ್‌ಕಾರಣತ್ವ ಪ್ರತಿಪಾದಕವಾದ ವಾಕ್ಯಗಳ ಪರಸ್ಪರ ವಿರೋಧವನ್ನು ಪರಿಹರಿಸುತ್ತಿದ್ದೀರಿ. ಹಾಗಾದರೆ ಇದರ ವಿಚಾರವನ್ನು ಎರಡನೆಯ ಅಧ್ಯಾಯದಲ್ಲಿ ಮಾಡುವುದು ಸಂಗತವಾಗುತ್ತದೆ. ಸಮನ್ವಯಾಧ್ಯಾಯದಲ್ಲಿ ಇದಕ್ಕೆ ಸಂಗತಿಯಿರುವುದಿಲ್ಲ. ಒಂದು ವೇಳೆ ಎರಡನೆಯ ಅಧ್ಯಾಯದಲ್ಲಿ ಸಮಯವಿರೋಧವಷ್ಟೇ ಮುಖ್ಯವಿಷಯ. ಶ್ರುತಿಗಳ ಪರಸ್ಪರವಿರೋಧವು ಪ್ರಾಸಂಗಿಕವೆಂದು ಹೇಳಿ, ಮೂರು ನಾಲ್ಕನೆಯ ಪಾದಗಳಿಗೆ ಪ್ರಾಸಂಗಿಕತ್ವವನ್ನು ಹೇಳುವುದಾದರೆ ವಿಪರೀತವಾಗಿ ನಾವೂ ಆಕ್ಷೇಪ ಮಾಡುತ್ತೇವೆ. ಶ್ರುತಿಗಳ ಪರಸ್ಪರ ವಿರೋಧವೇ ಮುಖ್ಯವಾದ ಪ್ರಮೇಯ. ಸಮಯವಿರೋಧವು ಕೇವಲ ಪ್ರಾಸಂಗಿಕವಾಗಿ ಪ್ರಾಪ್ತವಾಗಿದೆಯೆಂದು ಆಕ್ಷೇಪಿಸಿದರೆ ವಿನಿಗಮಕವಿಲ್ಲದ ಕಾರಣ ನಿಮ್ಮಿಂದ ಉತ್ತರಿಸಲಾಗದು. ಮತ್ತು ಪ್ರಾಸಂಗಿಕವಾಗಿ ಶ್ರುತಿಗಳ ವಿರೋಧವನ್ನು ಎರಡನೆಯ ಅಧ್ಯಾಯದಲ್ಲಿ ಪರಿಹರಿಸಿದಂತೆ ಈ ಅಧಿಕರಣದಲ್ಲಿ ಪ್ರಾಪ್ತವಾದ ಶ್ರುತಿಗಳ ಪರಸ್ಪರ ವಿರೋಧವನ್ನೂ ಕೂಡ ಪ್ರಾಸಂಗಿಕವಾಗಿ ಅಲ್ಲಿಯೇ ಸಮರ್ಥಿಸಿರಿ. ಏನೇ ಆದರೂ ಈ ಅಧಿಕರಣಕ್ಕೆ ಅಧ್ಯಾಯಸಂಗತಿಯಿರುವುದಿಲ್ಲ.

**तात्पर्यचन्द्रिका**

**नापि पादसङ्गतिः । पादार्थस्य प्रधानाशाब्दत्वस्येहाव्युत्पादनात् ।**

ಅನುವಾದ - ಅದ್ವೈತ ಸಿದ್ಧಾಂತದಲ್ಲಿ ಈ ಆಕಾಶಾಧಿಕರಣಕ್ಕೆ ಪಾದಸಂಗತಿಯೂ ಸಹ ಕೂಡುವುದಿಲ್ಲ. ಏಕೆಂದರೆ ಅದ್ವೈತಿಗಳ ಪ್ರಕಾರ ಈ ಪಾದವು ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವದ ನಿರಾಕರಣೆ ಮಾಡಲು ಹೊರಟಿದೆ. ಆದರೆ ಈ ಅಧಿಕರಣದಲ್ಲಿ ಕಾರ್ಯಭೂತವಾದ ಜಗದ್ವಿಷಯಕವಾದ ವಾಕ್ಯಗಳಲ್ಲಿ ಬರುವ ವಿರೋಧವನ್ನು ಪರಿಹರಿಸಲಾಗಿದೆ. ಪ್ರಧಾನವು ಶಬ್ದಪ್ರತಿಪಾದ್ಯವಲ್ಲ ಎಂಬುದಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಆದ್ದರಿಂದ ಈ ಅಧಿಕರಣಕ್ಕೆ ಅಧ್ಯಾಯಸಂಗತಿಯು ಹೇಗೆ ಇಲ್ಲವೋ, ಅದರಂತೆ ಪಾದಸಂಗತಿಯೂ ಕೂಡ ಇರುವುದಿಲ್ಲ.

**किं चात्र न पूर्वपक्षस्योत्थानम् । ''तत्तेजोऽसृजत'' इत्यत्र ह्याकाशसृष्टिमनुक्त्वा तेजस्सृष्टिमात्रमुक्तम् ।**

ಅಧ್ಯಾಯಸಂಗತಿ, ಪಾದಸಂಗತಿಗಳು ಇರುವುದಿಲ್ಲ ಎಂದಷ್ಟೇ ಅಲ್ಲ. ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ. 'ತತ್ತೇಜೋಽಸೃಜತ' ಎಂಬಲ್ಲಿ ತೇಜಸ್ಸಿನ ಸೃಷ್ಟಿಯನ್ನಷ್ಟೇ ಹೇಳಲಾಗಿದೆ ಹೊರತು, ಆಕಾಶದ ಸೃಷ್ಟಿಯನ್ನು ಇಲ್ಲಿ ಹೇಳಿಲ್ಲ.

**न त्वाकाशात् पूर्वं तत्सृष्टिः । येन ''आत्मन आकाशः सम्भूत'' इत्येतद्विरोधः शङ्क्येत । नहि तत्रोक्तानुक्तिमात्रेण तद्विरोधः ।**

ಆಕಾಶಕ್ಕಿಂತಲೂ ತೇಜಸ್ಸು ಮೊದಲು ಹುಟ್ಟಿದೆಯೆಂದು ಶ್ರುತಿವಾಕ್ಯದಲ್ಲಿ ಹೇಳಿಯೇ ಇಲ್ಲ. ಹಾಗೇನಾದರೂ ಹೇಳಿದ್ದಲ್ಲಿ, 'ಆತ್ಮನ ಆಕಾಶಃ ಸಂಭೂತಃ' ಎಂಬುದರಿಂದ ವಿರೋಧ ಬರುತ್ತಿತ್ತು. ಏಕೆಂದರೆ ಒಂದು ಶ್ರುತಿಯಲ್ಲಿ ಆತ್ಮನಿಂದ ತೇಜಸ್ಸು, ತೇಜಸ್ಸಿನಿಂದ ವಾಯು ಇತ್ಯಾದಿಯಾಗಿ ಹೇಳಿ, ಮತ್ತೊಂದು ಕಡೆ ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು ಹುಟ್ಟುತ್ತದೆ ಎಂದು ಹೇಳಿದರೆ ಸ್ಪಷ್ಟವಾಗಿ ವಿರೋಧ ಬರುತ್ತಿತ್ತು. ಆದರೆ ಶ್ರುತಿಯಲ್ಲಿ ನೇರವಾಗಿ ತೇಜಸ್ಸಿನ ಸೃಷ್ಟಿಯನ್ನು ಹೇಳಲಾಗಿದೆ. ಆಕಾಶದ ಸೃಷ್ಟಿಯ ಬಗ್ಗೆ ಹೇಳಿಯೇ ಇಲ್ಲ. ಇಷ್ಟುಮಾತ್ರದಿಂದ ವಿರೋಧವನ್ನು ತೋರಿಸಲಾಗದು.

**यद्यपि ''तत्तेजोऽसृजत वायोरग्निः'' इत्यनयोर्विरोधो भाति । तथापि न तस्येह सिद्धान्ते निरासः ।**

ಪ್ರಶ್ನೆ - 'ತತ್ತೇಜೋಽಸೃಜತ' ಎಂಬ ವಾಕ್ಯದಲ್ಲಿ ಪರಮಾತ್ಮನಿಂದ ತೇಜಸ್ಸು ಹುಟ್ಟಿತೆಂದು ಹೇಳಲಾಗಿದೆ. ಆದರೆ 'ಆಕಾಶಾದ್ವಾಯುಃ ವಾಯೋರಗ್ನಿಃ' ಎಂಬ ವಾಕ್ಯದಲ್ಲಿ ಪರಮಾತ್ಮನಿಂದ ಮೊದಲು ಆಕಾಶವು ಹುಟ್ಟಿ, ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು ಹುಟ್ಟಿದೆಯೆಂದು ಹೇಳಲಾಗಿದೆ. ಈ ಎರಡು ವಾಕ್ಯಗಳಿಗೆ ಪರಸ್ಪರ ವಿರೋಧ ಬರುತ್ತದಲ್ಲವೇ?

ಉತ್ತರ - ಹೌದು, ಆದರೆ ಈ ವಿರೋಧವನ್ನು ಈ ಅಧಿಕರಣದ ಸಿದ್ಧಾಂತದಲ್ಲಿ ಪರಿಹರಿಸಬೇಕಾಗಿಲ್ಲ.

**किन्तु वियत्पादे ''तेजोतस्तथा ह्याह'' इत्यत्रैवेति त्वन्मतम् ।**

ವಿಯತ್ಪಾದದ 'ತೇಜೋತಸ್ತಥಾ ಹ್ಯಾಹ' ಎಂಬ ಸೂತ್ರದ ಸಿದ್ಧಾಂತದಲ್ಲಿ ಈ ಎರಡು ವಾಕ್ಯಗಳ ವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ವಿಯತ್ಪಾದದಲ್ಲಿಯೇ ಈ ವಿರೋಧವನ್ನು ಪರಿಹರಿಸುತ್ತಾರೆಂದು ನೀವೇ ಒಪ್ಪಿರುವಾಗ, ಪುನಃ ಅದೇ ವಿರೋಧವನ್ನು ಇಲ್ಲಿಯೂ ಪರಿಹರಿಸುವುದು ವ್ಯರ್ಥವಾಗುತ್ತದೆ.

**सिद्धान्तोऽप्ययुक्तः । ''सत्यं ज्ञानमनन्तं ब्रह्म'' इति ''एकमेवाद्वितीयम्'' इति च प्रकृते शुद्धे ब्रह्मणि कामयितृत्वादेर्विरोधात् ।**

ಸಿದ್ಧಾಂತವೂ ಸಹ ಅಯುಕ್ತವಾಗಿದೆ. ಏಕೆಂದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ, ಏಕಮೇವಾದ್ವಿತೀಯಂ' ಇತ್ಯಾದಿ ವಾಕ್ಯಗಳಿಂದ ಶುದ್ಧಬ್ರಹ್ಮನೇ ಪ್ರಕೃತನಾಗಿದ್ದಾನೆ. ಇಂತಹ ಶುದ್ಧಬ್ರಹ್ಮನಲ್ಲಿ 'ಸೋಽಕಾಮಯತ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಕಾಮಯಿತೃತ್ವಾದಿಗಳು ವಿರುದ್ಧವಾಗುತ್ತವೆ. ಆದ್ದರಿಂದ ಶುದ್ಧಬ್ರಹ್ಮನ ಬಗ್ಗೆ ಸಿದ್ಧಾಂತ ಮಾಡಲು ಹೊರಟ ನೀವು ಕಾಮಯಿತೃತ್ವಾದಿ ಧರ್ಮಗಳನ್ನು ಆಧರಿಸುವುದು ತಪ್ಪಾಗುತ್ತದೆ.

**''सदेव सोम्येदमग्र आसीत् असद्वा इदमग्र आसीत्'' इत्यादौ कारणेऽपि विगानदर्शनात् । शङ्कितस्य कार्ये विगानस्यानुद्धृतत्वाच ।**

ಮತ್ತು ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವಿಲ್ಲವೆಂದು ಹೇಳಿದಿರಿ. ಆದರೆ 'ಸದೇವ ಸೌಮ್ಯೇದಮಗ್ರ ಆಸೀತ್' ಎಂಬ ವಾಕ್ಯದಲ್ಲಿ ಜಗತ್ತಿಗೆ ಸತ್‌ಸ್ವರೂಪವು ಕಾರಣವಾಗಿದೆಯೆಂದು ಹೇಳಲಾಗಿದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯದಲ್ಲಿ ಅಸತ್ ವಾಕ್ಯವು ಕಾರಣವೆಂದು ಹೇಳಲಾಗಿದೆ. ಆದ್ದರಿಂದ ಕಾರಣವಿಷಯಕವಾದ ವಾಕ್ಯಗಳಲ್ಲಿಯೂ ವಿರೋಧವು ಶ್ರುತಿಯಲ್ಲಿ ಕಾಣಸುತ್ತಿರುವಾಗ ಇದರ ಪರಿಹಾರವನ್ನೇಕೆ ನೀವು ಮಾಡಿಲ್ಲ. ಅಷ್ಟೇ ಅಲ್ಲದೇ ಕಾರ್ಯವಿಷಯಕವಾದ ವಾಕ್ಯಗಳಲ್ಲಿ ವಿರೋಧವಿದೆಯೆಂದು ಪೂರ್ವಪಕ್ಷ ಮಾಡಿದಿರಿ. ಆದರ ಪರಿಹಾರವನ್ನೇ ಸಿದ್ಧಾಂತದಲ್ಲಿ ನೀವು ಮಾಡಿರುವುದಿಲ್ಲ.

**यदि च कल्पिते कार्ये श्रुतेरतात्पर्यादनुद्धारस्तर्हि वियत्पादाद्यौ तदुद्धारोऽनुपपन्नः स्यात्। कामयितृत्वादिविशिष्टस्यापि कल्पितत्वेन तद्विरोधोऽप्यत्र न व्युत्पाद्यः स्यात् ।**

ಒಂದುವೇಳೆ ಕಾರ್ಯವು ಕಲ್ಪಿತವಾದ್ದರಿಂದ ಅದರಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲದ ಕಾರಣ ಅಂತಹ ವಾಕ್ಯಗಳನ್ನು ನಾವು ಉದ್ಧಾರ ಮಾಡಿರುವುದಿಲ್ಲ ಎನ್ನುವುದಾದರೆ ವಿಯತ್ಪಾದದಲ್ಲಿಯೂ ಕಾರ್ಯವಿಷಯಕವಾದ ವಾಕ್ಯಗಳ ವಿರೋಧ ಪರಿಹಾರ ಮಾಡಿದ್ದೂ ತಪ್ಪಾಗಬೇಕಾದೀತು. ಮತ್ತು ಕಾಮಯಿತೃತ್ವಾದಿ ವಿಶಿಷ್ಟಬ್ರಹ್ಮನು ಕಲ್ಪಿತನಾದ್ದರಿಂದ ಅದರ ವಿರೋಧದ ಪರಿಹಾರವನ್ನೇಕೆ ಇಲ್ಲಿ ಮಾಡಿದ್ದೀರಿ. ಅದೂ ಕೂಡ ತಪ್ಪಲ್ಲವೇ?

ಆದ್ದರಿಂದ ಅದ್ವೈತ ಸಿದ್ಧಾಂತದಲ್ಲಿ ಈ ಅಧಿಕರಣಕ್ಕೆ ಅಧ್ಯಾಯಸಂಗತಿ ಮತ್ತು ಪಾದಸಂಗತಿಗಳು ಇರುವುದಿಲ್ಲ. ಪೂರ್ವಪಕ್ಷ ಹಾಗೂ ಸಿದ್ಧಾಂತಗಳೂ ಕೂಡ ಹುಟ್ಟುವುದಿಲ್ಲ.

**प्रकाशः –**

पादसङ्गतेरप्यभावत इत्येतत् व्यनक्ति – **नापीति** ।। तृतीयपादं व्याचष्टे – **किञ्चेति** ।।

ವಿವರಣೆ - ಇಲ್ಲಿಯ ತನಕ ಅದ್ವೈತಿಗಳು ನಿರೂಪಣೆ ಮಾಡುವ ಆಕಾಶಾಧಿಕರಣಕ್ಕೆ ಅಧ್ಯಾಯ ಸಂಗತಿಯಿರುವುದಿಲ್ಲವೆಂಬುದನ್ನು ನಿರೂಪಣೆ ಮಾಡಿದ್ದಾಯಿತು. ಪ್ರಕೃತ ಪಾದಸಂಗತಿಯು ಇಲ್ಲವೆಂದು ಸಮರ್ಥಿಸುತ್ತಿದ್ದಾರೆ 'ನಾಪಿ' ಇತ್ಯಾದಿ ವಾಕ್ಯದಿಂದ. ಈ ವಾಕ್ಯದಿಂದ 'ಪಾದಸಂಗತೇರಪ್ಯಭಾವತಃ' ಎಂಬ ಎರಡನೆಯ ಪಾದವನ್ನು ವ್ಯಾಖ್ಯಾನ ಮಾಡಿದ್ದಾರೆ. 'ಪೂರ್ವಪಕ್ಷಾನುಪಪತ್ತೇಶ್ಚ' ಎಂಬ ಮೂರನೆಯ ಪಾದದ ಅರ್ಥವನ್ನು 'ಕಿಂಚ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः – न त्विति** ।। अत एव भामत्यां ''यदि त्वाकाशाद्वायुर्वायोस्तेज इत्युक्त्वा तेजसो वायुर्वायोराकाश इति वदेद्भवेद्विरोधः । न चैवमस्ति'' इत्यादिना तथैव सिद्धान्तितमिति भावः ।

ಶ್ರುತಿಯಲ್ಲಿ ಆಕಾಶಸೃಷ್ಟಿಯನ್ನು ಹೇಳದೇ ನೇರವಾಗಿ ತೇಜಸ್ಸಿನ ಸೃಷ್ಟಿಯನ್ನು ಹೇಳಿದ್ದರಿಂದ ವಿರೋಧವಿರುವುದಿಲ್ಲ. ಆದ್ದರಿಂದಲೇ ಭಾಮತಿಯಲ್ಲಿ 'ಯದಿ ತ್ವಾಕಾಶಾದ್ ವಾಯುರ್ವಾಯೋಸ್ತೇಜ ಇತ್ಯುಕ್ತ್ವಾ ತೇಜಸೋ ವಾಯುರ್ವಾಯೋರಾಕಾಶ ಇತಿ ವದೇತ್ ಭವೇತ್ ವಿರೋಧಃ ।' 'ಒಂದು ವೇಳೆ ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು ಹುಟ್ಟಿದೆ ಎಂದು ಹೇಳಿ ಮತ್ತೊಂದು ಕಡೆ ತೇಜಸ್ಸಿನಿಂದ ವಾಯು, ವಾಯುವಿನಿಂದ ಆಕಾಶವು ಹುಟ್ಟಿದೆಯೆಂದು ಹೇಳಿದ್ದಲ್ಲಿ, ವಿರೋಧವು ಬರುತ್ತಿತ್ತು. ಆದರೆ ಶ್ರುತಿಯಲ್ಲಿ ಹೀಗೆ ಹೇಳಿರುವುದಿಲ್ಲ' ಎಂಬುದಾಗಿಯೇ ಸಿದ್ಧಾಂತ ಮಾಡಿದ್ದಾರೆ. ಆದ್ದರಿಂದ ಕಾರ್ಯವಿಷಯಕವಾದ ವಿರೋಧವನ್ನು ತೋರಿಸಲು ಸಾಧ್ಯವಿಲ್ಲ.

**प्रकाशः – नच विरोधभ्रान्त्या पूर्वपक्षः । तस्या निर्बीजाया अनुपपत्तेः । एवमेवोत्पत्तावतिप्रसङ्गात् ।**

ವಾಸ್ತವಿಕವಾಗಿ ವಿರೋಧವಿಲ್ಲದಿದ್ದರೂ ವಿರೋಧಭ್ರಾಂತಿಯಿಂದ ಪೂರ್ವಪಕ್ಷ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ನಿರ್ಬೀಜವಾದ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಹಾಗೇನಾದರೂ ಹುಟ್ಟುವುದಾದರೆ ಶುಕ್ತಿಯನ್ನು ನೋಡಿ ಆನೆಯೆಂಬುದಾಗಿಯೂ ಭ್ರಾಂತಿ ಬರಬೇಕಾದೀತು. ಆದ್ದರಿಂದ ನಿರ್ಬೀಜವಾಗಿ ಭ್ರಾಂತಿಯು ಎಂದೂ ಕೂಡ ಹುಟ್ಟುವುದಿಲ್ಲ.

**प्रकाशः – ननु ''अभ्युपेत्य तु विगानमुच्यते'' इति भामत्युक्तेः कृत्वा चिन्तेयमिति चेन्न । व्यर्थत्वात् । मदुक्तदिशा सङ्गतिसम्भवाच्चेति भावः ।**

ಪ್ರಶ್ನೆ - 'ಅಭ್ಯುಪೇತ್ಯ ತು ವಿಗಾನಮುಚ್ಯತೇ' ಎಂದು ಭಾಮತಿಯ ಮಾತಿನಂತೆ ಕೃತ್ವಾ ಚಿಂತೆಯೆಂದು ಪರಿಗಣಿಸಬಹುದು. ವಾಸ್ತವಿಕವಾಗಿ ಕಾರ್ಯವಿಷಯಕವಾದ ವಾಕ್ಯಗಳಲ್ಲಿಯೂ ವಿರೋಧವಿರುವುದಿಲ್ಲ. ಆದರೆ ವಿರೋಧ ಬರುತ್ತದೆಂದು ಇಟ್ಟುಕೊಂಡು ಪೂರ್ವಪಕ್ಷ ಮಾಡಬಹುದಲ್ಲವೇ?

ಉತ್ತರ - ಈ ಬಗೆಯ ಪೂರ್ವಪಕ್ಷವು ವ್ಯರ್ಥವಾಗಿದೆ. ನಾವು ಹೇಳುವ ಪೂರ್ವಪಕ್ಷವನ್ನು ಇಟ್ಟುಕೊಂಡು ಸಂಗತಿಯನ್ನು ತೋರಿಸಲು ಬರುತ್ತಿರುವಾಗ ವಿರೋಧದ ಭ್ರಾಂತಿಯೆಂದಾಗಲೀ ಕೃತ್ವಾಚಿಂತೆಯೆಂದಾಗಲೀ ವಿವಕ್ಷಿಸಿ ಪೂರ್ವಪಕ್ಷ ಮಾಡುವುದು ಅಸಂಗತವಾಗುತ್ತದೆ.

**प्रकाशः – चतुर्थपादं व्याख्याति – सिद्धान्तोऽपीति ।। कामयितृत्वेति ।। ''सोकामयत बहुः स्याम्'' इति वाक्योक्तकामयितृत्वेत्यर्थः ।**

'ಸಿದ್ಧಾಂತಸ್ಯಾಪ್ಯಯೋಗತಃ' ಎಂಬ ನಾಲ್ಕನೆಯ ಪಾದವನ್ನು 'ಸಿದ್ಧಾಂತೋಽಪಿ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಕಾಮಯಿತೃತ್ವ' ಎಂದರೆ 'ಸೋಕಾಮಯತ ಬಹುಃ ಸ್ಯಾಮ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ 'ಕಾಮಯಿತೃತ್ವ' ಎಂದರ್ಥ. ಶುದ್ಧಬ್ರಹ್ಮನಲ್ಲಿ 'ಕಾಮಯಿತೃತ್ವ' ಮೊದಲಾದ ಧರ್ಮಗಳು ಬರುವುದಿಲ್ಲ ಎಂದಭಿಪ್ರಾಯ.

**प्रकाशः – यापि सूत्रार्थोक्तिः कार्येष्वेव विगानं कारणत्वे तु नेति सापि नेत्याह – सदेवेति ।।**

ಸೂತ್ರದ ಅರ್ಥವನ್ನು ಹೇಳುವಾಗ ಕಾರ್ಯವಿಷಯಕವಾದ ವಾಕ್ಯಗಳಲ್ಲಷ್ಟೇ ವಿರೋಧ ಬರುತ್ತದೆ. ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧ ಬರುವುದಿಲ್ಲ ಎಂದು ಏನು ಹೇಳಿದಿರೋ, ಅದೂ ಸಹ ಸರಿಯಿಲ್ಲ ಇದನ್ನು 'ಸದೇವ' ಎಂಬ ವಾಕ್ಯದಿಂದ ಸಮರ್ಥಿಸಿದ್ದಾರೆ.

**प्रकाशः – ननु कारणविगानं ''समाकर्षात्'' इति द्वितीयसूत्रे निरसिष्यत इति चेन्न । तथापि कारणत्वे तु विगानं नेत्युक्तेरयुक्तत्वापरिहारात् ।**

ಪ್ರಶ್ನೆ - ಕಾರಣವಾಕ್ಯದಲ್ಲಿಯೂ ವಿರೋಧವಿದೆಯೆಂದು ಹೇಳಿದಿರಿ. ಆದರೆ ಇದನ್ನು ಇದೇ ಅಧಿಕರಣದ 'ಸಮಾಕರ್ಷಾತ್' ಎಂಬ ಎರಡನೆಯ ಸೂತ್ರದಲ್ಲಿ ನಾವು ನಿರಾಕರಿಸುತ್ತೇವೆ. ಆದ್ದರಿಂದ ಈ ಸೂತ್ರದಲ್ಲಿ ಅದರ ನಿರಾಕರಣೆಯ ಅವಶ್ಯಕತೆಯಿರುವುದಿಲ್ಲವಲ್ಲವೇ?

ಉತ್ತರ - ಹಾಗಾದರೆ ಕಾರ್ಯವಿಷಯಕವಾದ ವಾಕ್ಯದಲ್ಲಿ ವಿರೋಧವಿದೆಯೆಂದಷ್ಟೇ ಇಲ್ಲಿ ಪೂರ್ವಪಕ್ಷ ಮಾಡಬೇಕಿತ್ತು. ಆದರೆ ಸೂತ್ರಾರ್ಥವನ್ನು ನೀವು ಹೇಳುವಾಗ, ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವಿರುವುದಿಲ್ಲವೆಂದು ಹೇಳಿದ್ದೀರಿ. ಈ ದೋಷವನ್ನು ನಿಮ್ಮಿಂದ ಪರಿಹರಿಸಿಕೊಳ್ಳಲಾಗದು.

**प्रकाशः – वक्ष्यमाणाभिप्रायेण तदुक्तिरिति चेन्न । वैयर्थ्यात् ।**

ಪ್ರಶ್ನೆ - ಮುಂದಿನ ಸೂತ್ರದಲ್ಲಿ ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವಿಲ್ಲವೆಂದು ಸಮರ್ಥಿಸುತ್ತೇವೆ. ಆ ಅಭಿಪ್ರಾಯದಿಂದ ಇಲ್ಲಿ ಹೇಳಿದ್ದು ತಪ್ಪಾಗುವುದಿಲ್ಲ.

ಉತ್ತರ - ಇದು ವ್ಯರ್ಥ. ನೇರವಾಗಿ ಮುಂದಿನ ಸೂತ್ರದಲ್ಲಿಯೇ ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವಿಲ್ಲವೆಂದು ಸಿದ್ಧಾಂತ ಮಾಡುವಾಗ ಮೊದಲು ಅದನ್ನು ಪ್ರಸ್ತಾಪ ಮಾಡುವುದು ವ್ಯರ್ಥವಾಗುತ್ತದೆ.

**प्रकाशः – नच ''सृष्ट्युक्तेस्स्रष्टृज्ञानार्थतया तत्र च विवादाभावात् गुणे त्वन्याय्यकल्पनेति न्यायात् तदनुगुणतया सृष्टिवाक्यं व्याख्येयम्'' इति भामत्युक्तदिशा कार्यविगानपरिहारार्थत्वेन तदुक्तिरिति वाच्यम् । साक्षात् तत्परिहारसम्भवे कुसृष्टेरनादरणीयत्वात् ।**

ಪ್ರಶ್ನೆ - 'ಸೃಷ್ಟ್ಯುಕ್ತೇಸ್ಸ್ರಷ್ಟೃಜ್ಞಾನಾರ್ಥತಯಾ ತತ್ರ ಚ ವಿವಾದಾಭಾವಾತ್ ಗುಣೇ ತ್ವನ್ಯಾಯ್ಯಕಲ್ಪನೇತಿ ನ್ಯಾಯಾತ್ ತದನುಗುಣತಯಾ ಸೃಷ್ಟಿವಾಕ್ಯಂ ವ್ಯಾಖ್ಯೇಯಮ್' ಜಗತ್ಕಾರಣನಾದ ಬ್ರಹ್ಮನ ಜ್ಞಾನಕ್ಕೋಸ್ಕರ ಸೃಷ್ಟಿಯನ್ನು ಹೇಳಲಾಗಿದೆ. ಜಗತ್ಕಾರಣನಾದ ಬ್ರಹ್ಮನ ವಿಷಯದಲ್ಲೇ ವಿವಾದವಿಲ್ಲದಿರುವಾಗ ಸೃಷ್ಟಿಯ ವಿಷಯದಲ್ಲಿಯೂ ವಿವಾದವು ಉಂಟಾಗುವುದಿಲ್ಲ. 'ಗುಣೇತು ಅನ್ಯಾಯಕಲ್ಪನಾ' ಎಂಬ ನ್ಯಾಯದಂತೆ ಸೃಷ್ಟಿವಾಕ್ಯವನ್ನು ಜಗತ್ಕಾರಣನಾದ ಬ್ರಹ್ಮಪರವಾಗಿ ವ್ಯಾಖ್ಯಾನ ಮಾಡಬೇಕು. ಹೀಗೆ ಭಾಮತಿಯಲ್ಲಿ ಹೇಳಲಾಗಿದೆ. ಆದ್ದರಿಂದ ಕಾರ್ಯವಿಷಯವಾದ ವಾಕ್ಯಗಳ ವಿರೋಧ ಪರಿಹಾರವನ್ನು ಈ ಬಗೆಯಲ್ಲಿ ಮಾಡುತ್ತೇವೆಂದು ತಿಳಿಸಲು ಹಾಗೇ ಹೇಳಿದ್ದು ತಪ್ಪಾಗುವುದಿಲ್ಲವಲ್ಲವೇ?

ಉತ್ತರ - ನೇರವಾಗಿಯೇ ಕಾರ್ಯವಿಷಯಕವಾದ ವಾಕ್ಯಗಳಲ್ಲಿ ವಿರೋಧವನ್ನು ಪರಿಹರಿಸಲು ಬರುವಾಗ, ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವಿಲ್ಲದ ಕಾರಣ. ಕಾರ್ಯವಿಷಯಕವಾದ ವಾಕ್ಯಗಳಲ್ಲಿಯೂ ವಿರೋಧವಿಲ್ಲವೆಂಬ ಕುಸೃಷ್ಟಿಯು ಅತ್ಯಂತ ಅನಾದರಣೀಯವಾಗಿದೆ.

**प्रकाशः** – अत एव ''शङ्कितस्य कार्ये विगानस्यानुद्धृतत्वात्'' इत्युक्तम् । ''समाकर्षात्'' इति सूत्रार्थस्याग्रे निरसिष्यमाणत्वाच्च । तदविरोधोऽपि कारणाविरोधोऽपि । अत्र समाकर्षसूत्र इत्यर्थः ।।

ಆದ್ದರಿಂದಲೇ ಗ್ರಂಥಕಾರರು 'ಶಂಕಿತಸ್ಯ ಕಾರ್ಯೇ ವಿಗಾನಸ್ಯಾನುದ್ಧೃತತ್ವಾತ್' ಪೂರ್ವಪಕ್ಷ ಮಾಡುವಾಗ ಕಾರ್ಯವಿಷಯಕವಾದ ವಾಕ್ಯಗಳಲ್ಲಿ ಯಾವ ಆಶಂಕೆಯನ್ನು ಮಾಡಿಕೊಂಡಿದ್ದೀರೋ ಅವುಗಳ ಪರಿಹಾರವನ್ನೇ ಮಾಡಿರುವುದಿಲ್ಲ ಎಂದು ಹೇಳಿರುತ್ತಾರೆ. ಅದ್ವೈತಿಗಳು ಮಾಡುವ 'ಸಮಾಕರ್ಷಾತ್' ಎಂಬ ಸೂತ್ರದ ವ್ಯಾಖ್ಯಾನವನ್ನು ನಾವು ಮುಂದಿನ ಅಧಿಕರಣದಲ್ಲಿಯೇ ನಿರಾಕರಣೆ ಮಾಡುತ್ತೇವೆ. 'ತದವಿರೋಧೋಽಪಿ' ಎಂದರೆ ಕಾರಣವಾಕ್ಯಗಳ ವಿರೋಧವಿಲ್ಲದಿದ್ದರೂ ಎಂದರ್ಥ. 'ಅತ್ರ' ಎಂದರೆ ಸಮಾಕರ್ಷಸೂತ್ರದಲ್ಲಿ ಎಂದರ್ಥ.




ಅಧ್ಯಾಯ ಸಂಗತಿಯು ಹೇಗೆ ಕೂಡುವುದಿಲ್ಲವೋ, ಅದರಂತೆ ಪಾದಸಂಗತಿಯೂ ಕೂಡುವುದಿಲ್ಲ. ನಾಲ್ಕನೆಯ ಈ ಪಾದವು ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವದ ನಿರಾಕರಣೆಗಾಗಿ ಹೊರಟದೆ. ಹೀಗಿರುವಾಗ ಮಧ್ಯದಲ್ಲಿ ಈ ಅಧಿಕರಣವು ಕಾರ್ಯವಿಷಯಕವಾದ ವಾಕ್ಯಗಳ ವಿರೋಧವನ್ನು ಏಕೆ ಪರಿಹಾರ ಮಾಡುತ್ತಿದೆ? ಎಂದು ಅದ್ವೈತಿಗಳಿಗೆ ತಿಳಿದಿರುವುದಿಲ್ಲ. ಮತ್ತು ಪೂರ್ವಪಕ್ಷವೂ ಕೂಡ ಸರಿಯಿಲ್ಲ. ಪೂರ್ವಪಕ್ಷ ಮಾಡುವಾಗ ಅದ್ವೈತಿಗಳು 'ತತ್ತೇಜೋಽಸೃಜತ' 'ಆತ್ಮನ ಆಕಾಶಃ ಸಂಭೂತಃ' ಎಂಬೆರಡು ವಾಕ್ಯಗಳಿಗೆ ವಿರೋಧವನ್ನು ಆಕ್ಷೇಪ ಮಾಡಿದ್ದರು. ಆದರೆ 'ತತ್ತೇಜೋಽಸೃಜತ' ಎಂಬ ವಾಕ್ಯವು ಕೇವಲ ತೇಜಸ್ಸಿನ ಸೃಷ್ಟಿಯ ಬಗ್ಗೆ ಹೇಳಿದೆ ಹೊರತು, ಆಕಾಶದ ಸೃಷ್ಟಿಯ ಬಗ್ಗೆ ಅದು ಏನನ್ನೂ ಹೇಳುತ್ತಿಲ್ಲ. ಮೊದಲು ತೇಜಸ್ಸು ಹುಟ್ಟಿತು ಎಂದಾಗಲಿ, ಆಕಾಶವು ಮೊದಲು ಹುಟ್ಟಲ್ಲ ಎಂದಾಗಲೀ, ಈ ಶ್ರುತಿಯ ಅಭಿಪ್ರಾಯವೇ ಅಲ್ಲ. ಹಾಗೇನಾದರೂ ಪರಮಾತ್ಮನಿಂದ ಮೊದಲು ತೇಜಸ್ಸೇ ಹುಟ್ಟಿತೆಂದು ಹೇಳಿದ್ದಲ್ಲಿ, 'ಆತ್ಮನ ಆಕಾಶಃ ಸಂಭೂತಃ' ಎಂಬುದರಿಂದ ವಿರೋಧ ಬರುತ್ತಿತ್ತು. ಆಕಾಶಸೃಷ್ಟಿಯ ಬಗ್ಗೆ ಹೇಳದ ಮಾತ್ರಕ್ಕೆ ವಿರೋಧವನ್ನು ಆಕ್ಷೇಪಿಸುವುದು ಮೂಢತನ. ಇನ್ನು 'ತತ್ತೇಜೋಽಸೃಜತ' ಎಂಬ ವಾಕ್ಯವು ತೇಜಸ್ಸಿನ ಸೃಷ್ಟಿಯೂ ಪರಮಾತ್ಮನಿಂದ ಆಯಿತೆಂದು ಹೇಳುತ್ತಿದೆ. ಆದರೆ 'ವಾಯೋರಗ್ನಿಃ' ಎಂಬ ವಾಕ್ಯವು ವಾಯುವಿನಿಂದ ಅಗ್ನಿಯು ಹುಟ್ಟಿತೆಂದು ಹೇಳುತ್ತಿದೆ. ಈ ಎರಡು ವಾಕ್ಯಗಳಿಗೆ ವಿರೋಧ ಬರುತ್ತಿದೆಯಲ್ಲವೇ? ಎಂದು ಆಕ್ಷೇಪ ಮಾಡಬೇಕು. ಈ ಆಕ್ಷೇಪದ ಪರಿಹಾರಕ್ಕಾಗಿ ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿರುವ 'ತೇಜೋಽತಸ್ತಥಾ ಹ್ಯಾಹ' ಎಂಬ ಸೂತ್ರವು ಹೊರಟದೆ. ಪುನಃ ಅದೇ ವಿಷಯವನ್ನು ಇಲ್ಲಿ ಸಮರ್ಥಿಸುವ ಅವಶ್ಯಕತೆಯಿರುವುದಿಲ್ಲ.

ಸಿದ್ಧಾಂತವೂ ಸಹ ಸರಿಯಿಲ್ಲ. ಸಿದ್ಧಾಂತ ಮಾಡುವಾಗ ಶುದ್ಧಬ್ರಹ್ಮನ ಬಗ್ಗೆ ಹೇಳದೇ ಕಾಮಯಿತೃತ್ವಾದಿ ಧರ್ಮಗಳನ್ನು ವಿವಕ್ಷಿಸಿ ವಿಶಿಷ್ಟಬ್ರಹ್ಮನ ಬಗ್ಗೆ ಹೇಳಿದ್ದಾರೆ. ಇದು ಅಸಂಗತ. ಮತ್ತು ಸೂತ್ರಾರ್ಥವನ್ನು ಹೇಳುವಾಗ ಕಾರಣವಿಷಯಕವಾದ ವಾಕ್ಯಗಳಲ್ಲಿ ವಿರೋಧವೇ ಇರುವುದಿಲ್ಲ ಎಂದರು. 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ವಾಕ್ಯವು ಸತ್‌ಪದಾರ್ಥವು ಜಗತ್ಕಾರಣವೆಂದು, 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವು ಅಸತ್ ಪದಾರ್ಥವು ಜಗತ್ಕಾರಣವೆಂದು ಹೇಳುತ್ತಿರುವಾಗ, ಜಗತ್‌ಕಾರಣವಿಷಯದಲ್ಲಿ ವಿರೋಧವಿಲ್ಲವೆಂದು ಹೇಗೆ ಹೇಳಿದಿರಿ? ಮತ್ತು

ಯಾವ ಕಾರ್ಯವಿಷಯಕವಾಕ್ಯಗಳಲ್ಲಿ ವಿರೋಧವಿದೆಯೆಂದು ಆಶಂಕೆ ಮಾಡಿದರೋ, ಅದರ ಪರಿಹಾರವನ್ನೇ ಸಿದ್ಧಾಂತದಲ್ಲಿ ಮಾಡಿಲ್ಲ. ಕಲ್ಪಿತವಾದ ಕಾರ್ಯವಿಷಯದಲ್ಲಿ ಪರಿಹಾರವನ್ನೇಕೆ ಮಾಡಬೇಕು ಎನ್ನುವುದಾದರೆ ವಿಯತ್ತಾದದಲ್ಲಿಯೂ ಕೂಡ ಅದರ ಪರಿಹಾರವು ಅನಾವಶ್ಯಕ. ಮತ್ತು ಕಾಮಯಿತೃತ್ವಾದಿಗಳಿಂದ ವಿಶಿಷ್ಟನಾದ ಬ್ರಹ್ಮನೂ ಕಲ್ಪಿತನಾದ್ದರಿಂದ ತದ್ವಿಷಯಕವಾದ ವಿರೋಧಪರಿಹಾರ ಮಾಡಿದ್ದೂ ಕೂಡ ಅಸಂಗತವಾಗುತ್ತದೆ.

### ರಾಮಾನುಜಭಾಷ್ಯದ ಅಧಿಕರಣ ವಿಮರ್ಶೆ

## ತात्पर्यचन्द्रिका

**केचित्तु । ''तद्धेदं तर्ह्यव्याकृतमासीत् असद्वा इदमग्र आसीत्'' इत्यादिवाक्यानां प्रधान परत्वे प्राप्ते ब्रह्मपरत्वेन सिद्धान्त इत्याहुः ।**

ಅನುವಾದ - ರಾಮಾನುಜ ಭಾಷ್ಯದ ಅಧಿಕರಣ ಶರೀರ ಹೀಗಿದೆ - 'ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಇದು ಪ್ರಕೃತಿಪರವಾಗಿದೆಯೋ, ಅಥವಾ ಬ್ರಹ್ಮಪರವಾಗಿದೆಯೋ ? ಎಂಬುದು ಸಂಶಯ. ಪ್ರಕೃತಿಪರವಾಗಿದೆಯೆಂದು ಪೂರ್ವಪಕ್ಷ. ಬ್ರಹ್ಮಪರವಾಗಿದೆಯೆಂದು ಸಿದ್ಧಾಂತ. ಇಷ್ಟು ರಾಮಾನುಜರ ಅಧಿಕರಣ ಶರೀರ.

**तन्न । पूर्वपक्षानुत्थानात् । तथा हि । अव्याकृतासीदादिशब्दानां न तावत्प्रधाने रूढिरस्ति । योगो गौणी वा वृत्तिस्तु प्रधान इव ब्रह्मण्यपि सम्भवति।**

ಇವರ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಪ್ರಕೃತಿಯು 'ತದ್ಧೇದಂ' ಎಂಬ ಶ್ರುತಿವಾಕ್ಯದಿಂದ ಪ್ರತಿಪಾದ್ಯವಾಗಿದೆ ಎಂಬ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಏಕೆಂದರೆ 'ಅವ್ಯಾಕೃತ' 'ಅಸತ್' ಮೊದಲಾದ ಶಬ್ದಗಳಿಗೆ ಪ್ರಕೃತಿಯಲ್ಲಿ ರೂಢಿವೃತ್ತಿಯು ಇರುವುದಿಲ್ಲ. ಯೋಗವೃತ್ತಿಯನ್ನಾಗಲೀ, ಗೌಣೀವೃತ್ತಿಯನ್ನಾಗಲೀ, ಪ್ರಕೃತಿಯಲ್ಲಿ ನೀವು ಹೇಳಬಹುದು. ಅದು ಬ್ರಹ್ಮನಲ್ಲಿಯೂ ಕೂಡ ಸಮಾನವಾಗಿರುವಾಗ ಪ್ರಕೃತಿಯು ಶ್ರುತಿಪ್ರತಿಪಾದ್ಯವೆಂದು ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ.

**नच निरवकाशं प्रधानलिङ्गादिकमस्ति । प्रत्युत ईक्षत्यधिकरणन्यायेन चेतनस्यैव कारणत्वनिर्णयादसदादिशब्दानां चेतनपरतैवन्याय्या ।**

ಮತ್ತು ನಿರವಕಾಶವಾದ ಪ್ರಕೃತಿಯ ಯಾವುದೇ ಲಿಂಗಗಳೂ ಕೂಡ ಇಲ್ಲಿ ಕಾಣಸುತ್ತಿಲ್ಲ. ಹೊರತಾಗಿ ಈಕ್ಷತ್ಯಧಿಕರಣದಲ್ಲಿ ಹೇಳಿದ ನ್ಯಾಯದಂತೆ ಚೇತನಕ್ಕೆ ಕಾರಣತ್ವವು ನಿರ್ಣೀತವಾಗಿದೆ ಆದ್ದರಿಂದ ಅಸದಾದಿಶಬ್ದಗಳಿಗೂ ಚೇತನಪರತ್ವವನ್ನೇ ಹೇಳುವುದು ನ್ಯಾಯವಾಗಿದೆ.

**पादसङ्गतिस्तु स्फुटैव । ''तद्धेदं तर्ह्यव्याकृतमासीत्'' इत्यादिवाक्यस्य ''महतः परमव्यक्तम्'' इत्यादिवत्प्रधानप्रतिपादनच्छायानुसारित्वाभावात् ।**

ರಾಮಾನುಜರ ಮತದಲ್ಲಿಯೂ ಈ ಅಧಿಕರಣಕ್ಕೆ ಪಾದಸಂಗತಿಯು ಇರುವುದಿಲ್ಲವೆಂಬುದು ಸ್ಫುಟವಾಗಿದೆ. ಏಕೆಂದರೆ 'ತದ್ಧೇದಂ ತರ್ಹ್ಯವ್ಯಾಕೃತಮಾಸೀತ್' ಎಂಬ ವಾಕ್ಯವಾಗಲೀ 'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯವಾಗಲೀ ಪ್ರಕೃತಿಪ್ರತಿಪಾದಕವಾಗಿದೆಯೆನ್ನಲು ಯಾವುದೇ ಸ್ಪಷ್ಟಲಿಂಗಗಳ ಛಾಯೆಯು ಕಾಣಿಸುತ್ತಿಲ್ಲ. ಈ ಪಾದದಲ್ಲಿ ಆಪಾತತಃ ಸ್ಪಷ್ಟಲಿಂಗವು ಪ್ರಕೃತ್ಯಾದಿಗಳಲ್ಲಿ ತೋರಿದರೆ ಅದನ್ನು ನಿರಾಕರಿಸಲಾಗುತ್ತಿದೆಯೆಂದು ನೀವು ಹೇಳುತ್ತೀರಿ. ಆದರೆ ಈ ಅಧಿಕರಣದಲ್ಲಿ ಅಂತಹ ಸ್ಪಷ್ಟಲಿಂಗಗಳೂ ಸಹ ಕಾಣಿಸುತ್ತಿಲ್ಲ.

**टीकायां ''वाक्ययोजनानुपपत्तेः'' इत्यस्यायमर्थः। ब्रह्मण एवात्माकाशादिशब्दार्थत्वे तस्यैकत्वेन क्रमाभावात् ''आत्मन आकाशः आकाशाद्वायुः'' इत्यादिक्रमप्रतिपादकवाक्ययोजनानुपपत्तेरिति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् आकाशाधिकरणं सम्पूर्णम् ।।४।।**

ಟೀಕೆಯಲ್ಲಿ 'ವ್ಯಾಕ್ಯಯೋಜನಾನುಪಪತ್ತೇಃ' ಎಂಬ ಪದವಿದೆ. ಇದರ ಅಭಿಪ್ರಾಯ ಹೀಗಿದೆ - ಬ್ರಹ್ಮನೇ ಆತ್ಮ, ಆಕಾಶ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾದರೆ ಒಬ್ಬನೇ ಬ್ರಹ್ಮನಲ್ಲಿ ಕ್ರಮವೇ ಇರುವುದಿಲ್ಲ. ಆತ್ಮನೆಂಬ ರೂಪದ ಅನಂತರ ಆಕಾಶರೂಪ. 'ಆಕಾಶ' ಎಂಬ ರೂಪದ ಅನಂತರ 'ವಾಯು' ಎಂಬ ರೂಪ. ಹೀಗೆ ಕ್ರಮವನ್ನೇಕೆ ಹೇಳಬೇಕು ? 'ಆತ್ಮನ ಆಕಾಶಃ ಸಂಭೂತಃ' 'ಆಕಾಶಾದ್ವಾಯುಃ' ಇತ್ಯಾದಿಯಾಗಿ ಕ್ರಮವನ್ನು ಪ್ರತಿಪಾದನೆ ಮಾಡುವಂತಹ ವಾಕ್ಯಯೋಜನೆಯು ಅನುಪಪನ್ನವಾಗುತ್ತದೆ ಎಂದು ಅಭಿಪ್ರಾಯ.

ಇಲ್ಲಿಗೆ ಶ್ರೀ ಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದಶಿಷ್ಯಂದಿರಾದ ಶ್ರೀ ವ್ಯಾಸತೀರ್ಥಯತಿಗಳಿಂದ ವಿರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಂಪೂರ್ಣವಾಯಿತು

**प्रकाशः –**

**केचित्त्विति ।।** जगत्कारणवादीनि वेदान्तवाक्यानि प्रधानपराणि ब्रह्मपराणि वेति संशये

ವಿವರಣೆ - ರಾಮಾನುಜರ ಅಧಿಕರಣ ಶರೀರ ಹೀಗಿದೆ - ಜಗತ್ಕಾರಣತ್ವವನ್ನು ಪ್ರತಿಪಾದನೆ ಮಾಡುವ ಅನೇಕ ಬಗೆಯ ವೇದಾಂತ ವಾಕ್ಯಗಳು ಪ್ರಕೃತಿಯನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿವೆಯೋ? ಎಂಬುದು ಸಂಶಯ.

**प्रकाशः** – ''तद्धेदं तर्ह्यव्याकृतमासीन्नाम रूपाभ्यां व्याक्रियते'' इत्यव्याकृतपूर्वकसृष्ट्याम्नानादव्याकृतशब्दस्य चाव्यक्तपर्यायत्वात् प्रधानमेवाव्याकृतमिति ''असद्वा इदमग्र आसीत्'' ''सदेव सोम्येदमग्र आसीत्'' ''आत्मन आकाशस्सम्भूत'' इत्यादावप्यसदादिशब्देन तस्यैव ग्रहणादात्मादिशब्दस्य व्याप्तत्वादिना प्रधानेऽप्युपपत्तेः प्रधानपराण्येव सर्वकारणवाक्यानीति प्राप्ते ।

'ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ನಾಮರೂಪಾಭ್ಯಾಂ ವ್ಯಾಕ್ರಿಯತೇ' ಎಂಬ ಶ್ರುತಿಯಲ್ಲಿ ಅವ್ಯಾಕೃತವೇ ಜಗತ್ತನ್ನು ಸೃಷ್ಟಿ ಮಾಡುತ್ತದೆಂದು ಹೇಳಲಾಗಿದೆ. 'ವ್ಯಾಕೃತ' ಶಬ್ದಕ್ಕೆ 'ವ್ಯಕ್ತ' ಎಂದರ್ಥ. 'ಅವ್ಯಾಕೃತ' ಶಬ್ದಕ್ಕೆ 'ಅವ್ಯಕ್ತ' ಎಂದರ್ಥ. ಆದ್ದರಿಂದ ಅವ್ಯಾಕೃತಶಬ್ದವು ಅವ್ಯಕ್ತಶಬ್ದದ ಪರ್ಯಾಯ ಪದವಾಗಿದೆ. ಅವ್ಯಕ್ತಶಬ್ದವು ಪ್ರಕೃತಿಪರವೆಂದು ಸಿದ್ಧವಾದ್ದರಿಂದ ಅವ್ಯಾಕೃತಶಬ್ದವೂ ಕೂಡ ಪ್ರಕೃತಿಯನ್ನೇ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ ಪ್ರಕೃತಿಯಿಂದಲೇ ನಾಮರೂಪಾತ್ಮಕವಾದ ಜಗತ್ತು ಹುಟ್ಟದೆಯೆಂದು ಶ್ರುತಿಯ ಅಭಿಪ್ರಾಯ. ಮತ್ತು 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿರುವ 'ಅಸತ್' ಎಂಬ ಪದವು ಪ್ರಕೃತಿಯನ್ನು ಹೇಳುತ್ತಿದೆ. 'ಸದೇವ ಸೋಮ್ಯೇದಮಗ್ರ ಆಸೀತ್' ಎಂಬಲ್ಲಿರುವ 'ಸತ್' ಎಂಬ ಪದವೂ ಕೂಡ ಪ್ರಕೃತಿ ಪರವೇ ಆಗಿದೆ. 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯಲ್ಲಿರುವ ಆತ್ಮಶಬ್ದವೂ ಕೂಡ ವ್ಯಾಪ್ತತ್ವ ಎಂಬರ್ಥವನ್ನು ಹೇಳುವುದರಿಂದ ಪ್ರಕೃತಿಪರವೇ ಆಗಿದೆ. ಆದ್ದರಿಂದ ಜಗತ್ಕಾರಣವನ್ನು ಪ್ರತಿಪಾದನೆ ಮಾಡುವ ಯಾವುದೇ ಶ್ರುತಿಗಳಿದ್ದರೂ ಎಲ್ಲವೂ ಪ್ರಕೃತಿಪರವೇ ಆಗಿರುತ್ತವೆ. ಇಷ್ಟು ಪೂರ್ವಪಕ್ಷ.

**प्रकाशः** – आकाशादिषु आकाशादिपदचिह्नितेषु, विपरिणामेनाकाशादीनामिति वा, यथा व्यपदिष्टस्य सार्वज्ञादिमत्तया जन्माधिकरणे व्यपदिष्टस्य ब्रह्मण एव, कारणत्वेनोक्तेः ''सत्यं ज्ञानम्'' इति प्रागुक्तसर्वज्ञस्यैवात्मशब्देनोपादानाच्च । एवं तत्र तत्रेति सर्वाणि ब्रह्मपराणीति सिद्धान्त इत्याहुरित्यर्थः ।।

ಕಾರಣವಾಕ್ಯಗಳೆಲ್ಲವೂ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು ಸೂತ್ರವು ಸಮರ್ಥಿಸುತ್ತಿದೆ. ಸೂತ್ರದಲ್ಲಿರುವ 'ಆಕಾಶಾದಿಷು' ಎಂಬ ಪದಕ್ಕೆ ಆಕಾಶಪದದಿಂದ ಕೂಡಿರುವ ವಾಕ್ಯಗಳಲ್ಲಿ ಎಂದರ್ಥ. ಅಥವಾ 'ಆಕಾಶಾದೀನಾಮ್' ಎಂಬುದಾಗಿ ಷಷ್ಠ್ಯಂತವಾಗಿ ವಿಪರಿಣಾಮ ಮಾಡಿಕೊಂಡು ಆಕಾಶಾದಿಗಳ ಕಾರಣತ್ವವನ್ನು ಪ್ರತಿಪಾದನೆ ಮಾಡುವ ಎಂಬರ್ಥವನ್ನು ತಿಳಿಯಬಹುದು. 'ಯಥಾ ವ್ಯಪದಿಷ್ಟೋಕ್ತೇಃ' ಎಂದರೆ ಸಾರ್ವಜ್ಞಾದಿ ವಿಶಿಷ್ಟನಾಗಿ ಜನ್ಮಾಧಿಕರಣದಲ್ಲಿ ಯಾವ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ, ಅವನೇ ಜಗತ್ಕಾರಣತ್ವೇನ ಶ್ರುತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿ

ಸರ್ವಜ್ಞನಾದ ಬ್ರಹ್ಮನನ್ನು ಆತ್ಮಶಬ್ದದಿಂದ ಕರೆಯಲಾಗಿದೆ. ಆದ್ದರಿಂದ ಶ್ರುತಿಯ ಯಾವುದೇ ಭಾಗದಲ್ಲಿರುವ ಜಗತ್‌ಕಾರಣತ್ವ ಪ್ರತಿಪಾದಕವಾದ ವಾಕ್ಯಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಇಷ್ಟು ಸಿದ್ಧಾಂತ.

**प्रकाशः – प्रत्युतेति ।।** अव्याकृतवाक्ये ''पश्यंश्चक्षुश्शृण्वञ्श्रोत्रम्'' इति दर्शनादेः ''सदेव'' इति वाक्ये ''तदैक्षत'' इतीक्षणस्य श्रवणात् ''ईक्षतेर्नाशब्दम्'' इत्यधिकरणे च त्वया ''सदेव'' इत्यादिवाक्ये प्रधानपरत्वमाशङ्क्येक्षणेन ब्रह्मपरत्वस्य सिद्धान्तितत्वात्तेन न्यायेनाव्याकृतादिशब्दानां चेतनपरत्वे सिद्धे सर्वश ाखाप्रत्ययन्यायेनासदादिशब्दानामव्याकृतशब्दतुल्यार्थत्वाच्चेतनपरतैव न्याय्येत्यर्थः ।

ರಾಮಾನುಜರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಮೊದಲು ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ. ಏಕೆಂದರೆ ಅವ್ಯಾಕೃತವಾಕ್ಯದಲ್ಲಿ ಮುಂದೆ 'ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಮ್' ಎಂಬುದಾಗಿ ದರ್ಶನ, ಶ್ರವಣ ಮೊದಲಾದವುಗಳನ್ನು ಹೇಳಲಾಗಿದೆ. ಇವೆಲ್ಲವೂ ಆತ್ಮನ ಧರ್ಮವೇ ಎಂದು ನಿಶ್ಚಯವಾಗಿರುವಾಗ ಹಿಂದಿನ ವಾಕ್ಯದಲ್ಲಿರುವ ಅವ್ಯಾಕೃತಶಬ್ದದಿಂದ ಜಡವಾದ ಪ್ರಕೃತಿಯು ಪ್ರತಿಪಾದ್ಯವಾಗಿದೆಯೆಂಬ ತಿಳುವಳಿಕೆ ಬರಲು ಸಾಧ್ಯವೇ ಇಲ್ಲ. ಮತ್ತು 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ವಾಕ್ಯದಲ್ಲಿ 'ತದೈಕ್ಷತ' ಎಂಬುದಾಗಿ ಈಕ್ಷಣವನ್ನು ಹೇಳಲಾಗಿದೆ. ಇದೂ ಸಹ ಆತ್ಮನ ಧರ್ಮವೇ ಆಗಿದೆ. ಮತ್ತು 'ಈಕ್ಷತೇರ್ನಾಶಬ್ದಮ್' ಎಂಬ ಅಧಿಕರಣದಲ್ಲಿ ನೀನೂ ಸಹ 'ಸದೇವ' ಎಂಬ ವಾಕ್ಯವು ಪ್ರಧಾನಪರವಾಗಿದೆಯೆಂದು ಆಶಂಕಿಸಿ, 'ಈಕ್ಷಣ' ಎಂಬುವಂತಹ ಭ್ರಮವಿರುವುದರಿಂದ ಭ್ರಮಪರ-ವಾಗಿದೆಯೆಂದು ಸಿದ್ಧಾಂತ ಮಾಡಿರುವಿ. ಇದೇ ನ್ಯಾಯದಿಂದ ಅವ್ಯಾಕೃತ ಮೊದಲಾದ ಶಬ್ದಗಳೂ ಕೂಡ ಚೇತನಪರವಾಗಿದೆಯೆಂದೇ ಸಿದ್ಧವಾಗುತ್ತದೆ. ಹೀಗೆ ಸರ್ವಶಾಖಾಪ್ರತ್ಯಯ ನ್ಯಾಯದಿಂದ ಅಸದಾದಿಶಬ್ದಗಳು ಅವ್ಯಾಕೃತಶಬ್ದದ ಸಮಾನಾರ್ಥಕವನ್ನು ಹೇಳುವ ಕಾರಣ ಚೇತನಪರವೇ ಆಗುತ್ತವೆಂಬುದು ನ್ಯಾಯಸಮ್ಮತವೇ ಆಗಿದೆ.

**प्रकाशः –** एतेन यदुक्तं श्रुतप्रकाशे ''अव्याकृतशब्देन प्रथमत एवाचेतनस्य प्रतिपन्नतया पश्चादवगतं पश्यंश्चक्षुरित्यादिवाक्योक्तं चेतयितृत्वं चक्षुराद्युत्पादनौ-न्मुख्याभिप्रायम्'' इत्यादि तन्निरस्तम् । रूढ्यादेः प्रधानप्रापकस्याभावेनाचेतन-प्रतिपत्तेरेवाभावात् । दर्शनादेर्बहुत्वाच्च । बह्वनुसारेणाल्पनयनस्य त्वयैव पूर्वत्रोक्तत्वाच्च ।

ಹೀಗೆ ಹೇಳಿದ್ದರಿಂದ ಮತ್ತೊಂದು ಆಶಂಕೆಯನ್ನು ನಿರಾಕರಣೆ ಮಾಡಿದಂತಾಯಿತು -

ಆಶಂಕೆ - ಶ್ರುತಿಯಲ್ಲಿ 'ಅವ್ಯಾಕೃತಶಬ್ದೇನ ಪ್ರಥಮತ ಏವಾಚೇತನಸ್ಯ ಪ್ರತಿಪನ್ನತಯಾ ಪಶ್ಚಾದವಗತಂ ಪಶ್ಯನ್ ಚಕ್ಷುರಿತ್ಯಾದಿವಾಕ್ಯೋಕ್ತಂ ಚೇತಯಿತೃತ್ವಂ ಚಕ್ಷುರಾದ್ಯುತ್ಪಾದನೌನ್ಮುಖ್ಯಾಭಿಪ್ರಾಯಮ್' ಶ್ರುತಿಯಲ್ಲಿ

ಅವ್ಯಾಕೃತಶಬ್ದವು ಪ್ರಥಮಪ್ರತಿಪನ್ನವಾಗಿದೆ. ಪ್ರಥಮಪ್ರತಿಪನ್ನವಾದದ್ದೇ ಬಲಿಷ್ಠವಾದ್ದರಿಂದ ಸಮಸ್ತ ಶ್ರುತಿಯಿಂದ ಜಡವಾದ ಪ್ರಕೃತಿಯೇ ಪ್ರತಿಪಾದ್ಯವಾಗುತ್ತದೆ. ಅನಂತರವಿರುವ 'ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಮ್' ಎಂಬ ಶ್ರುತಿಯಲ್ಲಿರುವ ಚಕ್ಷುರಾದಿಶಬ್ದಗಳಿಗೆ ಪ್ರಕೃತಿಪರವಾಗಿಯೇ ಅರ್ಥವನ್ನು ಮಾಡಬೇಕು. ಪ್ರಳಯಕಾಲದಲ್ಲಿ ತನ್ನಷ್ಟಕ್ಕೇ ತಾನು ಇದ್ದ ಪ್ರಕೃತಿಯು ಸೃಷ್ಟ್ಯವಸ್ಥೆಯಲ್ಲಿ ಚಕ್ಷುರಾದಿ ಇಂದ್ರಿಯಗಳಿಗೆ ಅಭಿಮುಖವಾಗಿದೆ ಎಂಬುದಾಗಿ ಅರ್ಥೈಸಬೇಕು.

ಸಮಾಧಾನ - ಇದೂ ಕೂಡ ಈಗಾಗಲೇ ನಿರಸ್ತವಾಗಿದೆ. ಏಕೆಂದರೆ ಶ್ರುತಿಯು ಪ್ರಕೃತಿಯನ್ನು ಪ್ರತಿಪಾದನೆ ಮಾಡುತ್ತದೆಂಬ ವಿಷಯದಲ್ಲಿ ರೂಢಿ ಮೊದಲಾದ ಯಾವುದೇ ಪ್ರಮಾಣಗಳು ಇರುವುದಿಲ್ಲ. ಆದ್ದರಿಂದ ಅಚೇತನವು ಇದರಿಂದ ಪ್ರತಿಪಾದ್ಯವಾಗಿದೆಯೆಂದು ಹೇಳಲಾಗದು. ಅಷ್ಟೇ ಅಲ್ಲದೇ ದರ್ಶನ-ಸ್ಪರ್ಶನಾದಿಗಳನ್ನು ಹೇಳುವಂತಹ ಬಹುಶ್ರುತಿಗಳಿವೆ. ಬಹುಶ್ರುತಿಗಳಿಗೆ ಅನುಸಾರಿಯಾಗಿ ಅಲ್ಪಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು. ಈ ವಿಷಯವನ್ನು ನೀವೇ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದೀರಿ.

**प्रकाशः – एतेन ''ईक्षत्यधिकरणाक्षेपः फलितः'' इति श्रुतप्रकाशोक्तं प्रत्युक्तम्। आक्षेपकाभावस्योक्तत्वात् । अत एव चेतनपरतयैवेत्यवधारणमुक्तम् ।**

ಇದರಿಂದ ಮತ್ತೊಂದು ಆಕ್ಷೇಪವನ್ನು ನಿರಾಕರಿಸಿದಂತಾಯಿತು.

ಆಕ್ಷೇಪ - 'ಈಕ್ಷತ್ಯಧಿಕರಣಾಕ್ಷೇಪಃ ಫಲಿತಃ' ಈಕ್ಷತ್ಯಧಿಕರಣವನ್ನೂ ಕೂಡ ಆಕ್ಷೇಪ ಮಾಡಿದಂತಾಯಿತೆಂಬುದು ಫಲತಃ ಸಿದ್ಧವಾಯಿತು ಎಂಬುದಾಗಿ ಶ್ರುತಪ್ರಕಾಶದಲ್ಲಿ ಹೇಳಲಾಗಿದೆ. ಆದ್ದರಿಂದ ಈಕ್ಷತ್ಯಧಿಕರಣದ ನ್ಯಾಯವನ್ನು ವಿವಕ್ಷಿಸಿ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲವೆಂದು ಹೇಗೆ ಹೇಳುತ್ತೀರಿ?

ಸಮಾಧಾನ - ಈಕ್ಷತ್ಯಧಿಕರಣವನ್ನು ಆಕ್ಷೇಪ ಮಾಡಲು ಯಾವುದಾದರೂ ಆಧಾರಗಳಿರಬೇಕು. ಆದರೆ ಯಾವುದೇ ಆಧಾರವಿಲ್ಲದ ಕಾರಣ ಹೇಗೆ ಆಕ್ಷೇಪ ಮಾಡುತ್ತೀರಿ. ಆದ್ದರಿಂದ ರಾಮಾನುಜರ ಅಧಿಕರಣಶರೀರವು ಅಸಾಧುವಾಗಿದೆ. ಇದನ್ನು ತಿಳಿಸಲೇ ಗ್ರಂಥಕಾರರು 'ಚೇತನಪರತ್ಯೆವ' ಎಂಬುದಾಗಿ ಏವಕಾರವನ್ನು ಉಲ್ಲೇಖ ಮಾಡಿದ್ದಾರೆ. ಶ್ರುತಿವಾಕ್ಯವು ಚೇತನವನ್ನೇ ಪ್ರತಿಪಾದನೆ ಮಾಡುತ್ತದೆ ಹೊರತು, ಪ್ರಕೃತಿಯನ್ನು ಪ್ರತಿಪಾದನೆ ಮಾಡುವುದಿಲ್ಲ ಎಂದು ಇದರ ಅಭಿಪ್ರಾಯ.

**प्रकाशः – स्फुटैवेत्युक्तं व्यनक्ति – तद्वेदमिति ।। ''स्पष्टजीवादिलिङ्गप्रतिपादनच्छायानुसारीणि वाक्यानि चतुर्थे विचार्यन्त'' इति त्वया भाषितत्वात् । अत्र च तत्प्रापकस्य कस्याप्यभावादिति भावः ।**

ರಾಮಾನುಜರ ಸಿದ್ಧಾಂತದಲ್ಲಿ ಪಾದಸಂಗತಿಯಿರುವುದಿಲ್ಲ ಎಂಬುದು ಅತ್ಯಂತ ಸ್ಪಷ್ಟ. ಇದನ್ನು ಸ್ವತಃ ಗ್ರಂಥಕಾರರೇ 'ತದ್ದೇದಮ್' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಏಕೆಂದರೆ 'ಸ್ಪಷ್ಟಜೀವಾದಿಲಿಂಗ-ಪ್ರತಿಪಾದನಚ್ಛಾಯಾನುಸಾರೀಣಿ ವಾಕ್ಯಾನಿ ಚತುರ್ಥೇ ವಿಚಾರ್ಯಂತೇ' ಸ್ಪಷ್ಟವಾಗಿ ಜೀವರನ್ನೋ ಅಥವಾ

ಪ್ರಕೃತಿಯನ್ನೋ ಪ್ರತಿಪಾದನೆ ಮಾಡುವಂತಹ ಲಿಂಗಗಳು ಶ್ರುತಿಯಲ್ಲಿವೆ ಎಂದು ಆಪಾತತಃ ತೋರುತ್ತವೆ. ಅಂತಹ ವಾಕ್ಯಗಳನ್ನು ಈ ನಾಲ್ಕನೆಯ ಪಾದದಲ್ಲಿ ವಿಚಾರ ಮಾಡುತ್ತಿದ್ದೇವೆ ಎಂಬುದಾಗಿ ನೀವೇ ಹೇಳಿರುತ್ತೀರಿ. ಆದರೆ ಈ ಅಧಿಕರಣದಲ್ಲಿ ಸ್ವೀಕರಿಸಿದ ವಾಕ್ಯದಲ್ಲಿ ಅಂತಹ ಜೀವಾದಿಪ್ರಾಪಕವಾದ ಯಾವುದೇ ಸ್ಪಷ್ಟಲಿಂಗಗಳು ಕಾಣಿಸುತ್ತಿಲ್ಲ. ಆದ್ದರಿಂದ ಪಾದಸಂಗತಿಯು ಈ ಅಧಿಕರಣಕ್ಕೆ ಇರುವುದಿಲ್ಲ.

**प्रकाशः** – यत्कश्चिच्चैव आह व्यपदिष्टस्य ''आत्मा वा इदमेक एवाग्र आसीत्'' इत्यादिविशेषवाक्यनिर्दिष्टस्यात्मशब्दितस्य ब्रह्मण एव आकाशादिषु ''आत्मन आकाशस्सम्भूतः'' इति श्रुताकाशादिषु कार्येषु कारणत्वेनोक्तेर्यथा कारणवाक्येषु न तान्त्रिकाव्याकृतग्रहणं तथात्रापि वाक्यशेषरूपविशेषवाक्य-निर्दिष्टानामिन्द्रियाणामेवोक्तेर्न तान्त्रिकतत्वग्रहणं पञ्चजनशब्देनेत्याद्यर्थपरतयैतत्सूत्रं च पूर्वशेषो नाधिकरणान्तरमिति

ಶೈವರ ಅಧಿಕರಣಶರೀರ ಹಾಗೂ ಸೂತ್ರಾರ್ಥ ಹೀಗಿದೆ - 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' ಇತ್ಯಾದಿ ವಿಶೇಷವಾಕ್ಯದಲ್ಲಿ ನಿರ್ದೇಶಿಸಲ್ಪಟ್ಟ ಆತ್ಮಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ 'ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಆಕಾಶಾದಿಕಾರ್ಯಗಳಿಗೆ ಬ್ರಹ್ಮನು ಕಾರಣನಾಗಿದ್ದಾನೆ. ಇಷ್ಟು 'ವ್ಯಪದಿಷ್ಟ' ಎಂಬ ಶಬ್ದದ ಅರ್ಥ. 'ಯಥಾ' ಎಂದರೆ ಕಾರಣವಾಕ್ಯಗಳಲ್ಲಿ ಹೇಗೆ ಸಾಂಖ್ಯಸ್ಮೃತಿಸಿದ್ಧವಾದ ಅವ್ಯಾಕೃತವಾದ ಪ್ರಕೃತಿಯನ್ನು ಸ್ವೀಕರಿಸುವುದಿಲ್ಲವೋ, ಅದರಂತೆ ಇಲ್ಲಿಯೂ ಕೂಡ ವಾಕ್ಯಶೇಷ ಎಂಬ ವಿಶೇಷವಾಕ್ಯದಲ್ಲಿ ನಿರ್ದೇಶಿಸಲ್ಪಟ್ಟ ಇಂದ್ರಿಯಾದಿಗಳೇ ಪ್ರತಿಪಾದ್ಯವಾಗಿವೆ, ಸಾಂಖ್ಯಸ್ಮೃತಿಸಿದ್ಧವಾದ ಪ್ರಕೃತಿಯು ಪಂಚಜನ ಶಬ್ದದಿಂದ ಪ್ರತಿಪಾದ್ಯವಾಗುವುದಿಲ್ಲ. ಹೀಗೆ ಈ ಸೂತ್ರವು ಹಿಂದಿನ ಅಧಿಕರಣದ ಗುಣಸೂತ್ರವಾಗಿದೆ, ಪ್ರತ್ಯೇಕ ಅಧಿಕರಣವಲ್ಲ.

**प्रकाशः** – तत्र । दृष्टान्तोक्त्या पूर्वशेषत्वे विशेषाभावात् । सूत्रे पञ्चम्यन्वयसिद्ध्यर्थं न तान्त्रिकप्रधानग्रहणमित्यध्याहाराच्च । यथाव्यपदिष्टोक्तिस्तथा प्राणादयो ग्राह्या इति प्रथमान्तोक्तेरेव स्वारस्याच्च । चशब्दानर्थक्याच्च । आत्मनो ब्रह्मत्वस्य सांख्यं प्रत्यसिद्धेश्चेति यत्किञ्चिदेतत् । दुर्गमं टीकावाक्यं व्यनक्ति – वाक्येति ।।

इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते
चन्द्रिकाप्रकाशे आकाशाधिकरणं सम्पूर्णम् ।।४।।

ಶೈವರ ಈ ಅಧಿಕರಣ ಶರೀರ ಅಸಾಧುವಾಗಿದೆ. ಕೇವಲ ದೃಷ್ಟಾಂತವನ್ನು ಹೇಳಲು ಈ ಸೂತ್ರವು ಹೊರಟಿದೆಯೆಂಬ ಕಾರಣದಿಂದ ಹಿಂದಿನ ಅಧಿಕರಣಕ್ಕೆ ಸೇರಿಸುವುದರಲ್ಲಿ ಯಾವುದೇ ವಿಶೇಷ ಕಾರಣವಿರುವುದಿಲ್ಲ. ಮತ್ತು ಸೂತ್ರದಲ್ಲಿ 'ಯಥಾವ್ಯಪದಿಷ್ಟೋಕ್ತೇಃ' ಎಂಬುದಾಗಿ ಪಂಚಮೀವಿಭಕ್ತ್ಯಂತವಾದ

ಪದದ ಅನ್ವಯಕ್ಕಾಗಿ 'ನ ತಾಂತ್ರಿಕಪ್ರಧಾನಗ್ರಹಣಮ್' ತಂತ್ರಸಿದ್ಧವಾದ ಪ್ರಧಾನವನ್ನು ಸ್ವೀಕರಿಸಬಾರದು ಎಂಬ ಪದವನ್ನು ನೀವು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಮತ್ತು ಹೇಗೆ ದೃಷ್ಟಾಂತವನ್ನು ನೀಡುವಾಗ 'ಯಥಾ ಮಹಾನಸಃ' ಎಂಬುದಾಗಿ ಪ್ರಥಮಾವಿಭಕ್ತ್ಯಂತವಾಗಿ ಶಬ್ದವನ್ನು ಪ್ರಯೋಗಿಸಬೇಕೋ. ಅದರಂತೆ ಇಲ್ಲಿಯೂ ಕೂಡ ದೃಷ್ಟಾಂತವನ್ನು ಹೇಳುವ ಸೂತ್ರದಲ್ಲಿ 'ಯಥಾವ್ಯಪದಿಷ್ಟೋಕ್ತಿಃ' ಎಂಬುದಾಗಿ ಪ್ರಥಮವಿಭಕ್ತಿಯನ್ನೇ ಹೇಳುವುದು ಸ್ವರಸವಾಗುತ್ತದೆ. ಸೂತ್ರದಲ್ಲಿ 'ಚ'ಶಬ್ದಕ್ಕೆ ಯಾವುದೇ ಅರ್ಥವನ್ನು ನೀವು ಮಾಡಿಲ್ಲ. ಮತ್ತು ಆತ್ಮನು ಬ್ರಹ್ಮನಾಗಿದ್ದಾನೆ ಎಂದು ಹೇಳುತ್ತಿದ್ದೀರಿ. ಇದನ್ನು ಪೂರ್ವಪಕ್ಷಕಾರರೇ ಆದ ಸಾಂಖ್ಯನು ಒಪ್ಪುವುದೇ ಇಲ್ಲ. ಹೊರತಾಗಿ ಆತ್ಮಶಬ್ದವೂ ಕೂಡ ಪ್ರಕೃತಿಪರವೆಂದು ಸಮರ್ಥಿಸುತ್ತಾನೆ. ಆದ್ದರಿಂದ ನಿಮ್ಮ ಈ ಅಧಿಕರಣದ ವಿಚಾರಗಳೆಲ್ಲವೂ ಹುರುಳಿಲ್ಲದವುಗಳಾಗಿವೆ.

ಬಹಳ ಕಠಿಣವಾದ ಟೀಕಾವಾಕ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ವಾಕ್ಯ' ಇತ್ಯಾದಿ ಗ್ರಂಥದಿಂದ.

ಇಲ್ಲಿಗೆ ಶ್ರೀ ಸರ್ವತಂತ್ರ ಸ್ವತಂತ್ರ ಶ್ರೀಸುಧೀಂದ್ರಗುರುಪಾದರ ಶಿಷ್ಯಂದಿರಾದ
ಶ್ರೀ ರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಆಕಾಶಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम् – प्रासङ्गिकत्वमुपपादयति ।। विप्रतिषेधादिति ।। अन्यथेति।। साक्षात्सङ्गतिसम्भवेऽपि प्रासङ्गिकोक्तौ ।। वैपरीत्येति ।। परस्परविरोध एव** प्रतिपाद्यः । मानान्तराविरोधस्तु प्रासङ्गिक इति वैपरीत्यापातादिति भावः ।।

।। इति श्रीकेशवभट्टारकेण विरचितायां भावदीपिकायाम्
आकाशाधिकरणं सम्पूर्णम् ।।४।।




ರಾಮಾನುಜರ ಅಧಿಕರಣಶರೀರ ಹಾಗೂ ಸೂತ್ರವ್ಯಾಖ್ಯಾನ ಹೀಗಿದೆ - ಸಮಸ್ತ ಜಗತ್ತಿಗೆ ಬ್ರಹ್ಮನು ಕಾರಣನೇ ಅಲ್ಲ. ಏಕೆಂದರೆ ಛಾಂದೋಗ್ಯೋಪನಿಷತ್ತಿನಲ್ಲಿ 'ಸದೇವ ಸೌಮ್ಯೇದಮಗ್ರ ಆಸೀತ್' ಎಂಬುದಾಗಿ 'ಸತ್' ಎಂಬ ವಸ್ತುವಿನಿಂದ, 'ಅಸದೇವ ಇದಮಗ್ರ ಆಸೀತ್'ಎಂಬುದಾಗಿ ತೈತ್ತಿರೀಯೋಪನಿಷತ್ತಿನಲ್ಲಿ 'ಅಸತ್' ಎಂಬ ವಸ್ತುವಿನಿಂದ ಜಗತ್ತು ಹುಟ್ಟುತ್ತದೆ ಎಂದು ಹೇಳಲಾಗಿದೆ. ಒಬ್ಬನೇ ಬ್ರಹ್ಮನು ಸತ್ ಸ್ವರೂಪನು, ಹಾಗೂ ಅಸತ್ ಸ್ವರೂಪನು ಆಗಲು ಸಾಧ್ಯವಿಲ್ಲ. ಆದ್ದರಿಂದ ಪ್ರಕೃತಿಯನ್ನೇ ಜಗತ್‌ಕಾರಣವೆನ್ನಬೇಕು. ಈ ಪ್ರಕೃತಿಯು ನಿತ್ಯವಾದ್ದರಿಂದ 'ಸತ್' ಎನಿಸಿಕೊಳ್ಳುತ್ತದೆ. ಸೃಷ್ಟಿಕಾಲದಲ್ಲಿ ಪರಿಣಾಮವನ್ನು ಹೊಂದುವುದರಿಂದ 'ಅಸತ್' ಎಂದು ಕರೆಸಿಕೊಳ್ಳುತ್ತದೆ. ಮತ್ತು 'ತದ್ಧೇದಂ ಅವ್ಯಾಕೃತಮಾಸೀತ್' ಎಂಬುದಾಗಿ ಪ್ರಕೃತಿಯಲ್ಲಿ ಎಲ್ಲಾ ವಸ್ತುಗಳ ಪ್ರಳಯವನ್ನು ಹೇಳಿ, 'ತತ್

ನಾಮರೂಪಾಭ್ಯಾಂ ವ್ಯಾಕ್ರಿಯತೇ' ಅಂತಹ ಪ್ರಕೃತಿಯಿಂದಲೇ ಸಮಸ್ತ ಜಗತ್ತು ಹುಟ್ಟುತ್ತದೆಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ. ಆದ್ದರಿಂದ 'ಆತ್ಮನ ಆಕಾಶಃ ಸಂಭೂತಃ' ಎಂಬ ವಾಕ್ಯದಲ್ಲಿರುವ ಆತ್ಮಶಬ್ದಕ್ಕೂ ಕೂಡ ಎಲ್ಲೆಡೆ ವ್ಯಾಪ್ತವಾದ್ದರಿಂದ ಪ್ರಕೃತಿಯನ್ನೇ ಪ್ರತಿಪಾದ್ಯವೆಂದು ಹೇಳಬೇಕು. ಹೀಗೆ ಪ್ರಕೃತಿಯು ಜಗತ್‌ಕಾರಣವೆಂದು ಪೂರ್ವಪಕ್ಷ.

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಬ್ರಹ್ಮನ ಸ್ವರೂಪವನ್ನು ಹೇಳಿ, ಪುನಃ ಮುಂದೆ 'ತಸ್ಮಾದ್ ವಾ ಏತ್‌ಸ್ಮಾತ್ ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಅಂತಹ ಬ್ರಹ್ಮನನ್ನೇ ಪರಾಮರ್ಶ ಮಾಡಲಾಗಿದೆ. ಆದ್ದರಿಂದ ಅಲ್ಲಿ ಹೇಗೆ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಇಲ್ಲಿಯೂ ಕೂಡ 'ತದ್ಧೇದಂ ಅವ್ಯಾಕೃತಮಾಸೀತ್' ಎಂಬಲ್ಲಿರುವ 'ತತ್' ಪದದಿಂದ ಬ್ರಹ್ಮನನ್ನೇ ಪರಾಮರ್ಶ ಮಾಡಬೇಕು. ಆದ್ದರಿಂದ ಜಗತ್ ಕಾರಣಪ್ರತಿಪಾದಕ ವಾಕ್ಯಗಳೂ ಕೂಡ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಪ್ರಕೃತಿಯನ್ನಲ್ಲ. ಇಷ್ಟು ಸಿದ್ಧಾಂತ.

ರಾಮಾನುಜರ ಈ ಅಧಿಕರಣ ಶರೀರವು ಅಸಾಧುವಾಗಿವೆ. ಏಕೆಂದರೆ 'ತದ್ಧೇದಂ ಅವ್ಯಾಕೃತ ಆಸೀತ್' ಎಂಬ ಶ್ರುತಿಯ ಮುಂದಿನ ವಾಕ್ಯದಲ್ಲಿ 'ಪಶ್ಯಂಶ್ಚಕ್ಷುಃ ಶ್ರುಣ್ವನ್ ಶ್ರೋತ್ರಮ್' ಎಂಬುದಾಗಿ ದರ್ಶನ-ಶ್ರವಣಾದಿಗಳನ್ನು ಸ್ಪಷ್ಟವಾಗಿ ಹೇಳಲಾಗಿದೆ. ಈ ಎಲ್ಲವೂ ಕೂಡ ಚೇತನಧರ್ಮವಾದ್ದರಿಂದ ಬ್ರಹ್ಮನಲ್ಲೇ ಬರುತ್ತವೆ, ಜಡವಾದ ಪ್ರಕೃತಿಯಲ್ಲಿ ಸರ್ವಥಾ ಬರುವುದಿಲ್ಲ. ಇಂತಹ ಬಹುಶ್ರುತಿಗಳಿಂದ ಏಕಶ್ರುತಿಗೆ ಬಾಧವನ್ನು ಹೇಳಬೇಕು. ಈಗಾಗಲೇ ಈಕ್ಷತ್ಯಧಿಕರಣದಲ್ಲಿಯೂ ಈಕ್ಷಣವು ಬ್ರಹ್ಮನ ಧರ್ಮವೆಂದು ನಿರ್ಣಯವಾಗಿರುವಾಗ ಪುನಃ ಈ ಅಧಿಕರಣದಲ್ಲಿ ಪೂರ್ವಪಕ್ಷ ಹುಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ ಪೂರ್ವಪಕ್ಷವು ಹುಟ್ಟದ ಕಾರಣ ಸಿದ್ಧಾಂತವೂ ಕೂಡ ಹುಟ್ಟುವುದಿಲ್ಲ. ಮತ್ತು ಈ ಅಧಿಕರಣಕ್ಕೆ ಪಾದಸಂಗತಿಯೂ ಕೂಡ ಇರುವುದಿಲ್ಲ. ಏಕೆಂದರೆ ಸ್ಪಷ್ಟವಾದ ಜೀವಾದಿಲಿಂಗ ಪ್ರತಿಪಾದಕವಾದ ಛಾಯೆ ಇದ್ದರೆ ಅಂತಹ ವಾಕ್ಯಗಳ ಸಮನ್ವಯಕ್ಕಾಗಿ ಈ ಪಾದವು ಹೊರಟದೆಯೆಂದು ನೀವು ಹೇಳುತ್ತೀರಿ. ಪ್ರಕೃತ 'ತದ್ಧೇದಂ ಅವ್ಯಾಕೃತಮ್ ಎಂಬ ವಾಕ್ಯದಲ್ಲಿ ಸ್ಪಷ್ಟವಾದ ಪ್ರಕೃತಿ ಪರವಾದ ಲಿಂಗಗಳು ಯಾವುದೂ ಸಹ ಕಾಣಿಸುತ್ತಿಲ್ಲ. ಆದ್ದರಿಂದ ಪಾದಸಂಗತಿಯು ಇರುವುದಿಲ್ಲ. ಹೀಗೆ ಸೃಷ್ಟಿ-ಪ್ರಳಯಗಳನ್ನು ಹೇಳುವ ವಾಕ್ಯದಲ್ಲಿ ಪ್ರಧಾನಕ್ಕೆ ಪೂರಕವಾದ ಅಸಾಧಾರಣವಾದ ಲಿಂಗವಾಗಲೀ, ರೂಢಶಬ್ದವಾಗಲೀ ಇರುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣಶರೀರವು ಅಸಾಧುವಾಗಿದೆ.

# ಆಕಾಶಾಧಿಕರಣ

(೧-೪-೪)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣ ಟೀಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणम्

## आकाशाधिकरणम् ।। १।४।४।।

न्या.वि.— व्यक्त्यपेक्षया कारणत्वं च ।। ४ ।।

इति श्रीमदानन्दतीर्थभगवत्पादाचार्यविरचिते
श्रीमन्न्यायविवरणे प्रथमाध्यायस्य चतुर्थः पादः ।।
प्रथमाध्यायश्च समाप्तः ।।

ನ್ಯಾಯವಿವರಣೆ

ಆಕಾಶದಲ್ಲಿರುವ ವಿಷ್ಣುರೂಪಗಳಿಗೆ ಕಾರ್ಯತ್ವೇನ ಅಭಿವ್ಯಕ್ತಿ ಇದ್ದಾಗ, ಕಾರಣತ್ವೇನ ಅಭಿವ್ಯಕ್ತಿ ಇರುವುದಿಲ್ಲ. ಕಾರಣತ್ವೇನ ಅಭಿವ್ಯಕ್ತಿಯಾಗಿದ್ದಾಗ, ಕಾರ್ಯತ್ವೇನ ಅಭಿವ್ಯಕ್ತಿ ಇರುವುದಿಲ್ಲ. ಇದು ವಿಶೇಷ ಬಲದಿಂದ ಉಪಪನ್ನವಾಗುತ್ತದೆ. ಆದ್ದರಿಂದ ವಿಷ್ಣುವೇ ಆಕಾಶ ಮೊದಲಾದ ಶಬ್ದಗಳಿಂದ ವಾಚ್ಯನಾಗುತ್ತಾನೆ ಎಂಬ ಸಿದ್ಧಾಂತವು ಸ್ಥಾಪಿತವಾಗುತ್ತದೆ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು.

भा.बो.— कारणत्वेन चाकाशादिषु यथा व्यपदिष्टोक्तेः । इत्यत्र 'आत्मन आकाशः सम्भूतः' इति वाक्यगताकाशादिशब्दाः उक्तबीजेनाकाशादिमात्रवाचका

उत विष्णोरपीति सन्देहे आकाशादेरेवेति पूर्वः पक्षः । विष्णोरपीति सिद्धान्तः । एतत्पूर्वपक्षसिद्धान्तसम्बन्धित्वेन 'विरोधः कार्यतद्वतोः' इति, 'ईशास्य व्यक्त्यव्यक्तिविशेषिता' इति न्यायौ पूर्ववदेव विवृणोति – **व्यक्त्यपेक्षयेति** ।।

ನ್ಯಾಯವಿವರಣೆ ಟೀಕೆ

'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಈ ಅಧಿಕರಣದಲ್ಲಿ 'ಆತ್ಮನ ಆಕಾಶಃ ಸಂಭೂತಃ' ಎಂಬ ವಾಕ್ಯದಲ್ಲಿರುವ ಆಕಾಶಾದಿಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಹಿಂದಿನ ಅಧಿಕರಣದ ಸಂದೇಹಬೀಜದಂತೆ ಆಕಾಶಾದಿ ಶಬ್ದಗಳು ಭೂತಾಕಾಶವನ್ನೇ ಪ್ರತಿಪಾದನೆ ಮಾಡುತ್ತವೋ, ಅಥವಾ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೋ ? ಎಂಬ ಸಂದೇಹವು ಪ್ರಾಪ್ತವಾಗುತ್ತವೆ. ಭೂತಾಕಾಶಾದಿಗಳೇ ಪ್ರತಿಪಾದ್ಯವಾಗುತ್ತವೆಂಬುದು ಪೂರ್ವಪಕ್ಷ. ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ ಎಂಬುದು ಸಿದ್ಧಾಂತ. ಈ ಪೂರ್ವಪಕ್ಷಕ್ಕೆ ಸಂಬಂಧಿಯಾಗಿ 'ವಿರೋಧಃ ಕಾರ್ಯತದ್ವತೋಃ' ಕಾರ್ಯ ಹಾಗೂ ಕಾರಣಗಳಿಗೂ ಅಧಿಕರಣದ ವಿರೋಧವು ಬರುತ್ತದೆ. ಅಂದರೆ ಒಬ್ಬನಲ್ಲಿ ಕಾರ್ಯಕಾರಣಭಾವವು ಕೂಡುವುದಿಲ್ಲ ಎಂಬ ನ್ಯಾಯವನ್ನು ವಿವಕ್ಷಿಸಬೇಕು. ಸಿದ್ಧಾಂತಕ್ಕೆ ಸಂಬಂಧಪಟ್ಟಂತೆ 'ಈಶಸ್ಯ ವ್ಯಕ್ತ್ಯವ್ಯಕ್ತಿವಿಶೇಷಿತಾ' ಶ್ರೀಹರಿಗೆ ಅಭಿವ್ಯಕ್ತಿ ಹಾಗೂ ಅನಭಿವ್ಯಕ್ತಿಗಳೆಂಬ ವಿಶೇಷವು ಇರುತ್ತದೆ ಎಂಬ ನ್ಯಾಯವನ್ನು ವಿವಕ್ಷಿಸಬೇಕು. ಇದನ್ನೇ 'ವ್ಯಕ್ತ್ಯಪೇಕ್ಷಯಾ' ಎಂಬ ಮೂಲದಿಂದ ವಿವರಿಸುತ್ತಿದ್ದಾರೆ.

अव्यक्त्यपेक्षयेत्यपि ज्ञातव्यम् । चशब्दः कारणत्वसमुच्चयार्थो, 'युज्यते' इत्यस्यानुकर्षणार्थश्च(इति) ज्ञातव्यः ।

'तस्यैव' इत्यस्योभयत्रानुवृत्तिः । 'युज्यत' इत्येतदनुकर्षः । एकस्यैव कार्यकारणभावानुपपत्तिरेतत्पूर्वपक्षसाधिकेति 'विरोधः कार्यतद्वतोः' इति न्यायो विवृतो भवति ।

'ವ್ಯಕ್ತ್ಯಪೇಕ್ಷಯಾ' ಎಂಬಲ್ಲಿ ಅವ್ಯಕ್ತ್ಯಪೇಕ್ಷಯಾ ಎಂದೂ ಕೂಡ ಪದಚ್ಛೇದವನ್ನು ಮಾಡಿಕೊಳ್ಳಬೇಕು. 'ಚ'ಶಬ್ದವು 'ಅವ್ಯಕ್ತ್ಯಪೇಕ್ಷಯಾ ಕಾರಣತ್ವಂ' ಎಂಬುದಕ್ಕೆ ಸಮುಚ್ಚಾಯಕವಾಗಿದೆ. 'ಯುಜ್ಯತೇ' ಎಂಬುದನ್ನು ಅನುಕರ್ಷಣ ಮಾಡುವುದಕ್ಕಾಗಿಯೂ 'ಚ' ಶಬ್ದವಿರುತ್ತದೆ. 'ತಸ್ಯೈವ' ಎಂಬುದನ್ನು ಎರಡೂ ಕಡೆಯೂ ಅನುವೃತ್ತಿ ಮಾಡಿಕೊಳ್ಳಬೇಕು. 'ಯುಜ್ಯತೇ' ಎಂಬುದನ್ನೂ ಕೂಡ ಅನುಕರ್ಷ ಮಾಡಿಕೊಳ್ಳಬೇಕು. ಒಬ್ಬನೇ ವ್ಯಕ್ತಿಗೆ ಕಾರ್ಯಕಾರಣಭಾವವು ಅನುಪಪನ್ನವಾಗುತ್ತದೆಂಬುದು ಪೂರ್ವಪಕ್ಷ ಸಾಧಕವಾದ ನ್ಯಾಯ. ಅದನ್ನೇ 'ವಿರೋಧಃ ಕಾರ್ಯತದ್ವತೋಃ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಅದನ್ನು ಈಗ ವಿವರಿಸಿದಂತಾಯಿತು.

तथा च आकाशवाय्वादिशब्दवाच्यत्वे विष्णोः कारणत्वप्राप्तिः । कार्यकारणयोरेकत्वस्य विरोधात् । भूताकाशाचेवाकाशादिशब्दवाच्यमिति पूर्वपक्षे, व्यक्त्यव्यक्तिविशेषत्वादीश्वरस्य कार्यकारणभावोपपत्तेर्विष्णुराकाशादिशब्दवाच्य इति सिद्धान्त इति भावः ।

ಆದ್ದರಿಂದ ಮಹಾವಿಷ್ಣುವು ಆಕಾಶ ಹಾಗೂ ವಾಯು ಮೊದಲಾದ ಶ್ರುತಿಗಳಿಂದ ಪ್ರತಿಪಾದ್ಯನಾದರೆ ವಿಷ್ಣುವಿಗೆ ಕಾರ್ಯತ್ವ ಹಾಗೂ ಕಾರಣತ್ವಗಳೆರಡೂ ಪ್ರಾಪ್ತವಾಗುತ್ತವೆ. ಒಬ್ಬನೇ ವ್ಯಕ್ತಿಯಲ್ಲಿ ಇವೆರಡೂ ವಿರುದ್ಧವಾಗುವುದರಿಂದ ಭೂತಾಕಾಶ, ಭೂತವಾಯು ಮೊದಲಾದವೇ 'ಆಕಾಶ', 'ವಾಯು' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವೆಂದು ಪೂರ್ವಪಕ್ಷ. ಆಕಾಶಾದಿಗಳಲ್ಲಿರುವ ವಿಷ್ಣುರೂಪಗಳಿಗೆ ಒಂದೊಂದು ವಿಧವಾಗಿ ಅಂದರೆ ಕಾರ್ಯತ್ವೇನ ಅಭಿವ್ಯಕ್ತಿಯಿದ್ದಾಗ, ಕಾರಣತ್ವೇನ ಅಭಿವ್ಯಕ್ತಿಯಿರುವುದಿಲ್ಲ. ಕಾರಣತ್ವೇನ ಅಭಿವ್ಯಕ್ತಿಯಿದ್ದಾಗ, ಕಾರ್ಯತ್ವೇನ ಅಭಿವ್ಯಕ್ತಿಯಿರುವುದಿಲ್ಲ. ಹೀಗೆ ಅಭಿವ್ಯಕ್ತಿ ಹಾಗೂ ಅನಭಿವ್ಯಕ್ತಿಗಳೆಂಬ ವಿಶೇಷಗಳನ್ನು ವಿವಕ್ಷಿಸಿ ಕಾರ್ಯಕಾರಣಭಾವವನ್ನು ಉಪಪಾದನೆ ಮಾಡಬೇಕು. ಹಾಗಾಗಿ ಮಹಾವಿಷ್ಣುವೇ 'ಆಕಾಶ', 'ವಾಯು' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತನೆಂಬ ಸಿದ್ಧಾಂತವು ಸ್ಥಾಪಿತವಾಗುತ್ತದೆ.

भा.बो. — ।। प्रकृतिश्च प्रतिज्ञा दृष्टान्तानुपरोधात् ।। इत्यधिकरणपूर्वपक्ष सिद्धान्तसम्बन्धिनौ 'स्त्रीलिङ्गत्वम्' इति 'उत्पादनं स्वदेहाच्च' इति न्यायौ भाष्य एव स्पष्टप्रतिभासत्वादत्र न विवृतौ ।

'ದೃಷ್ಟಾಂತಾನುಪರೋಧಾತ್' ಎಂಬ ಅಧಿಕರಣದ ಪೂರ್ವಪಕ್ಷ ಹಾಗೂ ಸಿದ್ಧಾಂತಗಳಿಗೆ ಸಂಬಂಧಪಟ್ಟ 'ಸ್ತ್ರೀಲಿಂಗತ್ವಮ್' ಮತ್ತು 'ಉತ್ಪಾದನಂ ಸ್ವದೇಹಾಚ್ಚ' ಎಂಬೆರಡು ನ್ಯಾಯಗಳನ್ನು ಭಾಷ್ಯದಲ್ಲಿಯೇ ಅತ್ಯಂತ ಸ್ಪಷ್ಟವಾಗಿ ವಿವರಿಸಲಾಗಿದೆ. ಆದ್ದರಿಂದ ಪ್ರತ್ಯೇಕವಾಗಿ ಪುನಃ ಇಲ್ಲಿ ವಿವರಣೆಯನ್ನು ಮಾಡಿಲ್ಲ.

एतेन सर्वे व्याख्याताः।। इत्यत्रापि अधिकरणपूर्वपक्षसिद्धान्तसम्बन्धिनौ 'निषेधश्च' इति 'दुर्जनाव्यक्तता' इति न्यायौ भाष्य एव स्पष्टं प्रतिपादितत्वान्नेह विवृताविति ।

**इति श्रीमन्न्यायविवरणभावबोधे श्रीरघूत्तमयतिकृते प्रथमाध्यायस्य चतुर्थः पादः ।।**

**प्रथमाध्यायश्च समाप्तः ।।**

'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಅಧಿಕರಣದಲ್ಲಿಯೂ ಪೂರ್ವಪಕ್ಷ ಹಾಗೂ ಸಿದ್ಧಾಂತಗಳಿಗೆ ಸಂಬಂಧಪಟ್ಟ 'ನಿಷೇಧಶ್ಚ' ಮತ್ತು 'ದುರ್ಜನಾವ್ಯಕ್ತಾ' ಎಂಬೆರಡು ನ್ಯಾಯಗಳನ್ನು ಭಾಷ್ಯದಲ್ಲಿ ಸ್ಪಷ್ಟವಾಗಿ ಪ್ರತಿಪಾದನೆ ಮಾಡಲಾಗಿದೆ. ಪುನಃ ಅದನ್ನು ಇಲ್ಲಿ ವಿವರಿಸಿರುವುದಿಲ್ಲ.

ಇಲ್ಲಿಗೆ ಶ್ರೀಮನ್ನ್ಯಾಯವಿವರಣ ಭಾವಬೋಧದಲ್ಲಿ ಶ್ರೀರಘೂತ್ತಮಯತಿಗಳಿಂದ ರಚಿತವಾದ
ಪ್ರಥಮಾಧ್ಯಾಯದ ನಾಲ್ಕನೆಯ ಪಾದದ ಟೀಕೆಯು ಸಮಾಪ್ತವಾಯಿತು.
ಪ್ರಥಮಾಧ್ಯಾಯವು ಮುಗಿಯಿತು.

* * * * *

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## आकाशाधिकरणम् (१।४।४)

**अवान्तरं कारणं च**

ವಿಷ್ಣುವೇ ಅವಾಂತರ ಕಾರಣನಾಗಿರುವುದರಿಂದ ಆಕಾಶಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ.

* * *

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## आकाशाधिकरणम् (१।४।४)

नन्वथापि न सर्वशब्दवाच्यता विष्णोः । 'आत्मन आकाशः सम्भूतः' इति तैत्तिरीयादौ श्रुतभूतोत्पत्तिप्रतिपादकवाक्यस्थाकाशादिशब्दानां कार्यत्वे सति कारणत्वरूपावान्तरकारणत्वलिङ्गेन आकाशादिभूतमात्रवाचकत्वादित्यतः प्राप्तम् – **कारणत्वेन चाकाशादिषु यथा व्यपदिष्टोक्तेरिति** । तदर्थः – अवान्तरं कारणं चेति ।

ಹಿಂದಿನ ಅಧಿಕರಣದಲ್ಲಿ ಹೇಳಿದ ನ್ಯಾಯವನ್ನು ಅನುಸರಿಸಿದರೂ ಕೂಡ ವಿಷ್ಣುವು ಸರ್ವಶಬ್ದವಾಚ್ಯನಾಗಲಾರನು. ಏಕೆಂದರೆ 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿಯಾದ ತೈತ್ತಿರೀಯೋಪನಿಷತ್ತಿನಲ್ಲಿ ಆಕಾಶಾದಿಗಳಿಗೆ ಉತ್ಪತ್ತಿಯನ್ನು ಹೇಳುವಾಗ ಆಕಾಶವು ಕಾರ್ಯವೂ ಮತ್ತು ಕಾರಣವೂ ಆಗಿದೆಯೆಂದು ನಿರ್ದೇಶಿಸಲಾಗಿದೆ. ಆದ್ದರಿಂದ ಆಕಾಶವೆಂದರೆ ಭೂತಾಕಾಶವನ್ನೇ ವಿವಕ್ಷಿಸಬೇಕು. ಏಕೆಂದರೆ 'ಅವಾಂತರಕಾರಣತ್ವ' ಎಂಬ ಈ ಲಿಂಗವು ಭೂತಾಕಾಶದಲ್ಲಿ ಮಾತ್ರ ಬರುತ್ತದೆ ಹೊರತು, ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ವಿಷ್ಣು ಸರ್ವಶಬ್ದವಾಚ್ಯನು ಹೇಗೆ ಆಗುತ್ತಾನೆ ? ಎಂಬ ಆಕ್ಷೇಪಕ್ಕೆ ಉತ್ತರಿಸಲು 'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರವು ಹೊರಟಿದೆ. ಇದರ ಸಾರವನ್ನು 'ಅವಾಂತರಂ ಕಾರಣಂ ಚ' ಎಂಬ ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ.

पूर्ववदनुषङ्गः । सम्भूतवाक्ये श्रुतं कार्यत्वं सति कारणत्वरूपं यदवान्तरं कारणं च तदेको जनार्दनः । न केवलं आत्मन इति श्रुतं मूलकारणमिति वा प्रागुक्तसमुच्चये वा चशब्दः । तथा चान्यत्रैव नियतैरपि उत्पत्तिमत्त्वादिलिङ्गेन अन्यत्रैव प्रसिद्धै-रप्याकाशवाय्वग्न्यादिसर्वशब्दैर्मुख्यतया परममुख्यत्वेनैको जनार्दन उदितः । ननु आकाशादिभूतम् । कुतः । शब्दैः प्रागुक्तसर्वशब्दवाच्यत्वबोधकैः 'नामानि सर्वाणि', 'ता वा एताः', 'तमेवैकं जानथ' इत्यादि शब्दैरित्यर्थः ।

ಇಲ್ಲಿಯೂ ಕೂಡ ಹಿಂದಿನ ಅಧಿಕರಣದಂತೆ 'ಏಕೋ ಜನಾರ್ದನಃ' ಎಂಬುದಾಗಿ 'ಅನ್ಯತ್ರ ನಿಯತೈರಪಿ ಮುಖ್ಯತಯೋದಿತಃ ಶಬ್ದೈಃ' ಎಂಬುದಾಗಿಯೂ ಅನುಷಂಗ ಮಾಡಿಕೊಳ್ಳಬೇಕು. 'ಆತ್ಮನ ಆಕಾಶಃ

ಸಂಭೂತಃ' ಎಂಬ ಶ್ರುತಿಯಲ್ಲಿ 'ಕಾರ್ಯತ್ವೇऽಪಿ ಕಾರಣತ್ವಂ' ಎಂಬ ಅವಾಂತರಕಾರಣವನ್ನು ಹೇಳಿದ್ದು ಮಹಾವಿಷ್ಣುವಿನಲ್ಲಿ ಯುಕ್ತವಾಗುತ್ತದೆ. ಮಹಾವಿಷ್ಣುವು ಕೇವಲ ಎಲ್ಲಾ ಪದಾರ್ಥಗಳಿಗೂ ಮೂಲಕಾರಣನೆಂದಷ್ಟೇ ಅಲ್ಲ ಅವಾಂತಕಾರಣನೂ ಆಗಿರುತ್ತಾನೆಂಬುದನ್ನು 'ಚ' ಶಬ್ದದಿಂದ ಸಮುಚ್ಚಯ ಮಾಡಬೇಕು. ಆದ್ದರಿಂದ 'ಉತ್ಪತ್ತಿಮತ್ತ್ವ' ಎಂಬ ಧರ್ಮದಿಂದ ಭೂತಾಕಾಶ ಹಾಗೂ ಭೂತವಾಯುಗಳಲ್ಲಿ ಪ್ರಸಿದ್ಧವಾದ 'ಆಕಾಶ', 'ವಾಯು' ಮೊದಲಾದ ಶಬ್ದಗಳಿಂದೆಲ್ಲಾ ಮುಖ್ಯವೃತ್ತಿಯಿಂದ ಆಯಾ ಪದಾರ್ಥಗಳು ಪ್ರತಿಪಾದ್ಯವಾದರೂ ಕೂಡ ಪರಮುಮುಖ್ಯವೃತ್ತಿಯಿಂದ ಜನಾರ್ದನನೊಬ್ಬನೇ ಪ್ರತಿಪಾದ್ಯನಾಗುತ್ತಾನೆ ಹೊರತು, ಆಕಾಶಾದಿಭೂತಪದಾರ್ಥಗಳು ಪ್ರತಿಪಾದ್ಯವಾಗುವುದಿಲ್ಲ. ಏಕೆ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. ಹಿಂದೆ ಹೇಳಿದ ಸರ್ವಶಬ್ದವಾಚ್ಯತ್ವವನ್ನು ಸಮರ್ಥಿಸುವ 'ನಾಮಾನಿ ಸರ್ವಾಣಿ ಯಮಾವಿಶಂತಿ' 'ತಾ ವಾ ಏತಾಃ' 'ತಮೇವೈಕಂ ಜಾನಥ' ಇವೇ ಮೊದಲಾದ ಶ್ರುತಿಗಳು ಆಧಾರವಾಗಿರುವುದರಿಂದ.

**विरुद्धमवान्तरकारणमेको जनार्दनः कथमित्यतोऽमितात्मक इत्यनुवर्त्यम् । अमितेषु अनेकेषु आकाशादिष्वात्मा स्वरूपं यस्य स इत्यर्थः । आकाशादिषु स्थितत्वादिति यावत् । तथा चाकाशाद्युत्पत्तौ आकाशाद्यन्तर्गतत्वेन विष्णोरूत्पत्त्या वाय्वादिस्थरूपोत्पत्तिहेतुत्वेन वा अवान्तरकारणत्वं युक्तमिति भावः ।**

ಮೂಲಕಾರಣನಾದ ವಿಷ್ಣುವಿನಲ್ಲಿ ಅವಾಂತರಕಾರಣತ್ವವನ್ನು ಹೇಳುವುದು ವಿರುದ್ಧವಲ್ಲವೇ? ಎಂಬ ಪ್ರಶ್ನೆಗೆ 'ಅಮಿತಾತ್ಮಕಃ' ಎಂಬುದರಿಂದ ಉತ್ತರವನ್ನು ತಿಳಿಯಬೇಕು. ಅಮಿತವಾದ = ಅನೇಕವಾದ ಆಕಾಶ, ವಾಯು ಮೊದಲಾದವುಗಳಲ್ಲಿ ವಿಷ್ಣುವಿನ ರೂಪಗಳು ಇರುತ್ತವೆ. ಆಧಾರವಾದ ಪದಾರ್ಥಗಳು ಅನೇಕವಾಗಿರುವುದರಿಂದ ಅದರಲ್ಲಿರುವ ರೂಪಗಳೂ ಕೂಡ ಅನೇಕವಾಗಿವೆಯೆಂದು ತಿಳಿಯಬೇಕು. ಆದ್ದರಿಂದ ಆಕಾಶಾದಿಗಳು ಉತ್ಪನ್ನವಾಗುವಾಗ ಅವುಗಳಲ್ಲಿರುವ ವಿಷ್ಣುವಿನ ರೂಪಗಳು ಆವಿರ್ಭೂತವಾಗುತ್ತವೆ. ಆಕಾಶದಲ್ಲಿರುವ ವಿಷ್ಣುವಿನ ರೂಪವು ವಾಯುವಿನಲ್ಲಿರುವ ವಿಷ್ಣುವಿನ ರೂಪದ ಆವಿರ್ಭಾವಕ್ಕೆ ಕಾರಣವಾಗುತ್ತವೆ. ವಾಯುವಿನಲ್ಲಿರುವ ವಿಷ್ಣುವಿನ ರೂಪವು ಅಗ್ನಿಯಲ್ಲಿರುವ ವಿಷ್ಣುವಿನ ರೂಪಕ್ಕೆ ಆವಿರ್ಭಾವಕ್ಕೆ ಕಾರಣವಾಗುತ್ತವೆ. ಹೀಗೆ ಭಗವಂತನ ರೂಪಗಳಲ್ಲಿ ಕಾರ್ಯತ್ವ ಹಾಗೂ ಕಾರಣತ್ವ ಎರಡೂ ಇರುವುದರಿಂದ ಅವಾಂತರಕಾರಣತ್ವವನ್ನು ಉಪಪಾದಿಸಬಹುದು. ಆದ್ದರಿಂದ ಒಬ್ಬನೇ ಪರಮಾತ್ಮನಲ್ಲಿ ಕಾರ್ಯತ್ವ ಹಾಗೂ ಕಾರಣತ್ವಗಳು ವಿರುದ್ಧವೆಂಬ ಆಶಂಕೆಗೆ ಅವಕಾಶವಿಲ್ಲ. ಮುಖ್ಯಕಾರಣನಾಗಿರುವಂತಹ ಪರಮಾತ್ಮನು ಅವಾಂತರಕಾರಣನನಾಗುತ್ತಾನೆಂಬುದು ಯುಕ್ತವೇ ಆಗಿದೆ.

**कथमजस्य जनिमच्छमित्यतोऽपि द्युभ्वादिनयोक्तस्मरणाय मितात्मक इति व्यवच्छिद्य योज्यम् । मितः व्यक्तः आत्मा स्वरूपं यस्य स इत्यर्थः । जनेरीशोऽभि-**

**श्रीराघवेन्द्रतीर्थविरचिता**

**ब्रह्मसूत्राणुभाष्यविवृतिः**

# तत्वमञ्जरी

## आकाशाधिकरणम् (१।४।४)

नन्वथापि न सर्वशब्दवाच्यता विष्णोः । 'आत्मन आकाशः सम्भूतः' इति तैत्तिरीयादौ श्रुतभूतोत्पत्तिप्रतिपादकवाक्यस्थाकाशादिशब्दानां कार्यत्वे सति कारणत्वरूपावान्तरकारणत्वलिङ्गेन आकाशादिभूतमात्रवाचकत्वादित्यतः प्राप्तम् – **कारणत्वेन चाकाशादिषु यथा व्यपदिष्टोक्तेरिति** । तदर्थः – **अवान्तरं कारणं चेति** ।

ಹಿಂದಿನ ಅಧಿಕರಣದಲ್ಲಿ ಹೇಳಿದ ನ್ಯಾಯವನ್ನು ಅನುಸರಿಸಿದರೂ ಕೂಡ ವಿಷ್ಣುವು ಸರ್ವಶಬ್ದವಾಚ್ಯನಾಗಲಾರನು. ಏಕೆಂದರೆ 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿಯಾದ ತೈತ್ತಿರೀಯೋಪನಿಷತ್ತಿನಲ್ಲಿ ಆಕಾಶಾದಿಗಳಿಗೆ ಉತ್ಪತ್ತಿಯನ್ನು ಹೇಳುವಾಗ ಆಕಾಶವು ಕಾರ್ಯವೂ ಮತ್ತು ಕಾರಣವೂ ಆಗಿದೆಯೆಂದು ನಿರ್ದೇಶಿಸಲಾಗಿದೆ. ಆದ್ದರಿಂದ ಆಕಾಶವೆಂದರೆ ಭೂತಾಕಾಶವನ್ನೇ ವಿವಕ್ಷಿಸಬೇಕು. ಏಕೆಂದರೆ 'ಅವಾಂತರಕಾರಣತ್ವ' ಎಂಬ ಈ ಲಿಂಗವು ಭೂತಾಕಾಶದಲ್ಲಿ ಮಾತ್ರ ಬರುತ್ತದೆ ಹೊರತು, ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ವಿಷ್ಣು ಸರ್ವಶಬ್ದವಾಚ್ಯನು ಹೇಗೆ ಆಗುತ್ತಾನೆ ? ಎಂಬ ಆಕ್ಷೇಪಕ್ಕೆ ಉತ್ತರಿಸಲು 'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರವು ಹೊರಟಿದೆ. ಇದರ ಸಾರವನ್ನು 'ಅವಾಂತರಂ ಕಾರಣಂ ಚ' ಎಂಬ ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ.

पूर्ववदनुषङ्गः । सम्भूतवाक्ये श्रुतं कार्यत्वं सति कारणत्वरूपं यदवान्तरं कारणं च तदेको जनार्दनः । न केवलं आत्मन इति श्रुतं मूलकारणमिति वा प्रागुक्तसमुच्चये वा चशब्दः । तथा चान्यत्रैव नियतैरपि उत्पत्तिमत्त्वादिलिङ्गेन अन्यत्रैव प्रसिद्धैरप्याकाशवाय्वग्न्यादिसर्वशब्दैर्मुख्यतया परममुख्यत्वेनैको जनार्दन उदितः । नतु आकाशादिभूतम् । कुतः । शब्दैः प्रागुक्तसर्वशब्दवाच्यत्वबोधकैः 'नामानि सर्वाणि', 'ता वा एताः', 'तमेवैकं जानथ' इत्यादि शब्दैरित्यर्थः ।

ಇಲ್ಲಿಯೂ ಕೂಡ ಹಿಂದಿನ ಅಧಿಕರಣದಂತೆ 'ಏಕೋ ಜನಾರ್ದನಃ' ಎಂಬುದಾಗಿ 'ಅನ್ಯತ್ರ ನಿಯತೈರಪಿ ಮುಖ್ಯತಯೋದಿತಃ ಶಬ್ದೈಃ' ಎಂಬುದಾಗಿಯೂ ಅನುಷಂಗ ಮಾಡಿಕೊಳ್ಳಬೇಕು. 'ಆತ್ಮನ ಆಕಾಶಃ

ಸಂಭೂತಃ' ಎಂಬ ಶ್ರುತಿಯಲ್ಲಿ 'ಕಾರ್ಯತ್ವೇಽಪಿ ಕಾರಣತ್ವಂ' ಎಂಬ ಅವಾಂತರಕಾರಣವನ್ನು ಹೇಳಿದ್ದು ಮಹಾವಿಷ್ಣುವಿನಲ್ಲಿ ಯುಕ್ತವಾಗುತ್ತದೆ. ಮಹಾವಿಷ್ಣುವು ಕೇವಲ ಎಲ್ಲಾ ಪದಾರ್ಥಗಳಿಗೂ ಮೂಲಕಾರಣನೆಂದಷ್ಟೇ ಅಲ್ಲ ಅವಾಂತಕಾರಣನೂ ಆಗಿರುತ್ತಾನೆಂಬುದನ್ನು 'ಚ' ಶಬ್ದದಿಂದ ಸಮುಚ್ಚಯ ಮಾಡಬೇಕು. ಆದ್ದರಿಂದ 'ಉತ್ಪತ್ತಿಮತ್ತ್ವ' ಎಂಬ ಧರ್ಮದಿಂದ ಭೂತಾಕಾಶ ಹಾಗೂ ಭೂತವಾಯುಗಳಲ್ಲಿ ಪ್ರಸಿದ್ಧವಾದ 'ಆಕಾಶ', 'ವಾಯು' ಮೊದಲಾದ ಶಬ್ದಗಳಿಂದಲ್ಲಾ ಮುಖ್ಯವೃತ್ತಿಯಿಂದ ಆಯಾ ಪದಾರ್ಥಗಳು ಪ್ರತಿಪಾದ್ಯವಾದರೂ ಕೂಡ ಪರಮಮುಖ್ಯವೃತ್ತಿಯಿಂದ ಜನಾರ್ದನನೊಬ್ಬನೇ ಪ್ರತಿಪಾದ್ಯನಾಗುತ್ತಾನೆ ಹೊರತು, ಆಕಾಶಾದಿಭೂತಪದಾರ್ಥಗಳು ಪ್ರತಿಪಾದ್ಯವಾಗುವುದಿಲ್ಲ. ಏಕೆ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. ಹಿಂದೆ ಹೇಳಿದ ಸರ್ವಶಬ್ದವಾಚ್ಯತ್ವವನ್ನು ಸಮರ್ಥಿಸುವ 'ನಾಮಾನಿ ಸರ್ವಾಣಿ ಯಮಾವಿಶಂತಿ' 'ತಾ ವಾ ಏತಾಃ' 'ತಮೇವೈಕಂ ಜಾನಥ' ಇವೇ ಮೊದಲಾದ ಶ್ರುತಿಗಳು ಆಧಾರವಾಗಿರುವುದರಿಂದ.

**विरुद्धमवान्तरकारणमेको जनार्दनः कथमित्यतोऽमितात्मक इत्यनुवर्त्यम् । अमितेषु अनेकेषु आकाशादिष्वात्मा स्वरूपं यस्य स इत्यर्थः । आकाशादिषु स्थितत्वादिति यावत् । तथा चाकाशाद्युत्पत्तौ आकाशाद्यन्तर्गतत्वेन विष्णोरूत्पत्त्या वाय्वादिस्थरूपोत्पत्तिहेतुत्वेन वा अवान्तरकारणत्वं युक्तमिति भावः ।**

ಮೂಲಕಾರಣನಾದ ವಿಷ್ಣುವಿನಲ್ಲಿ ಅವಾಂತರಕಾರಣತ್ವವನ್ನು ಹೇಳುವುದು ವಿರುದ್ಧವಲ್ಲವೇ? ಎಂಬ ಪ್ರಶ್ನೆಗೆ 'ಅಮಿತಾತ್ಮಕಃ' ಎಂಬುದರಿಂದ ಉತ್ತರವನ್ನು ತಿಳಿಯಬೇಕು. ಅಮಿತವಾದ = ಅನೇಕವಾದ ಆಕಾಶ, ವಾಯು ಮೊದಲಾದವುಗಳಲ್ಲಿ ವಿಷ್ಣುವಿನ ರೂಪಗಳು ಇರುತ್ತವೆ. ಆಧಾರವಾದ ಪದಾರ್ಥಗಳು ಅನೇಕವಾಗಿರುವುದರಿಂದ ಅದರಲ್ಲಿರುವ ರೂಪಗಳೂ ಕೂಡ ಅನೇಕವಾಗಿವೆಯೆಂದು ತಿಳಿಯಬೇಕು. ಆದ್ದರಿಂದ ಆಕಾಶಾದಿಗಳು ಉತ್ಪನ್ನವಾಗುವಾಗ ಅವುಗಳಲ್ಲಿರುವ ವಿಷ್ಣುವಿನ ರೂಪಗಳು ಆವಿರ್ಭೂತವಾಗುತ್ತವೆ. ಆಕಾಶದಲ್ಲಿರುವ ವಿಷ್ಣುವಿನ ರೂಪವು ವಾಯುವಿನಲ್ಲಿರುವ ವಿಷ್ಣುವಿನ ರೂಪದ ಆವಿರ್ಭಾವಕ್ಕೆ ಕಾರಣವಾಗುತ್ತವೆ. ವಾಯುವಿನಲ್ಲಿರುವ ವಿಷ್ಣುವಿನ ರೂಪವು ಅಗ್ನಿಯಲ್ಲಿರುವ ವಿಷ್ಣುವಿನ ರೂಪಕ್ಕೆ ಆವಿರ್ಭಾವಕ್ಕೆ ಕಾರಣವಾಗುತ್ತವೆ. ಹೀಗೆ ಭಗವಂತನ ರೂಪಗಳಲ್ಲಿ ಕಾರ್ಯತ್ವ ಹಾಗೂ ಕಾರಣತ್ವ ಎರಡೂ ಇರುವುದರಿಂದ ಅವಾಂತರಕಾರಣತ್ವವನ್ನು ಉಪಪಾದಿಸಬಹುದು. ಆದ್ದರಿಂದ ಒಬ್ಬನೇ ಪರಮಾತ್ಮನಲ್ಲಿ ಕಾರ್ಯತ್ವ ಹಾಗೂ ಕಾರಣತ್ವಗಳು ವಿರುದ್ಧವೆಂಬ ಆಶಂಕೆಗೆ ಅವಕಾಶವಿಲ್ಲ. ಮುಖ್ಯಕಾರಣನಾಗಿರುವಂತಹ ಪರಮಾತ್ಮನು ಅವಾಂತರಕಾರಣನನಾಗುತ್ತಾನೆಂಬುದು ಯುಕ್ತವೇ ಆಗಿದೆ.

**कथमजस्य जनिमच्छमित्यतोऽपि द्युम्वादिनयोक्तस्मरणाय मितात्मक इति व्यवच्छिद्य योज्यम् । मितः व्यक्तः आत्मा स्वरूपं यस्य स इत्यर्थः । जनेरीशोऽभि-**

व्यक्तिरूपत्वस्य द्युभ्वाद्यायतनमित्यत्राभिधानादुत्पत्तिरत्राभिव्यक्तिः । न त्वभूत्वाभवनादिरूपेति भावः ।

ಹುಟ್ಟೇ ಇಲ್ಲದ ಪರಮಾತ್ಮನಿಗೆ ಜನಿಮತ್ವವು ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ ದ್ಯುಭ್ವಾದ್ಯಧಿಕರಣದಲ್ಲಿ ಹೇಳಿದ ನ್ಯಾಯವನ್ನು ಸ್ಮರಣೆಗೆ ತಂದುಕೊಡಲು 'ಮಿತಾತ್ಮಕಃ' ಎಂಬ ಪದವನ್ನು ವಿಭಾಗ ಮಾಡಿ, ಯೋಜನೆ ಮಾಡಿಕೊಳ್ಳಬೇಕು. 'ಮಿತಃ' ಎಂಬ ಶಬ್ದಕ್ಕೆ 'ವ್ಯಕ್ತವಾದ' ಎಂದರ್ಥ. ಆತ್ಮಶಬ್ದಕ್ಕೆ 'ಸ್ವರೂಪ' ಎಂದರ್ಥ. 'ವ್ಯಕ್ತವಾದ ಸ್ವರೂಪವುಳ್ಳವನು ಯಾರೋ, ಅವನು 'ಮಿತಾತ್ಮಕ' ಎನಿಸುತ್ತಾನೆ. ಆದ್ದರಿಂದ 'ಸಂಭೂತಃ' ಎಂಬಲ್ಲಿ ಹೇಳಿದ ವ್ಯುತ್ಪತ್ತಿಯು ಪ್ರಾದುರ್ಭೂತವಾಗಿದೆ ಹೊರತು, ಜನನ ರೂಪವಾದದ್ದಲ್ಲ. ಇದನ್ನೇ ದ್ಯುಭ್ವಾದ್ಯಧಿಕರಣದಲ್ಲಿ ಹೇಳಿರುತ್ತಾರೆ.

'क्रियाप्रवर्तकत्वेन प्रादुर्भावो हरेर्जनिः ।
आकाशादिषु नान्योऽस्ति ह्यभिमानोऽभिमानिनः ।'

इत्यनुभाष्योक्तेः ।

'ಕ್ರಿಯಾಪ್ರವರ್ತಕತ್ವೇನ ಪ್ರಾದುರ್ಭಾವೋ ಹರೇರ್ಜನಿಃ ।
ಆಕಾಶಾದಿಷು ನಾನ್ಯೋಽಸ್ತಿ ಹ್ಯಭಿಮಾನೋಽಭಿಮಾನಿನಃ ॥'

ಆಯಾ ಕೆಲಸಗಳಲ್ಲಿ ಪ್ರವರ್ತನೆ ಮಾಡುವಿಕೆಯೇ ಭಗವಂತನ ಪ್ರಾದುರ್ಭಾವ ಎನಿಸುತ್ತದೆ. ಇಂತಹ ಸೃಷ್ಟಿಯನ್ನೇ ಆಕಾಶಾದಿಗಳಲ್ಲಿ ತಿಳಿದುಕೊಳ್ಳಬೇಕು ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸುತ್ತಾರೆ.

नन्वाकाशादिषु हरेः स्थितिरेव कुत इत्यतोऽपि – **शब्दैरिति** । 'य आकाशे तिष्ठन् यो वायौ तिष्ठन्' इत्यादौ उक्तान्तर्यामिब्राह्मणोक्तैः शब्दैरित्यर्थः । ननु य आकाशे तिष्ठन्' इत्यादावपि हरिरिति कुत इत्यतोऽपि – **शब्दैरिति** ।

ಆಕಾಶಾದಿಗಳಲ್ಲಿ ಇರುವವನು ಶ್ರೀಹರಿಯೇ ಆಗಿದ್ದಾನೆಂಬುದು ಹೇಗೆ ತಿಳಿಯುತ್ತದೆ ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. 'ಯ ಆಕಾಶೇ ತಿಷ್ಠನ್, ಯೋ ವಾಯೌ ತಿಷ್ಠನ್' ಇತ್ಯಾದಿಯಾದ ಅಂತರ್ಯಾಮಿ ಬ್ರಾಹ್ಮಣದ ಶ್ರುತಿಯಿಂದ ವಿಷ್ಣು ಆಕಾಶಾದಿಗಳಲ್ಲಿ ಇರುತ್ತಾನೆಂದು ತಿಳಿಯುತ್ತದೆ. 'ಯ ಆಕಾಶೇ ತಿಷ್ಠನ್' ಎಂಬ ಶ್ರುತಿಯೂ ಕೂಡ ಶ್ರೀಹರಿಯನ್ನೇ ಹೇಳುತ್ತಿದೆಯೆಂದು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಗೂ ಕೂಡ 'ಶಬ್ದೈಃ' ಎಂಬ ಪದದಿಂದಲೇ ಉತ್ತರಿಸಿದ್ದಾರೆ.

'यमाकाशो न वेद यं वायुर्न वेद' इत्यादिरूपैः आकाशाद्यविदितत्वामृत्वाद्यन्तर्यामिनयोक्तधर्मबोधकैः शब्दैः 'य आकाशे तिष्ठन्' इत्यादावुक्तो हरिरेवेत्यर्थः। ननु 'यमाकाशो न वेद' इत्यादिशब्दैरपि कुतो हरिरित्यतोऽपि –

शब्दैरिति । 'स योऽतोऽश्रुतः' इत्यादिरूपैः हरेरविदितत्वादिधर्मबोधकैः । तेषां शब्दानां वैष्णवत्वादित्यर्थः ।

'ಯಮಾಕಾಶೋ ನ ವೇದ ಯಂ ವಾಯುರ್ನ ವೇದ' ಇತ್ಯಾದಿಯಾದ ಶ್ರುತಿಗಳಲ್ಲಿ ಯಾವ ಅವಿದಿತತ್ವವನ್ನು ಹೇಳಲಾಗಿದೆಯೋ, ಮತ್ತು ಅಮೃತತ್ವಾದಿಗಳನ್ನು ಹೇಳಲಾಗಿದೆಯೋ, ಇದೆಲ್ಲವೂ ಅಂತರ್ಯಾಮ್ಯಧಿಕರಣದಲ್ಲಿ ಹೇಳಿದ ನ್ಯಾಯದಂತೆ ಮಹಾವಿಷ್ಣುವಿನಲ್ಲೇ ಸಿದ್ಧವಾಗಿದೆ. ಅದೇ ಧರ್ಮಗಳನ್ನು 'ಯ ಆಕಾಶೇ ತಿಷ್ಠನ್' ಎಂಬ ಶ್ರುತಿಯಲ್ಲಿಯೂ ಕೂಡ ಹೇಳಿರುವುದರಿಂದ ಶ್ರೀಹರಿಯೇ ಈ ಶ್ರುತಿಯಿಂದ ಪ್ರತಿಪಾದ್ಯನೆಂದು ತಿಳಿಯಬೇಕು. 'ಯಮಾಕಾಶೋ ನ ವೇದ' ಇತ್ಯಾದಿ ಶ್ರುತಿಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೂ 'ಶಬ್ದೈಃ' ಎಂಬ ಪದದಿಂದಲೇ ಉತ್ತರಿಸಿದ್ದಾರೆ. 'ಸ ಯೋಽತೋಽಶ್ರುತಃ' ಇತ್ಯಾದಿಯಾಗಿ ಅವಿದಿತತ್ವಾದಿಧರ್ಮಗಳು ವಿಷ್ಣುವಿನ ಧರ್ಮಗಳೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಆಕಾಶಾದಿಗಳಲ್ಲಿ ಇರುವವನು ಕಾರ್ಯತ್ವೇನ ಆವಿರ್ಭೂತನಾಗುವ ವಿಷ್ಣುವೇ ಆಗಿರುತ್ತಾನೆ. ಅವನೇ ಅವಾಂತರಕಾರಣನಾಗಿದ್ದಾನೆಂದು ಸ್ಪಷ್ಟವಾಗಿ ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು.

***

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## आकाशाधिकरणम् (१।४।४)

।। **कारणत्वेन चाकाशादिषु यथा व्यपदिष्टोक्तेः** ।। १-४-१९ ।।

अत्रावान्तरकारणत्वलिङ्गं वा तादृशाकाशादिनाम वा समन्वीयते । आकाशादिसमुच्चायकश्चः । कार्यत्वसमुच्चायको वा । आकाशादिष्वित्यावृत्तिः । तत्त्वित्यस्ति । न विरोध इति च । ''आत्मन आकाशः सम्भूत'' इत्यादौ

ಆಕಾಶಾಧಿಕರಣ (೧-೪-೪)

**कारणत्वेन कार्यत्वेन चोक्ताकाशादिश्च परममुख्यवृत्त्या ब्रह्मैव न केवलं मूलकारणात्मेत्यर्थः । ननु भूतादिः । कुतः ? प्रागुक्तहेतुभ्य इत्यर्थः । नच कार्यकारणभावस्य द्युभ्वादिनयरीत्या व्यङ्ग्यव्यञ्जकरूपत्वेप्येकस्य विरोध इति शङ्क्यम् । आकाशादिषु स्थितत्वादिति शेषः । न विरोध इत्यर्थः । आकाशाद्युत्पत्तौ तदन्तस्थत्वेन तस्याप्यभिव्यक्त्या कार्यत्वं, वाय्वादिस्थरूपव्यक्तिहेतुत्वेन कारणत्वं च युक्तमिति भावः । आकाशादिषु स्थितत्वमेव कुत इत्यत उक्तम् – यथेति । यथा येन प्रकारेणाविदितत्वादिना ''स योऽतोऽश्रुत'' इत्यादौ व्यपदिष्टस्तस्योक्योक्ते-राकाशादिषु ''य आकाशो तिष्ठन् यो वायौ तिष्ठन्'' इत्यादावित्यर्थः । उक्तेरित्येव वाच्ये यथा व्यपदिष्टेत्युक्तिः ''आकाशे तिष्ठन्'' इत्यादावपि आकाशादौ स्थितं ब्रह्मेति कुत इति न शङ्क्यम्, श्रुत्यन्तरोक्ताविदितत्वप्रकारस्य ''यमाकाशो न वेद'' इत्यादिश्रवणादित्यन्तर्यामिनयोक्तन्यायस्मरणार्था ।। ४ ।।**

'ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ'

ಈ ಅಧಿಕರಣದಲ್ಲಿ ಮಹಾವಿಷ್ಣುವು ಪ್ರಧಾನ ಕಾರಣನಷ್ಟೇ ಅಲ್ಲ. ಅವಾಂತರ ಕಾರಣನೂ ಆಗಿದ್ದಾನೆಂಬ ಉದ್ದೇಶದಿಂದ ಅವಾಂತರಕಾರಣತ್ವ ಎಂಬ ಲಿಂಗವನ್ನು ಸಮನ್ವಯ ಮಾಡಲಾಗಿದೆ. ಅಥವಾ ಅವಾಂತರಕಾರಣವನ್ನು ಹೇಳುವ 'ಆಕಾಶ' ಎಂಬ ನಾಮಾತ್ಮಕಶಬ್ದವನ್ನು ಸಮನ್ವಯ ಮಾಡಲಾಗಿದೆ. ಸೂತ್ರದಲ್ಲಿರುವ 'ಚ' ಶಬ್ದವು ಆಕಾಶಾದಿಗಳನ್ನು ಸಮುಚ್ಚಯ ಮಾಡುತ್ತಿದೆ. ಅಥವಾ ಕಾರ್ಯತ್ವ ಎಂಬ ಧರ್ಮದ ಸಮುಚ್ಚಯವನ್ನು ಮಾಡುತ್ತಿದೆ. 'ಆಕಾಶಾದಿಷು' ಎಂಬ ಪದವು ಆವೃತ್ತವಾಗುತ್ತದೆ. 'ತತ್ತು' ಎಂಬ ಪದಗಳು ಅನುವೃತ್ತವಾಗುತ್ತವೆ. 'ನ ವಿರೋಧಃ' ಎಂಬ ಪದಗಳೂ ಕೂಡ ಅನುವೃತ್ತವಾಗುತ್ತವೆ.

ಸೂತ್ರಾರ್ಥ - ಕಾರಣತ್ವೇನ ಚ = 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಯಲ್ಲಿ ಮೂಲಕಾರಣನೆಂದು ಪ್ರತಿಪಾದ್ಯನಾದ ಆತ್ಮನೇ ಕಾರ್ಯವಾಚಕವಾದ 'ಆಕಾಶ' ಮೊದಲಾದ ಶಬ್ದಗಳಿಂದಲೂ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಕೇವಲ ಬ್ರಹ್ಮನು ಮುಖ್ಯಕಾರಣನಷ್ಟೇ ಅಲ್ಲ. ಅವಾಂತರ ಕಾರಣನೂ ಆಗಿದ್ದಾನೆ ಎಂದಭಿಪ್ರಾಯ. ಹೊರತು ಭೂತಾಕಾಶಾದಿಗಳು ಪ್ರತಿಪಾದ್ಯವಲ್ಲ. ಏಕೆಂದರೆ, ವ್ಯಪದಿಷ್ಟೋಕ್ತೇಃ = ಹಿಂದೆ ಹೇಳಿದ ತತ್ತದ್ರೂಪಗಳಿಂದ ಇರುವವನೆಂದು ಹೇಳಿರುವುದರಿಂದ.

ಕಾರ್ಯಕಾರಣಭಾವವು ದ್ಯುಭ್ವಾದ್ಯಧಿಕರಣದಲ್ಲಿ ಹೇಳಿರುವಂತೆ ವ್ಯಂಗ್ಯವ್ಯಂಜಕಭಾವರೂಪದಿಂದ ಒಬ್ಬನಲ್ಲೇ ವಿರುದ್ಧವಾಗುತ್ತದಲ್ಲವೇ? ಎಂದು ಆಶಂಕಿಸಬಾರದು. 'ಆಕಾಶ' ಮೊದಲಾದವುಗಳಲ್ಲಿ

ಇರುವುದರಿಂದ ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ. ಯಾವಾಗ ಆಕಾಶಾದಿ ಭೂತಪದಾರ್ಥಗಳು ಹುಟ್ಟುತ್ತವೋ, ಅವುಗಳಲ್ಲಿರುವ ಬ್ರಹ್ಮನೂ ಕೂಡ ಆವಾಗಲೇ ಅಭಿವ್ಯಕ್ತನಾಗುತ್ತಾನೆ. ಈ ಅಭಿವ್ಯಕ್ತಿರೂಪದ ಉದ್ದೇಶದಿಂದ ಪರಮಾತ್ಮನಲ್ಲಿ ಕಾರ್ಯತ್ವವು ಯುಕ್ತವಾಗುತ್ತದೆ. ಆಕಾಶಾದಿಗಳಿಂದ ವಾಯು ಮೊದಲಾದವುಗಳು ಹುಟ್ಟುವಾಗ ಆಕಾಶಾದಿಗಳಿಗೆ ವಾಯುವು ಕಾರಣವಾಗುತ್ತದೆ. ಆವಾಗ ಭಗವಂತನ ರೂಪವಿಶೇಷವು ಕಾರಣವೆನಿಸುತ್ತದೆ. ಆದ್ದರಿಂದ ವಾಯು ಮೊದಲಾದವುಗಳಲ್ಲಿರುವ ರೂಪದ ಅಭಿವ್ಯಕ್ತಿಗೆ ಕಾರಣವಾದ್ದರಿಂದ ಕಾರಣತ್ವವು ಯುಕ್ತವಾಗುತ್ತದೆ.

ಆಕಾಶಾದಿಗಳಲ್ಲಿ ಬ್ರಹ್ಮನಿದ್ದಾನೆನ್ನಲು ಏನು ಪ್ರಮಾಣ? ಎಂಬ ಆಶಂಕೆಗೆ 'ಯಥಾ' ಎಂದು ಉತ್ತರಿಸಿದ್ದಾರೆ. ಯಥಾ = ಯಾವರೀತಿಯಾಗಿ ಅವಿದಿತತ್ವ ಮೊದಲಾದ ಪ್ರಕಾರಗಳಿಂದ 'ಸ ಯೋಽತೋಽಶ್ರುತಃ' ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದ್ಯನಾಗಿದ್ದಾನೋ, ಆ ಕಾರಣದಿಂದಲೇ ಯುಕ್ತನಾದವನನ್ನು 'ಯ ಆಕಾಶೇ ತಿಷ್ಠನ್ ಯೋ ವಾಯೌ ತಿಷ್ಠನ್' ಇತ್ಯಾದಿ ಶ್ರುತಿಯಲ್ಲಿ ಆಕಾಶಾದಿಗಳಲ್ಲಿರುವವನೆಂದು ಹೇಳಲಾಗಿದೆ ಎಂದು ಸೂತ್ರದ ಅಭಿಪ್ರಾಯ.

ಸೂತ್ರದಲ್ಲಿ 'ಉಕ್ತೇಃ' ಎಂದಷ್ಟೇ ಹೇಳಿದ್ದರು 'ಯಥಾ ವ್ಯಪದಿಷ್ಟೋಕ್ತೇಃ' ಎಂದು ಹೇಳಿದ್ದರಿಂದ 'ಆಕಾಶೇ ತಿಷ್ಠನ್' ಇತ್ಯಾದಿ ಶ್ರುತಿಯಲ್ಲಿಯೂ ಆಕಾಶಾದಿಗಳಲ್ಲಿ ಸ್ಥಿತನಾದವನು ಬ್ರಹ್ಮನೇ ಆಗಿದ್ದಾನೆನ್ನಲು ಏನು ಆಧಾರ ? ಎಂಬ ಆಶಂಕೆಗೆ ಉತ್ತರಿಸಬೇಕಾಗಿದೆ. ಏಕೆಂದರೆ 'ಸ ಯೋಽತೋಽಶ್ರುತಃ' ಎಂಬ ಐತರೇಯೋಪನಿಷತ್ತಿನಲ್ಲಿ ಬ್ರಹ್ಮನನ್ನು ಅವಿದಿತನೆಂದು ಹೇಳಲಾಗಿದೆ. ಆದರೆ ಇಲ್ಲಿ 'ಯೋ ಆಕಾಶೇ ತಿಷ್ಠನ್' ಎಂಬ ಬೃಹದಾರಣ್ಯಕ ಶ್ರುತಿಯಲ್ಲಿ 'ಯಮಾಕಾಶೋ ನ ವೇದ' ಇತ್ಯಾದಿಯಾದ ಅದೇ ಪ್ರಕರಣದ ಶ್ರುತಿಯಲ್ಲಿ ಆಕಾಶದಲ್ಲಿರುವವನನ್ನು ಅವಿದಿತನೆಂದು ವರ್ಣಿಸಲಾಗಿದೆ. ಆದ್ದರಿಂದ ಆಕಾಶದಲ್ಲಿರುವವನು ಬ್ರಹ್ಮನೆಂದು ಸಿದ್ಧವಾಗುತ್ತದೆ ಎಂದು ತಿಳಿಯಬೇಕು. ಹೀಗೆ ಬೇರೆ ಶ್ರುತಿಯಲ್ಲಿ ಹೇಳಿರುವ ಅವಿದಿತತ್ವ ಮೊದಲಾದ ಧರ್ಮಗಳು 'ಯಮಾಕಾಶೋ ನ ವೇದ' ಇತ್ಯಾದಿ ವಾಕ್ಯದಲ್ಲಿ ಶ್ರುತವಾಗಿರುವುದರಿಂದ ಎಂಬುದಾಗಿ ಅಂತರ್ಯಾಮ್ಯಧಿಕರಣದಲ್ಲಿ ಹೇಳಿರುವ ನ್ಯಾಯವನ್ನು ಸ್ಮರಣೆಗೆ ತಂದುಕೊಡಲು 'ಯಥಾ ವ್ಯಪದಿಷ್ಟೋಕ್ತೇಃ' ಎಂದು ಸೂತ್ರಕಾರರು ಹೇಳಿರುತ್ತಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು.

ಆಕಾಶಾಧಿಕರಣ (೧-೪-೪)

श्री राघवेन्द्रतीर्थविरचिता

# श्रीन्यायमुक्तावळिः

## आकाशाधिकरणम् (१।४।४)

।। कारणत्वेन च आकाशादिषु यथा व्यपदिष्टोक्तेः ।। ४ ।।

अत्र कालस्सदास्तीत्यादौ दर्शनादेकस्याधाराधेयभावसम्भवेपि कार्यरकारणभावस्य काप्यदर्शनादयुक्तः स इति पूर्ववैषम्येणस शङ्कनात्सङ्गतिः ।

ಹಿಂದಿನ ಅಧಿಕರಣದಲ್ಲಿ ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವು ಯುಕ್ತವಾಗುತ್ತದೆಂದು ಸಮರ್ಥಿಸಲಾಯಿತು. 'ಕಾಲಃ ಸದಾ ಅಸ್ತಿ' 'ಕಾಲವು ಯಾವಾಗಲೂ ಇರುತ್ತದೆ'. ಈ ಪ್ರಯೋಗಗಳನ್ನು ನೋಡಿದಾಗ ಕಾಲದಲ್ಲಿಯೇ ಈ ಪ್ರಯೋಗವು ಇರುತ್ತದೆಂದು ಸಿದ್ಧವಾಗುತ್ತದೆ. ಆದ್ದರಿಂದ ತನ್ನಲ್ಲಿಯೇ ತನ್ನ ಇರುವಿಕೆಯು ಕಾಲ, ದೇಶ ಮೊದಲಾದವುಗಳಲ್ಲಿ ಕಂಡಿರುವುದರಿಂದ ಪರಮಾತ್ಮನಲ್ಲಿಯೂ ಹಾಗೆಯೇ ತಿಳಿದುಕೊಳ್ಳಬೇಕು. ಇದು ಲೋಕದಲ್ಲಿ ಪ್ರಸಿದ್ಧವಾದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಒಬ್ಬನೇ ಪರಮಾತ್ಮನಿಗೆ ಆಧಾರಾಧೇಯಭಾವವು ಯುಕ್ತವೇ ಆಗುತ್ತದೆ. ಆದರೆ ಒಬ್ಬನೇ ಪರಮಾತ್ಮನಿಗೆ ಕಾರ್ಯಕಾರಣಭಾವವು ಸರ್ವಥಾ ಯುಕ್ತವಾಗುವುದಿಲ್ಲ. ಏಕೆಂದರೆ ಲೋಕದಲ್ಲಿ ಎಲ್ಲಿಯೂ ಕೂಡ ಒಂದೇ ಪದಾರ್ಥವು ಕಾರ್ಯವೂ ಹಾಗೂ ಕಾರಣವೂ ಆಗಿರುವುದು ಕಂಡಿರುವುದಿಲ್ಲ. ಆದ್ದರಿಂದ ಹಿಂದಿನ ಅಧಿಕರಣದಿಂದ ವ್ಯತ್ಯಾಸವಾಗಿ ಆಕ್ಷೇಪ ಮಾಡುತ್ತಿರುವುದರಿಂದ ಸಂಗತಿಯು ಇರುತ್ತದೆ.

तैत्तिरीये ब्रह्मवल्ल्यां ''आत्मन आकाशः सम्भूतः आकाशात् वायुः''(तै.२-३) इत्यादिवाक्ये कार्यत्वेन कारणत्वेन च श्रुताकाशादिशब्दाः किं मुख्यतो विष्णुवाचका उत भूतादिवाचका इति सन्देहः ।

ತೈತ್ತಿರೀಯ ಬ್ರಹ್ಮವಲ್ಲಿಯಲ್ಲಿ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ' ಎಂಬ ವಾಕ್ಯವು ಸ್ಥಿತವಾಗಿದೆ. ಇಲ್ಲಿರುವ ಆಕಾಶಶಬ್ದದಿಂದ ಪ್ರತಿಪಾದ್ಯವಾದ ಪದಾರ್ಥವು ಆತ್ಮನಿಂದ ಕಾರ್ಯವೆಂದು ವಾಯು ಮೊದಲಾದವುಗಳಿಗೆ ಕಾರಣವೆಂದು ಹೇಳಲಾಗಿದೆ. ಆಂತಹ ಆಕಾಶ ಶಬ್ದದಿಂದ ಮುಖ್ಯವಾಗಿ ವಿಷ್ಣುವೇ ಪ್ರತಿಪಾದ್ಯನೋ, ಅಥವಾ ಭೂತಾಕಾಶಾದಿಗಳೋ ? ಎಂದು ಸಂದೇಹ.

पूर्वपक्षस्तु ।। ''न जायते म्रियते'' (का.१-२-१७) इत्यादे अकार्ये ब्रह्मणि कार्यत्वाविरोधेन स्वकार्यत्वस्य सुतरां विरुद्धत्वात् व्यङ्ग्यव्यञ्जकभावरूपस्यापि कार्यकारणभावस्य एकस्मिन् विरोधात् । सुतजनेः जनकाधीनत्वेऽपि तत्र जातपदादर्शनेन तदधीनन्यायस्याप्यत्रानवतारात् । नामानि सर्वाणीति श्रुतेरपि सङ्कोचावश्यंभावात् आकाशादिजन्मासिद्ध्यापाताच्च आकाशदिशब्दाः अन्यवाचका एवेति ।।

ಪೂರ್ವಪಕ್ಷ ಹೀಗಿದೆ - 'ನ ಜಾಯತೇ ಮ್ರಿಯತೇ ವಾ ಕದಾಚಿತ್' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಬ್ರಹ್ಮನು ಎಂದೂ ಹುಟ್ಟಲಾರನು ಎಂದು ತಿಳಿಯುತ್ತದೆ. ಆದ್ದರಿಂದ ಕಾರ್ಯರೂಪನಲ್ಲದ ಬ್ರಹ್ಮನಲ್ಲಿ ಕಾರ್ಯತ್ವವನ್ನು ಹೇಳುವುದು ತಪ್ಪಾಗುತ್ತದೆ. ಹೀಗಿರುವಾಗ ಸ್ವಕಾರ್ಯತ್ವವನ್ನಂತೂ ಸುತರಾಂ ಹೇಳಲಾಗದು. ವಾಸ್ತವಿಕವಾಗಿ ಆಕಾಶದಲ್ಲಿರುವ ಭಗವದ್ರೂಪವು ವ್ಯಕ್ತವಾಗುತ್ತದೆ. ವಾಯುವಿನಲ್ಲಿರುವ ಮತ್ತೊಂದು ಭಗವದ್ರೂಪಕ್ಕೆ ಆಕಾಶದಲ್ಲಿರುವ ರೂಪವು ವ್ಯಂಜಕವಾಗುತ್ತದೆ ಎಂದು ಹೇಳಬಹುದು. ಆದರೆ ಕಾರ್ಯಕಾರಣಭಾವವನ್ನಂತೂ ಸುತರಾಂ ಹೇಳಲಾಗದು.

ಇನ್ನು ತದಧೀನತ್ವನ್ಯಾಯದಿಂದ ಮತ್ತೊಂದು ಕಡೆಯಿರುವ ಜನಿಮತ್ವಕ್ಕೆ ಪರಮಾತ್ಮನು ಸ್ವತಂತ್ರನಾದ್ದರಿಂದ ಇವನಲ್ಲಿ ಕಾರ್ಯತ್ವದ ವ್ಯವಹಾರ ಮಾಡಬಹುದಲ್ಲವೇ ? ಎಂದು ಪ್ರಶ್ನಿಸಬಹುದು. ಆದರೆ ಮಗನ ಹುಟ್ಟುವಿಕೆಯು ತಂದೆಯ ಅಧೀನವಾಗಿದ್ದರೂ 'ಜಾತಃ' ಎಂಬ ಪದವನ್ನು ಯಾರೂ ಕೂಡ ತಂದೆಯಲ್ಲಿ ಪ್ರಯೋಗ ಮಾಡುವುದಿಲ್ಲ. ಆದ್ದರಿಂದ ಜನಿಮತ್ವದ ವಿಷಯದಲ್ಲಿ ತದಧೀನತ್ವನ್ಯಾಯವನ್ನು ವಿವಕ್ಷಿಸಲು ಸಾಧ್ಯವಿಲ್ಲ. 'ನಾಮಾನಿ ಸರ್ವಾಣಿ ಯಮಾ ವಿಶಂತಿ' ಎಂಬ ವಿಷಯವನ್ನು ಇಲ್ಲಿ ಸಂಕೋಚ ಮಾಡಬೇಕಾಗುತ್ತದೆ. ಅಂದರೆ ಕಾರ್ಯಕಾರಣ-ಭಾವವನ್ನು ಹೇಳುವಂತಹ ಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳ ಸಮನ್ವಯವನ್ನಷ್ಟೇ ಶ್ರುತಿ ಹೇಳುತ್ತಿದೆ ಎಂದು ವ್ಯಾಖ್ಯಾನ ಮಾಡಬೇಕು. ಮತ್ತು 'ಆಕಾಶ', 'ವಾಯು' ಮೊದಲಾದ ಶಬ್ದಗಳಿಂದೆಲ್ಲಾ ಶ್ರೀಹರಿಯೇ ಪ್ರತಿಪಾದ್ಯನಾಗುವುದಾದರೆ, 'ಆಕಾಶ', 'ವಾಯು' ಮೊದಲಾದವುಗಳ ಜನ್ಮವೇ ಸಿದ್ಧವಾಗದಿರಬೇಕಾದೀತು. ಹಾಗಾಗಿ ಆಕಾಶಾದಿ ಶಬ್ದಗಳೆಲ್ಲವೂ ಅನ್ಯವಾಚಕವೇ ಹೊರತು, ವಿಷ್ಣುವಾಚಕಗಳಲ್ಲ.

सिद्धान्तस्तु ।। विष्णोरेवाकाशादिनियामकरूपाणां ''य आकाशे तिष्ठन्'' (बृ.५-७-१२) इत्यादिश्रुत्या आकाशादिस्थानां बहुत्वेन व्यक्त्यव्यक्त्यपेक्षया पौर्वापर्ययोगेन वाय्वाद्युत्पत्तौ तत्स्थरूपस्य व्यक्त्या, व्यङ्ग्यव्यञ्जकभावरूप-कार्यकारणभावस्य सम्भवात् । बाधकाभावेन नामानीत्यादिश्रुतेः सङ्कोचायोगेन

**प्रागुक्तसाधकानां सत्त्वात् ज्योतिर्नयोक्तरीत्या अन्यत्र रूढेरभ्युपगतत्वेन (रूढेरप्युपेतत्वेन) आकाशाद्युत्पत्यसिद्ध्यभावाच्च आकाशादिशब्दमुख्यार्थो हरिरेवेति ॥ ४ ॥**

ಸಿದ್ಧಾಂತ ಹೀಗಿದೆ - 'ಆಕಾಶ', 'ವಾಯು' ಮೊದಲಾದ ಶಬ್ದಗಳಿಂದೆಲ್ಲಾ ಮಹಾವಿಷ್ಣುವು ಪ್ರತಿಪಾದ್ಯನಾಗಿದ್ದಾನೆ. 'ಯ ಆಕಾಶೇ ತಿಷ್ಠನ್' ಮೊದಲಾದ ಶ್ರುತಿಗಳ ಬಲದಿಂದ ಆಕಾಶಾದಿ ಪದಾರ್ಥಗಳಲ್ಲಿ ಭಗವಂತನ 'ಆಕಾಶ' ಎಂಬ ನಿಯಾಮಕ ರೂಪವಿರುತ್ತದೆ. ಇಂತಹ ಭಗವದ್ರೂಪಗಳ ಅಭಿವ್ಯಕ್ತಿಯ ವಿವಕ್ಷೆಯಿಂದ 'ಆತ್ಮನಃ ಆಕಾಶ ಸಂಭೂತಃ' ಇತ್ಯಾದಿ ಶ್ರುತಿಗಳು ಹೊರಟಿವೆ. ಈ ರೂಪಗಳು ಅನೇಕವಾಗಿರುವುದರಿಂದ ಯಾವಾಗ 'ಆಕಾಶ' ಎಂಬ ರೂಪವು ವ್ಯಕ್ತವಾಗುತ್ತದೋ, ಆವಾಗ 'ಆತ್ಮ' ಎಂಬ ರೂಪವು ಅವ್ಯಕ್ತವಾಗಿರುತ್ತದೆ. ಇದರಂತೆ ಪೌರ್ವಾಪರ್ಯವನ್ನು ಕೂಡಿಸಬೇಕು. ಅಂದರೆ ವಾಯುವಿನಲ್ಲಿರುವ ಭಗವದ್ರೂಪವು ವ್ಯಕ್ತವಾಗುವಾಗ ಆಕಾಶದಲ್ಲಿರುವ ರೂಪವು ಅವ್ಯಕ್ತವಾಗಿರುತ್ತದೆ. ಯಾವ ರೂಪವು ವ್ಯಕ್ತವಾಗಿರುತ್ತದೋ, ಅದೇ ಕಾರ್ಯರೂಪವೆಂದು ಅವ್ಯಕ್ತವಾದ ರೂಪವು ಕಾರಣವಾದ ರೂಪವೆಂದು ತಿಳಿಯಬೇಕು. ಆದ್ದರಿಂದ ಒಬ್ಬನೇ ಪರಮಾತ್ಮನಲ್ಲಿ ವ್ಯಕ್ತಿ ಹಾಗೂ ಅವ್ಯಕ್ತಿಯ ಅಪೇಕ್ಷೆಯಿಂದ ಕಾರ್ಯಕಾರಣಭಾವವನ್ನು ಕೂಡಿಸಬೇಕು.

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಗೆ ಅರ್ಥಸಂಕೋಚ ಮಾಡಲು ಯಾವುದಾದರೂ ಬಾಧಕವಿರಬೇಕು. ಅಂತಹ ಬಾಧಕವಿಲ್ಲದ ಕಾರಣ ಸಂಕೋಚ ಮಾಡುವುದು ತಪ್ಪಾಗುತ್ತದೆ. ಅಷ್ಟೇ ಅಲ್ಲದೇ ಅನೇಕ ಸಾಧಕಪ್ರಮಾಣಗಳೇ ಇರುವುದರಿಂದ ಕಾರ್ಯಕಾರಣ-ಭಾವವಾಚಕವಾದ ಶಬ್ದಗಳಿಂದಲೂ ಮಹಾವಿಷ್ಣುವು ಪ್ರತಿಪಾದ್ಯನಾಗುತ್ತಾನೆ.

ಜ್ಯೋತಿರಧಿಕರಣದಲ್ಲಿ ಹೇಳಿದಂತೆ ಬೇರೆ ಭೂತಾಕಾಶ ಮೊದಲಾದವುಗಳಲ್ಲಿ ಆಕಾಶಾದಿಶಬ್ದಗಳ ರೂಢ್ಯರ್ಥವನ್ನು ಒಪ್ಪಿರುವುದರಿಂದ, 'ಆಕಾಶ', 'ವಾಯು' ಮೊದಲಾದವುಗಳ ಉತ್ಪತ್ತಿಯೇ ಸಿದ್ಧವಾಗದಿರಬೇಕಾದೀತು ಎಂಬ ದೋಷಕ್ಕೂ ಅವಕಾಶವಿಲ್ಲ. ಮುಖ್ಯವೃತ್ತಿಯಿಂದ 'ಆಕಾಶ', 'ವಾಯು' ಮೊದಲಾದ ಭೂತಪದಾರ್ಥಗಳೇ ಪ್ರತಿಪಾದ್ಯವಾದರೂ ಪರಮಮುಖ್ಯವೃತ್ತಿಯಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಇಷ್ಟು ಸಿದ್ಧಾಂತ.

ಇಲ್ಲಿಗೆ ನ್ಯಾಯಮುಕ್ತಾವಳಿಯಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು.

# ಸಮಾಕರ್ಷಾಧಿಕರಣ

(೧-೪-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ತತ್ವಪ್ರಕಾಶಿಕಾ, ಭಾವದೀಪ
ಇವುಗಳ ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

# ಸಮಾಕರ್ಷಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

### ಪರಮಾತ್ಮ ಪ್ರತಿಪಾದಕ ಶಬ್ದಗಳಿಂದಲೇ ಲೋಕವ್ಯವಹಾರ ಮಾಡಬಹುದು

**सूत्रम् – ।। समाकर्षात् ।। १ ।।**

ಸೂತ್ರಾರ್ಥ - ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನು ಪ್ರತಿಪಾದಿಸುವ ಶಬ್ದಗಳೇ ಲೌಕಿಕ ವಸ್ತುಗಳನ್ನು ಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಲೋಕವ್ಯವಹಾರವು ಲೋಪವಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** स्वतो मुख्यवृत्त्या परमात्मवाचिनः शब्दान् । ततः समाकृष्यान्यत्र वाचकत्वशक्त्यङ्गीकारात् । नान्यत्र व्यवहारलोपप्रसङ्ग इत्यर्थः।।१।।

ಅರ್ಥ -- ಸ್ವಾಭಾವಿಕವಾಗಿ ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನೇ ಎಳೆದು ಜಗತ್ತಿನಲ್ಲಿರುವ ವಸ್ತುಗಳಲ್ಲಿ ಶಕ್ತಿವೃತ್ತಿಯನ್ನು ಅಂಗೀಕರಿಸಲಾಗಿದೆ. ಆದ್ದರಿಂದ ಲೋಕವ್ಯವಹಾರವೇ ಲೋಪವಾಗಲಿ ಎಂಬ ಶಂಕೆಗೆ ಆಸ್ಪದವಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – सर्वशब्दानां परमात्मवाचकत्वे कथमन्यत्र व्यवहारः ? इति । अतोऽब्रवीत् ।। समाकर्षात् ।।**

ಅನುವಾದ - ಸಕಲ ಶಬ್ದಗಳು ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಹೇಳುವುದಾದರೆ ಲೋಕವ್ಯವಹಾರವು ಹೇಗೆ ಕೂಡುತ್ತದೆ? ಈ ಪ್ರಶ್ನೆಗೆ 'ಸಮಾಕರ್ಷಾತ್' ಎಂಬುದಾಗಿ ಉತ್ತರಿಸುತ್ತಿದ್ದಾರೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಮತ್ತೊಂದು ಪ್ರಕಾರದಿಂದ ವಿಷ್ಣುವಿನಲ್ಲಿ ಸರ್ವಶಬ್ದಸಮನ್ವಯವು ಅಸಂಭಾವಿತವಾಗಿದೆ ಎಂದು ಆಕ್ಷೇಪ ಮಾಡಿ ಪರಿಹರಿಸುತ್ತಿದ್ದಾರೆ. ವಾಸ್ತವಿಕವಾಗಿ ಈ ಅಧಿಕರಣದ ಎಂಟು ಸೂತ್ರಗಳು ಹಿಂದಿನ ಅಧಿಕರಣಕ್ಕೆ ಗುಣಭೂತವಾಗಿವೆ ಎಂದು ವ್ಯಾಖ್ಯಾನ ಮಾಡಬೇಕು. ಮತ್ತು ತತ್ವಪ್ರದೀಪದಲ್ಲಿ ಹಾಗೆಯೇ ಹೇಳಿದ್ದಾರೆ. ಭಾಷ್ಯದಲ್ಲಿಯೂ ಕೂಡ ಸಮನ್ವೇತವ್ಯ ಶಬ್ದವನ್ನು ಉಲ್ಲೇಖಿಸಿಲ್ಲ. ಆದರೂ ಕೂಡ ಪ್ರತ್ಯೇಕ ನ್ಯಾಯ ಸ್ವೀಕೃತವಾದ್ದರಿಂದ ಟೀಕೆಯಲ್ಲಿ ಅಧಿಕರಣಾಂತರವೆಂದು ವ್ಯಾಖ್ಯಾನ ಮಾಡಿದ್ದಾರೆ. ಪೂರ್ವಮೀಮಾಂಸೆಯಲ್ಲಿ 'ಹೇತುದರ್ಶನಾಚ್ಚ' ಎಂಬ ಸೂತ್ರವು ಹಿಂದಿನ ವಿರೋಧಾಧಿಕರಣಕ್ಕೆ ಅಂಗಭೂತವಾಗಿದ್ದರೂ ಪ್ರತ್ಯೇಕ ನ್ಯಾಯಕ್ಕೆ ಸೂಚಕವಾದ್ದರಿಂದ ಮತ್ತೊಂದು ಅಧಿಕರಣವೆಂದು ಪರಿಗಣಿಸಿದ್ದಾರೆ. ಪ್ರಕೃತ ಶ್ರುತ್ಯಾದಿಸಂಗತಿಯನ್ನು ತೋರಿಸುತ್ತಾ, ಸೂತ್ರಕ್ಕೆ ಅವತಾರಿಕೆಯನ್ನು ನೀಡಲು ಹೊರಟದ್ದಾರೆ –

ಸರ್ವಶಬ್ದಾನಾಂ = ಸಕಲವಿಧ ಶಬ್ದಗಳು, ಪರಮಾತ್ಮ ವಾಚಕತ್ವೇ = ಭಗವದ್ವಾಚಕವಾದರೆ, ಅನ್ಯತ್ರ = ಭಗವದತಿರಿಕ್ತವಾದ ಜಗತ್ತಿನಲ್ಲಿ, ಕಥಂ = ಹೇಗೆ, ವ್ಯವಹಾರಃ = ಶಬ್ದಪ್ರಯೋಗವು ಆಗುತ್ತದೆ. ಇತಿ = ಹೀಗೆ, ಅತಃ = ಆಕ್ಷೇಪವು ಬಂದರೆ, ಬ್ರವೀತಿ = ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಸಮಾಕರ್ಷಾತ್= ಭಗವದ್ವಾಚಕ ಶಬ್ದಗಳನ್ನೇ ಲೋಕದಲ್ಲಿ ಎಳೆದು ಮುಖ್ಯವೃತ್ತಿಯಿಂದ ವ್ಯವಹಾರ ಮಾಡಲಾಗುತ್ತದೆ.

**भाष्यम् – परमात्मवाचिनः शब्दा अन्यत्र समाकृष्य व्यवह्रियन्ते ।**

ಅನುವಾದ - ಪರಮಾತ್ಮನನ್ನು ಪರಮಮುಖ್ಯವೃತ್ತಿಯಿಂದ ಯಾವ ಶಬ್ದಗಳು ಪ್ರತಿಪಾದನೆ ಮಾಡುತ್ತವೋ, ಆ ಶಬ್ದಗಳನ್ನೇ ಲೌಕಿಕ ವಸ್ತುಗಳಲ್ಲಿ ಎಳೆದು ಮುಖ್ಯವೃತ್ತಿಯಿಂದ ಪ್ರಯೋಗಿಸಲಾಗುತ್ತದೆ. ಆದ್ದರಿಂದ ಲೋಕವ್ಯವಹಾರವು ನಿಂತು ಹೋಗುವ ಪರಿಸ್ಥಿತಿ ಇಲ್ಲ.

ಪ್ರತಿಪದಾರ್ಥ -- ಲೌಕಿಕ ವ್ಯವಹಾರಕ್ಕೋಸ್ಕರ ಸಮಾಕರ್ಷ ಮಾಡಬೇಕು. ಆವಾಗ ಪರಮಾತ್ಮ ವಾಚಕಶಬ್ದಗಳೇ ಲೌಕಿಕವಸ್ತು ಪ್ರತಿಪಾದಕಗಳೂ ಆಗುತ್ತವೆ. ಹೀಗೆ 'ಜಗದ್ವಾಚಿತ್ವಾತ್' ಎಂಬ ಮುಂದಿನ ಸೂತ್ರದಲ್ಲಿರುವ ಪದವನ್ನು ಅನ್ವಯ ಮಾಡಿಕೊಂಡು

ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ಪರಮಾತ್ಮವಾಚಿನಃ = ಭಗವಂತನನ್ನೇ ಪ್ರತಿಪಾದನೆ ಮಾಡುವ, ಶಬ್ದಾಃ = ಶಬ್ದಗಳು, ಅನ್ಯತ್ರ = ಭಗವಂತನಿಗಿಂತ ಅತಿರಿಕ್ತವಾದ ಜಗತ್ತಿನಲ್ಲಿ, ಸಮಾಕೃಷ್ಯ = ಸಮಾಕರ್ಷ ಮಾಡಿ, ವ್ಯವಹ್ರಿಯಂತೇ = ಪ್ರಯೋಗಿಸಲ್ಪಡುತ್ತವೆ.

**ಭಾಷ್ಯಮ್ – 'परस्य वाचकाश्शब्दा समाकृष्येतरेष्वपि ।**
**व्यवह्रियन्ते सततं लोकवेदानुसारतः ।। इति पाद्मे ।।१।।**

ಅನುವಾದ - ಪರಮಾತ್ಮ ವಾಚಕವಾದ ಶಬ್ದಗಳನ್ನೇ ಸಮಾಕರ್ಷ ಮಾಡಿ, ಇತರ ವಸ್ತುಗಳಲ್ಲಿ ವ್ಯವಹರಿಸಲಾಗುತ್ತದೆ. ಇದು ಲೋಕವ್ಯವಹಾರಕ್ಕೆ ಅನುಕೂಲವಾಗಿದೆ. ವೇದಾರ್ಥವಾದ ಪರಮಾತ್ಮನ ಜ್ಞಾನಕ್ಕೂ ಅನುಗುಣವಾಗಿದೆ. ಹೀಗೆ ಪದ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಅಕ್ಷ ಮೊದಲಾದ ಶಬ್ದಗಳಂತೆ ಪರಸ್ಪರ ಅಪೇಕ್ಷೆ ಪಡದೇ ಸಕಲಶಬ್ದಗಳು ಏಕೆ ಅನೇಕಾರ್ಥಗಳಾಗಬಾರದು? ಈ ಪ್ರಶ್ನೆಗೆ ಶ್ರುತಿಪ್ರಮಾಣವನ್ನು ಉದಾಹರಿಸಿದ್ದಾರೆ. –

ಪರಸ್ಯ = ಪರಮಾತ್ಮನ, ವಾಚಕಾಃ = ಪ್ರತಿಪಾದಕವಾದ, ಶಬ್ದಾಃ = ಶಬ್ದಗಳು, ಅನ್ಯತ್ರ = ಬೇರೆಡೆ, ಸಮಾಕೃಷ್ಯ = ಸಮಾಕರ್ಷ ಮಾಡಲ್ಪಟ್ಟವುಗಳಾಗಿ, ಸತತಂ = ನಿರಂತರವಾಗಿ, ಲೋಕವೇದಾನುಸಾರತಃ = ಲೋಕವೇದಗಳಿಗೆ ಅನುಗುಣವಾಗಿ, ವ್ಯವಹ್ರಿಯಂತೇ = ವ್ಯವಹರಿಸಲ್ಪಟ್ಟವೆ. ಇತಿ = ಹೀಗೆ, ಪಾದ್ಮೇ = ಪದ್ಮಪುರಾಣದಲ್ಲಿ ಹೇಳಲಾಗಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**अत्र व्यवहारविलोपप्रसङ्गेनाऽयत्रैव प्रसिद्धानां सर्वशब्दानां परमात्मैकवाचित्व समर्थनादस्ति शास्त्रादिसङ्गतिः ।**

ಸಕಲಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುವುದಾದರೆ ಲೋಕದಲ್ಲಿ ಸಕಲ ವ್ಯವಹಾರಗಳೇ ನಿಂತುಹೋಗುವ ಪರಿಸ್ಥಿತಿ ಬರುತ್ತದಲ್ಲವೇ? ಈ ಪ್ರಶ್ನೆಗೆ ಉತ್ತರಿಸಲು ಸಮಾಕರ್ಷಾಧಿಕರಣ ಹೊರಡುತ್ತಿದೆ. ಮತ್ತು ಅನ್ಯತ್ರೈವಪ್ರಸಿದ್ಧವಾದ ಸಕಲ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು ಇಲ್ಲಿ ಸಮರ್ಥಿಸುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳನ್ನು ತಿಳಿಯಬೇಕು.

**तत्वप्रकाशिका – समन्वयसूत्रे सर्वेषां शब्दानां भगवद्वाचित्वमुक्तम् । तच्चानुपपत्तिग्रस्तत्वेऽसत्स्यात्, इत्यारम्भणीयमेतत् ।**

ಸಮನ್ವಯಸೂತ್ರದಲ್ಲಿ ಸಕಲಶಬ್ದಗಳು ಭಗವಂತನಲ್ಲಿಯೇ ಸಮನ್ವಯವಾಗುತ್ತವೆಂದು ಪ್ರತಿಜ್ಞೆ ಮಾಡಿದರು. ಆ ಪ್ರತಿಜ್ಞೆಯು ಅನುಪಪನ್ನವಾದರೆ, ಯಾವುದೇ ಶಬ್ದಗಳ ಸಮನ್ವಯವೇ ಸಿದ್ಧವಾಗುವುದಿಲ್ಲ. ಪ್ರಕೃತ ಲೋಕವ್ಯವಹಾರ ವಿಲೋಪಪ್ರಸಂಗವೆಂಬ ಅನುಪಪತ್ತಿಯು ಬಂದಿರುವುದರಿಂದ ಅದನ್ನು ಪರಿಹರಿಸಲು ಈ ಅಧಿಕರಣವು ಆರಂಭಣೀಯವಾಗಿದೆ.

**तत्वप्रकाशिका – लौकिका वैदिकाच शब्दा विषयाः । भगवदेकवाचिनो न वेति सन्देहः । पूर्वोक्तमेव सन्देहबीजम् । पूर्वपक्षयति – सर्वेति ॥**

ಲೌಕಿಕವಾದ ಮತ್ತು ವೈದಿಕವಾದ ಶಬ್ದಗಳೆಲ್ಲವೂ ಈ ಅಧಿಕರಣದ ವಿಷಯಗಳು. ಭಗವಂತನನ್ನು ಮಾತ್ರ ಪ್ರತಿಪಾದನೆ ಮಾಡುತ್ತವೋ, ಇಲ್ಲವೋ ? ಎಂಬುದೇ ಸಂದೇಹ. ಹಿಂದೆ ಹೇಳಿದ ಅನನ್ವಯ ಮತ್ತು ವ್ಯವಹಾರ ವಿಲೋಪ ಪ್ರಸಂಗ ಇವುಗಳು ಸಂದೇಹಬೀಜ. ಪೂರ್ವಪಕ್ಷವನ್ನು ಭಾಷ್ಯದಲ್ಲಿ 'ಸರ್ವಶಬ್ದಾನಾಮ್' ಎಂಬುದರಿಂದ ಹೇಳಿದ್ದಾರೆ.

**तत्वप्रकाशिका – यदुक्तं सर्वशब्दानां परमात्मैकवाचित्वं, तदयुक्तम् । तथात्वेऽन्यत्र व्यवहाराभावापातात् ।**

ಸಕಲಶಬ್ದಗಳು ಪರಮಾತ್ಮನೊಬ್ಬನನ್ನೇ ಪ್ರತಿಪಾದನೆ ಮಾಡುತ್ತವೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದು ಸರಿಯಲ್ಲ. ಹಾಗಾದರೆ ಲೋಕದಲ್ಲಿ ಶಬ್ದಗಳ ಪ್ರಯೋಗವೇ ತಪ್ಪಾಗಬೇಕಾದೀತು. ಎಲ್ಲಾ ಶಬ್ದಗಳು ಪರಮಾತ್ಮನನ್ನಷ್ಟೇ ಹೇಳುವುದರಿಂದ ಲೌಕಿಕ ಗುಣಾರ್ಥಗಳನ್ನು ಹೇಳುವ ಶಬ್ದಗಳೇ ಇಲ್ಲದೇ ವ್ಯವಹಾರವೇ ನಿಂತುಹೋಗಬೇಕಾದೀತು.

**तत्वप्रकाशिका – यदपि 'साक्षादप्यविरोधम्' इत्युक्तमस्य समाधानं, तदयुक्तम् । अवाचकैर्व्यवहारेऽव्यवस्थापातात् ।**

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಇದಕ್ಕೆ ಉತ್ತರವನ್ನು ಈಗಾಗಲೇ ನೀಡಲಾಗಿದೆ. ಆದರೆ ಅದು ಸರಿಯಿಲ್ಲ. ಏಕೆಂದರೆ ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಅಂತಹ ಶಬ್ದಗಳನ್ನು ಲೌಕಿಕ ಪದಾರ್ಥಗಳಲ್ಲಿ ಪ್ರಯೋಗಿಸಲಾಗಿದೆ ಎಂದು ವಿವಕ್ಷಿಸಿದರೆ ಅಲೌಕಿಕ ಶಬ್ದಗಳಿಂದ ವ್ಯವಹರಿಸಿದಂತಾಯಿತು. ಆವಾಗ ಸ್ತಂಭ ಎಂಬ ಶಬ್ದವನ್ನು ಘಟದಲ್ಲಿಯೂ ಪ್ರಯೋಗಿಸಬೇಕಾಗುತ್ತದೆ. ಆದ್ದರಿಂದ ಲೋಕದಲ್ಲಿ ಅವ್ಯವಸ್ಥೆಯು ಉಂಟಾಗುತ್ತದೆ.

**तत्वप्रकाशिका – यदप्यत्रोक्तं 'शरीररूपकविन्यस्तगृहीतेः' इतीश्वर-सम्बन्धादन्यत्र शब्दप्रवृत्तिरिति, तदपि न साधु । तथा सति लोके लक्षणेतरवृत्त्यभावापत्तेः ।**

ಇನ್ನು 'ಆನುಮಾನಿಕಮಪ್ಯೇಕೇಷಾಮ್' ಎಂಬ ಇದೇ ಪಾದದ ಮೊದಲನೆಯ ಸೂತ್ರದಲ್ಲಿ 'ಶರೀರರೂಪಕವಿನ್ಯಸ್ತಗೃಹೀತೇಃ' ಎಂದು ವಿಷ್ಣುವಿನ ಸಂಬಂಧದಿಂದ ಶಬ್ದಗಳು ಅನ್ಯತ್ರಪ್ರವೃತ್ತವಾಗುತ್ತವೆ ಎಂದು ಉತ್ತರಿಸಲಾಗಿತ್ತು. ಇದೂ ಕೂಡ ಸರಿಯಲ್ಲ. ಆ ಉತ್ತರವನ್ನು ವಿವಕ್ಷಿಸಿದರೆ ನಾವು ಮಾಡುವ ಎಲ್ಲಾ ವ್ಯವಹಾರಗಳು ಲಕ್ಷಣಾವೃತ್ತಿಯಿಂದಲೇ ಹೊರತು, ಶಕ್ತಿವೃತ್ತಿಯಿಂದಲ್ಲ ಎಂದಾಗಬೇಕಾದೀತು. ಅಂದರೆ ಲಕ್ಷಣಾವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯೇ ಇಲ್ಲ ಎಂದಾಗಬೇಕಾದೀತು.

**तत्वप्रकाशिका – यत्तु 'कल्पनोपदेशात्' इत्यत्र रूढ्याद्यभ्युपेत्य समाधानं, तदपि न शोभां बिभर्ति । तथा सत्यन्यस्यापि मुख्यवाच्यत्वप्रसङ्गेन परमात्मन एव मुख्यवाच्यत्वम्' इति प्रतिज्ञाव्याघातात् ।**

ಮತ್ತು 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಸೂತ್ರದಲ್ಲಿ ಶಕ್ತಿವೃತ್ತಿಯಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡಿದರೂ, ಆಯಾ ಶಬ್ದಗಳ ರೂಢ್ಯರ್ಥವನ್ನು ಸ್ವೀಕರಿಸಿ ಲೌಕಿಕ ಪದಾರ್ಥಗಳಲ್ಲಿ ಪ್ರಯೋಗಿಸುತ್ತಾರೆಂಬ ಸಮಾಧಾನವನ್ನು ನೀಡಿದ್ದರು. ಇದೂ ಕೂಡ ಸರಿಯಲ್ಲ. ಹಾಗಾದರೆ ಯಾವುದೇ ಯೋಗಾರ್ಥವು ಅದರ ಮುಖ್ಯಾರ್ಥವೇ ಆಗಿರುತ್ತದೆಂಬ ನಿಯಮವಿದೆ. ಆದ್ದರಿಂದ ಲೌಕಿಕಪದಾರ್ಥಗಳಲ್ಲಿನ ಶಬ್ದಗಳಿಗೆ ಮುಖ್ಯವೃತ್ತಿಯನ್ನು ಒಪ್ಪಿದಂತಾಗುತ್ತದೆ. ಆವಾಗ 'ಪರಮಾತ್ಮನೇ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ' ಎಂಬ ಪ್ರತಿಜ್ಞೆಗೆ ವಿರೋಧ ಬರುತ್ತದೆ.

**तत्वप्रकाशिका – योगरूढ्योरेव मुख्यवृत्तित्वात् । नहि 'अक्षादिशब्दानां रूढ्यादिनैवानेकवाचिनां क्वचित् मुख्यता, क्वचिन्न' इत्यस्ति ।**

ಯೋಗ ಮತ್ತು ರೂಢಿಗಳೇ ಮುಖ್ಯವೃತ್ತಿಯೆನಿಸುತ್ತವೆ. 'ಅಕ್ಷ' ಮೊದಲಾದ ಶಬ್ದಗಳು ಯೋಗ ಮತ್ತು ರೂಢಿಯಿಂದಲೇ ಅನೇಕಾರ್ಥಗಳಲ್ಲಿ ಮುಖ್ಯವೃತ್ತಿಯಿಂದ ಇರುವುದು ಕಂಡಿದೆ. ಹೊರತು, ಕೆಲವು ಅರ್ಥಗಳಲ್ಲಿ ಮುಖ್ಯವೃತ್ತಿಯಿಂದ, ಇನ್ನೂ ಕೆಲವು ಅರ್ಥಗಳಲ್ಲಿ ಅಮುಖ್ಯವೃತ್ತಿಯಿಂದ ಇರುವುದು ಕಂಡಿಲ್ಲವಷ್ಟೇ.

**तत्वप्रकाशिका – अतः सर्वशब्दानां मुख्यवृत्त्या परमात्मैकवाचित्वेऽन्यत्र व्यवहारलोपापातात्; तस्य चानिष्टत्वात्, 'न परमात्मैव मुख्यतः सर्वशब्दवाच्यः' इति (शङ्कार्थः) ।**

ಆದ್ದರಿಂದ ಸಕಲಶಬ್ದಗಳು ಮುಖ್ಯವೃತ್ತಿಯಿಂದ ಪರಮಾತ್ಮನೊಬ್ಬನನ್ನೇ ಪ್ರತಿಪಾದನೆ ಮಾಡುವುದಾದರೆ ಲೋಕದಲ್ಲಿ ಶಬ್ದವ್ಯವಹಾರಗಳೇ ಲೋಪವಾಗುವ ಪ್ರಸಂಗ ಬರುತ್ತದೆ. ಇದು ಸಿದ್ಧಾಂತಿಗಳಿಗೂ ಅನಿಷ್ಟ. ಆದ್ದರಿಂದ ಎಲ್ಲಾ ಶಬ್ದಗಳಿಂದ ಪರಮಾತ್ಮನೊಬ್ಬನೇ ಮುಖ್ಯವೃತ್ತಿಯಿಂದ

ಪ್ರತಿಪಾದ್ಯನಾಗಿದ್ದಾನೆಂದಾಗಲೀ, ಸಕಲಶಬ್ದವಾಚ್ಯನಾಗಿದ್ದಾನೆಂದಾಗಲೀ ಹೇಳಲು ಸಾಧ್ಯವಿಲ್ಲ. ಇಷ್ಟು ಪೂರ್ವಪಕ್ಷ.

**तत्वप्रकाशिका – सिद्धान्तयत् सूत्रमवतार्य व्याचष्टे – अत इति ।।**

ಮೇಲಿನ ಪೂರ್ವಪಕ್ಷವನ್ನು ನಿರಾಕರಿಸಿ ಸಿದ್ಧಾಂತವನ್ನು ಸ್ಥಾಪನೆ ಮಾಡಲು ಹೊರಟಿರುವ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ.

**तत्वप्रकाशिका – सूत्रं व्याचष्टे – परमात्मेति ।।**

ಭಾಷ್ಯಕಾರರು ಸೂತ್ರವನ್ನು 'ಪರಮಾತ್ಮವಾಚಿನಃ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ.

**तत्वप्रकाशिका – न परमात्मनो मुख्यतः सर्वशब्दवाच्यत्वेऽन्यत्र व्यवहारलोपः । तत्र रूढ्यादेरभ्युपगमात् ।**

'ಪರಮಾತ್ಮನು ಮುಖ್ಯವೃತ್ತಿಯಿಂದಲೇ ಸಕಲಶಬ್ದವಾಚ್ಯನಾಗಿದ್ದಾನೆ' ಎಂಬುದೇ ನಮ್ಮ ಸಿದ್ಧಾಂತ. ಹೀಗೆ ಒಪ್ಪುವುದರಿಂದ ಅನ್ಯತ್ರ ವ್ಯವಹಾರವೇ ನಿಂತು ಹೋಗುವ ಪರಿಸ್ಥಿತಿ ಬರುವುದಿಲ್ಲ. ಲೌಕಿಕ ಪದಾರ್ಥಗಳಲ್ಲಿ ಆಯಾ ಶಬ್ದಗಳ ರೂಢಿವೃತ್ತಿಯನ್ನು ಒಪ್ಪಿರುತ್ತೇವೆ.

**तत्वप्रकाशिका – तथा सत्युभयोर्मुख्यवाच्यत्वं प्राप्तम् ? इति चेत् ।**

ಪ್ರಶ್ನೆ - ಹಾಗಾದರೆ ಒಂದೇ ಶಬ್ದಕ್ಕೆ ಎರಡು ಅರ್ಥದಲ್ಲಿ ಮುಖ್ಯವೃತ್ತಿಯನ್ನು ಒಪ್ಪಿದಂತಾಯಿತಲ್ಲವೇ?

**तत्वप्रकाशिका – मैवम् । भवेदेतत् अक्षादिशब्दवदुभयत्रान्योन्यनिरपेक्षा शब्दप्रवृत्तिः । न चैवम्, किन्तु; स्वतो मुख्यवृत्त्या परमात्मैकवाचिनां शब्दानां व्यवहारसिध्यर्थं ततः समाकृष्याऽन्यत्र रूढत्वेन सङ्केतितत्वात् ।**

ಉತ್ತರ - ಇದು ತಪ್ಪು. ಒಂದು ವೇಳೆ 'ಅಕ್ಷ' ಮೊದಲಾದ ಅನೇಕಾರ್ಥದ ಶಬ್ದಗಳಂತೆ ಬೇರೆ ಬೇರೆ ಅರ್ಥಗಳಲ್ಲಿ ಪರಸ್ಪರ ಅಪೇಕ್ಷೆ ಪಡದ ಶಬ್ದಗಳಿಗೆ ಎರಡು ಅರ್ಥಗಳಲ್ಲಿ ಮುಖ್ಯಾರ್ಥತ್ವವನ್ನು ಒಪ್ಪಿದ್ದರೆ ನೀವು ಹೇಳಿದ ಆಕ್ಷೇಪಕ್ಕೆ ಅವಕಾಶವಿರುತ್ತಿತ್ತು. ಆದರೆ ಅಕ್ಷಾದಿ ಶಬ್ದಗಳಂತೆ ನಾವು ಅನೇಕಾರ್ಥತ್ವನ್ನು ಸಮಾನವಾಗಿ ಹೇಳುತ್ತಿಲ್ಲ. ಹೊರತಾಗಿ ಪರಮಾತ್ಮನೊಬ್ಬನೇ ಪ್ರತಿಯೊಂದು ಶಬ್ದಗಳಿಂದ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಕೇವಲ ವ್ಯವಹಾರದ ಸಿದ್ಧಿಗೋಸ್ಕರ ಆಯಾ ಶಬ್ದಗಳನ್ನು ಸಮಾಕರ್ಷ ಮಾಡಿ, ಬೇರೆ ಪದಾರ್ಥಗಳಲ್ಲಿ ರೂಢಿವೃತ್ತಿಯನ್ನು ಒಪ್ಪಿ ಸಂಕೋಚ ಮಾಡುತ್ತೇವೆ. ಹೊರತು ಮುಖ್ಯವೃತ್ತಿಯನ್ನು ಒಪ್ಪುವುದಿಲ್ಲ.

**तत्वप्रकाशिका – अल्पप्रवृत्तिनिमित्तानां च तदधीनत्वादिति भावः ।**

ಯಾವ ಶಬ್ದಗಳು ಲೌಕಿಕಪದಾರ್ಥಗಳಲ್ಲಿ ಯೌಗಿಕವಾಗಿರುತ್ತವೋ, ಅವುಗಳ ಪ್ರವೃತ್ತಿನಿಮಿತ್ತ ಪರಮಾತ್ಮನಲ್ಲಿಯೇ ಅಧಿಕವಾಗಿರುತ್ತದೆ. ಲೌಕಿಕ ಪದಾರ್ಥಗಳಲ್ಲಿರುವ ಪ್ರವೃತ್ತಿನಿಮಿತ್ತವು ಪರಮಾತ್ಮನ ಅಧೀನವಾಗಿರುತ್ತದೆ. ಮತ್ತು ಅಲ್ಪವಾಗಿರುತ್ತದೆ. ಆದ್ದರಿಂದ ಪರಮಾತ್ಮನಲ್ಲಿ ಎಷ್ಟು ಮುಖ್ಯವೃತ್ತಿಯಿಂದ ಶಬ್ದಗಳಿರುತ್ತವೋ ಅಷ್ಟೇ ಮುಖ್ಯವೃತ್ತಿಯಿಂದ ಲೌಕಿಕಪದಾರ್ಥಗಳಲ್ಲಿರುವುದಿಲ್ಲ.

**तत्वप्रकाशिका – अन्योन्यनिरपेक्षतयैव कुतो न शब्दवृत्तिरित्यतः स्मृतेरेवेत्याह – परस्येति ।।**

ಪರಮಾತ್ಮ ಹಾಗೂ ಲೌಕಿಕಪದಾರ್ಥಗಳಲ್ಲಿ ಶಬ್ದಗಳು ಅನ್ಯೋನ್ಯನಿರಪೇಕ್ಷವಾಗಿ ಅಕ್ಷಾದಿಶಬ್ದಗಳಂತೆ ಮುಖ್ಯವೃತ್ತಿಯಿಂದಲೇ ಏಕೆ ಕೂಡಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು ಸ್ಮೃತಿವಾಕ್ಯವನ್ನೇ ಆಧಾರವನ್ನಾಗಿ ಹೇಳುತ್ತಿದ್ದಾರೆ 'ಪರಸ್ಯ' ಇತ್ಯಾದಿಯಾಗಿ.

**तत्वप्रकाशिका – लोकवेदानुसारत इति ।। लौकिकवैदिकव्यवहारसिद्ध्यनुसारतः। नच प्राचीनसूत्रविरोधः । प्रथमसूत्रे स्वातन्त्र्येण वाच्यत्वाभावस्याभिप्रेतत्वात् ।**

'ಲೋಕವೇದಾನುಸಾರತಃ' ಎಂದರೆ ಲೌಕಿಕ ಹಾಗೂ ವೈದಿಕ ವ್ಯವಹಾರಗಳ ಸಿದ್ಧಿಗೆ ಅನುಸಾರಿಯಾಗಿ ಎಂದರ್ಥ. ಹಾಗಾದರೆ ಅಜ್ಞರೂಢಿಯಿಂದ ಲೋಕವ್ಯವಹಾರ. ಮುಖ್ಯಾರ್ಥನಾದ ಪರಮಾತ್ಮನ ಸಂಬಂಧದಿಂದ ಲೋಕದಲ್ಲಿ ಅಮುಖ್ಯವ್ಯವಹಾರ, ಇತ್ಯಾದಿಯಾಗಿ ಹಿಂದಿನ ಸೂತ್ರಗಳಲ್ಲಿ ಹೇಳಲಾಗಿದೆ. ಈ ಸೂತ್ರಗಳ ವಿರೋಧ ಬರುತ್ತದಲ್ಲವೇ ? ಎಂದು ಆಶಂಕಿಸಬಾರದು. 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಮೊದಲನೆಯ ಸೂತ್ರದಲ್ಲಿ ಸ್ವತಂತ್ರವಾಗಿ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನೇ ಲೋಕದಲ್ಲಿ ಬಳಕೆ ಮಾಡಲಾಗುತ್ತದೆ.

**तत्वप्रकाशिका – द्वितीये परमात्मसम्बन्धोक्त्याऽत्रोक्तस्यैवाभिसंहितत्वात् । तृतीये चाऽविवेचितरूढ्यादिमात्राभ्युपगतेः । अत्र पुनस्तस्यैव विवेचनादिति ।।१।।**

'ಆನುಮಾನಿಕಮಪ್ಯೇಕೇಷಾಂ' ಎಂಬ ಎರಡನೆಯ ಸೂತ್ರದಲ್ಲಿ, ಪರಮಾತ್ಮ ಸಂಬಂಧವು ಲೌಕಿಕ ಪದಾರ್ಥಗಳಲ್ಲಿ ಸಮಾಕರ್ಷ ಮಾಡಲು ನಿಮಿತ್ತವಾಗಿದೆಯೆಂದು ಈ 'ಸಮಾಕರ್ಷಾತ್' ಎಂಬ ಸೂತ್ರದಲ್ಲಿ ಹೇಳಿರುವುದು ಅನುಸಂಧಾನ ಮಾಡಿಕೊಳ್ಳಬೇಕು. 'ಕಲ್ಪನೋಪದೇಶಾಚ್ಚ' ಎಂಬ ಮೂರನೆಯ ಸೂತ್ರದಲ್ಲಿ ರೂಢಿ ಮೊದಲಾದ ವೃತ್ತಿಗಳ ಬಗ್ಗೆ ವಿವೇಚನೆ ಮಾಡದೇ ಸಾಮಾನ್ಯವಾಗಿ ಸಮನ್ವಯ ಮಾಡಿರುತ್ತಾರೆ. ಅದನ್ನೇ ಈ ಸೂತ್ರವೂ ಹೇಳಿದೆ - ಎಲ್ಲಾ ಶಬ್ದಗಳು ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ. ಲೋಕದಲ್ಲಿ ರೂಢಿ ಹಾಗೂ

ಯೋಗವೃತ್ತಿಗಳಿಂದ ಪ್ರತಿಪಾದನೆ ಮಾಡುತ್ತವೆ. ಹೀಗೆ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿ ಪ್ರಾಪ್ತವಾದ ವಿಚಾರವನ್ನು ಈ ಸೂತ್ರದಲ್ಲಿ ವಿಶೇಷ ವಿಶ್ಲೇಷಣೆ ಮಾಡಿದ್ದರಿಂದ ವಿರೋಧವಿಲ್ಲ.

ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

# ಭಾವದೀಪ

अत्रानुव्याख्याने 'विरोधिसर्वबाहुल्यकारणस्त्रीनिषेधिनाम्' इत्यादिना एतत्पादीयाधिकरणोपाध्युक्त्यनुरोधेन प्राचीनैः समाकर्षादित्यादिसूत्राष्टकस्य पूर्वशेषत्वोक्तावपीह पृथगधिकरणान्तरत्वेन योजनं तु पृथक् न्यायसूचकत्वं दर्शयितुमित्युक्तं चन्द्रिकायाम्।

ಅನುವ್ಯಾಖ್ಯಾನದಲ್ಲಿ 'ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಂ' ಎಂಬ ಈ ಪಾದದ ಪ್ರತಿಯೊಂದು ಅಧಿಕರಣಗಳ ಉಪಾಧಿಯನ್ನು ಹೇಳುವಾಗ ಹಿಂದಿನ 'ಸಮಾಕರ್ಷಾತ್' ಎಂಟು ಸೂತ್ರಗಳನ್ನು ಸೇರಿಸಿಯೇ ಉಪಾಧಿಯನ್ನು ಹೇಳಿರುತ್ತಾರೆ. ಹೊರತು ಪ್ರತ್ಯೇಕವಾದ ಉಪಾಧಿಯನ್ನು ಈ ಅಧಿಕರಣಕ್ಕೆ ಹೇಳಿರುವುದಿಲ್ಲ. ಆದರೆ ಟೀಕೆಯಲ್ಲಿ ಸಮಾಕರ್ಷಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದಾರೆ. ಇದಕ್ಕೆ ಕಾರಣವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಪ್ರತ್ಯೇಕ ನ್ಯಾಯ ಸೂಚಕವಾದ್ದರಿಂದ ಎಂದು ಸಮರ್ಥಿಸಿದ್ದಾರೆ.

**भावदीपः** – एवं हरावन्यत्र च मुख्यवृत्तौ सिद्धायामस्य विचारस्यावसरप्राप्तिमाह – अथेति ।।

ಶ್ರೀಹರಿಯಲ್ಲಿ ಮತ್ತು ಲೋಕದಲ್ಲಿ ಮುಖ್ಯವೃತ್ತಿಯಿಂದಲೇ ಶಬ್ದಗಳು ಪ್ರವೃತ್ತವಾದಾಗ ಈ ಅಧಿಕರಣದ ವಿಚಾರವು ಅವಸರ ಸಂಗತಿಯಿಂದ ಪ್ರಾಪ್ತವಾಗುತ್ತದೆ. ಅದನ್ನೇ 'ಅಥ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – **प्रकारान्तरेणेति** । सर्वमानविरोधकर्मक्रमादिविरोधबहुत्वसङ्ख्यादिविरोधोत्पत्तिमत्त्वादि विरोधरूपप्रागुक्तप्रकारापेक्षया मुख्यवृत्तेर्हरौ तदन्यत्र च तुल्यतापत्तिरूपान्यप्रकारेणेत्यर्थः ।।

'ಪ್ರಕಾರಾಂತರೇಣ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಸರ್ವಮಾನವಿರೋಧ, ಕರ್ಮಕ್ರಮಾದಿವಿರೋಧ, ಬಹುತ್ವಸಂಖ್ಯಾದಿವಿರೋಧ, ಉತ್ಪತ್ತಿಮತ್ವಾದಿವಿರೋಧ, ಎಂಬ ಹಿಂದಿನ ಅಧಿಕರಣಗಳ ಉಪಾಧಿಗಳಿಗಿಂತಲೂ ವಿಭಿನ್ನವಾದ ಉಪಾಧಿಯು ಈ ಅಧಿಕರಣಕ್ಕೆ ಇರುತ್ತದೆ. 'ತುಲ್ಯತಾಪತ್ತಿ' ಎಂಬ ಉಪಾಧಿನಿಮಿತ್ತಕವಾಗಿ ಶಬ್ದಗಳು ಶ್ರೀಹರಿಯಲ್ಲಿ ಮತ್ತು ಲೋಕದಲ್ಲಿ

ಮುಖ್ಯವೃತ್ತಿಯಿಂದಲೇ ಬರುತ್ತವೆ. ಆದ್ದರಿಂದ ಈ ಅಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸುವುದು ತಪ್ಪಾಗುವುದಿಲ್ಲ.

**भावदीपः – सर्वशब्देति ।।** ज्योतिरधिकरणविषयोपाधिरेवास्यापि विषय इति सूचितम् । तेनैव गतार्थमिदमित्यतः प्रकारान्तरेणेत्याद्युक्तम् । अत्र शास्त्रसङ्गत्यादिकमूह्यम् ।

ಜ್ಯೋತಿರಧಿಕರಣದ ವಿಷಯೋಪಾಧಿಯೇ ಈ ಅಧಿಕರಣದ ಉಪಾಧಿಯು ಆಗುತ್ತದೆಂದು ಸೂಚಿಸಿದ್ದಾರೆ. ಜ್ಯೋತಿರುಕ್ರಮಾಧಿಕರಣದಿಂದಲೇ ಈ ಅಧಿಕರಣವು ಗತಾರ್ಥವಾಗುತ್ತದಲ್ಲವೆ ? ಎಂಬ ಆಶಂಕೆಗೆ 'ಪ್ರಕಾರಾಂತರೇಣ'. ಇತ್ಯಾದಿಯಾಗಿ ಹೇಳಿರುತ್ತಾರೆ. ಈ ಅಧಿಕರಣದಲ್ಲಿ ಶಾಸ್ತ್ರಸಂಗತಿ ಅಧಿಕರಣ ಸಂಗತಿ ಮೊದಲಾದವನ್ನು ಸ್ವತಃ ಊಹಿಸಿಕೊಳ್ಳಬೇಕು.

**भावदीपः –** यदा तु अत्र व्यवहारविलोपप्रसङ्गेन अन्यत्रैव प्रसिद्धानां सर्वशब्दानां परमात्मैकवाचित्वसमर्थनादित्यादिना पूर्वोत्तराधिकरणेष्विव शास्त्रादि-सङ्गत्याद्युपपदानपरग्रन्थपाठोऽऽप्यत्र नये कचित्कोशेषूपलभ्यते तदा तु व्यक्तमेव ।

'ಅತ್ರ ವ್ಯವಹಾರ.... ಎಂಬ ಟೀಕಾ ಪಂಕ್ತಿಯಿಂದ ಪ್ರಾರಂಭಿಸಿ, .... ಪೂರ್ವಪಕ್ಷಯತಿ' ಎಂಬಲ್ಲಿಯ ತನಕ ಇರುವ ಟೀಕಾವಾಕ್ಯಗಳು ಕೆಲವು ಪುಸ್ತಕಗಳಲ್ಲಿ ಕಾಣಸುವುದಿಲ್ಲ. ಅದರ ಬದಲು 'ಅತ ಪುನಃ ಪ್ರಕಾರಾಂತರೇಣ ಪರಮಾತ್ಮನಿ ಸರ್ವಶಬ್ದಸಮನ್ವಯಾಸಂಭವಮಾಶಂಕ್ಯ, ತತ್‌ಪರಿಹಾರತ್ವೇನ ಸೂತ್ರಮ್ ಅವಧಾರಯತಿ ಸರ್ವೇತಿ' ಎಂಬ ಪಾಠವಿದೆ. ಈ ವಾಕ್ಯವನ್ನು ಅವಲಂಬಿಸಿ ಮೇಲೆ ವ್ಯಾಖ್ಯಾನ ಮಾಡಲಾಯಿತು. ಒಂದುವೇಳೆ 'ಅತ್ರ ವ್ಯವಹಾರಲೋಪಪ್ರಸಂಗೇನ ಅನ್ಯತ್ರೈವ ಪ್ರಸಿದ್ಧಾನಾಂ ಸರ್ವಶಬ್ದಾನಾಂ ಪರಮಾತ್ಮೈಕವಾಚಿತ್ವ ಸಮರ್ಥನಾತ್ ಅಸ್ತಿ ಶಾಸ್ತ್ರಾದಿ ಸಂಗತಿಃ' ಇತ್ಯಾದಿಯಾದ ವಾಕ್ಯಗಳಿದ್ದಾಗ ಹಿಂದಿನ - ಮುಂದಿನ ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಶಾಸ್ತ್ರಸಂಗತಿ ಮೊದಲಾದವನ್ನು ತಿಳಿಯಬೇಕು. ಈ ಪಾಠವು ಕೆಲವು ಪುಸ್ತಕಗಳಲ್ಲಿ ಕಾಣಿಸುತ್ತಿದೆ. ಅತ್ಯಂತ ಸ್ಪಷ್ಟವಾಗಿಯೇ ಸಂಗತ್ಯಾದಿಗಳನ್ನು ಹೇಳಿರುವುದರಿಂದ ಪುನಃ ಇದಕ್ಕೆ ವ್ಯಾಖ್ಯಾನ ಮಾಡುವ ಅವಶ್ಯಕತೆಯಿಲ್ಲ.

**भावदीपः –** भाष्योक्तापादकस्यासिद्धिनिरासाय प्राक्तनं स्मारयन् व्याचष्टे – **यदुक्तमिति ।।** पूर्वनयैरित्र्थः ।

ಭಾಷ್ಯದಲ್ಲಿ ಹೇಳಿದ ಆಪಾದಕಕ್ಕೆ ಅಸಿದ್ಧಿಯನ್ನು ಪರಿಹರಿಸಲು ಹಿಂದೆ ಹೇಳಿದ್ದನ್ನು ಸ್ಮರಣೆಗೆ ತಂದುಕೊಡುವ ಮೂಲಕ 'ಯದುಕ್ತಮ್' ಇತ್ಯಾದಿ ಟೀಕೆಯು ಹೊರಟಿದೆ. 'ಯದುಕ್ತಮ್' ಎಂದರೆ ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಎಂದರ್ಥ.

**भावदीपः – ननु भाष्ये कथमन्यत्र व्यवहार इति चोद्यमयुक्तम् । 'साक्षादपि' इत्यादि सूत्रैरेवास्य निरस्तत्वादित्यत आह – यदपीति ।।**

ಭಾಷ್ಯದಲ್ಲಿ 'ಕಥಂ ಅನ್ಯತ್ರ ವ್ಯವಹಾರಃ' ಎಂಬ ಆಕ್ಷೇಪವಿದೆ ಇದು ಅಯುಕ್ತ. ಏಕೆಂದರೆ 'ಸಾಕ್ಷಾದಪಿ' ಇತ್ಯಾದಿ ಸೂತ್ರಗಳಿಂದಲೇ ಈ ಆಶಂಕೆಯನ್ನು ನಿರಾಕರಣೆ ಮಾಡಿದ್ದಾಗಿದೆಯಲ್ಲವೆ? ಎಂಬ ಪ್ರಶ್ನೆಗೆ 'ಯದಪಿ' ಇತ್ಯಾದಿ ಟೀಕೆಯು ಹೊರಟಿದೆ.

**भावदीपः – विष्णुवाचकैरेव अनन्यगत्या हानाद्यर्थमन्यत्र व्यवहार इति यदुक्तं लिङ्गपादान्त्यनय इत्यर्थः ।।**

ವಿಷ್ಣುವನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನೇ ಬೇರೆ ಗತಿಯಿಲ್ಲದೆ ಲೋಕದಲ್ಲಿ ಪ್ರಯೋಗ ಮಾಡುತ್ತೇವೆ. ಹೀಗೆ ಲಿಂಗಪಾದದ ಕೊನೆಯ ಅಧಿಕರಣದಲ್ಲಿ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಸಮರ್ಥಿಸಲಾಯಿತು ಎಂದು 'ಯದಪಿ' ಇತ್ಯಾದಿ ವಾಕ್ಯದ ಅಭಿಪ್ರಾಯ.

**भावदीपः – अव्यवस्थेति ।। वह्निपदेन जलादिव्यवहारस्याप्यापातादित्यर्थः ।।**

ಟೀಕೆಯಲ್ಲಿರುವ ಅವ್ಯವಸ್ಥಾ ಪದಕ್ಕೆ ಹೀಗರ್ಥ - ಯಾವುದೋ ಪದವನ್ನು ಮತ್ತೆಲ್ಲೊ ವ್ಯವಹರಿಸುವುದಾದರೆ ವಹ್ನಿಪದವನ್ನು ಜಲಾದಿಗಳಲ್ಲಿಯೂ ವ್ಯವಹರಿಸಬೇಕಾದೀತು ಎಂದು.

**भावदीपः – यदप्यत्रेति ।। आनुमानिकसूत्रे तत्तच्छब्दवाच्येश्वरसम्बन्धात्तत्र तत्र तच्छब्दव्यवहारो गङ्गासम्बन्धाद् गङ्गापदस्य तीर इवेति यदुक्तमत्र चोद्ये समाधानमित्यर्थः ।।**

'ಯದಪ್ಯತ್ರ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ''ಆನುಮಾನಿಕ ಸೂತ್ರದಲ್ಲಿ ಆಯಾಶಬ್ದಗಳಿಂದ ವಾಚ್ಯನಾದ ಈಶ್ವರನ ಸಂಬಂಧವಿರುವ ಪ್ರಯುಕ್ತ ಬೇರೆ ಪದಾರ್ಥಗಳು ಆಯಾಶಬ್ದಗಳಿಂದ ಪ್ರತಿಪಾದ್ಯವಾಗುತ್ತವೆ. ಗಂಗಾಸಂಬಂಧದಿಂದ ತೀರದಲ್ಲಿ ಗಂಗಾಪದವನ್ನು ಪ್ರಯೋಗಿಸಿದಂತೆ ಹೀಗೆ ಸಮರ್ಥಿಸಿದ್ದಾರೆ. ಅದನ್ನು ಇಲ್ಲಿಯೂ ಆಕ್ಷೇಪಿಸಿ ಸಮಾಧಾನವನ್ನು ತಿಳಿಯಬೇಕು''.

**भावदीपः – रूढ्याद्युपेत्येति ।। अन्यत्रेत्यनुषङ्गः । एतेन प्रसङ्गात् सूत्राणामपौनरुक्त्यं दर्शितम् ।। प्रतिज्ञेति ।। समन्वयसूत्रोक्तप्रतिज्ञेयर्त्थः ।।**

'ರೂಢ್ಯಾದ್ಯುಪೇತ್ಯತಿ' ಎಂಬಲ್ಲಿ ಅನ್ಯತ್ರಪದವನ್ನು ಅನುಷಂಗ ಮಾಡಿಕೊಳ್ಳಬೇಕು. ಇದರಿಂದ ಪ್ರಾಸಂಗಿಕವಾಗಿ ಪುನರುಕ್ತಿದೋಷವನ್ನು ಪರಿಹರಿಸಿದಂತಾಗುತ್ತದೆ. 'ಪ್ರತಿಜ್ಞಾವ್ಯಾಘಾತಾತ್' ಎಂದರೆ ಸಮನ್ವಯ ಸೂತ್ರದಲ್ಲಿ ಮಾಡಿದ ಪ್ರತಿಜ್ಞಾ ವ್ಯಾಘಾತದ ದೋಷ ಬರುತ್ತದೆ ಎಂದರ್ಥ.

ಸಮಾಕರ್ಷಾಧಿಕರಣ (೧-೪-೫)

**भावदीपः –** तत्रोक्तसप्तवृत्तीनामपि मुख्यत्वाभावात् कथमेवमित्यतो व्यनक्ति – **योगरूढ्योरेवेति ।।**

ಏಳು ಬಗೆಯ ಶಬ್ದವೃತ್ತಿಗಳಲ್ಲಿ ಯಾವುದೂ ಕೂಡ ಮುಖ್ಯವಾಗದ ಕಾರಣ ಮುಖ್ಯವೃತ್ತಿಯಿಂದ ಶಬ್ದಗಳ ಸಮನ್ವಯವನ್ನು ಹೇಗೆ ಮಾಡುತ್ತೀರಿ ? ಎಂಬ ಪ್ರಶ್ನೆಗೆ 'ಯೋಗರೂಢ್ಯೋರೇವ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**भावदीपः –** योगरूढ्योरत्रोपलक्षणया महायोगविद्वद्रूढ्योरीशे सिद्धान्तभिमतयो-र्व्यवच्छेदायैवकारः एवमभिप्रायं वर्णयित्वोपसंहाररूपेण भाष्यं योजयति – **अत इति ।।**

ಯೋಗರೂಢಿಗಳನ್ನು ಇಲ್ಲಿ ಉಪಲಕ್ಷಣಯಾ ಸ್ವೀಕರಿಸಬೇಕು. ಮಹಾಯೋಗ ಮತ್ತು ವಿದ್ವದ್ ರೂಢಿಗಳಿಂದ ಶಬ್ದಗಳು ಈಶ್ವರನಲ್ಲಿ ಬಂದಿರುತ್ತವೆಂದು ಸಿದ್ಧಾಂತಿಗಳಿಗೆ ಅಭಿಮತವಾಗಿದೆ. ಅದನ್ನು ವ್ಯವಚ್ಛೇದ ಮಾಡಲು 'ಏವ'ಕಾರವನ್ನು ಟೀಕೆಯಲ್ಲಿ ಹೇಳಿರುತ್ತಾರೆ. ಹೀಗೆ ಭಾಷ್ಯದ ಅಭಿಪ್ರಾಯವನ್ನು ವ್ಯಾಖ್ಯಾನ ಮಾಡಿ ಪೂರ್ವಪಕ್ಷದ ಉಪಸಂಹಾರರೂಪದಿಂದ ಭಾಷ್ಯವನ್ನು ಯೋಜನೆ ಮಾಡಲು 'ಅಥ' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः –** योगरूढिव्यतिरिक्तमुख्यवृत्तेरभावादित्यर्थः । मुख्यवृत्त्येति शेषोक्तिः । योगरूढिरूपयेत्यर्थः ।

'ಅತಃ' ಎಂದರೆ ಯೋಗ ಹಾಗೂ ರೂಢಿಗಳಿಂದ ಅತಿರಿಕ್ತವಾದ ಮುಖ್ಯವೃತ್ತಿಯು ಇಲ್ಲದ್ದರಿಂದ ಎಂದರ್ಥ. 'ಮುಖ್ಯವೃತ್ತ್ಯಾ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಯೋಗರೂಢಿಯ ರೂಪವಾದ ಮುಖ್ಯವೃತ್ತಿಯಿಂದ ಎಂದು ಇದರರ್ಥ.

**भावदीपः –** ''स्वातन्त्र्यं तद्गतत्वं च शब्दवृत्तेर्हि कारणम् । स्वातन्त्र्यं तत्र मुख्यं स्यात्'' इति तदधीनत्वसूत्रानुव्याख्यानोक्तस्वातन्त्र्यनिमित्तकमुख्यवृत्त्या शब्दानामीश्वरवाचित्वे बाधकाभावेऽपि तद्गतत्वनिमित्तकमुख्यवृत्त्येश्वरवाचित्वेऽन्यत्र व्यवहारलोपः स्यादेव । लोके योगरूढिरूपमुख्यवृत्तेरभावस्य प्राप्तत्वादिति भावः ।

''ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ । ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ।'' ಎಂಬುದಾಗಿ 'ತದಧೀನತ್ವಾತ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸ್ವಾತಂತ್ರ್ಯವೆಂಬ ಪ್ರವೃತ್ತಿ ನಿವೃತ್ತಿನಿಮಿತ್ತದಿಂದ ಶಬ್ದಗಳು ಮುಖ್ಯವಾಗಿ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತವೆ. ಈ ವಿಷಯದಲ್ಲಿ ಯಾವುದೇ ಬಾಧಕಗಳು ಇರುವುದಿಲ್ಲ. ಆದರೆ 'ತದ್‌ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಉದ್ದೇಶಿಸಿ ಮುಖ್ಯವೃತ್ತಿಯಿಂದ ಈಶ್ವರನೇ ಪ್ರತಿಪಾದ್ಯನೆಂದು ಹೇಳುವುದಾದರೆ ಬೇರೆಡೆ ಇರುವ ವ್ಯವಹಾರವು

ಲೋಪವಾಗಬೇಕಾಗುತ್ತದೆ. ಏಕೆಂದರೆ ಲೋಕದಲ್ಲಿ ಯೋಗ ಹಾಗು ರೂಢಿಗಳೆಂಬ ಮುಖ್ಯವೃತ್ತಿಯು ಇಲ್ಲವೆಂದು ಹೇಳಿದಂತಾಗುತ್ತದೆ.

**भावदीपः – उक्ताशङ्कां निषेधन् तत्र परम्पराहेतुत्वेन भाष्यं व्याचष्टे – न परमात्मन इति ।। मुख्यतः योगादिवृत्त्या । तत्र लोके ।।**

ಹಿಂದೆ ಹೇಳಿದ ಆಶಂಕೆಯನ್ನು ನಿರಾಕರಣೆ ಮಾಡುತ್ತಾ ಪರಂಪರಾರೂಪವಾದ ಹೇತುವಿನಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಪರಮಾತ್ಮನಃ' ಇತ್ಯಾದಿ ಟೀಕೆಯು ಹೊರಟಿದೆ. 'ಮುಖ್ಯತಃ' ಎಂದರೆ ಯೋಗಾದಿವೃತ್ತಿಯಿಂದ ಮುಖ್ಯವಾಗಿ ಎಂದರ್ಥ. 'ತತ್ರ' ಎಂಬ ಪದಕ್ಕೆ 'ಲೋಕೇ' ಎಂದರ್ಥ.

**भावदीपः – उभयोरिति ।। ब्रह्मतदन्ययोरित्यर्थः । तथा च तत्त्वित्यवधारणायोगो 'नामानि विश्वानि न सन्ति लोके' 'यो देवानां नामधा एक एव' इत्याद्ययोगश्चेति भावः ।।**

'ಉಭಯೋಃ' ಎಂಬ ಪದಕ್ಕೆ ಬ್ರಹ್ಮ ಹಾಗು ಇತರ ಪದಾರ್ಥಗಳಿಗೆ ಎಂದರ್ಥ. ಆದ್ದರಿಂದ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ತು' ಶಬ್ದದಿಂದ ಅವಧಾರಣವನ್ನು ಹೇಳಿದ್ದು ಅಯುಕ್ತವಾಗುತ್ತದೆ. 'ನಾಮಾನಿ ವಿಶ್ವಾನಿ ನ ಸಂತಿ ಲೋಕೇ' 'ಯೋ ದೇವಾನಾಂ ನಾಮಧಾ ಏಕ ಏವ' ಇತ್ಯಾದಿ ಶ್ರುತಿಗಳ ಮುಖ್ಯ ತಾತ್ಪರ್ಯವೂ ಕೂಡ ಅಯುಕ್ತವಾಗಬೇಕಾದೀತು ಎಂದು ಅಭಿಪ್ರಾಯ.

**भावदीपः – स्वत इति ।। अनन्यापेक्षयेत्यर्थः । मुख्यवृत्त्या महायोगविद्वद्रूढिवृत्त्येत्यर्थः ।। व्यवहारेति ।। हानादिव्यवहारेत्यर्थः ।। अल्पेति ।। अन्यत्रेत्यनुषङ्गः । भाष्योक्तिरुपलक्षणमिति भावः ।।**

'ಸ್ವತಃ' ಎಂಬ ಪದಕ್ಕೆ ಮತ್ತೊಂದರ ಅಪೇಕ್ಷೆ ಇಲ್ಲದೆ ಎಂದರ್ಥ. 'ಮುಖ್ಯವೃತ್ತ್ಯಾ' ಎಂಬ ಪದಕ್ಕೆ ಮಹಾಯೋಗ ಮತ್ತು ವಿದ್ವದ್‌ರೂಢಿಯಿಂದ ಎಂದರ್ಥ. ವ್ಯವಹಾರಪದಕ್ಕೆ ಹಾನಾದಿವ್ಯವಹಾರ ಎಂದರ್ಥ. ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳ ಗುಣಧರ್ಮಗಳು ಪರಮಾತ್ಮನಲ್ಲಿವೆ. ಅದೇ ರೀತಿಯಾಗಿ ಲೌಕಿಕಪದಾರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳ ಗುಣಧರ್ಮಗಳೂ ಕೂಡ ಲೌಕಿಕ ವಸ್ತುಗಳಲ್ಲೇ ಇರುತ್ತವೆ. ಹೀಗೆ ಉಭಯವಿಧವಾದ ಶಬ್ದಗಳಲ್ಲಿ ಸಾಮ್ಯವಿರುತ್ತದೆ. ಆದ್ದರಿಂದ ಪರಮಾತ್ಮ ವಾಚಕವಾದ ಶಬ್ದಗಳನ್ನು ಲೋಕದಲ್ಲಿ ಸಮಾಕರ್ಷಣೆ ಮಾಡಿ ವ್ಯವಹರಿಸುತ್ತೇವೆಂದು ಹೇಳಿರುವುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಲ್ಪ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಅಲ್ಪವಾದ ಪ್ರವೃತ್ತಿನಿಮಿತ್ತಗಳು ಲೌಕಿಕಪದಾರ್ಥಗಳಲ್ಲಿವೆ. ಅದು ಪರಮಾತ್ಮನ ಅಧೀನವಾದ್ದರಿಂದ ಪರಮಾತ್ಮನೇ ಮುಖ್ಯವಾಗಿ ಶಬ್ದಪ್ರತಿಪಾದ್ಯನಾಗುತ್ತಾನೆಂದು ಅಭಿಪ್ರಾಯ. ಪ್ರವೃತ್ತಿನಿಮಿತ್ತಗಳು ಪರಮಾತ್ಮನ ಅಪೇಕ್ಷೆಯಿಲ್ಲದೇ ಲೌಕಿಕ ಪದಾರ್ಥಗಳಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಎರಡೂ ಕಡೆ ಮುಖ್ಯಾರ್ಥವು

ಸಮಾನವಾಗುವುದಿಲ್ಲವೆಂದು ತಿಳಿಯಬೇಕು. 'ಅಲ್ಪಪ್ರವೃತ್ತಿನಿಮಿತ್ತಾನಾಮ್' ಎಂಬಲ್ಲಿ 'ಅನ್ಯತ್ರ' ಎಂಬ ಪದವನ್ನು ಅನುಷಂಗ ಮಾಡಿಕೊಳ್ಳಬೇಕು. ಭಾಷ್ಯದಲ್ಲಿ 'ಪರಮಾತ್ಮವಾಚಿನ' ಇತ್ಯಾದಿಯಾಗಿ ಹೇಳಿರುವುದು ಉಪಲಕ್ಷಣವಾಗಿದೆಯೆಂದು ಇದರಿಂದ ತಿಳಿಯುತ್ತದೆ.

**भावदीपः – प्राचीनेति ।। पूर्वोदाहृतैः साक्षादपीत्यादिसूत्रैर्विरोध इत्यर्थः । द्वितीये आनुमानिकसूत्रे अत्रोक्तस्य मुख्यत्वमात्रस्य ।**

'ಪ್ರಾಚೀನಸೂತ್ರವಿರೋಧಃ' ಎಂದರೆ ಹಿಂದೆ ಉದಾಹರಿಸಲ್ಪಟ್ಟ 'ಸಾಕ್ಷಾದಪಿ' ಇತ್ಯಾದಿ ಸೂತ್ರಗಳ ವಿರೋಧ ಬರುತ್ತದೆ ಎಂದರ್ಥ. 'ದ್ವಿತೀಯೇ' ಎಂದರೆ ಆನುಮಾನಿಕ ಸೂತ್ರದಲ್ಲಿ ಎಂದರ್ಥ. 'ಅತ್ರೋಕ್ತಸ್ಯ' ಎಂದರೆ ಲೋಕದ ಪದಾರ್ಥಗಳಲ್ಲಿರುವ ಮುಖ್ಯತ್ವಕ್ಕೆ ಎಂದರ್ಥ.

**भावदीपः – तृतीये कल्पनेतिसूत्रे ।।**

'ತೃತೀಯೇ' ಎಂದರೆ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರದಲ್ಲಿ ಎಂದರ್ಥ.

**भावदीपः – अविवेचितेति ।।** भगवति महायोगविद्वद्रूढी । अन्यत्र तु रूढ्यादि मात्रमित्येवंरूपेणेत्यर्थः । एतेन पूर्वाधिकरणेषु तत्र तत्र विष्णौ शब्दानां महायोगविद्वद्रूढिभ्यां मुख्यत्वकीर्तनं त्वत्रत्यन्यायानुसन्धानेनेति दर्शितम् । इति शब्दः समाप्तौ ।।१।।

'ಅವಿವೇಚಿತ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - ಭಗವಂತನು 'ಮಹಾಯೋಗ' ಹಾಗೂ 'ವಿದ್ವದ್‌ರೂಢಿ'ಗಳಿಂದ ಪ್ರತಿಪಾದ್ಯನಾಗುತ್ತಾನೆ. ಬೇರೆ ಪದಾರ್ಥಗಳು ರೂಢಿ, ಯೋಗ ಮೊದಲಾದ ವೃತ್ತಿಗಳಿಂದ ಪ್ರತಿಪಾದ್ಯವಾಗುತ್ತವೆ. ಇದನ್ನು ತಿಳಿಯದೆ ಎಂದರ್ಥ.

ಹೀಗೆ ಹೇಳಿದ್ದರಿಂದ ಹಿಂದಿನ ಅಧಿಕರಣಗಳಲ್ಲಿ ಆಯಾ ಶಬ್ದಗಳನ್ನು ವಿಷ್ಣುವಿನಲ್ಲಿ ಮಹಾಯೋಗ ಹಾಗೂ ವಿದ್ವದ್‌ರೂಢಿಗಳಿಂದ ಮುಖ್ಯವಾಗಿ ಸಮರ್ಥನೆ ಮಾಡಿದ್ದು ಈ ಅಧಿಕರಣದ ಸಿದ್ಧಾಂತನ್ಯಾಯವನ್ನು ಅನುಸರಿಸಿ ಎಂದು ತಿಳಿಯಬೇಕು. ಕೊನೆಯಲ್ಲಿರುವ 'ಇತಿ' ಶಬ್ದವು ಸಮಾಪ್ತ್ಯರ್ಥದಲ್ಲಿದೆ.

## ಬ್ರಹ್ಮಮೀಮಾಂಸಾಶಾಸ್ತ್ರ

### ಅಜ್ಞರೂಢಿಯಿಂದ ವ್ಯವಹಾರ

**सूत्रम् – ।। जगद्वाचित्वात् ।। २ ।।**

ಸೂತ್ರಾರ್ಥ - ಲೌಕಿಕವಸ್ತುಗಳಲ್ಲೇ ಎಲ್ಲರೂ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಪರಮಾತ್ಮನಲ್ಲಿ ಪ್ರಯೋಗಿಸುವುದಿಲ್ಲ. ಹೀಗೆ ಅಜ್ಞರೂಢಿಯಿಂದ ಶಬ್ದಗಳು ಲೌಕಿಕವಸ್ತುಗಳಲ್ಲಿ ಪ್ರಸಿದ್ಧವಾಗಿವೆ.

## ಸೂತ್ರದೀಪಿಕಾ

**सूत्रदीपिका** – लोकव्यवहाराच्छब्दानां **जगद्वाचित्वज्ञानात्** तेषां तत्र प्रसिद्धिर्युक्तेत्यर्थः ।।२।।

ಅರ್ಥ -- ಲೋಕವ್ಯವಹಾರವಿರುವುದರಿಂದ ಶಬ್ದಗಳು 'ಜಗದ್ವಾಚಿತ್ವಾತ್' ಆಯಾ ವಸ್ತುಗಳನ್ನು ಪ್ರತಿಪಾದನೆ ಮಾಡುತ್ತವೆ ಎಂದು ಪ್ರಸಿದ್ಧಿಯಿರುವುದರಿಂದ, ವಿಷ್ಣು ಮುಖ್ಯಾರ್ಥನಾಗಿದ್ದರೂ ಬೇರೆ ವಸ್ತುಗಳನ್ನೂ ಕೂಡ ಶಬ್ದಗಳು ಪ್ರತಿಪಾದನೆ ಮಾಡುತ್ತವೆ.

## ಬ್ರಹ್ಮಸೂತ್ರಭಾಷ್ಯ

**भाष्यम् – तर्हि कथं तेषां शब्दानां जगति प्रसिद्धिः ?**

ಅನುವಾದ - ಎಲ್ಲಾ ಶಬ್ದಗಳು ಭಗವದ್ವಾಚಕಗಳಾದರೆ, ಜಗತ್ತಿನಲ್ಲಿ ಹೇಗೆ ಪ್ರಸಿದ್ಧವಾಗಿವೆ ?

ಪ್ರತಿಪದಾರ್ಥ -- ಆಶಂಕಿಸುತ್ತಿದ್ದಾರೆ –

ತರ್ಹಿ = ಶಬ್ದಗಳು ಮುಖ್ಯವಾಗಿ ಪರಮಾತ್ಮನ ಪ್ರತಿಪಾದಕಗಳೇ ಆದರೆ, ತೇಷಾಂ = ಆ ಶಬ್ದಗಳಿಗೆ, ಜಗತಿ = ಜಗತ್ತಿನಲ್ಲಿ, ಪ್ರಸಿದ್ಧಿಃ = ಪ್ರಸಿದ್ಧಿಯು, ಕಥಂ = ಹೇಗೆ ತಾನೆ ಬರುತ್ತದೆ?

**भाष्यम् – जगतिहि व्यवहारो लोकस्य, न तु परमात्मनि तथा । अतो जगति प्रसिद्धिः शब्दानाम् ।।२।।**

ಅನುವಾದ - ಸಕಲಶಬ್ದಗಳ ಪ್ರಯೋಗವನ್ನು ಮಂದಜನರು ಜಗತ್ತಿನಲ್ಲೇ ಮಾಡುತ್ತಾರೆ. ಹೊರತು, ಪರಮಾತ್ಮನಲ್ಲಿ ಮಾಡುವುದಿಲ್ಲ. ಹೀಗೆ ಅಜ್ಞರೂಢಿಯಿಂದ ಶಬ್ದಗಳು ಜಗತ್ತಿನಲ್ಲಿ ಪ್ರಸಿದ್ಧವಾಗಿವೆ.

ಪ್ರತಿಪದಾರ್ಥ -- ಹಿಂದಿನ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ಲೋಕಸ್ಯ = ಮಂದ ಜನರ, ವ್ಯವಹಾರಃ = ವ್ಯವಹಾರವು, ಜಗತಿ = ಜಗತ್ತಿನಲ್ಲಿ, ಯಥಾ = ಹೇಗೆ ಮುಖ್ಯವಾಗಿದೆಯೋ, ತಥಾ = ಅದರಂತೆ, ಪರಮಾತ್ಮನಿ = ಪರಮಾತ್ಮನಲ್ಲಿ, ನತು = ಇರುವುದಿಲ್ಲ. ಅತ = ಆದ್ದರಿಂದ, ಶಬ್ದಾನಾಮ್ = ಶಬ್ದಗಳಿಗೆ, ಜಗತಿ = ಲೋಕದಲ್ಲಿ, ಪ್ರಸಿದ್ಧಿಃ = ಪ್ರಯೋಗ ಪ್ರಸಿದ್ಧಿಯು ಇರುತ್ತದೆ.

ಸಮಾಕರ್ಷಾಧಿಕರಣ (೧-೪-೫)

## ತತ್ವಪ್ರಕಾಶಿಕಾ

**यदि शब्दाः परमात्मन्येव मुख्याः; अन्यत्र तु ततः समाकृष्य सङ्केतितत्वेनाऽमुख्याः, तर्हि तेषां मुख्यार्थे परमात्मन्येव प्रसिद्धिः स्यात्, न त्वमुख्यार्थे जगति । अग्निशब्दस्य माणवके प्रसिद्ध्यदर्शनात् । अस्ति चासौ जगति। अतस्तदन्यथानुपपत्त्याऽन्यस्यैव मुख्यवाच्यत्वमिति भावेनाऽऽशङ्कते – तर्हीति।।**

ಸಕಲಶಬ್ದಗಳು ಪರಮಾತ್ಮನಲ್ಲಿಯೇ ಮುಖ್ಯವೃತ್ತಿಯಿಂದ ಇರುತ್ತವೆ. ಬೇರೆ ಪದಾರ್ಥಗಳಲ್ಲಿ ಅಮುಖ್ಯವೃತ್ತಿಯಿಂದ ಇರುತ್ತವೆ. ಪರಮಾತ್ಮನಲ್ಲಿರುವ ಶಬ್ದಗಳನ್ನೇ ಸಮಾಕರ್ಷ ಮಾಡಿ, ಲೌಕಿಕಪದಾರ್ಥಗಳಲ್ಲಿ ಸಂಕೇತವನ್ನು ಒಪ್ಪಬೇಕು. ಆದ್ದರಿಂದ ಲೌಕಿಕ ಪದಾರ್ಥಗಳಲ್ಲಿ ಅಮುಖ್ಯವೃತ್ತಿಯಿಂದಲೇ ಶಬ್ದಗಳು ಇರುತ್ತವೆಂದು ಇಲ್ಲಿಯ ತನಕ ಸಮರ್ಥನೆ ಮಾಡಿದಿರಿ. ಹಾಗಾದರೆ ಆ ಎಲ್ಲಾ ಶಬ್ದಗಳಿಗೂ ಮುಖ್ಯಾರ್ಥನಾದ ಪರಮಾತ್ಮನಲ್ಲಿಯೇ ಪ್ರಸಿದ್ಧಿಯಿದೆ. ಉಳಿದ ಪದಾರ್ಥಗಳಲ್ಲಿ ಪ್ರಸಿದ್ಧಿಯಿರುವುದಿಲ್ಲ ಎಂದಂತಾಯಿತು. ಹೇಗೆಂದರೆ ಅಗ್ನಿಶಬ್ದಕ್ಕೆ ಮುಖ್ಯಾರ್ಥ 'ಬೆಂಕಿ' ಎಂದು. ಅಮುಖ್ಯಾರ್ಥ 'ಬ್ರಹ್ಮಚಾರಿ' ಎಂದು. ಅಗ್ನಿಶಬ್ದವನ್ನು ಕೇಳಿದಾಗ 'ಬ್ರಹ್ಮಚಾರಿ' ಎಂಬ ಅರಿವು ಯಾರಿಗೂ ಬರುವುದಿಲ್ಲ. ಅದರಂತೆ ಜಗತ್ತಿನ ವಿಷಯದಲ್ಲಿ ಹೇಳಬೇಕು. ಆದರೆ ಯಾವುದೇ ಶಬ್ದಗಳನ್ನು ಪ್ರಯೋಗ ಮಾಡಿದಾಗ ಜಗತ್ತಿನಲ್ಲಿಯೇ ಪ್ರಸಿದ್ಧಿಯಿರುವುದು ಕಂಡಿದೆ. ಶಬ್ದ ಮುಖ್ಯಾರ್ಥವನ್ನು ಒಪ್ಪದೇ ಲೋಕಪ್ರಸಿದ್ಧಿಯು ಉಪಪನ್ನವಾಗುವುದಿಲ್ಲ. ಹೀಗೆ ಅನ್ಯಥಾನುಪಪತ್ತಿ ಪ್ರಮಾಣದಿಂದ ಶಬ್ದಗಳು ಲೋಕದ ವಸ್ತುಗಳನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ತರ್ಹಿ' ಎಂಬ ವಾಕ್ಯದಿಂದ ಆಕ್ಷೇಪ ಮಾಡಿದ್ದಾರೆ.

**तत्वप्रकाशिका – तत्परिहारत्वेन सूत्रं पठित्वा व्याचष्टे – जगदिति ।। न प्रसिद्ध्यन्यथानुपपत्त्याऽन्यस्यैव मुख्यवाच्यत्वं कल्प्यम् । लोकस्य जगत्येव शब्दव्यवहारेण तत्रैव तच्छ्रोतॄणां व्युत्पत्तेः ।**

ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - 'ಜಗತ್' ಇತ್ಯಾದಿಯಾಗಿ. ಪ್ರಸಿದ್ಧಿಯ ಅನ್ಯಥಾನುಪಪತ್ತಿಯಿಂದ ಬೇರೆ ಪದಾರ್ಥವೇ ಮುಖ್ಯಾರ್ಥವಾಗುತ್ತದೆಂದು ಕಲ್ಪನೆ ಮಾಡಬಾರದು. ಏಕೆಂದರೆ ಎಲ್ಲಾ ಶಬ್ದಗಳ ವ್ಯವಹಾರವು ಜಗತ್ತಿನಲ್ಲೇ ಇರುತ್ತದೆ. ಆದ್ದರಿಂದ ಶ್ರೋತೃಗಳಿಗೆ ಆಯಾ ಶಬ್ದಗಳನ್ನು ಕೇಳಿದಾಗ ಲೌಕಿಕ ಪದಾರ್ಥದಲ್ಲಿಯೇ ವ್ಯುತ್ಪತ್ತಿಯು ಬರುತ್ತದೆ.

**तत्वप्रकाशिका – परमात्मनि तथा बहुलव्यवहाराभावेन व्युत्पत्त्यभावाच्च जगति प्रसिद्धेरन्यथोपपत्तेः । 'अग्निर्माणवकः' इति व्यवहारादनवगताग्निशब्द-मुख्यार्थस्य माणवकेऽग्निशब्दव्युत्पत्तिसम्भवादिति भावः ।। २ ।।**

ಪರಮಾತ್ಮನಲ್ಲಿ ಶಬ್ದಗಳ ವ್ಯವಹಾರವು ಬಹಳವಾಗಿ ಇರುವುದಿಲ್ಲ. ಆದ್ದರಿಂದ ಪರಮಾತ್ಮ ತದ್ವಾಚಕವಾದ ಶಬ್ದಗಳಿಗೆ ವಾಚ್ಯ-ವಾಚಕಸಂಬಂಧಜ್ಞಾನವು ಉಂಟಾಗುವುದಿಲ್ಲ. ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಬೇರೆ ರೀತಿಯಲ್ಲಿಯೇ ಕೂಡಿಸಬೇಕು. 'ಅಗ್ನಿಶಬ್ದದ ಮುಖ್ಯಾರ್ಥವನ್ನು ತಿಳಿಯದ ವ್ಯಕ್ತಿಗೆ 'ಅಗ್ನಿರ್ಮಾಣವಕಃ' ಎಂಬ ಪ್ರಯೋಗವನ್ನು ಕೇಳಿದಾಗ ಮಾಣವಕನಲ್ಲಿಯೇ ಅಗ್ನಿಶಬ್ದದ ವ್ಯುತ್ಪತ್ತಿ ಬರುವುದು ಕಂಡಿರುತ್ತದೆ. ಆದ್ದರಿಂದ ಅಗ್ನಿಶಬ್ದವನ್ನು ಕೇಳಿದಾಗ ಮಾಣವಕನಲ್ಲಿ ವ್ಯುತ್ಪತ್ತಿ ಬರುವುದಿಲ್ಲವೆಂಬ ದೃಷ್ಟಾಂತವನ್ನು ನೀಡಿದ್ದೂ ಕೂಡ ಅಸಾಧುವಾಗಿದೆ.

## ಭಾವದೀಪ

**मुख्या इति ।।** परममुख्या इत्यर्थः ।। **अमुख्या इति ।।** अपरममुख्या इत्यर्थः । एवमग्रेऽपि ।।

ಟೀಕೆಯಲ್ಲಿರುವ 'ಮುಖ್ಯಾಃ' ಎಂಬ ಪದಕ್ಕೆ ಪರಮಮುಖ್ಯವೃತ್ತಿಯುಳ್ಳ ಶಬ್ದಗಳು ಎಂದರ್ಥ. 'ಅಮುಖ್ಯಾಃ' ಎಂಬ ಪದಕ್ಕೆ ಅಪರಮಮುಖ್ಯವೃತ್ತಿಯಿಂದ ಲೋಕದಲ್ಲಿ ಪ್ರಸಿದ್ಧವಾಗಿರುವ ಎಂದರ್ಥ. ಇದರಂತೆ ಮುಂದೆಯೂ ಕೂಡ ಮುಖ್ಯ ಹಾಗೂ ಅಮುಖ್ಯಪದಗಳ ಅರ್ಥವನ್ನು ತಿಳಿಯಬೇಕು.

**भावदीपः – अग्नीति ।।** हीनवृत्तिमात्रे दृष्टान्तः । असौ प्रसिद्धिरित्यर्थः । पूर्वशङ्कां निषेधंस्तत्र हेतुत्वेन भाष्यं योजयति – **न प्रसिद्धीति ।।**

ಅಗ್ನಿ ಶಬ್ದದ ಪ್ರಸಿದ್ಧಿಯು ಮಾಣವಕನಲ್ಲಿರುತ್ತದೆ. ಹೀಗೆ ದೃಷ್ಟಾಂತ ನೀಡಿದ್ದು ಕೇವಲ ಹೀನವೃತ್ತಿ ವಿಷಯದಲ್ಲಿ ಎಂದು ತಿಳಿಯಬೇಕು. 'ಅಸೌ' ಎಂಬ ಪದಕ್ಕೆ 'ಪ್ರಸಿದ್ಧಿಃ' ಎಂದರ್ಥ. ಹಿಂದೆ ಮಾಡಿದ ಆಶಂಕೆಯನ್ನು ಪರಿಹರಿಸುತ್ತಾ ಆಶಂಕೆಯ ಪರಿಹಾರದ ವಿಷಯದಲ್ಲಿ ಹೇತುವನ್ನು ಹೇಳುವ ಮೂಲಕ ಭಾಷ್ಯಕ್ಕೆ ವ್ಯಾಖ್ಯಾನ ಮಾಡಲು 'ನ ಪ್ರಸಿದ್ಧಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः** – भाष्यस्थव्यवहारपदस्यावृत्तिमभ्युपेत्य द्वितीयस्य वाच्यवाचकभावज्ञानरूपव्युत्पत्तिपरत्वं चाभ्युपेत्यार्थमाह – **लोकस्येति ।।** एतेन सूत्रमप्यावृत्त्या योज्यमिति दर्शितम् । तथापदस्य प्रागुक्तव्यवहारपरामर्शित्वमुपेत्य तदनूद्य व्याचष्टे – **परमात्मनि तयेति ।।**

ಹೀಗೆ ಭಾಷ್ಯವನ್ನು ವ್ಯಾಖ್ಯಾನ ಮಾಡಿದ್ದರಿಂದ 'ಜಗದ್ವಾಚಿತ್ವಾತ್' ಎಂಬ ಸೂತ್ರವನ್ನು ಎರಡು ಬಾರಿ ಆವೃತ್ತಿ ಮಾಡಿಕೊಂಡು ಅರ್ಥವನ್ನು ತಿಳಿಯಬೇಕೆಂದು ವ್ಯಾಖ್ಯಾನ ಮಾಡಿದಂತಾಯಿತು. ಭಾಷ್ಯದಲ್ಲಿರುವ

'ತಥಾ' ಎಂಬ ಪದದಿಂದ ಹಿಂದೆ ಪ್ರಸಕ್ತವಾದ ವ್ಯವಹಾರವನ್ನು ಪರಾಮರ್ಶ ಮಾಡಿಕೊಳ್ಳಬೇಕೆಂದು ಒಪ್ಪಿ 'ತಥಾ' ಪದವನ್ನು ಅನುವಾದ ಮಾಡಿಕೊಂಡು 'ಪರಮಾತ್ಮನಿ ತಥಾ' ಎಂಬ ಟೀಕಾವಾಕ್ಯವು ವ್ಯಾಖ್ಯಾನ ಮಾಡುತ್ತಿದೆ.

**भावदीपः** – अत इत्यस्यार्थः पञ्चम्यन्तैर्दर्शितः ।। **अन्यथेति** ।। हरौ मुख्यत्वाज्ञानमूलकत्वेनेत्यर्थः । तत्र प्रसिध्यर्थकहिशब्दसूचितं दृष्टान्तमाह – **अग्निरिति** ।।२।।

'ಅತಃ' ಎಂಬ ಭಾಷ್ಯದಲ್ಲಿರುವ ಪದದ ಅರ್ಥವನ್ನು ಪಂಚಮ್ಯಂತವಾದ 'ವ್ಯತ್ಯಭಾವಾತ್' ಇತ್ಯಾದಿ ಪದಗಳಿಂದ ಹೇಳಿದ್ದಾರೆ. 'ಅನ್ಯಥಾ' ಎಂಬ ಪದಕ್ಕೆ ಶ್ರೀಹರಿಯಲ್ಲಿ ಶಬ್ದಗಳು ಮುಖ್ಯವಾಗಿವೆಯೆಂದು ತಿಳಿಯದಿದ್ದರೂ ಎಂದರ್ಥ. ಭಾಷ್ಯದ 'ಹಿ' ಶಬ್ದವು ಪ್ರಸಿದ್ಧಾರ್ಥದಲ್ಲಿದೆ. ಇದರಿಂದ ಸೂಚಿತವಾದ ದೃಷ್ಟಾಂತವನ್ನು 'ಅಗ್ನಿಃ' ಇತ್ಯಾದಿ ಟೀಕಾವಾಕ್ಯದಿಂದ ತಿಳಿಸಿದ್ದಾರೆ.

## ಬ್ರಹ್ಮಮೀಮಾಂಸಾಶಾಸ್ತ್ರ

### ಪರಮಾತ್ಮನು ಮಾತ್ರ ಸರ್ವಶಬ್ದವಾಚ್ಯ

### सूत्रम् – ।। जीवमुख्यप्राणलिङ्गादिति चेत् तद् व्याख्यातम् ।। ३ ।।

ಸೂತ್ರಾರ್ಥ - ಸಮಸ್ತ ಜಗತ್ತು ಭಗವದಧೀನವಾದ್ದರಿಂದ ಸಕಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದನೆ ಮಾಡುತ್ತವೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಉಪನಿಷತ್ತಿನಲ್ಲಿ ಕೆಲವೆಡೆ ಜೀವನ ಅಧೀನವೆಂದು ಇನ್ನು ಕೆಲವೆಡೆ ಮುಖ್ಯಪ್ರಾಣದೇವರ ಅಧೀನವೆಂದು ಹೇಳಲಾಗಿದೆ. ಇಂತಹ ಜೀವ ಹಾಗೂ ಮುಖ್ಯಪ್ರಾಣರೂ ಕೂಡ ಸರ್ವಶಬ್ದವಾಚ್ಯರಾಗಲಿ ಎಂದು ಪ್ರಶ್ನಿಸಬಾರದು. ಮುಖ್ಯಪ್ರಾಣದೇವರ ಧರ್ಮಗಳೂ ಕೂಡ ವಿಷ್ಣುಪರವೆಂದು ಈ ಹಿಂದೆ 'ಉಪಾಸಾತ್ರೈವಿಧ್ಯಾತ್' ಎಂಬ ಸೂತ್ರದಲ್ಲಿ ಸ್ಪಷ್ಟಪಡಿಸಲಾಗಿದೆ.

### ಸೂತ್ರದೀಪಿಕಾ

**सूत्रदीपिका** – 'अस्य यदेकां शाखां जीवो जहाति' इति 'वायुना हि लोका नेनीयन्ते' इति वाक्ये च । **जीवमुख्यप्राणलिङ्गात्** जीवमुख्यप्राणलिङ्गयोः श्रवणात् । तयोरपि तत्तच्छब्दमुख्यवाच्यता स्यादिति चेन्न । कुतः ? यस्मात्

**तद्वाक्यजातं तत्तदन्तर्यामिपरतया व्याकृतं तस्मादित्यर्थः।।३।।**

ಅರ್ಥ -- 'ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತಿ' ಎಂಬ ಸೂತ್ರದಲ್ಲಿ 'ವಾಯುನಾ ಹಿ ಲೋಕಾ ನೇನೀಯಂತೇ' ಎಂಬ ಶ್ರುತಿವಾಕ್ಯದಲ್ಲಿಯೂ ಸಮಸ್ತ ಜಗತ್ತು ಜೀವನ ಅಧೀನವೆಂದು ಮತ್ತು ಮುಖ್ಯಪ್ರಾಣದೇವರ ಅಧೀನವೆಂದು ಹೇಳಲಾಗಿದೆ. ಹೀಗೆ ಜೀವಮುಖ್ಯಪ್ರಾಣಲಿಂಗಾತ್ = ಜೀವ ಹಾಗೂ ಮುಖ್ಯಪ್ರಾಣದೇವರ ಲಿಂಗವೆಂದು ಶ್ರುತವಾದ್ದರಿಂದ ಅವರೂ ಸಹ ಆಯಾ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯರಾಗಲಿ. ಇತಿ ಚೇತ್ ನ = ಹೀಗೆ ಪ್ರಶ್ನಿಸಬಾರದು. ಏಕೆಂದರೆ ತತ್ = ಆ ಶ್ರುತಿವಾಕ್ಯಗಳನ್ನು, ವ್ಯಾಖ್ಯಾತಂ = ಅಂತರ್ಯಾಮಿ ಪರವಾಗಿ ಈ ಹಿಂದೆ 'ಉಪಾಸಾ ತ್ರೈವಿಧ್ಯಾತ್' ಎಂಬಲ್ಲೇ ವ್ಯಾಖ್ಯಾನ ಮಾಡಿದ್ದೇವೆ.

## ಬ್ರಹ್ಮಸೂತ್ರಭಾಷ್ಯ

**भाष्यम् – 'तदधीनत्वात् शब्दवाच्यत्वम्' इत्युक्तम् । तद् जीवमुख्यप्राणयोर्लिङ्गम्। 'अस्य यदैकां शाखां जीवो जहात्यथ सा शुष्यति' (छां. उ. ६-११-२) 'वायुना हि लोका नेनीयन्ते' इत्यादिश्रुतिभ्य इति चेत्**

ಅನುವಾದ - ಯಾವುದೇ ಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನ ಅಧೀನವಾಗಿರುವುದರಿಂದ, ಸಕಲಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಹೇಳಿದ್ದಾಗಿದೆ. ಆದರೆ ಶಬ್ದಪ್ರವೃತ್ತಿನಿಮಿತ್ತವಾದ ತದಧೀನತ್ವವು ಜೀವ ಮತ್ತು ಮುಖ್ಯಪ್ರಾಣರ ಲಿಂಗವಾಗಿದೆ. ಏಕೆಂದರೆ "ಜೀವನು ಯಾವಾಗ ಜಗತ್ತೆಂಬ ವೃಕ್ಷದ ಒಂದು ಶಾಖೆಯನ್ನು ಬಿಡುತ್ತಾನೋ, ಆವಾಗ ಆ ಶಾಖೆಯು ಒಣಗುತ್ತದೆ." ಹೀಗೆ ಶ್ರುತಿಯು ವೃಕ್ಷಾದಿಗಳು ವೃಕ್ಷದಲ್ಲಿರುವ ಜೀವರ ಅಧೀನವೆಂದು ಹೇಳಿದೆ. ಅದರಂತೆ 'ಮುಖ್ಯಪ್ರಾಣನಿಂದಲೇ ಸಮಸ್ತ ಲೋಕವು ತಮ್ಮ ತಮ್ಮ ಕರ್ಮಗಳಲ್ಲಿ ಪ್ರೇರೇಪಿಸಲ್ಪಡುತ್ತದೆ'. ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಜೀವ ಹಾಗೂ ಮುಖ್ಯಪ್ರಾಣನೂ ಕೂಡ ಪರಮಾತ್ಮನಂತೆ ಸರ್ವಶಬ್ದವಾಚ್ಯರಾಗಲಿ. ಇಷ್ಟು ಆಕ್ಷೇಪ.

ಪ್ರತಿಪದಾರ್ಥ -- ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂಬುದನ್ನು ಆಕ್ಷೇಪ ಮಾಡಿ, ಸಮಾಧಾನವನ್ನು ನೀಡಲು, ಮೊದಲು ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ತದಧೀನತ್ವಾತ್ = ಸಮಸ್ತ ಜಗತ್ತು ಭಗವದಧೀನವಾಗಿರುವುದರಿಂದ, ತತ್ ಶಬ್ದವಾಚ್ಯತ್ವಮ್ = ಭಗವತ್ಪ್ರತಿಪಾದಕವಾದ ಶಬ್ದವಾಚ್ಯತ್ವವು ಜಗತ್ತಿನಲ್ಲಿರುತ್ತದೆ. ಇತ್ಯುಕ್ತಂ = ಹೀಗೆ 'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರದಲ್ಲಿ ಹೇಳಲಾಗಿದೆ. ತತ್ = ಈ ಸರ್ವಶಬ್ದವಾಚ್ಯತ್ವವು, ಜೀವಮುಖ್ಯಪ್ರಾಣಯೋಃ = ಜೀವ ಹಾಗೂ ಮುಖ್ಯಪ್ರಾಣರ, ಲಿಂಗಂ = ಲಿಂಗವಾಗಿದೆ. ಜೀವಃ = ಅನಿರುದ್ಧರೂಪಿಯಾದ ಪರಮಾತ್ಮನು, (ಅಸ್ಯ = ಜೀವನೆಂಬ ವೃಕ್ಷದ, ಯದ್ಯೆಕಾಂ ಶಾಖಾಂ = ಒಂದು ಶಾಖೆಯನ್ನು, ಜಹಾತಿ = ಬಿಡುತ್ತಾನೋ, ಅಥ = ಆವಾಗ, ಸಾ = ಆ ಶಾಖೆಯು, ಶುಷ್ಯತಿ = ಒಣಗುತ್ತದೆ. ಇದು

ಸಿದ್ಧಾಂತಪರವಾದ ಅರ್ಥ.) ಜೀವಃ = ಜೀವನು, ಯದಾ = ಯಾವಾಗ, ಏಕಾಂ ಶಾಖಾಂ = ಜಗತ್ತೆಂಬ ವೃಕ್ಷದ ಒಂದು ಶಾಖೆಯನ್ನು, ಜಹಾತಿ = ಬಿಡುತ್ತಾನೋ, ಅಥ = ಆವಾಗ, ಸಾ = ಆ ಶಾಖೆಯು, ಶುಷ್ಯತಿ = ಒಣಗುತ್ತದೆ. ಮತ್ತು ವಾಯುನಾ ಹಿ = ಮುಖ್ಯಪ್ರಾಣನಿಂದ, ಸರ್ವೇ ಲೋಕಾಃ = ಸಮಸ್ತ ಜನರು, ನೇನಿಯಂತೇ = ತಮ್ಮ ತಮ್ಮ ಕರ್ಮಗಳಲ್ಲಿ ಅತಿಶಯವಾಗಿ ಪ್ರಯೋಗಿಸಲ್ಪಡುತ್ತಾರೆ. ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ ಜೀವ ಹಾಗೂ ಮುಖ್ಯಪ್ರಾಣರೂ ಕೂಡ ಪ್ರತಿಪಾದ್ಯರಾಗಬೇಕಲ್ಲವೇ? ಇತಿ ಚೇತ್ = ಇಷ್ಟು ಆಕ್ಷೇಪ.

**भाष्यम् – न 'उपासात्रैविध्यात्' इति व्याख्यातत्वात् ।।३।।**

ಅನುವಾದ - ಇದು ಸರಿಯಲ್ಲ. ಏಕೆಂದರೆ ಒಳಗಡೆ ಇರುವವನು, ಹೊರಗಡೆ ಇರುವವನು, ಮತ್ತು ಸರ್ವಗತನು. ಹೀಗೆ ಮೂರು ವಿಧವಾದ ಉಪಾಸನೆಗಳನ್ನು ತಿಳಿಸಲು ಐತರೇಯದಲ್ಲಿ ಹಾಗೇ ಹೇಳಿದ್ದಾರೆ. ಜೀವ, ಮುಖ್ಯಪ್ರಾಣ ಶಬ್ದದಿಂದಲೂ ವಿಷ್ಣುವೇ ವಾಚ್ಯನಾಗಿದ್ದಾನೆಂದು ಪ್ರಥಮಪಾದದ ಕೊನೆಯಲ್ಲಿ ವ್ಯಾಖ್ಯಾನ ಮಾಡಲಾಗಿದೆ.

ಪ್ರತಿಪದಾರ್ಥ -- ನಞ್ ಎಂಬುದನ್ನು ಅಧ್ಯಾಹಾರ ಮಾಡುವ ಮೂಲಕ ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ನ = ಸರಿಯಲ್ಲ. ಉಪಸಾತ್ರೈವಿಧ್ಯಾತ್ = ಅಂತಃ ಬಹಿಃ, ಸರ್ವಗತನೆಂಬ ಮೂರುವಿಧವಾದ ಉಪಾಸನೆಯನ್ನು ತಿಳಿಸಲು ಐತರೇಯದಲ್ಲಿ ಹಾಗೇ ಹೇಳಲಾಗಿದೆ, ಇತಿ = ಎಂಬುದಾಗಿ, ವ್ಯಾಖ್ಯಾತತ್ವಾತ್ = ಪ್ರಥಮಪಾದದ ಕೊನೆಯಲ್ಲಿ ವ್ಯಾಖ್ಯಾನ ಮಾಡಿದ್ದಾಗಿದೆ.

## ತತ್ವಪ್ರಕಾಶಿಕಾ

**विष्णोरेव मुख्यतः शब्दार्थत्वमाक्षिप्य, समादधत्सूत्रमुपन्यस्य आक्षेपांशं तावद् व्याचष्टे – जीवेति ।।**

'ವಿಷ್ಣುವೇ ಸಕಲಶಬ್ದಗಳ ಮುಖ್ಯಾರ್ಥನು' ಎಂಬುದನ್ನು ಇಲ್ಲಿಯತನಕ ಸಮರ್ಥಿಸಿದ್ದಾಯಿತು. ಈ ವಿಷಯವನ್ನು ಆಕ್ಷೇಪ ಮಾಡಿ, ಸಮಾಧಾನ ಹೇಳುವ ಸೂತ್ರವನ್ನು ಹೇಳಿ, ಮೊದಲು ಆಕ್ಷೇಪಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಜೀವ' ಇತ್ಯಾದಿ ಭಾಷ್ಯದಿಂದ.

**तत्वप्रकाशिका – यदुक्तं विष्णोरेव सर्वशब्दमुख्यार्थत्वमिति तदयुक्तम् । सर्वपदार्थानां परमात्माधीनत्वादेव हि सर्वशब्दमुख्यार्थत्वं तस्योक्तं ।**

ವಿಷ್ಣುವೇ ಸಕಲಶಬ್ದಗಳ ಮುಖ್ಯಾರ್ಥನೆಂದು ಹೇಳಿದ್ದು ಸರಿಯಲ್ಲ. ಸಕಲಶಬ್ದಗಳು ಪರಮಾತ್ಮಾಧೀನವಾಗಿರುವುದರಿಂದ ಸಕಲಶಬ್ದಗಳ ಮುಖ್ಯಾರ್ಥನು ಪರಮಾತ್ಮನೇ ಆಗಿದ್ದಾನೆಂದು ಹೇಳಿರುವಿರಿ.

**तत्वप्रकाशिका – तच्च सर्वस्य तदधीनत्वाख्यं लिङ्गं जीवमुख्यप्राणयोरप्यस्ति। 'अस्य यदैकां शाखाम्' इति श्रुतौ वृक्षादीनां जीवाधीनत्वावगमात् । 'वायुना' इति श्रुतौ च सर्वस्य मुख्यप्राणाधीनत्वावगतेः, अतस्तयोरपि मुख्यवाच्यत्वम् ।**

ಈ ತದಧೀನತ್ವಲಿಂಗವು ಜೀವ ಹಾಗೂ ಮುಖ್ಯಪ್ರಾಣನಲ್ಲಿಯೂ ಕೂಡ ಇರುತ್ತದೆ. 'ಅಸ್ಯ ಯದೇಕಾಂ ಶಾಖಾಮ್' ಎಂಬ ಶ್ರುತಿಯಲ್ಲಿ ವೃಕ್ಷಾದಿಗಳೆಲ್ಲವೂ ಜೀವನ ಅಧೀನವಾಗಿವೆಯೆಂದು ಹೇಳಲಾಗಿದೆ. 'ವಾಯುನಾ' ಇತ್ಯಾದಿ ಶ್ರುತಿಯಲ್ಲಿ ಸಕಲವೂ ಕೂಡ ಮುಖ್ಯಪ್ರಾಣದೇವರ ಅಧೀನವೆಂದು ಹೇಳಲಾಗಿದೆ. ಆದ್ದರಿಂದ ತದಧೀನತ್ವವು ವಿಷ್ಣುವಿನಲ್ಲಿ ಬಂದಂತೆ ಜೀವ ಹಾಗೂ ಮುಖ್ಯಪ್ರಾಣನಲ್ಲಿಯೂ ಬರುತ್ತದೆ. ಆದ್ದರಿಂದ ಇವರೂ ಕೂಡ ಸಕಲಶಬ್ದದಿಂದ ಮುಖ್ಯವಾಗಿಯೇ ಪ್ರತಿಪಾದ್ಯರಾಗಬೇಕಾದೀತು.

**तत्वप्रकाशिका – नच वक्तव्यं 'प्रयोगे सत्येव निमित्तानुसरणं, नतु निमित्तमात्रेण वाच्यत्वकल्पनम्' इति । निमित्तसद्भावेन व्यवहारापादनस्यैव न्यायत्वेन वाच्यत्वकल्पने बाधकाभावादिति भावः ।**

ಪ್ರಯೋಗವಿದ್ದರೆ ನಿಮಿತ್ತವನ್ನು ಹುಡುಕಬೇಕು. ನಿಮಿತ್ತವಿದ್ದ ಮಾತ್ರಕ್ಕೆ ವಾಚ್ಯತ್ವವನ್ನು ಒಪ್ಪಬೇಕಾಗಿಲ್ಲ. ಆದ್ದರಿಂದ ಲೋಕದಲ್ಲಿ ಪ್ರಯೋಗವಿರುವುದರಿಂದ ಅದಕ್ಕನುಸಾರಿಯಾಗಿ ನಿಮಿತ್ತವನ್ನು ಹುಡುಕಬೇಕು. ಪರಮಾತ್ಮನಲ್ಲಿ ನಿಮಿತ್ತವಿದೆ ಎಂಬ ಮಾತ್ರಕ್ಕೆ ಶಬ್ದವಾಚ್ಯತ್ವವನ್ನು ಕಲ್ಪಿಸುವುದು ತಪ್ಪಲ್ಲವೇ?

ಏಕೆಂದರೆ ನಿಮಿತ್ತವಿದ್ದರೆ ನೈಮಿತ್ತಿಕವಾದ ವ್ಯವಹಾರವನ್ನು ಆಪಾದನೆ ಮಾಡುವುದು ನ್ಯಾಯವೇ ಆಗಿದೆ. ಆದ್ದರಿಂದ ವಾಯು ಹಾಗೂ ಜೀವರು ಸಕಲಶಬ್ದವಾಚ್ಯರೆಂದು ಹೇಳಿದರೆ ಯಾವ ಬಾಧಕವೂ ಇಲ್ಲ. ಇಷ್ಟು ಆಕ್ಷೇಪ.

**तत्वप्रकाशिका – परिहारांशं व्याचष्टे – नेति ।। न सर्वस्य जीवमुख्यप्राणाधीनत्वलिङ्गेन तयोर्मुख्यवाच्यत्वं कल्प्यम् । तल्लिङ्गाभिधायकश्रुतीनां तदन्तर्यामिभगवत् सम्बन्धितया व्याख्यातत्वात् ।**

ಈ ಪ್ರಶ್ನೆಗೆ ಸೂತ್ರದಲ್ಲಿಯೇ ಉತ್ತರವನ್ನು ನೀಡಿದ್ದಾರೆ. ಉತ್ತರ ನೀಡುವ ಸೂತ್ರಾಂಶವನ್ನು ಭಾಷ್ಯದಲ್ಲಿ 'ನ ಉಪಾಸಾತ್ರೈವಿಧ್ಯಾತ್' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. ಸಕಲ ಪದಾರ್ಥಗಳು ಜೀವ ಹಾಗೂ ಮುಖ್ಯಪ್ರಾಣರ ಅಧೀನವಾಗಿದ್ದರಿಂದ ಅವರೂ ಕೂಡ ಮುಖ್ಯವಾಗಿ ಶಬ್ದಪ್ರತಿಪಾದ್ಯ-ರಾಗುತ್ತಾರೆಂದು ಕಲ್ಪಿಸುವುದು ತಪ್ಪು. ಏಕೆಂದರೆ ಹಾಗೇ ಹೇಳುವ ಲಿಂಗ ಮತ್ತು ಶ್ರುತಿಗಳಿಗೆ ಅವರ ಅಂತರ್ಯಾಮಿಯಾದ ಭಗವಂತನ ಸಂಬಂಧವನ್ನು ತಿಳಿಯಬೇಕು.

**तत्वप्रकाशिका – 'यद्यद् विभूतिमत् सत्त्वं श्रीमदूर्जितमेव वा । तत्तदेवावगच्छत्वं मम तेजोंशसम्भवम्' इत्यादेश्च । तथा च तल्लिङ्गवतोऽन्तर्यामिण एव मुख्यवाच्यत्वं भवेदिति भावः ।।३।।**

ಗೀತೆಯಲ್ಲಿ 'ಯದ್ಯದ್ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್' 'ಯಾವುದು ವಿಶೇಷಸಾಮರ್ಥ್ಯ ಹೊಂದಿದೆಯೋ, ಶ್ರೇಷ್ಠವಾದ ಕಾಂತಿಯುಕ್ತವಾಗಿದೆಯೋ, ಅಭಿವೃದ್ಧವಾಗಿದೆಯೋ, ಅದೆಲ್ಲವೂ ನನ್ನ ತೇಜೋರೂಪವಾದ ಅಂಶದಿಂದ ಯುಕ್ತವಾಗಿದೆ' ಎಂದು ಹೇಳಲಾಗಿದೆ. ಆದ್ದರಿಂದ ಜೀವನಲ್ಲಿ ಹಾಗೂ ವಾಯುವಿನಲ್ಲಿ ಹೇಳಲ್ಪಟ್ಟ ಸಾಮರ್ಥ್ಯವು ಅಂತರ್ಯಾಮಿಯಾದ ಭಗವಂತನ ವಿವಕ್ಷೆಯಿಂದ ಹೊರತು, ಜೀವ ಹಾಗೂ ಮುಖ್ಯಪ್ರಾಣರು ಮುಖ್ಯವಾಗಿ ಪ್ರತಿಪಾದ್ಯರಾಗಿದ್ದಾರೆಂಬ ಕಾರಣದಿಂದಲ್ಲ.

## ಭಾವದೀಪ

**आक्षेपस्य फलं दर्शयन् भाष्यं व्याचष्टे – यदुक्तमिति ।।**

ಪೂರ್ವಪಕ್ಷದ ಫಲವನ್ನು ತೋರಿಸುತ್ತಾ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಯದುಕ್ತಮ್' ಇತ್ಯಾದಿ ಟೀಕಾವಾಕ್ಯವು ಹೊರಟದೆ.

**भावदीपः – परमात्माधीनत्वादेवेति।। यद्यपि तद्गतत्वादपि मुख्यार्थत्वमुक्तम् । तथापि ''स्वातन्त्र्यं तद्गतत्वं च शब्दवृत्तेर्हि कारणम् । स्वातन्त्र्यं तत्र मुख्यं स्यात्'' इत्यनुभाष्योक्तमुख्यत्वमुपेत्याऽवधारणप्रयोगः ।**

ಟೀಕೆಯಲ್ಲಿ 'ಪರಮಾತ್ಮಾಧೀನತ್ವಾದೇವ' ಎಂಬುದಾಗಿ ಏವಕಾರವನ್ನು ಪ್ರಯೋಗಿಸಿದ್ದಾರೆ. ವಸ್ತುತಃ ತದ್ಗತತ್ವದಿಂದಲೂ ಕೂಡ ಮುಖ್ಯಾರ್ಥತ್ವವನ್ನು ಪರಮಾತ್ಮನಲ್ಲಿ ಹೇಳಬಹುದು. ಆದರೂ ಅನುವ್ಯಾಖ್ಯಾನದಲ್ಲಿ ''ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ । ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್'' ಎಂಬುದಾಗಿ ಸ್ವಾತಂತ್ರ್ಯವನ್ನೇ ಮುಖ್ಯವಾದ ಪ್ರವೃತ್ತಿನಿಮಿತ್ತವಾಗಿ ಪರಿಗಣಿಸಿದ್ದಾರೆ. ಈ ವಿವಕ್ಷೆಯಿಂದ ಟೀಕೆಯಲ್ಲಿ ಏವಕಾರವನ್ನು ಪ್ರಯೋಗಿಸಿದ್ದಾರೆ.

**भावदीपः – तज्जीवेत्यादि व्याचष्टे – तच्चेत्यादिना ।। लिङ्गं प्रवृत्तिनिमित्तमित्यर्थः ।**

'ತಜ್ಜೀವ' ಇತ್ಯಾದಿ ಭಾಷ್ಯವನ್ನು 'ತಚ್ಚ' ಇತ್ಯಾದಿ ಟೀಕಾವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಲಿಂಗಂ' ಎಂಬ ಪದಕ್ಕೆ 'ಪ್ರವೃತ್ತಿನಿಮಿತ್ತವು' ಎಂದರ್ಥ.

**भावदीपः – सर्वस्य** तदधीनत्वाख्यमित्यत्र प्रयुक्तसर्वपदं जीवे सम्भावितसर्वपरम् । वायौ त्वसङ्कुचितसर्वपरमिति भावेन व्यनक्ति – **वृक्षादीनामिति** । सर्वस्येति च ।। **अत इति** ।। स्वातन्त्र्यरूपनिमित्तसद्भावादित्यर्थः ।

'ಸರ್ವಸ್ಯ ತದಧೀನತ್ವಾಖ್ಯಮ್' ಎಂಬ ಟೀಕಾ ಮಾತಿನಲ್ಲಿರುವ 'ಸರ್ವಪದಕ್ಕೆ' ಜೀವವಿಷಯದಲ್ಲಿ ಸಂಭಾವಿತವಾದ ಸಕಲವನ್ನು ವಿವಕ್ಷಿಸಬೇಕು. ವಾಯುವಿನ ವಿಷಯದಲ್ಲಿ ಅಸಕುಂಚಿತವಾಗಿ ಸಕಲವನ್ನು ವಿವಕ್ಷಿಸಬೇಕು. ಈ ದೃಷ್ಟಿಯಿಂದ 'ವೃಕ್ಷಾದೀನಾಂ' ಇತ್ಯಾದಿ ಟೀಕಾವಾಕ್ಯವು ಹೊರಟಿವೆ. 'ಅತಃ' ಎಂಬ ಪದಕ್ಕೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿವೃತ್ತಿ ಇರುವುದರಿಂದ ಎಂದರ್ಥ.

**भावदीपः** – ननु भृत्यबन्धादिकं राज्ञि राज्ञो बन्धादियोग्यतः । कारणं संशयस्य स्यादिति नैव प्रयुज्यते । अमङ्गलत्वाच्छब्दानां राज्ञो योगादमङ्गले । अप्रियत्वात्तु शब्दस्य स्यात्प्रयोगनिवर्तनमित्यनुभाष्योक्तदिशा सत्यपि निमित्ते राज्ञि निगडबद्धादिपदावाच्यत्वमिव जीवादावप्यस्तु सर्वशब्दमुख्यावाच्यत्वमिति भावेनोक्त-हेतोरप्रयोजकत्वमाशङ्क्य लिङ्गपदभावोक्त्या निराह – **न च वक्तव्यमिति** ।।

ಪ್ರಶ್ನೆ -

ಭೃತ್ಯಬಂಧಾದಿಕಂ ರಾಜ್ಞಿ ರಾಜ್ಞೋ ಬಂಧಾದಿಯೋಗ್ಯತಃ।
ಕಾರಣಂ ಸಂಶಯಸ್ಯ ಸ್ಯಾದಿತಿ ನೈವ ಪ್ರಯುಜ್ಯತೇ।
ಅಮಂಗಲತ್ವಾಚ್ಛಬ್ದಾನಾಂ ರಾಜ್ಞೋ ಯೋಗಾದಮಂಗಲೇ।
ಅಪ್ರಿಯತ್ವಾತ್ತು ಶಬ್ದಸ್ಯ ಸ್ಯಾತ್ಪ್ರಯೋಗನಿವರ್ತನಮ್।

''ಭೃತ್ಯನು ಬಂಧಿತನಾದರೆ ರಾಜನಲ್ಲಿ 'ಬದ್ಧಃ' ಎಂಬ ಪ್ರಯೋಗವನ್ನು ಮಾಡಬಾರದು. ಏಕೆಂದರೆ ಬಂಧನ ಯೋಗ್ಯತ್ವವು ರಾಜನಲ್ಲಿ ಇರುವದರಿಂದ ಸಂಶಯಕ್ಕೆ ಆಸ್ಪದವಿದೆ. ರಾಜನಲ್ಲಿ ಅಮಂಗಲದ ಯೋಗವಿರುವುದರಿಂದ ಅಮಂಗಳಶಬ್ದವನ್ನು ಪ್ರಯೋಗ ಮಾಡಬಾರದು. ಹಾಗೆ ಪ್ರಯೋಗ ಮಾಡುವುದು ರಾಜನಿಗೆ ಅಪ್ರಿಯವಾಗುತ್ತದೆ'' ಹೀಗೆ ಅಣುಭಾಷ್ಯದಲ್ಲಿ ಹೇಳಿದ ಪ್ರಕಾರ ಪ್ರವೃತ್ತಿನಿಮಿತ್ತವಿದ್ದರೂ ರಾಜನಲ್ಲಿ ಬದ್ಧಾದಿಶಬ್ದವಾಚ್ಯತ್ವವು ಇರುವುದಿಲ್ಲ. ಅದರಂತೆ ಜೀವನಲ್ಲಿಯೂ ಕೂಡ ಪ್ರವೃತ್ತಿನಿಮಿತ್ತವಿದ್ದರೂ ಸರ್ವಶಬ್ದ ಮುಖ್ಯವಾಚತ್ವವನ್ನು ಏಕೆ ಒಪ್ಪಬೇಕು? ಈ ಅಭಿಪ್ರಾಯದಿಂದ ಹಿಂದೆ ಆಕ್ಷೇಪ ಮಾಡಿದ ಹೇತುವಿಗೆ ಅಪ್ರಯೋಜಕತ್ವವನ್ನು ಆಕ್ಷೇಪಿಸಿ ಸೂತ್ರದಲ್ಲಿರುವ ಲಿಂಗಪದದ ಅಭಿಪ್ರಾಯವನ್ನು ಹೇಳುವ ಮೂಲಕ ನಿರಾಕರಣೆ ಮಾಡಲು 'ನಚ ವಕ್ತವ್ಯಮ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः – न त्विति** ।। बद्धादिपदानां राज्ञि व्यभिचारादिति भावः ।

ಬದ್ಧಾದಿಶಬ್ದಗಳ ಪ್ರವೃತ್ತಿನಿಮಿತ್ತಗಳು ರಾಜನಲ್ಲಿ ಇದ್ದರೂ ಬದ್ಧಾದಿಶಬ್ದಗಳ ವಾಚಕತ್ವವು ಇರುವುದಿಲ್ಲ. ಆದ್ದರಿಂದ ವ್ಯಭಿಚಾರ ಬರುತ್ತದೆಂಬುದು 'ನತು' ಎಂಬ ವಾಕ್ಯದ ಅಭಿಪ್ರಾಯ.

**भावदीपः – न्यायत्वेनेति ।।** मुख्यप्रयोगे तु निमित्तमेव सामग्रीत्यानुमानिक नयसुधोक्त्या तस्य व्यवहारेषु पुष्कलकारणत्वादिति भावः ।। **बाधकेति ।।**

'ನ್ಯಾಯತ್ವೇನ' ಎಂಬ ಪದದ ಅಭಿಪ್ರಾಯ ಹೀಗಿದೆ - ಮುಖ್ಯವಾದ ಶಬ್ದಪ್ರಯೋಗಕ್ಕೆ ಪ್ರವೃತ್ತಿನಿಮಿತ್ತವೇ ಸಾಮಗ್ರಿ ಎಂಬುದಾಗಿ ಆನುಮಾನಿಕಾಧಿರಣದ ನ್ಯಾಯಸುಧೆಯಲ್ಲಿ ಹೇಳಿರುತ್ತಾರೆ. ಆದ್ದರಿಂದ ವ್ಯವಹಾರದಲ್ಲಿ ಪ್ರವೃತ್ತಿನಿಮಿತ್ತವೇ ಮುಖ್ಯವಾದ ಕಾರಣವಾಗಿದೆ.

**भावदीपः –** उत्सर्गतः प्राप्तस्य बाधकैकापोद्यत्वादिह चामङ्गलत्वादिरूपस्य वाच्यत्वकल्पनबाधकस्याभावात् स्यादेव वाच्यत्वे तदधीनत्वहेतुः प्रयोजक इत्यर्थः ।

'ಬಾಧಕಾಭಾವಾತ್' ಎಂಬ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - 'ಉತ್ಸರ್ಗತಃ' ಪ್ರಾಪ್ತವಾದದ್ದು ಬಾಧಕದಿಂದಷ್ಟೇ ನಿರಾಕರಿಸಲು ಅರ್ಹವಾಗುತ್ತದೆ. ಪ್ರಕೃತ ವಾಚ್ಯತ್ವಕ್ಕೆ ಕಲ್ಪಕವಾದ ಅಮಂಗಲತ್ವಾದಿ ಬಾಧಕಗಳು ಇಲ್ಲದ ಕಾರಣ 'ತದಧೀನತ್ವ' ಎಂಬ ಹೇತು ವಾಚಕತ್ವದ ವಿಷಯದಲ್ಲಿ ಪ್ರಯೋಜಕವಾಗುತ್ತದೆ ಎಂದು.

**भावदीपः –** प्रयोगे सतीति न्यायस्तु अमुख्यविषयः । तथैवानुमानिकनय सुधोक्तेरिति भावः ।

'ಪ್ರಯೋಗವಿದ್ದರೆ ಅದಕ್ಕೆ ಅನುಗುಣವಾಗಿ ನಿಮಿತ್ತವನ್ನು ಹುಡುಕಬೇಕು. ನಿಮಿತ್ತವಿದೆ ಎಂಬ ಮಾತ್ರಕ್ಕೆ ಪ್ರಯೋಗವನ್ನು ಕಲ್ಪಿಸಬಾರದು' ಎಂಬ ನ್ಯಾಯವನ್ನು ಅಮುಖ್ಯ ವಿಷಯದಲ್ಲಿ ಮಾತ್ರ ವಿವಕ್ಷಿಸಬೇಕು. ಆನುಮಾನಿಕಾಧಿಕರಣದ ನ್ಯಾಯಸುಧೆಯಲ್ಲಿ ಹಾಗೆ ಪ್ರತಿಪಾದನೆ ಮಾಡಿರುತ್ತಾರೆ.

**भावदीपः –** यद्यपि जीवशब्दस्यानुमानिकसूत्रे श्रौतस्मार्तप्रयोगेण प्राणधारकत्व-रूपप्रवृत्तिनिमित्तेन च हरौ मुख्यत्वमुक्तम् । वायुशब्दस्यान्तर्नयन्यायेन वैष्णवत्वं सिद्धम् ।

ಪ್ರಶ್ನೆ - ಜೀವಶಬ್ದವು ಶೌತಪ್ರಯೋಗ ಹಾಗೂ ಸ್ಮಾರ್ತಪ್ರಯೋಗಕ್ಕೆ ಅನುಸಾರಿಯಾಗಿ ಶ್ರೀಹರಿಯನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆ 'ಪ್ರಾಣಧಾರಕತ್ವ' ಎಂಬ ಪ್ರವೃತ್ತಿನಿಮಿತ್ತ ಶ್ರೀಹರಿಯಲ್ಲಿಯೇ ಮುಖ್ಯವಾಗಿದೆ ಎಂದು ಆನುಮಾನಿಕಾಧಿಕರಣದ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ್ದಾರೆ. ವಾಯುಶಬ್ದವೂ ಕೂಡ ಅಂತರಧಿಕರಣದ ನ್ಯಾಯದಿಂದ ವಿಷ್ಣುಪರವಾಗಿದೆ ಎಂದು ಸಿದ್ಧವಾಗಿದೆಯಲ್ಲವೆ? ಹೀಗಿರುವಾಗ ಇಲ್ಲೇಕೆ ಪುನಃ ಅದರ ಆಕ್ಷೇಪ?

**भावदीपः** – तथापि शरीररूपकविन्यस्तगृहीतेरिति न्यायेन 'जीवो जहाति' इत्याद्युदाहृतश्रुतिष्वन्यपरत्वस्यापि सत्त्वेनेयमाशङ्का युक्ता । अत एव तयोरपीत्युक्तिः। अत एव च द्युभ्वादिनये वायुसमाख्यातत्वेनेयं श्रुतिरुदाहृतेति भावः ।

ಉತ್ತರ - ಹೌದು; ಆದರೂ ಸಹ 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ 'ಜೀವೋ ಜಹಾತಿ' ಇತ್ಯಾದಿ ಶ್ರುತಿಗಳಲ್ಲಿ ಪ್ರಯೋಗಿಸಿದ ಜೀವಶಬ್ದವು ಪರಮಾತ್ಮನನ್ನು ಬಿಟ್ಟು ಬೇರೆ ಚೇತನರನ್ನು ಕೂಡ ಪ್ರತಿಪಾದನೆ ಮಾಡುತ್ತದ. ಆದ್ದರಿಂದ ಇಲ್ಲಿ ಆಕ್ಷೇಪ ಮಾಡಿದ್ದು ತಪ್ಪಲ್ಲ. ಆದ್ದರಿಂದಲೇ 'ತಯೋರಪಿ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಮತ್ತು ದ್ಯುಭ್ವಾದ್ಯಧಿಕರಣದ ನ್ಯಾಯದಂತೆ ಶ್ರುತಿಯನ್ನು ವಾಯು ಸಮಾಖ್ಯಾನ ಶ್ರುತಿಯ ಜೊತೆಗೆ ವ್ಯಾಖ್ಯಾನಿಸಿದ್ದಾರೆ.

**भावदीपः** – वक्ष्यति च द्वितीये भाष्यकारोऽन्यस्यापि वाच्यत्वादसतः प्राप्तिरिति लिङ्गेनैव नञोऽन्वयभ्रान्तिनिरासयाय लिङ्गसाध्येनाऽन्वयमाह – **न सर्वस्येति** ।।

ಎರಡನೆಯ ಅಧ್ಯಾಯದಲ್ಲಿ ಭಾಷ್ಯಕಾರರೂ ಕೂಡ ಜೀವ ಶಬ್ದವು ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡುವುದರಿಂದ 'ಅಸತಃ ಪ್ರಾಪ್ತಿಃ' ಎಂದು ಹೇಳಿರುತ್ತಾರೆ. 'ಲಿಂಗೇನೈವ' ಎಂಬ ಪದದಲ್ಲಿ 'ನೈವ' ಎಂಬ 'ನಞ್'ಗೆ ಎಲ್ಲಿ ಅನ್ವಯವೆಂದು ತಿಳಿಯುವುದಿಲ್ಲ. ಅದಕ್ಕಾಗಿ ಸಾಧ್ಯದ ಜೊತೆಗೆ ಅನ್ವಯವನ್ನು 'ನ ಸರ್ವಸ್ಯ' ಎಂಬ ವಾಕ್ಯದಿಂದ ತೋರಿಸಿದ್ದಾರೆ.

**भावदीपः** – उपासात्रैविध्यादिति भाष्योपात्तसूत्रखण्डाभिमतयुक्तिमाह – **तल्लिङ्गेति** ।। तथा व्याख्यानं निर्बीजमित्यत आह – **यद्यदिति** ।।

'ಉಪಾಸಾತ್ರೈವಿಧ್ಯಾತ್' ಎಂಬ ಭಾಷ್ಯದಲ್ಲಿ ಉದಾಹರಿಸಿದ ಸೂತ್ರಖಂಡಕ್ಕೆ ಅಭೀಪ್ಸಿತವಾದ ಯುಕ್ತಿಯನ್ನು 'ತಲ್ಲಿಂಗ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ಹಾಗೆ ವ್ಯಾಖ್ಯಾನ ಮಾಡುವುದು ನಿರ್ಬೀಜವಲ್ಲವೆ ? ಎಂಬ ಪ್ರಶ್ನೆಗೆ 'ಯದ್ಯತ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः** – गीतायां दशमे यद्यपि भाष्ये 'यद्यद्विभूतिमत्' इति विस्तारः विष्ण्वादीनि स्वरूपाण्येवेत्युक्त्या यद्यद्विभूत्यादिमत्सत्त्वं विष्णुकपिलरामकृष्णादिकं तत्तन्मम तेजोंऽशसम्भवं प्रादुर्भावात्मकमित्यर्थ उक्तः ।

ಪ್ರಶ್ನೆ - ಭಗವದ್‌ಗೀತೆಯ ಹತ್ತನೆಯ ಅಧ್ಯಾಯದ ಭಾಷ್ಯದಲ್ಲಿ 'ಯದ್ಯದ್‌ವಿಭೂತಿ' ಎಂಬ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ 'ವಿಷ್ಣ್ವಾದೀನಿ ಸ್ವರೂಪಾಣ್ಯೇವ' ಎಂದು ಹೇಳಿರುತ್ತಾರೆ. ಆದ್ದರಿಂದ 'ಯದ್ಯದ್ ವಿಭೂತಿಮತ್ಸತ್ವಂ' ಎಂಬ ಗೀತಾಶ್ಲೋಕಕ್ಕೆ ವಿಷ್ಣು, ಕಪಿಲ, ರಾಮ, ಕೃಷ್ಣ ಮೊದಲಾದ ರೂಪಗಳು ಮೂಲರೂಪದ ತೇಜಸ್ಸಿನ ಅಂಶಗಳು; ಇವುಗಳು ಪ್ರಾದುರ್ಭೂತವಾಗಿವೆ ಎಂಬ ಅರ್ಥವನ್ನು ಹೇಳಿರುತ್ತಾರೆ ಹೊರತು ಜೀವ, ಮುಖ್ಯಪ್ರಾಣರ ಸಾಮರ್ಥ್ಯವು ಭಗವಂತನ ತೇಜಸ್ಸಿನ ಅಂಶವೆಂದು ಹೇಳಿರುವುದಿಲ್ಲ.

**भावदीपः** – तथापि तत्रैव 'अन्यानि तु तेजोयुक्तानि' इत्यप्युक्त्या 'मम तेजोंऽशेन संयुक्तं भवति' इति गीतातात्पर्योक्त्या चार्थान्तरमुपेत्यात्रैतदुक्तिः ।।३।।

ಉತ್ತರ - ಹೌದು, ಆದರೆ ಅದೇ ಸಂದರ್ಭದಲ್ಲಿ 'ಅನ್ಯಾನಿ ತು ತೇಜೋಯುಕ್ತಾನಿ' ಬೇರೆ ಜೀವ-ಮುಖ್ಯಪ್ರಾಣಾದಿಗಳೂ ಕೂಡ ನನ್ನ ತೇಜೋರೂಪವಾದ ಅಂಶದಿಂದ ಯುಕ್ತವಾಗಿವೆ ಎಂಬ ಮಾತು ಕಾಣಸುವುದರಿಂದ ಗೀತಾತಾತ್ಪರ್ಯದ ಆಧಾರದಂತೆ ಟೀಕೆಯ ಮಾತನ್ನು ಇಲ್ಲಿ ಅರ್ಥಮಾಡಿಕೊಳ್ಳಬೇಕು.

## ಬ್ರಹ್ಮಮೀಮಾಂಸಾಶಾಸ್ತ್ರ

## ಪರಮಾತ್ಮನ ಜ್ಞಾನಕ್ಕೋಸ್ಕರವೇ ಕರ್ಮಾದಿಗಳೆಂದು ಜೈಮಿನಿಗಳ ಮತ

### सूत्रम् – ।। अन्यार्थं तु जैमिनिः प्रश्नव्याख्यानाभ्यामपि चैवमेके ।। ४।।

ಸೂತ್ರಾರ್ಥ - ಜ್ಞಾನಕ್ಕೋಸ್ಕರ ಕರ್ಮಗಳನ್ನು ಆಚರಿಸಬೇಕೆಂದು ವೇದಗಳು ಹೇಳುತ್ತಿವೆ. ಹೀಗೆ ಜೈಮಿನ್ಯಾಚಾರ್ಯರ ಅಭಿಪ್ರಾಯ. ಮುಂಡಕದಲ್ಲಿರುವ ಶೌನಕ - ಅಂಗೀರಸರ ಸಂವಾದದಿಂದ, ಛಾಂದೋಗ್ಯದಲ್ಲಿರುವ ಉದ್ದಾಲಕ - ಶ್ವೇತಕೇತುಗಳ ಸಂವಾದದಿಂದಲೂ ಇದು ಸ್ಪಷ್ಟವಾಗುತ್ತದೆ. ಇನ್ನು ಕೆಲವು ಶಾಖಿಗಳು ವಿಷ್ಣುವನ್ನು ತಿಳಿಯದವನು ವೇದವನ್ನು ಎಷ್ಟು ಓದಿದರೂ ವ್ಯರ್ಥ ಎಂದು ತಿಳಿದಿದ್ದಾರೆ.

## ಸೂತ್ರದೀಪಿಕಾ

**सूत्रदीपिका** – तुशब्द एवार्थे । एतेन विष्णोरन्यत्र शब्दान् समाकृष्य कर्मादिप्रतिपादनमपि युक्तमेव । कुतः? यस्मात् **अन्यार्थं** परमात्मज्ञानार्थमेव । तत्कुत इति चेत् । **प्रश्नव्याख्यानाभ्यां** कस्मिन्निति शौनकप्रश्नात् 'द्वे विद्ये' इति आङ्गिरसो वचनात् तथा कस्मिन्विति शौनकप्रश्नात् तथा कथं न्विति श्वेतकेतुप्रश्नात् 'यथा सौम्य -' इत्युद्दालकवचनाच्च इति **जैमिनिराचार्यो** मन्यते। **किञ्च एके** शाखिनः स्पष्टं 'यस्तं न वेद' इत्यन्यज्ञानस्य परमात्मज्ञानार्थतां पठन्ति तस्मादपीत्यर्थः ।।४।।

ಅರ್ಥ -- 'ತು' ಶಬ್ದವು ಅವಧಾರಣಾರ್ಥದಲ್ಲಿದೆ. ಹೀಗೆ ಹೇಳಿದ್ದರಿಂದ ವಿಷ್ಣುವನ್ನು ಬಿಟ್ಟು ಬೇರೆಡೆ ಶಬ್ದಗಳನ್ನು ಸಮಾಕರ್ಷ ಮಾಡಿ ಯಾಗಾದಿ ಕರ್ಮ ಪ್ರತಿಪಾದನೆಯನ್ನು ಮಾಡುವುದು ಯುಕ್ತವೇ ಆಗಿದೆ. ಏಕೆಂದರೆ ಪರಮಾತ್ಮಜ್ಞಾನಕ್ಕೋಸ್ಕರ ಕರ್ಮಪರವಾದ ವಾಕ್ಯಗಳು ಹೊರಟವೆ. ಇದು ಹೇಗೆ ಸ್ಪಷ್ಟವಾಗುತ್ತದೆ ಎಂದರೆ ಪ್ರಶ್ನವ್ಯಾಖ್ಯಾನಾಭ್ಯಾಂ = ಶೌನಕರು 'ಕಸ್ಮಿನ್' ಇತ್ಯಾದಿಯಾಗಿ ಪ್ರಶ್ನಿಸಿದಾಗ, ಆಂಗೀರಸರು 'ದ್ವೇ ವಿದ್ಯೇ' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಅದರಂತೆ 'ಕಸ್ಮಿನ್ ನು' ಇತ್ಯಾದಿಯಾಗಿ ಶೌನಕರ ಪ್ರಶ್ನೆಯಿಂದ ಮತ್ತು 'ಕಥಂ ನು' ಇತ್ಯಾದಿಯಾಗಿ ಶ್ವೇತಕೇತುವಿನ ಪ್ರಶ್ನೆಗೆ, 'ಯಥಾ ಸೌಮ್ಯ' ಇತ್ಯಾದಿಯಾಗಿ ಉದ್ದಾಲಕರ ಉತ್ತರವಾಕ್ಯದಿಂದಲೂ ಕರ್ಮಪ್ರತಿಪಾದಕ ಸಕಲ ವಾಕ್ಯಗಳು ವಿಷ್ಣುವಿನ ಜ್ಞಾನಕ್ಕೋಸ್ಕರವೆಂದು ಸ್ಪಷ್ಟವಾಗುತ್ತದೆ. ಇತಿ ಜೈಮಿನಿಃ = ಹೀಗೆ ಜೈಮಿನ್ಯಾಚಾರ್ಯರ ಅಭಿಪ್ರಾಯ. ಕಿಂಚ = ಮತ್ತು ಏಕೇ = ಇನ್ನೂ ಕೆಲವು ಶಾಖಿಗಳು, ಸ್ಪಷ್ಟವಾಗಿ ಯಸ್ತಂ ನ ವೇದ = ಉಳಿದ ವಸ್ತುವಿನ ಜ್ಞಾನವು ಪರಮಾತ್ಮನ ಜ್ಞಾನಕ್ಕೋಸ್ಕರ ಸಾರ್ಥಕವೆಂದು ಅಧ್ಯಯನ ಮಾಡುತ್ತಾರೆ. ಈ ಕಾರಣದಿಂದಲೂ ಪರಮಾತ್ಮನನ್ನೇ ಪ್ರತಿಪಾದಿಸುವ ಸಕಲ ಶಬ್ದಗಳನ್ನು ಬೇರೆ ಕಡೆ ಸಮಾಕರ್ಷ ಮಾಡಬಹುದು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। अन्यार्थं तु जैमिनिः प्रश्नव्याख्यानाभ्यामपि चैवमेके ।।**

ಅನುವಾದ - ಪರಮಾತ್ಮನಿಗಿಂತ ಬೇರೆಯಾದ ದೇವತೆಗಳು ಮತ್ತು ಕರ್ಮಗಳ ಜ್ಞಾನಕ್ಕೋಸ್ಕರ ವೈದಿಕಶಬ್ದಗಳನ್ನು ಸಮಾಕರ್ಷ ಮಾಡಲಾಗಿದೆ ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ. ಏಕೆಂದರೆ ಶೌನಕ ಶ್ವೇತಕೇತುಗಳ ಪ್ರಶ್ನೆಯಿಂದ ಆಂಗೀರಸ ಉದ್ದಾಲಕರ ಉತ್ತರರೂಪವಾದ ವ್ಯಾಖ್ಯಾನಗಳಿಂದ, ಅಷ್ಟೇ ಅಲ್ಲದೇ ಕೆಲವು ಶಾಖಿಗಳ ಹೇಳುವಿಕೆಯಿಂದಲೂ ಇದು ಸಿದ್ಧವಾಗುತ್ತದೆ.

ಪ್ರತಿಪದಾರ್ಥ -- ಹಿಂದೆ ಸರ್ವಶಬ್ದಗಳನ್ನು ಬೇರೆಡೆ ಸಮಾಕರ್ಷ ಮಾಡಿ, ಪ್ರಯೋಗಿಸಲಾಗುತ್ತದೆಂದು ಸಮರ್ಥಿಸಿದಿರಿ. ಇದು ಸರಿಯಲ್ಲ. ಲೌಕಿಕವಾದ ಶಬ್ದಗಳಿಗೆ ಬೇರೆಡೆ ಮಾಡುವ ವ್ಯವಹಾರಕ್ಕೆ ಸಮಾಕರ್ಷ ಮಾಡಬಹುದಾದರೂ, ವೈದಿಕವಾದ ಕರ್ಮಾದಿ ಪ್ರತಿಪಾದಕವಾದ ಶಬ್ದಗಳಿಗೆ ಅನ್ಯತ್ರ ಸಮಾಕರ್ಷ ಮಾಡಲು ಯಾವುದೇ ಪ್ರಯೋಜನ ಇರುವುದಿಲ್ಲ. ಕರ್ಮ ದೇವತೆಗಳ ಸಿದ್ಧಿಯನ್ನೇ ಪ್ರಯೋಜನವನ್ನಬೇಕು. ಆದರೆ ವೇದಗಳು ಜೀವನಿಗೆ ಮೋಕ್ಷ ನೀಡಲು ಪ್ರವೃತ್ತವಾಗಿರುವುದರಿಂದ, ಕಾಮ್ಯಫಲದ ಉದ್ದೇಶದಲ್ಲಿ ಅದು ಹೊರಟಿಲ್ಲ. ಮೋಕ್ಷವಾದರೂ ಕೂಡ ವೇದದಲ್ಲಿ ಹೇಳಲ್ಪಟ್ಟ ಅನಂತಗುಣಗಳುಳ್ಳ ಭಗವಂತನ ಸರ್ವೋತ್ತಮಜ್ಞಾನದಿಂದಲೇ ಸಿದ್ಧವಾಗುತ್ತದೆ. ಉಳಿದ ಜ್ಞಾನಗಳ ಅನಿವಾರ್ಯತೆ ಇರುವುದಿಲ್ಲ. ಆದ್ದರಿಂದ ವೈದಿಕವಾದ ಶಬ್ದಗಳನ್ನು ಲೋಕದಲ್ಲಿ ಸಮಾಕರ್ಷ ಮಾಡುವುದು ಮುಕ್ತನಾದವನಿಗೆ ನಿಷ್ಫಲವಾಗಿದೆ. ಆದ್ದರಿಂದ ಮುಖ್ಯವಾಗಿಯೇ ಅನ್ಯವಾಚಕತ್ವವನ್ನು ಒಪ್ಪಬೇಕು. ಹೀಗೆ ಆಶಂಕೆಯನ್ನು ಪರಿಹರಿಸುತ್ತಾ, ಸೂತ್ರವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡುತ್ತಿದ್ದಾರೆ. –

ಅನ್ಯಾರ್ಥಂ ತು = ಪರಮಾತ್ಮನಿಗಿಂತ ಬೇರೆಯಾದ ದೇವತೆಗಳ ಮತ್ತು ಕರ್ಮಗಳ ಜ್ಞಾನಕ್ಕೋಸ್ಕರ ವೈದಿಕಶಬ್ದಗಳ ಸಮಾಕರ್ಷವೆಂದು, ಜೈಮಿನಿಃ = ಜೈಮಿನ್ಯಾಚಾರ್ಯರು

ಹೇಳುತ್ತಾರೆ. ಪ್ರಶ್ನ = ಶೌನಕ ಶ್ವೇತಕೇತುಗಳ ಪ್ರಶ್ನೆಯಿಂದ, ವ್ಯಾಖ್ಯಾನಾಭ್ಯಾಮ್ = ಆಂಗೀರಸ ಉದ್ದಾಲಕರ ಉತ್ತರರೂಪವಾದ ವ್ಯಾಖ್ಯಾನಗಳಿಂದ, ಅಪಿ ಚ = ಮತ್ತು, ಏಕೇ = ಕೆಲವು ಶಾಖಿಗಳು, ಏವಂ = 'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' ಎಂದು ಹೇಳುವುದರಿಂದಲೂ ಕೂಡ.

**भाष्यम् – परमात्मज्ञानार्थं कर्मादिकमपि वदतीति जैमिनिः ।**

ಅನುವಾದ - ಪರಮಾತ್ಮನ ಜ್ಞಾನಕ್ಕೋಸ್ಕರ ವೇದಗಳು ಕರ್ಮಗಳನ್ನು, ದೇವತೆಗಳನ್ನು ಹೇಳುತ್ತವೆಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ.

ಪ್ರತಿಪದಾರ್ಥ -- ಪರಮಾತ್ಮ ಎಂದು ಹೇಳಿದ್ದರಿಂದ ಸೂತ್ರದಲ್ಲಿರುವ ಅನ್ಯಪದವು ಜಗತ್ತಿಗಿಂತ ಭಿನ್ನನಾದ ಈಶ್ವರಾತ್ ಎಂಬ ಅರ್ಥದಲ್ಲಿ ಇರುತ್ತದೆಂದು ತಿಳಿಸಿದ್ದಾರೆ. ಹಿಂದಿನ 'ಜಗದ್ವಾಚಿತ್ವಾತ್' ಎಂಬ ಸೂತ್ರವನ್ನು 'ಜಗದ್ವಾಚಿತ್ವಮ್' ಎಂಬುದಾಗಿ ವಿಪರಿಣಾಮ ಮಾಡಿಕೊಂಡು, ಅದರ ತಾತ್ಪರ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಕರ್ಮಾದಿಕಮಪಿ = ಜ್ಯೋತಿಷ್ಟೋಮಾದಿ ಕರ್ಮಗಳು, ರಮೆ, ಚತುರ್ಮುಖ, ರುದ್ರ ಮೊದಲಾದವರನ್ನು, ಪರಮಾತ್ಮ ಜ್ಞಾನಾರ್ಥಂ = ಪರಮಾತ್ಮನನ್ನು ತಿಳಿಸಲು, ವದತಿ = ವೇದವು ಹೇಳುತ್ತಿದೆ. ಇತಿ = ಹೀಗೆ, ಜೈಮಿನಿಃ = ಜೈಮಿನ್ಯಾಚಾರ್ಯರು ಹೇಳುತ್ತಾರೆ.

**भाष्यम् – 'कस्मिन्नु भगवो विज्ञाते सर्वमिदं विज्ञातं भवतीति । तस्मै स होवाच द्वे विद्ये वेदितव्ये' (मु.उ. १-१३-४)**

ಅನುವಾದ - ಮುಂಡಕೋಪನಿಷತ್ತಿನಲ್ಲಿ ಹೀಗೆ ಹೇಳಲಾಗಿದೆ - ಶೌನಕರು ಪ್ರಶ್ನಿಸುತ್ತಾರೆ. 'ಎಲೈ ಸ್ವಾಮಿಯಾದ ಅಂಗೀರಸರೇ ಯಾವುದನ್ನು ತಿಳಿದಾಗ, ಇದೆಲ್ಲವನ್ನು ತಿಳಿದಂತಾಗುತ್ತದೆ?' ಈ ಪ್ರಶ್ನೆಗೆ ಅಂಗೀರಸರು ಉತ್ತರಿಸುತ್ತಾರೆ. 'ಪರ, ಅಪರ ಎಂಬ ಎರಡು ವಿದ್ಯೆಗಳು ತಿಳಿಯಲು ಯೋಗ್ಯವಾಗಿವೆ.' ಹೀಗೆ ಪ್ರಶ್ನೋತ್ತರಗಳು ಆರಂಭವಾಗಿವೆ.

ಪ್ರತಿಪದಾರ್ಥ -- ವೇದದಲ್ಲಿ ಹೇಳಲ್ಪಟ್ಟ ಕರ್ಮಾದಿಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕೋಸರ ಎಂಬುದು ಹೇಗೆ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ ಸೂತ್ರದಲ್ಲಿರುವ ಪ್ರಶ್ನ ಎಂಬ ಪದದಿಂದ ಮತ್ತು ದ್ವಿವಚನದಿಂದ ಕೂಡಿರುವ ದ್ವಂದ್ವ ಸಮಾಸದಿಂದ ಅನೇಕ ಪ್ರಶ್ನೆ ಹಾಗೂ ಅನೇಕ ಉತ್ತರಗಳಿವೆ ಎಂದು ಸೂಚಿಸುತ್ತಾ ಅದನ್ನೇ ಉದಾಹರಿಸುತ್ತಿದ್ದಾರೆ. –

ಹೇ ಭಗವಃ = ಸ್ವಾಮಿಯಾದ ಅಂಗೀರಸರೇ! ಕಸ್ಮಿನ್ = ಯಾವುದನ್ನು, ವಿಜ್ಞಾತೇ = ತಿಳಿದಾಗ, ಇದಂ ಸರ್ವಂ = ಇದೆಲ್ಲವನ್ನು, ಜ್ಞಾತಂ ಭವತಿ = ಹೇಳಿದಂತಾಗುತ್ತದೆ. ತಸ್ಮೈ = ಶೌನಕರಿಗೆ, ಸಃ = ಅಂಗೀರಸರು, ಉವಾಚ = ಉತ್ತರಿಸುತ್ತಾರೆ. ದ್ವೇ ವಿದ್ಯೆ = ಪರ, ಅಪರ ಎಂಬ ಎರಡು ವಿದ್ಯೆಗಳು, ವೇದಿತವ್ಯೇ = ತಿಳಿಯಲು ಅರ್ಹವಾಗಿವೆ.

**भाष्यम् – 'कथं नु भगवः स आदेशो भवति' इति । यथा सोम्येकेन मृत्पिण्डेन' (छां. उ. ६-१-३-४) इत्यादिप्रश्नव्याख्यानाभ्याम् ।**

ಅನುವಾದ - ಮತ್ತು ಛಾಂದೋಗ್ಯದಲ್ಲಿ ಹೀಗೆ ಹೇಳಲಾಗಿದೆ. ಶ್ವೇತಕೇತು ಉದ್ದಾಲಕರನ್ನು ಪ್ರಶ್ನಿಸುತ್ತಾರೆ. ಸ್ವಾಮಿಯಾದ ಉದ್ದಾಲಕರೇ ಹೇಗೆ ತಿಳಿಯುವುದರಿಂದ ಭಗವದ್ ವಿಷಯಕವಾದ ಉಪದೇಶವು ಯುಕ್ತವಾಗುತ್ತದೆ ? ಈ ಪ್ರಶ್ನೆಗೆ ಉದ್ದಾಲಕರು ಉತ್ತರಿಸುತ್ತಾರೆ. "ಸೋಮಪಾನಾರ್ಹನಾದ ಶ್ವೇತಕೇತುವೇ ! ಹೇಗೆ ಒಂದು ಮೃತ್ಪಿಂಡದ ಜ್ಞಾನದಿಂದ ಸಕಲ ಮೃಣ್ಮಯ ಪಾತ್ರಗಳ ಜ್ಞಾತವಾಗುತ್ತವೋ" ಇವೇ ಮೊದಲಾದ ಪ್ರಶ್ನೋತ್ತರ ರೂಪವಾದ ಶ್ರುತಿಭಾಗಗಳಿಂದ ಭಗವಂತನ ಜ್ಞಾನ ಬರಬೇಕಾದರೆ, ದೇವತಾಕರ್ಮಗಳ ಜ್ಞಾನವೂ ಕೂಡ ಬರಬೇಕು ಎಂದು ತಿಳಿಯುತ್ತದೆ. ಆದ್ದರಿಂದ ಲೌಕಿಕ ಶಬ್ದಗಳಂತೆ ವೈದಿಕಶಬ್ದಗಳೂ ಕೂಡ ಸಮಾಕರ್ಷದಿಂದಾಗಿ ಅನ್ಯತ್ರಪ್ರಸಿದ್ಧವಾಗುತ್ತದೆ.

ಪ್ರತಿಪದಾರ್ಥ -- ಛಾಂದೋಗ್ಯೋಪನಿಷತ್ತಿನಲ್ಲಿ 'ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ ಭವತಿ' ಎಂಬ ವಾಕ್ಯದಿಂದ ಪರಮಾತ್ಮನನ್ನು ತಿಳಿದರೆ ಉಳಿದ ಪದಾರ್ಥಗಳೆಲ್ಲವೂ ತಿಳಿದಂತಾಗುತ್ತವೆ ಎಂದು ಹೇಳಲಾಗಿದೆ. ಉದ್ದಾಲಕರ ಪ್ರಶ್ನೆಗೆ ಶ್ವೇತಕೇತು ಉತ್ತರಿಸುತ್ತಿದ್ದಾರೆ. –

ಹೇ ಭಗವಃ = ಪೂಜ್ಯರಾದ ಉದ್ದಾಲಕರೇ ! ಯಾವ ಪರಮಾತ್ಮನನ್ನು ತಿಳಿಯುವುದರಿಂದ ಕರ್ಮಾದಿಗಳೆಲ್ಲವೂ ತಿಳಿದಂತಾಗುತ್ತದೆ. ಇಲ್ಲದಿದ್ದರೆ ತಿಳಿದಂತಾಗುವುದಿಲ್ಲ, ಆದೇಶಃ = ಅಂತಹ ಭಗವದ್ವಿಷಯಕವಾದ ಉಪದೇಶವು, ಕಥಂ = ಯಾವ ಪ್ರಕಾರದಿಂದ, ಭವತಿ = ಯುಕ್ತವಾಗುತ್ತದೆ. ಆ ಪ್ರಕರಣವನ್ನು ನಾನು ಇನ್ನೂ ಹೇಗೆ ತಿಳಿಯಬೇಕು? ಈ ಪ್ರಶ್ನೆಗೆ ಉದ್ದಾಲಕರು ಉತ್ತರಿಸಿದ್ದಾರೆ. ಹೇ ಸೋಮ್ಯ = ಸೋಮಪಾನಾರ್ಹನಾದ ಶ್ವೇತಕೇತುವೇ! ಯಥಾ = ಹೇಗೆ, ಏಕೇನ ಮೃತ್ಪಿಂಡೇನ = ಒಂದು ಮೃತ್ಪಿಂಡದ ಜ್ಞಾನದಿಂದ ಸಕಲ ಮೃಣ್ಮಯ ಪದಾರ್ಥಗಳು ತಿಳಿಯುತ್ತವೋ, ಹೀಗೆ ಪ್ರಶ್ನವ್ಯಾಖ್ಯಾನಾಭ್ಯಾಮ್ = ಪ್ರಶ್ನೋತ್ತರರೂಪವಾದ ಶ್ರುತಿಭಾಗಗಳಿಂದ ಭಗವಂತನ ಜ್ಞಾನ ಬರಬೇಕಾದರೆ, ದೇವತಾಕರ್ಮಗಳ ಜ್ಞಾನವೂ ಕೂಡ ಬರಬೇಕೆಂದು ತಿಳಿಯುತ್ತದೆ.

**भाष्यम् – एवमपि चैके पठन्ति 'यस्तन्न वेद किमृचा करिष्यति' इति (ऋ.स.१-१६४-३९) ॥४॥**

ಅನುವಾದ - ಕೆಲವು ಶಾಖಿಗಳು ಹೀಗೆ ಹೇಳುತ್ತಾರೆ - ವಿಷ್ಣುವನ್ನು ತಿಳಿಯದೇ ಕೇವಲ ವೇದವನ್ನು ಓದಿ ಏನು ಪ್ರಯೋಜನ ? ಎಂದು.

ಪ್ರತಿಪದಾರ್ಥ -- 'ಪ್ರಶ್ನವ್ಯಾಖ್ಯಾನ' ಎಂಬ ಲಿಂಗದಿಂದ ಜಗತ್ತಿನ ಜ್ಞಾನವು ಪರಮಾತ್ಮನ ಜ್ಞಾನಕ್ಕೋಸ್ಕರ ಇರುತ್ತದೆಂಬುದು ಕೇವಲ ಅರ್ಥಾತ್ ಸಿದ್ಧವಾಗುವುದಿಲ್ಲ. ಸ್ಪಷ್ಟವಾಗಿಯೇ ಋಗ್ವೇದದಲ್ಲಿ ಹೇಳಲಾಗಿದೆ. ಇದನ್ನು ಪ್ರತಿಪಾದನೆ ಮಾಡುತ್ತಾ 'ಅಪಿ ಚೈವಮೇಕೇ' ಎಂಬ ಸೂತ್ರಖಂಡವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಏವಮಪಿ = ಮುಂದೆ ಹೇಳುವಂತೆ, ಏಕೇ = ಕೆಲವು ಶಾಖೆಯವರು, ಪಠಂತಿ = ಹೇಳುತ್ತಾರೆ. ಯಃ = ಯಾವಾತನು, ತನ್ನ ವೇದ = ಪ್ರಸಿದ್ಧನಾದ ಪರಮಾತ್ಮನನ್ನು ತಿಳಿಯುವುದಿಲ್ಲವೋ, ಸಃ = ಅವನು, ಋಚಾ = ವೇದದಿಂದ, ಕಿಂ ಕರಿಷ್ಯತಿ = ಯಾವ ಫಲವನ್ನು ಪಡೆಯುತ್ತಾನೆ.

ಸಮಾಕರ್ಷಾಧಿಕರಣ (೧-೪-೫)

ತತ್ವಪ್ರಕಾಶಿಕಾ

**तत्वप्रकाशिका –**

**यदुक्तं 'सर्वशब्दा अन्यत्र समाकृष्य व्यवह्रियन्ते' इति, न तद्युक्तम् । वैदिकानां शब्दानां कर्मादौ समाकर्षे प्रयोजनाभावात् ।**

'ಸಕಲ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಅಂತಹ ಶಬ್ದಗಳನ್ನು ಸಮಾಕರ್ಷ ಮಾಡಿ, ಲೌಕಿಕ ವ್ಯಹಾರವನ್ನು ಮಾಡಲಾಗಿದೆ' ಎಂದು ಹೇಳಿದ್ದು ಅಯುಕ್ತ. ವೈದಿಕವಾದ ಶಬ್ದಗಳನ್ನು ಲೌಕಿಕವಾದ ಕರ್ಮಾದಿಗಳಲ್ಲಿ ಸಮಾಕರ್ಷ ಮಾಡುವುದರಿಂದ ಏನೂ ಪ್ರಯೋಜನವಿಲ್ಲ.

**तत्वप्रकाशिका – नच कर्मसिद्धिरेव प्रयोजनम् । भगवज्ज्ञानमात्रेणैव पुरुषार्थसिद्धौ तद्वैयर्थ्यात् । वेदानाञ्च काम्यफलार्थमप्रवृत्तेः ।**

ಕರ್ಮಸಿದ್ಧಿಯನ್ನೇ ಪ್ರಯೋಜನವೆನ್ನಬೇಕು. ಆದರೆ ಭಗವಂತನ ಜ್ಞಾನದಿಂದಲೇ ಪುರುಷಾರ್ಥವು ಸಿದ್ಧವಾಗುತ್ತಿರುವಾಗ, ಕರ್ಮಸಿದ್ಧಿಯು ವ್ಯರ್ಥ. ಏಕೆಂದರೆ ವೇದಗಳು ಕಾಮ್ಯಫಲಕ್ಕೋಸ್ಕರ ಹೊರಟಿರುವುದೇ ಇಲ್ಲ.

**तत्वप्रकाशिका – अतो वैदिकानां शब्दानामन्यत्र समाकर्षे प्रयोजनाभावात्, मुख्यत एवाऽन्यवाचकत्वम्, इत्याशङ्कां परिहरत्सूत्रमुपन्यस्य व्याचष्टे – अन्यार्थमिति ।।**

ಆದ್ದರಿಂದ ವೈದಿಕಶಬ್ದಗಳನ್ನು ಲೌಕಿಕವಾದ ಕರ್ಮಾದಿವಿಷಯದಲ್ಲಿ ಸಮಾಕರ್ಷ ಮಾಡುವುದರಿಂದ ಏನೂ ಪ್ರಯೋಜನವಿಲ್ಲದ ಕಾರಣ ಕರ್ಮಾದಿಲೌಕಿಕಪದಾರ್ಥಗಳನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆಂದು ಹೇಳಬೇಕು. ಇಷ್ಟು ಪೂರ್ವಪಕ್ಷ.

ಇದನ್ನು ನಿರಾಕರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅನ್ಯಾರ್ಥಮ್' ಇತ್ಯಾದಿಯಾಗಿ.

**तत्वप्रकाशिका – 'समाकर्षेण वेदः कर्मदेवतादिकमपि वदति' इति युक्तमेव । कर्मादिज्ञानस्यापि परमात्मज्ञानार्थत्वादिति जैमिनिराचार्यो मन्यत इत्यर्थः । अन्यज्ञानस्य परमात्मज्ञानार्थत्वं कुतः? इत्यत आह – कस्मिन्निति ।।**

ಸಮಾಕರ್ಷದಿಂದ ವೇದವು ಕರ್ಮ ಹಾಗೂ ದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆಂದು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ ಕರ್ಮ ಹಾಗೂ ದೇವತೆಗಳ ಜ್ಞಾನವು ಪರಮಾತ್ಮನ

ಜ್ಞಾನಕ್ಕೋಸ್ಕರ ಸಾರ್ಥಕವೆನ್ನುತ್ತಾರೆ ಜೈಮಿನ್ಯಾಚಾರ್ಯರು. ಅನ್ಯಪದಾರ್ಥದ ಜ್ಞಾನವು ಪರಮಾತ್ಮನ ಜ್ಞಾನಕ್ಕೋಸ್ಕರವೇ ಇರುತ್ತದೆಂದು ಹೇಗೆ ತಿಳಿಯುವುದು ? ಎಂಬ ಪ್ರಶ್ನೆಗೆ 'ಕಸ್ಮಿನ್' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – सर्वमिदं कर्मादिकं कस्मिन् विज्ञाते विज्ञातं भवति? विज्ञातस्याप्यस्य फलं कस्मिन् ज्ञाते भवति ? एतज्ज्ञानमात्रस्याऽफलत्वात्, इति शौनकप्रश्ने, सर्वमपरविद्यया विज्ञातं भवति, विज्ञातं च परविद्याविषयपरमात्म-ज्ञानेन सफलं भवति, अतो 'द्वे विद्ये वेदितव्ये' इत्यङ्गिरसो व्याख्यानात् ।**

ಕರ್ಮಾದಿ ಸಕಲ ಲೌಕಿಕಪದಾರ್ಥಗಳ ಜ್ಞಾನವು ಯಾವಾತನನ್ನು ತಿಳಿಯುವುದರಿಂದ ತಿಳಿದಂತಾಗುತ್ತದೆ ? ಏಕೆಂದರೆ ಕೇವಲ ಕರ್ಮಾದಿಗಳ ಜ್ಞಾನಕ್ಕೆ ಯಾವುದೇ ಪ್ರಯೋಜನವಿರುವುದಿಲ್ಲ. ಹೀಗೆ ಶೌನಕರು ಪ್ರಶ್ನಿಸುತ್ತಾರೆ. ಅದಕ್ಕೆ ಉದ್ದಾಲಕರು ಹೀಗೆ ಉತ್ತರಿಸಿದ್ದಾರೆ - ಸಕಲ ಪದಾರ್ಥಗಳೂ ಕೂಡ ಅಪರವಿದ್ಯೆಯಿಂದ ವಿಜ್ಞಾತವಾಗುತ್ತದೆ. ಈ ಜ್ಞಾನವು ಪರವಿದ್ಯೆಗೆ ವಿಷಯನಾದ ಪರಮಾತ್ಮನ ಜ್ಞಾನದಿಂದಲೇ ಸಫಲವಾಗುತ್ತದೆ. ಹೀಗೆ ಎರಡೂ ವಿದ್ಯೆಯ ಜ್ಞಾನ ಅತ್ಯಂತ ಆವಶ್ಯಕವೆಂದು ಆಂಗೀರಸರು ವ್ಯಾಖ್ಯಾನಿಸಿದ್ದಾರೆ.

**तत्वप्रकाशिका – तथा 'यस्मिन् परमात्मनि ज्ञाते सर्वं कर्मादिकं ज्ञातमपि सफलं स्यात् तद्विषय उपदेशः कथं स्यात् ? तं प्रकारं कथमहं जानीयाम्? इति श्वेतकेतुप्रश्ने 'यथैकेन मत्पिण्डेन ज्ञातेन ज्ञातमपि घटादिकं ज्ञातफलं भवति, विशेषज्ञानात् । एवं परमात्मनि ज्ञाते सर्वं ज्ञातफलं भवति, इत्युद्दालक-व्याख्यानात्, अन्यज्ञानस्य परमात्मज्ञानार्थत्वं ज्ञायत इति भावः।**

ಇದರಂತೆ ಯಾವ ಪರಮಾತ್ಮನ ಜ್ಞಾನವನ್ನು ಹೊಂದುವುದರಿಂದ ಕರ್ಮಾದಿ ಸಕಲ ಪದಾರ್ಥಗಳು ಜ್ಞಾತವಾಗುವ ಮೂಲಕ ಸಫಲವಾಗುತ್ತವೋ, ಅಂತಹ ಪರಮಾತ್ಮನ ಉಪದೇಶವನ್ನು ಮಾಡಿರಿ. ಆ ಉಪದೇಶ ಪ್ರಕಾರ ನನಗೆ ಹೇಗೆ ತಿಳಿಯುತ್ತದೆ ? ಹೀಗೆ ಶ್ವೇತಕೇತು ಪ್ರಶ್ನಿಸಿದಾಗ - ಉದ್ದಾಲಕರು ಉತ್ತರಿಸಿದ್ದಾರೆ. ಯಾವರೀತಿಯಾಗಿ ಒಂದು ಮಣ್ಣಿನ ಮುದ್ದೆಯನ್ನು ತಿಳಿಯುವುದರಿಂದ ಅಜ್ಞಾತವಾದ ಘಟಾದಿಗಳೂ ಕೂಡ ಜ್ಞಾತವಾಗುವುದು ಕಂಡಿದೆಯೋ, ಇದೇ ರೀತಿಯಾಗಿ ಪರಮಾತ್ಮನನ್ನು ತಿಳಿಯುವುದರಿಂದ ಉಳಿದೆಲ್ಲ ಲೌಕಿಕಪದಾರ್ಥಗಳ ಜ್ಞಾನವು ಸಫಲವಾಗುತ್ತದೆ. ಹೀಗೆ ಉದ್ದಾಲಕರು ಉತ್ತರಿಸಿದ್ದಾರೆ. ಇದರಿಂದ ಕರ್ಮಾದಿಜ್ಞಾನಗಳು ಪರಮಾತ್ಮನ ಜ್ಞಾನಕ್ಕೋಸ್ಕರ ಸಾರ್ಥಕವೆಂದು ಸಿದ್ಧವಾಗುತ್ತದೆ.

**तत्वप्रकाशिका** – अपि च न केवलमर्थादिवमन्यज्ञानस्य परमात्म ज्ञानार्थत्वसिद्धिः, किं तु स्पष्टं चैवमेके शाखिनः पठन्ति, इत्याह – **एवमिति** ।।

ಹೀಗೆ ಅರ್ಥಾತ್ ಅನ್ಯಜ್ಞಾನವು ಪರಮಾತ್ಮಜ್ಞಾನಕ್ಕೋಸ್ಕರ ಸಾರ್ಥಕವೆಂದಷ್ಟೇ ಸಿದ್ಧವಾಗುವುದಲ್ಲ; ಕೆಲವು ಶಾಖಿಗಳು ಸ್ಪಷ್ಟವಾಗಿ ಇದನ್ನು ಹಾಗೇ ಹೇಳಿದ್ದಾರೆಂದು 'ಏವಂ' ಎಂಬ ಭಾಷ್ಯದ ವಾಕ್ಯವು ಸ್ಪಷ್ಟಪಡಿಸುತ್ತಿದೆ.

**तत्वप्रकाशिका** – तदक्षरं यो न वेद स कर्मादिविषयर्चा किं करिष्यति ? यतः सर्वा ऋचः परमे व्याप्ते अक्षरे तज्ज्ञानार्थमेव कर्मादिकं वदन्ति । तस्यैव सर्वदेवाधारत्वात् । ये पुनस्तदक्षरं विदुस्ते सम्यगासत इत्यर्थः ।।

ಅಕ್ಷರನಾದ ಪರಮಾತ್ಮನನ್ನು ಯಾರು ತಿಳಿಯುವುದಿಲ್ಲವೋ, ಅವನು ಕರ್ಮಪ್ರತಿಪಾದಕವಾದ ಋಗ್ವೇದವನ್ನು ಓದಿ ಏನು ಮಾಡುತ್ತಾನೆ? ಏಕೆಂದರೆ ಸಕಲ ವೇದವು ಅತ್ಯಂತ ಶ್ರೇಷ್ಠನಾದ ಎಲ್ಲೆಡೆ ವ್ಯಾಪ್ತನಾದ ಅಕ್ಷರ ಪುರುಷನಾದ ಪರಮಾತ್ಮನ ಜ್ಞಾನಕ್ಕೋಸ್ಕರವಾಗಿಯೇ ಕರ್ಮಗಳನ್ನು ಪ್ರತಿಪಾದನೆ ಮಾಡುತ್ತಿವೆ. ಏಕೆಂದರೆ ಆ ಪರಮಾತ್ಮನೇ ಸಕಲ ದೇವತೆಗಳಿಗೂ ಆಧಾರನಾಗಿದ್ದಾನೆ. 'ಯಾವ ಜ್ಞಾನಿಗಳು ಆ ಅಕ್ಷರನನ್ನು ತಿಳಿಯುತ್ತಾರೋ, ಅವರು ಎಲ್ಲಾ ರೀತಿಯಿಂದಲೂ ಉಪಭೋಗ ಮಾಡುತ್ತಾ ಪರಮಾತ್ಮನಲ್ಲಿಯೇ ರತರಾಗಿರುತ್ತಾರೆ ಎಂಬುದು ಮಂತ್ರದ ಅರ್ಥ.

## ಭಾವದೀಪ

लौकिकानामन्यत्र व्यवहारार्थं समाकर्षमुपेत्याह – **वैदिकानामिति** ।। मुमुक्षुं प्रतीतिशेषः ।

ಲೌಕಿಕವಾದ ಶಬ್ದಗಳನ್ನು ವ್ಯವಹಾರಕ್ಕೋಸ್ಕರ ಸಮಾಕರ್ಷ ಮಾಡುವುದನ್ನು ತಪ್ಪಲ್ಲವೆಂದು ಅಂಗೀಕರಿಸಿ 'ವೈದಿಕಾನಾಂ' ಎಂಬ ವಾಕ್ಯವು ಹೊರಟಿದೆ. 'ಮುಮುಕ್ಷುಗಳನ್ನು ಕುರಿತು' ಎಂಬುದನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ವೈದಿಕವಾದ ಶಬ್ದಗಳನ್ನು ಲೌಕಿಕವಾದ ಕರ್ಮಾದಿಗಳಲ್ಲಿ ಸಮಾಕರ್ಷ ಮಾಡುವುದರಿಂದ ಮುಮುಕ್ಷುಗಳಿಗೆ ಯಾವುದೇ ಪ್ರಯೋಜನವಿಲ್ಲವೆಂದು ಅಭಿಪ್ರಾಯ.

**भावदीपः** – ननु 'तमेवं विद्वानमृत' इत्यादेः ज्ञानात्, मोक्षसिद्धावपि पशुपुत्र-स्वर्गादिफलप्राप्त्यर्थं कर्मसिद्धिर्न स्यादित्यत आह – **वेदानां चेति** ।। मुमुक्षुं प्रतीतिशेषः ।

ಪ್ರಶ್ನೆ - 'ತಮೇವಂ ವಿದ್ವಾನ್ ಅಮೃತ' ಎಂಬ ಶ್ರುತಿಯಲ್ಲಿ ಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆದರೂ ಕೂಡ ಪಶು, ಪುತ್ರ, ಸ್ವರ್ಗ ಮೊದಲಾದ ಫಲಗಳನ್ನು ಪಡೆಯಲು

ಕರ್ಮಾಚರಣೆಯನ್ನು ಮುಮುಕ್ಷುಗಳು ಕೂಡ ಆಚರಿಸಲೇ ಬೇಕು. ಆದಕ್ಕಾಗಿ ಕರ್ಮಾದಿಗಳಲ್ಲಿ ಶಬ್ದಗಳನ್ನು ಸಮಾಕರ್ಷ ಮಾಡಬೇಕಲ್ಲವೆ?

ಈ ಪ್ರಶ್ನೆಗೆ 'ವೇದಾನಾಂ ಚ' ಎಂಬ ಟೀಕಾವಾಕ್ಯವು ಉತ್ತರಿಸುತ್ತದೆ. ಇಲ್ಲಿಯೂ ಸಹ ಮುಮುಕ್ಷುವನ್ನು ಕುರಿತು ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

**भावदीपः – 'रोचनार्थं फलश्रुतिः' इत्येकादशस्कन्धोक्तेः । ''न तादृशी प्रीतिरीड्यस्य विष्णोर्गुणोत्कर्षज्ञातरि यादृशी स्यात् । तत्प्रीणनान्मोक्षमाप्नोति सर्वस्ततो वेदास्तत्परास्सर्व एव'' इत्यादि श्रुतेश्चेति भावः ।**

'ರೋಚನಾರ್ಥಂ ಫಲಶ್ರುತಿಃ' ಸಾಧಾನಾನುಷ್ಠಾನದಲ್ಲಿ ರುಚಿ ಹುಟ್ಟಿಸಲು ವೇದದಲ್ಲಿ ಅನೇಕ ಐಹಿಕಫಲಗಳನ್ನು ಹೇಳಲಾಗಿದೆ ಎಂಬುದಾಗಿ ಭಾಗವತದ ಏಕಾದಶಸ್ಕಂಧದಲ್ಲಿ ಹೇಳಿದ್ದಾರೆ. ಮತ್ತು ''ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ । ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ'' ತನ್ನ ಗುಣಪರಿಪೂರ್ಣತ್ವದ ಜ್ಞಾನವನ್ನು ಹೊಂದಿದವನ ಮೇಲೆ ಆಗುವಷ್ಟು ಸಂತೋಷ ವಿಷ್ಣುವಿಗೆ ಬೇರೆ ಯಾರಲ್ಲಿಯೂ ಇರುವುದಿಲ್ಲ. ಹೀಗೆ ವಿಷ್ಣುವಿನ ಪ್ರೀತಿಯನ್ನು ಸಂಪಾದಿಸಿದವನು ಮೋಕ್ಷವನ್ನು ಹೊಂದುತ್ತಾನೆ. ಆದ್ದರಿಂದ ಸಕಲವೇದಗಳು ವಿಷ್ಣುವಿನ ಗುಣಪರಿಪೂರ್ಣತ್ವಕ್ಕಾಗಿಯೇ ಹೊರಟಿರುತ್ತವೆ.

ಇವೇ ಮೊದಲಾದ ಶ್ರುತಿಗಳ ಆಧಾರದಿಂದ ವೇದಗಳು ಕಾಮ್ಯಫಲಕ್ಕೊಸ್ಕರ ಹೊರಟಿರುವುದೇ ಇಲ್ಲವೆಂದು ಸ್ಪಷ್ಟವಾಗುತ್ತದೆ.

**भावदीपः – यद्यपि सर्वपुरुषार्थनये ज्ञानादेवाऽशेषपुरुषार्थप्राप्तिर्वक्ष्यते । तथाप्यभ्युपेत्यवादेन वाऽनुत्तमाधिकारिणामुत्तमानामपि प्रबलप्रतिबन्धकवतां कर्मसापेक्षत्वाद्वा एवमुक्तमिति ध्येयम् ।।**

ವಾಸ್ತವಿಕವಾಗಿ ಸರ್ವಪುರುಷಾರ್ಥಾಧಿಕರಣದಲ್ಲಿ ಜ್ಞಾನದಿಂದಲೇ ಸಕಲ ಪುರುಷಾರ್ಥಗಳ ಪ್ರಾಪ್ತಿಯಾಗುತ್ತದೆ ಎಂದು ಹೇಳಿರುತ್ತಾರೆ. ಆದರೂ ಪ್ರಕೃತ ಟೀಕೆಯಲ್ಲಿ ಅಂಗೀಕಾರವಾದದಿಂದ ಅಧಮಾಧಿಕಾರಿಗಳ ವಿಷಯದಲ್ಲಿ ವಾಕ್ಯಗಳು ಹೊರಟಿರುತ್ತವೆ ಅಥವಾ ಉತ್ತಮಾಧಿಕಾರಿಗಳಾಗಿದ್ದರೂ ಪ್ರಬಲವಾದ ಪ್ರತಿಬಂಧಕವಿದ್ದಾಗ ಅವರೂ ಕೂಡ ಕರ್ಮವನ್ನು ಅಪೇಕ್ಷಿಸಬೇಕೆಂಬ ದೃಷ್ಟಿಯಿಂದಲೂ ಈ ಟೀಕಾವಾಕ್ಯಗಳು ಹೊರಟಿರುತ್ತವೆ ಎಂದು ತಿಳಿಯಬೇಕು.

**भावदीपः – अत इति ।। ज्ञानमात्रेण पुरुषार्थासिद्धेरित्यर्थः । कर्मादिकमपि वदतीति भाष्यमादिपदार्थं वदन् शेषपूर्त्या व्याचष्टे – समाकर्षेणेति ।।**

ಟೀಕೆಯಲ್ಲಿರುವ 'ಅತಃ' ಎಂಬ ಪದಕ್ಕೆ ಕೇವಲಜ್ಞಾನದಿಂದ ಪುರುಷಾರ್ಥವು ಸಿದ್ಧವಾಗದ ಕಾರಣ ಎಂದರ್ಥ. 'ಕರ್ಮಾದಿಕಮಪಿ ವದತಿ' ಎಂಬ ಭಾಷ್ಯದ ಮಾತಿನಲ್ಲಿರುವ ಆದಿಪದದ ಅರ್ಥವನ್ನು ಹೇಳುವ ಮೂಲಕ ಪದವನ್ನು ಶೇಷಪೂರಣ ಮಾಡಿಕೊಳ್ಳುವ ಮೂಲಕ 'ಸಮಾಕರ್ಷೇಣ' ಎಂಬ ಟೀಕಾವಾಕ್ಯವು ವ್ಯಾಖ್ಯಾನ ಮಾಡಲು ಹೊರಟಿದೆ.

**भावदीपः** – सूत्रेऽन्यपदेन प्रस्तुतजीवाद्यन्यपरमात्मवाचिना तज्ज्ञानं लक्ष्यत इति भावेन भाष्ये परमात्मज्ञानार्थमित्युक्तं हेतुगर्भं मत्त्वा व्याचष्टे – **कर्मादीति ।।**

ಸೂತ್ರದಲ್ಲಿರುವ 'ಅನ್ಯ' ಎಂಬ ಪದದಿಂದ ಪ್ರಸಕ್ತನಾದ ಜೀವನಿಗಿಂತ ಭಿನ್ನನಾದ ಪರಮಾತ್ಮನನ್ನು ವಿವಕ್ಷಿಸಲಾಗಿದೆ. ಈ 'ಅನ್ಯ' ಎಂಬ ಪದಕ್ಕೆ ಪರಮಾತ್ಮನ ಜ್ಞಾನದಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕರಿಸಬೇಕು. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಪರಮಾತ್ಮಜ್ಞಾನಾರ್ಥಮ್' ಎಂಬುದಾಗಿ ಅನ್ಯಪದದ ಅರ್ಥವನ್ನು ಹೇಳಿರುತ್ತಾರೆ. 'ಪರಮಾತ್ಮಜ್ಞಾನಾರ್ಥಂ' ಎಂಬ ಪದವು ಹೀಗೆ ಹೇತುಗರ್ಭಿತವಾಗಿದೆ ಎಂದು ವಿವಕ್ಷಿಸಿ 'ಕರ್ಮಾದಿ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – भाष्ये 'वदति' इत्युक्तावपि ज्ञानस्येत्युक्तिः दृष्टान्तानुसारात् ।

ಭಾಷ್ಯದಲ್ಲಿ 'ವದತಿ' ಎಂದು ಹೇಳಿದ್ದರೂ ಕೂಡ ಟೀಕೆಯಲ್ಲಿ 'ಕರ್ಮಾದಿಜ್ಞಾನಸ್ಯ' ಎಂದು ಹೇಳಿದ್ದು ದೃಷ್ಟಾಂತಕ್ಕೆ ಅನುಸಾರಿಯಾಗಿ ಎಂದು ತಿಳಿಯಬೇಕು.

**भावदीपः** – अन्यज्ञानेनान्यज्ञानाऽयोगात् फललक्षणमुपेत्य प्रकृतोपयोगितया तात्पर्यमाह – **विज्ञातस्यापीति ।।**

ಒಂದರ ಜ್ಞಾನದಿಂದ ಮತ್ತೊಂದರ ಜ್ಞಾನ ಬರುವುದು ಅಯುಕ್ತವಾಗುತ್ತದೆ. ಆದ್ದರಿಂದ ಕರ್ಮಾದಿಗಳ ಪ್ರಯೋಜನವನ್ನು ಅಂಗೀಕರಿಸಿ ಪ್ರಕೃತಕ್ಕೆ ಉಪಯೋಗವಾಗುವಂತೆ ತಾತ್ಪರ್ಯವನ್ನು ಹೇಳಲು 'ವಿಜ್ಞಾತಸ್ಯಾಪಿ' ಎಂಬ ವಾಕ್ಯವು ಹೊರಟಿವೆ.

**भावदीपः** – फलप्रश्ने बीजमाह – **एतदिति ।।** शौनको ह वै महाशालोऽङ्गिरसं विधिवदुपसन्नः पप्रच्छेति पूर्वत्र श्रवणादाह – **शौनकेति ।।**

ಕರ್ಮದ ಜ್ಞಾನಕ್ಕೆ ಏನು ಪ್ರಯೋಜನ ?ಎಂಬ ಪ್ರಶ್ನೆಗೆ ಕಾರಣವನ್ನು 'ಏತತ್' ಎಂಬ ವಾಕ್ಯವು ಉತ್ತರಿಸುತ್ತಿದೆ. "ಶೌನಕೋ ಹ ವೈ ಮಹಾಶಾಲೋಽಗಿರಸಂ ವಿಧಿವದುಪಸನ್ನಃ ಪಪ್ರಚ್ಛ" ಶೌನಕರು ಅಂಗೀರಸ ಋಷಿಗಳನ್ನು ವಿಧಿಪ್ರಕಾರ ಉಪಸತ್ತಿ ಮಾಡಿ ಪ್ರಶ್ನೆ ಮಾಡಿದರು ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಶ್ರುತವಾಗಿದೆ. ಅದಕ್ಕನುಸಾರಿಯಾಗಿ ಟೀಕೆಯಲ್ಲಿ ಶೌನಕ ಪ್ರಶ್ನೆಯೆಂದು ಹೇಳುತ್ತಿದ್ದಾರೆ.

**भावदीपः** – द्वे विद्ये वेदितव्ये इति ह स्म यद्ब्रह्मविदो वदन्ति । परा चैवापरा च । तत्रापरा । ऋग्वेदो यजुर्वेदः सामवेदोऽथर्ववेदः शिक्षा कल्पो व्याकरणं निरुक्तं

छन्दो ज्योतिषमिति । अथ परा यया तदक्षरमधिगम्यत इत्यस्य वाक्यस्य भावमाह – **सर्वमिति** ।।

"ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್‌ಬ್ರಹ್ಮವಿದೋ ವದಂತಿ । ಪರಾ ಚೈವಾಪರಾ ಚ । ತತ್ರಾಪರಾ । ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ ।" ಎರಡು ಬಗೆಯ ವಿದ್ಯೆಯನ್ನು ತಿಳಿದವನು ಬ್ರಹ್ಮಜ್ಞಾನಿ ಎಂದು ಜ್ಞಾನಿಗಳು ಕರೆಯುತ್ತಾರೆ. ಪರವಿದ್ಯೆ ಹಾಗೂ ಅಪರವಿದ್ಯೆ ಎಂಬುದಾಗಿ ವಿದ್ಯೆಯು ಎರಡು ಬಗೆಯಲ್ಲಿದೆ. ಋಗ್ವೇದ ಯಜುರ್ವೇದ ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು ಇವೆಲ್ಲವೂ ಅಪರವಿದ್ಯೆ ಆಗುತ್ತವೆ. ಈ ವಿದ್ಯೆಗಳೇ ಪರಮಾತ್ಮನನ್ನು ತಿಳಿಸಿದಾಗ ಪರವಿದ್ಯೆ ಎನಿಸಿಕೊಳ್ಳುತ್ತವೆ. ಈ ವಾಕ್ಯದ ಅಭಿಪ್ರಾಯವನ್ನು ಟೀಕೆಯಲ್ಲಿ 'ಸರ್ವಂ' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ.

**भावदीपः – सफलमिति** ।। परीक्ष्य लोकानिति श्रुत्युक्तदिशा परमात्मज्ञानाङ्ग-वैराग्योत्पादनेन विविदिषन्ति यज्ञेन दानेनेत्युक्तदिशाऽन्तःकरणशुद्ध्युत्पादनेन वा 'एष सेतुः' इत्याद्युक्तदिशा ब्रह्मज्ञाने प्रकाररूपविषयार्पणेन वा सफलमित्यर्थः । एवमग्रेऽपि ।

'ಸಫಲಂ' ಎಂಬ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - 'ಪರೀಕ್ಷ್ಯ ಲೋಕಾನ್' ಎಂಬ ಶ್ರುತಿ ಹೇಳುವಂತೆ ವೈರಾಗ್ಯವು ಪರಮಾತ್ಮನ ಜ್ಞಾನಕ್ಕೆ ಅಂಗವಾಗಿದೆ. ಇಂಥ ವೈರಾಗ್ಯವನ್ನು ಹುಟ್ಟಿಸುವ ಮೂಲಕ 'ವಿವಿದಿಷಂತಿ ಯಜ್ಞೇನ ದಾನೇನ' ಎಂಬ ಮಾತಿನಂತೆ ಕರ್ಮಾದಿಗಳು ಅಂತಃಕರಣದ ಶುದ್ಧಿಯನ್ನು ಉಂಟುಮಾಡುತ್ತವೆ. ಅಥವಾ 'ಏಷ ಸೇತುಃ' ಎಂಬ ಶ್ರುತಿ ಹೇಳುವಂತೆ ಬ್ರಹ್ಮಜ್ಞಾನದಲ್ಲಿ ಪ್ರಕಾರರೂಪವಾದ ವಿಷಯವನ್ನು ಅರ್ಪಣೆ ಮಾಡುತ್ತವೆ. ಹೀಗೆ ಕರ್ಮವಾಚಕವಾದ ಶ್ರುತಿಗಳು ಸಾರ್ಥಕವಾಗುತ್ತವೆ. ಮುಂದೆಯೂ ಸಹ ಇದರಂತೆ ತಿಳಿಯಬೇಕು.

**भावदीपः – स आदेश** इति । तच्छब्दपरामर्शं विवृण्वन् **'येनाश्रुतं श्रुतं भवत्यमतं मतमविज्ञातं विज्ञातं भवति'** इति **छान्दोग्यषष्ठस्थपूर्ववाक्यैकदेशं** व्याकुर्वन्नेव भाष्योपात्तवाक्यार्थमाह – **तथा यस्मिन्निति** ।।

'ಸ ಆದೇಶಃ' ಎಂಬಲ್ಲಿರುವ 'ತದ್'ಶಬ್ದದಿಂದ ಪರಾಮರ್ಶ ಮಾಡಿಕೊಳ್ಳಬೇಕೆಂದು ವಿವರಿಸುವವರಾಗಿ "ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ ಭವತಿ" ಛಾಂದೋಗ್ಯ ಉಪನಿಷತ್ತಿನ ಅಧ್ಯಾಯದ ಪೂರ್ವವಾಕ್ಯದ ಏಕದೇಶವನ್ನು ವ್ಯಾಖ್ಯಾನ ಮಾಡುತ್ತಾ ಭಾಷ್ಯದಲ್ಲಿ ಉದಾಹರಿಸಿದ ವಾಕ್ಯದ ಅರ್ಥವನ್ನು 'ತಥಾ ಯಸ್ಮಿನ್' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – ज्ञातफलमिति ।।** घटादिकारणत्वेन मृत्पिण्डज्ञाने एतावन्मृण्मयं भवतीति विशेषज्ञानादपेक्षितमृण्मयसम्पादनसम्भवादित्यर्थः ।।

'ಜ್ಞಾತಫಲಮ್' ಎಂಬುದರ ಅಭಿಪ್ರಾಯ ಹೀಗಿದೆ - ಘಟಕ್ಕೆ ಕಾರಣವಾದ ಮೃತ್‌ಪಿಂಡದ ಜ್ಞಾನದಿಂದ ಮೃಣ್ಮಯವಾದ ಸಕಲವನ್ನು ಹೇಳಿದಂತಾಗುತ್ತದೆ. ಹೀಗೆ ಜ್ಞಾತವಾದ ಘಟಾದಿಗಳೂ ಕೂಡ ಜ್ಞಾನಫಲಕವಾಗುವುದು ಕಂಡಿರುತ್ತದೆ.

**भावदीपः – एवमिति ।।** वैराग्याद्युत्पादनद्वारा सर्वकारणत्वसर्वाधारत्व सर्वसंहर्तृत्वसर्वनियन्तृत्वादिना परमात्मज्ञाने तज्जन्यत्वपरतन्त्रत्वादिविशेष ज्ञानादीश्वरप्रीत्या पुरुषार्थप्राप्तेरिति भावः ।

'ಏವಂ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ವೈರಾಗ್ಯವನ್ನು ಹೊಂದುವ ಮೂಲಕ ಪರಮಾತ್ಮನ ಜ್ಞಾನವನ್ನು ಪಡೆಯಬೇಕು. ಸರ್ವಕಾರಣತ್ವ ಸರ್ವಾಧಾರತ್ವ, ಸರ್ವಸಂಹರ್ತೃತ್ವ, ಸರ್ವನಿಯಂತೃತ್ವ ಇತ್ಯಾದಿ ಗುಣಗಳನ್ನು ಪರಮಾತ್ಮನಲ್ಲಿ ತಿಳಿಯುವುದೇ ಪರಮಾತ್ಮನ ಜ್ಞಾನ. ಇಂಥ ಜ್ಞಾನದಿಂದ ಅವನಿಂದ ಹುಟ್ಟಿರುವ ಪ್ರತಿಯೊಂದು ಪದಾರ್ಥಗಳು ಅವನ ಅಧೀನವಾಗಿವೆ ಎಂಬ ವಿಶೇಷಜ್ಞಾನ ಬರುತ್ತದೆ ಇದರಿಂದ ಈಶ್ವರನಿಗೆ ಪ್ರೀತಿಯಾಗುತ್ತದೆ. ಇಂಥ ಈಶ್ವರನ ಪ್ರೀತಿಯಿಂದ ಪುರುಷಾರ್ಥವು ಪ್ರಾಪ್ತವಾಗುತ್ತದೆ. ಹೀಗೆ ಪರಂಪರೆಯಿಂದ ಕರ್ಮಾದಿಗಳ ಅರಿವು ಬಹಳ ಮುಖ್ಯವಾಗುತ್ತದೆ ಎಂದು ತಿಳಿಯಬೇಕು.

**भावदीपः –** सूत्रभाष्ययोः 'अपिच' इत्यखण्डनिपात इति भावेनानूद्यार्थं वदन्नेवावतारयति – **अपिचेति ।।** एवमित्यनुवादः । अन्येत्यादिव्याख्या ।। **स्पष्टं चेति ।।** तथा च प्रश्नाद्युक्त्यैव पूर्तेरेतदुक्तिर्व्यर्थेति न शङ्क्यमिति भावः ।

ಸೂತ್ರ ಹಾಗೂ ಭಾಷ್ಯಗಳಲ್ಲಿರುವ 'ಅಪಿಚ' ಎಂಬುದು ಅಖಂಡವಾದ ನಿಪಾತ. ಬೇರೆ ಬೇರೆ ಅವ್ಯಯಗಳಲ್ಲ. ಈ ಅಭಿಪ್ರಾಯದಿಂದ 'ಅಪಿಚ' ಎಂಬುದನ್ನು ಅನುವಾದ ಮಾಡಿ ಅದರ ಅರ್ಥವನ್ನು ಹೇಳುತ್ತಾ ಅವತಾರಿಕೆ ನೀಡುತ್ತಿದ್ದಾರೆ. 'ಅಪಿಚ' ಇತ್ಯಾದಿ ಟೀಕಾವಾಕ್ಯದಿಂದ. 'ಏವಂ' ಎಂಬುದು ಸೂತ್ರದಲ್ಲಿರುವ ಪದದ ಅನುವಾದ. 'ಅನ್ಯ' ಇತ್ಯಾದಿಯಾಗಿ ಅದರ ಅರ್ಥವನ್ನು ಹೇಳಿದ್ದಾರೆ. 'ಸ್ಪಷ್ಟಂ ಚ' ಎಂದು ಹೇಳಿದ್ದರಿಂದ ಪ್ರಶ್ನೆಯನ್ನು ಮಾಡಿದ್ದರಿಂದಲೇ ಪೂರ್ಣವಾಗುತ್ತಿರುವಾಗ ಪುನಃ ಮುಂದಿನದ್ದು ವ್ಯರ್ಥವಲ್ಲವೆ ? ಎಂಬ ಆಶಂಕೆಗೆ ಆಸ್ಪದವಿಲ್ಲವೆಂದು ಹೇಳಿದಂತಾಯಿತು.

**भावदीपः –** ऋचो अक्षरे परमे व्योमन् यस्मिन् देवा अधि विश्वे निषेदुः । यस्तन्नवेद किमृचा करिष्यति य इत्तद्विदुस्त इमे समासते इति समग्रमन्त्रार्थमाह – **तदक्षरमिति ।।**

"ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ । ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥" ಎಂಬ ಸಮಗ್ರ ಮಂತ್ರದ ಅರ್ಥವನ್ನು 'ತದಕ್ಷರಂ' ಇತ್ಯಾದಿ ಟೀಕಾವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः – विषयर्चेति** ।। समासान्तोऽनित्यत्वान्नाश्रितः । व्योमन्नित्यस्य व्याप्त इत्यर्थः ।। **अक्षर इति** ।। ज्ञानलक्षणया निमित्तसप्तमीति मत्वा फलितमाह – **तज्ज्ञानार्थमेवेति** ।।

'ವಿಷಯಾರ್ಚಾ' ಎಂಬ ಪದವು "ವಿಷಯರ್ಚೇತಿ । ಸಮಾಸಾಂತೋಽ(??)ನಿತ್ಯತ್ವಾನ್ನಾಶ್ರಿತಃ । ವ್ಯೋಮನ್" ಎಂಬುದರ ಅರ್ಥವನ್ನು 'ವ್ಯಾಪ್ತಃ' ಎಂಬುದರಿಂದ ಹೇಳಿದ್ದಾರೆ. 'ಅಕ್ಷರೇ' ಎಂಬುದು ನಿಮಿತ್ತಾರ್ಥದಲ್ಲಿರುವ ಸಪ್ತಮ್ಯಂತಪದವಾಗಿದೆ. ಹೀಗೆ ತಿಳಿದು ಇದರಿಂದ ದೊರೆಯುವ ಫಲವನ್ನು 'ತಜ್ಞಾನಾರ್ಥಮೇವ' ಎಂಬುದರಿಂದ ಸ್ಪಷ್ಟಮಾಡಿದ್ದಾರೆ.

**भावदीपः** – यस्मिन् देवा इति वाक्यशेषानुरोधादाह – **कर्मादिकमिति** ।। तत्र हेतुत्वेन वाक्यशेषार्थमाह – **तस्यैवेति** ।।४।।

'ಯಸ್ಮಿನ್ ದೇವ' ಎಂಬ ವಾಕ್ಯಶೇಷಕ್ಕೆ ಅನುಸಾರಿಯಾಗಿ 'ಕರ್ಮಾದಿಕಂ' ಎಂಬ ಟೀಕೆಯಿಂದ ಅರ್ಥವನ್ನು ಹೇಳುತ್ತಿದ್ದಾರೆ. ಈ ವಿಷಯದಲ್ಲಿ ಕಾರಣವನ್ನು ನೀಡುತ್ತಾ ವಾಕ್ಯಶೇಷದ ಅರ್ಥವನ್ನು 'ತಸ್ಯೈವ' ಎಂಬ ಮುಂದಿನ ವಾಕ್ಯದಿಂದ ಹೇಳುತ್ತಿದ್ದಾರೆ.

## ಬ್ರಹ್ಮಮೀಮಾಂಸಾಶಾಸ್ತ್ರ

## ವೇದದಲ್ಲಿರುವ ವಾಕ್ಯಗಳ ಸಮನ್ವಯ

**सूत्रम् – ।। वाक्यान्वयात् ।।५।।**

ಸೂತ್ರಾರ್ಥ - ವೇದದಲ್ಲಿರುವ ಪ್ರತ್ಯೇಕ ಪದಗಳೂ ಬೇರೆ ವಸ್ತುವನ್ನು ಪ್ರತಿಪಾದನೆ ಮಾಡಿದರೂ ಸಮಗ್ರ ವಾಕ್ಯವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆ.

## ಸೂತ್ರದೀಪಿಕಾ

**सूत्रदीपिका** – ब्रह्मणि वाक्यसमन्वयमपेक्ष्य वेदेन कर्मादिकमपि प्रतिपादनीयमित्यर्थः ।।५।।

ಸಮಾಕರ್ಷಾಧಿಕರಣ (೧-೪-೫)

ಅರ್ಥ -- ಬ್ರಹ್ಮನಲ್ಲಿ ವಾಕ್ಯಸಮನ್ವಯವನ್ನು ಮಾಡುವುದಕ್ಕಾಗಿ ವಾಕ್ಯದಲ್ಲಿರುವ ಪ್ರತ್ಯೇಕ ಪದಗಳು ಕರ್ಮಾದಿಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಲೇ ಬೇಕು.

## ಬ್ರಹ್ಮಸೂತ್ರಭಾಷ್ಯ

**भाष्यम् – वाक्यस्याप्येवमन्वयो युज्यते, पृथक्पृथक् स्थितस्यापि परमात्मना ।।९।।**

ಅನುವಾದ - ಪ್ರತ್ಯೇಕ ಪ್ರತ್ಯೇಕವಾಗಿ ಕರ್ಮದೇವತಾ ವಾಚಕಗಳಾಗಿ ಇರುವವುಗಳೇ ಆಗಿದ್ದರೂ ವೇದವಾಕ್ಯ ಸಮೂಹಕ್ಕೆ ಪರಮಾತ್ಮನಿಂದ ಸಂಬಂಧವು ಕೂಡುತ್ತದೆ. ಮತ್ತು ಹಿಂದೆ ತಿಳಿಸಿದಂತೆ ದೇವತಾಕರ್ಮಬೋಧಕತ್ವವು ಯುಕ್ತವಾಗುತ್ತದೆ.

ಪ್ರತಿಪದಾರ್ಥ -- ಪರಮಾತ್ಮನ ಜ್ಞಾನಕ್ಕೋಸ್ಕರ ವೇದವು ಕರ್ಮಾದಿಗಳನ್ನು ಹೇಳಬೇಕಾಗಿಲ್ಲ. ಕೇವಲ ಪರಮಾತ್ಮನನ್ನು ಹೇಳಿದರೆ ಸಾಕು. ಕರ್ಮಾದಿಗಳ ಜ್ಞಾನವೂ ಕೂಡ ಬಂದಂತಾಗುತ್ತದೆ. ವ್ಯುತ್ಪತ್ತಿಯೇ ಕೂಡುವುದಿಲ್ಲವೆಂಬ ದೋಷಕ್ಕೆ ಅವಕಾಶವಿಲ್ಲ. ಜ್ಯೋತಿಷ್ಟೋಮಾದಿ ಶಬ್ದಗಳು ವಿಷ್ಣುವಿನಲ್ಲಿ ರೂಢವೇ ಆಗಿಲ್ಲ. ಪದದ ಅವಯವಗಳಿಗೆ ಅನ್ಯಪರತ್ವವನ್ನು ಒಪ್ಪದ ಕಾರಣ ಯೋಗಾರ್ಥವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡಲು ಯಾವುದೇ ಪ್ರಯೋಜನವಿಲ್ಲದ ಕಾರಣ, ಸಮಾಕರ್ಷ ಮಾಡುವ ಅವಶ್ಯಕತೆಯಿಲ್ಲ. ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸುತ್ತಿದ್ದಾರೆ. –

ಪೃಥಕ್ ಪೃಥಕ್ = ಪ್ರತ್ಯೇಕ ಪ್ರತ್ಯೇಕವಾಗಿ ಕರ್ಮದೇವತಾವಾಚಕಗಳಾಗಿ, ಸ್ಥಿತಸ್ಯಾಪಿ = ಇರುವವುಗಳೇ ಆಗಿದ್ದರೂ, ವಾಕ್ಯಸ್ಯ = ವೇದವಾಕ್ಯ ಸಮೂಹಕ್ಕೆ, ಪರಮಾತ್ಮನಾ = ಪರಮಾತ್ಮನಿಂದ, ಅನ್ವಯಃ = ಸಂಬಂಧವು, ಅಪಿ = ಮತ್ತು, ಏವಂ = ಹಿಂದೆ ತಿಳಿಸಿದಂತೆ ದೇವತಾ ಕರ್ಮ ಬೋಧಕತ್ವವೂ ಕೂಡ, ಯುಜ್ಯತೇ = ಯುಕ್ತವಾಗುತ್ತದೆ.

## ತತ್ವಪ್ರಕಾಶಿಕಾ

**न परमात्मज्ञानार्थं कर्मादिकं वेदेन वक्तव्यम् । अन्यदनुक्त्वा परमात्ममात्रकथनेऽपि तज्ज्ञानसम्भवात् ।**

ಪರಮಾತ್ಮನ ಜ್ಞಾನಕ್ಕೋಸ್ಕರ ಕರ್ಮಾದಿಗಳನ್ನು ವೇದವು ಪ್ರತಿಪಾದನೆ ಮಾಡುವ ಅವಶ್ಯಕತೆಯಿಲ್ಲ. ಏಕೆಂದರೆ ಕರ್ಮಾದಿಗಳನ್ನು ಪ್ರತಿಪಾದನೆ ಮಾಡದಿದ್ದರೂ, ನೇರವಾಗಿ ಪರಮಾತ್ಮನನ್ನು ಪ್ರತಿಪಾದನೆ ಮಾಡಿದರೂ ಸಾಕು. ಪರಮಾತ್ಮನ ಜ್ಞಾನವನ್ನು ತಂದುಕೊಟ್ಟಂತಾಗುತ್ತದೆ.

**तत्वप्रकाशिका – नच व्युत्पत्यनुपपत्तिः । खण्डपदानामन्यवाचकत्वेन तदुपपत्तेः ।**

ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡದಿದ್ದರೆ ಶಬ್ದಗಳಿಗೆ ವ್ಯುತ್ಪತ್ತಿಯೇ ಕೂಡುವುದಿಲ್ಲ ಎಂದು ಶಂಕಿಸಬಾರದು. ಪದಗಳ ಅವಯವಗಳಿಗೆ ಲೌಕಿಕಾರ್ಥವನ್ನು ಒಪ್ಪಬೇಕು.

**तत्वप्रकाशिका – ततोऽन्यकथने प्रयोजनाभावान्नतत्र समाकर्षः, इत्याशङ्कां परिहरत्सूत्रमुपन्यस्य व्याचष्टे – वाक्येति ।।**

ಆದ್ದರಿಂದ ವೇದಗಳು ಪರಮಾತ್ಮನನ್ನು ಬಿಟ್ಟು ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವುದಾದರೆ, ಯಾವುದೇ ಪ್ರಯೋಜನವಿರುವುದಿಲ್ಲ. ಆದ್ದರಿಂದ ಪರಮಾತ್ಮ ಪ್ರತಿಪಾದಕವಾದ ಶಬ್ದಗಳನ್ನು ಲೌಕಿಕಾರ್ಥಗಳಲ್ಲಿ ಸಮಾಕರ್ಷ ಮಾಡುವುದು ತಪ್ಪಾಗುತ್ತದಲ್ಲವೇ?

ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. ಆ ಸೂತ್ರವನ್ನು ಶ್ರೀಮದಾಚಾರ್ಯರು 'ವಾಕ್ಯಾನ್ವಯಾತ್' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – 'सत्यमन्यावचनेऽपि भगवज्ज्ञानं भवति' इति । तथाप्यन्यावचने पदान्वय एव युज्यते, न वाक्यान्वयः ।**

ಹೌದು. ಲೌಕಿಕಪದಾರ್ಥಗಳನ್ನು ಪ್ರತಿಪಾದನೆ ಮಾಡದಿದ್ದರೂ ಭಗವಂತನ ಜ್ಞಾನವನ್ನು ಪಡೆಯಬಹುದು. ಆದರೆ ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡದಿದ್ದರೆ, ಪರಮಾತ್ಮನಲ್ಲಿ ಪದಗಳ ಸಮನ್ವಯವನ್ನಷ್ಟೇ ಮಾಡಿದಂತಾಗುತ್ತದೆ. ವಾಕ್ಯಗಳ ಸಮನ್ವಯವನ್ನು ಮಾಡಿದಂತಾಗುವುದಿಲ್ಲ.

**तत्वप्रकाशिका – एवमन्यस्यापि वाच्यस्याभ्युपगमे तु वाक्यस्यापि परमात्मनाऽन्वयो युज्यते।**

ಅದೇ ರೀತಿಯಾಗಿ ಪದಗಳಿಂದ ಬೇರೆ ಲೌಕಿಕ ಪದಾರ್ಥಗಳು ಪ್ರತಿಪಾದ್ಯವಾಗುತ್ತವೆಂದು ಒಪ್ಪಿದಾಗ, ವಾಕ್ಯಗಳ ಸಮನ್ವಯವು ಪರಮಾತ್ಮನಲ್ಲಿ ಸಿದ್ಧವಾಗುತ್ತದೆ. (ಪದಸಮನ್ವಯ ಮ..ಡಲು ಪದಗಳ ಅವಯವಗಳು ಅನ್ಯಾರ್ಥಗಳೆಂದು ಒಪ್ಪಬೇಕು. ವಾಕ್ಯಸಮನ್ವಯ ಮಾಡಲು ವಾಕ್ಯದ ಅವಯವಗಳಾದ ಪದಗಳು ಅನ್ಯಪರವೆಂದು ಒಪ್ಪಬೇಕು.)

**तत्वप्रकाशिका – वाक्यान्वयो नाम पृथक् पृथगर्थेषु वाचकतया स्थितवाक्यस्याऽन्ततो भगवत्परत्वम् । अतो वाक्यान्वयसिद्धयर्थमन्यवचनं युक्तमेव।**

'ವಾಕ್ಯದ ಸಮನ್ವಯ' ಎಂದರೆ ಬೇರೆ ಬೇರೆ ಅರ್ಥಗಳಲ್ಲಿ ವಾಚಕತ್ವೇನ ಸಿದ್ಧವಾಗಿರುವ ವಾಕ್ಯಕ್ಕೆ ಅಂತಿಮವಾಗಿ ಭಗವಂತನಲ್ಲಿ ಪ್ರತಿಪಾದನೆ ಮಾಡುವುದು ಎಂದರ್ಥ. ಆದ್ದರಿಂದ ವಾಕ್ಯಾನ್ವಯದ ಸಿದ್ಧಿಗೋಸ್ಕರ ಅನ್ಯಪ್ರತಿಪಾದಕತ್ವವನ್ನು ಒಪ್ಪಲೇ ಬೇಕು.

**तत्वप्रकाशिका – नच वाच्यं परमात्मज्ञानस्यैव प्रयोजनत्वात्, किं वाक्यान्वयेनापि ? इति ।**

ಪರಮಾತ್ಮನ ಜ್ಞಾನವೇ ಮುಖ್ಯಪ್ರಯೋಜನವಾಗುವುದಾದರೆ ವಾಕ್ಯಾನ್ವಯದಿಂದ ಏನು ಪ್ರಯೋಜನ? ಎಂದು ಪ್ರಶ್ನಿಸಬಾರದು.

**तत्वप्रकाशिका – विना वाक्यान्वयमुत्तमाधिकारिव्यतिरिक्तानां ज्ञानस्यैवासम्भवेन जिज्ञासायां वैमुख्यप्रसङ्गात् । 'कश्छन्दसां योगमावेद धीरः' इति श्रुतेरिति भावः ।।**

ಉತ್ತಮಾಧಿಕಾರಿಗಳಿಗಿಂತ ಭಿನ್ನರಾದ ಮಧ್ಯಮಾಧಿಕಾರಿಗಳಿಗೆ ಪರಮಾತ್ಮನ ಜ್ಞಾನವು ಸುಲಭವಾಗಿ ಬರುವುದಿಲ್ಲ. ಯಾವಾಗ ವಾಕ್ಯವು ಭಗವಂತನನ್ನೇ ಪ್ರತಿಪಾದನೆ ಮಾಡುತ್ತದೆಂದು ಮಧ್ಯಮಾಧಿ-ಕಾರಿಗಳಿಗೆ ತಿಳಿಯುತ್ತದೋ, ಆವಾಗ ಮಾತ್ರ ಜಿಜ್ಞಾಸೆಯಲ್ಲಿ ತೊಡಗುತ್ತಾನೆ. ಇಲ್ಲದಿದ್ದರೆ ಬ್ರಹ್ಮಜಿಜ್ಞಾಸೆಯಿಂದ ವಿಮುಖರಾಗುವ ಪ್ರಸಂಗವಿದೆ. ಏಕೆಂದರೆ 'ಕಶ್ಛಂದಸಾಂ ಯೋಗಮಾವೇದ ಧೀರ' ಚತುರ್ಮುಖನನ್ನು ಬಿಟ್ಟು ಯಾರು ತಾನೆ ಪದಗಳ ಯೋಗವೃತ್ತಿಯನ್ನು ಪರಬ್ರಹ್ಮನಲ್ಲಿ ತಿಳಿಯುತ್ತಾರೆ ? ಎಂದು ಪ್ರಶ್ನಿಸಿ, 'ಕಶ್ಛಂದಸಾಂ ಯೋಗಮಾವೇದ ಧೀರ' ಚತುರ್ಮುಖನೊಬ್ಬನೇ ಪದಗಳ ವೃತ್ತಿಯನ್ನು ಶ್ರೀಹರಿಯಲ್ಲಿ ತಿಳಿಯುತ್ತಾನೆ ಎಂದು ಉತ್ತರಿಸಿದೆ.

## ಭಾವದೀಪ

**परमात्ममात्रेति** ।। पदसमन्वयविधयेत्यर्थः ।। **खण्डेति** ।। समुदायावयवपदाना-मित्यर्थः ।। परिष्कारपूर्वं वाक्यस्येति भाष्यं व्याचष्टे – **सत्यमिति** ।। एवमित्यनुवादः। अन्यस्यापीत्यादिव्याख्या ।।

ಟೀಕೆಯಲ್ಲಿ 'ಪರಮಾತ್ಮಮಾತ್ರ ಕಥನೇऽಪಿ' ಎಂದು ಹೇಳಿದ್ದಾರೆ. ಶಬ್ದಗಳು ಕರ್ಮಾದಿಗಳನ್ನು ಪ್ರತಿಪಾದನೆ ಮಾಡದಿದ್ದರೂ ನೇರವಾಗಿ ಪರಮಾತ್ಮನನ್ನಷ್ಟೇ ಪ್ರತಿಪಾದನೆ ಮಾಡಿದರೂ ಸಾಕು. ಪದಸಮನ್ವಯದಿಂದಲೇ ಪರಮಾತ್ಮನ ಜ್ಞಾನವು ಸಿದ್ಧವಾಗುತ್ತದೆ. ಎಂದರ್ಥ 'ಖಂಡಪದಾನಾಮ್'

ಎಂಬುದಕ್ಕೆ ಸಮುದಾಯದ ಅವಯವರೂಪವಾದ ಪದಗಳು ಎಂದರ್ಥ. ಪರಿಷ್ಕಾರಪೂರ್ವಕವಾಗಿ 'ವಾಕ್ಯಸ್ಯ' ಇತ್ಯಾದಿ ಭಾಷ್ಯವನ್ನು 'ಸತ್ಯಮಿತ್ಯಾದಿ' ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಏವಂ' ಎಂಬುದು ಭಾಷ್ಯದ ಅನುವಾದ. 'ಅನ್ಯಸ್ಯಾಪಿ' ಇತ್ಯಾದಿಯಾಗಿ ಅದನ್ನು ವ್ಯಾಖ್ಯಾನಿಸಿದ್ದಾರೆ.

**भावदीपः – पृथक् पृथगिति ।।** विस्तृतश्चाऽयं तत्त्वनिर्णयटीकायां 'कार्यान्विते व्युत्पत्तिः' इति प्राभाकरमतखण्डनप्रस्तावे 'इयं माता' 'अयं पिता' 'सुरूपोऽसि' इत्येतद्वाक्यव्याख्यावसरे ।

ಟೀಕೆಯಲ್ಲಿ 'ಪೃಥಕ್‌ಪೃಥಕ್' ಇತ್ಯಾದಿಯಾದ ವಾಕ್ಯದಲ್ಲಿ ಹೇಳಿದ ವಿಷಯವು ತತ್ವನಿರ್ಣಯದ ವ್ಯಾಖ್ಯಾನ ಸಂದರ್ಭದಲ್ಲಿ ವಿಸ್ತಾರವಾಗಿ ನಿರೂಪಣೆ ಮಾಡಿದ್ದಾರೆ. ಕಾರ್ಯಾನ್ವಿತವಾದ ಅರ್ಥದಲ್ಲಿ ಶಬ್ದಗಳಿಗೆ ವ್ಯುತ್ಪತ್ತಿ ಇದೆ ಎಂಬುದಾಗಿ ಪ್ರಾಭಾಕರಮತವನ್ನು ಖಂಡನೆ ಮಾಡುವಾಗ 'ಇಯಂ ಮಾತಾ' 'ಅಯಂ ಪಿತಾ' 'ಸುರೂಪೋಽಸಿ' ಇತ್ಯಾದಿ ವಾಕ್ಯಗಳಿಗೂ ಕೂಡ ಪ್ರಾಮಾಣ್ಯವಿರುತ್ತದೆ ಎಂದು ವ್ಯಾಖ್ಯಾನ ಮಾಡುವಾಗ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ.

**भावदीपः –** 'वाक्यान्वयात्' इति सूत्रे निमित्तपञ्चमी जगद्वाचित्वेऽपीति वर्तते इति मत्वा सूत्रार्थं निगमयति – **अत इति ।।**

'ವಾಕ್ಯಾನ್ವಯಾತ್' ಎಂಬ ಸೂತ್ರದಲ್ಲಿರುವ ಪಂಚಮೀವಿಭಕ್ತಿಯು ನಿಮಿತ್ತಾರ್ಥದಲ್ಲಿದೆ. 'ಜಗದ್ವಾಚಿತ್ವೇಽಪಿ' ಎಂಬುದನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಈ ವಿವಕ್ಷೆಯಿಂದ ಸೂತ್ರದ ಅರ್ಥವನ್ನು 'ಅತಃ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ.

**भावदीपः –** अन्यवचन एव वाक्यान्वयसम्भवादित्यर्थः । ज्योतिर्नये अत्र चोक्तयोः पदवाक्यसमन्वययोरधिकारिभेदेन सार्थक्यं विवक्षुः । अन्वयः सर्वशब्दानामशक्यो ज्ञातुमञ्जसा । इति यल्लोकवैमुख्यं जैमिन्यादिमतं वदन् । विद्याधिराजो भगवानपाचक्रे स्वयं प्रभुरित्यनुभाष्योक्तमत्र संयोजयितुं शङ्कामाह – **नचेति ।।**

'ಅತಃ' ಎಂಬ ಪದಕ್ಕೆ ಬೇರೆ ಪದಾರ್ಥಗಳಲ್ಲಿ ಶಬ್ದವೃತ್ತಿಯನ್ನು ಒಪ್ಪಿದರೆ ಮಾತ್ರ ವಾಕ್ಯಾನ್ವಯವು ಸಿದ್ಧವಾಗುವುದರಿಂದ ಎಂದರ್ಥ. ಜ್ಯೋತಿರಧಿಕರಣದಲ್ಲಿ ಇಲ್ಲಿ ಹೇಳಲ್ಪಟ್ಟ ಪದಸಮನ್ವಯ ಮತ್ತು ವಾಕ್ಯಾನ್ವಯಗಳು ಅಧಿಕಾರಿಭೇದದಿಂದ ಸಾರ್ಥಕವಾಗುತ್ತವೆ ಎಂದು ಪ್ರತಿಪಾದನೆ ಮಾಡಿದ್ದಾರೆ.

ಅನ್ವಯಃ ಸರ್ವಶಬ್ದಾನಾಮಶಕ್ಯೋ ಜ್ಞಾತುಮಂಜಸಾ ।
ಇತಿ ಯಲ್ಲೋಕವೈಮುಖ್ಯಂ ಜೈಮಿನ್ಯಾದಿಮತಂ ವದನ್ ।
ವಿದ್ಯಾಧಿರಾಜೋ ಭಗವಾನಪಾಚಕ್ರೇ ಸ್ವಯಂ ಪ್ರಭುಃ ।।
ಸಮಾಕರ್ಷಾಧಿಕರಣ (೧-೪-೫)

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ ವಿಷಯವನ್ನು ಪ್ರಕೃತ ಯೋಜನೆ ಮಾಡಲು ಆಶಂಕಿಸುತ್ತಿದ್ದಾರೆ. 'ನಚ' ಇತ್ಯಾದಿ ವಾಕ್ಯದಿಂದ.

**भावदीपः – हरेर्जगद्धेतुत्वसर्वशब्दवाच्यत्वादेः तथा श्रवणादिविधेरुत्तमाधिकारिस्वरूपादेश्च असिद्धिप्रसङ्गादित्यपि ध्येयम् । पदसमन्वयोऽसर्वाधिकारिक इत्यत्र श्रुतिमाह – क इति ।।**

ಶ್ರೀಹರಿಗೆ ಜಗತ್ಕಾರಣತ್ವ ಸರ್ವಶಬ್ದವಾಚ್ಯತ್ವಗಳು ಅದರಂತೆ ಶ್ರವಣಾದಿ ವಿಧಿಗಳಿಗೆ ಉತ್ತಮಾಧಿಕಾರಿ ಸ್ವರೂಪವೂ ಅಸಿದ್ಧವಾಗಬೇಕಾದೀತು ಎಂಬುದನ್ನು ಇಲ್ಲಿ ವಿವಕ್ಷಿಸಬೇಕು. ಪದಸಮನ್ವಯವು ಸರ್ವಾಧಿಕಾರಕವಲ್ಲ ಎಂಬ ವಿಷಯದಲ್ಲಿ ಶ್ರುತಿಯನ್ನು 'ಕಃ' ಎಂಬುದಾಗಿ ಉಲ್ಲೇಖ ಮಾಡುತ್ತಿದ್ದಾರೆ.

**भावदीपः – 'अङ्गीकृतेऽपि नैवास्ति दोषो वाक्यसमन्वये । तदर्थत्वेन कर्मादेः सम्भवादल्पबुद्धये कश्छन्दसां योगमिति श्रुतेर्योगार्थत्ववित् । ब्रह्मैको नैव चान्योऽस्ति क इत्यस्योभयार्थता' इत्यनुभाष्योक्तेरिति भावः ।।५।।**

ಅಂಗೀಕೃತೇऽಪಿ ನೈವಾಸ್ತಿ ದೋಷೋ ವಾಕ್ಯಸಮನ್ವಯೇ ।
ತದರ್ಥತ್ವೇನ ಕರ್ಮಾದೇಃ ಸಂಭವಾದಲ್ಪಬುದ್ಧಯೇ
ಕಶ್ಛಂದಸಾಂ ಯೋಗಮಿತಿ ಶ್ರುತೇರ್ಯೋಗಾರ್ಥತ್ವವಿತ್ ।
ಬ್ರಹ್ಮೈಕೋ ನೈವ ಚಾನ್ಯೋऽಸ್ತಿ ಕ ಇತ್ಯಸ್ಯೋಭಯಾರ್ಥತಾ ॥

ವಾಕ್ಯಸಮನ್ವಯವನ್ನು ಅಂಗೀಕಾರ ಮಾಡಿದರೆ ಯಾವುದೇ ದೋಷವಿರುವುದಿಲ್ಲ. ಕರ್ಮಾದಿಗಳು ವಾಕ್ಯದ ಅರ್ಥವಾಗಿವೆಂದು ಅಲ್ಪಬುದ್ಧಿಗಳು ತಿಳಿಯುತ್ತಾರೆ. 'ಕಶ್ಛಂದಸಾಂ ಯೋಗಂ' ಎಂಬ ಶ್ರುತಿಯ ಆಧಾರದಿಂದ ಪ್ರತಿಯೊಂದು ಪದಗಳ ಯೋಗಾರ್ಥವನ್ನು ತಿಳಿಯಲು ಬ್ರಹ್ಮದೇವರು ಮಾತ್ರ ಸಮರ್ಥರು. ಉಳಿದವರಿಗೆ ಸಾಮರ್ಥ್ಯವಿಲ್ಲ. ಈ ಶ್ರುತಿಯಲ್ಲಿರುವ 'ಕಃ' ಎಂಬ ಪದಕ್ಕೆ ಎರಡು ಅರ್ಥವನ್ನು ಹೇಳಬೇಕು.

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು ವಿವಕ್ಷಿಸಿ ಪ್ರಕೃತ ಟೀಕಾವಾಕ್ಯವು ಹೊರಟಿದೆ ಎಂದು ಭಾವಿಸಬೇಕು.

## ಬ್ರಹ್ಮಮೀಮಾಂಸಾಶಾಸ್ತ್ರ

### ಆಶ್ಮರಥ್ಯರ ಪ್ರಕಾರ ವೇದ ಸಮನ್ವಯ

**सूत्रम् — ।। प्रतिज्ञासिद्धेर्लिङ्गमाश्मरथ्यः ।।६।।**

ಸೂತ್ರಾರ್ಥ - 'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯ:' ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ತೈತ್ತಿರೀಯೋಪನಿಷತ್ತು ಹೇಳುತ್ತಿದೆ. ಈ ಪ್ರತಿಜ್ಞೆಯ ಸಿದ್ಧಿಗೋಸ್ಕರ ಕರ್ಮಾದಿಗಳನ್ನು ಪ್ರತಿಪಾದಿಸುವ ಪದಗಳಿಗೆ ಅನ್ಯಾರ್ಥವನ್ನು ಹೇಳಬೇಕೆನ್ನುತ್ತಾರೆ ಆಶ್ಮರಥ್ಯರು.

### ಸೂತ್ರದೀಪಿಕಾ

**सूत्रदीपिका —** वेदेन कर्मादिप्रतिपादनम् । यतः **प्रतिज्ञासिद्धेः** । **लिङ्गं** ज्ञानमेव मोक्षहेतुः नान्यदित्येवं रूपायाः 'नान्यः पन्थाः' इति प्रतिज्ञातार्थसिद्धेः साधकम् । अतस्तदुपयोगित्वेन तत्प्रतिपादनं युक्तमित्या**श्मरथ्याचार्यो** मन्यत इत्यर्थः ।।६।।

ಅರ್ಥ -- ವೇದದಿಂದ ಕರ್ಮಾದಿಗಳಸ್ನು ಪ್ರತಿಪಾದನೆ ಮಾಡಲಾಗಿದೆ. ಏಕೆಂದರೆ ಪ್ರತಿಜ್ಞಾಸಿದ್ಧೇಃ = ಜ್ಞಾನವೇ ಮೋಕ್ಷಕ್ಕೆ ಕಾರಣ ಹೊರತು, ಬೇರೆಯದಲ್ಲ ಎಂಬುದಾಗಿ 'ನಾನ್ಯಃಪಂಥಾ' ಎಂಬ ತೈತ್ತಿರೀಯೋಪನಿಷತ್ತು ಪ್ರತಿಜ್ಞೆ ಮಾಡುತ್ತಿದೆ. ಈ ಪ್ರತಿಜ್ಞಾರ್ಥದ ಸಿದ್ಧಿಗೋಸ್ಕರ ಕರ್ಮಾದಿಗಳನ್ನು ಪದಗಳು ಪ್ರತಿಪಾದನೆ ಮಾಡಬೇಕು. ಆದ್ದರಿಂದ 'ನಾನ್ಯಃಪಂಥಾ' ಎಂಬ ಪ್ರತಿಜ್ಞೆಯ ಉಪಯೋಗಕ್ಕಾಗಿ ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವುದು ಯುಕ್ತವೇ ಆಗುತ್ತದೆ. ಇತಿ = ಹೀಗೆ, ಆಶ್ಮರಥ್ಯಃ = ಆಶ್ಮರಥ್ಯಾಚಾರ್ಯರು ತಿಳಿಯುತ್ತಾರೆ.

### ಬ್ರಹ್ಮಸೂತ್ರಭಾಷ್ಯ

**भाष्यम् — 'नान्यः पन्था अयनाय वियते' (तै. आ. ३-१२-७) इति प्रतिज्ञासिद्धेर्लिङ्गत्वेन कर्मादिकमुच्यत इत्याश्मरथ्यः । यस्मादेवमनित्यफलमन्यत् तस्मान्नान्यः पन्था इति ।।६।।**

ಅನುವಾದ - ಮೋಕ್ಷಕ್ಕೆ ಬ್ರಹ್ಮಜ್ಞಾನದ ಹೊರತು ಬೇರೆ ಜ್ಞಾನವಿಲ್ಲ ಎಂಬ ಪ್ರತಿಜ್ಞಾವಾಕ್ಯದ ಸಾರ್ಥಕತೆಗಾಗಿ ವೇದದಲ್ಲಿ ಕರ್ಮಾದಿಗಳನ್ನು ಹೇಳಿದ್ದಾರೆ. ಇದು ಆಶ್ಮರಥ್ಯಾಚಾರ್ಯರ ಮತ. ಯಾವ ಕಾರಣದಿಂದ ಜ್ಞಾನಾತಿರಿಕ್ತವಾದ ಕರ್ಮಾದಿಗಳು ಹಿಂದೆ ಹೇಳಿದಂತೆ ಅಶಾಶ್ವತ

ಫಲವುಳ್ಳವುಗಳೋ, ಆ ಕಾರಣದಿಂದ ಮೋಕ್ಷಕ್ಕೆ ಬೇರೆ ದಾರಿ ಇಲ್ಲವೆಂದು ಅಭಿಪ್ರಾಯ. (ವೇದಗಳು ದೇವತಾಕರ್ಮಗಳನ್ನು ಹೇಳಿ, ಅವುಗಳ ಜ್ಞಾನದಿಂದ ದೊರೆಯುವ ಫಲವು ಅನಿತ್ಯ. ಬ್ರಹ್ಮಜ್ಞಾನದಿಂದ ದೊರೆಯುವ ಫಲವು ನಿತ್ಯ. ಹೀಗೆ ಪ್ರತಿಜ್ಞಾವಾಕ್ಯದಿಂದ ತಿಳಿಯುತ್ತದೆ. ಈ ಅರ್ಥದಲ್ಲಿ ವೇದಗಳು ಮುಖ್ಯಾಮುಖ್ಯವೆಂಬ ದ್ವಂದ್ವಾರ್ಥವುಳ್ಳವುಗಳು ಎಂದು ಆಶ್ಮರಥ್ಯರ ಅಭಿಪ್ರಾಯ.)

ಪ್ರತಿಪದಾರ್ಥ -- ಕರ್ಮಾದಿಗಳನ್ನು ವೇದದಲ್ಲಿ ಹೇಳಿರುವುದು ಪರಮಾತ್ಮಜ್ಞಾನಕ್ಕೋಸ್ಕರ ಎಂದು ಸಮರ್ಥಿಸಿದಿರಿ. ಇದನ್ನು ಯಾವ ಪ್ರಕಾರದಿಂದ ತಿಳಿಯಬೇಕು ಎಂಬ ಆಕಾಂಕ್ಷೆಗೆ ಉತ್ತರಿಸಲು ಸೂತ್ರವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡುತ್ತಿದ್ದಾರೆ. –

ಅಯನಾಯ = ಮೋಕ್ಷಕ್ಕೆ, ಅನ್ಯಃ ಪಂಥಾ = ಬ್ರಹ್ಮಜ್ಞಾನವನ್ನು ಬಿಟ್ಟು ಬೇರೆ ಮಾರ್ಗವು, ನ ವಿದ್ಯತೇ = ಇರುವುದಿಲ್ಲ. ಇತಿ = ಹೀಗೆ, ಪ್ರತಿಜ್ಞಾಸಿದ್ಧೇಃ = ಪ್ರತಿಜ್ಞಾವಾಕ್ಯದ ಸಾರ್ಥಕತೆಗಾಗಿ, ಲಿಂಗತ್ವೇನ = ಜ್ಞಾಪಕಗಳಾಗಿ, ಕರ್ಮಾದಿಕಂ = ಕರ್ಮದೇವತಾದಿಗಳು, ಉಚ್ಯತೇ = ಹೇಳಲ್ಪಟ್ಟವೆ, ಇತಿ = ಹೀಗೆ, ಆಶ್ಮರಥ್ಯಃ = ಆಶ್ಮರಥ್ಯರು ಹೇಳುತ್ತಾರೆ. ಯಸ್ಮಾತ್ = ಯಾವ ಕಾರಣದಿಂದ, ಅನ್ಯತ್ = ಜ್ಞಾನಾತಿರಿಕ್ತವಾದ ಕರ್ಮಗಳು, ಏವಂ = ಹಿಂದೆ ಹೇಳಿದಂತೆ, ಅನಿತ್ಯ ಫಲಂ = ಅಶಾಶ್ವತ ಫಲದಾಯಕವೋ, ತಸ್ಮಾತ್ = ಆ ಕಾರಣದಿಂದ, ನಾನ್ಯಃ ಪಂಥಾ = ಮೋಕ್ಷಕ್ಕೆ ಬೇರೆ ದಾರಿ ಇರುವುದಿಲ್ಲ. ಇತಿ = ಹೀಗೆ ಸಿದ್ಧವಾಗುತ್ತದೆ.

## ತತ್ವಪ್ರಕಾಶಿಕಾ

**यदन्यवचनस्यापि परमात्मज्ञानार्थत्वमुक्तं तत् केन प्रकारेण? इत्याकांक्षायां तत्प्रदर्शनाय सूत्रमुपन्यस्य व्याचष्टे – प्रतिज्ञेति ।।**

ಪರಮಾತ್ಮನ ಜ್ಞಾನಕ್ಕೋಸ್ಕರ ಶಬ್ದಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡಲೇ ಬೇಕು ಎಂದು ಈ ಹಿಂದೆ ಸಮರ್ಥಿಸಲಾಯಿತು. ಇದನ್ನು ಯಾವ ಪ್ರಕಾರದಿಂದ ತಿಳಿಯಬೇಕು ? ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ, ಆ ಪ್ರಕಾರವನ್ನು ಸ್ಪಷ್ಟಪಡಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪ್ರತಿಜ್ಞಾ' ಇತ್ಯಾದಿಯಾಗಿ.

**तत्वप्रकाशिका – 'ज्ञानमेव मोक्षसाधनं नान्यत्' इति प्रतिज्ञाते, कुतो ज्ञानमेव मुक्तिहेतुः? इत्याकांक्षायां तत् प्रतिज्ञासिद्ध्यर्थं हेतुत्वेन सविस्तरं श्रुत्या सपरिकरं कर्माद्युच्यते ।**

ಜ್ಞಾನವೇ ಮೋಕ್ಷಕ್ಕೆ ಸಾಧನವಾಗಿದೆ ಹೊರತು, ಬೇರೆ ಯಾವುದೂ ಅಲ್ಲ. ಹೀಗೆ ಪ್ರತಿಜ್ಞೆಯನ್ನು ಮಾಡಲಾಯಿತು. ಇದರ ಮೇಲೆ ಜ್ಞಾನವೇ ಏಕೆ ಮೋಕ್ಷಕ್ಕೆ ಕಾರಣವಾಗಬೇಕು ? ಎಂಬ ಆಕಾಂಕ್ಷೆಯು

ಪ್ರಾಪ್ತವಾದರೆ ಪ್ರತಿಜ್ಞೆಯ ಸಿದ್ಧಿಗೋಸ್ಕರ ಕರ್ಮಾದಿಗಳನ್ನು ಕಾರಣವನ್ನಾಗಿ ಸಮರ್ಥಿಸುತ್ತಾರೆ. ಮತ್ತು ವಿಸ್ತಾರವಾದ ಶ್ರುತಿಯಿಂದ ಫಲ ಮತ್ತು ಇತಿಕರ್ತವ್ಯತಾಗಳಿಂದ ಕೂಡಿದ ಫಲಗಳನ್ನು ಸಮರ್ಥಿಸುತ್ತಾರೆ.

**तत्वप्रकाशिका – 'अतो ज्ञानमवश्यमापाद्यम्' इत्येवमाकारेण कर्मादिवचनस्य ज्ञानोपयोगित्वम्, इत्याश्मरथ्याचार्यो मन्यत इति भावः ।**

ಆದ್ದರಿಂದ ಕರ್ಮವು ಮೋಕ್ಷಜ್ಞಾನಕ್ಕೆ ಅತ್ಯಂತ ಆವಶ್ಯಕವಾಗಿರುತ್ತದೆ. ಹೀಗೆ ಜ್ಞಾನವು ಮೋಕ್ಷಕ್ಕೆ ಸಾಧನವಾಗಿರುವುದರಿಂದ, ಕರ್ಮಾದಿಗಳನ್ನು ಹೇಳಿರುವುದು ಜ್ಞಾನಕ್ಕೆ ಉಪಯೋಗವಾಗಿರುತ್ತದೆ ಎಂದು ಆಶ್ಮರಥ್ಯಾಚಾರ್ಯರ ಅಭಿಪ್ರಾಯವಾಗಿದೆ ಎಂದು ತಿಳಿಯಬೇಕು.

**तत्वप्रकाशिका – कर्मादिवचनं कथमुक्तप्रतिज्ञायां हेतुः ? इत्यत आह – यस्मादिति ।।**

ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವುದರಿಂದ 'ನಾನ್ಯಃಪಂಥಾ' ಎಂಬ ಪ್ರತಿಜ್ಞೆಯು ಹೇಗೆ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಯು ಪ್ರಾಪ್ತವಾದರೆ 'ಯಸ್ಮಾತ್' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – विस्तरेण सपरिकरं कर्माद्युक्त्वा 'अमृतो वाव सोमपो भवति, यावदिन्द्रः' इत्यादिना तस्य दुःखसम्भिन्नं विनाशिफलमुच्यते,**

ಕರ್ಮಾದಿಗಳನ್ನು ಸಾಂಗೋಪಾಂಗವಾಗಿ ವಿಸ್ತಾರವಾಗಿ ನಿರೂಪಣೆ ಮಾಡುವುದರಿಂದ 'ಅಮೃತೋ ವಾವ ಸೋಮಪೋ ಭವತಿ ಯಾವದಿಂದ್ರಃ' 'ಯಾರು ಸೋಮಪಾನವನ್ನು ಮಾಡುತ್ತಾನೋ, ಅವನು ಇಂದ್ರನಿರುವ ತನಕ ಸ್ವರ್ಗದಲ್ಲಿರುತ್ತಾನೆ' ಇತ್ಯಾದಿ ವಾಕ್ಯದಿಂದ ದುಃಖ ಮಿಶ್ರಿತವಾದ ಸುಖವನ್ನು ಅಂದರೆ ನಾಶವಾಗುವಂತಹ ಸುಖವನ್ನೇ ಫಲವನ್ನಾಗಿ ಶ್ರುತಿಯು ಹೇಳುತ್ತಿದೆ.

**तत्वप्रकाशिका – तत् परामृश्य 'यस्मादेवं कर्मादि अनित्यफलं तस्मान्न तन्मोक्षसाधनम् । तस्य दुःखासम्भिन्ननित्यसुखरूपत्वात् ।**

ಆದ್ದರಿಂದ ಮೊದಲು ಕರ್ಮಫಲವನ್ನು ಚೆನ್ನಾಗಿ ವಿಮರ್ಶೆ ಮಾಡಿದಾಗ, ಕರ್ಮಾದಿ ಅನುಷ್ಠಾನದಿಂದ ದೊರೆಯುವ ಫಲವು ಅನಿತ್ಯವಾಗಿದೆ ಎಂಬ ಜ್ಞಾನೋದಯವಾಗುತ್ತದೆ. ಆದ್ದರಿಂದ ಕರ್ಮಾದಿಗಳ ಜ್ಞಾನವು ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಏಕೆಂದರೆ ಮೋಕ್ಷವು ದುಃಖದಿಂದ ಮಿಶ್ರಣವಾಗದ ವ್ಯಕ್ತಿಯ ಸುಖಸ್ವರೂಪವಾಗಿದೆ. ಆದರೆ ಕರ್ಮದಿಂದ ದೊರೆಯುವ ಫಲವು ದುಃಖ-ಮಿಶ್ರಿತವಾದ ಸುಖಸ್ವರೂಪವಾಗಿರುತ್ತದೆ.

**तत्वप्रकाशिका** – अतो 'ज्ञानान्नान्यः पन्था मोक्षाय' इति प्रतिज्ञा युक्तैवेत्येवं रूपेण कर्मादिवचनस्य हेतुत्वम्, इति भावः । तथा च श्रुतिः – 'परीक्ष्य लोकान् कर्मचितान् ब्राह्मणः' इत्यादि ।।

ಆದ್ದರಿಂದ ಜ್ಞಾನವನ್ನು ಬಿಟ್ಟು ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ ಎಂಬುದಾಗಿ ಹೇಳುವ 'ನಾನ್ಯಃಪಂಥಾ' ಎಂಬ ಪ್ರತಿಜ್ಞೆಯು ಅತ್ಯಂತ ಯುಕ್ತವಾಗುತ್ತದೆ. ಈ ರೀತಿಯಾಗಿ ಕರ್ಮಾದಿಗಳ ಕಥನವು ಪ್ರತಿಜ್ಞಾರ್ಥಸಿದ್ಧಿಗೆ ಕಾರಣವಾಗಿದೆ ಎಂದು ತಾತ್ಪರ್ಯ. ಆದ್ದರಿಂದ 'ಪರೀಕ್ಷ್ಯಲೋಕಾನ್ ಕರ್ಮಚಿತಾನ್ ಬ್ರಾಹ್ಮಣಃ' ಕರ್ಮದಿಂದ ದೊರೆಯುವ ಲೋಕಗಳನ್ನು ವಿವೇಚನೆ ಮಾಡಿ, ಬ್ರಹ್ಮಜ್ಞಾನಿಯು ವೈರಾಗ್ಯವನ್ನು ತಾಳಬೇಕು ಇತ್ಯಾದಿಯಾದ ಶ್ರುತಿಯು ಹೊರಟಿರುತ್ತದೆ.

## ಭಾವದೀಪ

**सपरिकरमिति** ।। फलेतिकर्तव्यतासहितमित्यर्थः । कर्मादिवचनस्य ज्ञानमेव मुक्तिहेतुरित्यस्य च हेतुहेतुमद्भावं सामान्यतो व्यनक्ति – **अत इति** ।। एतच्चाग्रे व्यक्तम् ।। **इत्यादिनेति** ।। 'भाक्तं वाऽनात्मवित्त्वात्' इत्यत्र तृतीयाद्यपादे भाष्योक्तवचनेनेत्यर्थः । आदिपदेन एतत् श्रेयो येऽभिनन्दन्ति मूढा जरामृत्युं पुनरेवापियन्ति । इष्टापूर्तं मन्यमाना वरिष्ठमित्यादिग्रहः । तत्परामृश्य तदालोच्य इत्यर्थः ।

'ಸಪರಿಕರಂ' ಎಂದರೆ ಯಜ್ಞಾದಿಕರ್ಮಗಳಿಗೆ ಪರಿಕರಗಳೆನಿಸಿದ ಫಲ. ಇತಿಕರ್ತವ್ಯತಾಗಳಿಂದ ಸಹಿತವಾದ ಎಂದರ್ಥ. ಕರ್ಮದಿಂದ ಮೋಕ್ಷವೆನ್ನುವ ವಾಕ್ಯಕ್ಕೂ ಜ್ಞಾನದಿಂದ ಮೋಕ್ಷವೆನ್ನುವ ವಾಕ್ಯಕ್ಕೂ ಕಾರ್ಯಕಾರಣಭಾವವನ್ನು ಸಾಮಾನ್ಯವಾಗಿ ಹೇಳಲು 'ಅತಃ' ಇತ್ಯಾದಿ ಟೀಕಾವಾಕ್ಯ ಹೊರಟಿದೆ. ಮುಂದೆ ಈ ವಿಷಯ ಸ್ಪಷ್ಟವಾಗುತ್ತದೆ. 'ಇತ್ಯಾದಿನಾ' ಎಂಬ ಟೀಕೆಯ ಅಭಿಪ್ರಾಯ ಹೀಗಿದೆ - 'ಭಾಕ್ತಮ್ ವಾ ಅನಾತ್ಮವಿತ್ವಾತ್' ಎಂಬ ಸೂತ್ರದ ಮೂರನೇ ಅಧ್ಯಾಯದ ಮೊದಲನೆಯ ಪಾದದ ಭಾಷ್ಯದ ಮಾತಿನಿಂದ ಎಂದು ತಿಳಿಯಬೇಕು. ಆದಿಪದದಿಂದ 'ಏತತ್ ಶ್ರೇಯೋ ಯೇಽಭಿನಂದಂತಿ ಮೂಢಾಃ ಜರಾಮೃತ್ಯುಂ ಪುನರೇವ ಅಪಿಯಂತಿಂ ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ' ಇತ್ಯಾದಿ ವಾಕ್ಯವನ್ನು ಸ್ವೀಕರಿಸಬೇಕು. 'ತತ್ಪರಾಮೃಷ್ಯ' ಎಂಬುದಕ್ಕೆ 'ಅದನ್ನು ಆಲೋಚನೆ ಮಾಡಿ' ಎಂದರ್ಥ.

**भावदीपः** – एवं परिष्कृत्य यस्मादित्यादिभाष्यं योजयति – **यस्मादिति** ।। एवमित्यनुवादः कर्मादीति व्याख्या ।। **अत इति** ।। कर्मणोऽनित्यफलकत्वादित्यर्थः।

युक्त्यैवैतीत्यनन्तरं प्रत्येतीति शेषः । तेन परामृश्येति साधु । उक्तं वैराग्यजननद्वारा ब्रह्मज्ञार्थत्वं श्रुत्या संवादयति – **तथा चेति** ।। व्याख्यातैषा श्रुतिराद्यनये ।।६।।

ಹೀಗೆ ಸ್ಪಷ್ಟವಾಗಿ ವ್ಯಾಖ್ಯಾನಮಾಡಿ 'ಯಸ್ಮಾತ್' ಇತ್ಯಾದಿ ಭಾಷ್ಯದ ಮಾತನ್ನು ಯೋಜನೆ ಮಾಡಲು 'ಯಸ್ಮಾದ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಏವಂ' ಎಂಬ ಪದವು ಭಾಷ್ಯದಲ್ಲಿರುವ ಪದದ ಅನುವಾದವಾಗಿದೆ. 'ಕರ್ಮಾದಿ' ಇತ್ಯಾದಿ ವಾಕ್ಯವು ಆದರ ವ್ಯಾಖ್ಯಾನವಾಗಿದೆ. 'ಅತಃ' ಎಂಬ ಪದಕ್ಕೆ ಕರ್ಮವು ಅನಿತ್ಯಫಲಕವಾದ್ದರಿಂದ ಎಂದರ್ಥ. 'ಯುಕ್ತ್ಯಾ' ಎಂಬುದರ ಅನಂತರ 'ಪ್ರತ್ಯೇತಿ' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆದ್ದರಿಂದ 'ಪರಾಮೃಷ್ಯ' ಎಂಬ ಪದಕ್ಕೆ ಸಾರ್ಥಕವಾದ ಅರ್ಥವನ್ನು ಹೇಳಿದಂತಾಗುತ್ತದೆ. ಹಿಂದೆ ಹೇಳಿದಂತೆ ವೈರಾಗ್ಯವನ್ನು ಹುಟ್ಟಿಸುವ ಮೂಲಕ ಬ್ರಹ್ಮಜ್ಞಾನಕ್ಕೆ ಕರ್ಮಪ್ರತಿಪಾದಕವಾಕ್ಯವು ಪೂರಕವಾಗಿದೆ ಎಂಬುದನ್ನು ಶ್ರುತಿಸಂವಾದದಿಂದ ಸಮರ್ಥನೆ ಮಾಡಲು 'ತಥಾ ಚ' ಇತ್ಯಾದಿ ವಾಕ್ಯವು ಹೊರಟಿದೆ. ಇಲ್ಲಿ 'ಪರೀಕ್ಷ್ಯಲೋಕಾನ್' ಎಂಬ ಶ್ರುತಿಯನ್ನು ಜಿಜ್ಞಾಸಾಧಿಕರಣದಲ್ಲಿ ವ್ಯಾಖ್ಯಾನ ಮಾಡಲಾಗಿದೆ.

## ಬ್ರಹ್ಮಮೀಮಾಂಸಾಶಾಸ್ತ್ರ

### ಔಡುಲೋಮಿಗಳ ಪ್ರಕಾರ ವೇದಸಮನ್ವಯ

**सूत्रम् – ।। उत्क्रमिष्यत एवम्भावादित्यौडुलोमिः।। ७ ।।**

ಸೂತ್ರಾರ್ಥ - ಮೋಕ್ಷವನ್ನು ಅಪೇಕ್ಷಿಸುವ ಸಾಧಕನು ಸಂಸಾರದ ಬಿಡುಗಡೆಯನ್ನು ಬಯಸುತ್ತಾನೆ. ಅದಕ್ಕಾಗಿ ಮೋಕ್ಷಸಾಧನವಾದ ಜ್ಞಾನಕ್ಕೆ ಪೂರಕವಾಗಿ ಕರ್ಮವನ್ನು ಆಚರಿಸುತ್ತಾನೆ. ಹೀಗೆ ವೇದಗಳು ಜ್ಞಾನಸಾಧನೆಗಾಗಿ ಕರ್ಮವನ್ನು ವಿಧಿಸುತ್ತಿವೆ ಎಂದು ಔಡುಲೋಮಿ ಆಚಾರ್ಯರು ತಿಳಿಯುತ್ತಾರೆ.

### ಸೂತ್ರದೀಪಿಕಾ

**सूत्रदीपिका – उत्क्रमिष्यतः** ज्ञानान्मोक्षमिच्छतोऽधिकारिणः । एवं ज्ञानसाधनतया । **भावात्** कर्मादेरप्यनुष्ठेयत्वान्मोक्षार्थज्ञानसाधनत्वेन वेदेन कर्मादिप्रतिपादनं युक्तमेवेति **औडुलोमिराचार्यो** मन्यत इत्यर्थः ।।७।।

ಅರ್ಥ -- ಉತ್ಕ್ರಮಿಷ್ಯತಃ = ಜ್ಞಾನದಿಂದ ಮೋಕ್ಷವನ್ನು ಅಪೇಕ್ಷಿಸುವ ಅಧಿಕಾರಿಗೆ, ಏವಂ = ಜ್ಞಾನಸಾಧನೆಗಾಗಿ, ಭಾವಾತ್ = ಕರ್ಮಾದಿಗಳ ಅನುಷ್ಠಾನವಿರುವುದರಿಂದ, ಮೋಕ್ಷಪ್ರಯೋಜನಕವಾದ ಜ್ಞಾನಕ್ಕೆ ಸಾಧನವಾಗಿ ವೇದಗಳಿಂದ ಕರ್ಮಾದಿ ಪ್ರತಿಪಾದನೆ ಮಾಡುವುದು ಯುಕ್ತವೇ ಆಗುತ್ತದೆಂದು, ಔಡುಲೋಮಿಃ = ಔಡುಲೋಮಿ ಆಚಾರ್ಯರು ಹೇಳುತ್ತಾರೆ.

## ಬ್ರಹ್ಮಸೂತ್ರಭಾಷ್ಯ

**भाष्यम् – 'उत्क्रमिष्यतो मुमुक्षोः कर्मादिना भाव्यं साधनसाधनत्वेन । अतस्तद् वक्ति' इत्यौडुलोमिर्मन्यते ।।७।।**

**ಅನುವಾದ - ಸಂಸಾರದಿಂದ ಬಿಡುಗಡೆಯನ್ನು ಯಾರು ಅಪೇಕ್ಷಿಸುತ್ತಾನೋ, ಅಂತಹ ಮುಮುಕ್ಷುವು ಮೋಕ್ಷಸಾಧನವಾದ ಜ್ಞಾನಕ್ಕೆ ಸಾಧನವಾದ ಕರ್ಮವನ್ನು ಅವಶ್ಯ ಆಚರಿಸಬೇಕು. ಆದ್ದರಿಂದ ವೇದಗಳು ಕರ್ಮಗಳನ್ನು ಪ್ರತಿಪಾದಿಸುತ್ತವೆ. ಹೀಗೆ ಔಡುಲೋಮಿ ಆಚಾರ್ಯರು ಹೇಳುತ್ತಾರೆ.**

ಪ್ರತಿಪದಾರ್ಥ -- ಮತ್ತೊಂದು ಪ್ರಕಾರದಿಂದ ಕರ್ಮಾದಿಗಳ ವಚನವು ಭಗವಂತನ ಜ್ಞಾನಕ್ಕೆ ಉಪಯೋಗವಾಗಿದೆಯೆಂಬುದನ್ನು ತೋರಿಸುತ್ತಾ, ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. –

ಮುಮುಕ್ಷೋಃ = ಮೋಕ್ಷವನ್ನು ಬಯಸಿ, ಉತ್ಕ್ರಮಿಷ್ಯತಃ = ಸಂಸಾರವನ್ನು ದಾಟಲು ಇಚ್ಛಿಸುವ ಸಾಧಕನಿಗೆ, ಕರ್ಮಾದಿನಾ = ಕರ್ಮ ಹಾಗೂ ದೇವತೆಗಳಿಂದ, ಭಾವ್ಯಂ = ದೊರೆಯುವ ಫಲವು, ಸಾಧನತ್ವೇನ = ಮೋಕ್ಷಸಾಧನವಾದ ಜ್ಞಾನಸಾಧನರೂಪವಾದ್ದರಿಂದ, ಅತಃ = ಈ ಕಾರಣಕ್ಕಾಗಿ, ತತ್ = ಕರ್ಮಾದಿಗಳನ್ನೂ, ವಕ್ತಿ = ವೇದವು ಹೇಳುತ್ತದೆ. ಇತಿ = ಹೀಗೆ, ಔಡುಲೋಮಿಃ = ಔಡುಲೋಮಿ ಆಚಾರ್ಯರು, ಮನ್ಯತೇ = ತಿಳಿಯುತ್ತಾರೆ.

## ತತ್ವಪ್ರಕಾಶಿಕಾ

**प्रकारान्तरेणाऽन्यवचनस्य ज्ञानोपयोगित्वं दर्शयत् सूत्रमुपन्यस्य व्याचष्टे – उत्क्रमिष्यत इति ।।**

ವೇದದಲ್ಲಿ ಹೇಳಲ್ಪಟ್ಟ ಕರ್ಮಾದಿಗಳಿಗೆ ಒಂದು ಬಗೆಯ ಪ್ರಯೋಜನವನ್ನು ನಿರೂಪಣೆ ಮಾಡಿದ್ದಾಯಿತು. ಪ್ರಕೃತ 'ಕರ್ಮಾದಿಗಳು ಜ್ಞಾನಕ್ಕೆ ಸಾಧನವಾಗುತ್ತವೆ' ಎಂಬ ಮತ್ತೊಂದು ಪ್ರಕಾರದಿಂದ ಸಾರ್ಥಕ್ಯವನ್ನು ಹೇಳಲು ಹೊರಟಿದ್ದಾರೆ. ವೇದದಲ್ಲಿ ನಿರೂಪಿತವಾದ ಕರ್ಮಾದಿಗಳು ಜ್ಞಾನಕ್ಕೆ ಹೇಗೆ ಉಪಯೋಗಿ ಆಗುತ್ತವೆ ? ಎಂಬುದನ್ನು ತೋರಿಸುವುವವರಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಉತ್ಕ್ರಮಿಷ್ಯತಃ' ಇತ್ಯಾದಿಯಾಗಿ.

**तत्वप्रकाशिका – 'मोक्षार्थं ज्ञानमेवावश्यमपेक्षितम्' इति सिद्धे, तत्केन साधनेन सिद्ध्यति? इत्यपेक्षायां कर्मादिकमुच्यते । ज्ञानेन मोक्षमिच्छतो ज्ञानसाधनतया कर्मादेरपि भाव्यत्वात् ।**

ಮೋಕ್ಷಕ್ಕೆ ಜ್ಞಾನವೇ ಮುಖ್ಯಸಾಧನ. ಈ ವಿಷಯವು ಸಿದ್ಧವಾದ ಮೇಲೆ ಅಂತಹ ಜ್ಞಾನವನ್ನು ಹೇಗೆ ಪಡೆಯಬೇಕು? ಎಂಬ ಆಕಾಂಕ್ಷೆ ಬರುತ್ತದೆ. ಅದಕ್ಕಾಗಿ ವೇದದಲ್ಲಿ ಕರ್ಮಾದಿಗಳನ್ನು ನಿರೂಪಣೆ ಮಾಡಲಾಗಿದೆ. ಜ್ಞಾನದಿಂದ ಮೋಕ್ಷವನ್ನು ಪಡೆಯಲು ಯಾವ ಸಾಧಕನು ಇಚ್ಛಿಸುತ್ತಾನೋ, ಅವನು ಜ್ಞಾನಕ್ಕೆ ಸಾಧನವಾದ ಕರ್ಮಾದಿಗಳನ್ನೂ ಕೂಡ ಅನುಷ್ಠಾನ ಮಾಡಲೇಬೇಕು.

**तत्वप्रकाशिका – नच फलोक्तिविरोधः । तस्या रुचिमात्रार्थत्वात् । 'रोचनार्थं फलश्रुतिः' इत्यादेः ।**

ಪ್ರಶ್ನೆ - ಯಜ್ಞಯಾಗಾದಿ ಕರ್ಮಗಳಿಂದ ಪುತ್ರೋತ್ಪತ್ತಿ, ವೃಷ್ಟಿ ಮೊದಲಾದ ಬೇರೆ ಫಲವನ್ನು ಹೇಳಿರುವಾಗ ಜ್ಞಾನವನ್ನೇ ಮುಖ್ಯಪ್ರಯೋಜನವೆಂದು ಹೇಗೆ ಹೇಳುತ್ತೀರಿ?

ಉತ್ತರ - ಇಂತಹ ಫಲವನ್ನು ಹೇಳುವ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ 'ರೋಚನಾರ್ಥಂ ಫಲಶ್ರುತಿಃ' ಎಂಬ ಮಾತಿನಂತೆ ಸ್ವರ್ಗ, ಪುತ್ರ ಮೊದಲಾದ ಫಲವನ್ನು ಹೇಳಿರುವುದು ಸಾಧನೆಯಲ್ಲಿ ರುಚಿಯನ್ನು ಹುಟ್ಟಿಸಲು ಹೊರತು, ಜ್ಞಾನೋತ್ಪತ್ತಿಗೆ ಕರ್ಮವು ಸಾಧನವಲ್ಲ ಎಂದಭಿಪ್ರಾಯವಲ್ಲ.

**तत्वप्रकाशिका – अत एवं ज्ञानोत्पत्तौ कर्मादिः उपयोगित्वेन वेदस्तद्वक्तीत्यौडुलोमिराचार्यो मन्यत इति भावः ।। ७ ।।**

ಆದ್ದರಿಂದಲೇ ಜ್ಞಾನವನ್ನು ಪಡೆಯಬೇಕೆಂದರೆ ಕರ್ಮಾದಿಗಳ ಅನುಷ್ಠಾನವನ್ನು ಮಾಡಬೇಕು ಎಂಬುದಾಗಿ ಔಡೋಲೋಮಿಚಾರ್ಯರು ಅಭಿಪ್ರಾಯ ಪಡುತ್ತಾರೆ

## ಭಾವದೀಪ

**प्रकारान्तरेणेति** ।। कर्मादेर्ज्ञानसाधनत्वेन प्रकारेणेत्यर्थः । मुमुक्षोरित्यादिभाष्यं शेषपूर्त्या व्याचष्टे – **ज्ञानेनेति** ।।

'ಉತ್ಕ್ರಮಿಷ್ಯತಃ' ಇತ್ಯಾದಿ ಸೂತ್ರದಲ್ಲಿ ಔಡುಲೋಮಿ ಆಚಾರ್ಯರ ಅಭಿಪ್ರಾಯವನ್ನು ಸೂತ್ರಕಾರರು ನಿರೂಪಣೆ ಮಾಡಿದ್ದಾರೆ. ಟೀಕೆಯಲ್ಲಿರುವ 'ಪ್ರಕಾರಾಂತರೇಣ' ಎಂಬ ಪದಕ್ಕೆ ಕರ್ಮಾದಿಗಳು

ಜ್ಞಾನಸಾಧನವಾಗುತ್ತವೆ ಎಂಬ ಮತ್ತೊಂದು ಬಗೆಯಿಂದ ಎಂದರ್ಥ. 'ಮುಮುಕ್ಷೋಃ' ಇತ್ಯಾದಿ ಭಾಷ್ಯವನ್ನು ಕೆಲವು ಪದಗಳಿಂದ ಶೇಷಪೂರಣ ಮಾಡಿಕೊಳ್ಳುವ ಮೂಲಕ ಅರ್ಥಮಾಡಿಕೊಳ್ಳಬೇಕೆಂದು ಟೀಕೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಜ್ಞಾನೇನ' ಇತ್ಯಾದಿ ವಾಕ್ಯದಿಂದ.

**भावदीपः –** अत इति भाष्यस्थानुवादः । एवमित्यादिव्याख्यानम् । कर्मणो ज्ञानोपयोगित्वं च भाक्तं वेत्यत्र सर्वापेक्षा च यज्ञादिश्रुतेरश्ववदित्यत्र जिज्ञासासूत्रे च भाष्योक्तदिशा, अन्तःकरणशुद्धिद्वारेति व्यक्तमिति भावः ॥

'ಅತಃ ಏವಂ' ಎಂಬ ಟೀಕೆಯ ವಾಕ್ಯದಲ್ಲಿರುವ 'ಅತಃ' ಎಂಬ ಪದವು ಭಾಷ್ಯದ ಪದದ ಅನುವಾದವಾಗಿದೆ. ಇದಕ್ಕೆ 'ಏವಂ' ಇತ್ಯಾದಿ ಮಾತಿನಿಂದ ವ್ಯಾಖ್ಯಾನ ಮಾಡಿದ್ದಾರೆ ಎಂದು ತಿಳಿಯಬೇಕು.

ಕರ್ಮವು ಜ್ಞಾನಸಂಪಾದನೆಗೆ ಹೇಗೆ ಉಪಯೋಗವಾಗುತ್ತದೆಂಬ ವಿಚಾರವನ್ನು 'ಆಪ್ತಂ ವಾ' 'ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇಃ ಅಶ್ವವತ್' ಎಂಬ ಸೂತ್ರದ ಜಿಜ್ಞಾಸಾ ಸೂತ್ರದಲ್ಲಿಯೂ ಸ್ಪಷ್ಟಪಡಿಸಿದ್ದಾರೆ. ಕರ್ಮಾದಿಗಳನ್ನು ಚೆನ್ನಾಗಿ ಅನುಷ್ಠಾನ ಮಾಡುವುದರಿಂದ ಮನಸ್ಸು ನಿರ್ಮಲವಾಗುತ್ತದೆ. ನಿರ್ಮಲವಾದ ಮನಸ್ಸಿನಲ್ಲಿ ತತ್ತ್ವಜ್ಞಾನವನ್ನು ತುಂಬಿಕೊಂಡಾಗ ಮೋಕ್ಷವು ದೊರೆಯುತ್ತದೆ. ಇದು ಔಡುಲೋಮಿ ಆಚಾರ್ಯರ ಸಿದ್ಧಾಂತ.

## ಬ್ರಹ್ಮಮೀಮಾಂಸಾಶಾಸ್ತ್ರ

## ಕರ್ಮಪ್ರತಿಪಾದಕ ವಾಕ್ಯಗಳ ವಿಷಯದಲ್ಲಿ ಕಾಶಕೃತ್ಸ್ನರ ಅಭಿಪ್ರಾಯ

**सूत्रम् – ॥ अवस्थितेरिति काशकृत्स्नः ॥ ८ ॥**

ಸೂತ್ರಾರ್ಥ - ಎಲ್ಲವೂ ಭಗವದಧೀನವೆಂದು ತಿಳಿಸಲು ವೇದವು ಕರ್ಮಾದಿಗಳನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಕಾಶಕೃತ್ಸ್ನರು ಅಭಿಪ್ರಾಯ ಪಡುತ್ತಾರೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸಮಾಕರ್ಷಾಧಿಕರಣವು ಸಮಾಪ್ತವಾಯಿತು ॥

## ಸೂತ್ರದೀಪಿಕಾ

**सूत्रदीपिका –** सर्वाधारे भगवति कर्मादीनां **अवस्थितेः** अवस्थानात् । भगवतः कर्माद्याधारत्वज्ञानायाधेयभूतकर्मादिस्वरूपं वेदेन प्रतिपाद्यत **इति**

**काशकृत्स्नाचार्यो मन्यत इत्यर्थः । अनेकाधिकारिकत्वान्मतानां न विरोध इति ध्येयम् ।।**

ಅರ್ಥ -- ಸರ್ವಾಧಾರನಾದ ಭಗವಂತನಲ್ಲಿ ಕರ್ಮಾದಿಗಳ ಅವಸ್ಥಿತೇಃ = ಇರುವಿಕೆಯು ಯುಕ್ತವಾಗುವುದರಿಂದ, ಕರ್ಮಕ್ಕೆ ಆಧಾರವಾದ ಜ್ಞಾನಕ್ಕೋಸ್ಕರ ಆಧೇಯಭೂತವಾದ ಕರ್ಮಾದಿ ಸ್ವರೂಪವನ್ನು ವೇದವು ಪ್ರತಿಪಾದನೆ ಮಾಡುತ್ತದೆ. ಇತಿ = ಹೀಗೆ, ಕಾಶಕೃತ್ಸ್ನಃ = ಕಾಶಕೃತ್ಸ್ನ ಎಂಬ ಆಚಾರ್ಯರು ಅಭಿಪ್ರಾಯ ಪಡುತ್ತಾರೆ. ಈ ಎಲ್ಲ ಮತದವರ ಅಭಿಪ್ರಾಯಗಳಿಗೆ ಅಧಿಕಾರಿಗಳು ಬೇರೆ ಬೇರೆಯವರಾದ್ದರಿಂದ ಪರಸ್ಪರ ವಿರೋಧವಿರುವುದಿಲ್ಲ.

॥ ಸೂತ್ರದೀಪಿಕೆಯಲ್ಲಿ ಸಮಾಕರ್ಷಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् — सर्वं परमात्मन्यवस्थितमिति वक्तुं तद्वचनमिति काशकृत्स्नः ।**

ಅನುವಾದ - ಕರ್ಮಾದಿ ಸಕಲ ಪ್ರಪಂಚವು ಪರಮಾತ್ಮನಲ್ಲಿ ನೆಲೆಗೊಂಡಿದೆ ಎಂದು ತಿಳಿಸಲು ಕರ್ಮಾದಿವಾಚಕತ್ವವನ್ನು ವೇದದಲ್ಲಿ ಒಪ್ಪಬೇಕೆಂದು ಕಾಶಕೃತ್ಸ್ನರು ಹೇಳುತ್ತಾರೆ.

ಪ್ರತಿಪದಾರ್ಥ -- ಮತ್ತೊಂದು ಪ್ರಕಾರದಿಂದ ಕರ್ಮಾದಿಜ್ಞಾನವು ಬ್ರಹ್ಮಜ್ಞಾನಕ್ಕೆ ಉಪಯೋಗಿಯಾಗಿದೆ ಎಂದು ತೋರಿಸುತ್ತಾ, ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. –

ಸರ್ವಂ = ಕರ್ಮಾದಿ ಸಕಲ ಪ್ರಪಂಚವು, ಪರಮಾತ್ಮನಿ = ಪರಮಾತ್ಮನಲ್ಲಿ, ಅವಸ್ಥಿತಂ = ಆಶ್ರಿತವಾಗಿದೆ. ಇತಿ = ಹೀಗೆ, ವಕ್ತುಂ = ತಿಳಿಸಲು, ತದ್ವಚನಮ್ = ಕರ್ಮಾದಿಬೋಧಕವಾದ ಮಾತುಗಳಿರುತ್ತವೆ. ಇತಿ = ಹೀಗೆ, ಕಾಶಕೃತ್ಸ್ನಃ = ಕಾಶಕೃತ್ಸ್ನಾಚಾರ್ಯರು ಹೇಳುತ್ತಾರೆ. (ಕರ್ಮಾದಿ ಜಗತ್ತು ಭಗವಂತನ ಅಧೀನ. ಇದನ್ನು ತಿಳಿಯಲು ಕರ್ಮಾದಿಗಳನ್ನು ತಿಳಿಯಬೇಕು)

**भाष्यम् — 'कृष्णद्वैपायनमतादेकदेशविदः परे ।**
**वदन्ति ते (एते) यथाप्रज्ञं न विरोधः कथञ्चन ।। इति पाद्मे ।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये समाकर्षाधिकरणम् ।। ५ ।।**

ಅನುವಾದ - ಮೇಲಿನ ವಿಚಾರಗಳು ಸೂತ್ರಕಾರರಿಗೂ ಸಮ್ಮತ. ಏಕೆಂದರೆ ಪದ್ಮಪುರಾಣದಲ್ಲಿ ಸೂತ್ರಕಾರರೇ ಹೀಗೆ ಹೇಳಿದ್ದಾರೆ - ''ವೇದವ್ಯಾಸರ ಮನಸ್ಸಿನಲ್ಲಿರುವ ಅನೇಕ ಅಭಿಪ್ರಾಯಗಳಲ್ಲಿ

ಒಂದೊಂದನ್ನು ಮಾತ್ರ ಅವರ ಶಿಷ್ಯರು ತಮ್ಮ ಬುದ್ಧಿಶಕ್ತಿಗನುಗುಣವಾಗಿ ತಿಳಿಯುತ್ತಾರೆ. ಮತ್ತು ಅದನ್ನು ತಮ್ಮ ಮತವೆಂದು ಹೇಳುತ್ತಾರೆ. ಆದ್ದರಿಂದ ಅವುಗಳಿಗೆ ಪರಸ್ಪರ ವಿರೋಧವಿರುವುದಿಲ್ಲ.

ಪ್ರತಿಪದಾರ್ಥ -- ಕೃಷ್ಣದ್ವೈಪಾಯನಮತಾತ್ = ವೇದವ್ಯಾಸರ ಅಭಿಪ್ರಾಯದಿಂದ ಏಕದೇಶವಿದಃ = ಒಂದೊಂದು ಅಂಶವನ್ನು ತಿಳಿದವರಲ್ಲಿ ನಿಪುಣರಾದ, ತೇ = ಅವರು, ಯಥಾ ಪ್ರಜ್ಞಂ = ತಮ್ಮ ತಮ್ಮ ಬುದ್ಧಿಶಕ್ತಿ, ಯೋಗ್ಯತೆಗೆ ಅನುಗುಣವಾದ ಅಂಶವನ್ನು, ವದಂತಿ = ಹೇಳುತ್ತಾರೆ. ಅತಃ = ಆದ್ದರಿಂದ, ವಿರೋಧಃ = ಋಷಿಗಳ ಮತದಲ್ಲಿ ಭಿನ್ನಾಭಿಪ್ರಾಯವು, ಕಥಂಚನ = ಯಾವುದೇ ರೀತಿಯಲ್ಲಿಯೂ, ನ = ಇರುವುದಿಲ್ಲ. ಇತಿ = ಹೀಗೆ, ಪಾದ್ಮೇ = ಪದ್ಮಪುರಾಣದಲ್ಲಿ ಹೇಳಲಾಗಿದೆ.

ಇಲ್ಲಿಗೆ ಸಮಾಕರ್ಷಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**रीत्यन्तरेण कर्मादिवचनस्य भगवज्ज्ञानोपयोगं प्रदर्शयत् सूत्रमुपन्यस्य व्याचष्टे – अवस्थितेरिति ।।**

ಮತ್ತೊಂದು ರೀತಿಯಿಂದ ವೇದದಲ್ಲಿ ಹೇಳಲ್ಪಟ್ಟ ಕರ್ಮಾದಿಮಾತುಗಳು ಹೇಗೆ ಭಗವಂತನ ಜ್ಞಾನಕ್ಕೆ ಉಪಯೋಗವಾಗುತ್ತದೆ ಎಂಬುದನ್ನು ತೋರಿಸುವವರಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅವಸ್ಥಿತೇಃ' ಇತ್ಯಾದಿ ಭಾಷ್ಯದಲ್ಲಿ.

**तत्वप्रकाशिका – 'मोक्षार्थं सर्वथा ज्ञानमपेक्षितं, तच्च कर्मादिना अन्तःकरणशुद्ध्या भवति' इति सिद्धे, कथं ज्ञातव्यो हरिः? इत्याकाङ्क्षायां, 'सर्वं कर्मादिकं तस्मिन् परमात्मनि स्थितं, स सर्वाधारत्वादिरूपेण ज्ञातव्यः? इति 'एष सेतुर्विधरणः' इत्यादौ वक्तुमाधेयादिरूपं कर्मादि वेदेनोच्यत इति वा साक्षात् परम त्मज्ञानोपयोगित्वमन्यवचनस्य' इति काशकृत्स्नाचार्यो मन्यत इति भावः ।**

ಮೋಕ್ಷವನ್ನು ಪಡೆಯಬೇಕೆಂದರೆ ತತ್ವಜ್ಞಾನವನ್ನು ಹೊಂದಲೇಬೇಕು. ತತ್ವಜ್ಞಾನವಾದರೂ ಅಂತಃಕರಣದ ಶುದ್ಧಿ ಆಗದೆ ಮೋಕ್ಷಕ್ಕೆ ಸಾಧನವಾಗುವುದಿಲ್ಲ. ಆದ್ದರಿಂದ ಅಂತಃಕರಣದ ಶುದ್ಧಿಯ ಮೂಲಕ ಜ್ಞಾನವು ಮೋಕ್ಷಸಾಧನವಾಗುತ್ತದೆಂಬ ವಿಷಯವು ಹಿಂದಿನ ಸೂತ್ರದಲ್ಲಿ ಸಿದ್ಧವಾಯಿತು.

ಹಾಗಾದರೆ ಶ್ರೀಹರಿಯನ್ನು ಹೇಗೆ ತಿಳಿಯಬೇಕು ?

ಈ ಆಕಾಂಕ್ಷೆಯು ಸಹಜವಾಗಿ ಬರುತ್ತದೆ. ಶ್ರೀಹರಿಯಲ್ಲಿ ಸಕಲ ಪದಾರ್ಥಗಳು ಆಧೇಯವಾಗಿ ಇರುತ್ತವೆ. ಆಧೇಯವಾದ ಸಕಲಪದಾರ್ಥಗಳ ನಡುವೆ ಸಕಲಬಗೆಯ ಕರ್ಮಗಳೂ ಕೂಡ ಸೇರಿವೆ.

ಈ ಎಲ್ಲಾ ಪದಾರ್ಥಗಳಿಗೂ ಪರಮಾತ್ಮನೊಬ್ಬನೇ ಆಧಾರನು. ಹೀಗೆ ಪರಮಾತ್ಮನನ್ನು ತಿಳಿದಾಗ ನಿಜವಾದ ತತ್ವಜ್ಞಾನವನ್ನು ಪಡೆದಂತಾಗುತ್ತದೆ.

'ಏಷ ಸೇತುರ್ವಿಧರಣಃ' 'ಪರಮಾತ್ಮನು ಸಕಲಪದಾರ್ಥಗಳಿಗೆ ಆಶ್ರಯನು' ಈ ಶ್ರುತಿಯು ಮೇಲಿನ ವಿಷಯವನ್ನು ಸ್ಪಷ್ಟಪಡಿಸುತ್ತಿದೆ. ಆಶ್ರಯನಾದ ಪರಮಾತ್ಮನಲ್ಲಿ ಆಧೇಯವಾಗಿರುವ ಕರ್ಮ ಮೊದಲಾದ ಸಕಲಪದಾರ್ಥಗಳನ್ನು ವೇದವು ಪ್ರತಿಪಾದನೆ ಮಾಡುತ್ತಿದೆ.

ಹೀಗೆ ವಿಚಾರ ಮಾಡಿದಾಗ ಕರ್ಮವು ಪರಮಾತ್ಮ ಜ್ಞಾನಕ್ಕೆ ನೇರವಾಗಿಯೇ ಸಾಧನವೆಂದು ತಿಳಿಯುತ್ತದೆ. ಇಷ್ಟು ಕಾಶಕೃತ್ಸ್ನಾಚಾರ್ಯರ ಸಿದ್ಧಾಂತ.

**ತत्वप्रकाशिका – एवं जैमिन्यादिमतानि उपन्यस्य स्वमतं किं नोच्यते सूत्रकारेण ? एतेषामेव स्वमतत्वे जैमिन्यादिग्रहणवैयर्थ्यम् । विरुद्धानां च नैकमतत्वम् । एकस्यैव वेदस्यानेकाभिप्रायताऽयोगादित्यत आह – कृष्णेति ।।**

ಇಲ್ಲಿಯ ತನಕ ಸೂತ್ರಕಾರರು ಜೈಮಿನಿ, ಔಡುಲೋಮಿ, ಕಾಶಕೃತ್ಸ್ನರ ಅಭಿಪ್ರಾಯಗಳನ್ನು ಮಂಡನೆ ಮಾಡಿದರು.

ಹಾಗಾದರೆ ತಮ್ಮ ಅಭಿಪ್ರಾಯವನ್ನೇ ಸೂತ್ರಕಾರರು ಹೇಳಿಲ್ಲವಲ್ಲ?

ಈ ಎಲ್ಲಾ ಆಚಾರ್ಯರ ಅಭಿಪ್ರಾಯವು ಸೂತ್ರಕಾರರಿಗೆ ಸಮ್ಮತವೇ ಆಗಿದೆಯೆಂದು ಉತ್ತರಿಸಿದರೆ ಜೈಮಿನಿ ಮೊದಲಾದ ಋಷಿಗಳ ಹೆಸರನ್ನೇಕೆ ಉಲ್ಲೇಖಿಸಿದ್ದಾರೆ ? ಮತ್ತು ಪರಸ್ಪರ ವಿರುದ್ಧ ಅಭಿಪ್ರಾಯ ಹೊಂದಿರುವ ಈ ಎಲ್ಲ ಸಿದ್ಧಾಂತಗಳು ಒಬ್ಬರೇ ಸೂತ್ರಕಾರರಿಗೆ ಸಮ್ಮತವಾಗಲು ಸಾಧ್ಯವಿಲ್ಲ. ಏಕೆಂದರೆ ಒಂದೇ ವೇದಕ್ಕೆ ವಿರುದ್ಧವಾದ ಅನೇಕ ಅಭಿಪ್ರಾಯವು ಅಯುಕ್ತವಾಗುತ್ತದಲ್ಲವೇ?

ಈ ಆಶಂಕೆಗೆ 'ಕೃಷ್ಣದ್ವೈಪಾಯನ' ಎಂಬ ಶ್ಲೋಕದಿಂದ ಭಾಷ್ಯಕಾರರು ಉತ್ತರಿಸುತ್ತಿದ್ದಾರೆ.

**तत्वप्रकाशिका – मुनिमतानां भगवन्मतत्वमेव । तथापि तत्तद्विदितात्ममतैक देशाभिप्रायेण शिष्यप्रसिध्यर्थं जैमिन्यादिग्रहणं युज्यते । अनेकाधिकारिविषयत्वान्न विरोधोऽपि, इति भावः ।**

ಸೂತ್ರಕಾರರಾದ ವೇದವ್ಯಾಸದೇವರ ಮತವೇ ಸಕಲಮುನಿಗಳ ಮತವು. ಇವರಲ್ಲಿ ಪರಸ್ಪರ ವಿರೋಧಕ್ಕೆ ಅವಕಾಶವೇ ಇಲ್ಲ. ಸೂತ್ರಕಾರರು ತಮ್ಮ ಅನೇಕ ಬಗೆಯ ಅಭಿಪ್ರಾಯಗಳಲ್ಲಿ ಒಂದೊಂದು ಅಭಿಪ್ರಾಯವನ್ನು ಒಬ್ಬೊಬ್ಬ ಶಿಷ್ಯರ ಹೆಸರಿನಲ್ಲಿ ಉಲ್ಲೇಖ ಮಾಡಿದ್ದಾರೆ. ಹೀಗೆ ಉಲ್ಲೇಖಿಸಲು ಒಂದು ಮಹತ್‌ಪ್ರಯೋಜನವಿದೆ. ಜೈಮಿನಿ ಮೊದಲಾದ ಶಿಷ್ಯಂದಿರನ್ನು ಲೋಕದಲ್ಲಿ ಪ್ರಸಿದ್ಧಿ ತರಬೇಕಾಗಿದೆ. ಈ ಕಾರಣಕ್ಕಾಗಿ ಸೂತ್ರಕಾರರು ಆಯಾ ಮುನಿಗಳ ಹೆಸರುಗಳನ್ನು

ಉಲ್ಲೇಖಿಸಿದ್ದಾರೆ ಹೊರತು, ಪರಸ್ಪರ ಅಭಿಪ್ರಾಯದಲ್ಲಿ ಬೇಧವಿದೆಯೆಂದು ತಿಳಿಯಬಾರದು. ಮತ್ತು ಅನೇಕ ಬಗೆಯ ಅಧಿಕಾರಿಗಳು ಈ ಗ್ರಂಥವನ್ನು ಅಧ್ಯಯನ ಮಾಡುತ್ತಾರೆ. ಬೇರೆ ಬೇರೆ ಅಧಿಕಾರಿಗಳ ವಿವಕ್ಷೆಯಿಂದ ಬೇರೆ ಬೇರೆ ಮತಗಳನ್ನು ಉಲ್ಲೇಖಿಸಿದ್ದಾರೆ. ಈ ಕಾರಣದಿಂದ ವಿರೋಧವು ಇರುವುದಿಲ್ಲ ಎಂದು ತಿಳಿಯಬೇಕು.

**तत्वप्रकाशिका – अतो भगवज्ज्ञानाद्यर्थं वैदिकादिशब्दानामन्यत्र समाकर्षेण व्यवहारोपपत्तेः, युक्तं हरेः सकलशब्दपरममुख्यार्थत्वम् इति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् समाकर्षाधिकरणम् ।।**

ಆದ್ದರಿಂದ ಸಕಲಶಬ್ದಗಳು ಮುಖ್ಯವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಈ ವಿಷಯದಲ್ಲಿ ಯಾವ ವಿರೋಧವೂ ಇರುವುದಿಲ್ಲ. ಭಗವಂತನ ಜ್ಞಾನಕ್ಕೋಸ್ಕರ ಅಂತಹ ವೈದಿಕಶಬ್ದಗಳನ್ನು ಬೇರೆ ಅರ್ಥದಲ್ಲಿ ಸಮಾಕರ್ಷ ಮಾಡಿ, ವ್ಯವಹಾರ ಮಾಡಲಾಗುತ್ತದೆ. ಸಕಲಶಬ್ದಗಳು ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ಸಿದ್ಧಾಂತವು ಸ್ಥಾಪಿತವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಸಮಾಕರ್ಷಾಧಿಕರಣವು ಸಮಾಪ್ತವಾಯಿತು

## ಭಾವದೀಪ

**रीत्यन्तरेणेति ।।** भगवज्ज्ञाने विशेषणरूपविषयार्पकतयेत्यर्थः । **इति सिद्धौ** पूर्वसूत्रेणेत्यर्थः ।

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರದಿಂದ ಕಾಶಕೃತ್ಸ್ನಾಚಾರ್ಯರ ಅಭಿಪ್ರಾಯವನ್ನು ಮಂಡನೆ ಮಾಡುತ್ತಿದ್ದಾರೆ. ಟೀಕೆಯಲ್ಲಿರುವ 'ರೀತ್ಯಂತರೇಣ' ಎಂಬ ಪದಕ್ಕೆ ಭಗವದ್‌ಜ್ಞಾನದಲ್ಲಿ ವಿಶೇಷಣರೂಪವಾದ ವಿಷಯವನ್ನು ಅರ್ಪಣೆ ಮಾಡುವ ಮೂಲಕ ಎಂದರ್ಥ. 'ಇತಿ ಸಿದ್ಧೌ' ಎಂದರೆ ಹಿಂದಿನ ಸೂತ್ರದಿಂದ ಅಂತಃಕರಣದ ಶುದ್ಧಿಗೋಸ್ಕರ ಕರ್ಮಾಚರಣೆಯು ಸಾರ್ಥಕ ಎಂಬ ವಿಷಯವು ಸಿದ್ಧವಾಗುತ್ತಿರಲು ಎಂದರ್ಥ.

**भावदीपः –** सर्वमित्यादिभाष्यानुवादः स सर्वेत्यादिव्याख्या । एष इत्यादि शेषोऽक्तिः । जैमिन्यादिग्रहणस्य प्रसिध्यर्थत्वेन सावकाशत्वं मन्वान आह – **विरुद्धानां चेति ।।**

ಟೀಕೆಯಲ್ಲಿರುವ 'ಸರ್ವಂ ಕರ್ಮಾದಿಕಂ ತಸ್ಮಿನ್ ಪರಮಾತ್ಮನಿ ಸ್ಥಿತಂ' ಎಂಬ ವಾಕ್ಯವು ಭಾಷ್ಯದ ಅನುವಾದವೆಂದು 'ಸಃ ಸರ್ವಾಧಾರತ್ವಾದಿರೂಪೇಣ' ಇತ್ಯಾದಿ ವಾಕ್ಯವು ಅದರ ವ್ಯಾಖ್ಯಾನ ರೂಪವೆಂದು ಸ್ಪಷ್ಟವಾಗಿ ತಿಳಿಯಬೇಕು. 'ಏಷ ಸೇತುಃ ವಿಧರಣಃ' ಇತ್ಯಾದಿ ವಾಕ್ಯವನ್ನು ಭಾಷ್ಯದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. ಹೀಗೆ ಭಾಷ್ಯವನ್ನು ವ್ಯಾಖ್ಯಾನ ಮಾಡಿದ್ದಾರೆ.

ಜೈಮಿನಿ, ಔಡುಲೋಮಿ ಮತ್ತು ಕಾಶಕೃತ್ಸ್ನ ಈ ಮುನಿಗಳ ಹೆಸರನ್ನು ಉಲ್ಲೇಖ ಮಾಡಿರುವುದಕ್ಕೆ ಶಿಷ್ಯರು ಜಗತ್ತಿನಲ್ಲಿ ಪ್ರಸಿದ್ಧರಾಗಬೇಕೆಂಬ ಉದ್ದೇಶ ಹೊರತು, ಬೇರೆ ಕಾರಣವಿಲ್ಲ. ಆದ್ದರಿಂದ ಸೂತ್ರದಲ್ಲಿರುವ ಜೈಮಿನ್ಯಾದಿಗ್ರಹಣವು ಸಾವಕಾಶವಾಗಿದೆ ಎಂಬುದಾಗಿ 'ವಿರುದ್ಧಾನಾಂ ಚ' ಎಂಬ ಟೀಕೆಯಿಂದ ಸಮರ್ಥಿಸಿದ್ದಾರೆ.

**भावदीपः –**

स्वशिष्याणां प्रसिध्यर्थं मतमात्मीयमंशतः ।
विज्ञातं तैर्जगादात्र तारतम्यं नृणां वदन् ।।

इत्यनुभाष्यदिशा स्मृतितात्पर्यमाह – **मुनिमतानामिति** ।।

ಸ್ವಶಿಷ್ಯಾಣಾಂ ಪ್ರಸಿದ್ಧ್ಯರ್ಥಂ ಮತಮಾತ್ಮೀಯಮಂಶತಃ।
ವಿಜ್ಞಾತಂ ತೈರ್ಜಗಾದಾತ್ರ ತಾರತಮ್ಯಂ ನೃಣಾಂ ವದನ್ ॥

ಮೋಕ್ಷಾಧಿಕಾರಿಗಳಲ್ಲಿ ಸಹಜವಾದ ತಾರತಮ್ಯವನ್ನು ವಿವಕ್ಷಿಸಿ, ತಮ್ಮ ಅಭಿಪ್ರಾಯದ ಏಕದೇಶವನ್ನು ಆಯಾ ಶಿಷ್ಯರ ಹೆಸರಿನಲ್ಲಿ ಸೂತ್ರಕಾರರೇ ಹೇಳಿದ್ದಾರೆ ಎಂಬ ಅನುವ್ಯಾಖ್ಯಾನದ ಪ್ರಕಾರ ಪಾದಸ್ಮೃತಿಯ ಅಭಿಪ್ರಾಯವನ್ನು 'ಮುನಿಮತಾನಾಮ್' ಎಂಬ ವ್ಯಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

**भावदीपः – अनेकेति** ।। जैमिनिमतस्य पदसमन्वयायोग्यमन्दाधिकारिकवाक्य-समन्वयार्थत्वात् । तत्राप्याश्मरथ्यमतस्य वैराग्यसम्पत्तिप्रागवस्थापिशिष्टाधिकारिकत्वात्। औडुलोमिमतस्य ज्ञानसम्पत्तिप्रागवस्थाविशिष्टाधिकारिकत्वा- दित्यर्थः ।

ಅಯೋಗ್ಯರಾದ ಮಂದಾಧಿಕಾರಿಗಳಿಗೆ ಪದಸಮನ್ವಯವನ್ನು ತಿಳಿಯಲು ಸಾಧ್ಯವಿಲ್ಲ. ಅವರಿಗಾಗಿ ವ್ಯಾಕ್ಯಸಮನ್ವಯವನ್ನು ತಿಳಿಸಲಾಗಿದೆ. ಇದು ಜೈಮಿನ್ಯಾಚಾರ್ಯರ ಮತ.

ವೈರಾಗ್ಯವನ್ನು ಸಂಪಾದನೆ ಮಾಡುವ ಮೊದಲು ಯಾವ ಅವಸ್ಥೆಯಲ್ಲಿ ಅಧಿಕಾರಿಯು ಇರುತ್ತಾನೋ, ಅವನನ್ನು ಉದ್ದೇಶಿಸಿ ಕರ್ಮಾದಿಗಳ ಸಂಪಾದನೆಯನ್ನು ವೇದವು ಪ್ರತಿಪಾದನೆ ಮಾಡುತ್ತದೆ ಇದು ಆಶ್ಮರಥ್ಯಾಚಾರ್ಯರ ಮತ.

ಸಮಾಕರ್ಷಾಧಿಕರಣ (೧-೪-೫)

ಜ್ಞಾನಸಂಪಾದನೆಗಿಂತ ಮೊದಲು ಕರ್ಮಾನುಷ್ಠಾನದಲ್ಲಿ ತೊಡಗಬೇಕು. ಇಂತಹ ಅಧಿಕಾರಿಗಳನ್ನು ಕುರಿತು ವೇದವು ಕರ್ಮವನ್ನು ನಿರೂಪಣೆ ಮಾಡುತ್ತದೆ. ಇದು ಔಡುಲೋಮ್ಯಾಚಾರ್ಯರರ ಅಭಿಪ್ರಾಯ.

**भावदीपः** – उक्तं च सुधायाम् । नृणामल्पाधिकारिणामवस्थातारतम्यं वदन्निति ।। **अत इति** ।। भगवतः सर्वशब्दमुख्यार्थत्वे बाधकाभावादित्यर्थः ।।५।।

।। इति श्रीराघवेन्द्रयतिकृते भावदीपे समाकर्षाधिकरणम् ।।

ಇದನ್ನೇ ನ್ಯಾಯಸುಧಾಯದಲ್ಲಿ 'ನೃಣಾಮಲ್ಪಾಧಿಕಾರಿಣಾಮವಸ್ಥಾತಾರತಮ್ಯಂ ವದನ್' ಎಂಬುದಾಗಿ ಹೇಳಿರುತ್ತಾರೆ. 'ಅತಃ' ಎಂದರೆ ಭಗವಂತನು ಸಕಲಶಬ್ದಗಳಿಂದ ಮುಖ್ಯಾರ್ಥನಾಗಿದ್ದಾನೆಂಬ ವಿಷಯದಲ್ಲಿ ಯಾವುದೇ ಬಾಧಕಗಳಿಲ್ಲದಿರುವುದರಿಂದ ಎಂದರ್ಥ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಸಮಾಕರ್ಷಾಧಿಕರಣವು ಸಮಾಪ್ತವಾಯಿತು

ಸಮಾಕರ್ಷಾಧಿಕರಣ

(೧-೪-೫)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ समाकर्षाधिकरणम्

### ಸಮಾಕರ್ಷಾಧಿಕರಣವು ಪ್ರತ್ಯೇಕವೋ, ಅಲ್ಲವೋ ?

॥ समाकर्षात् ॥ यद्यप्यत्रानुव्याख्याने ''विरोधिसर्वबाहुल्यकारणस्त्रीनिषेधिनाम्'' इत्येतत्पादीयाधिकरणोपाध्युक्तिदशायां पृथगुपाध्यनुक्तेस्तथा

सर्वमानैर्विरोधश्च व्युत्पत्तेरप्यशक्यता ।
परस्परविरोधश्च विरोधः कार्यतद्गतोः ।
स्त्रीलिङ्गत्वं निषेधश्च पूर्वपक्षेषु युक्तयः ।
दोषात्यस्पृष्टिनियमः शब्दार्थानेकता तथा ।
बहुरूपत्वमीशस्य व्यक्त्यव्यक्तिविशेषिता ।
उत्पादनं स्वदेहाच्च दुर्जनाव्यक्तता तथा ।
इत्याद्या युक्तयः साक्षात् सिद्धान्तस्थापिका इह ॥

इति पूर्वपक्षसिद्धान्तयुक्तिसङ्ग्रहदशायामपि पृथक् युक्त्यनुक्तेः । तथा भाष्येऽपि समन्वेतव्यशब्दान्तरानुक्तेः । तत्वप्रदीपानुसाराच्च ''समाकर्षात्'' इत्यादि सूत्राष्टकस्य पूर्वाधिकरणशेषतैव युक्ता । ''साक्षादप्यविरोधं जैमिनिः'' इत्यादीनां वैश्वानराधिकरणशेषतावत् ।

ಅನುವಾದ - ಪ್ರಶ್ನೆ - ಸಮಾಕರ್ಷಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸಬೇಕಾಗಿಲ್ಲ. ಏಕೆಂದರೆ ಅನುವ್ಯಾಖ್ಯಾನದಲ್ಲಿ ನಾಲ್ಕನೆಯ ಪಾದದ ಎಲ್ಲಾ ಅಧಿಕರಣಗಳ ಉಪಾಧಿಯನ್ನು ಸಂಗ್ರಹಿಸುವಾಗ

ಹೀಗೆ ಹೇಳಿದ್ದಾರೆ - 'ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್' ಭಗವಂತನ ಸರ್ವೇಶ್ವರತ್ವಕ್ಕೆ ವಿರೋಧಿಯಾದ ಶಬ್ದಗಳು, ಹಿಂದಿನ-ಮುಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಸಕಲಶಬ್ದಗಳು, ಬಹುತ್ವವಾಚಕಶಬ್ದಗಳು, ಅವಾಂತರಕಾರಣತ್ವಪ್ರತಿಪಾದಕ ಶಬ್ದಗಳು, ಸ್ತ್ರೀವಾಚಕಶಬ್ದಗಳು, ಅಭಾವವಾಚಕಶಬ್ದಗಳು, ಇವುಗಳೆಲ್ಲಾ ಈ ಪಾದದಲ್ಲಿರುವ ಅಧಿಕರಣಗಳ ಉಪಾಧಿಗಳು.

ಹೀಗೆ ಅನುವ್ಯಾಖ್ಯಾನದಲ್ಲಿ ಎಲ್ಲಾ ಅಧಿಕರಣಗಳ ಉಪಾಧಿಯನ್ನು ನಿರೂಪಣೆ ಮಾಡುವಾಗ ಸಮಾಕರ್ಷಾಧಿಕರಣದ ಉಪಾಧಿಯನ್ನು ಪ್ರತ್ಯೇಕವಾಗಿ ಹೇಳಿರುವುದಿಲ್ಲ. ಅಷ್ಟೇ ಅಲ್ಲದೇ ಅದೇ ಅನುವ್ಯಾಖ್ಯಾನದ ಮುಂದಿನ ಶ್ಲೋಕಗಳಿಂದ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷಯುಕ್ತಿಗಳನ್ನು ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸಿರುತ್ತಾರೆ. ಅದು ಹೀಗಿದೆ -

ಸರ್ವಮಾನೈರ್ವಿರೋಧಶ್ಚ ವ್ಯುತ್ಪತ್ತೇರಪ್ಯಶಕ್ಯತಾ ।
ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ ।
ಸ್ತ್ರೀಲಿಂಗತ್ವಂ ನಿಷೇಧಶ್ಚ ಪೂರ್ವಪಕ್ಷೇಷು ಯುಕ್ತಯಃ ।

ಸಕಲ ಪ್ರಮಾಣವಿರೋಧ, ವ್ಯುತ್ಪತ್ತಿ ಕೂಡದಿರುವುದು, ಪರಸ್ಪರ ವಿರೋಧ. ಕಾರ್ಯಕಾರಣ-ವಿರೋಧ, ಸ್ತ್ರೀಲಿಂಗ, ನಿಷೇಧ ಈ ಆರು ಪೂರ್ವಪಕ್ಷಯುಕ್ತಿಗಳು.

ದೋಷಾತ್ಯಸ್ಪೃಷ್ಟಿನಿಯಮಃ ಶಬ್ದಾರ್ಥಾನೇಕತಾ ತಥಾ ।
ಬಹುರೂಪತ್ವಮೀಶಸ್ಯ ವ್ಯಕ್ತಾವ್ಯಕ್ತಿವಿಶೇಷಿತಾ ।
ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ ।
ಇತ್ಯದ್ಯಾ ಯುಕ್ತಯಃ ಸಾಕ್ಷಾತ್ ಸಿದ್ಧಾಂತಸ್ಥಾಪಿಕಾ ಇಹ ॥

ದೋಷಸ್ಪರ್ಶಕ್ಕೆ ಸರ್ವಥಾ ಅವಕಾಶವಿಲ್ಲದಿರುವುದು, ಶಬ್ದಾರ್ಥಗಳು ಅನೇಕವಾಗಿರುವುದು, ಬಹುರೂಪಗಳಿರುವುದು, ವ್ಯಕ್ತತ್ವ, ಅವ್ಯಕ್ತತ್ವಗಳೆಂಬ ವಿಶೇಷವಿರುವುದು, ತನ್ನ ಶರೀರದಿಂದ ನೇರವಾಗಿ ಸೃಷ್ಟಿ ಮಾಡುವುದು, ದುಷ್ಟರಿಗೆ ವ್ಯಕ್ತನಾಗದಿರುವುದು, ಇವೇ ಮೊದಲಾದವು ಸಿದ್ಧಾಂತ ಸಾಧಕ ಯುಕ್ತಿಗಳು.

ಹೀಗೆ ಪೂರ್ವಪಕ್ಷಯುಕ್ತಿಗಳನ್ನು ಮತ್ತು ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸುವಾಗ ಸಮಾಕರ್ಷಾಧಿ-ಕರಣದ ಪೂರ್ವಪಕ್ಷಯುಕ್ತಿಯನ್ನಾಗಲೀ, ಸಿದ್ಧಾಂತಯುಕ್ತಿಯನ್ನಾಗಲೀ ಸಂಗ್ರಹ ಮಾಡಿರುವುದಿಲ್ಲ.

ಅಷ್ಟೇ ಅಲ್ಲದೇ ಭಾಷ್ಯದಲ್ಲಿಯೂ ಕೂಡ ಈ ಅಧಿಕರಣದಿಂದ ಸಮನ್ವಯ ಮಾಡಲ್ಪಡುವ ಯಾವುದೇ ವಿಶೇಷಶ್ರುತಿಯನ್ನು ಉಲ್ಲೇಖಿಸಿಲ್ಲ. ಆದ್ದರಿಂದ ತತ್ವಪ್ರದೀಪಕಾರರು ಈ ಸಮಾಕರ್ಷಾಧಿ-ಕರಣದಲ್ಲಿರುವ ಎಂಟೂ ಸೂತ್ರಗಳನ್ನು ಹಿಂದಿನ ಅಧಿಕರಣಕ್ಕೆ ಸೇರಿಸಿದ್ದಾರೆ. ಯಾವರೀತಿಯಾಗಿ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಮೊದಲಾದ ಎರಡನೆಯ ಪಾದದ ಕೊನೆಯ ಸೂತ್ರಗಳು

ವೈಶ್ವಾನರಾಧಿಕರಣಕ್ಕೆ ಸೇರಿವೆಯೋ. ಅದರಂತೆ ಈ ಅಧಿಕರಣದ ಎಂಟು ಸೂತ್ರಗಳು ಹಿಂದಿನ ಅಧಿಕರಣಕ್ಕೆ ಸೇರುವುದು ಸಮಂಜಸವಾಗುತ್ತದೆ. ಹೀಗೆ ತತ್ವಪ್ರದೀಪಕಾರರ ಪಕ್ಷವೇ ಸಮಂಜಸವೆಂದು ಕಾಣಿಸುತ್ತಿರುವಾಗ ಟೀಕೆಯಲ್ಲಿ ಈ ಎಂಟೂ ಸೂತ್ರಗಳನ್ನು ಸಮಕರ್ಷಾಧಿಕರಣವೆಂದು ಪ್ರತ್ಯೇಕವಾಗಿ ಪರಿಗಣಿಸಲು ಏನು ಕಾರಣ?

**तथापि पूर्वतन्त्रे ''हेतुदर्शनाच्च'' इति सूत्रस्य विरोधाधिकरणशेषत्वेऽपि पृथङ्न्यायसूचकत्वमिवास्यापि तदस्तीति दर्शयितुं टीकायामधिकरणान्तरं कृतम् ।**

ಉತ್ತರ - ತತ್ವಪ್ರದೀಪಕಾರರ ಅಭಿಪ್ರಾಯ ಸಾಧುವೇ ಆಗಿದೆ. ಈ ಎಂಟೂ ಸೂತ್ರಗಳನ್ನು ಪ್ರತ್ಯೇಕ ಅಧಿಕರಣವನ್ನಾಗಿ ಪರಿಗಣಿಸುವ ಆವಶ್ಯಕತೆಯಿರುವುದಿಲ್ಲ. ಆದರೂ ಕೂಡ ಈ ಎಂಟೂ ಸೂತ್ರಗಳಲ್ಲಿ ಪ್ರತ್ಯೇಕವಾದ ನ್ಯಾಯವೊಂದು ಸೂಚಿತವಾಗುತ್ತಿದೆ. ಆ ನ್ಯಾಯವನ್ನು ತೋರಿಸುವುದಕ್ಕಾಗಿ ಟೀಕೆಯಲ್ಲಿ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ್ದಾರೆ. ಪೂರ್ವಮೀಮಾಂಸೆಯಲ್ಲಿ ಇದಕ್ಕೆ ಉದಾಹರಣೆ ಕಂಡಿದೆ. 'ಹೇತುದರ್ಶನಾಚ್ಚ' ಎಂಬ ಸೂತ್ರವನ್ನು ವಿರೋಧಾಧಿಕರಣದ ಶೇಷವೆಂದು ಕೆಲವರು ಅಂಗೀಕರಿಸಿದರೆ ಇನ್ನು ಕೆಲವರು ಪ್ರತ್ಯೇಕವಾದ ನ್ಯಾಯಸೂಚನೆಯು 'ಹೇತುದರ್ಶನಾಚ್ಚ' ಎಂಬ ಸೂತ್ರದಲ್ಲಿ ಕಾಣಿಸುತ್ತಿರುವುದರಿಂದ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ್ದಾರೆ. ಅಭಿಪ್ರಾಯಭೇದದಿಂದ ಒಂದೇ ಸೂತ್ರವು ಹಿಂದಿನ ಅಧಿಕರಣದ ಅಂಗವೂ ಆಗಬಹುದು. ಪ್ರತ್ಯೇಕವಾದ ಅಧಿಕರಣವೂ ಆಗಬಹುದು. ಅದರಂತೆ ಪ್ರಕೃತ ಎಂಟು ಸೂತ್ರಗಳನ್ನು ಪ್ರತ್ಯೇಕ ಅಧಿಕರಣವೆಂದು ಟೀಕೆಯಲ್ಲಿ ಪರಿಗಣಿಸಿದ ಮಾತ್ರಕ್ಕೆ ತತ್ವಪ್ರದೀಪಕ್ಕೆ ವಿರೋಧ ಮಾಡಿದಂತಾಗುವುದಿಲ್ಲ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः — समाकर्षात्** ।। **भिन्नाधिकरणतामाक्षिप्य समाधत्ते** ।। यद्यपीत्यादिना ।। **विरोधीति** ।। व्याख्यातमधस्तात् ।।

ವಿವರಣೆ - 'ಸಮಾಕರ್ಷಾತ್' ಇತ್ಯಾದಿಯಾಗಿ ಎಂಟು ಸೂತ್ರಗಳಿಂದ ಕೂಡಿದ ಸಮಾಕರ್ಷಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿರುವ ಎಂಟು ಸೂತ್ರಗಳನ್ನು ಹಿಂದಿನ ಆಕಾಶಾಧಿಕರಣಕ್ಕೆ ಸೇರಬೇಕೆಂದು ತತ್ವಪ್ರದೀಪಕಾರರು ವ್ಯಾಖ್ಯಾನ ಮಾಡಿರುತ್ತಾರೆ. ಆದರೆ ಟೀಕೆಯಲ್ಲಿ ಪ್ರತ್ಯೇಕವಾದ ಅಧಿಕರಣವೆಂದು ಪರಿಗಣಿಸಿದ್ದಾರೆ. ಆದ್ದರಿಂದ ತತ್ವಪ್ರದೀಪಕಾರರಿಗೂ ಟೀಕಾಕಾರರಿಗೂ ಪರಸ್ಪರ ವಿರೋಧ ಬಂದಂತೆ ಕಾಣಿಸುತ್ತದೆ. ಆಪಾತತಃ ತೋರುವ ಈ ವಿರೋಧವನ್ನು ಪ್ರಕೃತ ಗ್ರಂಥಕಾರರು ಪರಿಹರಿಸುತ್ತಿದ್ದಾರೆ.

'ಯದ್ಯಪಿ' ಎಂಬ ವಾಕ್ಯದಿಂದ ಪ್ರಾರಂಭವಾಗಿ 'ವೈಶ್ವಾನರಾಧಿಕರಣಶೇಷತಾವತ್' ಎಂಬಲ್ಲಿಯ ತನಕ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬೇಕಾಗಿಲ್ಲವೆಂದು ಪ್ರಶ್ನಿಸಿರುತ್ತಾರೆ. ಅನುವ್ಯಾಖ್ಯಾನದಲ್ಲಿಯೂ ಕೂಡ ಪ್ರತ್ಯೇಕ ಅಧಿಕರಣವೆಂದು ಸೂಚಿತವಾಗುವ ಯಾವುದೇ ಯುಕ್ತಿಗಳು ಕಾಣಿಸುತ್ತಿಲ್ಲ ಎಂಬುದನ್ನು 'ವಿರೋಧಿ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಈ ಅನುವ್ಯಾಖ್ಯಾನದ ಶ್ಲೋಕವನ್ನು ಈ ಹಿಂದೆಯೇ ವ್ಯಾಖ್ಯಾನ ಮಾಡಿದ್ದಾಗಿದೆ. ಅನುವ್ಯಾಖ್ಯಾನದ ಸಂಪೂರ್ಣಶ್ಲೋಕ ಹೀಗಿದೆ -

ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್ ।
ಪೃಥಕ್‌ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥

ಭಗವಂತನ ಸರ್ವೇಶ್ವರತ್ವಕ್ಕೆ ವಿರೋಧಿಯಾದ ಶಬ್ದಗಳು ಹಿಂದಿನ-ಮುಂದಿನ ಅಧಿಕರಣಗಳಲ್ಲಿ ಪ್ರಸ್ತಾಪವಾದ ಸಕಲಶಬ್ದಗಳು, ಬಹುತ್ವವಾಚಕಶಬ್ದಗಳು, ಅವಾಂತರಕಾರಣತ್ವಪ್ರತಿಪಾದಕಶಬ್ದಗಳು, ಸ್ತ್ರೀವಾಚಕಶಬ್ದಗಳು, ಅಭಾವವಾಚಕಶಬ್ದಗಳು ಇವುಗಳನ್ನೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ನಾಲ್ಕನೆಯ ಪಾದದ ಅಧಿಕರಣಗಳಲ್ಲಿ ಸಮನ್ವಯ ಮಾಡಲಾಗಿದೆ.

**प्रकाशः – सर्वमानैरिति** ।। न्यायविवरण एव विवृतमेतद्भगवत्पादैः ।

'ಸರ್ವಮಾನೈಃ ವಿರೋಧಶ್ಚ' ಇತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಯುಕ್ತಿಗಳನ್ನು ನ್ಯಾಯವಿವರಣದಲ್ಲಿ ಶ್ರೀಮದಾಚಾರ್ಯರೇ ವಿವರಿಸಿದ್ದಾರೆ. ಅದು ಹೀಗಿದೆ -

**प्रकाशः** – आनुमानिकमित्यत्र बहुप्रमाणविरोधः पूर्वपक्षे दोषात्यस्पृष्टिनियमस्सिद्धान्ते युक्तिः । ज्योतिरित्यत्र व्युत्पत्तेरप्यशक्यता शब्दार्थानेकता तथा । न सांख्येत्यत्र परस्परविरोधः ईशस्य बहुरूपत्वं कारणत्वेनेत्यत्रैकस्यैव कार्यकारणभावविरोधः व्यक्तयव्यक्तिविशेषिता । प्रकृतिश्चेत्यत्र स्त्रीलिङ्गत्वं उत्पादनं स्वदेहात् । एतेनेत्यत्र निषेधात्मकत्वं दुर्जनाव्यक्तता । पूर्वोत्तरयुक्तयो ध्येयाः ।

ನಾಲ್ಕನೆಯ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳು ಹೀಗಿವೆ -

| ಅಧಿಕರಣಗಳು | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ೧. ಆನುಮಾನಿಕಾಧಿಕರಣ | ಬಹುಪ್ರಮಾಣವಿರೋಧ | ದೋಷಗಳ ಸ್ಪರ್ಶವಿಲ್ಲದಿರುವಿಕೆ |
| ೨. ಜ್ಯೋತಿರುಪಕ್ರಮಾಧಿಕರಣ | ವ್ಯುತ್ಪತ್ತಿಯು ಕೂಡದಿರುವುದು | ಶಬ್ದಾರ್ಥಗಳು ಅನೇಕವಾಗಿರುವುದು. |
| ೩. ನ ಸಂಖ್ಯೋಪಸಂಗ್ರಹಾಧಿಕರಣ | ಪರಸ್ಪರ ವಿರೋಧ | ಪರಮಾತ್ಮನಿಗೆ ಬಹುರೂಪಗಳಿರುವುದು |
| ೪. ಆಕಾಶಾಧಿಕರಣ | ಒಬ್ಬನಿಗೆ ಕಾರ್ಯಕಾರಣ ವಿರೋಧ | ವ್ಯಕ್ತತ್ವ-ಅವ್ಯಕ್ತತ್ವಗಳಿಂದ ವಿಶೇಷವಿರುವುದು. |
| ೫. ಪ್ರಕೃತ್ಯಧಿಕರಣ | ಸ್ತ್ರೀಲಿಂಗ | ತನ್ನ ಶರೀರದಿಂದ ನೇರವಾಗಿ ಸೃಷ್ಟಿಮಾಡುವುದು |
| ೬. ಏತೇನಾಧಿಕರಣ | ನಿಷೇಧ | ದುಷ್ಟರಿಗೆ ವ್ಯಕ್ತನಾಗದಿರುವುದು. |

ಹೀಗೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ತಿಳಿಯಬೇಕು.

ಸಮಾಕರ್ಷಾಧಿಕರಣ (೧-೪-೫)

**प्रकाशः** – इत्याद्या इत्यादिशब्दोऽपि न्यायसाम्येनान्यपादेष्वपि युक्त्यन्तरोपलक्षणमित्युक्तं सम्बन्धदीपिकायाम् ।।

ಈ ಪಾದದಲ್ಲಿ ಇಷ್ಟೇ ಅಧಿಕರಣಗಳಿರುವಾಗ ಪುನಃ ಅನುವ್ಯಾಖ್ಯಾನದಲ್ಲಿ 'ಇತ್ಯಾದ್ಯಾಃ' ಎಂಬುದಾಗಿ ಏಕೆ ಹೇಳಿದ್ದಾರೆ ಎಂಬ ಪ್ರಶ್ನೆಗೆ ಶಂಕರ ಪಂಡಿತರು ಸಂಬಂಧದೀಪಿಕೆಯಲ್ಲಿ(೧) ಉತ್ತರವನ್ನು ನೀಡಿದ್ದಾರೆ. ಇಲ್ಲಿ ಹೇಳಿದಂತೆ ಬೇರೆ ಪಾದಗಳಲ್ಲಿಯೂ ಕೂಡ ನ್ಯಾಯಸಾಮ್ಯದಿಂದ ಬೇರೆ ಯುಕ್ತಿಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು ಎಂದು.

**प्रकाशः – हेतुदर्शनादिति ।।** आद्याध्यायस्य तृतीयपादे ''विरोधे त्वनपेक्षं स्यादसति ह्यनुमानम्'' इति विरोधाधिकरणे ''औदुम्बरी सर्वा वेष्टयितव्या'' इति स्मृतेः ''औदुम्बरीं स्पृष्ट्वोद्गायेत्'' इति श्रुतिविरोधादप्रामाण्यमिति विरोधे त्विति सूत्रेणोक्त्वा तत्रैव लोभादिहेतुदर्शनाच्च सर्ववेष्टनस्मृतिरप्रमाणमिति पूर्वशेषतया योजयित्वाऽधिकरणान्तरं वेत्यादिना पृथङ्न्यायसूचकत्वं शाबरभाष्येऽभिहितं वैसर्जनहोमीयं वासोऽध्वर्युर्गृह्णाति'' इत्यादिकं प्रत्यक्षश्रुतिविरोधशून्यं स्मृतिजातं किं प्रमाणमुत नेति संशये कर्तृसामान्यात्प्रत्यक्षश्रुत्यविरोधाच्च प्रमाणमिति प्राप्ते लोभादिहेतुदर्शनादेवं जातीयकमप्रमाणमिति सिद्धान्तितम् ।

ವಿರೋಧೇ ತು ಅನಪೇಕ್ಷಂ ಸ್ಯಾದಸತಿ ಹ್ಯನುಮಾನಮ್ (೧-೩- )

ಈ ವಿರೋಧಾಧಿಕರಣದಲ್ಲಿ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಎಂಬ ಸ್ಮೃತಿವಾಕ್ಯಕ್ಕೆ 'ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್' ಎಂಬ ಶ್ರುತಿವಿರೋಧ ಬರುವುದರಿಂದ ಅಪ್ರಾಮಾಣ್ಯವನ್ನು ಆಶಂಕಿಸಿ ಉತ್ತರಿಸಲಾಗಿದೆ. ಔದುಂಬರೀ ಎಂಬ ಯೂಪಸ್ತಂಭವನ್ನು ಸಂಪೂರ್ಣವಾಗಿ ವಸ್ತ್ರದಿಂದ ಮುಚ್ಚಬೇಕೆಂದು ಸ್ಮೃತಿಯು ಹೇಳುತ್ತಿದೆ. ಆದರೆ ಇದಕ್ಕೆ ವಿರುದ್ಧವಾಗಿ ಔದುಂಬರೀ ವೃಕ್ಷದ ಯೂಪಸ್ತಂಭವನ್ನು ಮುಟ್ಟಬೇಕೆಂದು ಶ್ರುತಿ ಹೇಳುತ್ತಿದೆ. ಸ್ಮೃತಿವಾಕ್ಯ ಹೇಳುವಂತೆ ಸಮಗ್ರ ಸ್ತಂಭವನ್ನು ವಸ್ತ್ರದಿಂದ ಮುಚ್ಚಿದರೆ

(೧) ಸುಬ್ರಹ್ಮಣ್ಯಪಂಡಿತರಿಗೆ ಮೂರುಮಂದಿ ಮಕ್ಕಳು, ತ್ರಿವಿಕ್ರಮಪಂಡಿತರು, ಶಂಕರಪಂಡಿತರು, ಕಲ್ಯಾಣಿದೇವಿ. ತ್ರಿವಿಕ್ರಮಪಂಡಿತರ ತಮ್ಮ ಶಂಕರಪಂಡಿತರೂ ಕೂಡ ಉತ್ತಮ ವಿದ್ವಾಂಸರು. ಇವರು ಅಣ್ಣನಾದ ತ್ರಿವಿಕ್ರಮಪಂಡಿತರಿಗಿಂತ ಮೊದಲೇ ಶ್ರೀಮದಾಚಾರ್ಯರ ಶಿಷ್ಯತ್ವವನ್ನು ವಹಿಸಿದ್ದರು. ಶ್ರೀಮದಾಚಾರ್ಯರ ಪರಮಾನುಗ್ರಹಕ್ಕೆ ಪಾತ್ರರಾದ ಭಾಗ್ಯಶಾಲಿಗಳು. ಇವರು ಬರೆದ ಎರಡು ಗ್ರಂಥಗಳು ಮಾತ್ರ ಸದ್ಯ ಉಪಲಬ್ಧ ಇವೆ. ೧. 'ಅನುವ್ಯಾಖ್ಯಾನ ಸಂಬಂಧದಿಪೀಕಾ' (ಅನುವ್ಯಾಖ್ಯಾನದ ಟೀಕೆ) ೨. 'ಅನುವ್ಯಾಖ್ಯಾನ ನ್ಯಾಯವಿವರಣಸಂಬಂಧದಿಪೀಕಾ' (ಅನುವ್ಯಾಖ್ಯಾನದ ಅಧಿಕರಣನ್ಯಾಯಮಾಲೆಯನ್ನು ನ್ಯಾಯವಿವರಣದ ಹಿನ್ನೆಲೆಯಲ್ಲಿ ವಿವರಿಸುವ ಪುಟ್ಟ ಕೃತಿ) ಶಂಕರಪಂಡಿತರ ಈ ಎರಡು ಕೃತಿಗಳನ್ನು ಅನೇಕರು ಹೆಚ್ಚಾಗಿ ಇಂದು ಪರಿಗಣಿಸುತ್ತಿಲ್ಲ. ಕೆಲವು ವಿದ್ವಾಂಸರು ಸಂಬಂಧದೀಪಿಕಾ ಗ್ರಂಥವನ್ನು ಅಧ್ಯಯನದಲ್ಲಿ ಅಳವಡಿಸಿಕೊಂಡಿದ್ದರೂ ಶಂಕರಪಂಡಿತರದ್ದೆಂದು ಒಪ್ಪಿಲ್ಲ.

ಅದನ್ನು ಮುಟ್ಟಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಮುಟ್ಟಿ ಗಾನ ಮಾಡಬೇಕು ಎಂದು ಹೇಳುವ ಶ್ರುತಿವಾಕ್ಯದಿಂದ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ 'ಔದುಂಬರೀಂ ಸರ್ವಾ ವೇಷ್ಟಯಿತವ್ಯಾ' ಎಂಬ ಸ್ಮೃತಿವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳಬೇಕೆಂದು 'ವಿರೋಧೇ ತು' ಎಂಬ ಸೂತ್ರದಲ್ಲಿ ಸಮರ್ಥಿಸಲಾಗಿದೆ. ಹೀಗೆ ಸ್ಮೃತಿವಾಕ್ಯಕ್ಕೆ ಅಪ್ರಾಮಾಣ್ಯವನ್ನು ಈ ಸೂತ್ರವು ಸಮರ್ಥಿಸಿದ ಮೇಲೆ ಮುಂದಿನ 'ಹೇತುದರ್ಶನಾಚ್ಚ' ಎಂಬ ಸೂತ್ರವೂ ಕೂಡ ಇದನ್ನೇ ಪುಷ್ಟೀಕರಿಸುತ್ತಿದೆ. ವಿರೋಧಾಧಿಕರಣದಲ್ಲಿ 'ಹೇತುದರ್ಶನಾಚ್ಚ' ಎಂಬ ಸೂತ್ರವು ಸರ್ವವೇಷ್ಟನಸ್ಮೃತಿವಾಕ್ಯಕ್ಕೆ ಅಪ್ರಾಮಾಣ್ಯವನ್ನು ಸಮರ್ಥಿಸುತ್ತಿದೆ. ಹೀಗೆ 'ವಿರೋಧೇ ತು ಅನಪೇಕ್ಷಮ್' ಎಂಬ ಸೂತ್ರ, ಹಾಗೂ 'ಹೇತುದರ್ಶನಾಚ್ಚ' ಎಂಬೆರಡೂ ಸೂತ್ರಗಳು ಸೇರಿ ಒಂದೇ ಅಧಿಕರಣವೆಂದು ಮೀಮಾಂಸಕರಲ್ಲಿ ಕೆಲವರು ಹೇಳುತ್ತಾರೆ.

ಕೆಲವರು 'ಹೇತುದರ್ಶನಾಚ್ಚ' ಎಂಬ ಸೂತ್ರವನ್ನು ಪ್ರತ್ಯೇಕ ಅಧಿಕರಣವೆಂದೇ ಪರಿಗಣಿಸಿದ್ದಾರೆ. ಈ ಒಂದೇ ಸೂತ್ರದಲ್ಲಿಯೂ ಪ್ರತ್ಯೇಕವಾದ ನ್ಯಾಯವು ಸೂಚಿತವಾಗುತ್ತಿರುವುದರಿಂದ ಹಿಂದಿನ ಅಧಿಕರಣದ ಗುಣಸೂತ್ರವೆಂದು ಒಪ್ಪಬೇಕಾಗಿಲ್ಲ. ಇದು ಶಾಬರಭಾಷ್ಯದ ಅಭಿಪ್ರಾಯ. 'ವೈಸರ್ಜನಹೋಮೀಯಂ ವಾಸೋಽಧ್ವರ್ಯುರ್ಗೃಹ್ಣಾತಿ' 'ವೈಸರ್ಜನಹೋಮದಲ್ಲಿರುವ ವಸ್ತ್ರವನ್ನು ಅಧ್ವರ್ಯು ಆದವನು ಗ್ರಹಣ ಮಾಡಬೇಕು' ಎಂಬ ಪ್ರತ್ಯಕ್ಷಶ್ರುತಿಯಿಂದ ಸುತ್ತಲ್ಪಟ್ಟ ಬಟ್ಟೆಯು ಅಧ್ವರ್ಯುವಿಗೆ ಸೇರುತ್ತದೆಂದು ತಿಳಿಯುತ್ತಿದೆ. ಇಂಥ ಪ್ರತ್ಯಕ್ಷ ಶ್ರುತಿವಿರೋಧಶೂನ್ಯವಾದ ಸ್ಮೃತಿವಾಕ್ಯವು ಪ್ರಮಾಣವೋ, ಅಥವಾ ಅಪ್ರಮಾಣವೋ? ಎಂಬುದು ಸಂದೇಹ. ಸ್ಮೃತಿಕಾರರ ಬೇರೆ ವಾಕ್ಯಗಳು ಪ್ರಮಾಣವೆಂದು ಹೇಗೆ ಒಪ್ಪುತ್ತೀರೋ, ಆ ಬೇರೆ ವಾಕ್ಯಗಳ ಕರ್ತೃವೇ ಇದಕ್ಕೂ ಕರ್ತೃವಾಗಿದ್ದರಿಂದ ಪ್ರಮಾಣವೆಂದು ಒಪ್ಪಬೇಕು. ಹೀಗೆ ಪ್ರಮಾಣವೆಂದು ಒಪ್ಪಿದಾಗ ಪ್ರತ್ಯಕ್ಷಶ್ರುತಿಯ ವಿರೋಧವೂ ಕೂಡ ಬರುವುದಿಲ್ಲ. ಇಷ್ಟು ಪೂರ್ವಪಕ್ಷ.

ಯೂಪಸ್ತಂಭವನ್ನು ಸಂಪೂರ್ಣವಾಗಿ ವಸ್ತ್ರದಿಂದ ಆಚ್ಛಾದನೆ ಮಾಡಬೇಕೆಂದು ಸ್ಮೃತಿಯಲ್ಲಿ ಹೇಳಲಾಗಿದೆ. ಈ ವಾಕ್ಯವನ್ನು ನೋಡಿದಾಗ ಅಧ್ವರ್ಯುವಿನ ಲೋಭ ಎಂಬ ದೋಷವು ಕಾಣಿಸುತ್ತದೆ. ಲೋಭ ಏಕೆಂದರೆ ಎರಡು ಅಂಗುಲದಷ್ಟು ವಸ್ತ್ರದಿಂದ ಆಚ್ಛಾದನೆ ಮಾಡದ್ದಿದರೆ ತನಗೆ ದೊರಕುವ ವಸ್ತ್ರವು ಸಣ್ಣದಾಗುತ್ತದೆ. ಸಂಪೂರ್ಣವಾಗಿ ಆಚ್ಛಾದನೆ ಮಾಡಿದರೆ ತನಗೆ ದೊರೆಯುವ ವಸ್ತ್ರವು ದೊಡ್ಡದಾಗಿರುತ್ತದೆ. ಆಚ್ಛಾದಿತವಾದ ವಸ್ತ್ರವನ್ನು ಅಧ್ವರ್ಯುವಿಗೆ ಕೊಡಬೇಕೆಂದು ವಿಧಿಯಿರುವುದರಿಂದ ಸಂಪೂರ್ಣವಾಗಿ ವೇಷ್ಟನ ಮಾಡಬೇಕೆಂದು ಸ್ಮೃತಿವಾಕ್ಯದಲ್ಲಿ ಹೇಳಲಾಗಿದೆ. ಆದ್ದರಿಂದ ಹೀಗೆ ಲೋಭವೆಂಬ ದೋಷವು ಕಾಣಿಸುತ್ತಿರುವುದರಿಂದ ಇಂಥ ವಾಕ್ಯವನ್ನು ಅಪ್ರಮಾಣವೆಂದು ಹೇಳಬೇಕು. ಇಷ್ಟು ಸಿದ್ಧಾಂತ.

**ಪ್ರಕಾಶಃ** – तद्वदस्य पूर्वशेषत्वेऽपि पृथक्त्वं युक्तमित्युक्त्या प्राचीनमताविरोधः सूचितः ।

ಹೀಗೆ ಪೂರ್ವಮೀಮಾಂಸೆಯ ವಿರೋಧಾಧಿಕರಣದಲ್ಲಿ 'ಹೇತುದರ್ಶನಾಚ್ಚ' ಎಂಬ ಸೂತ್ರವನ್ನು ಹಿಂದಿನ ಸೂತ್ರದ ಅಂಗವೆಂದು ಕೆಲವರು ಒಪ್ಪಿದ್ದರೂ ಸಹ ಇನ್ನು ಕೆಲವರು ಪ್ರತ್ಯೇಕ ಅಧಿಕರಣವೆಂದೇ ಪರಿಗಣಿಸಿದ್ದಾರೆ. ಅಭಿಪ್ರಾಯಭೇದದಿಂದ ಒಂದೇ ಸೂತ್ರ ಹಿಂದಿನ ಅಧಿಕರಣದ ಶೇಷವೂ ಆಗಿರುತ್ತದೆ.

ಪ್ರತ್ಯೇಕ ಅಧಿಕರಣವೂ ಆಗಿರುತ್ತದೆ. ಅದೇರೀತಿಯಾಗಿ ಪ್ರಕೃತದಲ್ಲಿ 'ಸಮಾಕರ್ಷಾತ್' ಇವೇ ಮೊದಲಾದ ಎಂಟು ಸೂತ್ರಗಳು ಹಿಂದಿನ ಅಧಿಕರಣದ ಅಂಗವಾಗಿವೆ ಎಂದು ತತ್ತ್ವಪ್ರದೀಪಕಾರರು ಹೇಳಿದ್ದರೂ ಕೂಡ ಟೀಕೆಯಲ್ಲಿ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ್ದು ತಪ್ಪಾಗುವುದಿಲ್ಲ. ಪ್ರಾಚೀನರ ಅಭಿಪ್ರಾಯಕ್ಕೆ ವಿರೋಧ ಬರುವುದಿಲ್ಲ.

**प्रकाशः** – **समन्वेतव्यानुक्तेराशयः प्रागेवाभिहितः । सर्वशब्दा अत्र चिन्त्यन्त इति विषयोपाधिरपि प्रागेवोक्तः ।**

ಹಾಗಾದರೆ ಈ ಅಧಿಕರಣದಲ್ಲಿ ಸಮನ್ವಯ ಮಾಡಬೇಕಾಗಿರುವ ವಾಕ್ಯಗಳನ್ನು ಅನುವ್ಯಾಖ್ಯಾನದಲ್ಲಿ ಉಲ್ಲೇಖಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ ಈಗಾಗಲೇ ಉತ್ತರಿಸಿದ್ದೇವೆ. ಸಕಲವಿಧವಾದ ಶಬ್ದಗಳನ್ನು ಈ ಅಧಿಕರಣದಲ್ಲಿ ವಿಚಾರ ಮಾಡುತ್ತಿರುವುದರಿಂದ ವಿಷಯೋಪಾಧಿಯನ್ನೂ ಕೂಡ ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. 'ವಿರೋಧಿಸರ್ವಬಾಹುಲ್ಯ' ಎಂಬಲ್ಲಿ 'ಸರ್ವ' ಎಂಬ ಪದದಿಂದ ಜ್ಯೋತಿರುಪಕ್ರಮಾಧಿಕರಣದ ಉಪಾಧಿಯನ್ನು ಹೇಳಿದಂತೆ, ಈ ಸಮಾಕರ್ಷಾಧಿಕರಣದ ಉಪಾಧಿಯನ್ನೂ ಕೂಡ ಹೇಳಿರುತ್ತಾರೆ.

**प्रकाशः** – **अस्य पूर्वशेषत्वमप्यनुमतमिति न पृथक्सङ्गत्युक्तिः ।**

ಈ ಎಂಟು ಸೂತ್ರಗಳಿಂದ ಕೂಡಿರುವ ಸಮಕರ್ಷಾಧಿಕರಣವು ಪ್ರತ್ಯೇಕವಾಗುವುದಾದಲ್ಲಿ, ಹಿಂದಿನ ಅಧಿಕರಣದಿಂದ ಸಂಗತಿಯನ್ನು ತೋರಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೂ ಈಗ ಅವಕಾಶವಿಲ್ಲ. ಏಕೆಂದರೆ ಈಗಾಗಲೇ ಹೇಳಿದಂತೆ ಪ್ರತ್ಯೇಕ ಅಧಿಕರಣವೆಂಬುದು ಹೇಗೆ ಸಮ್ಮತವೋ, ಅದರಂತೆ ಹಿಂದಿನ ಆಕಾಶಾಧಿಕರಣದ ಗುಣಸೂತ್ರಗಳೂ ಆಗಿರುತ್ತವೆ. ಹಿಂದಿನ ಅಧಿಕರಣದ ಅಂಗಸೂತ್ರಗಳಾದ್ದರಿಂದ ಪ್ರತ್ಯೇಕವಾದ ಸಂಗತಿಯನ್ನು ತೋರಿಸಿರುವುದಿಲ್ಲ.

**प्रकाशः** – **यद्वा ''पूर्वोक्तन्यायैः'' इत्यादिनैव सा सूचितेति नोक्ता । तथा हि।**

ಹಿಂದಿನ ಅಧಿಕರಣದಿಂದ ಸಂಗತಿಯಿಲ್ಲವೆಂದು ತಿಳಿಯಬಾರದು. ಗ್ರಂಥಕಾರರು 'ಪೂರ್ವೋಕ್ತನ್ಯಾಯೈಃ' ಇತ್ಯಾದಿ ವಾಕ್ಯಗಳಿಂದ ಸಂಗತಿಯನ್ನು ಸೂಚನೆ ಮಾಡಿದ್ದಾರೆ. ಅದು ಹೀಗಿದೆ -

**प्रकाशः** – **आनुमानिकादिनयचतुष्टयेन सर्वशब्दानां तदधीनत्वात् ''चमसवदविशेषात् तथा ह्यधीयत एके'' इत्युक्तन्यायैर्ब्रह्मणि समन्वये सिद्धे तर्ह्यन्यत्रवृत्त्यभावेन तारतम्यकर्मक्रमकालादेर्देह तदन्तर्गतप्राणादेर्भूतोत्पत्तेश्चासिद्धिरिति बाधकस्य ''कल्पनोपदेशात्'' इत्यनेनान्यत्रापि मुख्यवृत्त्यभ्युपगमेन परिहारे तर्ह्युभयत्र वृत्तिस्तुल्या स्यादिति शङ्कायामस्य प्रवृत्तेरनन्तरसङ्गतिरिति ।**

ಹಿಂದಿನ ಆನುಮಾನಿಕಾಧಿಕರಣವೇ ಮೊದಲಾದ ನಾಲ್ಕರಲ್ಲಿ ಸಕಲಶಬ್ದಗಳನ್ನು ಪರಮಾತ್ಮನಲ್ಲಿ ತದಧೀನತ್ವನ್ಯಾಯದಿಂದ ಸಮರ್ಥನೆ ಮಾಡಲಾಯಿತು. 'ಚಮಸವದವಿಶೇಷಾತ್ ತಥಾ ಹ್ಯಧೀಯತೇ ಏಕೇ' ಎಂಬ ಸೂತ್ರದಿಂದಲೂ ಕೂಡ ಬ್ರಹ್ಮನಲ್ಲಿ ಸಕಲಶಬ್ದ ಸಮನ್ವಯವು ಸಿದ್ಧವಾಯಿತು. ಅನಂತರ ಎಲ್ಲಾ

ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುವುದಾದರೆ 'ಇಂದ್ರಿಯೇಭ್ಯ ಪರಾ ಹ್ಯರ್ಥಾಃ' ಇತ್ಯಾದಿ ವಾಕ್ಯಗಳಿಂದ ತಿಳಿಯಲ್ಪಡುವ ತಾರತಮ್ಯವು 'ವಸಂತೆ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಿಂದ ತಿಳಿಯಲ್ಪಡುವ ಕರ್ಮ, ಕ್ರಮ ಹಾಗೂ ಕಾಲಗಳು ನ ಸಂಖ್ಯೋಪಸಂಗ್ರಹಾಧಿಕರಣದಿಂದ ತಿಳಿಯಲ್ಪಡುವ ದೇಹ, ತದಂತರ್ಗತವಾದ ಪ್ರಾಣ ಇವುಗಳು 'ಕಾರಣತ್ವೇನ ಚ ಆಕಾಶಾದಿಷು' ಎಂಬ ಅಧಿಕರಣದಿಂದ ತಿಳಿಯಲ್ಪಡುವ ಭೂತೋತ್ಪತ್ತಿ ಇವುಗಳಿಗೆಲ್ಲಾ ಸಿದ್ಧವಾಗದಿರಬೇಕಾದೀತು. ಈ ಬಾಧಕಗಳನ್ನು 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಪರಿಹರಿಸಲಾಗಿದೆ. ಹೀಗೆ ಪರಿಹರಿಸಿದ ಮೇಲೆ ಬೇರೆ ಪದಾರ್ಥಗಳಲ್ಲಿಯೂ ಮುಖ್ಯವೃತ್ತಿಯನ್ನು ಒಪ್ಪಿದಂತಾಯಿತು. ಆವಾಗ ಪರಮಾತ್ಮನಲ್ಲಿ ಹಾಗೂ ಬೇರೆ ಪದಾರ್ಥಗಳಲ್ಲಿ ಮುಖ್ಯವೃತ್ತಿಯು ಸಮಾನವಾಗಿದೆ ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ಈ ಎಂಟು ಸೂತ್ರಗಳಿಂದ ಒಳಗೊಂಡಿರುವ ಸಮಾಕರ್ಷಾಧಿಕರಣವು ಹೊರಟಿದೆ. ಹೀಗೆ ಆನಂತರ್ಯಸಂಗತಿಯನ್ನು ತಿಳಿಯಬೇಕು.

**प्रकाशः** – नचैवं सति कल्पनेति सूत्रानन्तर्यमेवास्य स्यादिति शङ्क्यम् । आकाशादिष्विति सप्तमीनिर्देशेनाकाशादेर्भूतस्यापि प्रतीतेस्तस्याश्च कल्पनेत्यत्रोक्त-न्यायानुसन्धानेनैव निर्वाहे कार्ये तर्ह्युभयत्र वृत्तिस्तुल्या किमिति शङ्कायाः अत्र सङ्गतत्वात् ।

ಪ್ರಶ್ನೆ - ಹಾಗಾದರೆ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳನ್ನು 'ಕಲ್ಪನೋಪದೇಶಾತ್' ಎಂಬ ಸೂತ್ರದ ಅನಂತರ ಹೇಳಬೇಕಿತ್ತಲ್ಲವೇ?

ಉತ್ತರ - ಆಕಾಶಾಧಿಕರಣದ ಅನಂತರ ಈ ಸಮಾಕರ್ಷಾಧಿಕರಣವನ್ನು ಉಲ್ಲೇಖಿಸಲು ಮಹತ್ವವಾದ ಕಾರಣವಿದೆ. 'ಆಕಾಶಾದಿಷು' ಎಂಬುದಾಗಿ ಸೂತ್ರದಲ್ಲಿ ಸಪ್ತಮೀ ನಿರ್ದೇಶದಿಂದ ಭೂತಾಕಾಶವೂ ಕೂಡ ಪ್ರತೀತವಾಗುತ್ತದೆ. ಈ ಭೂತಾಕಾಶವು ಆಕಾಶಶಬ್ದದಿಂದ ಪ್ರತಿಪಾದ್ಯವಾಗದಿದ್ದರೆ ಭೂತೋತ್ಪತ್ತಿಯೇ ಅನುಪಪನ್ನವಾಗಬೇಕಾದೀತು. ಆದ್ದರಿಂದ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಆಕಾಶಶಬ್ದವು ಕೇವಲ ಪರಮಾತ್ಮನನ್ನಷ್ಟೇ ಪ್ರತಿಪಾದನೆ ಮಾಡುವುದಲ್ಲದೇ ಮುಖ್ಯವೃತ್ತಿಯಿಂದ ಭೂತಾಕಾಶವನ್ನೂ ಕೂಡ ಪ್ರತಿಪಾದನೆ ಮಾಡುತ್ತದೆಂದು ಉತ್ತರಿಸಬೇಕು. ಆವಾಗ ಆಕಾಶಶಬ್ದದ ವೃತ್ತಿಯು ಪರಮಾತ್ಮನಲ್ಲಿ ಮತ್ತು ಭೂತಾಕಾಶದಲ್ಲಿ ಸಮಾನವಾಯಿತು. ಸಮಾನವೃತ್ತಿಯನ್ನು ಒಪ್ಪಿದರೆ ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯನ್ನು ಹೇಳಿದಂತಾಗುವುದಿಲ್ಲ. ಆದಕ್ಕಾಗಿ ಇಲ್ಲಿ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳು ಹೊರಟಿವೆ.

**प्रकाशः** – कल्पनेति सूत्रस्य कारणत्वेनेत्ये तच्छेषत्वेन निवेशस्स्यादिति चोद्यं तु तत्रैव निरस्तम् ।

ಪ್ರಶ್ನೆ - ಹಾಗಾದರೆ 'ಕಲ್ಪನೋಪದೇಶಾತ್' ಎಂಬ ಸೂತ್ರವನ್ನು 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರದ ಅನಂತರ ಹೇಳಬಹುದಿತ್ತಲ್ಲವೇ?

ಉತ್ತರ - ಈ ಆಶಂಕೆಯನ್ನೂ ಕೂಡ ಈಗಾಗಲೇ ನಿರಾಸ ಮಾಡಿದಂತಾಗಿದೆ. ಏಕೆಂದರೆ 'ಕಲ್ಪನೋಪದೇಶಾತ್' ಎಂಬ ಸೂತ್ರವನ್ನು ಜ್ಯೋತಿರುಪಕ್ರಮಾಧಿಕರಣದಲ್ಲಿ ಹಾಕದಿದ್ದರೆ ಅದರ ಸಿದ್ಧಾಂತವೇ ಸ್ಥಾಪಿತವಾಗುತ್ತಿರಲಿಲ್ಲ. ವ್ಯುತ್ಪತ್ತ್ಯನುಪಪತ್ತಿಯನ್ನು ಪರಿಹರಿಸಲು ಅನ್ಯತ್ರರೂಢಿಯನ್ನು ಒಪ್ಪಲೇಬೇಕು. ಇದನ್ನು 'ಕಲ್ಪನೋಪದೇಶಾತ್' ಎಂಬ ಸೂತ್ರವು ಸಮರ್ಥಿಸುತ್ತಿದೆ. ಇಲ್ಲದಿದ್ದರೆ ವ್ಯುತ್ಪತ್ತ್ಯನುಪಪತ್ತಿ ಎಂಬ ದೋಷ ಹಾಗೇ ಉಳಿಯುತ್ತಿತ್ತು. ಪ್ರಕೃತ ಆಕಾಶಾಧಿಕರಣದಲ್ಲಿ 'ಕಲ್ಪನೋಪದೇಶಾತ್' ಎಂಬ ಸೂತ್ರವನ್ನು ಹೇಳದಿದ್ದರೂ ಕೂಡ 'ಆಕಾಶಾದಿಷು' ಎಂದು ಹೇಳಿದ್ದರಿಂದಲೇ 'ಕಲ್ಪನೋಪದೇಶಾತ್' ಎಂಬ ಸೂತ್ರವು ಸ್ಮಾರಿತವಾಗುತ್ತದೆ. ಈ ವಿಷಯವನ್ನು 'ಕಲ್ಪನೋಪದೇಶಾತ್' ಎಂಬ ಸೂತ್ರ ವ್ಯಾಖ್ಯಾನದ ಸಂದರ್ಭದಲ್ಲಿಯೇ ವಿವರಿಸಿದ್ದೇವೆ.

**प्रकाशः** – ''तस्य ज्योतिरधिकरणाक्षेपपरिहारार्थत्वात्'' इति सुधावाक्यमपि कल्पनेति सूत्रस्य तत्रैव निवेशात्तदाक्षेपाभिप्रायम् । अत एव टीकायां कल्पनेति सूत्रमाक्षिप्तम् ।

'ವಿರೋಧಿ ಸರ್ವಬಾಹುಲ್ಯ' ಎಂಬಲ್ಲಿರುವ ಸರ್ವ ಎಂಬುದು ಜ್ಯೋತಿರುಪಕ್ರಮಾಧಿಕರಣಕ್ಕೆ ಹೇಗೆ ಉಪಾಧಿಯಾಗುತ್ತದೋ, ಅದರಂತೆ ಈ ಅಧಿಕರಣಕ್ಕೂ ಕೂಡ ಉಪಾಧಿಯಾಗುತ್ತದೆಂದು ಟೀಕೆಯಲ್ಲಿ ಹೇಳಿದ್ದಾರೆ. ಜ್ಯೋತಿರುಪಕ್ರಮಾಧಿಕರಣದ ಮೇಲೆ ಬರುವಂತಹ ಆಕ್ಷೇಪದ ಪರಿಹಾರಕ್ಕಾಗಿ ಈ ಅಧಿಕರಣವು ಹೊರಟಿರುತ್ತದೆಂದು ನ್ಯಾಯಸುಧೆಯಲ್ಲಿ ಹೇಳಿದ್ದಾರೆ - 'ತಸ್ಯ ಜ್ಯೋತಿರಧಿಕರಣಾಕ್ಷೇಪಪರಿಹಾರಾರ್ಥತ್ವಾತ್' ಸಮಾಕರ್ಷಾಧಿಕರಣವು ಜ್ಯೋತಿರುಪಕ್ರಮಾಧಿಕರಣದ ಆಕ್ಷೇಪದ ಪರಿಹಾರಕ್ಕಾಗಿ ಸಾರ್ಥಕವಾಗಿದೆ ಎಂದು. ಇದರ ಅಭಿಪ್ರಾಯವೇನೆಂದರೆ ಜ್ಯೋತಿರುಪಕ್ರಮಾಧಿಕರಣದಲ್ಲಿರುವ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ವಿಷಯವನ್ನು ಅಂಗೀಕರಿಸಿದರೆ ಸಕಲ ಶಬ್ದಗಳಿಗೆ ಸಮಾನವಾದ ಎರಡು ವೃತ್ತಿಗಳನ್ನು ಒಪ್ಪಿದಂತಾಗುತ್ತದೆ. ಅದರ ಪರಿಹಾರಕ್ಕಾಗಿ ಈ ಅಧಿಕರಣವು ಹೊರಟದೆ. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ವಿಚಾರದ ಮೇಲೆ ಆಕ್ಷೇಪ ಮಾಡಿ ಪರಿಹಾರವನ್ನು ಇಲ್ಲಿ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೂ ಕೂಡ 'ಸರ್ವ' ಎಂಬುದೇ ಉಪಾಧಿಯಾಗಿದೆ. ಆದ್ದರಿಂದಲೇ ಟೀಕೆಯಲ್ಲಿ 'ಕಲ್ಪನೋಪದೇಶಾತ್' ಎಂಬ ಸೂತ್ರವನ್ನು ಆಕ್ಷೇಪ ಮಾಡಿರುತ್ತಾರೆ.




ತತ್ವಪ್ರದೀಪಕಾರರು ಸಮಾಕರ್ಷಾಧಿಕರಣವನ್ನು ಪ್ರತ್ಯೇಕವೆಂದು ಪರಿಗಣಿಸಿಯೇ ಇಲ್ಲ. 'ಕಾರಣತ್ವೇನ ಚ ಆಕಾಶಾದಿಷು' ಇತ್ಯಾದಿ ಹಿಂದಿನ ಅಧಿಕರಣದ ಸೂತ್ರದ ಅಂಗವಾಗಿದೆಯೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಎಂಟು ಸೂತ್ರಗಳನ್ನು ಸೇರಿಸಿ ಇದನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬೇಕೆಂದು ಟೀಕಾಕಾರರು ಅಭಿಪ್ರಾಯ ಪಡುತ್ತಾರೆ. ಹೀಗೆ ತತ್ವಪ್ರದೀಪಕಾರರ ಪಕ್ಷಕ್ಕೂ, ಟೀಕಾಕಾರರ ಪಕ್ಷಕ್ಕೂ ಮೇಲ್ನೋಟಕ್ಕೆ ವಿರೋಧ ಕಾಣಿಸುತ್ತದೆ. ಈ ವಿರೋಧವನ್ನು ಪ್ರಕೃತ ಗ್ರಂಥಕಾರರು ಪರಿಹರಿಸಲು ಹೊರಟಿದ್ದಾರೆ.

ಪರಿಪೂರ್ಣಚಂದ್ರಿಕಾ

ಅನುವ್ಯಾಖ್ಯಾನದಲ್ಲಿ 'ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್' ಎಂಬ ಶ್ಲೋಕದಿಂದ ನಾಲ್ಕನೇ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಉಪಾಧಿಯನ್ನು ಸಂಗ್ರಹಿಸಿದ್ದಾರೆ. ಆ ಸಂದರ್ಭದಲ್ಲಿ ಸಮಾಕರ್ಷಾಧಿಕರಣದಲ್ಲಿ ಸಂಬಂಧಪಟ್ಟ ಉಪಾಧಿಯನ್ನು ಸಂಗ್ರಹಿಸಿಲ್ಲ. ಅಷ್ಟೇ ಅಲ್ಲದೇ 'ಸರ್ವಮಾನ್ಯೈರ್ವಿರೋಧಶ್ಚ' ಇತ್ಯಾದಿ ಶ್ಲೋಕದಿಂದ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸುವಾಗಲೂ, ಸಮಾಕರ್ಷಾಧಿಕರಣದ ಯುಕ್ತಿಯನ್ನು ಸಂಗ್ರಹಿಸಿರುವುದಿಲ್ಲ. ಹೀಗೆ ಶ್ರೀಮದಾಚಾರ್ಯರ ವಾಕ್ಯಗಳನ್ನು ಗಮನಿಸಿದಾಗಲೂ ತತ್ವಪ್ರದೀಪಕಾರರ ಪಕ್ಷವೇ ಸಾಧುವಾಗಿದೆಯೆಂದು ತಿಳಿಯುತ್ತದೆ. ಭಾಷ್ಯದಲ್ಲಿಯೂ ಕೂಡ ಈ ಅಧಿಕರಣದಲ್ಲಿ ಸಮನ್ವಯ ಮಾಡಲ್ಪಡುವ ಶಬ್ದಗಳನ್ನು ಪ್ರತ್ಯೇಕವಾಗಿ ಉಲ್ಲೇಖ ಮಾಡಿಲ್ಲ. ಆದ್ದರಿಂದ ಹೇಗೆ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಇತ್ಯಾದಿ ಸೂತ್ರಗಳನ್ನು ವೈಶ್ವಾನರಾಧಿಕರಣದ ಅಂಗಸೂತ್ರಗಳೆಂದು ಪರಿಗಣಿಸಿದ್ದರೋ, ಅದರಂತೆ ಹಿಂದಿನ ಆಕಾಶಾಧಿಕರಣದ ಅಂಗಸೂತ್ರಗಳೆಂದು ಈ ಎಂಟು ಸೂತ್ರಗಳನ್ನು ಪರಿಗಣಿಸಬೇಕು ಹೊರತು, ಪ್ರತ್ಯೇಕ ಅಧಿಕರಣವೆಂದು ಹೇಳಬಾರದು. ಇಷ್ಟು ವಿಚಾರವು ತತ್ವಪ್ರದೀಪವನ್ನು ನೋಡಿದಾಗ ಭಾಸವಾಗುತ್ತದೆ.

ತತ್ವಪ್ರದೀಪಕಾರರು ಹೇಳುವಂತೆ ಹಿಂದಿನ ಅಧಿಕರಣದ ಅಂಗಸೂತ್ರಗಳೆಂದೇ ಇವುಗಳನ್ನು ಪರಿಗಣಿಸುವುದು ತಪ್ಪಾಗುವುದಿಲ್ಲ. ಆದರೂ ಕೂಡ ಟೀಕಾಕಾರರು ಪ್ರತ್ಯೇಕ ಅಧಿಕರಣವೆಂದು ಹೇಳಿದ್ದಾರೆ. ಟೀಕಾಕಾರರ ಪಕ್ಷವೂ ಕೂಡ ಸಾಧುವೇ ಆಗಿದೆ. ಹೇಗೆಂದರೆ ಪೂರ್ವಮೀಮಾಂಸೆಯಲ್ಲಿ 'ಹೇತುದರ್ಶನಾಚ್ಚ' ಎಂಬ ಸೂತ್ರವನ್ನು ವಿರೋಧಾಧಿಕರಣದ ಅಂಗಸೂತ್ರವೆಂದು ಕೆಲವರು ಹೇಳಿದರೆ ಬೇರೆ ಕೆಲವರು ಪ್ರತ್ಯೇಕ ಅಧಿಕರಣವೆಂದೇ ಪರಿಗಣಿಸುತ್ತಾರೆ. ಅಭಿಪ್ರಾಯಭೇದದಿಂದ 'ಹೇತುದರ್ಶನಾಚ್ಚ' ಎಂಬ ಒಂದೇ ಸೂತ್ರವು ಹಿಂದಿನ ಅಧಿಕರಣದ ಅಂಗವೂ ಆಗುತ್ತದೆ. ಪ್ರತ್ಯೇಕ ಅಧಿಕರಣವೂ ಆಗುತ್ತದೆ. ಅದರಂತೆ 'ಸಮಾಕರ್ಷಾತ್' ಇವೇ ಮೊದಲಾದ ಸೂತ್ರಗಳು ತ್ರಿವಿಕ್ರಮಪಂಡಿತರ ಅಭಿಪ್ರಾಯದಂತೆ ಹಿಂದಿನ ಅಧಿಕರಣದ ಅಂಗಸೂತ್ರಗಳೂ ಆಗುತ್ತವೆ. ಟೀಕಾಕಾರರ ಅಭಿಪ್ರಾಯದಂತೆ ಪ್ರತ್ಯೇಕ ಅಧಿಕರಣವೂ ಕೂಡ ಆಗುತ್ತವೆ. ಆದ್ದರಿಂದ ಇಬ್ಬರ ಅಭಿಪ್ರಾಯದಲ್ಲಿ ವಿರೋಧವನ್ನು ತಿಳಿಯಬಾರದು.

---

## ಸಂದೇಹ ಹಾಗೂ ಪೂರ್ವಪಕ್ಷ

### तात्पर्यचन्द्रिका

**अत्र च पूर्वोक्तन्यायैर्ब्रह्मणि ''कल्पनोपदेशात्'' इति न्यायेन चान्यत्रापि मुख्यत्वे सिद्धेऽपि मुख्यता किमक्षादिशब्दवदुभयत्रापि तुल्या किं वा ब्रह्मण्यधिकाऽन्यत्र तु हीनेति चिन्ता ।**

ಅನುವಾದ - ಹಿಂದಿನ ಅಧಿಕರಣಗಳಲ್ಲಿ ಹೇಳಲ್ಪಟ್ಟ ನ್ಯಾಯಗಳಿಂದ ಬ್ರಹ್ಮನಲ್ಲಿ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದ ಇರುತ್ತವೆಂದು ಸಿದ್ಧವಾಯಿತು. ಹಾಗಾದರೆ ಲೋಕವ್ಯವಹಾರವೇ ನಿಂತು ಹೋಗುವ ಪ್ರಸಂಗ ಬರುತ್ತದಲ್ಲವೇ ? ಎಂಬ ಪ್ರಶ್ನೆಗೆ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ

ಬೇರೆ ಪದಾರ್ಥಗಳಲ್ಲಿಯೂ ಕೂಡ ಶಬ್ದಗಳು ಮುಖ್ಯವೃತ್ತಿಯಿಂದ ಇರುತ್ತವೆಂದು ಸಮರ್ಥಿಸಲಾಯಿತು. ಇಲ್ಲಿ ಬರುವ ಸಂಶಯ ಹೀಗಿದೆ - ಅಕ್ಷ ಮೊದಲಾದ ಶಬ್ದಗಳು ಕಣ್ಣು ಮತ್ತು ಕ್ರೀಡೆ ಎಂಬೆರಡು ಅರ್ಥಗಳಲ್ಲಿ ಸಮಾನವೃತ್ತಿಯನ್ನು ಹೊಂದಿರುವಂತೆ ಪ್ರತಿಯೊಂದು ಶಬ್ದಗಳೂ ಬ್ರಹ್ಮನಲ್ಲಿ ಹಾಗೂ ಲೋಕದಲ್ಲಿ ಸಮಾನವೃತ್ತಿಯನ್ನು ಹೊಂದಿವೆಯೆಂಬುದು ಹಿಂದಿನ ಅಧಿಕರಣಗಳ ಅಭಿಪ್ರಾಯವೋ, ಅಥವಾ ಬ್ರಹ್ಮನಲ್ಲಿ ಮಾತ್ರ ಅಧಿಕವಾದ ವೃತ್ತಿಯನ್ನು ಹೊಂದಿ ಲೋಕದಲ್ಲಿ ಹೀನವಾದ ವೃತ್ತಿಯನ್ನು ಹೊಂದಿವೆ ಎಂದೋ?

**तदर्थमन्यत्र हीनत्वेऽन्यत्रप्रसिद्धिरयुक्तोत युक्तेति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಶಬ್ದಗಳು ಲೋಕದಲ್ಲಿ ಹೀನವೃತ್ತಿಯನ್ನು ಹೊಂದಿದಲ್ಲಿ ಲೋಕದಲ್ಲಿರುವ ಪ್ರಸಿದ್ಧಿಯು ಅಯುಕ್ತವೋ, ಅಥವಾ ಯುಕ್ತವೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯ ಪರಿಹಾರವಾಗದಿದ್ದರೆ ಹಿಂದಿನ ಸಂಶಯವೂ ಕೂಡ ಪರಿಹಾರವಾಗಲು ಸಾಧ್ಯವಿಲ್ಲ.

**पूर्वपक्षस्तु । हीनत्वे मुख्यवृत्तित्वं न स्यात् । अन्यथा लक्षणादिरपि मुख्यवृत्तिभेदः स्यात् ।**

ಪೂರ್ವಪಕ್ಷ ಹೀಗಿದೆ - ಪ್ರತಿಯೊಂದು ಶಬ್ದಗಳು ಲೋಕದಲ್ಲಿ ಹೀನವೃತ್ತಿಯನ್ನು ತಾಳಿವೆ ಎಂದು ಹೇಳಿದಿರಿ. ಹಾಗಾದರೆ ಯಾವುದೇ ಶಬ್ದಗಳು ಲೌಕಿಕಪದಾರ್ಥಗಳನ್ನು ಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡದೇ ಇರಬೇಕಾದೀತು. ಎಲ್ಲಿ ಹೀನವೃತ್ತಿಯು ಇರುತ್ತದೋ, ಅಲ್ಲಿ ಮುಖ್ಯವೃತ್ತಿತ್ವವನ್ನು ಹೇಳಲು ಸರ್ವಥಾ ಸಾಧ್ಯವಿಲ್ಲ. ಹಾಗಾದಲ್ಲಿ ಲಕ್ಷಣಾದಿವೃತ್ತಿಗಳೂ ಕೂಡ ಮುಖ್ಯವೃತ್ತಿಯ ಪ್ರಭೇದವೆಂದೇ ಪರಿಗಣಿಸಬೇಕಾಗುತ್ತದೆ.

**एवं च तदधीनत्वादिति सूत्रोक्तं स्वातन्त्र्यस्य निमित्तत्वमस्तु । तद्गतत्वापेक्षया मुख्यत्वं त्वयुक्तम् ।**

ಆದ್ದರಿಂದ 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಹೇಳಿದ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವೆಂದು ಸಿದ್ಧವಾಗಲಿ. ಹೊರತು ತದ್ಗತತ್ವಕ್ಕಿಂತ ಮುಖ್ಯವಾದ ವೃತ್ತಿಯಾಗಿದೆಯೆಂದು ಹೇಳುವುದು ಮಾತ್ರ ಅತ್ಯಂತ ಅಯುಕ್ತ.

**अन्यत्र हीनत्वे च तत्र प्रसिद्धिर्न स्यात् । माणवकादावग्निशब्दादीनाम-प्रसिद्धेरिति ।।**

ಮತ್ತು ಲೋಕದಲ್ಲಿ ಶಬ್ದಗಳು ಹೀನವೃತ್ತಿಯಿಂದ ಇರುವುದಾದಲ್ಲಿ ಶಬ್ದಗಳಿಗೆ ಆಯಾ ಪದಾರ್ಥಗಳಲ್ಲಿರುವ ಪ್ರಸಿದ್ಧಿಯೇ ತಪ್ಪಾಗಬೇಕಾದೀತು. ಮಾಣವಕಾದಿಗಳಲ್ಲಿ ಅಗ್ನಿ ಮೊದಲಾದ ಶಬ್ದಗಳ ಪ್ರಯೋಗವು ಅಪ್ರಸಿದ್ಧವೇ ಆಗಿರುತ್ತವೆಯಷ್ಟೇ.

**प्रकाशः –**

विषयसंशयौ व्यनक्ति – **अत्र चेति** ।। **मुख्यत्व इति** ।। सर्वशब्दानामिति शेषः ।। **किमिति** ।। इयं चिन्ताऽऽद्यसूत्रसूचिता । द्वितीया तु ''जगद्वाचित्वात्'' इत्यनेन ।

ವಿವರಣೆ - ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು 'ಅತ್ರ ಚ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಮುಖ್ಯತ್ವೇ' ಎಂಬುದಕ್ಕೆ ಸಕಲಶಬ್ದಗಳೂ ಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುವುದಾದಲ್ಲಿ ಎಂಬರ್ಥವನ್ನು ವಿವಕ್ಷಿಸಬೇಕು. ಇಲ್ಲಿ 'ಸರ್ವಶಬ್ದಾನಾಂ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಮೊದಲನೆಯ ಸಂಶಯವು ಪ್ರಥಮಸೂತ್ರದಿಂದ ಸೂಚಿತವಾಗಿದೆ. ಎರಡನೆಯ ಸಂಶಯವು 'ಜಗದ್ವಾಚಿತ್ವಾತ್' ಎಂಬ ಸೂತ್ರದಿಂದ ಸೂಚಿತವಾಗಿದೆ.

**प्रकाशः** – अत्र टीकायां पूर्वपक्षमुपपाद्यान्ते ''सर्वशब्दानां मुख्यवृत्त्या परमात्मैकवाचित्वेऽन्यत्र व्यवहारलोपापातात्'' इत्युक्तमयुक्तमिव । हीनवृत्त्या व्यवहारसम्भवादित्यतस्तदभिप्रायमाह – **हीनत्व इति** ।।

ಈ ಅಧಿಕರಣದ ಟೀಕೆಯಲ್ಲಿ ಪೂರ್ವಪಕ್ಷವನ್ನು ಉಪಪಾದನೆ ಮಾಡಿ ಕೊನೆಯಲ್ಲಿ 'ಸರ್ವಶಬ್ದಾನಾಂ ಮುಖ್ಯವೃತ್ತ್ಯಾ ಪರಮಾತ್ಮೈಕವಾಚಿತ್ವೇऽನ್ಯತ್ರ ವ್ಯವಹಾರಲೋಪಾಪಾತಾತ್' ಸಕಲಶಬ್ದಗಳು ಮುಖ್ಯವೃತ್ತಿಯಿಂದ ಪರಮಾತ್ಮನೊಬ್ಬನನ್ನೇ ಪ್ರತಿಪಾದನೆ ಮಾಡುವುದಾದಲ್ಲಿ ಲೋಕವ್ಯವಹಾರವೇ ಲೋಪವಾಗಬೇಕಾದೀತು ಎಂದು ಹೇಳಿದ್ದಾರೆ. ಇದು ಆಯುಕ್ತವೆನಿಸುತ್ತದೆ. ಏಕೆಂದರೆ ಹೀನವೃತ್ತಿಯಿಂದಲೂ ಕೂಡ ವ್ಯವಹಾರವನ್ನು ಕೂಡಿಸಬಹುದು. ಈ ಪ್ರಶ್ನೆಗೆ 'ಹೀನತ್ವೇ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – **मुख्यवृत्तित्वमिति** ।। मुख्यवृत्तित्यागस्तु नेष्टः । अभिधानव्याकरणादि-सिद्धत्वात् । ''अन्यत्र तु मुख्यवृत्तेर्न त्यागो युक्त'' इति कल्पनेति सूत्र एवोक्तत्वादिति भावः ।

'ಮುಖ್ಯವೃತ್ತಿತ್ವಮ್' ಎಂಬುದರ ಅಭಿಪ್ರಾಯ ಹೀಗಿದೆ - ಅಭಿಧಾನ, ವ್ಯಾಕರಣ ಮೊದಲಾದವುಗಳಿಂದ ಲೋಕದಲ್ಲಿ ಮುಖ್ಯವೃತ್ತಿಯು ಸಿದ್ಧವಾಗಿರುವಾಗ ಅದನ್ನು ಬಿಡುವುದು ಸರಿಯಲ್ಲ. ಮತ್ತು 'ಅನ್ಯತ್ರ ತು ಮುಖ್ಯವೃತ್ತೇರ್ನ ತ್ಯಾಗೋ ಯುಕ್ತಃ' ಬೇರೆಡೆಯಿರುವ ಮುಖ್ಯವೃತ್ತಿಯ ತ್ಯಾಗವು ಯುಕ್ತವಲ್ಲ ಎಂಬುದಾಗಿ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿಯೇ ಹೇಳಿದ್ದಾರೆ.

**प्रकाशः** – ननु ''स्वातन्त्र्यं तत्र मुख्यं स्यात्'' इत्युक्तदिशा भगवत्येव सर्वाधिकवृत्तेस्सिद्ध्या कथमेषा शङ्क्येत्यत आह – **एवञ्चेति** ।। द्वितीय व्यावर्त्यं युक्तयन्तरं चाह – **अन्यत्रेति** ।।

'ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್' ಎಂಬ ಅನುವ್ಯಾಖ್ಯಾನದ ಶ್ಲೋಕದಲ್ಲಿ ಹೇಳಿದಂತೆ ಭಗವಂತನಲ್ಲಿಯೇ ಅಧಿಕವಾದ ಮುಖ್ಯವೃತ್ತಿಯು ಇರುತ್ತದೆಂದು ಸಿದ್ಧವಾಗಿದೆ. ಹೀಗಿರುವಾಗ ಗ್ರಂಥದಲ್ಲಿ ಮಾಡುತ್ತಿರುವ ಆಶಂಕೆಯು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ಏವಂಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಮತ್ತೊಂದು ಯುಕ್ತಿಯನ್ನು 'ಅನ್ಯತ್ರ' ಎಂಬ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ.




ಈ ಅಧಿಕರಣದಲ್ಲಿ ಯಾವುದೇ ಶಬ್ದವನ್ನು ಸಮನ್ವಯ ಮಾಡುತ್ತಿಲ್ಲ ಹೊರತಾಗಿ ಸಮನ್ವಯದ ವಿಷಯದಲ್ಲಿರುವ ಆಕ್ಷೇಪವನ್ನಷ್ಟೇ ಪರಿಹರಿಸುತ್ತಿದ್ದಾರೆ.

'ಕಲ್ಪನೋಪದೇಶಾತ್' ಎಂಬ ಸೂತ್ರವು ಪ್ರತಿಯೊಂದು ಶಬ್ದಗಳು ಲೋಕದಲ್ಲಿಯೂ ಕೂಡ ಮುಖ್ಯವೃತ್ತಿಯಿಂದಲೇ ಇರುತ್ತವೆಂದು ಸಮರ್ಥಿಸಿತು. ಹಾಗಾದರೆ ಯಾವುದೇ ಶಬ್ದವನ್ನು ಕೇಳಿದಾಗ ಪರಮಾತ್ಮನನ್ನು ಹಾಗೂ ಲೌಕಿಕಪದಾರ್ಥವನ್ನು ಅದು ಪ್ರತಿಪಾದನೆ ಮಾಡುತ್ತದೆಂದು ಹೇಳಿದಂತಾಯಿತು. ಆದರೆ ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನು ಪ್ರತಿಪಾದನೆ ಮಾಡಿ, ಮುಖ್ಯವೃತ್ತಿಯಿಂದಷ್ಟೇ ಲೌಕಿಕವಸ್ತುವೊಂದನ್ನು ಪ್ರತಿಪಾದನೆ ಮಾಡುತ್ತವೆಂದು ತಿಳಿಯಬೇಕು. ಹೀಗೆ ಹೇಳಿದಾಗ ಲೌಕಿಕ ಪದಾರ್ಥಗಳಲ್ಲಿ ಶಬ್ದವೃತ್ತಿಯು ಹೀನವಾಗಿದೆಯೆಂದು ಹೇಳಿದಂತಾಗುತ್ತದೆ. ಹಾಗಾದರೆ ಲಕ್ಷಣಾವೃತ್ತಿ ಮೊದಲಾದವು ಮುಖ್ಯವೃತ್ತಿಯ ಪ್ರಭೇದವೆಂದೇ ಒಪ್ಪಬೇಕಾಗುತ್ತದೆಂಬುದು ಪೂರ್ವಪಕ್ಷಕಾರರ ಆಕ್ಷೇಪ. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದೇನೋ ಒಪ್ಪಿರಿ. ತದ್ಗತತ್ವಕ್ಕಿಂತ ಮುಖ್ಯತ್ವವನ್ನು ಸ್ವಾತಂತ್ರ್ಯದಲ್ಲಿ ಹೇಳಲು ಸರ್ವಥಾ ಸಾಧ್ಯವಿಲ್ಲ. ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯವಾದ ಶಬ್ದಗಳು ಲೌಕಿಕಪದಾರ್ಥಗಳಲ್ಲಿ ನೀಚವೃತ್ತಿಯಿಂದ ಇರುತ್ತವೆಂದು ಹೇಳಬಾರದು. ಪರಮಾತ್ಮನನ್ನು ಪ್ರತಿಪಾದನೆ ಮಾಡಿದಂತೆ ಲೌಕಿಕಪದಾರ್ಥಗಳನ್ನೂ ಕೂಡ ಪ್ರತಿಪಾದನೆ ಮಾಡುತ್ತವೆಂಬುದು ಪೂರ್ವಪಕ್ಷ.

---

ಸಕಲ ಶಬ್ದಗಳು ಪರಮಮುಖ್ಯವೃತ್ತಿಯಿಂದ ಮಹಾವಿಷ್ಣುವನ್ನೇ ಪ್ರತಿಪಾದಿಸುತ್ತವೆ

**तात्पर्यचन्द्रिका**

**सिद्धान्तस्तु ।।**

**यथा च मुख्ययोर्योगरूढयोर्यद्वदमुख्ययोः ।**
**गौणलक्षणयोर्भेदस्तथा रूढ्योश्च योगयोः ।।१।।**

ಪರಿಪೂರ್ಣಚಂದ್ರಿಕಾ

ಅನುವಾದ - ಸಿದ್ಧಾಂತದ ಸಂಗ್ರಹ ಹೀಗಿದೆ - ಮುಖ್ಯವಾಗಿದ್ದರೂ ಯೋಗ ಹಾಗೂ ರೂಢಿಗಳ ನಡುವೆ ಹೇಗೆ ತಾರತಮ್ಯವಿದೆಯೋ, ಅಥವಾ ಅಮುಖ್ಯವಾಗಿದ್ದರೂ ಗೌಣೀವೃತ್ತಿ ಹಾಗೂ ಲಕ್ಷಣಾವೃತ್ತಿಗಳಲ್ಲಿ ಹೇಗೆ ತಾರತಮ್ಯವಿದೆಯೋ, ಅದರಂತೆ ವಿದ್ವದ್ರೂಢಿ, ಅವಿದ್ವದ್ರೂಢಿಗಳಲ್ಲಿ ತಾರತಮ್ಯವಿದೆ. ಯೋಗ ಹಾಗೂ ಮಹಾಯೋಗಗಳಲ್ಲಿಯೂ ತಾರತಮ್ಯವಿದೆ.

**उचितं प्राज्ञरूढेर्हि प्राबल्यं मूर्खरूढितः ।**
**उत्कर्षाच्च निमित्तस्य युक्तो नैमित्तिकस्य सः ।।२।।**

ಅಜ್ಞರೂಢಿಗಿಂತಲೂ ಪ್ರಾಜ್ಞರೂಢಿಯು ಪ್ರಬಲವಾಗಿದೆ ಎಂದು ಹೇಳುವುದೇ ಸೂಕ್ತ. ಏಕೆಂದರೆ ಪ್ರವೃತ್ತಿನಿಮಿತ್ತದ ಪೌಷ್ಕಲ್ಯ ಮತ್ತು ಸ್ವಾತಂತ್ರ್ಯಗಳೆರಡೂ ಪ್ರಾಜ್ಞರೂಢಿಯಲ್ಲಿರುತ್ತವೆ.

**रूढित्वेऽपि विद्वदविद्वद्रूढ्योर्योगत्वेऽपि योगमहायोगयोस्तारतम्यं युक्तम् ।**

ವಿದ್ವದ್ರೂಢಿ ಹಾಗೂ ಅವಿದ್ವದ್ರೂಢಿಗಳೆರಡೂ ರೂಢಿಯೆಂದೇ ಕರೆಸಿಕೊಳ್ಳಬಹುದು. ಆದರೂ ಅವಿದ್ವದ್ರೂಢಿಗಿಂತಲೂ ವಿದ್ವದ್ರೂಢಿಯು ಪ್ರಬಲವಾಗಿರುತ್ತದೆ. ಮತ್ತು ಯೋಗವೃತ್ತಿ ಮಹಾಯೋಗ-ವೃತ್ತಿಗಳೆರಡೂ ಯೋಗವೆಂದೇ ಕರೆಸಿಕೊಂಡರೂ ಯೋಗಕ್ಕಿಂತಲೂ ಮಹಾಯೋಗವು ಪ್ರಬಲವಾಗಿರುತ್ತದೆ. ಹೀಗೆ ತಾರತಮ್ಯವನ್ನು ಹೇಳುವುದು ಅತ್ಯಂತ ಯುಕ್ತ.

**मुख्यत्वेऽपि योगरूढ्योरिव अमुख्यत्वेऽपि गौणलक्षणयोरिव लक्षणात्वेऽप्यन्तरङ्गबहिरङ्गलक्षणयोरिव उपचारत्वेऽप्युपचाररूढोपचारयोरिव चेतीदमेतदधिकरणव्युत्पाद्यं प्रसङ्गादस्माभिर्जन्मादिसूत्रे प्रपञ्चितम् ।**

ಹೇಗೆಂದರೆ ಯೋಗ ಹಾಗೂ ರೂಢಿಗಳೆರಡೂ ಮುಖ್ಯವೃತ್ತಿಗಳೇ ಆಗಿದ್ದರೂ ಯೋಗಕ್ಕಿಂತಲೂ ರೂಢಿಯು ಪ್ರಬಲವಾಗಿದೆಯೆಂದು ಲೋಕದಲ್ಲಿ ಒಪ್ಪಲಾಗಿದೆ. ಮತ್ತು ಗೌಣೀವೃತ್ತಿ, ಲಕ್ಷಣಾ-ವೃತ್ತಿಗಳೆರಡೂ ಅಮುಖ್ಯವೃತ್ತಿಗಳೆನಿಸಿದರೂ ಗೌಣೀವೃತ್ತಿಗಿಂತಲೂ ಲಕ್ಷಣಾವೃತ್ತಿಯು ಪ್ರಬಲ ವಾಗಿರುತ್ತದೆ. ಲಕ್ಷಣಾವೃತ್ತಿಯಲ್ಲಿಯೂ ಕೂಡ ಬಹಿರಂಗಲಕ್ಷಣಾವೃತ್ತಿಗಿಂತಲೂ, ಅಂತರಂಗ-ಲಕ್ಷಣಾವೃತ್ತಿಯು ಪ್ರಬಲವಾಗಿರುತ್ತದೆ. ಅದರಂತೆ ಕೇವಲ ಉಪಚಾರ ವೃತ್ತಿಗಿಂತ ರೂಢೋಪಚಾರ ವೃತ್ತಿಯು ಪ್ರಬಲವಾಗಿರುತ್ತದೆ. ಈ ಎಲ್ಲಾ ದೃಷ್ಟಾಂತಗಳಿಂದ ರೂಢಿವೃತ್ತಿಯಲ್ಲಿ ಮತ್ತು ಯೋಗವೃತ್ತಿಯಲ್ಲಿ ಅವಾಂತರಭೇದವಿದ್ದು ತಾರತಮ್ಯವಿರುತ್ತದೆಂದು ಒಪ್ಪಬೇಕು. ಹೀಗೆ ವೃತ್ತಿಗಳಲ್ಲಿರುವ ತಾರತಮ್ಯವನ್ನು ಈ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಪ್ರಾಸಂಗಿಕವಾಗಿ ನಾವು ಜನ್ಮಾಧಿಕರಣದಲ್ಲಿ ಇದನ್ನು ವಿವರಿಸಿದ್ದೇವು.

ಸಮಾಕರ್ಷಾಧಿಕರಣ (೧-೪-೫)

**यदैकेनैव रूपेण सिद्धा ब्रह्मणि मुख्यता ।**
**रूपद्वयेन मुख्यत्वसिद्धिः किं कथ्यते तदा ॥१॥**

ಒಂದು ಬಗೆಯ ವೃತ್ತಿಯನ್ನು ಹೇಳಿದರೂ ಪ್ರಾಬಲ್ಯವು ಬ್ರಹ್ಮನಲ್ಲಿ ಬರುತ್ತದೆ. ಎರಡು ರೀತಿಯಿಂದಲೂ ಶಬ್ದಗಳು ಸಮನ್ವಯಗೊಂಡಾಗ ಅತ್ಯಂತ ಪ್ರಬಲವಾದ ಮುಖ್ಯತ್ವವು ಸಿದ್ಧವಾಗುತ್ತದೆಂದು ಪ್ರತ್ಯೇಕವಾಗಿ ಹೇಳಬೇಕೇನು?

**यदा रूढेः प्राज्ञसम्बन्धित्वेन वा योगस्य महत्त्वेन वैकेनैव प्राबल्यसिद्धिस्तदा द्वाभ्यां प्राबल्यसिद्धिरिति किमु वक्तव्यं । लक्षणादौ तु नानुशासनायस्तीति न मुख्यभेदता । जगति शब्दानां प्रसिद्धिस्तु तत्र प्रयोगप्राचुर्यात् ।**

ಪರಮಾತ್ಮನಲ್ಲಿರುವ ಶಬ್ದಗಳ ರೂಢಿಯು ಪ್ರಾಜ್ಞರಿಗೆ ಸಂಬಂಧಿಯಾದ್ದರಿಂದ, ಅಥವಾ ಯೋಗದಲ್ಲಿ ಮಹತ್ವವನ್ನು ಒಪ್ಪುವುದರಿಂದಲೂ ವಿಷ್ಣುವಿನಲ್ಲಿರುವ ಶಬ್ದಗಳು ಪ್ರಬಲವಾಗುತ್ತವೆಂದು ಸಿದ್ಧವಾಗುತ್ತದೆ. ವಿದ್ವದ್ರೂಢಿಯನ್ನು ಒಪ್ಪಿದರೂ ಸಾಕು. ಅಥವಾ ಮಹಾಯೋಗವನ್ನು ಒಪ್ಪಿದರೂ ಸಾಕು. ಒಂದೊಂದನ್ನು ಒಪ್ಪುವುದರಿಂದಲೇ ಪ್ರಾಬಲ್ಯವು ಸಿದ್ಧವಾಗುತ್ತದೆ. ಹೀಗಿರಬೇಕಾದರೆ ವಿದ್ವದ್ರೂಢಿ ಹಾಗೂ ಮಹಾಯೋಗಗಳೆರಡನ್ನೂ ಒಪ್ಪಿದಾಗ ಪ್ರಾಬಲ್ಯವು ಸಿದ್ಧವಾಗುತ್ತದೆಂದು ಪ್ರತ್ಯೇಕವಾಗಿ ಹೇಳಬೇಕೇನು ? ಹಾಗಾದರೆ ಲಕ್ಷಣಾದಿಗಳೂ ಕೂಡ ಮುಖ್ಯವೃತ್ತಿಯ ಪ್ರಭೇದವಾಗಬೇಕಾದೀತು ಎಂಬ ಆಕ್ಷೇಪ ಬರುತ್ತದಲ್ಲವೇ? ಎಂಬ ಶಂಕೆಗೂ ಈಗ ಅವಕಾಶವಿಲ್ಲ. ಏಕೆಂದರೆ ಇಂತಹ ವಸ್ತುವಿನಲ್ಲಿ ಲಕ್ಷಣಾ ಮಾಡಬೇಕೆನ್ನಲು ಯಾವುದೇ ಅನುಶಾಸನಗಳು ಇರುವುದಿಲ್ಲ. ಆದ್ದರಿಂದ ಮುಖ್ಯವೃತ್ತಿಯ ಪ್ರಭೇದವಾಗಲಿ ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಜಗತ್ತಿನಲ್ಲಾದರೂ ಶಬ್ದಗಳ ಪ್ರಸಿದ್ಧಿಯು ಪ್ರಯೋಗಪ್ರಾಚುರ್ಯದಿಂದಷ್ಟೇ ಯುಕ್ತವಾಗುತ್ತದೆ.

**अमुख्येपि प्रसिद्धिः स्यात् प्रयोगः प्रचुरो यदि ।**
**गुणश्रुतेरकारादौ पाणिनीये प्रसिद्धिवत् ॥१॥**

ಪಾಣಿನೀ ವ್ಯಾಕರಣದಲ್ಲಿ 'ಅ' 'ಏ' 'ಓ' ಅಕ್ಷರಗಳಿಗೆ 'ಗುಣ' ಎಂಬ ಶಬ್ದವನ್ನು ಸಂಕೇತ ಮಾಡಿದಂತೆ ಪ್ರಾಜ್ಞರು ಹಾನಾದಿವ್ಯವಹಾರಕ್ಕಾಗಿ ಅಮುಖ್ಯವಾದ್ದರಲ್ಲಿ ಶಬ್ದಗಳ ಪ್ರಯೋಗವನ್ನು ಮಾಡಿದ್ದಾರೆ. ಇದರ ಮುಖ್ಯಾರ್ಥವನ್ನು ತಿಳಿಯದೇ ಲೌಕಿಕಾರ್ಥಗಳಲ್ಲಿ ಶಬ್ದಗಳು ಹೆಚ್ಚಾಗಿ ಬಳಕೆಯಲ್ಲಿವೆ.

**अत्र वैश्वानराधिकरणे ''साक्षादप्यविरोधं जैमिनिः'' इत्यत्र ब्रह्मणि मुख्यानां शब्दानामन्यत्र प्रयोगः किमर्थ इति शङ्कायां हानादिव्यवहारार्थ इत्युक्तम् ।**

ವೈಶ್ವಾನರಾಧಿಕರಣದಲ್ಲಿರುವ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಹೀಗೆ ಹೇಳಿದ್ದಾರೆ - ಎಲ್ಲಾ ಶಬ್ದಗಳು ಬ್ರಹ್ಮನಲ್ಲೇ ಮುಖ್ಯವಾಗಿರುವಾಗ ಲೋಕದಲ್ಲೇಕೆ ಅದನ್ನು ಪ್ರಯೋಗಿಸುತ್ತಾರೆ ? ಎಂಬ ಆಶಂಕೆಗೆ ಹಾನಾದಿವ್ಯವಹಾರಕ್ಕೋಸ್ಕರ ಎಂದು ಉತ್ತರಿಸಿದ್ದಾರೆ.

**''शरीररूपकविन्यस्त'' इत्यत्र तु तर्ह्यन्यवाचकानामन्यत्र प्रयोगेऽव्यवस्था स्यात् । निमित्ताभावादिति शङ्का ईश्वरसम्बन्धस्य निमित्तत्वोक्त्या निरस्ता ।**

'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಸೂತ್ರದಲ್ಲಿ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಲೋಕದಲ್ಲಿ ಪ್ರಯೋಗ ಮಾಡುವುದಾದರೆ, ಘಟವನ್ನು ಪ್ರತಿಪಾದನೆ ಮಾಡುವ ಶಬ್ದವನ್ನು ಮತ್ತೆಲ್ಲೋ ಪ್ರಯೋಗ ಮಾಡಬೇಕಾದೀತು ಎಂಬ ಅವ್ಯವಸ್ಥೆಯು ಉಂಟಾಗುತ್ತದಲ್ಲವೇ? ಏಕೆಂದರೆ ಶಬ್ದವನ್ನು ಇಂತಹ ವಸ್ತುವಿನಲ್ಲಿಯೇ ಪ್ರಯೋಗಿಸಬೇಕೆನ್ನಲು ಯಾವುದೇ ಪ್ರವೃತ್ತಿನಿಮಿತ್ತವಿರುವುದಿಲ್ಲ. ಈ ಆಶಂಕೆಗೆ 'ಈಶ್ವರಸಂಬಂಧ' ಎಂಬ ಪ್ರವೃತ್ತಿನಿಮಿತ್ತವನ್ನು ಹೇಳಿ ಉತ್ತರಿಸಿದ್ದಾರೆ.

**''कल्पनोपदेशात्'' इत्यत्र तु तर्ह्ययसि दग्धृशब्दस्येवान्यत्र लक्षणादिरेव स्यान्न तु मुख्यवृत्तिरिति शङ्काऽन्यत्र रूढ्याद्युक्त्या पराकृता ।**

'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಕಾದಕಬ್ಬಿಣದಲ್ಲಿ ದಗ್ಧೃಶಬ್ದವನ್ನು ಪ್ರಯೋಗ ಮಾಡಿದಂತೆ ಪರಮಾತ್ಮನಲ್ಲಿರುವ ಶಬ್ದಗಳನ್ನು ಅವನ ಸಂಬಂಧದಿಂದ ಜಗತ್ತಿನಲ್ಲಿ ವ್ಯವಹರಿಸುತ್ತಿದ್ದೀರಿ. ಹಾಗಾದರೆ ದಗ್ಧೃಶಬ್ದವು ಲಕ್ಷಣಾವೃತ್ತಿಯಿಂದ ಕಬ್ಬಿಣವನ್ನು ಪ್ರತಿಪಾದನೆ ಮಾಡುವಂತೆ ಸಕಲಶಬ್ದಗಳೂ ಕೂಡ ಲೌಕಿಕಪದಾರ್ಥಗಳನ್ನು ಲಕ್ಷಣಾವೃತ್ತಿಯಿಂದ ಪ್ರತಿಪಾದಿಸುತ್ತವೆಂದು ಹೇಳಬೇಕಾದೀತು ಆವಾಗ ಮುಖ್ಯವೃತ್ತಿಯೇ ಎಲ್ಲಿಯೂ ಇಲ್ಲದಂತಾಗಬೇಕಾದೀತು. ಈ ಆಶಂಕೆಯನ್ನು ಲೋಕರೂಢಿ ಮೊದಲಾದವುಗಳು ಇರುವುದರಿಂದ ಅಮುಖ್ಯವೃತ್ತಿಯಾಗುವುದಿಲ್ಲವೆಂದು ಪರಿಹರಿಸಲಾಗಿದೆ.

**''समाकर्षात्'' इत्यत्र तु तर्हि ब्रह्मण्यन्यत्र चाक्षादिशब्दवत् तुल्यतैव स्यादिति शङ्कोभयत्र मुख्यत्वेऽपि ब्रह्मणि परममुख्यत्वमन्यत्र तु मुख्यत्वमात्रमित्युक्त्या समाहिता ।**

'ಸಮಾಕರ್ಷಾತ್' ಎಂಬ ಈ ಅಧಿಕರಣದ ಸೂತ್ರದಲ್ಲಿ ಹೀಗೆ ಹೇಳಿದ್ದಾರೆ - ಯಾವುದೇ ಒಂದು ಶಬ್ದಗಳು ಬ್ರಹ್ಮನನ್ನು ಹಾಗೂ ಲೌಕಿಕಪದಾರ್ಥಗಳನ್ನು ಪ್ರತಿಪಾದನೆ ಮಾಡುವುದಾದರೆ ಅಕ್ಷಾದಿಶಬ್ದಗಳಂತೆ ಅನೇಕಾರ್ಥವುಳ್ಳವುಗಳಾಗುತ್ತವಲ್ಲವೇ? ಎಂಬ ಆಶಂಕೆಯನ್ನು ಹೀಗೆ ಪರಿಹರಿಸಿದ್ದಾರೆ - ಶಬ್ದಗಳು ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಉಳಿದ ಪದಾರ್ಥಗಳಲ್ಲಿ

ಮುಖ್ಯವೃತ್ತಿಯಿಂದ ಇರುತ್ತವೆ. ವೃತ್ತಿಯಲ್ಲಿಯೂ ಕೂಡ ತಾರತಮ್ಯವಿರುವುದರಿಂದ ಅಕ್ಷಾದಿಶಬ್ದಗಳಂತೆ ಪರ್ಯಾಯತ್ವವು ಬರಲು ಸಾಧ್ಯವಿಲ್ಲ.

**''जगद्वाचित्वात्'' इत्यत्र तु कथं तर्ह्यन्यत्र प्रसिद्धिरिति शङ्का बालानां चित्रलिखितसिंहादाविव लोकानामन्यत्रैव शब्दव्यवहारात् नतु तत्र मुख्यत्वादित्युक्त्याऽपास्ता ।**

'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಾದರೂ ಎಲ್ಲಾ ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುವುದಾದರೆ ಅನ್ಯತ್ರಪ್ರಸಿದ್ಧಿಯು ಹೇಗೆ ಕೂಡುತ್ತದೆ ? ಎಂದು ಆಶಂಕಿಸಿ ಬಾಲಕರು ಚಿತ್ರಲಿಖಿತಸಿಂಹದಲ್ಲಿ ಸಿಂಹಶಬ್ದವನ್ನು ಪ್ರಯೋಗ ಮಾಡುವಂತೆ ಲೌಕಿಕಜನರು ಲೋಕದಲ್ಲಿಯೇ ಶಬ್ದಗಳನ್ನು ಪ್ರಯೋಗ ಮಾಡುತ್ತಾರೆ. ಪ್ರಯೋಗ ಮಾಡಿದ ಮಾತ್ರಕ್ಕೆ ಲೌಕಿಕಪದಾರ್ಥಗಳಲ್ಲಿ ಶಬ್ದವು ಮುಖ್ಯವಾಗುವುದಿಲ್ಲ. ಹೀಗೆ ಉತ್ತರಿಸಿದ್ದಾರೆ.

**''जीवमुख्यप्राण'' इत्यत्र तु मुख्यतो वाच्यत्वे यल्लिङ्गं तदधीनत्वरूपनिमित्तं तस्य जीवे क्वचित् मुख्यप्राणे तु सर्वत्र सम्भवात्तत्रापि शब्दानामीश्वर इव मुख्यत्वादेव प्रसिद्धिरस्त्विति शङ्का लिङ्गस्य तदन्तर्यामिगतत्वस्मारणेन निरस्ता ।**

'ಜೀವಮುಖ್ಯಪ್ರಾಣಲಿಂಗಾತ್' ಇತ್ಯಾದಿ ಸೂತ್ರದಲ್ಲಿ ಹೀಗೆ ಹೇಳಿದ್ದಾರೆ - ಶಬ್ದಗಳು ಮುಖ್ಯವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ. 'ತದಧೀನತ್ವಾತ್' ಎಂಬ ಪ್ರವೃತ್ತಿನಿಮಿತ್ತದಿಂದ ಉಳಿದ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳುವುದಾದರೆ ಕೆಲವು ಪದಾರ್ಥಗಳು ಜೀವನ ಅಧೀನವಾಗಿರುವುದರಿಂದ ಅಂತಹ ಶಬ್ದಗಳು ಜೀವನನ್ನೂ ಕೂಡ ಮುಖ್ಯವಾಗಿ ಪ್ರತಿಪಾದನೆ ಮಾಡಬೇಕಾಗುತ್ತವೆ. ಮತ್ತು ಸಕಲಪದಾರ್ಥಗಳು ಮುಖ್ಯಪ್ರಾಣದೇವರ ಅಧೀನವಾಗಿರುವುದರಿಂದ ಮುಖ್ಯಪ್ರಾಣದೇವರೂ ಕೂಡ ಮುಖ್ಯವಾಗಿ ಪ್ರತಿಪಾದ್ಯರಾಗಬೇಕಾಗುತ್ತದೆ. ಆದ್ದರಿಂದ ಶಬ್ದಗಳ ಮುಖ್ಯಾರ್ಥ ಈಶ್ವರನು ಹೇಗಾಗುತ್ತಾನೋ, ಅದರಂತೆ ಜೀವ ಹಾಗೂ ಮುಖ್ಯಪ್ರಾಣರೂ ಕೂಡ ಆಗಬೇಕಾದೀತು? ಈ ಆಶಂಕೆಗೆ ಶ್ರೀಹರಿಯು ಎಲ್ಲರ ಅಂತರ್ಯಾಮಿಯಾಗಿರುವುದರಿಂದ ಅವನೊಬ್ಬನೇ ಸಕಲಪದಾರ್ಥಗಳಿಂದ ಪ್ರತಿಪಾದಿತನಾಗುತ್ತಾನೆ. ಜೀವನಾಗಲೀ, ಮುಖ್ಯಪ್ರಾಣದೇವ-ರಾಗಲೀ ಸಕಲಾಂತರ್ಯಾಮಿ ಆಗದ ಕಾರಣ ಸಕಲಶಬ್ದ ಪ್ರತಿಪಾದ್ಯತ್ವವು ಅವರಲ್ಲಿ ಬರಲು ಸಾಧ್ಯವಿಲ್ಲ.

**''अन्यार्थं तु जैमिनिः'' इत्यत्र तु लौकिकानां शब्दानां व्यवहारार्थमन्यत्र समाकर्षेऽपि वैदिकानां मुमुक्षुं प्रति कर्मदेवतादौ समाकर्षो निष्फलः । तस्य**

**फलान्तरानिच्छुत्वात् । मोक्षस्य ब्रह्मज्ञानादेव सिद्धेरित्याशङ्का ब्रह्मज्ञानार्थमेव कर्मदेवतादिकं ज्ञापयितुं तत्र समाकर्ष इत्युक्ता निरस्ता ।**

'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರದಲ್ಲಿ ಲೌಕಿಕವಾದ ಶಬ್ದಗಳನ್ನು ವ್ಯವಹಾರಕ್ಕೋಸ್ಕರ ಬೇರೆಡೆ ಸಮಾಕರ್ಷ ಮಾಡುವುದಾದರೆ ಮುಮುಕ್ಷು ಆದವನು ವೇದಗಳಲ್ಲಿರುವ ಶಬ್ದಗಳನ್ನು ಕರ್ಮ ಹಾಗೂ ದೇವತಾದಿಗಳಲ್ಲಿ ಸಮಾಕರ್ಷ ಮಾಡುವುದು ವ್ಯರ್ಥವಲ್ಲವೇ? ಏಕೆಂದರೆ ಮುಮುಕ್ಷುವಿಗೆ ಬೇರೆ ಯಾವುದೇ ಫಲದ ಅಪೇಕ್ಷೆಯೂ ಇರುವುದಿಲ್ಲ. ಮೋಕ್ಷದ ಅಪೇಕ್ಷೆಯಷ್ಟೇ ಇರುತ್ತದೆ. ಮೋಕ್ಷವಾದರೂ ಕೂಡ ಬ್ರಹ್ಮಜ್ಞಾನದಿಂದಲೇ ಸಿದ್ಧವಾಗುತ್ತಿರುವಾಗ ಕರ್ಮ ಹಾಗೂ ದೇವತೆ ಮೊದಲಾದವುಗಳನ್ನೇಕೆ ವೈದಿಕಶಬ್ದಗಳಿಂದ ಅವನು ತಿಳಿಯಬೇಕು. ಈ ಆಶಂಕೆಗೆ ಹೀಗೆ ಉತ್ತರಿಸಿದ್ದಾರೆ- ಬ್ರಹ್ಮಜ್ಞಾನಕ್ಕೋಸ್ಕರ ಕರ್ಮ ಹಾಗೂ ದೇವತಾದಿಗಳನ್ನು ತಿಳಿಯಬೇಕು. ಆದ್ದರಿಂದ ಮುಮುಕ್ಷು ಆದವನು ದೇವತಾಪ್ರತಿಪಾದಕವಾದ ಕರ್ಮಪ್ರತಿಪಾದಕವಾದ ಶಬ್ದಗಳನ್ನು ಆಯಾ ಪದಾರ್ಥಗಳಲ್ಲಿ ಸಮಾಕರ್ಷ ಮಾಡಿ ತಿಳಿದುಕೊಳ್ಳುತ್ತಾನೆ.

**प्रकाशः —**

''समाकर्षात्'' इति सूत्रभाष्यटीकाभिमतन्यायं सङ्गृह्णाह — **यथा चेति ।।** दृष्टान्तपूर्वमुक्तेऽर्थे हेतुं चाह — **उचितमिति ।।** सः उत्कर्ष इत्यर्थः ।

ವಿವರಣೆ - 'ಸಮಾಕರ್ಷಾತ್' ಎಂಬ ಸೂತ್ರದ ಮತ್ತು ಭಾಷ್ಯ ಟೀಕೆಗಳ ಅಭಿಪ್ರೇತವಾದ ನ್ಯಾಯವನ್ನು ಶ್ಲೋಕದಿಂದ ಸಂಗ್ರಹಿಸುತ್ತಿದ್ದಾರೆ 'ಯಥಾ ಚ' ಇತ್ಯಾದಿಯಾಗಿ. ಹಿಂದೆ ಹೇಳಿದ ಅರ್ಥದಲ್ಲಿ ದೃಷ್ಟಾಂತವನ್ನು ನೀಡುತ್ತಾ ಹೇತುವನ್ನೂ ಕೂಡ ಹೇಳುತ್ತಿದ್ದಾರೆ 'ಉಚಿತಮ್' ಎಂಬ ಮುಂದಿನ ಶ್ಲೋಕದಿಂದ, 'ಸಃ' ಎಂಬ ಪದಕ್ಕೆ 'ಉತ್ಕರ್ಷ' ಎಂದರ್ಥ.

**प्रकाशः** — आद्यपद्यं व्याचष्टे — **रूढित्वेऽपीति ।।** व्याख्यातमेतज्जन्मादिसूत्रे । गतार्थतामाशङ्क्याह — **इदमिति ।। अस्माभिरिति ।।** न सूत्रकृतेति न पौनरुक्त्यमिति भावः ।

ಮೊದಲನೆಯ ಶ್ಲೋಕವನ್ನು ಸ್ವತಃ ಗ್ರಂಥಕಾರರೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ರೂಢಿತ್ವೇऽಪಿ' ಇತ್ಯಾದಿ ವಾಕ್ಯದಿಂದ. ರೂಢಿಯಲ್ಲಿರುವ ತಾರತಮ್ಯವನ್ನು ಯೋಗದಲ್ಲಿರುವ ತಾರತಮ್ಯವನ್ನು ಹಿಂದೆ ಜನ್ಮಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ. ಹಾಗಾದರೆ ಜನ್ಮಾಧಿಕರಣದಲ್ಲಿ ಈ ವಿಷಯವನ್ನು ನಿರೂಪಣೆ ಮಾಡಿದ ಮೇಲೆ ಪುನಃ ಇಲ್ಲಿ ನಿರೂಪಣೆ ಮಾಡಿದರೆ ಪುನರುಕ್ತಿ ಬರುತ್ತದಲ್ಲವೇ? ಎಂಬ ಆಶಂಕೆಯನ್ನು 'ಇದಮ್' ಎಂಬ ವಾಕ್ಯದಿಂದ ಪರಿಹರಿಸಿದ್ದಾರೆ. ಜನ್ಮಾಧಿಕರಣದಲ್ಲಿ ಪ್ರಾಸಂಗಿಕವಾಗಿ ನಾವು ನಿರೂಪಣೆ ಮಾಡಿದ್ದೇವೆ. ಆದರೆ ಪ್ರಕೃತ ಸೂತ್ರಕಾರರು ಈ ಅಧಿಕರಣದಲ್ಲಿ ವೃತ್ತಿಯಲ್ಲಿರುವ ತಾರತಮ್ಯವನ್ನು ನಿರೂಪಣೆ

ಮಾಡುತ್ತಿದ್ದಾರೆ ಎಂದಭಿಪ್ರಾಯ. ಸೂತ್ರಕಾರರು ಹಿಂದೆ ಜನ್ಮಾಧಿಕರಣದಲ್ಲಿ ವೃತ್ತಿಯ ತಾರತಮ್ಯವನ್ನು ಹೇಳಿಲ್ಲವಾದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

**प्रकाशः – द्वितीयश्लोकार्थोऽपि तत्रैव प्रपञ्चित इति भावः ।** ''उभयं दृश्यते विष्णौ शब्दानामपि सर्वशः'' इत्यनुव्याख्यानं हृदि कृत्वा प्रकारान्तरेण भगवति मुख्यतामाह – **यदेति** ।। व्याचष्टे – **यदा रूढेरिति** ।। प्रागेव तत् द्वयं च सर्वशब्दानां समर्थितमिति भावः ।

ಎರಡನೆಯ ಶ್ಲೋಕದ ಅರ್ಥವನ್ನು ಈ ಹಿಂದೆ ಜನ್ಮಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ ಎಂದಭಿಪ್ರಾಯ. 'ಉಭಯಂ ದೃಶ್ಯತೇ ವಿಷ್ಣೌ ಶಬ್ದಾನಾಮಪಿ ಸರ್ವಶಃ' ಎಂಬ ಅನುವ್ಯಾಖ್ಯಾನದ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಮತ್ತೊಂದು ಪ್ರಕಾರದಿಂದ ಭಗವಂತನಲ್ಲಿ ಮುಖ್ಯತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆ 'ಯದಾ' ಇತ್ಯಾದಿ ಗ್ರಂಥದಿಂದ. ಅದನ್ನೇ 'ಯದಾ ರೂಢೇಃ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. ಈ ಹಿಂದೆಯೇ ಸಕಲ ಶಬ್ದಗಳು ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಪರಮಾತ್ಮನಲ್ಲಿ ಬರುತ್ತವೆಂದು ಸಮರ್ಥಿಸಲಾಗಿದೆ.

**प्रकाशः – प्रागुक्तदोषमुद्धरति – लक्षणेति** ।। यदप्यन्यत्रेत्यापादितं तत् ''जगद्वाचित्वात्'' इति सूत्रभाष्यटीका तात्पर्यव्यञ्जनेन निरस्यति – **जगतीति** ।। तदुपपादयति – **अमुख्य इति** ।।

ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದಲ್ಲವೇ? ಎಂಬ ಅತಿಪ್ರಸಂಗವನ್ನು ಪೂರ್ವಪಕ್ಷದಲ್ಲಿ ಹೇಳಿದ್ದರು. ಅದನ್ನು 'ಲಕ್ಷಣಾ' ಎಂಬ ವಾಕ್ಯದಿಂದ ಪರಿಹರಿಸಿದ್ದಾರೆ. ಹಿಂದೆ ಪೂರ್ವಪಕ್ಷ ಮಾಡುವಾಗ ಶಬ್ದಗಳು ಲೋಕದಲ್ಲಿ ನೀಚವೃತ್ತಿಯಿಂದ ಇರುವುದಾದರೆ, ಆಯಾ ಪದಾರ್ಥಗಳಲ್ಲಿ ಲೋಕಪ್ರಸಿದ್ಧಿಯೇ ಇಲ್ಲದಿರಬೇಕಾದೀತು ಎಂದು ಆಕ್ಷೇಪ ಮಾಡಿದ್ದರು. ಅದನ್ನು ಪ್ರಕೃತ 'ಜಗದ್ವಾಚಿತ್ವಾತ್' ಎಂಬ ಸೂತ್ರದ ಭಾಷ್ಯ ಹಾಗೂ ಟೀಕೆಗಳಲ್ಲಿ ನಿರಾಕರಿಸಿದ್ದಾರೆ ಭಾಷ್ಯ-ಟೀಕೆಗಳ ತಾತ್ಪರ್ಯವನ್ನು ಸ್ಪಷ್ಟಪಡಿಸುತ್ತಾ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಿದ್ದಾರೆ 'ಜಗತಿ' ಇತ್ಯಾದಿ ಗ್ರಂಥದಿಂದ. ಅದನ್ನೇ 'ಅಮುಖ್ಯೇ' ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ.

**प्रकाशः –** पाणिनीये पाणिनिप्रोक्ते व्याकरणे । ''गुणोऽर्तिसंयोगाद्योः । ओर्गुणः । ह्रस्वस्य गुणः'' इत्यादौ गुणशब्दस्याकारादौ यथा प्रसिद्धिः ''अदेङ्गुणः'' इत्यनेनाकारैकारौकाराणां गुणत्वेन पाणिनिना सङ्केतितत्वात् तथेहापि प्राज्ञैरन्यत्र हानाद्यर्थं मुख्यवृत्त्या व्यवहारे कृतेऽनवगततच्छब्दमुख्यार्थस्यान्यत्र व्युत्पत्त्या च प्रसिद्ध्युपपत्तेरिति भावः ।

'ಪಾಣಿನೀಯೇ' ಎಂದರೆ 'ಪಾಣಿನಿ ಋಷಿಯು ರಚಿಸಿದ ವ್ಯಾಕರಣ ಗ್ರಂಥದಲ್ಲಿ' ಎಂದರ್ಥ. 'ಗುಣೋऽರ್ತಿಸಂಯೋಗಾದ್ಯೋಃ' 'ಓರ್ಗುಣಃ' 'ಹ್ರಸ್ವಸ್ಯ ಗುಣಃ' ಇತ್ಯಾದಿ ಸೂತ್ರಗಳಲ್ಲಿ ಗುಣಶಬ್ದವನ್ನು ಅಕಾರದಲ್ಲಿ ಪಾಣಿನಿಯು ಪ್ರಯೋಗಿಸಿದ್ದಾನೆ. 'ಅದೇಙ್ ಗುಣಃ' ಎಂಬ ಸೂತ್ರದಲ್ಲಿ ಅಕಾರ, ಏಕಾರ, ಓಕಾರ ಗಳಲ್ಲಿ ಗುಣಶಬ್ದವನ್ನು ಪ್ರಯೋಗಿಸಿದ್ದಾನೆ. ಇದು ಕೇವಲ ಸಂಕೇತವಾಗಿದೆ. ಅದರಂತೆ ಪ್ರಕೃತದಲ್ಲಿ ಪ್ರಾಜ್ಞರು ವಿಷ್ಣುವನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಲೋಕದಲ್ಲಿ ಕೇವಲ ಹಾನೋಪಾದಾನ ವ್ಯವಹಾರಕ್ಕೋಸ್ಕರ ವ್ಯವಹರಿಸಿದ್ದಾರೆ. ಲೌಕಿಕರು ಎಲ್ಲಾ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆಂಬ ತಿಳುವಳಿಕೆಯಿಲ್ಲದೇ, ಪ್ರಾಜ್ಞರ ವ್ಯವಹಾರವನ್ನು ಅನುಸರಿಸಿ ತಾವೂ ಕೂಡ ಮುಖ್ಯವಾಗಿಯೇ ವ್ಯವಹರಿಸಿದ್ದಾರೆ. ಇದರಿಂದ ಲೋಕಪ್ರಸಿದ್ಧಿಯನ್ನು ಆಯಾ ಶಬ್ದಗಳಲ್ಲಿ ಕೂಡಿಸಬಹುದು.

**प्रकाशः – अत्रैतदधिकरणसूत्राणामर्थभेदं क्रमं च विवरीतुकामोऽपौनरुक्त्याय पूर्वेषामर्थभेदोक्तिपरटीकां ''यदपि साक्षादपि'' इत्यादिकां विवृणोति – अत्रेति ।। समाहितेत्यादिनाऽन्वयः ।**

ಪ್ರಥಮಾಧ್ಯಾಯದಲ್ಲಿ ಅನೇಕ ಸೂತ್ರಗಳು ಪರಮಾತ್ಮನಲ್ಲಿ ಸಕಲಶಬ್ದಗಳೂ ಮುಖ್ಯವೃತ್ತಿಯಿಂದ ಇರುತ್ತವೆ ಎಂಬ ಒಂದೇ ವಿಷಯವನ್ನು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಆ ಎಲ್ಲಾ ಅಧಿಕರಣಗಳಿಗೂ ಮತ್ತು ಸೂತ್ರಗಳಿಗೂ ಪುನರುಕ್ತಿದೋಷ ಬರುತ್ತದೆ. ಇದೇ ಅಧಿಕರಣದಲ್ಲಿಯೂ ಒಂದೇ ವಿಷಯವನ್ನು ಅನೇಕ ಸೂತ್ರಗಳು ಪ್ರತಿಪಾದನೆ ಮಾಡುತ್ತಿವೆಯಲ್ಲವೇ? ಈ ಪುನರುಕ್ತಿಯನ್ನು ಪರಿಹರಿಸಲು ಪ್ರತಿಯೊಂದು ಸೂತ್ರಗಳ ವಿವಕ್ಷೆಯು ಭಿನ್ನ-ಭಿನ್ನವಾಗಿದೆಯೆಂಬುದಾಗಿ ಪ್ರತಿಪಾದನೆ ಮಾಡುತ್ತಾ 'ಯದಪಿ ಸಾಕ್ಷಾದಪಿ' ಎಂಬ ಟೀಕಾ ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. 'ಅತ್ರ' ಎಂಬುದಕ್ಕೆ ಸಮಾಹಿತ ಎಂಬಲ್ಲಿ ಅನ್ವಯವನ್ನು ತಿಳಿದುಕೊಳ್ಳಬೇಕು.

**प्रकाशः – अत्र अधिकरणे । अध्याय इति वाऽर्थः । तथात्वे इत्युक्तमित्यादिनाप्यन्वयः।। जीवेति ।। सूत्राणामर्थष्टीकादौ व्यक्तः ।। क्वचिदिति ।। वृक्षादौ**

'ಅತ್ರ' ಎಂದರೆ ಅನೇಕ ಅಧಿಕರಣಗಳಲ್ಲಿ ಎಂದರ್ಥ, ಅಥವಾ ಅಧ್ಯಾಯದಲ್ಲಿ ಎಂದರ್ಥ. ಇಲ್ಲಿ ಉದಾಹರಿಸಿದ ಸೂತ್ರಗಳ ಅರ್ಥವನ್ನು ಟೀಕಾದಿಗಳಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನಿಸಲಾಗಿದೆ. ಪ್ರತಿಯೊಂದು ಸೂತ್ರಗಳ ಅರ್ಥವು ಟೀಕಾದಿಗಳಲ್ಲಿ ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಇಲ್ಲಿ ವ್ಯಾಖ್ಯಾನ ಮಾಡಿರುವುದಿಲ್ಲ. 'ಕ್ವಚಿತ್' ಎಂದರೆ ವೃಕ್ಷಾದಿಗಳಲ್ಲಿ ಎಂದರ್ಥ. ಜೀವನು ವೃಕ್ಷಕ್ಕೆ ಸ್ವತಂತ್ರನಾಗಿರುತ್ತಾನೆ. ಸಮಸ್ತಭೂತಗಳಿಗೆ ಮುಖ್ಯಪ್ರಾಣದೇವರು ಸ್ವತಂತ್ರರಾಗಿರುತ್ತಾರೆ ಎಂದು ತಿಳಿಯಬೇಕು.




ಶಬ್ದಗಳು ಪರಮಾತ್ಮನನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವಂತೆ ಲೌಕಿಕಪದಾರ್ಥಗಳನ್ನೂ ಕೂಡ ಮುಖ್ಯವಾಗಿಯೇ ಪ್ರತಿಪಾದಿಸುತ್ತವೆ. ಹಾಗಾದರೆ ಅಕ್ಷಾದಿಶಬ್ದಗಳಂತೆ ಪ್ರತಿಯೊಂದು ಶಬ್ದಗಳೂ ಕೂಡ ಅನೇಕಾರ್ಥಗಳಾಗಬೇಕಾದೀತಲ್ಲವೇ? ಎಂಬ ಆಶಂಕೆಗೆ ಹೀಗೆ ಉತ್ತರಿಸಬೇಕು. ಮುಖ್ಯವೃತ್ತಿಯಲ್ಲಿ ಪರಸ್ಪರ ತಾರತಮ್ಯವಿದೆ. ಅದರಲ್ಲಿಯೂ ಕೂಡ ರೂಢಿಯಲ್ಲಿ ತಾರತಮ್ಯವಿದೆ. ಯೋಗದಲ್ಲಿಯೂ ತಾರತಮ್ಯವಿದೆ. ಯಾವರೀತಿಯಾಗಿ ಗೌಣೀವೃತ್ತಿ, ಲಕ್ಷಣಾವೃತ್ತಿಗಳಲ್ಲಿ ತಾರತಮ್ಯವಿದೆಯೋ, ಲಕ್ಷಣಾವೃತ್ತಿಯಲ್ಲಿಯೂ ಕೂಡ ಅಂತರಂಗಲಕ್ಷಣಾ, ಬಹಿರಂಗಲಕ್ಷಣಾಗಳಲ್ಲಿ ತಾರತಮ್ಯವಿದೆಯೋ, ಉಪಚಾರ ರೂಢೋಪಚಾರಗಳಲ್ಲಿ ತಾರತಮ್ಯವಿದೆಯೋ, ಅದರಂತೆ ಅವಿದ್ವದ್ರೂಢಿ, ವಿದ್ವದ್ರೂಢಿಗಳಲ್ಲಿಯೂ ತಾರತಮ್ಯವಿದೆ. ಅಂದರೆ ಮತ್ತು ಅವಿದ್ವದ್ರೂಢಿಗಿಂತಲೂ ವಿದ್ವದ್ರೂಢಿಯು ಪ್ರಬಲವಾಗಿರುತ್ತದೆ. ಮತ್ತು ಯೋಗಕ್ಕಿಂತಲೂ ಮಹಾಯೋಗವು ಪ್ರಬಲವಾಗಿರುತ್ತದೆ. ಹಾಗಾಗಿ ಲೋಕದಲ್ಲಿ ಶಬ್ದಗಳು ಅವಿದ್ವದ್ರೂಢಿಯಿಂದ ಪ್ರಸಿದ್ಧವಾಗಿರುತ್ತವೆ. ಮತ್ತು ಕೇವಲ ಯೋಗರೂಢಿಯಿಂದ ಪ್ರಸಿದ್ಧವಾಗಿರುತ್ತದೆ. ಆದರೆ ಮಹಾವಿಷ್ಣುವಿನಲ್ಲಿ ವಿದ್ವದ್ರೂಢಿಯಿಂದ ಮತ್ತು ಮಹಾಯೋಗದಿಂದಷ್ಟೇ ಶಬ್ದಗಳು ಸಮನ್ವಯಗೊಳ್ಳುತ್ತವೆ. ಪರಮಾತ್ಮನಲ್ಲಿ ಶಬ್ದಗಳು ವಿದ್ವದ್ರೂಢಿಯಿಂದ ಇರುತ್ತವೆಂದು ಹೇಳಿದಾಗಲೇ ಪ್ರಾಬಲ್ಯವು ಸಿದ್ಧವಾಗುತ್ತದೆ. ಮಹಾಯೋಗವೃತ್ತಿಯಿಂದಲೂ ಇರುತ್ತದೆಂದು ಹೇಳಿದಾಗ ಪ್ರಾಬಲ್ಯವು ಸುತರಾಂ ಸಿದ್ಧವಾಗುತ್ತದೆ. ಅದ್ದರಿಂದ ಅಕ್ಷಾದಿಶಬ್ದಗಳಂತೆ ಎಲ್ಲಾ ಶಬ್ದಗಳೂ ಅನೇಕಾರ್ಥಗಳಾಗಲೀ ಎಂಬ ಆಶಂಕೆಯು ಉದಯವಾಗುವುದಿಲ್ಲ.

ಮೇಲೆ ಹೇಳಿದ ಈ ವಿಷಯವನ್ನು ಅನೇಕ ಸೂತ್ರಗಳಲ್ಲಿ ಸಮರ್ಥಿಸಲಾಗಿದೆ. ಆದ್ದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂಬ ಆಶಂಕೆಯು ಆಪಾತತಃ ಪ್ರಾಪ್ತವಾಗುತ್ತದೆ. ಆದರೆ ಸೂತ್ರಕಾರರ ವಿಭಿನ್ನವಾದ ವಿವಕ್ಷೆಗಳನ್ನು ಏಕಾಗ್ರತೆಯಿಂದ ಗಮನಿಸಬೇಕು. 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಸೂತ್ರಕಾರರು ಹಾನಾದಿ ವ್ಯವಹಾರಕ್ಕೋಸ್ಕರ ಮಾತ್ರ ಶಬ್ದಗಳನ್ನು ಬೇರೆಡೆ ಉಪಯೋಗಿಸುತ್ತಾರೆ ಎಂದು ಹೇಳಿದ್ದಾರೆ. 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಈಶ್ವರನ ಸಂಬಂಧದಿಂದಷ್ಟೇ ಶಬ್ದಗಳು ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಿದ್ದಾರೆ. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಲೌಕಿಕಪದಾರ್ಥಗಳಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುವುದಿಲ್ಲವೆಂದು ಸಮರ್ಥಿಸಿದ್ದಾರೆ. 'ಸಮಾಕರ್ಷಾತ್' ಎಂಬ ಈ ಅಧಿಕರಣದ ಸೂತ್ರದಲ್ಲಿ ಅಕ್ಷಾದಿಶಬ್ದಗಳಂತೆ ಸಕಲಶಬ್ದಗಳು ನಾನಾರ್ಥಕಗಳಾಗುವುದಿಲ್ಲವೆಂದು ಸಮರ್ಥಿಸಿದ್ದಾರೆ. 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ ಬಾಲಕರು ಚಿತ್ರಲಿಖಿತ ಸಿಂಹವನ್ನು ನೋಡಿ, ಸಿಂಹವೆಂದು ಪ್ರಯೋಗಿಸುವಂತೆ ಅಜ್ಞರು ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಲೋಕದಲ್ಲಿ ವ್ಯವಹರಿಸುತ್ತಾರೆ ಎಂದು ಸಮರ್ಥಿಸುತ್ತಾರೆ. 'ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇತ್ ನ' ಎಂಬ ಸೂತ್ರದಲ್ಲಿ ತದಧೀನತ್ವನ್ಯಾಯದಿಂದ ಸಕಲ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಾದರೆ, ಮುಖ್ಯಪ್ರಾಣ ದೇವರನ್ನೂ ಕೂಡ ಪ್ರತಿಪಾದನೆ ಮಾಡಲಿ ಎಂಬ ಆಶಂಕೆಯನ್ನು ನಿರಾಕರಿಸಿದ್ದಾರೆ. 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರದಲ್ಲಿ ಬ್ರಹ್ಮಜ್ಞಾನಕ್ಕೋಸ್ಕರವೇ ಜ್ಞಾನಿಗಳು ಭಗವತ್ ಪ್ರತಿಪಾದಕ ಶಬ್ದಗಳನ್ನು ಕರ್ಮಾದಿಗಳಲ್ಲಿ, ದೇವತಾದಿಗಳಲ್ಲಿ ಪ್ರತಿಪಾದನೆ ಮಾಡುತ್ತಾರೆ ಎಂದು ಸಮರ್ಥಿಸಿದ್ದಾರೆ. ಹೀಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಭಿನ್ನ-ಭಿನ್ನವಾದ ಅಭಿಪ್ರಾಯವನ್ನು ತಾಳಿರುವುದರಿಂದ ಪರಸ್ಪರ-ಸೂತ್ರಗಳಲ್ಲಿ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.

ಪರಿಪೂರ್ಣಚಂದ್ರಿಕಾ

ಬ್ರಹ್ಮಪ್ರತಿಪಾದಕ ಶಬ್ದಗಳ ಸಮಾಕರ್ಷಣ ಅನಿವಾರ್ಯ

**तात्पर्यचन्द्रिका**

**अत्रोत्तरसूत्रचतुष्टये च पूर्वसूत्रादनुषक्तस्य जगद्वाचित्वस्य जगद्वाचित्वमन्यार्थमित्यादिरूपेणान्वयः ।**

ಅನುವಾದ - 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ' ಈ ಸೂತ್ರದಲ್ಲಿ ಹಿಂದಿನ ಸೂತ್ರದಲ್ಲಿರುವ 'ಜಗದ್ವಾಚಿತ್ವಾತ್' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. 'ಜಗದ್ವಾಚಿತ್ವಾತ್' ಎಂಬ ಪಂಚಮ್ಯಂತವಾದ ಪದವನ್ನು 'ಜಗದ್ವಾಚಕತ್ವಮ್' ಎಂಬುದಾಗಿ ಪ್ರಥಮಾಂತವಾಗಿ ವಿಪರಿಣಾಮ ಮಾಡಿಕೊಂಡು ಅರ್ಥವನ್ನು ತಿಳಿಯಬೇಕು. ಜಗತ್ತನ್ನು ಪ್ರತಿಪಾದನೆ ಮಾಡುವುದು ಪರಮಾತ್ಮನ ಜ್ಞಾನಕ್ಕೋಸ್ಕರ. ಹೀಗೆ ಮುಂದಿನ 'ವಾಕ್ಯಾನ್ವಯಾತ್ ' 'ಪ್ರತಿಜ್ಞಾಸಿದ್ಧೇಃ ಲಿಂಗಮಾಶ್ಮರಥ್ಯಃ', 'ಉತ್ಕ್ರಮಿಷ್ಯತೇ ಏವಂ ಭಾವಾದಿತ್ಯೌಡುಲೋಮಿಃ' 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಈ ನಾಲ್ಕು ಸೂತ್ರಗಳಲ್ಲಿಯೂ 'ಜಗದ್ವಾಚಕತ್ವಮ್' ಎಂಬುದನ್ನು ಅನುಷಂಗ ಮಾಡಿಕೊಂಡು ಅನ್ವಯವನ್ನು ತಿಳಿಯಬೇಕು.

**एकविज्ञानेन सर्वविज्ञाने श्रुत्युक्तो मृत्पिण्डमृन्मृयादिदृष्टान्तस्तु यथाऽनेकमृन्मयज्ञानं तत्कारणत्वेन मृत्पिण्डस्य ज्ञानार्थं चेत् सफलम् । अपेक्षितमृन्मयसम्पादनसम्भवात् । नतु स्वरूपेण ।**

ಛಾಂದೋಗ್ಯೋಪನಿಷತ್ತಿನಲ್ಲಿ ಉದ್ದಾಲಕರು ಶ್ವೇತಕೇತುವನ್ನು ಕುರಿತು ಉಪದೇಶ ಮಾಡುತ್ತಾರೆ. ಒಂದು ಮಣ್ಣಿನ ಮುದ್ದೆಯನ್ನು ತಿಳಿದರೆ ಮಣ್ಣಿನಿಂದ ಹುಟ್ಟುವ ಎಲ್ಲಾ ವಸ್ತುಗಳನ್ನು ತಿಳಿದಂತಾಗುತ್ತದೆ. ಅದರಂತೆ ಪರಮಾತ್ಮನ ಜ್ಞಾನದಿಂದ ಕರ್ಮಾದಿಗಳನ್ನೆಲ್ಲಾ ತಿಳಿಯಬಹುದು ಎಂದು. ಒಂದರ ಜ್ಞಾನದಿಂದ ಎಲ್ಲವನ್ನೂ ತಿಳಿದಂತಾಗುತ್ತದೆಂಬ ಶ್ರುತಿಯಲ್ಲಿ ಹೇಳಿದ ವಿಷಯಕ್ಕೆ ಮೃತ್ಪಿಂಡ ಹಾಗೂ ಮೃಣ್ಮಯಗಳ ದೃಷ್ಟಾಂತವನ್ನು ನೀಡಿದ್ದಾರೆ. ಮಣ್ಣಿನಿಂದ ತಯಾರಾದ ಅನೇಕ ಮೃಣ್ಮಯ ಪದಾರ್ಥಗಳನ್ನು ತಿಳಿಯುವುದಕ್ಕಿಂತ ಅದರ ಕಾರಣವಾದ ಮೃತ್ಪಿಂಡವನ್ನು ತಿಳಿಯುವುದು ಸಾರ್ಥಕ. ಒಂದು ಮೃಣ್ಮಯಪದಾರ್ಥವನ್ನು ತಿಳಿಯುವುದರಿಂದ ಅದರಿಂದ ಹುಟ್ಟುವ ಅನೇಕ ಮೃಣ್ಮಯಪದಾರ್ಥಗಳನ್ನು ಸುಲಭವಾಗಿ ತಿಳಿಯಬಹುದು. ಆದ್ದರಿಂದ ಘಟ, ಶರಾವ ಮೊದಲಾದ ಮೃಣ್ಮಯಪದಾರ್ಥಗಳ ಜ್ಞಾನವು ಮೃತ್ಪಿಂಡದ ಜ್ಞಾನಕ್ಕಾಗಿ ಸಾರ್ಥಕವಾಗುತ್ತದೆ. ಕೇವಲ ಘಟಶರಾವಾದಿಗಳ ಜ್ಞಾನದಿಂದ ಏನೂ ಉಪಯೋಗವಾಗುವುದಿಲ್ಲ.

**एवं कर्मदेवतादिविज्ञानमपि तदाश्रयत्वादिना भगवज्ज्ञानार्थं चेत् सफलम् । नान्यथेत्यभिप्रायेणेति ज्ञेयम् ।**

ಅದರಂತೆ ಕರ್ಮದೇವತಾದಿಗಳ ವಿಜ್ಞಾನವು ಅವುಗಳಿಗೆ ಆಶ್ರಯನಾದ ಭಗವಂತನ ಜ್ಞಾನದಲ್ಲಿ ಪರ್ಯವಸಾನವಾಗುವುದಾದರೆ ಮಾತ್ರ ಸಫಲವಾಗುತ್ತದೆ. ಹೊರತು ಕೇವಲ ಕರ್ಮದೇವತಾದಿಗಳ ವಿಜ್ಞಾನದಿಂದ ಏನೂ ಪ್ರಯೋಜನವಿರುವುದಿಲ್ಲ.

**'वाक्यान्वयात्' इत्यत्र वैदिकशब्दानामन्यत्रासमाकर्षे प्रतिपदं ब्रह्ममात्रपरत्वे मन्दानां तत्रानधिकारेण वैमुख्यं स्यात् । परस्परान्वययोग्यार्थाभिधानाभावेन वाक्यान्वयश्च न स्यात् ।**

'ವಾಕ್ಯಾನ್ವಯಾತ್' ಎಂಬ ಸೂತ್ರದಲ್ಲಿ ವೈದಿಕವಾಕ್ಯಗಳಲ್ಲಿರುವ ಪ್ರತ್ಯೇಕ ಪದಗಳು ಬ್ರಹ್ಮಭಿನ್ನವಾದ ಅರ್ಥವನ್ನು ಹೇಳುತ್ತಿದ್ದರೂ ಸಮಗ್ರ ವಾಕ್ಯವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು ಹೇಳಲಾಗಿದೆ. ಒಂದು ವೇಳೆ ವೈದಿಕಶಬ್ದಗಳನ್ನು ಬೇರೆಡೆ ಸಮಾಕರ್ಷ ಮಾಡದಿದ್ದರೆ, ಪ್ರತಿಯೊಂದು ಪದಗಳೂ ಕೇವಲ ಬ್ರಹ್ಮನನ್ನಷ್ಟೇ ಪ್ರತಿಪಾದನೆ ಮಾಡುವುದಾದರೆ ಮಂದರಿಗೆ ಅಂತಹ ವೇದವಿದ್ಯೆಯಲ್ಲಿ ಅಧಿಕಾರವಿಲ್ಲದ ಕಾರಣ ವೇದಾಧ್ಯಯನದಲ್ಲಿ ತೊಡಗದೇ ಇರುವ ಪ್ರಸಂಗ ಬರುತ್ತದೆ. ಮತ್ತು ಪ್ರತಿಯೊಂದು ಪದಗಳು ಪ್ರತ್ಯೇಕವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುವುದಾದರೆ ಪರಸ್ಪರ ಅನ್ವಯಕ್ಕೆ ಯೋಗ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡದ ಕಾರಣ ವಾಕ್ಯಾನ್ವಯವು ಇಲ್ಲದಂತಹ ಪರಿಸ್ಥಿತಿ ಬರುತ್ತದೆ.

**तथा च तत्समन्वयाधीनं ब्रह्मणो जगद्धेतुत्वसर्वशब्दवाच्यत्वादिकं, तथा श्रवणादिविधिः, तथा कर्मदेवतादिपरवेदभागस्य कर्मदेवतादाववान्तरप्रामाण्याभावेन कर्मदेवतादिकं न सिद्ध्येत् ।**

ಯಾವಾಗ ಪ್ರತಿಯೊಂದು ಪದಗಳು ಪ್ರತ್ಯೇಕವಾಗಿ ಬ್ರಹ್ಮನನ್ನಷ್ಟೇ ಪ್ರತಿಪಾದನೆ ಮಾಡುತ್ತವೋ, ಆವಾಗ ವಾಕ್ಯಸಮನ್ವಯದ ಅಧೀನವಾದ ಜಗತ್‌ಹೇತುತ್ವ, ಸರ್ವಶಬ್ದವಾಚ್ಯತ್ವ ಮೊದಲಾದವುಗಳು ಬ್ರಹ್ಮನಲ್ಲಿ ಸಿದ್ಧವಾಗದಿರಬೇಕಾದೀತು. ಅದರಂತೆ ಶ್ರವಣಾದಿವಿಧಿಗಳು ಕರ್ತವ್ಯವಾಗಿವೆ ಎಂಬ ವಿಷಯವು ಸಿದ್ಧವಾಗದಿರಬೇಕಾದೀತು. ಮತ್ತು ಕರ್ಮವನ್ನು ಪ್ರತಿಪಾದನೆ ಮಾಡುವ ವೇದಭಾಗವಾಗಲೀ, ದೇವತೆಗಳನ್ನು ಪ್ರತಿಪಾದನೆ ಮಾಡುವ ವೇದಭಾಗವಾಗಲೀ ಕರ್ಮದಲ್ಲಿ ಮತ್ತು ದೇವತೆಗಳಲ್ಲಿ ಅವಾಂತರಪ್ರಾಮಾಣ್ಯವನ್ನು ಹೊಂದದೇ ಕರ್ಮ ಹಾಗೂ ದೇವತೆಗಳ ಸಿದ್ಧಿಯೇ ಆಗದಿರಬೇಕಾದೀತು.

**तथा चोत्तमाधिकारिस्वरूपादेरप्यसिद्ध्यापातेन तान् प्रति पदसमन्वयोऽपि न सिद्ध्येत् ।**

ಆವಾಗ ಇವರು ಉತ್ತಮಾಧಿಕಾರಿಗಳು ಉಳಿದವರು ಅಧಮಾಧಿಕಾರಿಗಳು ಎಂಬ ಸ್ವರೂಪವೂ ಕೂಡ ನಿರ್ಧಾರವಾಗದೇ ಅಂತಹ ಉತ್ತಮಾಧಿಕಾರಿಗಳ ವಿಷಯದಲ್ಲಿ ಪದಸಮನ್ವಯ ಸಾರ್ಥಕ ಎಂಬ ವಿಷಯವೂ ಕೂಡ ಸಿದ್ಧವಾಗದಿರಬೇಕಾದೀತು.

**समाकर्षे तु**

**स्वार्थबोधे समाप्तानामङ्गाङ्गित्वाद्यपेक्षया ।**
**वाक्यानामेकवाक्यत्वं पुनः संहत्यजायत ।।**

**इत्युक्तरीत्या प्रयाजादिवाक्यस्यावान्तरवाक्यस्यैव सतो दर्शपूर्णमासवाक्यैकवाक्यतावत् कर्मादिभागस्य कर्मादाववान्तरवाक्यस्यैव सतो ब्रह्मपरवाक्यैकवाक्यतारूपो वाक्यसमन्वयोऽपि सिध्यतीत्युक्तम् ।**

ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಸಮಾಕರ್ಷ ಮಾಡಿದಾಗ ಯಾವ ದೋಷಗಳಿಗೂ ಆಸ್ಪದವಿಲ್ಲ. ಏಕೆಂದರೆ

ಸ್ವಾರ್ಥಬೋಧೇ ಸಮಾಪ್ತಾನಾಮಂಗಾಂಗಿತ್ವಾದ್ಯಪೇಕ್ಷಯಾ ।
ವಾಕ್ಯಾನಾಮೇಕವಾಕ್ಯತ್ವಂ ಪುನಃ ಸಂಹತ್ಯಜಾಯತ ॥

ಪದಗಳು ಮೊದಲು ಸ್ವಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಅನಂತರ ಪರಸ್ಪರ ಅಂಗಾಂಗಿಭಾವದ ವಿವಕ್ಷೆಯಿಂದ ವಾಕ್ಯದ ಜೊತೆಗೆ ಸೇರಿಕೊಂಡು ಏಕವಾಕ್ಯತ್ವವನ್ನು ಸಮರ್ಥನೆ ಮಾಡುತ್ತವೆ. ಹೀಗೆ ಹೇಳಿದಂತೆ 'ಇಡೋ ಯಜತಿ', 'ಬರ್ಹಿರ್ಯಜತಿ' ಇತ್ಯಾದಿ ವಾಕ್ಯಗಳು ಪ್ರತ್ಯೇಕ ಪ್ರತ್ಯೇಕವಾಗಿ ಮೊದಲು ತಮ್ಮ ತಮ್ಮ ಅರ್ಥಗಳನ್ನು ಪ್ರತಿಪಾದನೆ ಮಾಡಿ, ಅನಂತರ ಒಟ್ಟಿಗೆ ಸೇರಿ ದರ್ಶಪೂರ್ಣಮಾಸಯಾಗದ ಜೊತೆಗೆ ಏಕವಾಕ್ಯತ್ವವನ್ನು ಹೊಂದುತ್ತವೆ. ಅದರಂತೆ ಕರ್ಮಾದಿಭಾಗಗಳೂ ಕೂಡ ಕರ್ಮಾದಿಗಳಲ್ಲಿ ಅವಾಂತರವಾಕ್ಯತ್ವವನ್ನು ಹೊಂದಿ ಸ್ವಾರ್ಥವನ್ನು ಬೋಧಿಸಿ, ಅನಂತರ ಬ್ರಹ್ಮಪರವಾದ ಮಹಾವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದಿ ಬ್ರಹ್ಮನಲ್ಲಿ ಪರ್ಯವಸಾನಗೊಳ್ಳುತ್ತವೆ. ಹೀಗೆ ವಾಕ್ಯಸಮನ್ವಯವನ್ನು ಬ್ರಹ್ಮನಲ್ಲಿ ತಿಳಿಯಬೇಕು.

**प्रकाशः –**

**प्रश्नव्याख्यानाभ्यामिति** सूत्रशेषभाष्यटीकार्थं व्यनक्ति – **एकविज्ञानेनेति ।। सफलमिति** ।। मोक्षाख्यफलोपेतमित्यर्थः ।

ವಿವರಣೆ - ಸೂತ್ರ ಹೀಗಿದೆ - 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡಲು ಹೊರಟದ್ದಾರೆ. ಈ ಸೂತ್ರದಲ್ಲಿರುವ 'ಪ್ರಶ್ನವ್ಯಾಖ್ಯಾನಾಭ್ಯಾಮ್'

ಎಂಬ ಭಾಗಕ್ಕೆ ಭಾಷ್ಯ ಹಾಗೂ ಟೀಕೆಗಳಲ್ಲಿ ವ್ಯಾಖ್ಯಾನ ಮಾಡಿದ ವಿಷಯವನ್ನೇ ಸ್ಪಷ್ಟಪಡಿಸುತ್ತಿದ್ದಾರೆ 'ಏಕವಿಜ್ಞಾನೇನ' ಎಂಬ ಗ್ರಂಥದಿಂದ. 'ಸಫಲಮ್' ಎಂದರೆ ಮೋಕ್ಷವೆಂಬ ಫಲವಿರುವುದರಿಂದ ಎಂದರ್ಥ.

**प्रकाशः** – ननु ब्रह्मज्ञानार्थं कर्मदेवतादिकं ज्ञापयितुं तत्र समाकर्षादिति पूर्वसूत्रोक्तमयुक्तम् ।

ಬ್ರಹ್ಮಜ್ಞಾನಕ್ಕೋಸ್ಕರ ಕರ್ಮ ಹಾಗೂ ದೇವತಾದಿಗಳ ಪ್ರತಿಪಾದನೆಯು ಸಾರ್ಥಕವೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನೇ ಕರ್ಮದೇವತಾದಿಗಳಲ್ಲಿ ಸಮಾಕರ್ಷ ಮಾಡಲಾಗಿದೆ ಎಂದಭಿಪ್ರಾಯ. ಆದರೆ ಇದು ಸರಿಯಲ್ಲ.

**प्रकाशः** – तदनुक्त्वा ब्रह्ममात्रकथनेऽपि तज्ज्ञानसम्भवेन तत्र समाकर्षे प्रयोजनाभावादित्याशङ्क्य पञ्चमसूत्रार्थं

अन्वयस्सर्वशब्दानामशक्यो ज्ञातुमञ्जसा ।
इति यल्लोकवैमुख्यं जैमिन्यादिमतं वदन् ।
विद्याधिनाथो भगवानपाचक्रे स्वयं प्रभुः ।।

इत्यनुव्याख्यानोक्तमाह – **वाक्येति** ।।

ಏಕೆಂದರೆ ಕರ್ಮ ದೇವತೆ ಮೊದಲಾದವುಗಳನ್ನು ಪ್ರತಿಪಾದನೆ ಮಾಡದೇ, ಬ್ರಹ್ಮನನ್ನಷ್ಟೇ ಪ್ರತಿಪಾದನೆ ಮಾಡಿದರೂ ಕೂಡ ಬ್ರಹ್ಮನ ಜ್ಞಾನವನ್ನು ಹೊಂದಬಹುದು. ಮತ್ತು ಹಾಗೆ ಸಮಾಕರ್ಷ ಮಾಡುವುದರಿಂದ ಯಾವುದೇ ಪ್ರಯೋಜನವೂ ಕೂಡ ಇರುವುದಿಲ್ಲ. ಈ ಆಶಂಕೆಗೆ 'ವಾಕ್ಯಾನ್ವಯಾತ್' ಎಂಬ ಪಂಚಮ ಸೂತ್ರದಲ್ಲಿ

ಅನ್ವಯಃ ಸರ್ವಶಬ್ದಾನಾಮಶಕ್ಯೋ ಜ್ಞಾತುಮಂಜಸಾ ।
ಇತಿ ಯಲ್ಲೋಕವೈಮುಖ್ಯಂ ಜೈಮಿನ್ಯಾದಿಮತಂ ವದನ್ ।
ವಿದ್ಯಾಧಿನಾಥೋ ಭಗವಾನಪಾಚಕ್ರೇ ಸ್ವಯಂ ಪ್ರಭುಃ ॥

ಸಕಲ ಶಬ್ದಗಳ ಅರ್ಥವನ್ನು ಮಂದಾಧಿಕಾರಿಗಳಿಂದ ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವೇದದಿಂದ ವಿಮುಖರಾಗುತ್ತಾರೆ. ಹೀಗೆ ಜೈಮಿನ್ಯಾದಿಗಳ ಮತವನ್ನು ಹೇಳುತ್ತಾ ಸೂತ್ರಕಾರರು ಮೇಲಿನ ಆಕ್ಷೇಪವನ್ನು ನಿರಾಕರಣೆ ಮಾಡಿದ್ದಾರೆ. ಅನುವ್ಯಾಖ್ಯಾನದಲ್ಲಿ ಹೇಳಿದ ಈ ವಿಷಯವನ್ನು 'ವಾಕ್ಯ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – **स्वार्थेति** ।। समिदाद्यङ्गस्वरूपविधाने पर्यवसितानां प्रयाजाद्यङ्ग-वाक्यानामेकवाक्यत्वं प्रधानविधायकवाक्यैकवाक्यत्वमित्यर्थः ।।

'ಸ್ವಾರ್ಥಬೋಧೇ' ಎಂಬ ಶ್ಲೋಕದ ಅಭಿಪ್ರಾಯ ಹೀಗಿದೆ - 'ಸಮಿಧೋ ಯಜತಿ', 'ಇಡೋ ಯಜತಿ' ಎಂಬ ದರ್ಶಪೂರ್ಣಮಾಸಯಾಗದ ಅಂಗಸ್ವರೂಪವನ್ನು ವಿಧಾನ ಮಾಡುವುದರಲ್ಲಿ

ಪರ್ಯವಸಿತವಾದ ವಾಕ್ಯಗಳು ಏಕವಾಕ್ಯತ್ವವನ್ನು ಹೊಂದಿವೆ. ಅಂದರೆ ಪ್ರಧಾನ ವಿಧಾಯಕವಾದ ದರ್ಶಪೂರ್ಣಮಾಸವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದೆ ಎಂದರ್ಥ.

**प्रकाशः – उक्तरीत्येति ।।** सप्तमाद्योक्तरीत्येत्यर्थः । जगद्वाचित्वमन्यार्थं वाक्यान्वयादित्युक्तं भवति । एतेन ''अन्यावचने पदान्वय एव युज्यते'' इत्यादिटीका विवृता ।

ಏಳನೆಯ ಅಧ್ಯಾಯದ ಪ್ರಥಮಪಾದದಲ್ಲಿ ಹೇಳಿದಂತೆ ಎಂದು 'ಉಕ್ತರೀತ್ಯಾ' ಎಂಬುದರ ಅರ್ಥ. 'ಜಗದ್‌ವಾಚಿತ್ವಾತ್' 'ವಾಕ್ಯಾನ್ವಯಾತ್' 'ಅನ್ಯಾರ್ಥ ತು' ತ್ಯಾದಿ ಸೂತ್ರಗಳ ಅಭಿಪ್ರಾಯವನ್ನು ವಿವರಿಸಿದಂತಾಯಿತು. ಹೀಗೆ ಹೇಳಿದ್ದರಿಂದ 'ಅನ್ಯಾವಚನೇ ಪದಾನ್ವಯ ಏವ ಯುಜ್ಯತೇ' ಎಂಬ ಟೀಕಾವಾಕ್ಯವನ್ನು ವಿವರಿಸಿದಂತಾಯಿತು.




ಪ್ರತಿಯೊಂದು ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಅಂತಹ ಶಬ್ದಗಳನ್ನು ಸಮಾಕರ್ಷಣ ಮಾಡಿ, ಕರ್ಮ, ದೇವತಾದಿಗಳನ್ನು ತಿಳಿಯಬೇಕು. ಕರ್ಮ, ದೇವತೆ ಮೊದಲಾದವುಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳಿಗೆ ಪರಮಾತ್ಮನನ್ನು ತಿಳಿಯುವುದರಲ್ಲೇ ಮುಖ್ಯತಾತ್ಪರ್ಯವಿರುತ್ತದೆ. ಹೇಗೆಂದರೆ ಒಂದು ಮಣ್ಣಿನ ಮುದ್ದೆಯನ್ನು ತಿಳಿದರೆ ಮಣ್ಣಿನಿಂದಾಗುವ ಎಲ್ಲ ವಸ್ತುಗಳು ತಿಳಿಯುತ್ತವೆ. ಅದರಂತೆ ಪರಮಾತ್ಮನ ಜ್ಞಾನದಿಂದ ಎಲ್ಲಾ ಕರ್ಮಾದಿಗಳನ್ನು ತಿಳಿದಂತಾಗುತ್ತದೆ. ಒಂದುವೇಳೆ ವೈದಿಕಶಬ್ದಗಳನ್ನು ಹೀಗೆ ಬೇರೆಡೆ ಸಮಾಕರ್ಷಣ ಮಾಡದಿದ್ದರೆ, ಬ್ರಹ್ಮನನ್ನಷ್ಟೇ ಪ್ರತಿಪಾದನೆ ಮಾಡುವುದಾದರೆ, ಮಂದರು ವೇದವನ್ನು ಅಧ್ಯಯನ ಮಾಡಲು ತೊಡಗುವುದೇ ಇಲ್ಲ. ಅಷ್ಟೇ ಅಲ್ಲದೇ ಪ್ರತಿಯೊಂದು ಪದಗಳು ಬ್ರಹ್ಮನ ಹೆಸರುಗಳಾದ್ದರಿಂದ ಪರಸ್ಪರ ಅನ್ವಯವನ್ನು ಹೊಂದದೇ ವಾಕ್ಯದ ಅರ್ಥವೇ ಸಿದ್ಧವಾಗದಿರಬೇಕಾದೀತು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಮತ್ತು 'ಯತೋ ವಾಚೋ ನಿವರ್ತಂತೇ' ಇತ್ಯಾದಿ ವಾಕ್ಯವು ಸರ್ವಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ಪ್ರತಿಪಾದನೆ ಮಾಡದಿರಬೇಕಾದೀತು. ಅಷ್ಟೇ ಅಲ್ಲದೇ ವೇದವು ವಿಧಿಸುವ ಶ್ರವಣಾದಿಗಳ ಜ್ಞಾನವು ಬಾರದಿರಬೇಕಾದೀತು. ಕರ್ಮದೇವತೆಗಳ ಜ್ಞಾನವೂ ಉಂಟಾಗದಿರಬೇಕಾದೀತು. ಇಂತಹವರು ಉತ್ತಮಾಧಿಕಾರಿಗಳು, ಇವರು ಅಧಮಾಧಿಕಾರಿಗಳು ಎಂಬ ವಿಷಯವೂ ಕೂಡ ತಿಳಿಯದಿರಬೇಕಾದೀತು. ಈ ಎಲ್ಲಾ ಕಾರಣಗಳಿಂದ ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಬೇರೆಡೆ ಸಮಾಕರ್ಷಣ ಮಾಡಿ, ಅರ್ಥವನ್ನು ನಾವು ತಿಳಿಯಲೇ ಬೇಕು. ಆದ್ದರಿಂದ ಯಾವುದೇ ಶಬ್ದಗಳು ಸ್ವಾರ್ಥವನ್ನು ಮೊದಲು ಪ್ರತಿಪಾದನೆ ಮಾಡಿ, ಅನಂತರ ಏಕವಾಕ್ಯತ್ವವನ್ನು ಹೊಂದಿ ವಾಕ್ಯಾರ್ಥಜ್ಞಾನವನ್ನು ತಂದುಕೊಡುತ್ತವೆ. ಅಂತಹ ಮಹಾವಾಕ್ಯದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ವೈದಿಕವಾಕ್ಯಗಳಲ್ಲಿರುವ ಪ್ರತ್ಯೇಕ ಪದಗಳು ಬ್ರಹ್ಮಭಿನ್ನವಾದ ಅರ್ಥವನ್ನು ಹೇಳುತ್ತಿದ್ದರೂ ಸಮಗ್ರವಾಕ್ಯವು ಪರಮಾತ್ಮನೊಂದಿಗೆ ಅನ್ವಯವನ್ನು ಹೊಂದುತ್ತದೆಂಬುದು 'ವಾಕ್ಯಾನ್ವಯಾತ್' ಎಂಬ ಸೂತ್ರದ ಅಭಿಪ್ರಾಯ.

ಸೂತ್ರಕ್ರಮ ಸ್ವಾರಸ್ಯ

**तात्पर्यचन्द्रिका**

**''प्रतिज्ञासिद्धेः'' इत्यत्र तु कथं कर्म ज्ञानार्थमिति शङ्कायां क्षुद्रफलार्थिनं प्रति तत्तत्फलाय तत्तत्कर्म विदधदपि कर्मवाक्यं मुमुक्षुं प्रति क्षुद्रफलत्वात् कर्मणां तद्धानेनाक्षुद्रफलकं ज्ञानमेवोपादेयमिति वैराग्यजननद्वारा ज्ञानार्थमित्युक्तम् ।**

ಅನುವಾದ - 'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ' ಈ ಸೂತ್ರವು ಕರ್ಮವು ಜ್ಞಾನಕ್ಕೋಸ್ಕರ ಸಾರ್ಥಕವಾಗುತ್ತದೆಂಬುದು ಹೇಗೆ ಯುಕ್ತವಾಗುತ್ತದೆ? ಎಂಬ ಆಶಂಕೆಗೆ ಉತ್ತರಿಸುತ್ತಿದೆ. ಐಹಿಕವಾದ ಕ್ಷುದ್ರಫಲಗಳನ್ನೇ ಯಾರು ಅಪೇಕ್ಷಿಸುತ್ತಾನೋ ಅಂತಹ ಫಲಗಳಿಗೋಸ್ಕರ ಆಯಾ ಕರ್ಮಗಳನ್ನು ವೇದವು ವಿಧಾನ ಮಾಡುತ್ತದೆ. ಅದೇ ಕರ್ಮಪ್ರತಿಪಾದಕ ವಾಕ್ಯಗಳು ಮುಮುಕ್ಷುವನ್ನು ಕುರಿತು - ''ಕರ್ಮಗಳು ಕ್ಷುದ್ರಫಲವನ್ನು ನೀಡುತ್ತವಾದ್ದರಿಂದ ಅಂತಹ ಕರ್ಮಾಚರಣೆಯಲ್ಲಿ ತೊಡಗದೆ ಶಾಶ್ವತ ಫಲವನ್ನು ನೀಡುವ ತತ್ವಜ್ಞಾನವನ್ನೇ ಸಂಪಾದಿಸಬೇಕು'' ಎಂಬುದಾಗಿ ವೈರಾಗ್ಯವನ್ನು ಹುಟ್ಟಿಸುವ ಮೂಲಕ ಜ್ಞಾನಕ್ಕೋಸ್ಕರ ಕರ್ಮಗಳು ಸಾರ್ಥಕವಾಗಿವೆ ಎಂದು ಹೇಳುತ್ತಿವೆ.

**''उत्क्रमिष्यते'' इत्यत्र त्वन्तःकरणशुद्धिद्वारा कर्माण्युपादेय तया ज्ञानार्थमित्युक्तम् ।**

'ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ' ಈ ಸೂತ್ರದಲ್ಲಿ ಅಂತಃಕರಣದ ಶುದ್ಧಿಗೋಸ್ಕರ ಕರ್ಮಗಳನ್ನು ಆಚರಿಸಬೇಕು. ಹೀಗೆ ಜ್ಞಾನಸಾಧನಕ್ಕಾಗಿ ಕರ್ಮವು ಸಾರ್ಥಕವೆಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ.

**''अवस्थितेः'' इत्यत्र तु कथं ब्रह्म ज्ञेयमिति जिज्ञासायां स्वेतरसर्वाधारत्वेनेति साक्षाज्ज्ञानापेक्षित प्रकारसमर्पणायेतरोक्तिरित्युक्तमिति भेदः सूत्रक्रमश्च ।**

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರವು ಬ್ರಹ್ಮನು ಹೇಗೆ ತಿಳಿಯಲ್ಪಡುತ್ತಾನೆ ಎಂಬ ಜಿಜ್ಞಾಸೆಗೆ ಉತ್ತರಿಸುತ್ತಿದೆ. ತನಗಿಂತ ಭಿನ್ನನಾಗಿರುತ್ತಾನೆ. ಮತ್ತು ಸಕಲ ಪದಾರ್ಥಗಳಿಗೆ ಆಧಾರನಾಗಿರುತ್ತಾನೆ. ಹೀಗೆ ನೇರವಾಗಿ ಜ್ಞಾನಕ್ಕೆ ಅಪೇಕ್ಷಿತವಾದ ಸಕಲವಿಧ ಪ್ರಕಾರಗಳನ್ನು ಹೇಳುವುದಕ್ಕಾಗಿ ಕರ್ಮಪ್ರತಿಪಾದಕ ವೇದಭಾಗಗಳೆಲ್ಲವೂ ಹೊರಟಿರುತ್ತವೆ. ಹೀಗೆ ಸೂತ್ರಗಳ ಕ್ರಮವು ಅತ್ಯಂತ ಅರ್ಥಪೂರ್ಣವಾಗಿವೆ.

ಪರಿಪೂರ್ಣಚಂದ್ರಿಕಾ

**नच ''समाकर्षात्'' इत्यादिसूत्राणि समन्वयमात्रसाधारण बाधकोद्धारकतया-ऽध्यायशेषत्वादध्यायान्ते कर्तव्यानीति शङ्क्यम् ।**

'ಸಮಾಕರ್ಷಾತ್' ಇತ್ಯಾದಿ ಸೂತ್ರಗಳು ಸಕಲ ವಿಧವಾದ ಶಬ್ದಗಳ ಸಮನ್ವಯವಿಷಯದಲ್ಲಿ ಪ್ರಾಪ್ತವಾಗುವ ಬಾಧಕಗಳನ್ನು ಪರಿಹರಿಸಲು ಹೊರಟವೆ. ಹಾಗಾಗಿ ಪ್ರಥಮಾಧ್ಯಾಯದ ಕೊನೆಯಲ್ಲೇ ಈ ಎಲ್ಲಾ ಸೂತ್ರಗಳನ್ನು ಉಲ್ಲೇಖಿಸಬೇಕಿತ್ತಲ್ಲವೇ? ಹೀಗೆ ಆಶಂಕಿಸಬಾರದು.

**अत्रोक्त बाधकोद्धारप्रकारस्य ''एतेन सर्वे व्याख्याताः'' इत्यत्रानतिदेशापातात्।**

ಏಕೆಂದರೆ ಈ ಅಧಿಕರಣದಲ್ಲಿ ಹೇಳಲ್ಪಟ್ಟ ಬಾಧಕೋದ್ಧಾರದ ಪ್ರಕಾರವನ್ನು 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಸೂತ್ರದಲ್ಲಿರುವ 'ಏತೇನ' ಎಂಬ ಪದದಿಂದ ಅತಿದೇಶ ಮಾಡುತ್ತಾರೆ. ಒಂದುವೇಳೆ ಈ ಬಾಧಕೋದ್ಧಾರ ಪ್ರಕಾರಗಳನ್ನು ಇಲ್ಲಿ ಹೇಳದಿದ್ದಲ್ಲಿ 'ಏತೇನ' ಎಂಬ ಪದದಿಂದ ಅತಿದೇಶ ಮಾಡಲು ಸಾಧ್ಯವಾಗುವುದಿಲ್ಲ.

**''आत्मन आकाशः सम्भूत'' इत्यादावाकाशादिशब्दानां ब्रह्मणि मुख्यत्वे गगनादेरुत्पत्त्यादि न सिद्ध्येदिति शङ्काया अत्रैव सङ्गतत्वाच्च ।**

ಮತ್ತು 'ಆತ್ಮನಃ ಆಕಾಶಃ ಸಂಭೂತಃ' ಎಂಬುದಾಗಿ ಆಕಾಶಾದಿ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿ ಇರುವುದಾದರೆ ಆಕಾಶಾದಿಗಳಿಗೆ ಉತ್ಪತ್ತಿ, ನಾಶ ಮೊದಲಾದವುಗಳು ಸಿದ್ಧವಾಗದಿರಬೇಕಾದೀತು ಎಂಬ ಆಕ್ಷೇಪಕ್ಕೆ ಇಲ್ಲಿಯೇ ಉತ್ತರಿಸುವುದು ಸಂಗತವಾಗುತ್ತದೆ. ಪ್ರಸಕ್ತಿ ಬಂದಾಗ ಉತ್ತರಿಸದೇ ಬೇರೆಲ್ಲೋ ಉತ್ತರಿಸುವುದು ಅಸಂಗತವಾಗುತ್ತದೆ. ಆದ್ದರಿಂದ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳಿಗೆ ಇಲ್ಲಿಯೇ ಸಾಂಗತ್ಯವಿರುತ್ತದೆ ಹೊರತು ಅಧ್ಯಾಯದ ಕೊನೆಯಲ್ಲಲ್ಲ.

**प्रकाशः –**

''प्रतिज्ञासिद्धेर्लिङ्गमाश्मरथ्यः । उत्क्रमिष्यत एवं भावादित्यौडुलोमिः । अवस्थितेरिति काशकृत्स्नः'' इति सूत्रत्रयं वाक्यान्वयप्रकारप्रदर्शनार्थम् । तत्राद्यस्य ''तमेवं विद्वान्'' इत्यनेन ज्ञानमेव मोक्षहेतुः नान्यदिति प्रतिज्ञातेऽर्थे हेत्वाकाङ्क्षायां प्रतिज्ञासिद्ध्यर्थं हेतुत्वेन कर्मादिकमुच्यत इत्यर्थ उक्तः । तत्र हेतुहेतुमद्भावं ''विस्तरेण सपरिकरं कर्माद्युक्त्वा'' इत्यादिटीकोक्तं व्यनक्ति – **प्रतिज्ञेति** ।। कर्म कथं ज्ञानार्थमिति शङ्कायामित्यर्थः ।। **क्षुद्रेति** ।।

**ವಿವರಣೆ** - ಹಿಂದಿನ ಸೂತ್ರವು ಪರಮಾತ್ಮನಲ್ಲಿ ವಾಕ್ಯಾನ್ವಯಕ್ಕಾಗಿ ಕರ್ಮಾದಿಗಳ ಪ್ರತಿಪಾದನೆಯು ಸಾರ್ಥಕವೆಂದು ಪ್ರತಿಪಾದಿಸಿತು. ಅಂದರೆ ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ ಬೇರೆ ಅರ್ಥಗಳಲ್ಲಿ ಪ್ರಸಿದ್ಧವಾದ ಪದಗಳನ್ನು ಅಂತತಃ ಪರಮಾತ್ಮನಲ್ಲಿ ಸಮನ್ವಯ ಮಾಡುವುದೇ 'ವಾಕ್ಯಾನ್ವಯ' ಎನಿಸುತ್ತದೆ. ವಾಕ್ಯಾನ್ವಯಕ್ಕಾಗಿ ಕರ್ಮಾದಿಗಳ ಪ್ರತಿಪಾದನೆ ಎಂಬ ಹಿಂದಿನ ಸೂತ್ರದ ಅರ್ಥವನ್ನು ಮೂರುಮಂದಿ ವ್ಯಾಸರ ಶಿಷ್ಯರು ಬೇರೆ ಬೇರೆ ರೀತಿಯಾಗಿ ಹೇಳುತ್ತಾರೆ. ಅವರ ಅಭಿಪ್ರಾಯವನ್ನು 'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ' 'ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ' 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಮೂರು ಸೂತ್ರಗಳಲ್ಲಿ ಸೂತ್ರಕಾರರೇ ತಿಳಿಸಿರುತ್ತಾರೆ. ಈ ಮೂವರಲ್ಲಿ ಆಶ್ಮರಥ್ಯಾಚಾರ್ಯರ ಅಭಿಪ್ರಾಯ ಹೀಗಿದೆ - 'ತಮೇವಂ ವಿದ್ವಾನ್' ಎಂಬ ವಾಕ್ಯದಿಂದ ಜ್ಞಾನವೇ ಮೋಕ್ಷಕ್ಕೆ ಕಾರಣ ಕರ್ಮಾದಿಗಳಲ್ಲ ಎಂಬುದಾಗಿ ಪ್ರತಿಜ್ಞೆ ಮಾಡಲ್ಪಟ್ಟ ಅರ್ಥದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ ಪ್ರತಿಜ್ಞೆಯ ಸಿದ್ಧಿಗಾಗಿ ಕರ್ಮಾದಿಗಳನ್ನು ಹೇತುತ್ವೇನ ಹೇಳಲಾಗಿದೆ. ಅಂದರೆ ಕರ್ಮವು ಮೋಕ್ಷಸಾಧನವಾಗುವುದಿಲ್ಲ ಎಂಬುದು ಸ್ಪಷ್ಟವಾದರೆ ಮಾತ್ರ ಜ್ಞಾನವಷ್ಟೇ ಮೋಕ್ಷಕ್ಕೆ ಸಾಧನವೆಂಬ ಪ್ರತಿಜ್ಞೆಯು ಸಿದ್ಧವಾಗುತ್ತದೆ. ಈ ವಿಷಯದಲ್ಲಿ ಹೇತುಹೇತುಮದ್ಭಾವವನ್ನು 'ವಿಸ್ತರೇಣ ಸಪರಿಕರಂ ಕರ್ಮಾದ್ಯುಕ್ತ್ವಾ' ಇತ್ಯಾದಿ ಟೀಕೆಯಲ್ಲಿ ಹೇಳಿರುತ್ತಾರೆ. ಅದನ್ನೇ ಪ್ರಕೃತ ಗ್ರಂಥಕಾರರು 'ಪ್ರತಿಜ್ಞಾ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಕರ್ಮವು ಹೇಗೆ ಜ್ಞಾನಸಾಧನವಾಗುತ್ತದೆ ? ಎಂದು ಆಶಂಕಿಸಿದರೆ ಎಂದಭಿಪ್ರಾಯ.

**प्रकाशः** – ''अमृतो वाव सोमपो भवति यावदिन्द्रः'' इत्यादिना दुःखसम्भिन्नविनाशिफलश्रवणादिति भावः ।

'ಕ್ಷುದ್ರಫಲಾರ್ಥಿನಂ ಪ್ರತಿ' ಎಂಬುದರ ಅಭಿಪ್ರಾಯ ಹೀಗಿದೆ - ಕರ್ಮಕಾಂಡದಲ್ಲಿ ವಿಸ್ತಾರವಾಗಿ ಕರ್ಮಗಳನ್ನು ಹೇಳಿದಾಗ 'ಅಮೃತೋ ವಾವ ಸೋಮಪೋ ಭವತಿ ಯಾವದಿಂದ್ರಃ' ಎಂದು ಕರ್ಮದ ಫಲವನ್ನು ತಿಳಿಸಲಾಗಿದೆ. ಯಾಗಾದಿ ಕರ್ಮಗಳನ್ನು ಆಚರಿಸಿ, ಯಾಗಶಿಷ್ಟವಾದ ಸೋಮರಸವನ್ನು ಪಾನ ಮಾಡಬೇಕು. ಹಾಗೇ ಮಾಡಿದರೆ ಇಂದ್ರನು ಎಷ್ಟು ಕಾಲ ಸ್ವರ್ಗದಲ್ಲಿರುತ್ತಾನೋ, ಅಷ್ಟುಕಾಲ ಸ್ವರ್ಗ ಸುಖವು ಲಭಿಸುತ್ತದೆ ಎಂಬುದಾಗಿ ಕರ್ಮದಿಂದ ದೊರೆಯುವ ಫಲವನ್ನು ಬಣ್ಣಿಸಲಾಗಿದೆ. ಇಂದ್ರನಿರುವಷ್ಟು ಕಾಲ ಸುಖವು ಸಿಗುತ್ತದೆಂದು ಹೇಳಿದ್ದರಿಂದ ಶಾಶ್ವತವಾದ ಫಲವು ದೊರೆಯುವುದಿಲ್ಲವೆಂದು ಹೇಳಿದಂತಾಯಿತು. ಇಂತಹ ಅಸ್ಥಿರವಾದ ಫಲಕ್ಕಿಂತ ಶಾಶ್ವತ ಫಲವನ್ನು ನೀಡುವ ಬ್ರಹ್ಮಜ್ಞಾನವನ್ನೇ ಸಂಪಾದಿಸುವುದು ಶ್ರೇಷ್ಠ. ಮತ್ತು ಅಶಾಶ್ವತವಾದ ಸ್ವರ್ಗಸುಖವು ದುಃಖದಿಂದ ಕೂಡಿರುತ್ತದೆ. ದುಃಖವಿಲ್ಲದ ಮೋಕ್ಷಫಲವನ್ನೇ ಅಪೇಕ್ಷಿಸಬೇಕು. ಅದಕ್ಕಾಗಿ ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡಬೇಕು. ಬ್ರಹ್ಮಜ್ಞಾನ ಸಂಪಾದನೆಯ ಪ್ರತಿಜ್ಞಾಸಿದ್ಧಿಗೆ ಕಾರಣವಾಗಿ ಕರ್ಮಗಳನ್ನು ಹೇಳಲಾಗಿದೆ.

**प्रकाशः** – एतेन अन्यार्थं ब्रह्मज्ञानार्थम् । जगद्वाचित्वं प्रतिज्ञासिद्धेर्लिङ्गं लिङ्गत्वेनोच्यत इत्यर्थो दर्शितः ।।

ಹೀಗೆ ಹೇಳಿದ್ದರಿಂದ 'ಅನ್ಯಾರ್ಥಂ' ಬ್ರಹ್ಮಜ್ಞಾನಕ್ಕೋಸ್ಕರ, 'ಜಗದ್ವಾಚಿತ್ವಂ' ಕರ್ಮಾದಿವಾಕ್ಯಗಳನ್ನು ಪ್ರತಿಜ್ಞಾಸಿದ್ಧೇಃ' ಪ್ರಸಿದ್ಧಿಯ ಸಿದ್ಧಿಗಾಗಿ, 'ಲಿಂಗಮ್' ಲಿಂಗತ್ವೇನ ಹೇಳಲಾಗಿದೆ. 'ಆಶ್ಮರಥ್ಯಃ' ಹೀಗೆ ಆಶ್ಮರಥ್ಯರು ಹೇಳುತ್ತಾರೆ ಎಂಬ ಸೂತ್ರಾರ್ಥವನ್ನು ತಿಳಿಯಬೇಕು.

**प्रकाशः – उत्क्रमिष्यत इति** ।। उत्क्रमिष्यतो ज्ञानेन मोक्षमिच्छतः । एवं ज्ञानसाधनतया कर्मादेरपि भावादन्यार्थं जगद्वाचित्वमित्यौडुलोमिर्मन्यत इत्यर्थ उक्तो भवति ।

'ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ' ಎಂಬ ಸೂತ್ರಾರ್ಥ ಹೀಗಿದೆ - ಉತ್ಕ್ರಮಿಷ್ಯತಃ = ಜ್ಞಾನದಿಂದ ಮೋಕ್ಷವನ್ನು ಇಚ್ಛಿಸುವವನು. ಏವಂ = ಮೋಕ್ಷಸಾಧನವಾದ ಜ್ಞಾನಕ್ಕಾಗಿ, ಭಾವಾತ್ = ಕರ್ಮವನ್ನು ಆಚರಿಸಬೇಕು. ಅನ್ಯಾರ್ಥಂ = ಹೀಗೆ ಬ್ರಹ್ಮಜ್ಞಾನಕ್ಕೋಸ್ಕರ, ಜಗದ್ವಾಚಿತ್ವಮ್ = ವೇದಗಳು ಕರ್ಮವನ್ನು ಪ್ರತಿಪಾದನೆ ಮಾಡುತ್ತವೆ, ಇತಿ = ಹೀಗೆ, ಔಡುಲೋಮಿಃ = ಔಡುಲೋಮಿಚಾರ್ಯರು ಹೇಳುತ್ತಾರೆ.

ಅಭಿಪ್ರಾಯ ಹೀಗಿದೆ - ಮೋಕ್ಷಕ್ಕೋಸ್ಕರ ಜ್ಞಾನವನ್ನು ಸಂಪಾದನೆ ಮಾಡಬೇಕು. ಏಕೆಂದರೆ ಧ್ಯಾನ ಮಾಡಲು ಜ್ಞಾನವು ಅತ್ಯಂತ ಆವಶ್ಯಕ. ಅಂತಃಕರಣದಲ್ಲಿರುವ ಕಾಮ, ಕ್ರೋಧ ಮೊದಲಾದ ದುರ್ಗುಣಗಳನ್ನು ತ್ಯಜಿಸಬೇಕೆಂದರೆ ನಿಷ್ಕಾಮವಾದ ಕರ್ಮಾನುಷ್ಠಾನವು ಅವಶ್ಯವಾಗಿ ಆಚರಿಸಬೇಕು. ಇದಕ್ಕೋಸ್ಕರ ಕರ್ಮಗಳನ್ನು ವೇದಗಳು ಹೇಳುತ್ತಿವೆ. ಹೀಗೆ ಅಂತಃಕರಣದ ನಿರ್ಮಲತೆಗಾಗಿ ಕರ್ಮವು ಉಪಯೋಗವಾಗುತ್ತದೆ.

**प्रकाशः – एतेन** ''मोक्षार्थम्'' इत्यादिटीकाभिप्रायो विवृतः ।।

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ಮೋಕ್ಷಾರ್ಥಮ್' ಇತ್ಯಾದಿ ಟೀಕೆಯ ಅಭಿಪ್ರಾಯವನ್ನೂ ಕೂಡ ವಿವರಿಸಿದಂತಾಯಿತು.

**प्रकाशः – स्वेतरेति** ।। सर्वस्य कर्मादेस्तस्मिन्नवस्थितेस्सर्वाधारत्वप्रकारक भगवज्ज्ञानं ''एष सेतुर्विधारणः'' इत्यादिनोत्पादयितुमाधेयरूपकर्मादि-जगद्वाचित्वमिति काशकृत्स्नो मन्यत इत्यर्थो दर्शितः । एतेन ''कथं ज्ञातव्यो हरिः'' इत्यादिटीका विवृता ।।

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರದ ಅಭಿಪ್ರಾಯ ಹೀಗಿದೆ - ಎಲ್ಲವೂ ವಿಷ್ಣುವಿನ ಅಧೀನವೇ ಆಗಿದೆ ಎಂಬುದನ್ನು ತಿಳಿಸಲು ಕರ್ಮಾದಿ ಪ್ರಪಂಚವನ್ನು ವೇದವು ಸಮರ್ಥಿಸುತ್ತಿದೆ. ಮೋಕ್ಷಕ್ಕೆ ಸಾಧನವಾದ ವಿಷ್ಣುವಿನ ಜ್ಞಾನವನ್ನು ಸರಿಯಾಗಿ ಹೊಂದಬೇಕೆಂದರೆ ಸಮಸ್ತ ಜಗತ್ತು ಮತ್ತು ಕರ್ಮಾದಿಗಳು ಅವನ ಅಧೀನವೆಂಬ ಜ್ಞಾನವನ್ನು ಪಡೆಯಬೇಕು. ಮತ್ತು ಅವನನ್ನು ಸರ್ವಾಧಾರನೆಂದು ತಿಳಿಯಬೇಕು. ಹೀಗೆ 'ಏಷ ಸೇತುರ್ವಿಧಾರಣಃ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. ಸಕಲಕ್ಕೂ ಆಧಾರನಾಗಿದ್ದಾನೆಂದು

ಪರಮಾತ್ಮನನ್ನು ತಿಳಿಯಬೇಕೆಂದರೆ ಆಧೇಯವಾದ ಕರ್ಮಾದಿ ಪ್ರಪಂಚವನ್ನು ತಿಳಿಯಲೇ ಬೇಕು. ಆದ್ದರಿಂದ 'ಅವಸ್ಥಿತೇಃ' ಎಲ್ಲವೂ ವಿಷ್ಣುವಿನ ಅಧೀನವಾಗಿರುತ್ತದೆಂದು ತಿಳಿಯಬೇಕಾದ್ದರಿಂದ 'ಜಗದ್ವಾಚಿತ್ವಮ್' = ಕರ್ಮಾದಿಗಳನ್ನು ವೇದವು ಪ್ರತಿಪಾದನೆ ಮಾಡುತ್ತಿದೆ. ಇತಿ = ಹೀಗೆ, ಕಾಶಕೃತ್ಸ್ನಃ = ಕಾಶಕೃತ್ಸ್ನಾಚಾರ್ಯರು ಅಭಿಪ್ರಾಯ ಪಡುತ್ತಾರೆ ಎಂಬುದಾಗಿ ಸೂತ್ರಾರ್ಥವನ್ನು ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ಕಥಂ ಜ್ಞಾತವ್ಯೋ ಹರಿಃ' ಇತ್ಯಾದಿ ಟೀಕೆಯನ್ನೂ ಕೂಡ ವಿವರಿಸಿದಂತಾಯಿತು.

**ಪ್ರಕಾಶಃ – बाधकेति ।।** अन्यत्र प्रसिद्धिविरोधादिबाधकस्य जगद्वाचित्वाद्युद्धार प्रकारस्येत्यर्थः ।

ಪರಮಾತ್ಮನನ್ನು ಬಿಟ್ಟು ಬೇರೆಡೆ ಇರುವ ಪ್ರಸಿದ್ಧಿವಿರೋಧವೆಂಬ ಬಾಧಕಕ್ಕೆ 'ಜಗದ್ವಾಚಿತ್ವಾತ್' ಇತ್ಯಾದಿ ಸೂತ್ರಗಳಿಂದ ಪರಿಹಾರವನ್ನು ಹೇಳಲಾಗಿದೆ ಎಂದಭಿಪ್ರಾಯ. ಇದರ ಅಭಿಪ್ರಾಯ ಹೀಗಿದೆ - 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಸೂತ್ರದಲ್ಲಿ 'ಏತೇನ' ಎಂಬ ಪದದಿಂದ ಹಿಂದೆ ಹೇಳಿರುವ ಎಲ್ಲಾ ಹೇತುಗಳನ್ನು ಪರಾಮರ್ಶಿಸಲಾಗಿದೆ. ಈ ಸೂತ್ರಗಳಲ್ಲಿ ಹೇಳಲ್ಪಟ್ಟ ಬಾಧಕೋದ್ಧಾರ ಪ್ರಕಾರವನ್ನೂ ಕೂಡ 'ಏತೇನ' ಎಂಬುದರಿಂದ ಅತಿದೇಶ ಮಾಡಬೇಕು. ಒಂದುವೇಳೆ 'ಏತೇನ ಸರ್ವೇ' ಎಂಬ ಸೂತ್ರದ ಅನಂತರ ಈ ಬಾಧಕೋದ್ಧಾರ ಪ್ರಕಾರವನ್ನು ತೋರಿಸಿದರೆ ಆವಾಗ ಅತಿದೇಶ ಮಾಡಲು ಸಾಧ್ಯವಾಗುವುದಿಲ್ಲ.

**ಪ್ರಕಾಶಃ –** ननु तत्र टीकादौ ''एतेन पूर्वोक्तहेतुना'' इति वाच्यत्वसाधक तदधीनत्वाद्युक्तहेतुरेवोपात्तः । नतु बाधकोद्धारः । तथा च तदनतिदेशो नानिष्ट इति चेन्न ।

ಪ್ರಶ್ನೆ - ಬಾಧಕೋದ್ಧಾರ ಪ್ರಕಾರವನ್ನು ಅತಿದೇಶ ಮಾಡಲು ಮೊದಲೇ ಹೇಳಿರುತ್ತಾರೆಂಬ ಸಮಾಧಾನವು ಸರಿಯಲ್ಲ. ಏಕೆಂದರೆ 'ಏತೇನ ಸರ್ವೇ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ, ಸೂತ್ರದಲ್ಲಿ 'ಏತೇನ ಪೂರ್ವೋಕ್ತಹೇತುನಾ' ಎಂಬುದಾಗಿ ಹೇಳಿದ್ದಾರೆ. ವಾಚ್ಯತ್ವಸಾಧಕವಾದ ತದಧೀನತ್ವಾದಿ ಹೇತುಗಳನ್ನಷ್ಟೇ 'ಏತೇನ' ಎಂಬ ಪದದಿಂದ ಪರಾಮರ್ಶಿಸಲಾಗಿದೆ. ಹೊರತು ಬಾಧಕೋದ್ಧಾರವನ್ನು ಪರಾಮರ್ಶಿಸಿರುವುದಿಲ್ಲ. ಆದ್ದರಿಂದ 'ಏತೇನ' ಎಂಬ ಪದದಿಂದ ಬಾಧಕೋದ್ಧಾರ ಪ್ರಕಾರವನ್ನು ಅತಿದೇಶ ಮಾಡದಿದ್ದರೂ ಯಾವುದೂ ಅನಿಷ್ಟವಾಗುವುದಿಲ್ಲವಲ್ಲವೇ?

**ಪ್ರಕಾಶಃ –** तस्य बाधकोद्धारोपलक्षणत्वात् ।

ಉತ್ತರ - 'ಏತೇನ ಪೂರ್ವೋಕ್ತಹೇತುನಾ' ಎಂಬ ಟೀಕೆಯನ್ನು ಉಪಲಕ್ಷಣವೆಂದು ತಿಳಿಯಬೇಕು. ಪೂರ್ವೋಕ್ತಹೇತುಗಳ ಜೊತೆಗೆ ಬಾಧಕೋದ್ಧಾರಗಳನ್ನೂ ಕೂಡ 'ಏತೇನ' ಎಂಬುದರಿಂದ ಅತಿದೇಶ ಮಾಡಬೇಕೆಂಬುದೇ ಟೀಕಾವಾಕ್ಯದ ಅಭಿಪ್ರಾಯ. ಆದ್ದರಿಂದ ಸೂತ್ರದಲ್ಲಿ 'ಏತೇನ' ಎಂಬ ಪದದಿಂದ ಹಿಂದೆ ಹೇಳಲ್ಪಟ್ಟ ಸಕಲ ಹೇತುಗಳನ್ನೂ ಪರಾಮರ್ಶಿಸುವುದರ ಜೊತೆಗೆ ಬಾಧಕೋದ್ಧಾರಗಳನ್ನೂ ಕೂಡ ನೇರವಾಗಿ ಪರಾಮರ್ಶಿಸಬೇಕು.

**प्रकाशः** – नच तत्र ''असद्वा इदमग्र आसीत्'' इत्यादिवाक्यगतासदादि शब्दानामन्यपरत्वाभावे कर्मदेवताद्यसिद्धिरूपबाधकस्यात्रेव तत्राभावान्नोपलक्षणत्वेन तददतिदेशो व्याख्येय इति वाच्यम् ।

ಪ್ರಶ್ನೆ - 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಸೂತ್ರದಲ್ಲಿ 'ಅಸದ್ವಾ ಇದಮಗ್ರ ಆಸೀತ್' ಎಂಬುದು ವಿಷಯವಾಕ್ಯವಾಗಿದೆ. ಅಸದಾದಿ ಶಬ್ದಗಳು ಅನ್ಯಪರವಾಗದಿದ್ದರೆ, ಯಾವುದೇ ಬಾಧಕಗಳು ಅಲ್ಲಿ ಕಾಣಿಸುತ್ತಿಲ್ಲ. ಪ್ರಕೃತ ಈ ಅಧಿಕರಣದಲ್ಲಿ ಕರ್ಮಕಾಂಡವು ಭಗವತ್ಪರವೇ ಆದರೆ ಕರ್ಮ ಹಾಗೂ ದೇವತೆಗಳೇ ಸಿದ್ಧವಾಗದಿರಬೇಕಾದೀತು ಎಂಬ ಬಾಧಕವಿದೆ. ಇಂತಹ ಬಾಧಕವೇನೂ ಅಲ್ಲಿ ಕಾಣಿಸುತ್ತಿಲ್ಲ. ಹೀಗಿರುವಾಗ ಉಪಲಕ್ಷಣತ್ವೇನ ಬಾಧಕೋದ್ಧಾರವನ್ನು ಏಕೆ ಅತಿದೇಶ ಮಾಡಬೇಕು ?

**प्रकाशः** – अर्थान्तरासिद्धेरेव बाधकत्वात् ।

ಉತ್ತರ - ಈ ಅಧಿಕರಣದಲ್ಲಿ ಕರ್ಮದೇವತಾ ಅಸಿದ್ಧಿಯೆಂಬ ಯಾವ ಬಾಧಕವಿದೆಯೋ, ಅಲ್ಲಿಯೂ ಕೂಡ 'ಅರ್ಥಾಂತರಾಸಿದ್ಧಿ' ಎಂಬ ಬಾಧಕವು ಇದ್ದೇ ಇರುತ್ತದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯದಲ್ಲಿರುವ 'ಅಸತ್' ಶಬ್ದವು ಕೇವಲ ಬ್ರಹ್ಮಪರವಾಗದೇ, ಬೇರೆ ಅರ್ಥವನ್ನೂ ಕೂಡ ಪ್ರತಿಪಾದನೆ ಮಾಡಬೇಕು. ಇಲ್ಲದಿದ್ದರೆ 'ಅಸತ್' ಶಬ್ದ ಪ್ರತಿಪಾದ್ಯವಾದ ಶೂನ್ಯವೆಂಬ ಅರ್ಥವೇ ಸಿದ್ಧವಾಗದಿರಬೇಕಾದೀತು.

**प्रकाशः** – अन्यथा प्रक्रमविरोधात् । अन्यपरत्वेन सतामेव वाक्यानामत्र पादे प्रत्यधिकरणमुदाहृतत्वात् ।

ಹೀಗೊಪ್ಪದಿದ್ದರೆ 'ಏತೇನ ಸರ್ವೇ' ಎಂಬ ಸೂತ್ರವನ್ನು ಈ ಪಾದದಲ್ಲಿ ನಿವೇಶ ಮಾಡಿದ್ದರ ವಿರೋಧ ಬರುತ್ತದೆ. ಯಾವ ವಾಕ್ಯಗಳು ಅನ್ಯಪರವೆಂದು ಸಿದ್ಧವಾಗಿವೆಯೋ ಅಂತಹ ವಾಕ್ಯಗಳನ್ನಷ್ಟೇ ಈ ಪಾದದ ಪ್ರತ್ಯಧಿಕರಣಗಳಲ್ಲಿ ಉದಾಹರಿಸಲಾಗಿದೆ. ಆದ್ದರಿಂದ ಕರ್ಮದೇವತಾದಿ ಪ್ರತಿಪಾದಕವಾಕ್ಯಗಳೆಂದೇ ಅಸತ್ ಪ್ರತಿಪಾದಕ ವಾಕ್ಯವೂ ಕೂಡ ಅನ್ಯಪರವಾಗಿರುತ್ತದೆಂದು ಒಪ್ಪಬೇಕು.

**प्रकाशः** – अन्यथाऽन्यपरत्वं विनाऽनुपपद्यमानत्वरूपान्यत्रैव प्रसिद्धत्वाभावेन पादासङ्गत्यापत्तेः । टीकायामन्यपरत्वशून्यवाक्योदाहरणाशयः प्रागेवानन्दमयनयेऽभिहितः ।

ಹೀಗೊಪ್ಪದಿದ್ದರೆ 'ಅಸತ್' ಪದವನ್ನು ಅನ್ಯತ್ರೈವ ಪ್ರಸಿದ್ಧವೆಂದು ಹೇಳಲು ಸಾಧ್ಯವೇ ಆಗುವುದಿಲ್ಲ. ಅನ್ಯಪರವೆಂದು ಒಪ್ಪದೇ ಯಾವುದು ಅನುಪಪದ್ಯಮಾನವಾಗುತ್ತದೋ ಅಂತಹ ಶಬ್ದ ಅನ್ಯತ್ರೈವ-ಪ್ರಸಿದ್ಧವೆನಿಸುತ್ತದೆ. ಇಂತಹ ಶಬ್ದಗಳ ಸಮನ್ವಯವಷ್ಟೇ ಈ ಪಾದದ ಉದ್ದೇಶ. ಒಂದುವೇಳೆ ಅಸತ್ ಶಬ್ದವು ಹಾಗೇ ಅನ್ಯತ್ರೈವ ಪ್ರಸಿದ್ಧವಾಗದಿದ್ದಲ್ಲಿ, ಪಾದಸಂಗತಿಯು ಕೂಡುವುದಿಲ್ಲ. ಹಾಗಾದರೆ ಟೀಕೆಯಲ್ಲಿ 'ಅಸದ್ವಾ ಇದಮಗ್ರ ಆಸೀತ್' ಅನ್ಯಪರತ್ವ ರಹಿತವಾದ ವಾಕ್ಯವನ್ನೇಕೆ ಉದಾಹರಿಸಿದ್ದಾರೆ. ಏಕೆಂದರೆ ಅಸತ್ ಶಬ್ದಕ್ಕೆ ಪರಮಾತ್ಮನೆಂದರ್ಥ. ಪ್ರಳಯಕಾಲದಲ್ಲಿರುವ ಶೂನ್ಯನಾಮಕ ಪರಮಾತ್ಮನಿಂದ ಸತ್ ಶಬ್ದವಾಚ್ಯರಾದ

ಮುಖ್ಯಪ್ರಾಣದೇವರು ಹುಟ್ಟಿದರು ಎಂಬುದಾಗಿ ಈ ವಾಕ್ಯದ ತಾತ್ಪರ್ಯ. ಇಂತಹ ವಾಕ್ಯವನ್ನೇಕೆ ಇಲ್ಲಿ ಉದಾಹರಿಸಿದ್ದಾರೆ ? ಎಂಬ ಪ್ರಶ್ನೆಗೆ ಹಿಂದೆ ಆನಂದಮಯಾಧಿಕರಣದಲ್ಲಿಯೇ ನಾವು ಉತ್ತರಿಸಿದ್ದೇವೆ.

**प्रकाशः** – किञ्च यतस्तत्र बाधकाभावोऽत एवास्य बाधकपरिहारस्याध्यायान्तेऽनिवेशः । अत्रोक्तबाधकेत्यादिग्रन्थस्त्वभ्युपेत्य वादेन योज्यः ।

ಅಥವಾ 'ಏತೇನ ಸರ್ವೇ' ಎಂಬ ಅಧಿಕರಣದಲ್ಲಿ ಬಾಧಕೋದ್ಧಾರವು ಇರುವುದೇ ಇಲ್ಲವೆಂದು ಒಪ್ಪಿದರೂ ಕೂಡ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳನ್ನು ಇಲ್ಲಿ ಹೇಳಿರುವುದು ಅಸಂಗತವಲ್ಲ. ಏಕೆಂದರೆ ಯಾವಕಾರಣದಿಂದ ಕೊನೆಯ ಅಧಿಕರಣದಲ್ಲಿ ಬಾಧಕೋದ್ಧಾರವನ್ನು ಮಾಡಿಲ್ಲವೋ, ಅದೇ ಕಾರಣದಿಂದಲೇ ಅಸಂಗತವಾಗುವುದರಿಂದ ಬಾಧಕೋದ್ಧಾರಕ ಈ ಸೂತ್ರಗಳನ್ನು ಅಲ್ಲಿ ನಿವೇಶ ಮಾಡಿರುವುದಿಲ್ಲ. ಹಾಗಾದರೆ ಗ್ರಂಥದಲ್ಲಿ ಕೊನೆಯ ಸೂತ್ರದಲ್ಲಿರುವ 'ಏತೇನ' ಎಂಬ ಪದದಿಂದ ಈ ಬಾಧಕೋದ್ಧಾರವನ್ನು ಪರಾಮರ್ಶಿಸಬೇಕೆಂದು ಗ್ರಂಥಕಾರರು ಏಕೆ ಹೇಳಿದರು ಎಂದರೆ, ಒಂದುವೇಳೆ ಕೊನೆಯ ಸೂತ್ರವು ಬಾಧಕೋದ್ಧಾರವನ್ನು ಉಪಲಕ್ಷಣಯಾ ವಿವಕ್ಷಿಸುತ್ತಿದೆ ಎಂಬ ಅಭಿಪ್ರಾಯವನ್ನು ಹೊಂದುವ ಪಕ್ಷದಲ್ಲಿ ಗ್ರಂಥಕಾರರು ಹಾಗೆ ಪರಾಮರ್ಶಿಸಬೇಕೆಂದು ಹೇಳಿರುತ್ತಾರೆ.

**प्रकाशः** – तर्हि प्रकृतिश्चेत्यनन्तरं निवेशस्स्यात् । तत्र श्रीतत्त्वपरत्वेन सिद्धस्यैवोदाहरणत्त्वादित्यतो हेत्वन्तरमाह – **आत्मन इति ।।**

ಹಾಗಾದರೆ 'ಪ್ರಕೃತಿಶ್ಚ' ಎಂಬ ಸೂತ್ರದ ಅನಂತರ ಈ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳನ್ನು ನಿವೇಶಿಸಬೇಕಿತ್ತು. ಏಕೆಂದರೆ ಪ್ರಕೃತ್ಯಧಿಕರಣದಲ್ಲಿ ಸ್ತ್ರೀವಾಚಕಶಬ್ದಗಳು ಭಗವಂತನನ್ನೇ ಹೇಳುವುದಾದರೆ ಶ್ರೀತತ್ತ್ವಾದಿಗಳೇ ಸಿದ್ಧವಾಗದಿರಬೇಕಾದೀತು ಎಂಬ ಬಾಧಕವು ಬರುತ್ತದೆ. ಅದರ ಪರಿಹಾರಕ್ಕಾಗಿ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳನ್ನು ಹೇಳಿದಾಗ ವಿಷಯವು ಸ್ಪಷ್ಟವಾಗುತ್ತದೆ. ಆದ್ದರಿಂದ ಅಲ್ಲಿ ಹೇಳುವುದು ಹೆಚ್ಚು ಸ್ವರಸವಲ್ಲವೇ? ಹೀಗೆ ಪ್ರಶ್ನಿಸಿದರೆ ಮತ್ತೊಂದು ಹೇತುವನ್ನು ಹೇಳಲು 'ಆತ್ಮನಃ' ಇತ್ಯಾದಿ ವಾಕ್ಯವು ಹೊರಟಿರುತ್ತದೆ.

**प्रकाशः** – आकाशादिष्विति सप्तम्यान्यपरत्वोपगमस्य स्पष्टं प्रतिभासात् । गगनादेरुत्पत्त्यादि न सिद्ध्येदित्यस्य कल्पनोपदेशादित्यनेनैव परिहारे तर्ह्युभयत्र तुल्यवृत्तिरित्याशङ्क्याऽत्रैव सङ्गतत्वादित्यर्थः ।

ಪ್ರಕೃತ್ಯಧಿಕರಣದಲ್ಲಿ ಬಾಧಕವು ಹೇಗೆ ಪ್ರಾಪ್ತವಾಗಿದೆಯೋ, ಅದಕ್ಕಿಂತ ಬಲಿಷ್ಠವಾದ ಬಾಧಕವು ಹಿಂದಿನ ಆಕಾಶಾಧಿಕರಣದಲ್ಲಿ ಪ್ರಸಕ್ತವಾಗಿದೆ. 'ಆಕಾಶಾದಿಷು' ಎಂಬುದಾಗಿ ಸಪ್ತಮೀ ವಿಭಕ್ತಿಯಿಂದ ಭೂತಾಕಾಶಾದಿಗಳೇ ಸಕಲಕ್ಕೂ ಆಧಾರವೆಂದು ಸ್ಪಷ್ಟವಾಗಿ ಪ್ರತಿಭಾಸವಾಗುತ್ತಿವೆ. ಮತ್ತು ಆಕಾಶಾದಿಶಬ್ದಗಳು ಭೂತಾಕಾಶಾದಿಗಳನ್ನು ಪ್ರತಿಪಾದನೆ ಮಾಡದಿದ್ದರೆ, ಅವುಗಳ ಉತ್ಪತ್ತಿ ನಾಶ ಮೊದಲಾದವುಗಳೂ ಕೂಡ ಸಿದ್ಧವಾಗದಿರಬೇಕಾದೀತು. ಹೀಗೆ ಪ್ರಬಲವಾದ ಬಾಧಕವು ಪ್ರಾಪ್ತವಾದರೆ ಅದನ್ನು 'ಕಲ್ಪನೋಪದೇಶಾತ್'

ಎಂಬ ಸೂತ್ರದಿಂದ ಪರಿಹರಿಸಲಾಗಿದೆ. ಹಾಗಾದರೆ ಭೂತಾಕಾಶದಲ್ಲಿ ಮತ್ತು ಪರಮಾತ್ಮನಲ್ಲಿರುವ ಎರಡೂ ವೃತ್ತಿಗಳು ಸಮಾನವಾಗುತ್ತವಲ್ಲವೇ? ಎಂಬ ಆಶಂಕೆಯು ಪುನಃ ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ 'ಸಮಾಕರ್ಷಾತ್' ಇತ್ಯಾದಿ ಸೂತ್ರಗಳು ಅತ್ಯಂತ ಅನಿವಾರ್ಯವಾಗುತ್ತದೆ. ಹೀಗೆ ಇಲ್ಲಿಯೇ ಸಂಗತ-ವಾಗುವುದರಿಂದ ಪ್ರಕೃತ್ಯಧಿಕರಣದಲ್ಲಿ ಇವುಗಳನ್ನು ಉಲ್ಲೇಖಿಸಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು.

**प्रकाशः** – यद्वाऽन्यत्रापि मुख्यत्व उभयत्र वृत्तेस्तुल्यतापत्त्या कल्पनेति समाधानायोगाद्गगनादेरुत्पत्त्यादि न सिद्ध्येदिति शङ्का भवत्येवेति भावः ।

'ಆತ್ಮನಃ ಆಕಾಶ ಸಂಭೂತಃ' ಎಂಬಲ್ಲಿರುವ ಆಕಾಶಾದಿ ಶಬ್ದಗಳು ಭಗವತ್ಪರವಾದರೆ ಭೂತೋತ್ಪತ್ತ್ಯಾದಿಗಳೇ ಅಸಿದ್ಧವಾಗುತ್ತವೆಂಬ ಬಾಧಕವು ಪ್ರಾಪ್ತವಾಗುತ್ತದೆ. ಇದನ್ನು 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಪರಿಹರಿಸಲಾಗಿದೆ. 'ಕಲ್ಪನೋಪದೇಶಾತ್' ಎಂಬ ಸೂತ್ರವು ಹೇಳುವಂತೆ ಉಭಯತ್ರವೃತ್ತಿಯನ್ನು ಒಪ್ಪುವುದಾದರೆ ಸಿದ್ಧಾಂತಿಗಳಿಗೆ ಅದು ಬಾಧಕವಾಗುತ್ತದೆ. ಏಕೆಂದರೆ 'ತತ್ತು ಸಮನ್ವಯಾತ್' ಎಂಬಲ್ಲಿ 'ತು' ಶಬ್ದವು, 'ಸಮನ್ವಯಾತ್' ಎಂಬಲ್ಲಿ 'ಸಂ' ಎಂಬ ಉಪಸರ್ಗವು ವಿರುದ್ಧವಾಗುತ್ತದೆ. ಆದ್ದರಿಂದ ಉಭಯಪರತ್ವವನ್ನು ಹೇಳದೇ ಕೇವಲ ಬ್ರಹ್ಮಪರತ್ವವನ್ನಷ್ಟೇ ಹೇಳಬೇಕು. ಹಾಗೇ ಹೇಳಿದಾಗ ಪುನಃ ಗಗನಾದಿಗಳ ಉತ್ಪತ್ತ್ಯಾದಿಗಳೇ ಅಸಿದ್ಧವಾಗಬೇಕಾದೀತು ಎಂಬ ಬಾಧಕವು ಬಂದೇ ಬರುತ್ತದೆ. ಆ ಬಾಧಕದ ಪರಿಹಾರವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಆದ್ದರಿಂದ ಸಮಾಕರ್ಷಾಧಿಕರಣವು ಇಲ್ಲಿಯೇ ಸುಸಂಗತವಾಗುತ್ತದೆ.

### ರಾಮಾನುಜ ಪಂಥದವರ ಸೂತ್ರಾರ್ಥ ವಿಮರ್ಶೆ

**प्रकाशः** –

अत्राह कश्चिद्रामानुजीयः । मन्मतरीत्या ''यथा व्यपदिष्टस्य'' इति पूर्वोक्तस्यानुषङ्गेण यथा व्यपदिष्टस्य सार्वज्ञादिना ''सोऽकामयत'' इत्यादौ व्यपदिष्टस्य ''असद्वा इदमग्र आसीत्'' इत्यादिवाक्ये समाकर्षादित्येवं पूर्वशेषत्वे सम्भवत्यधिकरणान्तरत्वं प्रकल्प्य सर्वशब्दानां जगति व्यवहार इत्यध्याहारकल्पनमयुक्तम् ।

ವಿವರಣೆ - ರಾಮಾನುಜ ಪಂಥದ ಯಾರೋ ಒಬ್ಬ ಅನುಯಾಯಿಯು ನಾವು ಹೇಳಿದ ಸೂತ್ರಾರ್ಥಗಳನ್ನು ಹೀಗೆ ಆಕ್ಷೇಪ ಮಾಡಿದ್ದಾನೆ -

'ಸಮಾಕರ್ಷಾತ್' ಎಂಬ ಸೂತ್ರದಲ್ಲಿ 'ಯಥಾ ವ್ಯಪದಿಷ್ಟಸ್ಯ' ಎಂಬುದನ್ನು ಅನುಷಂಗ ಮಾಡಬೇಕು. 'ಯಥಾ ವ್ಯಪದಿಷ್ಟಸ್ಯ' ಎಂದರೆ 'ಸೋऽಕಾಮಯತ' ಇತ್ಯಾದಿ ಶ್ರುತಿಗಳಲ್ಲಿ ಸರ್ವಜ್ಞತ್ವೇನ ಹೇಳಲ್ಪಟ್ಟ ವ್ಯಕ್ತಿಯೇ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ವಾಕ್ಯದಿಂದಲೂ ಪ್ರತಿಪಾದ್ಯನಾಗಿರುತ್ತಾನೆ ಎಂದು ಸಮಾಕರ್ಷ ಮಾಡಬೇಕು. ಹಿಂದಿನ ಅಧಿಕರಣದಲ್ಲಿ ಹೇಳಿದಂತೆ 'ಅಸದ್ವಾ ಇದಮಗ್ರ ಆಸೀತ್' 'ಅವ್ಯಾಕೃತ

ಮಾಸೀತ್' 'ಆತ್ಮನಃ ಆಕಾಶ ಸಂಭೂತಃ' ಇವೇ ಮೊದಲಾದ ವಾಕ್ಯಗಳಲ್ಲಿರುವ ಅವ್ಯಾಕೃತ, ಆತ್ಮ, ಅಸತ್ ಮೊದಲಾದ ಶಬ್ದಗಳಿಂದ ಪ್ರಕೃತಿಯು ಪ್ರತಿಪಾದ್ಯವಾಗಿದೆಯೆಂದು ಪೂರ್ವಪಕ್ಷ. ಏಕೆಂದರೆ 'ಅವ್ಯಾಕೃತ' 'ಅವ್ಯಕ್ತ' ಎಂಬೆರಡು ಶಬ್ದಗಳು ಪರ್ಯಾಯ ಶಬ್ದಗಳಾಗಿವೆ. ಇದರ ಸಮಾಖ್ಯಾನದಿಂದ ಬೇರೆಡೆಯಿರುವ ಆತ್ಮ, ಅಸತ್ ಮೊದಲಾದ ಶಬ್ದಗಳಿಂದಲೂ ಅವ್ಯಕ್ತವನ್ನೇ ತೆಗೆದುಕೊಳ್ಳಬೇಕು. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ, 'ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದ ಭಾಗದಿಂದ ಉತ್ತರಿಸಲಾಗಿದೆ. 'ಸೋऽಕಾಮಯತ' ಎಂಬ ವಾಕ್ಯದಲ್ಲಿ ಯಾವ ವ್ಯಕ್ತಿಯು ಹೇಳಲ್ಪಟ್ಟಿದ್ದಾನೋ, ಅವನೇ ಅವ್ಯಾಕೃತ, ಆತ್ಮ ಮೊದಲಾದ ಶಬ್ದಗಳಿಂದಲೂ ಹೇಳಲ್ಪಟ್ಟಿದ್ದಾನೆ. ಏಕೆಂದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯದ ಅನಂತರವೇ 'ಆತ್ಮನಃ ಆಕಾಶ ಸಂಭೂತಃ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಆದ್ದರಿಂದ ಆತ್ಮಶಬ್ದದಿಂದ ಸರ್ವಜ್ಞತ್ವವಿಶಿಷ್ಟನಾದ ವ್ಯಕ್ತಿಯನ್ನೇ ತೆಗೆದುಕೊಳ್ಳಬೇಕು. ಹೀಗೆ ಹಿಂದಿನ ಸೂತ್ರದಲ್ಲಿ ಸಿದ್ಧಾಂತವನ್ನು ಸ್ಥಾಪಿಸಲಾಯಿತು. ಪ್ರಕೃತ 'ಸಮಾಕರ್ಷಾತ್' ಎಂಬ ಸೂತ್ರದಲ್ಲಿಯೂ ಇದೇ ವಿಷಯವನ್ನೇ ಪ್ರತಿಪಾದನೆ ಮಾಡಲಾಗಿದೆ. 'ಆತ್ಮನಃ ಆಕಾಶ ಸಂಭೂತಃ' ಎಂಬ ತೈತ್ತಿರೀಯೋಪನಿಷತ್ತಿನಲ್ಲಿ ಸರ್ವಜ್ಞತ್ವಾದಿವಿಶಿಷ್ಟನಾದ ಯಾವ ಆತ್ಮನು ಪ್ರತಿಪಾದ್ಯನಾಗಿದ್ದಾನೋ, ಅವನೇ 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯದಿಂದಲೂ ಪ್ರತಿಪಾದ್ಯನಾಗಿದ್ದಾನೆ. ಇದು 'ಸಮಾಕರ್ಷಾತ್' ಎಂಬ ಟೀಕೆಯ ಅರ್ಥ. ಹೀಗೆ ಹಿಂದಿನ ಅಧಿಕರಣಕ್ಕೆ ಶೇಷಭೂತವಾಗಿದೆಯೆಂದೇ ವ್ಯಾಖ್ಯಾನಿಸಲು ಬರುವಾಗ 'ಸಮಾಕರ್ಷಾತ್' ಎಂಬುದನ್ನು ಅಧಿಕರಣಾಂತರವೆಂದು ಕಲ್ಪಿಸುವುದು ಅಯುಕ್ತ. ಮತ್ತು ಭಗವತ್ಪರವಾದ ಶಬ್ದಗಳಿಗೆ ಸಮಾಕರ್ಷವನ್ನು ಮಾಡಿ, ಜಗತ್ತಿನಲ್ಲಿ ವ್ಯವಹಾರವನ್ನು ಮಾಡಬೇಕೆಂದು ಹೇಳುತ್ತಿದ್ದೀರಿ. ಆದ್ದರಿಂದ ಸೂತ್ರದಲ್ಲಿ 'ಸರ್ವಶಬ್ದಾನಾಂ ಜಗತಿ ವ್ಯವಹಾರಃ' ಎಂಬುದನ್ನು ನೀವು ಅಧ್ಯಾಹಾರ ಮಾಡಬೇಕು. ಆದರೆ ನಮ್ಮ ಪ್ರಕಾರ ಅರ್ಥವನ್ನು ಹೇಳಿದಾಗ ಈ ಅಧ್ಯಾಹಾರದ ಆವಶ್ಯಕತೆಯು ಇರುವುದಿಲ್ಲ. ಆದ್ದರಿಂದ 'ಸಮಾಕರ್ಷಾತ್' ಎಂಬ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ.

**ಪ್ರಕಾಶಃ** – द्वितीयसूत्रार्थोऽपि न युक्तः । जगत्येव व्यवहारस्य प्रसिद्धिहेतुत्वात्तस्य च सूत्रेऽप्रतीतेः ।

'ಜಗದ್ವಾಚಿತ್ವಾತ್' ಎಂಬ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಸಕಲಶಬ್ದಗಳು ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯನ್ನು ಹೊಂದಿರುತ್ತವೆ. ಅದೇ ಶಬ್ದಗಳನ್ನು ಜಗತ್ತಿನಲ್ಲಿ ಎಳೆದು ವ್ಯವಹಾರ ಮಾಡಿದಾಗ ಹೀನವೃತ್ತಿಯನ್ನು ಹೊಂದುತ್ತವೆ. ಲಕ್ಷಣಾವೃತ್ತಿಯನ್ನು ಆಶ್ರಯಿಸಿದಂತಾಗುತ್ತದೆ. ಆದರೆ ಜಗತ್ತಿನಲ್ಲೇ ಹೆಚ್ಚಿನ ಪ್ರಸಿದ್ಧಿಯಿರುತ್ತದಲ್ಲವೇ? ಎಂಬ ಪ್ರಶ್ನೆಯು ಪ್ರಾಪ್ತವಾದರೆ ಪ್ರಾಚೀನರೆಲ್ಲರೂ ಜಗತ್ತಿನಲ್ಲಿ ವ್ಯವಹಾರ ಮಾಡಿದ್ದಾರೆ. ಅದರ ಸಂಸ್ಕಾರದಿಂದ ನಮಗೂ ಕೂಡ ಆಯಾ ಶಬ್ದಗಳಿಂದ ಲೌಕಿಕಪದಾರ್ಥಗಳ ಉಪಸ್ಥಿತಿಯೇ ಪ್ರಾಪ್ತವಾಗುತ್ತದೆ ಎಂದು ವ್ಯಾಖ್ಯಾನ ಮಾಡಬೇಕು. ಆವಾಗ ಅನ್ಯತ್ರಪ್ರಸಿದ್ಧಿಗೆ ಪ್ರಾಚೀನರ ವ್ಯವಹಾರವೇ ಕಾರಣವೆಂದು ಹೇಳಿದಂತಾಯಿತು. 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ ಜಗದ್ವಾಚಕತ್ವವಷ್ಟೇ ತಿಳಿಯುತ್ತಿದೆ ಹೊರತು, ಜಗತ್ತಿನಲ್ಲೇ ಪ್ರಾಚೀನರು ವ್ಯವಹಾರ ಮಾಡಿರುವುದರಿಂದ, ಆಯಾ ಶಬ್ದಗಳ ಪ್ರಸಿದ್ಧಿಯು ಉಂಟಾಗಿದೆಯೆಂಬ ಅರ್ಥವು ಸೂತ್ರದಿಂದ ತಿಳಿಯುತ್ತಿಲ್ಲ. ಆದ್ದರಿಂದ ಎರಡನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ.

**प्रकाशः – तृतीये लिङ्गपदास्वारस्यम् । स्वातन्त्र्यस्य व्यभिचारेण वाच्यत्वानिमित्तत्वात्, सूत्रस्यैवास्य व्यर्थत्वाच्च ।**

'ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ ತದ್‌ವ್ಯಾಖ್ಯಾತಮ್' ಎಂಬ ಮೂರನೆಯ ಸೂತ್ರದಲ್ಲಿ ಲಿಂಗ ಎಂಬ ಪದಕ್ಕೆ ಸ್ವಾರಸ್ಯವಾದ ಅರ್ಥವನ್ನು ನೀವು ಹೇಳಿರುವುದಿಲ್ಲ. ಏಕೆಂದರೆ ಸಕಲಶಬ್ದಗಳಿಂದ ಪರಮಾತ್ಮನೇ ವಾಚ್ಯನಾಗಿದ್ದಾನೆನ್ನಲು ಸ್ವಾತಂತ್ರ್ಯವನ್ನು ಲಿಂಗವನ್ನಾಗಿ ಹೇಳಿರುತ್ತೀರಿ. ಈ ಸ್ವಾತಂತ್ರ್ಯ ಎಂಬ ಲಿಂಗವು ಜೀವನಲ್ಲಿ ಹಾಗೂ ಮುಖ್ಯಪ್ರಾಣದೇವರಲ್ಲಿಯೂ ಕೂಡ ಪ್ರಾಪ್ತವಾಗುತ್ತದೆ. ಹಾಗಾಗಿ ಅವರೂ ಕೂಡ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯರಾಗಲಿ ಎಂದು ನೀವೇ ಆಕ್ಷೇಪ ಮಾಡಿಕೊಂಡು, 'ತದುಕ್ತಂ' ಎಂಬ ಸೂತ್ರಭಾಗದಿಂದ ಅಂತರ್ಯಾಮಿವಿವಕ್ಷೆಯಿಂದ ಪರಮಾತ್ಮನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ ಎಂದು ಉತ್ತರಿಸಿದ್ದೀರಿ. ಈ ಸಂದರ್ಭದಲ್ಲಿ ಲಿಂಗಪದಕ್ಕೆ ಸ್ವಾರಸ್ಯವಾದ ಅರ್ಥವನ್ನು ಹೇಳಿಲ್ಲ. ಮತ್ತು ಈ ಸೂತ್ರವೇ ವ್ಯರ್ಥ. ಏಕೆಂದರೆ ಸರ್ವಶಬ್ದವಾಚ್ಯತ್ವಕ್ಕೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವೇ ಆಗುವುದಿಲ್ಲ.

**प्रकाशः – चतुर्थेऽन्यपदेन ब्रह्मज्ञानोपस्थापनं न स्वरसम् । स्पष्टं च ''विविदिषन्ति'' इत्यादिश्रुत्या यज्ञादीनां ब्रह्मज्ञानार्थत्वमिति सूत्रमेवेदं व्यर्थम् ।**

'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ' ಎಂಬ ನಾಲ್ಕನೆಯ ಸೂತ್ರಾರ್ಥವೂ ಕೂಡ ಅಯುಕ್ತವಾಗಿದೆ. 'ಅನ್ಯಾರ್ಥಂ' ಎಂಬ ಪದಕ್ಕೆ ಬ್ರಹ್ಮಜ್ಞಾನಕ್ಕೋಸ್ಕರ ಎಂಬ ಅರ್ಥವನ್ನು ಹೇಳುವುದು ಸ್ವರಸವಲ್ಲ. ಕರ್ಮಗಳೆಲ್ಲವೂ ಜ್ಞಾನಕ್ಕೋಸ್ಕರ ಇರುತ್ತವೆಂದು 'ವಿವಿದಿಷಂತಿ ಯಜ್ಞೇನ ದಾನೇನ' ಇತ್ಯಾದಿ ಶ್ರುತಿಗಳಿಂದ ಸ್ಪಷ್ಟವಾಗಿ ತಿಳಿಯುತ್ತಿದೆ. ಹೀಗೆ ಸ್ಪಷ್ಟವಾಗಿ ತಿಳಿಯುವ ವಿಷಯವನ್ನೇ ಪುನಃ ಸೂತ್ರಕಾರರು ಹೇಳುವುದು ವ್ಯರ್ಥವಾಗಿದೆ.

**प्रकाशः – किञ्च सूत्रशेषोपात्तप्रश्नोत्तरश्रुत्यर्थो न प्रकृतानुगुणः । ''कस्मिन्नु भगवो विज्ञाते सर्वमिदं विज्ञातं भवति'' इति प्रश्ने इदं सर्वमित्यस्य सङ्कोचकाभावेन कर्मादिरप्रकृतत्वेन तन्मात्रपरत्वायोगात् । ज्ञातशब्दस्य फले लक्षणाप्रसङ्गाच्च ।**

ಮತ್ತು ಸೂತ್ರಶೇಷದಿಂದ ಹೇಳಲ್ಪಟ್ಟ ಪ್ರಶ್ನೋತ್ತರ ರೂಪವಾದ ಶ್ರುತ್ಯರ್ಥವು ಪ್ರಕೃತಕ್ಕೆ ಅನುಗುಣವಾಗಿರುವುದಿಲ್ಲ. 'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂಬುದಾಗಿ ಪ್ರಶ್ನೆಯನ್ನು ಮಾಡಿದಾಗ 'ಇದಂ ಸರ್ವಂ' ಎಂಬುದಕ್ಕೆ ಸಕಲ ಜಗತ್ತು ಎಂಬರ್ಥವನ್ನೇ ವಿವಕ್ಷಿಸಬಹುದು. ಕೇವಲ ಕರ್ಮಾದಿಗಳು ಎಂಬುದಾಗಿ ನೀವು ಸಂಕುಚಿತವಾಗಿ ಅರ್ಥೈಸುತ್ತಿದ್ದೀರಿ. ಅಸಂಕುಚಿತವಾಗಿ ಸಮಸ್ತ ಜಗತ್ತನ್ನೇ ವಿವಕ್ಷಿಸಲು ಬರುವಾಗ, ಕೇವಲ ಕರ್ಮಾದಿಪರತ್ವವನ್ನು ಹೇಳುವುದು ಅಯುಕ್ತವಾಗುತ್ತದೆ. ಮತ್ತು ಜ್ಞಾತಶಬ್ದಕ್ಕೆ ಜ್ಞಾತಫಲದಲ್ಲಿ ಲಕ್ಷಣವನ್ನು ಮಾಡುತ್ತೀರಿ. ಹೀಗೆ ಕಾರಣವಿಲ್ಲದೇ ಲಕ್ಷಣಾ ಮಾಡುವುದು ಅಯುಕ್ತವಾಗಿದೆ.

**प्रकाशः** – ''द्वे विद्ये वेदितव्ये'' इत्यादेरुक्तप्रश्नोत्तरत्वे ''अथ परा'' इत्यतः प्राक्तनो ग्रन्थस्सर्वोऽपि व्यर्थः ।

'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿ ವಾಕ್ಯಗಳು ಹಿಂದೆ ಮಾಡಿದ ಪ್ರಶ್ನೆಗೆ ಉತ್ತರಿಸಲು ಹೊರಡುವುದಾದರೆ, 'ಅಥ ಪರಾ' ಇತ್ಯಾದಿ ಹಿಂದಿನ ಗ್ರಂಥವೆಲ್ಲವೂ ವ್ಯರ್ಥವಾಗುತ್ತವೆ. ಭಗವಂತನನ್ನು ತಿಳಿಯುವುದರಿಂದ ಎಲ್ಲವನ್ನು ತಿಳಿದಂತಾಗುತ್ತದೆ. ಅಂತಹ ಭಗವದ್‌ಜ್ಞಾನವೇ ಪರವಿದ್ಯೆ ಎಂದು ತಿಳಿದರೆ ಸಾಕು. ಅಪರವಿದ್ಯೆಯನ್ನು ತಿಳಿಯುವ ಅವಶ್ಯಕತೆಯಿರುವುದಿಲ್ಲ.

**प्रकाशः** – ''कथं नु भगवः'' इति प्रश्नार्थोऽप्ययुक्तः । अन्यगतविषयताप्रयोजकज्ञानविषयस्य प्रस्तुततया तस्यैव प्रश्नविषयत्वौचित्येनान्यज्ञानप्रयोजनभूतज्ञानविषयस्या प्रस्तुतत्वेन तस्य प्रश्नविषयत्वायोगात् ।

'ಕಥಂ ನು ಭಗವಃ' ಎಂಬ ಶ್ವೇತಕೇತುವಿನ ಪ್ರಶ್ನೆ ಹಾಗೂ ಉದ್ದಾಲಕರ ಉತ್ತರವನ್ನು ನೀಡುವ ವಾಕ್ಯವನ್ನು ಉಲ್ಲೇಖಿಸುವುದೂ ಕೂಡ ಅಯುಕ್ತವಾಗಿದೆ. ಏಕೆಂದರೆ ಮೊದಲು 'ಉತ ತಮಾದೇಶಮಪ್ರಾಕ್ಷ್ಯಃ' ಇತ್ಯಾದಿಯಾಗಿ ಉದ್ದಾಲಕರು ಯಾರನ್ನು ತಿಳಿಯುವುದರಿಂದ ಎಲ್ಲವನ್ನೂ ತಿಳಿದಂತಾಗುತ್ತದೋ, ಅಂತಹ ವಸ್ತುವನ್ನು ತಿಳಿದಿರುವಿಯಾ? ಎಂದು ಪ್ರಶ್ನಿಸಿದ್ದಾರೆ. ಪರಮಾತ್ಮನ ಜ್ಞಾನವಿದ್ದರೆ ಎಲ್ಲಾ ಪದಾರ್ಥಗಳಲ್ಲಿಯೂ ಜ್ಞಾನವಿಷಯತಾ ಎಂಬುದು ಬರುತ್ತದೆ. ಜಗತ್ತಿನಲ್ಲಿರುವ ಜ್ಞಾನವಿಷಯತಾಕ್ಕೆ ಪ್ರಯೋಜಕವಾದದ್ದು, ಪರಮಾತ್ಮನ ಜ್ಞಾನ. ಪರಮಾತ್ಮನ ಜ್ಞಾನ ಬಂದರಷ್ಟೇ ಸಕಲಜಗತ್ತು ಜ್ಞಾತವಾಗುತ್ತದೆ. ಆದ್ದರಿಂದ ಅನ್ಯಗತವಾದ ಜ್ಞಾನವಿಷಯತಾಕ್ಕೆ ಪ್ರಯೋಜಕೀಭೂತವಾದದ್ದು ಭಗವದ್‌ಜ್ಞಾನ. ತದ್ವಿಷಯತ್ವವು ಭಗವಂತನಲ್ಲಿ ಪ್ರಸಕ್ತವಾಗಿದೆ. ಇದು ಅಪ್ರಸ್ತುತವಾದ್ದರಿಂದ ಪ್ರಶ್ನವಿಷಯತ್ವವೇ ಕೂಡುವುದಿಲ್ಲ. ಕೇವಲ ಅನ್ಯಗತವಿಷಯತಾಕ್ಕೆ ಪ್ರಯೋಜಕವಾದ ಜ್ಞಾನವಿಷಯತ್ವವಷ್ಟೇ ಪ್ರಸ್ತುತವಾಗಿದೆ. ಆದ್ದರಿಂದ ಇದಕ್ಕೆ ಪ್ರಶ್ನವಿಷಯತ್ವವನ್ನು ಹೇಳುವುದು ಉಚಿತವಾಗಿದೆ.

**प्रकाशः** – ''यथा सौम्य'' इति व्याख्यानार्थोक्तिश्चायुक्ता । मृण्मयज्ञानस्य कारणत्वेन मृत्पिण्डज्ञानरूपसहकारिलाभेन मृण्मयसम्पादनफलकत्वविवक्षायां दार्ष्टान्तिकवैरूप्यात् । मृण्मयज्ञानस्य मृत्पिण्डज्ञानफलकत्वविवक्षायामसिद्धेः । मृण्मयज्ञानस्य पिण्डज्ञानाहेतुत्वात् ।

'ಯಥಾ ಸೌಮ್ಯ' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡುವಾಗ ಪರಮಾತ್ಮನ ಜ್ಞಾನವು ಬಂದರೆ ಕರ್ಮದೇವತಾದಿಗಳ ಜ್ಞಾನದ ಫಲವು ದೊರೆತಂತೆ ಎಂಬುದಾಗಿ ವ್ಯಾಖ್ಯಾನ ಮಾಡಿದ್ದೀರಿ. ಇದೂ ಕೂಡ ಅಯುಕ್ತವಾಗಿದೆ. ಏಕೆಂದರೆ ಮೃಣ್ಮಯವಾದ ಘಟ, ಶರಾವ ಮೊದಲಾದ ಪದಾರ್ಥಗಳನ್ನು ಸ್ವರೂಪತಃ ತಿಳಿಯುವುದರಿಂದ ಏನೂ ಪ್ರಯೋಜನವಾಗುವುದಿಲ್ಲ. ಇಷ್ಟನ್ನು ತಿಳಿಯುವ ಮಾತ್ರದಿಂದ ಮತ್ತೊಂದು ಮೃಣ್ಮಯಪದಾರ್ಥವನ್ನೇನು ತಯಾರು ಮಾಡಲು ಸಾಧ್ಯವಾಗುವುದಿಲ್ಲ. ಒಂದುವೇಳೆ ಮೃಣ್ಮಯ ಪದಾರ್ಥಕ್ಕೆಲ್ಲಾ ಕಾರಣವಾದ ಮೃತ್ಪಿಂಡವನ್ನು ಸರಿಯಾಗಿ ಕೇಳಿದರೆ ಮೃಣ್ಮಯಜ್ಞಾನಕ್ಕೆ ಪ್ರಯೋಜನವು

ದೊರೆತಂತಾಗುತ್ತದೆ. ಏಕೆಂದರೆ ಈ ಮೃತ್ಪಿಂಡದ ಜ್ಞಾನದಿಂದ ಮತ್ತೊಂದು ಮೃಣ್ಮಯಪದಾರ್ಥವನ್ನು ತಯಾರು ಮಾಡಬಹುದು. ಹೀಗೆ ನೀವು ವ್ಯಾಖ್ಯಾನ ಮಾಡಿದ್ದೀರಿ. ಇದು ಅಯುಕ್ತವಾಗಿದೆ. ಮೃಣ್ಮಯ ವಸ್ತು ಸಂಪಾದನವೇ ಮೃಣ್ಮಯಜ್ಞಾನದ ಪ್ರಯೋಜನವೆನ್ನುತ್ತಿದ್ದೀರಿ. ಈ ಪ್ರಯೋಜನಕ್ಕೆ ಮೃತ್ಪಿಂಡಜ್ಞಾನವು ಸಹಕಾರಿ, ಮೃಣ್ಮಯಜ್ಞಾನವು ಕಾರಣ, ಮೃಣ್ಮಯ ಸಂಪಾದನೆಯು ಪ್ರಯೋಜನ ಎಂದು ಹೇಳಿದಂತಾಯಿತು. ಇದು ದಾರ್ಷ್ಟಾಂತಕ್ಕೆ ವಿರುದ್ಧವಾಗಿದೆ. ಹೀಗೆ ಹೇಳುವುದಾದರೆ ಜಗತ್ಜ್ಞಾನವು ಮೋಕ್ಷಕ್ಕೆ ಸಾಧನ. ಬ್ರಹ್ಮಜ್ಞಾನವು ಸಹಕಾರಿ ಎಂದು ಹೇಳಬೇಕು. ಮೃಣ್ಮಯದ ಸ್ಥಾನದಲ್ಲಿ ಜಗತ್ತನ್ನು, ತತ್ಕಾರಣವಾದ ಮೃತ್ಪಿಂಡದ ಸ್ಥಾನದಲ್ಲಿ ದೇವರನ್ನು ಮೃತ್ಪಿಂಡಸಂಪಾದನೆ ಎಂಬ ಫಲದ ಸ್ಥಾನದಲ್ಲಿ ಮೋಕ್ಷವನ್ನು ಹೇಳಬೇಕು. ಹೀಗೆ ಹೇಳುವುದಾದರೆ ಜಗತ್ಜ್ಞಾನದಿಂದ ಮೋಕ್ಷವು ದೊರೆಯುತ್ತದೆ. ಇದಕ್ಕೆ ಬ್ರಹ್ಮಜ್ಞಾನವು ಸಹಕಾರಿಯಾಗಿದೆ ಎಂದು ಹೇಳಿದಂತಾಯಿತು. ಆವಾಗ ಮೋಕ್ಷಕ್ಕೆ ಜಗತ್ತಿನ ಜ್ಞಾನವೇ ಮುಖ್ಯವಾದ ಕಾರಣವೆಂದು ಬ್ರಹ್ಮನು ಅಪ್ರಧಾನ ಕಾರಣವೆಂದು ಹೇಳಿದಂತಾಯಿತು. ಒಂದು ವೇಳೆ ಮೃಣ್ಮಯಜ್ಞಾನಕ್ಕೆ, ಮೃಣ್ಮಯ ಪದಾರ್ಥದ ಸಂಪಾದನೆಯು ಪ್ರಯೋಜನವಲ್ಲ. ಮೃತ್ಪಿಂಡಜ್ಞಾನವನ್ನು ಸಂಪಾದನೆ ಮಾಡುವುದೇ ಫಲವೆಂದು ಹೇಳುವುದಾದರೆ ಅಸಿದ್ಧಿದೋಷವು ಬರುತ್ತದೆ. ಏಕೆಂದರೆ ಮೃಣ್ಮಯಜ್ಞಾನವು ಯಾರಿಗೆ ಬರುತ್ತದೋ, ಅವರಿಗೆಲ್ಲಾ ಮೃತ್ಪಿಂಡದ ಜ್ಞಾನವು ಬಂದೇ ಬರುತ್ತದೆಂಬ ನಿಯಮವಿರುವುದಿಲ್ಲ. ಇದು ಸ್ವರೂಪಾಸಿದ್ಧವಾಗಿದೆ.

ಒಟ್ಟು ಅಭಿಪ್ರಾಯ - ಮೃತ್ಪಿಂಡಜ್ಞಾನದಿಂದಲೇ ಮೃಣ್ಮಯಜ್ಞಾನವು ಸಫಲವಾಗುತ್ತದೆಂದರೆ ನಿಮ್ಮ ಅಭಿಪ್ರಾಯವೇನು? ಮೃಣ್ಮಯಜ್ಞಾನದಿಂದ ಯಾವ ಫಲಾಂತರವು ದೊರೆಯುತ್ತದೋ, ಆ ಫಲಾಂತರದಲ್ಲಿ ಮೃತ್ಪಿಂಡಜ್ಞಾನವು ಸಹಕಾರಿ ಎಂದೋ? ಅಥವಾ ಮೃತ್ಪಿಂಡಜ್ಞಾನವೇ ಮೃಣ್ಮಯಜ್ಞಾನಕ್ಕೆ ಫಲವೆಂದೋ? ಮೊದಲನೆಯ ಪಕ್ಷದಲ್ಲಿ ದಾರ್ಷ್ಟಾಂತಿಕವು ವಿಷಮವಾಗುತ್ತದೆ. ಎರಡನೆಯ ಪಕ್ಷದಲ್ಲಿ ಸ್ವರೂಪಾಸಿದ್ಧಿಯು ಬರುತ್ತದೆ.

**ಪ್ರಕಾಶಃ** – **कारणत्वेन पिण्डज्ञाने मृण्मयज्ञानं हेतुरिति पक्षे कारणत्वेनेत्यध्याहारात्।**

ಕಾರಣತ್ವೇನ ಮೃತ್ಪಿಂಡವನ್ನು ತಿಳಿಯಬೇಕೆಂದರೆ ಮೃನ್ಮಯವನ್ನು ಅವಶ್ಯವಾಗಿ ತಿಳಿಯಬೇಕು. ಏಕೆಂದರೆ ಕಾರ್ಯಜ್ಞಾನವು ಬಂದರೆ ಮಾತ್ರ, ಕಾರ್ಯನಿರೂಪಿತಕಾರಣತ್ವಪ್ರಕಾರಕಮೃತ್ಪಿಂಡವಿಶೇಷ್ಯಕಜ್ಞಾನವು ಬರಲು ಸಾಧ್ಯ. ಈ ಪಕ್ಷದಲ್ಲಿ 'ಕಾರಣತ್ವೇನ' ಎಂಬುದನ್ನು ನೀವು ಅಧ್ಯಾಹಾರ ಮಾಡಿಕೊಳ್ಳಬೇಕು.

**ಪ್ರಕಾಶಃ** – **विज्ञातशब्दे फललक्षणाप्रसङ्गाच्च । पिण्डेनेत्यत्र ज्ञातेनेत्यध्याहारो निर्बीजः । एकशब्दवैयर्थ्यं च ।**

ವಿಜ್ಞಾತಶಬ್ದಕ್ಕೆ ಜ್ಞಾನಫಲದಲ್ಲಿ ಲಕ್ಷಣಾ ಮಾಡುವ ಪ್ರಸಂಗವು ಬರುತ್ತದೆ. 'ಪಿಂಡೇನ' ಎಂಬಲ್ಲಿ 'ಜ್ಞಾತೇನ' ಎಂಬ ಪದವನ್ನೂ ಕೂಡ ಕಾರಣವಿಲ್ಲದೇ ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಅಷ್ಟೇ ಅಲ್ಲದೇ ಏಕಶಬ್ದಕ್ಕೆ ಯಾವುದೇ ರೀತಿಯ ಸಾರ್ಥಕ್ಯವು ಇರುವುದಿಲ್ಲ.

**प्रकाशः – ''यस्तन्न वेद किमृचा करिष्यति'' इत्यत्र विशिष्य ऋग्ग्रहणे फलाभावेन त्रिवेदपरत्वेन कर्मादिविषयतया सङ्कोचे हेत्वभावात् । कर्मादिबोधक-ब्राह्मणपदप्रसङ्गाच ।**

'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' ಎಂಬ ಶ್ರುತಿಯಲ್ಲಿರುವ 'ಋಚಾ' ಎಂಬ ಪದಕ್ಕೆ ಋಗ್ವೇದ ಎಂಬರ್ಥವನ್ನು ಹೇಳಬೇಕು. ಆದರೆ ನೀವು ಮೂರು ವೇದಗಳನ್ನು ವಿವಕ್ಷಿಸುತ್ತಿದ್ದೀರಿ. ಅಷ್ಟೇ ಅಲ್ಲದೇ ಮೂರು ವೇದಗಳಲ್ಲಿರುವ ಕರ್ಮಪ್ರತಿಪಾದಕ ಭಾಗಗಳನ್ನು ವಿವಕ್ಷಿಸುತ್ತಿದ್ದೀರಿ. ಹೀಗೆ ಸಂಕೋಚ ಮಾಡಲು ಯಾವುದೇ ಕಾರಣವಿರುವುದಿಲ್ಲ. ಮತ್ತು ಕರ್ಮಬೋಧಕವಾದ ವಾಕ್ಯವನ್ನಷ್ಟೇ 'ಋಚಾ' ಎಂಬ ಪದದಿಂದ ವಿವಕ್ಷಿಸುವುದಾದರೆ, ಬ್ರಾಹ್ಮಣಪದವನ್ನು ಅಲ್ಲಿ ಹೇಳಬೇಕಿತ್ತು. ಏಕೆಂದರೆ ಕರ್ಮಪ್ರತಿಪಾದಕವಾದದ್ದು, ಬ್ರಾಹ್ಮಣಭಾಗವೇ ಆಗಿರುತ್ತದೆ. ಬ್ರಾಹ್ಮಣಪದವನ್ನು ಪ್ರಯೋಗ ಮಾಡದೇ 'ಋಚಾ' ಎಂಬ ಪದವನ್ನು ಪ್ರಯೋಗಿಸಿದ್ದಕ್ಕೆ ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ ನಾಲ್ಕನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ.

**प्रकाशः – पञ्चमसूत्रं चायुक्तम् । कर्मादिज्ञानस्य ब्रह्मज्ञानार्थतायाः प्रमाणेन पूर्वमुपपादने पुनः प्रयोजनाभावान्न समाकर्ष इत्याक्षेपानुत्थानात् । मन्दानां वैमुख्यं स्यादित्यादिफलोक्तिश्चायुक्ता । ब्रह्मजिज्ञासायां वैमुख्यापादनायोगात् । अन्यत्र चेष्टत्वेन वाक्यान्वयाभावे उत्तमाधिकार्यतिरिक्तानां ज्ञानासम्भवेन परिहारायोगात् ।**

ಐದನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಕರ್ಮಾದಿಜ್ಞಾನಗಳೆಲ್ಲವೂ ಬ್ರಹ್ಮಜ್ಞಾನಕ್ಕೋಸ್ಕರ ಸಾರ್ಥಕವೆಂದು 'ಅನ್ಯಾರ್ಥಂ ತು ಜೈಮಿನಿಃ' ಎಂಬ ನಾಲ್ಕನೆಯ ಸೂತ್ರವ್ಯಾಖ್ಯಾನ ಸಂದರ್ಭದಲ್ಲಿ ಪ್ರಮಾಣದಿಂದ ನೀವೇ ಪ್ರತಿಪಾದನೆ ಮಾಡಿದ್ದೀರಿ. ಹೀಗಿರುವಾಗ ಪುನಃ ಐದನೆಯ ಸೂತ್ರದಲ್ಲಿ ಪ್ರಯೋಜನವಿಲ್ಲದ ಕಾರಣ ಸಮಾಕರ್ಷ ಮಾಡುವುದು ಅಯುಕ್ತ ಎಂಬ ಆಕ್ಷೇಪವು ಹುಟ್ಟಲು ಸಾಧ್ಯವೇ ಇಲ್ಲ. ಅಷ್ಟೇ ಅಲ್ಲದೇ ಕರ್ಮಪ್ರತಿಪಾದಕ ವೇದಗಳಿಗೂ ವಿಷ್ಣುವಿನಲ್ಲಿ ಸಮನ್ವಯ ಮಾಡುವುದಾದರೆ, ಮಂದಾಧಿಕಾರಿಗಳಿಗೆ ವೈಮುಖ್ಯವು ಬರಬೇಕಾದೀತು ಎಂಬುದಾಗಿ ಆಕ್ಷೇಪದ ಫಲವನ್ನು ಹೇಳಿರುತ್ತೀರಿ. ಇದೂ ಕೂಡ ಅಯುಕ್ತವಾಗಿದೆ. ಯಾವ ವಿಷಯದಲ್ಲಿ ಮಂದಾಧಿಕಾರಿಗಳಿಗೆ ವೈಮುಖ್ಯವನ್ನು ಆಪಾದಿಸುತ್ತಿದ್ದೀರಿ. ಬ್ರಹ್ಮಜಿಜ್ಞಾಸೆಯ ವಿಷಯದಲ್ಲೋ? ಅಥವಾ ಇತರ ವಿಷಯದಲ್ಲೋ? ಬ್ರಹ್ಮಜಿಜ್ಞಾಸೆಯ ವಿಷಯದಲ್ಲಿ ಮಂದಾಧಿಕಾರಿಗಳಿಗೆ ವೈಮುಖ್ಯವನ್ನು ಆಪತ್ತಿ ಮಾಡಲು ಸಾಧ್ಯವಿಲ್ಲ. ಅವರು ಬ್ರಹ್ಮಜಿಜ್ಞಾಸೆಗೋಸ್ಕರವೇ ಪ್ರವೃತ್ತರಾಗಿರುತ್ತಾರೆ. ಇತರ ವಿಷಯದಲ್ಲಿ ವೈಮುಖ್ಯವನ್ನು ಆಪಾದನೆ ಮಾಡುವುದು ಇಷ್ಟವೇ ಆಗಿದೆ. ಏಕೆಂದರೆ ಬ್ರಹ್ಮನನ್ನು ಬಿಟ್ಟು, ಇತರ ಎಲ್ಲಾ ವಿಷಯಗಳಲ್ಲಿಯೂ ವೈರಾಗ್ಯವಿರಬೇಕಾದ್ದರಿಂದ ಬೇರೆ ವಿಷಯದಲ್ಲಿ ವೈಮುಖ್ಯವನ್ನು ಆಪತ್ತಿ ಮಾಡುವುದು ದೋಷವಾಗುವುದಿಲ್ಲ. ಆದ್ದರಿಂದ ವಾಕ್ಯಾನ್ವಯವನ್ನು ಬೇರೆಡೆ ಹೇಳದಿದ್ದರೆ ಉತ್ತಮಾಧಿಕಾರಿಗಳಿಗಿಂತ ಅತಿರಿಕ್ತವಾದ ಮಂದಾಧಿಕಾರಿಗಳಿಗೆ ಜ್ಞಾನವೇ ಕೂಡುವುದಿಲ್ಲ ಎಂಬ ಪರಿಹಾರವು ಅಯುಕ್ತವಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः** – षष्ठं चायुक्तम् । स्वर्गाद्यर्थकर्मोक्तेः प्रतिज्ञातार्थानुपपादकत्वात् । कर्मसमुदायस्य मोक्षहेतुत्वसम्भवात् नित्यकर्मप्रतिपादनस्य लिङ्गत्वासम्भवो वैराग्याहेतुत्वं च स्पष्टमेव ।

'ಪ್ರತಿಜ್ಞಾಸಿದ್ಧೇಃ ಲಿಂಗಮಾಶ್ಮರಥ್ಯಃ' ಎಂಬುದು ಆರನೆಯ ಸೂತ್ರ. ಇದರ ವ್ಯಾಖ್ಯಾನವೂ ಕೂಡ ಸರಿಯಲ್ಲ. 'ತಮೇವ ವಿದ್ವಾನ್ ಅಮೃತ ಇಹ ಭವತಿ' ಎಂಬ ವಾಕ್ಯದಿಂದ ಬ್ರಹ್ಮಜ್ಞಾನದಿಂದಷ್ಟೇ ಮೋಕ್ಷವು ದೊರೆಯುತ್ತದೆಂದು ಪ್ರತಿಜ್ಞೆ ಮಾಡಲಾಗಿದೆ. ಈ ಪ್ರತಿಜ್ಞೆಯ ಸಿದ್ಧಿಗೆ ಲಿಂಗವಾಗಿ ಕರ್ಮಾದಿಗಳನ್ನು ಹೇಳಲಾಗಿದೆ. ಸಪರಿಕರವಾದ ಕರ್ಮಗಳಿಗೆ ಅನಿತ್ಯವಾದ ಸ್ವರ್ಗವೇ ಫಲ. ಹೊರತು ನಿತ್ಯವಾದ ಮೋಕ್ಷವು ಫಲವಲ್ಲ. ಆದ್ದರಿಂದ ಕರ್ಮಾದಿ ಫಲಗಳಲ್ಲಿ ವೈರಾಗ್ಯವನ್ನು ತಾಳಿ, ಮೋಕ್ಷಫಲಕವಾದ ಬ್ರಹ್ಮಜ್ಞಾನದಲ್ಲೇ ತೊಡಗಬೇಕು ಎಂಬುದಾಗಿ ವ್ಯಾಖ್ಯಾನ ಮಾಡಿದಿರಿ. ಇದು ಸರಿಯಲ್ಲ. ಜ್ಞಾನವೇ ಮೋಕ್ಷಸಾಧನವಾಗಿದೆ ಎಂಬ ಪ್ರತಿಜ್ಞಾವಾಕ್ಯಕ್ಕೆ ಕರ್ಮಗಳು ಸ್ವರ್ಗಾದಿ ಫಲಕವಾಗಿವೆ ಎಂಬ ವಚನವು ಉಪಪಾದಕವಾಗುವುದಿಲ್ಲ. ಏಕೆಂದರೆ ಯಾವ ಕರ್ಮಗಳು ಸ್ವರ್ಗಫಲಕವಾಗಿವೆಯೋ, ಅದೇ ಕರ್ಮಗಳು ಮೋಕ್ಷಫಲಕವೂ ಆಗಬಹುದು. ಜ್ಯೋತಿಷ್ಟೋಮಯಾಗವನ್ನು ಆಚರಿಸುವುದರಿಂದ ಸ್ವರ್ಗವು ದೊರೆಯುತ್ತದೆಂದು ಶ್ರುತಿಯಲ್ಲಿ ಹೇಳಲಾಗಿದೆ. ಅಂದಮಾತ್ರಕ್ಕೆ ಮೋಕ್ಷವು ದೊರೆಯುವುದಿಲ್ಲ ಎಂದೇನೂ ಶ್ರುತಿಯ ಅಭಿಪ್ರಾಯವಲ್ಲ. ಹೀಗಿರುವಾಗ ಮೋಕ್ಷಕ್ಕೆ ಬ್ರಹ್ಮಜ್ಞಾನವಷ್ಟೇ ಹೇತುವಾಗಿದೆ ಎಂಬ ಪ್ರತಿಜ್ಞೆಗೆ ಇದು ಹೇಗೆ ಕಾರಣವಾಗುತ್ತವೆ ? ಮತ್ತು ಕಾಮ್ಯಕರ್ಮಪ್ರತಿಪಾದಕವಾದ ವಾಕ್ಯಗಳಿಗೆ ಸ್ವರ್ಗಾದಿಫಲವನ್ನೇ ಪ್ರಯೋಜನವೆಂದು ಹೇಳಬಹುದು. ಆದರೆ ನಿತ್ಯಕರ್ಮಪ್ರತಿಪಾದಕವಾದ ವಾಕ್ಯಗಳು ಪ್ರತಿಜ್ಞಾತವಾದ ಅರ್ಥಕ್ಕೆ ಲಿಂಗವು ಆಗುವುದಿಲ್ಲ. ವೈರಾಗ್ಯಕ್ಕೆ ಹೇತುವೂ ಕೂಡ ಆಗುವುದಿಲ್ಲ.

**प्रकाशः** – किञ्चात्र सूत्रे लिङ्गत्वप्रकारानुपपादनेन वैराग्यद्वारा तदुपपादनाय सूत्रान्तरस्यावश्यम्भावाच्च ।

ಮತ್ತು ಸೂತ್ರದಲ್ಲಿ ಪ್ರತಿಜ್ಞಾಸಿದ್ಧಿಗೆ ಲಿಂಗ ಎಂದಷ್ಟೇ ಹೇಳಲಾಗಿದೆ. ಲಿಂಗತ್ವಪ್ರಕಾರವನ್ನು ಹೇಳಿರುವುದಿಲ್ಲ. ವೈರಾಗ್ಯದ್ವಾರಾ ಕರ್ಮಾದಿಗಳು ಪ್ರತಿಜ್ಞಾಸಿದ್ಧಿಗೆ ಲಿಂಗವಾಗುತ್ತವೆಂದು ನಿರೂಪಣೆ ಮಾಡಲು ಮತ್ತೊಂದು ಸೂತ್ರವು ಆವಶ್ಯಕವಾಗುತ್ತವೆ.

**प्रकाशः** – किञ्च वैराग्यहेतुत्वं कर्मादिप्रतिपादनस्यायुक्तम् । ज्योतिष्टोमादिवाक्ये फले क्षुद्रत्वाप्रतिपत्त्या क्षुद्रफलकत्वाप्रतीतेः ।

ಕರ್ಮಾದಿಪ್ರತಿಪಾದಕ ವಾಕ್ಯಕ್ಕೆ ವೈರಾಗ್ಯಹೇತುತ್ವವನ್ನು ಹೇಳುವುದೂ ಕೂಡ ಅಯುಕ್ತವಾಗುತ್ತದೆ. ಜ್ಯೋತಿಷ್ಟೋಮಾದಿ ವಾಕ್ಯಗಳನ್ನು ನೋಡಿದಾಗ, ಯಾವ ಫಲವು ತಿಳಿಯುತ್ತದೆಯೋ, ಅದು ಕ್ಷುದ್ರಫಲವಾಗಿದೆಯೆಂದು ಯಾರಿಗೂ ಕಾಣಿಸುತ್ತಿಲ್ಲ. ಹೀಗಿರುವಾಗ ಸಕಲ ಕರ್ಮಗಳು ಕ್ಷುದ್ರಫಲಕವಾಗಿವೆ ಎಂದು ಹೇಗೆ ವ್ಯಾಖ್ಯಾನ ಮಾಡುತ್ತೀರಿ ?

**प्रकाशः** – **सप्तमे कर्मणामप्रकृतत्वेनैवंशब्देन परामर्शायोगात् ।**

'ಉತ್ಕ್ರಮಿಷ್ಯತೇ ಏವಂಭಾವಾದಿತ್ಯೌಡುಲೋಮಿಃ' ಎಂಬ ಏಳನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. 'ಏವಂ ಭಾವತ್' ಎಂಬಲ್ಲಿರುವ ಶಬ್ದಗಳಿಂದ ಕರ್ಮಗಳನ್ನು ಪರಾಮರ್ಶ ಮಾಡುತ್ತಿದ್ದೀರಿ. ಹಿಂದೆ ಕರ್ಮಗಳು ಪ್ರಕೃತವೇ ಆಗದಿದ್ದಾಗ, ಅದರ ಪರಾಮರ್ಶವು ಅಯುಕ್ತವಾಗಿದೆ.

**प्रकाशः** – **अष्टमे कर्मप्रतिपादनाभावेऽपि सर्वाधारत्वेन ब्रह्मज्ञानसम्भवात् कर्मादौ समाकर्षो व्यर्थ इति ।**

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬುದು ಎಂಟನೆಯ ಸೂತ್ರ. ಇದರ ವ್ಯಾಖ್ಯಾನವೂ ಕೂಡ ಸರಿಯಲ್ಲ. ಸಕಲಕ್ಕೂ ಬ್ರಹ್ಮನು ಆಧಾರನಾಗಿರುವುದರಿಂದ ಕರ್ಮಾದಿಗಳಿಗೂ ಆಧಾರನಾಗಿದ್ದಾನೆ. ಅದಕ್ಕಾಗಿ ಕರ್ಮಾದಿಗಳನ್ನು ತಿಳಿದುಕೊಳ್ಳಬೇಕು ಎಂದು ನೀವು ವ್ಯಾಖ್ಯಾನ ಮಾಡುತ್ತೀರಿ. ಆದರೆ ವಾಕ್ಯಗಳು ಕರ್ಮವನ್ನು ಪ್ರತಿಪಾದನೆ ಮಾಡದಿದ್ದರೂ, ಬ್ರಹ್ಮನು ಸಕಲಕ್ಕೂ ಆಧಾರನಾಗಿದ್ದಾನೆಂಬ ಬ್ರಹ್ಮಜ್ಞಾನವನ್ನು ಸುಲಭವಾಗಿ ಪಡೆಯಲು ಸಾಧ್ಯವಿರುವಾಗ, ಕರ್ಮಾದಿಗಳಲ್ಲಿ ಸಮಾಕರ್ಷವನ್ನು ಮಾಡಿ, ಅನ್ವಯವನ್ನು ಹೇಳುವುದು ವ್ಯರ್ಥವಾಗುತ್ತದೆ. ಆದ್ದರಿಂದ ಎಂಟು ಸೂತ್ರಗಳಿಗೆ ಟೀಕಾದಿಗಳಲ್ಲಿ ಮಾಡಿರುವ ವ್ಯಾಖ್ಯಾನವು ಅಯುಕ್ತವಾಗಿವೆ ಎಂದು ಸಿದ್ಧವಾಯಿತು.

**प्रकाशः** – **अत्र ब्रूमः । यत्तावन्मन्मतरीत्येति तत्तुच्छम् । त्वद्रीतेरेवायुक्तत्वात्। कारणवाक्येष्वाकाशादिचिह्नितेषु ब्रह्मण एव जन्मादिसूत्रे सार्वज्ञादिना यथा व्यपदिष्टस्य कारणत्वेनोक्तेरित्युक्तयैवासदादि वाक्यानामप्याकाशादीत्यादिपदेन ग्रहणसम्भवेनासद्वाक्यस्यापि पूर्वेणैव ब्रह्मपरत्वसिद्ध्या समाकर्षसूत्रवैयर्थ्यात् ।**

ಇಲ್ಲಿಯ ತನಕ ಮಾಡಿದ ಆಕ್ಷೇಪಗಳು ಅತ್ಯಂತ ತುಚ್ಛವಾಗಿವೆ. ಏಕೆಂದರೆ ಮೊದಲನೆಯ ಸೂತ್ರದಲ್ಲಿ ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇತ್ಯಾದಿ ದೋಷಗಳನ್ನು ನೀವು ಹೇಳಿದಿರಿ. ಆದರೆ ನಿಮ್ಮ ಪ್ರಕಾರವೇ ಸೂತ್ರಾರ್ಥವು ಸರಿಯಿಲ್ಲ. ಹಿಂದಿನ ಸೂತ್ರದಿಂದಲೇ 'ಸಮಾಕರ್ಷಾತ್' ಎಂಬ ಸೂತ್ರದ ಅರ್ಥವು ನಿಮ್ಮ ಪ್ರಕಾರ ಗತಾರ್ಥವಾಗಿದೆ. ಏಕೆಂದರೆ 'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಆಕಾಶಾದಿ ಪದಗಳಿಂದ ಚಿಹ್ನಿತವಾದ ವಾಕ್ಯಗಳಲ್ಲಿ ಸರ್ವಜ್ಞತ್ವವಿಶಿಷ್ಟನಾಗಿ ವ್ಯಪದಿಷ್ಟನಾದ ಬ್ರಹ್ಮನೇ ಕಾರಣತ್ವವಿಶಿಷ್ಟನಾಗಿ ಜನ್ಮಾದಿಸೂತ್ರದಲ್ಲಿ ಶ್ರುತನಾಗಿರುತ್ತಾನೆ ಎಂದು ವ್ಯಾಖ್ಯಾನ ಮಾಡಿದ್ದೀರಿ. 'ಆಕಾಶಾದಿಷು ಚಿಹ್ನಿತೇಷು' ಎಂಬಲ್ಲಿರುವ ಆದಿಪದದಿಂದ ಅಸದಾದಿ ವಾಕ್ಯಗಳನ್ನೂ ಕೂಡ ಸ್ವೀಕರಿಸಲು ಬರುತ್ತದೆ. ಯಾವರೀತಿಯಾಗಿ ಆಕಾಶ ಪದಚಿಹ್ನಿತವಾದ ವಾಕ್ಯಗಳು ಬ್ರಹ್ಮನಲ್ಲಿ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅದರಂತೆ ಅಸತ್‌ಪದಘಟಿತವಾದ ವಾಕ್ಯಗಳೂ ಕೂಡ ಬ್ರಹ್ಮನಲ್ಲಿಯೇ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಹಿಂದಿನ ಸೂತ್ರದಿಂದಲೇ ಸಿದ್ಧವಾಗುವಾಗ, ಪುನಃ ಸಮಾಕರ್ಷ ಸೂತ್ರ ಹೊರಟಿರುವುದು ವ್ಯರ್ಥವಾಗುತ್ತದೆ.

**प्रकाशः** – अस्तु वा सूत्रान्तरम् । तथापि न तस्य त्वदुक्तोऽर्थस्स्वरसः । यद्यसत्पदं विहाय केवलमिदमग्र आसीदित्येव श्रूयेत तदा परं कर्तृवाचिपदाभावात्तदर्थं ''सोकामयत'' इति वाक्योक्तस्य सृजतस्सर्वज्ञस्य ब्रह्मणस्समाकर्षादित्युक्तिर्युज्यते ।

ಅಥವಾ 'ಸಮಾಕರ್ಷಾತ್' ಎಂಬ ಪ್ರತ್ಯೇಕ ಸೂತ್ರವು ಬೇಕೆಂದು ಒಪ್ಪೋಣ. ಆದರೂ ಕೂಡ ನಿನ್ನ ಪ್ರಕಾರ ಸೂತ್ರಾರ್ಥವು ಅಸ್ವರಸವಾಗುತ್ತದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ 'ಅಸತ್' ಎಂಬ ಪದವಿಲ್ಲದಿದ್ದಲ್ಲಿ ಸೂತ್ರವು ಸಾರ್ಥಕವಾಗುತ್ತಿತ್ತು. ಏಕೆಂದರೆ 'ಅಸತ್' ಪದವೇ ಕರ್ತೃವಾಚಕ ಪದವಾಗಿದೆ. 'ಇದಮಗ್ರೇ' 'ಜಗತ್‌ಸೃಷ್ಟಿಗಿಂತ ಮೊದಲು' ಎಂದಷ್ಟೇ ಶ್ರುತಿ ಇದ್ದಿದ್ದರೆ ಆವಾಗ ಕರ್ತೃವಾಚಕಪದವಿಲ್ಲದ ಕಾರಣ 'ಕಃ ಆಸೀತ್' ಎಂಬ ಪ್ರಶ್ನೆ ಬರುತ್ತಿತ್ತು. ಈ ಪ್ರಶ್ನೆಗೆ ಉತ್ತರಿಸಲು 'ಸೋऽಕಾಮಯತ' ಎಂಬ ಹಿಂದಿನ ವಾಕ್ಯದಲ್ಲಿ ಸರ್ವಜ್ಞತ್ವೇನ ಯಾರು ಪ್ರತಿಪಾದ್ಯನಾಗಿದ್ದಾನೋ, ಅವನೇ ಇಲ್ಲಿ ಕರ್ತೃತ್ವೇನ ಪ್ರಸಕ್ತನಾಗುತ್ತಾನೆ ಎಂದು ಅನುವೃತ್ತಿ ಮಾಡಲು 'ಸಮಾಕರ್ಷಾತ್' ಎಂದು ಹೇಳಬೇಕಿತ್ತು.

**प्रकाशः** – न त्वसदिति कर्तृवाचिपदे सति । यत्र यन्नास्ति पूर्वत्र सत्तत्रानुषज्यते । तत्र हि समाकर्षोक्तिः ।

ಆದರೆ ಶ್ರುತಿಯಲ್ಲಿ 'ಅಸತ್' ಎಂಬ ಕರ್ತೃವಾಚಕ ಪದವಿರುವಾಗ ಪುನಃ 'ಸಮಾಕರ್ಷಾತ್' ಎಂದು ಹೇಳುವುದು ಅಸ್ವರಸವಾಗುತ್ತದೆ. ಯಾವುದು ಎಲ್ಲಿ ಇಲ್ಲವೋ, ಹಿಂದೆ ಪ್ರಸಕ್ತವಾಗಿರುತ್ತದೋ, ಅದನ್ನು ಅನುವೃತ್ತಿ ಮಾಡಲು ಸಮಾಕರ್ಷವನ್ನು ಹೇಳಬೇಕು. ಆದರೆ 'ಅಸತ್' ಎಂಬ ಪದವು ಶ್ರುತಿಯಲ್ಲೇ ಇರುವುದರಿಂದ ಪುನಃ ಸಮಾಕರ್ಷ ಏಕೆ ಮಾಡಬೇಕು?

**प्रकाशः** – तस्मात्त्वत्पक्षेऽसति चेति सूत्रणीयम् । कारणत्वेन यथा व्यपदिष्टस्योक्तेरित्युक्तौ स्वारस्यं नतु समाकर्षादित्युक्तौ । तथोक्तेरस्मदुक्तार्थ एव स्वारस्यात् ।

ಆದ್ದರಿಂದ 'ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಆಕಾಶಪದಘಟಿತವಾದ ವಾಕ್ಯಗಳಲ್ಲಿ ಯಥಾ ವ್ಯಪದಿಷ್ಟನಾದ ಬ್ರಹ್ಮನಿಗೆ ಕಾರಣತ್ವವನ್ನು ಹೇಳಲಾಯಿತೋ, ಅದರಂತೆ ಅಸತ್ ಪದಘಟಿತವಾದ ವಾಕ್ಯಗಳಲ್ಲಿಯೂ ಕೂಡ ಯಥಾವ್ಯಪದಿಷ್ಟನಾದ ಬ್ರಹ್ಮನಿಗೆ ಕಾರಣತ್ವವನ್ನು ನೀವು ಹೇಳಬೇಕು. ಆವಾಗ 'ಅಸತಿ ಚ' ಎಂದೇ ಸೂತ್ರವನ್ನು ಮಾಡಬೇಕು. ಹೊರತು 'ಸಮಾಕರ್ಷಾತ್' ಎಂದು ಹೇಳುವುದು ಅಸ್ವರಸವಾಗುತ್ತದೆ. 'ಸಮಾಕರ್ಷಾತ್' ಎಂಬ ಸೂತ್ರವನ್ನು ಹೇಳುವುದಾದರೆ, ನಮ್ಮ ಪ್ರಕಾರ ವ್ಯಾಖ್ಯಾನ ಮಾಡುವುದೇ ಅತ್ಯಂತ ಸ್ವರಸವಾಗಿದೆ.

**प्रकाशः** – त्वत्पक्षे समिति व्यर्थं च । आकर्षादित्येव पूर्तेः ।

ಮತ್ತು ನಿಮ್ಮ ಪಕ್ಷದಲ್ಲಿ 'ಸಮ್' ಎಂಬ ಉಪಸರ್ಗವು ವ್ಯರ್ಥವಾಗಿದೆ. ಅನುವೃತ್ತಿ ಮಾಡಲು ಸೂತ್ರದಲ್ಲಿ 'ಆಕರ್ಷಾತ್' ಎಂದಷ್ಟೇ ಹೇಳಿದರೆ ಸಾಕು. ಆಕರ್ಷಣದಲ್ಲಿ ಸಮ್ಯಕ್ತ್ವವನ್ನು ಪ್ರತಿಪಾದನೆ ಮಾಡುವ 'ಸಂ' ಎಂಬ ಉಪಸರ್ಗಕ್ಕೆ ಯಾವುದೇ ಕೃತ್ಯವಿರುವುದಿಲ್ಲ.

ಸಮಾಕರ್ಷಾಧಿಕರಣ (೧-೪-೫)

**प्रकाशः** – सप्तमे कर्मणामप्रकृतत्वेनैवंशब्देन परामर्शायोगात् ।

'ಉತ್ಕ್ರಮಿಷ್ಯತೇ ಏವಂಭಾವಾದಿತ್ಯೌಡುಲೋಮಿಃ' ಎಂಬ ಏಳನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. 'ಏವಂ ಭಾವತ್' ಎಂಬಲ್ಲಿರುವ ಶಬ್ದಗಳಿಂದ ಕರ್ಮಗಳನ್ನು ಪರಾಮರ್ಶ ಮಾಡುತ್ತಿದ್ದೀರಿ. ಹಿಂದೆ ಕರ್ಮಗಳು ಪ್ರಕೃತವೇ ಆಗದಿದ್ದಾಗ, ಅದರ ಪರಾಮರ್ಶವು ಅಯುಕ್ತವಾಗಿದೆ.

**प्रकाशः** – अष्टमे कर्मप्रतिपादनाभावेऽपि सर्वाधारत्वेन ब्रह्मज्ञानसम्भवात् कर्मादौ समाकर्षो व्यर्थ इति ।

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬುದು ಎಂಟನೆಯ ಸೂತ್ರ. ಇದರ ವ್ಯಾಖ್ಯಾನವೂ ಕೂಡ ಸರಿಯಲ್ಲ. ಸಕಲಕ್ಕೂ ಬ್ರಹ್ಮನು ಆಧಾರನಾಗಿರುವುದರಿಂದ ಕರ್ಮಾದಿಗಳಿಗೂ ಆಧಾರನಾಗಿದ್ದಾನೆ. ಅದಕ್ಕಾಗಿ ಕರ್ಮಾದಿಗಳನ್ನು ತಿಳಿದುಕೊಳ್ಳಬೇಕು ಎಂದು ನೀವು ವ್ಯಾಖ್ಯಾನ ಮಾಡುತ್ತೀರಿ. ಆದರೆ ವಾಕ್ಯಗಳು ಕರ್ಮವನ್ನು ಪ್ರತಿಪಾದನೆ ಮಾಡದಿದ್ದರೂ, ಬ್ರಹ್ಮನು ಸಕಲಕ್ಕೂ ಆಧಾರನಾಗಿದ್ದಾನೆಂಬ ಬ್ರಹ್ಮಜ್ಞಾನವನ್ನು ಸುಲಭವಾಗಿ ಪಡೆಯಲು ಸಾಧ್ಯವಿರುವಾಗ, ಕರ್ಮಾದಿಗಳಲ್ಲಿ ಸಮಾಕರ್ಷವನ್ನು ಮಾಡಿ, ಅನ್ವಯವನ್ನು ಹೇಳುವುದು ವ್ಯರ್ಥವಾಗುತ್ತದೆ. ಆದ್ದರಿಂದ ಎಂಟು ಸೂತ್ರಗಳಿಗೆ ಟೀಕಾದಿಗಳಲ್ಲಿ ಮಾಡಿರುವ ವ್ಯಾಖ್ಯಾನವು ಅಯುಕ್ತವಾಗಿವೆ ಎಂದು ಸಿದ್ಧವಾಯಿತು.

**प्रकाशः** – अत्र ब्रूमः । यत्तावन्मन्मतरीत्येति तत्तुच्छम् । त्वद्रीतेरेवायुक्तत्वात्। कारणवाक्येष्वाकाशादिचिह्नितेषु ब्रह्मण एव जन्मादिसूत्रे सार्वज्ञादिना यथा व्यपदिष्टस्य कारणत्वेनोक्तेरित्युक्तयैवासदादि वाक्यानामप्याकाशादीत्यादिपदेन ग्रहणसम्भवेनासद्वाक्यस्यापि पूर्वेणैव ब्रह्मपरत्वसिद्ध्या समाकर्षसूत्रवैयर्थ्यात् ।

ಇಲ್ಲಿಯ ತನಕ ಮಾಡಿದ ಆಕ್ಷೇಪಗಳು ಅತ್ಯಂತ ತುಚ್ಛವಾಗಿವೆ. ಏಕೆಂದರೆ ಮೊದಲನೆಯ ಸೂತ್ರದಲ್ಲಿ ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇತ್ಯಾದಿ ದೋಷಗಳನ್ನು ನೀವು ಹೇಳಿದಿರಿ. ಆದರೆ ನಿಮ್ಮ ಪ್ರಕಾರವೇ ಸೂತ್ರಾರ್ಥವು ಸರಿಯಿಲ್ಲ. ಹಿಂದಿನ ಸೂತ್ರದಿಂದಲೇ 'ಸಮಾಕರ್ಷಾತ್' ಎಂಬ ಸೂತ್ರದ ಅರ್ಥವು ನಿಮ್ಮ ಪ್ರಕಾರ ಗತಾರ್ಥವಾಗಿದೆ. ಏಕೆಂದರೆ 'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಆಕಾಶಾದಿ ಪದಗಳಿಂದ ಚಿಹ್ನಿತವಾದ ವಾಕ್ಯಗಳಲ್ಲಿ ಸರ್ವಜ್ಞತ್ವವಿಶಿಷ್ಟನಾಗಿ ವ್ಯಪದಿಷ್ಟನಾದ ಬ್ರಹ್ಮನೇ ಕಾರಣತ್ವವಿಶಿಷ್ಟನಾಗಿ ಜನ್ಮಾದಿಸೂತ್ರದಲ್ಲಿ ಶ್ರುತನಾಗಿರುತ್ತಾನೆ ಎಂದು ವ್ಯಾಖ್ಯಾನ ಮಾಡಿದ್ದೀರಿ. 'ಆಕಾಶಾದಿಷು ಚಿಹ್ನಿತೇಷು' ಎಂಬಲ್ಲಿರುವ ಆದಿಪದದಿಂದ ಅಸದಾದಿ ವಾಕ್ಯಗಳನ್ನೂ ಕೂಡ ಸ್ವೀಕರಿಸಲು ಬರುತ್ತದೆ. ಯಾವರೀತಿಯಾಗಿ ಆಕಾಶ ಪದಚಿಹ್ನಿತವಾದ ವಾಕ್ಯಗಳು ಬ್ರಹ್ಮನಲ್ಲಿ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅದರಂತೆ ಅಸತ್‌ಪದಘಟಿತವಾದ ವಾಕ್ಯಗಳೂ ಕೂಡ ಬ್ರಹ್ಮನಲ್ಲಿಯೇ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಹಿಂದಿನ ಸೂತ್ರದಿಂದಲೇ ಸಿದ್ಧವಾಗುವಾಗ, ಪುನಃ ಸಮಾಕರ್ಷ ಸೂತ್ರ ಹೊರಟಿರುವುದು ವ್ಯರ್ಥವಾಗುತ್ತದೆ.

**प्रकाशः** – अस्तु वा सूत्रान्तरम् । तथापि न तस्य त्वदुक्तोऽर्थस्स्वरसः । यद्यसत्पदं विहाय केवलमिदमग्र आसीदित्येव श्रूयेत तदा परं कर्तृवाचिपदाभावात्तदर्थं ''सोकामयत'' इति वाक्योक्तस्य सृजतस्सर्वज्ञस्य ब्रह्मणस्समाकर्षादित्युक्तिर्युज्यते ।

ಅಥವಾ 'ಸಮಾಕರ್ಷಾತ್' ಎಂಬ ಪ್ರತ್ಯೇಕ ಸೂತ್ರವು ಬೇಕೆಂದು ಒಪ್ಪೋಣ. ಆದರೂ ಕೂಡ ನಿನ್ನ ಪ್ರಕಾರ ಸೂತ್ರಾರ್ಥವು ಅಸ್ವರಸವಾಗುತ್ತದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ 'ಅಸತ್' ಎಂಬ ಪದವಿಲ್ಲದಿದ್ದಲ್ಲಿ ಸೂತ್ರವು ಸಾರ್ಥಕವಾಗುತ್ತಿತ್ತು. ಏಕೆಂದರೆ 'ಅಸತ್' ಪದವೇ ಕರ್ತೃವಾಚಕ ಪದವಾಗಿದೆ. 'ಇದಮಗ್ರೇ' 'ಜಗತ್‌ಸೃಷ್ಟಿಗಿಂತ ಮೊದಲು' ಎಂದಷ್ಟೇ ಶ್ರುತಿ ಇದ್ದಿದ್ದರೆ ಆವಾಗ ಕರ್ತೃವಾಚಕಪದವಿಲ್ಲದ ಕಾರಣ 'ಕಃ ಆಸೀತ್' ಎಂಬ ಪ್ರಶ್ನೆ ಬರುತ್ತಿತ್ತು. ಈ ಪ್ರಶ್ನೆಗೆ ಉತ್ತರಿಸಲು 'ಸೋऽಕಾಮಯತ' ಎಂಬ ಹಿಂದಿನ ವಾಕ್ಯದಲ್ಲಿ ಸರ್ವಜ್ಞತ್ವೇನ ಯಾರು ಪ್ರತಿಪಾದ್ಯನಾಗಿದ್ದಾನೋ, ಅವನೇ ಇಲ್ಲಿ ಕರ್ತೃತ್ವೇನ ಪ್ರಸಕ್ತನಾಗುತ್ತಾನೆ ಎಂದು ಅನುವೃತ್ತಿ ಮಾಡಲು 'ಸಮಾಕರ್ಷಾತ್' ಎಂದು ಹೇಳಬೇಕಿತ್ತು.

**प्रकाशः** – न त्वसदिति कर्तृवाचिपदे सति । यत्र यन्नास्ति पूर्वत्र सत्तत्रानुषज्यते । तत्र हि समाकर्षोक्तिः ।

ಆದರೆ ಶ್ರುತಿಯಲ್ಲಿ 'ಅಸತ್' ಎಂಬ ಕರ್ತೃವಾಚಕ ಪದವಿರುವಾಗ ಪುನಃ 'ಸಮಾಕರ್ಷಾತ್' ಎಂದು ಹೇಳುವುದು ಅಸ್ವರಸವಾಗುತ್ತದೆ. ಯಾವುದು ಎಲ್ಲಿ ಇಲ್ಲವೋ, ಹಿಂದೆ ಪ್ರಸಕ್ತವಾಗಿರುತ್ತದೋ, ಅದನ್ನು ಅನುವೃತ್ತಿ ಮಾಡಲು ಸಮಾಕರ್ಷವನ್ನು ಹೇಳಬೇಕು. ಆದರೆ 'ಅಸತ್' ಎಂಬ ಪದವು ಶ್ರುತಿಯಲ್ಲೇ ಇರುವುದರಿಂದ ಪುನಃ ಸಮಾಕರ್ಷ ಏಕೆ ಮಾಡಬೇಕು?

**प्रकाशः** – तस्मात्त्वत्पक्षेऽसति चेति सूत्रणीयम् । कारणत्वेन यथा व्यपदिष्टस्योक्तेरित्युक्तौ स्वारस्यं नतु समाकर्षादित्युक्तौ । तथोक्तेरस्मदुक्तार्थ एव स्वारस्यात् ।

ಆದ್ದರಿಂದ 'ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಆಕಾಶಪದಘಟಿತವಾದ ವಾಕ್ಯಗಳಲ್ಲಿ ಯಥಾ ವ್ಯಪದಿಷ್ಟನಾದ ಬ್ರಹ್ಮನಿಗೆ ಕಾರಣತ್ವವನ್ನು ಹೇಳಲಾಯಿತೋ, ಅದರಂತೆ ಅಸತ್ ಪದಘಟಿತವಾದ ವಾಕ್ಯಗಳಲ್ಲಿಯೂ ಕೂಡ ಯಥಾವ್ಯಪದಿಷ್ಟನಾದ ಬ್ರಹ್ಮನಿಗೆ ಕಾರಣತ್ವವನ್ನು ನೀವು ಹೇಳಬೇಕು. ಆವಾಗ 'ಅಸತಿ ಚ' ಎಂದೇ ಸೂತ್ರವನ್ನು ಮಾಡಬೇಕು. ಹೊರತು 'ಸಮಾಕರ್ಷಾತ್' ಎಂದು ಹೇಳುವುದು ಅಸ್ವರಸವಾಗುತ್ತದೆ. 'ಸಮಾಕರ್ಷಾತ್' ಎಂಬ ಸೂತ್ರವನ್ನು ಹೇಳುವುದಾದರೆ, ನಮ್ಮ ಪ್ರಕಾರ ವ್ಯಾಖ್ಯಾನ ಮಾಡುವುದೇ ಅತ್ಯಂತ ಸ್ವರಸವಾಗಿದೆ.

**प्रकाशः** – त्वत्पक्षे समिति व्यर्थं च । आकर्षादित्येव पूर्तेः ।

ಮತ್ತು ನಿಮ್ಮ ಪಕ್ಷದಲ್ಲಿ 'ಸಮ್' ಎಂಬ ಉಪಸರ್ಗವು ವ್ಯರ್ಥವಾಗಿದೆ. ಅನುವೃತ್ತಿ ಮಾಡಲು ಸೂತ್ರದಲ್ಲಿ 'ಆಕರ್ಷಾತ್' ಎಂದಷ್ಟೇ ಹೇಳಿದರೆ ಸಾಕು. ಆಕರ್ಷಣದಲ್ಲಿ ಸಮ್ಯಕ್ತ್ವವನ್ನು ಪ್ರತಿಪಾದನೆ ಮಾಡುವ 'ಸಂ' ಎಂಬ ಉಪಸರ್ಗಕ್ಕೆ ಯಾವುದೇ ಕೃತ್ಯವಿರುವುದಿಲ್ಲ.

**प्रकाशः** – सप्तमे कर्मणामप्रकृतत्वेनैवंशब्देन परामर्शायोगात् ।

'ಉತ್ಕ್ರಮಿಷ್ಯತೇ ಏವಂಭಾವಾದಿತ್ಯೌಡುಲೋಮಿಃ' ಎಂಬ ಏಳನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. 'ಏವಂ ಭಾವತ್' ಎಂಬಲ್ಲಿರುವ ಶಬ್ದಗಳಿಂದ ಕರ್ಮಗಳನ್ನು ಪರಾಮರ್ಶ ಮಾಡುತ್ತಿದ್ದೀರಿ. ಹಿಂದೆ ಕರ್ಮಗಳು ಪ್ರಕೃತವೇ ಆಗದಿದ್ದಾಗ, ಅದರ ಪರಾಮರ್ಶವು ಅಯುಕ್ತವಾಗಿದೆ.

**प्रकाशः** – अष्टमे कर्मप्रतिपादनाभावेऽपि सर्वाधारत्वेन ब्रह्मज्ञानसम्भवात् कर्मादौ समाकर्षो व्यर्थ इति ।

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬುದು ಎಂಟನೆಯ ಸೂತ್ರ. ಇದರ ವ್ಯಾಖ್ಯಾನವೂ ಕೂಡ ಸರಿಯಲ್ಲ. ಸಕಲಕ್ಕೂ ಬ್ರಹ್ಮನು ಆಧಾರನಾಗಿರುವುದರಿಂದ ಕರ್ಮಾದಿಗಳಿಗೂ ಆಧಾರನಾಗಿದ್ದಾನೆ. ಅದಕ್ಕಾಗಿ ಕರ್ಮಾದಿಗಳನ್ನು ತಿಳಿದುಕೊಳ್ಳಬೇಕು ಎಂದು ನೀವು ವ್ಯಾಖ್ಯಾನ ಮಾಡುತ್ತೀರಿ. ಆದರೆ ವಾಕ್ಯಗಳು ಕರ್ಮವನ್ನು ಪ್ರತಿಪಾದನೆ ಮಾಡದಿದ್ದರೂ, ಬ್ರಹ್ಮನು ಸಕಲಕ್ಕೂ ಆಧಾರನಾಗಿದ್ದಾನೆಂಬ ಬ್ರಹ್ಮಜ್ಞಾನವನ್ನು ಸುಲಭವಾಗಿ ಪಡೆಯಲು ಸಾಧ್ಯವಿರುವಾಗ, ಕರ್ಮಾದಿಗಳಲ್ಲಿ ಸಮಾಕರ್ಷವನ್ನು ಮಾಡಿ, ಅನ್ವಯವನ್ನು ಹೇಳುವುದು ವ್ಯರ್ಥವಾಗುತ್ತದೆ. ಆದ್ದರಿಂದ ಎಂಟು ಸೂತ್ರಗಳಿಗೆ ಟೀಕಾದಿಗಳಲ್ಲಿ ಮಾಡಿರುವ ವ್ಯಾಖ್ಯಾನವು ಅಯುಕ್ತವಾಗಿವೆ ಎಂದು ಸಿದ್ಧವಾಯಿತು.

**प्रकाशः** – अत्र ब्रूमः । यत्तावन्मन्मतरीत्येति तत्तुच्छम् । त्वद्रीतेरेवायुक्तत्वात्। कारणवाक्येष्वाकाशादिचिह्नितेषु ब्रह्मण एव जन्मादिसूत्रे सार्वज्ञादिना यथा व्यपदिष्टस्य कारणत्वेनोक्तेरित्युक्तयैवासदादि वाक्यानामप्याकाशादीत्यादिपदेन ग्रहणसम्भवेनासद्वाक्यस्यापि पूर्वेणैव ब्रह्मपरत्वसिद्ध्या समाकर्षसूत्रवैयर्थ्यात् ।

ಇಲ್ಲಿಯ ತನಕ ಮಾಡಿದ ಆಕ್ಷೇಪಗಳು ಅತ್ಯಂತ ತುಚ್ಛವಾಗಿವೆ. ಏಕೆಂದರೆ ಮೊದಲನೆಯ ಸೂತ್ರದಲ್ಲಿ ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇತ್ಯಾದಿ ದೋಷಗಳನ್ನು ನೀವು ಹೇಳಿದಿರಿ. ಆದರೆ ನಿಮ್ಮ ಪ್ರಕಾರವೇ ಸೂತ್ರಾರ್ಥವು ಸರಿಯಿಲ್ಲ. ಹಿಂದಿನ ಸೂತ್ರದಿಂದಲೇ 'ಸಮಾಕರ್ಷಾತ್' ಎಂಬ ಸೂತ್ರದ ಅರ್ಥವು ನಿಮ್ಮ ಪ್ರಕಾರ ಗತಾರ್ಥವಾಗಿದೆ. ಏಕೆಂದರೆ 'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಆಕಾಶಾದಿ ಪದಗಳಿಂದ ಚಿಹ್ನಿತವಾದ ವಾಕ್ಯಗಳಲ್ಲಿ ಸರ್ವಜ್ಞತ್ವವಿಶಿಷ್ಟನಾಗಿ ವ್ಯಪದಿಷ್ಟನಾದ ಬ್ರಹ್ಮನೇ ಕಾರಣತ್ವವಿಶಿಷ್ಟನಾಗಿ ಜನ್ಮಾದಿಸೂತ್ರದಲ್ಲಿ ಶ್ರುತನಾಗಿರುತ್ತಾನೆ ಎಂದು ವ್ಯಾಖ್ಯಾನ ಮಾಡಿದ್ದೀರಿ. 'ಆಕಾಶಾದಿಷು ಚಿಹ್ನಿತೇಷು' ಎಂಬಲ್ಲಿರುವ ಆದಿಪದದಿಂದ ಅಸದಾದಿ ವಾಕ್ಯಗಳನ್ನೂ ಕೂಡ ಸ್ವೀಕರಿಸಲು ಬರುತ್ತದೆ. ಯಾವರೀತಿಯಾಗಿ ಆಕಾಶ ಪದಚಿಹ್ನಿತವಾದ ವಾಕ್ಯಗಳು ಬ್ರಹ್ಮನಲ್ಲಿ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅದರಂತೆ ಅಸತ್‌ಪದಘಟಿತವಾದ ವಾಕ್ಯಗಳೂ ಕೂಡ ಬ್ರಹ್ಮನಲ್ಲಿಯೇ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಹಿಂದಿನ ಸೂತ್ರದಿಂದಲೇ ಸಿದ್ಧವಾಗುವಾಗ, ಪುನಃ ಸಮಾಕರ್ಷ ಸೂತ್ರ ಹೊರಟಿರುವುದು ವ್ಯರ್ಥವಾಗುತ್ತದೆ.

**प्रकाशः** – अस्तु वा सूत्रान्तरम् । तथापि न तस्य त्वदुक्तोऽर्थस्स्वरसः । यद्यसत्पदं विहाय केवलमिदमग्र आसीदित्येव श्रूयेत तदा परं कर्तृवाचिपदाभावात्तदर्थं ''सोकामयत'' इति वाक्योक्तस्य सृजतस्सर्वज्ञस्य ब्रह्मणस्समाकर्षादित्युक्तिर्युज्यते ।

ಅಥವಾ 'ಸಮಾಕರ್ಷಾತ್' ಎಂಬ ಪ್ರತ್ಯೇಕ ಸೂತ್ರವು ಬೇಕೆಂದು ಒಪ್ಪೋಣ. ಆದರೂ ಕೂಡ ನಿನ್ನ ಪ್ರಕಾರ ಸೂತ್ರಾರ್ಥವು ಅಸ್ವರಸವಾಗುತ್ತದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ 'ಅಸತ್' ಎಂಬ ಪದವಿಲ್ಲದಿದ್ದಲ್ಲಿ ಸೂತ್ರವು ಸಾರ್ಥಕವಾಗುತ್ತಿತ್ತು. ಏಕೆಂದರೆ 'ಅಸತ್' ಪದವೇ ಕರ್ತೃವಾಚಕ ಪದವಾಗಿದೆ. 'ಇದಮಗ್ರೇ' 'ಜಗತ್ಸೃಷ್ಟಿಗಿಂತ ಮೊದಲು' ಎಂದಷ್ಟೇ ಶ್ರುತಿ ಇದ್ದಿದ್ದರೆ ಆವಾಗ ಕರ್ತೃವಾಚಕಪದವಿಲ್ಲದ ಕಾರಣ 'ಕಃ ಆಸೀತ್' ಎಂಬ ಪ್ರಶ್ನೆ ಬರುತ್ತಿತ್ತು. ಈ ಪ್ರಶ್ನೆಗೆ ಉತ್ತರಿಸಲು 'ಸೋಽಕಾಮಯತ' ಎಂಬ ಹಿಂದಿನ ವಾಕ್ಯದಲ್ಲಿ ಸರ್ವಜ್ಞತ್ವೇನ ಯಾರು ಪ್ರತಿಪಾದ್ಯನಾಗಿದ್ದಾನೋ, ಅವನೇ ಇಲ್ಲಿ ಕರ್ತೃತ್ವೇನ ಪ್ರಸಕ್ತನಾಗುತ್ತಾನೆ ಎಂದು ಅನುವೃತ್ತಿ ಮಾಡಲು 'ಸಮಾಕರ್ಷಾತ್' ಎಂದು ಹೇಳಬೇಕಿತ್ತು.

**प्रकाशः** – न त्वसदिति कर्तृवाचिपदे सति । यत्र यन्नास्ति पूर्वत्र सत्तत्रानुषज्यते । तत्र हि समाकर्षोक्तिः ।

ಆದರೆ ಶ್ರುತಿಯಲ್ಲಿ 'ಅಸತ್' ಎಂಬ ಕರ್ತೃವಾಚಕ ಪದವಿರುವಾಗ ಪುನಃ 'ಸಮಾಕರ್ಷಾತ್' ಎಂದು ಹೇಳುವುದು ಅಸ್ವರಸವಾಗುತ್ತದೆ. ಯಾವುದು ಎಲ್ಲಿ ಇಲ್ಲವೋ, ಹಿಂದೆ ಪ್ರಸಕ್ತವಾಗಿರುತ್ತದೋ, ಅದನ್ನು ಅನುವೃತ್ತಿ ಮಾಡಲು ಸಮಾಕರ್ಷವನ್ನು ಹೇಳಬೇಕು. ಆದರೆ 'ಅಸತ್' ಎಂಬ ಪದವು ಶ್ರುತಿಯಲ್ಲೇ ಇರುವುದರಿಂದ ಪುನಃ ಸಮಾಕರ್ಷ ಏಕೆ ಮಾಡಬೇಕು?

**प्रकाशः** – तस्मात्त्वत्पक्षेऽसति चेति सूत्रणीयम् । कारणत्वेन यथा व्यपदिष्टस्योक्तेरित्युक्तौ स्वारस्यं नतु समाकर्षादित्युक्तौ । तथोक्तेरस्मदुक्तार्थ एव स्वारस्यात् ।

ಆದ್ದರಿಂದ 'ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಆಕಾಶಪದಘಟಿತವಾದ ವಾಕ್ಯಗಳಲ್ಲಿ ಯಥಾ ವ್ಯಪದಿಷ್ಟನಾದ ಬ್ರಹ್ಮನಿಗೆ ಕಾರಣತ್ವವನ್ನು ಹೇಳಲಾಯಿತೋ, ಅದರಂತೆ ಅಸತ್ ಪದಘಟಿತವಾದ ವಾಕ್ಯಗಳಲ್ಲಿಯೂ ಕೂಡ ಯಥಾವ್ಯಪದಿಷ್ಟನಾದ ಬ್ರಹ್ಮನಿಗೆ ಕಾರಣತ್ವವನ್ನು ನೀವು ಹೇಳಬೇಕು. ಆವಾಗ 'ಅಸತಿ ಚ' ಎಂದೇ ಸೂತ್ರವನ್ನು ಮಾಡಬೇಕು. ಹೊರತು 'ಸಮಾಕರ್ಷಾತ್' ಎಂದು ಹೇಳುವುದು ಅಸ್ವರಸವಾಗುತ್ತದೆ. 'ಸಮಾಕರ್ಷಾತ್' ಎಂಬ ಸೂತ್ರವನ್ನು ಹೇಳುವುದಾದರೆ, ನಮ್ಮ ಪ್ರಕಾರ ವ್ಯಾಖ್ಯಾನ ಮಾಡುವುದೇ ಅತ್ಯಂತ ಸ್ವರಸವಾಗಿದೆ.

**प्रकाशः** – त्वत्पक्षे समिति व्यर्थं च । आकर्षादित्येव पूर्तेः ।

ಮತ್ತು ನಿಮ್ಮ ಪಕ್ಷದಲ್ಲಿ 'ಸಮ್' ಎಂಬ ಉಪಸರ್ಗವು ವ್ಯರ್ಥವಾಗಿದೆ. ಅನುವೃತ್ತಿ ಮಾಡಲು ಸೂತ್ರದಲ್ಲಿ 'ಆಕರ್ಷಾತ್' ಎಂದಷ್ಟೇ ಹೇಳಿದರೆ ಸಾಕು. ಆಕರ್ಷಣದಲ್ಲಿ ಸಮ್ಯಕ್ತ್ವವನ್ನು ಪ್ರತಿಪಾದನೆ ಮಾಡುವ 'ಸಂ' ಎಂಬ ಉಪಸರ್ಗಕ್ಕೆ ಯಾವುದೇ ಕೃತ್ಯವಿರುವುದಿಲ್ಲ.

**प्रकाशः – अस्मन्मते तु सम्यगाकर्षणं जगति ब्रह्मणस्सकाशाच्छब्दानामित्यन्यत्रापि लोकसिद्धयोगरूढिरूपमुख्यवृत्तिरेव नतु लक्षणादिरिति सूचनेन ततोऽपि हरावधिकवृत्तिरिति सूचनार्थत्वेन वृत्तितारतम्यबोधकतया सार्थक्यम् ।**

ನಮ್ಮ ಪ್ರಕಾರ 'ಸಂ' ಎಂಬ ಉಪಸರ್ಗವು ಸಾರ್ಥಕವಾಗುತ್ತದೆ. ಏಕೆಂದರೆ ಪರಮಮುಖ್ಯವೃತ್ತಿಯಿಂದ ಸಕಲಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆ. ಅಂತಹ ಎಲ್ಲಾ ಶಬ್ದಗಳನ್ನು ಹೀನವೃತ್ತಿಯಿಂದ ಜಗತ್ತಿನಲ್ಲಿ ಎಳೆದು ನಾವು ವ್ಯವಹಾರ ಮಾಡುತ್ತೇವೆ. ಹಾಗಾದರೆ ಸಕಲಶಬ್ದಗಳಿಗೆ ಲೋಕದಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಸೂತ್ರದಲ್ಲಿ 'ಸಂ' ಎಂಬ ಉಪಸರ್ಗವನ್ನು ಹೇಳಿರುವುದರಿಂದ ಕೇವಲ ಆಕರ್ಷಣವನ್ನಷ್ಟೇ ಮಾಡುವುದಿಲ್ಲ. ಸಮಾಕರ್ಷಣವನ್ನು ಮಾಡಿ ವ್ಯವಹರಿಸುತ್ತೇವೆ. ಅಂದರೆ ಮುಖ್ಯವೃತ್ತಿಯಿಂದಲೇ ಸಮಾಕರ್ಷಣ ಮಾಡಿ, ಲೋಕದಲ್ಲಿ ವ್ಯವಹರಿಸುತ್ತೇವೆ. ಇದರಿಂದ ದೇವರಲ್ಲಿ ಪರಮಮುಖ್ಯವೃತ್ತಿಯಿಂದ ಶಬ್ದಗಳಿರುತ್ತವೆ. ಲೋಕದಲ್ಲಿ ಮುಖ್ಯವೃತ್ತಿಯಿಂದ ಇರುತ್ತವೆಂಬ ಪ್ರಮೇಯವನ್ನು ತಿಳಿಸಿದಂತಾಗುತ್ತದೆ. ಮುಖ್ಯವೃತ್ತಿಯಲ್ಲಿರುವ ಈ ತಾರತಮ್ಯವನ್ನು ಬೋಧನೆ ಮಾಡುವುದಕ್ಕಾಗಿ 'ಸಂ' ಎಂಬ ಉಪಸರ್ಗವು ಸಾರ್ಥಕವಾಗುತ್ತದೆ. ಆದರೆ ನಿಮ್ಮಲ್ಲಿ ವೃತ್ತಿತಾರತಮ್ಯವನ್ನೇ ಒಪ್ಪದ ಕಾರಣ ಈ ಯಾವ ಪ್ರಯೋಜನವನ್ನು ಹೇಳಲು ಸಾಧ್ಯವಾಗುವುದಿಲ್ಲ.

**प्रकाशः – उत्तरसूत्रे ''जगद्वाचित्वात्'' इत्युक्त्या वाचकाध्याहारे तव मम चावश्यंभाविनि समन्वयप्रकरणत्वेन बुद्धिस्थतया सर्वशब्दानामित्यन्वयसिद्धेर्नाध्याहारदोषः ।**

ಮತ್ತು 'ಸಮಾಕರ್ಷಾತ್' ಎಂಬ ಸೂತ್ರದಲ್ಲಿ 'ಸರ್ವಶಬ್ದಾನಾಂ ಜಗತಿ ವ್ಯವಹಾರಃ' ಇತ್ಯಾದಿ ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಆಕ್ಷೇಪಿಸಲಾಗಿತ್ತು. ಇದು ಸರಿಯಲ್ಲ. ಏಕೆಂದರೆ ಈ ಅಧ್ಯಾಹಾರವು ನಿಮಗೂ ಕೂಡ ಅನಿವಾರ್ಯವೇ ಆಗಿದೆ. ಏಕೆಂದರೆ 'ಜಗದ್ವಾಚಿತ್ವಾತ್' ಎಂಬುದು ಮುಂದಿನ ಸೂತ್ರ. 'ಜಗದ್ವಾಚಿತ್ವಾತ್' ಎಂದರೆ ಜಗತ್ತಿನಲ್ಲಿರುವ ಪದಾರ್ಥಗಳನ್ನು ಪ್ರತಿಪಾದನೆ ಮಾಡುವುದರಿಂದ ಎಂದರ್ಥ. ಕಸ್ಯ ? ಎಂಬ ಪ್ರಶ್ನೆಯು ಬಂದರೆ ಧರ್ಮವಾಚಕವಾದ ಪದವನ್ನು ಹೇಳಬೇಕು. ಆವಾಗ 'ಸರ್ವಶಬ್ದಾನಾಂ ಜಗದ್ವಾಚಿತ್ವಾತ್' ಎಂಬುದಾಗಿ ನೀನು ಹಾಗೂ ನಾನು ಇಬ್ಬರೂ ಕೂಡ ಅಧ್ಯಾಹಾರ ಮಾಡಬೇಕು. ಹೇಗಿದ್ದರೂ ಮುಂದಿನ ಸೂತ್ರದಲ್ಲಿ 'ಸರ್ವ ಶಬ್ದಾನಾಂ' ಎಂಬುದನ್ನು ಅಧ್ಯಾಹಾರ ಮಾಡಲೇಬೇಕಾದ ಪ್ರಸಂಗವಿದೆ. ಅದನ್ನು ಹಿಂದಿನ ಸೂತ್ರದಲ್ಲಿ ಅಧ್ಯಾಹಾರ ಮಾಡುವುದು ತಪ್ಪಾಗುವುದಿಲ್ಲ. ಏಕೆಂದರೆ ಇದು ಸಮನ್ವಯ ಪ್ರಕರಣ. ಸಮನ್ವಯ ಪ್ರಕರಣದಲ್ಲಿ ಸಕಲಶಬ್ದಗಳ ಸಮನ್ವಯ ಎಂಬುದು ಬುದ್ಧಿಸ್ಥವಾಗಿರುತ್ತದೆ. ಬುದ್ಧಿಸ್ಥವಾದ 'ಸರ್ವಶಬ್ದಾನಾಮ್' ಎಂಬುದನ್ನು ಹಿಂದಿನ ಸೂತ್ರದಲ್ಲಿ ಹಾಗೂ ಮುಂದಿನ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಂಡರೆ ಏನು ತಪ್ಪು?

**प्रकाशः – अक्लिष्टस्सूत्रार्थो व्यक्तमुक्तोऽस्माभिस्तन्त्रदीपिकायाम् । पूर्वशेषत्वेऽपि न्यायान्तर सूचकत्वेनाधिकरणभेदो ग्रन्थ एव समर्थितः ।**

ಪರಿಪೂರ್ಣಚಂದ್ರಿಕಾ

ಸೂತ್ರಕ್ಕೆ ಸುಲಭವಾದ ಅರ್ಥವನ್ನು ನಾವು 'ತಂತ್ರದೀಪಿಕಾ' ಎಂಬ ಗ್ರಂಥದಲ್ಲಿ ಬರೆದಿರುತ್ತೇವೆ. 'ಸಮಾಕರ್ಷಾತ್' ಎಂಬ ಸೂತ್ರವು ಹಿಂದಿನ ಅಧಿಕರಣಕ್ಕೆ ಸೇರಬೇಕಲ್ಲವೇ? ಎಂದು ಆಕ್ಷೇಪ ಮಾಡಿದ್ದರು. ಈಗಾಗಲೇ ಗ್ರಂಥಕಾರರು ಇದಕ್ಕೆ ಉತ್ತರಿಸಿದ್ದಾರೆ. ನ್ಯಾಯಾಂತರಕ್ಕೆ ಸೂಚಕವಾಗಿರುವುದರಿಂದ ಅಧಿಕರಣ ಭೇದವು ಸಾರ್ಥಕವಾಗಿದೆ.

**प्रकाशः – द्वितीये ''जगद्वाचित्वात्'' इत्यस्यावृत्त्या पूर्वत्र प्रकृतसर्वशब्दानां जगद्वाचित्वात् जगत्येव व्यवहारात् । जगद्वाचित्वात् जगद्वाचित्वज्ञानात् जगति व्युत्पत्तिग्रहादित्युक्त्या विवक्षितार्थस्य सर्वस्य सूत्र एव प्रतीतिरस्ति ।**

'ಜಗದ್ವಾಚಿತ್ವಾತ್' ಎಂಬ ಎರಡನೆಯ ಸೂತ್ರದಲ್ಲಿ ನಿಮಗೆ ವಿವಕ್ಷಿತವಾದ ಅರ್ಥವು ತೋರುತ್ತಿಲ್ಲ ಎಂದು ಆಕ್ಷೇಪ ಮಾಡಲಾಗಿತ್ತು. ಇದು ತಪ್ಪು. ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಹಿಂದಿನವರು ಜಗತ್ತಿನಲ್ಲಿ ವ್ಯವಹರಿಸಿದ್ದಾರೆ. ಅದೇ ಸಂಪ್ರದಾಯದಿಂದ ಅರ್ವಾಚೀನರೂ ಕೂಡ ಪರಮಾತ್ಮ ಪ್ರತಿಪಾದಕವಾದ ಶಬ್ದಗಳನ್ನು ಜಗತ್ತಿನಲ್ಲಿ ವ್ಯವಹರಿಸುತ್ತಿದ್ದಾರೆ. ಆದ್ದರಿಂದ ಹಿಂದಿನವರ ವ್ಯವಹಾರವೇ ಮುಂದಿನವರ ವ್ಯವಹಾರಕ್ಕೆ ಕಾರಣ. 'ಜಗದ್ವಾಚಿತ್ವಾತ್' ಎಂಬ ಸೂತ್ರಕ್ಕೆ 'ಜಗದ್ವಾಚಿತ್ವಜ್ಞಾನಾತ್' ಎಂದರ್ಥ. ಜಗತ್ತಿನಲ್ಲಿ ವ್ಯುತ್ಪತ್ತಿಯನ್ನು ತಿಳಿದಿರುವುದರಿಂದ ಎಂಬ ವಿವಕ್ಷಿತವಾದ ಎಲ್ಲ ಅರ್ಥಗಳು ಸೂತ್ರದಿಂದಲೇ ಪ್ರತೀತವಾಗುತ್ತಿವೆ.

**प्रकाशः – प्रत्युत त्वन्मत एव ''यस्य चैतत्कर्म'' इति श्रुतस्य कर्मशब्दस्य क्रियत इति व्युत्पत्त्या जगद्वाचित्वादित्याद्यध्याहार दोषः ।**

ನಮ್ಮ ಪ್ರಕಾರ 'ಜಗದ್ವಾಚಿತ್ವಾತ್' ಎಂಬ ಸೂತ್ರದಿಂದ ವಿವಕ್ಷಿತವಾದ ಅರ್ಥ ತೋರುತ್ತಿದೆ. ಅಷ್ಟೇ ಅಲ್ಲದೆ. ನಿಮ್ಮ ಮತದಲ್ಲಿ ವಿವಕ್ಷಿತವಾದ ಅರ್ಥವೇ ತೋರುತ್ತಿಲ್ಲ. ಏಕೆಂದರೆ 'ಜಗದ್ವಾಚಿತ್ವಾತ್' ಎಂಬುದನ್ನು ನೀವು ಬೇರೆ ಅಧಿಕರಣವೆಂದು ಹೇಳುತ್ತೀರಿ. 'ಯಸ್ಯ ಚ ಏತತ್ ಕರ್ಮ ವೇದಿತವ್ಯಃ' ಎಂಬ ಶ್ರುತಿಯಲ್ಲಿ ವೇದಿತವ್ಯತ್ವೇನ ಪ್ರತಿಪಾದ್ಯನಾದವನು ಯಾರು? ಎಂದು ಸಂದೇಹ. ಕರ್ಮಗಳೆಲ್ಲವೂ ಯಾರದ್ದೋ, ಅವನೇ ವೇದಿತವ್ಯನಾಗಿದ್ದಾನೆ ಎಂದು ಶ್ರುತಿ ಹೇಳುತ್ತಿದೆ. 'ಸಃ' ಎಂಬುದರಿಂದ ಜೀವನು ಪ್ರಕೃತನಾದ್ದರಿಂದ ಅವನೇ ವೇದಿತವ್ಯನೆಂದು ಪೂರ್ವಪಕ್ಷ. 'ಸಃ' ಎಂಬುದರಿಂದ ಬ್ರಹ್ಮನು ಪ್ರಕೃತನಾದ್ದರಿಂದ, ಬ್ರಹ್ಮನೇ ವೇದಿತವ್ಯನಾಗುತ್ತಾನೆಂದು ಸಿದ್ಧಾಂತ ಮಾಡಿದ್ದೀರಿ. ಈ ಎಲ್ಲಾ ಕರ್ಮವು ಯಾರದ್ದೋ, ಅವನೇ ವೇದಿತವ್ಯನಾಗಿದ್ದಾನೆ. ಕರ್ಮಪದದಿಂದ ಸಂಧ್ಯಾವಂದನಾದಿ ಕರ್ಮಗಳನ್ನು ತೆಗೆದುಕೊಂಡರೆ, ಜೀವನೆಂಬರ್ಥವು ತಿಳಿಯುತ್ತದೆ. ಅದೇ ಕರ್ಮಪದದಿಂದ ಸಂಧ್ಯಾವಂದನಾದಿ ಕರ್ಮಗಳನ್ನು ತೆಗೆದುಕೊಳ್ಳದೇ, ಜಗತ್ತನ್ನು ತೆಗೆದುಕೊಂಡರೆ ಈ ಸಮಸ್ತ ಜಗತ್ತು ಯಾರದ್ದೋ, ಅವನು ವೇದಿತವ್ಯನೆಂಬರ್ಥವು ದೊರೆಯುತ್ತದೆ. ಈ ಜಗತ್ತೆಲ್ಲವೂ ಬ್ರಹ್ಮನಿಂದ ನಿರ್ಮಿತವಾದ್ದರಿಂದ ಬ್ರಹ್ಮನು ವೇದಿತವ್ಯನಾಗಿದ್ದಾನೆಂದು ತಿಳಿಯಬೇಕು. 'ಬ್ರಹ್ಮಣಃ ಕ್ರಿಯತೇ ಇತಿ ಕರ್ಮ' ಎಂಬ ವ್ಯುತ್ಪತ್ತಿಯಿಂದ ಕರ್ಮಶಬ್ದಕ್ಕೆ ಜಗತ್ತು ಎಂಬರ್ಥವು ತಿಳಿಯುತ್ತದೆ. ಹೀಗೆ ನೀವು ಸಿದ್ಧಾಂತವನ್ನು ಮಾಡಿದ್ದೀರಿ. ಆವಾಗ

'ಕರ್ಮಶಬ್ದಸ್ಯ' ಎಂಬುದನ್ನು ಅನಿವಾರ್ಯವಾಗಿ ಅಧ್ಯಾಹಾರ ಮಾಡಲೇಬೇಕು. ನಮ್ಮ ಪಕ್ಷದಲ್ಲಿ ಈ ಅಧ್ಯಾಹಾರ ದೋಷವಿಲ್ಲ. ಇದು ಸಮನ್ವಯಪಾದವಾದ್ದರಿಂದ 'ಸರ್ವಶಬ್ದಾನಾಮ್' ಎಂಬುದು ಪ್ರಕೃತವೇ ಆಗಿರುತ್ತದೆ.

**प्रकाशः** – तृतीये लिङ्गपदास्वारस्योक्तिरयुक्ता । नच वक्तव्यं प्रयोगे सति निमित्तानुसरणं नतु निमित्तमात्रेण वाच्यत्वकल्पनमिति ।

'ಜೀವಮುಖ್ಯಪ್ರಾಣಲಿಂಗಾತ್' ಎಂಬ ಮೂರನೆಯ ಸೂತ್ರದಲ್ಲಿರುವ ಲಿಂಗಪದವು ನಿಮ್ಮ ಪ್ರಕಾರ ಅಸ್ವರಸವಾಗಿದೆ. ಪ್ರಯೋಗವಿರುವುದರಿಂದ ನಿಮಿತ್ತವನ್ನು ಹುಡುಕಬೇಕು. ನಿಮಿತ್ತವಿದ್ದ ಮಾತ್ರಕ್ಕೆ ಪ್ರಯೋಗ ಮಾಡಬಾರದೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**प्रकाशः** – ''निमित्तसद्भावेन व्यवहारापादनस्य अन्याय्यत्वेन वाच्यत्वकल्पने बाधकाभावात्'' इति टीकायामेव शब्दप्रवृत्तिनिमित्तस्य तच्छब्दप्रवृत्तौ पुष्कलसामग्रीत्वेन तद्वाच्यत्वकल्पनाव्यभिचारित्वेन स्वातन्त्र्यरूपनिमित्तसत्त्वमात्रेण सर्वशब्दवाच्यत्वापादनं जीवमुख्यप्राणयोर्युक्तम् । स्वातन्त्र्यरूपनिमित्तस्य तत् व्याप्तत्वादिति तदविनाभूतत्वद्योतकतया लिङ्गशब्दप्रयोगस्वारस्योक्तेः ।

ವಾಚ್ಯತ್ವವೇ ಬೇರೆ, ವ್ಯವಹಾರವೇ ಬೇರೆ. ಪ್ರವೃತ್ತಿನಿಮಿತ್ತವು ವಾಚ್ಯತ್ವದ ಜೊತೆಗೆ ಅವಿನಾಭೂತವಾಗಿರುತ್ತದೆ ಹೊರತು, ವ್ಯವಹಾರದ ಜೊತೆಗೆ ಅವಿನಾಭೂತವಾಗಿರುವುದಿಲ್ಲ. ಆದ್ದರಿಂದ 'ಯತ್ರ ಯಚ್ಛಬ್ದಪ್ರವೃತ್ತಿನಿಮಿತ್ತಂ ತತ್ರ ತಚ್ಛಬ್ದವ್ಯವಹಾರಃ' ಎಂಬ ನಿಯಮಕ್ಕೆ ವ್ಯಭಿಚಾರ ಬರುತ್ತದೆ. ರಾಜನಲ್ಲಿ ದುಃಖೀ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಸ್ವಾತಂತ್ರ್ಯವಿದೆ. ಆದರೆ ಆ ಶಬ್ದದ ವ್ಯವಹಾರವು ರಾಜನಲ್ಲಿರುವುದಿಲ್ಲ. ಹಾಗಾಗಿ 'ಯತ್ರ ಯಚ್ಛಬ್ದಪ್ರವೃತ್ತಿನಿಮಿತ್ತಂ ತತ್ರ ತಚ್ಛಬ್ದವಾಚ್ಯತ್ವಮ್' ಎಂಬ ನಿಯಮವನ್ನು ಒಪ್ಪಬೇಕು. ಈ ನಿಯಮಕ್ಕೆ ಯಾವುದೇ ದೋಷವಿಲ್ಲ. ಟೀಕೆಯಲ್ಲಿಯೂ ಕೂಡ 'ನಿಮಿತ್ತಸದ್ಭಾವೇನ ವ್ಯವಹಾರಾಪಾದನಸ್ಯ ಅನ್ಯಾಯ್ಯತ್ವೇನ ವಾಚ್ಯತ್ವಕಲ್ಪನೇ ಬಾಧಕಾಭಾವಾತ್' ನಿಮಿತ್ತವಿರುವ ಮಾತ್ರದಿಂದ ವ್ಯವಹಾರವನ್ನು ಆಪಾದನೆ ಮಾಡುವುದು ಅನ್ಯಾಯವಾದ್ದರಿಂದ ನಿಮಿತ್ತವಿದ್ದಾಗ ವಾಚ್ಯತ್ವವನ್ನು ಹೇಳುವುದರಲ್ಲಿ ಬಾಧಕವಿಲ್ಲ ಎಂದು ಹೇಳಿರುತ್ತಾರೆ. ಪ್ರಕೃತ ಸ್ವಾತಂತ್ರ್ಯವೇ ಲಿಂಗವಾಗಿದೆ. ಇದು ಜೀವ ಹಾಗೂ ಮುಖ್ಯಪ್ರಾಣದೇವರಲ್ಲಿಯೂ ಇರುವುದರಿಂದ ಅವರೂ ಕೂಡ ಸರ್ವಶಬ್ದವಾಚ್ಯರಾಗಲಿ ಎಂಬ ಆಪಾದನೆ ಮಾಡಲು ಸೂತ್ರದಲ್ಲಿ ಲಿಂಗಪದವನ್ನು ಹೇಳಲೇಬೇಕು.

**प्रकाशः** – नहि स्थाणोरपराधो यदेनमन्धो न पश्येत् । लिङ्गपदाभावे हि सूत्रे निमित्तसत्त्वमात्रेण शब्दवाच्यत्वापादनमयुक्तम् ।

ನಿನಗೆ ಲಿಂಗಪದದ ಸ್ವಾರಸ್ಯವು ತಿಳಿಯಲಿಲ್ಲವೆಂದ ಮಾತ್ರಕ್ಕೆ ಆ ಲಿಂಗಪದದ ತಪ್ಪೇನು ಇರುವುದಿಲ್ಲ. 'ನಹಿ ಸ್ಥಾಣೋರಪರಾಧೋ ಯದೇನಮಂಧೋ ನ ಪಶ್ಯೇತ್' ಕುರುಡನಿಗೆ ಎದುರಿನಲ್ಲಿ ಕಂಬವು

ಕಾಣದಿದ್ದಾಗ, ಅದು ಕಂಬದ ತಪ್ಪಲ್ಲ, ಕುರುಡನ ತಪ್ಪೇ ಆಗಿರುತ್ತದೆ. ಅದರಂತೆ ಲಿಂಗಪದದ ಸ್ವಾರಸ್ಯ ತಿಳಿಯದ ನಿನಗೆ ಲಿಂಗಪದದಲ್ಲಿಯೇ ಅಸ್ವಾರಸ್ಯವಿದೆ ಎಂದು ಹೇಳುವುದು ತಪ್ಪು. ಸೂತ್ರದಲ್ಲಿ ಲಿಂಗಪದವಿಲ್ಲದಿದ್ದರೆ ಪ್ರವೃತ್ತಿನಿಮಿತ್ತವಿರುವ ಮಾತ್ರದಿಂದ ಶಬ್ದವಾಚ್ಯತ್ವವನ್ನು ಆಪಾದನೆ ಮಾಡುವುದು ಅಯುಕ್ತವಾಗಿದೆ. ಅಂದರೆ ಲಿಂಗಪದವನ್ನೇ ಸೂತ್ರದಲ್ಲಿ ಹೇಳದೇ ಧರ್ಮಪದವನ್ನು ಹೇಳಿದ್ದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿ, ಜೀವಮುಖ್ಯಪ್ರಾಣರಲ್ಲಿ ಪರಮಮುಖ್ಯವಾಚ್ಯತ್ವವನ್ನು ಆಪಾದನೆ ಮಾಡಲು ಹೇಗೆ ಸಾಧ್ಯವಾಗುತ್ತಿತ್ತು.

**प्रकाशः** – नहि दण्डसत्त्वमात्रेण घटोत्पत्त्यापादनं युक्तमित्याशङ्का निरुत्तरा स्यात् । लिङ्गपदे तु सत्येषा शङ्कोन्मूल्यत इति सार्थकमेव तत् ।

ದಂಡ ಇರುವ ಮಾತ್ರದಿಂದ ಘಟದ ಉತ್ಪತ್ತಿಯನ್ನು ಆಪಾದಿಸಲು ಸಾಧ್ಯವಿಲ್ಲವೆಂಬ ಆಶಂಕೆಯು ನಿರುತ್ತರವಾಗುತ್ತಿತ್ತು. ಲಿಂಗಪದವನ್ನು ಹಾಕಿದಾಗ ಈ ಶಂಕೆಯು ಪರಿಹಾರವಾಗುವುದರಿಂದ ಅತ್ಯಂತ ಸಾರ್ಥಕವಾಗಿದೆ. ಆದ್ದರಿಂದ ಜೀವಮುಖ್ಯಪ್ರಾಣಾದಿಗಳಲ್ಲಿ ಪರಮಮುಖ್ಯವಾಚ್ಯತ್ವವನ್ನು ಆಪಾದನೆ ಮಾಡಲು ಲಿಂಗಪದವು ಸೂತ್ರದಲ್ಲಿ ಅನಿವಾರ್ಯವಾಗಿದೆ.

**प्रकाशः** – स्वातन्त्र्यस्य व्यभिचारोद्धारेण निमित्तत्वसमर्थनं चानुमानिकनय एव कृतमिति तदज्ञानं तवैव दोषः ।

ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ, ಯಾವುದೇ ವ್ಯಭಿಚಾರಾದಿ ದೋಷಗಳು ಬರುವುದಿಲ್ಲ ಎಂಬುದಾಗಿ ಆನುಮಾನಿಕಾಧಿಕರಣದಲ್ಲಿಯೇ ಸಮರ್ಥನೆ ಮಾಡಿದ್ದೇವೆ. ಅದನ್ನು ಮರೆತಿರುವುದು ನಿನ್ನ ದೋಷ. ಹೊರತು, ನಮ್ಮದಲ್ಲ.

**प्रकाशः** – चतुर्थे अन्यशब्दो जीवान्यब्रह्मवाची सन् तज्ज्ञानपरः । प्रश्नव्याख्यानयोर्ज्ञातपदश्रवणात् । प्रश्नस्येदंशब्दासङ्कोचस्य मयाप्यङ्गीकारात् । अत एव ''कर्मादिकम्'' इति टीकादावादिपदम् । ज्ञातशब्दस्य फले लाक्षणिकतायास्सर्वैस्स्वीकार्यत्वात् ।

'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ' ಎಂಬ ನಾಲ್ಕನೆಯ ಸೂತ್ರದಲ್ಲಿ ಅನೇಕ ದೋಷಗಳನ್ನು ನೀವು ಆಕ್ಷೇಪ ಮಾಡಿದಿರಿ. ಅನ್ಯಶಬ್ದವು ಬ್ರಹ್ಮಜ್ಞಾನಕ್ಕಾಗಿ ಎಂಬರ್ಥವನ್ನು ಹೇಗೆ ಹೇಳುತ್ತದೆ ? 'ಯಥಾ ಸೌಮ್ಯೈಕೇನ' ಎಂಬ ಶ್ರುತಿಯಲ್ಲಿರುವ 'ಇದಂ ಸರ್ವಂ' ಎಂಬುದಕ್ಕೆ ಕರ್ಮಾದಿಗಳನ್ನಷ್ಟೇ ಸ್ವೀಕರಿಸಬೇಕೆಂದು ಹೇಗೆ ಹೇಳುತ್ತಾರೆ ? ಜ್ಞಾನಶಬ್ದಕ್ಕೆ ಜ್ಞಾನಫಲದಲ್ಲಿ ಲಕ್ಷಣಾ ಹೇಗೆ ಮಾಡುತ್ತೀರಿ? ಇತ್ಯಾದಿಯಾಗಿ ಪ್ರಶ್ನಿಸಿದಿರಿ. ಈ ಯಾವ ಪ್ರಶ್ನೆಗಳಿಗೂ ಈಗ ಅವಕಾಶವಿಲ್ಲ. ಏಕೆಂದರೆ ಎಲ್ಲಾ ಸೂತ್ರಗಳಲ್ಲಿಯೂ 'ಜಗದ್ವಾಚಿತ್ವಾತ್' ಎಂಬುದು ಅನುವೃತ್ತವಾಗಿದೆ. ಇದರಿಂದ ಜಗತ್ತು ಪ್ರಸಕ್ತವೇ ಆಗಿದೆ. ಪ್ರಸಕ್ತವಾದ ಜಗತ್ತಿಗಿಂತ 'ಅನ್ಯ' ಎಂದರೆ ಬ್ರಹ್ಮ ಎಂಬರ್ಥವೇ ಸುಲಭವಾಗಿ ದೊರೆಯುತ್ತದೆ. ಹೀಗಿರುವಾಗ

ಅನ್ಯಶಬ್ದಕ್ಕೆ ಬ್ರಹ್ಮಜ್ಞಾನ ಎಂಬರ್ಥವನ್ನು ಮಾಡುವುದು ಹೇಗೆ ತಪ್ಪು ? ಮತ್ತು 'ಯೇನೇದಂ ಸರ್ವಂ ವಿಜ್ಞಾತಂ ಸ್ಯಾತ್' ಎಂಬ ಪ್ರಶ್ನೆಯಲ್ಲಿ 'ಬ್ರಹ್ಮ ಯೇನ ವಿಜ್ಞಾತಂ ಸ್ಯಾತ್' ಎಂಬ ಉತ್ತರವಾಕ್ಯದಲ್ಲಿ 'ವಿಜ್ಞಾತ' ಎಂಬ ಪದವು ಕಾಣಿಸುತ್ತಿದೆ. ಆದ್ದರಿಂದ 'ಅನ್ಯಾರ್ಥಂ' ಎಂಬ ಸೂತ್ರದಲ್ಲಿರುವ ಪದಕ್ಕೆ 'ಬ್ರಹ್ಮಜ್ಞಾನಾರ್ಥಂ' ಎಂಬರ್ಥವನ್ನು ಹೇಳುತ್ತೇವೆ. ಶ್ರುತಿಗೆ ಅನುಸಾರಿಯಾಗಷ್ಟೇ ಸೂತ್ರಕ್ಕೆ ವ್ಯಾಖ್ಯಾನ ಮಾಡಬೇಕು. ಮತ್ತು 'ಇದಂ ಸರ್ವಂ' ಎಂಬುದಕ್ಕೆ ಸಕಲ ಜಗತ್ತು ಎಂದೇ ಅರ್ಥ, ಕರ್ಮದೇವತೆಗಳು ಎಂಬರ್ಥವನ್ನು ನಾವು ಹೇಳಿಲ್ಲ. ಆದರೆ ಪ್ರಕೃತದಲ್ಲಿ ಕರ್ಮದೇವತೆಗಳಷ್ಟೇ ಪ್ರಸಕ್ತರಾಗಿದ್ದಾರೆ. ಅವರನ್ನು 'ಇದಂ ಸರ್ವಂ' ಎಂಬುದರಿಂದ ವಿವಕ್ಷಿಸಿದ್ದೇವೆ ಹೊರತು, ಶ್ರುತಿಗೆ ಕರ್ಮದೇವತೆಗಳು ಎಂಬುದಾಗಿ ವ್ಯಾಖ್ಯಾನವನ್ನು ಮಾಡುವುದು ನಮ್ಮ ಉದ್ದೇಶವಲ್ಲ. ಪ್ರಶ್ನೆಯ ವಾಕ್ಯದಲ್ಲಿರುವ 'ಇದಂ' ಶಬ್ದಕ್ಕೆ ಅಸಂಕುಚಿತವಾದ ಅರ್ಥವನ್ನು ನಾವು ಸ್ವೀಕರಿಸಿದ್ದರಿಂದಲೇ 'ಕರ್ಮಾದಿಕಮ್' ಎಂಬುದಾಗಿ ಟೀಕೆಯಲ್ಲಿ ಆದಿಪವನ್ನು ಹೇಳಿರುತ್ತಾರೆ. ಜ್ಞಾತಶಬ್ದಕ್ಕೆ ಫಲದಲ್ಲಿ ಲಕ್ಷಣಾವನ್ನು ಎಲ್ಲರೂ ಕೂಡ ಅಂಗೀಕರಿಸಿರುವುದರಿಂದ ನಮಗೆ ಮಾತ್ರ ಅದು ದೋಷವಾಗುವುದಿಲ್ಲ.

**प्रकाशः** – अन्यज्ञानेनान्यज्ञानस्य मुख्यस्याभावात् । विस्तृतमेतद्विष्णुतत्वनिर्णयादौ ग्रन्थकृतैव ।

ಅನ್ಯಜ್ಞಾನದಿಂದ ಅನ್ಯಜ್ಞಾನವು ಮುಖ್ಯವಾಗಿ ಕೂಡುವುದಿಲ್ಲ. ಇದನ್ನು ವಿಷ್ಣುತತ್ವನಿರ್ಣಯದಲ್ಲಿ ಗ್ರಂಥಕಾರರೇ ವಿಸ್ತರಿಸಿದ್ದಾರೆ.

**प्रकाशः** – परापरविद्ययोर्विवक्षाभेदमात्रेणैव भेदेन व्यक्तिभेदाभावेन तत्स्वरूपोक्त्यर्थत्वेन पूर्वग्रन्थसार्थक्यात् ।

ಯಾರ ಜ್ಞಾನದಿಂದ ಎಲ್ಲವನ್ನೂ ತಿಳಿದಂತಾಗುತ್ತದೆ ? ಎಂದು ಪ್ರಶ್ನಿಸಿದಾಗ, ಬ್ರಹ್ಮಜ್ಞಾನದಿಂದ ಎಲ್ಲವನ್ನು ತಿಳಿದಂತಾಗುತ್ತದೆ ಎಂದು ಉತ್ತರಿಸಿ, ಬ್ರಹ್ಮಜ್ಞಾನವು ಪರವಿದ್ಯೆಯೆಂದು ಹೇಳಿದರೆ ಸಾಕು. ಪೂರ್ವದಲ್ಲಿ ಅಪರವಿದ್ಯೆಯನ್ನು ಏಕೆ ಹೇಳಬೇಕಿತ್ತು ? ಎಂಬುದಾಗಿ ಆಕ್ಷೇಪ ಮಾಡಲಾಗಿತ್ತು. ಇದಕ್ಕೂ ಕೂಡ ಈಗ ಉತ್ತರಿಸಿದಂತಾಗಿದೆ. ನಮ್ಮ ಪ್ರಕಾರ ಪರವಿದ್ಯೆ, ಅಪರವಿದ್ಯೆ ಎಂಬ ವ್ಯಕ್ತಿಗತವಾದ ಭೇದ ಇರುವುದಿಲ್ಲ.

ಋಗಾದ್ಯಾ ಅಪರಾವಿದ್ಯಾರ್ಯದಾ ವಿಷ್ಣೋರ್ನವಾಚಕಾಃ।
ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ॥

ಋಗಾದಿ ವೇದಗಳು ಯಾವಾಗ ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲವೋ, ಆವಾಗ ಅಪರವಿದ್ಯೆ ಎನಿಸುತ್ತವೆ. ಅದೇ ಋಗಾದಿ ವೇದಗಳು ವಿಷ್ಣುವನ್ನು ಪ್ರತಿಪಾದನೆ ಮಾಡಿದಾಗ ಪರವಿದ್ಯೆ ಎನಿಸಿಕೊಳ್ಳುತ್ತದೆ. ಆದ್ದರಿಂದ ಪರವಿದ್ಯೆ, ಅಪರವಿದ್ಯೆ ಎಂಬುದಾಗಿ ವ್ಯಕ್ತಿಗತವಾದ ಭೇದವಿರುವುದಿಲ್ಲ. ಇಂತಹ ಅಪರವಿದ್ಯೆಯ ಸ್ವರೂಪವನ್ನು ಹೇಳುವುದಕ್ಕಾಗಿ ಹಿಂದಿನ ಗ್ರಂಥವು ಸಾರ್ಥಕವಾಗಿದೆ.

**प्रकाशः** – 'कथं नु भगवः स आदेशः' इत्यादिप्रश्नप्रतिवचनार्थस्य विष್ಣुतत्वनिर्णयादौ प्रपञ्चनात् ।

'ಕಥಂ ನು ಭಗವಃ ಸ ಆದೇಶಃ' ಇತ್ಯಾದಿ ಪ್ರಶ್ನೆಗೆ ಉತ್ತರವನ್ನು ನೀಡಿದ ಮಾತಿನ ಅರ್ಥವನ್ನು ವಿಷ್ಣುತತ್ವನಿರ್ಣಯಾದಿ ಗ್ರಂಥಗಳಲ್ಲಿ ವಿವರಿಸಿದ್ದಾರೆ.

**प्रकाशः – दार्ष्टान्तिकवैरूप्यापादनं चायुक्तम् । कर्मादिजगज्ज्ञानस्य तत्कारणेश्वरज्ञानेन सहकारिणा मोक्षफलसम्पादनेन सारूप्यात् ।**

ದಾರ್ಷ್ಟಾಂತಿಕ ವೈರೂಪ್ಯವನ್ನು ಹಿಂದೆ ಆಕ್ಷೇಪ ಮಾಡಿದ್ದನು. "ಮೃಣ್ಮಯಜ್ಞಾನವು ಕಾರಣವಾಗಿದೆ. ಮೃಣ್ಮಯಸಂಪಾದನೆಯು ಫಲರೂಪವಾಗಿದೆ. ಕಾರಣತ್ವೇನ ಮೃತ್ಪಿಂಡಜ್ಞಾನವು ಸಹಕಾರಿಯಾಗಿದೆ. ಇವುಗಳಲ್ಲಿ ಯಥೇಷ್ಟವಾಗಿ ಮೃಣ್ಮಯವಸ್ತುವನ್ನು ಸಂಪಾದನೆ ಮಾಡಲು ಮೃಣ್ಮಯಜ್ಞಾನವನ್ನು ಹೊಂದಲೇಬೇಕು. ಕೇವಲ ಮೃಣ್ಮಯಸ್ವರೂಪದ ಜ್ಞಾನವು ಮೃಣ್ಮಯವಸ್ತುಸಂಪಾದನೆಗೆ ಕಾರಣವಾಗುವುದಿಲ್ಲ. 'ಕಾರಣತ್ವೇನ ಮೃತ್ಪಿಂಡಜ್ಞಾನವೆಂಬ ಸಹಕಾರವಿದ್ದರೆ ಮಾತ್ರ ಮೃಣ್ಮಯಸಂಪಾದನೆಯು ಉಂಟಾಗುತ್ತದೆ. ಇದರಂತೆ ಜಗತ್ತಿನ ಜ್ಞಾನವು ಮೋಕ್ಷಸಾಧನವಾಗಿದೆ. ಜಗತ್ತಿನ ಜ್ಞಾನಕ್ಕೆ ಬ್ರಹ್ಮಜ್ಞಾನವು ಸಹಕಾರಿಯಾಗಿದೆ ಎಂದು ಹೇಳುತ್ತಿದ್ದೀರಿ. ಹಾಗಾದರೆ ಬ್ರಹ್ಮನ ಜ್ಞಾನವು ಸಹಕಾರಿಯಾಯಿತು. ಜಗತ್ತಿನ ಜ್ಞಾನವು ಪ್ರಧಾನವಾಯಿತು. ಇದು ನಿಮಗೆ ಸಮ್ಮತವಲ್ಲ. ಬ್ರಹ್ಮಜ್ಞಾನವನ್ನೇ ಪ್ರಧಾನವೆಂದು ನಿಮ್ಮ ಸಿದ್ಧಾಂತವಿರುತ್ತದೆ" ಇತ್ಯಾದಿಯಾಗಿ ಆಕ್ಷೇಪ ಮಾಡಿದ್ದನು. ಈ ಆಕ್ಷೇಪವು ಅಯುಕ್ತವಾಗಿದೆ. ಏಕೆಂದರೆ ಜಗತ್ತಿನ ಜ್ಞಾನವು ಮೋಕ್ಷಸಾಧನವಾಗಿದೆ. ಬ್ರಹ್ಮನ ಜ್ಞಾನವು ಸಹಕಾರಿಯಾಗಿದೆ ಎಂದು ಒಪ್ಪಿದರೆ ಏನೂ ತಪ್ಪಿಲ್ಲ. ಸಹಕಾರಿಯಾದ ಮಾತ್ರಕ್ಕೆ ಅಪ್ರಧಾನವಾಗಬೇಕೆಂಬ ನಿಯಮವಿಲ್ಲ. ಕರ್ಮಾದಿಗಳ ಜ್ಞಾನದಿಂದಲೂ ಕೂಡ ಮೋಕ್ಷವನ್ನು ಸಂಪಾದನೆ ಮಾಡಬೇಕಾದರೆ ಈಶ್ವರ ಜ್ಞಾನವು ಬೇಕೇ ಬೇಕು. ಹೀಗೆ ಹೇಳುವುದರಿಂದ ಅಪ್ರಾಧಾನ್ಯ ಬರುತ್ತದೆಂದು ಹೇಗೆ ನಿರ್ಣಯಿಸುತ್ತೀರಿ.

(ವಸ್ತುತಸ್ತು 'ಬ್ರಹ್ಮಜ್ಞಾನವು ಸಹಕಾರಿ' ಇತ್ಯಾದಿಯಾಗಿ ಇಲ್ಲಿ ಹೇಳುತ್ತಿರುವುದು ಅಂಗೀಕಾರವಾದ. ಬ್ರಹ್ಮವಿಷಯಕವಾದ ಬ್ರಹ್ಮಜ್ಞಾನವೇ ಮೋಕ್ಷಸಾಧನೆ ಎಂಬುದು ನಮ್ಮ ಸಿದ್ಧಾಂತ.)

**प्रकाशः – श्रुतौ मृत्पिण्डमृन्मयादिदृष्टान्तबलेन कारणत्वेन तज्ज्ञानप्रयोजनकत्वलाभेन कारणत्वेनेत्यस्यानध्याहारात् ।**

ಶ್ರುತಿಯಲ್ಲಿ ಮೃತ್ಪಿಂಡಮೃನ್ಮಯಾದಿ ದೃಷ್ಟಾಂತದ ಬಲದಿಂದ ಕಾರಣತ್ವೇನ ತತ್‌ಜ್ಞಾನಪ್ರಯೋಜನಕತ್ವವು ಲಾಭವಾಗುವುದರಿಂದ 'ಕಾರಣತ್ವೇನ' ಎಂಬುದನ್ನು ಅಧ್ಯಾಹಾರ ಮಾಡಬೇಕಾಗಿಲ್ಲ.

**प्रकाशः – अनेकमृन्मयकारणमेकमृत्पिण्डो यथा तथेहानेकविचित्रजगत्कारणमीश्वरोऽप्येक एव ।''जनयन्देव एकः'' इत्यादिश्रुतेरिति दार्ष्टान्तिकानुरूप्यद्योतकत्वादिनैकपदसार्थक्याच्च ।**

ಏಕ ಪದವು ಹೇಗೆ ಸಾರ್ಥಕವಾಗುತ್ತದೆಂದು ಆಕ್ಷೇಪಿಸಿದ್ದನು. ಅದನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಒಂದು ದೊಡ್ಡ ಮೃತ್ಪಿಂಡದಿಂದ ಅನೇಕ ಮೃಣ್ಮಯಗಳನ್ನು ನಿರ್ಮಾಣ ಮಾಡಬಹುದು.

ಆದರಂತೆ ಒಬ್ಬನೇ ಬ್ರಹ್ಮನಿಂದ ಸಕಲಜಗತ್ತು ನಿರ್ಮಾಣವಾಗುತ್ತದೆ. 'ಜನಯನ್ ದೇವ ಏಕಃ' ಎಂಬ ಶ್ರುತಿಯು ಈ ದೃಷ್ಟಾಂತವನ್ನು ಹೇಳುತ್ತಾ ಒಬ್ಬನೇ ಪರಮಾತ್ಮನು ವಿಚಿತ್ರವಾದ ನಾನಾಬಗೆಯ ಪ್ರಪಂಚಕ್ಕೆ ಕಾರಣನಾಗಿರುತ್ತಾನೆಂದು ಹೇಳುತ್ತಿದೆ. ಈ ಸಮಸ್ತ ಜಗತ್ತಿಗೆ ಒಬ್ಬನೇ ಈಶ್ವರನು ಕಾರಣನಾಗಿದ್ದಾನೆಂದು ತಿಳಿಸಲು 'ಏಕ' ಎಂಬ ಪದವು ಸಾರ್ಥಕವಾಗಿದೆ.

**प्रकाशः** – अन्यथा त्वत्पक्षेऽपि साम्यादस्य दोषस्यैवमेव समाधेयत्वात् । किमृचेति विशिष्य ऋक्पदं च प्राणऋच इत्येव विद्यादित्यादाविव स्पष्टमीश्वरविषयत्वाद्युक्तम् । त्रिवेदपरत्वेऽपि वाद्यन्तरोक्तदिशा वा ''ऋगाद्या अपरा विद्या यदा विष्णोर्न वाचकाः'' इत्युक्तदिशा वा कर्मदेवताद्यन्यपरत्वात् सर्वस्य वेदस्य ।

ಹೀಗೊಪ್ಪದಿದ್ದರೆ ನಿಮ್ಮ ಪಕ್ಷದಲ್ಲಿಯೂ ಕೂಡ ಏಕಶಬ್ದವು ವ್ಯರ್ಥವಾಗುತ್ತದೆ. 'ಏಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ' ಎಂಬಲ್ಲಿ ನಮಗೆ ಹೇಳಿದ ದೋಷವು ನಿಮಗೂ ಬರುವುದರಿಂದ ನಮ್ಮಂತೆ ನೀವೂ ಕೂಡ ಒಬ್ಬನೇ ಪರಮಾತ್ಮ ಜಗತ್ತಿಗೆ ಕಾರಣನೆಂದು ಉತ್ತರಿಸಬೇಕು. 'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' ಎಂಬಲ್ಲಿರುವ 'ಋಚಾ' ಎಂಬ ಪದವು 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿಗಳಂತೆ ಸ್ಪಷ್ಟವಾಗಿ ಈಶ್ವರವಿಷಯಕವೇ ಆಗಿರುತ್ತವೆ. ಆದ್ದರಿಂದ ಋಕ್‌ಪದವು ಎಲ್ಲಾ ಪದವನ್ನು ಹೇಳಬೇಕು. ಋಗ್ವೇದವನ್ನು ಮಾತ್ರ ನೀವು ಏಕೆ ವಿವಕ್ಷಿಸುತ್ತಿದ್ದೀರಿ. ಒಂದು ವೇಳೆ ತ್ರಿವೇದವನ್ನು ಉಪಲಕ್ಷಣಯಾ ತೆಗೆದುಕೊಂಡರೂ, ಕರ್ಮಾದಿಪ್ರತಿಪಾದಕ ವೇದವನ್ನಷ್ಟೇ ಸ್ವೀಕರಿಸಬೇಕಲ್ಲವೇ? ಎಂಬ ಆಕ್ಷೇಪವನ್ನು ಈಗ ಪರಿಹರಿಸಿದಂತಾಯಿತು. ಅಥವಾ 'ಋಚಾ' ಎಂಬ ಪದವು ಮೂರು ವೇದಗಳನ್ನು ಪ್ರತಿಪಾದನೆ ಮಾಡುತ್ತದೆಂದು ಇಟ್ಟುಕೊಂಡರೂ ಕೂಡ ಮೀಮಾಂಸಕರು ಹೇಳುವಂತೆ ಎಲ್ಲಾ ವೇದವು ಕರ್ಮಾದಿಪರವೇ ಆಗಿರುತ್ತದೆ. ಅಥವಾ 'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ' ಎಂಬ ಮಾತಿನಂತೆ ವಿಷ್ಣುವನ್ನು ಪ್ರತಿಪಾದನೆ ಮಾಡದಿರುವಾಗ ಸಕಲವೇದಗಳು ಕರ್ಮಾದಿಪರವೇ ಆಗಿರುತ್ತವೆ. ಆದ್ದರಿಂದ 'ಋಚಾ' ಎಂಬ ಪದದಿಂದ ಸಕಲವೇದಗಳನ್ನು ಅಸಂಕುಚಿತವಾಗಿ ವಿವಕ್ಷಿಸಬಹುದು. ಆದ್ದರಿಂದ 'ಕರ್ಮಾದಿಪ್ರತಿಪಾದಕೈಃ ವೇದೈಃ' ಎಂಬುದಾಗಿ ವ್ಯಾಖ್ಯಾನ ಮಾಡುವುದು ಸಂಕುಚಿತವಾದ ಅರ್ಥವಲ್ಲ.

**प्रकाशः** – कर्मादिपदेन कृत्स्नजगत एवाभिमतत्वाच्च । ब्राह्मणग्रहणापादनस्यायुक्तत्वाच्च ।

ಕೇವಲ ಕರ್ಮವನ್ನು ವಿವಕ್ಷಿಸಿದರೆ ಕರ್ಮಪ್ರತಿಪಾದಕವಾದ ವೇದವಷ್ಟೇ ವಿವಕ್ಷಿತವಾಗುತ್ತದೆ. ಸಮಸ್ತ ಜಗತ್ತನ್ನು ವಿವಕ್ಷಿಸಿದಾಗ, ಸಕಲವೇದವೂ ಕೂಡ ವಿವಕ್ಷಿತವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿ ಬ್ರಾಹ್ಮಣಪದವನ್ನು ಹೇಳಬೇಕಿತ್ತಲ್ಲವೆ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ನಾವು ಕರ್ಮಾದಿಪದದಿಂದ ಸಮಸ್ತ ಜಗತ್ತನ್ನೇ ವಿವಕ್ಷಿಸಿದ್ದೇವೆ.

**प्रकाशः** – अन्यज्ञानस्य ब्रह्मज्ञानार्थत्वं प्रमाणेन पूर्वं साधितमपि प्रयोजनाभावान्न युक्तमिति शङ्का भवत्येवेति पञ्चममपि युक्तमेव चन्द्रिकोपपादिताने कप्रयोजनत्वात् तस्य ।

'ವಾಕ್ಯಾನ್ವಯಾತ್' ಎಂಬ ಐದನೆಯ ಸೂತ್ರದಲ್ಲಿ ಕರ್ಮಗಳೆಲ್ಲವೂ ಬ್ರಹ್ಮಜ್ಞಾನಕ್ಕಾಗಿ ಇರುತ್ತವೆಂದು ಹಿಂದಿನ 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರದಲ್ಲಿಯೇ ಸಮರ್ಥನೆ ಮಾಡಿದ್ದಾಯಿತು. ಪುನಃ ಯಾವುದೇ ಪ್ರಯೋಜನವಿಲ್ಲದ ಕಾರಣ ಸಮಾಕರ್ಷ ಮಾಡುವುದು ತಪ್ಪು ಎಂದು ಆಕ್ಷೇಪ ಮಾಡಿದ್ದೀರಿ. ಇದು ಹೇಗೆ ಕೂಡುತ್ತದೆ ? ಎಂಬುದಾಗಿ ರಾಮಾನುಜೀಯರು ಪ್ರಶ್ನಿಸಿದ್ದರು. ಇದು ಕೂಡ ಸರಿಯಲ್ಲ. ಪ್ರಮಾಣಗಳಿಂದ ಕರ್ಮಗಳೆಲ್ಲವೂ ಬ್ರಹ್ಮಜ್ಞಾನಕ್ಕಾಗಿ ಸಾರ್ಥಕವಾಗುತ್ತವೆಂದು ಹಿಂದೆ ಪ್ರತಿಪಾದನೆ ಮಾಡಿದ್ದಾಗಿದೆ. ಆದರೆ ಪ್ರಯೋಜನವಿಲ್ಲದಿದ್ದಾಗ ಪ್ರಮಾಣವೇ ಅಸಾಧುವಾಗುತ್ತದೆ. ಅಂತಹ ಪ್ರಮಾಣಗಳನ್ನು ಅನ್ಯಪರವಾಗಿ ವ್ಯಾಖ್ಯಾನ ಮಾಡಬೇಕು ಎಂಬ ಆಶಂಕೆಯು ಪುನಃ ಬಂದೇ ಬರುತ್ತದೆ. ಏಕೆಂದರೆ ಪ್ರಮಾಣವು ಯಾವುದೇ ಒಂದು ವಿಷಯವನ್ನು ಸ್ಥಾಪನೆ ಮಾಡಿದಮೇಲೆ ಪ್ರಯೋಜನವು ಕಾಣದಿದ್ದರೆ ಪ್ರಮಾಣಕ್ಕೆ ಬೇರೆ ಅರ್ಥವನ್ನು ಮಾಡುವುದು ಅನೇಕ ಕಡೆ ಕಂಡಿರುತ್ತದೆ. ಆದ್ದರಿಂದ 'ಅನ್ಯಾರ್ಥಂ ತು ಜೈಮಿನಿಃ' ಎಂಬ ಹಿಂದಿನ ಸೂತ್ರದಲ್ಲಿ ಕರ್ಮಗಳೆಲ್ಲವೂ ಬ್ರಹ್ಮಜ್ಞಾನಕ್ಕಾಗಿ ಸಾರ್ಥಕವೆಂದು ಪ್ರತಿಪಾದನೆ ಮಾಡಿದ್ದರೂ, 'ವಾಕ್ಯಾನ್ವಯಾತ್' ಎಂಬ ಐದನೆಯ ಸೂತ್ರವು ಹೊರಟಿದ್ದು ಸಾರ್ಥಕವೇ ಆಗಿದೆ. ಚಂದ್ರಿಕೆಯಲ್ಲಿ ಉಪಪಾದನೆ ಮಾಡಿದಂತೆ ಅನೇಕ ಪ್ರಯೋಜನಗಳಿರುವುದರಿಂದ ಪ್ರಯೋಜನವಿಲ್ಲವೆಂದು ತಿಳಿಯಬಾರದೆಂಬುದು ಈ ಸೂತ್ರದ ಅಭಿಪ್ರಾಯ.

**प्रकाशः** – षष्ठे ज्योतिष्टोमादिवाक्ये कर्मणः क्षुद्रफलत्वाद्यप्रतीतावपि ''अमृतो वाव सोमपो भवति यावदिन्द्र'' इत्यादिना टीकोक्तरीत्या वाक्यान्तरेण तत्प्रतीतौ वैराग्यद्वारा कर्माद्युक्तेर्ब्रह्मज्ञानार्थत्वस्य टीकादौ निपुणतरमुपपादितत्वात् ।

'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ' ಎಂಬ ಸೂತ್ರದಲ್ಲಿ ಸಕಲಪದಗಳು ಪರಮಾತ್ಮನ ನಾಮಾತ್ಮಕ-ಗಳಾಗುವುದಾದರೆ ಮಂದರಿಗೆ ವೇದಗಳಲ್ಲಿ ವೈಮುಖ್ಯ ಬರುತ್ತದೆ. 'ಯತೋ ವಾ' ಇತ್ಯಾದಿ ವಾಕ್ಯಗಳು ಜಗತ್‌ಕಾರಣತ್ವವನ್ನು ಕೂಡ ಪ್ರತಿಪಾದನೆ ಮಾಡದಿರಬೇಕಾಗುತ್ತದೆ. ಇತ್ಯಾದಿಯಾಗಿ ರಾಮಾನುಜೀಯರು ಆಕ್ಷೇಪ ಮಾಡಿದ್ದರು. ಆದರೆ ಚಂದ್ರಿಕೆಯಲ್ಲಿ ಇಂತಹ ವೈಮುಖ್ಯಗಳು ಬರಲು ಸಾಧ್ಯವಿಲ್ಲ. 'ಯತೋ ವಾ' ಇತ್ಯಾದಿ ವಾಕ್ಯಗಳಿಗೂ ಜಗತ್‌ಕಾರಣತ್ವ ಪ್ರತಿಪಾದನೆಯಲ್ಲಿ ತಾತ್ಪರ್ಯವಿದ್ದೇ ಇರುತ್ತದೆಂದು ಉಪಪಾದನೆ ಮಾಡಲಾಗಿದೆ. ಮತ್ತು ಕರ್ಮಾದಿ ವಾಕ್ಯಗಳು ಕ್ಷುದ್ರಫಲವನ್ನು ಹೇಳುತ್ತಿವೆ ಎಂದು ಬ್ರಹ್ಮಜ್ಞಾನವೇ ನಿತ್ಯಫಲಕವೆಂದು ಸಮರ್ಥನೆ ಮಾಡುತ್ತಿದ್ದೀರಿ. ಆದರೆ ಜ್ಯೋತಿಷ್ಟೋಮಾದಿ ವಾಕ್ಯಗಳಲ್ಲಿ ಅಂತಹ ಕ್ಷುದ್ರ ಫಲಗಳು ಕೇಳಿಸುತ್ತಿಲ್ಲವಲ್ಲ ? ಎಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳಲ್ಲಿ ಕ್ಷುದ್ರಫಲಗಳು ಕೇಳಿಸದಿದ್ದರೂ 'ಅಮೃತೋ ವಾವ ಸೋಮಪೋ ಭವತಿ ಯಾವದಿಂದ್ರ' ಇಂದ್ರನಿರುವ ತನಕ ಮಾತ್ರ ಸ್ವರ್ಗಸುಖವನ್ನು ಅನುಭವಿಸಬಹುದೆಂಬ ವಾಕ್ಯದಲ್ಲಿ

ಹೇಳಲಾಗಿದೆ. ಇದರಿಂದ ಕರ್ಮಗಳೆಲ್ಲವು ಕ್ಷುದ್ರಫಲಕವೆಂದು ಸ್ಪಷ್ಟವಾಗುತ್ತದೆ. ಹಾಗಾಗಿ ಕರ್ಮಾದಿಗಳೆಲ್ಲವೂ ಕೇವಲ ವೈರಾಗ್ಯದ ಸಂಪಾದನೆಗೋಸ್ಕರ ಬ್ರಹ್ಮಜ್ಞಾನಕ್ಕೆ ಸಾಧಕವಾಗಿವೆಯೆಂದು ಟೀಕಾದಿಗಳಲ್ಲಿ ಅತ್ಯಂತ ನಿಪುಣವಾಗಿ ಉಪಪಾದನೆ ಮಾಡಿರುತ್ತಾರೆ.

**ಪ್ರಕಾಶಃ – प्रतिज्ञासिद्धेर्लिङ्गं जगद्वाचित्वमित्युक्तयैवाभिप्रायिकस्य वैराग्यद्वारा तथात्वस्य लाभेन तदुपपादनाय सूत्रान्तरेण भाव्यमित्यापादनस्य निर्बीजत्वात् ।**

ರಾಮಾನುಜೀಯರು ಮತ್ತೊಂದು ಆಕ್ಷೇಪವನ್ನು ಮಾಡಿದ್ದರು. ಈ ಸೂತ್ರದಲ್ಲಿ ಲಿಂಗತ್ವಪ್ರಕಾರವನ್ನು ಸೂತ್ರಕಾರರು ಹೇಳಿಯೇ ಇಲ್ಲ. ಕೇವಲ ಜ್ಞಾನವೇ ಮೋಕ್ಷಸಾಧನವಾಗಿದೆ ಕರ್ಮವಲ್ಲ ಎಂದಷ್ಟೇ ಹೇಳಿದ್ದಾರೆ. ಕ್ಷುದ್ರಫಲತ್ವ ಎಂಬ ಲಿಂಗತ್ವಪ್ರಕಾರವನ್ನು ಹೇಳುವುದಕ್ಕಾಗಿ ಮತ್ತೊಂದು ಸೂತ್ರವನ್ನು ಹೇಳಬೇಕಿತ್ತಲ್ಲವೇ? ಎಂದು.

ಇದು ನಿರ್ಬೀಜವಾದ ಶಂಕೆ. 'ಜಗದ್ವಾಚಿತ್ವಾತ್' ಎಂಬುದು ಹಿಂದಿನ ಎಲ್ಲಾ ಸೂತ್ರಗಳಲ್ಲಿಯೂ ಅನುವೃತ್ತವಾಗುತ್ತದೆ. ಅದನ್ನು ಅನುವೃತ್ತಿ ಮಾಡಿಕೊಳ್ಳುವುದರಿಂದಲೇ ವೈರಾಗ್ಯದ್ವಾರಾ ಕರ್ಮಗಳೆಲ್ಲವೂ ಬ್ರಹ್ಮಜ್ಞಾನಕ್ಕೆ ಪೂರಕವಾಗಿವೆಯೆಂದು ತಿಳಿಯುತ್ತದೆ. ಏಕೆಂದರೆ ಕರ್ಮಗಳೆಲ್ಲವೂ ಕ್ಷುದ್ರಫಲಕವೆಂಬುದು ಅರ್ಥಾತ್ ಸಿದ್ಧವಾಗುವ ವಿಚಾರ. ಅಭಿಪ್ರಾಯಿಕವಾಗಿ ಸಿದ್ಧವಾಗುವ ವಿಚಾರಕ್ಕಾಗಿ ಮತ್ತೊಂದು ಸೂತ್ರವನ್ನು ಹೇಳುವುದು ವ್ಯರ್ಥ.

**ಪ್ರಕಾಶಃ – सप्तमे प्रतिसूत्रं पूर्वत्रान्वितेन जगद्वाचित्वपदेन कर्मादेः प्रकृतत्वेनैवं शब्दस्याप्रकृतपरत्वापादनस्यान्ध्यनिमित्तकत्वात् ।**

'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' ಎಂಬ ಸೂತ್ರದಲ್ಲಿ ಪ್ರತಿಯೊಂದು ಸೂತ್ರಗಳಲ್ಲಿಯೂ ಜಗದ್ವಾಚಿತ್ವಪದವು ಅನುವೃತ್ತವಾಗುತ್ತಲೇ ಇವೆ. ಹೀಗೆ ಕರ್ಮಾದಿಗಳು ಪ್ರಕೃತವಾಗುತ್ತಿರುವುದರಿಂದ 'ಏವಂ' ಶಬ್ದವು ಅಪ್ರಕೃತವಾದದ್ದನ್ನು ಪರಾಮರ್ಶ ಮಾಡುತ್ತಿದೆ ಎಂಬುದಾಗಿ ರಾಮಾನುಜೀಯರು ಆಕ್ಷೇಪ ಮಾಡಿರುವುದು ಕೇವಲ ಕುರುಡರ ಮಾತುಗಳು.

**ಪ್ರಕಾಶಃ – अष्टमे कर्मदेवतादिरूपजगदप्रतिपादने तस्यैवाप्रतीत्या सर्वाधारत्वोक्त्यर्थं कर्मदेवतादि सर्वप्रतिपादनं युक्तमिति सर्वमनवद्यम् ।**

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಎಂಟನೆಯ ಸೂತ್ರವ್ಯಾಖ್ಯಾನವೂ ಕೂಡ ಸಾಧುವೇ ಆಗಿದೆ. ಕರ್ಮ ಹಾಗೂ ದೇವತೆ ಮೊದಲಾದ ಪ್ರಪಂಚವನ್ನು ವೇದವು ಪ್ರತಿಪಾದನೆ ಮಾಡದಿದ್ದರೆ ಕರ್ಮದೇವತಾದಿಗಳ ಜ್ಞಾನವೇ ಬರುವುದಿಲ್ಲ. ಆವಾಗ ಕರ್ಮದೇವತಾದಿ ರೂಪವಾದ ಸಮಸ್ತ ಪ್ರಪಂಚಕ್ಕೆ ಪರಮಾತ್ಮನು ಆಧಾರನಾಗಿದ್ದಾನೆಂದು ತಿಳಿಯಲು ಹೇಗೆ ಸಾಧ್ಯವಾಗುತ್ತದೆ? ಹಾಗಾಗಿ ಸಕಲಜಗತ್ತು ವಿಷ್ಣುವಿನಲ್ಲಿ ಆಧೇಯವಾಗಿದೆ ಎಂದು ತಿಳಿಯಬೇಕಾದರೆ ಕರ್ಮಾದಿ ಪ್ರಪಂಚವನ್ನು ವೇದವು ಪ್ರತಿಪಾದನೆ ಮಾಡಲೇಬೇಕು.

**प्रकाशः** – प्रतिसूत्रं प्रतिपदं भूयसस्स्वारस्यस्य सत्त्वेऽपि ग्रन्थगौरवभयात्सादरं भाष्यटीकादिविमर्शिनां स्पष्टत्वाच्च न प्रपञ्च्यते ।

ಹೀಗೆ ಪ್ರತಿಯೊಂದು ಸೂತ್ರಗಳಲ್ಲಿರುವ ಪ್ರತಿಯೊಂದು ಪದಗಳೂ ಕೂಡ ಬಹಳಷ್ಟು ಅರ್ಥಗರ್ಭಿತವಾಗಿದೆ, ಸ್ವಾರಸ್ಯಮಯವಾಗಿದೆ. ಅದನ್ನೆಲ್ಲಾ ವಿವರವಾಗಿ ವರ್ಣಿಸಬೇಕೆಂಬ ಅಪೇಕ್ಷೆ ನಮಗಿದೆ. ಆದರೆ ಗ್ರಂಥಗೌರವದ ಭಯದಿಂದ ಹೆಚ್ಚು ವಿವರಿಸಲು ಹೊರಟಿಲ್ಲ. ಆದರ ಪೂರ್ವಕವಾಗಿ ಭಾಷ್ಯ-ಟೀಕಾದಿಗಳನ್ನು ವಿಮರ್ಶಿಸುವವರಿಗೆ ಸ್ವತಃ ಅಂತಹ ಸ್ವಾರಸ್ಯಗಳು ಸ್ಪಷ್ಟವಾಗಿ ತಿಳಿಯುತ್ತವೆಂಬ ಅಭಿಪ್ರಾಯದಿಂದಲೂ ನಾವು ವಿವರಿಸಲು ಹೊರಟಿಲ್ಲ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – **ॐ समाकर्षात् ॐ** ।। नन्वेवं लक्षणापि मुख्यवृत्तिभेदः स्यादित्यत आह – **लक्षणादौ त्विति** ।। ननु ब्रह्मणि विद्यमानयोगरूढ्यपेक्षयाऽन्यत्र विद्यमानयोगरूढ्योर्हीनत्वेन तत्प्रसिद्धिर्न स्यात् । अन्यथा माणवकादावग्न्यादिशब्दानामपि प्रसिद्धिस्स्यादित्यत आह – **जगतीति** ।। ननु शब्दानां ब्रह्मणि मुख्यत्वेऽप्यन्यपरत्वस्य पूर्वत्रोत्तरत्र च प्रतिपादनात्पौनरुक्त्यं स्यादित्यत आह – **अत्रेति** ।। वाक्यान्वयादित्यत्र त्विति ।। वाक्यसमन्वयोऽपि सिध्यतीत्युक्तमिति वक्ष्यमाणेनान्वयः ।




'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯ:' ಎಂಬ ಸೂತ್ರದಲ್ಲಿ ಮೋಕ್ಷಕ್ಕೆ ಜ್ಞಾನದ ಹೊರತು ಬೇರೆ ಸಾಧನ ಇರುವುದಿಲ್ಲ ಎಂಬ ಪ್ರತಿಜ್ಞೆಯ ಸಾಧನೆಗಾಗಿ, ಕರ್ಮಾದಿಗಳನ್ನು ಹೇಳಲಾಗಿದೆ. ಆದ್ದರಿಂದ ಕರ್ಮಾದಿಗಳನ್ನು ವೇದವು ಪ್ರತಿಪಾದನೆ ಮಾಡಿದರೂ ಕ್ಷುದ್ರಫಲಕ್ಕೋಸ್ಕರ ಮುಮುಕ್ಷು ಆದವನು ಪ್ರಯತ್ನಿಸಬಾರದು. ಶಾಶ್ವತ ಫಲವನ್ನು ನೀಡುವ ಬ್ರಹ್ಮಜ್ಞಾನದಲ್ಲಿಯೇ ಪ್ರಯತ್ನಿಸಬೇಕು ಎಂಬುದಾಗಿ ವೈರಾಗ್ಯಕ್ಕೋಸ್ಕರ ಕರ್ಮಕಾಂಡವು ಕರ್ಮವನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' ಎಂಬ ಸೂತ್ರದಲ್ಲಿ ಧ್ಯಾನಕ್ಕಾಗಿ ಅಂತಃಕರಣವನ್ನು ಶುದ್ಧಿ ಮಾಡಬೇಕು. ಅಂತಃಕರಣಸಿದ್ಧಿಗೋಸ್ಕರ ಕರ್ಮಾಚರಣೆಯಲ್ಲಿ ತೊಡಗಬೇಕು. ಆವಾಗ ಅಂತಃಕರಣಶುದ್ಧಿಯಿಂದ ತತ್ವಜ್ಞಾನವನ್ನು ಸಂಪಾದನೆ ಮಾಡಿ, ಧ್ಯಾನದಲ್ಲಿ ತೊಡಗಬಹುದು. ಹೀಗೆ ಕರ್ಮಗಳೆಲ್ಲವೂ ಧ್ಯಾನಕ್ಕೆ ಸಾಧನವಾಗಿ ಆಚರಿಸಬೇಕೆಂದು ತಿಳಿಸಲು ಕರ್ಮಕಾಂಡವು ಹೊರಟಿರುತ್ತದೆಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ.

ಸಮಗ್ರ ಜಗತ್ತು ಬ್ರಹ್ಮನ ಅಧೀನವಾಗಿದೆ. ಕರ್ಮಗಳೂ ಕೂಡ ಬ್ರಹ್ಮನ ಅಧೀನವಾಗಿದೆ. ಎಲ್ಲವೂ ಕೂಡ ಬ್ರಹ್ಮನಲ್ಲಿ ಆಶ್ರಿತವಾಗಿವೆ. ಇದನ್ನು ತಿಳಿಯಬೇಕೆಂದರೆ ಜಗತ್ತನ್ನು ಹಾಗೂ ಕರ್ಮಗಳನ್ನು ತಿಳಿಯಲೇಬೇಕು. ಆದಕ್ಕಾಗಿ ಕರ್ಮಕಾಂಡವು ಸಾರ್ಥಕವಾಗಿದೆ ಎಂದು ಕಾಶಕೃತ್ಸ್ನಾಚಾರ್ಯರು ಹೇಳುತ್ತಾರೆ. ಈ ವ್ಯಾಸರ ಶಿಷ್ಯರ ಅಭಿಪ್ರಾಯದಲ್ಲಿ ಮತ್ತು ಕರ್ಮವು ಬ್ರಹ್ಮಜ್ಞಾನಕ್ಕೆ ಅವಶ್ಯಕವೆಂದು ಹೇಳುವುದರಲ್ಲಿ ಅಂತರಂಗತ್ವವು ಇರುವುದರಿಂದ ಸೂತ್ರಕ್ರಮವಿನ್ಯಾಸವು ಸಾರ್ಥಕವಾಗಿದೆ. ಆಶ್ಮರಥ್ಯಾಚಾರ್ಯರಿಗಿಂತ ಔಡುಲೋಮಿಚಾರ್ಯರು, ಅವರಿಗಿಂತಲೂ ಕಾಶಕೃತ್ಸ್ನಾಚಾರ್ಯರು ಕರ್ಮಕ್ಕೆ ಹೆಚ್ಚಿನ ಅಂತರಂಗತ್ವವನ್ನು ಒಪ್ಪಿರುತ್ತಾರೆ. ಆದ್ದರಿಂದ ಸೂತ್ರಕ್ರಮವಿನ್ಯಾಸವು ಅತ್ಯಂತ ಸ್ವರಸವಾಗಿದೆ.

'ಸಮಾಕರ್ಷಾತ್' ಇತ್ಯಾದಿ ಸೂತ್ರಗಳನ್ನು ಅಧ್ಯಾಯದ ಕೊನೆಯಲ್ಲಿ ಹೇಳಬೇಕಿತ್ತಲ್ಲವೇ? ಏಕೆಂದರೆ ಪರಮಾತ್ಮನಲ್ಲಿ ಪ್ರತಿಯೊಂದು ಶಬ್ದಗಳ ಸಮನ್ವಯವನ್ನು ಮಾಡುವಾಗ ಬರುವಂತಹ ಬಾಧಕಗಳನ್ನು ಪರಿಹರಿಸಲಾಗಿದೆ. ಆದ್ದರಿಂದ ಅಧ್ಯಾಯದ ಕೊನೆಯಲ್ಲಿ ಇದನ್ನು ಹೇಳುವುದು ಹೆಚ್ಚು ಸ್ವರಸವಾಗುತ್ತಿತ್ತು ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಆದರೆ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಸೂತ್ರದಲ್ಲಿ 'ಏತೇನ' ಎಂಬುದರಿಂದ ಹಿಂದೆ ಹೇಳಲ್ಪಟ್ಟ ಸಮಸ್ತ ಹೇತುಗಳನ್ನು ಪರಾಮರ್ಶಿಸುವುದರ ಜೊತೆಗೆ ಬಾಧಕೋದ್ಧಾರ ಪ್ರಕಾರವನ್ನೂ ಕೂಡ ಪರಾಮರ್ಶಿಸಲಾಗಿದೆ. ಒಂದುವೇಳೆ ಈ ಸಮಾಕರ್ಷಾಧಿಕರಣವನ್ನು ಅಧ್ಯಾಯದ ಕೊನೆಯಲ್ಲಿ ಹೇಳಿದ್ದರೆ 'ಏತೇನ' ಎಂಬ ಪದದಿಂದ ಈ ಬಾಧಕೋದ್ಧಾರ ಪ್ರಕಾರವನ್ನು ಪರಾಮರ್ಶಿಸಲು ಸಾಧ್ಯವಾಗುತ್ತಿರಲಿಲ್ಲ. ಅಷ್ಟೇ ಅಲ್ಲದೇ 'ಆತ್ಮನಃ ಆಕಾಶ ಸಂಭೂತಃ' ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಆಕಾಶಾದಿಶಬ್ದಗಳು ಬ್ರಹ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುವುದಾದರೆ, ಭೂತಾಕಾಶಾದಿಗಳ ಉತ್ಪತ್ತಿಯೇ ಸಿದ್ಧವಾಗದಿರಬೇಕಾದೀತು ಎಂಬ ಪ್ರಬಲ ಬಾಧಕವು ಪ್ರಾಪ್ತವಾಗಿದೆ. ಅದನ್ನು ಪರಿಹರಿಸುವ ಜವಾಬ್ದಾರಿ ಈ ಸಮಾಕರ್ಷಾಧಿಕರಣಕ್ಕೆ ಇದ್ದಾಗ ಅಧ್ಯಾಯದ ಕೊನೆಯಲ್ಲಿ ಇದು ಅಸಂಗತವೇ ಆಗುತ್ತದೆ.

---

ಶಾಂಕರಭಾಷ್ಯದಲ್ಲಿ ಅಧಿಕರಣಶರೀರ

## तात्पर्यचन्द्रिका

**अन्ये तु ''असद्वा इदमग्र आसीत्'' इत्यत्रासत्कारणत्वेनोच्यत इति प्राप्ते**

ಅನುವಾದ – ಶಾಂಕರಭಾಷ್ಯದ ಅಧಿಕರಣ ಶರೀರ ಹೀಗಿದೆ - 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಅಸತ್‌ಪದಾರ್ಥವು ಜಗತ್ತಿಗೆ ಕಾರಣವಾಗಿವೆ ಎಂದು ಹೇಳಲಾಗಿದೆ. ಆದ್ದರಿಂದ 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅಸತ್ ಪದಾರ್ಥವು ಜಗತ್ತಿಗೆ ಕಾರಣವೆಂದು ಹೇಳಬಾರದು. ಇಷ್ಟು ಪೂರ್ವಪಕ್ಷ.

**''अस्ति ब्रह्मेति चेद्वेद'' इति पूर्वप्रकृतं ब्रह्मैव ''असद्वा'' इत्यत्र समाकृष्यत इति ''समाकर्षात्'' इति सूत्रार्थः । इदं च सूत्रं ''कारणत्वेन'' इत्यधिकरणशेष इत्याहुः ।**

'ಅಸ್ತಿ ಬ್ರಹ್ಮೇತಿ ಚೇದ್ವೇದ' ಎಂಬುದಾಗಿ ಹಿಂದೆ ಬ್ರಹ್ಮನೇ ಪ್ರಕೃತನಾಗಿದ್ದಾನೆ. ಅಂತಹ ಬ್ರಹ್ಮನನ್ನು 'ಅಸದ್ವಾ ಇದಮಗ್ರ ಆಸೀತ್' ಎಂಬಲ್ಲಿಯೂ ಸಮಾಕರ್ಷ ಮಾಡಬೇಕು. ಇದನ್ನು 'ಸಮಾಕರ್ಷಾತ್' ಎಂಬ ಸೂತ್ರವು ನಿರೂಪಣೆ ಮಾಡುತ್ತಿದೆ. ಆದ್ದರಿಂದ 'ಸತ್' ಶಬ್ದದಿಂದ ಯಾವ ಬ್ರಹ್ಮನು ಪ್ರತಿಪಾದ್ಯನೋ, ಅಂತಹ ಬ್ರಹ್ಮನೇ ಅಸತ್‌ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಕಾರಣವಾಕ್ಯಗಳಲ್ಲಿ ಪರಸ್ಪರ ವಿರೋಧ ಬರಲು ಸಾಧ್ಯವಿಲ್ಲ. ಇಷ್ಟು ಸಿದ್ಧಾಂತ.

'ಸಮಾಕರ್ಷಾತ್' ಎಂಬ ಈ ಸೂತ್ರವನ್ನು ಹಿಂದಿನ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಅಧಿಕರಣದಲ್ಲಿಯೇ ಸೇರಿಸಬೇಕು. ಇಷ್ಟು ಅದ್ವೈತಿಗಳ ಸಿದ್ಧಾಂತ.

**तत्र । तथात्वेऽस्य सूत्रस्य ब्रह्मण्यसच्छब्दसमन्वयसाधकत्वेन समन्वयपरत्रिपाद्यामेव सङ्गतत्वेन प्रधानशाब्दत्वनिरासके चतुर्थपादे, विगाननिरासके ''कारणत्वेन'' इत्यधिकरणे चासङ्गतेः ।**

ಈ ಅಧಿಕರಣಶರೀರವು ಅಸಾಧುವಾಗಿದೆ. ಹೀಗೆ ಸಿದ್ಧಾಂತ ಸ್ಥಾಪನೆ ಮಾಡುವುದಾದರೆ 'ಸಮಾಕರ್ಷಾತ್' ಎಂಬ ಸೂತ್ರವು ಬ್ರಹ್ಮನಲ್ಲಿ 'ಅಸತ್' ಎಂಬ ಶಬ್ದವನ್ನು ಸಮನ್ವಯ ಮಾಡುತ್ತಿದೆ ಎಂದು ಹೇಳಿದಂತಾಗುತ್ತದೆ. ಆದರೆ ನಾಲ್ಕನೆಯ ಈ ಪಾದದಲ್ಲಿ ಪ್ರಧಾನವು ಶಬ್ದಪ್ರತಿಪಾದ್ಯವಲ್ಲ ಎಂದಷ್ಟೇ ಸಮರ್ಥನೆ ಮಾಡಲು ಹೊರಟಿದೆ ಎಂದು ನೀವು ಹೇಳುತ್ತೀರಿ. ಆದ್ದರಿಂದ ಈ ಸೂತ್ರವು ಸಮನ್ವಯವನ್ನು ಮಾಡಲು ಹೊರಟಿರುವ ಹಿಂದಿನ ಮೂರು ಪಾದಗಳಲ್ಲಿ ಸೇರಬೇಕು ಹೊರತು, ಈ ಪಾದದಲ್ಲಿ ಸಂಗತವಾಗುವುದಿಲ್ಲ. ಅಷ್ಟೇ ಅಲ್ಲದೇ ಈ ಅಧಿಕರಣದಲ್ಲಿಯೂ ಕೂಡ ಸಂಗತವಾಗುವುದಿಲ್ಲ. ಏಕೆಂದರೆ ಕಾರಣವಾಕ್ಯಗಳಲ್ಲಿರುವ ಪರಸ್ಪರ ವಿರೋಧವನ್ನು ಪರಿಹರಿಸಲು ಈ ಅಧಿಕರಣ ಹೊರಟಿರುತ್ತದೆ. ಈಗ 'ಅಸತ್' ಎಂಬ ಶಬ್ದಸಮನ್ವಯವನ್ನು ನೀವು ಮಾಡಿದರೆ ಅಧಿಕರಣದಿಂದಲೂ ಅಸಂಗತವಾಗುತ್ತದೆ.

**असद्वाक्यस्य ''सदेव सौम्य'' इति वाक्येन विगानमपि समाकर्षसूत्रेऽर्थान्निरस्तं चेत्**

'ಅಸತ್' ಎಂಬ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವುದರಿಂದ 'ಸದೇವ ಸೌಮ್ಯ' ಎಂಬ ವಾಕ್ಯದಿಂದ ವಿರೋಧವನ್ನೂ ಕೂಡ ಪರಿಹರಿಸಿದಂತಾಗುತ್ತದೆ. ಅರ್ಥಾತ್ ಸಿದ್ಧವಾದ ಕಾರಣವಾಕ್ಯದ ವಿರೋಧದ ದೃಷ್ಟಿಯಿಂದ ಅಧಿಕರಣ ಸಂಗತಿಯನ್ನು ಹೇಳಬಹುದಲ್ಲವೇ?

**तर्हि ''आकाशादेव समुत्पद्यन्ते'' इत्यादिवाक्यानां ''यतो वा इमानि'' इत्यादि वाक्यैर्विगानमपि ''आकाशस्तल्लिङ्गात्'' इत्यादिसूत्रेष्वर्थान्निरस्तमिति तेषामपि समन्वयपरत्वं न स्यात् ।**

ಈ ಶಂಕೆಯೂ ಕೂಡ ಅಸಾಧುವಾಗಿದೆ. ಒಂದು ವೇಳೆ ಸಮನ್ವಯವು ಮುಖ್ಯಉದ್ದೇಶವಾಗಿ ಕಾರಣವಾಕ್ಯದ ವಿಧಾನವು ಅರ್ಥಾತ್ ಸಿದ್ಧವಾಗುತ್ತದೆಂದು ಹೇಳುವುದಾದರೆ, ಪ್ರಥಮಪಾದದಲ್ಲಿರುವ ಆಕಾಶಾಧಿಕರಣದಲ್ಲಿಯೂ ಆಕಾಶಶಬ್ದದ ಸಮನ್ವಯವು ಸಿದ್ಧವಾಗದಿರಬೇಕಾದೀತು. ಅಲ್ಲಿಯೂ ಕೂಡ 'ಆಕಾಶಾದೇವ ಸಮುತ್ಪದ್ಯಂತೇ' ಇತ್ಯಾದಿ ವಾಕ್ಯಗಳಿಗೆ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ವಾಕ್ಯಗಳಿಂದ ವಿರೋಧವನ್ನು ಅರ್ಥಾತ್ ಪರಿಹರಿಸಲಾಗಿದೆ. ಆದ್ದರಿಂದ ಪ್ರಥಮಪಾದದ ಆ ಅಧಿಕರಣವೂ ಕೂಡ ಸಮನ್ವಯಪರವಾಗದಿರಬೇಕಾದೀತು. ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ.

**प्रकाशः –**

**अन्ये त्विति ।।** ''आत्मन आकाशस्सम्भूतः तत्तेजोऽसृजत'' इति कार्ये तथा ''असद्वा इदमग्र आसीत्, सदेव सौम्येदमग्र आसीत्'' इति कारणेऽपि विगानमाशङ्क्य पूर्वसूत्रे कार्यविगानं परिहृतमिह तु कारणविगानं निरस्यत इत्युक्तम् ।

ವಿವರಣೆ - ಸ್ವಸಿದ್ಧಾಂತವನ್ನು ಸ್ಥಾಪನೆ ಮಾಡಿ, ಅದ್ವೈತಸಿದ್ಧಾಂತವನ್ನು ನಿರಾಕರಿಸಲು 'ಅನ್ಯೇತು' ಇತ್ಯಾದಿ ಗ್ರಂಥವು ಹೊರಟಿದೆ. 'ಆತ್ಮನ ಆಕಾಶಃ ಸಂಭೂತಃ ತತ್ತೇಜೋऽಸೃಜತ' ಇತ್ಯಾದಿ ಕಾರ್ಯವಾಕ್ಯಗಳಲ್ಲಿ ವಿರೋಧವು ಹೇಗೆ ಬರುತ್ತದೋ, ಅದರಂತೆ 'ಅಸದ್ವಾ ಇದಮಗ್ರ ಆಸೀತ್, ಸದೇವ ಸೌಮ್ಯೇದಮಗ್ರ ಆಸೀತ್' ಇವೇ ಮೊದಲಾದ ಕಾರಣವಾಕ್ಯಗಳಲ್ಲಿಯೂ ಕೂಡ ಪರಸ್ಪರ ವಿರೋಧವು ಬರುತ್ತದಲ್ಲವೇ? ಎಂದು ಆಶಂಕಿಸಲಾಗಿತ್ತು. ಹಿಂದಿನ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರದಲ್ಲಿ ಕಾರ್ಯವಾಕ್ಯಗಳಲ್ಲಿರುವ ಪರಸ್ಪರ ವಿರೋಧವನ್ನು ಪರಿಹರಿಸಿದ್ದಾಯಿತು. ಪ್ರಕೃತ ಈ ಸೂತ್ರದಲ್ಲಿ ಕಾರಣವಾಕ್ಯಗಳಲ್ಲಿರುವ ವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ 'ಕಾರಣತ್ವೇನ ಚ ಆಕಾಶಾದಿಷು' ಮತ್ತು 'ಸಮಾಕರ್ಷಾತ್' ಎಂಬೆರಡು ಸೂತ್ರಗಳು ಒಂದೇ ಅಧಿಕರಣವೆಂಬುದು ಅದ್ವೈತಿಗಳ ಅಭಿಪ್ರಾಯ.

**प्रकाशः – तत्र** व्यावर्त्यपूर्वं सूत्रार्थमनुवदति – **असद्वा इति ।। विगानेति ।।** सृष्टिवाक्यविरोधनिरासक इत्यर्थः ।।

ಸೂತ್ರಾರ್ಥದಿಂದ ವ್ಯಾವರ್ತ್ಯವಾಗುವ ಪೂರ್ವಪಕ್ಷವನ್ನು ಅನುವಾದ ಮಾಡುತ್ತಿದ್ದಾರೆ 'ಅಸದ್ವಾ' ಇತ್ಯಾದಿ ಗ್ರಂಥದಿಂದ. 'ವಿಗಾನನಿರಾಸಕೇ' ಎಂದರೆ ಸೃಷ್ಟಿವಾಕ್ಯಗಳಲ್ಲಿರುವ ವಿರೋಧವನ್ನು ಪರಿಹರಿಸುವ ಎಂದರ್ಥ.

**प्रकाशः – अर्थादिति ।।** आकाशशब्दस्य ब्रह्मपरत्वे 'यतो वा' इत्यस्यानेन विरोधनिरासादिति भावः ।

ಆಕಾಶಶಬ್ದವು ಬ್ರಹ್ಮಪರವಾದಾಗ 'ಯತೋ ವಾ' ಎಂಬ ವಾಕ್ಯದಿಂದ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ವಾಕ್ಯಕ್ಕೆ ವಿರೋಧವು ಪರಿಹಾರವಾಗುತ್ತದೆ. ಅರ್ಥಾತ್ ಸಿದ್ಧವಾಗುವ ವಿರೋಧದ ದೃಷ್ಟಿಯಿಂದ ಪ್ರಥಮಪಾದದಲ್ಲಿ ಇರುವ ಆಕಾಶಾಧಿಕರಣವು ಬ್ರಹ್ಮನಲ್ಲಿ 'ಆಕಾಶ' ಎಂಬ ಶಬ್ದವನ್ನು ಸಮನ್ವಯ ಮಾಡದಿರಬೇಕಾದೀತು.

**प्रकाशः – उपलक्षणमेतत् । पूर्वोक्तदिशा समाकर्षपदास्वारस्याद्यपि ध्येयम् ।**

ಉಪಲಕ್ಷಣಯಾ ಹಿಂದೆ ಹೇಳಿದಂತೆ ಸಮಾಕರ್ಷ ಪಡೆದ ಸ್ವಾರಸ್ಯವು ಅದ್ವೈತಸಿದ್ಧಾಂತದಲ್ಲಿರುತ್ತದೆಂಬುದನ್ನು ಸ್ವತಃ ತಿಳಿದುಕೊಳ್ಳಬೇಕು.




ಇಲ್ಲಿಯ ತನಕ ಪ್ರಧಾನವು ಶಬ್ದಪ್ರತಿಪಾದ್ಯವಲ್ಲ ಎಂಬುದನ್ನು ಸಮರ್ಥಿಸಿ ಪ್ರಕೃತ ಶ್ರುತಿಗಳಲ್ಲಿ ತೋರುವ ಕಾರಣವಾಕ್ಯಗಳ ವಿರೋಧವನ್ನು ಪರಿಹರಿಸಲಾಗುತ್ತಿದೆ. 'ಆತ್ಮನಃ ಆಕಾಶಃ ಸಂಭೂತಃ' ಎಂಬುದಾಗಿ ತೈತ್ತಿರೀಯಶ್ರುತಿಯು ಆತ್ಮನಿಂದ ಆಕಾಶವು ಮೊದಲು ಹುಟ್ಟಿತೆಂದು ಹೇಳಿದರೆ ಛಾಂದೋಗ್ಯೋಪನಿಷತ್ತು 'ತತ್ತೇಜೋಽಸೃಜತ' ಎಂಬುದಾಗಿ ತೇಜಸ್ಸೇ ಮೊದಲು ಹುಟ್ಟಿತು ಎಂದು ಹೇಳುತ್ತಿದೆ. ಹೀಗೆ ಕಾರ್ಯಗಳಲ್ಲಿ ಯಾವುದು ಮೊದಲು ಹುಟ್ಟಿತೆಂಬ ವಿಷಯದಲ್ಲಿ ವಿರೋಧವು ಬಂದರೆ ಹಿಂದಿನ 'ಕಾರಣತ್ವೇನ ಚ' ಎಂಬ ಸೂತ್ರವು ಅದನ್ನು ಪರಿಹರಿಸಿತು. ಪ್ರಕೃತ 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಅಸತ್ತಿನಿಂದ ಜಗತ್ತು ಹುಟ್ಟಿತೆಂದು ಹೇಳಿದರೆ 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯು ಸತ್‌ಪದಾರ್ಥದಿಂದ ಜಗತ್ತಿನ ಹುಟ್ಟುವಿಕೆಯನ್ನು ಹೇಳುತ್ತಿದೆ. ಹೀಗೆ ಕಾರಣವಾಕ್ಯಗಳಲ್ಲಿ ಬರುವ ಪರಸ್ಪರ ವಿರೋಧವನ್ನು 'ಸಮಾಕರ್ಷಾತ್' ಎಂಬ ಎರಡನೆಯ ಸೂತ್ರವು ಪರಿಹರಿಸುತ್ತಿದೆ. ಬ್ರಹ್ಮನೊಬ್ಬನೇ ಜಗತ್ತಿಗೆ ಸೃಷ್ಟಿಕರ್ತನಾಗಿದ್ದಾನೆ. 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿರುವ 'ಸತ್'ಶಬ್ದದಿಂದ ಯಾವ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ, ಅವನೇ 'ಅಸದ್ವಾ ಇದಮಗ್ರ' ಎಂಬ ಶ್ರುತಿಯಲ್ಲಿರುವ 'ಅಸತ್' ಪದದಿಂದಲೂ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಅಸ್ತಿ ಬ್ರಹ್ಮೇತಿ ಚೇದ್ವೇದ' ಎಂಬುದಾಗಿ ಹಿಂದೆ ಅಂತಹ ಬ್ರಹ್ಮನು ಪ್ರಕೃತನಾಗಿರುವುದರಿಂದ. ಆದ್ದರಿಂದ ಶ್ರುತಿವಾಕ್ಯಗಳಲ್ಲಿ ಪರಸ್ಪರ ವೈಮತ್ಯ ಬರಲು ಸಾಧ್ಯವಿಲ್ಲ. ಹೀಗೆ 'ಸಮಾಕರ್ಷಾತ್' ಎಂಬ ಸೂತ್ರವು 'ಕಾರಣತ್ವೇನ ಚ' ಎಂಬ ಹಿಂದಿನ ಸೂತ್ರಕ್ಕೆ ಗುಣಸೂತ್ರವೆನಿಸುತ್ತದೆ. ಇಷ್ಟು ಅದ್ವೈತಿಗಳ ಸಿದ್ಧಾಂತ.

ಹೀಗೆ ಅಧಿಕರಣವನ್ನು ಸ್ಥಾಪನೆ ಮಾಡುವುದಾದರೆ ಅಧ್ಯಾಯದಿಂದಾಗಲೀ, ಪಾದದಿಂದಾಗಲೀ, ಅಥವಾ ಅಧಿಕರಣದಿಂದಾಗಲೀ ಸಂಗತಿಯು ದೊರೆಯುವುದಿಲ್ಲ. ಏಕೆಂದರೆ ಶ್ರುತಿವಿರೋಧದ ಪರಿಹಾರಕ್ಕಾಗಿ ಎರಡನೆಯ ಅಧ್ಯಾಯವು ಹೊರಟಿರುವಾಗ ಈ ಪ್ರಥಮಪಾದದಲ್ಲಿ ಅದರ ಅವಶ್ಯಕತೆಯಿರುವುದಿಲ್ಲ. ಮತ್ತು ಈ ನಾಲ್ಕನೆಯ ಪಾದವು ಪ್ರಕೃತಿಗೆ ಶಾಬ್ದತ್ವವನ್ನು ನಿರಾಕರಣೆ ಮಾಡುತ್ತಿದೆ. ಹಿಂದಿನ ಮುಂದಿನ ಸೂತ್ರಗಳಲ್ಲೂ ಪ್ರಕೃತಿಗೆ ಶಾಬ್ದತ್ವವನ್ನು ನಿರಾಕರಣೆ ಮಾಡುತ್ತಿರುವಾಗ ಮಧ್ಯದ ಈ ಸೂತ್ರವು 'ಅಸತ್' ಎಂಬ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ

ಮಾಡಲು ಹೊರಟರೆ ಅಸಂಗತವಾಗುತ್ತದೆ. ಅಧಿಕರಣದಿಂದಲೂ ಕೂಡ ಸಂಗತಿಯಿರುವುದಿಲ್ಲ. ಈ ಅಧಿಕರಣವು ಕಾರಣವಾಕ್ಯಗಳಲ್ಲಿರುವ ಪರಸ್ಪರ ವಿರೋಧ ಪರಿಹಾರಕ್ಕಾಗಿ ಹೊರಟಿದೆ ಎಂದು ನೀವೇ ಹೇಳಿದ್ದೀರಿ. ಆದರೆ ಅಸತ್ ಶಬ್ದವನ್ನು ಸಮನ್ವಯ ಮಾಡುತ್ತಿದ್ದೀರಿ. ಹೀಗಿರುವಾಗ ಅಧಿಕರಣಸಂಗತಿಯನ್ನಾದರೂ ಹೇಗೆ ಹೇಳಲು ಸಾಧ್ಯ. ಆದ್ದರಿಂದ ಅದ್ವೈತಿಗಳ ಸಿದ್ಧಾಂತವು ಅತ್ಯಂತ ದುರ್ಬಲವಾಗಿದೆ.

### ಪರಮತದವರ 'ಜಗದ್ವಾಚಿತ್ವಾತ್' ಎಂಬ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**यच्चोक्तमुभाभ्यां ''यो वै बालाक एतेषां पुरुषाणां कर्ता यस्य चैतत्कर्म स वेदितव्यः'' इति कौषीतकिब्राह्मणे वेदितव्यत्वेनोक्तो जीवः स्यात् ।**

ಅನುವಾದ - ಶಂಕರರು ಹಾಗೂ ರಾಮಾನುಜರು ಇಬ್ಬರೂ ಕೂಡ 'ಜಗದ್ವಾಚಿತ್ವಾತ್' ಎಂಬಲ್ಲಿಂದ ಪ್ರಾರಂಭಿಸಿ, ಮೂರು ಸೂತ್ರಗಳನ್ನು ಒಂದು ಅಧಿಕರಣವೆಂದು ಪರಿಗಣನೆ ಮಾಡುತ್ತಾರೆ- 'ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ಚ ಏತತ್ಕರ್ಮ ಸ ವೇದಿತವ್ಯಃ' ಎಂಬುದಾಗಿ ಕೌಷೀತಕೀಬ್ರಾಹ್ಮಣದಲ್ಲಿ ವೇದಿತವ್ಯತ್ವೇನ ಹೇಳಲ್ಪಟ್ಟವನು ಯಾರು? ಎಂಬುದನ್ನು ಈ ಅಧಿಕರಣದಲ್ಲಿ ವಿಚಾರ ಮಾಡಲಾಗುತ್ತಿದೆ. ಜೀವನೋ, ಮುಖ್ಯಪ್ರಾಣನೋ ಅಥವಾ ಪರಮಾತ್ಮನೋ? ಎಂದು ಸಂದೇಹ.

**''यस्य चैतत्कर्म'' इति धर्माधर्माख्यजीवलिङ्गात्**

'ಯಸ್ಯ ಚ ಏತತ್ ಕರ್ಮ' ಎಂಬುದಾಗಿ ಧರ್ಮಾಧರ್ಮಗಳೆಂಬ ಜೀವನ ಅಸಾಧಾರಣ-ಲಿಂಗಗಳನ್ನು ಶ್ರುತಿಯು ಹೇಳುತ್ತಿರುವುದರಿಂದ, ಈ ಶ್ರುತಿಯಲ್ಲಿ ವೇದಿತವ್ಯತ್ವೇನ ಪ್ರತಿಪಾದ್ಯನಾದವನು ಜೀವನೇ ಆಗಿರುತ್ತಾನೆ ಎಂಬುದು ಮೊದಲನೆಯ ಪೂರ್ವಪಕ್ಷ.

**मुख्यप्राणो वा । उत्तरवाक्ये ''प्राण एवैकधा भवति'' इति प्राणशब्दादेरिति प्राप्ते;**

ಅಥವಾ ಮುಖ್ಯಪ್ರಾಣನೂ ಕೂಡ ಈ ಶ್ರುತಿಯಲ್ಲಿ ವೇದಿತವ್ಯತ್ವೇನ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ ಇದೇ ವಾಕ್ಯದ ಮುಂದೆ 'ಪ್ರಾಣ ಏವೈಕಧಾ ಭವತಿ' ಎಂಬುದಾಗಿ ಮುಖ್ಯಪ್ರಾಣನಲ್ಲಿ ಅಸಾಧಾರಣವಾದ ಪ್ರಾಣಶಬ್ದವು ಶ್ರುತವಾಗುತ್ತಿದೆ. ಇದು ಎರಡನೆಯ ಪೂರ್ವಪಕ್ಷ.

**''एतत्कर्म'' इत्यत्रैतच्छब्दस्य प्रत्यक्षादिसिद्धजगद्वाचित्वात् कर्मशब्दस्य च क्रियत इति व्युत्पत्त्या क्रियमाणवाचित्वाज्जगत्कर्तृत्वस्य च जीवादावयोगात्**

**ब्रह्मैवेति सिद्धान्त इति ।**

ವೇದಿತವ್ಯತ್ವೇನ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿರುತ್ತಾನೆಂದು ಸಿದ್ಧಾಂತ. ಏಕೆಂದರೆ 'ಏತತ್ ಕರ್ಮ' ಎಂಬಲ್ಲಿರುವ 'ಏತತ್' ಎಂಬ ಶಬ್ದವು ಪ್ರತ್ಯಕ್ಷಾದಿಸಿದ್ಧವಾದ ಜಗತ್ತನ್ನು ಪ್ರತಿಪಾದನೆ ಮಾಡುತ್ತಿದೆ ಹೊರತು, ಜೀವನನ್ನಲ್ಲ. ಕರ್ಮಶಬ್ದವೂ ಕೂಡ 'ಕ್ರಿಯತೇ ಅನೇನ ಇತಿ ಕರ್ಮ' ಎಂಬ ವ್ಯುತ್ಪತ್ತಿಯಿಂದ ಯಾವನಿಂದ ಸೃಜ್ಯವಾದ ಜಗತ್ತು ಹೇಳಲ್ಪಟ್ಟಿದೆಯೋ, ಅವನು ಕರ್ಮ ಎನಿಸಿಕೊಳ್ಳುತ್ತಾನೆ. ಆದ್ದರಿಂದ ಕರ್ಮಶಬ್ದದಿಂದ ಜಗತ್‌ಕರ್ತೃವಾದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಜೀವನಲ್ಲ. ಇಷ್ಟು ಸಿದ್ಧಾಂತ.

**तन्न । अतीतपादत्रये समन्वयमेतत्पादीयानुमानिकाद्यधिकरणत्रये च प्रधानस्याशाब्दत्वं ''कारणत्वेन'' इत्यधिकरणे श्रुतीनामविगानं चोक्त्वा पुनरिह समन्वयोक्तेरसङ्गतत्वात् ।**

ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಹಿಂದಿನ ಮೂರು ಪಾದಗಳಲ್ಲಿ ಅನೇಕ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದಿರಿ. ಇದೇ ಪಾದದ ಹಿಂದಿನ ಮೂರು ಅಧಿಕರಣಗಳಲ್ಲಿ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡಿರುವಿರಿ. ಅನಂತರ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಅಧಿಕರಣದಲ್ಲಿ ಶ್ರುತಿಗಳಿಗೆ ಪರಸ್ಪರವಿರೋಧವನ್ನು ಪರಿಹರಿಸಿದಿರಿ. ಪುನಃ 'ಜಗದ್ವಾಚಿತ್ವಾತ್' ಮೊದಲಾದ ಅಧಿಕರಣದಲ್ಲಿ ಸಮನ್ವಯವನ್ನು ಸಾಧಿಸುತ್ತಿದ್ದೀರಿ. ಇವೆಲ್ಲವೂ ಪರಸ್ಪರ ಅಸಂಗತವಾಗಿವೆ.

**अस्माकं रीत्या ''समाकर्षात्'' इत्यत्रान्वितानां शब्दानामेवात्रापि सूत्रेऽन्वयसम्भवे एतच्छब्दस्येत्यध्याहारायोगाच ।**

ಆದ್ದರಿಂದ ನಾವು ಹೇಳುವಂತೆ 'ಸಮಾಕರ್ಷಾತ್' ಎಂಬ ಸೂತ್ರದಿಂದ ಅನ್ವಿತವಾದ ಸಕಲಶಬ್ದಗಳನ್ನು ಈ ಸೂತ್ರದಲ್ಲಿಯೂ ಅನ್ವಯ ಮಾಡಿಕೊಳ್ಳಲು ಬರುತ್ತಿರುವಾಗ 'ಏತತ್' ಎಂಬ ಶಬ್ದವನ್ನು ಅಧ್ಯಾಹಾರ ಮಾಡುವುದು ಅಯುಕ್ತವಾಗುತ್ತದೆ.

**यच्चोक्तमुभाभ्यां इह जीवोक्तिर्ब्रह्मप्रतिपत्त्यर्थेति ''अन्यार्थं तु जैमिनिः'' इति सूत्रार्थः । ''जगद्वाचित्वात्'' इत्यारभ्यैतदन्तं सूत्रत्रयमेकमधिकरणमिति । तन्न । ''यस्य चैतत्कर्म'' इत्यत्र सिद्धान्ते जीवोक्तेरभावेन तस्यान्यार्थत्वोक्त्ययोगात् । मतान्तरस्याभावेन जैमिनिपदवैयर्थ्याच्च । आश्मरथ्यौडुलोमिकाशकृत्स्नमतानां**

**विकल्पप्रतीतेर्मतचतुष्टयप्रतिपादकसूत्राणां वैश्वानराधिकरणस्थानां ''अभिव्यक्तेः'' इत्यादिसूत्राणामिवैकाधिकरणत्वस्यैव न्याय्यत्वाच्च ।**

ಒಂದಿಬ್ಬರು ಹೀಗನ್ನುತ್ತಾರೆ - ವೇದದ ಕೆಲವೆಡೆ ಜೀವನ ಬಗ್ಗೆ ಹೇಳಿರುವುದುಂಟು. ಅದೆಲ್ಲವೂ ಬ್ರಹ್ಮನ ಜ್ಞಾನಕ್ಕಾಗಿ. ಹೀಗೆ 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರ ಹೇಳುತ್ತಿದೆ. 'ಜಗದ್ವಾಚಿತ್ವಾತ್' ಎಂಬ ಸೂತ್ರದಿಂದ ಪ್ರಾರಂಭಿಸಿ 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರದ ತನಕ ಒಟ್ಟು ಮೂರು ಸೂತ್ರಗಳು ಪ್ರತ್ಯೇಕ ಅಧಿಕರಣವೆಂಬುದು ಇವರ ವಾದ. ಇದು ತಪ್ಪು. 'ಯಸ್ಯ ಚ ಏತತ್ ಕರ್ಮ' ಎಂಬ ಶ್ರುತಿಯಲ್ಲಿ ಜೀವನ ಬಗ್ಗೆ ಪ್ರಸಕ್ತಿಯೇ ಇರುವುದಿಲ್ಲ. ಸಿದ್ಧಾಂತದಲ್ಲಿಯೂ ಕೂಡ ಹಾಗೇ ನೀವೂ ಹೇಳಿದ್ದೀರಿ. ಹೀಗಿರುವಾಗ ಜೀವದ ಬಗ್ಗೆ ಹೇಳಿರುವುದು ಬ್ರಹ್ಮಜ್ಞಾನಕ್ಕೋಸ್ಕರ ಎಂಬ ಮಾತೇ ತಪ್ಪಾಗುತ್ತದೆ. ಮತ್ತು ಜೈಮಿನಿಪದವನ್ನು ಸೂತ್ರದಲ್ಲಿ ಉಲ್ಲೇಖ ಮಾಡಿದ್ದೂ ಕೂಡ ವ್ಯರ್ಥ. ಒಂದು ವೇಳೆ ಮತ್ತೊಂದು ಪಕ್ಷವು ಪ್ರಸಕ್ತವಾಗಿದ್ದರೆ ಜೈಮಿನಿ ಪದವು ಸಾರ್ಥಕವಾಗುತ್ತಿತ್ತು.

ಮತ್ತು ಆಶ್ಮರಥ್ಯ, ಔಡುಲೋಮಿ, ಕಾಶಕೃತ್ಸ್ನ ಈ ಮೂವರ ಅಭಿಪ್ರಾಯದಲ್ಲಿ ವ್ಯತ್ಯಾಸವಿದೆ. ಹೇಗೆ ವೈಶ್ವಾನರಾಧಿಕರಣದಲ್ಲಿರುವ 'ಅಭಿವ್ಯಕ್ತೇಃ' ಇತ್ಯಾದಿ ನಾಲ್ಕು ಸೂತ್ರಗಳು ಅಭಿಪ್ರಾಯವನ್ನು ಪ್ರತಿಪಾದನೆ ಮಾಡುವ ಸೂತ್ರಗಳು ಒಂದೇ ಅಧಿಕರಣದಲ್ಲಿ ಸೇರಿವೆಯೋ, ಅದರಂತೆ ಇಲ್ಲಿಯೂ ಬೇರೆ ಬೇರೆ ಋಷಿಗಳ ಅಭಿಪ್ರಾಯವನ್ನು ಸಂಗ್ರಹಿಸುವ ಎಲ್ಲಾ ಸೂತ್ರಗಳು ಒಂದೇ ಅಧಿಕರಣದಲ್ಲಿಯೇ ಸೇರಬೇಕು.

**प्रकाशः —**

परमतद्वये ''जगद्वाचित्वात्'' इत्यारभ्य त्रिसूत्रि एकमधिकरणम् । वाक्यान्वयात्'' इत्यादि चतुस्सूत्रि अधिकरणान्तरम् । तत्राद्यमनुवदति – **यच्चेति**।।

ವಿವರಣೆ - ಅದ್ವೈತಸಿದ್ಧಾಂತದಲ್ಲಿ ಮತ್ತು ವಿಶಿಷ್ಟಾದ್ವೈತಸಿದ್ಧಾಂತದಲ್ಲಿ 'ಜಗದ್ವಾಚಿತ್ವಾತ್' ಎಂಬಲ್ಲಿಂದ ಪ್ರಾರಂಭಮಾಡಿ ಮೂರು ಸೂತ್ರಗಳನ್ನು ಒಂದು ಅಧಿಕರಣವೆಂದು ವಿಂಗಡಣೆ ಮಾಡಿದ್ದಾರೆ. 'ವಾಕ್ಯಾನ್ವಯಾತ್' ಎಂಬಲ್ಲಿಂದ ಪ್ರಾರಂಭಿಸಿ ನಾಲ್ಕು ಸೂತ್ರಗಳನ್ನು ಮತ್ತೊಂದು ಅಧಿಕರಣವೆಂದು ಪರಿಗಣನೆ ಮಾಡಿದ್ದಾರೆ. ಇವೆರಡರಲ್ಲಿ ಮೊದಲನೆಯ ಅಧಿಕರಣವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ.

**प्रकाशः –** कौषीतकिब्राह्मणाख्योपनिषदि चतुर्थेऽध्याये 'अजातशत्रु' 'बालाकि' संवादे श्रूयते ''सहोवाच यो वै बालाक'' इत्यादि । अत्र वेदितव्यत्वेनोक्तो जीवः प्राणो वा परमात्मा वेति संशये पूर्वपक्षमनुवदति – **जीवः स्यादिति** ।।

ಕೌಷೀತಕಿಬ್ರಾಹ್ಮಣ ಎಂಬ ಉಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ 'ಅಜಾತಶತ್ರು' ಹಾಗೂ 'ಬಾಲಾಕಿ' ಎಂಬ ಈರ್ವ ಋಷಿಕುಮಾರರ ನಡುವೆ ಸಂವಾದವು ಜರುಗುತ್ತದೆ. ಆ ಸಂದರ್ಭದಲ್ಲಿ 'ಸ ಹೋವಾಚ ಯೋ ವೈ ಬಾಲಾಕ' ಇತ್ಯಾದಿ ವಾಕ್ಯವು ಶ್ರುತವಾಗಿದೆ. ಈ ವಾಕ್ಯದಲ್ಲಿ ವೇದಿತವ್ಯತ್ವೇನ ಪ್ರತಿಪಾದ್ಯನಾದವನು ಜೀವನೋ, ಮುಖ್ಯಪ್ರಾಣನೋ, ಅಥವಾ ಪರಮಾತ್ಮನೋ ? ಎಂಬುದು ಸಂದೇಹ. ಪೂರ್ವಪಕ್ಷವನ್ನು ಮೊದಲು ಅನುವಾದ ಮಾಡುತ್ತಿದ್ದಾರೆ 'ಜೀವಃ ಸ್ಯಾತ್' ಇತ್ಯಾದಿ ವಾಕ್ಯದಿಂದ.

**प्रकाशः – धर्मेति ।।** कर्मशब्दस्य रूढ्या पुण्यपापवाचित्वादिति भावः ।।

'ಏತತ್ ಕರ್ಮ' ಎಂಬಲ್ಲಿರುವ 'ಕರ್ಮ' ಎಂಬ ಶಬ್ದವು ರೂಢಿಯಿಂದ ಪುಣ್ಯ ಹಾಗೂ ಪಾಪಗಳನ್ನು ಪ್ರತಿಪಾದನೆ ಮಾಡುತ್ತದೆ. ಇಂತಹ ಪುಣ್ಯ, ಪಾಪಗಳನ್ನು ಪ್ರತಿಪಾದಿಸುವ ಕರ್ಮಶಬ್ದವು ಜೀವನನ್ನು ಪ್ರತಿಪಾದನೆ ಮಾಡಬೇಕೆಂಬುದು ಪೂರ್ವಪಕ್ಷದ ಅಭಿಪ್ರಾಯ.

**प्रकाशः – मुख्यप्राणो वेति ।।** यद्यपि रामानुजभाष्ये जीव इत्येव पूर्वपक्षः कृतः श्रुतप्रकाशे च ''वेदितव्यतया निर्दिष्टस्य प्राणानामभिरामं प्राणश्रवणादिना मुख्यप्राणवैलक्षण्यादिशिरस्को विचार उपपन्नः । प्राणशब्दश्च प्राणभृत्त्वनिमित्तको जीवे लाक्षणिकः । सूत्रे मुख्यप्राणलिङ्गशङ्का तु जीवोपलक्षणावगमरूपजीव-साधकोक्त्यर्था । प्राणस्य जीवोपकरणत्वात्'' इत्युक्तम् ।

ಪ್ರಶ್ನೆ - ಮುಖ್ಯಪ್ರಾಣನನ್ನೂ ಕೂಡ ವೇದಿತವ್ಯತ್ವೇನ ಹೇಳಬಹುದೆಂದು ಪೂರ್ವಪಕ್ಷವನ್ನು ಗ್ರಂಥಕಾರರು ತೋರಿಸಿದ್ದಾರೆ. ಆದರೆ ವಾಸ್ತವಿಕವಾಗಿ ರಾಮಾನುಜಭಾಷ್ಯದಲ್ಲಿ ಜೀವನನ್ನಷ್ಟೇ ಪೂರ್ವಪಕ್ಷದಲ್ಲಿ ಹೇಳಲಾಗಿದೆ. ಶ್ರುತಪ್ರಕಾಶದಲ್ಲಿಯೂ ಕೂಡ ಹೀಗೆ ಹೇಳಿದ್ದಾರೆ - 'ವೇದಿತವ್ಯತಯಾ ನಿರ್ದಿಷ್ಟಸ್ಯ ಪ್ರಾಣಾನಾಮಭಿರಾಮಂ ಪ್ರಾಣಶ್ರವಣಾದಿನಾ ಮುಖ್ಯಪ್ರಾಣವೈಲಕ್ಷಣ್ಯಾದಿಶಿರಸ್ಕೋ ವಿಚಾರ ಉಪಪನ್ನಃ । ಪ್ರಾಣಶಬ್ದಶ್ಚ ಪ್ರಾಣಭೃತ್ತ್ವನಿಮಿತ್ತಕೋ ಜೀವೇ ಲಾಕ್ಷಣಿಕಃ । ಸೂತ್ರೇ ಮುಖ್ಯಪ್ರಾಣಲಿಂಗಶಂಕಾ ತು ಜೀವೋಪಲಕ್ಷಣಾವ-ಗಮರೂಪಜೀವಸಾಧಕೋಕ್ತ್ಯರ್ಥಾ । ಪ್ರಾಣಸ್ಯ ಜೀವೋಪಕರಣತ್ವಾತ್' ವೇದಿತವ್ಯತ್ವೇನ ನಿರ್ದಿಷ್ಟನಾದವನು ಜೀವನೇ ಹೊರತು, ಮುಖ್ಯಪ್ರಾಣನಲ್ಲ. ಮುಖ್ಯಪ್ರಾಣನಿಗಿಂತಲೂ ಜೀವನು ವಿಲಕ್ಷಣನಾಗಿದ್ದಾನೆಂಬ ವಿಚಾರವೇ ಪ್ರಸಕ್ತವಾಗುತ್ತಿದೆ. ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೆ ಪ್ರಾಣವನ್ನು ಧರಿಸಿದ ಜೀವನಲ್ಲಿ ಲಕ್ಷಣಾವೃತ್ತಿಯನ್ನು ಮಾಡಬೇಕು. ಸೂತ್ರದಲ್ಲಿ ಮುಖ್ಯಪ್ರಾಣನ ಲಿಂಗವನ್ನು ಹೇಳಿದ್ದಾರಲ್ಲವೇ? ಎಂಬ ಶಂಕೆಯು ಪ್ರಾಪ್ತವಾಗಬಹುದು. ಆದರೆ ಜೀವನನ್ನು ಮುಖ್ಯಪ್ರಾಣಶಬ್ದದಿಂದ ಉಪಲಕ್ಷಣಯಾ ವಿವಕ್ಷಿಸಬೇಕೆಂದು ತಿಳಿಸಲು ಹಾಗೇ ಹೇಳಿದ್ದಾರೆ. ಏಕೆಂದರೆ ಜೀವನಿಗೆ ಪ್ರಾಣವಾಯುವೂ ಕೂಡ ಒಂದು ಉಪಕರಣವಾಗಿದೆ. ಇಷ್ಟು ಶ್ರುತಪ್ರಕಾಶದಲ್ಲಿ ಹೇಳಿದ ವಿಚಾರ. ಆದ್ದರಿಂದ ರಾಮಾನುಜಭಾಷ್ಯಕ್ಕೆ ವಿರುದ್ಧವಾಗಿ ಗ್ರಂಥಕಾರರು ಮುಖ್ಯಪ್ರಾಣನನ್ನು ಪೂರ್ವಪಕ್ಷಕೋಟಿಯಲ್ಲಿ ಏಕೆ ಸೇರಿಸಿದ್ದಾರೆ?

**प्रकाशः – तथापि परमते नेदं ध्येयम् ।**

ಉತ್ತರ - ರಾಮಾನುಜ ಸಿದ್ಧಾಂತದಲ್ಲಿ ಮುಖ್ಯಪ್ರಾಣಕೋಟಿಯ ಪೂರ್ವಪಕ್ಷವನ್ನು ತೋರಿಸಿರುವುದಿಲ್ಲ. ಗ್ರಂಥಕಾರರೂ ಕೂಡ ಅದನ್ನು ಅನುವಾದ ಮಾಡಿಲ್ಲ. ಕೇವಲ ಅದ್ವೈತಿಗಳ ಸಿದ್ಧಾಂತವನ್ನಷ್ಟೇ 'ಮುಖ್ಯಪ್ರಾಣೋ ವಾ' ಎಂಬ ಸಂಶಯಕೋಟಿಯಿಂದ ತೋರಿಸಿದ್ದಾರೆಂದು ತಿಳಿಯಬೇಕು.

**प्रकाशः** – यद्वा एतन्मते द्वितीयसूत्रास्वारस्यापत्त्या मुख्यप्राणपूर्वपक्षस्यावश्यमुपपादनीयत्वाभिप्रायेणैवमुक्तमिति ध्येयम् ।

ಅಥವಾ ಅದ್ವೈತಿಗಳು ಹೇಗೆ ಮುಖ್ಯಪ್ರಾಣಕೋಟಿಯುಳ್ಳ ಪೂರ್ವಪಕ್ಷವನ್ನು ತೋರಿಸಿದ್ದಾರೋ, ಅದರಂತೆ ರಾಮಾನುಜರ ಪಂಥದವರೂ ಕೂಡ ಮುಖ್ಯಪ್ರಾಣಕೋಟಿ ಇರುವ ಪೂರ್ವಪಕ್ಷವನ್ನು ತೋರಿಸಲೇ ಬೇಕು. ಇಲ್ಲದಿದ್ದರೆ, ಎರಡನೆಯ ಸೂತ್ರಕ್ಕೆ ಅಸ್ವರಸವಾದ ಅರ್ಥವನ್ನು ಒಪ್ಪಿಕೊಂಡಂತಾಗುತ್ತದೆ. ಈ ಅಭಿಪ್ರಾಯದಿಂದಲೂ ಗ್ರಂಥಕಾರರು 'ಮುಖ್ಯಪ್ರಾಣೋ ವಾ' ಎಂದು ಹೇಳಿರುತ್ತಾರೆ.

**प्रकाशः** – आदिपदेन ''यस्य चैतत्कर्म'' इत्युक्तकर्मशब्दितपरिस्पन्दनाख्यं लिङ्गं ग्राह्यम् ।

'ಪ್ರಾಣಶಬ್ದಾದೇಃ' ಎಂಬಲ್ಲಿರುವ ಆದಿಪದದಿಂದ 'ಯಸ್ಯ ಚ ಏತತ್‌ಕರ್ಮ' ಎಂಬ ಶ್ರುತಿಯನ್ನೂ ಕೂಡ ವಿವಕ್ಷಿಸಬೇಕು. ಈ ಶ್ರುತಿಯಲ್ಲಿ 'ಕರ್ಮ' ಎಂಬ ಶಬ್ದದಿಂದ 'ಪರಿಸ್ಪಂದನ' ಎಂಬ ಲಿಂಗವನ್ನು ಹೇಳಿರುತ್ತಾರೆ. ಈ 'ಪರಿಸ್ಪಂದನ' ಎಂಬ ಲಿಂಗವು ಜೀವ ಅಥವಾ ಮುಖ್ಯಪ್ರಾಣರಲ್ಲಷ್ಟೇ ಬರುತ್ತದೆ ಹೊರತು, ಬ್ರಹ್ಮನಲ್ಲಿ ಬರುವುದಿಲ್ಲ.

**प्रकाशः** – सूत्रार्थं वदन्नेव सिद्धान्तमन्वाह – **एतदिति** ।। एतत् प्रत्यक्षादिसिद्धं जगत् । यस्य कर्म यस्य कार्यं स वेदितव्य इत्यर्थः ।।

ಸೂತ್ರದ ಅರ್ಥವನ್ನು ಹೇಳುತ್ತಾ ಸಿದ್ಧಾಂತ ಸ್ಥಾಪನೆ ಮಾಡುತ್ತಿದ್ದಾರೆ 'ಏತತ್' ಎಂಬ ವಾಕ್ಯದಿಂದ. 'ಏತತ್' ಎಂಬ ಪದಕ್ಕೆ 'ಪ್ರತ್ಯಕ್ಷಾದಿ ಸಿದ್ಧವಾದ ಜಗತ್ತು' ಎಂದರ್ಥ. ಈ ಜಗತ್ತು ಯಾವ ಬ್ರಹ್ಮನ ಕಾರ್ಯಭೂತವಾಗಿದೆಯೋ, ಅಂತಹ ಬ್ರಹ್ಮನನ್ನು ತಿಳಿದುಕೊಳ್ಳಬೇಕು ಎಂಬುದಾಗಿ 'ಯಸ್ಯ ಚ ಏತತ್ ಕರ್ಮ' ಎಂಬ ಶ್ರುತಿಯು ಹೇಳುತ್ತಿದೆ ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ.

**प्रकाशः** – **अशाब्दत्वमिति** ।। परमतेऽव्यक्ताजशब्दयोस्तेजोबन्नादिपरत्वेन पञ्चजनशब्दस्य च प्राणादिपरत्वेन प्रधानपरत्वनिरासादशाब्दत्वम् ।

ಅದ್ವೈತಮತದಲ್ಲಿ ಹಿಂದಿನ ನಾಲ್ಕನೇ ಅಧ್ಯಾಯದ ಮೊದಲನೆಯ ಮೂರು ಪಾದಗಳಲ್ಲಿ ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡಿದ್ದಾರೆ. ಅವ್ಯಕ್ತ, ಅಜ ಮೊದಲಾದ ಶಬ್ದಗಳು ತೇಜೋಬನ್ನಾದಿಗಳನ್ನೇ ಪ್ರತಿಪಾದನೆ ಮಾಡುತ್ತವೆ. 'ಪಂಚಜನಾ' ಎಂಬ ಶಬ್ದವು ಪ್ರಾಣಾದಿಗಳನ್ನು ಪ್ರತಿಪಾದನೆ ಮಾಡುತ್ತದೆ ಇತ್ಯಾದಿಯಾಗಿ ಸಮರ್ಥನೆ ಮಾಡುತ್ತಾ ಪ್ರಕೃತಿಯು ಈ ಯಾವ ಶಬ್ದಗಳಿಂದಲೂ ಪ್ರತಿಪಾದ್ಯವಾಗುವುದಿಲ್ಲವೆಂದು ಸಮರ್ಥಿಸಿರುತ್ತಾರೆ.

**प्रकाशः – केषाञ्चिन्मते तु स्वातन्त्र्येण प्रधानपरत्वनिरासात् ।।**

ರಾಮಾನುಜರ ಮತದಲ್ಲಿ ಸ್ವತಂತ್ರವಾಗಿ, ಪ್ರಕೃತಿಯು ಶಬ್ದಪ್ರತಿಪಾದ್ಯವಲ್ಲವೆಂದು ನಿರಾಕರಣೆ ಮಾಡಿದ್ದಾರೆ. ಆದ್ದರಿಂದ ಉಭಯಮತರೀತ್ಯಾ ಗ್ರಂಥಕಾರರು ಹಿಂದಿನ ಅಧಿಕರಣಗಳಲ್ಲಿ ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಿಸಲಾಗಿದೆ ಎಂದು ಹೇಳಿದ್ದು ಸಮಂಜಸವೇ ಆಗಿದೆ.

**प्रकाशः – अविगानमिति ।। एतच्च परमते स्पष्टम् । मतान्तरे तु विरुद्धश्रुत्युदाहरणाज्जगतो ब्रह्मैककारणत्वं न निश्चेतुं शक्यमित्युक्त्या चावसीयत इति भावः ।**

ಹಿಂದಿನ 'ಕಾರಣತ್ವೇನ' ಎಂಬ ಅಧಿಕರಣದಲ್ಲಿ ಅದ್ವೈತಿಗಳ ಪ್ರಕಾರ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸಿದ್ದು ಈಗಾಗಲೇ ಸ್ಪಷ್ಟವಾಗಿದೆ. ರಾಮಾನುಜರ ಮತದಲ್ಲಿಯೂ ಕೂಡ ವಿರುದ್ಧವಾದ ಶ್ರುತಿಗಳನ್ನು ಉದಾಹರಿಸುತ್ತಿರುವುದರಿಂದ ಜಗತ್ತಿಗೆ ಬ್ರಹ್ಮನೊಬ್ಬನೇ ಕಾರಣನೆಂದು ನಿಶ್ಚಯಿಸಲಾಗದು ಎಂಬ ವಿರೋಧವನ್ನು ಪರಿಹರಿಸಲಾಗಿದೆ. ಹೀಗೆ ಇಬ್ಬರ ಮತದಲ್ಲಿಯೂ ಕೂಡ ಶ್ರುತಿವಿರೋಧದ ಪರಿಹಾರವೇ ಮುಖ್ಯಉದ್ದೇಶವೆಂಬುದು ಸ್ಪಷ್ಟವಾಗುವುದರಿಂದ 'ಕಾರಣತ್ವೇನ' ಎಂಬ ಅಧಿಕರಣದಲ್ಲಿ ಶ್ರುತಿಯ ಅವಿಗಾನವನ್ನು ಸಮರ್ಥಿಸಲಾಗಿದೆ ಎಂಬ ಗ್ರಂಥಕಾರರ ಮಾತು ಸಮಂಜಸವೇ ಆಗಿದೆ.

**प्रकाशः – सूत्रार्थं च प्रत्याह – अस्माकमिति ।। इत्यत्रान्वितानामिति ।। नच तत्रैवाध्याहारो दोषः । तत्र प्रकरणादिनैव सिद्धेः ।**

ಅಧಿಕರಣಶರೀರವನ್ನು ನಿರಾಕರಣೆ ಮಾಡಿ, ಅವರ ಸೂತ್ರಾರ್ಥವನ್ನೂ ಕೂಡ ನಿರಾಕರಿಸುತ್ತಿದ್ದಾರೆ 'ಅಸ್ಮಾಕಮ್' ಇತ್ಯಾದಿ ಗ್ರಂಥದಿಂದ. 'ಸಮಾಕರ್ಷಾತ್' ಎಂಬ ಸೂತ್ರದಲ್ಲಾದರೂ ದ್ವೈತಿಗಳು 'ಸರ್ವಶಬ್ದಾನಾಮ್' ಎಂಬುದನ್ನು ಅಧ್ಯಾಹಾರ ಮಾಡಬೇಕಲ್ಲವೇ? ಹೀಗಿರುವಾಗ ನಮ್ಮನ್ನು ಕುರಿತು ಮಾತ್ರ ದೋಷವನ್ನು ಹೇಗೆ ಹೇಳುತ್ತೀರಿ ? ಎಂದು ಪ್ರಶ್ನಿಸಬಾರದು. 'ಸಮಾಕರ್ಷಾತ್' ಎಂಬ ಸೂತ್ರದಲ್ಲಿ ಪ್ರಕರಣದ ಬಲದಿಂದಲೇ 'ಸರ್ವಶಬ್ದಾನಾಮ್' ಎಂಬುದು ಅಧ್ಯಾಹೃತವಾಗುತ್ತದೆ.

**प्रकाशः – तत्र पञ्चम्यन्वययोग्यस्य कस्यचिदवश्यं वाच्यतया तस्यैवात्राप्यन्वय सम्भवेऽत्राध्याहारो न युक्त इति भावः ।**

'ಸಮಾಕರ್ಷಾತ್' ಎಂಬುದಾಗಿ ಪಂಚಮ್ಯಂತವಾದ ಶಬ್ದವನ್ನು ಹೇಳಿದಾಗ ಯಾವುದಾದರೂ ಒಂದು ಪದದ ಜೊತೆಗೆ ಅನ್ವಯವನ್ನು ಹೇಳಲೇ ಬೇಕು. ಅದ್ವೈತಿಗಳಾದ ನೀವು 'ಬ್ರಹ್ಮಣಃ' ಎಂಬುದನ್ನು ಅಧ್ಯಾಹಾರ ಮಾಡುತ್ತೀರಿ. ನಾವು 'ಸಕಲಶಬ್ದಾನಾಮ್' ಎಂಬುದನ್ನು ಅಧ್ಯಾಹಾರ ಮಾಡುತ್ತಿದ್ದೇವೆ. ಏನೇ ಆದರೂ ಅಧ್ಯಾಹಾರ ಮಾಡಬೇಕೆಂಬುದಂತೂ ಅನಿವಾರ್ಯ. ಹೀಗೆ ಅಧ್ಯಾಹೃತವಾದ 'ಸಕಲಶಬ್ದಾನಾಮ್' ಎಂಬುದನ್ನು ಮುಂದಿನ 'ಜಗದ್ವಾಚಿತ್ವಾತ್' ಇತ್ಯಾದಿ ಸೂತ್ರಗಳಲ್ಲಿಯೂ ಕೂಡ ಅನ್ವಯವನ್ನು ಮಾಡಲು ಬರುವಾಗ ಪುನಃ 'ಜಗದ್ವಾಚಿತ್ವಾತ್' ಎಂಬಲ್ಲಿ ಪ್ರತ್ಯೇಕವಾಗಿ ಅಧ್ಯಾಹಾರ ಮಾಡಿಕೊಳ್ಳುವುದು

ಅಸಾಧುವಾಗಿದೆ. ಆದ್ದರಿಂದ ಶಾಂಕರಸಿದ್ಧಾಂತದ ಮತ್ತು ರಾಮಾನುಜಸಿದ್ಧಾಂತದ ಸೂತ್ರಾರ್ಥವು ಅಸಾಧುವಾಗಿದೆ ಎಂದು ತಿಳಿಯಬೇಕು.

**प्रकाशः – द्वितीयसूत्रं तु नातीव विरुद्धम् । केषाश्चिन्मते प्राणपूर्वपक्षाभावात् प्राणलिङ्गोपन्यासस्यास्वारस्यं स्पष्टमिति त्यक्त्वा तृतीयार्थमनूद्य निराह – यच्चेति ।।**

ವಿವರಣೆ - ಎರಡನೆಯ ಸೂತ್ರವ್ಯಾಖ್ಯಾನದಲ್ಲಿ ಹೆಚ್ಚಿಗೆ ವಿರೋಧವೇನೂ ಇರುವುದಿಲ್ಲ. ರಾಮಾನುಜರ ಮತದಲ್ಲಿ ಮುಖ್ಯಪ್ರಾಣಪರವಾದ ಪೂರ್ವಪಕ್ಷವೇ ಇಲ್ಲದ ಕಾರಣ. ಸೂತ್ರದಲ್ಲಿ ಉಲ್ಲೇಖಿಸಿದ ಪ್ರಾಣಲಿಂಗ ಉಪನ್ಯಾಸವು ಅಸ್ವರಸವಾಗುತ್ತದೆ. ಈ ದೋಷವು ಸ್ಪಷ್ಟವಾಗಿ ಕಾಣಿಸುವುದರಿಂದ ಗ್ರಂಥಕಾರರು ಅದನ್ನು ಉಲ್ಲೇಖ ಮಾಡದೇ, ಮೂರನೆಯ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡಲು 'ಯಚ್ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः – सूत्रार्थः सूत्रैकदेशार्थः । एतेन कस्यचिदपि शैवस्य मतं प्रत्युक्तं बोध्यम्।**

'ಸೂತ್ರಾರ್ಥಃ' ಎಂದರೆ ಸಮಗ್ರಸೂತ್ರದ ಅರ್ಥವೆಂದು ತಿಳಿಯಬಾರದು. ಸೂತ್ರದ ಏಕದೇಶದ ಅರ್ಥವೆಂದಷ್ಟೇ ತಿಳಿಯಬೇಕು. ಹೀಗೆ ಅದ್ವೈತಮತವನ್ನು ಹಾಗೂ ವಿಶಿಷ್ಟಾದ್ವೈತಮತವನ್ನು ನಿರಾಕರಣೆ ಮಾಡಿದ್ದರಿಂದ ಶೈವರ ಮತವನ್ನೂ ಕೂಡ ನಿರಾಕರಿಸಿದಂತಾಯಿತು.




ಅದ್ವೈತಿಗಳು ಹಾಗೂ ರಾಮಾನುಜರು 'ಜಗದ್ವಾಚಿತ್ವಾತ್' ಎಂಬಲ್ಲಿಂದ ಪ್ರಾರಂಭಿಸಿ, ಮೂರು ಸೂತ್ರಗಳನ್ನು ಒಂದೇ ಅಧಿಕರಣವೆಂದು ಹೇಳುತ್ತಾರೆ. 'ವಾಕ್ಯಾನ್ವಯಾತ್' ಎಂಬಲ್ಲಿಂದ ಪ್ರಾರಂಭಿಸಿ ನಾಲ್ಕು ಸೂತ್ರಗಳು ಮತ್ತೊಂದು ಅಧಿಕರಣವೆನ್ನುತ್ತಾರೆ. ಜಗದ್ವಾಚಿತ್ವಾಧಿಕರಣದಲ್ಲಿ 'ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ಚೈತತ್ ಕರ್ಮ ಸ ವೇದಿತವ್ಯಃ' ಎಂಬುದು ವಿಷಯವಾಕ್ಯ. ಇಲ್ಲಿ ವೇದಿತವ್ಯತ್ವೇನ ಪ್ರತಿಪಾದ್ಯನಾದವನು ಜೀವನೆಂದು ಪೂರ್ವಪಕ್ಷ. ಏಕೆಂದರೆ 'ಯಸ್ಯ ಚ ಏತತ್ ಕರ್ಮ' ಎಂಬುದಾಗಿ ಧರ್ಮಾಧರ್ಮಗಳೆಂಬ ಕರ್ಮವನ್ನು ಶ್ರುತಿ ಹೇಳುತ್ತಿದೆ. ಇದು ಜೀವನ ಅಸಾಧಾರಣ ಲಿಂಗವಾಗಿರುವುದರಿಂದ ಜೀವನೇ ಪ್ರತಿಪಾದ್ಯನಾಗಬೇಕೆಂಬುದು ಮೊದಲನೆಯ ಪೂರ್ವಪಕ್ಷ.

ಅಥವಾ ಮುಂದಿನ ವಾಕ್ಯದಲ್ಲಿ 'ಪ್ರಾಣ ಏವ ಏಕಧಾ' ಎಂಬುದಾಗಿ ಮುಖ್ಯಪ್ರಾಣನಲ್ಲಿ ಅಸಾಧಾರಣವಾಗಿ ಶ್ರುತವಾದ ಪ್ರಾಣಶಬ್ದವೂ ಇರುವುದರಿಂದ ಮುಖ್ಯಪ್ರಾಣನು ವೇದಿತವ್ಯತ್ವೇನ ಪ್ರತಿಪಾದ್ಯನಾಗುತ್ತಾನೆಂಬುದು ಎರಡನೆಯ ಪೂರ್ವಪಕ್ಷ.

ಈ ಎರಡು ಪೂರ್ವಪಕ್ಷಗಳೂ ಕೂಡ ಅಸಾಧುವಾಗಿದೆ. 'ಏತತ್ ಕರ್ಮ' ಎಂಬಲ್ಲಿರುವ 'ಏತತ್' ಶಬ್ದವು ಪ್ರತ್ಯಕ್ಷಾದಿ ಸಿದ್ಧವಾದ ಜಗತ್ತನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು 'ಜಗದ್ವಾಚಿತ್ವಾತ್' ಎಂಬ ಸೂತ್ರ ಹೇಳುತ್ತಿದೆ.

ಆದ್ದರಿಂದ ಕರ್ಮಶಬ್ದಕ್ಕೆ 'ಕ್ರಿಯತೇ ಅನೇನ ಇತಿ ಕರ್ಮ' ಎಂಬ ವ್ಯುತ್ಪತ್ತಿಯನ್ನು ಅವಲಂಬಿಸಿ, ಬ್ರಹ್ಮನೇ 'ಏತತ್ ಕರ್ಮ' ಎಂಬ ಉಕ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಈ ಜಗತ್ತನ್ನು ನಿರ್ಮಾಣ ಮಾಡುವ ಬ್ರಹ್ಮನು ಶ್ರುತಿಪ್ರತಿಪಾದ್ಯನಾಗಿದ್ದಾನೆಂಬುದು ಅಭಿಪ್ರಾಯ. ಆದ್ದರಿಂದ ಜೀವನಾಗಲೀ, ಮುಖ್ಯಪ್ರಾಣನಾಗಲೀ, ವೇದಿತವ್ಯತ್ವೇನ ಪ್ರತಿಪಾದ್ಯರಾಗುವುದಿಲ್ಲ ಎಂಬುದು ಸಿದ್ಧಾಂತ.

ಇವರ ಈ ಅಧಿಕರಣಶರೀರವು ಅಸಾಧುವಾಗಿದೆ. ಏಕೆಂದರೆ ನಾಲ್ಕನೆಯ ಪಾದದ ಪ್ರಾರಂಭದಲ್ಲಿ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡುತ್ತೇವೆಂದು ಪ್ರತಿಜ್ಞೆಗೈದ ನೀವು ಕೇವಲ ಮೂರು ಪಾದಗಳಲ್ಲಷ್ಟೇ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡಿದಿರಿ. ನಾಲ್ಕನೆಯ ಅಧಿಕರಣದಲ್ಲಿ ಶ್ರುತಿಗಳ ಪರಸ್ಪರವಿರೋಧವನ್ನು ಪರಿಹರಿಸಿದಿರಿ. ಈ ಅಧಿಕರಣದಲ್ಲಿ ಪುನಃ ಬ್ರಹ್ಮನಲ್ಲಿ ಶಬ್ದಗಳ ಸಮನ್ವಯವನ್ನೇ ಮಾಡಲು ಹೊರಟದ್ದೀರಿ. ಹೀಗೆ ಅವ್ಯವಸ್ಥೆಯಿಂದ ನಾಲ್ಕನೆಯ ಪಾದವನ್ನು ನೀವು ರಚನೆ ಮಾಡುತ್ತಿದ್ದೀರಿ. ಇದು ಅತ್ಯಂತ ಅಸಂಗತವಾಗಿದೆ. ಮತ್ತು 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ 'ಸಮಾಕರ್ಷಾತ್' ಎಂಬ ಹಿಂದಿನ ಸೂತ್ರವನ್ನು ಅನ್ವಯ ಮಾಡಿಕೊಳ್ಳಲು ಬರುವಾಗ, 'ಏತತ್' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ಅಯುಕ್ತವಾಗಿದೆ.

## ಮತದ್ವಯದಲ್ಲಿ ವಾಕ್ಯಾನ್ವಯಾಧಿಕರಣದ ವಿಮರ್ಶೆ

## तात्पर्यचन्द्रिका

**यच्चोक्तमुभाभ्यां ''आत्मा वा अरे द्रष्टव्यः'' इत्यादिकं जीवपरम् । ''न वा अरे पत्युः कामाय पतिः प्रियो भवति आत्मनस्तु कामाय सर्वं प्रियं भवति'' इत्यादि पूर्ववाक्ये प्रिययुक्तस्य भोक्तुर्जीवस्योपक्रमादिति प्राप्ते**

ಅನುವಾದ - ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು 'ವಾಕ್ಯಾನ್ವಯಾತ್' ಎಂಬ ಸೂತ್ರದಿಂದ ಆರಂಭಿಸಿ ನಾಲ್ಕು ಸೂತ್ರಗಳನ್ನು ಬೇರೆ ಅಧಿಕರಣವೆಂದು ಪರಿಗಣಿಸಿದ್ದಾರೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಯೇ ಈ ಅಧಿಕರಣದ ವಿಷಯವಾಕ್ಯ. ಈ ವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತಿದೆ. ಏಕೆಂದರೆ 'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' ಇತ್ಯಾದಿಯಾಗಿ ಇದರ ಹಿಂದಿನ ವಾಕ್ಯದಲ್ಲಿ ಪ್ರಿಯಸಹಿತನಾದ ಭೋಕ್ತೃವಾದ ಜೀವನೇ ಉಪಕ್ರಮದಿಂದ ಪ್ರಸಕ್ತನಾಗಿದ್ದಾನೆ. ಉಪಕ್ರಮದಲ್ಲಿ ಪ್ರಸಕ್ತನಾದ ಜೀವನ ಬಗ್ಗೆಯೇ ಮುಂದಿನ ವಾಕ್ಯವೂ ಕೂಡ ಪ್ರತಿಪಾದಿಸುತ್ತದೆ. ಇಷ್ಟು ಪೂರ್ವಪಕ್ಷ.

**ब्रह्मपरमिदम्, कुतः, वाक्यान्वयात् । नहि ''आत्मनो वा अरे दर्शनेन श्रवणेन मत्या विज्ञानेनेदं सर्वं विदितम्'' इत्येकविज्ञानेन सर्वविज्ञानादिवाक्यं जीवपक्षेऽन्वेतीति सिद्धान्त इति ।**

'ಆತ್ಮಾ ವಾ ಅರೇ ದ್ರಷ್ಟವ್ಯ' ಎಂಬ ವಾಕ್ಯವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆ ಹೊರತು, ಜೀವನನ್ನಲ್ಲ. ಏಕೆಂದರೆ 'ವಾಕ್ಯಾನ್ವಯಾತ್' = 'ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಮ್' ಎಂಬ ವಾಕ್ಯದಲ್ಲಿ ಒಬ್ಬನ ತಿಳುವಳಿಕೆಯಿಂದ ಎಲ್ಲವನ್ನೂ ತಿಳಿದಂತಾಗುತ್ತದೆ ಎಂಬುದಾಗಿ ಹೇಳಲಾಗಿದೆ. ಸಕಲಕ್ಕೂ ಕಾರಣನಾದ ಬ್ರಹ್ಮನ ತಿಳುವಳಿಕೆಯಿಂದಷ್ಟೇ ಎಲ್ಲವನ್ನೂ ತಿಳಿದಂತಾಗುತ್ತದೆ ಹೊರತು, ಜೀವನ ತಿಳುವಳಿಕೆಯಿಂದ ಎಲ್ಲವನ್ನೂ ತಿಳಿದಂತಾಗುವುದಿಲ್ಲ. ಆದ್ದರಿಂದ ಜೀವನನ್ನು 'ಆತ್ಮಾ ವಾ ಅರೇ' ಎಂಬ ಶ್ರುತಿಯಿಂದ ಪ್ರತಿಪಾದ್ಯನೆಂದು ಪರಿಗಣಿಸಬಾರದು. ಇಷ್ಟು ಸಿದ್ಧಾಂತ.

**ತನ್ನ । ಸಮನ್वेतव्यविशेषानुक्त्याऽस्य पूर्वशेषत्वस्यैव स्वरसत्वात् ।**

ಇವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಈ ನಾಲ್ಕು ಸೂತ್ರಗಳಲ್ಲಿ ಸಮನ್ವಯ ಮಾಡಬೇಕಾದ ಯಾವುದೇ ಶಬ್ದವಿಶೇಷಗಳನ್ನು ಸೂತ್ರಕಾರರು ಉಲ್ಲೇಖಿಸಿಲ್ಲ. ಹಾಗಾಗಿ ಹಿಂದಿನ ಸಮಾಕರ್ಷಾಧಿಕರಣಕ್ಕೆ ಈ ನಾಲ್ಕು ಸೂತ್ರಗಳು ಅಂಗಗಳಾಗಿವೆ ಎಂದೇ ಹೇಳುವುದು ಸ್ವರಸ.

**यच्चोक्तं परैः । ब्रह्मपरे द्रष्टव्यादिवाक्ये जीवोपक्रमो जीवब्रह्माभेदाभिप्रायेण ।**

ಅದ್ವೈತಿಗಳು 'ವಾಕ್ಯಾನ್ವಯಾತ್' ಎಂಬ ಸೂತ್ರದ ಮುಂದಿನ ಮೂರು ಸೂತ್ರಗಳ ವ್ಯಾಖ್ಯಾನವನ್ನು ಹೀಗೆ ಮಾಡಿದ್ದಾರೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ವಾಕ್ಯವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ. ಹಾಗಾದರೆ ಉಪಕ್ರಮದಲ್ಲಿ ಜೀವನನ್ನು ಶ್ರುತಿ ಹೇಳುತ್ತಿದೆಯಲ್ಲವೇ? ಎಂಬ ಪ್ರಶ್ನೆ ಬಂದರೆ ಜೀವ ಹಾಗೂ ಬ್ರಹ್ಮರಿಗೆ ಅಭೇದವಿರುವುದರಿಂದ ಹಾಗೇ ಶ್ರುತಿಯು ಉಪಕ್ರಮದಲ್ಲಿ ಜೀವನನ್ನು ಪ್ರತಿಪಾದನೆ ಮಾಡಿ, ಮುಂದೆ ಬ್ರಹ್ಮನ ಬಗ್ಗೆ ನಿರೂಪಣೆ ಮಾಡಿದೆ.

**तत्र च मतत्रयम् । जीवो ब्रह्मविकारतया भिन्नाभिन्नः । अभिन्नत्वं चैकविज्ञानेन सर्वविज्ञानप्रतिज्ञासिद्धेर्लिङ्गम् । नहि जीवस्य ब्रह्मणाऽत्यन्तभेदे तज्ज्ञानेन जीवज्ञानमित्याश्मरथ्यमतम् ।**

ಈ ವಿಷಯದಲ್ಲಿ ಮೂರು ಮತಗಳಿವೆ. ಮೊದಲನೆಯ ಮತ ಹೀಗಿದೆ - ಜೀವನು ಬ್ರಹ್ಮನ ವಿಕಾರವಾಗಿರುವುದರಿಂದ ಬ್ರಹ್ಮನಿಗಿಂತ ಭಿನ್ನಾಭಿನ್ನನಾಗಿದ್ದಾನೆ. ಅಭಿನ್ನನಾಗಿದ್ದಾನೆಂಬ ವಿವಕ್ಷೆಯಿಂದ ಶ್ರುತಿಯು ಏಕವಿಜ್ಞಾನದಿಂದ ಸಕಲವಿಜ್ಞಾನವನ್ನು ಪ್ರತಿಜ್ಞೆ ಮಾಡಿರುತ್ತದೆ. ಜೀವನು ಬ್ರಹ್ಮನಿಗಿಂತ ಅತ್ಯಂತ ಭಿನ್ನನಾಗಿದ್ದಾನೆಂದು ಒಪ್ಪಿದರೆ ಬ್ರಹ್ಮಜ್ಞಾನದಿಂದ, ಜೀವನ ಜ್ಞಾನವನ್ನು ಪಡೆದಂತಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಜೀವಬ್ರಹ್ಮರಿಗೆ ಭೇದಾಭೇದವನ್ನು ಒಪ್ಪಬೇಕೆಂಬುದು ಆಶ್ಮರಥ್ಯಾಚಾರ್ಯರ ಅಭಿಪ್ರಾಯ. ಇದನ್ನು 'ಪ್ರತಿಜ್ಞಾಸಿದ್ಧೇಃ' ಎಂಬ ಸೂತ್ರವು ಪ್ರತಿಪಾದನೆ ಮಾಡುತ್ತಿದೆ.

**संसारे भिन्नस्य जीवस्योत्क्रान्त्यनन्तरं मुक्तावेवं भावो ब्रह्मभावः । तथा च कालभेदेन भेदाभेदावित्यौडुलोमिमतम् ।**

ಸಂಸಾರಾವಸ್ಥೆಯಲ್ಲಿ ಜೀವನು ಬ್ರಹ್ಮನಿಗಿಂತ ಭಿನ್ನನಾಗಿರುತ್ತಾನೆ. ಆದರೆ ಮೋಕ್ಷಾವಸ್ಥೆಯಲ್ಲಿ ಬ್ರಹ್ಮಸ್ವರೂಪವನ್ನು ತಾಳುತ್ತಾನೆ. ಹಾಗಾಗಿ ಕಾಲಭೇದದಿಂದಷ್ಟೇ ಜೀವಬ್ರಹ್ಮರಿಗೆ ಭೇದಾಭೇದ-ವಿರುತ್ತದೆಂಬುದು ಔಡುಲೋಮಿ ಆಚಾರ್ಯರ ಅಭಿಪ್ರಾಯ.

**बिम्बस्य प्रतिबिम्बत्वेनेव ब्रह्मण एव जीवत्वेनावस्थितेः । तथा च भेदः काल्पनिकोऽभेदस्तु सत्य इति काशकृत्स्नमतम् ।**

ಬ್ರಹ್ಮನು ಬಿಂಬನಾಗಿರುತ್ತಾನೆ. ಜೀವನು ಪ್ರತಿಬಿಂಬನಾಗಿರುತ್ತಾನೆ. ಅಂದರೆ ಬಿಂಬಭೂತನಾದ ಬ್ರಹ್ಮನೇ ಪ್ರತಿಬಿಂಬನಾದ ಜೀವಸ್ವರೂಪದಿಂದ ಎಲ್ಲೆಡೆ ನೆಲೆಸಿದ್ದಾನೆ. ಹಾಗಾಗಿ ಜೀವಬ್ರಹ್ಮರ ಭೇದವು ಕಾಲ್ಪನಿಕವಾಗಿದೆ. ಅಭೇದವಷ್ಟೇ ಪಾರಮಾರ್ಥಿಕವಾಗಿದೆ. ಇದು ಕಾಶಕೃತ್ಸ್ನಾಚಾರ್ಯರ ಅಭಿಪ್ರಾಯ.

**इति प्रतिज्ञासिद्धेरित्यादिसूत्रत्रयस्यार्थः । तत्र चायं मतद्वयं सूत्रकृदनभिप्रेतम्। श्रुत्यादिविरोधात् । तृतीयं त्वभिप्रेतमिति ।**

ಹೀಗೆ 'ಪ್ರತಿಜ್ಞಾಸಿದ್ಧೇಃ' ಇತ್ಯಾದಿ ಮೂರು ಸೂತ್ರಗಳ ಅರ್ಥ. ಈ ಮೂರು ಮತಗಳಲ್ಲಿ ಮೊದಲೆರಡು ಮತಗಳು ಸೂತ್ರಕಾರರಿಗೆ ಸಮ್ಮತವಲ್ಲ. ಹಾಗೇನಾದರೂ ಜೀವಬ್ರಹ್ಮರಿಗೆ ಭೇದಾಭೇದವನ್ನು ಒಪ್ಪಿದರೆ ಕೇವಲ ಅಭೇದವನ್ನು ಪ್ರತಿಪಾದನೆ ಮಾಡುವ ಶ್ರುತ್ಯಾದಿಗಳ ವಿರೋಧವು ಪ್ರಾಪ್ತವಾಗುತ್ತದೆ. ಹಾಗಾಗಿ ಕಾಶಕೃತ್ಸ್ನಾಚಾರ್ಯರು ಹೇಳುವಂತೆ ಅಭೇದವಷ್ಟೇ ಪಾರಮಾರ್ಥಿಕವೆಂಬ ಮೂರನೆಯ ಮತವು ಸೂತ್ರಕಾರರಿಗೆ ಅಭಿಪ್ರೇತವಾಗಿದೆ.

**तन्न । जीवोपक्रमस्यैवाभावात् । श्रुतौ हि ''कामाय'' इति चतुर्थीव्यत्ययेन तृतीयार्थे । अस्मिन्नेव प्रकरणे ''जायायै'' इति चतुर्थ्याः व्यत्ययदर्शनात् ।**

ಅದ್ವೈತಿಗಳ ಈ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ. ಮೊಟ್ಟಮೊದಲು ಜೀವನು ಉಪಕ್ರಮದಲ್ಲಿ ಪ್ರಾಪ್ತನಾಗಿದ್ದಾನೆಂದು ವ್ಯಾಖ್ಯಾನ ಮಾಡಿದ್ದೇ ತಪ್ಪು. ಶ್ರುತಿಯಲ್ಲಿ 'ಕಾಮಾಯ' ಎಂಬ ಚತುರ್ಥ್ಯಂತವಾದ ಪದವು ತೃತೀಯಾರ್ಥದಲ್ಲಿ ಪ್ರಯುಕ್ತವಾಗಿದೆ. ಕಾರಣವೇನೆಂದರೆ ಅದೇ ಶ್ರುತಿಪ್ರಕರಣದಲ್ಲಿ 'ಜಾಯಾಯೈ' ಎಂಬ ಚತುರ್ಥ್ಯಂತವಾದ ಪದವನ್ನು 'ಜಾಯಯಾ' (ಹೆಂಡತಿಯಿಂದ ಕೂಡಿಕೊಂಡು) ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ.

**एवञ्च पत्यादीनां भार्यादीन् प्रति अहं प्रियः स्यामितीच्छया तान् प्रति न प्रियत्वम् । किन्तु परमात्मन इच्छयैवेत्यर्थः ।**

ಆದ್ದರಿಂದ ಉಪಕ್ರಮದಲ್ಲಿ ಪ್ರಾಪ್ತವಾದ ಶ್ರುತಿಯ ಅಭಿಪ್ರಾಯವನ್ನು ಹೀಗೆ ಸ್ಪಷ್ಟವಾಗಿ ತಿಳಿಯಬೇಕು. 'ಗಂಡಂದಿರು, ಹೆಂಡಂತಿಯಂದಿರಿಗೆ ಏಕೆ ಪ್ರಿಯರಾಗಿರುತ್ತಾರೆ ಎಂದರೆ, 'ನಾನು ಹೆಂಡತಿಗೆ ಪ್ರಿಯನಾಗಬೇಕು' ಎಂಬ ಗಂಡನ ಇಚ್ಛೆಯಿಂದಲ್ಲ. 'ಗಂಡನು ಹೆಂಡತಿಗೆ ಪ್ರಿಯನಾಗಿರಲಿ' ಎಂಬ ಪರಮಾತ್ಮನ ಇಚ್ಛೆಯಿಂದಷ್ಟೇ ಪ್ರಿಯನಾಗಿರುತ್ತಾನೆ.

**द्युभ्वाद्यधिकरणन्यायेनात्मशब्दस्य परमात्मनि मुख्यत्वात् परमात्मपरोपसंहारानुसारेणैवोपक्रमस्य व्याख्येयत्वात् ।**

ಶ್ರುತಿಯಲ್ಲಿರುವ ಆತ್ಮಶಬ್ದಕ್ಕೆ ಪರಮಾತ್ಮನೆಂದೇ ಅರ್ಥ ಹೊರತು, ಜೀವನೆಂದು ಅರ್ಥವಲ್ಲ. ಈ ವಿಷಯವನ್ನು ಈಗಾಗಲೇ ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಸಮರ್ಥಿಸಿದ್ದಾಗಿದೆ. ಆದ್ದರಿಂದ ಆತ್ಮಶಬ್ದವು ಪರಮಾತ್ಮನಲ್ಲಿ ಮುಖ್ಯವಾಗಿರುವುದರಿಂದ ಪರಮಾತ್ಮಪರವಾದ ಉಪಸಂಹಾರವಾಕ್ಯಕ್ಕೆ ಅನುಗುಣವಾಗಿ ಉಪಕ್ರಮವಾಕ್ಯವನ್ನು ವ್ಯಾಖ್ಯಾನ ಮಾಡಬೇಕು.

**पतिर्जायाप्रियो नैव स्वेच्छया तु भविष्यति ।**
**विष्णोरिच्छावशेनैव स्वयं च स्वप्रियो भवेत् ।**

ತನ್ನ ಇಚ್ಛೆಯಿಂದ ಗಂಡನು ಹೆಂಡತಿಗೆ ಪ್ರಿಯನಾಗಲು ಸಾಧ್ಯವೇ ಇಲ್ಲ. ಭಗವಂತನ ಇಚ್ಛೆಯಿಂದಷ್ಟೇ ಹೆಂಡತಿಗೆ ಪ್ರಿಯನಾಗುತ್ತಾನೆ. ತನಗೆ ತಾನು ಪ್ರಿಯನಾಗಬೇಕಾದರೂ ಹರಿಯ ಇಚ್ಛೆಯು ಆವಶ್ಯಕ.

**विष्णोरिच्छावशेनैव हन्ति ह्यात्मानमात्मना ।**
**स्वात्मानमप्रियं कृत्वा निरये पातयत्यपि ।**
**तदैव प्रीतये भूत्वा पुनर्दुःखाय जायते ।।**

ತನಗೆ ತಾನು ಪ್ರಿಯನಾಗಬೇಕಾದರೂ ಹರಿಯ ಇಚ್ಛೆಯೇ ಬೇಕು. ಹರಿಯ ಇಚ್ಛೆ ತಪ್ಪಿದರೆ ತನಗೆ ತಾನೇ ಶತ್ರುವಾಗುತ್ತಾನೆ. ಆತ್ಮಹತ್ಯೆ ಮೂಲಕ ಕುಕೃತ್ಯಗಳಲ್ಲಿ ತೊಡಗುತ್ತಾನೆ. ಅಷ್ಟೇ ಅಲ್ಲದೇ, ಅಧರ್ಮಾಚರಣೆ ಮೊದಲಾದವುಗಳನ್ನು ಮಾಡುತ್ತಾ ಪಾಪಿಷ್ಠನಾಗಿ ತನ್ನನ್ನು ತಾನು ನರಕದಲ್ಲಿ ಬೀಳಿಸಿಕೊಳ್ಳುತ್ತಾನೆ. ಶ್ರೀಹರಿಯ ಇಚ್ಛೆಯಿಂದಷ್ಟೇ ಸುಖವನ್ನು ಅಥವಾ ದುಃಖವನ್ನು ಹೊಂದಲು ಸಾಧ್ಯ.

**इत्यादिवचनाच्च परमात्मेच्छाभावे सुभगे सुरूपेऽपि पत्यादौ जायादीनामप्रीतिदर्शनाच्च ।**

ಇವೇ ಮೊದಲಾದ ಪ್ರಮಾಣವಚನಗಳಿಂದ ಪರಮಾತ್ಮನ ಇಚ್ಛೆಯು ಇಲ್ಲದಿದ್ದರೆ ಅತ್ಯಂತ ಶ್ರೀಮಂತನಾದ, ರೂಪವಂತನಾದ ಗಂಡನು ಹೆಂಡತಿಗೆ ಪ್ರಿಯನಾಗಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಅನೇಕ ಉದಾಹರಣೆಗಳು ಕಣ್ಣೆದುರಿನಲ್ಲಿ ಇರುತ್ತವೆ.

**अन्यथा पत्यादीनां स्वीयत्वेनैव प्रियत्वात् स्वयमेव निरुपाधिकप्रिय इति परोक्ताङ्गीकारे दुःखादेरपि स्वीयत्वेनैवाप्रियत्वात् स्वयं निरुपाधिकाप्रिय इति स्यात् ।**

ಹೀಗೊಪ್ಪದಿದ್ದರೆ ಪತ್ಯಾದಿಗಳು ಸ್ವತಃ ಪ್ರಿಯರಾಗಿರುವುದರಿಂದ ಸ್ವತಃ ತಾವೇ ನಿರುಪಾಧಿಕ-ಪ್ರಿಯರೆಂದು ಹೇಳಿದಂತಾಗುತ್ತದೆ. ಹಾಗಾದರೆ ದುಃಖಾದಿಗಳೂ ಕೂಡ ಸ್ವತಃ ಅಪ್ರಿಯ-ವಾಗಿರುವುದರಿಂದ ನಿರುಪಾಧಿಕ ಅಪ್ರಿಯವೆಂದು ಒಪ್ಪಬೇಕಾದೀತು.

**प्रकाशः —**

द्वितीयाधिकरणमनूद्य निराह – **यच्चेति** ।। बृहदारण्यके चतुर्थेऽध्याये मैत्रेयीब्राह्मणे "न वा अरे पत्युः कामाय पतिः प्रियो भवति" इत्युपक्रम्य "न वा अरे सर्वस्य कामाय सर्वं प्रियं भवति । आत्मा वा अरे द्रष्टव्यश्श्रोतव्यो मन्तव्यो निदिध्यासितव्यो मैत्रेय्यात्मनो दर्शनेन श्रवणेन मत्या विज्ञानेन सर्वं विज्ञातम्" इत्यत्र द्रष्टव्य इत्यादिवाक्यं जीवपरं ब्रह्मपरं वेति संशयः ।

ವಿವರಣೆ - ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು 'ವಾಕ್ಯಾನ್ವಯಾತ್' ಎಂಬ ಸೂತ್ರದಿಂದ ಆರಂಭಿಸಿ ನಾಲ್ಕು ಸೂತ್ರಗಳನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ್ದಾರೆ. ಅದನ್ನು ನಿರಾಕರಣೆ ಮಾಡಲು ಗ್ರಂಥದಲ್ಲಿ 'ಯಚ್ಚೋಕ್ತಂ' ಇತ್ಯಾದಿ ವಾಕ್ಯಗಳು ಹೊರಟಿವೆ. ಬೃಹದಾರಣ್ಯಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಮೈತ್ರೇಯಬ್ರಾಹ್ಮಣವಿದೆ. ಅದು 'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ' ಎಂಬುದಾಗಿ ಪ್ರಾರಂಭವಾಗಿದೆ. ಅನಂತರ 'ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ಮೈತ್ರೇಯ್ಯಾತ್ಮನೋ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನ ಸರ್ವಂ ವಿಜ್ಞಾತಮ್' ಎಂಬ ವಾಕ್ಯವಿದೆ. ಈ ಸಮಗ್ರ ವಾಕ್ಯದಲ್ಲಿ 'ಆತ್ಮ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂಬ ವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆಯೋ ? ಎಂಬ ಸಂದೇಹ ಉಂಟಾಗುತ್ತದೆ.

**प्रकाशः – पूर्वपक्षाद्याह – आत्मेति ।। सूत्रार्थमेव व्यतिरेकमुखेनाह – न हीति ।।**

ಪೂರ್ವಪಕ್ಷವನ್ನು 'ಆತ್ಮ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ನಿರೂಪಣೆ ಮಾಡಿದ್ದಾರೆ. 'ಆತ್ಮ ವಾ ಅರೇ' ಎಂಬ ವಾಕ್ಯವು ಬ್ರಹ್ಮಪರವೇ ಆಗಿದೆ. ಏಕೆಂದರೆ ಮುಂದೆ 'ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ' ಎಂಬುದಾಗಿ ಹೇಳಿರುವುದರಿಂದ ಜೀವನ ಜ್ಞಾನದಿಂದ ಸಮಸ್ತ ಜಗತ್ತು ಜ್ಞಾತವಾಯಿತೆಂದು ಹೇಳಬೇಕಾಗುತ್ತದೆ. ಆದರೆ ಬ್ರಹ್ಮನ ಜ್ಞಾನದಿಂದ ಸಮಸ್ತ ಜಗತ್ತು ಜ್ಞಾತವಾಯಿತೆಂದು ಹೇಳಿದರೆ ಯಾವುದೇ ದೋಷ ಬರುವುದಿಲ್ಲ. ಇದನ್ನೇ ಗ್ರಂಥದಲ್ಲಿ ವ್ಯತಿರೇಕಮುಖದಿಂದ ಹೇಳುತ್ತಿದ್ದಾರೆ 'ನಹಿ' ಇತ್ಯಾದಿಯಾಗಿ.

**प्रकाशः – मतद्वयेऽप्याद्यस्याधिकरणान्तरत्वं निरस्य तच्छेषतया प्रतिज्ञादि-सूत्रत्रयवर्णनं कृतमुभाभ्याम् तत्रातीव विरुद्धत्वात् परमतमनूद्य निराह – यच्चेति ।।**

'ವಾಕ್ಯಾನ್ವಯಾತ್' ಎಂಬ ಸೂತ್ರದಿಂದ ಬೇರೆ ಅಧಿಕರಣವೆಂದು ಇಬ್ಬರೂ ಕೂಡ ಹೇಳಿದ್ದಾರೆ. ಇವರಿಬ್ಬರಿಗೂ ಕೂಡ 'ಸಮನ್ವಯ ಮಾಡಬೇಕಾದ ಶಬ್ದವನ್ನು ಹೇಳಿಲ್ಲವಾದ್ದರಿಂದ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಲಾಗದು. ಪೂರ್ವಾಧಿಕರಣಶೇಷವೆಂದೇ ಹೇಳಬೇಕು' ಎಂಬ ದೋಷವನ್ನು ಹೇಳಿದ್ದಾರೆ. ಹೀಗೆ ಮೊದಲು 'ವಾಕ್ಯಾನ್ವಯಾತ್' ಎಂಬ ಸೂತ್ರವು ಅಧಿಕರಣಾಂತರದಲ್ಲಿ ಸೇರಲು ಸಾಧ್ಯವಿಲ್ಲ ಎಂಬುದನ್ನು ಇಬ್ಬರ ಪ್ರಕಾರ ನಿರಾಕರಣೆ ಮಾಡಿ, ಅನಂತರ 'ಪ್ರತಿಜ್ಞಾಸಿದ್ಧೇಃ' ಇವೇ ಮೊದಲಾದ ಮೂರು ಸೂತ್ರಗಳನ್ನು 'ವಾಕ್ಯಾನ್ವಯಾತ್' ಎಂಬ ಸೂತ್ರಕ್ಕೆ ಶೇಷವೆಂದು ಹೇಳಬೇಕು ಎಂಬ ಅಭಿಪ್ರಾಯವನ್ನು ಇಬ್ಬರೂ ಕೂಡ ಹೊಂದಿದ್ದಾರೆ. ಇವರಿಬ್ಬರಲ್ಲಿಯೂ ಅದ್ವೈತಿಗಳ ಅಭಿಪ್ರಾಯವು ಬಹಳ ವಿರುದ್ಧವಾದ್ದರಿಂದ ಅವರ ಮತವನ್ನೇ ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – जीवोपक्रमः ''न वा अरे पत्युः कामाय'' इत्यादिः । यथा वह्नेर्विकारा व्युच्चरन्तः विस्फुलिङ्गाः न वह्नेरत्यन्तं भिद्यन्ते, तद्रूपनिरूपणत्वात् ।**

'ನ ವಾ ಅರೇ ಪತ್ಯುಃ ಕಾಮಾಯ' ಎಂಬುದಾಗಿ ಜೀವನು ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆ. ಇಂತಹ ಜೀವನು ಬ್ರಹ್ಮನಿಗಿಂತ ಭಿನ್ನನು, ಅಭಿನ್ನನು ಆಗಲಾರನು. ಹೇಗೆಂದರೆ ಬೆಂಕಿಯಿಂದ ಸಿಡಿಯುತ್ತಿರುವ ಕಿಡಿಗಳು ಬೆಂಕಿಗಿಂತ ಭಿನ್ನವೆಂದು ಹೇಳಲಾಗದು. ಏಕೆಂದರೆ ಬೆಂಕಿಯಲ್ಲಿರುವ ಗುಣಧರ್ಮಗಳನ್ನು ಹೊಂದಿರುತ್ತದೆ.

**प्रकाशः – नापि ततोऽत्यन्तमभिन्नाः, वह्नेरिव परस्परं व्यावृत्त्यभावप्रसङ्गात् ।**

ಅದರಂತೆ ಅದೇ ಬೆಂಕಿ ಕಿಡಿಗಳನ್ನು ಬೆಂಕಿಗಿಂತ ಅಭಿನ್ನವೆಂದೂ ಕೂಡ ಹೇಳಲಾಗದು. ಹಾಗೇನಾದರೂ ಅಭಿನ್ನವೆಂದು ಹೇಳಿದರೆ ಬೆಂಕಿಯಿಂದ ವಿಭಾಗ ಮಾಡಲು ಸಾಧ್ಯವಾಗದಿರಬೇಕಾದೀತು.

**प्रकाशः – तथा जीवात्मानो ब्रह्मविकाराः न ब्रह्मणोऽत्यन्तं भिद्यन्ते । चिद्रूपत्वाभावप्रसङ्गात् ।**

ಇದೇ ದೃಷ್ಟಾಂತದಂತೆ ಜೀವನೂ ಕೂಡ ಬ್ರಹ್ಮನ ವಿಕಾರನಾಗಿದ್ದಾನೆ. ಬೆಂಕಿಯ ಕಿಡಿಯು ಹೇಗೆ ಬೆಂಕಿಯ ವಿಕಾರವೋ, ಅದರಂತೆ ಜೀವನೂ ಕೂಡ ಬ್ರಹ್ಮವಿಕಾರನಾಗಿದ್ದಾನೆ. ಇವನೂ ಕೂಡ ಬ್ರಹ್ಮನಿಗಿಂತ ಭಿನ್ನನಾಗಲು ಸಾಧ್ಯವಿಲ್ಲ. ಹಾಗೇನಾದರೂ ಭಿನ್ನನೆಂದು ಹೇಳಿದರೆ ಬ್ರಹ್ಮನ ಸ್ವಭಾವವೆನಿಸಿದ ಚಿದ್ರೂಪತ್ವವು ಇವನಲ್ಲಿ ಇಲ್ಲದಿರಬೇಕಾದೀತು.

**प्रकाशः** – नाप्यत्यन्तं न भिद्यन्ते । परस्परमन्यावृत्तिप्रसङ्गात् । तस्मात् कथञ्चिज्जीवात्मनां भेदोऽभेदश्च । तत्र जीवात्मपरमात्मनोरभेदमुपादाय परमात्मनि दर्शयितव्ये जीवात्मनोपक्रम इत्यर्थः ।

ಮತ್ತು ಇಂತಹ ಜೀವಾತ್ಮನು ಬ್ರಹ್ಮನಿಗಿಂತ ಅಭಿನ್ನನೆಂದೂ ಕೂಡ ಹೇಳಲಾಗದು. ಹಾಗಾದಲ್ಲಿ ಬ್ರಹ್ಮನಿಗಿಂತ ವಿಭಕ್ತನಾಗಿ ತೋರದಿರುವ ಪ್ರಸಂಗ ಬರುತ್ತದೆ. ಈ ಕಾರಣದಿಂದ ಜೀವಾತ್ಮನು ಬ್ರಹ್ಮನಿಗಿಂತ ಭಿನ್ನಾಭಿನ್ನನಾಗಿದ್ದಾನೆಂದೇ ಹೇಳಬೇಕು. (ಇದು ಅರ್ಥಾಪತ್ತಿ ಪ್ರಮಾಣ) ಜೀವಾತ್ಮ ಹಾಗೂ ಪರಮಾತ್ಮನಿಗೆ ಅಭೇದವನ್ನು ಒಪ್ಪಿ ಪರಮಾತ್ಮನನ್ನು ಪ್ರತಿಪಾದನೆ ಮಾಡಲು ಜೀವಾತ್ಮನು ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆ.

**प्रकाशः** – ''उत्क्रमिष्यते'' इत्यस्यार्थमन्वाह – **संसार इति ।। भेदाभेदाविति** ।। तथा च भविष्यन्तमभेदमुपादाय भेदकालेऽप्यभेदेन जीवोपक्रम इत्यर्थः ।।

'ಉತ್ಕ್ರಮಿಷ್ಯತೇ' ಎಂಬ ಸೂತ್ರದ ಅರ್ಥವನ್ನು 'ಸಂಸಾರ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ. 'ಭೇದಾಭೇದ' ಎಂಬುದರ ಅಭಿಪ್ರಾಯ ಹೀಗಿದೆ - ಮೋಕ್ಷಾವಸ್ಥೆಯಲ್ಲಿರುವ ಅಭೇದವನ್ನು ವಿವಕ್ಷಿಸಿ, ಭೇದಾವಸ್ಥೆಯಲ್ಲಿಯೂ ಅಭೇದಾಭಿಪ್ರಾಯದಿಂದ ಜೀವನು ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆ.

**प्रकाशः** – ब्रह्मण एव जीवत्वेनावस्थितेरित्यर्थ इति ।। आत्मैवाविद्योपधान-कल्पितावच्छेद आकाश इव घटमणिकादिकल्पितावच्छेदो घटाकाशो मणिकाकाशो नतु परमाकाशादन्यस्तद्विकारो वा । ततश्च जीवात्मनोपक्रमः परमात्मनैवोपक्रमः । तस्य ततोऽभेदादित्यर्थः ।।

ಬ್ರಹ್ಮನೇ ಜೀವಸ್ವರೂಪದಿಂದ ನೆಲೆಸಿರುವ ಕಾರಣ, ಉಪಕ್ರಮದಲ್ಲಿ ಬ್ರಹ್ಮನು ಪ್ರಸಕ್ತನಾಗಿದ್ದಾನೆ ಎಂದು ತಿಳಿಯಬೇಕು. ಜೀವಾತ್ಮನು ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆಂದರೆ ಪರಮಾತ್ಮನೇ ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆ ಎಂದರ್ಥ. ಏಕೆಂದರೆ ಇವರಿಬ್ಬರಿಗೂ ಪರಸ್ಪರ ಅಭೇದವಿದೆ. ಉದಾಹರಣೆ - ಪರಮಾಕಾಶವು ಘಟ, ಮಣಿಕ ಮೊದಲಾದ ಉಪಾಧಿಗಳ ಪ್ರಯುಕ್ತವಾಗಿ, ಘಟಾಕಾಶ, ಮಣಿಕಾಕಾಶ ಎಂದು ಕರೆಸಿಕೊಳ್ಳುತ್ತದೆ. ಈ ಘಟಾಕಾಶ ಹಾಗೂ ಮಣಿಕಾಕಾಶವನ್ನು ಯಾರೂ ಕೂಡ ಮಹಾಕಾಶದಿಂದ ಭಿನ್ನವೆಂದು ಹೇಳುವುದಿಲ್ಲ. ಅದರಂತೆ 'ಅವಿದ್ಯಾ' ಎಂಬ ಉಪಾಧಿ ಪ್ರಯುಕ್ತವಾಗಿ ಪರಮಾತ್ಮನೇ ಚೈತ್ರ, ಮೈತ್ರ ಮೊದಲಾಗಿ ಕರೆಸಿಕೊಳ್ಳುತ್ತಾನೆ. ಇಂತಹ ಚೈತ್ರ, ಮೈತ್ರಾದಿ ಜೀವಸ್ವರೂಪರು ಪರಮಾತ್ಮನಿಗಿಂತ

ಭಿನ್ನರಾಗಲು ಸಾಧ್ಯವಿಲ್ಲ. ಹಾಗಾಗಿ ಶ್ರುತಿಯು ಪ್ರಾರಂಭದಲ್ಲಿ ಜೀವನನ್ನು ಹೇಳಿದರೂ ಕೂಡ ಆ ಜೀವಾತ್ಮನು ಪರಮಾತ್ಮನೇ ಆಗಿದ್ದಾನೆಂದು ಹೇಳಬೇಕು.

**प्रकाशः – श्रुत्यादीति** ।। तत्त्वमसीत्यादिनात्यन्ताभेदस्यैव श्रवणात् । ब्रह्मविकारत्वे जीवस्य प्रलयप्रसङ्गेन कृतहानादिप्रसङ्गाच्छ्रुतियुक्तिविरोधादित्यर्थः ।

'ತತ್ತ್ವಮಸಿ' ಎಂಬ ಶ್ರುತಿಯಿಂದ ಜೀವಬ್ರಹ್ಮರು ಅತ್ಯಂತ ಅಭಿನ್ನರಾಗಿದ್ದಾರೆಂದೇ ಸಿದ್ಧವಾಗುತ್ತಿದೆ. ಪ್ರಕೃತ ಜೀವನು ಬ್ರಹ್ಮನ ವಿಕಾರನೆಂದು ಹೇಳಿದರೆ, ನಾಶವನ್ನೂ ಕೂಡ ಒಪ್ಪಬೇಕಾಗುತ್ತದಾದ್ದರಿಂದ ಸಂಸಾರವಸ್ಥೆಯಲ್ಲಿರುವ ಜೀವನೇ ಬೇರೆ, ಮೋಕ್ಷಾವಸ್ಥೆಯಲ್ಲಿರುವ ಜೀವನೇ ಬೇರೆ ಎಂದಾಗುತ್ತದೆ. ಆವಾಗ ಕೃತಹಾನಿ ಅಕೃತ ಅಭ್ಯಾಗಮ ಎಂಬ ದೋಷಗಳೆರಡೂ ಪ್ರಸಕ್ತವಾಗುತ್ತವೆ. ಹೀಗೆ ಶ್ರುತಿವಿರೋಧ ಹಾಗೂ ಯುಕ್ತಿವಿರೋಧಗಳು ಬರುತ್ತವೆಂದು ತಿಳಿಯಬೇಕು.

**प्रकाशः** – परमात्मोपक्रम एवायमित्युपपादयति – **श्रुतौ हीति ।। उपसंहारेति।।** ''आत्मा वा अरे द्रष्टव्यः'' इत्याद्यनुसारेणेत्यर्थः । उपसंहारस्य व्याख्यानरूपतया बलवत्त्वं प्रागेवोक्तमिति भावः ।

ಉಪಕ್ರಮದಲ್ಲಿ ಪ್ರಸಕ್ತನಾದವನು ಪರಮಾತ್ಮನೇ ಆಗಿದ್ದಾನೆಂಬುದನ್ನು 'ಶ್ರುತೌ ಹಿ' ಎಂಬ ವಾಕ್ಯದಿಂದಲೂ ಪ್ರತಿಪಾದನೆ ಮಾಡುತ್ತಿದ್ದಾರೆ. 'ಉಪಸಂಹಾರ' ವಾಕ್ಯವೆಂದರೆ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ವಾಕ್ಯವೆಂದರ್ಥ. ಉಪಸಂಹಾರ ವಾಕ್ಯವು ಹಿಂದಿನ ಶ್ರುತಿವಾಕ್ಯಗಳಿಗೆಲ್ಲಾ ವ್ಯಾಖ್ಯಾನರೂಪವಾಗಿರುತ್ತದೆ. ಆದ್ದರಿಂದ ಉಪಕ್ರಮಾದಿಗಳಿಗಿಂತಲೂ ಬಲಿಷ್ಠವಾಗಿರುತ್ತದೆಂದು ಈಗಾಗಲೇ ಸಮನ್ವಯಾಧಿಕರಣದಲ್ಲಿ ಸಮರ್ಥನೆ ಮಾಡಿರುತ್ತಾರೆ.

**प्रकाशः** – ''इतिहासपुराणाभ्यां वेदं समुपबृंहयेत्'' इति वचनात्स्मृत्युक्त एवार्थो ग्राह्य इति भावेन बृहदारण्यकभाष्योक्तां स्मृतिं पठति ।। **पतिरिति ।।**

'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ಪ್ರಮಾಣಕ್ಕೆ ಅನುಸಾರಿಯಾಗಿ ಸ್ಮೃತಿಗೆ ಅನುಗುಣವಾದ ಅರ್ಥವನ್ನಷ್ಟೇ ಶ್ರುತಿಗೆ ಹೇಳಬೇಕು. ಈ ಅಭಿಪ್ರಾಯದಿಂದ ಬೃಹದಾರಣ್ಯಕಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯನ್ನು 'ಪತಿಃ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

**प्रकाशः** – रामानुजभाष्ये हि ''परमात्मा हि कर्मभिराराधितस्तत्तत्कर्मानुगुणं प्रतिनियतदेशकालस्वरूपपरिमाणमाराधकानां तत्तद्वस्तुगतं प्रियत्वमापादयति । नतु तत्तद्वस्तु स्वरूपेण प्रियमप्रियं वा । यथोक्तम्'' इत्युक्त्वा काचित्स्मृतिरुदाहृता । तामप्युक्तार्थे संवादितयाऽऽह – **तदैवेति ।।**

ರಾಮಾನುಜ ಭಾಷ್ಯದಲ್ಲಿ[೧] 'ಪರಮಾತ್ಮಾ ಹಿ ಕರ್ಮಾಭಿರಾರಾಧಿತಸ್ತತ್ತತ್ ಕರ್ಮಾನುಗುಣಂ ಪ್ರತಿನಿಯತದೇಶಕಾಲಸ್ವರೂಪಪರಿಮಾಣಮಾರಾಧಕಾನಾಂ ತತ್ತದ್ವಸ್ತುಗತಂ ಪ್ರಿಯತ್ವಮಾಪಾದಯತಿ । ನತು ತತ್ತದ್ವಸ್ತು ಸ್ವರೂಪೇಣ ಪ್ರಿಯಮಪ್ರಿಯಂ ವಾ । ಯಥೋಕ್ತಮ್' 'ಪರಮಾತ್ಮನನ್ನು ತಮ್ಮ ಕರ್ಮಗಳಿಂದ ಜೀವರುಗಳು ಆರಾಧನೆ ಮಾಡುತ್ತಾರೆ. ಜೀವರ ಆಯಾ ಕರ್ಮಗಳಿಗೆ ಅನುಗುಣವಾಗಿ ಆಯಾ ದೇಶ ಹಾಗೂ ಕಾಲಗಳನ್ನು ಅನುಸರಿಸಿ ಅವರವರ ಯೋಗ್ಯತೆಗೆ ಕರ್ಮಗಳಿಗೆ ಅನುಗುಣವಾಗಿ ಆಯಾ ವಸ್ತುಗಳನ್ನು ಪ್ರಿಯವನ್ನಾಗಿ ಮತ್ತು ಅಪ್ರಿಯವನ್ನಾಗಿ ಪರಮಾತ್ಮನು ಮಾಡುತ್ತಾನೆ. ಪರಮಾತ್ಮನ ಇಚ್ಛೆಯಿಂದಷ್ಟೇ ಸಕಲ ವಸ್ತುಗಳು ಪ್ರಿಯ ಹಾಗೂ ಅಪ್ರಿಯವೆನಿಸುತ್ತವೆ, ಹೊರತು ಸ್ವರೂಪತಃ ಯಾವುದೇ ವಸ್ತುಗಳು ಪ್ರಿಯವಾಗಲೀ, ಅಪ್ರಿಯವಾಗಲೀ ಆಗಿರುವುದಿಲ್ಲ. ಇದನ್ನು ಶ್ರುತಿ-ಸ್ಮೃತಿಗಳೂ ಕೂಡ ಹೇಳುತ್ತಿವೆ.' ಹೀಗೆ ಹೇಳಿ ಸ್ಮೃತಿವಾಕ್ಯವನ್ನೂ ಕೂಡ ಸ್ವತಃ ಅವರೇ ಉದಾಹರಿಸಿದ್ದಾರೆ. ಅದನ್ನೇ ಗ್ರಂಥಕಾರರು ಸಂವಾದಿಯಾಗಿ, 'ತದ್ಯೆವ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः –**

तदैव प्रीतये भूत्वा पुनर्दुःखाय जायते ।
तदैव कोपाय यतः प्रसादाय च जायते ।
तस्माद्दुःखात्मकं नास्ति नच किञ्चित् सुखात्मकम् ।।

इति स्मृतिशेषः । प्रीतये सुखाय । अन्यथेत्युक्तमेवाह – पत्यादीनामिति ।।

ತದೈವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ ।
ತದೈವ ಕೋಪಾಯ ಯತಃ ಪ್ರಸಾದಾಯ ಚ ಜಾಯತೇ ।
ತಸ್ಮಾದ್ ದುಃಖಾತ್ಮಕಂ ನಾಸ್ತಿ ನಚ ಕಿಂಚಿತ್‌ಸುಖಾತ್ಮಕಮ್ ॥

ಪರಮಾತ್ಮನ ಇಚ್ಛೆಯಿದ್ದರೆ ಮಾತ್ರ ಸುಖವನ್ನು ಹೊಂದುತ್ತಾನೆ. ಪರಮಾತ್ಮನ ಇಚ್ಛೆಯಿಂದಲೇ ದುಃಖವನ್ನೂ ಕೂಡ ಹೊಂದುತ್ತಾನೆ. ಕೋಪ ಹಾಗೂ ಪ್ರಸಾದಗಳನ್ನೂ ಕೂಡ ಅವನ ಇಚ್ಛೆಯಿಂದಷ್ಟೇ ಹೊಂದಲು ಸಾಧ್ಯ. ಆದ್ದರಿಂದ ಸ್ವತಃ ದುಃಖದಾಯಕವಾದ, ಸ್ವತಃ ಸುಖದಾಯಕವಾದ ಯಾವುದೇ ಪದಾರ್ಥಗಳು ಇರುವುದಿಲ್ಲ.

ಹೀಗೆ ಸಮಗ್ರ ಶ್ರುತಿವಾಕ್ಯವನ್ನು ಗ್ರಂಥದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. 'ಪ್ರೀತಯೇ' ಎಂಬ ಪದಕ್ಕೆ 'ಸುಖಕ್ಕೋಸ್ಕರ' ಎಂದರ್ಥ. 'ಅನ್ಯಥಾ' ಎಂಬ ವಾಕ್ಯದಲ್ಲಿ ಹೇಳಿದ್ದನ್ನೇ 'ಪತ್ಯಾದೀನಾ' ಎಂಬುದಾಗಿ ವಿವರಿಸಿದ್ದಾರೆ.

(೧) ಹತ್ತು ಉಪನಿಷತ್ತುಗಳಿಗೆ ಶ್ರೀಮದಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಶಂಕರಾಚಾರ್ಯರೂ ಕೂಡ ಭಾಷ್ಯವನ್ನು ಬರೆದಿದ್ದಾರೆ. ಆದರೆ ರಾಮಾನುಜಾಚಾರ್ಯರು ಭಾಷ್ಯವನ್ನು ಬರೆದಿಲ್ಲ. ಆದರೆ ರಂಗರಾಮಾನುಜಾಚಾರ್ಯರು ಉಪನಿಷತ್ತುಗಳಿಗೆ ಭಾಷ್ಯವನ್ನು ಬರೆದ ಉಲ್ಲೇಖವಿದೆ. ಬಹುಶಃ ಇಲ್ಲಿ ಉಲ್ಲೇಖಿಸಿದ ಭಾಷ್ಯದ ಮಾತುಗಳು ರಂಗರಾಮಾನುಜರ ವಾಕ್ಯಗಳಿರಬಹುದು.

**गुरुराजीयम्** – अधिकरणासङ्गतिं परिहर्तुं शङ्कते ।। **असद्वाक्यस्येति** ।। प्राणशब्दादेरित्यत्रादिपदेन परिस्पन्दरूपकर्मलक्षणप्राणलिङ्गपरिग्रहः – **तन्नेति** ।। एतच्छब्दस्यैतत्परामर्शकतायाः कर्मशब्दस्य क्रियमाणपरतायाः अयोगादित्यर्थः । किं चात्मनस्तु कामाय सर्वं प्रियं भवतीत्यनेनात्मनो निरुपाधिकप्रियत्वस्योक्तत्वेन न वा अरे पत्युरित्यादिपूर्ववाक्ये प्रियत्वं नास्ति । अपि त्वन्यार्थप्रियत्वमिति तन्निषेधात्पूर्वोत्तरव्याघातात् । नच न वा अरे पत्युः कामाय पतिः प्रियो भवतीत्यत्र पत्युरिच्छार्थं पतिः प्रियो न भवतीत्येवोच्यते । नतु स्वार्थं प्रियो न भवतीति । तथा वचनविरोध इति वाच्यम् । आत्मनस्तु कामाय सर्वं प्रियं भवतीत्यत्र स्वार्थं सर्वं प्रियमिति व्याख्यातवता त्वया न वा अरे पत्युः कामायेत्यत्रापि पत्यर्थं पतिः प्रियो भवतीत्येव व्याख्यानं कर्तव्यम् । एकस्मिन्नेव प्रकरण आत्मनस्तु कामाय सर्वं प्रियमित्यत्र कामशब्दस्यान्यपरत्वस्य न वा अरे पत्युः कामायेत्यत्रान्यपरत्वस्य कल्पयितुमशक्यत्वात् ।




'ವಾಕ್ಯಾನ್ವಯಾತ್' 'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ' 'ಉತ್ಕ್ರಮಿಷ್ಯತ ಏವಂಭಾವಾದಿತ್ಔಡುಲೋಮಿಃ' 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಈ ನಾಲ್ಕು ಸೂತ್ರಗಳನ್ನು ಸೇರಿಸಿ ವಾಕ್ಯಾನ್ವಯಾಧಿಕರಣವೆಂದು ಶಾಂಕರರು ಮತ್ತು ರಾಮಾನುಜೀಯರು ವಿವಕ್ಷಿಸುತ್ತಾರೆ. ಇದನ್ನು ಪ್ರಕೃತ ವಿಮರ್ಶಿಸಲಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ' 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' 'ಆತ್ಮಾ ವಾ ಅರೇ ದ್ರಷ್ಟವ್ಯ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬುದಾಗಿ ಹೇಳಲಾಗಿದೆ. ಪತಿ, ಪತ್ನಿ, ಪುತ್ರ ಮೊದಲಾದವು ಜೀವನಿಗೆ ಪ್ರಿಯವಾಗಿರುವುದರಿಂದ, ಜೀವನೇ ಈ ಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ. 'ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ' ಎಂಬುದಾಗಿ ಆತ್ಮನ ಜ್ಞಾನದಿಂದ ಸಕಲವೂ ವಿದಿತವಾಗುತ್ತವೆಂದು ಹೇಳಿರುವುದರಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ. ಮತ್ತು ಅದೇ ಪ್ರಕರಣದಲ್ಲಿರುವ ಅನೇಕ ವಾಕ್ಯಗಳು ಪರಮಾತ್ಮನಲ್ಲಿ ಮಾತ್ರ ಅನ್ವಯಿಸುವುದರಿಂದ ಬ್ರಹ್ಮನೇ ಈ ಪ್ರಕರಣದಿಂದ ಪ್ರತಿಪಾದ್ಯನಾಗಿದ್ದಾನೆ.

ಇವರ ಈ ಅಧಿಕರಣಶರೀರವು ಅಸಾಧುವಾಗಿದೆ. ಏಕೆಂದರೆ 'ವಾಕ್ಯಾನ್ವಯಾತ್' ಮೊದಲಾದ ನಾಲ್ಕು ಸೂತ್ರಗಳನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಲು ಯಾವುದೇ ಆಧಾರಗಳಿಲ್ಲ. ಸೂತ್ರಕಾರರು ಸಮನ್ವಯ ಮಾಡಬೇಕಾದ ಯಾವುದೇ ಶಬ್ದವಿಶೇಷಗಳನ್ನು ಉಲ್ಲೇಖ ಮಾಡಿಲ್ಲ. ಆದ್ದರಿಂದ ಹಿಂದಿನ ಸೂತ್ರಕ್ಕೆ ಅಂಗಸೂತ್ರಗಳೆಂದೇ ಪರಿಗಣಿಸುವುದು ಸ್ವರಸವಾಗುತ್ತದೆ.

ಪರಿಪೂರ್ಣಚಂದ್ರಿಕಾ

'ಪ್ರತಿಜ್ಞಾಸಿದ್ಧೇಃ ಲಿಂಗಮಾಶ್ಮರಥ್ಯಃ' - 'ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂಬುದಾಗಿ ಪ್ರತಿಜ್ಞಾ ವಾಕ್ಯವಿದೆ. ಇಲ್ಲಿರುವ ಆತ್ಮನು ಪರಮಾತ್ಮನಿಗಿಂತ ಭಿನ್ನನಾದರೆ ಪರಮಾತ್ಮನ ವಿಜ್ಞಾನದಿಂದ ಅವನ ಜ್ಞಾನ ಬಾರದ ಕಾರಣ ಪ್ರತಿಜ್ಞಾವಿರೋಧ ಬರುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿ ದ್ರಷ್ಟವ್ಯನಾಗಿ ಹೇಳಲ್ಪಟ್ಟವನು ಬ್ರಹ್ಮನೇ ಆಗಿದ್ದಾನೆ. ಜೀವಬ್ರಹ್ಮರಿಗೆ ಭೇದಾಭೇದವಿದ್ದರೂ ಅಭೇದದ ವಿವಕ್ಷೆಯಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯು ಯುಕ್ತವಾಗುತ್ತದೆ ಎಂಬುದು ಆಶ್ಮರಥ್ಯರ ಅಭಿಪ್ರಾಯ.

'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' - ಸಂಸಾರಾವಸ್ಥೆಯಲ್ಲಿ ಜೀವನು ಬ್ರಹ್ಮನಿಗಿಂತ ಭಿನ್ನನಾಗಿದ್ದರೂ ಮೋಕ್ಷಾವಸ್ಥೆಯಲ್ಲಿ ಬ್ರಹ್ಮನಿಗಿಂತ ಅಭಿನ್ನನಾಗಿದ್ದಾನೆ. ಮೋಕ್ಷಾವಸ್ಥೆಯ ಅಭೇದವನ್ನು ವಿವಕ್ಷಿಸಿ, ಪ್ರಾರಂಭದಲ್ಲಿ ಬ್ರಹ್ಮಾಭಿನ್ನನಾದ ಜೀವನನ್ನು ಪ್ರಸ್ತಾಪ ಮಾಡಲಾಗಿದೆ. ಇದು ಔಡೋಲೋಮಿ ಆಚಾರ್ಯರ ಅಭಿಪ್ರಾಯ.

'ಅವಸ್ಥಿತೇರಿತಿ ಕಾಶಕೃತ್ಸ್ನಃ' - ಪರಮಾತ್ಮನೇ ಪ್ರತಿಬಿಂಬರೂಪನಾದ ಜೀವಸ್ವರೂಪವನ್ನು ಹೊಂದಿದ್ದಾನೆ. ಆದ್ದರಿಂದ ಭೇದವು ಕಾಲ್ಪನಿಕ, ಅಭೇದವು ಪಾರಮಾರ್ಥಿಕವೆಂದು ಕಾಶಕೃತ್ಸ್ನರ ಅಭಿಪ್ರಾಯ.

ಹೀಗೆ ಶಾಂಕರಭಾಷ್ಯದಲ್ಲಿ ಮೂರು ಋಷಿಗಳ ಅಭಿಪ್ರಾಯವನ್ನು ಉಲ್ಲೇಖ ಮಾಡಿ, ಕೊನೆಯಲ್ಲಿ ಕಾಶಕೃತ್ಸ್ನಾಚಾರ್ಯರ ಮತವನ್ನಷ್ಟೇ ಅಂಗೀಕರಿಸಲಾಗಿದೆ. ಏಕೆಂದರೆ ಜೀವಬ್ರಹ್ಮರಿಗೆ ಆತ್ಯಂತಿಕ ಅಭೇದವನ್ನು, ಕಾಶಕೃತ್ಸ್ನಾಚಾರ್ಯರು ಮಾತ್ರ ಹೇಳುವುದರಿಂದ ಶ್ರುತಿ-ಸ್ಮೃತಿಗಳು ಅನುಗುಣವಾಗುತ್ತವೆ.

ಶಾಂಕರಭಾಷ್ಯದ ಈ ವ್ಯಾಖ್ಯಾನವು ಅಸಾಧುವಾಗಿದೆ. ಏಕೆಂದರೆ ಪ್ರಾರಂಭದಲ್ಲಿ ಜೀವನು ಪ್ರಸಕ್ತನಾಗಿದ್ದಾನೆಂದು ಹೇಳುವುದೇ ತಪ್ಪು. ಆತ್ಮಪದವೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ 'ಆತ್ಮನಸ್ತು ಕಾಮಾಯ' ಎಂದರೆ ಪರಮಾತ್ಮನ ಇಚ್ಛೆಯಿಂದ ಎಂದೇ ಅರ್ಥ. ಹೊರತು, ಜೀವನು ತನ್ನ ಕಾಮನೆಗಾಗಿ ಎಲ್ಲವೂ ಪ್ರಿಯವಾಗುತ್ತದೆ ಎಂಬರ್ಥವನ್ನು ತಿಳಿಯಬಾರದು. ಪತಿ, ಪತ್ನ್ಯಾದಿಗಳು ಸ್ವತಃ ಅವರಿಗಾಗಿ ಪ್ರಿಯರಾಗಿರುವುದಿಲ್ಲ. ಸ್ವತಃ ಇಚ್ಛೆಪಟ್ಟು ಪತಿಯು ಪತ್ನಿಗೆ ಪ್ರಿಯನಾಗಿರುವುದಿಲ್ಲ. ಪರಮಾತ್ಮನ ಇಚ್ಛೆಯಿಂದಷ್ಟೇ ಪತಿಯು ಪತ್ನಿಗೆ ಪ್ರಿಯನಾಗಿರುತ್ತಾನೆ. ಅಷ್ಟೇ ಅಲ್ಲದೇ ಸ್ವತಃ ತನಗೆ ತಾನೂ ಕೂಡ ಪರಮಾತ್ಮನ ಇಚ್ಛೆಯಿಂದಷ್ಟೇ ಪ್ರಿಯನಾಗಿರುತ್ತಾನೆ. ಯಾವಾಗ ಪರಮಾತ್ಮನ ಇಚ್ಛೆಯು ತಪ್ಪುತ್ತದೋ ಆವಾಗ ಪತಿಯು ಪತ್ನಿಗೆ ಶತ್ರುವಾಗುತ್ತಾನೆ. ತನ್ನಲ್ಲಿ ಬೇಕಾದಷ್ಟು ಸಂಪತ್ತು ಸೌಂದರ್ಯ ಮೊದಲಾದವುಗಳಿದ್ದರೂ ಪತ್ನಿಯು ಪತಿಯನ್ನು ಇಚ್ಛಿಸಲಾರಳು. ಪತಿಯು ಬಡತನದಲ್ಲಿದ್ದರೂ ಸೌಂದರ್ಯದಿಂದ ರಹಿತನಾಗಿದ್ದರೂ ಪರಮಾತ್ಮನ ಇಚ್ಛೆಯಿದ್ದರೆ ಪತ್ನಿಗೆ ಪ್ರಿಯನೇ ಆಗುತ್ತಾನೆ. ಆದ್ದರಿಂದ ಸುಖ-ದುಃಖಾದಿಗಳೆಲ್ಲವೂ ಕೂಡ ನಮಗೆ ಪರಮಾತ್ಮನ ಇಚ್ಛೆಯಿಂದಷ್ಟೇ ದೊರಕಲು ಸಾಧ್ಯ ಹೊರತು, ಸ್ವತಃ ಯಾವುದೇ ಪದಾರ್ಥಗಳು ಸುಖಸ್ವರೂಪವಾಗಲೀ, ದುಃಖಸ್ವರೂಪವಾಗಲೀ ಆಗಿರುವುದಿಲ್ಲ. ಹೀಗೆಯೇ ಶ್ರುತಿಗೆ ವ್ಯಾಖ್ಯಾನ ಮಾಡಬೇಕು. ಆದ್ದರಿಂದ ಉಪಕ್ರಮದಲ್ಲಿ ಪ್ರಸಕ್ತನಾದವನು ಪರಮಾತ್ಮನೇ ಹೊರತು, ಜೀವಾತ್ಮನಲ್ಲ.

---

ಸಮಾಕರ್ಷಾಧಿಕರಣ (೧-೪-೫)

## ಅದ್ವೈತಿಗಳು ಹೇಳುವ 'ಆತ್ಮನಸ್ತು ಕಾಮಾಯ' ಎಂಬ ಶ್ರುತ್ಯರ್ಥ ವಿಮರ್ಶೆ

### तात्पर्यचन्द्रिका

**किञ्च ''आत्मनस्तु कामाय'' इत्यत्र स्वार्थं सर्वं प्रियमित्यर्थवत् ''न वा अरे पत्युः कामाय पतिः प्रिय'' इत्यादावपि पत्याद्यर्थं पत्यादिः प्रियो न भवतीत्यर्थस्य वक्तव्यत्वेन, ''स्वार्थं स्वयं प्रियो न भवति किं त्वन्यार्थं प्रियः'' इत्यर्थः स्यात् ।**

ಅನುವಾದ - 'ಆತ್ಮನಸ್ತು ಕಾಮಾಯ' ಇತ್ಯಾದಿ ಶ್ರುತಿಯಲ್ಲಿರುವ ಆತ್ಮಶಬ್ದಕ್ಕೆ ಪರಮಾತ್ಮ ಎಂಬರ್ಥವನ್ನು ಹೇಳಬೇಕೆಂದು ಸಮರ್ಥನೆ ಮಾಡಿದ್ದಾಯಿತು. ಪ್ರಕೃತ ಅದ್ವೈತಿಗಳು ಆತ್ಮಶಬ್ದಕ್ಕೆ ಸ್ವಾರ್ಥ ಎಂಬರ್ಥವನ್ನು ಹೇಳುತ್ತಾರೆ ಹೊರತು ಪರಮಾತ್ಮ ಎಂಬರ್ಥವನ್ನು ಹೇಳುವುದಿಲ್ಲ. ಹೀಗೆ ಹೇಳಿದಾಗ ಬರುವ ದೋಷವನ್ನು ಪ್ರಕೃತ ನಿರೂಪಣೆ ಮಾಡುತ್ತಿದ್ದಾರೆ -

'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' ಎಂಬ ವಾಕ್ಯದಲ್ಲಿ ಎಲ್ಲವೂ ಸ್ವಾರ್ಥಕ್ಕಾಗಿ ಪ್ರಿಯವಾಗುತ್ತದೆ. ಆದರೆ ನನಗೆ ನಾನೇ ಸ್ವತಃ ಅಪ್ರಿಯನಾಗಿರುವ ಕಾರಣ ನಿರುಪಾಧಿಕಪ್ರಿಯನೆಂದು ತಿಳಿಯಬೇಕು. ಹೀಗೆ ವ್ಯಾಖ್ಯಾನಿಸುವ ಅದ್ವೈತಿಗಳು ಇದರ ಹಿಂದೆ ಇರುವ 'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ' ಎಂಬ ವಾಕ್ಯದಲ್ಲಿ, 'ಪತ್ಯುಃ' ಎಂಬ ಪದಕ್ಕೆ ಪತ್ಯರ್ಥಂ = ಪತಿಗೋಸ್ಕರ ಎಂದೇ ವ್ಯಾಖ್ಯಾನಿಸಬೇಕು. ಆವಾಗ ಪತಿಗೋಸ್ಕರ ಪ್ರಿಯನಾಗಿರುವುದಿಲ್ಲ. ಬೇರೆ ಇನ್ನೊಬ್ಬನಿಗೋಸ್ಕರ ಪ್ರಿಯನಾಗಿದ್ದೇನೆ ಎಂದು ಹೇಳಬೇಕು. ಹಾಗಾಗಿ ಸ್ವಾರ್ಥಕ್ಕಾಗಿ ಸ್ವತಃ ಪ್ರಿಯನಾಗಿರುವುದಿಲ್ಲ. ಇನ್ನೊಬ್ಬರಿಗೋಸ್ಕರ ಪ್ರಿಯನಾಗಿದ್ದೇನೆ ಎಂಬರ್ಥವನ್ನು ಹೇಳಿದಂತಾಗುತ್ತದೆ.

ಅಭಿಪ್ರಾಯ ಹೀಗಿದೆ - ಪತಿಯು ಹೆಂಡತಿಗೋಸ್ಕರ ಪ್ರಿಯನಾಗಿಲ್ಲ. ಹೊರತು ತನಗಾಗಿ ಹೆಂಡತಿಗೆ ಪ್ರಿಯನಾಗಿದ್ದಾನೆ. ಆದ್ದರಿಂದಲೇ ನಮಗೆ ನಾವು ನಿರುಪಾಧಿಕಪ್ರಿಯರಾಗಿದ್ದೇವೆ ಎಂಬುದು ಅದ್ವೈತಿಗಳ ವ್ಯಾಖ್ಯಾನ. ಪ್ರೀತಿಕರ್ತೃತ್ವವು ಹೆಂಡತಿಯಲ್ಲಿದೆ, ಪ್ರೀತಿ ವಿಷಯತ್ವವು ಪತಿಯಲ್ಲಿದೆ ಎಂದು ಹೇಳುತ್ತಾರೆ. 'ಆತ್ಮನಸ್ತು ಕಾಮಾಯ' ಎಂಬಲ್ಲಿ 'ಸತ್ಯಂ ಪ್ರಿಯಂ ಭವತಿ' ಎಂಬ ಆಕಾಂಕ್ಷೆಯು ಹುಟ್ಟುವುದೇ ಇಲ್ಲ. ಏಕೆಂದರೆ 'ಆತ್ಮನಸ್ತು' ನನಗೋಸ್ಕರ ಎಂದು ಶ್ರುತಿಯಲ್ಲೇ ಹೇಳಲಾಗಿದೆ. ಆದರೆ 'ನ ವಾ ಅರೇ ಪತ್ಯುಃ' ಎಂಬ ಶ್ರುತಿಯಲ್ಲಿ 'ಪತಿಃ ಜಾಯಾಪ್ರಿಯೋ ಭವತಿ, ಕಿಂತು ಆತ್ಮನಸ್ತು ಕಾಮಾಯ ಪತಿಃ ಜಾಯಾಯಾಃ ಪ್ರಿಯೋ ಭವತಿ' ಎಂಬುದಾಗಿ ಆಕಾಂಕ್ಷೆಯು ಪೂರ್ತಿಯಾದರೂ ಅಧ್ಯಾಹಾರ ಮಾಡಿಕೊಳ್ಳಬೇಕು. ಹೀಗೆ ಅಧ್ಯಾಹಾರ ಮಾಡದಿದ್ದರೆ ಪೂರ್ವೋತ್ತರ ವಾಕ್ಯಗಳಿಗೆ ಪರಸ್ಪರ ವಿರೋಧ ಬರುತ್ತದೆ. ಮುಂದಿನ ವಾಕ್ಯದಲ್ಲಿ ಎಲ್ಲವೂ ಸ್ವಾರ್ಥಕ್ಕಾಗಿ ಪ್ರಿಯವಾಗುತ್ತದೆಂದು ಹೇಳಿ, ಹಿಂದಿನ ವಾಕ್ಯದಲ್ಲಿ ಪತಿಯು ಹೆಂಡತಿಗೋಸ್ಕರ ಪ್ರಿಯನಾಗಿಲ್ಲ ಎಂದು ಹೇಳಿದರೆ ವ್ಯಾಹತಿಯು

ಸ್ಪಷ್ಟ. ಒಂದು ವೇಳೆ ಅಧ್ಯಾಹಾರ ಮಾಡಿದರೆ ಪ್ರಾಯಪಾಠ ವಿರೋಧ ಬರುತ್ತದೆ. ಏಕೆಂದರೆ ಮುಂದಿನ ವಾಕ್ಯದಲ್ಲಿ ಅಧ್ಯಾಹಾರವನ್ನು ಮಾಡಿದರೆ, ಹಿಂದಿನ ವಾಕ್ಯದಲ್ಲಿ ಅಧ್ಯಾಹಾರ ಮಾಡುವುದು ಅಸಾಧುವಾಗುತ್ತದೆ.

**त्वत्पक्ष आत्मशब्दस्य स्वात्मपर्यायत्वेन सम्बन्धिशब्दत्वात् प्रतिसम्बन्ध्याकाङ्क्षायां पत्यादीनामेवान्वयात् ।**

ಏಕೆಂದರೆ ಆತ್ಮಶಬ್ದವು ನಿಮ್ಮ ಸಿದ್ಧಾಂತದಲ್ಲಿ ಸ್ವಾತ್ಮಶಬ್ದಕ್ಕೆ ಪರ್ಯಾಯವಾಗಿದೆ. ಹಾಗಾಗಿ ಪ್ರತಿಸಂಬಂಧಿವಾಚಕವಾದ ಶಬ್ದವಾಯಿತು. ಸ್ವಾತ್ಮ ಎಂಬರ್ಥವನ್ನು ತಿಳಿಸುವ ಈ ಶಬ್ದಕ್ಕೆ ಪ್ರತಿಸಂಬಂಧಿಯ ಆಕಾಂಕ್ಷೆಯೂ ಇರುತ್ತದೆ. ಪ್ರತಿಸಂಬಂಧಿ ಎಂದರೆ ಪತ್ಯಾದಿಗಳೆಂದು ವಿವಕ್ಷಿಸಬೇಕು. ಆದ್ದರಿಂದ ಪತಿಯು ತನಗೆ ಪ್ರಿಯನಾಗುತ್ತಾನೆ. ಏಕೆಂದರೆ ಹೆಂಡತಿಗೋಸ್ಕರ.

**तथा च स्वस्य निरुपाधिकप्रियत्वं निषिद्धं स्यादिति ''आत्मनस्तु कामाय'' इत्यस्य ''न वा अरे पत्युः'' इत्यादेश्च मिथो विरोधः स्यात् ।**

ಹೀಗೆ ಹೇಳಿದಾಗ ಸ್ವತಃ ತನಗೆ ನಿರುಪಾಧಿಕಪ್ರಿಯತ್ವವನ್ನು ನಿಷೇಧ ಮಾಡಿದಂತಾಯಿತು. ಅಂದರೆ 'ಆತ್ಮನಸ್ತು ಕಾಮಾಯ' ಎಂಬ ವಾಕ್ಯದಲ್ಲಿ ಯಾವ ನಿರುಪಾಧಿಕಪ್ರಿಯತ್ವವನ್ನು ಹೇಳಲಾಗಿದೆಯೋ, ಅದನ್ನು ಈಗ ಅಲ್ಲಗಳೆದಂತಾಯಿತು. 'ಆತ್ಮನಸ್ತು ಕಾಮಾಯ' ಎಂಬ ವಾಕ್ಯದಿಂದ 'ನ ವಾ ಅರೇ ಪತ್ಯುಃ' ಎಂಬ ವಾಕ್ಯಕ್ಕೆ ಪರಸ್ಪರ ವಿರೋಧವನ್ನು ಹೇಳಿದಂತಾಗುತ್ತದೆ.

(ನಿರುಪಾಧಿಕಪ್ರಿಯತ್ವಂ = ಅನನ್ಯಾರ್ಥಪ್ರಿಯತ್ವಂ. ಸೋಪಾಧಿಕಪ್ರಿಯತ್ವಂ = ಅನ್ಯಾರ್ಥಂ ಪ್ರಿಯತ್ವಂ. ಪ್ರಕೃತ ಪತಿಯು ತನಗೆ ಪ್ರಿಯನಾಗುತ್ತಾನೆ. ಏಕೆಂದರೆ ಹೆಂಡತಿಗೋಸ್ಕರ ಎಂದು ಹೇಳಿದರೆ, ನಿರುಪಾಧಿಕಪ್ರಿಯತ್ವವನ್ನು ಬಿಟ್ಟಂತಾಗುತ್ತದೆ.)

**अपि च परोक्तार्थस्याविगानेन मानान्तरप्राप्तत्वात् वाक्यवैयर्थ्यम् ।**

ಸ್ವಾರ್ಥಕ್ಕಾಗಿ ಎಲ್ಲಾ ವಸ್ತುವು ತನಗೆ ಪ್ರಿಯವಾಗುತ್ತದೆ ಎಂದು ಉಪನಿಷತ್ತಿನ ತಾತ್ಪರ್ಯವೆಂದು ನೀವು ಹೇಳುತ್ತಿದ್ದೀರಿ. ಈ ಅರ್ಥವು ಎಲ್ಲರ ಅನುಭವದಿಂದಲೇ ಸಿದ್ಧವಾಗಿರುವಾಗ ಉಪನಿಷತ್ತು ಇದನ್ನು ಏಕೆ ಹೇಳಬೇಕು? ಬೇರೆ ಪ್ರಮಾಣದಿಂದ ತಿಳಿಯದ ವಿಚಾರವನ್ನಷ್ಟೇ ಉಪನಿಷತ್ತು ಹೇಳಬೇಕು. ಎಲ್ಲರಿಗೂ ಅನುಭೂತವಾದ ವಿಷಯವನ್ನು ಉಪನಿಷತ್ತು ಹೇಳುವುದರಲ್ಲಿ ಅರ್ಥವಿಲ್ಲ.

**किञ्च ''आत्मा वा अरे द्रष्टव्यः श्रोतव्य'' इत्यादिविधेर्जीवविषयत्वं तवापि नेष्टमिति न तद्विषयोऽयमर्थवादः । विध्यर्थवादयोरेकविषयत्वात् ।**

ಮತ್ತೊಂದು ದೋಷ - 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂಬ ವಿಧಿವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ನೀವೂ ಕೂಡ ಹೇಳಲು ಇಚ್ಛಿಸುವುದಿಲ್ಲ. ಇದೇ ವಿಷಯವನ್ನು ಪ್ರತಿಪಾದನೆ ಮಾಡುವ 'ಆತ್ಮನಸ್ತು ಕಾಮಯ' ಎಂಬ ಅರ್ಥವಾದ ವಾಕ್ಯವೂ ಕೂಡ ಜೀವನನ್ನು ಹೇಳಲು ನೀವು ಇಚ್ಛಿಸಬಾರದು. ಏಕೆಂದರೆ ವಿಧಿವಾಕ್ಯ ಹಾಗೂ ಅರ್ಥವಾದ ವಾಕ್ಯಗಳೆರಡೂ ಒಂದೇ ವಿಷಯವನ್ನು ಪ್ರತಿಪಾದನೆ ಮಾಡುತ್ತವೆ. ವಿಧಿವಾಕ್ಯವು ಬ್ರಹ್ಮನನ್ನು ಪ್ರತಿಪಾದನೆ ಮಾಡಿ, ಅರ್ಥವಾದ ವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತದೆ ಎಂದು ನೀವು ವ್ಯಾಖ್ಯಾನ ಮಾಡುತ್ತಿದ್ದೀರಿ. ಇದು ಪೂರ್ವಮೀಮಾಂಸೆಗೆ ವಿರುದ್ಧವಾಗಿದೆ.

**उक्तं हि ''विधिस्तुत्योः सदा वृत्तिः समानविषयेष्यतवे'' इति ।**

ಪೂರ್ವಮೀಮಾಂಸೆಯ 'ವಿಧಿಸ್ತುತ್ಯೋಃ ಸದಾ ವೃತ್ತಿಃ ಸಮಾನವಿಷಯೇಷ್ಯತೇ' ಎಂಬ ಅಧಿಕರಣದಲ್ಲಿ ವಿಧಿ ಹಾಗೂ ಅರ್ಥವಾದ ವಾಕ್ಯಗಳು ಸಮಾನವಿಷಯಕವಾಗಿರಬೇಕೆಂದು ಸಿದ್ಧಾಂತ ಮಾಡಲಾಗಿದೆ. ಅದಕ್ಕೆ ವಿರುದ್ಧವಾಗಿ ನೀವು ಅರ್ಥವಾದ ವಾಕ್ಯವು ಜೀವವಿಷಯಕವೆಂದು ಸಮರ್ಥನೆ ಮಾಡಿದರೆ ಪೂರ್ವಮೀಮಾಂಸೆಯ ವಿರೋಧವು ಪ್ರಾಪ್ತವಾಗುತ್ತದೆ.

**किञ्च परचैतन्यव्यावृत्तस्याहमर्थस्यैव निरुपाधिकप्रियत्वे मोक्षेऽहमर्थाभावात् तस्यानर्थत्वं स्यात् ।**

ಮತ್ತೊಂದು ದೋಷ - ಅಹಮರ್ಥವು ನಿರುಪಾಧಿಕಪ್ರಿಯವೆಂದು ವ್ಯಾಖ್ಯಾನ ಮಾಡುವುದೂ ಕೂಡ ತಪ್ಪು. ಅಹಮರ್ಥವು ಚಿದಚಿತ್‌ಸಂವಲನಾತ್ಮಕವಾಗಿರುವುದರಿದ ಪರಚೈತನ್ಯಕ್ಕಿಂತ ವ್ಯಾವೃತ್ತವಾಗಿದೆ. ಇಂತಹ ಅಹಮರ್ಥಕ್ಕೆ ನಿರುಪಾಧಿಕಪ್ರಿಯತ್ವವನ್ನು 'ಆತ್ಮನಸ್ತು ಕಾಮಾಯ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ ಎಂದು ನೀವು ವ್ಯಾಖ್ಯಾನ ಮಾಡುತ್ತೀರಿ. ಹಾಗಾದಲ್ಲಿ ಮೋಕ್ಷದಲ್ಲಿ ಅಹಮರ್ಥವೇ ಇಲ್ಲದ ಕಾರಣ ಮೋಕ್ಷವು ಪುರುಷಾರ್ಥರೂಪವಾಗಬೇಕಾದೀತು. ಆದ್ದರಿಂದ ನಿಮ್ಮ ಈ ಶ್ರುತಿವ್ಯಾಖ್ಯಾನವು ಅಸಾಧುವಾಗಿದೆ.

**प्रकाशः –**

**इत्यर्थः स्यादिति** ।। अस्तु को दोष इत्यत आह – **त्वत्पक्ष इति** ।। ''आत्मनस्तु कामाय'' इत्यत्रात्मशब्दस्येत्यर्थः ।।

ವಿವರಣೆ - 'ಆತ್ಮನಸ್ತು ಕಾಮಾಯ' ಎಂಬ ಶ್ರುತಿಗೆ ಸಿದ್ಧಾಂತದ ಪ್ರಕಾರ ವ್ಯಾಖ್ಯಾನ ಮಾಡಿ, ಪ್ರಕೃತ ಅದ್ವೈತಸಿದ್ಧಾಂತದ ಪ್ರಕಾರ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. 'ಆತ್ಮನಸ್ತು'

ಎಂಬಲ್ಲಿರುವ ಆತ್ಮಶಬ್ದವು ಪರಮಾತ್ಮಪರವೆಂದು ನಾವು ವ್ಯಾಖ್ಯಾನ ಮಾಡುತ್ತೇವೆ. ಆದರೆ ಅದ್ವೈತಿಗಳು 'ಸ್ವಾತ್ಮ' ಎಂಬರ್ಥವನ್ನು ಹೇಳುತ್ತಾರೆ. ಹೀಗೆ ಅರ್ಥವನ್ನು ಹೇಳಿದರೆ ಪೂರ್ವೋತ್ತರವಾಕ್ಯಗಳಿಗೆ ಪರಸ್ಪರ ವಿರೋಧವು ಪ್ರಾಪ್ತವಾಗುತ್ತದೆಂದು ಗ್ರಂಥಕಾರರು ಪ್ರತಿಪಾದನೆ ಮಾಡಿದ್ದಾರೆ. 'ಇತ್ಯರ್ಥಃ ಸ್ಯಾತ್' ಎಂಬುದಾಗಿ ಅದ್ವೈತಿಗಳ ಪ್ರಕಾರ ಶ್ರುತಿಯ ಅರ್ಥವನ್ನು ಆಕ್ಷೇಪ ಮಾಡಿದ್ದಾರೆ. ಅದ್ವೈತಿಗಳ ವ್ಯಾಖ್ಯಾನವನ್ನು ಒಪ್ಪಿದರೆ ಬರುವ ದೋಷವನ್ನು 'ತ್ವತ್‌ಪಕ್ಷೇ' ಎಂಬ ವಾಕ್ಯಗಳಿಂದ ತೋರಿಸುತ್ತಿದ್ದಾರೆ. 'ಆತ್ಮಶಬ್ದಸ್ಯ' ಎಂದರೆ 'ಆತ್ಮನಸ್ತು ಕಾಮಾಯ' ಎಂಬಲ್ಲಿರುವ ಆತ್ಮಶಬ್ದಕ್ಕೆ ಎಂದರ್ಥ.

**प्रकाशः – परोक्तार्थस्येति** ।। स्वीयतया प्रियत्वार्थस्य भार्यादौ लोके प्रत्यक्षादिनैव प्राप्तत्वादित्यर्थः । अप्राप्ते शास्त्रमर्थवदिति भावः ।।

ಲೋಕದಲ್ಲಿ ಹೆಂಡತಿ ಮೊದಲಾದವರನ್ನು ಸ್ವಾರ್ಥಕ್ಕಾಗಿಯೇ ಎಲ್ಲರೂ ಪ್ರೀತಿಸುತ್ತಾರೆ. ಪ್ರತ್ಯಕ್ಷದಿಂದಲೇ ಸಿದ್ಧವಾದ ಈ ವಿಚಾರವನ್ನು ಉಪನಿಷತ್ತು ಸಮರ್ಥನೆ ಮಾಡುವುದರಲ್ಲಿ ಅರ್ಥವಿಲ್ಲ. ಏಕೆಂದರೆ ಅಪ್ರಾಪ್ತವಾದದ್ದನ್ನಷ್ಟೇ ಶಾಸ್ತ್ರವು ಪ್ರತಿಪಾದನೆ ಮಾಡಬೇಕು.

**प्रकाशः – न तद्विषयोऽयमिति** ।। तथा च तस्य सिद्धान्ते गत्यभिधानमत्यन्तासङ्गतम् । अन्यथा अर्थवादान्तरस्यापि गत्यभिधानप्रसङ्ग इति भावः ।।

'ನ ತದ್ವಿಷಯೋಽಯಮ್' ಎಂಬುದರ ಅಭಿಪ್ರಾಯ ಹೀಗಿದೆ - ಅಭೇದದ ವಿವಕ್ಷೆಯಿಂದ ವಿಧಿ ಮತ್ತು ಅರ್ಥವಾದ ವಾಕ್ಯಗಳಿಗೆ ಏಕವಿಷಯತ್ವವನ್ನು ಅದ್ವೈತಿಗಳು ಸಮರ್ಥನೆ ಮಾಡಬೇಕು. ಹಾಗೇ ಅಭೇದವಿವಕ್ಷೆಯಿಂದ ಏಕವಿಷಯತ್ವವನ್ನು ಹೇಳುವುದಾದರೆ, ಉಳಿದ ಅರ್ಥವಾದ ವಾಕ್ಯಗಳಲ್ಲಿಯೂ ಕೂಡ ಅಭೇದವನ್ನೇ ಒಪ್ಪಿ ಗತಿಯನ್ನು ಹೇಳಬೇಕಾದೀತು. ಆದರೆ ಇದು ಪೂರ್ವಮೀಮಾಂಸೆಗೆ ವಿರುದ್ಧವಾಗಿದೆ. ಈ ಎಲ್ಲಾ ಕಾರಣಗಳಿಂದ 'ಆತ್ಮನಸ್ತು ಕಾಮಾಯ' ಎಂಬ ಅದ್ವೈತಿಗಳ ಶ್ರುತಿವ್ಯಾಖ್ಯಾನವು ಅತ್ಯಂತ ಅಸಾಧುವಾಗಿದೆ ಎಂದು ಸಿದ್ಧವಾಯಿತು.




ಎಲ್ಲವೂ ಕೂಡ ಪರಮಾತ್ಮನ ಇಚ್ಛೆಯಿಂದಷ್ಟೇ ಪ್ರಿಯವಾಗುತ್ತದೆ. ಪರಮಾತ್ಮನ ಇಚ್ಛೆಯಿಂದಲೇ ಅಪ್ರಿಯವಾಗುತ್ತದೆಂದು 'ಆತ್ಮನಸ್ತು ಕಾಮಾಯ' ಎಂಬ ಶ್ರುತಿಗೆ ನಾವು ವ್ಯಾಖ್ಯಾನ ಮಾಡಿದೆವು. ಆದರೆ ಅದ್ವೈತಿಗಳು ಹೀಗೆ ಹೇಳುವುದಿಲ್ಲ. ಸ್ವಾರ್ಥಕ್ಕಾಗಿ ಎಲ್ಲವೂ ಪ್ರಿಯವಾಗುತ್ತವೆ. ಮತ್ತು ಅಪ್ರಿಯವಾಗುತ್ತವೆಂದು ವ್ಯಾಖ್ಯಾನ ಮಾಡುತ್ತಾರೆ. ಹಾಗೆಯೇ ವ್ಯಾಖ್ಯಾನಿಸುವ ಅದ್ವೈತಿಗಳಿಗೆ 'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ' ಎಂಬ ಹಿಂದಿನ ವಾಕ್ಯದಿಂದಲೇ ವಿರೋಧವು ಪ್ರಾಪ್ತವಾಗುತ್ತದೆ. 'ಆತ್ಮನಸ್ತು ಕಾಮಾಯ' ಎಂಬಲ್ಲಿ ನಿರುಪಾಧಿಕಪ್ರಿಯತ್ವವನ್ನು ಹೇಳಿ, ಅದಕ್ಕೆ ವಿರುದ್ಧವಾಗಿ 'ನ ವಾ ಅರೇ ಪತ್ಯುಃ ಕಾಮಾಯ' ಎಂಬ ವಾಕ್ಯದಲ್ಲಿ ಇನ್ನೊಬ್ಬರಿಗೋಸ್ಕರ ಪ್ರಿಯರಾಗಿರುತ್ತಾರೆ ಎಂದು ಹೇಳಿದರೆ ವಿರೋಧವು ಸ್ಪಷ್ಟ. ಮತ್ತು ತನಗಾಗಿ ಎಲ್ಲವೂ ಪ್ರಿಯವಾಗುತ್ತದೆಂಬ ವಿಷಯವನ್ನು ಉಪನಿಷತ್ತು ಏಕೆ ಪ್ರತಿಪಾದನೆ

ಮಾಡಬೇಕು? ಅಷ್ಟೇ ಅಲ್ಲದೇ 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂಬ ವಿಧಿವಾಕ್ಯವು ಬ್ರಹ್ಮವಿಷಯಕವೆಂದು ಅದ್ವೈತಿಗಳೇ ಹೇಳಿದ್ದಾರೆ. ಆದರೆ ಅರ್ಥವಾದ ವಾಕ್ಯವೆನಿಸಿದ 'ಆತ್ಮನಸ್ತು ಕಾಮಾಯ' ಎಂಬ ವಾಕ್ಯವನ್ನು ಜೀವವಿಷಯಕವೆನ್ನುತ್ತಾರೆ. ವಿಧಿ ಹಾಗೂ ಅರ್ಥವಾದ ವಾಕ್ಯಗಳೆರಡೂ ಸಮಾನ ವಿಷಯಕವೇ ಆಗಿರಬೇಕೆಂಬುದು ಪೂರ್ವಮೀಮಾಂಸೆಯಲ್ಲಿ ಸಿದ್ಧವಾದ ವಿಚಾರ.

## ಅದ್ವೈತಿಗಳ ಉಳಿದ ಸೂತ್ರವ್ಯಾಖ್ಯಾನ ವಿಮರ್ಶೆ

### तात्पर्यचन्द्रिका

**द्वितीयसूत्रे चोत्क्रान्तस्येति वक्तव्यम् । न तूत्क्रमिष्यत इति ।**

ಅನುವಾದ - 'ಉತ್ಕ್ರಮಿಷತೇ ಏವಂಭಾವಾದಿತ್ಯೌಡುಲೋಮಿಃ' ಎಂಬ ಎರಡನೆಯ ಸೂತ್ರ ವ್ಯಾಖ್ಯಾನವು ಅದ್ವೈತಿಗಳ ಪ್ರಕಾರ ಅಸಾಧುವಾಗಿದೆ. ಅವರು ವ್ಯಾಖ್ಯಾನ ಮಾಡುವಂತೆ 'ಉತ್ಕ್ರಾಂತಸ್ಯ' ಎಂದೇ ಹೇಳಬೇಕು. ಹೊರತು, 'ಉತ್ಕ್ರಮಿಷ್ಯತೇ' ಎಂಬುದು ಅಸಾಧುವಾಗುತ್ತದೆ. ಉತ್ಕ್ರಾಂತನಾದ ಎಂದರೆ ಮುಕ್ತನಾದ ಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆಂದೇ ಅದ್ವೈತಿಗಳು ಹೇಳಬೇಕು. 'ಉತ್ಕ್ರಮಿಷ್ಯತಃ' ಎಂದು ಹೇಳಿದರೆ ಸಂಸಾರಾವಸ್ಥೆಯಲ್ಲಿರುವ ಜೀವನೇ ಅಭಿನ್ನನಾಗಿದ್ದಾನೆಂದು ಹೇಳಿದಂತಾಗುತ್ತದೆ.

**तृतीयेऽप्यस्मदीया ब्रह्मणि जगतोऽवस्थितेरिति योजनैव युक्ता, नतु ब्रह्मणो जीवभावेनावस्थितेरिति परोक्तव । अस्थितेर्हि 'कुत्र' इत्याधाराकाङ्क्षा उत्थिता, 'कथं' इति प्रकारेतु उत्थापिता ।**

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅದ್ವೈತಿಗಳ ಪ್ರಕಾರ ಅಸಾಧುವಾಗಿದೆ. 'ಅವಸ್ಥಿತೇಃ' ಎಂದು ಹೇಳಿದಾಗ 'ಬ್ರಹ್ಮಣಿ' ಎಂಬುದಾಗಿ ಧರ್ಮಿವಾಚಕವಾದ ಸಪ್ತಮ್ಯಂತಪದವನ್ನು ನಾವು ಯೋಜನೆ ಮಾಡುತ್ತೇವೆ. ಬ್ರಹ್ಮನಲ್ಲಿ ಸಮಸ್ತ ಜಗತ್ತು ಅವಸ್ಥಿತವಾಗಿದೆ ಎಂದರ್ಥ. ಆದರೆ ಅದ್ವೈತಿಗಳಾದ ನೀವು 'ಬ್ರಹ್ಮನು ಜೀವಸ್ವರೂಪದಿಂದ ಇರುವ ಕಾರಣ' ಎಂಬರ್ಥವನ್ನು ಹೇಳುತ್ತೀರಿ. 'ಅವಸ್ಥಿತೇಃ' ಎಂದು ಹೇಳಿದಾಗ ಕುತ್ರ ಎಂಬುದಾಗಿ ಆಧಾರದ ಆಕಾಂಕ್ಷೆಯು ಸಹಜವಾಗಿ ಬರುತ್ತದೆ. 'ಕಥಂ' ಎಂಬ ಪ್ರಕಾರದ ಆಕಾಂಕ್ಷೆಯು ಸಹಜವಾಗಿ ಬರುವುದಿಲ್ಲ. ಹೊರತು ಉತ್ಥಾಪಿತವಾಗಿ ಬರುತ್ತದೆ.

**न चोत्थिताकाङ्क्षितस्याध्याहारं हित्वोत्थापिताकाङ्क्षितस्य स युक्तः ।**

### ಪರಿಪೂರ್ಣಚಂದ್ರಿಕಾ

ಸಹಜವಾದ ಉತ್ಥಿತಾಕಾಂಕ್ಷೆಯಿಂದಲೇ ಅಧ್ಯಾಹಾರವನ್ನು ಮಾಡಿಕೊಳ್ಳಲು ಬರುವಾಗ ಅಸಹಜವಾದ ಉತ್ಥಾಪಿತ ಆಕಾಂಕ್ಷೆಯಿಂದ ಜೀವಭಾವೇನ ಎಂಬುದಾಗಿ ಪ್ರಕಾರದ ಅಧ್ಯಾಹಾರವನ್ನು ಮಾಡಿಕೊಳ್ಳುವುದು ಅಯುಕ್ತವಾಗುತ್ತದೆ. ಹಾಗಾಗಿ ನಾವು ಹೇಳುವಂತೆ 'ಬ್ರಹ್ಮಣ' ಎಂಬುದಾಗಿ ಧರ್ಮಿವಾಚಕಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದೇ ಸಾಧುವಾಗಿದೆ.

**अत्र चाद्यसूत्रद्वये प्रमेयास्वारस्यं परैरेवाङ्गीकृतम् । तृतीये तु प्रमेयास्वारस्यमभेदनिरासेन ''पृथगुपदेशात्'' इत्यत्र वक्ष्यत इति नेहोच्यते । टीकाक्षरार्थस्तु स्पष्टः ।। छ ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् समाकर्षाधिकरणं सम्पूर्णम् ।।५।।**

ಈ ಮೂರು ಸೂತ್ರಗಳಲ್ಲಿ ಮೊದಲೆರಡು ಸೂತ್ರಗಳ ಪ್ರಮೇಯವು ಅಸ್ವರಸವಾಗಿದೆಯೆಂದು ಸ್ವತಃ ಅದ್ವೈತಿಗಳೇ ಅಂಗೀಕರಿಸಿದ್ದಾರೆ. ಮೂರನೆಯ ಸೂತ್ರವು ಪಾರಮಾರ್ಥಿಕವಾದ ಭೇದವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಸ್ವರಸವಾಗಿದೆಯೆಂದು ಹೇಳುತ್ತಾರೆ. ಆದರೆ ಪೃಥಗುಪದೇಶಾಧಿಕರಣದಲ್ಲಿ ನಾವು ಅಭೇದವನ್ನು ನಿರಾಕರಣೆ ಮಾಡುತ್ತೇವೆ. ಆ ಅಧಿಕರಣದಿಂದಲೇ ಮೂರನೆಯ ಸೂತ್ರದ ಪ್ರಮೇಯದಲ್ಲಿಯೂ ಅಸ್ವಾರಸ್ಯವಿದೆ ಎಂದು ಸ್ಪಷ್ಟವಾಗುವುದರಿಂದ ಪುನಃ ಇಲ್ಲಿ ಪ್ರತ್ಯೇಕವಾಗಿ ನಿರಾಕರಣೆ ಮಾಡಿರುವುದಿಲ್ಲ.

ಟೀಕೆಯಲ್ಲಿರುವ ಕಠಿಣಪದಾರ್ಥಗಳು ಪ್ರಂಬಂಧರೂಪದಿಂದ ವ್ಯಾಖ್ಯಾನ ಮಾಡುವಾಗಲೇ ಸ್ಪಷ್ಟವಾಗಿದೆ. ಆದ್ದರಿಂದ ಪ್ರತ್ಯೇಕವಾಗಿ ಬರೆದಿರುವುದಿಲ್ಲ.

ಇಲ್ಲಿಗೆ ಶ್ರೀ ಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದರ ಶಿಷ್ಯಂದಿರಾದ ಶ್ರೀ ವ್ಯಾಸತೀರ್ಥಯತಿಗಳಿಂದ ವಿರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಸಮಾಕರ್ಷಾಧಿಕರಣವು ಸಂಪೂರ್ಣವಾಯಿತು

**प्रकाशः —**

**परैरेवेति** ।। ''आत्यन्तिके हि जीवपरमात्मनोरभेदेऽतात्त्विको नाद्य विद्योपधान कल्पितोभेदस्तत्त्वमसीति जीवात्मनो ब्रह्मभावोपदेश श्रवणमनननिदिध्यासनप्रकर्षपर्यन्तजन्मना साक्षात्कारेण शक्यः समूलकाषं कषितुम्;

ವಿವರಣ - ಅದ್ವೈತಿಗಳು ವಾಕ್ಯಾನ್ವಯಾಧಿಕರಣದಲ್ಲಿ ಅಭೇದವನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುವ ಉದ್ದೇಶದಿಂದ 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರಾರ್ಥವನ್ನಷ್ಟೇ ಸ್ವೀಕರಿಸಿದ್ದಾರೆ. ಅಭೇದವೇ

ಪಾರಮಾರ್ಥಿಕವಾದದ್ದು ಎಂಬುದನ್ನು ಅವರ ಪ್ರಕಾರ ಹೀಗೆ ತಿಳಿಯಬೇಕು -

ಜೀವ ಹಾಗೂ ಪರಮಾತ್ಮರ ಅಭೇದವು ಆತ್ಯಂತಿಕವಾಗಿ ಸತ್ಯವಾಗಿದೆ. ಆದರೆ ಅನಾದಿಯಾದ ಅವಿದ್ಯೆಯೆಂಬ ಉಪಾಧಿಯಿಂದ ಕಲ್ಪಿತವಾದ ಭೇದವು ಅತಾತ್ವಿಕವಾಗಿದೆ. ಇಂತಹ ಭೇದವು ಬುಡಸಹಿತವಾಗಿ ಅಭೇದಸಾಕ್ಷಾತ್ಕಾರದಿಂದ ನಾಶವಾಗುತ್ತದೆ. 'ತತ್ತ್ವಮಸಿ' ಎಂಬ ಶ್ರುತಿಯಿಂದ ಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆಂದು ಉಪದೇಶ ಪಡೆದು ಶ್ರವಣ, ಮನನ, ನಿದಿಧ್ಯಾಸನಗಳ ಪ್ರಕರ್ಷದಿಂದ ಆತ್ಯಂತಿಕವಾಗಿ ಅಭೇದದ ಸಾಕ್ಷಾತ್ಕಾರವು ಲಭಿಸುತ್ತದೆ. ಇಂತಹ ಸಾಕ್ಷಾತ್ಕಾರದಿಂದ ಭೇದವು ಸಂಪೂರ್ಣವಾಗಿ ನಿವಾರಣೆಯಾಗುತ್ತದೆ.

**ಪ್ರಕಾಶः** – रज्ज्वां हि विभ्रम इव रज्जुतत्वसाक्षात्कारेण । राजपुत्रस्येव म्लेच्छकुले वर्धमानस्यात्मनि समारोपितो म्लेच्छभावो राजपुत्रोऽसीत्याप्तोपदेशेन ;

ಹೇಗೆಂದರೆ ಹಗ್ಗವನ್ನು ನೋಡಿ, ಸರ್ಪವೆಂದು ಭ್ರಮಿಸಿರುತ್ತಾನೆ. ಆವಾಗ ಹಗ್ಗದ ಯಥಾರ್ಥ ಸಾಕ್ಷಾತ್ಕಾರದಿಂದ ಸರ್ಪವೆಂಬ ಭ್ರಮವು ನಾಶವಾಗುತ್ತದೆ. ಅಥವಾ ಮ್ಲೇಚ್ಛರ ಕುಲದಲ್ಲಿ ರಾಜಪುತ್ರನು ಬೆಳೆಯುತ್ತಾ ತನ್ನನ್ನು ಮ್ಲೇಚ್ಛನೆಂದು ತಿಳಿದಿರುತ್ತಾನೆ. ಆಪ್ತನಾದವನು 'ರಾಜಪುತ್ರೋಽಸಿ' ಎಂದು ಹೇಳಿದಾಗ ತಾನು ಮ್ಲೇಂಛನೆಂಬ ಭ್ರಾಂತಿಯು ರಾಜಪುತ್ರನಿಗೆ ನಿವಾರಣೆಯಾಗುತ್ತದೆ. ಈ ಎರಡು ದೃಷ್ಟಾಂತಗಳಂತೆ ಅಭೇದದ ಸಾಕ್ಷಾತ್ಕಾರದಿಂದ ಭೇದಭ್ರಾಂತಿಯು ಸಂಪೂರ್ಣವಾಗಿ ಪರಿಹಾರವಾಗುತ್ತದೆ.

**ಪ್ರಕಾಶः** – ननु मृद्विकारश्शरावादिश्शतशोऽपि मृण्मृदिति चिन्त्यमानस्तज्जन्मना मृद्भावसाक्षात्कारेण शक्यो निवर्तयितुम् ।

ಭ್ರಾಂತಿಯಷ್ಟೇ ಸಾಕ್ಷಾತ್ಕಾರದಿಂದ ಪರಿಹಾರವಾಗುತ್ತದೆ ಹೊರತು, ಮಣ್ಣಿನ ವಿಕಾರವೆನಿಸಿದ ಘಟಶರಾವಾದಿಗಳನ್ನು ಸಾವಿರ ಬಾರಿ ಮಣ್ಣು, ಮಣ್ಣು ಎಂಬುದಾಗಿ ಆಲೋಚನೆ ಮಾಡಿದರೂ ಕೂಡ ಅದರಿಂದ ದೊರೆಯುವ ಮಣ್ಣಿನ ಸಾಕ್ಷಾತ್ಕಾರದಿಂದ ಘಟಶರಾವಾದಿಗಳು ನಿವಾರಣೆಯಾಗುವುದಿಲ್ಲ.

**ಪ್ರಕಾಶः** – तत्कस्य हेतोः । तस्य मृदाभिन्नस्य तात्विकत्वात् । वस्तुनश्च ज्ञानेन छेत्तुमशक्यत्वात् । सोऽयं प्रतिपिपादयिषितार्थानुसारः ।

ಯಾವಕಾರಣದಿಂದ ವಸ್ತು ನಾಶವಾಗುವುದಿಲ್ಲ ಎಂದರೆ ಘಟಶರಾವಾದಿಗಳು ಮಣ್ಣಿಗಿಂತ ತಾತ್ವಿಕವಾಗಿ ಭಿನ್ನವಾಗಿರುತ್ತವೆ. ವಸ್ತುವಿನ ಜ್ಞಾನದಿಂದ ಇದನ್ನು ಪರಿಹರಿಸಲು ಸಾಧ್ಯವಾಗುವುದಿಲ್ಲ.

**ಪ್ರಕಾಶः** – अपि च जीवस्यात्मविकारत्वे तस्य ज्ञानध्यानादिसाधनानुष्ठानात्स्व-प्रकृतावप्यये सति नामृतत्वस्याशास्तीत्यपुरुषार्थत्वम् ।

ಔಡುಲೋಮಿ ಹಾಗೂ ಆಶ್ಮರಥ್ಯರು ಜೀವಬ್ರಹ್ಮರಿಗೆ ಭೇದಾಭೇದವನ್ನು ಹೇಳಿದ್ದಾರೆ. ಯಾವರೀತಿಯಾಗಿ ಮೃತ್ಪಿಂಡದ ವಿಕಾರವೆನಿಸಿದ ಘಟವು ಮೃತ್ಪಿಂಡದಿಂದ ಭೇದಾಭೇದವನ್ನು ಹೊಂದಿದೆಯೋ, ಅದರಂತೆ

ಜೀವನು ಬ್ರಹ್ಮನ ವಿಕಾರನಾಗಿರುವುದರಿಂದ ಭಿನ್ನಾಭಿನ್ನನಾಗಿದ್ದಾನೆ ಎಂದು ಹೇಳುತ್ತಾರೆ. ಇದು ಸರಿಯಲ್ಲ. ಒಂದುವೇಳೆ ಜೀವನು ಬ್ರಹ್ಮನ ವಿಕಾರನಾದರೆ ವಿಕಾರವೆನಿಸಿದ ಜೀವನು ಜ್ಞಾನಧ್ಯಾನಾದಿ ಸಾಧನಾನುಷ್ಠಾನದಿಂದ ತನ್ನ ಪ್ರಕೃತಿಯಲ್ಲಿ ಲಯವನ್ನು ಹೊಂದಬೇಕಾದೀತು. ಆವಾಗ ಜೀವನಿಗೆ ಮೋಕ್ಷದ ಆಸೆಯೇ ಇಲ್ಲದಿರಬೇಕಾದೀತು. ಮೋಕ್ಷವು ಅಪುರುಷಾರ್ಥವಾಗಬೇಕಾದೀತು.

**प्रकाशः** – अमृतत्वप्राप्तिश्रुतिविरोधश्च । काशकृत्स्नमते त्वेतदुभयं नास्ति'' इत्यादिना अस्वारस्याभिधानादिति भावः ।

ಮತ್ತು 'ತಮೇವಂ ವಿದ್ವಾನ್ ಅಮೃತ ಇಹ ಭವತಿ ನ್ಯಾನಃ ಪಂಥಾ ಅಯನಾಯ ವಿದ್ಯತೇ' ಎಂಬ ಅಮೃತತ್ವ ಪ್ರಾಪ್ತಿಯನ್ನು ಹೇಳುವ ಶ್ರುತಿಯ ವಿರೋಧವೂ ಕೂಡ ಬರುತ್ತದೆ. ಅಪುರುಷಾರ್ಥತ್ವ ಎಂಬ ದೋಷ, ಹಾಗೂ ಶ್ರುತಿವಿರೋಧ ಎಂಬ ದೋಷವು ಕಾಶಕೃತ್ಸ್ನಾಚಾರ್ಯರ ಮತದಲ್ಲಿ ಬರುವುದಿಲ್ಲ. ಏಕೆಂದರೆ ಭೇದವೆಲ್ಲವೂ ಕಾಲ್ಪನಿಕ, ಅಭೇದವಷ್ಟೇ ಪಾರಮಾರ್ಥಿಕವೆಂದು ಕಾಶಕೃತ್ಸ್ನಾಚಾರ್ಯರ ಮತ. ಹೀಗೆ ಔಡುಲೋಮಿ ಹಾಗೂ ಆಶ್ಮರಥ್ಯಾಚಾರ್ಯರ ಮತದಲ್ಲಿ ಅಸ್ವಾರಸ್ಯವನ್ನು ನೀವೇ ಹೇಳಿರುತ್ತೀರಿ.

**प्रकाशः** – एतेन जीवोपक्रमनिर्वाहपरतया सूत्रत्रयस्य परकृतव्याख्यानं ''वाक्यान्वयात्'' इत्यनेन गतप्रायमिति प्रत्याख्याय ''विज्ञानघन एवैतेभ्यो भूतेभ्यस्समुत्थाय'' इत्यादौ विज्ञानघनादिजीववाचिशब्देनैव तत्प्रकरणगतेन परमात्मनिर्वाहपरं सूत्रत्रयम् ।

ಹೀಗೆ ಹೇಳಿದ್ದರಿಂದ ರಾಮಾನುಜಾಚಾರ್ಯರ ಗುರುಗಳಾದ ಯಾದವಪ್ರಕಾಶರ ಮತವನ್ನು ನಿರಾಕರಣೆ ಮಾಡಿದಂತಾಯಿತು.[೧] ಉಪಕ್ರಮದಲ್ಲಿ ಜೀವನೇ ಪ್ರಸಕ್ತನಾಗಿದ್ದಾನೆ. ಅದನ್ನು ನಿರ್ವಹಣೆ ಮಾಡಲು ಮೂರು ಸೂತ್ರಗಳು ಹೊರಡುತ್ತವೆಂದು ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಆದರೆ 'ವಾಕ್ಯಾನ್ವಯಾತ್' ಎಂಬ ಸೂತ್ರದಿಂದಲೇ ಉಪಕ್ರಮದಲ್ಲಿ ಜೀವನು ಪ್ರಸಕ್ತನಾಗಿದ್ದರೂ ಕೂಡ, ಉಪಸಂಹಾರವು ಪ್ರಬಲವಾಗಿರುವುದರಿಂದ ಉಪಸಂಹಾರಕ್ಕೆ ಅನುಗುಣವಾಗಿ, ಉಪಕ್ರಮವಾಕ್ಯಗಳನ್ನು ಅರ್ಥೈಸಬೇಕೆಂದು ತಿಳಿಯುತ್ತದೆ. ಆದ್ದರಿಂದ 'ವಾಕ್ಯಾನ್ವಯಾತ್' ಎಂಬ ಸೂತ್ರದಿಂದ ಮುಂದಿನ ಮೂರು ಸೂತ್ರಗಳು ಗತಾರ್ಥವಾಗಿವೆ ಎಂಬುದಾಗಿ ಅದ್ವೈತಮತವನ್ನು ನಿರಾಕರಣೆ ಮಾಡಿ, 'ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿ ಪ್ರಸಕ್ತವಾಗಿದೆ. ಬ್ರಹ್ಮನ ಪ್ರಕರಣವಾಗಿರುವುದರಿಂದ ಸಮಸ್ತ ವಾಕ್ಯಗಳೆಲ್ಲವೂ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ. ಹೀಗಿರುವಾಗ ಮಧ್ಯದಲ್ಲಿರುವ ವಿಜ್ಞಾನಘನ ಎಂಬ ಶಬ್ದವು ಜೀವನನ್ನು ಏಕೆ ಹೇಳುತ್ತಿದೆ? ಎಂಬ ಗೊಂದಲವುಂಟಾಗುತ್ತದೆ.

(೧) ಯಾದವಪ್ರಕಾಶರವರು ರಾಮಾನುಜಾಚಾರ್ಯರ ಗುರುಗಳು. ಆದರೆ ಶಿಷ್ಯನ ಏಳಿಗೆಯನ್ನು ಸಹಿಸದಿದ್ದಾಗ, ಶಿಷ್ಯರಾದ ರಾಮಾನುಜಾಚಾರ್ಯರು ಗುರುಗಳಾದ ಯಾದವಪ್ರಕಾಶರನ್ನು ಬಿಟ್ಟು ಬೇರೆ ಪಂಥವನ್ನು ಸ್ಥಾಪನೆ ಮಾಡುತ್ತಾರೆ. ಯಾದವಪ್ರಕಾಶರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದರು, ಅದಕ್ಕೆ ವಿರುದ್ಧವಾದ ಮತ್ತೊಂದು ಭಾಷ್ಯವನ್ನು ರಾಮಾನುಜಾಚಾರ್ಯರು ಬರೆಯುತ್ತಾರೆ.

ಇದರ ಪರಿಹಾರಕ್ಕಾಗಿ ಪರಮಾತ್ಮನ ಪ್ರಕರಣದಲ್ಲಿರುವ ಕಾರಣ ವಿಜ್ಞಾನಘನ ಎಂಬ ಶಬ್ದವೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು ತಿಳಿಸಲು ಮುಂದಿನ ಮೂರು ಸೂತ್ರಗಳು ಹೊರಟಿವೆ ಎಂದು ಯಾದವಪ್ರಕಾಶರ ಅಭಿಪ್ರಾಯ.

**ಪ್ರಕಾಶಃ** – तत्र जीवस्य ब्रह्मकार्यतया तयोर्भेदाभेदौ स्वाभाविकाविति यादवप्रकाशेनोपेतत्वादभेदाभिप्रायेण जीवशब्देन परमात्मग्रहणमेकविज्ञानेन सर्वविज्ञानप्रतिज्ञासिद्धेर्लिङ्गमित्याद्यस्यार्थः ।

ಜೀವನು ಬ್ರಹ್ಮನ ಕಾರ್ಯನಾಗಿರುವುದರಿಂದ ಜೀವಬ್ರಹ್ಮರಿಗೆ ಭೇದಾಭೇದವು ಸ್ವಾಭಾವಿಕವಾಗಿದೆ ಎಂದು ಯಾದವಪ್ರಕಾಶರು ಒಪ್ಪಿದ್ದಾರೆ. ಅಭೇದಾಭಿಪ್ರಾಯದಿಂದ 'ಜೀವ' ಎಂಬ ಶಬ್ದದಿಂದ ಪರಮಾತ್ಮನನ್ನು ಸ್ವೀಕರಿಸಿ, ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ಕೂಡಿಸಬೇಕೆಂಬುದು ಇವರ ವ್ಯಾಖ್ಯಾನ.

**ಪ್ರಕಾಶಃ** – द्वितीयस्य प्रागुक्त एवार्थः । तृतीयस्य तु ''यस्यात्मा शरीरम्'' इत्यादेश्शरीरभूते जीवात्मन्यात्मतयाऽवस्थिते जीवशब्देन ब्रह्माभिधानमित्यर्थः ।

ಎರಡನೆಯ ಸೂತ್ರಕ್ಕೆ ಹಿಂದೆ ಅದ್ವೈತಿಗಳು ಹೇಳಿದಂತೆ ವ್ಯಾಖ್ಯಾನ ಮಾಡುತ್ತಾರೆ. ಮೂರನೆಯ ಸೂತ್ರಕ್ಕೆ 'ಯಸ್ಯಾತ್ಮಾ ಶರೀರಮ್' ಎಂಬ ಶ್ರುತಿಯಲ್ಲಿ ಬ್ರಹ್ಮನಿಗೆ ಜೀವನು ಶರೀರನಾಗಿರುವುದರಿಂದ ಜೀವನಲ್ಲಿ ಪರಮಾತ್ಮನು ಅವಸ್ಥಿತನಾಗಿದ್ದಾನೆಂದು ವ್ಯಾಖ್ಯಾನ ಮಾಡುತ್ತಾರೆ.

**ಪ್ರಕಾಶಃ** – तत्राद्यं मतद्वयं प्राग्वन्नाभिमतम् । तृतीयं त्वभिमतम् । अनभिमतिबीजं त्वाद्ये ''न जायत'' इत्यजत्वश्रुतिविरोधः । कृतहानाकृताभ्यागमौ। फलभोगार्थं सृष्टिविरोधः । उपायानुष्ठानवैयर्थ्यमित्यादिदूषणम् ।

ಔಡುಲೋಮಿ ಹಾಗೂ ಆಶ್ಮರಥ್ಯಾಚಾರ್ಯರ ಮತಗಳೆರಡೂ ಸಮ್ಮತವಾಗಿರುವುದಿಲ್ಲ. ಆದರೆ ಮೂರನೆಯ ಕಾಶಕೃತ್ಸ್ನಾಚಾರ್ಯರ ಮತವು ಅಭಿಪ್ರೇತವಾಗಿದೆ. ಅವರಿಬ್ಬರ ಮತವು ಏಕೆ ಅಭಿಮತವಲ್ಲ? ಎಂದರೆ ಭೇದಾಭೇದವೆರಡು ಸ್ವಾಭಾವಿಕವೆಂದು ಹೇಳುವುದಾದರೆ, ಜೀವನು ಬ್ರಹ್ಮನ ಕಾರ್ಯ ಎಂದು ಹೇಳಿದಂತಾಗುತ್ತದೆ. ಆವಾಗ 'ನ ಜಾಯತೇ ಮ್ರಿಯತೇ' ಎಂಬ ಅಜತ್ವಶ್ರುತಿಯ ವಿರೋಧವೂ ಬರುತ್ತದೆ. ಮತ್ತು 'ಕೃತಹಾನ, ಅಕೃತಾಭ್ಯಾಗಮ' ಎಂಬೆರಡು ದೋಷಗಳು ಬರುತ್ತದೆ. ಸಾಧನೆ ಮಾಡಿದವನಿಗೆ ಫಲವೇ ಸಿಗುವುದಿಲ್ಲ. ಸಾಧನೆ ಮಾಡದವನಿಗೆ ಫಲ ಸಿಗುತ್ತವೆ. ಮತ್ತು ಫಲ ಸಿಗಬೇಕೆಂಬ ಉದ್ದೇಶದಿಂದ ಸಾಧನೆ ಮಾಡದ ಯಾರಿಗೋ ಫಲ ಸಿಗುವುದಾದರೆ, ನಾವೇಕೆ ಸಾಧನೆ ಮಾಡಬೇಕು. ಇತ್ಯಾದಿ ದೋಷಗಳು ಪ್ರಾಪ್ತವಾಗುತ್ತವೆ.

**ಪ್ರಕಾಶಃ** – द्वितीये प्राक्तनस्य भेदस्य स्वाभाविकत्वौपाधिकत्वेऽपि तात्विकत्वे ब्रह्मभावायोगः ।

ಎರಡನೆಯ ಮತವೂ ಸರಿಯಲ್ಲ. ಸಂಸಾರದಲ್ಲಿ ಭೇದವಿದ್ದರೂ ಮೋಕ್ಷಾವಸ್ಥೆಯಲ್ಲಿ ಅಭೇದವಿರುತ್ತದೆಂದು ಅಭಿಪ್ರಾಯ. ಸಂಸಾರದಲ್ಲಿರುವ ಭೇದವು ಸ್ವಾಭಾವಿಕ ಅಥವಾ ಅಸ್ವಾಭಾವಿಕ ಎಂದು ಹೇಳಬೇಕು. ಸ್ವಾಭಾವಿಕ ಅಥವಾ ಔಪಾಧಿಕವೆಂದು ಹೇಳಿ, ತಾತ್ವಿಕವಾಗಿದ್ದರೆ ಆ ಭೇದವು ಹೋಗುವುದೇ ಇಲ್ಲ. ಅಂದರೆ ಬ್ರಹ್ಮಭಾವವನ್ನು ಹೇಳಲು ಸಾಧ್ಯವಾಗುವುದಿಲ್ಲ.

**प्रकाशः** – अस्वाभाविकत्वे वा प्रागपि ब्रह्मभावात् ''उत्क्रमिष्यते'' इति विशेषोक्त्ययोग इत्यादीति कैश्चिदुक्तं निरस्तम् ।

ಅಂತಹ ಭೇದವು ಅಸ್ವಾಭಾವಿಕವೆನ್ನಬೇಕು. ಅಸ್ವಾಭಾವಿಕವೆಂದು ಹೇಳಿದರೆ ಅಭೇದವು ಸ್ವಾಭಾವಿಕವೆಂದು ಹೇಳಬೇಕು. ಆವಾಗ ಮೋಕ್ಷಕ್ಕಿಂತ ಮೊದಲು ಬ್ರಹ್ಮಭಾವವಿರುವುದರಿಂದ 'ಉತ್ಕ್ರಮಿಷ್ಯತೇ' ಎಂದು ವಿಶೇಷೋಕ್ತಿಯನ್ನು ಹೇಳಿದ್ದು ಅಯುಕ್ತವಾಗುತ್ತದೆ. ಹೀಗೆ ಕೆಲವರು ವ್ಯಾಖ್ಯಾನ ಮಾಡುತ್ತಾರೆ. ಇದು ನಿರಸ್ತವಾಯಿತು.

**प्रकाशः** – उत्क्रान्तस्येति वाच्यत्वात् । प्रमेयास्वारस्यस्य सूत्रद्वये तैरेवाङ्गीकारात्।

ಇವರ ಪ್ರಕಾರವೂ ಕೂಡ 'ಉತ್ಕ್ರಾಂತಸ್ಯ' ಎಂದೇ ಸೂತ್ರದಲ್ಲಿ ಹೇಳಬೇಕಿತ್ತು. 'ಉತ್ಕ್ರಮಿಷ್ಯತಃ' ಎಂಬುದಾಗಿ ಲ್ಯುಟ್ ಲಕಾರದ ಪ್ರಯೋಗವು ಅಯುಕ್ತವಾಗುತ್ತದೆ. ಮತ್ತು ಹಿಂದೆ ಹೇಳಿದ ಪ್ರಮೇಯ ಅಸ್ವಾರಸ್ಯದ ದೋಷವು ಇವರಿಗೂ ಎರಡು ಸೂತ್ರಗಳಲ್ಲಿ ಇದ್ದೇ ಇರುತ್ತದೆ.

**प्रकाशः** – तृतीये तु मुख्यशरीरत्वाभावस्यान्तर्यामिनयेऽभिधानादिति ध्येयम् ।

ಶರೀರಶರೀರಿಭಾವವನ್ನು ಮೂರನೆಯ ಸೂತ್ರದಲ್ಲಿ ಹೇಳಿರುತ್ತಾರೆ. ಆದರೆ ಜೀವನು ಮುಖ್ಯವಾದ ಶರೀರನಲ್ಲವೆಂದು ಅಂತರ್ಯಾಮ್ಯಧಿಕರಣದಲ್ಲಿ ನಾವು ಸಮರ್ಥಿಸಿದ್ದೇವೆ.

**प्रकाशः** – एतेन प्रायो रामानुजरीतिमनुसरतः कस्यचिदपि मतं निरस्तं बोध्यम्।

ಹೀಗೆ ಹೇಳಿದ್ದರಿಂದ ರಾಮಾನುಜಮತವನ್ನು ಅನುಸರಿಸುವ ಕೆಲವು ಶೈವರ ಮತವನ್ನು ನಿರಾಕರಣೆ ಮಾಡಿದಂತಾಯಿತು.

**प्रकाशः** – वाक्यान्वयादित्यादेः प्रागुक्तदोषात् । आत्मशब्दस्य वैष्णवत्वेन प्रागेवाभिधानात्। ''पतिर्जायाप्रियो नैव'' इत्यादि हयग्रीवसंहितावचनैरस्य प्रकरणस्य वैष्णवत्वोक्तेरात्मा शिव इति सिद्धान्तस्यायुक्तत्वाच्च ।

ಶೈವರು ವ್ಯಾಖ್ಯಾನ ಮಾಡುವ 'ವಾಕ್ಯಾನ್ವಯಾತ್' ಇತ್ಯಾದಿ ಸೂತ್ರಗಳ ಅರ್ಥಕ್ಕೆ ಅದ್ವೈತಿಗಳು ಹೇಳಿದ ದೋಷವೇ ಬರುತ್ತದೆ. ಆತ್ಮಶಬ್ದವು ವಿಷ್ಣುಪರವಾಗಿದೆಯೆಂದು ಈಗಾಗಲೇ ನಾವು ಸಮರ್ಥನೆ ಮಾಡಿದ್ದೇವೆ. 'ಪತಿರ್ಜಾಯಾಪ್ರಿಯೋ ನೈವ' ಇತ್ಯಾದಿಯಾಗಿ ಹಯಗ್ರೀವಸಂಹಿತೆಯೆನಿಸಿದ ಬೃಹದಾರಣ್ಯಕೋಪನಿಷತ್ತಿನ

ಮಾತಿನಿಂದ ಈ ಪ್ರಕರಣವು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತಿದೆಯೆಂದು ಸಿದ್ಧವಾಗಿರುವಾಗ ಆತ್ಮಶಬ್ದಕ್ಕೆ ಶಿವನೆಂದು ಸಿದ್ಧಾಂತ ಮಾಡಿರುವುದು ಅಯುಕ್ತವಾಗಿದೆ.

**प्रकाशः –** यच्चोक्तं तृतीयसूत्रोक्तं जीवस्थतया जीवशब्दवाच्यत्वमिति मतं सूत्रकृदभिमतम् । अथर्वशिरसि प्रथमखण्डे ''देवा ह वै स्वर्गं लोकमगमन् । ते देवा रुद्रमपृच्छन् । को भवानिति । सोऽब्रवीत् । अहमेकः प्रथममासम् । वर्तामि च भविष्यामि च । नान्यः कश्चिन्मत्तो व्यतिरिक्त इति । सोऽन्तरादन्तरं संप्राविशत्। सोऽहं नित्योऽनित्योऽहं ब्रह्माहं प्रपञ्चोऽहं प्रत्यञ्चोऽहम्'' इत्यादिना शिवस्य चिदचिदनुप्रवेशेन सर्वशब्दवाच्यत्वश्रुतेरिति ।

ಮೂರನೆಯ ಸೂತ್ರಕ್ಕೆ ಶೈವರು ಮಾಡುವ ವ್ಯಾಖ್ಯಾನ ಹೀಗಿದೆ - ಜೀವನಲ್ಲಿ ಜೀವಶಬ್ದವಾಚ್ಯನಾಗಿ ಶಿವನು ನೆಲೆಸಿದ್ದಾನೆಂದು ಸೂತ್ರಕಾರರ ಅಭಿಪ್ರಾಯ. ಆದ್ದರಿಂದ ಹಿಂದಿನ ಎರಡು ಮತಗಳು ಸೂತ್ರಕಾರರಿಗೆ ಅಭಿಮತವಲ್ಲ ಎಂದು ವ್ಯಾಖ್ಯಾನಿಸಿದ್ದಾರೆ. ಅಥರ್ವಶಿರಸ್ಸಿನ ಪ್ರಥಮಖಂಡದಲ್ಲಿ ವಾಕ್ಯಗಳು ಹೀಗೆ ಪ್ರಸಕ್ತವಾಗಿವೆ - 'ದೇವಾ ಹ ವೈ ಸ್ವರ್ಗಂ ಲೋಕಮಗಮನ್ । ತೇ ದೇವಾ ರುದ್ರಮಪೃಚ್ಛನ್ । ಕೋ ಭವಾನಿತಿ । ಸೋಽಬ್ರವೀತ್ । ಅಹಮೇಕಃ ಪ್ರಥಮಮಾಸಮ್ । ವರ್ತಾಮಿ ಚ ಭವಿಷ್ಯಾಮಿ ಚ । ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತ ಇತಿ । ಸೋಽಂತರಾದಂತರಂ ಸಂಪ್ರಾವಿಶತ್ । ಸೋಽಹಂ ನಿತ್ಯೋಽನಿತ್ಯೋಽಹಂ ಬ್ರಹ್ಮಾಹಂ ಪ್ರಪಂಚೋಽಹಂ ಪ್ರತ್ಯಂಚೋಽಹಮ್' ದೇವತೆಗಳು ಸ್ವರ್ಗಲೋಕವನ್ನು ಕುರಿತು ಹೊರಟರು. ಅಲ್ಲಿ ರುದ್ರನನ್ನು ದೇವತೆಗಳು ಪ್ರಶ್ನಿಸಿದರು - ನೀನು ಯಾರು? ಅದಕ್ಕೆ ರುದ್ರನು ಉತ್ತರಿಸಿದನು 'ನಾನೇ ಮೊದಲು ಹುಟ್ಟಿದವನು. ಈಗಲೂ ಎಲ್ಲೆಡೆ ನೆಲೆಸಿದ್ದೇನೆ. ಮುಂದೆಯೂ ಅನಂತ ಕಾಲದ ತನಕ ಇರುತ್ತೇನೆ. ನನಗಿಂತ ಅತಿರಿಕ್ತನಾದ ಮತ್ತೊಬ್ಬ ವ್ಯಕ್ತಿ ಇರುವುದಿಲ್ಲ. ಒಳಗೆ, ಹೊರಗೆ ಎಲ್ಲೆಡೆಯೂ ವ್ಯಾಪ್ತನಾಗಿದ್ದೇನೆ. ನಿತ್ಯನೂ, ಅನಿತ್ಯನೂ, ಬ್ರಹ್ಮನೂ ಆಗಿರುತ್ತೇನೆ. ಸಮಸ್ತ ಪ್ರಪಂಚವೂ ಕೂಡ ನಾನೇ ಆಗಿದ್ದೇನೆ. ಎಲ್ಲರ ಅಂತರ್ಯಾಮಿಯೂ ಕೂಡ ನಾನೇ ಆಗಿದ್ದೇನೆ' ಇತ್ಯಾದಿಯಾಗಿ ಚೇತನ ಹಾಗೂ ಅಚೇತನ ಪ್ರಪಂಚದಲ್ಲಿ ನಾನು ಪ್ರವೇಶಿಸಿ ಸರ್ವಶಬ್ದವಾಚ್ಯನಾಗಿರುತ್ತೇನೆಂದು ರುದ್ರನು ಹೇಳಿರುತ್ತಾನೆ. ಆದ್ದರಿಂದ ರುದ್ರನೇ ಎಲ್ಲೆಡೆಯೂ ನೆಲೆಸಿದ್ದಾನೆಂದು ಈ ಸೂತ್ರದ ಅಭಿಪ್ರಾಯವೆಂದು ವ್ಯಾಖ್ಯಾನ ಮಾಡುತ್ತಾರೆ.

**प्रकाशः –** तन्न । शास्त्रदृष्ट्येति न्यायेन रुद्रः स्वान्तर्याम्यपेक्षया सर्वानुप्रवेशं सर्वशब्दवाच्यत्वमाहेत्युपपत्तेः । ''शिवरूपी शिवे स्थितः'' इत्यादेः । द्युभ्वादिनय-भाष्योक्तानेकस्मृतिवचनोक्तरीत्या रुद्रशब्दस्य वैष्णवत्वाच्च । अन्यथाऽनेकश्रुत्यादि-विरोधात् । विस्तरस्तु गुरुपादकृतपरतत्वप्रकाशे द्रष्टव्यः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे समाकर्षाधिकरणं सम्पूर्णम् ।।**

ಪರಿಪೂರ್ಣಚಂದ್ರಿಕಾ

ಶೈವರ ಈ ವ್ಯಾಖ್ಯಾನವು ಅಸಾಧುವಾಗಿದೆ. 'ಶಾಸ್ತ್ರದೃಷ್ಟ್ಯಾ' ಇತ್ಯಾದಿ ಸೂತ್ರದ ನ್ಯಾಯದಿಂದ ಪರಮಾತ್ಮನೇ ರುದ್ರಶಬ್ದವಾಚ್ಯನಾಗಿ ಎಲ್ಲರಲ್ಲಿಯೂ ಪ್ರವೇಶಿಸಿ, ಸರ್ವಶಬ್ದವಾಚ್ಯನಾಗಿರುತ್ತಾನೆಂದು ಹೇಳಲಾಗಿದೆ. 'ಶಿವರೂಪೀ ಶಿವೇ ಸ್ಥಿತಃ' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಮತ್ತು ದ್ಯುಭ್ವಾದ್ಯಧಿಕರಣದ ನ್ಯಾಯದಲ್ಲಿ ಉದಾಹರಿಸಿದ ಅನೇಕ ಸ್ಮೃತಿವಚನಗಳ ಆಧಾರದಿಂದ ರುದ್ರಶಬ್ದವು ವಿಷ್ಣುಪರವೆಂದು ನಿರ್ಣಯವಾಗಿದೆ. ಹೀಗೊಪ್ಪದಿದ್ದರೆ ಅನೇಕ ಶ್ರುತ್ಯಾದಿಗಳ ವಿರೋಧ ಬರುತ್ತದೆ. ಇದರ ಹೆಚ್ಚಿನ ವಿಸ್ತಾರವನ್ನು ಗುರುಗಳಾದ ಶ್ರೀವಿಜಯೀಂದ್ರತೀರ್ಥಶ್ರೀಪಾದಂಗಳವರು ರಚನೆ ಮಾಡಿದ ಪರತತ್ವಪ್ರಕಾಶ ಎಂಬ ಗ್ರಂಥವನ್ನು ಓದಿ ತಿಳಿದುಕೊಳ್ಳಬೇಕು.

ಇಲ್ಲಿಗೆ ಶ್ರೀಮತ್ ಸರ್ವತಂತ್ರ ಸ್ವತಂತ್ರರಾದ ಶ್ರೀಸುಧೀಂದ್ರತೀರ್ಥಗುರುಪಾದರ ಶಿಷ್ಯಂದಿರಾದ ಶ್ರೀ ರಾಘವೇಂದ್ರತೀರ್ಥಯತಿಗಳಿಂದ ರಚಿತವಾದ ಚಂದ್ರಿಕಾಪ್ರಕಾಶ ಎಂಬ ಟಿಪ್ಪಣಿಯ ಕನ್ನಡಾನುವಾದದಲ್ಲಿ ಸಮಾಕರ್ಷಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – ननु तथापि न वा अरे पत्युः कामाय पतिः प्रियो भवतीत्यन्यार्थं प्रियत्वस्यानभिधानान्न विरोध इति वाच्यं आत्मनस्तु कामाय पतिः प्रियो भवतीत्यत्रात्मशब्देन पत्यादेरेव ग्रहणे आत्मनस्तु कामाय पतिः प्रियो भवतीत्यस्य स्वार्थं प्रिय इत्यर्थकत्वापत्त्या न वा अरे पत्युः कामाय पतिः प्रियो भवति आत्मनस्तु कामाय पतिः प्रियो भवतीत्यस्य परस्परविरोधापत्त्या आत्मनः कामायेत्यत्रात्मशब्दस्य पत्यादिपरत्वासम्भवेनान्यार्थत्वे वक्तव्येऽन्यार्थं प्रिय इत्यर्थपर्यवसानाद्विरोधः स्यादेवेत्यभिप्रायेणाह – **किञ्चेति** ।। आत्मनस्तु कामायेत्यनेन कथमन्यार्थं प्रियत्वं लभ्यत इत्यतस्तदुपपादयितुमाह – **आत्मशब्दस्येति** ।। ततश्चात्र वाक्ये आत्मन इत्युक्तत्वेन तत्सम्बन्धिजायाया एवात्मन इत्यनेन परामर्शे जायार्थं प्रिय इति लभ्यत इति भावः ।। **परोक्तार्थस्येति**।। स्वस्य निरुपाधिकप्रियत्वरूपपरोक्तस्येत्यर्थः । स न युक्तः अध्याहारो न युक्तः ।।छ।।

।। इति श्रीकेशवभट्टारकेण विरचितायां भावदीपिकायाम्
समकर्षाधिकरणं सम्पूर्णम् ।। ५।।




'ವಾಕ್ಯಾನ್ವಯಾತ್' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ 'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' ಎಂಬ ಸೂತ್ರವ್ಯಾಖ್ಯಾನವೂ ಕೂಡ ಅಸಾಧುವಾಗಿದೆ. ಜೀವನು ಸಂಸಾರ ಕಾಲದಲ್ಲಿ ಭಿನ್ನನಾಗಿದ್ದರೂ ಮೋಕ್ಷಾವಸ್ಥೆಯಲ್ಲಿ ಪರಮಾತ್ಮನಿಂದ ಅಭಿನ್ನನಾಗಿದ್ದಾನೆ. ಹೀಗೆ ಮೋಕ್ಷಕಾಲದ ಅಭೇದವನ್ನು ವಿವಕ್ಷಿಸಿ, ಪ್ರಾರಂಭದಲ್ಲಿ ಜೀವನನ್ನು ಪ್ರಸ್ತಾಪ ಮಾಡಲಾಗಿದೆ ಎಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ ಎಂಬುದು ಅದ್ವೈತಿಗಳ ವ್ಯಾಖ್ಯಾನ.

ಹೀಗೆ ಹೇಳುವುದಾದರೆ ಸೂತ್ರದಲ್ಲಿ 'ಉತ್ಕ್ರಾಂತಸ್ಯ' ಎಂದು ಹೇಳಿದರೆ ಮೋಕ್ಷಾವಸ್ಥೆಯಲ್ಲಿ ಜೀವನು ಪರಮಾತ್ಮನಿಂದ ಅಭಿನ್ನನಾಗಿದ್ದಾನೆಂದು ತಿಳಿಯುತ್ತದೆ. 'ಉತ್ಕ್ರಮಿಷ್ಯತಃ' ಎಂದು ಹೇಳಿದರೆ ಸಂಸಾರಕಾಲದಲ್ಲಿಯೇ ಅಭಿನ್ನನಾಗಿದ್ದಾನೆಂದು ಹೇಳಿದಂತಾಗುತ್ತದೆ.

'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ. ಉಪನಿಷತ್ತುಗಳಲ್ಲಿ ತೇಜಸ್ಸು ಮೊದಲಾದ ಸೃಷ್ಟಿಯನ್ನು ಹೇಳಿದಂತೆ ಜೀವರ ಸೃಷ್ಟಿಯನ್ನೂ ಕೂಡ ಹೇಳಲಾಗಿದೆ. 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ' ಎಂಬುದಾಗಿ ಬ್ರಹ್ಮನು ಜೀವಸ್ವರೂಪನಾಗಿದ್ದಾನೆ ಎಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದವೇ ಇಲ್ಲದ ಕಾರಣ. ಬ್ರಹ್ಮನ ಪ್ರಕರಣದಲ್ಲಿ ಜೀವನ ಉಪಕ್ರಮವು ಯುಕ್ತವಾಗುತ್ತದೆ. ಇದು ಕಾಶಕೃತ್ಸ್ನಾಚಾರ್ಯರ ಅಭಿಪ್ರಾಯ.

ಅದ್ವೈತಿಗಳ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. 'ಅವಸ್ಥಿತೇಃ' ಎಂದು ಹೇಳಿದಾಗ 'ಕುತ್ರ' ಎಂಬುದಾಗಿ ಧರ್ಮಿಯ ಆಕಾಂಕ್ಷೆಯು ಸಹಜವಾಗಿ ಬರುತ್ತದೆ. ಹೊರತು, 'ಕಥಂ' ಎಂಬುದಾಗಿ ಪ್ರಕಾರದ ಆಕಾಂಕ್ಷೆಯು ಸಹಜವಾಗಿ ಬರುವುದಿಲ್ಲ. ಆದ್ದರಿಂದ ಉತ್ಥಿತ ಆಕಾಂಕ್ಷೆಯನ್ನೇ ವಿವಕ್ಷಿಸಲು ಬರುವಾಗ, ಉತ್ಥಾಪಿತ ಆಕಾಂಕ್ಷೆಯನ್ನು ವಿವಕ್ಷಿಸಬಾರದು. ಈ ಮೂರು ಸೂತ್ರಾರ್ಥಗಳಲ್ಲಿ ಮೊದಲೆರಡು ಸೂತ್ರಗಳ ಅರ್ಥವನ್ನು ಸ್ವತಃ ಅದ್ವೈತಿಗಳೇ ನಿರಾಕರಣೆ ಮಾಡಿದ್ದಾರೆ. ಮೂರನೆಯ ಸೂತ್ರವು ಆತ್ಯಂತಿಕವಾದ ಅಭೇದವನ್ನು ಹೇಳುತ್ತಿರುವುದರಿಂದ ಅದು ಸೂತ್ರಕಾರರಿಗೆ ಅಭಿಪ್ರೇತವೆಂದು ಅದ್ವೈತಿಗಳು ಹೇಳಿದ್ದಾರೆ. ಆದರೆ 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಿ ಸೂತ್ರಕಾರರೇ ಜೀವಬ್ರಹ್ಮನಿಗೆ ಭೇದವನ್ನು ಸಮರ್ಥನೆ ಮಾಡಿರುವುದರಿಂದ ಈ ಸೂತ್ರಕ್ಕೆ ಅಭೇದವಿವಕ್ಷೆಯಿಂದ ವ್ಯಾಖ್ಯಾನ ಮಾಡಬಾರದೆಂದು ಸ್ಪಷ್ಟವಾಗುತ್ತದೆ.

ಇಲ್ಲಿಗೆ ಸಮಾಕರ್ಷಾಧಿಕರಣವು ಸಂಪೂರ್ಣವಾಯಿತು.

# ಸಮಂಕರ್ಷಾಧಿಕರಣ

(೧-೪-೫)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## समाकर्षाधिकरणम् (१।४।५)

**कर्मवाच्यैश्च वाच्यः**

ಕರ್ಮ, ದೇವತೆ ಮೊದಲಾದವುಗಳನ್ನು ಪ್ರತಿಪಾದಿಸುವ ಶಬ್ದಗಳಿಂದಲೂ ಪರಮಮುಖ್ಯವೃತ್ತಿಯಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಮುಖ್ಯವೃತ್ತಿಯಿಂದ ಕರ್ಮ, ದೇವತೆ ಮೊದಲಾದವುಗಳು ಪ್ರತಿಪಾದ್ಯವಾಗಿವೆ. ಈ ವೃತ್ತಿತಾರತಮ್ಯವು ಶ್ರುತಿಪ್ರಸಿದ್ಧವಾಗಿದೆ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## समाकर्षाधिकरणम् (१।४।५)

अत्र समाकर्षादित्यादिसूत्राष्टकस्य तत्वप्रदीपन्यायरत्नावलीन्यायचन्द्रिका-सम्बन्धदीपिकादिप्राचीनग्रन्थोक्तरीत्या कारणत्वेनेत्यधिकरणशेषत्वात् पृथक् तदर्थो न संगृहीतः ।

'ಸಮಾಕರ್ಷಾತ್' ಇತ್ಯಾದಿ ಎಂಟು ಸೂತ್ರಗಳು ಪ್ರತ್ಯೇಕ ಅಧಿಕರಣವೆಂದು ಟೀಕಾಕೃತ್ಪಾದರು ಮಾತ್ರ ವಿವಕ್ಷಿಸಿದ್ದಾರೆ. ಆದರೆ ತ್ರಿವಿಕ್ರಮಪಂಡಿತರ 'ತತ್ವಪ್ರದೀಪ', ಪದ್ಮನಾಭತೀರ್ಥರ 'ಸನ್ನ್ಯಾಯರತ್ನಾವಳಿ', ನರಹರಿತೀರ್ಥರ 'ನಯಚಂದ್ರಿಕಾ', ಶಂಕರಪಂಡಿತರ 'ಸಂಬಂಧದೀಪಿಕಾ' ಇವೇ ಮೊದಲಾದ ಪ್ರಾಚೀನ ಟೀಕಾಕಾರರ ಪಕ್ಷದಲ್ಲಿ 'ಸಮಾಕರ್ಷಾತ್' ಇತ್ಯಾದಿ ಎಂಟು ಸೂತ್ರಗಳು ಪ್ರತ್ಯೇಕ ಅಧಿಕರಣವೇ ಆಗಿರುವುದಿಲ್ಲ. ಹೊರತಾಗಿ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಅಧಿಕರಣಕ್ಕೆ ಅಂಗಸೂತ್ರಗಳಾಗಿವೆ. ಆದ್ದರಿಂದಲೇ ಅಣುಭಾಷ್ಯದಲ್ಲಿ ಸಮಾಕರ್ಷಾಧಿಕರಣದ ಸಾರವನ್ನು ಪ್ರತ್ಯೇಕವಾಗಿ ಸಂಗ್ರಹಿಸಿಲ್ಲ.

यद्वा उक्तवक्ष्यमाणसर्वशब्दानां पदवर्णादिरूपेण विष्णुवाचित्वोक्तिपरज्योतिर्नयार्थसङ्ग्रहेणैव समाकर्षादिति नयार्थोऽपि संगृहीतः ।

ಹಿಂದೆ ಸಮನ್ವಯ ಮಾಡಿದ, ಮುಂದೆ ಸಮನ್ವಯ ಮಾಡುವ ಎಲ್ಲ ಶಬ್ದಗಳನ್ನು ಪದ, ವರ್ಣ ಇತ್ಯಾದಿ ರೀತಿಯಿಂದ ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲು ಹೊರಟಿರುವ ಜ್ಯೋತಿರಧಿಕರಣದ ಸಂಗ್ರಹದಿಂದಲೇ ಸಮಾಕರ್ಷಾಧಿಕರಣದ ಸಾರವನ್ನೂ ಕೂಡ ಸಂಗ್ರಹಿಸಿದಂತಾಗಿದೆ. ಆದ್ದರಿಂದ ಪ್ರತ್ಯೇಕವಾಗಿ ಅಣುಭಾಷ್ಯದಲ್ಲಿ ಈ ಅಧಿಕರಣದ ಸಾರ ಇರುವುದಿಲ್ಲ.

तथा हि । यदुक्तं ज्योतिर्नये सर्वशब्दानां विष्णौ मुख्यत्वमिवान्यत्रापि मुख्यत्वान्न कर्मादिलोपो विष्णौ शब्दानां व्युत्पत्त्ययोगो वा नेति । तदयुक्तम् । तथात्वे अक्षादिशब्दवदनेकेषु मुख्यताऽपत्त्या मुख्यतया सर्वशब्दैर्विष्णुरेवोच्यत इति तत्तु समन्वयादिति समन्वयसूत्रोक्तावधारणायोग इत्यादिचोद्यनिरासाय प्राप्तम् – **समाकर्षादिति सूत्राष्टकम्** । तस्याप्यर्थः **कर्मवाच्यैश्च वाच्य इति** ।

'ಸಮಾಕರ್ಷಾತ್' ಇತ್ಯಾದಿ ಎಂಟು ಸೂತ್ರಗಳು ಏಕೆ ಹೊರಟವೆ ಎಂಬುದನ್ನು ಹೀಗೆ ತಿಳಿಯಬೇಕು - ಜ್ಯೋತಿರಧಿಕರಣದಲ್ಲಿ ಸಕಲ ಶಬ್ದಗಳೂ ಮಹಾವಿಷ್ಣುವಿನಲ್ಲಿ ಮುಖ್ಯವಾಗಿ ಸಮನ್ವಯಗೊಳ್ಳುತ್ತವೆಂದು ಸಮರ್ಥಿಸಲಾಯಿತು. ಅದೇ ರೀತಿಯಾಗಿ ಲೌಕಿಕಾರ್ಥಗಳಲ್ಲಿಯೂ ಕೂಡ ಎಲ್ಲಾ ಶಬ್ದಗಳು ಮುಖ್ಯವಾಗಿಯೇ ಸಮನ್ವಯಗೊಳ್ಳುತ್ತವೆ. ಹೀಗೆ ಹೇಳುವುದರಿಂದ ಕರ್ಮಾದಿಗಳ ಲೋಪವಾಗಲೀ, ಮಹಾವಿಷ್ಣುವಿನಲ್ಲಿ ಎಲ್ಲಾ ಶಬ್ದಗಳನ್ನು ಸಮನ್ವಯ ಮಾಡಿದರೆ, ವ್ಯುತ್ಪತ್ತಿಯ ಅನುಪಪತ್ತಿ ಎಂಬ ದೋಷವಾಗಲೀ ಬರುವುದಿಲ್ಲ ಎಂದು ಸಮರ್ಥಿಸಲಾಯಿತು. ಇದು ತಪ್ಪು. ಜ್ಯೋತಿರುಪಕ್ರಮಾಧಿಕರಣದಲ್ಲಿ ಪರಮಾತ್ಮನಲ್ಲಿ ಹಾಗೂ ಲೌಕಿಕಾರ್ಥಗಳಲ್ಲಿ ಶಬ್ದಗಳು ಮುಖ್ಯವಾಗಿ ಸಮನ್ವಯವಾಗುವುದಾದರೆ, ಅಕ್ಷಾದಿ ಶಬ್ದಗಳಂತೆ ಸಕಲ ವೈದಿಕ ಶಬ್ದಗಳೂ ಅನೇಕಾರ್ಥಗಳಾಗುತ್ತವೆ. ಆವಾಗ ಸಕಲಶಬ್ದಗಳಿಂದ ವಿಷ್ಣುವೊಬ್ಬನೇ ಪ್ರತಿಪಾದ್ಯನೆಂದು 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಮಾಡಿದ ಅವಧಾರಣೆಯು ಅಯುಕ್ತವಾಗುತ್ತದೆ. ಈ ಆಕ್ಷೇಪವನ್ನು ಪರಿಹರಿಸಲು 'ಸಮಾಕರ್ಷಾತ್' ಇತ್ಯಾದಿ ಎಂಟು ಸೂತ್ರಗಳು ಹೊರಟವೆ. ಇದರ ಅರ್ಥವನ್ನು ಅಣುಭಾಷ್ಯದಲ್ಲಿ 'ಕರ್ಮವಾಚ್ಯೈಶ್ಚ ವಾಚ್ಯಃ' ಎಂದು ಸಂಗ್ರಹಿಸಿದ್ದಾರೆ.

पूर्ववदनुषङ्गः । कर्मादिवाचकैः मुख्यतयाऽन्यत्र वाच्य इत्यर्थः । अमुख्यवृत्तौ गौणी लक्षणेति भेदवत् मुख्यवृत्तावपि मुख्यत्वं परममुख्यत्वमिति द्वैविध्यसत्त्वादिति भावः ।

ಹಿಂದಿನ ಅಧಿಕರಣದಂತೆ ಪದಗಳನ್ನು ಅನುಷಂಗ ಮಾಡಿಕೊಳ್ಳಬೇಕು. ಕರ್ಮಾದಿವಾಚಕಗಳಾಗಿ ಶಬ್ದಗಳು ಮುಖ್ಯವೃತ್ತಿಯಿಂದ ಬೇರೆ ವಸ್ತುಗಳನ್ನು ಪ್ರತಿಪಾದನೆ ಮಾಡುತ್ತವೆಂದು ಇದರ ಅರ್ಥ.

ಮುಖ್ಯವೃತ್ತಿಯಿಂದ ಕರ್ಮಾದಿಗಳು ಪ್ರತಿಪಾದ್ಯವಾದರೂ, ಪರಮಮುಖ್ಯವೃತ್ತಿಯಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಶಬ್ದವೃತ್ತಿಗಳಲ್ಲಿ ಹೀಗೆ ತಾರತಮ್ಯವನ್ನು ಒಪ್ಪಲೇಬೇಕು. ಲೋಕದಲ್ಲಿಯೂ ಇದಕ್ಕೆ ದೃಷ್ಟಾಂತ ಕಂಡಿದೆ. ಅಮುಖ್ಯವೃತ್ತಿಯಲ್ಲಿಯೂ ಗೌಣೀವೃತ್ತಿ ಮತ್ತು ಲಕ್ಷಣಾವೃತ್ತಿಗಳೆಂಬ ಭೇದವಿದೆ. ಅದರಂತೆ ಮುಖ್ಯವೃತ್ತಿಯಲ್ಲಿಯೂ ಕೂಡ ಮುಖ್ಯವೃತ್ತಿ ಮತ್ತು ಅಮುಖ್ಯವೃತ್ತಿ ಎಂಬ ತಾರತಮ್ಯ ಇರುತ್ತದೆ.

**नच तत्र मानाभावः । शब्दैः 'परस्य वाचकाः शब्दाः समाकृष्येतरेष्वपि' इति वृत्तितारतम्यबोधकशब्दैः परममुख्यत्वमुख्यत्वयोः हरौ तदन्यत्र चावगमादित्यर्थः ।**

ಈ ವೃತ್ತಿತಾರತಮ್ಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂದು ಆಕ್ಷೇಪ ಮಾಡಬಾರದು. ಏಕೆಂದರೆ 'ಪರಸ್ಯ ವಾಚಕಾಃ ಶಬ್ದಾಃ ಸಮಾಕೃಷ್ಯೇತರೇಷ್ವಪಿ' ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಇತರ ಪದಾರ್ಥಗಳಲ್ಲಿಯೂ ಸಮಾಕರ್ಷ ಮಾಡಬೇಕು. ಹೀಗೆ ಪ್ರಮಾಣವಚನವಿರುವುದರಿಂದ, ಮುಖ್ಯವೃತ್ತಿಯಲ್ಲಿಯೂ ತಾರತಮ್ಯವಿರುತ್ತದೆ. ಆದ್ದರಿಂದ ಪರಮಮುಖ್ಯವೃತ್ತಿಯಿಂದ ಪರಮಾತ್ಮನು ಪ್ರತಿಪಾದ್ಯನಾದರೆ, ಮುಖ್ಯವೃತ್ತಿಯಿಂದ ಇತರ ಪದಾರ್ಥಗಳು ಪ್ರತಿಪಾದ್ಯವಾಗುತ್ತವೆಂದು ತಿಳಿಯುತ್ತದೆ.

**प्राक् प्रतिनयं परममुख्यतयेत्यादिव्याख्यानं अस्माभिरेतदभिप्रायेणैव कृतम् ।**

ಹಿಂದೆ ಪ್ರತಿಯೊಂದು ಅಧಿಕರಣಗಳಲ್ಲಿ ಪರಮಮುಖ್ಯವೃತ್ತಿಯಿಂದ ಎಲ್ಲಾ ಶಬ್ದಗಳ ಸಮನ್ವಯವನ್ನು ನಾವು ಮಾಡಿರುವುದು ಇದೇ ಅಭಿಪ್ರಾಯದಿಂದ. ಆದ್ದರಿಂದ ಮುಖ್ಯವೃತ್ತಿಯಿಂದ ಮಾಡುವ ಲೋಕವ್ಯವಹಾರಕ್ಕೆ ಯಾವುದೇ ಬಾಧಕವಿರುವುದಿಲ್ಲ.

**नन्वीशे परममुख्यत्वेऽन्यत्र सिद्धिर्न स्यादित्यतोऽन्यत्रैव नियतैरन्यत्रैव व्यवह्रियमाणैः अत एवान्यत्र नियतैरन्यत्रैव व्युत्पन्नैरपि शब्दैर्वाच्य इति लोकस्य जगत्येव नैयत्येन शब्दव्यवहारेण तत्रैव तच्छ्रोतॄणां व्युत्पत्तेर्नैयत्यात् ईशे तथा बहुलव्यवहाराभावेन व्युत्पत्त्यभावाच्च । अन्यत्रप्रसिद्धेः अज्ञानमूलत्वोपपत्तेरिति भावः ।**

ಪರಮಾತ್ಮನಲ್ಲಿ ಎಲ್ಲಾ ಶಬ್ದಗಳೂ ಪರಮಮುಖ್ಯವೃತ್ತಿಯಿಂದ ಸಮನ್ವಯಗೊಳ್ಳುವುದಾದರೆ ಬೇರೆ ಕಡೆ ಆಯಾ ಶಬ್ದಗಳ ಪ್ರಸಿದ್ಧಿ ಇಲ್ಲದಿರಬೇಕಾದಿತಲ್ಲವೇ ? ಎಂದು ಪ್ರಶ್ನಿಸಬಾರದು. ಶಬ್ದಗಳು ಬೇರೆ ಬೇರೆ ಪದಾರ್ಥಗಳಲ್ಲಿಯೇ ನಿಯತವಾಗಿರುವುದರಿಂದ ಬೇರೆ ಪದಾರ್ಥಗಳಲ್ಲಿಯೇ ಎಲ್ಲರೂ ವ್ಯವಹರಿಸುತ್ತಾರೆ. ಆದ್ದರಿಂದಲೇ ಇವುಗಳು ಅನ್ಯತ್ರಪ್ರಸಿದ್ಧವಾಗಿವೆ ಎಂದು ಕರೆಸಿಕೊಳ್ಳುತ್ತವೆ. ಲೌಕಿಕರು ವ್ಯವಹಾರಸಿದ್ಧವಾದ ವ್ಯುತ್ಪತ್ತಿಯಿಂದಲೇ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಅಂತಹ ವ್ಯವಹಾರವು ಲೋಕದಲ್ಲಿಯೇ ಹೆಚ್ಚಾಗಿರುವುದರಿಂದ ಶ್ರೋತೃಗಳಿಗೆ ಆಯಾ ಶಬ್ದಗಳಿಂದ ಲೋಕವ್ಯವಹಾರಸಿದ್ಧವಾದ ವ್ಯುತ್ಪತ್ತಿಯೇ ಮೊದಲು ಬರುತ್ತದೆ. ಪರಮಾತ್ಮನ ವಿಷಯದಲ್ಲಿ ಅಂತಹ ವ್ಯವಹಾರವಿಲ್ಲದ ಕಾರಣ ಕೇಳಿದಾಕ್ಷಣ ಆಯಾ ಶಬ್ದಗಳಿಂದ ಪರಮಾತ್ಮನಲ್ಲಿ ವ್ಯುತ್ಪತ್ತಿಯು ಉಂಟಾಗುವುದಿಲ್ಲ. ಲೌಕಿಕರಿಗೆ ಶಬ್ದಗಳನ್ನು ಕೇಳಿದಾಗ ಬೇರೆ

ಕಡೆಯೇ ವ್ಯತ್ಪತ್ತಿ ಬರುತ್ತದೆಂಬ ಕಾರಣದಿಂದ ಅದನ್ನೇ ಮುಖ್ಯವೆಂದು ಪರಿಗಣಿಸಬಾರದು. ಅವರ ವ್ಯವಹಾರವೆಲ್ಲವೂ ಅಜ್ಞಾನಮೂಲಕವಾಗಿದೆ.

**ननु 'अस्य यदेकां शाखां जीवो जहाति' इति, 'वायुना वै गौतम सूत्रेण' इति जीववाय्वोरपि स्वातन्त्र्यप्रतीतेः तयोरपि सर्वशब्दवाच्यत्वं स्यादित्यतोऽपि – अन्यत्र नियतैरपीति ।**

ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯನ್ನು ಹೇಳುವುದಾದರೆ ಜೀವ ಹಾಗೂ ವಾಯು ಇವರಲ್ಲಿಯೂ ಪರಮಮುಖ್ಯವೃತ್ತಿಯನ್ನು ಹೇಳಬೇಕಾಗುತ್ತದೆ. ಏಕೆಂದರೆ 'ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತಿ' ಎಂಬ ಶ್ರುತಿಯು ವೃಕ್ಷವು ಜೀವನ ಅಧೀನವಾಗಿದೆಯೆಂದು ಹೇಳುತ್ತಿದೆ. 'ವಾಯುನಾ ವೈ ಗೌತಮ ಸೂತ್ರೇಣ' ಎಂಬ ಶ್ರುತಿಯು ಸಮಗ್ರ ಜಗತ್ತು ವಾಯುವಿನ ಅಧೀನವಾಗಿದೆಯೆಂದು ಹೇಳುತ್ತಿದೆ. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತ ಜೀವ ಹಾಗೂ ವಾಯುವಿನಲ್ಲಿ ಇರುವುದರಿಂದ ಅವರಲ್ಲಿಯೂ ಸರ್ವಶಬ್ದವಾಚ್ಯತ್ವವು ಮುಖ್ಯವಾಗಿಯೇ ಬರಬೇಕಲ್ಲವೇ? ಈ ಪ್ರಶ್ನೆಗೆ 'ಅನ್ಯತ್ರ ನಿಯತೈರಪಿ' ಎಂಬುದರಿಂದಲೇ ಉತ್ತರಿಸಿದ್ದಾರೆ.

**अन्यत्र नियतैरपि अन्यत्र वाचकैरपि शब्दैः जीववाय्वादिशब्दैः एको जनार्दनो मुख्यतया वाच्य इत्यर्थः ।**

ವಾಯು ಹಾಗೂ ಜೀವರನ್ನು ಆಯಾ ಶಬ್ದಗಳು ನಿಯತವಾಗಿ ಪ್ರತಿಪಾದನೆ ಮಾಡುವುದಾದರೂ, ಪರಮಮುಖ್ಯವೃತ್ತಿಯಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಜೀವ ಹಾಗೂ ವಾಯು ಇಬ್ಬರಲ್ಲಿಯೂ ಪರಮಾತ್ಮನು ಅಂತರ್ಯಾಮಿಯಾಗಿದ್ದಾನೆಂದು ಅಭಿಪ್ರಾಯ.

**जीवादिशब्दैः तत्तदन्तर्यामिणो गृहीतत्वेन तत्र प्रतीतस्वातन्त्र्यस्यापि तदन्तर्यामिगतत्वेन पादान्त्यप्राणनयेऽभिधानादिति भावः ।**

'ಜೀವ' ಹಾಗೂ 'ವಾಯು' ಇತ್ಯಾದಿ ಶಬ್ದಗಳಿಂದ ಅವರ ಅಂತರ್ಯಾಮಿಯಾದ ಪರಮಾತ್ಮನನ್ನೇ ವಿವಕ್ಷಿಸುವುದರಿಂದ ಜೀವಾದಿಗಳಲ್ಲಿ ವಿವಕ್ಷಿತವಾದ ಸ್ವಾತಂತ್ರ್ಯವೂ ಕೂಡ ಅಂತರ್ಯಾಮಿಯಲ್ಲಿಯೇ ಬರುತ್ತದೆಂದು ಅಂತಿಮಪ್ರಾಣಾಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ.

**ननु मुख्यतयाऽन्यत्र नियतैरन्यत्र वाचकैरपि शब्दैः परममुख्यतया हरिर्वाच्य इत्युक्तम् । मुमुक्षुं प्रति कर्मदेवताद्युक्तौ फलाभावात् मुक्तेः ब्रह्मज्ञानादेव सिद्धेः तस्य च पदसमन्वयादिनैव सिद्धेरित्योऽपि – अन्यत्र नियतैरिति ।**

ಬೇರೆಡೆ ಮುಖ್ಯವೃತ್ತಿಯಿಂದ ಪ್ರಸಿದ್ಧವಾದ ಶಬ್ದಗಳಿಂದ ಪರಮಾತ್ಮನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆಂದು ಹೇಳಿದಿರಿ. ಹಾಗಾದರೆ ಕರ್ಮದ ಬಗ್ಗೆ ಹಾಗೂ ದೇವತೆಗಳ ಬಗ್ಗೆ

ತಿಳಿಯುವುದರಿಂದ ಯಾವುದೇ ಮುಮುಕ್ಷುವಿಗೆ ಪ್ರಯೋಜನವಿರುವುದಿಲ್ಲ. ಕೇವಲ ಬ್ರಹ್ಮಜ್ಞಾನದಿಂದ ಅವರಿಗೆ ಮೋಕ್ಷವೆಂಬ ಪುರುಷಾರ್ಥವು ಸಿದ್ಧವಾಗುತ್ತದೆ. ಅಂತಹ ಬ್ರಹ್ಮಜ್ಞಾನವು ಪದಸಮನ್ವಯದಿಂದಲೇ ಸಿದ್ಧವಾಗುತ್ತಿರುವಾಗ ಕರ್ಮಪ್ರತಿಪಾದಕವಾದ ವೇದವಾಕ್ಯಕ್ಕೆ, ಮತ್ತು ದೇವತಾಪ್ರತಿಪಾದಕವಾದ ವೇದವಾಕ್ಯಗಳಿಗೆ ವೈಯರ್ಥ್ಯದೋಷ ಬರುತ್ತದಲ್ಲವೇ? ಈ ಪ್ರಶ್ನೆಗೂ 'ಅನ್ಯತ್ರ ನಿಯತ್ಯೈಃ' ಎಂಬುದರಿಂದಲೇ ಉತ್ತರಿಸಿದ್ದಾರೆ.

**कर्मदेवतावाचित्वेन स्थितैरपि शब्दैरन्ततो मुख्यतो महातात्पर्येणोदित इत्यर्थः।**

ಶಬ್ದಗಳು ಕರ್ಮ ಹಾಗೂ ದೇವತೆಗಳನ್ನು ಪ್ರತಿಪಾದನೆ ಮಾಡುತ್ತಿದ್ದರೂ ಅಂತಿಮವಾಗಿ ಮಹಾವಿಷ್ಣುವಿನಲ್ಲಿಯೇ ಮಹಾತಾತ್ಪರ್ಯವನ್ನು ಹೊಂದಿರುತ್ತವೆ ಎಂದು ಇದರ ಅರ್ಥ.

**कर्मदेवतावाचित्वेन स्थितानां वाक्यानामन्ततो ब्रह्मपरत्वमित्येवं रूपवाक्यान्वयाभावे मन्दानां प्रतिपदान्वयायोग्यतया तत्र वैमुख्येन ब्रह्मज्ञानाद्यभावः स्यादिति भाव इत्याद्यूह्यम् ।।५।।**

ಯಾವ ವೇದವಾಕ್ಯಗಳು ಕರ್ಮವನ್ನು ಮತ್ತು ದೇವತೆಗಳನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅವುಗಳ ಅಂತಿಮತಾತ್ಪರ್ಯ ಮಹಾವಿಷ್ಣುವೇ ಆಗಿದ್ದಾನೆ. ಹೀಗೆ ವಾಕ್ಯದ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ತಿಳಿದುಕೊಳ್ಳಬೇಕು. ಏಕೆಂದರೆ ಕೇವಲ ಪದಸಮನ್ವಯದಿಂದ ಪಾಮರಜನರಿಗೆ ಬ್ರಹ್ಮಜ್ಞಾನ ಬರಲು ಸಾಧ್ಯವಿಲ್ಲ. ಆ ಪದಗಳ ನಿಷ್ಪತ್ತಿಯಿಂದ ಬ್ರಹ್ಮನೆಂಬ ಅರ್ಥವನ್ನು ತಿಳಿದುಕೊಳ್ಳುವ ಯೋಗ್ಯತೆ ಅವರದ್ದಲ್ಲ. ಒಂದು ವೇಳೆ ಪದಗಳ ಸಮನ್ವಯದಿಂದಲೇ ಬ್ರಹ್ಮಜ್ಞಾನವನ್ನು ಪಡೆಯಬೇಕೆಂದು ಹೇಳುವುದಾದರೆ ವೇದಾಧ್ಯಯನದಲ್ಲಿ ಪಾಮರರಿಗೆ ಪ್ರವೃತ್ತಿ ಉಂಟಾಗುವುದಿಲ್ಲ. ಬ್ರಹ್ಮಜ್ಞಾನವೂ ಕೂಡ ಬರಲು ಸಾಧ್ಯವಿಲ್ಲ. ಆದ್ದರಿಂದ ವಾಕ್ಯಸಮನ್ವಯವನ್ನು ಅವಶ್ಯವಾಗಿ ತಿಳಿಯಲೇ ಬೇಕು. ಹೆಚ್ಚಿನ ವಿಚಾರವನ್ನು ಶಿಷ್ಯಂದಿರು ಸ್ವತಃ ಊಹಿಸಿಕೊಳ್ಳಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ಅಣುಭಾಷ್ಯದ ತತ್ತ್ವಮಂಜರಿಯ ಕನ್ನಡಾನುವಾದದಲ್ಲಿ ಸಮಾಕರ್ಷಾಧಿಕರಣವು ಮುಗಿಯಿತು.

***

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## समाकर्षाधिकरणम् (१।४।५)

।। **समाकर्षात्** ।। १-४-१६ ।।

अत्र नये ज्योतिर्नय इव सर्वशब्दा न्यायभेदेन समन्वीयन्ते । तत्त्विति प्रकृतं ब्रह्म तत इत्यन्वेति । न विरोध इत्यस्ति । वक्ष्यमाणं जगत्पदमाकृष्यते । सर्वशब्दसनामिति शेषः । पूर्वोक्तहेतुभिः ब्रह्मवाचित्वेऽन्यत्र रूढ्यादिना व्यवहारे च सिद्धे बाधकनिरासार्थमिदं सूत्रम् । सर्वशब्दानां ततो ब्रह्मणः सकाशाज्जगति सम्यगाकर्षान्न वृत्तिसाम्यापत्त्या तत्त्वित्त्वधारणविरोध इत्यर्थः ।

ಹಿಂದಿನ ಜ್ಯೋತಿರಧಿಕರಣದಲ್ಲಿ ಹೇಗೆ ಸಕಲಶಬ್ದ ಪ್ರತಿಪಾದ್ಯತ್ವವನ್ನು ಸಮರ್ಥಿಸಲಾಯಿತೋ, ಅದೇ ವಿಷಯವನ್ನೇ ಪುನಃ ಈ ಅಧಿಕರಣದಲ್ಲಿಯೂ ಬೇರೆ ನ್ಯಾಯದಿಂದ ಸಮನ್ವಯ ಮಾಡುತ್ತಿದ್ದಾರೆ. 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ತತ್ತು' ಎಂಬ ಪದದಿಂದ ಪ್ರಕೃತನಾದ ಬ್ರಹ್ಮನನ್ನು 'ತತಃ' ಎಂಬ ಪದದಿಂದ ಅನ್ವಯ ಮಾಡಿಕೊಳ್ಳಬೇಕು. 'ನ ವಿರೋಧಃ' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಮುಂದಿನ ಸೂತ್ರದಲ್ಲಿರುವ 'ಜಗತ್' ಎಂಬ ಪದವನ್ನು ಇಲ್ಲಿಯೂ ಅನ್ವಯ ಮಾಡಿಕೊಳ್ಳಬೇಕು. 'ಸರ್ವಶಬ್ದಾನಾಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಹಿಂದೆ ಹೇಳಿರುವ ಯುಕ್ತಿಗಳಿಂದ ಸಕಲ ಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆ. ಕೇವಲ ರೂಢಿಯಿಂದ ಅನ್ಯತ್ರ ವ್ಯವಹರಿಸಲ್ಪಡುತ್ತವೆಂದು ಸಿದ್ಧವಾದ ಮೇಲೆ ಬರುವಂತಹ ಬಾಧಕದ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ.

ಸೂತ್ರದಲ್ಲಿಲ್ಲದ ಪದಗಳೆಲ್ಲ ಸೇರಿಸಿಕೊಂಡಾಗ ಸೂತ್ರಾರ್ಥವನ್ನು ಸ್ಪಷ್ಟವಾಗಿ ಹೀಗೆ ಹೇಳಿದಂತಾಗುತ್ತದೆ. ಬ್ರಹ್ಮನಲ್ಲಿರುವ ಸಕಲ ಶಬ್ದಗಳನ್ನು ಜಗತ್ತಿನಲ್ಲಿ ಸಮೀಚೀನವಾಗಿ ಆಕರ್ಷಣೆ ಮಾಡಿ, ಪ್ರಯೋಗಿಸಲಾಗುತ್ತದೆ ಎಂದರೆ ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ ಪ್ರತಿಪಾದ್ಯನಾದರೂ, ಮುಖ್ಯವೃತ್ತಿಯಿಂದ ಲೌಕಿಕ-ಪದಾರ್ಥಗಳನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಎರಡೂ ಕಡೆ ಶಬ್ದಗಳ ವೃತ್ತಿ ಸಮಾನವಾಗಿ ಬರುವುದಿಲ್ಲ. ಆದ್ದರಿಂದಲೇ 'ತತ್ತು' ಎಂಬ ಅವಧಾರಣದ ವಿರೋಧವೂ ಕೂಡ ಬರುವುದಿಲ್ಲ. (ಸರ್ವಶಬ್ದಾನಾಂ =

ಎಲ್ಲಾ ಬಗೆಯ ಶಬ್ದಗಳನ್ನು, ತತಃ = ಬ್ರಹ್ಮನ ದೆಸೆಯಿಂದ, ಜಗತಿ = ಜಗತ್ತಿನಲ್ಲಿ, ಸಮಾಕರ್ಷಾತ್ = ಚೆನ್ನಾಗಿ ಆಕರ್ಷಣೆ ಮಾಡಿದ್ದರಿಂದ, ನ ವಿರೋಧಃ = ತತ್ತು ಎಂಬ ಅವಧಾರಣದ ವಿರೋಧ ಬರುವುದಿಲ್ಲ. ಇಷ್ಟು ಪದಗಳ ಅರ್ಥ.)

**समाकर्षोक्त्या विष्णौ परममुख्यवृत्तिरन्यत्र मुख्यवृत्तिरिति मुख्यतारतम्यसूचनात् तत्त्वित्यवधारणोपपत्तिरिति भावः ।**

ಸಮಾಕರ್ಷವನ್ನು ಹೇಳಿದ್ದರಿಂದ ವಿಷ್ಣುವಿನಲ್ಲಿ ಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಇರುತ್ತವೆ. ಬೇರೆ ಪದಾರ್ಥಗಳಲ್ಲಿ ಮುಖ್ಯವೃತ್ತಿಯಿಂದ ಇರುತ್ತವೆಂದು ತಿಳಿಸಿದಂತಾಯಿತು. ಆದ್ದರಿಂದ ಮುಖ್ಯವೃತ್ತಿ-ಯಲ್ಲಿಯೇ ತಾರತಮ್ಯವಿರುತ್ತದೆಂದು ಸೂಚನೆ ಮಾಡಿದ್ದರಿಂದ 'ತತ್ತು' ಎಂಬ ಅವಧಾರಣವು ಉಪಪನ್ನವಾಗುತ್ತದೆ. ಬ್ರಹ್ಮನೊಬ್ಬನೇ ಎಲ್ಲಾ ಶಬ್ದಗಳಿಂದ ಪ್ರತಿಪಾದ್ಯನೆಂಬುದು ಯುಕ್ತವಾಗುತ್ತದೆಂದು ಅಭಿಪ್ರಾಯ.

**समित्युक्तिरन्यत्र मुख्यत्वमेव न लक्षणादिरिति सूचनाय ।**

'ಸಮಾಕರ್ಷಾತ್' ಎಂಬಲ್ಲಿ 'ಸಮ್' ಎಂಬ ಉಪಸರ್ಗವನ್ನು ಏಕೆ ಪ್ರಯೋಗಿಸಿದ್ದಾರೆಂದರೆ ಪರಮಾತ್ಮನಲ್ಲಿರುವ ಶಬ್ದಗಳನ್ನು ಬೇರೆ ಕಡೆ ಪ್ರಯೋಗ ಮಾಡಿದರೂ, ಅಮುಖ್ಯವೃತ್ತಿಯೆನಿಸಿದ ಗೌಣೀವೃತ್ತಿಯಿಂದ, ಲಕ್ಷಣಾವೃತ್ತಿಯಿಂದ ಇರುವುದಿಲ್ಲ. ಮುಖ್ಯವೃತ್ತಿಯಿಂದಲೇ ಆಯಾ ಪದಾರ್ಥಗಳನ್ನು ಶಬ್ದಗಳು ಪ್ರತಿಪಾದಿಸುತ್ತವೆಂದು ಸೂಚನೆ ಮಾಡಿದ್ದಾರೆ.

**साक्षादित्यत्र विष्णुवाचिनां जगति प्रयोगे हानादिव्यवहारः फलमिति, शरीरेत्यत्र तत्तच्छब्दवाच्यब्रह्मसम्बन्धस्तत्र निमित्तमिति, कल्पनेत्यत्र रूढ्यादिरस्तीति, अत्र तु मुख्यवृत्तितारतम्यमस्तीत्युक्तमिति ध्येयम् ।**

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ವಿಷ್ಣುವಾಚಕವಾದ ಶಬ್ದಗಳನ್ನು, ಜಗತ್ತಿನ ವಿಷಯದಲ್ಲಿ ಪ್ರಯೋಗ ಮಾಡುವುದರಿಂದ ಹಾನ, ಉಪಾದಾನ ಮೊದಲಾದ ವ್ಯವಹಾರಗಳು ಸಿದ್ಧವಾಗುತ್ತವೆಂಬುದು ಫಲ. 'ಶರೀರರೂಪಕವಿನ್ಯಸ್ತ ಗೃಹೀತೇರ್ದರ್ಶಯತಿ ಚ' ಎಂಬ ಸೂತ್ರದಲ್ಲಿ ಆಯಾ ಶಬ್ದಗಳಿಂದ ಲೌಕಿಕಪದಾರ್ಥಗಳು ಪ್ರತಿಪಾದ್ಯವಾಗಲು, ಎಲ್ಲಾ ಶಬ್ದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನಾದ ಬ್ರಹ್ಮನ ಸಂಬಂಧವಿರುವುದೇ ಕಾರಣವೆಂದು ಹೇಳಲಾಗಿದೆ. 'ಕಲ್ಪನೋಪದೇಶಾಚ್ಚ' ಎಂಬ ಸೂತ್ರದಲ್ಲಿ ಶಬ್ದಗಳಿಗೆ ಬೇರೆ ವಸ್ತುಗಳಲ್ಲಿ ರೂಢಿಯು ಇರುತ್ತದೆಂದು ನಿರೂಪಣೆ ಮಾಡಲಾಗಿದೆ. ಪ್ರಕೃತ ಈ ಅಧಿಕರಣದಲ್ಲಿ ಮುಖ್ಯವೃತ್ತಿಯಲ್ಲಿಯೂ ಕೂಡ ತಾರತಮ್ಯವಿದೆಯೆಂದು ಹೇಳಲಾಗಿದೆ. ಆದ್ದರಿಂದ ಒಂದೇ ವಿಷಯವನ್ನು ಅನೇಕ ಬಾರಿ ಹೇಳಿದಂತಾಗುವುದಿಲ್ಲ. ಸೂತ್ರಗಳಲ್ಲಿರುವ ಅಭಿಪ್ರಾಯ ವ್ಯತ್ಯಾಸವನ್ನು ಗಮನಿಸಬೇಕು.

**विष्णावुत्कृष्टवृत्तौ कथं जगति प्रसिद्धिरित्यत आह -**

**।। जगद्वाचित्वात् ।। १-४-१७ ।।**

ವಿಷ್ಣುವಿನಲ್ಲಿ ಎಲ್ಲಾ ಶಬ್ದಗಳ ಪ್ರವೃತ್ತಿನಿಮಿತ್ತವು ಉತ್ಕೃಷ್ಟವಾಗಿ ಇರುವುದಾದರೆ, ಜಗತ್ತಿನಲ್ಲಿ ಹೇಗೆ ಲೌಕಿಕ ಪ್ರಸಿದ್ಧಿ ಬರುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ - 'ಜಗದ್ವಾಚಿತ್ವಾತ್'.

शब्दानामित्यस्ति । जगद्वाचित्वादित्यावर्तते । द्वितीयं ज्ञानपरम् । शब्दानां जगद्वाचित्वाल्लोकानां जगति व्यवहाराद्धेतोर्जगद्वाचित्वात् जगद्वाचित्वज्ञानात्तत्र प्रसिद्धिरिति शेषः । लोकानां जगत्येव शब्दव्यवहारेण तत्रैव व्युत्पत्तिबलात्तत्र प्रासिद्धिर्ब्रह्मणि मुख्यत्वाज्ञानमूलेति भावः ।

'ಶಬ್ದಾನಾಮ್' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಜಗದ್ವಾಚಿತ್ವಾತ್' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ಎರಡನೆಯ 'ಜಗದ್ವಾಚಿತ್ವಾತ್' ಎಂಬ ಪದವು ಜ್ಞಾನಾರ್ಥದಲ್ಲಿದೆ.

ಸೂತ್ರಾರ್ಥ ಹೀಗಿದೆ - ಶಬ್ದಾನಾಮ್ = ಶಬ್ದಗಳಿಗೆ, ಜಗದ್ವಾಚಿತ್ವಾತ್ = ಜಗತ್ತಿನ ವಿಷಯದಲ್ಲಿ ಲೌಕಿಕರ ವ್ಯವಹಾರವಿರುವುದರಿಂದ, ಜಗದ್ವಾಚಿತ್ವಾತ್ = ಶಬ್ದಗಳು ಜಗದ್ವಾಚಕವೆಂಬ ಜ್ಞಾನವೂ ಹುಟ್ಟುವುದರಿಂದ, ತತ್ರ ಪ್ರಸಿದ್ಧಿಃ = ಜಗತ್ತಿನ ವಿಷಯದಲ್ಲಿ ಶಬ್ದಗಳ ಪ್ರಸಿದ್ಧಿಯಿರುತ್ತದೆ. ('ತತ್ರ ಪ್ರಸಿದ್ಧಿಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.)

ಲೌಕಿಕರು ಎಲ್ಲಾ ಶಬ್ದಗಳನ್ನು ಜಗತ್ತಿನಲ್ಲಿಯೇ ವ್ಯವಹರಿಸುತ್ತಾರೆ. ಆದ್ದರಿಂದ ಜಗತ್ತಿನ ವಿಷಯದಲ್ಲಿ ಶಬ್ದಗಳ ವ್ಯುತ್ಪತ್ತಿವುಂಟಾಗುತ್ತದೆ. ಈ ಕಾರಣದಿಂದಲೇ ಬ್ರಹ್ಮವಾಚಕವಾದ ಶಬ್ದಗಳಿಗೆ ಜಗತ್ತಿನಲ್ಲಿಯೇ ಪ್ರಸಿದ್ಧಿಯಿರುತ್ತದೆ. ಬ್ರಹ್ಮನಲ್ಲಿ ಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಇರುತ್ತವೆಂಬ ತಿಳುವಳಿಕೆ ಇಲ್ಲದಿರುವುದೇ ಈ ಪ್ರಸಿದ್ಧಿಗೆಲ್ಲ ಮೂಲ ಕಾರಣ.

उक्तमाक्षिप्याह -

**।। जीवमुख्यप्राणलिङ्गादिति चेत्तद्व्याख्यातम् ।। १-४-१८ ।।**

ಹಿಂದೆ ಹೇಳಿದ್ದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುತ್ತಿದ್ದಾರೆ - 'ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ ತದ್ವ್ಯಾಖ್ಯಾತಮ್' ಎಂಬ ಸೂತ್ರದಿಂದ.

तदधीनत्वादर्थवदिति नेति च मण्डूकप्लुत्याऽनुवर्तते । शब्दजातं सर्वस्य तदधीनत्वात्तत्रार्थवदिति न युक्तम् । ''अस्य यदेकां शाखां जीवो जहात्यथ सा शुष्यति'' इति जीवे क्वचित्, ''वायुनैव हि लोका नेनीयन्ते'' इति वायौ सर्वत्र तदधीनत्वरूपलिङ्गं श्रूयते । तस्माल्लिङ्गात्तयोरपि शब्दजातमर्थवत् । मुख्यतस्तयोरपि वाचकमिति चेन्न यतस्तल्लिङ्गं व्याख्यातं तदन्तर्यामिसम्बन्धितयेत्यर्थः ।

'ತದಧೀನತ್ವಾದರ್ಥವತ್' ಎಂಬ ಪದಗಳು ಮತ್ತು 'ನ' ಎಂಬ ಪದವು ಮಂಡೂಕಪ್ಲುತಿಯಿಂದ ಅನುವೃತ್ತವಾಗುತ್ತವೆ. ಎಲ್ಲವೂ ಭಗವದಧೀನವಾದ್ದರಿಂದ, ಸಕಲವಿಧವಾದ ಶಬ್ದಗಳು ಭಗವಂತನನ್ನು

ಎಲ್ಲಾ ಬಗೆಯ ಶಬ್ದಗಳನ್ನು, ತತಃ = ಬ್ರಹ್ಮನ ದೆಸೆಯಿಂದ, ಜಗತಿ = ಜಗತ್ತಿನಲ್ಲಿ, ಸಮಾಕರ್ಷಾತ್ = ಚೆನ್ನಾಗಿ ಆಕರ್ಷಣೆ ಮಾಡಿದ್ದರಿಂದ, ನ ವಿರೋಧಃ = ತತ್ತು ಎಂಬ ಅವಧಾರಣದ ವಿರೋಧ ಬರುವುದಿಲ್ಲ. ಇಷ್ಟು ಪದಗಳ ಅರ್ಥ.)

**समाकर्षोक्त्या विष्णौ परममुख्यवृत्तिरन्यत्र मुख्यवृत्तिरिति मुख्यतारतम्यसूचनात् तत्त्वित्यवधारणोपपत्तिरिति भावः ।**

ಸಮಾಕರ್ಷವನ್ನು ಹೇಳಿದ್ದರಿಂದ ವಿಷ್ಣುವಿನಲ್ಲಿ ಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಇರುತ್ತವೆ. ಬೇರೆ ಪದಾರ್ಥಗಳಲ್ಲಿ ಮುಖ್ಯವೃತ್ತಿಯಿಂದ ಇರುತ್ತವೆಂದು ತಿಳಿಸಿದಂತಾಯಿತು. ಆದ್ದರಿಂದ ಮುಖ್ಯವೃತ್ತಿಯಲ್ಲಿಯೇ ತಾರತಮ್ಯವಿರುತ್ತದೆಂದು ಸೂಚನೆ ಮಾಡಿದ್ದರಿಂದ 'ತತ್ತು' ಎಂಬ ಅವಧಾರಣವು ಉಪಪನ್ನವಾಗುತ್ತದೆ. ಬ್ರಹ್ಮನೊಬ್ಬನೇ ಎಲ್ಲಾ ಶಬ್ದಗಳಿಂದ ಪ್ರತಿಪಾದ್ಯನೆಂಬುದು ಯುಕ್ತವಾಗುತ್ತದೆಂದು ಅಭಿಪ್ರಾಯ.

**समित्युक्तिरन्यत्र मुख्यत्वमेव न लक्षणादिरिति सूचनाय ।**

'ಸಮಾಕರ್ಷಾತ್' ಎಂಬಲ್ಲಿ 'ಸಮ್' ಎಂಬ ಉಪಸರ್ಗವನ್ನು ಏಕೆ ಪ್ರಯೋಗಿಸಿದ್ದಾರೆಂದರೆ ಪರಮಾತ್ಮನಲ್ಲಿರುವ ಶಬ್ದಗಳನ್ನು ಬೇರೆ ಕಡೆ ಪ್ರಯೋಗ ಮಾಡಿದರೂ, ಅಮುಖ್ಯವೃತ್ತಿಯೆನಿಸಿದ ಗೌಣೀವೃತ್ತಿಯಿಂದ, ಲಕ್ಷಣಾವೃತ್ತಿಯಿಂದ ಇರುವುದಿಲ್ಲ. ಮುಖ್ಯವೃತ್ತಿಯಿಂದಲೇ ಆಯಾ ಪದಾರ್ಥಗಳನ್ನು ಶಬ್ದಗಳು ಪ್ರತಿಪಾದಿಸುತ್ತವೆಂದು ಸೂಚನೆ ಮಾಡಿದ್ದಾರೆ.

**साक्षादित्यत्र विष्णुवाचिनां जगति प्रयोगे हानादिव्यवहारः फलमिति, शरीरेत्यत्र तत्तच्छब्दवाच्यब्रह्मसम्बन्धस्तत्र निमित्तमिति, कल्पनेत्यत्र रूढ्यादिरस्तीति, अत्र तु मुख्यवृत्तितारतम्यमस्तीत्युक्तमिति ध्येयम् ।**

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ವಿಷ್ಣುವಾಚಕವಾದ ಶಬ್ದಗಳನ್ನು, ಜಗತ್ತಿನ ವಿಷಯದಲ್ಲಿ ಪ್ರಯೋಗ ಮಾಡುವುದರಿಂದ ಹಾನ, ಉಪಾದಾನ ಮೊದಲಾದ ವ್ಯವಹಾರಗಳು ಸಿದ್ಧವಾಗುತ್ತವೆಂಬುದು ಫಲ. 'ಶರೀರರೂಪಕವಿನ್ಯಸ್ತ ಗೃಹೀತೇರ್ದರ್ಶಯತಿ ಚ' ಎಂಬ ಸೂತ್ರದಲ್ಲಿ ಆಯಾ ಶಬ್ದಗಳಿಂದ ಲೌಕಿಕಪದಾರ್ಥಗಳು ಪ್ರತಿಪಾದ್ಯವಾಗಲು, ಎಲ್ಲಾ ಶಬ್ದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನಾದ ಬ್ರಹ್ಮನ ಸಂಬಂಧವಿರುವುದೇ ಕಾರಣವೆಂದು ಹೇಳಲಾಗಿದೆ. 'ಕಲ್ಪನೋಪದೇಶಾಚ್ಚ' ಎಂಬ ಸೂತ್ರದಲ್ಲಿ ಶಬ್ದಗಳಿಗೆ ಬೇರೆ ವಸ್ತುಗಳಲ್ಲಿ ರೂಢಿಯು ಇರುತ್ತದೆಂದು ನಿರೂಪಣೆ ಮಾಡಲಾಗಿದೆ. ಪ್ರಕೃತ ಈ ಅಧಿಕರಣದಲ್ಲಿ ಮುಖ್ಯವೃತ್ತಿಯಲ್ಲಿಯೂ ಕೂಡ ತಾರತಮ್ಯವಿದೆಯೆಂದು ಹೇಳಲಾಗಿದೆ. ಆದ್ದರಿಂದ ಒಂದೇ ವಿಷಯವನ್ನು ಅನೇಕ ಬಾರಿ ಹೇಳಿದಂತಾಗುವುದಿಲ್ಲ. ಸೂತ್ರಗಳಲ್ಲಿರುವ ಅಭಿಪ್ರಾಯ ವ್ಯತ್ಯಾಸವನ್ನು ಗಮನಿಸಬೇಕು.

**विष्णावुत्कृष्टवृत्तौ कथं जगति प्रसिद्धिरित्यत आह -**

**।। जगद्वाचित्वात् ।। १-४-१७ ।।**

ವಿಷ್ಣುವಿನಲ್ಲಿ ಎಲ್ಲಾ ಶಬ್ದಗಳ ಪ್ರವೃತ್ತಿನಿಮಿತ್ತವು ಉತ್ಕೃಷ್ಟವಾಗಿ ಇರುವುದಾದರೆ, ಜಗತ್ತಿನಲ್ಲಿ ಹೇಗೆ ಲೌಕಿಕ ಪ್ರಸಿದ್ಧಿ ಬರುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ - 'ಜಗದ್ವಾಚಿತ್ವಾತ್'.

शब्दानामित्यस्ति । जगद्वाचित्वादित्यावर्तते । द्वितीयं ज्ञानपरम् । शब्दानां जगद्वाचित्वाल्लोकानां जगति व्यवहाराद्धेतोर्जगद्वाचित्वात् जगद्वाचित्वज्ञानात्तत्र प्रसिद्धिरिति शेषः । लोकानां जगत्येव शब्दव्यवहारेण तत्रैव व्युत्पत्तिबलात्तत्र प्रासिद्धिर्ब्रह्मणि मुख्यत्वाज्ञानमूलेति भावः ।

'ಶಬ್ದಾನಾಮ್' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಜಗದ್ವಾಚಿತ್ವಾತ್' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ಎರಡನೆಯ 'ಜಗದ್ವಾಚಿತ್ವಾತ್' ಎಂಬ ಪದವು ಜ್ಞಾನಾರ್ಥದಲ್ಲಿದೆ.

ಸೂತ್ರಾರ್ಥ ಹೀಗಿದೆ - ಶಬ್ದಾನಾಮ್ = ಶಬ್ದಗಳಿಗೆ, ಜಗದ್ವಾಚಿತ್ವಾತ್ = ಜಗತ್ತಿನ ವಿಷಯದಲ್ಲಿ ಲೌಕಿಕರ ವ್ಯವಹಾರವಿರುವುದರಿಂದ, ಜಗದ್ವಾಚಿತ್ವಾತ್ = ಶಬ್ದಗಳು ಜಗದ್ವಾಚಕವೆಂಬ ಜ್ಞಾನವೂ ಹುಟ್ಟುವುದರಿಂದ, ತತ್ರ ಪ್ರಸಿದ್ಧಿಃ = ಜಗತ್ತಿನ ವಿಷಯದಲ್ಲಿ ಶಬ್ದಗಳ ಪ್ರಸಿದ್ಧಿಯಿರುತ್ತದೆ. ('ತತ್ರ ಪ್ರಸಿದ್ಧಿಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.)

ಲೌಕಿಕರು ಎಲ್ಲಾ ಶಬ್ದಗಳನ್ನು ಜಗತ್ತಿನಲ್ಲಿಯೇ ವ್ಯವಹರಿಸುತ್ತಾರೆ. ಆದ್ದರಿಂದ ಜಗತ್ತಿನ ವಿಷಯದಲ್ಲಿ ಶಬ್ದಗಳ ವ್ಯುತ್ಪತ್ತಿವುಂಟಾಗುತ್ತದೆ. ಈ ಕಾರಣದಿಂದಲೇ ಬ್ರಹ್ಮವಾಚಕವಾದ ಶಬ್ದಗಳಿಗೆ ಜಗತ್ತಿನಲ್ಲಿಯೇ ಪ್ರಸಿದ್ಧಿಯಿರುತ್ತದೆ. ಬ್ರಹ್ಮನಲ್ಲಿ ಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಇರುತ್ತವೆಂಬ ತಿಳುವಳಿಕೆ ಇಲ್ಲದಿರುವುದೇ ಈ ಪ್ರಸಿದ್ಧಿಗೆಲ್ಲ ಮೂಲ ಕಾರಣ.

उक्तमाक्षिप्याह -

**।। जीवमुख्यप्राणलिङ्गादिति चेत्तद्व्याख्यातम् ।। १-४-१८ ।।**

ಹಿಂದೆ ಹೇಳಿದ್ದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುತ್ತಿದ್ದಾರೆ - 'ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ ತದ್ವ್ಯಾಖ್ಯಾತಮ್' ಎಂಬ ಸೂತ್ರದಿಂದ.

तदधीनत्वादर्थवदिति नेति च मण्डूकप्लुत्याऽनुवर्तते । शब्दजातं सर्वस्य तदधीनत्वात्तत्रार्थवदिति न युक्तम् । ''अस्य यदेकां शाखां जीवो जहात्यथ सा शुष्यति'' इति जीवे क्वचित्, ''वायुनैव हि लोका नेनीयन्ते'' इति वायौ सर्वत्र तदधीनत्वरूपलिङ्गं श्रूयते । तस्माल्लिङ्गात्तयोरपि शब्दजातमर्थवत् । मुख्यतस्तयोरपि वाचकमिति चेन्न यतस्तल्लिङ्गं व्याख्यातं तदन्तर्यामिसम्बन्धितयेत्यर्थः ।

'ತದಧೀನತ್ವಾದರ್ಥವತ್' ಎಂಬ ಪದಗಳು ಮತ್ತು 'ನ' ಎಂಬ ಪದವು ಮಂಡೂಕಪ್ಲುತಿಯಿಂದ ಅನುವೃತ್ತವಾಗುತ್ತವೆ. ಎಲ್ಲವೂ ಭಗವದಧೀನವಾದ್ದರಿಂದ, ಸಕಲವಿಧವಾದ ಶಬ್ದಗಳು ಭಗವಂತನನ್ನು

ಪ್ರತಿಪಾದನೆ ಮಾಡುತ್ತವೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ 'ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ' 'ವೃಕ್ಷಾದಿಗಳು ಜೀವನ ಅಧೀನವೆಂದು 'ವಾಯುನೈವ ಹಿ ಲೋಕಾ ನೇನೀಯಂತೇ' ಮುಖ್ಯಪ್ರಾಣನಿಂದಲೇ ಎಲ್ಲಾ ಲೋಕವು ಪ್ರೇರಿತವಾಗಿದೆ ಎಂಬ ಶ್ರುತಿಯಲ್ಲಿ ಸಮಗ್ರ ಲೋಕವು ಮುಖ್ಯಪ್ರಾಣನ ಅಧೀನವಾಗಿದೆ ಎಂದು ಹೇಳಿರುವುದರಿಂದ 'ತದಧೀನತ್ವ' ಎಂಬ ಲಿಂಗವು ಜೀವ ಹಾಗೂ ಮುಖ್ಯಪ್ರಾಣರಲ್ಲಿಯೂ ಬರುತ್ತಿದೆ. ಆದ್ದರಿಂದ 'ತದಧೀನತ್ವ' ಎಂಬ ಲಿಂಗದಿಂದ ಸಕಲಶಬ್ದಗಳು ಜೀವ ಹಾಗೂ ಮುಖ್ಯಪ್ರಾಣರನ್ನೂ ಕೂಡ ಮುಖ್ಯವಾಗಿಯೇ ಪ್ರತಿಪಾದನೆ ಮಾಡುತ್ತವೆ.

ಹೀಗೆ ಆಶಂಕಿಸಬಾರದು. ಏಕೆಂದರೆ ಅಂತರ್ಯಾಮಿಗೆ ಸಂಬಂಧಪಟ್ಟ ಲಿಂಗವನ್ನು ಆ ಶ್ರುತಿಗಳಲ್ಲಿ ಪ್ರತಿಪಾದನೆ ಮಾಡಲಾಗಿದೆ. (ತದಧೀನತ್ವಾತ್ = ಸಕಲವೂ ಶ್ರೀಹರಿಯ ಅಧೀನವಾದ್ದರಿಂದ, ಅವನನ್ನೇ ಪ್ರತಿಪಾದನೆ ಮಾಡುತ್ತದೆಂದು ಹೇಳುವುದು, ನ = ಯುಕ್ತವಲ್ಲ. ಜೀವಮುಖ್ಯಪ್ರಾಣಲಿಂಗಾತ್ = ಜೀವ ಹಾಗೂ ಮುಖ್ಯಪ್ರಾಣರಲ್ಲಿಯೂ 'ತದಧೀನತ್ವ' ಎಂಬ ಲಿಂಗವು ಇರುವುದರಿಂದ, ಅವರೂ ಕೂಡ ಮುಖ್ಯವಾಗಿ ಪ್ರತಿಪಾದ್ಯರಾಗುತ್ತಾರೆ. ಹೀಗೆ ಆಕ್ಷೇಪ ಮಾಡಿದರೆ, ವ್ಯಾಖ್ಯಾತಂ = ಅಂತರ್ಯಾಮಿ ವಿವಕ್ಷೆಯಿಂದ ಶ್ರುತಿಗಳಲ್ಲಿರುವ ಜೀವ ಹಾಗೂ ಮುಖ್ಯಪ್ರಾಣರಲ್ಲಿ ಹೇಳಿರುವ ಲಿಂಗವನ್ನು ಅಂತರ್ಯಾಮಿ ವಿವಕ್ಷೆಯಿಂದ ವ್ಯಾಖ್ಯಾನ ಮಾಡಬೇಕು.)

ननु न वैदिकशब्दानां मुमुक्षुं प्रति कर्मदेवतादौ समाकर्षेण फलं तस्य फलान्तरानिच्छुत्वात् मोक्षस्य ब्रह्मज्ञानादेव सिद्धेरत आह -

**।। अन्यार्थं तु जैमिनिः प्रश्नव्याख्यानाभ्यापि चैवमेके ।। १-४-१९ ।।**

ವೈದಿಕವಾದ ಶಬ್ದಗಳೆಲ್ಲವೂ ಮುಮುಕ್ಷುವನ್ನು ಕುರಿತು ಹೊರಟಿರುತ್ತವೆ. ಎಲ್ಲಾ ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುವುದಾದರೆ, ಅವನಿಗೆ ಬ್ರಹ್ಮಜ್ಞಾನದಿಂದ ಮೋಕ್ಷವು ಸಿದ್ಧವಾಗುತ್ತದೆ. ಹೀಗಿರುವಾಗ ಕೆಲವೆಡೆ ವೇದದಲ್ಲಿ ಕರ್ಮ ಹಾಗೂ ದೇವತೆಗಳನ್ನೇಕೆ ಪ್ರತಿಪಾದನೆ ಮಾಡಬೇಕು. ಅಂದರೆ ಅಲ್ಲಿರುವ ಕರ್ಮ ಹಾಗೂ ದೇವತಾವಾಚಕ ಪದಗಳೂ ಕೂಡ, ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಅದನ್ನು ಸಮಾಕರ್ಷ ಮಾಡಿ, ಕರ್ಮಾದಿಗಳನ್ನು ಮುಮುಕ್ಷು ಆದವನು ತಿಳಿಯಬೇಕೆಂದು ಹೇಳಿದಂತಾಯಿತು. ಆದರೆ ಹೀಗೆ ಸಮಾಕರ್ಷ ಮಾಡಿ ತಿಳಿಯುವುದರಿಂದ ಮುಮುಕ್ಷುವಿಗೆ ಯಾವುದೇ ಬಗೆಯ ಪ್ರಯೋಜನವಿರುವುದಿಲ್ಲ. ಬ್ರಹ್ಮಜ್ಞಾನದಿಂದಲೇ ಅವನಿಗೆ ಮೋಕ್ಷವು ಸಿದ್ಧವಾಗುತ್ತಿದೆ. ಈ ಆಶಂಕೆಗೆ ಉತ್ತರಿಸಲು 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ' ಎಂಬ ಸೂತ್ರವು ಹೊರಟಿದೆ.

जगद्वाचित्वमित्यस्ति । शब्दानामिति च । अन्येति प्रकृतजीवाद्यन्यब्रह्मवाची सन् तज्ज्ञानपरः । तुरेव । शब्दानां जगद्वाचित्वं वैदिकशब्दानां मुमुक्षुं प्रति कर्मदेतादिजगद्वाचित्वं अन्यार्थं तु ब्रह्मज्ञानार्थमेव । कुतः ? ''कस्मिन्नु भगवो

**विज्ञाते सर्वमिदं विज्ञातं भवति'' इति शौनकप्रश्नात् । ''तस्मै स होवाच द्वे विद्ये वेदितव्ये'' इत्यङ्गिरसो व्याख्यानात्ताभ्यां हेतुभ्यामित्यर्थः ।**

'ಜಗದ್ವಾಚಿತ್ವಮ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ಶಬ್ದಾನಾಮ್' ಎಂಬ ಪದವನ್ನೂ ಕೂಡ ಸೇರಿಸಿಕೊಳ್ಳಬೇಕು. ಅನ್ಯಶಬ್ದವು ಪ್ರಕೃತವಾದ ಜೀವ ಮೊದಲಾದವರಿಗಿಂತ ಭಿನ್ನನಾದ ಪರಮಾತ್ಮನನ್ನು ಹೇಳುವುದಾದರೂ ಬ್ರಹ್ಮಜ್ಞಾನವೆಂಬರ್ಥವನ್ನೇ ಹೇಳುತ್ತದೆ. 'ತು' ಶಬ್ದವು ಏವಾರ್ಥದಲ್ಲಿದೆ. 'ಶಬ್ದಾನಾಮ್ ಜಗದ್ವಾಚಿತ್ವಮ್' ಎಂದರೆ ಮುಮುಕ್ಷುವನ್ನು ಕುರಿತು ವೈದಿಕಶಬ್ದಗಳು ಕರ್ಮ, ದೇವತೆ ಮೊದಲಾದವನ್ನು ಹೇಳುತ್ತವೆ. 'ಅನ್ಯಾರ್ಥಂ ತು' ಎಂದರೆ ಬ್ರಹ್ಮಜ್ಞಾನಕ್ಕಾಗಿಯೇ ಎಂದರ್ಥ. ಏಕೆಂದರೆ 'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' (ಎಲೈ ಭಗವನ್ ! ಯಾವುದನ್ನು ತಿಳಿದರೆ ಕರ್ಮಾದಿಗಳ ಜ್ಞಾನವು ಸಫಲವಾಗುತ್ತದೆ ಎಂಬ ಶೌನಕರ ಪ್ರಶ್ನೆಗೆ) ಮತ್ತು 'ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ' ಎಂಬ ಅಂಗೀರಸರ ಉತ್ತರದಿಂದ, (ಅಪರ ವಿದ್ಯೆಯಿಂದ ಕರ್ಮಾದಿಗಳೆಲ್ಲವೂ ತಿಳಿದುಬರುತ್ತವೆ. ಈ ಜ್ಞಾನವು ಪರವಿದ್ಯಾವಿಷಯನಾದ ಬ್ರಹ್ಮನ ಜ್ಞಾನದಿಂದ ಸಫಲವಾಗುತ್ತದೆ.) ಈ ಎಲ್ಲಾ ಹೇತುಗಳಿಂದ ಎಂದರ್ಥ. (ಸೂತ್ರಾರ್ಥ - ಶಬ್ದಾನಾಮ್ ಜಗದ್ವಾಚಿತ್ವಮ್ = ವೈದಿಕಶಬ್ದಗಳು ಮುಮುಕ್ಷುವಿಗೆ ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವುದು, ಅನ್ಯಾರ್ಥಂ ತು = ಬ್ರಹ್ಮಜ್ಞಾನಕ್ಕೋಸ್ಕರ ಮಾತ್ರ. ಏಕೆಂದರೆ ಪ್ರಶ್ನವ್ಯಾಖ್ಯಾನಾಭ್ಯಾಮಪಿ = ಶೌನಕರ ಪ್ರಶ್ನೆ, ಅಂಗೀರಸರ ಉತ್ತರ ಎಂಬ ಹೇತುವಿನಿಂದ. ಹೀಗೆ ಕರ್ಮದೇವತಾದಿಗಳು ಬ್ರಹ್ಮಜ್ಞಾನಕ್ಕೋಸ್ಕರವೆಂದು ಸಿದ್ಧವಾಗುವುದಷ್ಟೇ ಅಲ್ಲದೇ, ಅಪಿಚೈವಮೇಕೇ = ಕೆಲವು ಶಾಖಿಗಳು 'ಯಸ್ತನ್ನ ವೇದ' ಎಂಬುದಾಗಿ ಪಠಿಸುತ್ತಾರೆ.)

**तथा ''कथं नु भगवस्स आदेशः'' इति, ''यथा सोम्यैकेन'' इति श्वेतकेतूद्दालकप्रश्नव्याख्यानाभ्यामित्यर्थः ।**

ಅದರಂತೆ 'ಕಥಂ ನು ಭಗವಃ ಸ ಆದೇಶಃ ಭವತಿ' ಎಂಬುದಾಗಿ ಶ್ವೇತಕೇತುವಿನ ಪ್ರಶ್ನೆಗೆ 'ಯಥಾ ಸೋಮ್ಯೈಕೇನ' ಎಂಬ ಉದ್ದಾಲಕರ ಉತ್ತರದಿಂದಲೂ ಮೇಲಿನ ವಿಷಯವು ಸಿದ್ಧವಾಗುತ್ತದೆ ಎಂದರ್ಥ.

**कस्मिन् ज्ञाते सर्वज्ञानं सफलं भवतीति प्रश्ने परविद्याविषयब्रह्मज्ञानेन भवतीति व्याख्यानतात्पर्यादिति भावः । अपि च न केवलमर्थादेतत्सिद्ध्यति । किन्तु स्पष्टं चैवमेके शाखिनो ''यस्तन्न वेद किमृचा करिष्यति'' इति पठन्तीत्यर्थः ।**

ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುತ್ತದೆ? ಎಂಬ ಪ್ರಶ್ನೆಗೆ ಪರವಿದ್ಯಾ ವಿಷಯನಾದ ಬ್ರಹ್ಮಜ್ಞಾನದಿಂದಲೇ ಎಲ್ಲವನ್ನೂ ತಿಳಿದಂತಾಗುತ್ತದೆಂಬ ಉತ್ತರದಲ್ಲಿಯೇ ತಾತ್ಪರ್ಯವಿರುವುದರಿಂದ ಎಂದಭಿಪ್ರಾಯ.

ಮತ್ತು ಮುಮುಕ್ಷುವನ್ನು ಕುರಿತು ವೈದಿಕಶಬ್ದಗಳು ಕರ್ಮಾದಿ ದೇವತೆಗಳನ್ನು ಬ್ರಹ್ಮಜ್ಞಾನಕ್ಕೋಸ್ಕರ-ವಾಗಿಯೇ ಹೇಳುತ್ತಿವೆ ಎಂಬುದು ಅರ್ಥಾತ್ ಸಿದ್ಧವಾಗುವುದಷ್ಟೇ ಅಲ್ಲ. ಕೆಲವು ಶಾಖೆಯವರು ಸ್ಪಷ್ಟವಾಗಿಯೇ 'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' ಎಂದು ಪರಬ್ರಹ್ಮನೇ ಸಕಲವೇದಗಳ ಮುಖ್ಯಾರ್ಥನಾಗಿದ್ದಾನೆಂದು ಅಧ್ಯಯನ ಮಾಡುತ್ತಾರೆ. ಇಷ್ಟು ಸೂತ್ರಾರ್ಥ.

**वैदिकशब्दानां जगद्वाचित्वमन्यार्थमिति न युक्तम् । प्रतिपदं ब्रह्मपरत्वोक्त्याऽपि ब्रह्मज्ञानसिद्धेरत आह -**

**।। वाक्यान्वयात् ।। १-४-२० ।।**

ವೇದದಲ್ಲಿರುವ ಬ್ರಹ್ಮಜ್ಞಾನಕ್ಕಾಗಿ ಜಗತ್ತಿನಲ್ಲಿರುವ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತದೆ ಎಂಬುದು ಯುಕ್ತವಲ್ಲ. ಏಕೆಂದರೆ ಪ್ರತಿಯೊಂದು ವೈದಿಕಪದಗಳು ಬ್ರಹ್ಮಪರವಾಗಿವೆ ಎಂದು ಹೇಳುವುದರಿಂದಲೇ ಬ್ರಹ್ಮಜ್ಞಾನವು ಸಿದ್ಧವಾಗುತ್ತದೆ. ಹೀಗಿರುವಾಗ ಉಳಿದ ಲೌಕಿಕಪದಾರ್ಥಗಳನ್ನೇಕೆ ಪ್ರತಿಪಾದನೆ ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರಿಸಲು 'ವಾಕ್ಯಾನ್ವಯಾತ್' ಎಂಬ ಸೂತ್ರ ಹೊರಟಿದೆ.

**निमित्तपञ्चमीयम् । वैदिकशब्दानामन्यार्थं जगद्वाचित्वमित्यस्ति । कुतः ? वाक्यान्वयान्निमित्तादित्यर्थः ।**

ಸೂತ್ರದಲ್ಲಿರುವ ಪಂಚಮೀ ವಿಭಕ್ತಿಯು 'ನಿಮಿತ್ತ' ಎಂಬರ್ಥದಲ್ಲಿದೆ. ಸೂತ್ರದಲ್ಲಿ 'ವೈದಿಕಶಬ್ದಾನಾಮ್' 'ಅನ್ಯಾರ್ಥಂ' 'ಜಗದ್ವಾಚಿತ್ವಮ್' ಎಂಬ ಮೂರು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಏಕೆಂದರೆ ವಾಕ್ಯಾನ್ವಯವೆಂಬ ನಿಮಿತ್ತವಿರುವುದರಿಂದ. (ಸೂತ್ರಾರ್ಥ - ವೈದಿಕಶಬ್ದಾನಾಮ್ = ವೈದಿಕ ಶಬ್ದಗಳು, ಅನ್ಯಾರ್ಥಂ = ಬ್ರಹ್ಮಜ್ಞಾನಕ್ಕೋಸ್ಕರ, ಜಗದ್ವಾಚಿತ್ವಮ್ = ಜಗತ್ತಿನಲ್ಲಿರುವ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ಏಕೆಂದರೆ ವಾಕ್ಯಾನ್ವಯಾತ್ = ವಾಕ್ಯಾನ್ವಯದ ನಿಮಿತ್ತದಿಂದ ಎಂದು.)

**कर्मदेवतादिवाचितया स्थितवाक्यानामन्ततो ब्रह्मपरत्वमित्येवंरूपवाक्यान्वयाभावे मन्दानां प्रतिपदान्वयायोग्यतया तत्र वैमुख्यमित्यादिदोषः स्यादिति भावः ।।**

ವಾಕ್ಯಾನ್ವಯವೆಂದರೆ ಕರ್ಮ, ದೇವತೆ ಮೊದಲಾದವುಗಳನ್ನು ಪ್ರತಿಪಾದಿಸುತ್ತವೆಂದು ನಿರ್ಣಯವಾಗಿರುವ ವಾಕ್ಯಗಳಿಗೆ ಅಂತಿಮವಾಗಿ ಬ್ರಹ್ಮನಲ್ಲಿಯೇ ಮಹಾತಾತ್ಪರ್ಯವನ್ನು ಹೇಳುವುದು. ಹೀಗೆ ವಾಕ್ಯಾನ್ವಯವನ್ನು ಮಾಡದಿದ್ದರೆ, ಯಾವ ಮಂದಾಧಿಕಾರಿಗಳಿಗೆ ವೇದದಲ್ಲಿರುವ ಪ್ರತಿಯೊಂದು ಪದಗಳ ಸಮನ್ವಯವನ್ನು ಮಾಡುವ ಯೋಗ್ಯತೆ ಇರುವುದಿಲ್ಲವೋ, ಅಂತಹವರಿಗೆ ವೇದಾಧ್ಯಯನದಲ್ಲಿ ವೈಮುಖ್ಯವು ಉಂಟಾಗುತ್ತದೆ. ಇವೇ ಮೊದಲಾದ ದೋಷಗಳು ಬರಬೇಕಾದೀತು ಎಂದಭಿಪ್ರಾಯ.

**अन्यार्थं जगद्वाचित्वमित्युक्तम् । तत्कथमित्यत आह -**

**।। प्रतिज्ञासिद्धेर्लिङ्गमाश्मरथ्यः ।। १-४-२१ ।।**

ವೇದದಲ್ಲಿರುವ ಶಬ್ದಗಳೆಲ್ಲವೂ ಬ್ರಹ್ಮಜ್ಞಾನಕ್ಕಾಗಿಯೇ ಲೌಕಿಕಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂಬುದು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ - 'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ'

जगद्वाचित्वमन्यार्थमित्यस्ति । प्रतिज्ञासिद्धेः ''नान्यः पन्था अयनाय'' इति ज्ञाति ज्ञानमेव मुक्तिहेतुरिति प्रतिज्ञातार्थनिश्चयस्य लिङ्गं शब्दानां जगद्वाचित्वं लिङ्गं जनकं सत् अन्यार्थं भवतीत्याश्मरथ्यो मन्यत इत्यर्थः ।

'ಜಗದ್ವಾಚಿತ್ವಮ್' ಮತ್ತು 'ಅನ್ಯಾರ್ಥಮ್' ಎಂಬ ಎರಡು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸೂತ್ರಾರ್ಥ - ಪ್ರತಿಜ್ಞಾಸಿದ್ಧೇಃ = 'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಇತ್ಯಾದಿಯಾಗಿ ಜ್ಞಾನವೇ ಮೋಕ್ಷಕ್ಕೆ ಕಾರಣವಾದುದೆಂದು ಮಾಡಿರುವ ಪ್ರತಿಜ್ಞಾರ್ಥದ ನಿಶ್ಚಯಕ್ಕಾಗಿ ಲಿಂಗಮ್ = ಕಾರಣವಾಗಿರುವ, ಶಬ್ದಾನಾಮ್ = ವೈದಿಕಶಬ್ದಗಳು, ಜಗದ್ವಾಚಿತ್ವಮ್ = ಜಗತ್ತಿನಲ್ಲಿರುವ ಪದಾರ್ಥಗಳನ್ನು ಬ್ರಹ್ಮಜ್ಞಾನಕ್ಕಾಗಿ ಪ್ರತಿಪಾದಿಸುತ್ತವೆ. ಆಶ್ಮರಥ್ಯಃ = ಹೀಗೆ ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

सविस्तरं कर्मादिस्वरूपे प्रतिपादिते सति कर्मणां क्षुद्रफलकत्वज्ञानात् तज्ज्ञानेनाक्षुद्रफलकं ज्ञानमेवोपादेयमिति वैराग्यजननद्वारा ब्रह्मज्ञानार्थं भवतीति भावः ।।

ಬ್ರಹ್ಮಜ್ಞಾನಕ್ಕೆ ಕರ್ಮಾದಿಗಳು ಜ್ಞಾನವು ಉಪಯೋಗವಾಗುವ ಕ್ರಮವನ್ನು ಹೀಗೆ ತಿಳಿಯಬೇಕು - ವೇದವು ವಿಸ್ತಾರವಾಗಿ ಕರ್ಮ, ದೇವತೆ ಮೊದಲಾದವುಗಳ ಸ್ವರೂಪವನ್ನು ಪ್ರತಿಪಾದನೆ ಮಾಡಿದಾಗ, ಕರ್ಮಗಳ ಫಲವು ಕ್ಷುದ್ರವೆಂಬ ಅರಿವು ಉಂಟಾಗುತ್ತದೆ. ಮತ್ತು ಬ್ರಹ್ಮಜ್ಞಾನವೇ ಶಾಶ್ವತಫಲದಾಯಕವೆಂದು ಮತ್ತು ಉಪಾದೇಯವೆಂದು ಅರಿವು ಉಂಟಾಗುತ್ತದೆ. ಆದ್ದರಿಂದ ಕ್ಷುದ್ರಫಲಕವಾದ ಕರ್ಮಾದಿಗಳಲ್ಲಿ ವೈರಾಗ್ಯವನ್ನು ತಾಳಿ, ಬ್ರಹ್ಮಜ್ಞಾನವನ್ನೇ ಸಂಪಾದನೆ ಮಾಡಬೇಕು. ಹೀಗೆ ವೈರಾಗ್ಯವನ್ನು ಹುಟ್ಟಿಸುವ ಮೂಲಕ ಬ್ರಹ್ಮಜ್ಞಾನಕ್ಕೆ ಎಲ್ಲಾ ಶಬ್ದಗಳು ಸಾಧನವಾಗುತ್ತವೆ.

जगद्वाचित्वमन्यार्थमित्येतत् प्रकारान्तरेणाप्याह -

**।। उत्क्रमिष्यत एवं भावादित्यौडुलोमिः ।। १-४-२२ ।।**

शब्दानां जगद्वाचित्वमन्यार्थं ब्रह्मज्ञानार्थम् । कथम् ? उत्क्रमिष्यतः बन्धात् ज्ञानेनोत्क्रमणमिच्छतः पुंसः मुमुक्षोरेवं ज्ञानहेतुतया कर्मादेर्भावादवश्यम्भावात् । आवश्यकत्वादिति यावत् । इत्यौडुलोमिर्मन्यत इत्यर्थः ।

ವೇದದಲ್ಲಿರುವ ಶಬ್ದಗಳು ಬ್ರಹ್ಮಜ್ಞಾನಕ್ಕಾಗಿಯೇ ಲೌಕಿಕಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂಬುದನ್ನು ಮತ್ತೊಬ್ಬ ಮುನಿಗಳು ಹೀಗೆ ಸಮರ್ಥಿಸುತ್ತಾರೆ 'ಉತ್ಕ್ರಮಿಷ್ಯತೇ ಏವಂ ಭಾವಾದಿತ್ಯೌಡುಲೋಮಿಃ' ಎಂಬುದಾಗಿ. ಶಬ್ದಗಳು ಬ್ರಹ್ಮಜ್ಞಾನಕ್ಕಾಗಿ ಜಗತ್ತಿನಲ್ಲಿರುವ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂಬುದನ್ನು ಹೀಗೆ ತಿಳಿಯಬೇಕು. ಉತ್ಕ್ರಮಿಷ್ಯತಃ = ಸಂಸಾರ ಬಂಧನದಿಂದ, ಬಿಡುಗಡೆಯನ್ನು ಪಡೆದು, ಬ್ರಹ್ಮಜ್ಞಾನದಿಂದ ಮೋಕ್ಷವನ್ನು ಪಡೆಯಲು ಇಚ್ಛಿಸುವ ಮುಮುಕ್ಷುವಾದ

ಪುರುಷನಿಗೆ, ಏವಂ = ಕರ್ಮಾದಿಗಳು ಜ್ಞಾನಕ್ಕೆ ಹೇತುವಾಗಿ, ಭಾವಾತ್ = ಆವಶ್ಯಕವಾಗಿರುವುದರಿಂದ ಎಂದು, ಇತಿ = ಈ ರೀತಿಯಾಗಿ, ಔಡುಲೋಮಿಃ = ಔಡುಲೋಮಿ ಆಚಾರ್ಯರು ಅಭಿಪ್ರಾಯ ಪಡುತ್ತಾರೆ.

**''विविदिषन्ति यज्ञेन'' इत्यादेर्मनश्शुद्ध्यर्थतयोपादेयत्वात् कर्मणस्तद्वाचित्वम्। मनश्शुद्धिद्वारा ज्ञानार्थमिति भावः ।।**

'ವಿವಿದಿಷಂತಿ ಯಜ್ಞೇನ' ಇತ್ಯಾದಿ ಶ್ರುತಿಗಳು ಹೇಳುವಂತೆ ಕರ್ಮಗಳ ಅನುಷ್ಠಾನವನ್ನು ಮಾಡುವುದರಿಂದ ಮನಸ್ಸು ಸಿದ್ಧವಾಗುತ್ತದೆ. ಶುದ್ಧವಾದ ಮನಸ್ಸಿನಲ್ಲಿ ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡುವುದು ಅರ್ಥಪೂರ್ಣವಾಗುತ್ತದೆ. ಹೀಗೆ ಮನಶ್ಶುದ್ಧಿಯ ಮೂಲಕ ಬ್ರಹ್ಮಜ್ಞಾನಕ್ಕಾಗಿ ಕರ್ಮಾದಿ ಪ್ರತಿಪಾದಕ ವಾಕ್ಯಗಳು ಸಾರ್ಥಕವಾಗಿವೆ.

**अन्यार्थं जगद्वाचित्वमित्येतदन्यथाप्याह -**

**।। अवस्थितेरिति काशकृत्स्नः ।। १-४-२३ ।।**

ವೇದದಲ್ಲಿರುವ ಶಬ್ದಗಳು ಬ್ರಹ್ಮಜ್ಞಾನಕ್ಕಾಗಿ ಕರ್ಮಾದಿ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂಬುದನ್ನು ಮತ್ತೊಬ್ಬ ಮುನಿಗಳು ಹೀಗೆ ಸಮರ್ಥಿಸುತ್ತಾರೆ - 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬುದಾಗಿ.

**ब्रह्मणीति प्रकृतं ब्रह्मान्वेति । कर्मदेवतादिजगतो ब्रह्मण्यवस्थितेः, अन्यार्थम् ''एष सेतुर्विधारणः'' इत्यादिना सर्वाधारत्वप्रकारकब्रह्मज्ञानोत्पत्त्यर्थम् आधेयरूपक र्मादिजगद्वाचित्वमिति काशकृत्स्नो मन्यत इत्यर्थः ।**

ಪ್ರಕೃತನಾದ ಬ್ರಹ್ಮನು 'ಬ್ರಹ್ಮಣಿ' ಎಂಬ ಪದದಿಂದ ಅನ್ವಿತನಾಗುತ್ತಾನೆ. ಕರ್ಮ, ದೇವತೆ ಮೊದಲಾದ ಜಗತ್ತು ಬ್ರಹ್ಮನಲ್ಲಿ ಆಶ್ರಯ ಪಡೆದಿದೆ. ಆದ್ದರಿಂದ ಅನ್ಯಾರ್ಥಮ್ = 'ಏಷ ಸೇತುರ್ವಿಧಾರಣಃ' ಇತ್ಯಾದಿ ಶ್ರುತಿಯಿಂದ ಬ್ರಹ್ಮನು ಸಕಲಕ್ಕೂ ಆಧಾರನಾಗಿದ್ದಾನೆಂಬ ಜ್ಞಾನವು ಹುಟ್ಟಲು ವೈದಿಕಶಬ್ದಗಳು ಬ್ರಹ್ಮನಲ್ಲಿ ಆಶ್ರಿತವಾದ ಆಧೇಯರೂಪವಾದ ಕರ್ಮಾದಿಜಗತ್ತನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಕಾಶಕೃತ್ಸ್ನಾಚಾರ್ಯರು ತಿಳಿಯುತ್ತಾರೆ.

**शिष्यप्रसिद्ध्यर्थं जैमिन्याद्युक्तिः ।। ५ ।।**

ಈ ಸೂತ್ರಗಳಲ್ಲಿ ಹೇಳಿರುವ ವಿಚಾರಗಳೆಲ್ಲವೂ ಸೂತ್ರಕಾರರಿಗೂ ಸಮ್ಮತವೇ ಆಗಿವೆ. ಆದರೂ ಶಿಷ್ಯರ ಪ್ರಸಿದ್ಧಿಗೋಸ್ಕರ ಮಾತ್ರ ಆಯಾ ಋಷಿಗಳ ಹೆಸರುಗಳನ್ನು ಉಲ್ಲೇಖಿಸಿದ್ದಾರೆ.

ಇಲ್ಲಿಗೆ ಸಮಾಕರ್ಷಾಧಿಕರಣವು ಮುಗಿಯಿತು.

श्री राघवेन्द्रतीर्थविरचिता

# श्रीन्यायमुक्तावळिः

## समाकर्षाधिकरणम् (१।४।५)

।। समाकर्षात् ।। ५ ।।

।। जगद्वाचित्वात् ।। ।। जीवमुख्यप्रणलिङ्गादितिचेत्तद्व्याख्यातम् ।।
।। अन्यार्थं तु जैमिनिः प्रश्नव्याख्यानाभ्यामपि चैवमेके ।। ।। वाक्यान्वयात् ।।
।। प्रतिज्ञासिद्धेर्लिङ्गमाश्मरथ्यः ।। ।। उत्क्रमिष्यत एवं भावादित्यौडुलोमिः ।।
।। अवस्थितेरिति काशकृत्स्नः।।

अत्र आकाशादिशब्दानां अन्यत्रापि रूढ्यङ्गीकृतौ ईशे तदन्यत्र च अक्षादिशब्दवत्तुल्या मुख्यवृत्तिः स्यादिति शङ्कनात्सङ्गतिः ।

ಈ ಸಮಾಕರ್ಷಾಧಿಕರಣದಲ್ಲಿ ಆಕಾಶ ಮೊದಲಾದ ಶಬ್ದಗಳು ಭೂತಾಕಾಶಾದಿಗಳಲ್ಲಿ ರೂಢಿವೃತ್ತಿಯಿಂದ ಪ್ರಸಿದ್ಧವಾಗಿರುತ್ತವೆ ಎಂದು ಅಂಗೀಕರಿಸಿದಾಗ 'ಅಕ್ಷ' ಮೊದಲಾದ ಶಬ್ದಗಳಂತೆ ಆಕಾಶಾದಿಶಬ್ದಗಳೂ ಕೂಡ ಅನೇಕಾರ್ಥಕವಾದ ಶಬ್ದಗಳೆಂದಾಗುತ್ತವೆ. ಆದ್ದರಿಂದ ಪರಮಾತ್ಮನು ಹೇಗೆ ಮುಖ್ಯವೃತ್ತಿಯಿಂದ ಪ್ರತಿಪಾದ್ಯ-ನಾಗುತ್ತಾನೋ, ಅದರಂತೆ ಆಕಾಶಾದಿಗಳೂ ಕೂಡ ಮುಖ್ಯವೃತ್ತಿಯಿಂದಲೇ ಪ್ರತಿಪಾದ್ಯವಾಗುತ್ತವಲ್ಲವೇ? ಎಂದು ಆಶಂಕಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯು ಸ್ಪಷ್ಟವಾಗಿರುತ್ತದೆ.

सर्वशब्दानां ईशे तदन्यत्र च उक्ता मुख्यता किं तुल्या किं वा ईशे अधिका अन्यत्र तु हीनेति सन्देहः ।

ಸಕಲಶಬ್ದಗಳು ಈಶ್ವರನಲ್ಲಿ ಹಾಗೂ ಇತರ ಪದಾರ್ಥಗಳಲ್ಲಿ ಮುಖ್ಯವೃತ್ತಿಯಿಂದಲೇ ಇರುತ್ತವಾದ್ದರಿಂದ ಸಮಾನವಾದ ಶಬ್ದಪ್ರತಿಪಾದ್ಯತ್ವವನ್ನು ಹೇಳಬೇಕೋ? ಅಥವಾ ಈಶ್ವರನಲ್ಲಿ ಮುಖ್ಯವಾದ ಪ್ರತಿಪಾದ್ಯತ್ವವಿರುತ್ತದೆ. ಉಳಿದ ಪದಾರ್ಥಗಳಲ್ಲಿ ಈಶ್ವರನಿಗಿಂತ ಹೀನವಾದ ಶಬ್ದವಾಚ್ಯತ್ವವಿರುತ್ತದೆಂದು ಹೇಳಬೇಕೋ? ಎಂಬುದು ಸಂದೇಹ.

पूर्वपक्षस्तु ।। अक्षादिशब्दानां अनेकार्थवाचिनां अनेकत्रेव सर्वशब्दानामीशे तदन्यत्र च मुख्यत्वं तुल्यमेव स्यात् । अन्यथा अन्यत्र हीनत्वे लक्षणेत्यस्यैव मुख्यवृत्तिरिति परिभाषा स्यात् ।

ಪೂರ್ವಪಕ್ಷ ಹೀಗಿದೆ - ಅಕ್ಷಾದಿಶಬ್ದಗಳು ಕಣ್ಣು, ಕ್ರೀಡೆ ಮೊದಲಾದ ಅನೇಕಾರ್ಥವನ್ನು ಹೇಳುತ್ತಿವೆ. ಆ ಎಲ್ಲಾ ಅರ್ಥಗಳಲ್ಲಿಯೂ ಅಕ್ಷಶಬ್ದವು ಮುಖ್ಯವಾದ ವಾಚ್ಯತ್ವವನ್ನೇ ಹೇಳುತ್ತಿದೆ ಎಂದು ಸಕಲ ಸಮ್ಮತವಾಗಿದೆ. ಅದರಂತೆ ಸಕಲ ಶಬ್ದಗಳು ಈಶ್ವರನಲ್ಲಿ ಮತ್ತು ಉಳಿದ ಪದಾರ್ಥಗಳಲ್ಲಿ ಮುಖ್ಯವಾಗಿಯೇ ಬರುವುದರಿಂದ, ಎಲ್ಲೆಡೆಯೂ ಸಮಾನವಾದ ಶಬ್ದವಾಚ್ಯತ್ವವನ್ನೇ ಒಪ್ಪಬೇಕು. ಇಲ್ಲದಿದ್ದರೆ ಪರಮಾತ್ಮನಲ್ಲಿ ಮುಖ್ಯವಾಚ್ಯತ್ವವನ್ನು ಬೇರೆಡೆ ಅಮುಖ್ಯವಾದ ವಾಚ್ಯತ್ವವನ್ನು ಒಪ್ಪಿದರೆ ಬೇರೆ ಪದಾರ್ಥಗಳಲ್ಲಿ ಶಬ್ದಗಳಿಗೆ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದೆ. ಲಕ್ಷಣಾವೃತ್ತಿಗೆ ನೀವು ಮುಖ್ಯವೃತ್ತಿಯೆಂದು ಹೆಸರಿಡುತ್ತಿದ್ದೀರಿ ಎಂದಾಗಬೇಕಾದೀತು.

ईशे मुख्यत्वस्याधिक्ये तत्रैव प्रसिद्ध्यापातेन जगति प्रसिद्धिर्नस्यात् ।

ಈಶ್ವರನಲ್ಲಿ ಶಬ್ದಗಳ ಮುಖ್ಯತ್ವವು ಅಧಿಕವಾಗಿರುವುದಾದರೆ, ಅಲ್ಲಿಯೇ ಶಬ್ದಗಳಿಗೆ ಹೆಚ್ಚು ಪ್ರಸಿದ್ಧಿಯಿರಬೇಕಿತ್ತು. ಜಗತ್ತಿನಲ್ಲಿ ಶಬ್ದಗಳ ಪ್ರಸಿದ್ಧಿಯು ಇಲ್ಲದಿರಬೇಕಾದೀತು.

ईशज्ञानादेव पुरुषार्थसिद्ध्या कर्मदेवतादौ शब्दानां हीनवृत्त्यापि व्यवहारस्य फलान्तरानिच्छुं मुमुक्षुं प्रति व्यर्थत्वापाताच्च ।

ಮತ್ತು ಈಶ್ವರನ ಜ್ಞಾನದಿಂದಲೇ ಮೋಕ್ಷರೂಪವಾದ ಪುರುಷಾರ್ಥವು ಸಿದ್ಧವಾಗುವುದರಿಂದ, ಕರ್ಮ, ದೇವತೆ ಮೊದಲಾದವುಗಳಲ್ಲಿ ಶಬ್ದಗಳನ್ನು ಹೀನವೃತ್ತಿಯಿಂದಲೂ ಕೂಡ ವ್ಯವಹರಿಸಬಹುದಾದ್ದರಿಂದ ಮೋಕ್ಷವನ್ನು ಬಿಟ್ಟು, ಬೇರೆ ಫಲವನ್ನು ಅಪೇಕ್ಷೆ ಪಡದ ಮುಮುಕ್ಷುವಿಗೆ ಕರ್ಮ ಹಾಗೂ ದೇವತಾದಿಗಳನ್ನು ಪ್ರತಿಪಾದನೆ ಮಾಡುವ ವೇದಕ್ಕೆ ವೈಯರ್ಥ್ಯ ಬರಬೇಕಾದೀತು.

किञ्च शब्दवृत्तिहेतोः ईशगतत्वापेक्षया तत्राधिक्यमिति न युक्तम् । अन्यत्रापि सत्त्वात् ।

ಮತ್ತು ಶಬ್ದಪ್ರವೃತ್ತಿನಿಮಿತ್ತವಾದ ಹೇತುವು ಬೇರೆ ಪದಾರ್ಥಗಳಿಗಿಂತ ಈಶ್ವರನಲ್ಲಿ ಹೆಚ್ಚಾಗಿರುತ್ತವೆ ಎಂದು ಹೇಳಬಾರದು. ಬೇರೆ ಪದಾರ್ಥಗಳಲ್ಲಿಯೂ ಮುಖ್ಯವಾದ ಪ್ರವೃತ್ತಿನಿಮಿತ್ತವೇ ಇರುತ್ತದೆ.

नापि तदधीनत्व न्यायेन ''अस्य यदेकां शाखां जीवो जहात्यथ सा शुष्यति'' इति (छां.६-११-२) कचिज्जीवाधीनत्वस्य ''वायुना हि सर्वे लोका नेनीयन्ते'' इति सर्वस्य वाय्वधीनत्वप्रतीत्या तयोरपि ईशवन्मुख्यवाच्यत्वापातादिति ।

ಇನ್ನು ತದಧೀನತ್ವ ನ್ಯಾಯದಿಂದ ಎಲ್ಲಾ ಶಬ್ದಗಳೂ ಪರಮಾತ್ಮನನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆಂದು ಹೇಳಬಾರದು. ಏಕೆಂದರೆ 'ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ' ಎಂಬುದಾಗಿ ಛಾಂದೋಗ್ಯೋಪನಿಷತ್ತು ವೃಕ್ಷಾದಿಗಳು ಜೀವನ ಅಧೀನವಾಗಿವೆ ಎಂದು ಹೇಳುತ್ತಿದೆ. 'ವಾಯುನಾ ಹಿ ಸರ್ವೇ ಲೋಕಾ ನೇನಿಯಂತೇ' ಎಂಬ ಶ್ರುತಿಯೂ ಕೂಡ ಸಕಲ ಲೋಕವು ವಾಯುವಿನ ಅಧೀನವೆಂದು ಹೇಳುತ್ತಿದೆ. ಆದ್ದರಿಂದ ತದಧೀನತ್ವ ನ್ಯಾಯವನ್ನು ವಿವಕ್ಷಿಸುವುದಾದರೆ, ಜೀವ ಹಾಗೂ ವಾಯು ಇವರೂ ಕೂಡ ಎಲ್ಲಾ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯರಾಗಬೇಕಾದೀತು. ಇಷ್ಟು ಪೂರ್ವಪಕ್ಷ.

सिद्धान्तस्तु ।। ब्रह्मणि अन्यतोऽधिकैव शब्दानां मुख्यता, अन्यत्र हीनैव रूढियोगयोरिव गौणलक्षणयोरिव ईशे अन्यत्र च रूढिसत्त्वेऽपि विद्वदविद्वद्रूढिभ्यां यौगिकत्वेऽपि योगमहायोगाभ्यां तारतम्यसम्भवेन महायोगविद्वद्रूढिभ्यां परममुख्यवृत्त्या विष्णुनिष्ठानामेव तेषां अन्यत्र ततः समाकृष्य मुख्यवृत्त्या व्यवहारात् ।

ಸಿದ್ಧಾಂತ ಹೀಗಿದೆ - ಶಬ್ದಗಳು ಬೇರೆ ಲೌಕಿಕಪದಾರ್ಥಗಳಿಗಿಂತ ಬ್ರಹ್ಮನಲ್ಲಿ ಅತ್ಯಂತ ಮುಖ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಶಬ್ದಗಳ ವೃತ್ತಿಯು ಎಲ್ಲೆಡೆಯು ಒಂದೇ ರೀತಿಯಾಗಿರುವುದಿಲ್ಲ. ತಾರತಮ್ಯವಿರುತ್ತದೆ. ರೂಢಿ ಹಾಗೂ ಯೋಗ ಎಂಬೆರಡು ವೃತ್ತಿಗಳು ಲೋಕದಲ್ಲಿ ಪ್ರಸಿದ್ಧವಾಗಿದ್ದರೂ ಯೋಗಕ್ಕಿಂತಲೂ ರೂಢಿಯು ಪ್ರಬಲವೆಂದು ಎಲ್ಲರೂ ಒಪ್ಪಿದ್ದಾರೆ. ಅದೇ ರೀತಿಯಾಗಿ ಗೌಣೀವೃತ್ತಿ ಹಾಗೂ ಲಕ್ಷಣಾವೃತ್ತಿಗಳಲ್ಲಿಯೂ ತಾರತಮ್ಯವನ್ನು ಲೋಕದಲ್ಲಿ ಒಪ್ಪಿದ್ದಾರೆ. ಅದೇರೀತಿಯಾಗಿ ಈಶ್ವರನಲ್ಲಿ ಮತ್ತು ಲೌಕಿಕಪದಾರ್ಥಗಳಲ್ಲಿ ಶಬ್ದಗಳಿಗೆ ರೂಢಿವೃತ್ತಿಯೇ ಇದೆ ಎಂದು ಒಪ್ಪಿದರೂ ಕೂಡ ತಾರತಮ್ಯವಿದೆ. ಅಂದರೆ ಪರಮಾತ್ಮನಲ್ಲಿರುವ ರೂಢಿಯು ವಿದ್ವದ್ರೂಢಿಯಾದ್ದರಿಂದ ಬಲಿಷ್ಠವಾಗಿದೆ. ಲೌಕಿಕಾರ್ಥಗಳಲ್ಲಿರುವ ರೂಢಿಯು ಅವಿದ್ವದ್ರೂಢಿಯೆನಿಸುವುದರಿಂದ ದುರ್ಬಲವಾಗಿದೆ.

ಒಂದು ವೇಳೆ ಶಬ್ದಗಳು ಯೌಗಿಕವೆಂದು ಒಪ್ಪುವುದಾದರೆ, ಪರಮಾತ್ಮನಲ್ಲಿರುವ ಶಬ್ದಗಳು ಮಹಾಯೋಗವೃತ್ತಿಯಿಂದ ಇರುತ್ತವೆ. ಲೌಕಿಕಪದಾರ್ಥಗಳಲ್ಲಿ ಕೇವಲ ಯೋಗವೃತ್ತಿಯಿಂದ ಇರುತ್ತವೆ. ಹೀಗೆ ರೂಢಿಯಲ್ಲಿ, ಯೋಗದಲ್ಲಿ ತಾರತಮ್ಯವನ್ನು ಹೇಳಬಹುದು.

ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಮಹಾವಿಷ್ಣುವು ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಬೇರೆ ಲೌಕಿಕಪದಾರ್ಥಗಳಲ್ಲಿ ಸಮಾಕರ್ಷ ಮಾಡಿ, ಮುಖ್ಯವೃತ್ತಿಯಿಂದ ವ್ಯವಹರಿಸಲಾಗಿದೆ.

ಸಮಾಕರ್ಷಾಧಿಕರಣ (೧-೪-೫)

**बालानां चित्रलिखितसिंहादाविव लोकानामन्यत्रैव शब्दव्यवहारेण अन्यत्रप्रसिद्ध्युपपत्तेः ।**

ಮೇಲೆ ಹೇಳಿದ ವಿಷಯದಲ್ಲಿ ದೃಷ್ಟಾಂತವನ್ನು ಹೀಗೆ ತಿಳಿಯಬೇಕು - ಚಿತ್ರವನ್ನು ನೋಡಿ ಬಾಲಕರು 'ಸಿಂಹ' ಎಂದು ಕರೆಯುತ್ತಾರೆ. ವಾಸ್ತವಿಕವಾಗಿ 'ಸಿಂಹ' ಎಂಬ ಶಬ್ದದಿಂದ ಕಾಡಿನಲ್ಲಿರುವ ಸಿಂಹವೇ ಮುಖ್ಯವಾಗಿ ಪ್ರತಿಪಾದ್ಯವಾಗುತ್ತದೆ. ಅದೇ 'ಸಿಂಹ' ಎಂಬ ಶಬ್ದವನ್ನು ಚಿತ್ರದಲ್ಲಿ ಬಾಲಕರು ಹೇಗೆ ಪ್ರಯೋಗಿಸುತ್ತಾರೋ, ಅದರಂತೆ ಎಲ್ಲಾ ಶಬ್ದಗಳು ಮುಖ್ಯವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿದ್ದರೂ, ಅವುಗಳನ್ನೇ ಲೋಕದಲ್ಲಿ ಎಲ್ಲರೂ ವ್ಯವಹರಿಸಿದ್ದಾರೆ. ಆದ್ದರಿಂದಲೇ ಅನ್ಯತ್ರಪ್ರಸಿದ್ಧವು ಉಪಪನ್ನವಾಗುತ್ತದೆ.

**कर्मदेवताधारत्वादिना ईशज्ञानार्थमेव कर्मादौ वेदव्यवहारस्य सम्भवात् ।**

ವೇದದಲ್ಲಿ ಪ್ರತಿಪಾದಿಸಲ್ಪಟ್ಟ ಕರ್ಮಕಾಂಡ, ದೇವತಾಕಾಂಡಗಳು ವ್ಯರ್ಥವಾಗುವುದಿಲ್ಲ. ಏಕೆಂದರೆ ಕರ್ಮ, ದೇವತೆ ಎಲ್ಲರಿಗೂ ಈಶ್ವರನೇ ಆಧಾರನಾಗಿದ್ದಾನೆಂದು ತಿಳಿಯಬೇಕು. ಅದಕ್ಕೋಸ್ಕರ ಮುಮುಕ್ಷುವಾದವನೂ ಕೂಡ ಕರ್ಮ, ದೇವತೆಗಳನ್ನು ಪ್ರತಿಪಾದಿಸುವ ಭಾಗವನ್ನು ಅಧ್ಯಯನ ಮಾಡಬೇಕು. ಭಗವಂತನ ಜ್ಞಾನಕ್ಕೋಸ್ಕರವೇ ಕರ್ಮಾದಿಗಳಲ್ಲಿ ವೇದವ್ಯವಹಾರವು ಯುಕ್ತವಾಗುತ್ತವೆ.

**जीवादौ श्रुतस्वातन्त्र्यस्य च तदन्तर्यामिगतत्वेन पादान्त्यप्राणनये सिद्धत्वादिति ॥**

ಪೂರ್ವಪಕ್ಷದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಜೀವ ಹಾಗೂ ವಾಯುವಿನಲ್ಲಿಯೂ ಆಕ್ಷೇಪಿಸಲಾಯಿತು. ಆದರೆ ಈಗಾಗಲೇ ಪಾದಾಂತ್ಯಪ್ರಾಣಾಧಿಕರಣದಲ್ಲಿ ಅಂತರ್ಯಾಮಿವಿವಕ್ಷೆಯಿಂದ ಶ್ರುತಿಯಲ್ಲಿ ಅಂತಹ ವ್ಯವಹಾರಗಳಿರುತ್ತವೆಂದು ನಿರ್ಣಯಿಸಿದ್ದೇವೆ. ಆದ್ದರಿಂದ ಜೀವನ ಅಂತರ್ಯಾಮಿಯಾದ ಪರಮಾತ್ಮನ ಅಧೀನವಾಗಿ ವೃಕ್ಷಾದಿಗಳಿರುತ್ತವೆ. ವಾಯುದೇವರ ಅಂತರ್ಯಾಮಿಯಾದ ಭಗವಂತನಿಂದಲೇ ಸಕಲಲೋಕವು ನಡೆಯುತ್ತಿದೆಯೆಂದು ಶ್ರುತಿಗೆ ಅರ್ಥೈಸಬೇಕು.

**फलं तु विष्णुरेव सर्वशब्दमुख्यार्थः इति समन्वयसूत्रोक्तावधारणाक्षेपः तत्समाधिश्चेति ॥ ९ ॥**

ವಿಷ್ಣುವೇ ಸಕಲಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂಬ ಸಮನ್ವಯಸೂತ್ರದಲ್ಲಿ ಮಾಡಿದ ಅವಧಾರಣದ ಆಕ್ಷೇಪವೂ ಪೂರ್ವಪಕ್ಷದ ಫಲ. ಇದರ ಸಮಾಧಾನವೇ ಸಿದ್ಧಾಂತದ ಫಲ.

ಇಲ್ಲಿಗೆ ಶ್ರೀ ರಾಘವೇಂದ್ರ ಯತಿಗಳಿಂದ ವಿರಚಿತವಾದ ನ್ಯಾಯಮುಕ್ತಾವಳಿಯಲ್ಲಿ
ಸಮಾಕರ್ಷಾಧಿಕರಣವು ಮುಕ್ತಾಯವಾಯಿತು

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಪ್ರಕೃತ್ಯಧಿಕರಣ
(೧-೪-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಪ್ರಕೃತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**।। अथ प्रकृत्यधिकरणम् ।।**

**सू – ।। प्रकृतिश्च प्रतिज्ञादृष्टान्तानुपरोधात् ।।**

ಸೂತ್ರಾರ್ಥ - ಈಶ್ವರನು ಪುಲ್ಲಿಂಗಶಬ್ದಗಳಿಂದಷ್ಟೇ ಅಲ್ಲದೇ ಸ್ತ್ರೀಲಿಂಗ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ. ''ಎಲ್ಲಾ ನಾಮಗಳು ವಿಷ್ಣುವಿನಲ್ಲಿ ಇವೆ'' ಎಂಬ ಪ್ರತಿಜ್ಞೆ ಹಾಗೂ ನದಿಗಳು ಸಮುದ್ರವನ್ನು ಸೇರುವ ದೃಷ್ಟಾಂತ ವಾಕ್ಯಗಳಿಗೆ ಅನುಗುಣವಾಗಿ ಪ್ರಕೃತಿಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ईश्वरः न केवलं पुल्लिङ्गाभिधेयः किन्तु **प्रकृतिः** । सैषा प्रकृतिरित्याद्युक्तप्रकृत्यादिस्त्रीलिङ्गशब्दवाच्यश्च भवति । कुतः? एवं सत्येव **प्रतिज्ञादृष्टान्तानुपरोधात्** हन्तैतमिति प्रतिज्ञायाः यथेति नदीसमुद्रदृष्टान्तस्य चानुपरोधात् अविरोधात् । अन्यथा तद्विरोधः स्यादित्यर्थः ।।१।।

ಪರಿಪೂರ್ಣಚಂದ್ರಿಕಾ

ಅರ್ಥ -- ಈಶ್ವರನು ಕೇವಲ ಪುಲ್ಲಿಂಗಶಬ್ದಗಳಿಂದಷ್ಟೇ ಪ್ರತಿಪಾದ್ಯನಲ್ಲ. ಪ್ರಕೃತಿಃ = ಸೈಷಾ ಪ್ರಕೃತಿಃ ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ ಹೀಗೆಯೇ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದನೆಯನ್ನು ಹೇಳಿದರೆ ಮಾತ್ರ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ = 'ಏತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ' ಎಂಬ ಪ್ರತಿಜ್ಞಾವಾಕ್ಯವು ಮತ್ತು 'ಯಥಾ ನದ್ಯಃ ಸ್ಯಂದಮಾನಾಃ' ಇತ್ಯಾದಿ ನದೀ, ಸಮುದ್ರ ದೃಷ್ಟಾಂತವಾಕ್ಯವು ಅವಿರುದ್ಧವಾಗುತ್ತದೆ. ಹೀಗೊಪ್ಪದಿದ್ದರೆ ಪ್ರತಿಜ್ಞೆ ಹಾಗೂ ದೃಷ್ಟಾಂತವಾಕ್ಯಗಳ ವಿರೋಧ ಬರಬೇಕಾದೀತು.

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – स्त्रीशब्दा अपि तस्मिन्नेवेत्याह –**

**।। प्रकृतिश्च प्रतिज्ञादृष्टान्तानुपरोधात् ।।**

ಅನುವಾದ - ಸ್ತ್ರೀಲಿಂಗ ಶಬ್ದಗಳೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು ಸಮರ್ಥಿಸುತ್ತಿದ್ದಾರೆ. 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' 'ಶ್ರುತಿಯಲ್ಲಿರುವ ಪ್ರತಿಜ್ಞಾವಾಕ್ಯ ದೃಷ್ಟಾಂತವಾಕ್ಯಗಳ ಅನುಗುಣ್ಯದಿಂದ ಪ್ರಕೃತಿಶಬ್ದ ವಾಚ್ಯನಾದವನು ಪರಮಾತ್ಮನೆಂದು ತಿಳಿಯುತ್ತದೆ.'

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಸ್ತ್ರೀಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. ಸಿದ್ಧಾಂತವನ್ನು ಮಾಡಲು ಸೂತ್ರಕ್ಕೆ ಅವತಾರಿಕೆ ನೀಡುತ್ತಿದ್ದಾರೆ. –

ತಸ್ಮಿನ್ನೇವ = ಆ ಪರಮಾತ್ಮನಲ್ಲಿಯೇ, ಸ್ತ್ರೀಶಬ್ದಾ ಅಪಿ = ಸ್ತ್ರೀಲಿಂಗಾದಿ ಶಬ್ದಗಳೂ ಕೂಡ ಸಮನ್ವಯವಾಗುತ್ತವೆ. ಇತ್ಯಾಹ = ಹೀಗೆ ಸೂತ್ರಕಾರರು ಹೇಳುತ್ತಿದ್ದಾರೆ. ಪ್ರಕೃತಿಶ್ಚ = ಪ್ರಕೃತಿ ಶಬ್ದವು ಪರಮಾತ್ಮನಲ್ಲಿಯೇ ಸಮನ್ವಯವಾಗುತ್ತದೆ. ಏಕೆಂದರೆ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ = ಪ್ರತಿಜ್ಞಾವಾಕ್ಯ ದೃಷ್ಟಾಂತವಾಕ್ಯಗಳ ಅನುಗುಣ್ಯದಿಂದ

**भाष्यम् – 'हन्तैतमेव पुरुषं सर्वाणि नामान्यभिवदन्ति यथा नद्यः स्यान्दमानाः समुद्रायणाःसमुद्रमभिविशन्त्येवमेवैतानिनामानिसर्वाणिपुरुषमभिविशन्ति' इति प्रतिज्ञादृष्टान्तानुपरोधात् प्रकृतिशब्दवाच्योऽपि स एव ।।१।।**

ಅನುವಾದ - ಪುರುಷಶಬ್ದವಾಚ್ಯನಾದ ವಿಷ್ಣುವನ್ನೇ ಸಕಲ ನಾಮಾತ್ಮಕ ಶಬ್ದಗಳೂ ಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುತ್ತಿವೆ. ಇದು ಪ್ರತಿಜ್ಞಾವಾಕ್ಯ. ಸಮುದ್ರವನ್ನೇ

ಆಶ್ರಯಿಸುವ ನದಿಗಳು ಸಮುದ್ರವನ್ನು ಪ್ರವೇಶಿಸುವಂತೆ ಸಕಲವಿಧವಾದ ನಾಮಾತ್ಮಕಶಬ್ದಗಳು ಪುರುಷನಾಮಕನಾದ ಪರಮಾತ್ಮನನ್ನೇ ಪ್ರವೇಶಿಸುತ್ತವೆ. ಇದು ದೃಷ್ಟಾಂತವಾಕ್ಯ. ಹೀಗೆ ಪ್ರತಿಜ್ಞಾ ಹಾಗೂ ದೃಷ್ಟಾಂತ ವಾಕ್ಯಗಳ ಆನುಗುಣ್ಯದಿಂದ ಪ್ರಕೃತಿಶಬ್ದವಾಚ್ಯನಾದವನು ಪರಮಾತ್ಮನೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸೂತ್ರದಲ್ಲಿ ಸ್ತ್ರೀಲಿಂಗಶಬ್ದಗಳ ಸಮನ್ವಯಕ್ಕಾಗಿ ಪ್ರತಿಜ್ಞಾ-ದೃಷ್ಟಾಂತಾನುಪರೋಧಾತ್ ಎಂಬ ಹೇತುವನ್ನು ಪ್ರಯೋಗಿಸಿದ್ದಾರೆ. ಈ ಹೇತು ಅಪ್ರಯೋಜಕವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಲು ವಿಪಕ್ಷದಲ್ಲಿ ಬಾಧಕತರ್ಕವನ್ನು ಹೇಳುತ್ತಾ ವ್ಯಾಖ್ಯಾನಿಸುತ್ತಿದ್ದಾರೆ. –

ಪುರುಷಂ = ಪುರುಷಶಬ್ದವಾಚ್ಯನಾದ, ಏತಮೇವ = ಪೂರ್ವಪ್ರಕೃತನಾದ ಪರಮಾತ್ಮನನ್ನೇ, ಸರ್ವಾಣಿ ನಾಮಾನಿ = ಸಕಲ ವಿಧವಾದ ನಾಮಾತ್ಮಕ ಶಬ್ದಗಳು, ಅಭಿವದಂತಿ = ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತವೆ, ಇಷ್ಟು ಪ್ರತಿಜ್ಞಾವಾಕ್ಯ. ಈ ವಿಷಯದಲ್ಲಿ ದೃಷ್ಟಾಂತ ಹೀಗಿದೆ - ಯಥಾ = ಯಾವರೀತಿಯಾಗಿ, ಸಮುದ್ರಾಯಣಾಃ = ಸಮುದ್ರವನ್ನೇ ಆಶ್ರಯಿಸುವ, ನದ್ಯಃ = ನದಿಗಳು, ಸಮುದ್ರಂ = ಸಮುದ್ರಕ್ಕೆ ಅಭಿಮುಖವಾಗಿ, ಅಭಿವಿಶಂತಿ = ಪ್ರವೇಶಿಸುತ್ತವೆ. ಏವ ಮೇವ = ಇದೇ ರೀತಿಯಾಗಿ, ಏತಾನಿ = ಪ್ರಮಿತವಾದ ಸಕಲ ನಾಮಾತ್ಮಕ ಶಬ್ದಗಳು, ಪುರುಷಂ = ಪರಮಾತ್ಮನನ್ನು, ಅಭಿವಿಶಂತಿ = ಎಲ್ಲರೀತಿಯಿಂದ ಅಭಿಮುಖವಾಗಿ ಪ್ರವೇಶಿಸುತ್ತವೆ. ಇತಿ = ಹೀಗೆ, ದೃಷ್ಟಾಂತಾನುಪರೋಧಾತ್ = ದೃಷ್ಟಾಂತವಾಕ್ಯಗಳ ಆನುಗುಣ್ಯದಿಂದ, ಪ್ರಕೃತಿ ಶಬ್ದವಾಚ್ಯೋಽಪಿ = ಪ್ರಕೃತಿಶಬ್ದವಾಚ್ಯನಾದವನೂ ಕೂಡ, ಸ ಏವ = ಮಹಾವಿಷ್ಣುವೇ ಆಗುತ್ತಾನೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**अत्र स्त्रीलिङ्गत्वलिङ्गेनान्यत्रैव प्रसिद्धानां स्त्रीशब्दानां परमात्मनि समन्वयप्रतिपादनादस्ति शास्त्रादिसङ्गतिः ।**

ಪ್ರಕೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಸ್ತ್ರೀಲಿಂಗತ್ವ ಎಂಬುದು ಪೂರ್ವಪಕ್ಷ ಯುಕ್ತಿ. ಈ ಲಿಂಗದಿಂದ ಎಲ್ಲ ಬಗೆಯ ಸ್ತ್ರೀಲಿಂಗ ಶಬ್ದಗಳು ಅನ್ಯತ್ರೈವಪ್ರಸಿದ್ಧವಾಗಿವೆ. ಇಂತಹ ಶಬ್ದಗಳನ್ನೆಲ್ಲಾ ಪರಮಾತ್ಮನಲ್ಲಿ ಸಮನ್ವಯ ಮಾಡುವುದಕ್ಕಾಗಿ ಈ ಅಧಿಕರಣ ಹೊರಟಿದೆ. ಆದ್ದರಿಂದ ಪ್ರಕೃತ್ಯಧಿಕರಣಕ್ಕೆ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳಿರುತ್ತವೆ.

**तत्वप्रकाशिका – समन्वयसूत्रे सर्वशब्दानां भगवत्परत्वमुक्तम् । सर्वान्तर्गताः प्रकृत्यादिशब्दाः श्रूयन्ते 'एषा ह्येव प्रकृतिरविकृतिः' 'या प्राणेन**

**संविशत्यदितिर्देवतामयी' इत्यादौ । तेषां चान्यपरत्वे, न सर्वशब्दाभिधेयत्वं परमात्मनः सिध्यतीत्यवश्यं निर्णयता ।**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ವೈದಿಕವಾದ ಸಕಲಶಬ್ದಗಳು ಭಗವಂತನನ್ನೇ ಪ್ರತಿಪಾದನೆ ಮಾಡುತ್ತದೆಂದು ಪ್ರತಿಜ್ಞೆ ಮಾಡಲಾಗಿದೆ. ಸಕಲಶಬ್ದಗಳಲ್ಲಿ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳೂ ಕೂಡ ಶ್ರುತವಾಗಿವೆ - 'ಏಷಾ ಹ್ಯೇವ ಪ್ರಕೃತಿರವಿಕೃತಿಃ' 'ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ' 'ಎಲ್ಲಾ ಕಾರ್ಯಗಳನ್ನು ಸೃಷ್ಟಿಸುವುದರಿಂದ ಪ್ರಕೃತಿ, ತಾನು ವಿಕಾರರಹಿತವಾಗಿರುವುದರಿಂದ ವಿಕೃತಿ', 'ಸರ್ವಭಕ್ಷಣ ಮಾಡುವುದರಿಂದ ಅದಿತಿ, ಪ್ರಾಣನಿಂದ ದೇಹದಲ್ಲಿ ಇದು ಪ್ರವೇಶ ಮಾಡುತ್ತದೆ' ಇತ್ಯಾದಿ ಶ್ರುತಿಯಲ್ಲಿ ಪ್ರಕೃತಿ, ವಿಕೃತಿ, ಅದಿತಿ ಇತ್ಯಾದಿ ಸ್ತ್ರೀಲಿಂಗಶಬ್ದಗಳು ಉಪಲಬ್ಧವಾಗಿವೆ.

ಈ ಎಲ್ಲಾ ಶಬ್ದಗಳು ಭಗವಂತನನ್ನು ಬಿಟ್ಟು, ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡುವುದೆಂದು ಸಿದ್ಧವಾದರೆ ಸಕಲಶಬ್ದವಾಚ್ಯತ್ವವು ಪರಮಾತ್ಮನಲ್ಲಿ ಸಿದ್ಧವಾಗುವುದಿಲ್ಲ. ಅವಶ್ಯವಾಗಿ ಸ್ತ್ರೀಲಿಂಗಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಬೇಕು.

**तत्वप्रकाशिका – तत्प्रकृत्यादिशब्दवाच्यं विषयः । किं विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देहबीजम् ।**

ಪ್ರಕೃತಿ, ವಿಕೃತಿ ಮೊದಲಾದ ಶಬ್ದಗಳಿಂದ ವಾಚ್ಯವಾದುದು ವಿಷಯ. ಆ ವಿಷಯವು ವಿಷ್ಣುವೋ ಅಥವಾ ಬೇರೆ ಪದಾರ್ಥವೋ ? ಎಂದು ಸಂದೇಹ. ಸಮನ್ವಯ ಸೂತ್ರವು ವಿಷ್ಣುವೇ ವಾಚ್ಯವೆಂದು ಹೇಳಿದರೆ ಲೋಕದಲ್ಲಿ ಅನ್ಯತ್ರೈವಪ್ರಸಿದ್ಧಿಯು ಬೇರೆ ಪದಾರ್ಥವು ವಾಚ್ಯವೆನ್ನುತ್ತಿದೆ. ಇವೆರಡು ಸಂದೇಹಕ್ಕೆ ಬೀಜ.

**तत्वप्रकाशिका – न प्रकृत्यादिब्दवाच्यो हरिरिति पूर्वः पक्षः । प्रकृत्यादिशब्दानां स्त्रीलिङ्गत्वात् । परमपुरुषे तदयोगात् ।**

ಪ್ರಕೃತ್ಯಾದಿಶಬ್ದಗಳಿಂದ ಶ್ರೀಹರಿಯು ವಾಚ್ಯನಾಗಲು ಸಾಧ್ಯವಿಲ್ಲ ಎಂಬುದೇ ಪೂರ್ವಪಕ್ಷ. ಏಕೆಂದರೆ ಪ್ರಕೃತಿ ಮೊದಲಾದ ಶಬ್ದಗಳು ಸ್ತ್ರೀಲಿಂಗಗಳಾಗಿವೆ. (ಸ್ತ್ರೀಲಿಂಗತ್ವವು ಪೂರ್ವಪಕ್ಷ ಯುಕ್ತಿ ಎಂಬುದನ್ನು ಗಮನಿಸಬೇಕು). ಪುರುಷಾಗ್ರಣಿಯಾದ ಶ್ರೀಹರಿಯಲ್ಲಿ ಸ್ತ್ರೀಲಿಂಗಶಬ್ದಗಳು ಸರ್ವಥಾ ಕೂಡುವುದಿಲ್ಲ.

**तत्वप्रकाशिका – नच रूपविशेषापेक्षयोपपत्तिः । 'नैनं वाचा स्त्रियं ब्रुवन्' इति स्त्रीत्वनिषेधात् ।**

ಪ್ರಶ್ನೆ - ಪರಮಾತ್ಮನ ಸ್ತ್ರೀರೂಪದ ವಿವಕ್ಷೆಯಿಂದ ಸ್ತ್ರೀಲಿಂಗಶಬ್ದಗಳನ್ನು ಹೇಳಬಹುದಲ್ಲವೇ?

ಉತ್ತರ - ಇದುಸಾಧ್ಯವಿಲ್ಲ. 'ನೈನಂ ವಾಚಾ ಸ್ತ್ರಿಯಂ ಬ್ರುವನ್' 'ಪರಮಾತ್ಮನನ್ನು ಯಾರೂ ಕೂಡ ಸ್ತ್ರೀ' ಎಂದು ಹೇಳುವುದಿಲ್ಲ' ಎಂಬುದಾಗಿ ಸ್ತ್ರೀತ್ವವನ್ನು ಅವನಲ್ಲಿ ನಿಷೇಧ ಮಾಡಲಾಗಿದೆ.

**ತತ್ವಪ್ರಕಾಶಿಕಾ – नच नपुंसकशब्दप्रवृत्तिवत् परमात्मनि स्त्रीशब्दप्रवृत्तिः । नियामकविशेषाभावेन कल्पनाऽयोगात् ।**

ಪ್ರಶ್ನೆ - ಬ್ರಹ್ಮ ಎಂಬ ಶಬ್ದವು ನಪುಂಸಕಲಿಂಗದಲ್ಲಿದೆ. ಈ ಶಬ್ದದಿಂದ ಪರಮಾತ್ಮನು ಪುಲ್ಲಿಂಗನಾಗಿದ್ದರೂ ಕೂಡ ಹೇಗೆ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಪುಲ್ಲಿಂಗನಾಗಿದ್ದರೂ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯನಾಗಬಹುದಲ್ಲವೇ?

ಉತ್ತರ - ಹೀಗೆ ಪ್ರಶ್ನಿಸಬಾರದು. ಏಕೆಂದರೆ ನಪುಂಸಕಲಿಂಗಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆನ್ನಲು, 'ಅಥ ಕಸ್ಮಾತ್ ಉಚ್ಯತೇ ಬ್ರಹ್ಮೇತಿ' ಎಂಬ ನಿಯಾಮಕ ಪ್ರಮಾಣವಿದೆ. ಆದರೆ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ನಿಯಾಮಕಪ್ರಮಾಣಗಳು ಇರುವುದಿಲ್ಲ.

**ತತ್ವಪ್ರಕಾಶಿಕಾ – न चाऽस्त्यस्त्रीभूतस्यापि स्त्रीनियामकत्वेन तच्छब्दवाच्यत्वोपपत्तिः । वशीकृतभार्येऽपि भर्तति तत्प्रयोगादर्शनात् ।**

ಪ್ರಶ್ನೆ - ಪರಮಾತ್ಮನು ಸ್ತ್ರೀ ಆಗಬೇಕಾಗಿಲ್ಲ. ಆದರೂ ಸಕಲ ಸ್ತ್ರೀಯರಿಗೆ ನಿಯಾಮಕನಾಗಿದ್ದಾನೆ. ಆದ್ದರಿಂದ ತದಧೀನತ್ವನ್ಯಾಯವನ್ನು ವಿವಕ್ಷಿಸಿ ಸ್ತ್ರೀಲಿಂಗಶಬ್ದಗಳ ಪ್ರತಿಪಾದ್ಯತ್ವವನ್ನು ಹೇಳಬಹುದಲ್ಲವೇ?

ಉತ್ತರ - ಹಾಗಾದರೆ ಯಾವ ಗಂಡನು ತನ್ನ ಹೆಂಡತಿಯನ್ನು ವಶ ಮಾಡಿಕೊಂಡಿದ್ದಾನೋ, ಅವನಲ್ಲಿಯೂ ಸ್ತ್ರೀಶಬ್ದಪ್ರತಿಪಾದ್ಯತ್ವವು ಬರಬೇಕಾದೀತು. ಆದರೆ ಹೆಂಡತಿಯನ್ನು ಅಧೀನ ಮಾಡಿಕೊಂಡಿದ್ದರೂ ಕೂಡ ಗಂಡನನ್ನು ಯಾರೂ ಕೂಡ ಸ್ತ್ರೀಶಬ್ದದಿಂದ ಕರೆಯುವುದಿಲ್ಲ. ಅದರಂತೆ ಸ್ತ್ರೀಯರು ಪರಮಾತ್ಮನ ಅಧೀನವಾಗಿದ್ದರೂ, ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯ-ನಾಗುವುದಿಲ್ಲ.

**ತತ್ವಪ್ರಕಾಶಿಕಾ – 'नच नामानि सर्वाणि' इत्यादिविरोधः । उक्तन्यायविरोधेन तत्संकोचोपपत्तेः ।**

ಪ್ರಶ್ನೆ - 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಸಕಲನಾಮಗಳು ಪರಮಾತ್ಮನ ಹೆಸರು ಎಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ಸ್ತ್ರೀಶಬ್ದಗಳೂ ಕೂಡ ಅವನನ್ನೇ ಪ್ರತಿಪಾದನೆ ಮಾಡಬೇಕಲ್ಲವೇ?

ಉತ್ತರ - ಮೇಲೆ ಹೇಳಿದ ಕಾರಣಗಳಿಂದ ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವನ್ನು ಹೇಳಿದರೆ ವಿರೋಧ ಬರುತ್ತದೆ. ಆದ್ದರಿಂದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳಷ್ಟೇ ಅವನ ಹೆಸರುಗಳಾಗಿದೆ ಎಂದು ಅರ್ಥೈಸಬೇಕು.

**तत्वप्रकाशिका – अतः प्रकृत्यादिशब्दानां परमात्मवाचित्वाभावान्न समन्वयसूत्रमुपपन्नमिति ।**

ಈ ಎಲ್ಲಾ ಕಾರಣಗಳಿಂದ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಎಲ್ಲಾ ಶಬ್ದಗಳೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ಸಮನ್ವಯಸೂತ್ರವು ಯುಕ್ತವಾಗುವುದಿಲ್ಲ. ಇಷ್ಟು ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतारयति – स्त्रीशब्दा इति ।। एवं प्राप्तं पूर्वपक्षं प्रतिक्षेप्तुं स्त्रीशब्दा अपि परमात्मनि प्रवर्तन्त इति साधयत्यत्र सूत्रकारः इत्यर्थः ।**

ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಭಾಷ್ಯದಲ್ಲಿ 'ಸ್ತ್ರೀಶಬ್ದಾಃ' ಇತ್ಯಾದಿಯಾಗಿ ಅವತಾರಿಕೆ ನೀಡುತ್ತಿದ್ದಾರೆ.

ಹೀಗೆ ಪ್ರಾಪ್ತವಾದ ಪೂರ್ವಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ ಸ್ತ್ರೀಶಬ್ದಗಳೂ ಕೂಡ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ ಎಂಬ ಸಿದ್ಧಾಂತವನ್ನು ಸೂತ್ರಕಾರರು ಪ್ರತಿಪಾದನೆ ಮಾಡುತ್ತಿದ್ದಾರೆ. 'ಸ್ತ್ರೀಶಬ್ದಾ ಅಪಿ ತಸ್ಮಿನ್ನೇವ ಎಂಬ ಭಾಷ್ಯಕ್ಕೆ ಈ ಅರ್ಥವನ್ನು ತಿಳಿಯಬೇಕು.

**तत्वप्रकाशिका – सूत्रं व्याचष्टे – हन्तेति ।। प्रकृत्यादिस्त्रीशब्दवाच्यश्चेश्वरो भवति । 'हन्तैतमेव पुरुषम्' इति श्रुतौ (परम) पुरुषस्याशेषनामवाच्यतां प्रतिज्ञाय तत्रैव नदीसमुद्रदृष्टान्तस्योक्तत्वात् ।**

ಸೂತ್ರವನ್ನು ಭಾಷ್ಯದಲ್ಲಿ 'ಹಂತ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪ್ರಕೃತಿ ಮೊದಲಾದ ಸ್ತ್ರೀಶಬ್ದಗಳಿಂದ ಈಶ್ವರನೇ ಪ್ರತಿಪಾದ್ಯನು. ಅದು ಹೀಗೆ - 'ಹಂತೈತಮೇವ ಪುರುಷಮ್' ಈ ಶ್ರುತಿಯು ಪರಮಪುರುಷನಾದ ನಾರಾಯಣನು ಎಲ್ಲಾ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ ಎಂದು ಪ್ರತಿಜ್ಞೆ ಮಾಡಿದೆ. ಮುಂದೆ ನದೀಸಮುದ್ರದೃಷ್ಟಾಂತದಿಂದ ವಿಮರ್ಶೆಮಾಡಿದೆ.

**तत्वप्रकाशिका – प्रकृत्यादिस्त्रीशब्दाच्यताभ्युपगमे प्रतिज्ञादृष्टान्तानुपरोधादन्यथा तदुपरोधादिति भावः ।**

ಪ್ರಶ್ನೆ - ಪರಮಾತ್ಮನ ಸ್ತ್ರೀರೂಪದ ವಿವಕ್ಷೆಯಿಂದ ಸ್ತ್ರೀಲಿಂಗಶಬ್ದಗಳನ್ನು ಹೇಳಬಹುದಲ್ಲವೇ?

ಉತ್ತರ - ಇದುಸಾಧ್ಯವಿಲ್ಲ. 'ನೈನಂ ವಾಚಾ ಸ್ತ್ರಿಯಂ ಬ್ರುವನ್' 'ಪರಮಾತ್ಮನನ್ನು ಯಾರೂ ಕೂಡ ಸ್ತ್ರೀ' ಎಂದು ಹೇಳುವುದಿಲ್ಲ' ಎಂಬುದಾಗಿ ಸ್ತ್ರೀತ್ವವನ್ನು ಅವನಲ್ಲಿ ನಿಷೇಧ ಮಾಡಲಾಗಿದೆ.

**ತತ್ವಪ್ರಕಾಶಿಕಾ – नच नपुंसकशब्दप्रवृत्तिवत् परमात्मनि स्त्रीशब्दप्रवृत्तिः । नियामकविशेषाभावेन कल्पनाऽयोगात् ।**

ಪ್ರಶ್ನೆ - ಬ್ರಹ್ಮ ಎಂಬ ಶಬ್ದವು ನಪುಂಸಕಲಿಂಗದಲ್ಲಿದೆ. ಈ ಶಬ್ದದಿಂದ ಪರಮಾತ್ಮನು ಪುಲ್ಲಿಂಗನಾಗಿದ್ದರೂ ಕೂಡ ಹೇಗೆ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಪುಲ್ಲಿಂಗನಾಗಿದ್ದರೂ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯನಾಗಬಹುದಲ್ಲವೇ?

ಉತ್ತರ - ಹೀಗೆ ಪ್ರಶ್ನಿಸಬಾರದು. ಏಕೆಂದರೆ ನಪುಂಸಕಲಿಂಗಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನ್ನೆನ್ನಲು, 'ಅಥ ಕಸ್ಮಾತ್ ಉಚ್ಯತೇ ಬ್ರಹ್ಮೇತಿ' ಎಂಬ ನಿಯಾಮಕ ಪ್ರಮಾಣವಿದೆ. ಆದರೆ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ನಿಯಾಮಕಪ್ರಮಾಣಗಳು ಇರುವುದಿಲ್ಲ.

**ತತ್ವಪ್ರಕಾಶಿಕಾ – न चाऽस्त्यस्त्रीभूतस्यापि स्त्रीनियामकत्वेन तच्छब्दवाच्यत्वोपपत्तिः । वशीकृतभार्येऽपि भर्तति तत्प्रयोगादर्शनात् ।**

ಪ್ರಶ್ನೆ - ಪರಮಾತ್ಮನು ಸ್ತ್ರೀ ಆಗಬೇಕಾಗಿಲ್ಲ. ಆದರೂ ಸಕಲ ಸ್ತ್ರೀಯರಿಗೆ ನಿಯಾಮಕನಾಗಿದ್ದಾನೆ. ಆದ್ದರಿಂದ ತದಧೀನತ್ವನ್ಯಾಯವನ್ನು ವಿವಕ್ಷಿಸಿ ಸ್ತ್ರೀಲಿಂಗಶಬ್ದಗಳ ಪ್ರತಿಪಾದ್ಯತ್ವವನ್ನು ಹೇಳಬಹುದಲ್ಲವೇ?

ಉತ್ತರ - ಹಾಗಾದರೆ ಯಾವ ಗಂಡನು ತನ್ನ ಹೆಂಡತಿಯನ್ನು ವಶ ಮಾಡಿಕೊಂಡಿದ್ದಾನೋ, ಅವನಲ್ಲಿಯೂ ಸ್ತ್ರೀಶಬ್ದಪ್ರತಿಪಾದ್ಯತ್ವವು ಬರಬೇಕಾದೀತು. ಆದರೆ ಹೆಂಡತಿಯನ್ನು ಅಧೀನ ಮಾಡಿಕೊಂಡಿದ್ದರೂ ಕೂಡ ಗಂಡನನ್ನು ಯಾರೂ ಕೂಡ ಸ್ತ್ರೀಶಬ್ದದಿಂದ ಕರೆಯುವುದಿಲ್ಲ. ಅದರಂತೆ ಸ್ತ್ರೀಯರು ಪರಮಾತ್ಮನ ಅಧೀನವಾಗಿದ್ದರೂ, ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯ-ನಾಗುವುದಿಲ್ಲ.

**ತತ್ವಪ್ರಕಾಶಿಕಾ – 'नच नामानि सर्वाणि' इत्यादिविरोधः । उक्तन्यायविरोधेन तत्संकोचोपपत्तेः ।**

ಪ್ರಶ್ನೆ - 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಸಕಲನಾಮಗಳು ಪರಮಾತ್ಮನ ಹೆಸರು ಎಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ಸ್ತ್ರೀಶಬ್ದಗಳೂ ಕೂಡ ಅವನನ್ನೇ ಪ್ರತಿಪಾದನೆ ಮಾಡಬೇಕಲ್ಲವೇ?

ಉತ್ತರ - ಮೇಲೆ ಹೇಳಿದ ಕಾರಣಗಳಿಂದ ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವನ್ನು ಹೇಳಿದರೆ ವಿರೋಧ ಬರುತ್ತದೆ. ಆದ್ದರಿಂದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳಷ್ಟೇ ಅವನ ಹೆಸರುಗಳಾಗಿದೆ ಎಂದು ಅರ್ಥೈಸಬೇಕು.

**तत्वप्रकाशिका – अतः प्रकृत्यादिशब्दानां परमात्मवाचित्वाभावान्न समन्वयसूत्रमुपपन्नमिति ।**

ಈ ಎಲ್ಲಾ ಕಾರಣಗಳಿಂದ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಎಲ್ಲಾ ಶಬ್ದಗಳೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ಸಮನ್ವಯಸೂತ್ರವು ಯುಕ್ತವಾಗುವುದಿಲ್ಲ. ಇಷ್ಟು ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतारयति – स्त्रीशब्दा इति ।। एवं प्राप्तं पूर्वपक्षं प्रतिक्षेप्तुं स्त्रीशब्दा अपि परमात्मनि प्रवर्तन्त इति साधयत्यत्र सूत्रकारः इत्यर्थः ।**

ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಭಾಷ್ಯದಲ್ಲಿ 'ಸ್ತ್ರೀಶಬ್ದಾಃ' ಇತ್ಯಾದಿಯಾಗಿ ಅವತಾರಿಕೆ ನೀಡುತ್ತಿದ್ದಾರೆ.

ಹೀಗೆ ಪ್ರಾಪ್ತವಾದ ಪೂರ್ವಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ ಸ್ತ್ರೀಶಬ್ದಗಳೂ ಕೂಡ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ ಎಂಬ ಸಿದ್ಧಾಂತವನ್ನು ಸೂತ್ರಕಾರರು ಪ್ರತಿಪಾದನೆ ಮಾಡುತ್ತಿದ್ದಾರೆ. 'ಸ್ತ್ರೀಶಬ್ದಾ ಅಪಿ ತಸ್ಮಿನ್ನೇವ ಎಂಬ ಭಾಷ್ಯಕ್ಕೆ ಈ ಅರ್ಥವನ್ನು ತಿಳಿಯಬೇಕು.

**तत्वप्रकाशिका – सूत्रं व्याचष्टे – हन्तेति ।। प्रकृत्यादिस्त्रीशब्दवाच्यश्चेश्वरो भवति । 'हन्तैतमेव पुरुषम्' इति श्रुतौ (परम) पुरुषस्याशेषनामवाच्यतां प्रतिज्ञाय तत्रैव नदीसमुद्रदृष्टान्तस्योक्तत्वात् ।**

ಸೂತ್ರವನ್ನು ಭಾಷ್ಯದಲ್ಲಿ 'ಹಂತ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪ್ರಕೃತಿ ಮೊದಲಾದ ಸ್ತ್ರೀಶಬ್ದಗಳಿಂದ ಈಶ್ವರನೇ ಪ್ರತಿಪಾದ್ಯನು. ಅದು ಹೀಗೆ - 'ಹಂತೈತಮೇವ ಪುರುಷಮ್' ಈ ಶ್ರುತಿಯು ಪರಮಪುರುಷನಾದ ನಾರಾಯಣನು ಎಲ್ಲಾ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ ಎಂದು ಪ್ರತಿಜ್ಞೆ ಮಾಡಿದೆ. ಮುಂದೆ ನದೀಸಮುದ್ರದೃಷ್ಟಾಂತದಿಂದ ವಿಮರ್ಶೆಮಾಡಿದೆ.

**तत्वप्रकाशिका – प्रकृत्यादिस्त्रीशब्दाच्यताभ्युपगमे प्रतिज्ञादृष्टान्तानुपरोधादन्यथा तदुपरोधादिति भावः ।**

ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಒಪ್ಪಿದರೆ ಮಾತ್ರ ಶ್ರುತಿ ಹೇಳಿರುವ ಪ್ರತಿಜ್ಞೆ ಹಾಗೂ ದೃಷ್ಟಾಂತಗಳಲ್ಲಿ ಹೊಂದಾಣಿಕೆ ಉಂಟಾಗುತ್ತದೆ. ಒಂದು ವೇಳೆ ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗದಿದ್ದರೆ, ಪ್ರತಿಜ್ಞೆ ಹೇಳುವುದೇ ಬೇರೆ, ದೃಷ್ಟಾಂತವಿರುವುದೇ ಬೇರೆ ಎಂದು ವೈಲಕ್ಷಣ್ಯವು ಪ್ರಾಪ್ತವಾಗುತ್ತದೆ.

**ತತ್ವಪ್ರಕಾಶಿಕಾ – हन्तेत्यास्वादने । प्रकृतिपदमन्योपलक्षकम् । प्रधानस्त्रीनामत्वातत् तद्ग्रहणम् ।।२४।।**

ಶ್ರುತಿಯಲ್ಲಿರುವ 'ಹಂತ' ಎಂಬ ಪದವು ಆಸ್ವಾದನಾರ್ಥದಲ್ಲಿದೆ. ಪರಮಾತ್ಮನಲ್ಲಿ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳೂ ಕೂಡ ಸಮನ್ವಯಗೊಳ್ಳುತ್ತವೆ ಎಂಬುದು ಅತ್ಯಂತ ಅರ್ಥಪೂರ್ಣವಾಗಿದೆ ಎಂಬ ಅಭಿಪ್ರಾಯವನ್ನು ನೀಡುತ್ತಿದೆ. ಈ ಅಧಿಕರಣದಲ್ಲಿ ಪ್ರಕೃತಿ ಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ. ಇದರಿಂದ ಇದೊಂದೇ ಶಬ್ದದ ಸಮನ್ವಯವೆಂದು ತಿಳಿಯಬಾರದು. ಪ್ರಕೃತಿ ಪದವು ಬೇರೆ ಪದಗಳಿಗೂ ಉಪಲಕ್ಷಕವಾಗಿದೆ. ಸ್ತ್ರೀಲಿಂಗದಲ್ಲಿರುವ ಎಲ್ಲಾ ಶಬ್ದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು. ಪ್ರಕೃತಿ ಶಬ್ದವನ್ನೇ ಏಕೆ ಸ್ವೀಕರಿಸಿದ್ದಾರೆ ಎಂದರೆ ಅತ್ಯಂತ ಪ್ರಧಾನಳಾದ ಲಕ್ಷ್ಮೀದೇವಿಯನ್ನು ಇದು ಪ್ರತಿಪಾದನೆ ಮಾಡುತ್ತಿದೆ. ಪ್ರಧಾನಶಬ್ದದ ಸಮನ್ವಯದಿಂದ ಅಪ್ರಧಾನಶಬ್ದದ ಸಮನ್ವಯವು ಅರ್ಥಾತ್ ಸಿದ್ಧವಾಗುತ್ತದೆ ಎಂಬುದು ಸೂತ್ರಕಾರರ ಅಭಿಪ್ರಾಯ.

ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

# ಭಾವದೀಪ

**स्त्रीलिङ्गत्वमित्यनुभाष्यसूचितलिङ्गेनाऽन्यत्रैव प्रसिद्धिमाह – स्त्रीलिङ्गत्वेति ।।**

'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದಿಂದ ಪ್ರಕೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಎಲ್ಲಾ ಬಗೆಯ ಸ್ತ್ರೀಲಿಂಗ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ.

'ಸ್ತ್ರೀಲಿಂಗತ್ವಮ್' ಎಂಬುದು ಈ ಅಧಿಕರಣದ ಪೂರ್ವಪಕ್ಷಲಿಂಗವೆಂದು ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಈ ಲಿಂಗದಿಂದ 'ಪ್ರಕೃತಿ' ಮೊದಲಾದ ಸ್ತ್ರೀಲಿಂಗಶಬ್ದಗಳು ಅನ್ಯತ್ರೈವಪ್ರಸಿದ್ಧವಾಗಿವೆ ಎಂಬುದಾಗಿ 'ಸ್ತ್ರೀಲಿಂಗತ್ವ' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**ಭಾವದೀಪಃ –** अत्र अधिकरणे । स्त्रीशब्दानां स्त्रीलिङ्गशब्दानामित्यर्थः ।

'ಅತ್ರ' ಎಂಬ ಪದಕ್ಕೆ ಈ ಪ್ರಕೃತ್ಯಧಿಕರಣದಲ್ಲಿ ಎಂದರ್ಥ. 'ಸ್ತ್ರೀಶಬ್ದಾನಾಂ' ಎಂಬುದರಿಂದ ಸ್ತ್ರೀಶಬ್ದಗಳು ಎಂದಷ್ಟೇ ವಿವಕ್ಷಿಸಬಾರದು. ಸ್ತ್ರೀಲಿಂಗದಲ್ಲಿರುವ ಎಲ್ಲಾ ಶಬ್ದಗಳನ್ನು ವಿವಕ್ಷಿಸಬೇಕು.

**भावदीपः** – तत्तु समन्वयादिति सर्वाब्दानां परमेश्वरे समन्वय उक्त इत्यानुमानिकसूत्रभाष्येणोक्तप्रायत्वादत्र भाष्येऽनुक्तां पूर्वसङ्गतिं स्वयमाह – **समन्वयसूत्र इति ।।**

'ತತ್ತು ಸಮನ್ವಯಾದಿತಿ ಸರ್ವಶಬ್ದಾನಾಂ ಪರಮೇಶ್ವರೇ ಸಮನ್ವಯ ಉಕ್ತಃ' 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಕಲಶಬ್ದಗಳು ಪರಮೇಶ್ವರನಲ್ಲಿ ಸಮನ್ವಯಗೊಳ್ಳುತ್ತವೆ' ಇತ್ಯಾದಿಯಾಗಿ ಆನುಮಾನಿಕಾಧಿಕರಣದ ಭಾಷ್ಯದಲ್ಲಿ ಸಮನ್ವಯಾಧಿಕರಣದಿಂದ ಸಂಗತಿಯನ್ನು ತೋರಿಸಲಾಗಿದೆ. ಅಲ್ಲಿ ಹೇಳಲ್ಪಟ್ಟ ಸಂಗತಿಯು ಈ ಅಧಿಕರಣದಲ್ಲಿಯೂ ಕೂಡ ವಿವಕ್ಷಿತವಾಗಿದೆ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ ಪ್ರತ್ಯೇಕವಾದ ಸಂಗತಿಯನ್ನು ತೋರಿಸಿರುವುದಿಲ್ಲ. ಆದ್ದರಿಂದ ಭಾಷ್ಯದಲ್ಲಿ ಹೇಳದ ಸಂಗತಿಯನ್ನು ಟೀಕಾಕಾರರು ಸ್ವತಃ 'ಸಮನ್ವಯಸೂತ್ರೇ' ಇತ್ಯಾದಿ ವಾಕ್ಯದಿಂದ ಸ್ಪಷ್ಟವಾಗಿ ತೋರಿಸುತ್ತಿದ್ದಾರೆ.

**भावदीपः** – श्रूयते श्रुतौ प्रतीयते ।। **एषेति** ।। यद्यपीयं श्रुतिः तृतीये कामादितरत्र तत्र चायतनादिभ्य इत्यत्र भाष्ये श्रीतत्वपरत्वेनोदाहृता तथाप्येतत्पादीयोदाहरणानां मुख्यवृत्त्याऽन्यपराणामपि सतां परममुख्यवृत्त्या ब्रह्मपरत्वस्याभिमतत्वादियमत्रोदाहृता ।

'ಶ್ರೂಯತೇ' ಎಂಬ ಪದಕ್ಕೆ ಶ್ರುತಿಯಲ್ಲಿ ಪ್ರತೀತವಾಗಿದೆ ಎಂದರ್ಥ. ಶ್ರುತಿ ಹೀಗಿದೆ -

ಪ್ರಶ್ನೆ - 'ಏಷಾ ಹ್ಯೇವ ಪ್ರಕೃತಿರವಿಕೃತಿಃ' ಎಂಬ ಶ್ರುತಿಯು ೩ನೆಯ ಪಾದದ 'ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ' ಎಂಬ ಸೂತ್ರದ ಭಾಷ್ಯದಲ್ಲಿ ಶ್ರೀತತ್ವಪರವಾಗಿ ಉದಾಹರಿಸಲಾಗಿದೆ. ಆದ್ದರಿಂದ ಒಮ್ಮೆ ಸಮನ್ವಯ ಮಾಡಿದ ಶ್ರುತಿಯನ್ನು ಪುನಃ ಇಲ್ಲಿ ವಿಚಾರ ಮಾಡುವ ಅವಶ್ಯಕತೆ ಏನಿದೆ?

ಉತ್ತರ - ಹೌದು. ಆದರೆ ಈ ಪಾದದಲ್ಲಿ ಯಾವ ಶ್ರುತಿಗಳನ್ನು ಉಲ್ಲೇಖಿಸುತ್ತಿದ್ದಾರೋ ಅವುಗಳು ಮುಖ್ಯವೃತ್ತಿಯಿಂದ ಅನ್ಯಪರವಾಗಿದ್ದರೂ ಪರಮಮುಖ್ಯವೃತ್ತಿಯಿಂದ ಬ್ರಹ್ಮಪರವಾಗುತ್ತವೆ. ಇದನ್ನು ತಿಳಿಸುವುದಕ್ಕಾಗಿ ಹಿಂದಿನ ಪಾದದಲ್ಲಿ ಉದಾಹರಿಸಿದ ಶ್ರುತಿಗಳನ್ನು ಪುನಃ ಉದಾಹರಿಸುತ್ತಾರೆ.

**भावदीपः** – अत एव द्वितीये तेजोऽतस्तथाह्याहेत्यादौ भूतपरत्वेनोदाहृतैव कारणत्वेन च इत्यत्राप्युदाहृतेति ध्येयम् ।

ಆದ್ದರಿಂದಲೇ ಎರಡನೆಯ ಪಾದದಲ್ಲಿರುವ 'ತೇಜೋಽತಸ್ತಥಾಹ್ಯಾಹ' ಎಂಬ ಸೂತ್ರದಲ್ಲಿ ಭೂತಪರತ್ವೇನ ಉದಾಹರಿಸಲ್ಪಟ್ಟ ಶ್ರುತಿಯನ್ನೇ ಪುನಃ ಈ ಪಾದದಲ್ಲಿ 'ಕಾರಣತ್ವೇನ ಚ ಆಕಾಶಾದಿಷು'

ಎಂಬ ಸೂತ್ರದಲ್ಲಿ ಉದಾಹರಿಸಿದ್ದಾರೆ. ಇದರಿಂದ ಪರಮಮುಖ್ಯವೃತ್ತಿಯಿಂದ ಎಲ್ಲಾ ಶಬ್ದಗಳು ಪರಮಾತ್ಮನನ್ನು ಮಾತ್ರ ಪ್ರತಿಪಾದನೆ ಮಾಡುತ್ತವೆ ಎಂಬ ಪ್ರಮೇಯವು ಸಿದ್ಧವಾಗುತ್ತದೆ.

**भावदीपः –** या प्राणेनेति काठके अदितिशब्दः । न केवलं सिद्धान्तेऽप्यन्यपरा एवाऽत्रोदाहरणं किन्तु अन्यपरत्वरहिता उपनिषदादिगता भगवन्मात्रपराऽपि स्त्रीलिङ्गशब्दयुक्ताः श्रुतय इति सूचयितुमेतत् श्रुत्युक्तिः ।

'ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ' ಎಂಬುದು ಕಾಠಕೋಪನಿಷತ್ತಿನ ವಾಕ್ಯ. ಇದರಲ್ಲಿ ಶ್ರುತವಾದ 'ಅದಿತಿ' ಶಬ್ದವು ಸ್ತ್ರೀಲಿಂಗವಾಗಿದೆ.

ಸಿದ್ಧಾಂತದಲ್ಲಿಯೂ ಕೂಡ ಕೇವಲ ಅನ್ಯಪರವಾದ ಶ್ರುತಿಗಳನ್ನಷ್ಟೇ ಇಲ್ಲಿ ಉದಾಹರಿಸುತ್ತಿಲ್ಲ ಹೊರತಾಗಿ ಉಪನಿಷತ್ತುಗಳಲ್ಲಿರುವ ಅನ್ಯಪರವಲ್ಲದ ಕೇವಲ ಭಗವನ್ಮಾತ್ರಪರವಾದ ಎಲ್ಲಾ ಬಗೆಯ ಸ್ತ್ರೀಲಿಂಗಶಬ್ದಗಳೂ ಕೂಡ ಈ ಅಧಿಕರಣದ ವಿಷಯವಾಗಿವೆ. ಇದನ್ನು ತಿಳಿಸುವುದಕ್ಕಾಗಿ 'ಯಾ ಪ್ರಾಣೇನ' ಎಂಬ ಶ್ರುತಿಯನ್ನು ಟೀಕೆಯಲ್ಲಿ ಉಲ್ಲೇಖಿಸಿದ್ದಾರೆ.

**भावदीपः –** तेन छन्दोनयाद्युक्तगायत्र्यादिश्रुतिरप्यनेन रूपेणात्रोदाहरणमिति सूचितम् । अन्यपरत्वे अन्यमात्रपरत्वे । औपनिषदशब्दाभिप्राये तु यथा श्रुतमेव योज्यम् ।

ಹೀಗೆ ಹೇಳಿದ್ದರಿಂದ ಪ್ರಥಮಪಾದದ ಗಾಯತ್ರ್ಯಧಿಕರಣದಲ್ಲಿ ಉಲ್ಲೇಖಿಸಲ್ಪಟ್ಟ ಗಾಯತ್ರ್ಯಾದಿ ಶ್ರುತಿಯೂ ಕೂಡ ಈ ಅಧಿಕರಣದಲ್ಲಿ ವಿಷಯವಾಗುತ್ತದೆಂಬುದನ್ನು ಸೂಚನೆ ಮಾಡಿದಂತಾಯಿತು.

'ಅನ್ಯಪರತ್ವೇ' ಎಂಬ ಪದಕ್ಕೆ 'ಬೇರೆ ಪದಾರ್ಥವನ್ನಷ್ಟೇ ಪ್ರತಿಪಾದನೆ ಮಾಡುವುದಾದರೆ' ಎಂದರ್ಥ. ಉಪನಿಷತ್ತಿನಲ್ಲಿರುವ ಶಬ್ದವನ್ನು ವಿವಕ್ಷಿಸುವುದಾದರೆ ಯಥಾಶ್ರುತವಾದುದನ್ನೇ ಇಟ್ಟುಕೊಳ್ಳಬೇಕು.

**भावदीपः –** यद्वाऽन्यपरत्वेऽपि विष्णुपरत्वाभाव इत्येवार्थः । विष्णुरन्यद्वेति संशयेऽपि विष्णुर्भवति न वेत्येवार्थः ।

ಅಥವಾ 'ಅನ್ಯಪರತ್ವೇ' ಎಂಬ ಪದಕ್ಕೆ ಅನ್ಯಪರವಾದರೂ ಕೂಡ ವಿಷ್ಣುಪರವಾಗದಿದ್ದರೆ ಎಂಬರ್ಥವನ್ನು ವಿವಕ್ಷಿಸಬಹುದು. ಇದರಂತೆ 'ವಿಷ್ಣುಃ ಅನ್ಯದ್ವಾ' ಎಂಬ ಸಂಶಯವಾಕ್ಯದಲ್ಲಿಯೂ ವಿಷ್ಣುವು ಪ್ರಕೃತ್ಯಾದಿ-ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೋ ಇಲ್ಲವೋ? ಎಂಬರ್ಥವನ್ನೇ ವಿವಕ್ಷಿಸಬಹುದು.

**भावदीपः –** अत एव न प्रकृत्यादिशब्दवाच्यो हरिरित्येव पूर्वपक्षकोटिरग्रे वक्ष्यते । तथाऽन्यपरभगवन्मात्रपरद्विविधवाक್ಯसाधारणमेतदिति ध्येयम् ।

ಆದ್ದರಿಂದಲೇ ಪ್ರಕೃತ್ಯಾದಿಶಬ್ದಗಳಿಂದ ಶ್ರೀಹರಿಯು ಪ್ರತಿಪಾದ್ಯನಾಗುವುದಿಲ್ಲ ಎಂದಷ್ಟೇ ಪೂರ್ವಪಕ್ಷ ಕೋಟಿಯನ್ನು ಟೀಕೆಯಲ್ಲಿ ಮುಂದೆ ತೋರಿಸುತ್ತಾರೆ. ಅದರಂತೆ ಅನ್ಯಪರವಾದ ಮತ್ತು ಭಗವನ್ಮಾತ್ರಪರವಾದ ಎರಡು ಬಗೆಯ ವಾಕ್ಯಗಳ ವಿವಕ್ಷೆಯಿಂದ ಹೀಗೆ ವ್ಯಾಖ್ಯಾನವನ್ನು ತಿಳಿಯಬೇಕು.

**भावदीपः** – अनुभाष्योक्तां युक्तिमाह – **स्त्रीलिङ्गत्वादिति** ।। स्त्रीलिङ्गवाचित्वादित्यर्थः । नारायण्यादिरूपविशेषे स्त्रीलिङ्गत्वं युज्यत इत्याशङ्क्य तत्र श्रुतिविरोधमाह – **नच रूपेति** ।।

ಅನುವ್ಯಾಖ್ಯಾನದಲ್ಲಿ ಹೇಳಿದ ಯುಕ್ತಿಯನ್ನು ಟೀಕೆಯಲ್ಲಿ 'ಸ್ತ್ರೀಲಿಂಗತ್ವಾತ್' ಎಂದು ಉಲ್ಲೇಖಿಸಿದ್ದಾರೆ. 'ಸ್ತ್ರೀಲಿಂಗತ್ವಾತ್' ಎಂಬ ಲಿಂಗಕ್ಕೆ ಸ್ತ್ರೀಲಿಂಗವಾಚಿಯಾದ್ದರಿಂದ ಎಂದರ್ಥ.

'ನಾರಾಯಣೀ' ಮೊದಲಾದವು ಭಗವಂತನ ಹೆಣ್ಣಿನ ರೂಪಗಳಾಗಿವೆ. ಇವುಗಳಲ್ಲಿ ಸ್ತ್ರೀಲಿಂಗತ್ವವು ಯುಕ್ತವಾಗುತ್ತದಲ್ಲವೇ? ಎಂದು ಆಶಂಕಿಸಿ ಶ್ರುತಿವಿರೋಧವನ್ನು 'ನಚ ರೂಪ' ಎಂಬ ಟೀಕಾ ಮಾತಿನಿಂದ ಹೇಳುತ್ತಿದ್ದಾರೆ.

**भावदीपः** – ननु नैनं वाचा स्त्रियं ब्रुवन्नेतमस्त्री पुमान्ब्रुवन् । पुमांसं न ब्रुवन्नेनं वदन् वदति कश्चनेति मन्त्रे पुमांसं स्त्रियं च वदन्नेव न वदीत्युक्तत्वादुभयात्मकं स्वरूपं प्रतीयते । अस्त्रीपुमानिति ब्रुवन्नपि न वदतीत्युक्तत्वात् स्त्रीत्वं पुंस्त्वं च प्रतीयते । विष्णोर्लौकिकस्त्रीपुंबिलक्षणत्वादस्त्रीपुमानित्यपि वदन्नपि वदतीत्याद्यैतरेय भाष्योक्त्या केवलस्य लौकिकस्य वाऽस्त्रीत्वस्य निषेधपरं तद्वाक्यम् । अन्यथा नैनमस्त्री पुमान् ब्रुवन्नित्युत्तरवाक्यविरोधात् ।

ಪ್ರಶ್ನೆ.-

ನೈನಂ ವಾಚಾ ಸ್ತ್ರಿಯಂ ಬ್ರುವನ್ನೇತಮಸ್ತ್ರೀ ಪುಮಾನ್‌ಬ್ರುವನ್ ।
ಪುಮಾಂಸಂ ನ ಬ್ರುವನ್ನೇನಂ ವದನ್ ವದತಿ ಕಶ್ಚನ ॥

ಭಗವಂತನು ಸ್ತ್ರೀರೂಪ, ಹಾಗೂ ಪುರುಷರೂಪವನ್ನು ಹೊಂದಿದ್ದಾನೆ. ಇವನನ್ನು ಯಾವುದೇ ಪ್ರಮಾಣದ ಆಧಾರವಿಲ್ಲದೇ ಕೇವಲ ಮಾತಿನಿಂದ, ಕೇವಲ ಸ್ತ್ರೀಯನ್ನಾಗಿ ಬಣ್ಣಿಸುವವನು ಸರಿಯಾಗಿ ವರ್ಣಿಸುತ್ತಿಲ್ಲ. ಸ್ತ್ರೀಯೂ ಅಲ್ಲದ, ಪುರುಷನೂ ಅಲ್ಲದ ಒಬ್ಬನನ್ನಾಗಿ ವರ್ಣಿಸುವವನು ಸರಿಯಾಗಿ ವರ್ಣಿಸುತ್ತಿಲ್ಲ. ಕೇವಲ ಪುರುಷನನ್ನಾಗಿ ವರ್ಣಿಸುವವನೂ ಸರಿಯಾಗಿ ವರ್ಣಿಸುವುದಿಲ್ಲ. ಸ್ತ್ರೀಯನ್ನಾಗಿಯೂ, ಪುರುಷನನ್ನಾಗಿಯೂ ವರ್ಣಿಸುವ ಜ್ಞಾನಿಯೇ ಸರಿಯಾಗಿ ವರ್ಣಿಸುತ್ತಾನೆ.

ಈ ಮಂತ್ರದಲ್ಲಿ 'ಪುಮಾಂಸಂ ನ ಬ್ರುವನ್ನೇನಂ ವದಂ ವದತಿ' ಎಂದು ಹೇಳಿರುವುದರಿಂದ ಸ್ತ್ರೀರೂಪ ಹಾಗೂ ಪುರುಷರೂಪ ಎರಡನ್ನೂ ಹೊಂದಿರುತ್ತಾನೆಂದು ತಿಳಿಸಿದಂತಾಗುತ್ತದೆ. 'ಅಸ್ತ್ರೀ ಪುಮಾನ್ ಬ್ರುವನ್'

ಎಂದು ಹೇಳಿದ್ದರೂ ಕೂಡ 'ನ ವದತಿ' ಎಂದು ಹೇಳಿರುವುದರಿಂದ ಸ್ತ್ರೀತ್ವ ಹಾಗೂ ಪುಂಸ್ತ್ವಗಳೆರಡೂ ಪ್ರತೀತವಾಗುತ್ತವೆ. ವಿಷ್ಣುವಿನಲ್ಲಿ ಲೌಕಿಕರಾದ ಸ್ತ್ರೀ-ಪುರುಷರಿಗಿಂತ ವೈಲಕ್ಷಣ್ಯವಿದೆ. ಆದ್ದರಿಂದ 'ಅಸ್ತ್ರೀ ಪುಮಾನ್' ಎಂದು ಶ್ರುತಿ ಕರೆದಿದೆ. ಹೀಗೊಪ್ಪದಿದ್ದರೆ 'ನೈನಮಸ್ತ್ರೀ ಪುಮಾನ್ ಬ್ರುವನ್' ಎಂಬ ಉತ್ತರವಾಕ್ಯದ ವಿರೋಧ ಬರುತ್ತದೆ.

(ಸ್ಪಷ್ಟವಾಗಿ ಹೀಗೆ ತಿಳಿಯಬೇಕು - 'ಅಸ್ತ್ರೀ ಪುಮಾನ್ ಬ್ರುವನ್' ಎಂದರೆ ಭಗವಂತನನ್ನು ಸ್ತ್ರೀರೂಪನಲ್ಲದ, ಪುರುಷರೂಪನಲ್ಲದವನನ್ನಾಗಿ ವರ್ಣಿಸುವವನು ಎಂದರ್ಥ. ಏಳು ವಿಭಕ್ತಿಗಳ ಅರ್ಥದಲ್ಲಿಯೂ ಪ್ರಥಮಾವಿಭಕ್ತಿಯ ಪ್ರಯೋಗವಿದೆ. ಆದ್ದರಿಂದ 'ಅಸ್ತ್ರೀ ಪುಮಾನ್' ಎಂಬ ಪ್ರಥಮಾವಿಭಕ್ತಿಯು ದ್ವಿತೀಯಾವಿಭಕ್ತಿಯ ಅರ್ಥದಲ್ಲಿದೆ. ಸ್ವಾತಂತ್ರ್ಯವನ್ನು ತಿಳಿಸುವ ಅಭಿಪ್ರಾಯವಿರುವಾಗ ವಿಭಕ್ತಿ ವ್ಯತ್ಯಾಸ ಮಾಡಬಹುದೆಂದು ಸೂತ್ರ ಹೇಳುತ್ತದೆ. ಭಗವಂತನು ಸ್ವತಂತ್ರನೆಂಬುದು ಪ್ರಸಿದ್ಧ. ಅವನ ಪ್ರೇರಣೆಗೋಳಗಾಗಿಯೇ ಅವನನ್ನು ವರ್ಣಿಸುತ್ತಾನೆ ಎಂಬುದು ಈ ವಿಭಕ್ತಿವ್ಯತ್ಯಾಸದ ಅಭಿಪ್ರಾಯ. 'ವದತಿ' ಎಂಬುದನ್ನು ಮೂರು ನಕಾರಗಳೊಂದಿಗೆ ಮಾತ್ರವಲ್ಲದೇ 'ವದನ್ ವದತಿ' ಎಂದು 'ವದನ್' ಎಂಬುದರೊಡನೆಯೂ ಅನ್ವಯ ಮಾಡಬೇಕು. ಹಾಗೇ ಒಂದು ನಕಾರವನ್ನು ಅನುವೃತ್ತಿಮಾಡಿ 'ವದನ್ನೇವ ನ ವದತಿ' ಎಂದು ಅನ್ವಯ ಮಾಡಬೇಕು. ಭಗವಂತನು ಸ್ತ್ರೀರೂಪನೂ, ಪುರುಷರೂಪನೂ ಆಗಿರುತ್ತಾನೆ. ಆದ್ದರಿಂದ ಹಾಗೇ ವರ್ಣಿಸುವವನು ಸರಿಯಾಗಿಯೇ ವರ್ಣಿಸುತ್ತಾನೆ. ವಸ್ತುತಃ ಭಗವಂತನು ಲೋಕವಿಲಕ್ಷಣನಾದ್ದರಿಂದ ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ ಎನ್ನುವವನೂ ಸರಿಯಾಗಿಯೇ ವರ್ಣಿಸುತ್ತಾನೆ. ಮತ್ತು ಲೋಕವಿಲಕ್ಷಣನಾದ್ದರಿಂದಲೇ ಸ್ತ್ರೀಯೂ, ಪುರುಷನೂ ಆಗಿದ್ದಾನೆ ಎನ್ನುವವನೂ ಸರಿಯಾಗಿ ವರ್ಣಿಸಿದ್ದಾನೆ.

ನಾರಾಯಣನು ಸ್ತ್ರೀರೂಪನೂ, ಪುರುಷರೂಪನೂ ಆಗಿರುವುದರಿಂದ ಅವನನ್ನು ಪುರುಷನೆಂದೂ, ಸ್ತ್ರೀ' ಎಂದೂ ಹೇಳಬಹುದು. ಲೋಕವೈಲಕ್ಷಣ್ಯವಿರುವುದರಿಂದ ಲೌಕಿಕ ಸ್ತ್ರೀಯೂ ಅಲ್ಲ. ಲೌಕಿಕ ಪುರುಷನೂ ಅಲ್ಲ ಎಂದೂ ಕೂಡ ಹೇಳಬಹುದು. ವಸ್ತುತಃ ಸರ್ವಶಕ್ತನಾದ ವಿಷ್ಣುವಿಗೆ ನಪುಂಸಕರೂಪವು ಎಲ್ಲಿಯೂ ಇರುವುದಿಲ್ಲ. ಆದರೂ ಲೌಕಿಕ ಸ್ತ್ರೀ-ಪುರುಷರಂತೆ ಅನುರಾಗಕ್ಕೆ ಪರವಶನಾಗದಿರುವುದರಿಂದ ನಪುಂಸಕ ಶಬ್ದಗಳಿಂದಲೂ ಕರೆಸಿಕೊಳ್ಳುತ್ತಾನೆ.)

**भावदीपः** – तथाच रूपविशेषस्य स्त्रीत्वे श्रुतिविरोधाभावात्तदपेक्षया कृत्यादिशब्दोपपत्तिरिति चेन्न पुंरूपे स्त्रीशब्दाप्रयोजापातात् ।

ಪ್ರಶ್ನೆ - ಭಗವಂತನ ರೂಪವಿಶೇಷವು ಹೆಣ್ಣಾಗಿರುವುದರಿಂದ ಆ ರೂಪವನ್ನಷ್ಟೇ ಶ್ರುತಿಯು ವಿವಕ್ಷಿಸಿದೆಯೆಂದು ಹೇಳಿದಾಗ ವಿರೋಧ ಬರುವುದಿಲ್ಲ. ಮತ್ತು ಪ್ರಕೃತ್ಯಾದಿಶಬ್ದಗಳ ಸಮನ್ವಯವೂ ಕೂಡ ಸಿದ್ಧವಾಗುತ್ತದಲ್ಲವೇ?

ಉತ್ತರ - ಇದು ತಪ್ಪು. ಹಾಗಾದರೆ ಪುರುಷರೂಪದಲ್ಲಿ ಸ್ತ್ರೀಶಬ್ದದ ಪ್ರಯೋಗವೇ ಬಾರದಿರಬೇಕಾದೀತು.

**भावदीपः** – तथा च त्रिपादस्यामृतं दिवीत्युक्तश्वेतद्वीपादिस्थनारायणादिपुंरूपे छन्दोनयोक्तगायत्र्यादि-शब्दोक्तिर्न स्यादिति तात्पर्यात् ।

ಆದ್ದರಿಂದ 'ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯಲ್ಲಿ ಯಾವ ಶ್ವೇತದ್ವೀಪದಲ್ಲಿ ನೆಲೆಸಿರುವ ನಾರಾಯಣನ ಪುರುಷರೂಪವು ವರ್ಣಿತವಾಗಿದೆಯೋ, ಅದರಲ್ಲಿ ಛಂದೋಧಿಕರಣದಲ್ಲಿ ಹೇಳಲ್ಪಟ್ಟ ಗಾಯತ್ರೀ ಮೊದಲಾದ ಶಬ್ದಗಳ ಸಮನ್ವಯವೂ ಸಿದ್ಧವಾಗದಿರಬೇಕಾದೀತು.

**भावदीपः** – ननु देवतादिखट्वादिशब्दवाच्येषु स्त्रीलिङ्गाभावेऽपि स्त्रीलिङ्गशब्दवाच्यत्वं शब्दसाधुत्वमात्रेण युक्तं तद्वदिह स्यादिति चोद्यं सदृष्टान्तमुक्त्वा प्रतिज्ञादृष्टान्तेत्यादिसूत्रत्रयोक्तहेतुव्यावर्त्यहेतुना निराह – **नच नपुंसकेति** ।।

ಪ್ರಶ್ನೆ - 'ದೇವತಾ ಖಟ್ವಾ' ಮೊದಲಾದ ಶಬ್ದ ಪ್ರತಿಪಾದ್ಯಗಳಲ್ಲಿ ಸ್ತ್ರೀಲಿಂಗವಿರುವುದಿಲ್ಲ. ಆದರೂ ಸ್ತ್ರೀಲಿಂಗಶಬ್ದವಾಚ್ಯತ್ವವು ಶಬ್ದಸಾಧುತ್ವ ಮಾತ್ರದಿಂದ ಯುಕ್ತವೆಂದು ಹೇಗೆ ಹೇಳುವಿರೋ, ಅದರಂತೆ ಪರಮಾತ್ಮನು ಪುಲ್ಲಿಂಗನಾಗಿದ್ದರೂ, ಸ್ತ್ರೀಲಿಂಗಶಬ್ದಗಳ ಸಮನ್ವಯವನ್ನು ಮಾಡಬಹುದಲ್ಲವೇ?

ಉತ್ತರ - ಇದು ತಪ್ಪು. ಈ ಪ್ರಶ್ನೆಗೆ 'ಪ್ರತಿಜ್ಞಾದೃಷ್ಟಾಂತ' ಇತ್ಯಾದಿ ಮೂರು ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುವಿನಿಂದ ಇದನ್ನು ನಿರಾಕರಣೆ ಮಾಡುತ್ತಿದ್ದಾರೆ 'ನಚ ನಪುಂಸಕ' ಇತ್ಯಾದಿ ಟೀಕೆಯಿಂದ.

**भावदीपः** – ननु चमसवदविशेषादित्यादावुक्तस्य नामानि सर्वाणि इत्यादेरेव नियमाकत्वादित्यतो विशेषेत्युक्तम् । तत्तु सामान्यं वक्ष्यमाणदिशा सङ्कुचितसर्वनामपरमिति भावः ।

ಪ್ರಶ್ನೆ - 'ಚಮಸವದವಿಶೇಷಾತ್' ಎಂಬ ಸೂತ್ರದಲ್ಲಿ ಯಾವ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯನ್ನು ಉಲ್ಲೇಖಮಾಡಿದ್ದಾರೋ, ಆ ಶ್ರುತಿಯ ಆಧಾರದಿಂದ ಪರಮಾತ್ಮನು ಸ್ತ್ರೀಲಿಂಗಾದಿ ಶಬ್ದಗಳಿಂದಲೂ ಪ್ರತಿಪಾದ್ಯನಾಗುತ್ತಾನೆಂಬ ನಿಯಾಮಕ ಪ್ರಮಾಣವಿದೆಯಲ್ಲವೇ?

ಉತ್ತರ - ಇದು ತಪ್ಪು. ಮೇಲೆ ಹೇಳಿದ ನ್ಯಾಯಗಳ ವಿರೋಧದಿಂದ, 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ ಅರ್ಥಸಂಕೋಚವನ್ನು ಮಾಡಬೇಕಾಗುತ್ತದೆ. ಮುಂದೆ ಹೇಳುವಂತೆ ಸಂಕುಚಿತವಾದ ಸರ್ವಶಬ್ದಗಳ ಸಮನ್ವಯವನ್ನಷ್ಟೇ ಮಾಡಬೇಕು.

**भावदीपः** – यद्वा बृहन्तो ह्यस्मिन्गुणा इत्यादेर्गुणपूर्णत्वरूपब्रह्मपदवाच्यत्व-नियामकस्येवेह प्रकृत्यादिस्त्रीलिङ्गशब्दप्रवृत्तिनिमित्तरूपनियामकविशेषस्याभावादि-त्यात्मकृतेरित्यादि सूत्रद्वयव्यावर्त्योक्तिः । तदधीनत्वसूत्रेण गतार्थत्वमाशङ्क्य निराह – **न चाऽस्त्रीभूतस्यापीति** ।।

ಅಥವಾ 'ಬೃಹಂತೋ ಹ್ಯಸ್ಮಿನ್‌ಗುಣಾಃ' ಎಂಬ ಶ್ರುತಿಯಲ್ಲಿ ಗುಣಪೂರ್ಣತ್ವವನ್ನು ಪ್ರತಿಪಾದನೆ ಮಾಡುವ ಬ್ರಹ್ಮಪದವಾಚ್ಯತ್ವವು ಪರಮಾತ್ಮನಲ್ಲಿ ಹೇಗೆ ಯುಕ್ತವಾಗುತ್ತದೋ, ಅದರಂತೆ ಇಲ್ಲಿ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಇರುತ್ತದೆ ಎನ್ನಲು ಯಾವುದೇ ನಿಯಾಮಕ ಪ್ರಮಾಣಗಳು ಇರುವುದಿಲ್ಲ. ಹೀಗೆ 'ಆತ್ಮಕೃತೇಃ' ಇತ್ಯಾದಿ ಎರಡು ಸೂತ್ರಗಳಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಟೀಕೆಯಲ್ಲಿ ಹೇಳಿರುತ್ತಾರೆ.

'ತದಧೀನತ್ವ' ಸೂತ್ರದಿಂದ ಈ ಆಕ್ಷೇಪವು ಗತಾರ್ಥವಾಗಿದೆಯಲ್ಲವೇ? ಎಂಬ ಆಶಂಕೆಯನ್ನು 'ನಚಾಽಸ್ತ್ರೀಭೂತಸ್ಯಾಪಿ' ಎಂಬ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ.

**भावदीपः – एतद्वाक्यं पूर्ववद्द्वेधा व्याख्येयम् ।। उक्तेति ।। स्त्रीलिङ्गायोगरूपन्यायेनेत्यर्थः ।। अत इति साधकभावादित्यर्थः ।**

'ನಚಾಽಸ್ತ್ರೀಭೂತಸ್ಯಾಪಿ' ಎಂಬ ವಾಕ್ಯವನ್ನು ಹಿಂದಿನಂತೆ ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡಿಕೊಳ್ಳಬೇಕು. 'ಉಕ್ತ' ಎಂದರೆ ಸ್ತ್ರೀಲಿಂಗವು ಅಯುಕ್ತವಾಗುತ್ತದೆಂಬ ನ್ಯಾಯದಿಂದ ಎಂದರ್ಥ. 'ಅತಃ' ಎಂದರೆ ಸಾಧಕಪ್ರಮಾಣ ಇಲ್ಲದಿರುವುದರಿಂದ ಎಂದರ್ಥ.

**भावदीपः – पूर्वपक्षफलमाह – नेति ।। हरौ स्त्रीशब्दप्रवृत्त्युक्तेरसाङ्गत्यनिरासाय भाष्यार्थमाह – एवमिति ।। आकाङ्क्षाक्रमेण भाष्यं व्याचष्टे ।। प्रकृत्यादीति ।।**

ಪೂರ್ವಪಕ್ಷದ ಫಲವನ್ನು 'ನ' ಇತ್ಯಾದಿಯಾಗಿ ಹೇಳಿರುತ್ತಾರೆ. ಶ್ರೀಹರಿಯಲ್ಲಿ ಸ್ತ್ರೀಶಬ್ದದ ಪ್ರವೃತ್ತಿನಿಮಿತ್ತವನ್ನು ಹೇಳುವುದರಿಂದ ಅಸಂಗತಿಯು ಬರುವುದಿಲ್ಲ ಎಂಬುದಾಗಿ ತಿಳಿಸಲು ಭಾಷ್ಯದ ಅರ್ಥವನ್ನು 'ಏವಂ' ಎಂಬುದರಿಂದ ನಿರೂಪಣೆ ಮಾಡಿದ್ದಾರೆ. ಆಕಾಂಕ್ಷಾಕ್ರಮದಿಂದ ಭಾಷ್ಯವನ್ನು 'ಪ್ರಕೃತ್ಯಾದಿ' ಎಂಬ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – सूत्रभाष्ययोः प्रकृतिशब्दस्तस्तदादिस्त्रीलिङ्गशब्दमात्रोपलक्षणमित्यग्रे व्यक्तत्वादादिपदम् ।। वाच्यश्चेति ।। न केवलं प्रागुक्तपुलिङ्गशब्दवाच्यश्चेति सौत्रच शब्दार्थोक्तिपरभाष्यस्थापि शब्दार्थो दर्शितः ।**

ಸೂತ್ರ ಹಾಗೂ ಭಾಷ್ಯಗಳಲ್ಲಿ ಉಲ್ಲೇಖ ಮಾಡಲ್ಪಟ್ಟ ಪ್ರಕೃತಿ ಶಬ್ದವು ಉಳಿದ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾಗಿದೆ ಎಂಬುದಾಗಿ ಮುಂದೆ ಸ್ಪಷ್ಟಪಡಿಸುತ್ತಾರೆ. ಆದಕ್ಕಾಗಿ ಇಲ್ಲಿ 'ಪ್ರಕೃತ್ಯಾದಿ' ಎಂಬುದಾಗಿ 'ಆದಿ' ಪದವನ್ನು ಉಲ್ಲೇಖಿಸಿದ್ದಾರೆ.

'ವಾಚ್ಯಶ್ಚ' ಎಂಬಲ್ಲಿರುವ ಚ ಶಬ್ದವು ಭಾಷ್ಯದಲ್ಲಿರುವ 'ಅಪಿ' ಶಬ್ದದ ವ್ಯಾಖ್ಯಾನವಾಗಿದೆ. ಕೇವಲ ಹಿಂದೆ ಹೇಳಲ್ಪಟ್ಟ ಪುಲ್ಲಿಂಗ ಶಬ್ದಗಳಿಂದಷ್ಟೇ ಪರಮಾತ್ಮನು ಪ್ರತಿಪಾದ್ಯನಲ್ಲ. ಸ್ತ್ರೀಲಿಂಗ ಶಬ್ದಗಳಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ. ಇದನ್ನು ಸೂತ್ರದಲ್ಲಿರುವ 'ಚ' ಶಬ್ದವು ನಿರೂಪಣೆ ಮಾಡುತ್ತಿದೆ.

**भावदीपः** – ननु सर्वस्त्रीशब्दसमुच्चायकश्चशब्द इति तत्वप्रदीपोक्तेरत्र पुनः सर्व पुल्लिङ्गशब्दसमुच्चायकत्वोक्तौ कथं सर्वस्त्रीशब्दलाभ इत्यतोऽस्मिन् व्याख्याने तल्लाभप्रकारमाह – **प्रकृतिपदमिति** ।। एतेन स्त्रीशब्दा अपीति सम्बन्धभाष्यमुपपादितमिति ध्येयम् ।।१।।

ಪ್ರಶ್ನೆ - ಸಕಲ ಸ್ತ್ರೀಶಬ್ದಗಳ ಸಮುಚ್ಚಯಕ್ಕಾಗಿ 'ಚ' ಶಬ್ದವನ್ನು ಸೂತ್ರದಲ್ಲಿ ಹೇಳಲಾಗಿದೆ ಎಂಬುದಾಗಿ ತತ್ವಪ್ರದೀಪದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ ನೀವು ಹಿಂದೆ ಹೇಳಲ್ಪಟ್ಟ ಪುಲ್ಲಿಂಗ ಶಬ್ದಗಳ ಸಮುಚ್ಚಯಕ್ಕಾಗಿ 'ಚ' ಶಬ್ದ ಹೇಳಲಾಗಿದೆಯೆಂದು ವ್ಯಾಖ್ಯಾನ ಮಾಡುತ್ತಿದ್ದೀರಿ. ಇದರಿಂದ ಸಕಲ ಸ್ತ್ರೀಶಬ್ದಗಳ ಸಂಗ್ರಹವನ್ನು ಹೇಗೆ ಮಾಡಿದಂತಾಗುತ್ತದೆ?

ಉತ್ತರ - ಈ ವ್ಯಾಖ್ಯಾನದಲ್ಲಿಯೂ ಸಕಲ ಸ್ತ್ರೀಲಿಂಗಶಬ್ದಗಳ ಸಂಗ್ರಹವೂ ಆಗುತ್ತದೆಂದು 'ಪ್ರಕೃತಿ ಪದಂ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ. ಇದರಿಂದ 'ಸ್ತ್ರೀಶಬ್ದಾ ಅಪಿ' ಎಂಬ ಸಂಬಂಧ ಭಾಷ್ಯವನ್ನೂ ಕೂಡ ವ್ಯಾಖ್ಯಾನ ಮಾಡಿದಂತಾಯಿತು.

## ಬ್ರಹ್ಮಮೀಮಾಂಸಾಶಾಸ್ತ್ರ

### सू – ।। अभिध्योपदेशाच्च ।। २ ।।

ಸೂತ್ರಾರ್ಥ - ಭಗವಂತನ ಇಚ್ಛೆಗೆ ಪ್ರಕೃತಿ, ವಾಸನಾ, ಮಾಯಾ ಇತ್ಯಾದಿ ಅನೇಕ ಹೆಸರುಗಳಿವೆ ಎಂದು ಪ್ರಮಾಣವಿರುವುದರಿಂದ, ವಿಷ್ಣುವಿನ ಇಚ್ಛೆಯೇ ಪ್ರಕೃತಿಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಅವನ ಇಚ್ಛೆಯೇ ಅವನ ಸ್ವರೂಪವಾದ್ದರಿಂದ, ಪ್ರಕೃತಿಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು.

## ಸೂತ್ರದೀಪಿಕಾ

**सूत्रदीपिका – अभिध्यायाः** ईश्वरेच्छायाः । **उपदेशात्** 'मायान्तु' इति श्रुतौ प्रकृतिशब्दवाच्यत्वोक्तेश्च इच्छाभिन्नेश्वरस्यापि तच्छब्दवाच्यत्वाच्चेत्यर्थः ।।२।।

ಅರ್ಥ -- ಅಭಿಧ್ಯಾಯಾಃ = ಈಶ್ವರನ ಇಚ್ಛೆಯನ್ನು, ಉಪದೇಶಾತ್ = 'ಮಾಯಾಂ ತು ಪ್ರಕೃತಿಂ ವಿದ್ಧಿ' ಇತ್ಯಾದಿ ಶ್ರುತಿಗಳಲ್ಲಿ ಪ್ರಕೃತಿ ಶಬ್ದವಾಚ್ಯವೆಂದು ಹೇಳಿದ್ದರಿಂದ, ಈಶ್ವರನ ಇಚ್ಛೆಯು ಈಶ್ವರನ ಸ್ವರೂಪವಾದ್ದರಿಂದ, ಪ್ರಕೃತಿ ಶಬ್ದದಿಂದ ಈಶ್ವರನೇ ಪ್ರತಿಪಾದ್ಯನಾಗುತ್ತಾನೆ.

ಪ್ರಕೃತ್ಯಧಿಕರಣ (೧-೪-೬)

## ಬ್ರಹ್ಮಸೂತ್ರಭಾಷ್ಯ

**भाष्यम् – ।। अभिध्योपदेशाच्च ।।**

**'मायां तु प्रकृतिं विद्यान्मायिनं तु महेश्वरम्' (श्वे.उ. ४-१०) ।**
**'महामायेत्यविद्येति नियतिर्मोहिनीति च ।**
**प्रकृतिर्वासनेत्येवं तवेच्छाऽनन्त कथ्यते' ।। इति**
**वचनात्तदभिध्यैव प्रकृतिशब्देनोच्यते ।**

ಅನುವಾದ - ಪರಮಾತ್ಮನು ಮಾಯಿ ಎಂದು, ಪ್ರಕೃತಿಯು ಮಾಯಾ ಎಂದು ತಿಳಿ. ಹೀಗೆ ಶ್ವೇತಾಶ್ವೇತರೋಪನಿಷತ್ತು ಹೇಳುತ್ತಿದೆ.

ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಇವುಗಳೆಲ್ಲವೂ ಅನಂತ ಎನಿಸಿಕೊಂಡ ಶ್ರೀಹರಿಯ ಇಚ್ಛೆಯ ಹೆಸರುಗಳು. ಹೀಗೆ ಪ್ರಮಾಣವಚನವಿರುವುದರಿಂದ ವಿಷ್ಣುವಿನ ಇಚ್ಛೆ ಪ್ರಕೃತಿಶಬ್ದದಿಂದ ಕರೆಸಿಕೊಳ್ಳುತ್ತದೆ.

ಪ್ರತಿಪದಾರ್ಥ -- ಹೀಗೆ ಸಾಮಾನ್ಯ ವಚನದಿಂದ ಪ್ರಕೃತ್ಯಾದಿ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆಂದು ಹೇಳಿದ್ದಾಯಿತು. ಈಗ ಸಕಲವಿಧವಾದ ಸ್ತ್ರೀಶಬ್ದಗಳಿಗೆ ಉಪಲಕ್ಷಕವಾದ ಪ್ರಕೃತಿಶಬ್ದವಾಚ್ಯತ್ವವಿಷಯದಲ್ಲಿ ವಿಶೇಷವಾದ ಪ್ರಮಾಣವನ್ನು ಪ್ರತಿಪಾದನೆ ಮಾಡುತ್ತಾ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. –

ಮಾಯಾಂತು = ಭಗವದಿಚ್ಛೆಯನ್ನೇ, ಪ್ರಕೃತಿಂ = ಪ್ರಕೃತಿ ಪದವಾಚ್ಯವನ್ನಾಗಿ, ವಿದ್ಯಾತ್ = ತಿಳಿ. ಮಾಯಿನಂ ತು = ಮಾಯಿಪದವಾಚ್ಯನನ್ನಾಗಿ, ಮಹೇಶ್ವರಂ = ಮಹೇಶ್ವರನನ್ನು ತಿಳಿ. ಹೀಗೆ ಶ್ವೇತಾಶ್ವೇತರೋಪನಿಷತ್ತು ಹೇಳಿದೆ.

ಹೇ ಅನಂತ = ಎಲೈ ಅನಂತನೇ, ತವೇಚ್ಛಾ = ನಿನ್ನ ಇಚ್ಛೆಯೇ, ಮಹಾಮಾಯೇತಿ = ಮಹಾಮಾಯ ಎಂದು, ಅವಿದ್ಯೇತಿ = ಅವಿದ್ಯೆಯೆಂದು, ನಿಯತಿಃ = ನಿಯತಿ ಎಂದೂ, ಮೋಹಿನಿತಿ ಚ = ಮೋಹಿನಿ ಎಂದು, ಪ್ರಕೃತಿಃ = ಪ್ರಕೃತಿಯೆಂದು, ವಾಸನೇತಿ ಚ = ವಾಸನಾ ಎಂದೂ ಕೂಡ, ಏವಂ = ಹೀಗೆ ಅನೇಕ ಶಬ್ದಗಳಿಂದ, ಕಥ್ಯತೇ = ಕರೆಯಲ್ಪಡುತ್ತದೆ, ಇತಿ ವಚನಾತ್ = ಹೀಗೆ ಶ್ರುತಿವಾಕ್ಯದ ಆಧಾರವಿರುವುದರಿಂದ, ಅಭಿಧ್ಯೈವ = ಭಗವದಿಚ್ಛೆಯೇ, ಪ್ರಕೃತಿಶಬ್ದೇನ = ಪ್ರಕೃತಿ ಎಂಬ ಶಬ್ದದಿಂದ, ಉಚ್ಯತೇ = ಕರೆಸಿಕೊಳ್ಳುತ್ತದೆ.

**भाष्यम् – 'सोऽभिध्या स जूतिः स प्रज्ञा स आनन्दः' इति श्रुतेरभिध्या च स्वरूपमेव ।**

**'ध्यायति ध्यानरूपोऽसौ सुखी सुखमतीव च ।**
**परमैश्वर्ययोगेन विरुद्धार्थतयेष्यते' ।। इति ब्रह्माण्डे ।।२।।**

ಅನುವಾದ - ಪರಮಾತ್ಮನೇ ಇಚ್ಛಾರೂಪನಾಗಿದ್ದಾನೆ. ಪ್ರೇರಣೆ ಎಂಬ ಕ್ರಿಯಾರೂಪನಾಗಿದ್ದಾನೆ. ಜ್ಞಾನರೂಪನಾಗಿದ್ದಾನೆ, ಆನಂದರೂಪನಾಗಿದ್ದಾನೆ ಹೀಗೆ ಶ್ರುತಿ ಪ್ರಮಾಣವಿರುವುದರಿಂದ ಅವನ ಇಚ್ಛೆಯು ಭಗವಂತನ ಸ್ವರೂಪವೇ ಆಗಿದೆ.

ಅವನು ಧ್ಯಾನರೂಪನಾದ್ದರಿಂದ ಧ್ಯಾನ ಮಾಡುತ್ತಾನೆ. ನಿರವಧಿಕ ಸುಖಸ್ವರೂಪನಾದ್ದರಿಂದ, ದುಃಖಿಯೆನಿಸುತ್ತಾನೆ. ಅತ್ಯಂತ ವಿಲಕ್ಷಣವಾದ ಸಾಮರ್ಥ್ಯವನ್ನು ಹೊಂದಿರುವುದರಿಂದ ವಿರುದ್ಧವಾದ ಧರ್ಮವುಳ್ಳವನಾಗಿ ಜ್ಞಾನಿಗಳಿಂದ ಕರೆಸಿಕೊಳ್ಳುತ್ತಾನೆ. ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಲ್ಪಟ್ಟಿದೆ.

ಪ್ರತಿಪದಾರ್ಥ --ಇಚ್ಛೆಯು ಪ್ರಕೃತಿಶಬ್ದದಿಂದ ವಾಚ್ಯವಾದರೂ, ಪರಮಾತ್ಮನು ಹೇಗೆ ಸ್ತ್ರೀಲಿಂಗದಿಂದ ಪ್ರತಿಪಾದ್ಯನಾಗುತ್ತಾನೆ. ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ

ಸಃ = ಪರಮಾತ್ಮನು, ಜೂತಿಃ = ಪ್ರೇರಣಾರೂಪನಾಗಿದ್ದಾನೆ. ಸಃ = ಪರಮಾತ್ಮನು, ಪ್ರಜ್ಞಾ = ಜ್ಞಾನರೂಪನು. ಸಃ = ಪರಮಾತ್ಮನು, ಆನಂದಃ = ಆನಂದರೂಪನು, ಇತಿ ಶ್ರುತೇಃ = ಹೀಗೆ ಶ್ರುತಿ ಪ್ರಮಾಣವಿರುವುದರಿಂದ, ಅಭಿಧ್ಯಾಚ = ಅವನ ಇಚ್ಛೆಯೂ ಕೂಡ, ಸ್ವರೂಪಮೇವ = ಭಗವಂತನ ಸ್ವರೂಪವೇ ಆಗಿದೆ. ಅಸೌ = ಈ ಶ್ರೀಹರಿಯು, ಧ್ಯಾನರೂಪಃ = ಧ್ಯಾನರೂಪನಾದ್ದರಿಂದ, ಧ್ಯಾಯತಿ = ಧ್ಯಾನ ಕರ್ತೃ ಎನಿಸುತ್ತಾನೆ. ಅತೀವ = ಅತ್ಯಂತವಾಗಿ, ಸುಖಂ = ಸುಖಸ್ವರೂಪನಾದ್ದರಿಂದ, ಸುಖೀ = ಸುಖವುಳ್ಳವನೆನಿಸುತ್ತಾನೆ. ಪರಮೈಶ್ವರ್ಯಯೋಗೇನ = ಅತ್ಯಂತ ಶ್ರೇಷ್ಠವಾದ ಐಶ್ವರ್ಯ ಸ್ವರೂಪನಾಗಿರುವುದರಿಂದ, ವಿರುದ್ಧಾರ್ಥತಯಾ = ಸುಖಸ್ವರೂಪನಾಗಿದ್ದರೂ, ಸುಖಕ್ಕೆ ಆಶ್ರಯನಾಗಿದ್ದಾನೆಂಬ ವಿರುದ್ಧ ಸ್ವಭಾವವು, ಇಷ್ಯತೇ = ವಿರುದ್ಧವಾದರೂ ಜ್ಞಾನಿಸಮ್ಮತವಾಗಿದೆ. ಇತಿ ಬ್ರಹ್ಮಾಂಡೇ = ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಲಾಗಿದೆ.

## ತತ್ವಪ್ರಕಾಶಿಕಾ

**युक्त्यन्तरेण हरेः प्रकृतिशब्दवाच्यतां प्रतिपादयत्सूत्रमुपन्यस्य व्याचष्टे ।। अभिध्येति ।।**

ಶ್ರೀಹರಿಯು ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದನ್ನು ಮತ್ತೊಂದು ಯುಕ್ತಿಯಿಂದ ಪ್ರತಿಪಾದನೆ ಮಾಡಲು ಹೊರಟಿರುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ -'ಅಭಿಧ್ಯೋಪದೇಶಾಚ್ಚ' ಇತ್ಯಾದಿಯಾಗಿ.

**तत्वप्रकाशिका – 'मायां तु प्रकृतिं विद्यात्' इति श्रुतौ 'प्रकृतिर्वासनेत्येवं तवेच्छाऽनन्त कथ्यते' इति स्मृतौ च परमेश्वरेच्छायाः प्रकृतिशब्दवाच्यत्वोपदेशाचासौ प्रकृतिशब्दवाच्यो भवति ।**

'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬ ಶ್ರುತಿಯಲ್ಲಿ 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾऽನಂತ ಕಥ್ಯತೇ' ಎಂಬ ಸ್ಮೃತಿಯಲ್ಲಿಯೂ ಕೂಡ ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ. ಈ ಉಪದೇಶ ವಾಕ್ಯದ ಬಲದಿಂದ ಪರಮಾತ್ಮನೇ ಪ್ರಕೃತಿ ಎಂದು ಕರೆಸಿಕೊಳ್ಳುತ್ತಾನೆ.

**तत्वप्रकाशिका – नच वाच्यं 'श्रुतौ मायाया एव प्रकृतिशब्दवाच्यत्वं ज्ञायते नेच्छायाः' इति । महामायेति स्मृतौ मायाशब्दस्यापीच्छावाचकत्वोक्तेः ।**

ಪ್ರಶ್ನೆ - ಶ್ರುತಿಯಲ್ಲಿ ಮಾಯೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ ಹೊರತು, ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆದಿಲ್ಲವಲ್ಲ ?

ಉತ್ತರ - ಹೌದು ! ಆದರೆ 'ಮಹಾಮಾಯಾ' ಇತ್ಯಾದಿ ಸ್ಮೃತಿವಾಕ್ಯದಲ್ಲಿ ಈ ಮಾಯೆಯನ್ನೇ ಇಚ್ಛೆಯೆಂದು ಕರೆಯಲಾಗಿದೆ. ಆದ್ದರಿಂದ ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಹೇಳಿದ್ದು ತಪ್ಪಲ್ಲ.

**तत्वप्रकाशिका – न चात्रोपचारः शङ्कनीयः । श्रुतिस्मृत्योरनुशानरूपत्वादिति भावः ।**

ಪ್ರಶ್ನೆ - ಸ್ಮೃತಿಯ ವಾಕ್ಯವನ್ನು ಔಪಚಾರಿಕವೆಂದು ಏಕೆ ಪರಿಗಣಿಸಬಾರದು?

ಉತ್ತರ - ಶ್ರುತಿ-ಸ್ಮೃತಿಗಳು ಅನುಶಾಸನ ರೂಪವಾಗಿರುವುದರಿಂದ ಔಪಚಾರಿಕ ಪ್ರಯೋಗವೆಂದು ಪರಿಗಣಿಸಬಾರದು.

**तत्वप्रकाशिका – इच्छायाः प्रकृतिशब्दवाच्यत्वेऽपि कुतः परमात्मनस्तदित्यत आह – स इति।।**

ಪ್ರಶ್ನೆ - ಇಚ್ಛೆಯು ಪ್ರಕೃತಿಶಬ್ದವಾಚ್ಯವೆಂದು ಒಪ್ಪೋಣ. ಅಂದ ಮಾತ್ರಕ್ಕೆ ಪರಮಾತ್ಮನು ಏಕೆ ಪ್ರಕೃತಿಶಬ್ದ ವಾಚ್ಯನಾಗಬೇಕು ?

ಉತ್ತರ - ಈ ಪ್ರಶ್ನೆಗೆ 'ಸಃ' ಇತ್ಯಾದಿ ಪ್ರಮಾಣವಾಕ್ಯವನ್ನು ಉದಾಹರಿಸಿ ಉತ್ತರಿಸುತ್ತಿದ್ದಾರೆ.

**तत्वप्रकाशिका – जूतिः प्रेरणा ।। नेच्छा भगवत्स्वरूपम्, मायिनं तवेच्छेति तत्सम्बन्धोपदेशादित्यत आह – ध्यायतीति ।।२।।**

ಈ 'ಸೋऽಭಿಧ್ಯಾ ಸ ಜ್ಯೂತಿಃ' ಎಂಬ ಪ್ರಮಾಣವಾಕ್ಯದಲ್ಲಿರುವ 'ಜೂತಿ' ಶಬ್ದಕ್ಕೆ ಪ್ರೇರಣೆ ಎಂದರ್ಥ.

ಪ್ರಶ್ನೆ - ಇಚ್ಛೆಯು ಭಗವತ್ ಸ್ವರೂಪವಲ್ಲ. ಏಕೆಂದರೆ 'ಮಾಯಿನಂ ತವೇಚ್ಛಾ' ಎಂಬುದಾಗಿ ಮಾಯೆವುಳ್ಳ ನಿನ್ನ ಇಚ್ಛೆ ಎಂದು ಎರಡರಲ್ಲಿಯೂ ಸಂಬಂಧವನ್ನು ಉಪದೇಶ ಮಾಡಲಾಗಿದೆ. ಇದನ್ನು ಕೂಡಿಸಬೇಕೆಂದರೆ ಇಚ್ಛೆಯೇ ಬೇರೆ. ಪರಮಾತ್ಮನೇ ಬೇರೆ ಎಂದು ಹೇಳಬೇಕಲ್ಲವೇ?

ಉತ್ತರ - ಈ ಆಶಂಕೆಗೆ 'ಧ್ಯಾಯತಿ' ಎಂಬ ಶ್ರುತಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪರಮಾತ್ಮನು ಇಚ್ಛೆಯುಳ್ಳವನಾಗಿದ್ದರೂ ಇಚ್ಛಾಸ್ವರೂಪನೂ ಆಗಿರುತ್ತಾನೆ ಆದ್ದರಿಂದ ವಿರೋಧವಿಲ್ಲ ಎಂಬುದಾಗಿ ಬ್ರಹ್ಮಾಂಡ ಪುರಾಣದ ವಾಕ್ಯವು ಸ್ಪಷ್ಟಪಡಿಸುತ್ತಿದೆ.

## ಭಾವದೀಪ

**युक्त्यन्तरेणेति ।। न केवलं प्रतिज्ञादृष्टान्तोक्तिरूपयुक्त्येत्यर्थः ।**

ಹಿಂದಿನ ಸೂತ್ರದಲ್ಲಿ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚಮಾಡಿ ಪರಮಾತ್ಮನು ಪ್ರಕೃತಿಶಬ್ದದಿಂದ ವಾಚ್ಯನಲ್ಲವೆಂದು ಹೇಳಿದರೆ ಶ್ರುತಿಯಲ್ಲಿರುವ ಪ್ರತಿಜ್ಞೆ ಹಾಗೂ ದೃಷ್ಟಾಂತಗಳ ವಿರೋಧ ಬರುತ್ತದೆ. ಸರ್ವಶಬ್ದಕ್ಕೆ ಸಂಕೋಚ ಮಾಡದೇ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳಿದರೆ ಪ್ರಕೃತಿ ಹಾಗೂ ದೃಷ್ಟಾಂತಗಳಿಗೆ ವಿರೋಧ ಬರುವುದಿಲ್ಲ ಎಂಬ ಯುಕ್ತಿಯನ್ನು ಹೇಳಲಾಯಿತು. ಪ್ರಕೃತ ಈ ಸೂತ್ರದಲ್ಲಿ ಪರಮಾತ್ಮನ ಇಚ್ಛೆಯನ್ನು ಶ್ರುತಿ-ಸ್ಮೃತಿಗಳಲ್ಲಿ ಪ್ರಕೃತಿಶಬ್ದಪ್ರತಿಪಾದ್ಯವೆಂದು ಹೇಳಿರುವುದರಿಂದ 'ಅಭಿಧ್ಯೋಪದೇಶಾತ್' ಎಂಬ ಮತ್ತೊಂದು ಯುಕ್ತಿಯಿಂದ ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ.

**भावदीपः – तथाच नियामकविशेषाभावेनेति प्रागुक्तं प्रत्युक्तमिति भावः ।।**

ಹಿಂದಿನ ಸೂತ್ರದಲ್ಲಿ ಪರಮಾತ್ಮನು ಸ್ತ್ರೀಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆನ್ನಲು ಯಾವುದೇ ನಿಯಾಮಕಪ್ರಮಾಣಗಳಿರುವುದಿಲ್ಲವೆಂದು ಆಕ್ಷೇಪ ಮಾಡಲಾಗಿತ್ತು. 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿರುವುದರಿಂದ ಹಿಂದಿನ ಆಕ್ಷೇಪವನ್ನು ಈಗ ಪರಿಹರಿಸಿದಂತಾಗಿದೆ.

**भावदीपः – प्रकृतिशब्देति ।।** तदुपलक्षितस्त्रीशब्दमात्रवाचितायां तु प्रागुक्तं सामान्यरूपमेकं साक्षाच्चेत्यत्र वक्ष्यमाणसाधारणश्रुतिश्च नियामकप्रमाणमिति भावः।

ಪರಮಾತ್ಮನು ಪ್ರಕೃತಿಶಬ್ದದಿಂದ ವಾಚ್ಯನಾಗಿದ್ದಾನೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದು ಉಪಲಕ್ಷಣವಾಗಿದೆ. ಬೇರೆ ಸ್ತ್ರೀಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ವಿವಕ್ಷಿಸಬೇಕು. ಈ ವಿಷಯದಲ್ಲಿ 'ಪ್ರಕೃತಿಶ್ಚ' ಇತ್ಯಾದಿ ಸೂತ್ರದಲ್ಲಿ 'ಹಂತ ಏತ ಮೇವ' ಎಂಬುದಾಗಿ ಸಾಮಾನ್ಯರೂಪವಾದ ವಾಕ್ಯವನ್ನು ಪ್ರಮಾಣವನ್ನಾಗಿ ಹೇಳಿದರು. ಮುಂದಿನ 'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಸೂತ್ರದಲ್ಲಿ 'ಏಷ ಸ್ತ್ರೀಯೇಷಃ' ಇತ್ಯಾದಿಯಾಗಿ ಸಾಧಾರಣ ಶ್ರುತಿಯನ್ನೂ ಕೂಡ ಪ್ರಮಾಣವನ್ನಾಗಿ ಹೇಳುತ್ತಾರೆ. ಆದ್ದರಿಂದ

ಸ್ತ್ರೀಲಿಂಗಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನ್ನೆನ್ನಲು ಈ ಶ್ರುತಿಗಳೆಲ್ಲವೂ ನಿಯಾಮಕಪ್ರಮಾಣಗಳಿವೆ ಎಂದು ತಿಳಿಯಬೇಕು.

**ಭಾವದೀಪಃ** – भाष्ये इति वचनादित्युक्त्या सर्वमेकमिति प्रतीयते । तदपि किं श्रुतिरूपमुतस्मृतिरूपमिति न ज्ञायतेऽतस्तद्विवेचयन्नभिध्यैव चेत्यादिभाष्यवाक्येन च सूत्रे अभिध्यायाः प्रकृतित्वोपदेशाच्चेत्यर्थो विवृत इति भावेन सूत्रार्थमाह – मायां त्विति ।।

ಭಾಷ್ಯದಲ್ಲಿ 'ಇತಿ ವಚನಾತ್' ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ 'ಮಾಯಾಂತು' ಎಂಬಲ್ಲಿಂದ ಪ್ರಾರಂಭಿಸಿ 'ಕಥ್ಯತೇ' ಅಲ್ಲಿಯತನಕ ಒಂದೇ ವಾಕ್ಯವೆಂಬ ಭ್ರಾಂತಿ ಬರುತ್ತದೆ. ಮತ್ತೆ ಈ ಸಂಪೂರ್ಣವಾಕ್ಯವು ಶ್ರುತಿಯೋ ಅಥವಾ ಸ್ಮೃತಿಯೋ ಎಂದೂ ಕೂಡ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದ ಟೀಕೆಯಲ್ಲಿ 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬುದು ಶ್ರುತಿಯೆಂದು, 'ಪ್ರಕೃತಿರ್ವಾಸನಾ' ಇತ್ಯಾದಿಯು ಸ್ಮೃತಿಯೆಂದು ಸ್ಪಷ್ಟವಾಗಿ ವಿವೇಚನ ಮಾಡಿ ತಿಳಿಸಿದ್ದಾರೆ. ಮತ್ತು 'ಅಭಿಧ್ಯೋಪದೇಶಾಚ್ಚ' ಎಂಬ ಸೂತ್ರವನ್ನು ಭಾಷ್ಯದ ವಾಕ್ಯದಲ್ಲಿ ಹೇಗೆ ವ್ಯಾಖ್ಯಾನಿಸಿದ್ದಾರೆ ಎಂಬುದನ್ನೂ ಕೂಡ ಸ್ಪಷ್ಟಪಡಿಸಿದ್ದಾರೆ. 'ಅಭಿಧ್ಯಾಯಾಯಾಃ' ಎಂಬ ಪದಕ್ಕೆ ಪರಮೇಶ್ವರನ ಇಚ್ಛೆಗೆ 'ಉಪದೇಶಾತ್' ಎಂದರೆ ಪ್ರಕೃತಿಶಬ್ದವಾಚ್ಯತ್ವವನ್ನು ಉಪದೇಶಿಸಿರುವುದರಿಂದ ಎಂದು ವಿವರಿಸಿದಂತಾಯಿತು. ಈ ಎಲ್ಲಾ ಅಭಿಪ್ರಾಯದಿಂದ 'ಮಾಯಾಂ ತು' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**ಭಾವದೀಪಃ** – स्मृतौ महामायेति पूर्वार्धोक्तेरुपयोगं शङ्कापूर्वं व्यनक्ति ।। न चेति ।। स्पष्टत्वाय स्मृतेरपि भाषणमिति भावः ।

ಸ್ಮೃತಿಯಲ್ಲಿ 'ಮಹಾಮಾಯಾ' ಎಂಬ ಪೂರ್ವಾರ್ಧವನ್ನು ಏಕೆ ಉಲ್ಲೇಖಿಸಿದ್ದಾರೆ ಎಂಬ ಉಪಯೋಗವನ್ನು ತೋರಿಸುವುದಕ್ಕಾಗಿ ಟೀಕೆಯಲ್ಲಿ 'ನಚ' ಇತ್ಯಾದಿ ವಾಕ್ಯದಿಂದ ಆಶಂಕಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶ್ರುತಿಯಲ್ಲಿ ಹೇಳಿದ್ದನ್ನು ಪುನಃ ಸ್ಮೃತಿಯಲ್ಲಿ ಉಲ್ಲೇಖಿಸಿದ್ದು ಸ್ಪಷ್ಟವಾಗುವುದಕ್ಕಾಗಿ ಎಂದು ತಿಳಿಯಬೇಕು.

**ಭಾವದೀಪಃ** – उच्यत इत्युक्तेर्भावमाह – न चेत्यादिना ।। कुतः परमात्मनस्तदिति। एतेन परमात्मनोऽभिध्यात्वोपदेशात् प्रकृतिशब्दवाच्यत्वमित्यपि सूत्रार्थो दर्शितः ।।

ಭಾಷ್ಯದಲ್ಲಿ 'ಉಚ್ಯತೇ' ಎಂಬ ಪದದ ಅಭಿಪ್ರಾಯವನ್ನು 'ನಚ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಪರಮಾತ್ಮನಿಗೆ ಅಭಿಧ್ಯಾತ್ವದ ಉಪದೇಶ ಇರುವುದರಿಂದ ಪ್ರಕೃತಿ ಶಬ್ದವಾಚ್ಯತ್ವವು ಯುಕ್ತವಾಗುತ್ತದೆ ಎಂಬ ಸೂತ್ರಾರ್ಥವನ್ನು ತೋರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

**भावदीपः – तत्सम्बन्धेति ।।** मायिनमित्यत्र तदस्यास्त्यस्मिन्निति मतुबर्थे 'अत इनिठनौ' व्रीह्यादिभ्यश्चेति षष्ठ्यार्थकेन्प्रत्ययान्तस्य सम्बन्धवाचित्वात् । तवेति षष्ठ्याः षष्ठीशेष इति सम्बन्धे विधानादिति भावः ।।

'ಮಾಯಿನಂ' ಎಂಬಲ್ಲಿ 'ತದಸ್ಯ ಅಸ್ತಿ ಅಸ್ಮಿನ್' ಎಂಬ ವ್ಯುತ್ಪತ್ತಿಯಿಂದ ಮತುಬರ್ಥದಲ್ಲಿ 'ಅತ ಇನಿಠನೌ ವ್ರೀಹ್ಯಾದಿಭ್ಯಶ್ಚ' ಎಂಬ ಸೂತ್ರದಿಂದ ಷಷ್ಠ್ಯರ್ಥದಲ್ಲಿ 'ಇನ್' ಪ್ರತ್ಯಯವು ಬಂದಿರುತ್ತದೆ. ಇದು ಸಂಬಂಧವಾಚಿ ಆಗಿರುತ್ತದೆ. ಏಕೆಂದರೆ 'ತವ' ಎಂಬ ಪದವು ಷಷ್ಠ್ಯಂತವಾಗಿ ಇರುವುದರಿಂದ 'ಷಷ್ಠೀ ಶೇಷೇ' ಎಂಬ ಸೂತ್ರವು ಸಂಬಂಧಾರ್ಥದಲ್ಲಿ ಈ ಪ್ರತ್ಯಯವನ್ನು ವಿಧಾನ ಮಾಡಿದೆ.

**भावदीपः – अत आहेति ।।** एतच्चोभयव्यपदेशात्त्वहिकुण्डलवदित्यत्र तृतीये स्पष्टयिष्यत इति भावः ।।२।।

ಪರಮಾತ್ಮನು ಇಚ್ಛೆಯುಳ್ಳವನಾಗಿದ್ದರೂ, ಇಚ್ಛಾಸ್ವರೂಪನೂ ಆಗಿರುತ್ತಾನೆ ಎಂಬ ವಿಷಯವನ್ನು 'ಉಭಯವ್ಯಪದೇಶಾತ್ತ್ವಹಿಕುಂಡಲವತ್' ಎಂಬ ಮೂರನೆಯ ಅಧ್ಯಾಯದ ಸೂತ್ರದಲ್ಲಿ ಸ್ಪಷ್ಟಪಡಿಸುತ್ತಾರೆ.

## ಬ್ರಹ್ಮಮೀಮಾಂಸಾಶಾಸ್ತ್ರ

**सू – ।। साक्षाच्चोभयाम्नानात् ।। ३ ।।**

ಸೂತ್ರಾರ್ಥ - ಇಚ್ಛೆಯ ವ್ಯವಧಾನವಿಲ್ಲದೇ ನೇರವಾಗಿ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಪ್ರಕೃತಿ ಮೊದಲಾದ ಶಬ್ದಗಳಿಂದೆಲ್ಲಾ ವಿಷ್ಣುವೇ ಪ್ರತಿಪಾದ್ಯನೆಂದು ಹೇಳುತ್ತಿದೆ. ಹೀಗೆ ಇಚ್ಛೆಯ ಅಪೇಕ್ಷೆಯಿಲ್ಲದೇ ನೇರವಾಗಿ ಪ್ರಕೃತ್ಯಾದಿ ಶಬ್ದಗಳಿಂದ ವಾಚ್ಯತ್ವವನ್ನು ಹೇಳಬಹುದು.

## ಸೂತ್ರದೀಪಿಕಾ

**सूत्रदीपिका – चः** अवधारणे । **साक्षात्** द्वारमन्तरेणैव । **उभयाम्नानात्** 'एषस्त्र्येष पुरुषः' इति वाक्येन प्रकृतिपुरुषोभयशब्दवाच्यत्वभिधानात् ईश्वरस्य प्रकृत्यादिशब्दवाच्यत्वमावश्यकमित्यर्थः ।।३।।

ಅರ್ಥ -- ಚ ಶಬ್ದವು ಅವಧಾರಣಾರ್ಥದಲ್ಲಿದೆ. 'ಸಾಕ್ಷಾತ್' = ಇಚ್ಛೆಯ ವ್ಯವಧಾನವಿಲ್ಲದೇ ಉಭಯಾಮ್ನಾನಾತ್ = 'ಏಷ ಸ್ತ್ರ್ಯೇಷ ಪುರುಷಃ' ಎಂಬ ವಾಕ್ಯದಿಂದ ಪ್ರಕೃತಿ, ಪುರುಷ ಎಂಬೆರಡು ಶಬ್ದಗಳಿಂದ ವಾಚ್ಯನೆಂದು ಹೇಳಿದ್ದರಿಂದ, ಈಶ್ವರನಿಗೆ ಪ್ರಕೃತ್ಯಾದಿ ಶಬ್ದವಾಚ್ಯತ್ವವು ಆವಶ್ಯಕವಾಗಿದೆ.

ಪ್ರಕೃತ್ಯಧಿಕರಣ (೧-೪-೬)

## ಬ್ರಹ್ಮಸೂತ್ರಭಾಷ್ಯ

**भाष्यम् — ।। साक्षाच्चोभयाम्नानात् ।।**

**'एष ह्येष पुरुष एष प्रकृतिरेष आत्मैष ब्रह्मैष लोक एष आलोको योऽसौ हरिरादिरनादिरनन्तोऽन्तः परमः पराद्धिश्वरूपः' इति पैङ्गिश्रुतौ साक्षादेव प्रकृतिपुरुषत्वाम्नानात् ।।३।।**

ಅನುವಾದ - ಇವನು ಸ್ತ್ರೀ, ಇವನು ಪುರುಷ, ಇವನು ಪ್ರಕೃತಿ, ಇವನು ಆತ್ಮ. ಮತ್ತು ಬ್ರಹ್ಮ, ಲೋಕಾಧಾರ, ಪ್ರಕಾಶರೂಪನೂ ಆಗಿರುತ್ತಾನೆ. ಅನಾದಿಯು ಅನಂತನೂ ಶ್ರೇಷ್ಠನೂ ಪ್ರಕೃತಿಗಿಂತಲೂ ಉತ್ತಮನೂ ಆಗಿರುತ್ತಾನೆ, ವಿಷ್ಣುರೂಪನೂ ಆಗಿರುತ್ತಾನೆ. ಹೀಗೆ ಪೈಂಗೀ ಶ್ರುತಿಯಲ್ಲಿ ನೇರವಾಗಿಯೇ ಅಂದರೆ ಇಚ್ಛೆಯ ಅಪೇಕ್ಷೆಯಿಲ್ಲದೇ ಪ್ರಕೃತಿ, ಪುರುಷ ಶಬ್ದಗಳಿಂದ ವಾಚ್ಯತ್ವವನ್ನು ಹೇಳಲಾಗಿದೆ.

ಪ್ರತಿಪದಾರ್ಥ -- ಹಿಂದೆ ಉಲ್ಲೇಖಿಸಿದ ಪ್ರಮಾಣಗಳಿಂದ ಇಚ್ಛಾ ಮೂಲಕವಾಗಿಯೇ ಭಗವಂತನು ಪ್ರಕೃತಿಶಬ್ದವಾಚ್ಯನಾಗಬಹುದು. ನೇರವಾಗಿ ಪ್ರಕೃತಿ ಶಬ್ದದಿಂದ ವಾಚ್ಯನಾಗಲು ಸಾಧ್ಯವಿಲ್ಲವೇ? ಈ ಆಶಂಕೆಗೆ ವಿಶೇಷ ಪ್ರಮಾಣವನ್ನು ವಿವೇಚಿಸುತ್ತಾ, ಪರಿಹಾರ ಮಾಡುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ. –

ಏಷಃ = ಪರಮಾತ್ಮನು, ಸ್ತ್ರೀಷಃ = ಸತತವಾಗಿ ಸುಖಪಡುವುದರಿಂದ ಸ್ತ್ರೀಶಬ್ದವಾಚ್ಯ-ನಾಗಿದ್ದಾನೆ, ಪುರುಷಃ = ಪುರುಷನೆನಿಸಿದ್ದಾನೆ, ಏಷ = ಇವನು, ಪ್ರಕೃತಿಃ = ಪ್ರಕೃತಿ ಎನಿಸಿದ್ದಾನೆ. ಏಷಃ = ಇವನು, ಆತ್ಮಾ = ಆತ್ಮನೆನಿಸಿದ್ದಾನೆ, ಏಷಃ = ಇವನು, ಬ್ರಹ್ಮ = ಗುಣಪೂರ್ಣನಾಗಿದ್ದಾನೆ, ಏಷಃ ಲೋಕ = ಇವನೇ ಲೋಕಾಧಾರಕನು, ಏಷಃ ಆಲೋಕಃ = ಇವನೇ ಲೋಕಪ್ರಕಾಶಕನು, ಯೋऽಸೌ = ಇಂತಹ ಪ್ರಸಿದ್ಧನಾದ, ಹರಿಃ = ಸಕಲ ಅನಿಷ್ಟ ಪರಿಹಾರಕನಾದ ವಿಷ್ಣುವೇ, ಆದಿಃ = ಪ್ರಪಂಚದ ಮೂಲಕಾರಣನು, ಅನಾದಿಃ = ತನಗಿಂತಲೂ ಆದಿಯಿಲ್ಲದವನು, ಅನಂತಃ = ನಾಶರಹಿತನು, ಅಂತಃ = ಪ್ರಳಯ ಸ್ವರೂಪನು, ಪರಾತ್ಪರಮಃ = ಪರಶಬ್ದವಾಚ್ಯಳಾದ ಲಕ್ಷ್ಮೀಗಿಂತಲೂ ಶ್ರೇಷ್ಠನು, ವಿಷ್ಣುರೂಪಃ = ಜಗತ್ತಿನಂತೆ ರೂಪವುಳ್ಳವನು, ಇತಿ = ಹೀಗೆ, ಪೈಂಗಿಶ್ರುತೌ = ಪೈಂಗಿಶ್ರುತಿಯಲ್ಲಿ, ಸಾಕ್ಷಾದೇವ = ನೇರವಾಗಿಯೇ, ಪ್ರಕೃತಿ ಪುರುಷತ್ವಾಮ್ನಾನಾತ್ = ಪ್ರಕೃತಿ ಪುರುಷಗಳ ಶಬ್ದವಾಚ್ಯತ್ವವನ್ನು ಹೇಳಿರುವುದರಿಂದ.

## ತತ್ವಪ್ರಕಾಶಿಕಾ

**तथापि नेश्वरस्य प्रकृतिशब्दवाच्यत्वम् । 'सर्वाणि नामानि' इत्येवंरूपेण विना साक्षात् प्रकृतिशब्दवाच्यत्वे श्रुत्याद्यभावात् । सर्वशब्दस्य तु सङ्कोचसम्भवात्।**

ಆಕ್ಷೇಪ - ಈಶ್ವರನು ಅನೇಕ ಪ್ರಕೃತಿಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಅನೇಕ ಯುಕ್ತಿಗಳಿಂದ ಸಮರ್ಥನೆ ಮಾಡಿದಿರಿ. ಆದರೂ ಕೂಡ ಇದು ಸರಿಯಲ್ಲ. ಏಕೆಂದರೆ 'ಸರ್ವಾಣಿ ನಾಮಾನಿ' ಇತ್ಯಾದಿ ಸಾಮಾನ್ಯ ಪ್ರಮಾಣವಚನಗಳನ್ನು ಬಿಟ್ಟು, ನೇರವಾಗಿ ಪ್ರಕೃತಿಶಬ್ದವಾಚ್ಯನಾಗಿದ್ದಾನೆನ್ನಲು ಪ್ರಮಾಣ ವಚನಗಳಿರುವುದಿಲ್ಲ. 'ನಾಮಾನಿ ಸರ್ವಾಣಿ' ಎಂಬಲ್ಲಿರುವ ಸರ್ವಶಬ್ದಕ್ಕೆ ಸ್ತ್ರೀಲಿಂಗ-ಶಬ್ದಗಳನ್ನು ಬಿಟ್ಟು ಎಂದು ಸಂಕೋಚ ಮಾಡಬಹುದು.

**तत्वप्रकाशिका – न चातीतसूत्रे तदप्युक्तमिति वाच्यम् । इच्छाद्वारैव प्रकृतिशब्दवाच्यतां विना साक्षादीश्वरस्यैव तदभावादित्याशङ्कां परिहरत्सूत्रं पठित्वा व्याचष्टे – साक्षाचेति।।**

ಹಿಂದಿನ ಸೂತ್ರದಲ್ಲಿ 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಇತ್ಯಾದಿಯಾಗಿ ವಿಶೇಷ ಪ್ರಮಾಣವನ್ನು ಹೇಳಲಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿಯೂ ಕೂಡ ಇಚ್ಛೆಯ ಮೂಲಕವಾಗಿಯೇ ಪರಮಾತ್ಮನು ಪ್ರಕೃತಿಶಬ್ದದಿಂದ ಪ್ರತಿಪಾದ್ಯನೆಂದು ಸಮರ್ಥಿಸಿದ್ದಾರೆ ಹೊರತು, ನೇರವಾಗಿ ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ಸಮರ್ಥನೆ ಮಾಡಿಲ್ಲ. ಹೀಗಿರುವಾಗ ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನೆನ್ನಲು ನಿಯಾಮಕಪ್ರಮಾಣವೇನು ?

ಪರಿಹಾರ - ಈ ಆಕ್ಷೇಪಕ್ಕೆ ಪರಿಹಾರವನ್ನು ಹೇಳಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - 'ಸಾಕ್ಷಾಚ್ಚ' ಇತ್ಯಾದಿಯಾಗಿ.

**तत्वप्रकाशिका – नेश्वरस्योक्तरीत्या प्रकृतिशब्दवाच्यताऽभावः शङ्कनीयः । 'एषः स्त्र्येष पुरुषः' इति श्रुतौ साधारण्येन विना साक्षादेवेच्छाद्वारमन्तराऽपि प्रकृतिपुरुषशब्दवाच्यताम्नानादिति भावः । लोक आधारः । आलोकः प्रकाशरुपः ।।३।।**

ಪರಮಾತ್ಮನು ಪ್ರಕೃತಿಶಬ್ದವಾಚ್ಯನಲ್ಲವೆಂದು ಮೇಲೆ ಹೇಳಿದಂತೆ ಸಂಶಯ ಪಡಬಾರದು. ಏಕೆಂದರೆ 'ಏಷಃ ಸ್ತ್ರ್ಯೇಷ ಪುರುಷಃ' ಎಂಬ ಶ್ರುತಿಯಲ್ಲಿ ಸಾಮಾನ್ಯವಾಗಿ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯನೆಂದು ಹೇಳದೇ, ಮತ್ತು ಇಚ್ಛಾಮೂಲಕವಾಗಿಯೂ ಪರಮಾತ್ಮನಿಗೆ ಪ್ರಕೃತಿಪುರುಷಶಬ್ದ-ವಾಚ್ಯತ್ವವನ್ನು ಹೇಳದೇ ನೇರವಾಗಿ ಪ್ರಕೃತಿ, ಪುರುಷ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯತ್ವವನ್ನು ಹೇಳಲಾಗಿದೆ. ಈ ಅಭಿಪ್ರಾಯದಿಂದ ಭಾಷ್ಯದ ಮಾತು ಹೊರಟದೆ.

'ಲೋಕ' ಶಬ್ದಕ್ಕೆ 'ಆಧಾರ' ಎಂದರ್ಥ. 'ಆಲೋಕ' ಶಬ್ದಕ್ಕೆ 'ಪ್ರಕಾಶ' ಎಂದರ್ಥ.

ಪ್ರಕೃತ್ಯಧಿಕರಣ (೧-೪-೬)

## ಭಾವದೀಪ

**एवं रूपेणेति ।। प्रकृतिश्चेत्यत्रोक्तसामान्यरूपेण विना साक्षाद्विशिष्येत्यर्थः ।।**

'ಏವಂ ರೂಪೇಣ' ಎಂದರೆ 'ಪ್ರಕೃತಿಶ್ಚ' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯತ್ವವನ್ನು ಹೇಳಲಾಗಿದೆ. ಅದಕ್ಕಿಂತ ವ್ಯತಿರಿಕ್ತವಾಗಿ ವಿಶೇಷರೂಪದಲ್ಲಿಯೇ ಪ್ರಮಾಣವನ್ನು ಹೇಳುತ್ತಿದ್ದಾರೆ ಎಂದರ್ಥ.

**भावदीपः – इच्छाद्वारैवेति ।। प्रकृतिशब्दवाच्यैच्छास्वरूपत्वात् प्रकृतिशब्दवाच्य इत्येवंरूपेणेत्यर्थः ।**

'ಪ್ರಕೃತಿ' ಶಬ್ದಕ್ಕೆ 'ಇಚ್ಛಾ' ಎಂದರ್ಥ. ಆ ಇಚ್ಛೆಯು ಭಗವಂತನ ಸ್ವರೂಪವೆಂದು ಹೇಳಿ, ಪ್ರಕೃತಿಶಬ್ದವಾಚ್ಯತ್ವವನ್ನು ಪರಂಪರಯಾ ಮುಂದಿನ ಸೂತ್ರದಲ್ಲಿ ಹೇಳಲಾಗಿದೆ ಎಂಬುದನ್ನು 'ಇಚ್ಛಾದ್ವಾರೈವ' ಎಂಬ ಮಾತಿನಿಂದ ಹೇಳುತ್ತಿದ್ದಾರೆ.

**भावदीपः – साक्षात्पदेन प्रागुक्तं सामान्यपारम्पर्यरूपद्वयमपि व्यावर्त्यमिति व्यनक्ति – साधारण्येन विनेति ।।**

'ಸಾಕ್ಷಾತ್' ಎಂಬ ಪದದಿಂದ ಸಾಮಾನ್ಯಪ್ರಮಾಣ ಹಾಗೂ ಪರಂಪರಾರೂಪವಾದ ಪ್ರಮಾಣ ಇವೆರಡಕ್ಕಿಂತಲೂ ವ್ಯತಿರಿಕ್ತವಾಗಿ ನೇರವಾಗಿಯೇ ಪ್ರಕೃತಿ ಶಬ್ದವಾಚ್ಯತ್ವವನ್ನು ಹೇಳುತ್ತಿದ್ದಾರೆಂಬ ಅಭಿಪ್ರಾಯದಿಂದ 'ಸಾಧಾರಣ್ಯೇನ ವಿನಾ' ಎಂಬ ವಾಕ್ಯವು ಹೊರಟಿದೆ.

**भावदीपः – चशब्द एवार्थ इति भावेन भाष्योक्तमनुवदति ।। साक्षादेवेति ।। प्रकृतीति ।। स्त्रीशब्दमात्रोपलक्षणमेतत् ।। पुरुषशब्देति ।। पुल्लिङ्गशब्देत्यर्थः ।।३।।**

ಸೂತ್ರದಲ್ಲಿರುವ 'ಚ'ಶಬ್ದವು ಅವಧಾರಣಾರ್ಥದಲ್ಲಿದೆ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ ಹೇಳಿದ್ದನ್ನು ಟೀಕೆಯಲ್ಲಿ 'ಸಾಕ್ಷಾದೇವ' ಎಂದು ಅನುವಾದ ಮಾಡಿದ್ದಾರೆ. 'ಪ್ರಕೃತಿ' ಶಬ್ದವು ಸಕಲ ಸ್ತ್ರೀಶಬ್ದಗಳಿಗೆ ಉಪಲಕ್ಷಣವಾಗಿದೆ ಪುರುಷಶಬ್ದವು ಸಕಲ ಪುಲ್ಲಿಂಗಶಬ್ದಗಳಿಗೆ ಉಪಲಕ್ಷಣವಾಗಿದೆ.

## ಬ್ರಹ್ಮಮೀಮಾಂಸಾಶಾಸ್ತ್ರ

**सू – ।। आत्मकृतेः परिणामात् ।। ४ ।।**

ಸೂತ್ರಾರ್ಥ - ಪ್ರಕೃತಿಯು ಮಹತ್ತತ್ವಾದಿ ರೂಪವನ್ನು ಹೊಂದಿ, ಜಗದಾಕಾರದಲ್ಲಿ ಪರಿಣಾಮ ಹೊಂದುತ್ತದೆ. ಹಾಗೆಯೇ ಪರಿಣಾಮವನ್ನುಂಟುಮಾಡಲು ನಿಯಂತ್ರಣಕ್ಕಾಗಿ

ಭಗವಂತನು ಅನೇಕ ರೂಪಗಳನ್ನು ತಾಳುತ್ತಾನೆ. ಆದ್ದರಿಂದಲೂ ಪ್ರಕೃತಿ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು.

## ಸೂತ್ರದೀಪಿಕಾ

**सूत्रदीपिका — प्रकृतिपरिणामं विधाय तत्प्रेरणाय । आत्मकृतेः स्वस्य बहुधाकरणात् प्रकृतिशब्दवाच्यो विष्णुरेवेत्यर्थः ।।४।।**

ಅರ್ಥ -- ಪರಿಣಾಮಾತ್ = ಪ್ರಕೃತಿಯು ಅನೇಕ ಬಗೆಯಲ್ಲಿ ಪರಿಣಾಮ ಹೊಂದುವುದರಿಂದ, ಅದರ ಪ್ರೇರಣೆಗಾಗಿ, ಆತ್ಮಕೃತೇಃ = ತಾನು ಅನೇಕ ರೂಪಗಳನ್ನು ತಾಳುತ್ತಾನಾದ್ದರಿಂದ, ಪ್ರಕೃತಿಯಲ್ಲಿ ಅಂತರ್ಯಾಮಿಯಾಗಿರುವ ಕಾರಣ, ಪ್ರಕೃತಿ ಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। आत्मकृतेः परिणामात् ।।**

**प्रकर्षेण करोतीति प्रकृतिरिति योगाच्च ।**

ಅನುವಾದ - ಪ್ರಕರ್ಷವಾದ ಶಕ್ತಿಯಿಂದ ಜಗಜ್ಜನ್ಮಾದಿಗಳನ್ನು ಮಾಡುತ್ತಾನೆಂಬ ಕಾರಣದಿಂದ ಪ್ರಕೃತಿಶಬ್ದವಾಚ್ಯನಾಗಿದ್ದಾನೆ.

ಪ್ರತಿಪದಾರ್ಥ -- ಪ್ರಕೃತಿಶಬ್ದವಾಚ್ಯತ್ವವನ್ನು ಶ್ರೀಹರಿಯಲ್ಲಿ ಹೇಳಿದ್ದರೂ ಅದು ಹೇಗೆ ಕೂಡುತ್ತದೆ? ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೇ ಅವನಲ್ಲಿ ಬರುವುದಿಲ್ಲವಲ್ಲ? ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. –

ಪ್ರಕರ್ಷೇಣ = ಹೆಚ್ಚಿನ ಶಕ್ತಿಯಿಂದ, ಕರೋತಿ = ಜಗಜ್ಜನ್ಮಾದಿಗಳನ್ನು ಮಾಡುತ್ತಾನೆ. ಇತಿ = ಈ ಕಾರಣದಿಂದ, ಪ್ರಕೃತಿಃ = ಪ್ರಕೃತಿಶಬ್ದವಾಚ್ಯನು (ಅತ್ಯುತ್ತಮ ಕರ್ತೃತ್ವವುಳ್ಳವನಾದ್ದರಿಂದ ಪ್ರಕೃತಿಯೆನಿಸಿದ್ದಾನೆ) ಇತಿ ಯೋಗಾಚ್ಚ = ಹೀಗೆ ಯೋಗಾರ್ಥವು ವಿಷ್ಣುವಿನಲ್ಲಿ ಬರುವುದರಿಂದ.

**भाष्यम् — प्रकृतावनुप्रविश्य तां परिणाम्य (तत्परिणामनियामकतया तत्र) तत्परिणामेषु स्थित्वाऽऽत्मनो बहुधाकरणात् ।**

ಅನುವಾದ - ಜಡವಾದ ಪ್ರಕೃತಿಯೊಳಗಡೆ ಪರಮಾತ್ಮನು ಪ್ರವೇಶ ಮಾಡಿ, ಅದನ್ನು ಮಹತ್ತತ್ವಾದಿರೂಪದಿಂದ ಪರಿಣಾಮವಾಗುವಂತೆ ಮಾಡಿ, ಆ ಪರಿಣತ ವಸ್ತುಗಳ ನಿಯಾಮಕನಾಗಿ ಅವುಗಳಲ್ಲಿದ್ದು, ತನ್ನನ್ನು ಅನೇಕ ರೂಪಗಳುಳ್ಳವನಾಗಿ ಮಾಡುತ್ತಾನೆ.

ಪ್ರತಿಪದಾರ್ಥ -- ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಹೇಗೆ ಬರುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. –

ಪ್ರಕೃತ = ಜಡಪ್ರಕೃತಿಯಲ್ಲಿ, ಅನುಪ್ರವಿಶ್ಯ = ಪ್ರವೇಶ ಮಾಡಿ, ತಾಂ = ಅದನ್ನು, ಪರಿಣಾಮ್ಯ = ಮಹತ್ತತ್ವಾತ್ಮಕವಾಗಿ ಪರಿಣಾಮ ಮಾಡಿ, ಪರಿಣಾಮನಿಯಾಮಕತಯಾ = ಅದರ ಪರಿಣಾಮಕ್ಕೆ ನಿಯಾಮಕನಾಗಿ, ತತ್ರ = ಆ ಜಡಪ್ರಕೃತಿಯಲ್ಲಿ, ಸ್ಥಿತ್ವಾ = ನೆಲೆಸಿ, ಆತ್ಮನಃ = ತನ್ನನ್ನೇ, ಬಹುಧಾ = ಅನೇಕ ರೂಪಗಳನ್ನಾಗಿ, ಕರಣಾತ್ = ಮಾಡುವುದರಿಂದ.

**ಭಾಷ್ಯಮ್ –'अथ हैष आत्मा प्रकृतिमनुप्रविश्याऽऽत्मानं बहुधा चकार । तस्मात् प्रकृतिस्तस्मात् प्रकृतिरित्याचक्षते' इति भाल्लवेयश्रुतिः ।**

ಅನುವಾದ - ಆತ್ಮನು ಜಡಪ್ರಕೃತಿಯಲ್ಲಿ ಪ್ರವೇಶಿಸಿ, ತನ್ನನ್ನು ಅನೇಕ ರೂಪವುಳ್ಳವನನ್ನಾಗಿ ಮಾಡಿಕೊಳ್ಳುತ್ತಾನೆ. ಆದ್ದರಿಂದ ಅವನನ್ನು ಪ್ರಕೃತಿ ಎನ್ನುತ್ತಾರೆ. ಹೀಗೆ ಭಾಲ್ಲವೇಯ ಶ್ರುತಿ ಹೇಳುತ್ತಿದೆ.

ಪ್ರತಿಪದಾರ್ಥ -- ತಾವು ಹೇಳಿದ ಸೂತ್ರಾರ್ಥದಲ್ಲಿ ಅವಿಶ್ವಾಸ ಬರಬಾರದೆಂಬ ದೃಷ್ಟಿಯಿಂದ ಶ್ರುತಿ-ಸ್ಮೃತಿಗಳನ್ನು ಆಧಾರವನ್ನಾಗಿ ನೀಡುತ್ತಿದ್ದಾರೆ. –

ಅಥ = ಮತ್ತೊಂದು ಪ್ರಮೇಯವು, ಹ = ಪ್ರಸಿದ್ಧವಾಗಿದೆ. ಏಷಃ = ಪರಮಾತ್ಮನು, ಯಸ್ಮಾತ್ = ಯಾವ ಕಾರಣದಿಂದ, ಪ್ರಕೃತಿಂ = ಜಡಪ್ರಕೃತಿಯನ್ನು, ಅನುಪ್ರವಿಶ್ಯ = ಸ್ವಇಚ್ಛೆಯಿಂದ ಪ್ರವೇಶಮಾಡಿ, ಆತ್ಮಾನಂ = ತನ್ನನ್ನು, ಬಹುಧಾ = ಅನೇಕ ರೂಪವುಳ್ಳವನನ್ನಾಗಿ, ಚಕಾರ = ಮಾಡಿದನು, ತಸ್ಮಾತ್ = ಆ ಕಾರಣದಿಂದ, ಪ್ರಕೃತಿಃ = ಪ್ರಕೃತಿಶಬ್ದವಾಚ್ಯನು, ತಸ್ಮಾತ್ = ಆ ಕಾರಣದಿಂದ, ಪ್ರಕೃತಿ = ಪ್ರಕೃತಿ ಶಬ್ದದಿಂದ ವಾಚ್ಯನು, ಇತಿ = ಹೀಗೆ, ಆಚಕ್ಷತೇ = ಕರೆಯುತ್ತಾರೆ. ಇತಿ = ಹೀಗೆ, ಭಾಲ್ಲವೇಯಶ್ರುತಿಃ = ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

**ಭಾಷ್ಯಮ್ – 'अविकारोऽपि परमः प्रकृतिं तु विकारिणीम् ।
अनुप्रविश्य गोविन्दः प्रकृतिश्चाभिधीयते'' ।। इति नारदीये ।**

ಅನುವಾದ - ತಾನು ವಿಕಾರ ಹೊಂದದಿದ್ದರೂ, ಪ್ರಕೃತಿಯನ್ನು ಪ್ರವೇಶಿಸಿ ಅದನ್ನು ವಿಕಾರಗೊಳಿಸುತ್ತಾನೆ. ಆದ್ದರಿಂದ ಅವನು ಪ್ರಕೃತಿ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ನಾರದೀಯ ಪುರಾಣವು ಹೇಳಿದೆ.

ಪ್ರತಿಪದಾರ್ಥ -- ಸ್ಮೃತಿಯಲ್ಲಿ 'ಯದ್ಯಪಿ' ಮತ್ತು 'ತಥಾಪಿ' ಎಂಬ ಪದಗಳ ಅರ್ಥದಲ್ಲಿ ಅಪಿಶಬ್ದವು ಪ್ರಯುಕ್ತವಾಗಿದೆ. 'ತು' ಶಬ್ದವು ವಿಶೇಷಾರ್ಥದಲ್ಲಿದೆ. ಆದ್ದರಿಂದ –

ಅಪಿ = ವಾಸ್ತವಿಕವಾಗಿ, ಗೋವಿಂದಃ = ಗೋವಿಂದನು, ಪರಮಃ ಅವಿಕಾರಃ = ಅತ್ಯಂತ ನಿರ್ವಿಕಾರನು ಆಗಿದ್ದರೂ, ಚ = ಯಾವ ಕಾರಣದಿಂದ, ವಿಕಾರಿಣೀ = ವಿಕಾರವುಳ್ಳ, ಪ್ರಕೃತಿಂ ತು = ಜಡ ಪ್ರಕೃತಿಯನ್ನು, ಅನುಪ್ರವಿಶ್ಯ = ಪ್ರವೇಶ ಮಾಡಿ, ಪ್ರಕೃತಿಶ್ಚ = ಪ್ರಕೃತಿಯಂತೆ, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ. ಇತಿ = ಹೀಗೆ, ನಾರದೀಯೇ = ನಾರದೀಯ ಪುರಾಣದಲ್ಲಿ ಹೇಳಲಾಗಿದೆ.

**भाष्यम् — न चान्यत् कल्प्यम्, अप्रामाणिकत्वात् (अप्रमाणत्वात्. पा) ॥४॥**

ಅನುವಾದ - ನಾವು ಹೇಳಿದ ಅರ್ಥವನ್ನು ಬಿಟ್ಟು, ಬೇರೆ ಭಾಷ್ಯಕಾರರು ಹೇಳಿದ ಅರ್ಥವನ್ನು ಸೂತ್ರಕ್ಕೆ ತಿಳಿಯಬಾರದು. ಅವರ ಅರ್ಥದಲ್ಲಿ ಯಾವುದೇ ಪ್ರಮಾಣವಿಲ್ಲ. ಪ್ರಮಾಣಕ್ಕೆ ವಿರುದ್ಧವೂ ಆಗಿದೆ.

ಪ್ರತಿಪದಾರ್ಥ -- ಅಪವ್ಯಾಖ್ಯಾನವನ್ನು ದೂಷಣೆ ಮಾಡುತ್ತಿದ್ದಾರೆ. ಚ ಶಬ್ದವು 'ತು' ಎಂಬ ಪದದ ಅರ್ಥದಲ್ಲಿದೆ. –

**ಅನ್ಯತ್** = ಹಿಂದೆ ಹೇಳಿದ ಅರ್ಥವನ್ನು ಬಿಟ್ಟು ಪ್ರಕೃತಿ ಶಬ್ದಕ್ಕೆ ಉಪಾದಾನ ಎಂಬರ್ಥವನ್ನು, ನ **ಕಲ್ಪ್ಯಮ್** = ಕಲ್ಪಿಸಬಾರದು. **ಅಪ್ರಾಮಾಣಿಕತ್ವಾತ್** = ಆ ಉಪಾದಾನಕಾರಣತ್ವಾದ್ಯರ್ಥಗಳು ಅಪ್ರಾಮಾಣಿಕವಾಗಿವೆ. ಮತ್ತು ಪ್ರಮಾಣವಿರುದ್ಧವೂ ಆಗಿವೆ.

## ತತ್ವಪ್ರಕಾಶಿಕಾ

**नन्वेवं प्रकृतिशब्दवाच्यत्वे हरेः श्रुत्युक्तेऽपि कथं तद्युज्यते निमित्ताभावात् । नहि सङ्केतमात्रमभ्युपगम्यत इत्याशङ्कां परिहरत्सूत्रं पठित्वा फलितं तावदाह – आत्मेति ॥**

ಆಕ್ಷೇಪ - ಹಿಂದೆ ಹೇಳಿದ ಪ್ರಕಾರ ಪರಮಾತ್ಮನು ಪ್ರಕೃತಿಶಬ್ದದಿಂದ ಪ್ರತಿಪಾದ್ಯನೆಂದು ಹೇಳಿದರೂ ಕೂಡ ಇದು ಅಯುಕ್ತವಾಗಿದೆ. ಏಕೆಂದರೆ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೇ ಪರಮಾತ್ಮನಲ್ಲಿಲ್ಲದಿರುವಾಗ ಪರಮಾತ್ಮನನ್ನು ಪ್ರಕೃತಿಯೆಂದು ಹೇಳಲು ಹೇಗೆ ಸಾಧ್ಯ? ಕೇವಲ ಸಂಕೇತ ಮಾತ್ರದಿಂದ ಪರಮಾತ್ಮನಲ್ಲಿ ಪ್ರಕೃತಿಶಬ್ದವು ರೂಢವಾಗಿದೆ ಎಂಬುದನ್ನು ಸಿದ್ಧಾಂತಿಗಳೇ ಒಪ್ಪಿರುವುದಿಲ್ಲ.

ಪರಿಹಾರ - ಈ ಆಕ್ಷೇಪಕ್ಕೆ 'ಆತ್ಮಕೃತೇಃ ಪರಿಣಾಮಾತ್' ಎಂಬ ಸೂತ್ರವು ಉತ್ತರಿಸುತ್ತಿದೆ. ಅದನ್ನು ಪಠಿಸಿ, ಅದರ ಫಲಿತಾರ್ಥವನ್ನು ಭಾಷ್ಯದಲ್ಲಿ 'ಆತ್ಮಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**तत्वप्रकाशिका – न परमात्मनि प्रकृतिशब्दवृत्तौ निमित्ताभावः । प्रकृष्टा कृतिर्यस्येति योगस्यैव भावादित्यर्थः ।**

ಪರಮಾತ್ಮನಲ್ಲಿ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೇ ಇರುವುದಿಲ್ಲವೆಂದು ಹೇಳಬಾರದು. ಏಕೆಂದರೆ 'ಪ್ರಕೃಷ್ಟಕೃತಿತ್ವ' ಎಂಬ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಪ್ರಸಿದ್ಧವಾಗಿದೆ. ಪ್ರಕೃಷ್ಟವಾದ ಕೃತಿಯು ಯಾರದ್ದೋ ಅವನೇ ಪ್ರಕೃತಿಯೆನಿಸುತ್ತಾನೆ ಎಂಬುದಾಗಿ 'ಪ್ರಕೃಷ್ಟಾ ಕೃತಿಃ ಯಸ್ಯಸಃ ಪ್ರಕೃತಿಃ' ಎಂಬ ನಿಷ್ಪತ್ತಿಯನ್ನು ಸುಲಭವಾಗಿ ಹೇಳಬಹುದು.

**तत्वप्रकाशिका – कथं प्रकृष्टेश्वरस्य कृतिरित्यतः सूत्रं व्याचष्टे ।। प्रकृताविति ।। 'प्रकृतेः स्वतः परिणामसामर्थ्याभावात्तदनुकूलतया तां प्रविश्य महदादिरूपेण परिणामयति' इति प्रकृतिपरिणामादनन्तरं आत्मानं च महदादिप्रेरणाय बहुधा करोतीति प्रकर्षेण कृतिर्विष्णोरित्यर्थः ।**

ಪರಮಾತ್ಮನ ಕೃತಿಯು ಏಕೆ ಉತ್ತಮವಾಗಿದೆ? ಎಂಬ ಪ್ರಶ್ನೆಗೆ ಸೂತ್ರವನ್ನು ವ್ಯಾಖ್ಯಾನ ಮಾಡುವ ಮೂಲಕ 'ಪ್ರಕೃತೋ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಪ್ರಕೃತಿಯು ಸಹಜವಾಗಿ ಪರಿಣಾಮ ಹೊಂದಲು ಅಸಮರ್ಥವಾಗಿದೆ. ಆದ್ದರಿಂದ ಪ್ರಕೃತಿಗೆ ಪರಿಣಾಮ ಹೊಂದುವ ಸಾಮರ್ಥ್ಯವನ್ನು ನೀಡುವುದಕ್ಕಾಗಿ ಅದರೊಳಗೆ ಪ್ರವೇಶಿಸುತ್ತಾನೆ. ಅಂತೆಯೇ ಮಹತ್ತತ್ವ ಮೊದಲಾದ ರೂಪದಿಂದ ಅದನ್ನು ಪರಿಣಾಮ ಮಾಡುತ್ತಾನೆ. ಅನಂತರ ಮಹತ್ತತ್ವ ಮೊದಲಾದ ಪ್ರಕೃತಿಯ ಪರಿಣಾಮಗಳನ್ನು ಪ್ರೇರಣೆ ಮಾಡುವುದಕ್ಕಾಗಿ ತಾನೇ ಅನೇಕ ರೂಪಗಳನ್ನು ಧರಿಸಿ, ಅವುಗಳೊಳಗೆ ನಿಲ್ಲುತ್ತಾನೆ. ಇದನ್ನು ಗಮನಿಸಿದಾಗ ಪರಮಾತ್ಮನ ಕೃತಿಯು ಎಷ್ಟು ಅತ್ಯುತ್ಕೃಷ್ಟವಾಗಿದೆ ಎಂದು ಸ್ಪಷ್ಟವಾಗುತ್ತದೆ.

**तत्वप्रकाशिका – सूत्रार्थे श्रुतिस्मृती चाऽऽह – अथेति ।। 'प्रकृतिमनुप्रविश्य तां परिणाम्य तत्परिणामप्रेरकत्वेन आत्मानं बहुधा चकार तस्मात् प्रकृतिशब्दवाच्यः। यस्मात् प्रकृतिशब्दवाच्यः तस्मात् प्रकतिरित्याचक्षत इत्यर्थः । स्मृतिरप्येवं व्याख्येया ।**

ಈ ಸೂತ್ರಾರ್ಥಕ್ಕೆ ಶ್ರುತಿ ಹಾಗೂ ಸ್ಮೃತಿಗಳ ಆಧಾರವಿದೆ ಎಂದು 'ಅಥ' ಇತ್ಯಾದಿ ಭಾಷ್ಯವಾಕ್ಯವು ಸ್ಪಷ್ಟಪಡಿಸುತ್ತಿದೆ. ಪರಮಾತ್ಮನು ಪ್ರಕೃತಿಯ ಒಳಗಡೆ ಪ್ರವೇಶ ಮಾಡಿ ಮಹತತ್ತ್ವ ಮೊದಲಾದ ವಿವಿಧ ರೂಪದಿಂದ ಅದನ್ನು ಪರಿಣಾಮಗೊಳಿಸಿ, ಅವುಗಳ ಪ್ರೇರಕನಾಗಿ ಸ್ವತಃ ತಾನು ಅನೇಕ ರೂಪಗಳನ್ನು ಯಾವ ಕಾರಣದಿಂದ ಧರಿಸುತ್ತಾನೋ, ಆ ಕಾರಣದಿಂದ ಅವನು ಪ್ರಕೃತಿಶಬ್ದವಾಚ್ಯನಾಗಿದ್ದಾನೆ. ಯಾವ ಕಾರಣದಿಂದ ಪರಮಾತ್ಮನು ಪ್ರಕೃತಿಶಬ್ದವಾಚ್ಯನಾಗಿದ್ದಾನೋ, ಆದ್ದರಿಂದಲೇ ಜ್ಞಾನಿಜನರು ಆ ಪರಮಾತ್ಮನನ್ನು 'ಪ್ರಕೃತಿಃ' ಎಂದು ಕರೆಯುತ್ತಾರೆ. 'ಅವಿಕಾರೋಽಪಿ ಪರಮಃ' ಎಂಬ ಸ್ಮೃತಿವಾಕ್ಯವನ್ನೂ ಕೂಡ ಹೀಗೆಯೇ ವ್ಯಾಖ್ಯಾನ ಮಾಡಬೇಕು.

**तत्वप्रकाशिका – अपव्याख्यां दूषयति ।। न चेति ।। ब्रह्मण एव जगदुपादानत्वं प्रकृतिश्चेत्यादिसूत्रैरुच्यते' इति यद् ब्रह्मणः परिणामित्वं सूत्रार्थतया कल्प्यते, न तद्युक्तम् । ब्रह्मणो जगदुपादानत्वे प्रमाणाभावादित्यर्थः ।**

ಈ ವಿಷಯದಲ್ಲಿ ಪರರು ಮಾಡಿರುವ ಅಪವ್ಯಾಖ್ಯಾನವನ್ನು 'ನಚ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

ಸ್ವತಃ ಬ್ರಹ್ಮನೇ ಈ ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ ಎಂಬುದಾಗಿ 'ಪ್ರಕೃತಿಶ್ಚ' ಇತ್ಯಾದಿ ಸೂತ್ರವು ಹೇಳುತ್ತಿದೆ ಎಂಬುದು ಪರರ ಅಪವ್ಯಾಖ್ಯಾನ. ಇದು ಯುಕ್ತವಲ್ಲ. ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆಂಬ ಕಾರಣದಲ್ಲಿ ಯಾವುದೇ ಪ್ರಮಾಣಗಳಿರುವುದಿಲ್ಲ.

**तत्वप्रकाशिका – न चैकविज्ञानेन सर्वविज्ञानं प्रतिज्ञाय मृत्पिण्डादिदृष्टान्तोक्त्यैव तत्सिद्धिः । तस्या 'अन्यार्थम्' इति सूत्रव्याख्याने सम्यग् व्याख्यातत्वात् । किं चात्र ब्रह्मणः परिणामित्वोक्तिरसङ्गतेव भवति । एतदध्यायस्याशेषशास्त्रस्य ब्रह्मणि समन्वयप्रतिपादनाय प्रवृत्तत्वात् ।**

ಆಕ್ಷೇಪ - ಬ್ರಹ್ಮನು ಉಪಾದಾನಕಾರಣನಾಗಿದ್ದಾನೆಂಬ ವಿಷಯದಲ್ಲಿ 'ಏಕವಿಜ್ಞಾನೇನ' ಎಂಬ ಶ್ರುತಿಯೇ ಪ್ರಮಾಣವಾಗಿದೆ. 'ಏಕವಿಜ್ಞಾನೇನ ಸರ್ವಂ ವಿಜ್ಞಾತಂ ಭವತಿ' ಎಂಬ ಶ್ರುತಿಯು ಒಂದರ ಜ್ಞಾನದಿಂದ ಎಲ್ಲವನ್ನೂ ತಿಳಿದಂತಾಗುತ್ತದೆ ಎಂದು ಪ್ರತಿಜ್ಞೆ ಮಾಡುತ್ತಿದೆ. ಮುಂದೆ ಉಪಾದಾನ ಉಪಾದೇಯಗಳಾದ ಮೃತ್ಪಿಂಡ ಹಾಗೂ ಘಟದ ದೃಷ್ಟಾಂತವನ್ನೇ ನೀಡಲಾಗಿದೆ. ಈ ದೃಷ್ಟಾಂತದ ಮಾತಿನಿಂದ ಪ್ರತಿಜ್ಞಾವಾಕ್ಯಕ್ಕೆ ಬ್ರಹ್ಮೋಪಾದಾನತ್ವ ಪರವಾಗಿಯೇ ಅರ್ಥೈಸಬೇಕು.

ಸಮಾಧಾನ - ಈ ವ್ಯಾಖ್ಯಾನ ತಪ್ಪು. 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಈ ಶ್ರುತಿಯ ನಿಜವಾದ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದೇವೆ. ಆದ್ದರಿಂದ 'ಏಕವಿಜ್ಞಾನೇನ' ಎಂಬ ಶ್ರುತಿಯು ಬ್ರಹ್ಮನು ಉಪಾದಾನಕಾರಣನಾಗಿದ್ದಾನೆಂಬ ಪ್ರತಿಪಾದನೆಗೆ ಸರ್ವಥಾ ಹೊರಟಿರುವುದಿಲ್ಲ. ಮತ್ತು ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆಂದು ಹೇಳುವುದು ಈ ಸೂತ್ರದಲ್ಲಿ ಅಸಂಗತವಾಗಿದೆ. ಏಕೆಂದರೆ ಸಮಗ್ರ ಈ ಅಧ್ಯಾಯವು ಕೇವಲ ವೈದಿಕಶಬ್ದಗಳ ಸಮನ್ವಯಕ್ಕೋಸ್ಕರ ಹೊರಟಿದೆ. ಹೀಗಿರುವಾಗ ಉಪಾದಾನಕಾರಣತ್ವದ ನಿರೂಪಣೆ ಮಾಡುವುದು ಅಪ್ರಸ್ತುತ.

**तत्वप्रकाशिका – स्यादेतत् । श्रुतीनां प्रधानपरत्वं वदति सांख्ये निरस्ते कथं प्रधानाभावे जगदुत्पत्तिः ? इति शङ्का भवत्येव । तन्निरासाय ब्रह्मणो जगदुपादानत्वोक्तिः सङ्गतेति ।**

ಆಕ್ಷೇಪ - ಸಮಸ್ತ ಶ್ರುತಿಗಳು ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಹೇಳುತ್ತಿವೆ. ಹೀಗೆ ಸಾಂಖ್ಯರು ಸಮರ್ಥಿಸುತ್ತಾರೆ. ಈ ಸಾಂಖ್ಯಮತವನ್ನು ಅದ್ವೈತಿಗಳು ನಿರಾಕರಣೆ ಮಾಡುತ್ತಾರೆ. ಜಗತ್ತಿಗೆ ಪ್ರಕೃತಿಯು ಉಪಾದಾನಕಾರಣವಲ್ಲ. ಬ್ರಹ್ಮನೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಿದರೆ ಪುನಃ ಸಾಂಖ್ಯರು ಪ್ರಶ್ನಿಸುತ್ತಾರೆ. ಪ್ರಕೃತಿಯಿಲ್ಲದೇ ಜಗತ್ತು ಹುಟ್ಟಲು ಹೇಗೆ ಸಾಧ್ಯ ? ಎಂದು.

ಈ ಆಶಂಕೆಯನ್ನು ನಿರಾಕರಣ ಮಾಡುವುದಕ್ಕಾಗಿ ಬ್ರಹ್ಮನಿಗೆ ಜಗದುಪಾದಾನಕಾರಣತ್ವನ್ನು ಸಮರ್ಥಿಸಲು ಪ್ರಕೃತಿ ಇತ್ಯಾದಿ ಸೂತ್ರಗಳು ಹೊರಟಿರುತ್ತವೆ. ಹೀಗಿರುವಾಗ ಪ್ರಕೃತಿಶ್ಚ ಇತ್ಯಾದಿ ಸೂತ್ರಕ್ಕೆ ಅಸಾಂಗತ್ಯ ಹೇಗೆ ಬರುತ್ತದೆ ?

**तत्वप्रकाशिका – मैवम् । किं प्रधानस्य शास्त्रप्रतिपाद्यतामात्रं प्राङ् निषिद्धं तत्स्वरूपमेव वा ?**

ಸಮಾಧಾನ - ಇದು ತಪ್ಪು. ಏಕೆಂದರೆ ಅದ್ವೈತಿಗಳನ್ನು ಕುರಿತು ನಾವು ಪ್ರಶ್ನಿಸುತ್ತೇವೆ - ಹಿಂದೆ ನೀವು ಪ್ರಧಾನಕ್ಕೆ ಶಾಸ್ತ್ರಪ್ರತಿಪಾದ್ಯವನ್ನಷ್ಟೇ ನಿರಾಕರಿಸಿದ್ದೀರೋ ಅಥವಾ 'ಪ್ರಧಾನ' ಎಂಬ ಪದಾರ್ಥವೇ ಇಲ್ಲವೆಂದು ನಿರಾಕರಣೆ ಮಾಡಿದ್ದೀರೋ?

**तत्वप्रकाशिका – आद्ये का ब्रह्मणो जगदुपादानात्वोक्तेः सङ्गतिः ? न ह्याकाशादिशब्दानां औपनिषदानां ब्रह्मणि समन्वयेऽभिहिते कथं तर्हि जगदवकाशः? इति शङ्कोत्पन्ना नापि सूत्रकृता पराकृता ।**

ಮೊದಲನೆಯ ಪಕ್ಷದಲ್ಲಿ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣವೆಂದು ಹೇಳಿದರೆ ಸಂಗತಿಯು ಹೇಗೆ ದೊರೆಯುತ್ತದೆ. ಏಕೆಂದರೆ ಉಪನಿಷತ್ತಿನಲ್ಲಿ ಪ್ರಸ್ತುತವಾಗಿರುವ ಆಕಾಶ ಮೊದಲಾದ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಯಿತು. ಹಾಗಾದರೆ ಜಗತ್ತಿನಲ್ಲಿ ಹೇಗೆ ಅವಕಾಶವಿದೆ ? ಎಂಬ ಶಂಕೆ ಹುಟ್ಟುತ್ತದೆ. ಇದನ್ನು ಸೂತ್ರಕಾರರು ಪರಿಹರಿಸಿಯೇ ಇಲ್ಲ.

**तत्वप्रकाशिका – न द्वितीयः । तदुक्तेरेव अत्रासङ्गतत्वात्, ब्रह्मणो जगत्काणत्वसिध्यर्थं तदुक्तिः, इति चेन्न, निमित्तत्वेन तदुपपत्तेः ।**

ಎರಡನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪ್ರಕೃತಿ ಎಂಬ ಪದಾರ್ಥವೇ ಇರುವುದಿಲ್ಲವೆಂದು ಸಮರ್ಥಿಸುವುದು ಅಸಂಗತವಾಗುತ್ತದೆ. ಇನ್ನು ಬ್ರಹ್ಮನಿಗೆ ಜಗದುಪಾದಾನತ್ವವನ್ನು ಸಮರ್ಥಿಸಲು ಪ್ರಧಾನ ಎಂಬ ಪದಾರ್ಥದ ನಿರಾಕರಣೆ ಸಂಗತವಾಗುತ್ತದೆಂದು ವಾದಿಸುವುದೂ ಸರಿಯಲ್ಲ. ಏಕೆಂದರೆ ಪ್ರಧಾನವನ್ನು ನಿರಾಕರಣೆ ಮಾಡದಿದ್ದರೂ ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನಾಗಿದ್ದಾನೆಂದು ಸಮರ್ಥಿಸಿ ಜಗತ್ಕಾರಣತ್ವವನ್ನು ಸಮರ್ಥಿಸಲು ಬರುತ್ತದೆ.

**तत्वप्रकाशिका – अथापि स्यात् – 'प्रधानप्रतिपादकवाक्यस्य ब्रह्मणि समन्वयेऽभिहिते तत्प्रमाणाभावेनाऽभावः प्राप्तः' इति ?**

ಆಕ್ಷೇಪ - ಪ್ರಧಾನವನ್ನು ಯಾವ ಶ್ರುತಿಯು ಹೇಳುತ್ತದೋ ಅದನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದಾಗ, ಪ್ರಧಾನ ಎಂಬ ಪದಾರ್ಥ ಇಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಹೀಗೆ ಹೇಳಿದರೆ ಏನು ತಪ್ಪು?

**तत्वप्रकाशिका – मैवम् । तथाऽऽकाशाद्यभावप्राप्तेरपि प्रसङ्गात् । प्रमाणान्तरेण तत्सिद्धिरिति चेत् सममत्रापीत्यलम् ।।४।।**

ಪರಿಹಾರ - ಇದು ಸರಿಯಲ್ಲ. ಹೀಗೆ ಹೇಳುವುದಾದರೆ, ಆಕಾಶಾದಿಗಳೇ ಇಲ್ಲವೆಂದಾಗಬೇಕಾದೀತು. ಆಕಾಶ ಮೊದಲಾದ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದಾಗ ಆಕಾಶ, ಪೃಥಿವೀ ಮೊದಲಾದ ಪದಾರ್ಥಗಳೂ ಕೂಡ ಇಲ್ಲವೆಂದು ನಿಮ್ಮ ಪ್ರಕಾರ ಹೇಳಿದಂತಾಗುತ್ತದೆ. ಬೇರೆ ಪ್ರಮಾಣದಿಂದ ಆಕಾಶಾದಿಗಳು ಇರುತ್ತವೆಂದು ವಾದಿಸಿದರೆ ಪ್ರಕೃತಿಯೂ ಕೂಡ ಇರುತ್ತದೆಂದು ಬೇರೆ ಪ್ರಮಾಣದಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನ ಅತ್ಯಂತ ಅಸಾಧುವಾಗಿದೆ.

## ಭಾವದೀಪ

**नहीति** ।। गुणपूर्त्यर्थत्वात् समन्वयस्येति भावः । भाष्ये चशब्दोऽवधारण इति भावेन पञ्चम्या योग्यसाध्येनान्वयमाह – **नेत्यादिना** ।।

ಪರಮಾತ್ಮನಲ್ಲಿ ಗುಣಪೂರ್ಣತ್ವದ ಸಿದ್ಧಿಗೋಸ್ಕರ ಶಬ್ದಗಳ ಸಮನ್ವಯವನ್ನು ಸಿದ್ಧಾಂತದಲ್ಲಿ ಮಾಡಲಾಗುತ್ತದೆ. ಪ್ರಕೃತಿಶಬ್ದವನ್ನು ಕೇವಲ ಸಂಕೇತವೆಂದು ವಿವಕ್ಷಿಸಿದರೆ, ಗುಣಪೂರ್ಣತ್ವವು ಸಿದ್ಧವಾಗುವುದಿಲ್ಲವೆಂಬುದು 'ನಹಿ' ಇತ್ಯಾದಿ ವಾಕ್ಯದ ಅಭಿಪ್ರಾಯ.

ಭಾಷ್ಯದಲ್ಲಿರುವ ಚಶಬ್ದವು ಅವಧಾರಣಾರ್ಥದಲ್ಲಿದೆ ಎಂಬ ಅಭಿಪ್ರಾಯದಿಂದ ಪಂಚಮೀ ವಿಭಕ್ತಿಯಿರುವುದರಿಂದ ಯೋಗ್ಯವಾದ ಸಾಧ್ಯದ ಜೊತೆಗೆ ಅನ್ವಯವನ್ನು 'ನ ಪರಮಾತ್ಮನಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः – (प्रकृति) प्रवेशावैयर्थ्यं वदन् शब्दार्थमाह – प्रकृतेरिति ।। सूत्रे** परिणामादिति पञ्चमी ल्यब्लोपनिमित्तेति भावेन भाष्ये परिणाम्येत्युक्तम् ।

ಪರಮಾತ್ಮನು ಪ್ರಕೃತಿಯಲ್ಲಿ ಪ್ರವೇಶ ಮಾಡಿರುವುದು ವ್ಯರ್ಥವಲ್ಲ ಎಂಬುದನ್ನು ಸಮರ್ಥಿಸುವವರಾಗಿ, ಪ್ರಕೃತಿ ಶಬ್ದದ ಅರ್ಥವನ್ನು ಪ್ರಕೃತಿ ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ.

ಸೂತ್ರದಲ್ಲಿರುವ 'ಪರಿಣಾಮಾತ್' ಎಂಬ ಪದದ ಪಂಚಮೀ ವಿಭಕ್ತಿಯು ಲ್ಯಬ್ಲೋಪನಿಮಿತ್ತಾರ್ಥದಲ್ಲಿ ಇರುತ್ತದೆ. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಪರಿಣಾಮ್ಯ' ಎಂಬ ಪದವನ್ನು ಉಪಯೋಗಿಸಿದ್ದಾರೆ.

**भावदीपः** – तत्र ल्यबादेशस्थानिनः पूर्वकालार्थत्त्वात्प्रत्ययस्यार्थमाह – **प्रकृतिपरिणामादनन्तरमिति** ।।

ಲ್ಯಬಾದೇಶದ ಸ್ಥಾನಿಯು ಪೂರ್ವಕಾಲವನ್ನು ಹೇಳುವ ಕ್ತ್ವಾ ಪ್ರತ್ಯಯದ ಅರ್ಥದಲ್ಲಿರುತ್ತದೆಂಬುದನ್ನು 'ಪ್ರಕೃತಿಪರಿಣಾಮಾದನಂತರಮ್' ಎಂಬ ಟೀಕಾಮಾತಿನಿಂದ ಹೇಳಿರುತ್ತಾರೆ.

**भावदीपः** – आत्मकृतिर्व्यर्थेत्यतः तत्र परिणामेषु स्थित्वेति भाष्यम् । तदर्थमाह – **महदादीति** ।।

ಆತ್ಮಕೃತಿಯು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ತತ್ರ ಪರಿಣಾಮೇಷು ಸ್ಥಿತ್ವಾ' ಇತ್ಯಾದಿ ಭಾಷ್ಯವು ಹೊರಟಿದೆ. ಅದರ ಅರ್ಥವನ್ನೇ ಟೀಕೆಯಲ್ಲಿ 'ಮಹದಾದಿ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ಪರಮಾತ್ಮನು ಮಹತ್ತತ್ತ್ವಾದಿಗಳಲ್ಲಿ ನೆಲೆಸಿ ಅವುಗಳನ್ನು ಪ್ರೇರಣೆ ಮಾಡಲು ಅನೇಕ ರೂಪಗಳನ್ನು ತಾಳುತ್ತಾನೆ. ಆದ್ದರಿಂದ ಆತ್ಮಕೃತಿಯು ಸಾರ್ಥಕವೆಂದು ತಿಳಿಯಬೇಕು.

**भावदीपः** – श्रुतौ शेषमाह – **तामित्यादिना** ।। द्विरुक्तेरपौनरुक्त्यायाऽर्थभेदमाह – **तस्मादिति** ।। **एवमिति** ।। अनुप्रविश्येत्यनन्तरं तामित्यादिशेषो ध्येय इत्यर्थः ।

'ಅಥ ಹ್ಯೇಷ ಆತ್ಮಾ' ಇತ್ಯಾದಿ ಶ್ರುತಿಯಲ್ಲಿ ಶೇಷಪೂರಣ ಮಾಡಿಕೊಳ್ಳಬೇಕಾದುದ್ದನ್ನು 'ತಾಮ್' ಇತ್ಯಾದಿ ಟೀಕೆಯಲ್ಲಿ ಹೇಳಿರುತ್ತಾರೆ. ಶ್ರುತಿಯಲ್ಲಿ 'ತಸ್ಮಾತ್ ಪ್ರಕೃತಿಃ ತಸ್ಮಾತ್ ಪ್ರಕೃತಿಃ' ಎಂಬುದಾಗಿ ಎರಡು ಬಾರಿ ಪ್ರಕೃತಿ ಶಬ್ದವನ್ನು ಹೇಳಿರುತ್ತಾರೆ. ಆದರೂ ಕೂಡ ಪುನರುಕ್ತಿ ಬರುವುದಿಲ್ಲ. ಏಕೆಂದರೆ ಅರ್ಥವ್ಯತ್ಯಾಸವಿದೆ ಎಂಬುದನ್ನು ಟೀಕೆಯಲ್ಲಿ 'ತಸ್ಮಾತ್' ಇತ್ಯಾದಿಯಾಗಿ ನಿರೂಪಿಸಿದ್ದಾರೆ. 'ಅನುಪ್ರವಿಶ್ಯ' ಎಂಬುದರ ಅನಂತರ 'ತಾಮ್' ಇತ್ಯಾದಿ ವಾಕ್ಯವನ್ನು ಶೇಷಪೂರಣ ಮಾಡಿಕೊಳ್ಳಬೇಕೆಂದು ತಿಳಿಯಬೇಕು.

**भावदीपः** – अप्रतीतेराह – **अपव्याख्यामिति** ।। अप्रामाणिकत्वमसङ्गतेरुपलक्षणमिति भावेनाह – **किं चेति** ।।

ಭಾಷ್ಯದಲ್ಲಿ 'ನಚ ಅನ್ಯತ್‌ಕಲ್ಪ್ಯಮ್' ಎಂಬ ವಾಕ್ಯವು ಏಕೆ ಹೊರಟಿದೆ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿ ಟೀಕೆಯಲ್ಲಿ 'ಅಪವ್ಯಾಖ್ಯಾಂ ದೂಷಯತಿ' ಎಂಬುದಾಗಿ ಪೀಠಿಕೆಯನ್ನು ನೀಡಿರುತ್ತಾರೆ. ಅಪ್ರಾಮಾಣಿಕತ್ವವು ಅಸಂಗತಿಗೆ ಉಪಲಕ್ಷಣವೆಂಬ ಅಭಿಪ್ರಾಯದಿಂದ 'ಕಿಂಚ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः** – न चाऽव्यक्तस्वरूपं भगवता निषिद्धम् । भारतादौ साधितत्वादिति द्वादशगीताभाष्योक्तमिह सङ्गमयितुं शङ्कामाह – **स्यादेतदिति** ।।

'ನ ಚಾಽವ್ಯಕ್ತಸ್ವರೂಪಂ ಭಗವತಾ ನಿಷಿದ್ಧಮ್ ಭಾರತಾದೌ ಸಾಧಿತತ್ವಾತ್' ಅವ್ಯಕ್ತಸ್ವರೂಪವನ್ನು ಸೂತ್ರಕಾರರು ನಿಷೇಧ ಮಾಡಿರುವುದಿಲ್ಲ. ಮಹಾಭಾರತಾದಿಗಳಲ್ಲಿ ಪ್ರಕೃತಿಯನ್ನು ಸಾಧನೆ ಮಾಡಿದ್ದಾರೆ. ಹೀಗೆ ದ್ವಾದಶಾಧ್ಯಾಯದ ಗೀತಾಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿರುತ್ತಾರೆ. ಆ ವಾಕ್ಯದ ಸಂಗತಿಯನ್ನು ಪ್ರಕೃತ ತಿಳಿಸುವುದಕ್ಕಾಗಿ 'ಸ್ಯಾದೇತತ್' ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ.

**भावदीपः** – वदतीति सप्तम्यन्तम् ।। **निरस्त इति** ।। आनुमानिकाद्यधिकरणत्रयेण परभाष्योक्तदिशा निरस्त इत्यर्थः ।

'ವದತಿ' ಎಂಬುದು ಸಪ್ತಮ್ಯಂತವಾದ ಶಬ್ದವೆಂದು ತಿಳಿಯಬೇಕು. 'ನಿರಸ್ತೇ ಇತಿ' ಎಂದರೆ ಆನುಮಾನಿಕಾಧಿಕರಣ ಮೊದಲಾದ ಮೂರು ಅಧಿಕರಣಗಳಿಂದ ಪರಕೀಯರ ಭಾಷ್ಯದಲ್ಲಿ ಶ್ರುತಿಯ ಪ್ರಧಾನಪರತ್ವವನ್ನು ನಿರಾಕರಣೆ ಮಾಡಲಾಗಿದೆ ಎಂದರ್ಥ.

**भावदीपः** – पराकृता अवकाशाभावशङ्केत्यनुकर्षः ।। **तदुक्तेरेव** ।। प्रधानस्वरूपनिषधोक्तेरेव इत्यर्थः ।।

'ನಾಪಿ ಸೂತ್ರಕೃತಾ ಪರಾಕೃತಾ' ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. ಅವಕಾಶಾಭಾವಶಂಕಾ' ಎಂಬುದನ್ನು ಇಲ್ಲಿ ಅನುಕರ್ಷ ಮಾಡಿಕೊಳ್ಳಬೇಕು. ಆವಾಗ ಆಕಾಶವೇ ಇರುವುದಿಲ್ಲ ಎಂಬ ಶಂಕೆಯನ್ನು ಸೂತ್ರಕಾರರು ನಿರಾಕರಣೆ ಮಾಡಿರುವುದಿಲ್ಲ ಎಂಬರ್ಥವನ್ನು ಹೇಳಿದಂತಾಗುತ್ತದೆ. 'ತದುಕ್ತೇರೇವ' ಎಂದು ಟೀಕೆಯಲ್ಲಿದೆ. ಪ್ರಧಾನಸ್ವರೂಪದ ನಿಷೇಧವನ್ನು ಹೇಳಿರುವುದರಿಂದಲೇ ಎಂದು ಇದರ ಅರ್ಥ.

**भावदीपः** – **जगत्काणत्वेति** ।। जगदुपादानत्वेनेति योज्यम् ।। **तदिति** ।। ब्रह्मणो जगत्कारणत्वोपपत्तेः इत्यर्थः ।

'ಜಗತ್ಕಾರಣತ್ವ ಸಿದ್ಧ್ಯರ್ಥಂ' ಎಂಬಲ್ಲಿ 'ಜಗದುಪಾದಾನತ್ವೇನ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. 'ತತ್' ಎಂದರೆ ಬ್ರಹ್ಮನಿಗೆ ಜಗತ್‌ಕಾರಣತ್ವವು ಉಪಪನ್ನವಾಗುತ್ತದೆ ಎಂದರ್ಥ.

**भावदीपः** – एतेन न चेत्यादिभाष्यं ब्रह्मणो जगत्कारणत्वसिद्ध्यर्थं प्रधानस्वरूपमेव प्राक्प्रकृतं सूत्रकृता निषिध्यत इति यत्कल्प्यते तन्न युक्तम् । जगत्कारणत्वस्य अन्यथोपपत्त्या प्रधानस्वरूपनिरासस्याऽप्रामाणिकत्वादित्यपि व्याख्यातं भवति ।

ಹೀಗೆ ಹೇಳಿದ್ದರಿಂದ 'ನಚ' ಇತ್ಯಾದಿ ಭಾಷ್ಯವನ್ನು ಹೀಗೂ ವ್ಯಾಖ್ಯಾನ ಮಾಡಿದಂತಾಗುತ್ತದೆ - ಬ್ರಹ್ಮನಿಗೆ ಜಗತ್‌ಕಾರಣತ್ವದ ಸಿದ್ಧಿಗೋಸ್ಕರ ಹಿಂದೆ ಪ್ರಕೃತವಾದ ಪ್ರಧಾನಸ್ವರೂಪವನ್ನೇ ಸೂತ್ರಕಾರರು ನಿಷೇಧ ಮಾಡುತ್ತಿದ್ದಾರೆ ಎಂಬ ಪರಕೀಯರ ಕಲ್ಪನೆಯು ಅಯುಕ್ತವಾಗಿದೆ. ಏಕೆಂದರೆ ಜಗತ್‌ಕಾರಣತ್ವವು ನಿಮಿತ್ತಕಾರಣದಿಂದಲೂ ಉಪಪನ್ನವಾಗುತ್ತದೆ. ಮತ್ತು ಪ್ರಧಾನಸ್ವರೂಪವನ್ನು ನಿರಾಕರಣೆ ಮಾಡುವುದು ಅಪ್ರಾಮಾಣಿಕವೂ ಆಗಿದೆ ಎಂದು.

**भावदीपः** – तथा प्रधानस्याऽप्रामाणिकत्वाद् ब्रह्मैवोपादानमित्येत्सूत्रार्थतया यत्कल्प्यते न तद्युक्तम् । प्रधानाभावस्याऽप्रमाणिकत्वादित्यपि भाष्यार्थं मत्त्वा शङ्कान्तरं निराह – **अथापि स्यादिति** ।।

ಇದರಂತೆ ಪ್ರಧಾನವು ಅಪ್ರಾಮಾಣಿಕವಾಗಿರುವುದರಿಂದ ಬ್ರಹ್ಮನೇ ಉಪಾದಾನಕಾರಣನಾಗಿದ್ದಾನೆ ಎಂಬ ಪರಕೀಯರ ವ್ಯಾಖ್ಯಾನವು ಅಯುಕ್ತವಾಗಿದೆ ಎಂದು ತಿಳಿಸಿದಂತಾಯಿತು. ಏಕೆಂದರೆ ಪ್ರಧಾನವು ಇರುವುದಿಲ್ಲ ಎಂಬುದೇ ಅಪ್ರಾಮಾಣಿಕ. ಇದೂ ಕೂಡ ಭಾಷ್ಯದ ಅಭಿಪ್ರಾಯವೇ ಆಗಿದೆ ಎಂಬ ವಿವಕ್ಷೆಯಿಂದ ಮತ್ತೊಂದು ಶಂಕೆಯನ್ನು ನಿರಾಕರಣೆ ಮಾಡಲು 'ಅಥಾಪಿ ಸ್ಯಾತ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

## ಬ್ರಹ್ಮಮೀಮಾಂಸಾಶಾಸ್ತ್ರ

### **सू – ।। योनिश्च हि गीयते ।।५।।**

ಸೂತ್ರಾರ್ಥ - 'ಯದ್ಭೂತಂ ಯೋನಿಂ' ಎಂಬ ಶ್ರುತಿಯಲ್ಲಿ ತನ್ನ ದೇಹದಲ್ಲಿ ಬ್ರಹ್ಮಾದಿ ಪುತ್ರರಿಗೆ ಉತ್ಪಾದಕನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಮತ್ತೊಬ್ಬರ ವಿರೋಧವಿಲ್ಲದೇ ಸ್ವದೇಹದಿಂದ ಸಂತತಿ ಉತ್ಪತ್ತಿಗೆ ಕಾರಣನಾಗಿರುವುದರಿಂದ ಪ್ರಕೃತಿಶಬ್ದದಿಂದ ವಾಚ್ಯನಾಗಿದ್ದಾನೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಪ್ರಕೃತ್ಯಧಿಕರಣವು ಸಮಾಪ್ತವಾಯಿತು ॥

## ಸೂತ್ರದೀಪಿಕಾ

**सूत्रदीपिका – हि** यस्मात् । ईश्वरः 'यद्भूतयोनिम्' इति श्रुत्या **योनिः** स्वदेहादेवापत्योत्पादकश्च **गीयते** प्रतिपाद्यते । तस्मात् प्रकृत्यादिस्त्रीलिङ्गशब्दवाच्य इत्यर्थः ।।५।।

ಅರ್ಥ -- ಹಿ = ಯಾವ ಕಾರಣದಿಂದ, ಈಶ್ವರನು 'ಯದ್ಭೂತಂ ಯೋನಿಂ' ಇತ್ಯಾದಿ ಶ್ರುತಿಯಿಂದ ಯೋನಿಃ = ತನ್ನ ದೇಹದಿಂದಲೇ ಉತ್ಪಾದಕನೆಂದು. ಗೀಯತೇ = ಪ್ರಸಿದ್ಧನಾಗಿದ್ದಾನೋ, ಆ ಕಾರಣದಿಂದ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು.

॥ ಸೂತ್ರದೀಪಿಕೆಯಲ್ಲಿ ಪ್ರಕೃತ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् – ।। योनिश्च हि गीयते ।।२८।।**

**अव्यवधानेनोत्पत्तिद्वारत्वं (च) प्रकृतित्वम् । तच्चास्यैव हि गीयते 'यद्भूतयोनिं परिपश्यन्ति धीराः' (मुं उ. १-१-६) इति ।**

ಅನುವಾದ - ಮತ್ತೊಬ್ಬರ ವ್ಯವಧಾನವಿಲ್ಲದೇ ತನ್ನ ದೇಹದಿಂದಲೇ ಉತ್ಪತ್ತಿಗೆ ಕಾರಣವಾಗುವುದೇ, ಸ್ತ್ರೀತ್ವ, ಇಂತಹ ಸ್ತ್ರೀತ್ವ ವಿಷ್ಣುವಿನಲ್ಲಿ ಹೇಳಿದೆ. ಪ್ರಳಯಕಾಲದಲ್ಲಿ ತನ್ನ ಉದರದಲ್ಲಿದ್ದ ಚತುರ್ಮುಖಾದಿ ಚೇತನ ವರ್ಗವನ್ನು ಹುಟ್ಟಿಸಿದ ಇವನನ್ನು ಜ್ಞಾನಿಗಳು ನೋಡುತ್ತಾರೆ. ಆದ್ದರಿಂದ ಅವ್ಯವಧಾನೇನ ಸಂತಾನಕರ್ತೃತ್ವ ಪರಮಾತ್ಮನಲ್ಲಿ ಇರುವುದರಿಂದ ಪ್ರಕೃತಿ ಎನಿಸುತ್ತಾನೆ.

ಪ್ರತಿಪದಾರ್ಥ -- ಪ್ರಕೃತಿಶಬ್ದದಿಂದ ಪರಮಾತ್ಮನು ವಾಚ್ಯನಾಗುವುದಿಲ್ಲ. ಏಕೆಂದರೆ ಪ್ರಕೃತಿಶಬ್ದವು ಸ್ತ್ರೀಲಿಂಗವಾಗಿದೆ. ಪರಮಾತ್ಮನಾದರೂ ಪುರುಷನಾಗಿದ್ದಾನೆ. ಪುರುಷನಲ್ಲಿ ಸ್ತ್ರೀಲಿಂಗ ಶಬ್ದವು ಹೇಗೆ ಬರುತ್ತದೆ ? ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟದೆ. –

ಅವ್ಯವಧಾನೇನ = ವ್ಯವಧಾನವಿಲ್ಲದೇ ತನ್ನ ದೇಹದಿಂದ, ಉತ್ಪತ್ತಿ ದ್ವಾರತ್ವಂ = ಸಂತಾನದ ಉತ್ಪತ್ತಿಗೆ ಕಾರಣವಾಗುವುದೇ, ಪ್ರಕೃತಿತ್ವಂ = ಸ್ತ್ರೀತ್ವ ಎನಿಸುತ್ತದೆ. ತಚ್ಚ = ಇಂತಹ ಸ್ತ್ರೀತ್ವವು, ಅಸ್ಯೈವ = ಈ ಪರಮಾತ್ಮನಲ್ಲಿ, ಗೀಯತೇ ಹಿ = ಹೇಳಲ್ಪಟ್ಟದೆಯಷ್ಟೇ. ಧೀರಾ = ಜ್ಞಾನಿಗಳು, ಯದ್ಭೂತಯೋನಿಂ = ಯಾವ ಭೂತಗಳ ಜನನಕಾರಣವನ್ನಾಗಿ ಶ್ರೀಹರಿಯನ್ನು, ಪರಿಪಶ್ಯಂತಿ = ವಿಚಾರರೂಪವಾಗಿ ಸವಿಯುತ್ತಾರೋ, ಇತಿ = ಹೀಗೆ ಮುಂಡಕೋಪನಿಷತ್ತು ಹೇಳಿದೆ.

**भाष्यम् – 'व्यवधानेन सूतिस्तु पुंस्त्वं विद्भिरुच्यते ।**
**सूतिरव्यवधानेन प्रकृतित्वमिति स्थितिः ।।**
**उभयात्मकसूतित्वात् वासुदेवः परः पुमान् ।**
**प्रकृतिः पुरुषश्चेति शब्दैरेकोऽभिधीयते' ।। इति ब्रह्माण्डे ।।९।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये प्रकृत्यधिकरणम् ।। ६ ।।**

ಅನುವಾದ - ಸ್ತ್ರೀಯ ಮೂಲಕ ಸಂತಾನೋತ್ಪತ್ತಿಗೆ ಕಾರಣವಾಗುವುದೇ ಪುಂಸ್ತ್ವ ಎಂದು ಜ್ಞಾನಿಜನರುಹೇಳುತ್ತಾರೆ. ನೇರವಾಗಿಸಂತಾನೋತ್ಪತ್ತಿಗೆಕಾರಣವಾಗುವುದೇಪ್ರಕೃತಿತ್ವವೆಂಬುದು

ಸಿದ್ಧವಾದ ವಿಚಾರ. ಪರಮಾತ್ಮನು ಎರಡೂ ರೀತಿಯ ಸಂತಾನೋತ್ಪತ್ತಿಗೆ ಕಾರಣವಾಗಿರುವುದರಿಂದ ಪುರುಷೋತ್ತಮನಾದ ವಾಸುದೇವನು ಸ್ತ್ರೀಯೂ ಆಗುತ್ತಾನೆ, ಪುರುಷನೂ ಆಗುತ್ತಾನೆ. ಸ್ತ್ರೀಲಿಂಗ ಶಬ್ದಗಳಿಂದ ಮತ್ತು ಪುಲ್ಲಿಂಗ ಶಬ್ದಗಳಿಂದ ಪ್ರತಿಪಾದನ್ಯಾಗುತ್ತಾನೆ. ಹೀಗೆ ಬ್ರಹ್ಮಾಂಡ ಪುರಾಣ ಹೇಳಿದೆ.

ಪ್ರತಿಪದಾರ್ಥ -- ಅವ್ಯವಧಾನದಿಂದ ಉತ್ಪತ್ತಿಗೆ ಕಾರಣವಾಗಿರುವಿಕೆಯನ್ನು ಸ್ತ್ರೀ ಎಂದು ಏಕೆ ಹೇಳಬೇಕು. ಅದನ್ನೇ ಸ್ತ್ರೀಲಿಂಗಶಬ್ದ ಪ್ರವೃತ್ತಿನಿಮಿತ್ತವೆಂದು ತಿಳಿದು, ಅದು ವಿಷ್ಣುವಿನಲ್ಲಿದೆ ಎಂದು ಹೇಗೆ ಸಿದ್ಧವಾಗುತ್ತದೆ? ಈ ಆಶಂಕೆಗೆ ಉತ್ತರಿಸುತ್ತಿದ್ದಾರೆ. –

ವ್ಯವಧಾನೇನ = ವ್ಯವಧಾನದಿಂದ, ಸೂತಿಃ = ಸಂತಾನೋತ್ಪತ್ತಿಗೆ ಕಾರಣವಾಗಿರುವಿಕೆಯು ಪುಂಸ್ತ್ವಂ = ಪುರುಷತ್ವವೆಂದು, ವಿದ್ವದ್ಭಿಃ = ಜ್ಞಾನಿ ಜನರಿಂದ, ಉಚ್ಯತೇ = ಹೇಳಲ್ಪಟ್ಟಿದೆ. ಅವ್ಯವಧಾನೇನ= ವ್ಯವಧಾನವಿಲ್ಲದೇ,ಸೂತಿಃ= ಸಂತಾನೋತ್ಪತ್ತಿಗೆ ಕಾರಣವಾಗುವಿಕೆಯನ್ನು, ಪ್ರಕೃತಿತ್ವಂ = ಪ್ರಕೃತಿತ್ವ ಎಂದು, (ಸ್ತ್ರೀಲಿಂಗಶಬ್ದ ಪ್ರತಿಪಾದ್ಯವೆಂಬುದು) ಇತಿ ಸ್ಥಿತಿಃ = ಇದು ವಸ್ತುಸ್ಥಿತಿಯು. ಪರಃ = ಸರ್ವೋತ್ತಮನಾದ, ವಾಸುದೇವಃ = ವಾಸುದೇವನು, ಉಭಯಾತ್ಮಕಸೂತಿತ್ವಾತ್ = ನೇರವಾಗಿ ಮತ್ತು ಪರಂಪರೆಯಿಂದ ಸಂತಾನೋತ್ಪತ್ತಿಗೆ ಕಾರಣನಾಗುವುದರಿಂದ, ಪುಮಾನ್ = ಪುರುಷನೆಂದು, ಪ್ರಕೃತಿಃ = ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯನೆಂದು, ಪುರುಷಶ್ಚ = ಪುರುಷನೆಂದೂ ಕೂಡ, ಏಕಃ = ಒಬ್ಬನೇ, ಶಬ್ದೈಃ = ಸ್ತ್ರೀಲಿಂಗ ಮತ್ತು ಪುರುಷಲಿಂಗ ಶಬ್ದಗಳಿಂದ, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ, ಇತಿ = ಹೀಗೆ, ಬ್ರಹ್ಮಾಂಡೇ = ಬ್ರಹ್ಮಾಂಡ ಪುರಾಣದಲ್ಲಿ ಹೇಳಲಾಗಿದೆ.

ಇಲ್ಲಿಗೆ ಪ್ರಕೃತ್ಯಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तथापि न प्रकृतिशब्दवाच्यत्वं परमात्मनो युज्यते । तस्य स्त्रीलिङ्गत्वादित्याशङ्कां परिहरत्सूत्रमुपन्यस्य व्याचष्टे – योनिश्चेति ॥**

ಹಿಂದಿನ ಸೂತ್ರದಲ್ಲಿ ಹೇಳಿದ ಎಲ್ಲಾ ಕಾರಣಗಳನ್ನು ಒಪ್ಪಿಕೊಂಡರೂ ಕೂಡ ಪ್ರಕೃತಿಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲ. ಏಕೆಂದರೆ ಪ್ರಕೃತಿ ಎಂಬ ಶಬ್ದವು ಸ್ತ್ರೀಲಿಂಗದಲ್ಲಿದೆ. ಪುರುಷನಾದ ಪರಮಾತ್ಮನು ಸ್ತ್ರೀಲಿಂಗಶಬ್ದದಿಂದ ಹೇಗೆ ತಾನೇ ಪ್ರತಿಪಾದ್ಯನಾಗುತ್ತಾನೆ ? ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಉಲ್ಲೇಖಿಸಿ, ವ್ಯಾಖ್ಯಾನ ಮಾಡುತಿದ್ದಾರೆ 'ಯೋನಿಶ್ಚ' ಇತ್ಯಾದಿಯಾಗಿ.

**तत्वप्रकाशिका – स्वदेहादेवापत्योत्पादकत्वं हि प्रकृत्यादिस्त्रीलिङ्गप्रयोगे निमित्तम् ।**

'ತನ್ನ ಶರೀರದಿಂದಲೇ ಪುತ್ರೋತ್ಪತ್ತಿಯಾಗುವುದು' ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತ. ಸ್ತ್ರೀಲಿಂಗ ಶಬ್ದವಾದ ಇದನ್ನು ಈ ಪ್ರವೃತ್ತಿನಿಮಿತ್ತ ಇದ್ದಲ್ಲಿ ಮಾತ್ರ ಲೋಕದಲ್ಲಿ ಪ್ರಯೋಗಿಸುತ್ತಾರೆ.

**तत्वप्रकाशिका – स्वदेहादेवोत्पादकश्च परमात्मा 'यद्भूतयोनिम्' इति श्रुतौ गीयते । योनिशब्दस्य तदर्थत्वात् । अतः स्त्रीलिङ्गप्रयोगोऽपीश्वरे युज्यत इति भावः।**

ಪರಮಾತ್ಮನು ತನ್ನ ದೇಹದಿಂದಲೇ ಅಪತ್ಯೋತ್ಪಾದಕನಾಗಿರುವುದರಿಂದ ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತವು ಅವನಲ್ಲಿ ಯುಕ್ತವಾಗುತ್ತದೆ. 'ಯದ್ಭೂತಯೋನಿಮ್' ಎಂಬ ಶ್ರುತಿಯು ಇದನ್ನೇ ಹೇಳುತ್ತಿದೆ. ಶ್ರುತಿಯಲ್ಲಿರುವ ಯೋನಿ ಶಬ್ದಕ್ಕೆ ತನ್ನ ದೇಹದಿಂದ ಉತ್ಪತ್ತಿ ಮಾಡುವಿಕೆ ಎಂದರ್ಥ. ಇಂತಹ ಯೋನಿ ಶಬ್ದದಿಂದ ಪ್ರತಿಪಾದ್ಯನಾದ ಪರಮಾತ್ಮನಲ್ಲಿ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವು ಸುತರಾಂ ಉಪಪನ್ನವಾಗುತ್ತದೆ. ಆದ್ದರಿಂದ ಸ್ತ್ರೀಲಿಂಗಶಬ್ದಗಳ ಪ್ರಯೋಗವು ಬೇರೆ ಪುರುಷರಲ್ಲಿ ಅಯುಕ್ತವಾಗಿದ್ದರೂ ಈಶ್ವರನಲ್ಲಿ ಅತ್ಯಂತ ಸಮಂಜಸವಾಗಿ ಉಪಪನ್ನವಾಗುತ್ತದೆ.

**तत्वप्रकाशिका – अव्यवधानेन उत्पत्तिकर्तृत्वं प्रकृत्यादिस्त्रीलिङ्गप्रयोगनिमित्तं कुतः? इत्याशङ्कां परिहर्तुं सूत्रार्थे स्मृतिं चाऽऽह – व्यवधानेनेति ।।**

ಪ್ರಕೃತಿಶಬ್ದಕ್ಕೆ ತನ್ನ ದೇಹದಿಂದ ಪುತ್ರೋತ್ಪತ್ತಿ ಮಾಡುವಿಕೆ ಎಂಬುದಷ್ಟೇ ಪ್ರವೃತ್ತಿನಿಮಿತ್ತವಲ್ಲ. ಮತ್ತೊಂದನ್ನು ಅಪೇಕ್ಷಿಸದೇ (ವ್ಯವಧಾನವಿಲ್ಲದೆ) ಪುತ್ರೋತ್ಪತ್ತಿ ಕರ್ತೃತ್ವವು ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಇಂತಹ ಸಂದರ್ಭದಲ್ಲಿ ಮಾತ್ರ ಸ್ತ್ರೀಲಿಂಗಶಬ್ದವನ್ನು ಲೋಕದಲ್ಲಿ ಪ್ರಯೋಗಿಸುತ್ತಾರೆ. ಇದನ್ನು ಪರಮಾತ್ಮನಲ್ಲಿ ಹೇಗೆ ಹೇಳುತ್ತೀರಿ? ಈ ಆಶಂಕೆಯನ್ನು ಪರಿಹರಿಸಲು ಸೂತ್ರದ ಅರ್ಥದಲ್ಲಿ ಸ್ಮೃತಿಪ್ರಮಾಣವನ್ನು 'ವ್ಯವಧಾನೇನ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**तत्वप्रकाशिका – सूतिः सूतिकर्तृत्वं भगवतः । स्त्रीरूपत्वाच्च तच्छब्दोपपत्तिः। निषेधस्तु अज्ञेयतामात्रार्थः । तस्मात् विष्णुरेवाशेषस्त्रीशब्दवाच्य इति युक्तमेव तत्समन्वयसूत्रमिति सिद्धम् ।।६।।**

**।। इति श्रीमज्जयतीर्थभिक्षुविरचितायां तत्वप्रकाशिकायाम् प्रकृत्यधिकरणम् ।।**

'ಸೂತಿ' ಶಬ್ದಕ್ಕೆ ಭಗವಂತನಲ್ಲಿರುವ 'ಉತ್ಪಾದನಕರ್ತೃತ್ವ' ಎಂದರ್ಥ. ಭಗವಂತನು ಸ್ತ್ರೀರೂಪವನ್ನೂ ಕೂಡ ಹೊಂದಿರುವುದರಿಂದ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. 'ನೈನಂ ವಾಚಾ ಸ್ತ್ರಿಯಂ ಬ್ರುವನ್' ಎಂಬ ನಿಷೇಧವು ಪರಮಾತ್ಮನು ಕೇವಲ ಸ್ತ್ರೀರೂಪದಿಂದಷ್ಟೇ ಜ್ಞೇಯನಲ್ಲ ಎಂಬ ತಾತ್ಪರ್ಯದ್ಯೋತಕವಾಗಿದೆ. ಆದ್ದರಿಂದ ವಿಷ್ಣುವೇ ಸಕಲ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂಬ ಸಮನ್ವಯಸೂತ್ರದ ಪ್ರತೀತಿಯು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪ್ರಕೃತ್ಯಧಿಕರಣ ಮುಗಿಯಿತು
ಪ್ರಕೃತ್ಯಧಿಕರಣ (೧-೪-೬)

## ಭಾವದೀಪ

अव्यवधानेनेत्यादिभाष्यम् उत्पादनं स्वदेहाच्चेत्यनुभाष्यदिशा व्याचष्टे ।। **स्वदेहादेवेति** ।। प्रलये स्वोदरे निवेशितस्य ब्रह्मादिप्राणिजातस्य स्थूलदेहविशिष्टतया जनकत्वमित्यर्थः ।

'ಅವ್ಯವಧಾನೇನ' ಇತ್ಯಾದಿ ಭಾಷ್ಯವನ್ನು 'ಉತ್ಪಾದನಂ ಸ್ವದೇಹಾಚ್ಚ' ಇತ್ಯಾದಿ ಅನುವ್ಯಾಖ್ಯಾನಕ್ಕೆ ಅನುಸಾರಿಯಾಗಿ 'ಸ್ವದೇಹಾತ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಬ್ರಹ್ಮಾದಿಜೀವರು ಪ್ರಳಯಕಾಲದಲ್ಲಿ ತನ್ನ ಉದರದಲ್ಲಿರುತ್ತಾರೆ. ಅವರಿಗೆ ಸ್ಥೂಲದೇಹವನ್ನು ನೀಡುವ ಮೂಲಕ ಸೃಷ್ಟಿ ಮಾಡುತ್ತಾನೆ ಎಂದು 'ಸ್ವದೇಹಾತ್' ಇತ್ಯಾದಿ ವಾಕ್ಯದ ಅಭಿಪ್ರಾಯ.

**भावदीपः – प्रकृतित्वमित्येतदुपलक्षणमिति भावेनाह – प्रकृत्यादीति** ।। नैनं वाचेति श्रुतिविरोधं निराह – **निषेधस्त्विति** ।।

'ಪ್ರಕೃತಿತ್ವ' ಎಂಬುದು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ 'ಪ್ರಕೃತ್ಯಾದಿ' ಎಂಬ ಟೀಕೆಯು ಹೊರಟಿದೆ. 'ನೈನಂ ವಾಚಾ' ಇತ್ಯಾದಿ ಶ್ರುತಿವಿರೋಧವನ್ನು 'ನಿಷೇಧಸ್ತು' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

**भावदीपः – तस्मादिति** ।। साधकभावाद्बाधका-भावाच्चेत्यर्थः । युक्तमेवेति फलोक्तिः ।।६।।

।। इति श्रीराघवेन्द्रयतिकृते भावदीपे प्रकृत्यधिकरणम् ।।

'ತಸ್ಮಾತ್' ಎಂದರೆ ಸಾಧಕ ಪ್ರಮಾಣವಿರುವುದರಿಂದ ಬಾಧಕ ಪ್ರಮಾಣವಿಲ್ಲದ್ದರಿಂದ ಎಂದರ್ಥ. ಅಧಿಕರಣದ ಫಲವನ್ನು 'ಯುಕ್ತಮೇವ' ಎಂದು ಹೇಳಿದ್ದಾರೆ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಪ್ರಕೃತ್ಯಧಿಕರಣ ಮುಗಿಯಿತು

## ಪ್ರಕೃತ್ಯಧಿಕರಣ
## (೧-೪-೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ प्रकृत्यधिकरणम्

ಆಕ್ಷೇಪಿಕೀ ಸಂಗತಿ ಹಾಗೂ ತದರ್ಥಚಿಂತೆಗಳು

**।। प्रकृतिश्च प्रतिज्ञादृष्टान्तानुपरोधात् ।। युक्ते रूपविशेषात् व्यक्तयव्यक्ती। स्त्रीत्वपुंस्त्वे त्वेकस्मिन्न युक्ते इत्याक्षेपादनन्तरसङ्गतिः ।**

ಅನುವಾದ - 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದಿಂದ ಪ್ರಕೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಆಕಾಶಾಧಿಕರಣದಿಂದ ಆನಂತರ್ಯಸಂಗತಿಯನ್ನು ಇದು ಹೊಂದಿರುತ್ತದೆ. ಭಗವಂತನ ಕೆಲವು ರೂಪಗಳು ವ್ಯಕ್ತವಾಗಿರುತ್ತವೆ. ಇನ್ನೂ ಕೆಲವು ಅವ್ಯಕ್ತವಾಗಿರುತ್ತವೆ. ಆದ್ದರಿಂದ ಒಬ್ಬನೇ ಪರಮಾತ್ಮನಲ್ಲಿ ಅಭಿವ್ಯಕ್ತಿ ಹಾಗೂ ಅನಭಿವ್ಯಕ್ತಿಗಳನ್ನು ರೂಪವಿಶೇಷಾಭಿಪ್ರಾಯದಿಂದ ಆಕಾಶಾಧಿಕರಣದಲ್ಲಿ ಸಮರ್ಥಿಸಲಾಯಿತು. ಆದರೆ ಒಬ್ಬನೇ ಪರಮಾತ್ಮನಲ್ಲಿ ಸ್ತ್ರೀತ್ವ ಹಾಗೂ ಪುಂಸ್ತ್ವಗಳನ್ನು ಸಮರ್ಥಿಸಲು ಸಾಧ್ಯವಿಲ್ಲ. ಹೀಗೆ ಆಕ್ಷೇಪ ಮಾಡುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು.

(ಹಿಂದಿನ ಸಮಾಕರ್ಷಾಧಿಕರಣದಿಂದ ಸಂಗತಿಯನ್ನು ತೋರಿಸಿರುವುದಿಲ್ಲ. ಏಕೆಂದರೆ ಹಿಂದಿನ ಅಧಿಕರಣವು ಪ್ರತ್ಯೇಕ ನ್ಯಾಯಾಂತರ ಸೂಚಕವಾದ್ದರಿಂದ ಪ್ರತ್ಯೇಕ ಅಧಿಕರಣವಾಗಿದ್ದರೂ ಆಕಾಶಾಧಿಕರಣದ ಶೇಷತ್ವವೂ ಕೂಡ ಇರುತ್ತದೆ. ಯಾವಾಗ ಆಕಾಶಾಧಿಕರಣದ ಶೇಷವಾಗುತ್ತದೋ, ಆವಾಗ ಆಕಾಶಾಧಿಕರಣದಿಂದಲೇ ಪ್ರಕೃತ್ಯಧಿಕರಣಕ್ಕೆ ಸಂಗತಿಯನ್ನು ತೋರಿಸಬೇಕಾಗುತ್ತದೆ.)

**अत्र प्रकृत्यादिशब्दाः किमन्यपराः किं वा ब्रह्मपरा इति चिन्ता । तदर्थं स्त्रीलिङ्गस्य ब्रह्मणि किमर्थसाधुत्वं न युक्तमुत युक्तमिति । तदर्थं किं प्रसिद्धमेव स्त्रीत्वमर्थसाधुत्वनिमित्तमुतान्यदिति ।**

ಸಂಶಯಕೋಟಿಗಳು ಹೀಗಿವೆ - ಪ್ರಕೃತಿ ಮೊದಲಾದ ಶಬ್ದಗಳು ಬೇರೆ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೋ ? ಎಂಬುದು ಪ್ರಧಾನಸಂಶಯ. ಆದಕ್ಕಾಗಿ ಸ್ತ್ರೀಲಿಂಗವಾದ ಶಬ್ದಗಳು ಬ್ರಹ್ಮನಲ್ಲಿ ಅರ್ಥ ಸಾಧುವಾಗುವುದಿಲ್ಲವೋ? ಅಥವಾ ಸಾಧುವಾಗುತ್ತವೋ? ಎಂಬ ಸಂಶಯ ಪರಿಹಾರವಾಗಬೇಕು. ಆದಕ್ಕಾಗಿ ಪ್ರಸಿದ್ಧವಾದ ಸ್ತ್ರೀತ್ವವೇ ಅರ್ಥಸಾಧುತ್ವಕ್ಕೆ ನಿಮಿತ್ತವೋ ಅಥವಾ ಬೇರೆಯದ್ದೋ? ಎಂಬ ಸಂಶಯವು ಪರಿಹಾರವಾಗಬೇಕು.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – प्रकृतिश्च प्रतिज्ञादृष्टान्तानुपरोधात् ।।** अत्र सूत्रे प्रकृतिशब्दस्य प्रधानस्त्रीनामतया प्राधान्येनान्योपलक्षकतयोपादानात् स्त्रीलिङ्गाः प्रकृत्यादिशब्दा उदाहरणमिति प्रागेव व्यक्तम् ।

ವಿವರಣೆ - 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬುದಾಗಿ ಪ್ರಕೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಸೂತ್ರದಲ್ಲಿ ಪ್ರಕೃತಿಯೆಂಬ ಸ್ತ್ರೀಲಿಂಗವಾದ ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಎಲ್ಲಾ ಸ್ತ್ರೀವಾಚಕಶಬ್ದಗಳಲ್ಲಿಯೂ ಪ್ರಕೃತಿಶಬ್ದವೇ ಪ್ರಧಾನವಾಗಿದೆ. ಪ್ರಧಾನವಾದ ಪ್ರಕೃತಿಶಬ್ದವನ್ನು ಉಲ್ಲೇಖಿಸುವ ಮೂಲಕ ಉಳಿದ ಸ್ತ್ರೀವಾಚಕಶಬ್ದಗಳನ್ನು ಉಪಲಕ್ಷಣಯಾ ಸೂತ್ರಕಾರರು ಸ್ವೀಕರಿಸಿದ್ದಾರೆ. ಆದ್ದರಿಂದ ಪ್ರಕೃತಿ ಮೊದಲಾದ ಸ್ತ್ರೀವಾಚಕ ಸಕಲಶಬ್ದಗಳನ್ನು ಈ ಅಧಿಕರಣದ ವಿಷಯವೆಂದು ತಿಳಿಯಬೇಕು. ಇದನ್ನು ಹಿಂದೆ ನಾವು ಸ್ಪಷ್ಟಪಡಿಸಿದ್ದೇವೆ.

**प्रकाशः –** अत्र तत्वप्रदीपे ''यद्यपि परत्वावरत्वादिकमपेक्षाभेदादेकत्र युगपदुपलभ्यते । एकत्र बहुभावः कार्यकारणभावश्च कथञ्चिद्युज्यते । न तथा स्त्रीपुंभावो युगपदेकत्र दृष्टः'' इत्युक्तम् ।

ಈ ಅಧಿಕರಣದ ತತ್ವಪ್ರದೀಪದ ವಾಕ್ಯ ಹೀಗಿದೆ - 'ಯದ್ಯಪಿ ಪರತ್ವಾವರತ್ವಾದಿಕಮಪೇಕ್ಷಾಭೇದಾ-ದೇಕತ್ರ ಯುಗಪದುಪಲಭ್ಯತೇ । ಏಕತ್ರ ಬಹುಭಾವಃ ಕಾರ್ಯಕಾರಣಭಾವಶ್ಚ ಕಥಂಚಿದ್ಯುಜ್ಯತೇ । ನ ತಥಾ ಸ್ತ್ರೀಪುಂಭಾವೋ ಯುಗಪದೇಕತ್ರ ದೃಷ್ಟಃ' 'ಒಬ್ಬನೇ ಪರಮಾತ್ಮನಲ್ಲಿ ಪರತ್ವ, ಅವರತ್ವ ಎಂಬೆರಡು ವಿರುದ್ಧಧರ್ಮಗಳು ಅಪೇಕ್ಷಾಬುದ್ಧಿಪ್ರಯುಕ್ತವಾಗಿ ಯುಕ್ತವಾಗುತ್ತವೆ. ಮತ್ತು ಒಬ್ಬನೇ ಪರಮಾತ್ಮನಲ್ಲಿ ರೂಪವಿಶೇಷದ ವಿವಕ್ಷೆಯಿಂದ ಬಹುಭಾವವು, ಕಾರ್ಯಕಾರಣಭಾವವೂ ಕೂಡ ಯುಕ್ತವಾಗುತ್ತದೆ. ಆದರೆ

ಸ್ತ್ರೀತ್ವ ಮತ್ತು ಪುಂಸ್ತ್ವಗಳು ಮಾತ್ರ ಒಬ್ಬನೇ ಪರಮಾತ್ಮನಲ್ಲಿ ಬರಲು ಸಾಧ್ಯವಿಲ್ಲ. ಏಕೆಂದರೆ ಲೋಕದಲ್ಲಿ ಎಲ್ಲಿಯೂ ಕೂಡ ವಿರುದ್ಧವಾದ ಸ್ತ್ರೀತ್ವ ಹಾಗೂ ಪುಂಸ್ತ್ವಗಳು ಒಂದೇ ಕಡೆ ಇರುವುದು ಕಂಡಿರುವುದಿಲ್ಲ' ಹೀಗೆ ಹೇಳಿದ್ದಾರೆ.

**प्रकाशः – तद्विवृतिपूर्वकमाकाशनयेनैव सङ्गतिमाह – युक्ते इति ।। आकाशस्थात् व्यक्तात् स्वरूपादेव, वायूत्पत्तेः प्रागव्यक्तस्य वायुगतरूपस्य वायूत्पत्तौ व्यक्तेः रूपभेदात् युज्यते व्यक्त्यव्यक्तिभावः ।**

ಅದನ್ನೇ ವಿವರಣೆ ಮಾಡುವ ಉದ್ದೇಶದಿಂದ ಈ ಅಧಿಕರಣಕ್ಕೆ ಆಕಾಶಾಧಿಕರಣದಿಂದ ಸಂಗತಿಯನ್ನು 'ಯುಕ್ತೇ ಚ' ಎಂಬುದರಿಂದ ತೋರಿಸುತ್ತಿದ್ದಾರೆ. 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯಗಳಲ್ಲಿ ಆಕಾಶಾದಿಶಬ್ದಗಳಿಂದ ಪರಮಾತ್ಮನನ್ನು ವಿವಕ್ಷಿಸಿದರೆ, ಪರಮಾತ್ಮನಿಂದಲೇ ಪರಮಾತ್ಮನು ಹುಟ್ಟುತ್ತಾನೆ ಎಂದು ಹೇಳಿದಂತಾಗುತ್ತದೆ. ಆದರೆ ಹುಟ್ಟುತ್ತಾನೆ ಎಂದರೆ ಉತ್ಪನ್ನನಾಗುತ್ತಾನೆ ಎಂದರ್ಥವಲ್ಲ. ಹೊರತು, ವ್ಯಕ್ತನಾಗುತ್ತಾನೆ ಎಂದರ್ಥ. ಈ ವ್ಯಕ್ತಿಯೂ ಕೂಡ ಭೇದಸಾಪೇಕ್ಷವಲ್ಲವೇ? ಎಂಬ ಪ್ರಶ್ನೆಗೆ ರೂಪವಿಶೇಷದ ಅಭಿಪ್ರಾಯದಿಂದ ವಿರೋಧವನ್ನು ಪರಿಹರಿಸಲಾಯಿತು. ಒಂದು ರೂಪದಿಂದ ವ್ಯಂಜಕನಾಗುತ್ತಾನೆ. ಮತ್ತೊಂದು ರೂಪದಿಂದ ವ್ಯಕ್ತನಾಗುತ್ತಾನೆ ಎಂದು. ಆದರೆ ಹೀಗೆ ರೂಪವಿಶೇಷದಿಂದ ಸ್ತ್ರೀತ್ವ ಹಾಗೂ ಪುಂಸ್ತ್ವವನ್ನು ನಿರ್ವಾಹ ಮಾಡಲು ಸಾಧ್ಯವಿಲ್ಲವಲ್ಲವೇ? ಹೀಗೆ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು.

'ಆತ್ಮನಃ ಆಕಾಶಃ ಸಂಭೂತಃ' ಎಂಬಲ್ಲಿ ಆತ್ಮನಿಂದ ಆಕಾಶವು ಹುಟ್ಟಿದ್ದು ಎಂದರೆ 'ಆಕಾಶ' ಎಂಬ ರೂಪವು ಅಭಿವ್ಯಕ್ತವಾಯಿತು ಎಂದರ್ಥ. ಯಾವಾಗ ಅವ್ಯಕ್ತವಾದ 'ಆಕಾಶ' ಎಂಬ ರೂಪವು ವ್ಯಕ್ತವಾಯಿತೋ, ಅಂತಹ ವ್ಯಕ್ತವಾದ 'ಆಕಾಶ' ಎಂಬ ರೂಪದಿಂದ ಅವ್ಯಕ್ತವಾದ 'ವಾಯು' ಎಂಬ ರೂಪವು ವ್ಯಕ್ತವಾಗುತ್ತದೆ. ಅದರಂತೆ ವ್ಯಕ್ತವಾದ 'ವಾಯು' ಎಂಬ ರೂಪದಿಂದ 'ಅಗ್ನಿ' ಎಂಬ ರೂಪವು ವ್ಯಕ್ತವಾಗುತ್ತದೆ. ಹೀಗೆ ವ್ಯಕ್ತಿ, ಅವ್ಯಕ್ತಿಗಳನ್ನು ರೂಪವಿಶೇಷದ ವಿವಕ್ಷೆಯಿಂದ ತಿಳಿಯಬೇಕು.

**प्रकाशः – न चैवं प्रकृते । ''स्त्रियः सतीस्ताँ उमे पुंस आहुः'' इति श्रुतेरेकस्मिन्नपि द्वयोस्सत्त्वादित्यर्थः ।**

ಹೀಗೆ ರೂಪವಿಶೇಷದ ವಿವಕ್ಷೆಯಿಂದ ಸ್ತ್ರೀತ್ವ ಮತ್ತು ಪುಂಸ್ತ್ವಗಳನ್ನು ನಿರ್ವಾಹ ಮಾಡಲು ಸಾಧ್ಯವಿಲ್ಲ. ಏಕೆಂದರೆ 'ಸ್ತ್ರಿಯಃ ಸತೀಸ್ತಾಂ ಉಭೇ ಪುಂಸ ಆಹುಃ' (ಭಗವಂತನ ಸ್ತ್ರೀರೂಪಗಳನ್ನು ಪುರುಷರೂಪವೆನ್ನುತ್ತಾರೆ. ಪುರುಷರೂಪವನ್ನು ಸ್ತ್ರೀರೂಪವೆನ್ನುತ್ತಾರೆ. ಹೀಗೆ ಒಂದೇ ರೂಪ ಸ್ತ್ರೀರೂಪವೂ ಆಗುತ್ತದೆ. ಪುರುಷರೂಪವೂ ಆಗುತ್ತದೆ.) ಭಗವಂತನ ಸ್ತ್ರೀರೂಪಗಳೇ ಪುರುಷರೂಪ ಎನಿಸುತ್ತದೆ. ಪುರುಷರೂಪಗಳೇ ಸ್ತ್ರೀರೂಪಗಳೆನಿಸುತ್ತವೆ. ಹೀಗೆ ಒಬ್ಬನೇ ಪರಮಾತ್ಮನಲ್ಲಿ ಸ್ತ್ರೀತ್ವ ಹಾಗೂ ಪುರುಷತ್ವಗಳೆರಡೂ ಇರುತ್ತವೆಂದು ಶ್ರುತಿ ಹೇಳುತ್ತಿದೆ. ಹೀಗೆ ವಿರುದ್ಧವಾದದ್ದನ್ನು ಶ್ರುತಿ ಹೇಗೆ ಹೇಳಲು ಸಾಧ್ಯ ?

**प्रकाशः** – भिन्नाधिकरणत्वपक्षे तु सर्वशब्दानां वृत्तितारतम्यकथनमयुक्तम् । स्त्रीलिङ्गानां भगवति वृत्तेरयोगादित्याक्षेपादिति ध्येयम् ।

ಒಂದುವೇಳೆ ಆಕಾಶಾಧಿಕರಣವೇ ಬೇರೆ, ಸಮಾಕರ್ಷಾಧಿಕರಣವೇ ಬೇರೆ ಎಂಬ ಪಕ್ಷವನ್ನು ವಿವಕ್ಷಿಸಿದರೆ, ಸಮಾಕರ್ಷಾಧಿಕರಣದಿಂದಲೇ ಈ ಪ್ರಕೃತ್ಯಧಿಕರಣಕ್ಕೆ ಸಂಗತಿಯನ್ನು ತೋರಿಸಬೇಕಾಗುತ್ತದೆ. ಅದನ್ನು ಹೀಗೆ ತಿಳಿಯಬೇಕು. ಸಮಾಕರ್ಷಾಧಿಕರಣದಲ್ಲಿ ಸಕಲ ಶಬ್ದಗಳ ವೃತ್ತಿಯಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಸಕಲ ಶಬ್ದಗಳು ಪರಮಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿ ಸಮನ್ವಯಗೊಳ್ಳಬಹುದು. ಆದರೆ ಸ್ತ್ರೀಲಿಂಗವಾದ ಶಬ್ದಗಳು ಭಗವಂತನಲ್ಲಿ ಶಕ್ತಿವೃತ್ತಿಯನ್ನು ಹೊಂದಿರಲು ಸಾಧ್ಯವಿಲ್ಲ. ಈ ಆಕ್ಷೇಪಕ್ಕೆ ಉತ್ತರಿಸಲು ಪ್ರಕೃತ್ಯಧಿಕರಣವು ಹೊರಟಿದೆ ಎಂಬುದಾಗಿ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು.

**प्रकाशः** – एवमेव पूर्वानन्तर्ये वाच्ये तथोक्तिस्तु कारणत्वेनेत्यनेनास्यागतार्थत्वायेति ।

ಹಾಗಾದರೆ ಗ್ರಂಥಕಾರರು ಸಮಾಕರ್ಷಾಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಹಿಂದಿನ ಅಧಿಕರಣದಿಂದ ಸಂಗತಿಯನ್ನು ತೋರಿಸಿದರೆ, 'ಕಾರಣತ್ವೇನ ಚ ಆಕಾಶಾದಿಷು' ಎಂಬ ಅಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ದೋಷವು ಬರುತ್ತಿತ್ತು. ಏಕೆಂದರೆ ಒಬ್ಬನೇ ಪರಮಾತ್ಮನಲ್ಲಿ ರೂಪವಿಶೇಷದ ವಿವಕ್ಷೆಯಿಂದ ವ್ಯಕ್ತಿ ಹಾಗೂ ಅಭಿವ್ಯಕ್ತಿಗಳನ್ನು ಹೇಳಿದಂತೆ ಸ್ತ್ರೀತ್ವ ಹಾಗೂ ಪುಂಸ್ತ್ವಗಳನ್ನು ಹೇಳಬಹುದಲ್ಲವೇ? ಎಂದು. ಈ ಪುನರುಕ್ತಿಯನ್ನು ಪರಿಹರಿಸಲು ಆಕಾಶಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೆ. ವ್ಯಕ್ತಿ ಹಾಗೂ ಅಭಿವ್ಯಕ್ತಿಗಳನ್ನು ರೂಪವಿಶೇಷ ವಿವಕ್ಷೆಯಿಂದ ಕೂಡಿಸಬಹುದಾದರೂ ಸ್ತ್ರೀತ್ವ ಹಾಗೂ ಪುರುಷತ್ವಗಳನ್ನು ಕೂಡಿಸಲು ಸರ್ವಥಾ ಸಾಧ್ಯವಿಲ್ಲ.

**प्रकाशः** – विषयसंशयटीकां व्यनक्ति – अत्रेति ।।''एषा प्रकृतिरविकृतिः'' ''अदितिर्देवतामयी'' इत्यादौ श्रुताः प्रकृत्यादिशब्दा इत्यर्थः ।।

ಇಲ್ಲಿಯ ತನಕ ಪ್ರಕೃತ್ಯಧಿಕರಣಕ್ಕೆ ಸಂಗತಿಯನ್ನು ತೋರಿಸಿದ್ದಾಯಿತು. ಈಗ ವಿಷಯ ಹಾಗೂ ಸಂಶಯಗಳನ್ನು ಪ್ರತಿಪಾದನೆ ಮಾಡುವ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. 'ಏಷಾ ಪ್ರಕೃತಿರವಿಕೃತಿಃ' ಎಂಬಲ್ಲಿ ಶ್ರುತವಾದ ಪ್ರಕೃತಿ ಎಂಬ ಶಬ್ದವು 'ಅದಿತಿರ್ದೇವತಾಮಯೀ' ಎಂಬಲ್ಲಿ ಶ್ರುತವಾದ 'ಅದಿತಿ' ಎಂಬ ಶಬ್ದವು ಈ ಅಧಿಕರಣದ ವಿಷಯವಾಗಿದೆ ಎಂದು ತಿಳಿಯಬೇಕು.

**प्रकाशः** – अन्यपरा इति ।। यद्यपि टीकायां प्रकृत्यादिशब्दवाच्यं विष्णुरन्यद्वेत्येव चिन्ता प्रदर्शिता । युक्ता चैवमेव चिन्ता । प्रवृत्तिनिमित्तवत्त्वेनार्थसाधुत्वचिन्ताया मुख्यवृत्तिहेतुत्वात् ।

ಪ್ರಶ್ನೆ - ಟೀಕೆಯಲ್ಲಿ ಪ್ರಕೃತ್ಯಾದಿ ಶಬ್ದವಾಚ್ಯನಾದವನು ವಿಷ್ಣುವೋ ಅಥವಾ ಬೇರೆ ಪದಾರ್ಥವೋ ? ಎಂಬುದಾಗಿ ವಾಚ್ಯತ್ವದ ಸಂದೇಹವನ್ನು ತೋರಿಸಿರುತ್ತಾರೆ. ಆದರೆ ಪ್ರಕೃತ ಗ್ರಂಥಕಾರರು

ತಾತ್ಪರ್ಯವಿಷಯಕವಾದ ಸಂದೇಹವನ್ನು ತೋರಿಸಿದ್ದಾರೆ. ಆದರೆ ಟೀಕೆಯಲ್ಲಿ ಹೇಳಿದಂತೆ ಶಕ್ತಿವೃತ್ತಿಯ ಸಂದೇಹವನ್ನು ತೋರಿಸುವುದೇ ಯುಕ್ತವಾಗುತ್ತದೆ. ಸ್ತ್ರೀಲಿಂಗಶಬ್ದದ ಅರ್ಥಸಾಧುತ್ವಕ್ಕೆ ನಿಮಿತ್ತವಾದ ಸ್ತ್ರೀತ್ವವು ಭಗವಂತನ ಪುರುಷರೂಪಗಳಲ್ಲಿ ಇರುವುದೇ ಇಲ್ಲ. ಹೀಗೆ ನಿಮಿತ್ತವೇ ಇಲ್ಲದ ಕಾರಣ ಶಬ್ದಶಕ್ತಿಯೇ ಕೂಡುವುದಿಲ್ಲವೆಂಬ ಆಕ್ಷೇಪವು ಬರುತ್ತಿರುವಾಗ ತಾತ್ಪರ್ಯವಿಷಯಕ ಸಂದೇಹವನ್ನು ಹೇಗೆ ತೋರಿಸಿದರು? ಸ್ತ್ರೀಲಿಂಗಶಬ್ದವು ಅರ್ಥತಃ ಸಾಧುವಾಗಬೇಕಾದರೆ ಸ್ತ್ರೀತ್ವವು ಪರಮಾತ್ಮನಲ್ಲಿ ಇರಬೇಕು. ಇದಕ್ಕೂ ತಾತ್ಪರ್ಯಕ್ಕೂ ಯಾವುದೇ ವಿಧವಾದ ಸಂಬಂಧವಿರುವುದಿಲ್ಲ. ಆದ್ದರಿಂದ ಶಬ್ದವು ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದ ಬರುತ್ತದೆನ್ನಲು ಹೇತುವಾಗುತ್ತದೆ ಹೊರತು, ತಾತ್ಪರ್ಯಕ್ಕೆ ಹೇತುವಾಗುವುದಿಲ್ಲ. ಆದ್ದರಿಂದ ವಾಚ್ಯತ್ವದ ಚಿಂತೆಯನ್ನು ಬಿಟ್ಟು, ತಾತ್ಪರ್ಯದ ಚಿಂತೆಯನ್ನೇಕೆ ಗ್ರಂಥದಲ್ಲಿ ತೋರಿಸಿದ್ದಾರೆ. ತಾತ್ಪರ್ಯಕ್ಕೆ ಉಪಯುಕ್ತವಾದ ಶಬ್ದಶಕ್ತಿಯನ್ನೇ ನೇರವಾಗಿ ತೋರಿಸಬಹುದಿತ್ತು. ಮತ್ತು ಶಬ್ದಶಕ್ತಿಯು ಸಿದ್ಧವಾದರೂ ತಾತ್ಪರ್ಯಸಿದ್ಧವಾಗಬೇಕೆಂಬ ನಿಯಮವಿರುವುದಿಲ್ಲ.

**प्रकाशः** – तथापि वाच्यत्वसिद्धावपि तात्पर्यं नेत्यपि शङ्काया अवश्यं निराकार्यत्वात् निमित्तसद्भावेनार्थसाधुत्वे सति प्रागुक्तहेतुभिरत्रत्य प्रतिज्ञादृष्टान्तादिरूपहेतुना च तात्पर्यं सेत्स्यतीति भावेन परत्वचिन्तोक्तावपि प्रागुक्तदिशा मुख्यवृत्त्याऽन्यपरा ब्रह्मपरावेत्यत्र तात्पर्यं बोध्यम् । अत एवाग्रे वाच्यो नेत्युक्तिः ।

ಉತ್ತರ - ಅರ್ಥಸಾಧುತ್ವಕ್ಕೆ ನಿಮಿತ್ತವಾದ ಸ್ತ್ರೀತ್ವವು ದೇವರಲ್ಲಿ ಇರುತ್ತದೆ. ಆದ್ದರಿಂದ ಸ್ತ್ರೀಲಿಂಗಶಬ್ದಗಳಿಂದಲೂ ದೇವರು ಪ್ರತಿಪಾದ್ಯನಾಗುತ್ತಾನೆ ಎಂದು ಹೇಳಿದ ಮೇಲೂ ಕೂಡ ತಾತ್ಪರ್ಯವಿಲ್ಲವೆಂಬ ಆಶಂಕೆ ಬರುತ್ತದೆ. ಇದನ್ನು ಅವಶ್ಯವಾಗಿ ನಿರಾಕರಣೆ ಮಾಡಬೇಕು. ಸೂತ್ರದಲ್ಲಿ ಇದರ ಪರಿಹಾರವನ್ನು ಮಾಡಿಲ್ಲವಲ್ಲ ? ಎಂಬ ಆಶಂಕೆಯು ಪ್ರಾಪ್ತವಾದರೆ, ನಿಮಿತ್ತ ಮತ್ತು ಪ್ರಯೋಗ ಎರಡನ್ನೂ ಅನುಸರಿಸಿ 'ಸಾಕ್ಷಾತ್ ಅಭಯಂ ನಾನಾತ್' ಇತ್ಯಾದಿ ಸೂತ್ರಗಳಿಂದ ಸಮರ್ಥನೆ ಮಾಡಿದ್ದಾರೆ ನಿಮಿತ್ತ ಇರುವುದರಿಂದ ಅರ್ಥಸಾಧುತ್ವವನ್ನು ಹೇಳುತ್ತೇವೆ. ಅನಂತರ 'ಚಮಸವದವಿಶೇಷಾತ್' ಇತ್ಯಾದಿ ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳಿಂದ ತಾತ್ಪರ್ಯವನ್ನು ಸೂತ್ರಕಾರರು ಸಮರ್ಥಿಸಿದ್ದಾರೆ. ಅಥವಾ ಗ್ರಂಥದಲ್ಲಿ 'ಮುಖ್ಯವೃತ್ತ್ಯಾ ಅನ್ಯಪರಾ ವಾ ನವಾ' ಎಂದು ಸೇರಿಸಿಕೊಂಡರೆ ಶಕ್ತಿವೃತ್ತಿ ಹಾಗೂ ತಾತ್ಪರ್ಯವೃತ್ತಿ ಎರಡನ್ನೂ ಕೂಡ ಗ್ರಂಥಕಾರರೇ ಹೇಳಿದಂತಾಗುತ್ತದೆ. ಆದ್ದರಿಂದ ಟೀಕೆಯ ವಿರೋಧಕ್ಕೂ ಕೂಡ ಅವಕಾಶವಿಲ್ಲ. ಗ್ರಂಥದಲ್ಲಿ ಹೀಗೆ ಶಕ್ತಿವೃತ್ತಿಯನ್ನು ಸೇರಿಸಿಕೊಳ್ಳುವುದು ತಪ್ಪಲ್ಲ. ಏಕೆಂದರೆ ಮುಂದೆ 'ವಾಚ್ಯೋ ನ' ಎಂಬುದಾಗಿ ಗ್ರಂಥಕಾರರೇ ಪ್ರಯೋಗಿಸಿದ್ದಾರೆ.

**प्रकाशः** – एतेन शक्तितात्पर्यनिर्धारणस्य समन्वयशब्दार्थत्वाट्टीकायां वाच्यत्वमात्रोक्तिरत्र तु तत्परत्वमात्रोक्तिः कथमित्यपि प्रत्युक्तम् । ग्रन्थद्वयेऽप्युभयत्र तात्पर्यादिति ।

ಹೀಗೆ ಹೇಳಿದ್ದರಿಂದ ಶಬ್ದಶಕ್ತಿಯ ನಿರ್ಧಾರ ಹಾಗೂ ತಾತ್ಪರ್ಯದ ನಿರ್ಧಾರ ಎರಡೂ ಕೂಡ ಸಮನ್ವಯಶಬ್ದದ ಅರ್ಥವಾಗಿದೆ ಎಂದು ಹೇಳಿದಂತಾಯಿತು. ಆದ್ದರಿಂದ ಟೀಕಾದಲ್ಲಿ ತಾತ್ಪರ್ಯವನ್ನು ಬಿಟ್ಟು, ಶಕ್ತಿಯನ್ನು ಮಾತ್ರ ಏಕೆ ವಿವಕ್ಷಿಸಿದ್ದಾರೆ. ಮತ್ತು ಪ್ರಕೃತ ಗ್ರಂಥದಲ್ಲಿ ಶಕ್ತಿಯನ್ನು ಬಿಟ್ಟು, ತಾತ್ಪರ್ಯವನ್ನು ಮಾತ್ರ ಏಕೆ ವಿವಕ್ಷಿಸಿದ್ದಾರೆ? ಎಂಬ ಆಶಂಕೆಯನ್ನು ನಿರಾಕರಣೆ ಮಾಡಿದಂತಾಯಿತು. ಟೀಕೆಯಲ್ಲಿ ತಾತ್ಪರ್ಯವಿಷಯಕವಾದ ಸಂದೇಹವನ್ನು ವಿವಕ್ಷಿಸಬೇಕು. ಪ್ರಕೃತ ಗ್ರಂಥದಲ್ಲಿ ಶಕ್ತಿವಿಷಯಕವಾದ ಸಂದೇಹವನ್ನು ವಿವಕ್ಷಿಸಬೇಕು. ಎರಡೂ ಗ್ರಂಥಗಳಿಗೆ ಎರಡೂ ತಾತ್ಪರ್ಯ ಅಭಿಪ್ರಾಯವಿರುತ್ತದೆ.

**प्रकाशः – एवमाद्यसूत्रोपयुक्तचिन्तामुक्त्वा ''योनिश्चहि'' इत्यन्तिमसूत्रोपयुक्तचिन्ताद्वयमाह – तदर्थमिति ।।**

ಇಲ್ಲಿಯತನಕ ಆದ್ಯಸೂತ್ರಕ್ಕೆ ಉಪಯುಕ್ತವಾದ ಸಂದೇಹಪ್ರಕಾರವನ್ನು ಹೇಳಿ, 'ಯೋನಿಶ್ಚಹಿ' ಎಂಬ ಕೊನೆಯ ಸೂತ್ರಕ್ಕೆ ಉಪಯುಕ್ತವಾದ ಎರಡು ಸಂಶಯಗಳನ್ನು 'ತದರ್ಥಮ್' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः – अर्थसाधुत्वमिति ।। अस्त्रीत्वेऽपि ब्रह्मशब्दस्येव शब्दसाधुत्वमात्रेण प्रयोगस्याग्रे निरस्यत्वादर्थसाधुत्वं न युक्तमुत युक्तमित्येव चिन्तोक्ता ।।**

ಭಗವಂತನಿಗೆ ಸ್ತ್ರೀರೂಪವು ಇರಬೇಕಾಗಿಲ್ಲ. ಆದರೂ ಕೂಡ ಸ್ತ್ರೀಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಹೇಗೆಂದರೆ ಭಗವಂತನು ನಪುಂಸಕನಾಗದಿದ್ದರೂ, ನಪುಂಸಕಲಿಂಗವಾದ ಬ್ರಹ್ಮಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಈ ಆಕ್ಷೇಪವನ್ನು ಮುಂದೆ ನಿರಾಕರಣೆ ಮಾಡುತ್ತಾರೆ. ಆದ್ದರಿಂದ 'ಅರ್ಥಸಾಧುತ್ವಂ ನ ಯುಕ್ತಂ ಉತ ಯುಕ್ತಂ' ಎಂಬುದಾಗಿಯೇ ಸಂದೇಹದ ಕ್ರಮವನ್ನು ತೋರಿಸಿದ್ದಾರೆ. ಅಂದರೆ ಶಬ್ದಸಾಧುತ್ವದ ಬಗ್ಗೆ ಪೂರ್ವಪಕ್ಷಿಗೆ ಗೊಂದಲವಿಲ್ಲ. ಅರ್ಥಸಾಧುತ್ವದ ಬಗ್ಗೆ ಮಾತ್ರ ಗೊಂದಲವಿದೆಯೆಂದು ತಿಳಿಯಬೇಕು.

**प्रकाशः – अन्यदिति ।। सूतिहेतुत्वरूपमित्यर्थः । फलफलिभावो व्यक्तः । अत्र यद्यपि प्रसिद्धस्य निमित्तत्वेऽपि तस्य ब्रह्मण्यभावेऽपि स्वातन्त्र्यनिमित्तेन ब्रह्मपराः स्युरेव । तथापि स्वातन्त्र्ये सत्येव तद्गतत्वमुपेत्यैव चिन्ताप्रवृत्तेः प्रागेवोक्तत्वादेवमुक्तम् ।**

'ಅನ್ಯತ್' ಎಂದರೆ ಪ್ರಸೂತಿಹೇತುತ್ವ ಎಂಬುದು ಸ್ತ್ರೀಯಲ್ಲಿರುವ ಮಾತ್ರ ಇರುವಂತಹ ಅಸಾಧಾರಣ ಧರ್ಮ ಎಂದರ್ಥ. ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ಫಲಫಲಿಭಾವವು ಸ್ಪಷ್ಟವಾಗಿ ತಿಳಿಯುತ್ತದೆ - ಪ್ರಸಿದ್ಧವಾದ ಸ್ತ್ರೀತ್ವವೇ ಅರ್ಥಸಾಧುತ್ವಕ್ಕೆ ನಿಮಿತ್ತವೆಂದು ಸಿದ್ಧವಾದರೆ, ಬ್ರಹ್ಮನಲ್ಲಿ ಸ್ತ್ರೀಲಿಂಗಶಬ್ದದ ಅರ್ಥವು ಯುಕ್ತವಾಗುವುದಿಲ್ಲ. ಆವಾಗ ಪ್ರಕೃತ್ಯಾದಿಶಬ್ದಗಳು ಬ್ರಹ್ಮನನ್ನು ಬಿಟ್ಟು, ಲಕ್ಷ್ಮ್ಯಾದಿಗಳನ್ನೇ ಪ್ರತಿಪಾದನೆ ಮಾಡುತ್ತವೆಂಬುದು ಪೂರ್ವಪಕ್ಷದ ಫಲಫಲಿಭಾವ.

ಪ್ರಸಿದ್ಧವಾದ ಸ್ತ್ರೀತ್ವವು ಅರ್ಥಸಾಧುತ್ವಕ್ಕೆ ನಿಮಿತ್ತವಲ್ಲ ಎಂದು ಸಿದ್ಧವಾದರೆ, ಸ್ತ್ರೀಲಿಂಗಶಬ್ದಗಳು ಬ್ರಹ್ಮನಲ್ಲಿಯೂ ಯುಕ್ತವಾಗುತ್ತದೆ. ಆದ್ದರಿಂದ ಪ್ರಕೃತ್ಯಾದಿಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆಂಬುದು ಸಿದ್ಧಾಂತದ ಫಲಫಲಿಭಾವ.

ಪ್ರಶ್ನೆ - ಜಗತ್ತಿನಲ್ಲಿ ಪ್ರಸಿದ್ಧವಾದವುಗಳೇ ಸ್ತ್ರೀಲಿಂಗಶಬ್ದಗಳ ಪ್ರವೃತ್ತಿನಿಮಿತ್ತವಾದರೂ ಕೂಡ ಬ್ರಹ್ಮನಲ್ಲಿ ಅಂತಹ ಪ್ರವೃತ್ತಿನಿಮಿತ್ತವಿರಬೇಕಾಗಿಲ್ಲ. ಆದರೂ ಸ್ತ್ರೀಲಿಂಗಶಬ್ದಗಳು ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಬಹುದಲ್ಲವೇ?

ಉತ್ತರ - ಹೌದು; ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದ ಜೊತೆ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನೂ ಕೂಡ ಒಪ್ಪಿ, ಈ ಸಂದೇಹವು ಪ್ರವೃತ್ತವಾಗುತ್ತಿದೆ ಎಂದು ಈ ಹಿಂದೆಯೇ ಹೇಳಿದ್ದೇವೆ. ಕೇವಲ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ವಿವಕ್ಷಿಸಿದರೆ, ಪರಮಾತ್ಮನಲ್ಲಿ ಅನೇಕ ಗುಣಗಳು ಸಿದ್ಧವಾಗುವುದಿಲ್ಲ. ಅದಕ್ಕೋಸ್ಕರ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಅವಶ್ಯವಾಗಿ ಆಶ್ರಯಿಸಬೇಕು.




ಪ್ರಕೃತ್ಯಧಿಕರಣದಲ್ಲಿ ಎಲ್ಲಾ ಬಗೆಯ ಸ್ತ್ರೀಲಿಂಗಶಬ್ದಗಳನ್ನು ಶ್ರೀಹರಿಯಲ್ಲಿ ಪ್ರತಿಪಾದನೆ ಮಾಡಲಾಗಿದೆ. ಇದರ ಹಿಂದಿನ ಅಧಿಕರಣ ಸಮಾಕರ್ಷಾಧಿಕರಣ. ಆದರೆ ಗ್ರಂಥಕಾರರು ಆಕಾಶಾಧಿಕರಣದಿಂದ ಸಂಗತಿ ತೋರಿಸಿದ್ದಾರೆ. ಕಾರಣವೇನೆಂದರೆ ಸಮಾಕರ್ಷಾಧಿಕರಣದಲ್ಲಿರುವ ಸೂತ್ರಗಳು ಹೊಸ ನ್ಯಾಯವನ್ನು ಹೇಳುತ್ತಿರುವುದರಿಂದ ಪ್ರತ್ಯೇಕ ಅಧಿಕರಣವಾಗಿದ್ದರೂ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರಕ್ಕೆ ಅಂಗಭೂತವೇ ಆಗಿವೆ. ಆದ್ದರಿಂದ ಸಮಾಕರ್ಷಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸದೇ ಆಕಾಶಾಧಿಕರಣದಿಂದ ಸಂಗತಿ ತೋರಿಸಿರುತ್ತಾರೆ. ಆಕಾಶಾಧಿಕರಣದ ರೂಪಗಳಲ್ಲಿ ಭಗವಂತನ ಅಭಿವ್ಯಕ್ತಿತ್ವ ಹಾಗೂ ಅನಭಿವ್ಯಕ್ತಿತ್ವ ಎಂಬೆರಡು ವಿರುದ್ಧ ಧರ್ಮಗಳನ್ನು ಸಮರ್ಥಿಸಿ, 'ಆತ್ಮನಃ ಆಕಾಶ ಸಂಭೂತಃ' ಇತ್ಯಾದಿ ಶ್ರುತಿಗಳಲ್ಲಿರುವ ಆಕಾಶಾದಿಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ಸಮರ್ಥಿಸಲಾಯಿತು. ಇದನ್ನು ಒಪ್ಪಬಹುದು. ಆದರೆ ಒಬ್ಬನೇ ಪರಮಾತ್ಮನಲ್ಲಿ ಸ್ತ್ರೀತ್ವ ಹಾಗೂ ಪುರುಷತ್ವ ಎರಡು ಬಗೆಯ ವಿರುದ್ಧಧರ್ಮಗಳು ಇರಲು ಸಾಧ್ಯವಿಲ್ಲ. ಲೋಕದಲ್ಲಿ ಸ್ತ್ರೀತ್ವವಿದ್ದಲ್ಲಿ ಪುರುಷತ್ವವು ಎಲ್ಲಿಯೂ ಕಂಡಿಲ್ಲ. ಈ ಆಕ್ಷೇಪದ ಪರಿಹಾರಕ್ಕಾಗಿ ಪ್ರಕೃತ್ಯಧಿಕರಣವು ಹೊರಟಿದೆ. ಪರಮಾತ್ಮನು ರಾಮ, ಕೃಷ್ಣ ಮೊದಲಾದ ಪುರುಷರೂಪಗಳನ್ನು ಹೇಗೆ ಪಡೆದಿದ್ದಾನೋ, ಅದರಂತೆ ನಾರಾಯಣೀ, ಮೋಹಿನೀ, ವಡವಾ ಮೊದಲಾದ ಅನೇಕ ಸ್ತ್ರೀರೂಪಗಳನ್ನೂ ಕೂಡ ಪಡೆದಿರುತ್ತಾನೆ. ಭಗವಂತನಿಗೆ ಪುರುಷರೂಪಗಳು ಎಷ್ಟು ಇವೆಯೋ, ಅಷ್ಟೇ ಸ್ತ್ರೀರೂಪಗಳು ನಮ್ಮ ದೇಹದಲ್ಲಿಯೂ ಕೂಡ ಇರುತ್ತವೆಂದು ಉಪನಿಷತ್ತುಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಒಬ್ಬನೇ ಪರಮಾತ್ಮನು ಸ್ತ್ರೀಲಿಂಗನೂ ಆಗುತ್ತಾನೆ. ಪುಲ್ಲಿಂಗನೂ ಆಗುತ್ತಾನೆ. ಶ್ರುತಿಯಲ್ಲಿ 'ಏಷಾ ಹ್ಯೇವ ಪ್ರಕೃತಿಃ' ಇತ್ಯಾದಿಯಾಗಿ ಪ್ರಕೃತ್ಯಾದಿ ಶಬ್ದಗಳು ಕೇಳಿಸುತ್ತಿವೆ. ಈ ಪ್ರಕೃತಿ ಮೊದಲಾದ ಶಬ್ದಗಳು ಸ್ತ್ರೀಯಾದ ಲಕ್ಷ್ಮೀದೇವಿಯನ್ನು ಮಾತ್ರ ಪ್ರತಿಪಾದನೆ ಮಾಡುತ್ತಿರುವುದಲ್ಲ. ಅದಕ್ಕಿಂತಲೂ ಮುಖ್ಯವಾಗಿ ಶ್ರೀಹರಿಯನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಸಮರ್ಥಿಸುವುದೇ ಈ ಅಧಿಕರಣದ ಉದ್ದೇಶ.

ಪ್ರಕೃತ್ಯಾದಿಶಬ್ದಗಳ ಸ್ತ್ರೀತ್ವವೆಂಬ ಪ್ರವೃತ್ತಿನಿಮಿತ್ತವು ಅರ್ಥಸಾಧುತ್ವಕ್ಕೆ ಕಾರಣವಾಗಿದೆ ಎಂದು ಸಿದ್ಧವಾದರೆ ಬ್ರಹ್ಮನಲ್ಲಿ ಅರ್ಥಸಾಧುತ್ವವು ಯುಕ್ತವಾಗದ ಕಾರಣ ಲಕ್ಷ್ಮ್ಯಾದಿಗಳೇ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧವಾಗುತ್ತದೆ. ಇದು ಪೂರ್ವಪಕ್ಷಿಗಳ ಅಭಿಪ್ರಾಯ. ಪ್ರಸಿದ್ಧವಾದ ಸ್ತ್ರೀತ್ವಕ್ಕಿಂತ ವಿಭಿನ್ನವಾದ ಪ್ರವೃತ್ತಿನಿಮಿತ್ತವು ಇರುವುದರಿಂದ ಅರ್ಥಸಾಧುತ್ವವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ ಆದ್ದರಿಂದ ಪ್ರಕೃತ್ಯಾದಿಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

• • • • •

## ಭಗವಂತನ ಪುರುಷರೂಪದಲ್ಲಿ ಸ್ತ್ರೀತ್ವವಿಲ್ಲವೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु । ''एषा ह्येव प्रकृतिरविकृतिः'' इत्यादिवाक्यस्थप्रकृत्यादिशब्दवाच्यो न विष्णुः ।**

ಅನುವಾದ - 'ಏಷಾ ಹ್ಯೇವ ಪ್ರಕೃತಿರವಿಕೃತಿಃ' ಇತ್ಯಾದಿ ಶ್ರುತಿಗಳಲ್ಲಿರುವ ಪ್ರಕೃತಿ ಮೊದಲಾದ ಶಬ್ದಗಳು ಪರಮಾತ್ಮನನ್ನು ಹೇಳುವುದಿಲ್ಲ. ಏಕೆಂದರೆ ಪುರುಷನಾದ ಪರಮಾತ್ಮನು ಸ್ತ್ರೀವಾಚಕ-ಶಬ್ದಗಳಿಂದ ಪ್ರತಿಪಾದ್ಯನಾಗಲಾರ.

**तेषामन्यत्र प्रसिद्धत्वात् । स्त्रीलिङ्गत्वाच्च । परमपुरुषे च स्त्रीत्वायोगात् ।**

ಈ ಪ್ರಕೃತಿ ಮೊದಲಾದ ಶಬ್ದಗಳು ಲಕ್ಷ್ಮೀದೇವಿ ಮೊದಲಾದ ಸ್ತ್ರೀಯರಲ್ಲಿ ಪ್ರಸಿದ್ಧವಾಗಿವೆ. ಶಬ್ದವೂ ಕೂಡ ಸ್ತ್ರೀಲಿಂಗವೇ ಆಗಿದೆ. ಪುರುಷಾಗ್ರಣಿಯಾದ ಪರಮಾತ್ಮನಲ್ಲಿ ಸ್ತ್ರೀತ್ವವು ಸರ್ವಥಾ ಕೂಡುವುದಿಲ್ಲ.

**नच रूपविशेषापेक्षया स्त्रीत्वम् । ''नैनं वाचा स्त्रियं ब्रुवन्'' इति स्त्रीत्वनिषेधात् ।**

ಒಂದು ರೂಪದಿಂದ ಪರಮಾತ್ಮನು ಪುರುಷನಾಗಿದ್ದರೂ, ಮತ್ತೊಂದು ರೂಪದಿಂದ ಸ್ತ್ರೀ ಆಗಿರಬಹುದು. ಹೀಗೆ ರೂಪವಿಶೇಷದ ಅಪೇಕ್ಷೆಯಿಂದ ಸ್ತ್ರೀತ್ವವನ್ನು ಉಪಪಾದನೆ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ನೈನಂ ವಾಚಾ ಸ್ತ್ರಿಯಂ ಬ್ರುವನ್' ಎಂಬುದಾಗಿ ಅದೇ ಶ್ರುತಿಪ್ರಕರಣದಲ್ಲಿ ಪರಮಾತ್ಮನಲ್ಲಿ ಸ್ತ್ರೀತ್ವವನ್ನು ನಿಷೇಧ ಮಾಡಲಾಗಿದೆ.

**नच तत् केवलस्य लौकिकस्य वा स्त्रीत्वस्य निषेधेनाहेयत्वपरम् । अन्यथा ''नैनमस्त्री पुमान् ब्रुवन्'' इत्युत्तरवाक्यविरोधादिति वाच्यम् ।**

'ನೈನಂ ವಾಚಾ' ಎಂಬ ಶ್ರುತಿಯಲ್ಲಿ ಲೌಕಿಕವಾದ ಸ್ತ್ರೀತ್ವವನ್ನಷ್ಟೇ ನಿಷೇಧ ಮಾಡಿದ್ದಾರೆ. ಪರಮಾತ್ಮನು ಹೇಯನಲ್ಲ ಎಂದಷ್ಟೇ ಇದರ ಅಭಿಪ್ರಾಯ. ಹೀಗೊಪ್ಪದಿದ್ದರೆ 'ನೈನಮಸ್ತ್ರೀ ಪುಮಾನ್ ಬ್ರುವನ್' ಎಂಬ ಪರಮಾತ್ಮನು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ ಎಂಬ ಉಭಯನಿಷೇಧ ಮಾಡುವ ವಾಕ್ಯದ ವಿರೋಧವೂ ಬರಬೇಕಾದೀತು ಎಂಬ ಈ ಸಮರ್ಥನೆಯೂ ತಪ್ಪು.

**तथात्वे पुंरूपे स्त्रीशब्दाप्रयोगापातात् ।**

ಹೀಗೆ ಪರಮಾತ್ಮನಲ್ಲಿ ಸ್ತ್ರೀತ್ವವಿರುವುದರಿಂದಲೇ ಸ್ತ್ರೀಶಬ್ದ ವಾಚ್ಯತ್ವವನ್ನು ಹೇಳುವುದಾದರೆ, ಲೋಕದಲ್ಲಿ ಪುಂರೂಪದಲ್ಲಿ ಪ್ರಸಿದ್ಧವಾದ ಸ್ತ್ರೀಶಬ್ದ ಪ್ರಯೋಗವು ಬಾರದಿರಬೇಕಾದೀತು.

**ब्रह्मणि नपुंसकलिङ्गब्रह्मादिशब्दप्रयोगस्तु नपुंसकलिङ्गस्यार्थसाधुत्वाभावेऽपि कलत्रादिशब्देष्विव प्रयोगसाधुत्वायुक्तः ।**

ಆದ್ದರಿಂದ ಬ್ರಹ್ಮನಲ್ಲಿ ಯಾವಕಾರಣದಿಂದ ಸ್ತ್ರೀತ್ವವಿಲ್ಲವೋ, ಅದೇ ಕಾರಣದಿಂದ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವೂ ಕೂಡ ಬರುವುದಿಲ್ಲ. ಹಾಗಾದರೆ ನಪುಂಸಕಶಬ್ದ ಪ್ರಯೋಗಗಳನ್ನು ಬ್ರಹ್ಮನಲ್ಲಿ ಹೇಗೆ ಉಪಪಾದನೆ ಮಾಡುತ್ತೀರಿ? ಎಂದರೆ ಕೇವಲ ಅರ್ಥಸಾಧುತ್ವದ ವಿವಕ್ಷೆಯಿಂದ ನಪುಂಸಕಲಿಂಗಶಬ್ದಪ್ರಯೋಗವು ಯುಕ್ತವಾಗುತ್ತದೆ. ಹೇಗೆಂದರೆ ಹೆಂಡತಿ ಎಂಬ ಅರ್ಥದಲ್ಲಿ ಕಲತ್ರ ಶಬ್ದವನ್ನು ಪ್ರಯೋಗ ಮಾಡುತ್ತೇವೆ. ಹೆಂಡತಿಯಲ್ಲಿ ನಪುಂಸಕಲಿಂಗತ್ವ ಇಲ್ಲದಿದ್ದರೂ ನಪುಂಸಕಲಿಂಗಶಬ್ದವಾದ 'ಕಲತ್ರ' ಎಂಬ ಶಬ್ದವನ್ನು ಪ್ರಯೋಗ ಮಾಡುವಂತೆ ಪರಮಾತ್ಮನಲ್ಲಿ ಸ್ತ್ರೀತ್ವವಿಲ್ಲದಿದ್ದರೂ ಸ್ತ್ರೀಲಿಂಗಶಬ್ದವನ್ನು ಪ್ರಯೋಗ ಮಾಡಬಹುದು.

**नच प्रकृत्यादिशब्दे स्त्रीलिङ्गस्य चित्प्रकृत्यादावर्थसाधुत्वे सम्भवति देवताखट्वादिशब्देष्विव प्रयोगसाधुत्वं युक्तम् ।**

ಪ್ರಕೃತ್ಯಾದಿಶಬ್ದಗಳಿಗೆ ಅರ್ಥಸಾಧುತ್ವವಿಲ್ಲದಿದ್ದರೂ ಕೇವಲ ಪ್ರಯೋಗಸಾಧುತ್ವವನ್ನು ಹೇಳಬಾರದು. ಏಕೆಂದರೆ ಸ್ತ್ರೀಲಿಂಗಶಬ್ದಗಳಾದ ಪ್ರಕೃತ್ಯಾದಿಶಬ್ದಗಳು ಅರ್ಥತಃ ಸಾಧುವೇ ಆಗುತ್ತವೆ. ಹೀಗಿರುವಾಗ ದೇವತಾ, ಖಟ್ವಾ ಮೊದಲಾದ ಶಬ್ದಗಳಂತೆ ಕೇವಲ ಪ್ರಯೋಗಸಾಧುತ್ವವನ್ನು ಹೇಳಬಾರದು.

**''अरुणया क्रीणाति पशुना यजेत'' इत्यादावपि तत्प्रसङ्गात् ।**

'ಅರುಣಯಾ ಏಕಹಾಯನ್ಯಾ ಪಿಂಗಾಕ್ಷ್ಯಾ ಗವಾ ಸೋಮಂ ಕ್ರೀಣಾತಿ' ಎಂಬಲ್ಲಿ ಗೋಶಬ್ದವು ಸ್ತ್ರೀಲಿಂಗವೂ ಆಗಬಹುದು. ಪುಲ್ಲಿಂಗವೂ ಆಗಬಹುದು. ಆದರೆ ವಿಶೇಷಣಗಳೆಲ್ಲವೂ ಸ್ತ್ರೀಲಿಂಗವೇ ಆಗಿವೆ. ಮೀಮಾಂಸಕರು ವಿಶೇಷಣದ ಬಲದಿಂದ ಪುರುಷಪಶುವನ್ನು ನಿಷೇಧ ಮಾಡಿದ್ದಾರೆ. ನಿಮ್ಮ

ಪ್ರಕಾರ ವೃಷಭವನ್ನು ವಿವಕ್ಷಿಸಿ, ಪ್ರಯೋಗಮಾತ್ರದಿಂದ ವಿಶೇಷಣಗಳ ಸಾಧುವಾಗುತ್ತವೆಂದು ಹೇಳಿ ವೃಷಭವನ್ನೂ ಕೂಡ ಸೋಮ ಕ್ರೀಣದಲ್ಲಿ ಸಾಧುವೆಂದು ಹೇಳಬೇಕಾದಿತು. ಇದರಂತೆ 'ಪಶುನಾ ಯಜೇತ' ಎಂಬಲ್ಲಿಯೂ ಪುರುಷಪಶುವನ್ನೇ ತೆಗೆದುಕೊಳ್ಳಬೇಕೆಂದು ಶಬ್ದಪ್ರಯೋಗದ ಆಧಾರದಿಂದ ಪೂರ್ವಮೀಮಾಂಸಕರು ಸಿದ್ಧಾಂತ ಮಾಡಿದ್ದಾರೆ. ನಿಮ್ಮ ಪ್ರಕಾರ ಇದೂ ಕೂಡ ವಿಪರೀತವಾಗಬೇಕಾದೀತು. ಆದ್ದರಿಂದ ಅರ್ಥಸಾಧುತ್ವವು ಕೂಡುತ್ತಿರುವಾಗ ಕೇವಲ ಪ್ರಯೋಗಸಾಧುತ್ವವನ್ನು ಅನುಸರಿಸಬಾರದು. ಆದ್ದರಿಂದ ಪರಮಾತ್ಮನಲ್ಲಿ ಸ್ತ್ರೀತ್ವವಿರದ ಕಾರಣ ಸ್ತ್ರೀಲಿಂಗಶಬ್ದಪ್ರಯೋಗವು ಕೂಡುವುದಿಲ್ಲ.

**''चित्रया यजेत पशुकामः'' इत्यादौ तु पुंपशौ प्राप्ते स्त्रीत्वं चित्रत्वं पशवः फलं चेत्यनेकविधाने वाक्यभेददोषाल्लिङ्गस्य प्रयोगसाधुत्वमाश्रित्य चित्रशब्दस्य यागनामतोक्ता । न चेह तथा चित्प्रकृतिपरत्वे दोषोऽस्ति ।**

ಪ್ರಶ್ನೆ - 'ಚಿತ್ರಯಾ ಯಜೇತ ಪಶುಕಾಮಃ' ಎಂಬ ಪೂರ್ವಮೀಮಾಂಸೆಯ ಚಿತ್ರಾಧ್ಯಾಧಿಕರಣದಲ್ಲಿ ಹೀಗೆ ನಿರ್ಣಯಿಸಿದ್ದಾರೆ. ಪುರುಷಪಶುವಿನಲ್ಲಿ ಅರ್ಥಸಾಧುತ್ವವೂ ಬೇಡ, ಪ್ರಯೋಗಸಾಧುತ್ವವು ಮಾತ್ರ ಸಾಕೆಂದು ಹೇಳಿದರೆ 'ಪಶುನಾ ಯಜೇತ' ಎಂಬಲ್ಲಿ ಸ್ತ್ರೀಪಶುವನ್ನು 'ಅರುಣಯಾ ಕ್ರೀಣಾತಿ' ಎಂಬಲ್ಲಿ ಪುರುಷಪಶುವನ್ನು ತೆಗೆದುಕೊಳ್ಳಬೇಕಾದೀತು. ಆದ್ದರಿಂದ ಅರ್ಥಸಾಧುತ್ವವೇ ಮುಖ್ಯವಾಗಿದೆ ಎಂದು ನಿರ್ಣಯಿಸಿದಿರಿ. ಹಾಗಾದರೆ 'ಚಿತ್ರಯಾ ಯಜೇತ' ಎಂಬಲ್ಲಿ ಚಿತ್ರ ಶಬ್ದವು ಯಾಗದ ನಾಮಧೇಯವಾಗಿದೆಯೆಂದು ಜೈಮಿನ್ಯಾಚಾರ್ಯರು ನಿರ್ಣಯಿಸಿದ್ದಾರೆ. ಈಗ ಪೂರ್ವಪಕ್ಷಿಗಳ ಪ್ರಕಾರ ಸ್ತ್ರೀಲಿಂಗವಿದ್ದಲ್ಲಿ ಈ ಪಶುವನ್ನೇ ತೆಗೆದುಕೊಳ್ಳಬೇಕೆಂದು ಹೇಳುವುದಾದರೆ 'ಚಿತ್ರಯಾ' ಎಂಬಲ್ಲಿಯೂ ಸ್ತ್ರೀಲಿಂಗವಿರುವುದರಿಂದ ಸ್ತ್ರೀಪಶುವನ್ನೇ ತೆಗೆದುಕೊಳ್ಳಬೇಕಾದೀತು. ಆದರೆ ಪೂರ್ವಮೀಮಾಂಸಕರು ಯಾಗದ ನಾಮಧೇಯವೆಂದು ಸಿದ್ಧಾಂತ ಮಾಡಿದ್ದಾರಲ್ಲವೇ?

ಉತ್ತರ - 'ಚಿತ್ರಯಾ' ಎಂಬುದನ್ನು ಸ್ತ್ರೀಪಶುಪರವಾಗಿ ವ್ಯಾಖ್ಯಾನ ಮಾಡಿದರೆ ಚಿತ್ರತ್ವವನ್ನು, ಪಶುತ್ವವನ್ನು ಮತ್ತು ಫಲವನ್ನು ವಿಧಾನ ಮಾಡಬೇಕಾದೀತು, ಆವಾಗ ಅನೇಕ ಧರ್ಮಗಳನ್ನು ವಿಧಾನ ಮಾಡುತ್ತಿರುವುದರಿಂದ ವಾಕ್ಯಭೇದದೋಷವು ಪ್ರಾಪ್ತವಾಗುತ್ತದೆ. ಹಾಗಾದರೆ 'ಚಿತ್ರೇಣ' ಎಂದು ಹೇಳಬೇಕಿತ್ತಲ್ಲವೇ? ಚಿತ್ರಯಾ ಎಂದು ಹೇಳಲು ಏನು ಕಾರಣ ? ಎಂದು ಪ್ರಶ್ನಿಸಬಾರದು. ಚಿತ್ರಶಬ್ದವು ಲೋಕದಲ್ಲಿ 'ಚಿತ್ರಾ ಗೌಃ' ಇತ್ಯಾದಿಯಾಗಿ ಸ್ತ್ರೀಲಿಂಗದಲ್ಲಿ ಪ್ರಯೋಗಿಸಲ್ಪಟ್ಟಿದೆ. ಅದೇ ಸ್ತ್ರೀಲಿಂಗವಾದ ಚಿತ್ರ ಶಬ್ದವನ್ನು ಇಲ್ಲಿಯೂ ಕೂಡ ಪ್ರಯೋಗಿಸಲಾಗಿದೆ. ಆದ್ದರಿಂದ 'ಚಿತ್ರಯಾ' ಎಂಬ ಸ್ತ್ರೀಲಿಂಗಕ್ಕೆ ಅರ್ಥಸಾಧುತ್ವವನ್ನು ಪರಿತ್ಯಾಗ ಮಾಡಿ, ಪ್ರಯೋಗಸಾಧುತ್ವವನ್ನಷ್ಟೇ ಆಶ್ರಯಿಸಬೇಕು. ಇದಕ್ಕೆ ಮುಖ್ಯ ಕಾರಣ ವಾಕ್ಯಭೇದದೋಷ.

ಪ್ರಕೃತ್ಯಧಿಕರಣ (೧-೪-೬)

ಆದರೆ ಪ್ರಕೃತಿ ಮೊದಲಾದ ಶಬ್ದಗಳು ಲಕ್ಷ್ಮ್ಯಾದಿಗಳಲ್ಲಿಯೇ ಪರಮಮುಖ್ಯವೃತ್ತಿಯಿಂದ ಇರುತ್ತವೆನ್ನಲು ಏನೂ ದೋಷವಿರುವುದಿಲ್ಲ. ಇದನ್ನು ಬಿಟ್ಟು ದೇವರಲ್ಲಿ ಪರಮಮುಖ್ಯವೃತ್ತಿಯಿಂದ ಇರುತ್ತವೆಂದು ಅಂಗೀಕರಿಸಿ, ಸ್ತ್ರೀಲಿಂಗವು ಕೇವಲ ಪ್ರಯೋಗಮಾತ್ರದಿಂದ ಸಾಧುವಾಗುತ್ತದೆಂದು ಹೇಳುವುದು ಅಸಾಧುವಾಗಿದೆ.

**प्रकाशः –**

पूर्वपक्षटीकां व्यनक्ति – **एषा ह्येवेति** ।। ''आत्मकृतेः'' इति सूत्रव्यावर्त्यहेतुमाह – **तेषामिति** ।। टीकोक्तहेतुमाह – **स्त्रीति** ।।

ವಿವರಣೆ - ಭಗವಂತನಲ್ಲಿ ಸ್ತ್ರೀತ್ವವಿಲ್ಲದ ಕಾರಣ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವು ಸರ್ವಥಾ ಬರುವುದಿಲ್ಲವೆಂಬುದು ಈ ಅಧಿಕರಣದ ಪೂರ್ವಪಕ್ಷ. ಇದನ್ನು ಸಮರ್ಥಿಸುವ ಟೀಕೆಯನ್ನು ಪ್ರಕೃತ ಗ್ರಂಥಕಾರರು 'ಏಷಾ ಹ್ಯೇವ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಆತ್ಮಕೃತೇಃ ಪರಿಣಾಮಾತ್' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷ ಹೇತುವನ್ನು 'ತೇಷಾಮ್' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಟೀಕೆಯಲ್ಲಿ ಹೇಳಿದ ಹೇತುವನ್ನೇ 'ಸ್ತ್ರೀ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**प्रकाशः –** ''परमपुरुषे च'' इत्यादिटीकार्थमाह – **परमेति** ।।

ಪುರುಷಾಗ್ರಣಿಯಾದ ವಿಷ್ಣುವಿನಲ್ಲಿ ಸ್ತ್ರೀತ್ವವು ಬರಲು ಹೇಗೆ ಸಾಧ್ಯ ? ಇತ್ಯಾದಿಯಾದ ಟೀಕೆಯಲ್ಲಿ ಹೇಳಿದ ಅರ್ಥವನ್ನು 'ಪರಮ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

**प्रकाशः – रूपविशेषेति** ।। नारायणीरूपाद्यपेक्षयेत्यर्थः । एनं स्त्रियं ब्रुवन्न वदतीत्यर्थः । केवलस्य पुंस्त्वविनाकृतस्य । तथा च रूपविशेषे स्त्रीत्वं युक्तमिति भावः ।

ಭಗವಂತನಿಗೆ ನಾರಾಯಣೀ, ಮೋಹಿನೀ, ವಡವಾ ಮೊದಲಾದ ವಿಶೇಷ ಸ್ತ್ರೀರೂಪಗಳು ಇರುತ್ತವೆ. ಅದರ ವಿವಕ್ಷೆಯಿಂದ ಸ್ತ್ರೀತ್ವವನ್ನು ಹೇಳಬಹುದಲ್ಲವೇ? ಎಂಬುದು 'ನಚ ರೂಪವಿಶೇಷೇ' ಎಂಬ ವಾಕ್ಯದ ಅಭಿಪ್ರಾಯ. 'ಏನಂ ವಾಚಾ ಸ್ತ್ರಿಯಂ ಬ್ರುವನ್' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - 'ಏನಂ' ಈ ಪರಮಾತ್ಮನನ್ನು, 'ಸ್ತ್ರೀಯಂ ಬ್ರುವನ್' ಸ್ತ್ರೀರೂಪನೆಂದು ಯಾರೂ ಹೇಳುವುದಿಲ್ಲ ಎಂದು. 'ಕೇವಲಸ್ಯ' ಎಂದರೆ 'ಪುಂಸ್ತ್ವವಿಲ್ಲದ ಸ್ತ್ರೀತ್ವ ಮಾತ್ರವಿರುವ ರೂಪವಿಶೇಷ' ಎಂದರ್ಥ. ಆದ್ದರಿಂದ ಕೆಲವು ರೂಪಗಳಲ್ಲಿ ಸ್ತ್ರೀತ್ವವು ಯುಕ್ತವಾಗುತ್ತದೆಂದು ವಾಕ್ಯದ ಅಭಿಪ್ರಾಯ.

**प्रकाशः –** अस्त्रीपुमान् अस्त्रीपुमांसं वदन्न वदतीत्युभयनिषेध निन्दनेनोभयसमाहारस्यानुमतत्वादिति भावः ।।

ಪರಮಾತ್ಮನು ಸ್ತ್ರೀಯೂ ಅಲ್ಲ. ಪುರುಷನೂ ಅಲ್ಲ ಎಂಬುದಾಗಿ ಎರಡನ್ನೂ ನಿಷೇಧ ಮಾಡಿರುವುದರಿಂದ ಉಭಯಸಮಾಹಾರವು ಅನುಮತವೇ ಆಗಿದೆ ಎಂದು ತಿಳಿಯಬೇಕು.

**प्रकाशः – अप्रयोगेति ।।** ''पावमान्य इत्याचक्षत एतमेव सन्तम्'' इत्यादौ दर्शनात् स्त्रीशब्दाप्रयोगोऽनिष्ट इति भावः ।

ಪುಂರೂಪದಲ್ಲಿ ಸ್ತ್ರೀಶಬ್ದಪ್ರಯೋಗವು ಬಾರದಿರಬೇಕಾದೀತು ಎಂದು ಆಪತ್ತಿ ಮಾಡಿದಿರಿ. 'ಪುಂ' ರೂಪದಲ್ಲಿ ಸ್ತ್ರೀಶಬ್ದ ಪ್ರಯೋಗದ ಅಭಾವವು ನಿಮಗೆ ಇಷ್ಟವೇ ಆಗಿದೆ ಎಂದರೆ ಪುಂರೂಪದಲ್ಲಿಯೂ ಕೂಡ ಸ್ತ್ರೀಶಬ್ದ ಪ್ರಯೋಗವು ಕಂಡಿದೆ. 'ಪಾವಮಾನ್ಯ ಇತ್ಯಾಚಕ್ಷತೇ ಏತಮೇವ ಸಂತಮ್' ಎಂಬಲ್ಲಿ 'ಪಾವಮಾನೀ' ಎಂಬ ಶಬ್ದವನ್ನು ಸಮನ್ವಯ ಮಾಡಲಾಗಿದೆ. 'ಪಾವಮಾನೀ' ಎಂಬುದು ಸ್ತ್ರೀಲಿಂಗಶಬ್ದ. 'ಪಾವಮಾನ್ಯಃ' ಎಂಬುದು ಬಹುವಚನ ಪ್ರಯೋಗ. 'ಏತಮೇವ ಸಂತಮ್' ಎಂಬುದಾಗಿ ಪುಲ್ಲಿಂಗಶಬ್ದಗಳನ್ನು ಪ್ರಯೋಗ ಮಾಡುವ ಮೂಲಕ ಭಗವಂತನ ಪುಂರೂಪಗಳನ್ನೇ 'ಪಾವಮಾನೀ' ಎಂಬುದಾಗಿ ಸ್ತ್ರೀಲಿಂಗಶಬ್ದಗಳಿಂದ ಕರೆಯಲಾಗಿದೆ. ಆದ್ದರಿಂದ ಪುರುಷರೂಪದಲ್ಲಿಯೂ ಕೂಡ ಸ್ತ್ರೀಲಿಂಗಶಬ್ದ ಪ್ರಯೋಗವು ಶ್ರುತಿಯಲ್ಲಿ ಕಂಡಿದೆ. ಇದೂ ಕೂಡ ಇಲ್ಲದಿರಬೇಕಾದೀತೆಂಬ ಆಕ್ಷೇಪ ಬರುತ್ತದೆ. ಆದ್ದರಿಂದ ಸಿದ್ಧಾಂತಿಗಳಿಗೆ ಇದು ಅನಿಷ್ಟವೇ ಆಗಿದೆ.

**प्रकाशः –** ''न च नपुंसक शब्दप्रवृत्तिवत्'' इत्यादिटीकायां स्त्रीत्वाभावेऽपि स्त्रीलिङ्गशब्दवृत्तिं नपुंसकशब्दवृत्तिवदाशङ्क्य ''नियामकविशेषाभावेन कल्पनायोगात्'' इत्यनेनाद्यादिसूत्रत्रयोक्तहेतुव्यावर्त्यहेतुरुक्तः । स तूपलक्षणमिति भावेन वा नियामकाभावेऽपि तथात्वमित्यतो वा तां टीकां व्यनक्ति – **ब्रह्मणीत्यादिना दोषोऽस्तीत्यन्तेन ।।**

ಪರಮಾತ್ಮನಲ್ಲಿ ನಪುಂಸಕಲಿಂಗತ್ವವಿಲ್ಲದಿದ್ದರೂ ನಪುಂಸಕಲಿಂಗಶಬ್ದ ಪ್ರಯೋಗವು ಬರುವಂತೆ ಸ್ತ್ರೀತ್ವವಿಲ್ಲದಿದ್ದರೂ ಸ್ತ್ರೀಲಿಂಗಶಬ್ದಪ್ರಯೋಗಗಳು ಬರಬಹುದಲ್ಲವೇ? ಎಂದು ಆಶಂಕಿಸಿದಾಗ ಬ್ರಹ್ಮ ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಬರುವುದಕ್ಕೆ ವಿಶೇಷ ಕಾರಣಗಳು ಇರುತ್ತವೆ. 'ಅಥ ಕಸ್ಮಾತ್ ಉಚ್ಯತೇ ಬ್ರಹ್ಮೇತಿ' ಎಂಬುದಾಗಿ ಪ್ರಮಾಣಗಳಿರುವುದರಿಂದ ಬ್ರಹ್ಮನು ನಪುಸಂಕಲಿಂಗನಾಗದಿದ್ದರೂ ನಪುಂಸಕಲಿಂಗ-ಶಬ್ದಪ್ರಯೋಗವನ್ನು ಶ್ರುತಿ ಹೇಳಿದೆ. ಅದರಂತೆ ಸ್ತ್ರೀತ್ವವಿಲ್ಲದಿದ್ದರೂ ಸ್ತ್ರೀಲಿಂಗಶಬ್ದ ಪ್ರಯೋಗಗಳನ್ನು ಹೇಳಬಹುದಲ್ಲವೇ? ಎಂದು 'ನಿಯಾಮಕವಿಶೇಷಾಭಾವೇನ ಕಲ್ಪನಾಯೋಗಾತ್' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಪ್ರಾರಂಭದ ಮೂರು ಸೂತ್ರಗಳಲ್ಲಿ ಯಾವ ಸಿದ್ಧಾಂತಹೇತುಗಳನ್ನು ಹೇಳಿದ್ದಾರೋ, ಅದರಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ತೋರಿಸಿದ್ದಾರೆ. ಟೀಕೆಯಲ್ಲಿ ತೋರಿಸಿದ ಈ ಪೂರ್ವಪಕ್ಷವು ಕೇವಲ ಉಪಲಕ್ಷಣವಾಗಿದೆಯೆಂದು ತಿಳಿಯಬೇಕು. ಮತ್ತೊಂದು ಹೇತುವನ್ನು ಸ್ವತಃ ಗ್ರಂಥಕಾರರು ಹೇಳಿದ್ದಾರೆ. ಕೇವಲ ಪ್ರಯೋಗಸಾಧುತ್ವದಿಂದ ನಪುಂಸಕಲಿಂಗವನ್ನು ಕೂಡಿಸಬಹುದು. ಆದರೆ 'ದೇವತಾ', 'ಖಟ್ವಾ' ಮೊದಲಾದ ಶಬ್ದಗಳಂತೆ ಕೇವಲ ಪ್ರಯೋಗಸಾಧುತ್ವದಿಂದ ಸ್ತ್ರೀಲಿಂಗಶಬ್ದಗಳನ್ನು

ಕೂಡಿಸಲಾಗದು. ಏಕೆಂದರೆ ಲಕ್ಷ್ಮ್ಯಾದಿ ಅರ್ಥಾಂತರವನ್ನು ತೆಗೆದುಕೊಂಡಾಗ ಅರ್ಥಸ್ವಾರಸ್ಯವೂ ಕೂಡ ಬರುತ್ತದೆ. ಹೀಗಿರುವಾಗ ಪರಮಾತ್ಮನನ್ನೇ ತೆಗೆದುಕೊಂಡು ಕೇವಲ ಪ್ರಯೋಗಸಾಧುತ್ವವನ್ನು ಏಕೆ ಸಮರ್ಥಿಸಬೇಕು. ಅರ್ಥಸಾಧುತ್ವವು ಇರುವಾಗ ಪ್ರಯೋಗಸಾಧುತ್ವವನ್ನು ಹೇಳಬಾರದು.

**ಪ್ರಕಾಶಃ – कलत्रेति ।।** भार्यादाविति शेषः । तथैवास्तु प्रकृत इत्यत आह – **न चेति ।।** अस्त्वित्यत आह – **अरुणयेति ।।**

ನಪುಂಸಕಲಿಂಗಶಬ್ದಗಳಲ್ಲಿ ಕೇವಲ ಪ್ರಯೋಗಸಾಧುತ್ವವಷ್ಟೇ ವಿವಕ್ಷಿತವಾಗಿದೆ. ಅರ್ಥಸಾಧುತ್ವವು ವಿವಕ್ಷಿತವಾಗಿರುವುದಿಲ್ಲ ಆದ್ದರಿಂದ ಬ್ರಹ್ಮ ಮೊದಲಾದ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಬಹುದು. ಭಾರ್ಯಾದಿಗಳಲ್ಲಿಯೂ ಕೂಡ ಸ್ತ್ರೀತ್ವವೇ ಇದೆ. ಆದರೂ ನಪುಂಸಕಲಿಂಗದಲ್ಲಿರುವ 'ಕಲತ್ರ' ಶಬ್ದಪ್ರಯೋಗವನ್ನು ಸ್ತ್ರೀಯರಲ್ಲಿ ಎಲ್ಲರೂ ಮಾಡುತ್ತಾರೆ. ಆದ್ದರಿಂದ ಪ್ರಕೃತ್ಯಾದಿಗಳಲ್ಲಿಯೂ ಹಾಗೆಯೇ ಹೇಳಬಹುದಲ್ಲವೇ? ಎಂಬುದನ್ನು 'ನಚ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಹಾಗೇ ಒಪ್ಪುತ್ತೇವೆಂದರೆ ಬಾಧಕವನ್ನು 'ಅರುಣಯಾ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಪ್ರಕಾಶಃ** – ''अरुणया पिङ्गाक्ष्यैकहायन्या गवा सोमं क्रीणाति'' इत्यादावपि शब्दसाधुत्वे पुङ्गवस्यैव क्रयहेतुतापत्त्या याज्ञिकानुष्ठानविरोधः ।

'ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯ ಗವಾ ಸೋಮಂ ಕ್ರೀಣಾತಿ' ಎಂಬಲ್ಲಿ ಪ್ರಯೋಗಸಾಧುತ್ವವನ್ನು ಬಿಟ್ಟು, ಅರ್ಥಸಾಧುತ್ವವನ್ನೇ ವಿವಕ್ಷಿಸಿ, ಸ್ತ್ರೀಪಶುವನ್ನು ಪೂರ್ವಮೀಮಾಂಸಕರು ವಿವಕ್ಷಿಸಿದ್ದಾರೆ. ಅದರಂತೆ ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸದೇ ಚಿತ್‌ಪ್ರಕೃತಿಯಲ್ಲಿ ಅರ್ಥಸಾಧುತ್ವವನ್ನೇ ವಿವಕ್ಷಿಸಬೇಕು. ಹೀಗೊಪ್ಪದಿದ್ದರೆ 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿಯೂ ಪುರುಷಪಸುವೇ ಕ್ರಯಣಕ್ಕೆ ಹೇತುವೆಂದಾಗಿ ಯಾಜ್ಞಿಕರು ಮಾಡುವ ಅನುಷ್ಠಾನಕ್ಕೆ ವಿರೋಧ ಬರಬೇಕಾದೀತು.

**ಪ್ರಕಾಶಃ** – ''पशुना यजेत'' इत्यत्र स्त्रीपशुनापि यागः स्यादित्यर्थः ।

'ಪಶುನಾ ಯಜೇತ' ಎಂಬಲ್ಲಿಯೂ ಪುಲ್ಲಿಂಗವಿರುವುದರಿಂದ ಪುರುಷಪಶುವನ್ನೇ ತೆಗೆದುಕೊಳ್ಳಬೇಕೆಂದು ಪೂರ್ವಮೀಮಾಂಸಕರು ನಿರ್ಣಯಿಸಿದ್ದಾರೆ.

ಪರಮಾತ್ಮನ ಸ್ತ್ರೀರೂಪಗಳು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯವಾಗಿವೆ ಎಂಬುದನ್ನು ಪೂರ್ವಪಕ್ಷಿಯು ಒಪ್ಪಿರುತ್ತಾನೆ. ಆದರೆ ಪರಮಾತ್ಮನ ಪುರುಷರೂಪಗಳಿಗೆ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವು ಹೇಗೆ ಬರುತ್ತದೆಂದು ಈಗ ವಿಚಾರ ಮಾಡಬೇಕು.

ಬ್ರಹ್ಮ ಮೊದಲಾದ ಶಬ್ದಗಳು ನಪುಂಸಕಲಿಂಗವಾಗಿದ್ದರೂ ಬ್ರಹ್ಮನು ನಪುಂಸಕನಾಗಿರುವುದಿಲ್ಲ. ಪರಮಾತ್ಮನು ನಪುಂಸಕನಾಗದಿದ್ದರೂ, ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯವಾಗುವಂತೆ ಸ್ತ್ರೀಯಾಗದಿದ್ದರೂ, ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯವಾಗಬಹುದಲ್ಲವೇ? ಎಂದು ಪ್ರಶ್ನಿಸಿದರೆ ಪೂರ್ವಪಕ್ಷಿಯು ಹೀಗೆ

ಉತ್ತರಿಸುತ್ತಾನೆ - ನಪುಂಸಕಲಿಂಗಶಬ್ದಗಳಿಗೆ ಅರ್ಥಸಾಧುತ್ವವು ಇರುವುದೇ ಇಲ್ಲ. ಅಂದರೆ ಯಾರು ನಪುಂಸಕರಿರುತ್ತಾರೋ, ಅವರೇ ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯರಾಗಬೇಕೆಂಬ ನಿಯಮ ಇರುವುದಿಲ್ಲ. ಕಲತ್ರ, ಅಪತ್ಯ ಮೊದಲಾದ ಶಬ್ದಗಳೆಲ್ಲವೂ ನಪುಂಸಕಲಿಂಗಗಳಾಗಿವೆ. ಆದರೆ ಸ್ತ್ರೀ, ಪುತ್ರ ಮೊದಲಾದವರೇ ಇದರಿಂದ ಪ್ರತಿಪಾದ್ಯರಾಗಿದ್ದಾರೆ. ಆದ್ದರಿಂದ ನಪುಂಸಕಲಿಂಗಶಬ್ದವು ಪ್ರಾಯಃ ಪ್ರಯೋಗಮಾತ್ರದಿಂದಲೇ ಸಾಧುವಾಗುತ್ತದೆ. ಆದರೆ ಸ್ತ್ರೀಲಿಂಗಶಬ್ದಗಳಿಗೆ ಹೀಗಲ್ಲ. ಅರ್ಥಸಾಧುತ್ವ ಪ್ರಯೋಗಸಾಧುತ್ವ ಎರಡೂ ಇರುತ್ತದೆ. ಪ್ರಕೃತ್ಯಾದಿಶಬ್ದಗಳನ್ನು ಲಕ್ಷ್ಮ್ಯಾದಿಗಳಲ್ಲಿ ಪ್ರಯೋಗ ಮಾಡಿದರೆ ಅರ್ಥಸಾಧುತ್ವ ಲಭಿಸುವುದರ ಜೊತೆ. ಪ್ರಯೋಗಮಾತ್ರಸಾಧುತ್ವವೂ ಕೂಡ ಲಭಿಸುತ್ತದೆ. ಇದನ್ನು ಬಿಟ್ಟು ಪರಮಾತ್ಮನಲ್ಲಿ ಕೇವಲ ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸುವುದು ಸೂಕ್ತವಲ್ಲ. ಒಂದುವೇಳೆ ಅರ್ಥಸಾಧುತ್ವವನ್ನು ವಿವಕ್ಷಿಸದೇ ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸಿ, ಪರಮಾತ್ಮನಲ್ಲಿ ಸ್ತ್ರೀಶಬ್ದಗಳನ್ನು ವಿವಕ್ಷಿಸುವುದಾದರೆ ಪೂರ್ವಮೀಮಾಂಸೆಯ ವಿರೋಧವು ಬರುತ್ತದೆ. 'ಪಶುನಾ ಯಜೇತ' ಎಂದು ಹೇಳಿದಾಗ ಸ್ತ್ರೀಲಿಂಗಶಬ್ದವನ್ನು ನೋಡಿ, ಪುರುಷಪಶುವನ್ನೇ ಯಾಗಸಾಧನವೆಂದು ಹೇಳುತ್ತಾರೆ. 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿ ಸ್ತ್ರೀಲಿಂಗಶಬ್ದವನ್ನು ನೋಡಿ ಸ್ತ್ರೀಪಶುವನ್ನೇ ತೆಗೆದುಕೊಳ್ಳುತ್ತಾರೆ. ಈ ಶ್ರುತಿವಾಕ್ಯಗಳಲ್ಲಿ ಏಕತ್ವವು ವಿವಕ್ಷಿತವಾದಂತೆ ಲಿಂಗವೂ ಕೂಡ ವಿವಕ್ಷಿತವೆಂದು ಜೈಮಿನ್ಯಾಚಾರ್ಯರು ಹೇಳಿರುತ್ತಾರೆ.

ಪ್ರಕೃತ ನೀವು ಅರ್ಥಸಾಧುತ್ವದ ಅವಶ್ಯಕತೆಯಿಲ್ಲ ಪ್ರಯೋಗಮಾತ್ರಸಾಧುತ್ವವು ಇದ್ದರೆ ಸಾಕೆಂದು ಹೇಳುವುದಾದರೆ, 'ಪಶುನಾ ಯಜೇತ' ಎಂಬಲ್ಲಿಯೂ ಸ್ತ್ರೀಪಶುವನ್ನೂ ಕೂಡ ತೆಗೆದುಕೊಳ್ಳಬೇಕಾದೀತು. 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿ ಪುರುಷಪಶುವನ್ನು ತೆಗೆದುಕೊಳ್ಳಬೇಕಾದೀತು. ಆದರೆ ಇದು ಪೂರ್ವಮೀಮಾಂಸಕರಿಗೆ ವಿರುದ್ಧವಾಗಿದೆ. ಆದ್ದರಿಂದ ಪ್ರಯೋಗಸಾಧುತ್ವವನ್ನು ಮುಖ್ಯವಾಗಿ ವಿವಕ್ಷಿಸಬಾರದು.

**प्रकाशः** – अत एव चतुर्थाद्यपादे ''तथा च लिङ्गम्'' इति षष्ठनये एकत्ववत्पशुगतं लिङ्गं विवक्षितमित्युक्तम् । कथं तर्ह्याद्यस्य चतुर्थपादे चित्राज्याधिकरणे चित्राशब्दस्य यागनामत्वमुक्तमित्यत आह – **चित्रयेति** ।।

ಆದ್ದರಿಂದಲೇ ಪೂರ್ವಮೀಮಾಂಸೆಯ ನಾಲ್ಕನೇ ಅಧ್ಯಾಯದ ಪ್ರಥಮಪಾದದ ಆರನೆಯ ಅಧಿಕರಣದಲ್ಲಿ 'ತಥಾ ಚ ಲಿಂಗಮ್' ಎಂಬ ಸೂತ್ರದಲ್ಲಿ ಏಕತ್ವದಂತೆ ಪಶುಗತವಾದ ಲಿಂಗವೂ ಕೂಡ ವಿವಕ್ಷಿತವೆಂದು ನಿರ್ಧರಿಸಲಾಗಿದೆ. ಹಾಗಾದರೆ 'ಚಿತ್ರಯಾ ಯಜೇತ ಪಶುಕಾಮಃ' ಎಂಬುದಾಗಿ ಪ್ರಥಮಾಧ್ಯಾಯದ ನಾಲ್ಕನೆಯ ಅಧ್ಯಾಯದಲ್ಲಿ 'ಚಿತ್ರ' ಎಂಬ ಶಬ್ದವು ಯಾಗದ ನಾಮಧೇಯವೆಂದು ಜೈಮಿನ್ಯಾಚಾರ್ಯರು ನಿರ್ಧಾರ ಮಾಡಿದ್ದಾರೆ. ಈಗ ನಿಮ್ಮ ಪ್ರಕಾರ ಸ್ತ್ರೀಶಬ್ದವಿದ್ದಲ್ಲಿ ಸ್ತ್ರೀಯನ್ನೇ ತೆಗೆದುಕೊಳ್ಳಬೇಕು. ಪುಲ್ಲಿಂಗವಿದ್ದಲ್ಲಿ ಪುರುಷನನ್ನೇ ತೆಗೆದುಕೊಳ್ಳಬೇಕೆಂದು ನಿಯಮ ಮಾಡುವುದಾದರೆ 'ಚಿತ್ರಯಾ' ಎಂಬುದು ಸ್ತ್ರೀಲಿಂಗಶಬ್ದವಾಗಿದೆ. ಸ್ತ್ರೀಪಶುವನ್ನೇ 'ಚಿತ್ರ' ಎಂಬ ಶಬ್ದದಿಂದ ತೆಗೆದುಕೊಳ್ಳ-ಬೇಕಾದೀತು. ಆದರೆ 'ಚಿತ್ರ' ಎಂಬುದು ಯಾಗದ ನಾಮಧೇಯವಾಗಿದೆ.

'ಚಿತ್ರಯಾ ಯಜೇತ' ಎಂಬಲ್ಲಿ ಸ್ತ್ರೀಪಶುವನ್ನು ವಿವಕ್ಷಿಸಿದರೆ ಸ್ತ್ರೀತ್ವವನ್ನು, ಚಿತ್ರವರ್ಣವನ್ನು, ಪಶು ಎಂಬ ಫಲವನ್ನು ವಿಧಾನ ಮಾಡಬೇಕಾದೀತು. ಅನೇಕತ್ವವನ್ನು ವಿಧಾನ ಮಾಡಿದರೆ ವಿಧೇಯಭೇದೇನ ವಾಕ್ಯಭೇದದೋಷವು ಬರುತ್ತದೆ. ಆದ್ದರಿಂದ 'ಚಿತ್ರ' ಎಂಬ ಶಬ್ದವು ಯಾಗದ ನಾಮಧೇಯವೆಂದು ಹೇಳಬೇಕು. ಆವಾಗ ಯಾಗವನ್ನು ಮಾತ್ರ ವಿಧಾನ ಮಾಡಿದಂತಾಗುತ್ತದೆ. ವಾಕ್ಯಭೇದಕ್ಕೆ ಅವಕಾಶವಿರುವುದಿಲ್ಲ. ಹಾಗಾದರೆ 'ಚಿತ್ರ' ಎಂಬ ಶಬ್ದವನ್ನು ಸ್ತ್ರೀಲಿಂಗದಲ್ಲೇಕೆ ಪ್ರಯೋಗಿಸಿದ್ದಾರೆ ಎಂದರೆ ಕೇವಲ ಪ್ರಯೋಗಮಾತ್ರ ಸಾಧುತ್ವದಿಂದ ವಿವಕ್ಷಿಸಬೇಕು. 'ಚಿತ್ರಾಃ ಗೌಃ' ಇತ್ಯಾದಿಯಾಗಿ ಪ್ರಯೋಗವಿರುವುದರಿಂದ 'ಚಿತ್ರ' ಎಂಬ ಶಬ್ದವು ಸ್ತ್ರೀಲಿಂಗದಲ್ಲಿ ಪ್ರಯುಕ್ತವಾಗಿದೆ. ಇದು ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸಿ ಯಾಗದ ನಾಮಧೇಯವೆಂದಷ್ಟೇ ತಿಳಿಯಬೇಕು. ವಾಕ್ಯಭೇದ ದೋಷ ಬರುವುದರಿಂದ ಅರ್ಥಸಾಧುತ್ವವನ್ನು ಬಿಟ್ಟು ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸಬೇಕು. ಅದರಂತೆ ಪ್ರಕೃತ್ಯಾದಿಶಬ್ದಗಳು ಪರಮ ಮುಖ್ಯವೃತ್ತಿಯಿಂದ ಭಗವತ್‌ಪರವಾಗುತ್ತವೆಂದು ಹೇಳಲು ಯಾವುದೇ ದೋಷವಿರುವುದಿಲ್ಲ. ಆದರೆ ಚಿತ್‌ಪ್ರಕೃತ್ಯಾದಿಗಳನ್ನೇ ವಿವಕ್ಷಿಸಿದಾಗ ಯಾವುದೇ ದೋಷವು ಬರುವುದಿಲ್ಲ. ಹೀಗಿರುವಾಗ ಪರಮಮುಖ್ಯವೃತ್ತಿಯಿಂದ ಕೇವಲ ಪ್ರಯೋಗಮಾತ್ರ ಪರತ್ವವನ್ನು ವಿವಕ್ಷಿಸುವುದು ತಪ್ಪಾಗುತ್ತದೆ.

**प्रकाशः – पशवः फलं चेति सामानाधिकरण्यम् । ''यस्मिन् गुणोपदेशः प्रधानतोऽभिसम्बन्धः'' इत्यधिकरणे चिन्तितं ''अग्नीषोमीयं पशुमालभेत'' इति विहितपशुयागमात्रं यजेतेत्यनेनानूद्य तस्मिन् पशौ चित्राशब्देन चित्रत्वस्त्रीत्वे विधीयेते उत ''दधिमधुघृतमापोधानास्तंडुलास्तत्संसृष्टं प्राजापत्यम्'' इति प्रकृतो यागः पशुफलाय विधीयते । चित्राशब्दस्य चित्रद्रव्यवाचकत्वात्तत्रैव नामत्वमिति विशये**

ಗ್ರಂಥದಲ್ಲಿ 'ಪಶವಃ ಫಲಂ ಚ' ಎಂಬುದು ಸಮಾನ್ಯಾಧಿಕರಣಪ್ರಯೋಗ. ಪಶುರೂಪವಾದ ಫಲವೆಂಬರ್ಥವನ್ನು ತಿಳಿಯಬೇಕು.

'ಯಸ್ಮಿನ್ ಗುಣೋಪದೇಶಃ ಪ್ರಧಾನತೋಽಭಿಸಂಬಂಧಃ' (೧-೪-ಚಿತ್ರಾಜ್ಯಾಧಿಕರಣ)

ಈ ಚಿತ್ರಾಜ್ಯಾಧಿಕರಣದಲ್ಲಿ 'ಅಗ್ನಿಷೋಮೀಯಂ ಪಶುಮಾಲಭೇತ' ಎಂಬ ಹಿಂದಿನ ವಾಕ್ಯದಲ್ಲಿ ವಿಹಿತವಾದ ಪಶುಯಾಗವನ್ನು 'ಚಿತ್ರಯಾ ಯಜೇತ' ಎಂಬಲ್ಲಿರುವ 'ಯಜೇತ' ಎಂಬ ಪದದಿಂದ ಅನುವಾದ ಮಾಡಲಾಗಿದೆ. ಹಿಂದೆ ವಿಹಿತವಾದ ಪಶುವಿನಲ್ಲಿ 'ಚಿತ್ರ' ಎಂಬ ಶಬ್ದವು ಚಿತ್ರತ್ವವನ್ನು ಮತ್ತು ಸ್ತ್ರೀತ್ವವನ್ನು ವಿಧಾನ ಮಾಡುತ್ತಿವೆಯೋ, ಅಥವಾ 'ದಧಿ-ಮಧು-ಘೃತ-ಮಾಪೋಧನ-ತಂಡುಲ-ತತ್‌ಸಂಸೃಷ್ಟಂ-ಪ್ರಜಾಪತ್ಯಮ್' ಎಂಬುದಾಗಿ ಪ್ರಕೃತವಾದ ಯಾಗದಲ್ಲಿ ಪಶುಕಾಮನೆಯನ್ನು ವಿಧಾನ ಮಾಡುತ್ತಿದೆಯೋ? ಏಕೆಂದರೆ ಚಿತ್ರಾಶಬ್ದವು ಚಿತ್ರದ್ರವ್ಯಕ್ಕೆ ವಾಚಕವಾಗಿರುವುದರಿಂದ ಕೇವಲ ಯಾಗದ ನಾಮಧೇಯವೆಂದು ವಿವಕ್ಷಿಸಬೇಕಾಗುತ್ತದೆ. ಇಷ್ಟು ಸಂಶಯ.

**प्रकाशः** – चित्रगुणकद्रव्ये रूढत्वादेकपदोपात्ततया चित्रत्वस्त्रीत्वयोरुभयविशिष्टैककारकविधानेन वाक्यभेदात्पशुकामपदस्यापि साधनकामनानुवादादिति प्राप्ते

ಪೂರ್ವಪಕ್ಷ - 'ಪಶುಕಾಮಃ' ಎಂಬ ಪದವು ಫಲಕಾಮನೆಯನ್ನು ಹೇಳುತ್ತಿಲ್ಲ. ಕೇವಲ ಸಾಧನ ಕಾಮನವನ್ನಷ್ಟೇ ಹೇಳುತ್ತಿದೆ. ಏಕೆಂದರೆ ಯಾವುದೇ ಒಂದು ಕಾರ್ಯದಲ್ಲಿ ತೊಡಗಬೇಕಾದರೆ ಫಲದಲ್ಲಿ ಅಪೇಕ್ಷೆಯಿರುತ್ತದೆ, ಅದರ ಸಾಧನದಲ್ಲಿಯೂ ಅಪೇಕ್ಷೆಯು ಉಂಟಾಗುತ್ತದೆ. ಸುಖಕ್ಕಾಗಿ ಧನಕನಕಾದಿಗಳನ್ನು ಸಂಪಾದನೆ ಮಾಡುತ್ತೇವೆ. ಅದೇ ರೀತಿಯಾಗಿ ಅಗ್ನಿಷೋಮೀಯಯಾಗದಲ್ಲಿ ಪಶುವೇ ಸಾಧನವಾಗಿದೆ. ಅಗ್ನಿಷೋಮೀಯ ಯಾಗವನ್ನು ಮಾಡಬೇಕೆಂದರೆ ಪಶುವನ್ನೂ ಕೂಡ ಕಾಮನೆ ಮಾಡಲೇ ಬೇಕು. ಈ ಕಾಮನೆಯಿದ್ದರೆ ಮಾತ್ರ ಯಾಗವನ್ನು ಮಾಡಬಹುದು. ಹೀಗೆ ಪ್ರಧಾನಕ್ರಿಯೆಯಲ್ಲಿ ಸಾಧನವಾದ ಪಶುಗಳಲ್ಲಿ ಕಾಮನಾವು ಇದ್ದೇ ಇರುತ್ತದೆ. ಮೊದಲೇ ಇರುವ ಸಾಧನಕಾಮನಾವನ್ನು ಶ್ರುತಿಯು ಅನುವಾದ ಮಾಡುತ್ತಿದೆ ಹೊರತು, ವಿಧಾನ ಮಾಡುತ್ತಿಲ್ಲ. ಆದ್ದರಿಂದ ಫಲದ ವಿಧಾನವು ಈ ಶ್ರುತಿಯಲ್ಲಿ ಇರುವುದಿಲ್ಲ.

ಮತ್ತು 'ಚಿತ್ರಯಾ' ಎಂಬ ಒಂದೇ ಪದದಿಂದ 'ಚಿತ್ರತ್ವ' ಎಂಬ 'ಗುಣ' ಮತ್ತು 'ಸ್ತ್ರೀತ್ವ' ಎರಡೂ ತಿಳಿಯುತ್ತದೆ. 'ಚಿತ್ರ' ಎಂಬ ಪದವು 'ಚಿತ್ರತ್ವ' ವಿಶಿಷ್ಟವಾದ ಪಶುವಿನಲ್ಲಿ ರೂಢವೂ ಆಗಿರುತ್ತದೆ. ಆದ್ದರಿಂದ ಪಶುವಿಶೇಷದಲ್ಲಿ ರೂಢವಾದ 'ಚಿತ್ರ' ಎಂಬ ಒಂದೇ ಶಬ್ದದಿಂದ ಚಿತ್ರತ್ವವನ್ನು, ಸ್ತ್ರೀತ್ವವನ್ನು ವಿಧಾನ ಮಾಡಬಹುದು. ಆದ್ದರಿಂದ ಪ್ರತ್ಯೇಕ ವಿಧಿಯಲ್ಲ. ಹೊರತು, ಚಿತ್ರತ್ವ, ಸ್ತ್ರೀತ್ವ ಎಂಬ ಉಭಯವಿಶಿಷ್ಟವಾದ ಕಾರಕವಿಧಿ ಆಗಿರುತ್ತದೆ.

**प्रकाशः** – प्रत्येकं स्त्रीत्वादिविधाने वाक्यभेदादुभयविशिष्टकारकविधानेऽपि गौरवदोषस्य सत्त्वात् यागनामत्वमिति सिद्धान्त इति ॥

ಸಿದ್ಧಾಂತ - ಚಿತ್ರತ್ವ, ಸ್ತ್ರೀತ್ವ ಇವುಗಳನ್ನು ಪ್ರತ್ಯೇಕ ವಿಧಾನ ಮಾಡಿದರೆ ವಾಕ್ಯಭೇದದೋಷವು ಬರುತ್ತದೆ. ಉಭಯವಿಶಿಷ್ಟಕಾರಕವಿಧಿಯನ್ನು ಹೇಳಿದರೆ ಗೌರವದೋಷವು ಬರುತ್ತದೆ. ಹಾಗಾಗಿ 'ಚಿತ್ರಯಾ ಯಜೇತ' ಎಂಬಲ್ಲಿ, 'ಚಿತ್ರಾ' ಎಂಬುದು ಯಾಗದ ನಾಮಧೇಯವಾಗಿದೆ. ಹಿಂದೆ ವಿಹಿತವಾದ ಯಾಗಕ್ಕೆ ಇಲ್ಲಿ ಫಲವನ್ನು ಹೇಳುತ್ತಿದ್ದಾರೆ.

**प्रकाशः** – **पुंपशाविति** ॥ अग्नीषोमीययागानुवादात्तत्र च पशुशब्देनाग्नीषोमीयमिति निर्देशबलात् पुंपशोः प्राप्तौ सत्यामित्यर्थः । वाक्यभेदेति गौरवस्याप्युपलक्षणम् । **न चेहेति** ॥ ''नामानि सर्वाणि'' इति श्रुतिविरोधो दोष इति चेन्न । ''सर्वेभ्यः कामेभ्यो दर्शपूर्णमासो यजेत'' इत्यादाविव ''सर्वनाम्नः सङ्कोचोपपत्तेः'' इति टीकायामेव व्यक्तमिति भावः ॥

ಅಗ್ನೀಷೋಮೀಯಯಾಗವನ್ನು ಅನುವಾದ ಮಾಡಿರುವುದರಿಂದ ಪಶುಶಬ್ದದಿಂದ 'ಅಗ್ನಿಷೋಮೀಯಮ್' ಎಂದು ನಿರ್ದೇಶ ಮಾಡಿರುವುದರಿಂದ ಪುರುಷಪಶು ಪ್ರಾಪ್ತವಾಗುತ್ತದೆಂದು 'ಪುಂಪಶೌ' ಎಂಬುದರ

ಅಭಿಪ್ರಾಯ ತಿಳಿದುಕೊಳ್ಳಬೇಕು. ವಾಕ್ಯಭೇದದೋಷದ ಜೊತೆ ಗೌರವದೋಷವನ್ನೂ ಕೂಡ ಉಪಲಕ್ಷಣಯಾ ಸ್ವೀಕರಿಸಬೇಕು. 'ನಾಮಾನಿ ಸರ್ವಾಣಿ' ಎಂಬ ಶ್ರುತಿವಿರೋಧ ದೋಷ ಬರುತ್ತದಲ್ಲವೆ? ಎಂದರೆ 'ಸರ್ವೇಭ್ಯಃ ಕಾಮೇಭ್ಯೋ ದರ್ಶಪೂರ್ಣಮಾಸೋ ಯಜೇತ' ಎಂಬಂತೆ 'ಸರ್ವನಾಮ್ನಃ ಸಂಕೋಚೋಪಪತ್ತೇಃ' ಎಂಬುದಾಗಿ ಟೀಕೆಯಲ್ಲಿಯೇ ಸ್ಪಷ್ಟವಾಗಿ ಹೇಳಿದ್ದಾರೆ.




ಭಗವಂತನ ಪುರುಷರೂಪದಲ್ಲಿ ಸ್ತ್ರೀತ್ವವು ಇರುವುದಿಲ್ಲ. ಆದ್ದರಿಂದ ಪುರುಷರೂಪಗಳು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. 'ಕಲತ್ರಂ' ಎಂಬ ನಪುಂಸಕಲಿಂಗದ ಶಬ್ದಕ್ಕೆ 'ಪತ್ನಿ' ಎಂಬರ್ಥವಿದೆ. ಆದರೆ ಆ ಶಬ್ದವಾಚ್ಯಳಾದ ಸ್ತ್ರೀಯಲ್ಲಿ ನಪುಂಸಕತ್ವವು ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಲಿಂಗವು ಕೇವಲ ಶಬ್ದಸ್ವಭಾವ ಎಂದು ಒಪ್ಪುವುದು ಅನಿವಾರ್ಯ. ಆದರೆ ಪ್ರಕೃತ ಲಕ್ಷ್ಮೀದೇವಿಯು ಸ್ತ್ರೀಲಿಂಗಶಬ್ದಗಳೆನಿಸಿದ ಪ್ರಕೃತಿ ಮೊದಲಾದ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದಲೇ ಪ್ರತಿಪಾದ್ಯಳಾಗುತ್ತಾಳೆ. ಅವಳಲ್ಲಿ ಸ್ತ್ರೀತ್ವವೂ ಇದೆ. ಪ್ರಕೃತಿತ್ವವೂ ಕೂಡ ಇದೆ. ಹೀಗೆ ಲಕ್ಷ್ಮೀದೇವಿಯಲ್ಲಿಯೇ ಪರಮಮುಖ್ಯವೃತ್ತಿಯಿಂದ ಶಬ್ದಪ್ರತಿಪಾದ್ಯತ್ವವು ಸಂಭವಿಸುತ್ತಿರುವಾಗ ಪರಮಾತ್ಮನಲ್ಲಿ ಪ್ರಕೃತಿತ್ವವು ಮತ್ತು ಸ್ತ್ರೀತ್ವವು ಇಲ್ಲದಿರುವಾಗ ಕಷ್ಟದಿಂದ ಏಕೆ ಶಬ್ದವನ್ನು ಸಮನ್ವಯ ಮಾಡಬೇಕು.

ಪರಮಾತ್ಮನ ಸ್ತ್ರೀರೂಪಗಳು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯವಾಗಿವೆ ಎಂಬುದನ್ನು ಪೂರ್ವಪಕ್ಷಿಯು ಒಪ್ಪಿರುತ್ತಾನೆ. ಆದರೆ ಪರಮಾತ್ಮನ ಪುರುಷರೂಪಗಳಿಗೆ ಸ್ತ್ರೀಲಿಂಗಶಬ್ದಪ್ರತಿಪಾದ್ಯತ್ವವು ಹೇಗೆ ಬರುತ್ತದೆಂಬುದೇ ವಿಚಾರ ಮಾಡುವ ವಿಷಯ.

ಬ್ರಹ್ಮ ಮೊದಲಾದ ಶಬ್ದಗಳು ನಪುಂಸಕಲಿಂಗವಾಗಿದ್ದರೂ ಬ್ರಹ್ಮನು ನಪುಂಸಕನಾಗಿರುವುದಿಲ್ಲ. ಪರಮಾತ್ಮನು ನಪುಂಸಕನಾಗದಿದ್ದರೂ, ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯವಾಗುವಂತೆ ಸ್ತ್ರೀಯಾಗದಿದ್ದರೂ, ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಬಹುದಲ್ಲವೇ? ಎಂದು ಪ್ರಶ್ನಿಸಿದರೆ ಪೂರ್ವಪಕ್ಷಿಯು ಹೀಗೆ ಉತ್ತರಿಸುತ್ತಾನೆ- ನಪುಂಸಕಲಿಂಗಶಬ್ದಗಳಿಗೆ ಅರ್ಥಸಾಧುತ್ವವು ಇರುವುದೇ ಇಲ್ಲ. ಯಾರು ನಪುಂಸಕರಿರುತ್ತಾರೋ, ಅವರೇ ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯರಾಗಬೇಕೆಂಬ ನಿಯಮ ಇರುವುದಿಲ್ಲ. ಕಲತ್ರ, ಅಪತ್ಯ ಮೊದಲಾದ ಶಬ್ದಗಳೆಲ್ಲವೂ ನಪುಂಸಕಲಿಂಗಗಳಾಗಿವೆ. ಆದರೆ ಸ್ತ್ರೀ, ಪುತ್ರ ಮೊದಲಾದವರೇ ಇದರಿಂದ ಪ್ರತಿಪಾದ್ಯರಾಗಿದ್ದಾರೆ. ಆದ್ದರಿಂದ ನಪುಂಸಕಲಿಂಗಶಬ್ದವು ಪ್ರಾಯಃ ಪ್ರಯೋಗಮಾತ್ರದಿಂದಲೇ ಸಾಧುವಾಗುತ್ತದೆ. ಆದರೆ ಸ್ತ್ರೀಲಿಂಗಶಬ್ದಗಳಿಗೆ ಹೀಗಲ್ಲ. ಅರ್ಥಸಾಧುತ್ವವೂ ಕೂಡ ಇರುತ್ತದೆ. ಪ್ರಯೋಗಸಾಧುತ್ವವೂ ಕೂಡ ಇರುತ್ತದೆ. ಪ್ರಕೃತ್ಯಾದಿಶಬ್ದಗಳನ್ನು ಲಕ್ಷ್ಮ್ಯಾದಿಗಳಲ್ಲಿ ಪ್ರಯೋಗ ಮಾಡಿದರೆ ಅರ್ಥಸಾಧುತ್ವ ಹಾಗೂ ಪ್ರಯೋಗಮಾತ್ರಸಾಧುತ್ವ ಎರಡೂ ಲಭಿಸುತ್ತದೆ. ಇದನ್ನು ಬಿಟ್ಟು ಪರಮಾತ್ಮನಲ್ಲಿ ಕೇವಲ ಪ್ರಯೋಗಮಾತ್ರಸಾಧುತ್ವವನ್ನು ವಿವಕ್ಷಿಸುವುದು ಸೂಕ್ತವಲ್ಲ. ಒಂದುವೇಳೆ ಅರ್ಥಸಾಧುತ್ವವನ್ನು ವಿವಕ್ಷಿಸದೇ ಪ್ರಯೋಗಸಾಧುತ್ವವನ್ನು ಮಾತ್ರ ವಿವಕ್ಷಿಸಿ, ಪರಮಾತ್ಮನಲ್ಲಿ ಸ್ತ್ರೀಶಬ್ದಗಳನ್ನು ವಿವಕ್ಷಿಸುವುದಾದರೆ ಪೂರ್ವಮೀಮಾಂಸೆಯ ವಿರೋಧವು ಬರುತ್ತದೆ. 'ಪಶುನಾ ಯಜೇತ' ಎಂದು ಹೇಳಿದಾಗ ಸ್ತ್ರೀಲಿಂಗಶಬ್ದವನ್ನು ನೋಡಿ, ಪುರುಷಪಶುವನ್ನೇ ಯಾಗಸಾಧನವೆಂದು ಹೇಳುತ್ತಾರೆ. 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿ ಸ್ತ್ರೀಲಿಂಗಶಬ್ದವನ್ನು ನೋಡಿ ಸ್ತ್ರೀಪಶುವನ್ನೇ ತೆಗೆದುಕೊಳ್ಳುತ್ತಾರೆ. ಈ ಶ್ರುತಿವಾಕ್ಯಗಳಲ್ಲಿ ಏಕತ್ವವು ವಿವಕ್ಷಿತವಾದಂತೆ ಲಿಂಗವೂ ಕೂಡ ವಿವಕ್ಷಿತವೆಂದು ಜೈಮಿನ್ಯಾಚಾರ್ಯರು ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

ಪ್ರಕೃತ ನೀವು ಅರ್ಥಸಾಧುತ್ವದ ಅವಶ್ಯಕತೆಯಿಲ್ಲ ಪ್ರಯೋಗಸಾಧುತ್ವವು ಇದ್ದರೆ ಸಾಕೆಂದು ಹೇಳುವುದಾದರೆ, 'ಪಶುನಾ ಯಜೇತ' ಎಂಬಲ್ಲಿಯೂ ಸ್ತ್ರೀಪಶುವನ್ನೂ ಕೂಡ ತೆಗೆದುಕೊಳ್ಳಬೇಕಾದೀತು. 'ಅರುಣಯಾ ಪಿಂಗಾಕ್ಷ್ಯಾ' ಎಂಬಲ್ಲಿ ಪುರುಷಪಶುವನ್ನು ತೆಗೆದುಕೊಳ್ಳಬೇಕಾದೀತು. ಆದರೆ ಇದು ಪೂರ್ವಮೀಮಾಂಸಕರಿಗೆ ವಿರುದ್ಧವಾಗಿದೆ. ಆದ್ದರಿಂದ ಪ್ರಯೋಗಸಾಧುತ್ವವನ್ನು ಮುಖ್ಯವಾಗಿ ವಿವಕ್ಷಿಸಬಾರದು.



### ಪೂರ್ವಪಕ್ಷ
### ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದ ಹಾಗೂ ನಪುಂಸಕಲಿಂಗಶಬ್ದಗಳು ಸರ್ವಥಾ ಸಮನ್ವಯಗೊಳ್ಳುವುದಿಲ್ಲ

## तात्पर्यचन्द्रिका

**किञ्च लिङ्गस्य प्रयोगसाधुत्वेऽपि स्त्रीत्यादिशब्दानामपीह विषयत्वात्कथं तेषां परमपुरुषे वृत्तिः ।**

ಅನುವಾದ - ಇಲ್ಲಿಯ ತನಕ ಶಬ್ದಗಳಲ್ಲಿರುವ ಸ್ತ್ರೀಲಿಂಗವು ಕೇವಲ ಪ್ರಯೋಗತಃ ಸಾಧುವಾಗುತ್ತವೆಂದು ಸಮರ್ಥಿಸಲಾಯಿತು. ಆದರೆ 'ಸ್ತ್ರೀ', 'ಯೋಷಿತ್', 'ನಾರೀ' ಇತ್ಯಾದಿ ಶಬ್ದಗಳ ಪ್ರಾತಿಪದಿಕವು ಸ್ತ್ರೀಯನ್ನೇ ಪ್ರತಿಪಾದನೆ ಮಾಡುತ್ತಿವೆ. ಅಂತಹ ಶಬ್ದಗಳೂ ಕೂಡ ಈ ಅಧಿಕರಣದ ವಿಷಯವಾಗಿವೆ. ಇದು ಪರಮಪುರುಷನಾದ ನಾರಾಯಣನಲ್ಲಿ ಹೇಗೆ ತಾನೇ ಬರುತ್ತವೆ.

**एतेन ''स्वर्गकामो यजेत ब्राह्मणो न हन्तव्यः'' इत्यादौ पुल्लिङ्गं यथा न विवक्षितं स्त्रिया अपि पुंसा सहाधिकारादेः षष्ठादौ स्थितत्वात् । तथाऽत्रापि लिङ्गं प्रत्ययार्थत्वात्प्रातिपदिकार्थत्वेऽप्युद्देश्यविशेषणत्वादविवक्षितम् ।**

**उक्तं हि -**

**यो ब्राह्मण इति ह्युक्ते हननप्रतिषेधतः ।**
**ब्राह्मणे प्रतिषेधे वा लिङ्गं नान्यद्विधीयते ।।**
**इतीति निरस्तम् ।**

ಹೀಗೆ ಹೇಳಿದ್ದರಿಂದ ಆಶಂಕೆಯೊಂದನ್ನು ಪರಿಹರಿಸಿದಂತಾಯಿತು.

ಆಶಂಕೆ - 'ಸ್ವರ್ಗಕಾಮೋ ಯಜೇತ ಬ್ರಾಹ್ಮಣೋ ನ ಹಂತವ್ಯಃ' ಇವೇ ಮೊದಲಾದ ವಾಕ್ಯಗಳಲ್ಲಿರುವ ಪುಲ್ಲಿಂಗವು ವಿವಕ್ಷಿತವಲ್ಲ. ಏಕೆಂದರೆ ಸ್ವರ್ಗಕಾಮನೆಯುಳ್ಳ ಪುರುಷನಷ್ಟೇ ಯಾಗ ಮಾಡಬೇಕೆಂಬುದು ಶ್ರುತಿಯ ಅಭಿಪ್ರಾಯವಲ್ಲ. ಸ್ವರ್ಗವನ್ನು ಬಯಸಿದ ಮಹಿಳೆಯೂ ಕೂಡ

ಯಾಗವನ್ನು ಮಾಡಬಹುದೆಂದು ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದಲ್ಲಿ ಸಮರ್ಥಿಸಿದ್ದಾರೆ. ಯಾಗದಲ್ಲಿ ಕೆಲವು ಆಹುತಿಗಳನ್ನು ಸ್ತ್ರೀಯರು ಪುರುಷನ ಜೊತೆಗೆ ನೀಡಬೇಕೆಂದು ಹೇಳಿದ್ದಾರೆ. ಸ್ತ್ರೀಯರು ಆಹುತಿಯನ್ನು ನೀಡಬೇಕಾದರೆ ವೇದಮಂತ್ರವನ್ನು ಹೇಳಬೇಕು. ಹಾಗಾಗಿ ವೇದಮಂತ್ರವನ್ನು ಹೇಳುವ ಮೂಲಕ ಯಾಗಾಧಿಕಾರವು ಸ್ತ್ರೀಯರಿಗೂ ಕೂಡ ಪುರುಷರ ಜೊತೆಗೆ ಇರುತ್ತದೆಂದು ಪೂರ್ವಮೀಮಾಂಸಕರು ನಿರ್ಣಯಿಸಿದ್ದಾರೆ. (ಸ್ತ್ರೀಯರಿಗೆ ಕೆಲವು ವೇದಮಂತ್ರಗಳ ಅಧಿಕಾರ-ವಿದೆಯೆಂದು ತತ್ವವಾದಿಗಳಾದ ನಾವು ಒಪ್ಪುವುದಿಲ್ಲ.) ಆದ್ದರಿಂದ 'ಸ್ವರ್ಗಕಾಮಃ' ಎಂಬಲ್ಲಿರುವ ಪುಲ್ಲಿಂಗವು ಅವಿವಕ್ಷಿತವಾಗಿದೆ.

ಇದರಂತೆ 'ಬ್ರಾಹಣೋ ನ ಹಂತವ್ಯಃ' ಎಂಬ ವಿಧಿವಾಕ್ಯವಿದೆ. ಇಲ್ಲಿರುವ ಪುಲ್ಲಿಂಗವನ್ನು ವಿವಕ್ಷಿಸುವುದಾದರೆ, ಬ್ರಾಹ್ಮಣನನ್ನು ಕೊಲ್ಲಬಾರದು. ಬ್ರಾಹ್ಮಣಿಯನ್ನು ಕೊಲ್ಲಬಹುದೆಂದು ಅಪಾರ್ಥವಾಗುತ್ತದೆ. ಆದರೆ ಬ್ರಾಹ್ಮಣನನ್ನು ಕೊಲ್ಲುವುದು ಹೇಗೆ ಅಪರಾಧವಾಗುತ್ತದೋ, ಅದರಂತೆ ಬ್ರಾಹ್ಮಣೀಯನ್ನು ಕೊಲ್ಲುವುದು ಕೂಡ ಅಪರಾಧವಾಗುತ್ತದೆಂಬುದು ಈ ಶ್ರುತಿಯ ಅಭಿಪ್ರಾಯ. ಆದ್ದರಿಂದ 'ಬ್ರಾಹ್ಮಣಃ' ಎಂಬಲ್ಲಿರುವ ಪುಲ್ಲಿಂಗವು ಅವಿವಕ್ಷಿತವಾಗಿದೆ.

'ಸ್ವರ್ಗಕಾಮೋ ಯಜೇತ' ಎಂಬಲ್ಲಿರುವ ಪುಲ್ಲಿಂಗವಾಗಲೀ, 'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿರುವ ಪುಲ್ಲಿಂಗ ಏಕೆ ವಿವಕ್ಷಿತವಲ್ಲ ? ಎಂದರೆ ಉದ್ದೇಶ್ಯವಿಶೇಷಣವಾದ್ದರಿಂದ. 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಸಮ್ಮಾರ್ಜನಕ್ರಿಯೆಗೆ ಯೋಗ್ಯವಾದದ್ದು ಒಂದೇ ಪಾತ್ರೆಯಲ್ಲ. ಅನೇಕ ಪಾತ್ರೆಗಳೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ 'ಗ್ರಹಂ' ಎಂಬಲ್ಲಿರುವ ಏಕವಚನವು ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವೆಂದು ತಿಳಿಯಬೇಕು. ಯಾವುದು ಉದ್ದೇಶ್ಯವಿಶೇಷಣವೋ, ಅದು ಅವಿವಕ್ಷಿತವಾಗಿರುತ್ತದೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಪ್ರಕೃತ 'ಸ್ವರ್ಗಕಾಮೋ ಯಜೇತ' ಎಂಬಲ್ಲಿರುವ ಪುಲ್ಲಿಂಗವು ಉದ್ದೇಶ್ಯ-ವಿಶೇಷಣವಾದ್ದರಿಂದ ಅವಿವಕ್ಷಿತವಾಗಿದೆ. 'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿರುವ ಪುಲ್ಲಿಂಗವೂ ಕೂಡ ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವಾಗಿದೆ.

ಯಾವುದು ಪ್ರತ್ಯಯಾರ್ಥವೋ, ಅದು ಮಾತ್ರ ಉದ್ದೇಶ್ಯವಿಶೇಷಣವಾಗಿರುತ್ತದೆಂಬ ನಿಯಮವಿಲ್ಲ. ಪ್ರಾತಿಪದಿಕಾರ್ಥವೂ ಕೂಡ ಉದ್ದೇಶ್ಯವಿಶೇಷಣವಾಗಬಹುದು. ಇದೇ ವಿಷಯವನ್ನು ಶಿಷ್ಟಕೋಪಾಧಿಕರಣದಲ್ಲಿ ಸೂತ್ರವಾರ್ತಿಕದಲ್ಲಿ ಹೀಗೆ ಸಂಗ್ರಹಿಸಲಾಗಿದೆ

ಯೋ ಬ್ರಾಹ್ಮಣ ಇತಿ ಹ್ಯುಕ್ತೇ ಹನನಪ್ರತಿಷೇಧತಃ ।
ಬ್ರಾಹ್ಮಣೇ ಪ್ರತಿಷೇಧೇ ವಾ ಲಿಂಗಂ ನಾನ್ಯದ್ವಿಧೀಯತೇ ॥

ಬ್ರಾಹ್ಮಣನನ್ನು ಉದ್ದೇಶಿಸಿ, ಹನನವನ್ನು ಪ್ರತಿಷೇಧ ಮಾಡಿದ್ದರಿಂದ 'ಬ್ರಾಹ್ಮಣಃ' ಎಂಬಲ್ಲಿರುವ ಪುಲ್ಲಿಂಗವು ವಿಧಿಸಲ್ಪಟ್ಟಿಲ್ಲ. ಅಥವಾ ಬ್ರಾಹ್ಮಣಹನನವನ್ನು ಉದ್ದೇಶಿಸಿ, ನಿಷೇಧ ಮಾಡಿದಾಗಲೂ

ಪುಲ್ಲಿಂಗವು ವಿವಕ್ಷಿತವಲ್ಲ. ಎರಡೂ ಪಕ್ಷಗಳಲ್ಲಿ ಪುಲ್ಲಿಂಗವು ವಿಹಿತವಾಗಿದೆ ಎಂದು ಹೇಳಿದರೆ ವಾಕ್ಯಭೇದದೋಷವು ಬರುತ್ತದೆ - ಯಾರು ಬ್ರಾಹ್ಮಣನೋ ಅವನನ್ನು ಕೊಲ್ಲಬಾರದು. ಅವನು ಪುರುಷನು ಎಂಬುದಾಗಿ ಬ್ರಾಹ್ಮಣನು ಉದ್ದೇಶನಾಗಿದ್ದಾನೆಂಬ ಪಕ್ಷದಲ್ಲಿ ವಾಕ್ಯಭೇದವು ಬರುತ್ತದೆ. ಬ್ರಾಹ್ಮಣಹನನವು ಉದ್ದೇಶವಾದಾಗ "ಯಾವ ಬ್ರಾಹ್ಮಣ ಹನನವಿದೆಯೋ ಅದನ್ನು ಮಾಡಬಾರದು ಆ ಬ್ರಾಹ್ಮಣ ಹನನವು ಪುಂವಿಷಯಕವಾಗಿದೆ." ಹೀಗೆ ವಾಕ್ಯಭೇದದೋಷವು ಬರುತ್ತದೆ.

ಆದ್ದರಿಂದ ಸ್ತ್ರೀಲಿಂಗಶಬ್ದಗಳಲ್ಲಿರುವ ಲಿಂಗವು ವಿವಕ್ಷಿತವಾಗಬೇಕಾಗಿಲ್ಲ. ಬ್ರಾಹ್ಮಣಶಬ್ದದಿಂದ ಬ್ರಾಹ್ಮಣಿಯು ಪ್ರತಿಪಾದ್ಯವಾಗುವಂತೆ ಪರಮಾತ್ಮನು ಪ್ರಕೃತಿ ವಿಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಬಹುದಲ್ಲವೇ?

**''ब्राह्मणो न हन्तव्यः'' इत्यादाविव ''एषा ह्येव प्रकृतिः'' इत्यादावुद्देश्य-विशेषणत्वाभावात् ।**

ಸಮಾಧಾನ - ಮೇಲಿನ ಆಶಂಕೆಯನ್ನು ಈಗಾಗಲೇ ನಿರಾಕರಿಸಿದಂತಾಗಿದೆ. ಏಕೆಂದರೆ 'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿರುವ ಪುಲ್ಲಿಂಗವು ಹೇಗೆ ಉದ್ದೇಶ್ಯವಿಶೇಷಣವಾಗಿದೆಯೋ, 'ಏಷಾ ಹ್ಯೇವ ಪ್ರಕೃತಿಃ' ಎಂಬಲ್ಲಿರುವ ಸ್ತ್ರೀಲಿಂಗವು ಉದ್ದೇಶವಿಶೇಷಣವಾಗಿರುವುದಿಲ್ಲ.

**प्रत्युत ''पशुना यजेत'' इत्यत्र पशुगतपुंस्त्ववत् विधेयविशेषणत्वेन विवक्षितत्वात् ।**

ಹೊರತಾಗಿ 'ಪಶುನಾ ಯಜೇತ' ಎಂಬಲ್ಲಿ ಪಶುಗತವಾದ ಪುಂಸ್ತ್ವವು ಹೇಗೆ ವಿಧೇಯವಿಶೇಷಣವಾಗಿದೆಯೋ, ಅದರಂತೆ 'ಪ್ರಕೃತಿಃ' ಎಂಬಲ್ಲಿರುವ ಸ್ತ್ರೀಲಿಂಗವೂ ಕೂಡ ವಿಧೇಯವಿಶೇಷಣವಾಗಿದೆ. ಉದ್ದೇಶ್ಯವಿಶೇಷಣವಾದದ್ದು ಮಾತ್ರ ಅವಿವಕ್ಷಿತವಾಗಿದೆ ಹೊರತು, ವಿಧೇಯವಿಶೇಷಣವಾದದ್ದು ಅವಿವಕ್ಷಿತವಾಗುವುದಿಲ್ಲ.

**ब्राह्मणत्वस्य ब्राह्मणप्रातिपदिकार्थत्ववत् स्त्रीत्वस्य स्त्रीत्यादिप्रातिपदिकार्थत्वेन ब्राह्मणत्ववदुद्देश्यविशेषणत्वासम्भवाच्च ।**

ಮತ್ತು 'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿ ಬ್ರಾಹ್ಮಣತ್ವವು ಬ್ರಾಹ್ಮಣ ಎಂಬ ಪ್ರಾತಿಪದಿಕದ ಅರ್ಥವಾಗಿದೆ. ಮತ್ತು ಉದ್ದೇಶ್ಯವಿಶೇಷಣವಾಗಿರುವುದಿಲ್ಲ. ಆದ್ದರಿಂದ ವಿವಕ್ಷಿತವೇ ಆಗಿದೆ. ಅದರಂತೆ ಸ್ತ್ರೀ ಎಂಬ ಶಬ್ದದಲ್ಲಿಯೂ ಸ್ತ್ರೀತ್ವವು ಪ್ರಾತಿಪ್ರದಿಕದ ಅರ್ಥವಾಗಿದೆ. ಮತ್ತು ಉದ್ದೇಶ್ಯವಿಶೇಷಣ-ವಾಗಿರುವುದಿಲ್ಲ. ಹೀಗಿರುವಾಗ ಸ್ತ್ರೀಶಬ್ದಪ್ರತಿಪಾದ್ಯವಾದ ಸ್ತ್ರೀತ್ವವು ಅವಿವಕ್ಷಿತವಾಗುತ್ತದೆ ಎಂದು ಹೇಳುವುದು ಅಸಂಭಾವಿತ.

**नपुंसकमित्यादिशब्दानां ब्रह्मणि ''ज्योतिरुपक्रमात्'' इति न्यायेन यौगिकत्वेऽपि ''तदधीनत्वात्'' इति न्यायेन स्वातन्त्र्यनिमित्तकत्वेऽपि प्रसिद्धस्य नपुंसकत्वस्य तद्गतत्वं निमित्तीकृत्य ब्रह्मणि प्रवृत्तिरिह पूर्वपक्षे न्यायसाम्येनाक्षिप्यते।**

'ನಪುಂಸಕಮ್' ಮೊದಲಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲಾರ ಎಂಬುದು ಈ ಅಧಿಕರಣದ ಮತ್ತೊಂದು ಆಕ್ಷೇಪ. ಸ್ತ್ರೀಲಿಂಗದಲ್ಲಿರುವ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲಾರ. 'ಸ್ತ್ರೀ' 'ಯೋಷಿತ್' ಮೊದಲಾದ ಶಬ್ದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನಾಗಲಾರ. 'ನಪುಂಸಕಂ' ಇತ್ಯಾದಿ ಶಬ್ದಗಳಿಂದಲೂ ಕೂಡ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲ ಎಂದು ತಿಳಿಯಬೇಕು. ವಾಸ್ತವಿಕವಾಗಿ 'ಜ್ಯೋತಿರುಪಕ್ರಮಾತ್' ಇತ್ಯಾದಿ ಅಧಿಕರಣದಲ್ಲಿ ಹೇಳಿದಂತೆ ಯೌಗಿಕವಾಗಿ ಪರಮಾತ್ಮನಲ್ಲಿ ನಪುಂಸಕಶಬ್ದವನ್ನು ಸಮನ್ವಯ ಮಾಡಬಹುದು. ಸ್ತ್ರೀಯರಿಂದಾಗಲೀ, ಪುರುಷರಿಂದಾಗಲೀ ಪರಮಾತ್ಮನು ಆಕರ್ಷಿತನಾಗದ ಕಾರಣ ನಪುಂಸಕನೆನಿಸುತ್ತಾನೆಂದು ಯೋಗಿಕಾರ್ಥ ಮಾಡಲು ಬರುತ್ತದೆ. ಮತ್ತು ಎಲ್ಲಾ ನಪುಂಸಕ-ಪದಾರ್ಥಗಳು ಭಗವದಧೀನವಾದ್ದರಿಂದ ತದಧೀನತ್ವನ್ಯಾಯದಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿ-ನಿಮಿತ್ತವನ್ನು ವಿವಕ್ಷಿಸಿಯೂ 'ನಪುಂಸಕಂ' ಮೊದಲಾದ ಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬಹುದು. ಆದರೆ ಈ ಅಧಿಕರಣದಲ್ಲಿ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸಿ ಬ್ರಹ್ಮನಲ್ಲಿ ಶಬ್ದಗಳು ಪ್ರವೃತ್ತವಾಗುವುದಿಲ್ಲವೆಂದು ಚರ್ಚಿಸಲಾಗಿದೆ. ಆದ್ದರಿಂದ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದಾಗ, ಸ್ತ್ರೀ ಮೊದಲಾದ ಶಬ್ದಗಳಿಂದ ಪರಮಾತ್ಮನು ಹೇಗೆ ಪ್ರತಿಪಾದ್ಯನಾಗುವುದಿಲ್ಲವೋ, ಅದೇ ರೀತಿಯಾಗಿ 'ನಪುಂಸಕಂ' ಎಂಬ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ನಪುಂಸಕತ್ವವೂ ಕೂಡ ಬ್ರಹ್ಮನಲ್ಲಿ ಬರುವುದಿಲ್ಲ ಎಂದು ನ್ಯಾಯಸಾಮ್ಯದಿಂದ ಆಕ್ಷೇಪಿಸಲಾಗಿದೆ.

**एवं गायत्र्यधिकरणादेरप्याक्षेपः । यद्वा तत्पूर्वपक्षे छन्दस्यपि स्त्रीलिङ्गं प्रयोगसाधु । अत्र तु चित्प्रकृतावर्थसाध्विति वैषम्यान्न तस्याक्षेप इति ।**

ಗಾಯತ್ರ್ಯಧಿಕರಣದಲ್ಲಿ ಗಾಯತ್ರೀ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತೆ ಇಲ್ಲಿಯೂ ಕೂಡ ಪ್ರಕೃತಿ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಬಹುದಲ್ಲವೇ? ಎಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಏಕೆಂದರೆ ಗಾಯತ್ರೀ ಮೊದಲಾದ ಶಬ್ದಗಳೂ ಕೂಡ ಈ ಅಧಿಕರಣದಲ್ಲಿ ಆಕ್ಷೇಪಿಸಲ್ಪಟ್ಟಿವೆ. ಆದ್ದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲ. ಅಥವಾ ಗಾಯತ್ರ್ಯಧಿಕರಣದ ಪೂರ್ವಪಕ್ಷದಲ್ಲಿ ಸ್ತ್ರೀಲಿಂಗವಾದ ಗಾಯತ್ರಿಶಬ್ದವು ಛಂದೋವಿಶೇಷದಲ್ಲಿ ಪ್ರಯೋಗತಃ ಸಾಧುವಾಗುತ್ತದೆಂದು ಸಮರ್ಥಿಸಲಾಗಿದೆ. ಈ ಅಧಿಕರಣದ ಪೂರ್ವಪಕ್ಷದಲ್ಲಿ ಚಿತ್‌ಪ್ರಕೃತಿಯಲ್ಲಿ ಸ್ತ್ರೀಲಿಂಗಶಬ್ದವು ಅರ್ಥತಃ ಸಾಧುವಾಗುತ್ತದೆಂದು ಸಮರ್ಥಿಸಲಾಗಿದೆ. ಹೀಗೆ ಗಾಯತ್ರ್ಯಧಿಕರಣದ ಪೂರ್ವಪಕ್ಷಕ್ಕೂ, ಈ ಪ್ರಕೃತ್ಯಧಿಕರಣದ ಪೂರ್ವಪಕ್ಷಕ್ಕೂ ವೈಷಮ್ಯವಿರುವುದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.

**प्रकाशः —**

**स्त्रीत्यादीति ।। अत्र प्रातिपदिकार्थस्यैव स्त्रीत्त्वादिति भावः ।**

ವಿವರಣೆ - ಕೆಲವು ಶಬ್ದಗಳು ಸ್ತ್ರೀಲಿಂಗದಲ್ಲಿರುತ್ತವೆ. ಇನ್ನೂ ಕೆಲವು ಶಬ್ದಗಳು ಸ್ತ್ರೀಯನ್ನೇ ಪ್ರತಿಪಾದನೆ ಮಾಡುತ್ತವೆ. ಸ್ತ್ರೀಲಿಂಗವಿರುವ ಶಬ್ದಗಳೆಲ್ಲವೂ ಸ್ತ್ರೀವ್ಯಕ್ತಿಯನ್ನೇ ಪ್ರತಿಪಾದನೆ ಮಾಡಬೇಕೆಂಬ ನಿಯಮವಿಲ್ಲ. ಯಾವ ರೀತಿಯಾಗಿ 'ಕಲತ್ರಮ್' ಎಂಬ ಶಬ್ದವು ನಪುಂಸಕಲಿಂಗದಲ್ಲಿದ್ದರೂ ನಪುಂಸಕವ್ಯಕ್ತಿಯನ್ನು ಪ್ರತಿಪಾದನೆ ಮಾಡದೇ ಸ್ತ್ರೀಯನ್ನು ಪ್ರತಿಪಾದನೆ ಮಾಡುತ್ತದೋ, ಅದರಂತೆ ಕೆಲವು ಸ್ತ್ರೀಲಿಂಗಶಬ್ದಗಳು ಸ್ತ್ರೀವ್ಯಕ್ತಿಯನ್ನು ಪ್ರತಿಪಾದನೆ ಮಾಡದೇ ಪುರುಷನನ್ನೂ ಕೂಡ ಪ್ರತಿಪಾದನೆ ಮಾಡಬಹುದು. ಆದ್ದರಿಂದ ಪ್ರಕೃತಿ, ವಿಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪುರುಷನಾದ ಪರಮಾತ್ಮನು ಪ್ರತಿಪಾದ್ಯನಾಗಬಹುದು. ಆದರೆ ಸ್ತ್ರೀಯನ್ನೇ ಪ್ರತಿಪಾದನೆ ಮಾಡುವ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲು ಸಾಧ್ಯವಿಲ್ಲ. ಉದಾಹರಣೆ - 'ಸ್ತ್ರೀ' 'ನಾರೀ' 'ಯೋಷಿತ್' ಇವೇ ಮೊದಲಾದ ಶಬ್ದಗಳು ಸ್ತ್ರೀಲಿಂಗಗಳಾಗಿರುವುದಷ್ಟೇ ಅಲ್ಲ. ಇವುಗಳ ಪ್ರಾತಿಪದಿಕವು ಸ್ತ್ರೀಯ ವ್ಯಕ್ತಿಯನ್ನೇ ಪ್ರತಿಪಾದನೆ ಮಾಡುತ್ತಿದೆ. ಪುರುಷನಾದ ಭಗವಂತನು ಇಂತಹ ಶಬ್ದಗಳಿಂದ ಪ್ರತಿಪಾದ್ಯನಾಗಲು ಸಾಧ್ಯವಿಲ್ಲ.

**प्रकाशः — ननु ''ताश्चेन्द्रधर्मनासत्यसंश्रयाच्छ्रिय ईरिताः'' इत्युक्त्याऽन्यत्र श्रीशब्दस्य योगेन वृत्तिवदिहापि स्तृणात्याच्छादयतीति स्त्रीशब्दार्थोऽस्त्विति चेन्न ।**

ಪ್ರಶ್ನೆ - 'ಸ್ತ್ರೀ' ಮೊದಲಾದ ಶಬ್ದಗಳು ಸ್ತ್ರೀವ್ಯಕ್ತಿಯನ್ನೇ ಪ್ರತಿಪಾದನೆ ಮಾಡುತ್ತವೆ ಎಂದೇನೂ ಒಪ್ಪಬೇಕಾಗಿಲ್ಲ. ಯೋಗಾರ್ಥವನ್ನು ಹೇಳುವ ಮೂಲಕ ಬೇರೆ ವ್ಯಕ್ತಿಗಳನ್ನೂ ಪ್ರತಿಪಾದನೆ ಮಾಡಬಹುದು. ಉದಾ - 'ಶ್ರೀ' ಎಂಬ ಶಬ್ದವು ಮುಖ್ಯವಾಗಿ ಲಕ್ಷ್ಮೀದೇವಿಯನ್ನೇ ಪ್ರತಿಪಾದನೆ ಮಾಡುತ್ತದೆ. ಆದರೆ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು ಇದೇ 'ಶ್ರೀ' ಶಬ್ದವಾಚ್ಯತ್ವವನ್ನು ಭಾರತೀ, ಶ್ಯಾಮಲಾ, ಶಚೀ ಮೊದಲಾದವರೂ ಪ್ರತಿಪಾದ್ಯರಾಗುತ್ತಾರೆಂದು ಹೇಳಿದ್ದಾರೆ - 'ತಾಶ್ಚೇಂದ್ರಧರ್ಮನಾ-ಸತ್ಯಸಂಶ್ರಯಾಚ್ಛ್ರಿಯ ಈರಿತಾಃ' ಇಂದ್ರ, ಧರ್ಮರಾಜ, ಅಶ್ವಿನೀದೇವತೆಗಳು ಇವರನ್ನು ಆಶ್ರಯಿಸಿರುವ ಕಾರಣ ಶಚೀ, ಶ್ಯಾಮಲಾ, ಉಷಾ ಮೊದಲಾದವರೂ ಕೂಡ 'ಶ್ರೀ' ಶಬ್ದದಿಂದ ಪ್ರತಿಪಾದ್ಯರಾಗುತ್ತಾರೆ. ಹೀಗೆ ಯೋಗವೃತ್ತಿಯಿಂದ ಬೇರೆಯವರು ಹೇಗೆ ಪ್ರತಿಪಾದ್ಯರಾಗುತ್ತಾರೋ, ಅದರಂತೆ 'ಸ್ತೃಣಾತಿ = ಆಚ್ಛಾದಯತಿ' ಎಂಬ ವ್ಯುತ್ಪತ್ತಿಯಿಂದ ಜಗತ್ತಿನಲ್ಲೆಲ್ಲೆಡೆ ವ್ಯಾಪ್ತನಾಗಿರುವ ಪರಮಾತ್ಮನು ಸ್ತ್ರೀಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಕೆಲವು ಶಬ್ದಗಳು ಸ್ತ್ರೀವ್ಯಕ್ತಿಯನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ನಿಯಮ ತಪ್ಪಲ್ಲವೇ?

**प्रकाशः — प्रसिद्धप्रवृत्तिनिमित्तस्य तद्गतत्वेनेहाभिप्रेतत्वात् । व्यक्तमेतद्ग्रन्थ एवाग्रे ।।**

ಉತ್ತರ - ಇದು ಸರಿಯಲ್ಲ. ಸ್ತ್ರೀ ಮೊದಲಾದ ಶಬ್ದಗಳಿಗೆ ಪ್ರಸಿದ್ಧವಾದ ಯಾವ ಪ್ರವೃತ್ತಿನಿಮಿತ್ತವಿರುತ್ತದೋ, ಅದು ಆಯಾ ವ್ಯಕ್ತಿಗಳಲ್ಲಿ ಬರಬೇಕೆಂಬುದು ಪ್ರಕೃತ ವಿವಕ್ಷಿತವಾಗಿದೆ. ಸ್ತ್ರೀಶಬ್ದಕ್ಕೆ 'ಸ್ತೃಣಾತಿ = ಆಚ್ಛಾದಯತಿ' ಎಂಬ ಯೋಗಾರ್ಥವನ್ನು ತಿಳಿಯದೇ ಸ್ತ್ರೀತ್ವ ಎಂಬ ಪ್ರಸಿದ್ಧವಾದ ಪ್ರವೃತ್ತಿನಿಮಿತ್ತವು ಯಾವ ವ್ಯಕ್ತಿಯಲ್ಲಿ ಇರುತ್ತದೋ, ಅದೇ ವ್ಯಕ್ತಿಯು ಸ್ತ್ರೀಶಬ್ದದಿಂದ ಪ್ರತಿಪಾದ್ಯವೆಂದು ತಿಳಿಯಬೇಕು. ಇಂತಹ ಸ್ತ್ರೀತ್ವ ಎಂಬ ಪ್ರವೃತ್ತಿನಿಮಿತ್ತ ಕೇವಲ ಸ್ತ್ರೀಯರಲ್ಲೇ ಇರುತ್ತದೆ ಹೊರತು, ಪುರುಷನಾದ ಪರಮಾತ್ಮನಲ್ಲಿ ಇರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವನ್ನು ಈ ಅಧಿಕರಣದಲ್ಲಿ ವಿವಕ್ಷಿಸದೇ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಸ್ತ್ರೀಶಬ್ದಗಳ ಸಮನ್ವಯವಿಚಾರವು ಪ್ರಸಕ್ತವಾಗಿದೆ. ಇದನ್ನು ಮುಂದೆ ಗ್ರಂಥಕಾರರೇ ಸ್ಪಷ್ಟಪಡಿಸುತ್ತಾರೆ.

**प्रकाशः – षष्ठादाविति ।।** षष्ठस्याद्यपादे ''लिङ्गविशेषनिर्देशात् पुंयुक्तमैति शायनः'' इति तृतीयेऽधिकरणे पुंस एवाधिकार उत स्त्रियोऽपीति संशये तत्र पुल्लिङ्गनिर्देशात् पुंस एवाधिकार इति प्राप्ते ग्रहैकत्ववदुद्देश्यविशेषणत्वाल्लिङ्गं न विवक्षितमिति स्त्रिया अप्यधिकार इति स्थिते

ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದಲ್ಲಿ ಸ್ತ್ರೀಯರಿಗೆ ವೇದವಿದ್ಯಾಧಿಕಾರವಿರುತ್ತದೆ ಎಂದು ನಿರ್ಣಯಿಸಿದ್ದಾರೆ. ಆರನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಲಿಂಗವಿಶೇಷನಿರ್ದೇಶಾತ್ ಪುಂಯುಕ್ತಮೈತಿ ಶಾಯನಃ' ಎಂಬ ಮೂರನೆಯ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಲಾಗಿದೆ -

'ಲಿಂಗವಿಶೇಷನಿರ್ದೇಶಾತ್ ಪುಂಯುಕ್ತಮೈತಿ ಶಾಯನಃ' (೬-೧-೩)[1]

---

(१) भाट्टसङ्ग्रहः –

अथ तृतीयं यागादिषु स्त्रीपुंसयोरुभयोरधिकाराधिकरणम् ।। (सूत्राणि ६-१६)

लिङ्गविशेषनिर्देशात् पुंयुक्तमैतिशायनः ।। ६ ।।

(तदुक्तित्वाच्च दोषश्रुतिरविज्ञाते ।।७।। जातिन्तु बादरायणोऽविशेषात्तस्मात् स्त्र्यपि प्रतीयेत जात्यर्थस्याविशिष्टत्वात् ।।८।। चोदितत्वाद्यथाश्रुति ।।९।। द्रव्यत्वात्तु पुंसां स्याद्द्रव्यसंयुक्तं क्रयविक्रयाभ्यामद्रव्यत्वं स्त्रीणां द्रव्यैः समानयोगित्वात् ।।१०।। तथा चान्यार्थदर्शनम् ।।११।। तादर्थ्यात्कर्मतादर्थ्यम् ।।१२।। फलोत्साहाविशेषात्तु ।।१३।। अर्थेन च समवेतत्वात् ।।१४।। क्रयस्य धर्ममात्रत्वम् ।।१५।। स्ववत्तामपि दर्शयति ।।१६।।)

पूर्वन्यायेनात्र शङ्कनात्सङ्गतिः । शक्तानामधिकार इत्युक्तम् । तत्र किं पुंसोमेवाधिकारोऽथ स्त्रिया अपीति सन्देहे, स्वर्गकाम इति पुल्लिङ्गनिर्देशात्पुंस एवाधिकारो न स्त्रियास्तिर्यगादीनामिव । न च स्वर्गकाम इत्यस्योद्देश्यत्वाद् ग्रहैकत्ववल्लिङ्गमविवक्षितमिति वाच्यम् । लिङ्गस्य प्रातिपदिकार्थतया ग्रहैकत्ववत्प्रत्ययार्थत्वाभावाद्ग्रहत्ववत् विवक्षितत्वमेव । उक्तं हि प्रथमाध्यायस्य चतुर्थपादे **बहुषु बहुवचनम्** इत्यत्र **कैयटे**

ಯಜ್ಞಯಾಗಾದಿಗಳಲ್ಲಿ ಪುರುಷರಿಗೆ ಮಾತ್ರ ಅಧಿಕಾರವೋ, ಅಥವಾ ಸ್ತ್ರೀಯರಿಗೂ ಕೂಡ ಅಧಿಕಾರವಿರುತ್ತದೋ ? ಎಂಬುದು ಸಂಶಯ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳಲ್ಲಿ ಪುಲ್ಲಿಂಗಶಬ್ದಗಳಷ್ಟೇ ಶ್ರುತವಾಗಿರುವುದರಿಂದ ಪುರುಷನು ಮಾತ್ರ ಯಾಗಾಧಿಕಾರವನ್ನು ಹೊಂದಿರುತ್ತಾನೆಂದು ಪೂರ್ವಪಕ್ಷ.

ಪುರುಷರಿಗಷ್ಟೇ ಯಾಗಾಧಿಕಾರವಲ್ಲ. ಸ್ತ್ರೀಯರಿಗೂ ಕೂಡ ಯಾಗಾಧಿಕಾರವಿರುತ್ತದೆಂದು ಸಿದ್ಧಾಂತ. 'ಸ್ವರ್ಗಕಾಮೋ ಯಜೇತ' ಇತ್ಯಾದ ವಾಕ್ಯಗಳಲ್ಲಿ ಯಾವ ಪುಲ್ಲಿಂಗವಿದೆಯೋ, ಅದು ಅವಿವಕ್ಷಿತವಾಗಿದೆ. 'ಗ್ರಹಂ ಸಮ್ಮಾರ್ಷ್ಟಿ' ಎಂಬ ವಾಕ್ಯದಲ್ಲಿ ಏಕವಚನದ ಅರ್ಥವು ಅವಿವಕ್ಷಿತವಾದ್ದರಿಂದ ಸಮ್ಮಾರ್ಜನ ಕ್ರಿಯೆಯಲ್ಲಿ ಒಂದೇ ಪಾತ್ರೆಯನ್ನು ಉಪಯೋಗಿಸದೇ ಅನೇಕ ಪಾತ್ರೆಗಳನ್ನು ಉಪಯೋಗಿಸಲಾಗುತ್ತದೆ. ಏಕೆಂದರೆ ಯಾವುದು ಉದ್ದೇಶವಿಶೇಷಣವೋ, ಅದರ ಅರ್ಥವನ್ನು ವಿವಕ್ಷಿಸಬೇಕಾಗಿಲ್ಲವೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಲ್ಪಟ್ಟದೆ. ಸಮ್ಮಾರ್ಜನಕ್ರಿಯೆಯಲ್ಲಿ ಗ್ರಹವು ಉದ್ದೇಶವಾಗಿದೆ. ಆ ಗ್ರಹದಲ್ಲಿ ಏಕತ್ವವು ವಿಶೇಷಣವಾದ್ದರಿಂದ ಉದ್ದೇಶವಿಶೇಷಣ ಎನಿಸುತ್ತದೆ. ಹಾಗಾಗಿ ಏಕತ್ವ ವಿಶಿಷ್ಟವಾದ ಗ್ರಹತ್ವವನ್ನು ವಿವಕ್ಷಿಸದೇ, ಬಹುತ್ವವಿಶಿಷ್ಟವಾದ ಗ್ರಹವನ್ನೇ ಎಲ್ಲರೂ ವಿವಕ್ಷಿಸುತ್ತಾರೆ. ಅದರಂತೆ ಪ್ರಕೃತ 'ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳಲ್ಲಿ ಯಾವ ಪುಲ್ಲಿಂಗವಿದೆಯೋ, ಅದು ಉದ್ದೇಶವಿಶೇಷಣವಾದ್ದರಿಂದ ವಿವಕ್ಷಿಸಬೇಕಾಗಿಲ್ಲ. ಆದ್ದರಿಂದ ಪುಲ್ಲಿಂಗವು ಅವಿವಕ್ಷಿತವಾದ ಕಾರಣ ಸ್ವರ್ಗಕಾಮನೆಯುಳ್ಳ ಸ್ತ್ರೀಯರೂ ಕೂಡ ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡಬಹುದು.

**प्रकाशः** – ''स्ववतोस्तु वचनादैकधर्म्यं स्यात्'' इति चतुर्थेऽधिकरणे दम्पतिभ्यां पृथक्कार्यं सह वेति संशये यजेतेत्याख्यातप्रत्ययगतायास्संख्याया

**मञ्जर्याञ्च** ''स्वार्थद्रव्यलिङ्गसंख्याकर्मादिकारकविशेषा'' इति । ''स्वार्थादिपञ्चकः प्रातिपदिकार्थः स्वार्थादित्रिकं वा'' इति ।

भार्या पुत्रश्च दासश्च त्रय एवाधनाः स्मृताः ।

इति स्मृत्या स्त्रिया अद्रव्यत्वेन द्रव्यत्यागायोगादनुष्ठासम्भवादननुष्ठाने चाधिकारायोगाच्च नास्त्यधिकार इति **प्राप्तम्** । तदाह **सूत्रे**, ''स्वर्गकामः'' इति **पुलिङ्गनिर्देशात्पुंयुक्तं** पुमधिकारिकं **कर्मेति एतिशायनो** मन्यत इति । **सिद्धान्तस्तु, ग्रहस्वरूपस्य विवक्षा हि न** प्रातिपदिकार्थत्वहेतुना । किन्तु उद्देश्यत्वहेतुना । **लिङ्गन्तु** नोद्देश्यम् । किन्तु ग्रहगतैकत्व-वदुद्देश्यविशेषणत्वादविवक्षिमित्यस्त्यधिकारः स्त्रिया अपि । विभक्तिविकाराणां टाबादीनामन्वयव्यतिरेकाभ्यां **लिङ्गाभिधायित्वदर्शनाल्लिङ्गस्य प्रातिपदिकार्थत्वोक्तिरयुक्तेत्याहुः।** न चाद्रव्यत्वं तस्या इति शंक्यम् । ''पुत्राभावे दुहिता'' इति स्मृत्या पित्रा दत्तधनस्य सम्भवादायसम्भवाच्च । ''भार्या पुत्रश्च'' इति वचनन्त्व स्वातन्त्र्यपरमिति । फलन्तु, स्त्रिया अपि **कर्मफलभोक्तृत्वरूपाधिकारसिद्धिरिति** ।

इति तृतीयं यागादिषु **स्त्रीपुंसयोरुभयोरधिकाराधिकरणम्** (सूत्राणि ६-१६)

ಪ್ರಕೃತ್ಯಧಿಕರಣ (೧-೪-೬)

**उद्देश्यगतत्वाभावेन विवक्षाया वारयितुमशक्यत्वादेकैककर्तृकत्वाद्दंपतिभ्यां पृथगेव कर्मानुष्ठेयमिति प्राप्ते**

ಮೂರನೆಯ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ ಮೇಲೆ ಮುಂದಿನ ನಾಲ್ಕನೆಯ ಅಧಿಕರಣದಲ್ಲಿ ದಂಪತಿಗಳು ಪ್ರತ್ಯೇಕ ಪ್ರತ್ಯೇಕವಾಗಿ ಜ್ಯೋತಿಷ್ಟೋಮಾದಿ ಯಾಗಗಳನ್ನು ಆಚರಿಸಬೇಕೋ, ಅಥವಾ ಒಟ್ಟಿಗೆ ಆಚರಿಸಬೇಕೋ ? ಎಂಬ ಸಂಶಯವು ಪ್ರಾಪ್ತವಾಗುತ್ತವೆ.

ಪೂರ್ವಪಕ್ಷ - 'ಯಜೇತ' ಎಂಬಲ್ಲಿರುವ 'ಆಖ್ಯಾತ' ಪ್ರತ್ಯಯದಿಂದ ಏಕತ್ವಸಂಖ್ಯೆಯು ತಿಳಿಯುತ್ತಿದೆ. 'ಸ್ವರ್ಗಕಾಮಃ' ಎಂಬಲ್ಲಿರುವ ಪುಲ್ಲಿಂಗವು ಉದ್ದೇಶವಿಶೇಷಣವಾದ್ದರಿಂದ ಅವಿವಕ್ಷಿತವಾಗಿದ್ದರೂ 'ಯಜೇತ' ಎಂಬಲ್ಲಿರುವ ಏಕತ್ವಸಂಖ್ಯೆಯು ಅವಿವಕ್ಷಿತವಲ್ಲ. ಏಕೆಂದರೆ ಇದು ವಿಧೇಯಗತವಿಶೇಷಣವಾಗಿದೆ. ಯಾಗಕ್ರಿಯೆಯು ವಿಧೇಯವಾದ್ದರಿಂದ ಅದರಲ್ಲಿ ಏಕತ್ವಸಂಖ್ಯೆಯು ವಿಶೇಷಣವಾಗುತ್ತದೆ. ಆದ್ದರಿಂದ ಒಬ್ಬನೇ ಯಾಗವನ್ನು ಮಾಡಬೇಕು. ಇಬ್ಬರು ಒಟ್ಟಿಗೆ ಸೇರಿ ಮಾಡಬಾರದು ಎಂದು ತಿಳಿಯುತ್ತದೆ. ಆದ್ದರಿಂದ ಯಜಮಾನನೇ ಬೇರೆ ಯಾಗವನ್ನು ಮಾಡಬೇಕು. ಯಜಮಾನನ ಪತ್ನಿಯು ಬೇರೆಯಾಗಿ ಯಾಗವನ್ನು ಆಚರಿಸಬೇಕು.

**प्रकाशः – कर्मणि तत्र तत्र पत्न्यवेक्षणं यजमानावेक्षणमित्युभयोरप्याम्नानाद-सहायकर्तृत्वे कर्मवैगुण्यप्रसङ्गादाख्यातप्रत्ययोपात्तैकत्वसंख्याया दम्पत्योरेकमेव कर्तृत्वमिति तदभिप्रायेणाग्नीषोमौ देवतेतिवदुपपत्तेर्दंपत्योस्सहाधिकार इत्युक्तेरिति भावः ।**

ಸಿದ್ಧಾಂತ - ಪತ್ನಿಯ ಅವೇಕ್ಷಣವನ್ನು ಮತ್ತು ಯಜಮಾನನ ಅವೇಕ್ಷಣವನ್ನು ಜ್ಯೋತಿಷ್ಟೋಮಾದಿ ಯಾಗಗಳಲ್ಲಿ ವಿಧಿಸಲಾಗಿದೆ. ಒಂದುವೇಳೆ ಇಬ್ಬರೂ ಕೂಡ ಒಟ್ಟಿಗೆ ಯಾಗವನ್ನು ಆಚರಿಸದೇ ಎಲ್ಲಿಯೋ ಕುಳಿತು ಯಾಗವನ್ನು ಮಾಡುವುದಾದರೆ, ಪತ್ನಿಯ ಅವೇಕ್ಷಣವನ್ನಾಗಲೀ, ಯಜಮಾನನ ಅವೇಕ್ಷಣವನ್ನಾಗಲೀ ಕೂಡಿಸಲು ಸಾಧ್ಯವಿಲ್ಲ. ಆದ್ದರಿಂದ ಯಜಮಾನ ಮತ್ತು ಯಜಮಾನನ ಪತ್ನಿ ಇಬ್ಬರು ಒಟ್ಟಿಗೇ ಕುಳಿತು ಜ್ಯೋತಿಷ್ಟೋಮಾದಿ ಯಾಗಗಳನ್ನು ಆಚರಿಸಬೇಕು. ಮತ್ತು ಒಟ್ಟಿಗೆ ಕುಳಿತು ಯಾಗವನ್ನು ಆಚರಿಸದೇ ಇದ್ದಲ್ಲಿ ಪತ್ನಿಯ ಅವೇಕ್ಷಣ, ಯಜಮಾನ ಅವೇಕ್ಷಣ ಮೊದಲಾದ ಕರ್ಮಗಳ ವೈಗುಣ್ಯವು ಪ್ರಾಪ್ತವಾಗುತ್ತವೆ. ಹಾಗಾದರೆ 'ಯಜೇತ' ಎಂಬಲ್ಲಿರುವ ಏಕತ್ವಸಂಖ್ಯೆಗೆ ಅನ್ವಯವನ್ನು ಹೇಗೆ ತಿಳಿಯಬೇಕು? ಎಂದು ಪ್ರಶ್ನಿಸಬಾರದು. ದಂಪತಿಗಳಲ್ಲಿ ಒಂದೇ ಕರ್ತೃತ್ವವನ್ನು ಶ್ರುತಿಯು ವಿಧಾನ ಮಾಡುತ್ತಿದೆ. ಅದಕ್ಕಾಗಿ ಏಕವಚನವು ಸಾರ್ಥಕ. 'ಅಗ್ನಿಸೋಮೋ ದೇವತಾ' ಎಂಬಲ್ಲಿ ಅಗ್ನಿ ಮತ್ತು ಸೋಮ ಇಬ್ಬರೂ ದೇವತೆಗಳಲ್ಲಿ ದೇವತಾತ್ವ ಎಂಬ ಒಂದೇ ಧರ್ಮವಿದೆ. ಈ ದೇವತಾತ್ವವು ವ್ಯಾಸಜ್ಯವೃತ್ತಿಯಾದ ಧರ್ಮ. ಅದರಂತೆ ದಂಪತಿಗಳಲ್ಲಿ ಕರ್ತೃತ್ವವೂ ಕೂಡ ವ್ಯಾಸಜ್ಯವೃತ್ತಿಯಾದ ಧರ್ಮವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ಯಜಮಾನ ಮತ್ತು ಯಜಮಾನನ ಪತ್ನಿ ಇಬ್ಬರೂ ಸೇರಿ ಯಾಗಕ್ರಿಯೆಯನ್ನು ಆಚರಿಸಬೇಕು.[೧]

(೧) ನಮ್ಮ ಸಿದ್ಧಾಂತದಲ್ಲಿ ಸ್ತ್ರೀಯರಿಗೆ ವೇದಾಧಿಕಾರವಿಲ್ಲ. ಮತ್ತು ಯಜ್ಞದಲ್ಲಿ ವೇದಮಂತ್ರವನ್ನು ಪಠಿಸಿ, ಪರಿಪೂರ್ಣಚಂದ್ರಿಕಾ

**प्रकाशः – ननु स्त्र्यादिप्रातिपदिकार्थत्वात् ग्रहस्वरूपवत् विवक्षितमेवेत्यत आह – प्रातिपदिकेति ।।**

ಸ್ತ್ರೀ ಶಬ್ದದಿಂದ ಸ್ತ್ರೀವ್ಯಕ್ತಿಯೇ ಪ್ರತಿಪಾದ್ಯವಾಗಬೇಕು. ಏಕೆಂದರೆ ಸ್ತ್ರೀ ಎಂಬ ಪ್ರಾತಿಪದಿಕದಿಂದ ಸ್ತ್ರೀತ್ವವು ತಿಳಿಯುತ್ತಿದೆ ಹೊರತು, ಪ್ರತ್ಯಯಾರ್ಥದಿಂದ ತಿಳಿಯುತ್ತಿಲ್ಲ. 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಪ್ರತ್ಯಯಾರ್ಥವೆನಿಸಿದ ಏಕತ್ವವೂ ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವಾದರೂ, ಗ್ರಹವು ಪ್ರಾತಿಪದಿಕಾರ್ಥವಾದ್ದರಿಂದ, 'ಗ್ರಹ' ಎಂಬ ಪ್ರಾತಿಪದಿಕಾರ್ಥವು ಉದ್ದೇಶ್ಯವಿಶೇಷಣವಲ್ಲದ ಕಾರಣ ವಿವಕ್ಷಿತವೇ ಆಗುತ್ತದೆ. ಅದೇ ರೀತಿಯಾಗಿ 'ಸ್ತ್ರೀ' ಎಂಬ ಪ್ರಾತಿಪದಿಕದಿಂದ ತಿಳಿಯುತ್ತಿರುವ ಸ್ತ್ರೀತ್ವವು ಉದ್ದೇಶ್ಯವಿಶೇಷಣವಲ್ಲದ ಕಾರಣ ವಿವಕ್ಷಿತ ಆಗಬೇಕಲ್ಲವೇ? ಈ ಪ್ರಶ್ನೆಗೆ 'ಪ್ರಾತಿಪದಿಕ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಪ್ರತ್ಯಯಾರ್ಥವು ಮಾತ್ರ ಉದ್ದೇಶ್ಯವಿಶೇಷಣವಾಗಬೇಕೆಂಬ ನಿಯಮವಿಲ್ಲ. 'ಯೋಷಿತಮಗ್ನಿಂ ಧ್ಯಾಯೀತ' ಇತ್ಯಾದಿ ಸ್ಥಳದಲ್ಲಿ ಪ್ರಾತಿಪದಿಕಾರ್ಥವೂ ಕೂಡ ಉದ್ದೇಶ್ಯವಿಶೇಷಣವಾಗಿರುವುದು ಕಂಡಿದೆ. ಆದ್ದರಿಂದ ಸ್ತ್ರೀ ಇತ್ಯಾದಿ ಪ್ರಾತಿಪದಿಕಗಳಿಂದ ತಿಳಿಯಲ್ಪಡುವ ಸ್ತ್ರೀತ್ವವು ಉದ್ದೇಶ್ಯವಿಶೇಷಣವೂ ಆಗಬಹುದು. ಆದ್ದರಿಂದ ಪ್ರಾತಿಪದಿಕಾರ್ಥವು ಅವಿವಕ್ಷಿತವಾಗಲು ಏನೂ ಬಾಧಕವಿಲ್ಲ.

**प्रकाशः –**

''प्रकृत्यर्थोऽपि खल्वेतदुद्देश्यस्य विशेषणम् ।
संख्यया तुल्यनीतित्वान्न विवक्षां प्रपद्यते''

इति शास्त्रदीपिकायामेवोक्तेरिति भावः ।।

'ಪ್ರಕೃತ್ಯರ್ಥೋಽಪಿ ಖಲ್ವೇತದುದ್ದೇಶ್ಯಸ್ಯ ವಿಶೇಷಣಮ್ ।
ಸಂಖ್ಯಯಾ ತುಲ್ಯನೀತಿತ್ವಾನ್ನ ವಿವಕ್ಷಾಂ ಪ್ರಪದ್ಯತೇ ।।''

---

ಆಹುತಿಯನ್ನು ನೀಡುವ ಕ್ರಮವೂ ಕೂಡ ಇರುವುದಿಲ್ಲ. ಆದರೆ ಮೀಮಾಂಸಕರ ಸಿದ್ಧಾಂತದಲ್ಲಿ ವೇದದ ಕೆಲವು ಮಂತ್ರಗಳನ್ನು ಸ್ತ್ರೀಯರೂ ಕೂಡ ಪಠಿಸಬಹುದು. ಮತ್ತು ಯಜ್ಞದಲ್ಲಿ ವೇದಮಂತ್ರವನ್ನು ಪಠಿಸಿ, ಆಹುತಿಯನ್ನೂ ಕೂಡ ನೀಡಬಹುದೆಂದು ನಿರ್ಣಯಿಸಿದ್ದಾರೆ. ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದಲ್ಲಿ ಇದರ ಬಗ್ಗೆ ವಿಸ್ತಾರವಾದ ವಿವರಣೆ ಇದೆ. ಕೆಲವು ಆಧುನಿಕ ಸಂಶೋಧಕರು ಪೂರ್ವಮೀಮಾಂಸೆಯ ಈ ಅಧಿಕರಣಗಳನ್ನು ನೋಡಿ, ಸ್ತ್ರೀಯರಿಗೆ ಯಾಗದಲ್ಲಿ ಆಹುತಿಯನ್ನು ನೀಡುವ ಅವಕಾಶವನ್ನು ನೀಡಲಾಗಿದೆ. ಯಾಗದಲ್ಲಿ ವೇದಮಂತ್ರವನ್ನು ಪಠಿಸಬೇಕೆಂದರೆ ಮೊದಲು ವೇದಾಧ್ಯಯನವನ್ನು ಮಾಡಿರಬೇಕು. ವೇದಾಧ್ಯಯನ ಮಾಡಬೇಕೆಂದರೆ ಉಪನಯನವನ್ನೂ ಕೂಡ ಮಾಡಲೇ ಬೇಕೆಂದು ಸಂಶೋಧನೆ ನಡೆಸಿದ್ದಾರೆ. ಆದರೆ ಪೂರ್ವಮೀಮಾಂಸಕರ ಈ ಅಧಿಕರಣಗಳ ವಿಚಾರವು ನಮಗೆ ಸಮ್ಮತವಾಗಿರುವುದಿಲ್ಲ.

ಪ್ರಾತಿಪದಿಕಾರ್ಥವೇ ಆಗಿದ್ದರೂ ಉದ್ದೇಶ್ಯವಿಶೇಷಣವಾದಲ್ಲಿ ವಿವಕ್ಷಿತವಾಗುವುದಿಲ್ಲ. ಯಾವರೀತಿಯಾಗಿ 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಏಕತ್ವವು ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವೋ, ಅದರ ಸಮಾನನ್ಯಾಯದಿಂದ ಇಲ್ಲಿ ಪ್ರಾತಿಪಾದಿಕಾರ್ಥವು ಉದ್ದೇಶ್ಯವಿಶೇಷಣವಾಗಿ ಅವಿವಕ್ಷಿತವಾಗುತ್ತದೆ.

ಹೀಗೆ ಶಾಸ್ತ್ರದೀಪಿಕಾ ಎಂಬ ಪೂರ್ವಮೀಮಾಂಸಾ ಗ್ರಂಥದ ವ್ಯಾಖ್ಯಾನದಲ್ಲಿ ಹೇಳಲಾಗಿದೆ.

**प्रकाशः – उक्तं हीति ।।** आद्ये तृतीयपादे शिष्टाकोपनये ''अपि वा कारणाग्रहणे प्रयुक्तानि प्रतीयेरन्'' इति सूत्रवार्तिके उद्देश्यविशेषणत्वादविवक्षितमित्येतदुक्तमित्यर्थः ।

ಶಿಷ್ಟಾಕೋಪಾಧಿಕರಣ

ಅಪಿ ವಾ ಕಾರಣಾಗ್ರಹಣೇ ಪ್ರಯುಕ್ತಾನಿ ಪ್ರತೀಯೇರನ್ (೧-೩)[1]

(१) **भाट्टसङ्ग्रहः –**

**अथ भाष्यरीत्या चतुर्तं पदार्थप्राबल्याधिकरणम् ।। (सूत्राणि ५-७)**

**विशिष्टाकोपेऽविरुद्धमिति ।। ५ ।।**

**(न, शास्त्रपरिमाणत्वात् ।।६।। अपि वा कारणाग्रहणे प्रयुक्तयानि प्रतीयेरन् ।।७।।)**

पूर्वत्र श्रुतिविरोधे स्मृतीनाममानत्वमुक्तम् । विरोध एव कास्ति क नेति चिन्तनाद्वा, विरोधे सत्यप्यप्रामाण्यं नेति चिन्तनाद्वा **सङ्गतिः** । 'क्षुत आचामेत्' इति विहितं आचमनं पुरुषार्थम् । यदा क्रतुमध्ये क्षुतादिनिमित्तं प्राप्नोति तदा नैमित्तिकमाचमनं क्रत्वङ्गत्वेन स्मृत्या विधीयते 'आचान्तेन कर्तव्यम्' इति । सा स्मृतिः किं मानमुत नेति सन्देहे, 'वेदं कृत्वा वेदिं करोति' इति श्रुतौ पूर्वकालवाचिना क्त्वाप्रत्ययेन वेदवेद्योः प्रतीतस्य नैरन्तर्यरूपक्रमस्य मध्ये क्षुतनिमित्ताचमनानुष्ठाने बाधप्रसक्तेर्बलवच्छ्रुतिप्राप्तक्रमस्य दुर्बलस्मार्ताचमनेन च तदयोगात्तद्विरोधेन सर्ववेष्टनस्मृतिवदमानमिति **प्राप्ते सिद्धान्तः** क्रमो न वेदवेद्यादिवदनुष्ठेयः पदार्थः । किन्तु तद्धर्मः । एवं च धर्मिरूपपदार्थप्राप्त्यपेक्षक्रमापेक्षया जघन्यस्मृतिप्रमाणकोप्याचमनादिपदार्थः पूर्वं प्राप्नोति । पश्चात्तु क्रमः सर्वपदार्थाङ्गतया अवतरन्नपि न पदार्थैर्विरुध्यत इति प्रमाणमेवंजातीयका स्मृतिरिति **वेदो** नाम सम्मार्जनहेतुदर्भमुष्टिः । **वेदिस्तु** आहवनीयगार्हपत्यमध्यवर्तिनी चतुरंगलखाता भूमिः । **फलन्तु** स्मार्ताचमनादेरप्यनुष्ठानसिद्धिः। **शिष्टस्य** श्रुत्युक्तस्य क्रमस्य **अकोपे** कोपाभावे आचमनादिस्मृतिवाक्यं **अविरुद्धमिति** चेत् इति सिद्धान्ताभिप्रायेण शङ्कापरसूत्रास्यार्थः । अत्र **शिष्टेति न शास्त्रपरिमाणत्वात् इति अपि वा कारणग्रहणे प्रयुक्तानि प्रतीयेरन्** इति त्रिसूत्री भाष्यरीत्या एकमधिकरणम् ।

इति भाष्यरीत्या तृतीयं पदार्थप्राबल्याधिकरणम् (सूत्राणि ५-७)

ಪರಿಪೂರ್ಣಚಂದ್ರಿಕಾ

ಈ ಸೂತ್ರದ ವಾರ್ತಿಕದಲ್ಲಿ ಯಾವುದು ಉದ್ದೇಶ್ಯವಿಶೇಷಣವಾಗಿರುತ್ತದೋ, ಅದು ಅವಿವಕ್ಷಿತ-ವಾಗಿರುತ್ತದೆಂದು ನಿರ್ಣಯಿಸಲಾಗಿದೆ. 'ಯೋ ಬ್ರಾಹ್ಮಣ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ ಶ್ಲೋಕವು ಈ ಸೂತ್ರದ ವಾರ್ತಿಕ ಶ್ಲೋಕವೆಂದು ತಿಳಿಯಬೇಕು.

**प्रकाशः – यो ब्राह्मण इति ह्युक्ते = यो ब्राह्मण इत्युद्देश्यतयोक्ते ब्राह्मणे, लिङ्गं = पुल्लिङ्गम्, अन्यत् = अन्यत्वेनार्थान्तरत्वेन, न विधीयते ।**

ಯೋ ಬ್ರಾಹ್ಮಣ ಇತಿ ಹ್ಯುಕ್ತೇ ಹನನಪ್ರತಿಷೇಧತಃ।
ಬ್ರಾಹ್ಮಣೇ ಪ್ರತಿಷೇಧೇ ವಾ ಲಿಂಗಂ ನಾನ್ಯದ್ವಿಧೀಯತೇ ॥

ಸೂತ್ರ ವಾರ್ತಿಕದ ಈ ಶ್ಲೋಕಕ್ಕೆ ಎರಡು ಅಭಿಪ್ರಾಯಗಳಿವೆ -

೧. 'ಬ್ರಾಹ್ಮಣೋ ನ ಹಂತವ್ಯಃ' ಎಂಬ ವಾಕ್ಯದಲ್ಲಿ ಬ್ರಾಹ್ಮಣನನ್ನು ಉದ್ದೇಶಿಸಿ ಹನನವನ್ನು ಪ್ರತಿಷೇಧ ಮಾಡಲಾಗಿದೆ. ಆದ್ದರಿಂದ ಬ್ರಾಹ್ಮಣನು ಉದ್ದೇಶ. ಹನನವು ನಿಷೇಧ್ಯವಾಗುತ್ತದೆ. ಬ್ರಾಹ್ಮಣನು ಹನನದಲ್ಲಿ ಕರ್ಮನಾಗಿದ್ದಾನೆ. ಈ ಬ್ರಾಹ್ಮಣನಲ್ಲಿ ಪುಂಸ್ತ್ವವು ವಿಶೇಷಣವಾಗಿದೆ. ಆದ್ದರಿಂದ ಈ ಪುಂಸ್ತ್ವವು ಪ್ರತಿಷೇಧ್ಯವೂ ಆಗಿರುವುದಿಲ್ಲ. ಪ್ರತಿಷೇಧ್ಯದಲ್ಲಿ ಉದ್ದೇಶ್ಯವೂ ಆಗಿರುವುದಿಲ್ಲ. ಹೊರತು. ಉದ್ದೇಶ್ಯದಲ್ಲಿ ವಿಶೇಷಣವಾಗಿದೆ. ಆದ್ದರಿಂದ ಅವಿವಕ್ಷಿತವೆಂದು ತಿಳಿಯಬೇಕು.

೨. ಮತ್ತೊಂದು ಅರ್ಥ ಹೀಗಿದೆ - ಬ್ರಾಹ್ಮಣಹನನವು ಉದ್ದೇಶವಾಗಿದೆ. 'ನ ಕುರ್ಯಾತ್' ಎಂಬುದು ನಿಷೇಧವಾಗಿದೆ. ಹಿಂದಿನ ಪಕ್ಷದಲ್ಲಿ ಬ್ರಾಹ್ಮಣನು ಉದ್ದೇಶ್ಯನಾಗಿದ್ದನು. ಈ ಪಕ್ಷದಲ್ಲಿ ಬ್ರಾಹ್ಮಣಹನನವು ಉದ್ದೇಶ್ಯವಾಗಿದೆ. ಇದರಲ್ಲಿ ಬ್ರಾಹ್ಮಣನು ವಿಶೇಷಣನಾಗಿದ್ದಾನೆ. ಆ ಬ್ರಾಹ್ಮಣನಲ್ಲಿ ಪುಂಸ್ತ್ವವು ವಿಶೇಷಣವಾಗಿದೆ. ಮೊದಲನೆಯ ಪಕ್ಷಕ್ಕಿಂತ ಈ ಪಕ್ಷದಲ್ಲಿ ಪುಂಸ್ತ್ವವು ವ್ಯವಹಿತವಾಗಿ ವಿಶೇಷಣವಾಗುತ್ತಿರುವುದರಿಂದಲೂ ಅವಿವಕ್ಷಿತವೆಂದು ತಿಳಿಯಬೇಕು.

ಶ್ಲೋಕದಲ್ಲಿರುವ ಪದಗಳ ಅರ್ಥವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು. 'ಯೋ ಬ್ರಾಹ್ಮಣ ಇತಿ ಹ್ಯುಕ್ತೇ' = 'ಯೋ ಬ್ರಾಹ್ಮಣಃ' ಎಂಬುದಾಗಿ ಉದ್ದೇಶ್ಯತಯಾ ಹೇಳಲ್ಪಟ್ಟ ಬ್ರಾಹ್ಮಣನಲ್ಲಿ. 'ಲಿಂಗಂ' = ಪುಲ್ಲಿಂಗವು. 'ಅನ್ಯತ್' = ಅನ್ಯವಾಗಿರುವ ಕಾರಣದಿಂದ. ಅಂದರೆ ಪ್ರತಿಷೇಧ್ಯವೂ ಆಗಿರುವುದಿಲ್ಲ. ಉದ್ದೇಶ್ಯವೂ ಆಗಿರುವುದಿಲ್ಲ. ಹೊರತು ಉದ್ದೇಶ್ಯಕ್ಕೆ ವಿಶೇಷಣವಾಗಿದೆ. ('ಅನ್ಯತ್' ಎಂಬುದೇ ಹೇತುಗರ್ಭವಿಶೇಷಣ) ಆದ್ದರಿಂದ ಲಿಂಗವು ವಿವಕ್ಷಿತವಲ್ಲ.

**प्रकाशः – कुतः ? हननप्रतिषेधतः = यो ब्राह्मण इति ब्राह्मणमुद्दिश्य हननस्य प्रतिषेधात्, वा = अथवा, यद्ब्राह्मणहननं तन्न कुर्यादिति ब्राह्मणहननोद्देश-पक्षेऽपि । प्रतिषेधे कर्मणि घञ् । प्रतिषिध्यमाने ब्रह्महनने । लिङ्गं न विधीयते पुंकर्मकं हननमित्येवं न विधीयते ।**

ಏಕೆಂದರೆ ಹನನಪ್ರತಿಷೇಧತಃ = 'ಯೋ ಬ್ರಾಹ್ಮಣಃ' ಎಂಬುದಾಗಿ ಬ್ರಾಹ್ಮಣನನ್ನು ಉದ್ದೇಶಿಸಿ. ಹನನವನ್ನು ನಿಷೇಧ ಮಾಡಲಾಗಿದೆ. ಇಂತಹ ಬ್ರಾಹ್ಮಣನಲ್ಲಿರುವ ಪುಂಸ್ತ್ವವು ವಿವಕ್ಷಿತವಲ್ಲ.

ಪ್ರಕೃತ್ಯಧಿಕರಣ (೧-೪-೬)

'ವಾ' = ಅಥವಾ, ಯಾವ ಬ್ರಾಹ್ಮಣಹನನವಿದೆಯೋ ಅದನ್ನು ಮಾಡಬಾರದು ಎಂಬುದಾಗಿ ವಾಕ್ಯವಿನ್ಯಾಸವನ್ನು ತಿಳಿದರೆ ಬ್ರಾಹ್ಮಣಹನನವು ಉದ್ದೇಶ್ಯವಾಗುತ್ತದೆ. ಈ ಪಕ್ಷದಲ್ಲಿಯೂ 'ಪ್ರತಿಷೇಧೇ' ಎಂಬುದು ಕರ್ಮಾರ್ಥದಲ್ಲಿ 'ಘಞ್' ಪ್ರತ್ಯಯ ಬಂದಿರುವ ಶಬ್ದವಾಗಿದೆ. ಆವಾಗ 'ಪ್ರತಿಷೇಧೇ' ಎಂಬ ಪದಕ್ಕೆ ಪ್ರತಿಷಿಧ್ಯಮಾನೇ ಎಂಬರ್ಥವು ದೊರೆಯುತ್ತದೆ. ಪ್ರತಿಷೇಧ ಮಾಡಲ್ಪಟ್ಟ ಬ್ರಾಹ್ಮಣಹನನದಲ್ಲಿ ಎಂದಭಿಪ್ರಾಯ. ಪ್ರತಿಷಿಧ್ಯಮಾನವಾದ ಬ್ರಾಹ್ಮಣಹನನದಲ್ಲಿ ಪುಲ್ಲಿಂಗವು, ನ ವಿಧಿಯತೇ = ವಿವಕ್ಷಿತವಾಗುವುದಿಲ್ಲ.

**ಪ್ರಕಾಶಃ** – पक्षद्वयेऽपि लिङ्गविधानाङ्गीकारे यो ब्राह्मणस्स न हन्तव्यः स च पुमान् यत् बाह्मणहननं तन्न कुर्यात् अकार्यं च ब्रह्महननं पुंविषयमिति वाक्यभेदप्रसङ्गात् । अत उद्देश्यविशेषणत्वादविवक्षितं लिङ्गमिति ।

ಮೇಲೆ ಹೇಳಿದ ಎರಡು ಪಕ್ಷಗಳಲ್ಲಿ ಪುಲ್ಲಿಂಗವು ವಿಧಾನ ಮಾಡಲ್ಪಟ್ಟಿದೆ ಎಂದು ಅಂಗೀಕರಿಸಿದರೆ ವಾಕ್ಯಭೇದದೋಷವು ಬರುತ್ತದೆ. ಮೊದಲನೆಯ ಪಕ್ಷದಲ್ಲಿ 'ಯೋ ಬ್ರಾಹ್ಮಣಃ ಸ ನ ಹಂತವ್ಯಃ ಸ ಚ ಪುಮಾನ್' ಎಂಬುದಾಗಿ ಹೇಳಬೇಕಾಗುತ್ತದೆ. ಎರಡನೆಯ ಪಕ್ಷದಲ್ಲಿ 'ಯತ್ ಬ್ರಾಹ್ಮಣಹನನಂ ತತ್ ನ ಕುರ್ಯಾತ್' 'ಅಕಾರ್ಯಂ ಚ ಬ್ರಹ್ಮಹನನಂ ಪುಂವಿಷಯಮ್' ಎಂಬುದಾಗಿ ವಾಕ್ಯಭೇದದೋಷವು ಬರುತ್ತದೆ. ಆದ್ದರಿಂದ ಯಾವುದು ಉದ್ದೇಶ್ಯವಿಶೇಷಣವಾಗಿದೆಯೋ, ಅಂತಹ ಲಿಂಗವು ಅವಿವಕ್ಷಿತವೆಂದೇ ತಿಳಿಯಬೇಕು.

**ಪ್ರಕಾಶಃ** – हननं प्रतिषेधत इति पाठान्तरमप्याश्रित्यार्थान्तराण्यपि राणकेऽभिहितानि ॥

ಗ್ರಂಥದಲ್ಲಿ 'ಹನನಂ ಪ್ರತಿಷೇಧತಃ' ಎಂಬ ಪಾಠವನ್ನು ವಿವಕ್ಷಿಸಿದ್ದಾರೆ. ಈ ಪಕ್ಷದಲ್ಲಿ ಎರಡು ಅರ್ಥಗಳನ್ನು ಮೇಲೆ ಹೇಳಿದಂತೆ ತಿಳಿಯಬಹುದು. ಆದರೆ ರಾಣಕ ಎಂಬ ಪೂರ್ವಮೀಮಾಂಸೆಯ ವ್ಯಾಖ್ಯಾನ ಗ್ರಂಥದಲ್ಲಿ 'ಹನನಂ ಪ್ರತಿಷೇಧತಃ' ಎಂಬ ಪಾಠವನ್ನು ವಿವಕ್ಷಿಸಿ, ಇನ್ನೂ ಅನೇಕ ಅರ್ಥಗಳನ್ನು ಇದೇ ಶ್ಲೋಕಕ್ಕೆ ಹೇಳಲಾಗಿದೆ.

**ಪ್ರಕಾಶಃ** – **एषेति** ॥ एषेत्यनूद्य प्रकृतिरित्यादेर्वा एषा प्रकृतिरित्यनूद्याऽविकृतिरित्यादेर्वा विधानादिति भावः ॥

'ಏಷಾ ಹ್ಯೇವ ಪ್ರಕೃತಿಃ' ಎಂಬಲ್ಲಿ 'ಏಷಾ' ಎಂದು ಅನುವಾದ ಮಾಡಿ, 'ಪ್ರಕೃತಿಃ' ಎಂದು ವಿಧಾನ ಮಾಡಲಾಗಿದೆ. ಅಥವಾ 'ಏಷಾ ಪ್ರಕೃತಿಃ' ಎಂದು ಅನುವಾದ ಮಾಡಿ, 'ಅವಿಕೃತಿಃ' ಎಂಬುದಾಗಿ ವಿಧಾನ ಮಾಡಲಾಗಿದೆ ಎಂದು ತಿಳಿಯಬೇಕು.

**ಪ್ರಕಾಶಃ** – **पुंस्त्ववदिति** ॥ चतुर्थस्याद्यपादे ''तथा च लिङ्गम्'' इति षष्ठेऽधिकरणे पशुगतं लिङ्गं विवक्षितं न वेति सन्देहे अलिङ्गे विपरीतलिङ्गे वृक्षादौ मक्षिकादौ च शब्दप्रयोगादशब्दार्थत्वादविवक्षितमिति प्राप्ते

'ತಥಾ ಚ ಲಿಂಗಮ್' (೪-೧-೬)[1]

'ಪಶುನಾ ಯಜೇತ' ಇತ್ಯಾದಿ ವಾಕ್ಯಗಳಲ್ಲಿ 'ಪಶು' ಎಂಬ ಶಬ್ದದಲ್ಲಿರುವ ಲಿಂಗವನ್ನು ವಿವಕ್ಷೆ ಮಾಡಬೇಕೋ, ಬೇಡವೋ ? ಎಂಬುದೇ ಸಂದೇಹ. ವೃಕ್ಷಾದಿಗಳಲ್ಲಿ ಯಾವುದೇ ಲಿಂಗಗಳು ಇರುವುದಿಲ್ಲ. ಆದರೂ ಕೂಡ 'ವೃಕ್ಷಃ' ಎಂಬುದಾಗಿ ಪುಲ್ಲಿಂಗಶಬ್ದವನ್ನು ಪ್ರಯೋಗಿಸುತ್ತೇವೆ. ಸೊಳ್ಳೆ ಮೊದಲಾದವುಗಳಲ್ಲಿ 'ಮಕ್ಷಿಕಾ' ಎಂಬ ಶಬ್ದವನ್ನು ಪ್ರಯೋಗಿಸುತ್ತೇವೆ. ಗಂಡು ಸೊಳ್ಳೆಯಲ್ಲಾಗಲೀ, ಹೆಣ್ಣು ಸೊಳ್ಳೆಯಲ್ಲಾಗಲೀ 'ಮಕ್ಷಿಕಾ' ಎಂಬ ಸ್ತ್ರೀಲಿಂಗಶಬ್ದವನ್ನೇ ಪ್ರಯೋಗಿಸುತ್ತೇವೆ. ಗಂಡು ಸೊಳ್ಳೆಯಲ್ಲಿ ಪ್ರಯೋಗಿಸುವ 'ಮಕ್ಷಿಕಾ' ಎಂಬ ಶಬ್ದದಲ್ಲಿ ವಿಪರೀತಲಿಂಗವೇ ಇರುತ್ತದೆ. ಹೀಗೆ ವ್ಯಭಿಚರಿತವಾದ್ದರಿಂದ ಶಬ್ದಗಳಲ್ಲಿರುವ ಲಿಂಗವು ಅವಿವಕ್ಷಿತವೆಂದು ಪೂರ್ವಪಕ್ಷ.

**प्रकाशः** – सिंहः सिंहीत्यादावनन्यथासिद्धलिङ्गप्रतीतेस्तस्य शब्दवाच्यत्वकल्पनां विनाऽनुपपत्तेश्शब्दार्थत्वात् विधेयगतत्वेनैकत्ववल्लिङ्गं विवक्षितमित्युक्तम् । तद्वदित्यर्थः ॥

ಸಿದ್ಧಾಂತ - 'ಸಿಂಹಃ' ಎಂಬ ಶಬ್ದವನ್ನು ಗಂಡು ಸಿಂಹದಲ್ಲಷ್ಟೇ ಪ್ರಯೋಗಿಸುತ್ತಾರೆ. 'ಸಿಂಹೀ' ಎಂಬ ಶಬ್ದವನ್ನು ಹೆಣ್ಣು ಸಿಂಹದಲ್ಲಷ್ಟೇ ಪ್ರಯೋಗಿಸುತ್ತಾರೆ. ಹೀಗೆ ಅನನ್ಯಥಾಸಿದ್ಧವಾದ ಲಿಂಗಪ್ರತೀತಿಯು ಎಲ್ಲಿ ಇರುತ್ತದೋ, ಅಂತಹ ಸ್ಥಳದಲ್ಲಿ ಲಿಂಗಕ್ಕೆ ಶಬ್ದವಾಚ್ಯತ್ವವನ್ನು ಒಪ್ಪದೇ ಸಾಧ್ಯವಿಲ್ಲ. ಎಲ್ಲಿ ಅನನ್ಯಥಾಸಿದ್ಧವಾದ ಲಿಂಗಪ್ರತೀತಿಯು ಬರುವುದಿಲ್ಲವೋ, ಅಂತಹ ವೃಕ್ಷ, ಮಕ್ಷಿಕಾದಿ ಸ್ಥಳಗಳಲ್ಲಿ ಶಬ್ದವಾಚ್ಯತ್ವವನ್ನು ಒಪ್ಪಬೇಕಾಗಿಲ್ಲ.

(१) भाट्टसङ्ग्रहः –

अथ षष्ठं लिङ्गस्य विवक्षितत्वाधिकरणम् ॥

तथा लिङ्गम् ॥ १७ ॥

अत्राऽतिदेशिकी **सङ्गतिः** । 'पशुना' इत्यत्र श्रुतं पुल्लिङ्गं विवक्षितं न वेति **सन्देहे**, शब्दार्थ विचारे तदनुष्ठानविचारे च लिङ्गस्योपयोगादर्शनात्, लिङ्गहीनेऽपि पुल्लिङ्गवृक्षादिशब्दस्य पुंव्यक्तिरूपमक्षिकादौ स्त्रीलिङ्गमक्षिकादिशब्दस्य प्रयोगेण लिङ्गस्याशब्दार्थत्वादविवक्षितं लिङ्गमिति **प्राप्ते सिद्धान्तः**, *यथा* पशुत्वजातिरेकत्वञ्च विवक्षितं तथा लिङ्गञ्च विवक्षितम् । वृद्धव्यवहारेऽनन्यथासिद्धान्वयव्यतिरेकाभ्यां सिंहः, सिंही, इत्यादौ लिङ्गस्यापि शब्दार्थत्वावगमात् । वृक्षमक्षिकादिशब्दानान्तु शब्दसाधुत्वमात्रताङ्गीकारादिति । तदाह **सूत्रे, तथा लिङ्गमिति** । विवक्षितमिति शेषः । फलन्तु, पुम्पशोरनुष्ठानम् ।

इति षष्ठं लिङ्गस्य विवक्षितत्वाधिकरणम्

ಪ್ರಕೃತ್ಯಧಿಕರಣ (೧-೪-೬)

**प्रकाशः – प्रातिपदिकार्थत्वेनेति ।।** अत एव तृतीये चमसाधिकरणे ग्रहत्वस्य प्रातिपदिकार्थत्वेन विवक्षितत्वान्न चमसादीनां संमार्ग इत्युक्तं ''संस्काराद्वा गुणानामव्यवस्था स्यात्'' इत्यत्रेति भावः ।

'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿ ಬ್ರಾಹ್ಮಣ ಶಬ್ದದಲ್ಲಿರುವ ಲಿಂಗವು ಉದ್ದೇಶ್ಯವಿಶೇಷಣವಾದ ಕಾರಣ ಅವಿವಕ್ಷಿತವಾಗಿದೆ. ಆದರೆ ಬ್ರಾಹ್ಮಣ ಶಬ್ದದ ಪ್ರಾತಿಪದಿಕಾರ್ಥವಾದ ಬ್ರಾಹ್ಮಣತ್ವವು ಉದ್ದೇಶ್ಯವಿಶೇಷಣವಲ್ಲದ ಕಾರಣ ವಿವಕ್ಷಿತವೇ ಆಗಿರುತ್ತದೆ. ಅದರಂತೆ ಸ್ತ್ರೀ, ನಾರೀ ಇತ್ಯಾದಿ ಶಬ್ದಗಳಲ್ಲಿ ಸ್ತ್ರೀ ಮೊದಲಾದ ಪ್ರಾತಿಪದಿಕಾರ್ಥವೆನಿಸಿದ ಸ್ತ್ರೀತ್ವ ಮೊದಲಾದವುಗಳು ಉದ್ದೇಶ್ಯವಿಶೇಷಣವಲ್ಲದ ಕಾರಣ, ವಿವಕ್ಷಿತವೇ ಆಗುತ್ತವೆ. ಆದ್ದರಿಂದಲೇ ಪೂರ್ವಮೀಮಾಂಸೆಯ 'ಸಂಸ್ಕಾರಾದ್ವಾ ಗುಣಾನಾಮವ್ಯವಸ್ಥಾ ಸ್ಯಾತ್' ಎಂಬ ಅಧಿಕರಣದಲ್ಲಿ ಹೀಗೆ ಸಿದ್ಧಾಂತ ಮಾಡಿದ್ದಾರೆ. ಮೂರನೇ ಅಧ್ಯಾಯದ ಚಮಸಾಧಿಕರಣದಲ್ಲಿ 'ಗ್ರಹಂ ಸಮ್ಮಾರ್ಷ್ಟಿ' ಎಂಬ ವಾಕ್ಯದ ಅರ್ಥವನ್ನು ವಿಚಾರ ಮಾಡಿದ್ದಾರೆ. 'ಗ್ರಹಂ' ಎಂಬಲ್ಲಿರುವ ಏಕತ್ವವು ಉದ್ದೇಶ್ಯವಿಶೇಷಣವಾಗದ ಕಾರಣ ಅವಿವಕ್ಷಿತವಾಗಿದೆ. ಪ್ರಾತಿಪದಿಕಾರ್ಥವಾದ ಗ್ರಹತ್ವವು ಉದ್ದೇಶ್ಯವಿಶೇಷಣವಲ್ಲದ ಕಾರಣ ವಿವಕ್ಷಿತವೇ ಆಗಿದೆ. ಆದ್ದರಿಂದ ಕೇವಲ ಪಾತ್ರೆಗಳ ಸಮ್ಮಾರ್ಜನೆಯುಷ್ಟೇ ಮಾಡಬೇಕು ಹೊರತು, 'ಚಮಸ' ಮೊದಲಾದವುಗಳ ಸಮ್ಮಾರ್ಜನೆಯನ್ನು ಮಾಡಬಾರದು.

**प्रकाशः –** ''नच नपुंसकशब्दवृत्तिवत्परमात्मनि स्त्रीशब्दप्रवृत्तिः । नियामकविशेषाभावेन कल्पनायोगात्'' इति टीकायां नपुंसकेति शब्दो नपुंसकशब्दः तद्वदिति विग्रहमाश्रित्य परिहारे च दृष्टान्ते दार्ष्टान्तिके च कल्पनायोगादित्येतट्टीकार्थमाह – **नपुंसकमित्यादीति ।।**

'ನಚ ನಪುಂಸಕಶಬ್ದವೃತ್ತಿವತ್ ಪರಮಾತ್ಮನಿ ಸ್ತ್ರೀಶಬ್ದಪ್ರವೃತ್ತಿಃ । ನಿಯಾಮಕವಿಶೇಷಾಭಾವೇನ ಕಲ್ಪನಾಯೋಗಾತ್' ಎಂಬ ಟೀಕೆಯ ಅರ್ಥವನ್ನು 'ನಪುಂಸಕ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಪರಮಾತ್ಮನು ನಪುಂಸಕನಾಗದಿದ್ದರೂ ಯೋಗಾರ್ಥದಿಂದ ನಪುಂಸಕಶಬ್ದವನ್ನು ಕೂಡಿಸಬಹುದು. ಅಥವಾ ನಪುಂಸಕವಾದ ಪದಾರ್ಥಗಳಿಗೆ ನಿಯಾಮಕನಾದ್ದರಿಂದ 'ನಪುಂಸಕ' ಎಂದು ಹೇಳಬಹುದು. ಅದರಂತೆ ಪರಮಾತ್ಮನು ಸ್ತ್ರೀ ಆಗದಿದ್ದರೂ 'ಸ್ತೃಣಾತಿ = ಆಚ್ಛಾದಯತಿ' ಎಂಬ ವ್ಯುತ್ಪತ್ತಿಯಿಂದ ಸ್ತ್ರೀಶಬ್ದವನ್ನು ಸಮನ್ವಯ ಮಾಡಬಹುದು. ಅಥವಾ ಸ್ತ್ರೀಯರಿಗೆ ನಿಯಾಮಕನಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿ, 'ಸ್ತ್ರೀ' ಎಂದು ಕರೆಯಬಹುದಲ್ಲವೇ? ಎಂಬ ಆಕ್ಷೇಪಕ್ಕೆ ನಿಯಾಮಕವಿಶೇಷವಿಲ್ಲದ ಕಾರಣ ಕಲ್ಪನೆ ಮಾಡಲು ಸಾಧ್ಯವಿಲ್ಲವೆಂದು ಟೀಕೆಯಲ್ಲಿ ಉತ್ತರಿಸಿದ್ದಾರೆ. ಟೀಕೆಯಲ್ಲಿ 'ನಪುಂಸಕಶಬ್ದವೃತ್ತಿವತ್' ಎಂಬುದಕ್ಕೆ ನಪುಂಸಕ ಶಬ್ದದ ಪ್ರವೃತ್ತಿಯಂತೆ ಎಂಬರ್ಥವನ್ನು ತಿಳಿಯಬೇಕು. ದೃಷ್ಟಾಂತವಾದ ನಪುಂಸಕಶಬ್ದದಲ್ಲಾಗಲೀ, ದಾರ್ಷ್ಟಾಂತಿಕವಾದ ಸ್ತ್ರೀ ಶಬ್ದದಲ್ಲಾಗಲೀ, ಹೀಗೆ ಪ್ರವೃತ್ತಿಯನ್ನು ತಿಳಿಯಲು ಯಾವುದೇ ವಿಶೇಷಕಾರಣಗಳು ಇರುವುದಿಲ್ಲ. ಹೀಗೆ ಗ್ರಂಥಕಾರರು ಟೀಕೆಗೆ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – यौगिकत्वेऽपीत्यादिना गतार्थतापरिहारो दर्शितः ।। न्यायसाम्येनेति ।। तेन ''कारणस्त्रीनिषेधिनाम्'' इति विषयमालायां स्त्रीति विषयोपाध्युक्तिरुपलक्षणमिति सूचितम् ।

'ಯೌಗಿಕತ್ವೇಽಪಿ' ಇತ್ಯಾದಿ ವಾಕ್ಯದಿಂದ ಗತಾರ್ಥತಾ ಪರಿಹಾರವನ್ನು ತೋರಿಸಿದಂತಾಯಿತು. ನ್ಯಾಯಸಾಮ್ಯೇನ' ಎಂದು ಹೇಳಿದ್ದರಿಂದ 'ಕಾರಣಸ್ತ್ರೀನಿಷೇಧಿನಾಮ್' ಎಂಬ ಅನುವ್ಯಾಖ್ಯಾನದಲ್ಲಿ ವಿಷಯಮಾಲೆಯನ್ನು ಹೇಳುವಾಗ 'ಸ್ತ್ರೀ' ಎಂಬ ವಿಷಯೋಪಾಧಿಯನ್ನು ಹೇಳಿದ್ದಾರೆ. ಇದರ ಜೊತೆಗೆ 'ನಪುಂಸಕಂ' ಎಂಬ ಶಬ್ದವನ್ನೂ ಕೂಡ ಉಪಲಕ್ಷಣಯಾ ತಿಳಿದುಕೊಳ್ಳಬೇಕು. ಪೂರ್ವಪಕ್ಷಿಯು ನಪುಂಸಕಲಿಂಗವಿರುವ ಶಬ್ದಗಳನ್ನು ಆಕ್ಷೇಪ ಮಾಡುವುದಿಲ್ಲ. 'ನಪುಂಸಕಂ' ಎಂಬ ಶಬ್ದವನ್ನು ಮಾತ್ರ ಆಕ್ಷೇಪ ಮಾಡುತ್ತಾನೆ. ಆದರೆ ಸ್ತ್ರೀ ಎಂಬಲ್ಲಿ 'ಸ್ತ್ರೀ' ಎಂಬ ಶಬ್ದವನ್ನೂ ಮತ್ತು ಸ್ತ್ರೀಲಿಂಗಶಬ್ದವನ್ನೂ ಆಕ್ಷೇಪ ಮಾಡುತ್ತಾನೆ. ಈ ವ್ಯತ್ಯಾಸವನ್ನು ಗಮನಿಸಬೇಕು. ಆದ್ದರಿಂದ ಶ್ರೀಮದಾಚಾರ್ಯರು ಹೇಳಿರುವ ವಿಷಯಮಾಲೆಯಲ್ಲಿ 'ನಪುಂಸಕಂ' ಎಂಬ ಶಬ್ದವನ್ನೂ ಕೂಡ ಇಟ್ಟುಕೊಳ್ಳಬೇಕು. ಪೂರ್ವಪಕ್ಷಿಯು ನಪುಂಸಕಲಿಂಗವಿರುವ ಶಬ್ದಗಳನ್ನು ಆಕ್ಷೇಪ ಮಾಡದಿದ್ದರೂ 'ನಪುಂಸಕಂ' ಎಂಬ ಶಬ್ದವು ಪರಮಾತ್ಮನಲ್ಲಿ ಹೇಗೆ ಬರುತ್ತದೆಂದು ಆಕ್ಷೇಪ ಮಾಡುತ್ತಿದ್ದಾನೆ ಎಂದು ಇದರಿಂದ ತಿಳಿಸಿದಂತಾಗುತ್ತದೆ.

**प्रकाशः** – एतेन प्रकृतिः स्त्रीत्यादिशब्देष्वपि योगेन स्वातन्त्र्यरूपनिमित्तेन वा हरौ वृत्तिः प्रत्युक्ता ।

ಹೀಗೆ ಹೇಳಿದ್ದರಿಂದ 'ಪ್ರಕೃತಿಃ' 'ಸ್ತ್ರೀ' ಇತ್ಯಾದಿ ಶಬ್ದಗಳಲ್ಲಿಯೂ ಯೋಗವೃತ್ತಿಯನ್ನು ಆಶ್ರಯಿಸಿ, ಪರಮಾತ್ಮನಲ್ಲಿ ಸಮನ್ವಯ ಮಾಡಬಹುದು. ಅಥವಾ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದಲೂ ಸ್ತ್ರೀ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಬಹುದಲ್ಲವೇ? ಎಂಬ ಆಕ್ಷೇಪವನ್ನು ನಿರಾಕರಣೆ ಮಾಡಿದಂತಾಯಿತು. ಪ್ರಸಿದ್ಧವಾದ ರೂಢಿಯನ್ನು ವಿವಕ್ಷಿಸಿ, 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದಲೇ ಸ್ತ್ರೀ ಮೊದಲಾದ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಬೇಕಾಗಿದೆ.

**प्रकाशः** – ''न चास्त्रीभूतस्यापि स्त्रीनियामकत्वेन'' इत्यादिटीका तु प्रागेव द्वेधा व्याख्यातेति स्वातन्त्र्यनिमित्तकत्वेऽपीत्युक्तेष्टीकाविरोधो न शङ्क्य इति भावः।

ಪ್ರಶ್ನೆ - ಗ್ರಂಥಕಾರರಿಗೆ ಟೀಕೆಯ ವಿರೋಧವಿರುತ್ತದೆ. ಏಕೆಂದರೆ ಟೀಕೆಯಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಖಂಡನೆ ಮಾಡಿ, ಟೀಕೆಯಲ್ಲಿ ಹೇಳಿದ್ದಾರೆ. ಆದರೆ ಗ್ರಂಥಕಾರರು ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಒಪಿಕೊಂಡು ತದ್ಗತತ್ವವನ್ನು ಆಕ್ಷೇಪ ಮಾಡುತ್ತಿದ್ದಾರೆ 'ನ ಚಾಸ್ತ್ರೀಭೂತಸ್ಯಾಪಿ ಸ್ತ್ರೀನಿಯಾಮಕತ್ವೇನ' ಎಂದು ಹೇಳಿದ್ದಾರೆ. ಪರಮಾತ್ಮನು ಸ್ತ್ರೀ ಆಗದಿದ್ದರೂ, ಸ್ತ್ರೀಯರಿಗೆ ನಿಯಾಮಕನಾಗುವ ಕಾರಣ, ಸ್ತ್ರೀಶಬ್ದದಿಂದ ಪ್ರತಿಪಾದ್ಯನಾಗುವುದಾದರೆ ಯಾವ ವ್ಯಕ್ತಿಯು ಹೆಂಡತಿಯನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುತ್ತಾನೋ, ಅವನೂ ಕೂಡ ಸ್ತ್ರೀ, ಭಾರ್ಯಾ ಇತ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗಬೇಕಾದೀತು ಎಂಬುದಾಗಿ ಆಕ್ಷೇಪ ಮಾಡಿದ್ದಾರೆ.

ಉತ್ತರ - ಈ ಪ್ರಶ್ನೆಗೆ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿಯೇ ಉತ್ತರಿಸಿದ್ದಾಗಿದೆ. 'ನ ಚಾಸ್ತ್ರೀಭೂತಸ್ಯಾಪಿ ಸ್ತ್ರೀನಿಯಾಮಕತ್ವೇನ' ಇತ್ಯಾದಿ ಟೀಕೆಗೆ ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡಲಾಗಿದೆ. ವಾಸ್ತವಿಕವಾಗಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದಾಗ ಬರುವ ಎಲ್ಲಾ ಬಗೆಯ ವ್ಯಭಿಚಾರ ದೋಷಗಳನ್ನು ಪರಿಹರಿಸಿದ್ದಾಗಿದೆ. ಆದರೂ ಕೂಡ ಅದನ್ನು ಆಚ್ಛಾದನ ಮಾಡಿ ಹೀಗೆ ಆಕ್ಷೇಪ ಮಾಡಲಾಗಿದೆ ಎಂದು ತಿಳಿಯಬಹುದು. ಅಥವಾ ಹಿಂದೆ ಸಮರ್ಥಿಸಿದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತಕ್ಕೆ ಕೆಲವೆಡೆ ವ್ಯಭಿಚಾರವನ್ನು ತೋರಿಸಿ, ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನೇ ಆಕ್ಷೇಪ ಮಾಡಬಹುದೆಂದು ಟೀಕೆಯ ಅಭಿಪ್ರಾಯವನ್ನು ತಿಳಿಯಬೇಕು.

(ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದರೆ ರಾಜನಲ್ಲಿಯೂ 'ಬದ್ಧಃ' ಇತ್ಯಾದಿ ಶಬ್ದಪ್ರಯೋಗಗಳು ಬರಬೇಕಾದೀತು ಎಂದು ಆಕ್ಷೇಪ ಮಾಡಿದಾಗ, ಹಿಂದೆ ಅಮಂಗಲವಾದ್ದರಿಂದ ಹಾಗೇ ಪ್ರಯೋಗ ಮಾಡಬಾರದೆಂದು ಉತ್ತರಿಸಲಾಯಿತು. ಇದರ ಮೇಲೆ ಈ ಅಧಿಕರಣದಲ್ಲಿ ಪುನಃ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಾನೆ. ಅಮಂಗಲವಾದ್ದರಿಂದ 'ಬದ್ಧಃ' ಇತ್ಯಾದಿ ಶಬ್ದಪ್ರಯೋಗಗಳು ಬಾರದಿರಬಹುದು. ಆದರೆ ಯಾವನು ಹೆಂಡತಿಯನ್ನು ವಶಮಾಡಿಕೊಂಡಿದ್ದಾನೋ, ಅವನಲ್ಲಿ ಭಾರ್ಯಾ ಎಂಬ ಶಬ್ದವನ್ನು ಪ್ರಯೋಗಿಸಬಹುದು. ಈ ಪ್ರಯೋಗವು ಅಮಂಗಲವೇನೂ ಆಗುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿದರೆ ಭಾರ್ಯಾ ಮೊದಲಾದ ಶಬ್ದಗಳಲ್ಲಿ ವ್ಯಭಿಚಾರ ಬರುತ್ತದೆಂದು ಇಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಇದು ಟೀಕೆಯ ಅಭಿಪ್ರಾಯ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ಸ್ತ್ರೀ ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಬರಬಹುದು. ಆದರೆ ತದ್ಗತತ್ವವನ್ನು ವಿವಕ್ಷಿಸಿದಾಗ ಸ್ತ್ರೀ ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಬರಲು ಸಾಧ್ಯವೇ ಇಲ್ಲ ಎಂಬುದು ಮತ್ತೊಂದು ಬಗೆಯ ಪೂರ್ವಪಕ್ಷ. ಇದನ್ನು ಗ್ರಂಥಕಾರರು ಹೇಳಿದ್ದಾರೆ.)

**प्रकाशः** – ननु छन्दोनये स्त्रीलिङ्गगायत्रीशब्दप्रवृत्तिर्हरावुक्ता । तद्वत् अस्यादत्रापीत्यतो द्वेधा समाधिमाह – **एवमिति** ।। **न तस्येति** ।। एतेन टीकायां तदाक्षेपाप्रदर्शनस्य बीजमुक्तं भवति ।

ಪ್ರಶ್ನೆ - ಹಿಂದೆ ಛಂದೋಧಿಕರಣದಲ್ಲಿ ಸ್ತ್ರೀಲಿಂಗವಾದ ಗಾಯತ್ರೀಶಬ್ದದ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಿದ್ದಾಗಿದೆ. ಅದರಂತೆ ಇಲ್ಲಿಯೂ ಕೂಡ ಪ್ರಕೃತಿ ಮೊದಲಾದ ಶಬ್ದಗಳ ಸಮನ್ವಯವನ್ನು ತಿಳಿಯಬಹುದು. ಆದ್ದರಿಂದ ಹೇಳಿದ್ದನ್ನೇ ಪುನಃ ಹೇಳಿದರೆ ಪುನರುಕ್ತಿದೋಷವು ಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ ಎರಡು ಬಗೆಯ ಸಮಾಧಾನವನ್ನು ತಿಳಿಯಬೇಕು.

೧. ಗಾಯತ್ರೀ ಮೊದಲಾದ ಶಬ್ದಗಳನ್ನೂ ಕೂಡ ಇಲ್ಲಿ ಆಕ್ಷೇಪ ಮಾಡುತ್ತಿದ್ದೇವೆ.

೨. ಅಥವಾ ಅಲ್ಲಿ ಪೂರ್ವಪಕ್ಷಿಯು ಗಾಯತ್ರೀ ಶಬ್ದವು ಛಂದಸ್ಸಿನಲ್ಲಿ ಪ್ರಯೋಗಿಸಿದ್ದನು. ಆದ್ದರಿಂದ ಗಾಯತ್ರೀ ಎಂಬಲ್ಲಿರುವ ಸ್ತ್ರೀಲಿಂಗವು ಕೇವಲ ಪ್ರಯೋಗತಃ ಸಾಧುವೆಂದೇ ಅವನು ಹೇಳಬೇಕು. ಆದ್ದರಿಂದ ಅದನ್ನು ಇಲ್ಲಿ ಆಕ್ಷೇಪ ಮಾಡಬೇಕಾಗಿಲ್ಲ. ಇದನ್ನು ಗ್ರಂಥದಲ್ಲಿ 'ಏವಂ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

ಗಾಯತ್ರೀ ಶಬ್ದದಿಂದ ಛಂದಸ್ಸು ಪ್ರತಿಪಾದ್ಯವೆಂಬುದು ಅಲ್ಲಿ ಮಾಡಿದ ಪೂರ್ವಪಕ್ಷ. ಇಲ್ಲಿ ಪ್ರಕೃತಿಶಬ್ದದಿಂದ ಲಕ್ಷ್ಮೀದೇವಿ ಪ್ರತಿಪಾದ್ಯಳೆಂದು ಪೂರ್ವಪಕ್ಷ. ಲಕ್ಷ್ಮೀದೇವಿಯಲ್ಲಿ ಶಬ್ದವು ಅರ್ಥತಃ ಸಾಧುವಾಗುತ್ತದೆ. ಆದರೆ ಛಂದಸ್ಸಿನಲ್ಲಿ ಗಾಯತ್ರೀ ಶಬ್ದವು ಕೇವಲ ಪ್ರಯೋಗದಿಂದಷ್ಟೇ ಸಾಧುವಾಗುತ್ತದೆ. ಆದ್ದರಿಂದ ಅಲ್ಲಿ ಹೇಳಿದ್ದನ್ನು ಇಲ್ಲಿ ಆಕ್ಷೇಪ ಮಾಡಬೇಕಾಗಿಲ್ಲ. ಮೇಲೆ ತೋರಿಸಿದ ವೈಷಮ್ಯವಿರುವ ಕಾರಣ ಗಾಯತ್ರೀ ಶಬ್ದವನ್ನು ಟೀಕೆಯಲ್ಲಿ ಆಕ್ಷೇಪ ಮಾಡಿರುವುದಿಲ್ಲ.

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम् – प्रकृतिश्च प्रतिज्ञादृष्टान्तानुपरोधात् ।।** अनन्तरसङ्गतिरिति ।। वैषम्यरूपानन्तरसङ्गतिरित्यर्थः ।। **अन्ययेति** ।। सर्वथा स्त्रीत्वनिषेध इत्यर्थः ।। **तथात्व इति** ।। रूपविशेषापेक्षया स्त्रीत्वम् । तथा च यदि रूपविशेषापेक्षया स्त्रीत्वं परमात्मनस्तदा स्त्रीरूप एव स्त्रीवाचकशब्दप्रयोगापत्त्या पुंरूपे स्त्रीवाचकशब्दप्रयोगो न स्यादित्यर्थः । नन्वेवं स्त्रीलिङ्गस्यार्थसाधुत्वाभावाद्ब्रह्मणि प्रयोगाभावे नपुंसकलिङ्गस्यापि तदभावात्प्रयोगो न स्यादित्यत आह – **नपुंसकेति।।** नन्वेवं नपुंसकलिङ्गवदेव ब्रह्मणि स्त्रीलिङ्गशब्दप्रयोगः शब्दसाधुत्वादेवास्त्वित्यतो वैषम्येण परिहरति ।। **न चेति** ।। **तत्प्रसङ्गादिति** ।। तथा चारुणयेत्यत्रार्थ साधुत्वाभावेन शब्दसाधुत्वाभ्युपगमे वृषभस्यापि सोमक्रयसाधनता स्यात् । पशुना यजेतेत्यत्र प्रयोगसाधुत्वमात्रत्वे पशुशब्दस्य मेषीपरता स्यात् । तथा च मीमांसाविरोधः स्यादिति भावः । अधिकारादेरित्यत्रादिपदेन ब्राह्मण्या अहिंसनस्य सङ्ग्रहः ।। **उद्देश्यविशेषणत्वाभावादिति** ।। स्वयमुद्देश्यत्वेन विशेषणत्वाभावादित्यर्थः। नन्वेतदधिकरणं व्यर्थम् । स्त्रीलिङ्गादि शब्दानां ज्योतिरुपक्रमादिति न्यायेन यौगिकत्वसिद्ध्या तदधीनत्व न्यायेन स्वातन्त्र्यनिमित्तकत्वेन ब्रह्मपरतायाः सिद्धत्वात् । नच प्रसिद्धस्त्रीत्वस्य तद्गतत्वं निमित्तीकृत्य ब्रह्मणि वृत्तिसिद्ध्यर्थमिदमधिकरणं सार्थकमिति वाच्यम् ।

तथात्वे ज्योतिरित्यनेन नपुंसकमित्यादिशब्दानां यौगिकत्वेऽपि तदधीनत्वादित्यनेन स्वातन्त्र्यनिमित्तकत्वेऽपि प्रसिद्धस्य नपुंसकत्वस्य ब्रह्मणि वृत्तिसिद्ध्यर्थमधिकरणान्तरस्यापि कर्तव्यतापत्तेरित्यत आह – **नपुंसकमित्यादि शब्दानामिति ।।**




'ಪ್ರಕೃತಿಃ' ಮೊದಲಾದ ಸ್ತ್ರೀಲಿಂಗಾಂತವಾದ ಶಬ್ದಗಳನ್ನು ಪ್ರಯೋಗತಃ ಸಾಧುವೆಂದು ಸಮರ್ಥಿಸಬಹುದು. ಆದರೆ 'ಸ್ತ್ರೀ', 'ಯೋಷಿತ್', 'ನಾರೀ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲು ಸಾಧ್ಯವೇ ಇಲ್ಲ. ಈ ಎಲ್ಲಾ ಶಬ್ದಗಳ ಪ್ರಾತಿಪದಿಕಾರ್ಥವು ಸ್ತ್ರೀವ್ಯಕ್ತಿಯೇ ಆಗಿರುತ್ತದೆ. ಪುರುಷನಾದ ಪರಮಾತ್ಮನು ಸ್ತ್ರೀಯಾಗಲು ಸಾಧ್ಯವಿಲ್ಲ. ಆದ್ದರಿಂದಲೇ ಅವನನ್ನು 'ಸ್ತ್ರೀ'ಯೆಂದಾಗಲೀ, 'ನಾರೀ' ಎಂದಾಗಲು ಕರೆಯಲು ಸಾಧ್ಯವಿಲ್ಲ.

ಪೂರ್ವಮೀಮಾಂಸೆಯಲ್ಲಿ ಉದ್ದೇಶ್ಯವಿಶೇಷಣವಾದದ್ದು, ಅವಿವಕ್ಷಿತವಾಗುತ್ತದೆಂದು ತೀರ್ಮಾನಿಸಲಾಗಿದೆ. 'ಸ್ವರ್ಗಕಾಮಃ ಯಜೇತ' ಎಂಬಲ್ಲಿ ಸ್ವರ್ಗವನ್ನು ಬಯಸುವವನು ಯಾಗ ಮಾಡಬೇಕು ಎಂದು ಆಪಾತತಃ ಕಾಣಸುತ್ತದೆ. ಸ್ವರ್ಗವನ್ನು ಬಯಸುವವನು ಪುರುಷನಾಗಬೇಕೆಂದೇನೂ ಇಲ್ಲ. ಸ್ತ್ರೀಯೂ ಕೂಡ ಸ್ವರ್ಗವನ್ನು ಬಯಸಬಹುದು. ಅಂತಹ ಬಯಕೆಯುಳ್ಳ ಸ್ತ್ರೀಗೂ ಕೂಡ ಪುರುಷನ ಜೊತೆಗೆ ಯಾಗಾಧಿಕಾರವಿರುತ್ತದೆಂದು ಪೂರ್ವಮೀಮಾಂಸೆಯ ಅಧಿಕಾರಾಧಿಕರಣದಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ 'ಸ್ವರ್ಗಕಾಮಃ' ಎಂಬಲ್ಲಿರುವ ಪುಲ್ಲಿಂಗವು ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವಾಗುತ್ತದೆ. 'ಬ್ರಾಹಣೋ ನ ಹಂತವ್ಯಃ' ಎಂಬಲ್ಲಿಯೂ ಕೂಡ ಪುಲ್ಲಿಂಗವು ಅವಿವಕ್ಷಿತ. ಬ್ರಾಹ್ಮಣನನ್ನು ಕೊಲ್ಲಬಾರದು ಎಂದರೆ ಬ್ರಾಹ್ಮಣಸ್ತ್ರೀಯನ್ನೂ ಕೂಡ ಕೊಲ್ಲಬಾರದೆಂದೇ ಎಲ್ಲರೂ ತಿಳಿಯುತ್ತಾರೆ. ಆದರಂತೆ 'ಪ್ರಕೃತಿಃ' ಎಂಬಲ್ಲಿರುವ ಸ್ತ್ರೀಲಿಂಗವು ಉದ್ದೇಶ್ಯವಿಶೇಷಣವಾದ್ದರಿಂದ ಅವಿವಕ್ಷಿತವಾಗುತ್ತದೆ. ಪ್ರತ್ಯಯಾರ್ಥ ಮಾತ್ರ ಉದ್ದೇಶ್ಯವಿಶೇಷಣವಾಗಬೇಕಾಗಿಲ್ಲ. ಕೆಲವೊಮ್ಮೆ ಪ್ರಾತಿಪದಿಕಾರ್ಥವೂ ಕೂಡ ಉದ್ದೇಶವಿಶೇಷಣವಾಗುತ್ತದೆ. ಆದ್ದರಿಂದ 'ಸ್ತ್ರೀ', 'ನಾರೀ' ಇತ್ಯಾದಿ ಶಬ್ದಗಳ ಅರ್ಥವೂ ಕೂಡ ಉದ್ದೇಶ್ಯ ವಿಶೇಷಣವಾಗಬಹುದಾದ್ದರಿಂದ ಅವಿವಕ್ಷಿತವಾಗಬಹುದಲ್ಲವೇ? ಎಂದು ಪ್ರಶ್ನಿಸಬಹುದು.

ಇದು ಸರಿಯಲ್ಲ. 'ಬ್ರಾಹ್ಮಣೋ ನ ಹಂತವ್ಯಃ' ಎಂಬಲ್ಲಿ ಪುಲ್ಲಿಂಗವು ಉದ್ದೇಶ್ಯವಿಶೇಷಣವಾಗಿದೆ. ಆದರಂತೆ ಪ್ರಕೃತಿ ಎಂಬುದು ಉದ್ದೇಶ್ಯವಿಶೇಷಣವಾಗಿಲ್ಲ. ಹೊರತಾಗಿ ವಿಧೇಯವಿಶೇಷಣವಾಗಿದೆ. ವಿಧೇಯವಿಶೇಷಣವಾದದ್ದು ವಿವಕ್ಷಿತವಾಗಬಹುದಾದ್ದರಿಂದ ಪ್ರಕೃತಿಯೆಂಬಲ್ಲಿರುವ ಸ್ತ್ರೀಲಿಂಗವು ಅವಿವಕ್ಷಿತವೆಂದು ಸಮರ್ಥಿಸಲಾಗದು. ಮತ್ತು ಬ್ರಾಹ್ಮಣತ್ವವು ಬ್ರಾಹ್ಮಣಶಬ್ದದ ಪ್ರಾತಿಪದಿಕಾರ್ಥವಾಗಿರುವಂತೆ, ಸ್ತ್ರೀತ್ವವು 'ಸ್ತ್ರೀ' ಎಂಬ ಪ್ರಾತಿಪದಿಕಾರ್ಥದ ಅರ್ಥವಾಗಿದೆ. ಇದೂ ಕೂಡ ಉದ್ದೇಶ್ಯವಿಶೇಷಣವಾಗಲು ಸಾಧ್ಯವಿಲ್ಲ. ಇಂತಹ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನೆಂದು ಸಮರ್ಥಿಸುವುದು ಸುಲಭದ ಮಾತಲ್ಲ.

ಆದ್ದರಿಂದ ಸ್ತ್ರೀಲಿಂಗಾಂತವಾದ ಪ್ರಕೃತಿಃ, ವಿಕೃತಿಃ ಮೊದಲಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲಾರ. 'ಸ್ತ್ರೀ', 'ನಾರೀ', 'ಯೋಷಿತ್' ಮೊದಲಾದ ಸ್ತ್ರೀತ್ವವೇ ಪ್ರಾತಿಪಾದಿಕಾರ್ಥವಾಗಿವುಳ್ಳ ಶಬ್ದಗಳಿಂದಲೂ ಕೂಡ ಪರಮಾತ್ಮನು ಪ್ರತಿಪಾದ್ಯನಾಗಲಾರ. ಇವೆರಡರ ಜೊತೆಗೆ 'ನಪುಂಕಸಂ' ಮೊದಲಾದ ಶಬ್ದಗಳಿಂದಲೂ ಕೂಡ ಪರಮಾತ್ಮನು ಪ್ರತಿಪಾದ್ಯನಾಗಲಾರ. ಸ್ತ್ರೀಯರಿಂದಾಗಲೀ, ಪುರುಷರಿಂದಾಗಲೀ, ಪರಮಾತ್ಮನು ಆಕರ್ಷಿತನಲ್ಲದ ಕಾರಣ ನಪುಂಸಕನಾಗಿದ್ದಾನೆ ಎಂದು ಯೌಗಿಕಾರ್ಥವನ್ನು ತಿಳಿಯಬಹುದು. ಏನೇ ಆದರೂ ನಪುಂಸಕ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ನಪುಂಸಕತ್ವವು ಪರಮಾತ್ಮನಲ್ಲಿ ಸರ್ವಥಾ ಬರುವುದಿಲ್ಲ. ಈ ಅಧಿಕರಣದಲ್ಲಿ ಸ್ವಾತಂತ್ರ್ಯವೆಂಬ

ಪ್ರವೃತ್ತಿನಿಮಿತ್ತವನ್ನಾಗಲೀ, ಯೌಗಿಕಾರ್ಥವನ್ನಾಗಲೀ ವಿವಕ್ಷಿಸಿ, ಶಬ್ದಸಮನ್ವಯವನ್ನು ಆಕ್ಷೇಪ ಮಾಡುತ್ತಿಲ್ಲ. ಹೊರತಾಗಿ, ಪ್ರಕೃತಸ್ಯ ಎಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ರೂಢವಾದ ಅರ್ಥವನ್ನು ಉದ್ದೇಶಿಸಿ ಆಕ್ಷೇಪ ಮಾಡಲಾಗಿದೆ. ಯಾವಾಗ ತದ್ಗತತ್ವವನ್ನೇ ಅನುಸರಿಸಲಾಗುತ್ತದೋ, ಆವಾಗ ನಪುಂಸಕ ಮೊದಲಾದ ಶಬ್ದದಿಂದಾಗಲೀ, 'ಸ್ತ್ರೀ' ಮೊದಲಾದ ಶಬ್ದಗಳಿಂದಾಗಲೀ, ಪರಮಾತ್ಮನು ಪ್ರತಿಪಾದ್ಯನೆಂದು ಸಮರ್ಥಿಸುವುದು ಅತ್ಯಂತ ಕಠಿಣವಾದ ವಿಷಯ. ಹೀಗಿರುವಾಗ 'ತತ್ತು ಸಮನ್ವಯಾತ್' ಎಂಬ ಅಧಿಕರಣದಲ್ಲಿ ಪರಮಾತ್ಮನು ಸಕಲ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ನಿರ್ಧರಿಸುತ್ತೀರಿ? ಇಷ್ಟು ಈ ಪ್ರಕೃತ್ಯಧಿಕರಣದ ಪೂರ್ವಪಕ್ಷ.

• • • • •

## ನೇರವಾಗಿ ಅಪತ್ಯೋತ್ಪಾದಕನಾದ ಪರಮಪುರುಷನು ಸ್ತ್ರೀ ಆಗಿದ್ದಾನೆ

## तात्पर्यचन्द्रिका

**सिद्धान्तस्तु ।**

**स्वदेहात् प्राणिनां सूतिहेतुत्वं स्त्रीत्वमुच्यते ।**
**तच्चास्ति ब्रह्मणस्तस्मात् स्त्रीशब्दास्तस्य वाचकाः ।। १ ।।**

ಅನುವಾದ - ಪ್ರಕೃತ್ಯಧಿಕರಣದ ಸಿದ್ಧಾಂತ ಹೀಗಿದೆ -

ಸ್ವದೇಹಾತ್ ಪ್ರಾಣಿನಾಂ ಸೂತಿಹೇತುತ್ವಂ ಸ್ತ್ರೀತ್ವಮುಚ್ಯತೇ ।
ತಚ್ಚಾಸ್ತಿ ಬ್ರಹ್ಮಣಸ್ತಸ್ಮಾತ್ ಸ್ತ್ರೀಶಬ್ದಾಸ್ತಸ್ಯ ವಾಚಕಾಃ ॥

ತನ್ನ ದೇಹದಿಂದ ನೇರವಾಗಿ ಪುತ್ರೋತ್ಪತ್ತಿಗೆ ಕಾರಣವಾದರೆ, 'ಸ್ತ್ರೀ' ಎಂದು ಲೋಕದಲ್ಲಿ ಕರೆಯುತ್ತಾರೆ. ಪರಮಾತ್ಮನು ತನ್ನ ದೇಹದಿಂದ ನೇರವಾಗಿ ಪ್ರಾಣಿಗಳನ್ನು ಹುಟ್ಟಿಸುವುದರಿಂದ ಅವನೂ ಕೂಡ 'ಸ್ತ್ರೀ' ಎಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ ಸ್ತ್ರೀಲಿಂಗವಾದ ಶಬ್ದಗಳಿಂದ ಪರಮಾತ್ಮನು ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. (ಇಷ್ಟು ಸಿದ್ಧಾಂತದ ಸಾರ)

**ईश्वरो हि प्रलये स्वोदरे निवेशितं ब्रह्मादिप्राणिजातं स्वदेहादेव स्थूलदेह-विशिष्टतया जनयतीति -**

**स्वदेहादिच्छया विश्वं भुक्तपूर्वं जनार्दनः ।**
**ससर्ज मातापितृवद्दूर्णनाभिवदेव च ।।**

**इत्यादिभिः सिद्धम् ।**

ಜಗದೊಡೆಯನಾದ ಈಶ್ವರನು ಪ್ರಲಯಕಾಲದಲ್ಲಿ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡ ಬ್ರಹ್ಮ, ರುದ್ರ ಮೊದಲಾದ ಸಮಸ್ತ ಪ್ರಾಣಿಗಳನ್ನು ತನ್ನ ದೇಹದಿಂದ ಹುಟ್ಟಿಸುತ್ತಾನೆ. ಅಂದರೆ ಬ್ರಹ್ಮಾದಿ ದೇವತೆಗಳಿಗೆ ಸ್ಥೂಲದೇಹವನ್ನು ನೀಡಿ, ಅವರ ಉತ್ಪತ್ತಿಗೆ ಕಾರಣನಾಗಿದ್ದಾನೆ. ಇದನ್ನು ಶ್ರುತಿವಾಕ್ಯ ಹೀಗೆ ಹೇಳುತ್ತದೆ -

ಸ್ವದೇಹಾದಿಚ್ಛಯಾ ವಿಶ್ವಂ ಭುಕ್ತಪೂರ್ವಂ ಜನಾರ್ದನಃ ।
ಸಸರ್ಜ ಮಾತಾಪಿತೃವದೂರ್ಣನಾಭಿವದೇವ ಚ ॥

ಹಿಂದಿನ ಕಲ್ಪದಲ್ಲಿ ಯಾವ ಸಮಸ್ತ ಜಗತ್ತನ್ನು ಪರಮಾತ್ಮನು ತಿಂದಿದ್ದನೋ, ಅದಕ್ಕೆ ಸರಿಸಮಾನವಾದ ಮತ್ತೊಂದು ಜಗತ್ತನ್ನು ತನ್ನ ದೇಹದಿಂದ ಇಚ್ಛಾಪೂರ್ವಕವಾಗಿ ಪುನಃ ಸೃಷ್ಟಿ ಮಾಡುತ್ತಾನೆ. ಜೇಡರ ಹುಳವು ಹೇಗೆ ತನ್ನ ಉಗುಳಿನಿಂದ ಬಲೆಯನ್ನು ಕಟ್ಟಿ ಪುನಃ ನುಂಗುತ್ತದೋ, ಅದರಂತೆ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸಿ, ಪುನಃ ತಿನ್ನುತ್ತಾನೆ. ತನ್ನ ತಂದೆ-ತಾಯಿಯಂದಿರು ಮಕ್ಕಳನ್ನು ಹುಟ್ಟಿಸುವಂತೆ ಪರಮಾತ್ಮನೊಬ್ಬನೇ ಈ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆ.

ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಇದು ಸಿದ್ಧವಾಗುತ್ತದೆ.

**तदेव चेह स्त्रीत्वम् । ''सूतिरव्यवधानेन स्त्रीत्वमाहुर्मनीषिणः'' इत्यादिस्मृत्युक्तस्यैव श्रुतौ ग्राह्यत्वात् । उक्तं ह्येतत् ''कम्पनात्'' इत्यत्र ।**

ಸ್ತ್ರೀತ್ವ ಎಂದರೆ 'ಅವ್ಯವಧಾನೇನ ಪುತ್ರೋತ್ಪಾದಕತ್ವ' ಎಂದರ್ಥ. 'ಸೂತಿರವ್ಯವಧಾನೇನ ಸ್ತ್ರೀತ್ವಮಾಹುರ್ಮನೀಷಿಣಃ' ವ್ಯವಧಾನವಿಲ್ಲದೇ (ಮತ್ತೊಂದು ವ್ಯಕ್ತಿಯನ್ನು ಅಪೇಕ್ಷೆ ಪಡದೇ) ಅಪತ್ಯೋತ್ಪಾದಕತ್ವವಿದ್ದರೆ 'ಸ್ತ್ರೀ' ಎಂದು ವಿದ್ವಾಂಸರು ಕರೆಯುತ್ತಾರೆ. ಹೀಗೆ ಸ್ಮೃತಿವಾಕ್ಯ ಹೇಳಿದಂತೆ ಪರಮಾತ್ಮನಲ್ಲಿ ಅವ್ಯವಧಾನೇನ ಅಪತ್ಯೋತ್ಪಾದಕತ್ವವು ಇರುವುದರಿಂದ ಸ್ತ್ರೀತ್ವವು ಇರುತ್ತದೆಂದು ಸುಲಭವಾಗಿ ಸಿದ್ಧವಾಗುತ್ತದೆ. ಸ್ಮೃತಿಗೆ ಅನುಗುಣಿತವಾದ ಅರ್ಥವನ್ನೇ ಶ್ರುತಿಗೆ ತಿಳಿಯಬೇಕೆಂಬ ವಿಚಾರವನ್ನು ಕಂಪನಾಧಿಕರಣದಲ್ಲಿ ನಿರ್ಣಯಿಸಲಾಗಿದೆ.

**तस्मात् स्त्रीशब्दा अपि ब्रह्मणि मुख्या एवेति ।**

ಆದ್ದರಿಂದ ಹಿಂದಿನ ಅಧಿಕರಣಗಳಿಂದ ಪರಮಾತ್ಮನು ಪರಮಪುರುಷನಾಗಿದ್ದಾನೆ. ಪುಲ್ಲಿಂಗವಾದ ಶಬ್ದಗಳಿಂದೆಲ್ಲಾ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ಸಿದ್ಧವಾಗಿದೆಯೋ, ಅದರಂತೆ ಈ ಪ್ರಕೃತ್ಯಧಿಕರಣದಿಂದ ಪರಮಾತ್ಮನು ಮನಮೋಹಕವಾದ ಸ್ತ್ರೀ ರೂಪವುಳ್ಳವನೂ ಆಗಿದ್ದಾನೆ. ಸ್ತ್ರೀಲಿಂಗವಾದ ಶಬ್ದಗಳಿಂದೆಲ್ಲಾ ಪ್ರತಿಪಾದ್ಯನಾಗಿದ್ದಾನೆ ಎಂದು ಸಿದ್ಧವಾಯಿತು.

ಪರಿಪೂರ್ಣಚಂದ್ರಿಕಾ

**प्रकाशः –**

''योनिश्च हि गीयत'' इति सूत्रव्यावर्त्यपूर्वपक्षस्येह प्रपञ्चनात्तत् सूत्र-भाष्यटीकातात्पर्यकथनेन सिद्धान्तयति – **स्वदेहादिति** ।।

**ವಿವರಣೆ** - 'ಯೋನಿಶ್ಚ ಹಿ ಗೀಯತೇ' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಗ್ರಂಥದಲ್ಲಿ ಹೆಚ್ಚಾಗಿ ವಿವರಿಸಿರುತ್ತಾರೆ. ಆದ್ದರಿಂದ ಮೊದಲು ಈ ಸೂತ್ರದ ಭಾಷ್ಯ, ಟೀಕೆಗಳ ತಾತ್ಪರ್ಯವನ್ನು ಹೇಳುವವರಾಗಿ, ಸಿದ್ಧಾಂತವನ್ನು ಸ್ಥಾಪನೆ ಮಾಡುತ್ತಿದ್ದಾರೆ 'ಸ್ವದೇಹಾತ್' ಇತ್ಯಾದಿ ವಾಕ್ಯದಿಂದ.

**प्रकाशः** – श्लोकं प्रमाणपूर्वं व्यनक्ति – **ईश्वरो हीति** ।। **स्वदेहादि**-त्यनुव्याख्यानोक्तब्रह्मतर्कवाक्यम् । सच्चिदानन्दाद्यात्मकात् स्वदेहात् । भुक्तपूर्वं पूर्वकल्पे संहृतेन सदृशमित्यर्थः ।।

ತಾವೇ ರಚಿಸಿದ ಶ್ಲೋಕವನ್ನು ಪ್ರಮಾಣಪುರಸ್ಸರವಾಗಿ 'ಈಶ್ವರೋ ಹಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಸ್ವದೇಹಾತ್' ಎಂಬ ಶ್ಲೋಕವು ಅನುವ್ಯಾಖ್ಯಾನದಲ್ಲಿ ಉಲ್ಲೇಖಿಸಿದ ಬ್ರಹ್ಮತರ್ಕದ ವಚನವಾಗಿದೆ. 'ಸ್ವದೇಹಾತ್' ಎಂದರೆ ಸಚ್ಚಿದಾನಂದಸ್ವರೂಪವಾದ ತನ್ನ ದೇಹದಿಂದ ಎಂದರ್ಥ. 'ಭುಕ್ತಪೂರ್ವಂ' ಎಂದರೆ ಹಿಂದಿನ ಕಲ್ಪದಲ್ಲಿ ಯಾವ ಜಗತ್ತನ್ನು ಸಂಹಾರ ಮಾಡಿದನೋ, ಅದಕ್ಕೆ ಸದೃಶವಾದ ಮತ್ತೊಂದು ಜಗತ್ತು ಎಂದರ್ಥ.

**प्रकाशः – उक्तं ह्येतदिति** ।।

श्रुत्यर्थनिर्णयार्थत्वात् स्मृतेस्तत्र निरूपितः ।
अर्थो ग्राह्यो वेदवाक्ये तदयोगे तु लौकिकः।।

इत्यादिनेति भावः ।

'ಉಕ್ತಂ ಹ್ಯೇತತ್' ಎಂಬುದರಿಂದ ಕಂಪನಾಧಿಕರಣದಲ್ಲಿ ಸಮರ್ಥಿಸಿದ ಸಮಾನಶ್ಲೋಕವನ್ನು ಹೀಗೆ ತಿಳಿಯಬೇಕು -

ಶ್ರುತ್ಯರ್ಥನಿರ್ಣಯಾರ್ಥತ್ವಾತ್ ಸ್ಮೃತೇಃ ತತ್ರ ನಿರೂಪಿತಃ।
ಅರ್ಥೋ ಗ್ರಾಹ್ಯೋ ವೇದವಾಕ್ಯೇ ತದಯೋಗೇ ತು ಲೌಕಿಕಃ॥

ಶ್ರುತ್ಯರ್ಥವನ್ನು ನಿರ್ಣಯಿಸುವುದಕ್ಕಾಗಿಯೇ ಸ್ಮೃತಿಯು ಹೊರಟಿರುತ್ತದೆ. ಆದ್ದರಿಂದ ಸ್ಮೃತಿಯಲ್ಲಿ ಹೇಳಿದ ಅರ್ಥವನ್ನೇ ಶ್ರುತಿಗೆ ತಿಳಿದುಕೊಳ್ಳಬೇಕು. ಒಂದು ವೇಳೆ ಸ್ಮೃತ್ಯರ್ಥವು ಅಯುಕ್ತವಾದರೆ ಆವಾಗ ಮಾತ್ರ ಲೌಕಿಕಾರ್ಥವನ್ನು ವಿವಕ್ಷಿಸಬೇಕು.

ಪ್ರಕೃತ್ಯಧಿಕರಣ (೧-೪-೬)

**प्रकाशः** – तस्मात् प्रवृत्तिनिमित्तसत्त्वादित्यर्थः । ''नैनं वाचेति निषेधस्त्वज्ञेयतामात्रार्थः'' इत्यादिटीकायामेवोक्तमिति भावः ।

'ತಸ್ಮಾತ್' ಎಂದರೆ ಪ್ರವೃತ್ತಿನಿಮಿತ್ತವಿರುವುದರಿಂದ ಎಂದರ್ಥ. 'ನೈನಂ ವಾಚಾ ಇತಿ ನಿಷೇಧಸ್ತ್ವಜ್ಞೇಯತಾಮಾತ್ರಾರ್ಥಃ' 'ನೈನಂ ವಾಚಾ' ಇತ್ಯಾದಿಯಾಗಿ ಪರಮಾತ್ಮನಲ್ಲಿ ಸ್ತ್ರೀತ್ವವನ್ನು ನಿಷೇಧ ಮಾಡಿದ್ದು ಕೇವಲ ಜ್ಞೇಯನಲ್ಲ ಎಂದು ತಿಳಿಸುವುದಕ್ಕಾಗಿ ಎಂದು ಟೀಕೆಯಲ್ಲೇ ಹೇಳಿರುತ್ತಾರೆ. ಅಂದರೆ ಭಗವಂತನ ಸ್ತ್ರೀರೂಪಗಳನ್ನು ತಿಳಿಯಲು ಯಾರಿಗೂ ಅಧಿಕಾರವಿಲ್ಲ ಎಂದಭಿಪ್ರಾಯ.[೧]

**प्रकाशः** – नपुंसकमित्यादिशब्दानामप्यरागाकृष्टत्वादिना निमित्तान्तरेण हरौ वृत्तिर्ध्येयेति तात्पर्यम् ।

ಭಗವಂತನು 'ನಪುಂಸಕಮ್' ಇತ್ಯಾದಿ ಶಬ್ದಗಳಿಂದ ಹೇಗೆ ಪ್ರತಿಪಾದ್ಯನಾಗುತ್ತಾನೆ ಎಂದರೆ 'ಅರಾಗಾಕೃಷ್ಟತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಎಂದು ತಿಳಿಯಬೇಕು. ಭಗವಂತನ ಪುರುಷರೂಪವು ಸ್ತ್ರೀಯರಿಗೆ ವಶವಾಗುವುದಿಲ್ಲ. ಅಥವಾ ಸ್ತ್ರೀರೂಪವು ಪುರುಷರಿಗೆ ವಶವಾಗುವುದಿಲ್ಲ. ಯಾರೊಬ್ಬರಿಗೂ ಸೋಲದ ಸೌಂದರ್ಯದ ರಾಶಿ ಪರಮಾತ್ಮನಾಗಿದ್ದಾನೆ. ರಾಗಾದಿ ದೋಷಗಳು ಅವನ ಯಾವುದೇ ರೂಪಗಳಲ್ಲಿಯೂ ಕೂಡ ಇರುವುದಿಲ್ಲ. ಹೀಗೆ ರಾಗದಿಂದ ಆಕೃಷ್ಟವಾಗದ ಕಾರಣ ಭಗವಂತನು ನಪುಂಸಕ ಎನಿಸುತ್ತಾನೆ.

---

(೧) ಭಗವಂತನಿಗೆ ಎಷ್ಟು ಪುರುಷರೂಪಗಳಿವೆಯೋ, ಅಷ್ಟೇ ಸ್ತ್ರೀ ರೂಪಗಳೂ ಕೂಡ ಇರುತ್ತವೆ. ಉದಾಹರಣೆ ಛಾಂದೋಗ್ಯದಲ್ಲಿ ವರ್ಣಿಸುವಂತೆ ವಾಕ್‌ಗೆ ಹಯಗ್ರೀವ ಎಂಬ ಸ್ತ್ರೀರೂಪವು ನಿಯಾಮಕವಾಗಿದೆ. ಇದರಂತೆ ಮತ್ಸ್ಯ, ಕೂರ್ಮ, ವರಾಹ, ವಿಶ್ವಂಭರ ಈ ಎಲ್ಲಾ ರೂಪಗಳೂ ಕೂಡ ಸ್ತ್ರೀರೂಪದಲ್ಲಿಯೂ ಇರುತ್ತವೆ. ಆದರೆ ಯಾರೇ ಒಬ್ಬ ಪುರುಷನಿಗೂ ಈ ಸ್ತ್ರೀರೂಪಗಳ ಉಪಾಸನೆಯಲ್ಲಿ ಅಧಿಕಾರವಿರುವುದಿಲ್ಲ. ಕೇವಲ ಚತುರ್ಮುಖಬ್ರಹ್ಮದೇವರು ಹಾಗೂ ಮಹಾಲಕ್ಷ್ಮೀದೇವಿ ಇವರಿಬ್ಬರಿಗೆ ಮಾತ್ರ ಇಂತಹ ರೂಪಗಳ ಉಪಾಸನೆಯ ಅಧಿಕಾರವು ಇರುತ್ತದೆ.

ವಾಸ್ತವಿಕವಾಗಿ ಯಾವ ಜೀವರು ಸ್ವಭಾವತಃ ಸ್ತ್ರೀಯರೇ ಆಗಿರುತ್ತಾರೋ, ಅವರ ಬಿಂಬರೂಪ ಸ್ತ್ರೀರೂಪದಿಂದಲೇ ಇರುತ್ತದೆ. ಅವರಿಗೆ ಭಗವಂತನು ಸ್ತ್ರೀರೂಪದಿಂದಲೇ ಅಪರೋಕ್ಷನಾಗುತ್ತಾನೆ. ಇದನ್ನು ಹೊರತಾಗಿ ಉಳಿದವರಿಗೆ ಭಗವಂತನ ಸ್ತ್ರೀರೂಪದ ಉಪಾಸನೆಯ ಅಧಿಕಾರವು ಇರುವುದಿಲ್ಲ. ಈ ವಿಷಯವು ಛಾಂದೋಗ್ಯಭಾಷ್ಯದಿಂದ ತಿಳಿಯುತ್ತದೆ.



ಪ್ರಕೃತ್ಯಧಿಕರಣದ ಸಿದ್ಧಾಂತ ಹೀಗಿದೆ -

ಸ್ವದೇಹಾತ್ ಪ್ರಾಣಿನಾಂ ಸೂತಿಹೇತುತ್ವಂ ಸ್ತ್ರೀತ್ವಮುಚ್ಯತೇ ।
ಯಚ್ಚಾಸ್ತಿ ಬ್ರಹ್ಮಣಸ್ತಸ್ಮಾತ್ ಸ್ತ್ರೀಶಬ್ದಾಸ್ತಸ್ಯ ವಾಚಕಾಃ ॥

ತನ್ನ ದೇಹದಿಂದ ನೇರವಾಗಿ ಪುತ್ರೋತ್ಪತ್ತಿಗೆ ಕಾರಣವಾದರೆ, 'ಸ್ತ್ರೀ' ಎಂದು ಲೋಕದಲ್ಲಿ ಕರೆಯುತ್ತಾರೆ. ಪರಮಾತ್ಮನು ತನ್ನ ದೇಹದಿಂದ ನೇರವಾಗಿ ಪ್ರಾಣಿಗಳನ್ನು ಹುಟ್ಟಿಸುವುದರಿಂದ ಅವನೂ ಕೂಡ 'ಸ್ತ್ರೀ' ಎಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ ಸ್ತ್ರೀಲಿಂಗವಾದ ಶಬ್ದಗಳಿಂದ ಪರಮಾತ್ಮನು ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ.

ಜಗದೊಡೆಯನಾದ ಈಶ್ವರನು ಪ್ರಲಯಕಾಲದಲ್ಲಿ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡ ಬ್ರಹ್ಮ, ರುದ್ರ ಮೊದಲಾದ ಸಮಸ್ತ ಪ್ರಾಣಿಗಳನ್ನು ತನ್ನ ದೇಹದಿಂದ ಹುಟ್ಟಿಸುತ್ತಾನೆ. ಅಂದರೆ ಬ್ರಹ್ಮಾದಿ ದೇವತೆಗಳಿಗೆ ಸ್ಥೂಲದೇಹವನ್ನು ನೀಡಿ, ಅವರ ಉತ್ಪತ್ತಿಗೆ ಕಾರಣನಾಗಿದ್ದಾನೆ. ಇದನ್ನು ಶ್ರುತಿವಾಕ್ಯ ಹೀಗೆ ಹೇಳುತ್ತದೆ -

ಸ್ವದೇಹಾದಿಚ್ಛಯಾ ವಿಶ್ವಂ ಭುಕ್ತಪೂರ್ವಂ ಜನಾರ್ದನಃ ।
ಸಸರ್ಜ ಮಾತಾಪಿತೃವದೂರ್ಣನಾಭವದೇವ ಚ ॥

ಹಿಂದಿನ ಕಲ್ಪದಲ್ಲಿ ಯಾವ ಸಮಸ್ತ ಜಗತ್ತನ್ನು ಪರಮಾತ್ಮನು ತಿಂದಿದ್ದನೋ, ಅದಕ್ಕೆ ಸರಿಸಮಾನವಾದ ಮತ್ತೊಂದು ಜಗತ್ತನ್ನು ತನ್ನ ದೇಹದಿಂದ ಇಚ್ಛಾಪೂರ್ವಕವಾಗಿ ಪುನಃ ಸೃಷ್ಟಿ ಮಾಡುತ್ತಾನೆ. ಜೇಡರ ಹುಳವು ಹೇಗೆ ತನ್ನ ಉಗುಳಿನಿಂದ ಬಲೆಯನ್ನು ಕಟ್ಟಿ ಪುನಃ ನುಂಗುತ್ತದೋ, ಅದರಂತೆ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸಿ, ಪುನಃ ತಿನ್ನುತ್ತಾನೆ. ತನ್ನ ತಂದೆ-ತಾಯಿಯಂದಿರು ಮಕ್ಕಳನ್ನು ಹುಟ್ಟಿಸುವಂತೆ ಪರಮಾತ್ಮನೊಬ್ಬನೇ ಈ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆ.



ಸೂತ್ರಕ್ರಮ ವಿನ್ಯಾಸ ಸ್ವಾರಸ್ಯ

## तात्पर्यचन्द्रिका

**अत्र चाद्ये सूत्रे ''नामानि सर्वाणि'' इत्यादिश्रुतिस्थसर्वशब्दस्य सङ्कोचशङ्कायां ''हन्तैतमेव'' इत्यादि भाष्योदाहृतश्रुतेरुपक्रमोपसंहारोपपत्तिभिः सामान्येन सर्वशब्दवाच्यत्वे तात्पर्यनिश्चयान्न सर्वशब्दस्य प्रकृत्यादिशब्देतरविषयत्वेन सङ्कोचः शङ्क्य इत्युक्तम् ।**

ಅನುವಾದ - ಈ ಅಧಿಕರಣದಲ್ಲಿರುವ ಐದುಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಅರ್ಥಪೂರ್ಣವಾಗಿದೆ. 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬುದು ಮೊದಲನೆಯ ಸೂತ್ರ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳ ಸಮನ್ವಯವನ್ನಷ್ಟೇ ತಿಳಿಯಬೇಕೆಂದು ಪೂರ್ವಪಕ್ಷಿಗಳು ಆಕ್ಷೇಪ ಮಾಡುತ್ತಾರೆ. ಅದರ ನಿರಾಕರಣೆಗಾಗಿ ಈ ಸೂತ್ರ ಹೊರಟಿದೆ. 'ಹಂತೈತಮೇವ ಪುರುಷಂ' ಎಂಬುದು ಉಪಕ್ರಮವಾಕ್ಯ. 'ಯಥಾ ನದ್ಯಃ ಸ್ಯಂದಮಾನಾಃ' ಎಂಬುದು ದೃಷ್ಟಾಂತವಾಕ್ಯ. ಈ ಎರಡು ವಾಕ್ಯಗಳಿಗೆ ವಿರೋಧವು ಬರಬಾರದೆಂದರೆ ಪರಮಾತ್ಮನು ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದಲೂ ಪ್ರತಿಪಾದ್ಯನಾಗುತ್ತಾನೆಂದು ಒಪ್ಪಬೇಕು. ಆದ್ದರಿಂದ ಕೇವಲ ಪುಲ್ಲಿಂಗ-ಶಬ್ದಗಳಿಂದಷ್ಟೇ ಅಲ್ಲ, ಸ್ತ್ರೀಲಿಂಗಶಬ್ದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆ. ಹೀಗೆ ಸಾಮಾನ್ಯವಾಗಿ ಮೊದಲನೆಯ ಸೂತ್ರವು ಪರಮಾತ್ಮನು ಸಕಲಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ ಎಂಬ ವಿಷಯದಲ್ಲಿ ತಾತ್ಪರ್ಯವನ್ನು ಹೊಂದಿದೆ. ಹಾಗಾಗಿ ನಾಮಾನಿ ಸರ್ವಾಣಿ ಎಂಬಲ್ಲಿರುವ ಸರ್ವಶಬ್ದಕ್ಕೆ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳ ಸಮನ್ವಯದಲ್ಲಿ ತಾತ್ಪರ್ಯವನ್ನು ತಿಳಿಯಬೇಕೆಂಬ ಅರ್ಥಸಂಕೋಚವನ್ನು ಮಾಡಬಾರದು.

**चशब्दस्तु स्त्रीत्वं चेत्तर्हि पुंस्त्वं न स्यात् । विरोधादिति न शङ्क्यं ''व्यवधानेन सूतिस्तु'' इति भाष्योक्तरीत्या द्वयोरुपपत्तेरिति प्रदर्शनार्थम् ।**

ಹಾಗಾದರೆ ಪರಮಾತ್ಮನಲ್ಲಿ ಸ್ತ್ರೀತ್ವವು ಇದೆ ಎಂದು ಹೇಳಿದಂತಾಯಿತು. ಸ್ತ್ರೀತ್ವವಿದ್ದರೆ ಪುರುಷತ್ವವಿರಲು ಸಾಧ್ಯವಿಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾದರೆ, 'ಪ್ರಕೃತಿಶ್ಚ' ಎಂಬಲ್ಲಿ ಚಶಬ್ದವನ್ನು ಉಲ್ಲೇಖಿಸಿದ್ದಾರೆ. ಸ್ತ್ರೀತ್ವವು ಇರುವಂತೆ ಪುಂಸ್ತ್ವವೂ ಕೂಡ ಪರಮಾತ್ಮನಿಗೆ ಇದೆಯೆಂದು ಸಮುಚ್ಚಯ ಮಾಡುತ್ತಿದೆ. ಸ್ತ್ರೀತ್ವ ಹಾಗೂ ಪುರುಷತ್ವಗಳೆರಡೂ ಒಬ್ಬನೇ ವ್ಯಕ್ತಿಯಲ್ಲಿ ವಿರುದ್ಧವಾಗುತ್ತದಲ್ಲವೇ? ಎಂದು ಆಶಂಕಿಸಬಾರದು. ಪರಮಾತ್ಮನಲ್ಲಿ ವ್ಯವಧಾನೇನ ಸೂತಿಕರ್ತೃತ್ವವಿರುವುದರಿಂದ ಪುರುಷತ್ವವು ಇರುತ್ತದೆ. ಅವ್ಯವಧಾನೇನ ಸೂತಿಕರ್ತೃತ್ವವಿರುವುದರಿಂದ ಸ್ತ್ರೀತ್ವವೂ ಕೂಡ ಇರುತ್ತದೆಂದು ಭಾಷ್ಯದಲ್ಲಿ ಹೇಳಿದಂತೆ ತಿಳಿಯಬೇಕು.

**द्वितीये स्त्रीशब्दोपलक्षकप्रकृतिशब्दवाच्यत्वे विशिष्य प्रमाणोक्तिः । अस्य चाभिध्यायाः प्रकृतित्वोपदेशात् ब्रह्मणश्चाभिध्यात्वोपदेशादित्यर्थः ।**

'ಅಭಿಧ್ಯೋಪದೇಶಾಚ್ಚ' ಎಂಬುದು ಎರಡನೆಯ ಸೂತ್ರ. ಈ ಸೂತ್ರದಲ್ಲಿ ಎಲ್ಲಾ ಬಗೆಯ ಸ್ತ್ರೀಶಬ್ದಗಳಿಗೂ ಉಪಲಕ್ಷಕವಾದ, ಪ್ರಕೃತಿಶಬ್ದದಿಂದ ಪರಮಾತ್ಮನು ಹೇಗೆ ಪ್ರತಿಪಾದ್ಯನಾಗಿದ್ದಾನೆಂಬ ವಿಷಯದಲ್ಲಿ ವಿಶೇಷ ಪ್ರಮಾಣವನ್ನು ಹೇಳಿದ್ದಾರೆ. ಅಂದರೆ ಕೇವಲ ಪ್ರಕೃತಿ ಶಬ್ದದ ಸಮನ್ವಯವನ್ನಷ್ಟೇ ಮಾಡುವುದು ಈ ಸೂತ್ರದ ಉದ್ದೇಶ. ಶ್ವೇತಾಶ್ವತರೋಪನಿಷತ್ತಿನಲ್ಲಿ ಮಹೇಶ್ವರನನ್ನು 'ಮಾಯಿ'

ಎಂದು ಅವನ ಇಚ್ಛೆಯನ್ನು ಮಾಯೆಯೆಂದು ಹೇಳಲಾಗಿದೆ. 'ಮಹಾಮಾಯೇತಿ' ಎಂಬ ಪ್ರಮಾಣಶ್ಲೋಕದಲ್ಲಿ ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ. ಮತ್ತು ಪರಮಾತ್ಮನು ಇಚ್ಛಾರೂಪನಾಗಿದ್ದಾನೆಂದೂ ಕೂಡ ಹೇಳಲಾಗಿದೆ. ಆದ್ದರಿಂದ ಪರಮಾತ್ಮನ ಇಚ್ಛೆಯು ಪ್ರಕೃತಿ ಎನಿಸುತ್ತದೆ. ಅಂತಹ ಇಚ್ಛೆಯಿಂದ ಅಭಿನ್ನನಾದ್ದರಿಂದ ಪರಮಾತ್ಮನು ಪ್ರಕೃತಿಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂಬುದು ಈ ಸೂತ್ರದ ಅಭಿಪ್ರಾಯ.

**तृतीये आद्योक्तं सामान्यरूपं द्वितीयोक्तं प्रकृतिशब्दवाच्येच्छात्मकत्वरूपं वा द्वारमनपेक्ष्य प्रकृतिशब्देन तदुपलक्षितस्त्रीशब्दैश्च साक्षादेव वाच्यत्वे प्रमाणोक्तिः ।**

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬುದು ಮೂರನೆಯ ಸೂತ್ರ. ಮೊದಲನೆಯ ಸೂತ್ರದಲ್ಲಿ ಸಾಮಾನ್ಯವಾಗಿ ಪರಮಾತ್ಮನು ಎಲ್ಲಾ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂದು ಸಮರ್ಥಿಸಲಾಯಿತು. ಎರಡನೆಯ ಸೂತ್ರದಲ್ಲಿ 'ಪ್ರಕೃತಿ' ಎನಿಸುವ ಇಚ್ಛೆಯೂ ಪರಮಾತ್ಮನ ಸ್ವರೂಪವಾಗಿದೆ. ಆದ್ದರಿಂದ ಪರಮಾತ್ಮನು ಪ್ರಕೃತಿ ಶಬ್ದವಾಚ್ಯನಾಗಿದ್ದಾನೆಂದು ಸಮರ್ಥಿಸಲಾಯಿತು. ಆದ್ದರಿಂದ ಮೊದಲೆರಡು ಸೂತ್ರಗಳಲ್ಲಿ ಪರಮಾತ್ಮನು ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ನೇರವಾಗಿ ಹೇಳಿರುವುದಿಲ್ಲ. ಹೊರತಾಗಿ ಸಾಮಾನ್ಯರೂಪ ಹಾಗೂ ಪ್ರಕೃತಿಶಬ್ದವಾಚ್ಯವಾದ ಇಚ್ಛಾತ್ಮಕ ರೂಪವನ್ನು ದ್ವಾರ ಮಾಡಿಕೊಂಡು ಪ್ರಕೃತಿಶಬ್ದವಾಚ್ಯತ್ವವನ್ನು ಹೇಳಲಾಗಿದೆ. ಪ್ರಕೃತ ಮೂರನೆಯ ಸೂತ್ರದಲ್ಲಿ ನೇರವಾಗಿಯೇ ಪರಮಾತ್ಮನು ಸ್ತ್ರೀ ಹಾಗೂ ಪುರುಷ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂಬ ವಿಷಯದಲ್ಲಿ ಪ್ರಮಾಣವನ್ನು ನೀಡಲಾಗಿದೆ.

**चतुर्थे उपलक्षके प्रकृतिशब्दे प्रवृत्तिनिमित्ताभावरूपबाधकोद्धारः । अत्र च परिणामादिति पञ्चमी ल्यब्लोपनिमित्ता । एवं च प्रकृतेर्महदादिरूपेण परिणामं विधाय तत्प्रेरणायात्मनो बहुधा कृतेरित्यर्थः ।**

'ಆತ್ಮಕೃತೇಃ ಪರಿಣಾಮಾತ್' ಎಂಬುದು ನಾಲ್ಕನೆಯ ಸೂತ್ರ. ಸಕಲ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾದ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೇ ಶ್ರೀಹರಿಯಲ್ಲಿ ಬರುವುದಿಲ್ಲ ಎಂಬ ಬಾಧಕವನ್ನು ಈ ಸೂತ್ರವು ಪರಿಹರಿಸಿದೆ. ಸೂತ್ರದಲ್ಲಿರುವ 'ಪರಿಣಾಮಾತ್' ಎಂಬ ಪಂಚಮೀ ವಿಭಕ್ತಿಯು ಲ್ಯಬ್ಲೋಪನಿಮಿತ್ತಕವಾಗಿದೆ. ಆದ್ದರಿಂದ ಸೂತ್ರದ ಅರ್ಥ ಹೀಗೆ - ಪರಮಾತ್ಮನು ಪ್ರಕೃತಿಯಲ್ಲಿ ಪ್ರವೇಶಮಾಡಿ, ಅವುಗಳನ್ನು ಮಹತತ್ತ್ವಾದಿರೂಪದಿಂದ ಪರಿಣಾಮವನ್ನು ಮಾಡಿ ಪುನಃ ಅವುಗಳ ಪ್ರೇರಣೆಗೋಸ್ಕರ ಅನೇಕ ರೂಪಗಳನ್ನು ತಾಳಿ, ಆಯಾ ವಸ್ತುಗಳಲ್ಲಿ ಪ್ರವೇಶ ಮಾಡಿರುತ್ತಾನೆ ಎಂದು.

**पञ्चमे उपलक्षितस्त्रीशब्दमात्रे तदुद्धार इति सूत्रक्रमः ।**

'ಯೋನಿಶ್ಚ ಹಿ ಗೀಯತೇ' ಎಂಬುದು ಐದನೆಯ ಸೂತ್ರ. ಈ ಸೂತ್ರದಲ್ಲಿ ಉಪಲಕ್ಷಿತವಾದ

ಸಕಲಶಬ್ದಗಳಲ್ಲಿಯೂ ಪ್ರವೃತ್ತಿನಿಮಿತ್ತವು ಇರುವುದಿಲ್ಲವೆಂಬ ಬಾಧಕವನ್ನು ಪರಿಹರಿಸಲಾಗಿದೆ. ಅವ್ಯವಧಾನೇನ ಸೂತಿಕರ್ತೃತ್ವವು ಪರಮಾತ್ಮನಲ್ಲಿರುವುದರಿಂದ ಅವನಲ್ಲಿ ಸ್ತ್ರೀಲಿಂಗಶಬ್ದ ಪ್ರತಿಪಾದ್ಯತ್ವವು ಮುಖ್ಯವಾಗಿಯೇ ಬರುತ್ತದೆ. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವಾರಸ್ಯಮಯವಾಗಿದೆ.

**प्रकाशः –**

अत्र टीकादौ प्रतिज्ञादृष्टान्तेति सूत्र शेषकृत्यस्यास्फुटत्वात् पूर्वपक्षटीकायां ''नच नामानि सर्वाणीत्यादि विरोधः । उक्तन्यायविरोधेन तत्सङ्कोचोपपत्तेः'' इत्युक्तिरेव सूत्रशेषव्यावर्त्योक्तिरिति भावेन सूत्रांशकृत्यमाह – **नामानीति** ।।

ವಿವರಣೆ - 'ನಚ ನಾಮಾನಿ ಸರ್ವಾಣೀತ್ಯಾದಿ ವಿರೋಧಃ । ಉಕ್ತನ್ಯಾಯವಿರೋಧೇನ ತತ್ ಸಂಕೋಚೋಪಪತ್ತೇಃ' ಒಂದು ವೇಳೆ ಭಗವಂತನಲ್ಲಿ ಸ್ತ್ರೀಲಿಂಗಶಬ್ದಗಳನ್ನು ಸಮನ್ವಯ ಮಾಡದಿದ್ದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಗೆ ವಿರೋಧ ಬರುತ್ತದಲ್ಲವೇ? ಎಂದು ಆಶಂಕಿಸಬಾರದು. ಪೂರ್ವಪಕ್ಷದಲ್ಲಿ ಹೇಳಿದ ನ್ಯಾಯವಿರೋಧವಿರುವುದರಿಂದ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳ ಸಮನ್ವಯವಷ್ಟೇ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ ಅಭಿಪ್ರೇತವಾಗಿದೆ ಎಂದು ಸಂಕೋಚ ಮಾಡಬೇಕು. ಹೀಗೆ ಹಿಂದೆ ಪೂರ್ವಪಕ್ಷ ಮಾಡುವಾಗ ಗ್ರಂಥಕಾರರು ಹೇಳಿರುತ್ತಾರೆ. ಈ ಪೂರ್ವಪಕ್ಷವು ಪ್ರತಿಜ್ಞಾದೃಷ್ಟಾಂತ ಎಂಬ ಸೂತ್ರಭಾಗದಿಂದ ವ್ಯಾವರ್ತ್ಯವಾಗಿದೆ. ಆದ್ದರಿಂದ ಟೀಕೆಯಲ್ಲಿಯೇ ಈ ಪ್ರತಿಜ್ಞಾದೃಷ್ಟಾಂತ ಎಂಬ ಸೂತ್ರಭಾಗದ ಕೃತ್ಯವನ್ನು ಸ್ಪಷ್ಟವಾಗಿ ಹೇಳದಿದ್ದರೂ, ಗ್ರಂಥಕಾರರು ಸ್ಪಷ್ಟಪಡಿಸಿರುತ್ತಾರೆ. ಈ ಅಭಿಪ್ರಾಯದಿಂದ 'ನಾಮಾನಿ ಸರ್ವಾಣಿ' ಎಂಬ ವಾಕ್ಯವು ಹೊರಟಿದೆ.

**प्रकाशः –** ''हन्तैतमेव सर्वाणि नामान्यभिवदन्ति'' इत्युपक्रमः । ''एवमेतानि नामानि सर्वाणि'' इत्युपसंहारः । दृष्टान्तोक्त्या सूचितोपपत्तिरित्युपक्रमेत्याद्युक्तम्।।

'ಹಂತ ಏತಮೇವ ಸರ್ವಾಣಿ ನಾಮಾನ್ಯಭಿವದಂತಿ' ಎಂಬುದು ಉಪಕ್ರಮವಾಕ್ಯ.'ಏವಮೇತಾನಿ ನಾಮಾನಿ ಸರ್ವಾಣಿ' ಎಂಬುದು ಉಪಸಂಹಾರ ವಾಕ್ಯ. 'ನದೀ' ದೃಷ್ಟಾಂತವನ್ನು ಹೇಳಿದ್ದರಿಂದ ಉಪಪತ್ತಿಯು ಸೂಚಿತವಾಗಿದೆ. ಆದ್ದರಿಂದ ಉಪಕ್ರಮ, ಉಪಸಂಹಾರ, ಉಪಪತ್ತಿ ಮೂರನ್ನೂ ಕೂಡ ಹೇಳಿದಂತಾಯಿತು.

**प्रकाशः – प्रकृत्यादीति** ।। सूत्रे प्रकृतिशब्दोऽन्योपलक्षक इत्युक्तं भवति । अत्र ज्योतिरित्यादाविव प्रकृतिरित्येतावता पूर्तौ चशब्दो व्यर्थः ।

ಸೂತ್ರದಲ್ಲಿ ಪ್ರಕೃತಿ ಶಬ್ದವು ಉಳಿದ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾಗಿದೆ.

ಪ್ರಶ್ನೆ - 'ಪ್ರಕೃತಿಶ್ಚ' ಇತ್ಯಾದಿ ಸೂತ್ರದಲ್ಲಿ ಚಶಬ್ದವನ್ನು ಬೇರೆ ಶಬ್ದಗಳಿಗೆ ಉಪಲಕ್ಷಕವಾಗಿ ಹೇಳಿದಂತಾಯಿತು. 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರಗಳಲ್ಲಿಯೂ 'ಜ್ಯೋತಿ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದ, ಅಲ್ಲಿಯೂ ಚಶಬ್ದವನ್ನು ಹೇಳಬೇಕಾಗಿತ್ತು. ಆದರೆ ಅಲ್ಲಿ ಚಶಬ್ದವನ್ನು ಹೇಳದೇ ಅನ್ಯಶಬ್ದಗಳಿಗೆ ಉಪಲಕ್ಷಕವೆಂದು ನಿರ್ಣಯಿಸಿದ್ದಾರೆ. ಅದರಂತೆ ಇಲ್ಲಿಯೂ ಕೂಡ ಹೇಳಬಹುದಲ್ಲವೇ? ಚಶಬ್ದವು ಏಕೆ ಬೇಕು?

ಉತ್ತರ - ಸೂತ್ರದಲ್ಲಿ ಚಶಬ್ದವು ಬೇರೆ ಶಬ್ದಗಳಿಗೆ ಉಪಲಕ್ಷಕವಾಗಿ ಹೇಳಿರುವುದಲ್ಲ. ಬೇರೆ ಶಬ್ದಗಳನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕೆಂಬ ವಿಚಾರವನ್ನು 'ಪ್ರಕೃತಿಃ' ಎಂಬ ಶಬ್ದವೇ ತಿಳಿಸುತ್ತಿದೆ. ಚಶಬ್ದವು ಪರಮಾತ್ಮನು ಹೇಗೆ ಪುಲ್ಲಿಂಗವಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಸ್ತ್ರೀಲಿಂಗಶಬ್ದಗಳಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ ಎಂಬುದನ್ನು ಸಮುಚ್ಚಯ ಮಾಡುತ್ತಿವೆ. ಹೀಗೆ ಸಮುಚ್ಚಯ ಮಾಡದಿದ್ದಲ್ಲಿ, ಕೇವಲ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನೆಂದು ಹೇಳಿದಂತಾಗುತ್ತಿತ್ತು. ಈ ಸಂಶಯ ಬರಬಾರದೆಂದು ತಿಳಿಸಲು ಪರಮಾತ್ಮನು ಪುಲ್ಲಿಂಗಶಬ್ದಗಳಿಂದ, ಸ್ತ್ರೀಲಿಂಗಶಬ್ದಗಳಿಂದ ಹಾಗೂ ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸಲಾಗಿದೆ.

**ಪ್ರಕಾಶಃ – परमत इव कर्तृत्वसमुच्चयानभ्युपगमादित्यतः ''प्रकृत्यादि-स्त्रीशब्दवाच्यश्चेश्वरः'' इति टीकासूचितमर्थमाह – चशब्दस्त्विति ।।**

ಪರಮತದಲ್ಲಿ ಚಶಬ್ದದ ಸಾರ್ಥಕ್ಯವನ್ನು ಹೀಗೆ ಹೇಳಿದ್ದಾರೆ - 'ಪರಮಾತ್ಮನು ಜಗತ್ತಿಗೆ ಉಪಾದಾನಕಾರಣನಷ್ಟೇ ಅಲ್ಲ, ನಿಮಿತ್ತಕಾರಣನೂ ಆಗಿದ್ದಾನೆ ಎಂದು. ಇದನ್ನು ನಿರಾಕರಣೆ ಮಾಡಲು ಟೀಕೆಯಲ್ಲಿ 'ಪ್ರಕೃತ್ಯಾದಿಸ್ತ್ರೀಶಬ್ದವಾಚ್ಯಶ್ಚ ಈಶ್ವರಃ' ಪರಮಾತ್ಮನು ಪುಲ್ಲಿಂಗ ಶಬ್ದಗಳಿಂದಷ್ಟೇ ಪ್ರತಿಪಾದನಲ್ಲ. ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದ್ದಾರೆ. ಹೀಗೆ ಟೀಕೆಯಿಂದ ಸೂಚಿತವಾದ ಅಭಿಪ್ರಾಯವನ್ನು 'ಚಶಬ್ದಸ್ತು' ಎಂಬುದಾಗಿ ಗ್ರಂಥಕಾರರು ಹೇಳಿರುತ್ತಾರೆ.

**ಪ್ರಕಾಶಃ – द्वितीये अभिध्योपदेशाच्चेत्यत्र । भाष्याद्युक्तमर्थद्वयं ''अभिध्यायाः प्रकृतित्वोपदेशात्स्वरूपत्वोपदेशाच्च'' इति तत्वप्रदीपोक्तं हृदि कृत्वा सूत्रारूढं करोति – अस्य चेति ।।**

'ದ್ವಿತೀಯೇ' ಎಂದರೆ 'ಅಭಿಧ್ಯೋಪದೇಶಾಚ್ಚ' ಎಂಬ ಎರಡನೆಯ ಸೂತ್ರದಲ್ಲಿ ಎಂದರ್ಥ. 'ಅಭಿಧ್ಯೋಪದೇಶಾಚ್ಚ' ಎಂಬ ಸೂತ್ರಕ್ಕೆ ಭಾಷ್ಯವನ್ನು 'ಅಭಿಧ್ಯಾಯಾಃ ಪ್ರಕೃತಿತ್ವೋಪದೇಶಾತ್', 'ಬ್ರಹ್ಮಣಶ್ಚ ಅಭಿಧ್ಯೋಪದೇಶಾತ್' ಎಂಬ ಎರಡು ಅರ್ಥಗಳನ್ನು ಹೇಳಿರುತ್ತಾರೆ. ಅಂದರೆ ಪರಮಾತ್ಮನ ಇಚ್ಛೆಯು ಪ್ರಕೃತ್ಯಾದಿ ಶಬ್ದಗಳಿಂದ ಪ್ರತಿಪಾದ್ಯವಾಗುತ್ತದೆ. ಆ ಇಚ್ಛೆಯಾದರೂ ಭಗವಂತನ ಸ್ವರೂಪವೇ ಆಗಿರುತ್ತದೆ ಎಂದು. ಇದನ್ನು ತತ್ವಪ್ರದೀಪದಲ್ಲಿ ''ಅಭಿಧ್ಯಾಯಾಃ ಪ್ರಕೃತಿತ್ವೋಪದೇಶಾತ್ ಸ್ವರೂಪತ್ವೋಪದೇಶಾಚ್ಚ'

ಪ್ರಕೃತ್ಯಧಿಕರಣ (೧-೪-೬)

ಸಕಲಶಬ್ದಗಳಲ್ಲಿಯೂ ಪ್ರವೃತ್ತಿನಿಮಿತ್ತವು ಇರುವುದಿಲ್ಲವೆಂಬ ಬಾಧಕವನ್ನು ಪರಿಹರಿಸಲಾಗಿದೆ. ಅವ್ಯವಧಾನೇನ ಸೂತಿಕರ್ತೃತ್ವವು ಪರಮಾತ್ಮನಲ್ಲಿರುವುದರಿಂದ ಅವನಲ್ಲಿ ಸ್ತ್ರೀಲಿಂಗಶಬ್ದ ಪ್ರತಿಪಾದ್ಯತ್ವವು ಮುಖ್ಯವಾಗಿಯೇ ಬರುತ್ತದೆ. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವಾರಸ್ಯಮಯವಾಗಿದೆ.

**प्रकाशः –**

अत्र टीकादौ प्रतिज्ञादृष्टान्तेति सूत्र शेषकृत्यस्यास्फुटत्वात् पूर्वपक्षटीकायां ''नच नामानि सर्वाणीत्यादि विरोधः । उक्तन्यायविरोधेन तत्सङ्कोचोपपत्तेः'' इत्युक्तिरेव सूत्रशेषव्यावर्त्योक्तिरिति भावेन सूत्रांशकृत्यमाह – **नामानीति** ।।

ವಿವರಣೆ - 'ನಚ ನಾಮಾನಿ ಸರ್ವಾಣೀತ್ಯಾದಿ ವಿರೋಧಃ । ಉಕ್ತನ್ಯಾಯವಿರೋಧೇನ ತತ್ ಸಂಕೋಚೋಪಪತ್ತೇಃ' ಒಂದು ವೇಳೆ ಭಗವಂತನಲ್ಲಿ ಸ್ತ್ರೀಲಿಂಗಶಬ್ದಗಳನ್ನು ಸಮನ್ವಯ ಮಾಡದಿದ್ದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಗೆ ವಿರೋಧ ಬರುತ್ತದಲ್ಲವೇ? ಎಂದು ಆಶಂಕಿಸಬಾರದು. ಪೂರ್ವಪಕ್ಷದಲ್ಲಿ ಹೇಳಿದ ನ್ಯಾಯವಿರೋಧವಿರುವುದರಿಂದ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳ ಸಮನ್ವಯವಷ್ಟೇ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ ಅಭಿಪ್ರೇತವಾಗಿದೆ ಎಂದು ಸಂಕೋಚ ಮಾಡಬೇಕು. ಹೀಗೆ ಹಿಂದೆ ಪೂರ್ವಪಕ್ಷ ಮಾಡುವಾಗ ಗ್ರಂಥಕಾರರು ಹೇಳಿರುತ್ತಾರೆ. ಈ ಪೂರ್ವಪಕ್ಷವು ಪ್ರತಿಜ್ಞಾದೃಷ್ಟಾಂತ ಎಂಬ ಸೂತ್ರಭಾಗದಿಂದ ವ್ಯಾವರ್ತ್ಯವಾಗಿದೆ. ಆದ್ದರಿಂದ ಟೀಕೆಯಲ್ಲಿಯೇ ಈ ಪ್ರತಿಜ್ಞಾದೃಷ್ಟಾಂತ ಎಂಬ ಸೂತ್ರಭಾಗದ ಕೃತ್ಯವನ್ನು ಸ್ಪಷ್ಟವಾಗಿ ಹೇಳದಿದ್ದರೂ, ಗ್ರಂಥಕಾರರು ಸ್ಪಷ್ಟಪಡಿಸಿರುತ್ತಾರೆ. ಈ ಅಭಿಪ್ರಾಯದಿಂದ 'ನಾಮಾನಿ ಸರ್ವಾಣಿ' ಎಂಬ ವಾಕ್ಯವು ಹೊರಟಿದೆ.

**प्रकाशः** – ''हन्तैतमेव सर्वाणि नामान्यभिवदन्ति'' इत्युपक्रमः । ''एवमेतानि नामानि सर्वाणि'' इत्युपसंहारः । दृष्टान्तोक्त्या सूचितोपपत्तिरित्युपक्रमेत्याद्युक्तम्।।

'ಹಂತ ಏತಮೇವ ಸರ್ವಾಣಿ ನಾಮಾನ್ಯಭಿವದಂತಿ' ಎಂಬುದು ಉಪಕ್ರಮವಾಕ್ಯ.'ಏವಮೇತಾನಿ ನಾಮಾನಿ ಸರ್ವಾಣಿ' ಎಂಬುದು ಉಪಸಂಹಾರ ವಾಕ್ಯ. 'ನದೀ' ದೃಷ್ಟಾಂತವನ್ನು ಹೇಳಿದ್ದರಿಂದ ಉಪಪತ್ತಿಯು ಸೂಚಿತವಾಗಿದೆ. ಆದ್ದರಿಂದ ಉಪಕ್ರಮ, ಉಪಸಂಹಾರ, ಉಪಪತ್ತಿ ಮೂರನ್ನೂ ಕೂಡ ಹೇಳಿದಂತಾಯಿತು.

**प्रकाशः – प्रकृत्यादीति** ।। सूत्रे प्रकृतिशब्दोऽन्योपलक्षक इत्युक्तं भवति । अत्र ज्योतिरित्यादाविव प्रकृतिरित्येतावता पूर्तौ चशब्दो व्यर्थः ।

ಸೂತ್ರದಲ್ಲಿ ಪ್ರಕೃತಿ ಶಬ್ದವು ಉಳಿದ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾಗಿದೆ.

ಪ್ರಶ್ನೆ - 'ಪ್ರಕೃತಿಶ್ಚ' ಇತ್ಯಾದಿ ಸೂತ್ರದಲ್ಲಿ ಚಶಬ್ದವನ್ನು ಬೇರೆ ಶಬ್ದಗಳಿಗೆ ಉಪಲಕ್ಷಕವಾಗಿ ಹೇಳಿದಂತಾಯಿತು. 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರಗಳಲ್ಲಿಯೂ 'ಜ್ಯೋತಿ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದ, ಅಲ್ಲಿಯೂ ಚಶಬ್ದವನ್ನು ಹೇಳಬೇಕಾಗಿತ್ತು. ಆದರೆ ಅಲ್ಲಿ ಚಶಬ್ದವನ್ನು ಹೇಳದೇ ಅನ್ಯಶಬ್ದಗಳಿಗೆ ಉಪಲಕ್ಷಕವೆಂದು ನಿರ್ಣಯಿಸಿದ್ದಾರೆ. ಅದರಂತೆ ಇಲ್ಲಿಯೂ ಕೂಡ ಹೇಳಬಹುದಲ್ಲವೇ? ಚಶಬ್ದವು ಏಕೆ ಬೇಕು?

ಉತ್ತರ - ಸೂತ್ರದಲ್ಲಿ ಚಶಬ್ದವು ಬೇರೆ ಶಬ್ದಗಳಿಗೆ ಉಪಲಕ್ಷಕವಾಗಿ ಹೇಳಿರುವುದಲ್ಲ. ಬೇರೆ ಶಬ್ದಗಳನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕೆಂಬ ವಿಚಾರವನ್ನು 'ಪ್ರಕೃತಿಃ' ಎಂಬ ಶಬ್ದವೇ ತಿಳಿಸುತ್ತಿದೆ. ಚಶಬ್ದವು ಪರಮಾತ್ಮನು ಹೇಗೆ ಪುಲ್ಲಿಂಗವಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಸ್ತ್ರೀಲಿಂಗಶಬ್ದಗಳಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ ಎಂಬುದನ್ನು ಸಮುಚ್ಚಯ ಮಾಡುತ್ತಿವೆ. ಹೀಗೆ ಸಮುಚ್ಚಯ ಮಾಡದಿದ್ದಲ್ಲಿ, ಕೇವಲ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನೆಂದು ಹೇಳಿದಂತಾಗುತ್ತಿತ್ತು. ಈ ಸಂಶಯ ಬರಬಾರದೆಂದು ತಿಳಿಸಲು ಪರಮಾತ್ಮನು ಪುಲ್ಲಿಂಗಶಬ್ದಗಳಿಂದ, ಸ್ತ್ರೀಲಿಂಗಶಬ್ದಗಳಿಂದ ಹಾಗೂ ನಪುಂಸಕಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸಲಾಗಿದೆ.

**ಪ್ರಕಾಶಃ** – परमत इव कर्तृत्वसमुच्चयानभ्युपगमादित्यतः ''प्रकृत्यादि-स्त्रीशब्दवाच्यश्चेश्वरः'' इति टीकासूचितमर्थमाह – **चशब्दस्त्विति** ।।

ಪರಮತದಲ್ಲಿ ಚಶಬ್ದದ ಸಾರ್ಥಕ್ಯವನ್ನು ಹೀಗೆ ಹೇಳಿದ್ದಾರೆ - 'ಪರಮಾತ್ಮನು ಜಗತ್ತಿಗೆ ಉಪಾದಾನಕಾರಣನಷ್ಟೇ ಅಲ್ಲ, ನಿಮಿತ್ತಕಾರಣನೂ ಆಗಿದ್ದಾನೆ ಎಂದು. ಇದನ್ನು ನಿರಾಕರಣೆ ಮಾಡಲು ಟೀಕೆಯಲ್ಲಿ 'ಪ್ರಕೃತ್ಯಾದಿಸ್ತ್ರೀಶಬ್ದವಾಚ್ಯಶ್ಚ ಈಶ್ವರಃ' ಪರಮಾತ್ಮನು ಪುಲ್ಲಿಂಗ ಶಬ್ದಗಳಿಂದಷ್ಟೇ ಪ್ರತಿಪಾದನಲ್ಲ. ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದ್ದಾರೆ. ಹೀಗೆ ಟೀಕೆಯಿಂದ ಸೂಚಿತವಾದ ಅಭಿಪ್ರಾಯವನ್ನು 'ಚಶಬ್ದಸ್ತು' ಎಂಬುದಾಗಿ ಗ್ರಂಥಕಾರರು ಹೇಳಿರುತ್ತಾರೆ.

**ಪ್ರಕಾಶಃ** – द्वितीये अभिध्योपदेशाच्चेत्यत्र । भाष्याद्युक्तमर्थद्वयं ''अभिध्यायाः प्रकृतित्वोपदेशात्स्वरूपत्वोपदेशाच्च'' इति तत्वप्रदीपोक्तं हृदि कृत्वा सूत्रारूढं करोति – **अस्य चेति** ।।

'ದ್ವಿತೀಯೇ' ಎಂದರೆ 'ಅಭಿಧ್ಯೋಪದೇಶಾಚ್ಚ' ಎಂಬ ಎರಡನೆಯ ಸೂತ್ರದಲ್ಲಿ ಎಂದರ್ಥ. 'ಅಭಿಧ್ಯೋಪದೇಶಾಚ್ಚ' ಎಂಬ ಸೂತ್ರಕ್ಕೆ ಭಾಷ್ಯವನ್ನು 'ಅಭಿಧ್ಯಾಯಾಃ ಪ್ರಕೃತಿತ್ವೋಪದೇಶಾತ್', 'ಬ್ರಹ್ಮಣಶ್ಚ ಅಭಿಧ್ಯೋಪದೇಶಾತ್' ಎಂಬ ಎರಡು ಅರ್ಥಗಳನ್ನು ಹೇಳಿರುತ್ತಾರೆ. ಅಂದರೆ ಪರಮಾತ್ಮನ ಇಚ್ಛೆಯು ಪ್ರಕೃತ್ಯಾದಿ ಶಬ್ದಗಳಿಂದ ಪ್ರತಿಪಾದ್ಯವಾಗುತ್ತದೆ. ಆ ಇಚ್ಛೆಯಾದರೂ ಭಗವಂತನ ಸ್ವರೂಪವೇ ಆಗಿರುತ್ತದೆ ಎಂದು. ಇದನ್ನು ತತ್ವಪ್ರದೀಪದಲ್ಲಿ ''ಅಭಿಧ್ಯಾಯಾಃ ಪ್ರಕೃತಿತ್ವೋಪದೇಶಾತ್ ಸ್ವರೂಪತ್ವೋಪದೇಶಾಚ್ಚ'

ಅಭಿಧ್ಯೆಯು ಪ್ರಕೃತಿಯೆನಿಸುತ್ತವೆ. ಮತ್ತು ಭಗವಂತನ ಸ್ವರೂಪವೆನಿಸುತ್ತವೆ ಎಂದು ಹೇಳಿರುತ್ತಾರೆ. ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು ಸೂತ್ರಾರೂಢ ಮಾಡುತ್ತಿದ್ದಾರೆ 'ಅಸ್ಯ ಚ' ಇತ್ಯಾದಿ ವಾಕ್ಯದಿಂದ.

**प्रकाशः** – अभिध्यायाः इच्छायाः प्रकृतिशब्दवाच्यत्वव्यपदेशादित्यर्थः ।

'ಅಭಿಧ್ಯಾ' ಶಬ್ದಕ್ಕೆ 'ಪರಮಾತ್ಮನ ಇಚ್ಛೆ' ಎಂದರ್ಥ. ಈ ಪರಮಾತ್ಮನ ಇಚ್ಛೆಯೇ ಪ್ರಕೃತಿಶಬ್ದದಿಂದ ಪ್ರತಿಪಾದ್ಯವಾಗುತ್ತದೆ.

**प्रकाशः** – तृतीये साक्षाच्चोभयाम्नानादित्यत्र । ''एषस्त्र्येष पुरुष इति श्रुतौ साधारण्येन विना साक्षादेवेच्छाद्वारमन्तरापि प्रकृतिपुरुषशब्दवाच्यताम्नानात्'' इति टीकोक्तार्थं सूत्रारूढतया व्यनक्ति ।। **आद्येति** ।।

'ತೃತೀಯೇ' ಎಂದರೆ 'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಮೂರನೆಯ ಸೂತ್ರದಲ್ಲಿ ಎಂದರ್ಥ. 'ಏಷಸ್ತ್ರ್ಯೇಷ ಪುರುಷ ಇತಿ ಶ್ರುತೌ ಸಾಧಾರಣ್ಯೇನ ವಿನಾ ಸಾಕ್ಷಾದೇವೇಚ್ಛಾದ್ವಾರಮಂತರಾಪಿ ಪ್ರಕೃತಿಪುರುಷ-ಶಬ್ದವಾಚ್ಯತಾಮ್ನಾನಾತ್' 'ಏಷಸ್ತ್ರ್ಯೇಷ ಪುರುಷಃ' ಎಂಬ ಶ್ರುತಿಯಲ್ಲಿ ಪರಮಾತ್ಮನು ನೇರವಾಗಿಯೇ ಅಂದರೆ ಇಚ್ಛೆಯನ್ನು ಅಪೇಕ್ಷೆ ಪಡದೇ ಪ್ರಕೃತಿ, ಪುರುಷ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂದು ಹೇಳಲಾಗಿದೆ. ಪರಮಾತ್ಮನು ತನ್ನ ಇಚ್ಛೆಯ ಮೂಲಕವೂ ಪ್ರಕೃತಿಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಅಥವಾ ನೇರವಾಗಿಯೂ ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಟೀಕೆಯಲ್ಲಿ ಹೇಳಿದ್ದಾರೆ. ಅದನ್ನು ಗ್ರಂಥಕಾರರು 'ಆದ್ಯೋಕ್ತಮ್' ಎಂಬುದರಿಂದ ಸೂತ್ರಾರೂಢ ಮಾಡಿದ್ದಾರೆ.

**प्रकाशः** – चतुर्थे आत्मकृतेः परिणामादित्यत्र । ''प्रकृतिशब्दवाच्यत्वे हरेश्श्रुत्युक्तेऽपि कथं तद्युज्यते निमित्ताभावात्'' इत्यवतारितत्वाट्टीकायामिति भावः।

'ಚತುರ್ಥೇ' ಎಂದರೆ 'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೆಯ ಸೂತ್ರದಲ್ಲಿ ಎಂದರ್ಥ. ಶ್ರೀಹರಿಯು ಪ್ರಕೃತಿಶಬ್ದದಿಂದ ವಾಚ್ಯನಾಗುತ್ತಿದ್ದಾನೆಂದು ಹೇಳುತ್ತಿದ್ದೀರಿ. ಆದರೆ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೇ ಅವನಲ್ಲಿ ಬಾರದಿದ್ದಾಗ, ಹೇಗೆ ಪ್ರಕೃತಿಶಬ್ದದಿಂದ ವಾಚ್ಯನಾಗುತ್ತಾನೆಂದು ಹೇಳುತ್ತೀರಿ? ಎಂಬುದಾಗಿ ಟೀಕೆಯಲ್ಲಿ ಅವತಾರಿಕೆಯನ್ನು ನೀಡಿರುತ್ತಾರೆ.

**प्रकाशः** – टीकादावस्फुटत्वात् सूत्रार्थं व्यनक्ति – **अत्र चेति** ।। पञ्चमे योनिश्च हि गीयत इत्यत्र । भूतयोनिमिति स्वदेहादुत्पादकरूपयोनिश्च गीयत इत्यर्थोक्तेरिति भावः ।

ನಾಲ್ಕನೆಯ ಸೂತ್ರದ ಅರ್ಥವು ಸೂತ್ರದಲ್ಲಿ ಸ್ಪಷ್ಟವಾಗಿಲ್ಲದ ಕಾರಣ 'ಅತ್ರ ಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಪಂಚಮೇ' ಎಂದರೆ 'ಯೋನಿಶ್ಚ ಹಿ ಗೀಯತೇ' ಎಂಬ ಸೂತ್ರದಲ್ಲಿ ಎಂದರ್ಥ. 'ಭೂತಯೋನಿಮ್' ಎಂಬುದಾಗಿ ಪರಮಾತ್ಮನು ತನ್ನ ದೇಹದಿಂದ ನೇರವಾಗಿಯೇ ಹುಟ್ಟಿಸುತ್ತಾನೆ. ಸ್ತ್ರೀಯರಲ್ಲಿ ಸಾಕ್ಷಾತ್ತಾಗಿ ಅಪತ್ಯೋತ್ಪಾದಕತ್ವವಿರುವುದರಿಂದ ಸ್ತ್ರೀತ್ವವಿರುತ್ತದೆ. ಇಂತಹ ಸ್ತ್ರೀತ್ವ ಪರಮಾತ್ಮನಲ್ಲಿ

ಇರುವುದಿಲ್ಲವೆಂಬ ಆಶಂಕೆಗೆ ಅವಕಾಶವಿಲ್ಲ. ಪರಮಾತ್ಮನು ಲಕ್ಷ್ಮೀದೇವಿಯ ಮೂಲಕವಾಗಿಯೂ ಪುತ್ರೋತ್ಪಾದಕನಾಗಿದ್ದಾನೆ. ಲಕ್ಷ್ಮೀದೇವಿಯ ಸಹಾಯವಿಲ್ಲದೇ ನೇರವಾಗಿ ತನ್ನ ದೇಹದಿಂದಲೂ ಪುತ್ರೋತ್ಪಾದಕನಾಗಿದ್ದಾನೆ. ಆದ್ದರಿಂದ ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದಗಳ ಪ್ರವೃತ್ತಿನಿಮಿತ್ತವು ಇರುತ್ತದೆಂದು ತಿಳಿಯಬೇಕು.

**प्रकाशः – अत्राह कश्चित् । तदधीनत्वन्यायेन स्त्रीलिङ्गोपपत्त्या न पूर्वपक्षोदयः।**

ಕೆಲವರ ಆಕ್ಷೇಪ - ತದಧೀನತ್ವ ನ್ಯಾಯದಿಂದ ಬ್ರಹ್ಮನಲ್ಲಿ ಸ್ತ್ರೀಲಿಂಗವು ಉಪಪನ್ನವಾಗುತ್ತಿರುವಾಗ ನಿಮ್ಮ ಪ್ರಕಾರ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಎಲ್ಲವೂ ಬ್ರಹ್ಮನ ಅಧೀನವಾದಾಗ ಸ್ತ್ರೀಲಿಂಗವು ಬ್ರಹ್ಮನ ಅಧೀನವೇ ಆಗಿದೆ. ಆದ್ದರಿಂದ ಸ್ತ್ರೀಲಿಂಗಗಳಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಿದ್ದಾನೆಂದು ಸುಲಭವಾಗಿ ಹೇಳಬಹುದು. ಆದ್ದರಿಂದ ಈ ಅಧಿಕರಣ ಹೊರಟದ್ದೇ ವ್ಯರ್ಥ.

**प्रकाशः – किञ्च ''एषा ह्येव'' इति श्रुतौ प्रकृत्यादिशब्दस्य कारणत्वाद्यर्थपरतया प्रकृत्यादिशब्दवाच्यतापरत्वाभावेन शब्दस्वाभाव्यादेव तत्र स्त्रीलिङ्गोपपत्तेर्न तदाक्षेपस्साधुः ।**

ಮತ್ತು 'ಏಷಾ ಹ್ಯೇವ' ಎಂಬ ಶ್ರುತಿಯಲ್ಲಿ ಇರುವ ಪ್ರಕೃತಿ ಮೊದಲಾದ ಶಬ್ದಗಳು ಕಾರಣ ಎಂಬರ್ಥವನ್ನು ಹೇಳುತ್ತಿದೆ. ಆದ್ದರಿಂದ ಪ್ರಕೃತಿ ಎಂಬ ಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವ ಅವಶ್ಯಕತೆ ಇರುವುದಿಲ್ಲ. ಇನ್ನು ಪ್ರಕೃತಿ ಮೊದಲಾದ ಶಬ್ದಗಳಲ್ಲಿರುವ ಸ್ತ್ರೀಲಿಂಗವು ಆಯಾ ಶಬ್ದಗಳ ಸ್ವಭಾವದಿಂದಲೇ ಉಪಪನ್ನವಾಗುತ್ತದೆ. ಹೀಗಿರುವಾಗ ಈ ಶಬ್ದಗಳಲ್ಲಿರುವ ಸ್ತ್ರೀಲಿಂಗದ ಬಗ್ಗೆ ಆಕ್ಷೇಪ ಮಾಡಿ, ವಿಚಾರ ಮಾಡುವುದು ಸಾಧುವಲ್ಲ.

**प्रकाशः – अपि च तत्तत्प्रकरणस्थानां गायत्र्यादिशब्दानां लिङ्गप्रकरणादिना ब्रह्मपरत्वसिद्धौ प्रातिपदिकानुसारेण विभक्तेर्नयनसम्भवः, ब्रह्मपरत्वासिद्धौ तदेव साध्यं न पुनः स्त्रीलिङ्गाक्षेपः ।**

ಮತ್ತು ಶ್ರುತಿಯಲ್ಲಿ ಇರುವ ಅನೇಕ ಪ್ರಕರಣಗಳಲ್ಲಿ ಅನಂತವಾದ ಗಾಯತ್ರೀ ಮೊದಲಾದ ಸ್ತ್ರೀಲಿಂಗಶಬ್ದಗಳಿವೆ. ಪ್ರಕೃತ ನೀವು ಆ ಎಲ್ಲಾ ಸ್ತ್ರೀಲಿಂಗಶಬ್ದಗಳ ಬಗ್ಗೆ ವಿಚಾರ ಮಾಡದೇ ಆ ಶಬ್ದಗಳಲ್ಲಿ ಙೀಪ್, ಟಾಪ್ ಮೊದಲಾದ ಪ್ರತ್ಯಯಗಳ ಬಗ್ಗೆ ವಿಚಾರ ಮಾಡುತ್ತಿದ್ದೀರಿ. ಸ್ತ್ರೀಪ್ರಾತಿಪದಿಕಗಳಿಂದ ಬ್ರಹ್ಮನು ವಾಚ್ಯನಾಗಿದ್ದಾನೆ ಎಂದು ಸಿದ್ಧವಾಗಿದ್ದಾನೋ ಇಲ್ಲವೋ? ಸಿದ್ಧವಾಗಿದ್ದರೆ ಅದಕ್ಕನುಗುಣವಾಗಿ ಪ್ರತ್ಯಯಗಳನ್ನು ಅರ್ಥೈಸಬೇಕು. ಕೇವಲ ಪ್ರತ್ಯಯಾರ್ಥದ ನಿರ್ಣಯಕ್ಕೋಸ್ಕರ ಪ್ರತ್ಯೇಕ ಅಧಿಕರಣವು ಅನಾವಶ್ಯಕ. ಒಂದುವೇಳೆ ಸ್ತ್ರೀಪ್ರಾತಿಪದಿಕಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂಬುದು ಸಿದ್ಧವಾಗದಿದ್ದರೆ, ಅದನ್ನೇ ಮೊದಲು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕಲ್ಲವೇ? ಪ್ರಕೃತ ಸ್ತ್ರೀಲಿಂಗದ ವಿಚಾರವೇಕೆ ?

**प्रकाशः – किं चैतच्चोद्यस्य ''योनिश्च हि गीयते'' इति सूत्रेणैव निरस्तत्वादन्यानि सूत्राणि व्यर्थानि ।**

ಮತ್ತು ಸ್ತ್ರೀಲಿಂಗಶಬ್ದದ ಸಮನ್ವಯದ ಆಕ್ಷೇಪವನ್ನು 'ಯೋನಿಶ್ಚ ಹಿ ಗೀಯತೇ' ಎಂಬ ಸೂತ್ರದಿಂದಷ್ಟೇ ಪರಿಹರಿಸಲಾಗಿದೆ. ಆದ್ದರಿಂದ ಪ್ರಕೃತ್ಯಧಿಕರಣದಲ್ಲಿ ಇದೊಂದು ಸೂತ್ರವಿದ್ದರೆ ಸಾಕು. ಉಳಿದ ಸೂತ್ರಗಳು ಅನಾವಶ್ಯಕ.

**प्रकाशः – प्रकृतिपदे विशिष्याक्षेपकाभावेन तदसाधारणयोर्द्वितीयचतुर्थयोर्व्यर्थता स्फुटैव ।**

ಅಷ್ಟೇ ಅಲ್ಲದೇ ಪ್ರಕೃತಿಪದದಲ್ಲಿ ವಿಶೇಷವಾದ ಆಕ್ಷೇಪಗಳೇನೂ ಇರುವುದಿಲ್ಲ. ಪ್ರಕೃತಿಪದದ ಬಗ್ಗೆ ವಿಚಾರವನ್ನು ತಿಳಿಸಲು ಹೊರಟ 'ಅಭಿಧ್ಯೋಪದೇಶಾತ್' ಎಂಬ ಎರಡನೆಯ ಸೂತ್ರವಾಗಲೀ, 'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೆಯ ಸೂತ್ರವಾಗಲೀ ವ್ಯರ್ಥವಾಗುತ್ತದೆಂದು ಸ್ಪಷ್ಟವಾಗಿ ತಿಳಿಯುತ್ತದೆ.

**प्रकाशः – किं चाद्यसूत्रे प्रकृतिपदे लक्षणादोषः ।**

ಮತ್ತು ಪ್ರಥಮಸೂತ್ರದಲ್ಲಿರುವ ಪ್ರಕೃತಿಪದಕ್ಕೆ ನೀವು ಉಳಿದ ಶಬ್ದಗಳನ್ನು ಸಂಗ್ರಹಿಸಲು ಲಕ್ಷಣಾ ಮಾಡುತ್ತೀರಿ. ಇದೂ ಕೂಡ ಒಂದು ದೋಷವೇ ಆಗಿದೆ. ವಿನಾಕಾರಣ ಅಜಹಲ್ಲಕ್ಷಣಾ ಮಾಡುವುದು ಅಯುಕ್ತವಾಗಿದೆ.

**प्रकाशः – द्वितीये ''मायां तु'' इति श्रुतौ मायाशब्दस्य प्रधानपरत्वेनेच्छा-परत्वाभावः ।**

ಮತ್ತು 'ಅಭಿಧ್ಯೋಪದೇಶಾಚ್ಚ' ಎಂಬ ಎರಡನೆಯ ಸೂತ್ರದಲ್ಲಿ 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್' ಎಂಬ ಶ್ರುತಿಯು ವಿಷಯವಾಗಿದೆ. ಇಲ್ಲಿ ಮಾಯಾ ಶಬ್ದವು ಪ್ರಕೃತಿಪರವಾಗಿದೆ. 'ಮಾಯೆ' ಎಂದರೆ 'ದೇವರ ಇಚ್ಛೆಯೇ ಆಗಿದೆ'. ಏಕೆಂದರೆ 'ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ' ಎಂಬುದಾಗಿ ದೇವರ ಇಚ್ಛೆಯನ್ನೇ 'ಮಾಯೆ' ಎಂದು ಕರೆಯಲಾಗಿದೆ. ಪರಮಾತ್ಮನು ಇಚ್ಛಾಸ್ವರೂಪನಾದ್ದರಿಂದ ಪರಮಾತ್ಮನಲ್ಲಿ ಪ್ರಕೃತಿಶಬ್ದವಾಚ್ಯತ್ವವು ಬರುತ್ತದೆಂದು ಈ ಸೂತ್ರದಲ್ಲಿ ಹೇಳಿದ್ದೀರಿ. ಇದು ಸರಿಯಲ್ಲ. ಏಕೆಂದರೆ 'ಮಾಯಾಂ ತು' ಎಂಬ ಶ್ರುತಿಯಲ್ಲಿರುವ ಮಾಯಾ ಶಬ್ದಕ್ಕೆ ದೇವರ ಇಚ್ಛೆ ಎಂದು ಅರ್ಥವೇ ಅಲ್ಲ. ಹೊರತಾಗಿ, 'ಪ್ರಧಾನ' ಎಂದರ್ಥ. ಈ ಮಾಯೆಯನ್ನು ಪ್ರಕೃತಿ ಎಂದು ಕರೆಯಬೇಕು.

**प्रकाशः – तृतीये चोभयपदास्वारस्यम् । पूर्वत्र स्त्रीपुंसयोः क्वापि सूत्रे प्रकृतत्वाभावात् । एष स्त्रीत्यादिश्रुतिरपि प्रसिद्धस्त्रीपुरुषादितादात्म्यपरा । नतु तत्तच्छब्दवाच्यत्वपरा । लोकालोकपदसाहचर्यात् । लोकादिशब्दे त्वया तद्वाच्यत्वपरत्वेनाऽव्याख्यानात् । लोकस्सर्वाधार इत्याद्युक्तेः ।**

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬುದು ಮೂರನೆಯ ಸೂತ್ರ. ಈ ಸೂತ್ರದಲ್ಲಿರುವ ಉಭಯ ಎಂಬ ಪದಕ್ಕೆ ಸ್ವಾರಸ್ಯವಾದ ಅರ್ಥವನ್ನು ನಿಮಗೆ ಹೇಳಲಾಗದು. ಏಕೆಂದರೆ ಸ್ತ್ರೀಲಿಂಗಶಬ್ದವಾಚ್ಯತ್ವ, ಪುಲ್ಲಿಂಗಶಬ್ದವಾಚ್ಯತ್ವ ಎರಡೂ ಕೂಡ ನೇರವಾಗಿ ಬ್ರಹ್ಮನಲ್ಲಿ ಬರುತ್ತದೆಂದು ವ್ಯಾಖ್ಯಾನ ಮಾಡುತ್ತೀರಿ. ಆದರೆ ಉಭಯ ಪದಕ್ಕೆ ಹೀಗೆ ವ್ಯಾಖ್ಯಾನಿಸಲಾಗದು. ಏಕೆಂದರೆ ಹಿಂದಿನ ಸೂತ್ರಗಳಲ್ಲಿ ಸ್ತ್ರೀತ್ವವಾಗಲೀ, ಪುಂಸ್ತ್ವವಾಗಲೀ ಪ್ರಸಕ್ತವಾಗಿಲ್ಲ. 'ಉಭಯ' ಎಂಬ ಸರ್ವನಾಮಶಬ್ದದಿಂದ ಪೂರ್ವಪ್ರಸಕ್ತವಾದದ್ದನ್ನಷ್ಟೇ ಪರಾಮರ್ಶಿಸಬೇಕು. 'ಏಷ ಸ್ತ್ರೀ' ಇತ್ಯಾದಿ ಶ್ರುತಿಯೂ ಕೂಡ ಜಗತ್ತಿನಲ್ಲಿರುವ ಸ್ತ್ರೀ-ಪುರುಷರೆಲ್ಲರೂ ಈ ಬ್ರಹ್ಮನಿಂದ ಅಭಿನ್ನರಾಗಿದ್ದಾರೆ ಎಂದಷ್ಟೇ ಹೇಳುತ್ತಿದೆ ಹೊರತು, ಸ್ತ್ರೀ ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ ಎಂಬುದು ಶ್ರುತಿಯ ಅಭಿಪ್ರಾಯವಲ್ಲ. ಮುಂದೆ 'ಏಷ ಹ್ಯೇವ ಲೋಕಃ' 'ಏಷ ಹ್ಯೇವ ಅಲೋಕಃ' ಎಂದು ಹೇಳಲಾಗಿದೆ. ಇಲ್ಲಿರುವ ಲೋಕ ಮತ್ತು ಅಲೋಕಶಬ್ದಗಳಿಗೆ ಆಯಾ ಶಬ್ದವಾಚ್ಯತ್ವವನ್ನು ನೀವೂ ಕೂಡ ಒಪ್ಪಿರುವುದಿಲ್ಲ. ಹೊರತಾಗಿ ಲೋಕಶಬ್ದಕ್ಕೆ 'ಸರ್ವಾಧಾರ' ಎಂದೂ, ಅಲೋಕಕ್ಕೆ 'ಲೋಕವಿಲಕ್ಷಣ' ಎಂದು ವ್ಯಾಖ್ಯಾನ ಮಾಡಿದ್ದೀರಿ. ಇದರಂತೆ ಸ್ತ್ರೀ-ಪುರುಷಾದಿ ಶಬ್ದಗಳಿಗೂ ಅಭಿನ್ನಾರ್ಥವನ್ನೇ ಹೇಳಬೇಕು. ಆಯಾ ಶಬ್ದವಾಚ್ಯತ್ವವನ್ನು ಹೇಳಬಾರದು.

**प्रकाशः – चतुर्थे ल्यब्लोपदोषः ।**

'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೇ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. 'ಪರಿಣಾಮಾತ್' ಎಂಬಲ್ಲಿರುವ ಪಂಚಮೀವಿಭಕ್ತಿಯು ಲ್ಯಬ್ಲೋಪಾರ್ಥದಲ್ಲಿದೆ ಎಂದು ನೀವು ವ್ಯಾಖ್ಯಾನ ಮಾಡಿದ್ದೀರಿ. 'ಆತ್ಮಕೃತೇಃ ಪರಿಣಾಮಂ ವಿಹಾಯ' ಎಂಬ ಈ ಅರ್ಥವೂ ಕೂಡ ಸಾಧುವಾಗಿದೆ.

**प्रकाशः – पञ्चमे साक्षात्स्वदेहात्प्राणिप्रसवहेतुत्वस्य भ्रमरादिष्वभावाच्चतुर्मुखे भावाच्च स्त्रीरूपत्वोक्तेरयुक्ततेति ।**

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಐದನೇ ಸೂತ್ರ ವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಇಲ್ಲಿರುವ 'ಸಾಕ್ಷಾತ್' ಎಂಬ ಪದಕ್ಕೆ ನೇರವಾಗಿ ತನ್ನ ದೇಹದಲ್ಲಿ ಪ್ರಾಣಿಪ್ರಸವಹೇತುತ್ವವು ಇರಬೇಕು. ಆವಾಗ ಮಾತ್ರ ಸ್ತ್ರೀತ್ವವು ಬರುತ್ತದೆಂದು ವ್ಯಾಖ್ಯಾನ ಮಾಡಿದ್ದೀರಿ. ಆದರೆ ಹೆಣ್ಣುಭ್ರಮರದಲ್ಲಿ ಸ್ವದೇಹಾತ್ ಪ್ರಾಣಿಪ್ರಸವಹೇತುತ್ವವು ನೇರವಾಗಿ ಇಲ್ಲದಿದ್ದರೂ ಸ್ತ್ರೀತ್ವವು ಇರುವುದು ಕಂಡಿದೆ. ಆದ್ದರಿಂದ ಅನ್ವಯವ್ಯಭಿಚಾರ ಬರುತ್ತದೆ. ಚತುರ್ಮುಖಬ್ರಹ್ಮನಲ್ಲಿ 'ಸ್ವದೇಹಾತ್ ಪ್ರಾಣಿಪ್ರಸವಹೇತುತ್ವ'ವು ನೇರವಾಗಿದ್ದರೂ ಸ್ತ್ರೀತ್ವವೂ ಇರುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಭಿಚಾರ ಬರುತ್ತದೆ. ಹೀಗೆ ಪ್ರಕೃತ್ಯಧಿಕರಣದಲ್ಲಿರುವ ಐದು ಸೂತ್ರಗಳ ವ್ಯಾಖ್ಯಾನವೂ ಕೂಡ ಅಯುಕ್ತವಾಗಿವೆ.

**प्रकाशः – तदसारम् । तदधीनत्वन्याये स्थित एवैतद्विचारारम्भस्याकर एव पूर्वत्र समर्थनात् ।**

ಸಮಾಧಾನ - ಕೆಲವರ ಈ ಆಕ್ಷೇಪವು ಅಸಾರವಾಗಿದೆ. ಪ್ರಾರಂಭದಲ್ಲಿ ಮಾಡಿದ ತದಧೀನತ್ವನ್ಯಾಯದಿಂದಲೇ ಸ್ತ್ರೀಲಿಂಗಶಬ್ದವನ್ನು ಸಮನ್ವಯ ಮಾಡಿದ್ದಾಗಿದೆಯಲ್ಲವೇ ? ಎಂಬ ಆಕ್ಷೇಪವೇ

ತಪ್ಪು. ಏಕೆಂದರೆ ತದಧೀನತ್ವನ್ಯಾಯದಿಂದ ಪ್ರಕೃತ್ಯಾದಿ ಶಬ್ದಗಳು ಹರಿಪರವೆಂದು ಒಪ್ಪಿರುವಾಗಲೇ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಪರಮಾತ್ಮನಲ್ಲಿ ಬರುತ್ತದೋ ಇಲ್ಲವೋ ? ಎಂಬ ವಿಚಾರಕ್ಕಾಗಿಯೇ ಈ ಅಧಿಕರಣ ಹೊರಟಿರುತ್ತದೆ ಎಂದು ಗ್ರಂಥಕಾರರು ಪ್ರಾರಂಭದಲ್ಲಿಯೇ ಹೇಳಿರುತ್ತಾರೆ. ಆದ್ದರಿಂದ ಪೂರ್ವಪಕ್ಷದ ಉದಯವೂ ಆಗುತ್ತದೆ.

**प्रकाशः – श्रुतौ प्रकृत्यादिशब्दस्य कारणत्वादिपरत्वेऽपि चन्द्रिकायामेव ''नच प्रकृत्यादिशब्दे स्त्रीलिङ्गस्य चित्प्रकृत्यादावर्थसाधुत्वे सम्भवति देवताखट्वादिशब्दे-ष्विव प्रयोगसाधुत्वं युक्तम्'' इत्यादिनाऽऽक्षेपप्रकारस्य स्फुटत्वात् ।**

ಪ್ರಕೃತ್ಯಾದಿಶಬ್ದಗಳು ಕೇವಲ ಕಾರಣತ್ವವನ್ನಷ್ಟೇ ಬೋಧಿಸುತ್ತಿದೆ. ಆ ಶಬ್ದಗಳಲ್ಲಿರವ ಲಿಂಗಗಳು ಕೇವಲ ಶಬ್ದಸಾಧುತ್ವಕ್ಕೋಸ್ಕರ ಇರುತ್ತವೆಂದು ಆಕ್ಷೇಪಿಸಲಾಗಿತ್ತು.

ಇದೂ ಕೂಡ ಸರಿಯಲ್ಲ. ಏಕೆಂದರೆ 'ನಚ ಪ್ರಕೃತ್ಯಾದಿಶಬ್ದೇ ಸ್ತ್ರೀಲಿಂಗಸ್ಯ ಚಿತ್‌ಪ್ರಕೃತ್ಯಾದಾವರ್ಥಸಾಧುತ್ವೇ ಸಂಭವತಿ ದೇವತಾಖಟ್ವಾದಿಶಬ್ದೇಷ್ವಿವ ಪ್ರಯೋಗಸಾಧುತ್ವಂ ಯುಕ್ತಮ್' ಸ್ತ್ರೀಲಿಂಗವಾದ ಪ್ರಕೃತ್ಯಾದಿ ಶಬ್ದಗಳು ಚಿತ್‌ಪ್ರಕೃತಿಯಲ್ಲಿ ಅರ್ಥತಃ ಸಾಧುವಾಗುತ್ತಿರಲು ದೇವತಾ, ಖಟ್ವಾ ಮೊದಲಾದ ಶಬ್ದಗಳಂತೆ ಪ್ರಯೋಗತಃ ಸಾಧುವಾಗುತ್ತವೆಂದು ಹೇಳುವುದು ಅಸಾಧುವಾಗಿದೆ. ಇತ್ಯಾದಿಯಾಗಿ ಆಕ್ಷೇಪದ ಪ್ರಕಾರವನ್ನು ಚಂದ್ರಿಕೆಯಲ್ಲಿಯೇ ಸ್ಪಷ್ಟವಾಗಿ ತೋರಿಸಿರುತ್ತಾರೆ. ಆದ್ದರಿಂದ ಪ್ರಕೃತಿ ಶಬ್ದವು ಕೇವಲ ಕಾರಣತ್ವವನ್ನಷ್ಟೇ ತಿಳಿಸುತ್ತದೆ ಎಂದಾಗಲೀ, ಲಿಂಗವು ಶಬ್ದಸಾಧುತ್ವಕ್ಕೋಸ್ಕರವೆಂದಾಗಲೀ ಇದೆಯೆಂದು ಆಕ್ಷೇಪಿಸಬಾರದು.

**प्रकाशः – तत्तद्वाक्यस्थस्त्रीलिङ्गशब्दानां ब्रह्मप्रकरणादिना ब्रह्मपरत्वेऽपि विभक्तेर्ब्रह्मण्यर्थसाधुत्वं नेत्याक्षेपे तदुक्त्यर्थतयैतदारम्भसम्भवाच ।**

ಪ್ರಾತಿಪದಿಕಾರ್ಥವು ಬ್ರಹ್ಮಪರವೆಂದು ಸಿದ್ಧವಾದ ಮೇಲೆ ಪ್ರತ್ಯಯಾರ್ಥವೂ ಕೂಡ ಬ್ರಹ್ಮಪರವೇ ಆಗುತ್ತದೆ. ಪ್ರಾತಿಪದಿಕಾರ್ಥವು ಬ್ರಹ್ಮಪರವಾಗದಿದ್ದರೆ ಪ್ರತ್ಯಯಾರ್ಥವೂ ಕೂಡ ಬ್ರಹ್ಮಪರವಾಗುವುದಿಲ್ಲವೆಂದು ಹಿಂದೆ ಆಕ್ಷೇಪ ಮಾಡಿದ್ದನು.

ಇದೂ ಕೂಡ ಸರಿಯಲ್ಲ. ಏಕೆಂದರೆ ಆಯಾ ಶ್ರುತಿವಾಕ್ಯಗಳಲ್ಲಿರುವ ಸ್ತ್ರೀಲಿಂಗಶಬ್ದಗಳು ಬ್ರಹ್ಮಪ್ರಕರಣದಲ್ಲಿರುವುದರಿಂದ ಬ್ರಹ್ಮಪರವೆಂದು ಸಿದ್ಧವಾಗುತ್ತವೆ. ಆದರೂ ಕೂಡ ವಿಭಕ್ತಿಯು ಬ್ರಹ್ಮನಲ್ಲಿ ಅರ್ಥತಃ ಸಾಧುವಾಗುವುದಿಲ್ಲವೆಂಬ ಆಕ್ಷೇಪವನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಅಧಿಕರಣವು ಹೊರಟಿದೆ. ಅಥವಾ ಒಂದು ವೇಳೆ ವಿಭಕ್ತ್ಯರ್ಥವು ನಿರವಕಾಶವಾಗಿ ಪ್ರಬಲವಾದರೆ, ಆವಾಗ ವಿಭಕ್ತ್ಯರ್ಥವು ಅನ್ಯಪರವಾದ್ದರಿಂದ ಪ್ರಾತಿಪದಿಕಾರ್ಥವು ಅನ್ಯಪರವೇ ಆಗಬೇಕಾಗುತ್ತದೆಂಬ ಆಕ್ಷೇಪವು ಬರುತ್ತದೆ. ಅದರ ಪರಿಹಾರಕ್ಕಾಗಿ ವಿಭಕ್ತ್ಯರ್ಥವೂ ಕೂಡ ಬ್ರಹ್ಮನಲ್ಲಿ ಸಮನ್ವಯವಾಗುತ್ತದೆ ಎಂದು ಸಮರ್ಥಿಸಲೇ ಬೇಕು.

**प्रकाशः – सूत्रवैयर्थ्यापादनं त्वज्ञानमूलम् । आद्यस्य पूर्वपक्ष्युक्तन्यायेन ''नामानि'' इति श्रुतिस्थसर्वनाम्नः सङ्कोचशङ्कानिवर्तकतया सार्थक्यस्य ग्रन्थ एव स्पष्टत्वात् ।**

'ಯೋನಿಶ್ಚ ಹಿ ಗೀಯತೇ' ಎಂಬ ಒಂದೇ ಸೂತ್ರ ಸಾಕು. ಉಳಿದ ಸೂತ್ರಗಳೆಲ್ಲವೂ ವ್ಯರ್ಥವಾಗುತ್ತವೆ. ಏಕೆಂದರೆ ನೇರವಾಗಿ ಅಪತ್ಯೋತ್ಪಾದಕತ್ವವನ್ನು ಈ ಸೂತ್ರದಲ್ಲಷ್ಟೇ ಹೇಳಿದ್ದಾರೆಂದು ಆಕ್ಷೇಪ ಮಾಡಿದ್ದನು.

ಇದೂ ಕೂಡ ಅಜ್ಞಾನಮೂಲಕವಾಗಿದೆ. ಅದು ಹೀಗೆ - ಪ್ರಥಮಸೂತ್ರವು ಅತ್ಯಂತ ಸಾರ್ಥಕ. 'ಯೋನಿಶ್ಚ ಹಿ ಗೀಯತೇ' ಎಂಬ ಸೂತ್ರದಲ್ಲಿ ಕೇವಲ ಪ್ರವೃತ್ತಿನಿಮಿತ್ತವನ್ನಷ್ಟೇ ಹೇಳಿರುತ್ತಾರೆ. ಆದರೆ ಸ್ತ್ರೀಲಿಂಗಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಪ್ರಶ್ನೆಗೆ ಉತ್ತರಿಸಲು ಪ್ರಥಮಸೂತ್ರವು ಹೊರಡಲೇ ಬೇಕು. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದರೆ, ಆ ಶ್ರುತಿಯನ್ನು ಸಂಕೋಚ ಮಾಡಬಹುದಲ್ಲವೇ? ಎಂದು ಪುನಃ ಆಕ್ಷೇಪ ಮಾಡುತ್ತಾನೆ. ಅದಕ್ಕೋಸ್ಕರ ಪ್ರತಿಜ್ಞೆಯಲ್ಲಿ ಅಂದರೆ ಉಪಕ್ರಮದಲ್ಲಿ ಸರ್ವಶಬ್ದವಾಚ್ಯತ್ವವನ್ನು ಶ್ರುತಿಯು ಹೇಳುತ್ತಿದೆ. 'ಯಥಾ ನದ್ಯಃ' ಇತ್ಯಾದಿಯಾಗಿ ದೃಷ್ಟಾಂತದಿಂದಲೂ ಅದನ್ನೇ ಸಮರ್ಥಿಸುತ್ತಿದೆ. 'ಏವಮೇವ ಸರ್ವಾಣಿ ನಾಮಾನಿ' ಎಂಬ ಉಪಸಂಹಾರದಲ್ಲಿಯೂ ಸರ್ವಶಬ್ದವಾಚ್ಯತ್ವವನ್ನು ಅಸಂಕುಚಿತವಾಗಿ ಹೇಳಲಾಗಿದೆ. ಹೀಗೆ ಉಪಕ್ರಮ, ಉಪಸಂಹಾರ ಮತ್ತು ಉಪಪತ್ತಿಗಳಿಂದ ಸಕಲ ಬಗೆಯ ಸ್ತ್ರೀಲಿಂಗಶಬ್ದಗಳು ಅಸಂಕುಚಿತವಾಗಿ ಶ್ರೀಹರಿಯಲ್ಲಿ ಸಮನ್ವಯಗೊಳ್ಳುತ್ತವೆಂದು ಸಮರ್ಥಿಸಲು 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಪ್ರಥಮಸೂತ್ರವು ಅತ್ಯಂತ ಅನಿವಾರ್ಯವೆಂದು ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ.

**प्रकाशः** – अत एव सर्वशब्दसाधारणश्रुत्युक्तिपरप्रतिज्ञेत्यादिवाक्यशेषबलेन ''नैकमुदाहरणं योगारम्भं प्रयोजयति'' इति न्यायेन च सौत्र प्रकृतिपदेनान्योपलक्षणाया अप्यदोषत्वम् । अन्यथा सूत्रस्य विश्वतो मुखत्वभङ्गापत्तेः ।

ಪ್ರಕೃತಿಶಬ್ದದಿಂದ ಉಳಿದೆಲ್ಲಾ ಶಬ್ದಗಳನ್ನು ಉಪಲಕ್ಷಣಯಾ ನೀವು ತೆಗೆದುಕೊಳ್ಳುತ್ತೀರಿ. ಇದೂ ಕೂಡ ತಪ್ಪಲ್ಲವೇ? ಎಂದು ಆಕ್ಷೇಪ ಮಾಡಿದ್ದನು.

ಇದು ಸರಿಯಲ್ಲ. ಸೂತ್ರದಲ್ಲಿರುವ ಪ್ರತಿಯೊಂದು ಪದಗಳೂ ಒಂದೇ ವಾಕ್ಯವನ್ನು ಸಮನ್ವಯ ಮಾಡುವ ಮೂಲಕ ಪ್ರಯೋಜನವನ್ನು ಹೊಂದಿರುವುದಿಲ್ಲ. ಆದ್ದರಿಂದ ಸರ್ವಶಬ್ದಸಾಧಾರಣವಾದ ಶ್ರುತಿ ಪ್ರಮಾಣವನ್ನು ಹೇಳುವ 'ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ವಾಕ್ಯಶೇಷದ ಬಲದಿಂದಲೇ ಅನೇಕ ಉದಾಹರಣೆಗಳು ವಿವಕ್ಷಿತವಾಗಿರುತ್ತವೆಂದು ತಿಳಿಯುತ್ತದೆ. 'ನೈಕಮುದಾಹರಣಂ ಯೋಗಾರಂಭಂ ಪ್ರಯೋಜಯತಿ' ಒಂದೇ ಉದಾಹರಣವಾಕ್ಯ ಇದ್ದಮಾತ್ರಕ್ಕೆ ಸೂತ್ರದ ಆರಂಭವು ಪ್ರಯೋಜನವನ್ನು ಹೊಂದಿದಂತಾಗುವುದಿಲ್ಲ ಎಂಬ ನ್ಯಾಯದಿಂದಲೂ ಸೂತ್ರದಲ್ಲಿರುವ ಪ್ರಕೃತಿಪದವು ಉಳಿದ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಣವಾಗಿದೆಯೆಂದು ಸ್ಪಷ್ಟವಾಗಿ ತಿಳಿಯಬಹುದು. ಹೀಗೊಪ್ಪದಿದ್ದರೆ ಸೂತ್ರದಲ್ಲಿರುವ ಪ್ರತಿಯೊಂದು ಪದವೂ ವಿಶ್ವತೋಮುಖವಾಗಿರುತ್ತದೆಂಬ ಸೂತ್ರದ ಲಕ್ಷಣಕ್ಕೆ ಭಂಗ ಬರುತ್ತದೆ.

**प्रकाशः –** प्रकृतिशब्दस्य चित्प्रकृतिपरत्वेन प्रसिद्धत्वान्न हरौ तस्य वृत्तिर्युक्ता। अन्यथा प्रसिद्धिबाधापत्तेः । ''नामानि सर्वाणि'' इति श्रुतिस्थसर्वनाम्नः सङ्कोचसम्भवाद्विशिष्य प्रमाणाभावात् । प्रतिज्ञेति पूर्वसूत्रशेषोपात्त-श्रुतेर्निरवकाशत्वेऽपि सर्वशब्दसाधारण्यादित्यादिशङ्कायां विशिष्य मानोक्त्यर्थं द्वितीयसूत्रस्य सार्थक्यात् । अत एवोक्तं ''प्रकृतिशब्दवाच्यत्वेऽपि विशिष्य प्रमाणोक्तिः'' इति ।

'ಅಭಿಧ್ಯೋಪದೇಶಾಚ್ಚ' ಎಂಬ ಎರಡನೆಯ ಸೂತ್ರವೂ ಕೂಡ ಸಾರ್ಥಕವಾಗಿದೆ. ಪ್ರಕೃತಿಶಬ್ದವು ಹರಿಪರವಾಗಿದೆ ಎಂಬ ವಿಷಯದಲ್ಲಿ ವಿಶೇಷಪ್ರಮಾಣವನ್ನು ಹೇಳಲು ಈ ಸೂತ್ರವು ಹೊರಟಿದೆ. ಕೇವಲ ಪ್ರಕೃತಿಶಬ್ದವಿಷಯದಲ್ಲಿ ಪ್ರಮಾಣ ಹೇಳಲು ಏನು ಕಾರಣ? ಎಂದರೆ ಪ್ರಕೃತಿಶಬ್ದವು ಚಿತ್‌ಪ್ರಕೃತಿಪರವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಶ್ರೀಹರಿಯಲ್ಲಿ ಬರುವುದಿಲ್ಲ. ಒಂದು ವೇಳೆ ಚಿತ್‌ಪ್ರಕೃತಿಯಲ್ಲಿ ಬಾರದೇ ಪರಮಾತ್ಮನಲ್ಲೇ ಬರುತ್ತದೆಂದು ಹೇಳಿದರೆ ಲೋಕಪ್ರಸಿದ್ಧಿಗೆ ಬಾಧವು ಬರಬೇಕಾದೀತು. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಪ್ರಮಾಣವಾಗಿದೆಯಲ್ಲವೇ ? ಎಂದರೆ ಈ ಶ್ರುತಿಗೆ ಸಂಕುಚಿತವಾದ ಅರ್ಥವನ್ನು ಹೇಳಬಹುದು. ಈ ಶ್ರುತಿಗೆ ಅರ್ಥಸಂಕೋಚ ಮಾಡಬಾರದೆಂದು 'ಪ್ರತಿಜ್ಞಾ-ದೃಷ್ಟಾಂತಾನುಪರೋಧಾತ್' ಎಂಬ ಪ್ರಥಮಸೂತ್ರದಲ್ಲಿ ಹೇಳಿದ್ದಾಗಿದೆಯಲ್ಲವೇ? ಎಂದರೆ ಅದು ಸರ್ವಶಬ್ದಸಾಧಾರಣವಾಗಿ ಹೇಳಲ್ಪಟ್ಟಿದೆ ಹೊರತು, ವಿಶೇಷವಾದ ಪ್ರಮಾಣವಾಗುವುದಿಲ್ಲ. ಆದ್ದರಿಂದ ಪ್ರಕೃತಿಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ ಎಂದು ವಿಶೇಷವಾಗಿ ಹೇಳುವುದಕ್ಕಾಗಿ ಎರಡನೆಯ ಸೂತ್ರವು ಹೊರಟಿದೆ. ಆದ್ದರಿಂದಲೇ ಗ್ರಂಥಕಾರರು 'ಪ್ರಕೃತಿಶಬ್ದವಾಚ್ಯತ್ವೇಽಪಿ ವಿಶಿಷ್ಯ ಪ್ರಮಾಣೋಕ್ತಿಃ' ಪ್ರಕೃತಿ ಶಬ್ದವಾಚ್ಯನಾಗಿದ್ದಾನೆಂಬ ವಿಷಯದಲ್ಲಿ ವಿಶೇಷವಾಗಿ ಪ್ರಮಾಣವನ್ನು ಹೇಳಲು ಎರಡನೆಯ ಸೂತ್ರ ಹೊರಟಿದೆಯೆಂದು ಹೇಳಿರುತ್ತಾರೆ.

**प्रकाशः –** श्वेताश्वतरश्रुतौ मायाशब्दस्य प्रधानपरत्वे ज्ञापकाभावात् ''प्रकृतिर्वासनेत्येव तवेच्छानन्त कथ्यते'' इति स्मृताविच्छापर्यायत्वेन श्रुतप्रकृतिपदेन प्रकृतिं विद्यादिच्छां विद्यादित्यर्थस्य स्पष्टत्वाच्च ।

ಮತ್ತು ಮಾಯಾ ಶಬ್ದಕ್ಕೆ ಪ್ರಕೃತಿ ಎಂಬರ್ಥವೇ ಇದೆ ಹೊರತು, ಈಶ್ವರ ಇಚ್ಛೆ ಎಂಬರ್ಥವು ಇರುವುದಿಲ್ಲವೆಂದು ಹಿಂದೆ ಆಕ್ಷೇಪ ಮಾಡಿದ್ದರು.

ಇದೂ ಕೂಡ ಸರಿಯಲ್ಲ. ಶ್ವೇತಾಶ್ವತರ ಶ್ರುತಿಯಲ್ಲಿ ಇರುವ ಮಾಯಾ ಶಬ್ದದಿಂದ ಪ್ರಕೃತಿಯನ್ನೇ ತೆಗದುಕೊಳ್ಳಲು ಯಾವುದೇ ಜ್ಞಾಪಕವಿರವುದಿಲ್ಲ.

ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ।
ಪ್ರಕೃತಿರ್ವಾಸನೇತ್ಯೇವ ತವೇಚ್ಛಾನಂತ ಕಥ್ಯತೇ ॥

ಪರಿಪೂರ್ಣಚಂದ್ರಿಕಾ

ಎಂಬ ಸ್ಮೃತಿವಾಕ್ಯದಲ್ಲಿ ಇಚ್ಛಾಶಬ್ದಕ್ಕೆ ಪರ್ಯಾಯವಾಗಿ ಪ್ರಕೃತಿಶಬ್ದವನ್ನು ಉಪಯೋಗಿಸಲಾಗಿದೆ. ಅದೇ ಪ್ರಕೃತಿಶಬ್ದವು 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬಲ್ಲಿ ಶ್ರುತವಾಗಿದೆ. ಆದ್ದರಿಂದ ಇಲ್ಲಿರುವ ಮಾಯಾಶಬ್ದದಿಂದ ಇಚ್ಛೆಯನ್ನು ತೆಗೆದುಕೊಂಡರೆ ಏನೂ ತಪ್ಪಾಗುವುದಿಲ್ಲ. ಆದ್ದರಿಂದ ಮಾಯೆಯೆಂದರೆ ಭಗವದಿಚ್ಛೆಯೆಂದು ತಿಳಿಯಬೇಕು.

**प्रकाशः** – चतुर्थस्यापि चित्प्रकृत्यादौ प्रयोगप्राचुर्येऽपि ''महद्वच'' इत्यादावुक्तन्यायेन प्रवृत्तिनिमित्तपौष्कल्येन हरौ मुख्यत्वमित्यर्थोक्तिपरतया सार्थक्यात् ।

'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೆಯ ಸೂತ್ರವೂ ಕೂಡ ಸಾರ್ಥಕವಾಗಿದೆ. ಚಿತ್ ಪ್ರಕೃತ್ಯಾದಿಗಳಲ್ಲಿ ಪ್ರಕೃತಿಶಬ್ದದ ಪ್ರಯೋಗಪ್ರಾಚುರ್ಯವಿರಬಹುದು. ಆದರೆ 'ಮಹದ್ವಚ್ಚ' ಇತ್ಯಾದಿ ಸೂತ್ರದ ನ್ಯಾಯದಂತೆ ಪ್ರವೃತ್ತಿನಿಮಿತ್ತಪೌಷ್ಕಲ್ಯದಿಂದ ಶ್ರೀಹರಿಯಲ್ಲಿ ಪ್ರಕೃತಿಶಬ್ದವು ಪರಮಮುಖ್ಯವಾಗಿದೆಯೆಂದು ಹೇಳಬೇಕಾಗಿದೆ. ಅದಕ್ಕಾಗಿ ಈ ನಾಲ್ಕನೆಯ ಸೂತ್ರವು ಅತ್ಯಂತ ಅನಿವಾರ್ಯ.

**प्रकाशः** – आद्यस्यप्रकृतिचशब्दाभ्यां स्त्रीपुंसयोः प्रकृतत्वेन तृतीयस्योभयपद-स्वारस्यस्य स्पष्टत्वात् ''एष स्त्रि'' इति श्रुतौ सर्वात्मकत्वस्य बाधेन तत्तच्छब्दवाच्यत्वस्यैव न्याय्यत्वात् । त्वदभिमतसर्वात्मकतया तत्तच्छब्द-वाच्यत्वस्योत्तरनये निरस्यत्वात् ।

ಪ್ರಥಮಸೂತ್ರದಲ್ಲಿ ಪ್ರಕೃತಿ ಮತ್ತು ಚಶಬ್ದದಿಂದ ಪರಮಾತ್ಮನು ಪುಲ್ಲಿಂಗಶಬ್ದಗಳಿಂದಷ್ಟೇ ಅಲ್ಲ, ಸ್ತ್ರೀಲಿಂಗಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಪ್ರಸಕ್ತವಾಗಿದೆ. ಹೀಗೆ ಹಿಂದೆ ಪ್ರಸಕ್ತವಾದ ಸ್ತ್ರೀಲಿಂಗ ಹಾಗೂ ಪುಲ್ಲಿಂಗ ಶಬ್ದಗಳನ್ನು ಮೂರನೆಯ ಸೂತ್ರದಲ್ಲಿರುವ ಉಭಯಶಬ್ದದಿಂದ ವಿವಕ್ಷಿಸಬೇಕು. ಆದ್ದರಿಂದ 'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಸೂತ್ರದಲ್ಲಿರುವ ಉಭಯಪದದ ಅರ್ಥವು ಅತ್ಯಂತ ಸ್ಫುಟವಾಗಿದೆ. ಮತ್ತು 'ಏಷ ಸ್ತ್ರೀ' ಎಂಬ ಶ್ರುತಿಯಲ್ಲಿ ಪರಮಾತ್ಮನಿಗೆ ಸ್ತ್ರೀ ಹಾಗೂ ಪುರುಷರಿಂದ ಅಭೇದವನ್ನು ಹೇಳಲಾಗಿದೆಯೆಂಬ ನಿಮ್ಮ ವಿಚಾರವೂ ಕೂಡ ಅಯುಕ್ತವಾಗಿದೆ. ಸ್ತ್ರೀಲಿಂಗ ಹಾಗೂ ಪುರುಷಲಿಂಗಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಹೇಳುವುದೇ ನ್ಯಾಯಸಮ್ಮತವಾದದ್ದು. ನೀವು ಹೇಳುವಂತೆ ಬ್ರಹ್ಮನು ಸರ್ವಾತ್ಮಕನಾಗಿರುವುದರಿಂದ ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂಬ ವಿಚಾರವನ್ನು ಮುಂದಿನ ಅಧಿಕರಣದಲ್ಲಿ ನಾವು ನಿರಾಕರಣೆ ಮಾಡುವವರಿದ್ದೇವೆ.

**प्रकाशः** – चतुर्थे ल्यब्लोपस्य दोषत्वानुपपादनाच्च । अन्यथा हेत्वाद्यर्थकत्वस्यापि पञ्चम्या दोषत्वं स्यात् । अनुशासनस्योभयत्र साम्यात् । ल्यब्लोपाश्रयणेऽर्थविशेषलाभाच्च ।

'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೆಯ ಸೂತ್ರದಲ್ಲಿರುವ 'ಪರಿಣಾಮಾತ್' ಎಂಬ ಪಂಚಮಿ ವಿಭಕ್ತಿಯು ಲ್ಯಬ್ಲೋಪನಿಮಿತ್ತಕವಾಗಿದೆ. ಅಂದರೆ ಪ್ರಕೃತಿಯನ್ನು ಪರಿಣಾಮವಾಗುವಂತೆ ಮಾಡಿ, ಅಂತಹ

ಪರಿಣತವಾದ ಜಗತ್ತಿನಲ್ಲಿ ತಾನು ಪ್ರವೇಶ ಮಾಡಿದನು ಎಂದು ಅರ್ಥೈಸಿದಾಗ ಲ್ಯಬ್ಲೋಪನಿಮಿತ್ತಕವಾದ ಪಂಚಮೀವಿಭಕ್ತಿ ಇರುವುದಿಲ್ಲ ಎಂದು ಆಕ್ಷೇಪ ಮಾಡಿದ್ದನು. ಇದೂ ಕೂಡ ಸರಿಯಲ್ಲ. ಹಾಗಾದಲ್ಲಿ ಹೇತ್ವರ್ಥದಲ್ಲಿರುವ ಪಂಚಮೀವಿಭಕ್ತಿಯೂ ಕೂಡ ಅಯುಕ್ತವಾಗಬೇಕಾದೀತು. ಹೇತ್ವರ್ಥದಲ್ಲಿ ಪಂಚಮಿಯು ಅನುಶಾಸನದಿಂದ ಸಿದ್ಧವಾಗಿದೆಯೆಂದರೆ ಲ್ಯಬ್ಲೋಪನಿಮಿತ್ತಾರ್ಥದಲ್ಲಿಯೂ ಪಂಚಮೀ ವಿಭಕ್ತಿಯು ಅನುಶಾಸನದಿಂದಲೇ ಸಿದ್ಧವಾಗಿದೆ. ಮತ್ತು ಲ್ಯಬ್ಲೋಪನಿಮಿತ್ತಕವಾದ ಪಂಚಮಿಯನ್ನು ಆಶ್ರಯಿಸುವುದರಿಂದ ವಿಶೇಷಾರ್ಥವು ಲಾಭವಾಗುತ್ತಿದೆ.

**प्रकाशः** – ''सूतिमव्यवधानेन स्त्रीत्वमाहुः'' इत्यादिस्मृत्युक्तस्त्रीत्वस्योभय-समाधेयत्वात् ।

'ಯೋನಿಶ್ಚ ಹಿ ಗೀಯತೇ' ಎಂಬ ಐದನೆಯ ಸೂತ್ರದಲ್ಲಿ 'ಅವ್ಯವಧಾನೇನ ಸೂತಿಕರ್ತೃತ್ವಂ' ಎಂಬ ನಿಯಮವನ್ನು ನಾವು ಹೇಳಿದ್ದೇವೆ. ಇದಕ್ಕೆ ಪರನು ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರಗಳನ್ನು ಹೇಳಿದ್ದನು. ಭ್ರಮರಾದಿಗಳಲ್ಲಿ ಅವ್ಯವಧಾನೇನ ಸೂತಿಕರ್ತೃತ್ವವಿಲ್ಲದಿದ್ದರೂ ಸ್ತ್ರೀತ್ವವು ಇರುತ್ತದೆ. ಚತುರ್ಮುಖಾದಿಗಳಲ್ಲಿ ಅವ್ಯವಧಾನೇನ ಸೂತಿಕರ್ತೃತ್ವವು ಇದೆ ಆದರೆ ಸ್ತ್ರೀತ್ವವು ಇರುವುದಿಲ್ಲ ಎಂದು.

ಇದೂ ಕೂಡ ಸರಿಯಲ್ಲ. ಇಂತಹ ಸ್ತ್ರೀತ್ವವನ್ನು ನಾವು ಮಾತ್ರ ಹೇಳಿರುವುದಲ್ಲ. 'ಸೂತಿರವ್ಯವಧಾನೇನ ಸ್ತ್ರೀತ್ವಮಾಹುರ್ಮನೀಷಿಣಃ' ಎಂಬುದಾಗಿ ಅವ್ಯವಧಾನೇನ ಸೂತಿಕರ್ತೃತ್ವವನ್ನೇ ಸ್ತ್ರೀತ್ವವನ್ನು ಸ್ಮೃತಿಕಾರರೇ ಹೇಳಿರುತ್ತಾರೆ. ಈ ಸ್ಮೃತಿವಾಕ್ಯದ ಮೇಲೆ ಬರುವ ಆಶಂಕೆಗೆ ನಾನಷ್ಟೇ ಉತ್ತರಿಸುವುದಲ್ಲ. ನೀನೂ ಕೂಡ ಉತ್ತರಿಸಲೇ ಬೇಕು.

**प्रकाशः** – ''स्वदेहादिच्छया विश्वम्'' इत्यादेरीश्वर इव चतुर्मुखे तथात्वे भ्रमरादावतथात्वे च त्वया प्रमाणानुक्तेश्च ।

ಪರಮಾತ್ಮನಲ್ಲಿ ನೇರವಾಗಿ ಸೂತಿಕರ್ತೃತ್ವವಿರುವಂತೆ ಚತುರ್ಮುಖನಲ್ಲಿ ಇರುತ್ತದೆಂಬ ವಿಷಯದಲ್ಲಿ ನೀನು ಯಾವುದೇ ಪ್ರಮಾಣವನ್ನು ನೀಡಿರುವುದಿಲ್ಲ. ಪರಮಾತ್ಮನ ವಿಷಯದಲ್ಲಿ 'ಸ್ವದೇಹಾದಿಚ್ಛಯಾ ವಿಶ್ವಂ' ಎಂಬ ಪ್ರಮಾಣವಿದೆ. ಇದರಂತೆ ಚತುರ್ಮುಖನು ತನ್ನ ದೇಹದಿಂದಲೇ ಅಪತ್ಯೋಪತ್ಪಾದನೆಯನ್ನು ಮಾಡಿದ್ದಾನೆಂಬ ವಿಷಯದಲ್ಲಿ ಯಾವುದೇ ಆಧಾರವಿಲ್ಲ. ಮತ್ತು ಭ್ರಮರಾದಿಗಳಲ್ಲಿ ಅವ್ಯವಧಾನೇನ ಸೂತಿಕರ್ತೃತ್ವವಿಲ್ಲದಿದ್ದರೂ ಸ್ತ್ರೀತ್ವವಿದೆಯೆಂಬ ವಿಷಯದಲ್ಲಿಯೂ ನೀನು ಯಾವುದೇ ಪ್ರಮಾಣವನ್ನು ಹೇಳಿರುವುದಿಲ್ಲ. ಆದ್ದರಿಂದ ಅನ್ವಯವ್ಯಭಿಚಾರವನ್ನಾಗಲೀ, ವ್ಯತಿರೇಕವ್ಯಭಿಚಾರವನ್ನಾಗಲೀ ಹೇಳಲಾಗದು.

**प्रकाशः** – द्रोणद्रुपदादौ लोकसिद्धजननव्यभिचारेण मातापित्रादिक्रमेण जन्मानङ्गीकारापाताच्चेति ।

ಭ್ರಮರಾದಿಗಳಲ್ಲಿ ವ್ಯಭಿಚರಿತವಾದ್ದರಿಂದ ಅವ್ಯವಧಾನೇನ ಸೂತಿಕರ್ತೃತ್ವವನ್ನು ಸ್ತ್ರೀತ್ವವೆಂದು ನಿರ್ಣಯಿಸಲಾಗದು ಎಂದು ನೀವು ಹೇಳುವುದಾದರೆ, ದ್ರೋಣ, ದ್ರುಪದ ಮೊದಲಾದವರಲ್ಲಿ

ಲೋಕಸಿದ್ಧವಾದ ಜನನಕ್ಕೆ ವ್ಯಭಿಚಾರ ಬರುತ್ತಿದೆ. ಅಂದರೆ ತಂದೆ, ತಾಯಿಯಂದಿರ ಸಂಗದಿಂದ ಪುತ್ರನು ಹುಟ್ಟುತ್ತಾನೆ ಎಂಬ ಕ್ರಮಕ್ಕೆ ದ್ರೋಣ, ದ್ರುಪದಾದಿಗಳಲ್ಲಿ ವ್ಯಭಿಚಾರ ಬರುವುದರಿಂದ ಲೋಕದಲ್ಲಿರುವ ನಿಯಮವೇ ತಪ್ಪಿಂದಾಗಬೇಕಾದೀತು. ಆದ್ದರಿಂದ ಕೆಲವರ ಈ ಆಕ್ಷೇಪವು ಎಲ್ಲ ಬಗೆಯಿಂದಲೂ ದುಷ್ಟವಾಗಿದೆ.

**गुरुराजीयम्** – कम्पनादित्यत्रेति ।।

श्रुत्यर्थनिर्णयार्थत्वात् स्मृतेस्तत्र निरूपितः ।
अर्थो ग्राह्यो वेदवाक्ये तदयोगे तु लौकिके ।।

इत्यादिनोक्तमित्यर्थः ।। **उपलक्षितेति** ।। प्रकृतिपदोपलक्षितेत्यर्थः । स्त्रीशब्दमात्रे केवलं स्त्रीशब्द एवेत्यर्थः । न तूपलक्षितेषु सर्वेष्विति । योनित्वस्य दारादिशब्दप्रवृत्तिनिमित्तत्वाभावादित्यर्थः ।




ಈ ಪ್ರಕೃತ್ಯಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಇವುಗಳ ಜೋಡಣೆಯು ಅತ್ಯಂತ ಅರ್ಥಪೂರ್ಣವಾಗಿದೆ. 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬುದು ಮೊದಲನೆಯ ಸೂತ್ರ. ಈ ಸೂತ್ರದಲ್ಲಿ ಪ್ರತಿಜ್ಞೆ ಹಾಗೂ ದೃಷ್ಟಾಂತವಾಕ್ಯಗಳಿಗೆ ವಿರೋಧವು ಬರಬಾರದೆಂದರೆ ಪರಮಾತ್ಮನು ಪುಲ್ಲಿಂಗಶಬ್ದದಂತೆ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದದಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಗಬೇಕು. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಅರ್ಥಸಂಕೋಚ ಮಾಡಬಾರದು. ಪರಮಾತ್ಮನಲ್ಲಿ ಸ್ತ್ರೀತ್ವವು ಇರುವಂತೆ ಪುರುಷತ್ವವೂ ಕೂಡ ಇರುತ್ತದೆ. ಹೀಗೆ ಪ್ರಕೃತಿಶಬ್ದವನ್ನು ಉಪಲಕ್ಷಣಯಾ ವಿವಕ್ಷಿಸಿ ಸಕಲ ಸ್ತ್ರೀವಾಚಕ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಗಿದೆ.

'ಅಭಿಧ್ಯೋಪದೇಶಾಚ್ಚ' ಎಂಬುದು ಎರಡನೆಯ ಸೂತ್ರ. ಪರಮಾತ್ಮನ ಇಚ್ಛೆಯನ್ನು ಸ್ಮೃತಿಯಲ್ಲಿ ಪ್ರಕೃತಿ ಎಂದು ಕರೆಯಲಾಗಿದೆ. 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾऽನಂತ ಕಥ್ಯತೇ' ಎಂಬ ಸ್ಮೃತಿಯಲ್ಲಿ ಕರೆಯಲಾಗಿದೆ. ಈ ಇಚ್ಛೆಯು ಪರಮಾತ್ಮನ ಸ್ವರೂಪವೇ ಆಗಿದೆಯೆಂದು 'ಸೋऽಭಿಧ್ಯಾ ಸ ಜೂತಿಃ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದ ಪರಮಾತ್ಮನು ಪ್ರಕೃತಿಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಸಮರ್ಥಿಸಲು ಎರಡನೆಯ ಸೂತ್ರ ಹೊರಟಿದೆ.

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಮೂರನೆಯ ಸೂತ್ರದಲ್ಲಿ ಇಚ್ಛೆಯ ವ್ಯವಧಾನವಿಲ್ಲದೇ ಮತ್ತು 'ನಾಮಾನಿ ಸರ್ವಾಣಿ' ಎಂಬಲ್ಲಿ ನೇರವಾಗಿಯೇ ಪರಮಾತ್ಮನು ಪ್ರಕೃತಿ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಗಿದೆ. ಆದ್ದರಿಂದ ಪ್ರಕೃತಿಶಬ್ದದ ಉದಾಹರಣೆಯಿಂದ ಸಕಲ ಸ್ತ್ರೀಶಬ್ದಗಳು ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ.

'ಆತ್ಮಕೃತೇಃ ಪರಿಣಾಮಾತ್' ಎಂಬುದು ನಾಲ್ಕನೆಯ ಸೂತ್ರ. ಸಕಲಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾದ ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಬರುವುದೇ ಇಲ್ಲವೆಂಬ ಬಾಧಕವನ್ನು ಈ ಸೂತ್ರವು ಪರಿಹರಿಸಿದೆ. ಮೊದಲ ಮೂರು ಸೂತ್ರಗಳಲ್ಲಿ ಸಾಧಕಪ್ರಮಾಣಗಳನ್ನು ಹೇಳಿದ ಮೇಲೆ ನಾಲ್ಕನೆಯ ಸೂತ್ರವು ಬಾಧಕೋದ್ಧಾರಕ್ಕಾಗಿ ಹೊರಟಿದೆ. ಪ್ರಕೃತಿಯಲ್ಲಿ ಪ್ರವೇಶ ಮಾಡಿರುವ ಪರಮಾತ್ಮನು ಮಹದಾದಿರೂಪದಿಂದ ಪರಿಣಾಮವನ್ನು ಉಂಟುಮಾಡಿ, ಅವುಗಳನ್ನು ನಿಯಂತ್ರಣ ಮಾಡಲು ಪುನಃ ಅನೇಕ ರೂಪಗಳನ್ನು ತಾಳಿ, ಅವುಗಳಲ್ಲಿ ಪ್ರವೇಶಿಸುತ್ತಾನೆ. ಆದ್ದರಿಂದ 'ಪ್ರಕೃತಿ' ಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆಂಬುದು ಈ ಸೂತ್ರದ ಅಭಿಪ್ರಾಯ.

'ಯೋನಿಶ್ಚ ಹಿ ಗೀಯತೇ' ಎಂಬುದು ಐದನೆಯ ಸೂತ್ರ. ಪ್ರಕೃತಿಶಬ್ದದಲ್ಲಿ ಬಾಧಕೋದ್ಧಾರವನ್ನು ಹಿಂದಿನ ಸೂತ್ರದಲ್ಲಿ ಮಾಡಲಾಯಿತು. ಉಳಿದ ಎಲ್ಲಾ ಸ್ತ್ರೀಲಿಂಗಶಬ್ದಗಳ ಸಮನ್ವಯ ವಿಷಯದಲ್ಲಿ ಬರುವ ಬಾಧಕಪ್ರಮಾಣವನ್ನು ಈ ಕೊನೆಯ ಸೂತ್ರವು ಮಾಡುತ್ತಿದೆ. 'ಯದ್ ಭೂತಯೋನಿಂ' ಎಂಬ ಶ್ರುತಿಯಲ್ಲಿ ವಿಷ್ಣುವು ತನ್ನ ದೇಹದಿಂದಲೇ ನೇರವಾಗಿ ಪುತ್ರೋತ್ಪಾದಕನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಪ್ರಕೃತಿ ಸ್ತ್ರೀ ಮೊದಲಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು.

---

### ಶಾಂಕರಭಾಷ್ಯ, ರಾಮಾನುಜಭಾಷ್ಯಗಳ ವಿಮರ್ಶೆ

## तात्पर्यचन्द्रिका

**यत्तूक्तमुभाभ्याम् । न केवलं ब्रह्म जगतः कर्तृ । किन्तु प्रकृतिश्च । उपादानमपि । एवं हि ''येनाश्रुतं श्रुतं भवति'' इत्येकविज्ञानेन सर्वविज्ञानप्रतिज्ञायाः ''यथा सोम्यैकेन मृत्पिण्डेन सर्वं मृन्मयं विज्ञातं स्यात्'' इति दृष्टान्तस्य चानुपरोधो भवतीत्याद्यसूत्रार्थ इति ।**

ಅನುವಾದ - ಶಾಂಕರರು ಹಾಗೂ ರಾಮಾನುಜರು ಹೀಗೆ ವ್ಯಾಖ್ಯಾನ ಮಾಡುತ್ತಾರೆ. - 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದ ಅರ್ಥ ಹೀಗಿದೆ - ಬ್ರಹ್ಮನು ಕೇವಲ ಜಗತ್ತಿಗೆ ನಿಮಿತ್ತಕಾರಣನಾಗಿಲ್ಲ. ಪ್ರಕೃತಿಶ್ಚ = ಉಪಾದಾನಕಾರಣನೂ ಆಗಿದ್ದಾನೆ. ಹೀಗೆ ಬ್ರಹ್ಮನು ಉಪಾದಾನಕಾರಣನೂ ಆಗಿದ್ದಾನೆಂದು ಒಪ್ಪಿದರೆ ಮಾತ್ರ 'ಯೇನಾಶ್ರುತಂ ಶ್ರುತಂ ಭವತಿ' ಎಂಬ ಶ್ರುತಿಯಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞಾವಾಕ್ಯವು 'ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್' ಎಂಬ ದೃಷ್ಟಾಂತವಾಕ್ಯವು ಹೊಂದಾಣಿಕೆಯಾಗುತ್ತದೆ. ಪ್ರತಿಜ್ಞಾವಾಕ್ಯಕ್ಕೂ ಉದಾಹರಣವಾಕ್ಯಕ್ಕೂ ವಿರೋಧವು ಬರುವುದಿಲ್ಲ.

**तन्न । समन्वयस्य प्रधानाशाब्दत्वस्य चेहानुक्तेरध्याये पादे चासङ्गतेः ।**

ಇವರ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ಬ್ರಹ್ಮನಿಗೆ ನಿಮಿತ್ತಕಾರಣತ್ವದ ಜೊತೆಗೆ ಉಪಾದಾನಕಾರಣತ್ವವನ್ನು ಪ್ರತಿಪಾದನೆ ಮಾಡಲು ಈ ಅಧಿಕರಣವು ಹೊರಡುವುದಾದರೆ, ಸಮನ್ವಯಾಧ್ಯಾಯದಲ್ಲಿ ಅಸಂಗತವಾಗುತ್ತದೆ. ಏಕೆಂದರೆ ಯಾವುದೇ ಶಬ್ದದ ಸಮನ್ವಯವನ್ನು

ಮಾಡುವ ಉದ್ದೇಶವೇ ಇರುವುದಿಲ್ಲ. ಅಷ್ಟೇ ಅಲ್ಲದೇ ಪಾದಸಂಗತಿಯೂ ಕೂಡ ಇರುವುದಿಲ್ಲ. ನಾಲ್ಕನೆಯ ಈ ಪಾದದಲ್ಲಿ ಪ್ರಧಾನಕ್ಕೆ ಶಾಬ್ದತ್ವವನ್ನು ನಿರಾಕರಣೆ ಮಾಡುವುದು ಉದ್ದೇಶವಾಗಿದೆಯೆಂದು ನೀವೇ ಹೇಳಿರುತ್ತೀರಿ. ಈಗ ಪ್ರಧಾನಕ್ಕೆ ಶಾಬ್ದತ್ವವನ್ನು ನಿರಾಕರಣೆ ಮಾಡದೇ ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಸಮರ್ಥಿಸಲು ಹೊರಟರೆ, ಪಾದದ ಜೊತೆಗೆ ಸಂಗತವೂ ಆಗುವುದಿಲ್ಲ.

**सांख्याभिमतप्रधान एतत्पादीयाद्याधिकरणत्रयेण निरस्ते तर्हि जगन्निरुपादानं स्यादिति शङ्कानिरासार्थमस्य त्रयानन्तर्यस्यैव युक्तत्वेन ''जगद्वाचित्वात् वाक्यान्वयात्'' इति समन्वयपरानेकाधिकरणव्यवधानायोगाच्च ।**

ಅಷ್ಟೇ ಅಲ್ಲದೇ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೂ ಈ ಅಧಿಕರಣವು ಸಂಗತವಾಗುವುದಿಲ್ಲ. ವಾಸ್ತವಿಕವಾಗಿ ಈ ಅಧಿಕರಣವು ಮೊದಲ ಮೂರು ಅಧಿಕರಣ ಆದ ಮೇಲೆ ಬರಬೇಕಾಗಿತ್ತು. ಏಕೆಂದರೆ ಸಾಂಖ್ಯರಿಗೆ ಅಭಿಮತವಾದ ಪ್ರಧಾನವು, ಶ್ರುತಿಪ್ರತಿಪಾದ್ಯವೇ ಅಲ್ಲದ ಕಾರಣ ಜಗತ್‌ಕಾರಣವಾಗುವುದಿಲ್ಲವೆಂದು ಮೊದಲ ಮೂರು ಅಧಿಕರಣದಲ್ಲಿ ನೀವು ಸಮರ್ಥಿಸಿರುತ್ತೀರಿ. ಹೀಗೆ ಪ್ರಧಾನಕ್ಕೆ ಜಗತ್‌ಕಾರಣತ್ವವನ್ನು ನಿರಾಕರಣೆ ಮಾಡಿದ ಮೇಲೆ ಜಗತ್ತು ನಿರುಪಾದಾನಕವಾಗುತ್ತದಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಅದರ ನಿರಾಕರಣೆಗಾಗಿ 'ಪ್ರಕೃತಿಶ್ಚ' ಎಂಬ ಸೂತ್ರವು ಹೊರಡಬೇಕು. ಬ್ರಹ್ಮನು ಕೇವಲ ನಿಮಿತ್ತಕಾರಣನಷ್ಟೇ ಅಲ್ಲ, ಉಪಾದಾನ ಕಾರಣನೂ ಆಗಿರುತ್ತಾನೆ ಎಂದು ಸಮರ್ಥನೆ ಮಾಡಿರುವುದರಿಂದ ಜಗತ್ತು ನಿರುಪಾದಾನಕ-ವಾಗುವುದಿಲ್ಲ ಎಂಬ ಆಶಂಕೆಯು ಪರಿಹಾರವಾಗುತ್ತದೆ. ಆದ್ದರಿಂದ ನಾಲ್ಕನೆಯ ಅಧಿಕರಣವನ್ನಾಗಿ ಇದನ್ನು ನಿವೇಶಿಸಬೇಕಿತ್ತು. ಮಧ್ಯದಲ್ಲಿ 'ಜಗದ್ವಾಚಿತ್ವಾತ್' ಮತ್ತು 'ವಾಕ್ಯಾನ್ವಯಾತ್' ಎಂಬ ಅಧಿಕರಣದಲ್ಲಿ ಬ್ರಹ್ಮನಲ್ಲಿ ಶಬ್ದಗಳನ್ನು ಸಮನ್ವಯ ಮಾಡಿದ್ದೀರಿ. ಈ ಎರಡು ಅಧಿಕರಣಗಳಿಗೆ ಸಂಗತಿಯಿರುವುದಿಲ್ಲ. ಆದ್ದರಿಂದ ಪ್ರಕೃತ್ಯಧಿಕರಣವನ್ನು ಇಲ್ಲಿ ನಿವೇಶಿಸಲು ಯಾವುದೇ ಪ್ರಬಲವಾದ ಕಾರಣಗಳಿರುವುದಿಲ್ಲ.

**अस्य सूत्रस्य प्रकृतिशब्दसमन्वयपरत्वत्यागेन प्रकृतित्वव्युत्पादकत्वे ''आकाशस्तल्लिङ्गात्'' इत्यादेरप्याकाशत्वादिव्युत्पादनपरत्वापाताच्च ।**

ಮತ್ತು ಹಿಂದಿನ ಎರಡು ಅಧಿಕರಣಗಳಲ್ಲಿ ಶಬ್ದವನ್ನು ಸಮನ್ವಯ ಮಾಡಿದ ಮೇಲೆ ಈ ಅಧಿಕರಣದಲ್ಲಿಯೂ ಅದನ್ನೇ ಮಾಡಬೇಕು. ಇದನ್ನು ಬಿಟ್ಟು ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಸಮರ್ಥನೆ ಮಾಡಲು ಪ್ರಕೃತಿತ್ವವನ್ನು ಉಪಪಾದನೆ ಮಾಡುವುದು ಸರಿಯಲ್ಲ. ಹಾಗಾದಲ್ಲಿ 'ಆಕಾಶಸ್ತಲ್ಲಿಂಗಾತ್' ಇತ್ಯಾದಿ ಸೂತ್ರಗಳಲ್ಲಿಯೂ ಬ್ರಹ್ಮನಲ್ಲಿ 'ಆಕಾಶ' ಎಂಬ ಶಬ್ದವನ್ನು ಸಮನ್ವಯ ಮಾಡದೇ ಆಕಾಶಸ್ತತ್ವವನ್ನೇ ಸಮರ್ಥನೆ ಮಾಡಬೇಕಾದೀತು.

**एकविज्ञानेन सर्वविज्ञानादेरारम्भणाधिकरणे निरसिष्यमाणत्वाच्च ।**

ಮತ್ತು ಏಕವಿಜ್ಞಾನೇನ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ಉಪಾದಾನತ್ವ ಅಭಿಪ್ರಾಯದಲ್ಲಿ ಪರ್ಯವಸಾನ ಮಾಡುತ್ತೀರಿ. ಆದರೆ ಪ್ರಾಧಾನ್ಯ ಅಭಿಪ್ರಾಯದಿಂದ ಅಥವಾ ಸಾದೃಶ್ಯದ ಅಭಿಪ್ರಾಯದಿಂದ ಈ ಶ್ರುತಿಯು ಹೊರಟಿರುತ್ತದೆ ಎಂಬ ವಿಚಾರವನ್ನು ನಾವು ಆರಂಭಣಾಧಿಕರಣದಲ್ಲಿ ಸಮರ್ಥಿಸುತ್ತಾ ನಿಮ್ಮ ಮತವನ್ನು ಅಲ್ಲಿಯೇ ನಿರಾಕರಣೆ ಮಾಡುತ್ತೇವೆ.

**यच्चोक्तं निमित्तत्वे सत्युपादानत्वे सौत्रो हेतुरिति तन्न । उक्ताभ्यां प्रतिज्ञादृष्टान्ताभ्यामुपादानत्वस्य सिद्धावपि निमित्तत्वस्यासिद्धेः ।**

ಬ್ರಹ್ಮನು ನಿಮಿತ್ತಕಾರಣನಾಗಿರುವುದಷ್ಟೇ ಅಲ್ಲ, ಉಪಾದಾನಕಾರಣನೂ ಆಗಿದ್ದಾನೆಂಬ ವಿಷಯದಲ್ಲಿ ಸೂತ್ರದಲ್ಲಿರುವ ಹೇತುವನ್ನು ಸಮರ್ಥಿಸಿದಿರಿ. ಇದು ಸರಿಯಲ್ಲ. ನೀವೇ ಹೇಳಿದಂತೆ ಪ್ರತಿಜ್ಞಾವಾಕ್ಯ ಹಾಗೂ ದೃಷ್ಟಾಂತ ವಾಕ್ಯಗಳು ಬ್ರಹ್ಮನು ಉಪಾದಾನಕಾರಣನಾಗಿದ್ದಾನೆಂಬ ವಿಷಯದಲ್ಲಿ ಆಧಾರವಾಗುತ್ತವೆ ಹೊರತು, ನಿಮಿತ್ತಕಾರಣನಾಗಿದ್ದಾನೆಂಬ ವಿಷಯದಲ್ಲಿ ಆಧಾರವಾಗುವುದಿಲ್ಲ. ಆದ್ದರಿಂದ ಬ್ರಹ್ಮನ ನಿಮಿತ್ತತ್ವದಲ್ಲಿ ನೀವು ಯಾವುದೇ ಸಮರ್ಥನೆಯನ್ನು ಸೂತ್ರದಿಂದ ತೋರಿಸಿದಂತಾಗಲಿಲ್ಲ.

**ननु यदि ब्रह्म कर्त्रपि न स्यात्तदाऽन्यः कर्ता स्यात् । तथा च ब्रह्मज्ञानेनान्यस्य कर्तुरज्ञानात् प्रतिज्ञा न स्यादिति चेन्न ।**

ಪ್ರಶ್ನೆ - ಪ್ರತಿಜ್ಞಾವಾಕ್ಯ ಹಾಗೂ ದೃಷ್ಟಾಂತವಾಕ್ಯಗಳ ಅನುಪರೋಧದಿಂದ ಬ್ರಹ್ಮನಿಗೆ ಉಪಾದಾನಕಾರಣತ್ವವು ಸಿದ್ಧವಾಗುತ್ತದೆ. ಯುಕ್ತಿಯ ಬಲದಿಂದ ನಿಮಿತ್ತಕಾರಣತ್ವವು ಸಿದ್ಧವಾಗುತ್ತದೆ. ಒಂದುವೇಳೆ ಬ್ರಹ್ಮನು ಜಗತ್ತಿಗೆ ಕರ್ತೃವಾಗದಿದ್ದಲ್ಲಿ, ಬ್ರಹ್ಮನಿಗಿಂತ ಭಿನ್ನನಾದ ಮತ್ತೊಬ್ಬ ವ್ಯಕ್ತಿಯು ಜಗತ್ತಿಗೆ ಕರ್ತೃವೆಂದಾಗಬೇಕಾದೀತು. ಆವಾಗ ಬ್ರಹ್ಮಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆಂದು ಹೇಳಿದಾಗ ಮತ್ತೊಬ್ಬ ಕರ್ತೃವಿನ ಜ್ಞಾನವೂ ಬರುತ್ತದೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿಜ್ಞಾವಾಕ್ಯವೇ ನಿರರ್ಥಕವಾಗಬೇಕಾದೀತು. ಬ್ರಹ್ಮ ಜಗತ್ತಿಗೆ ನಿಮಿತ್ತಕಾರಣನಾಗಿದ್ದಾನೆಂದು ಒಪ್ಪಬೇಕು.

**दृष्टान्तानुसारेण प्रतिज्ञावाक्यस्य कार्यपरत्वेन ब्रह्मज्ञानेन कारणान्तराज्ञानेऽपि प्रतिज्ञोपपत्तेः ।**

ಉತ್ತರ - ಜಗತ್ತಿಗೆ ಬ್ರಹ್ಮನಿಗಿಂತ ಮತ್ತೊಬ್ಬ ಕಾರಣನಿದ್ದಮಾತ್ರಕ್ಕೆ ಬ್ರಹ್ಮಜ್ಞಾನದಿಂದ ಅವನ ಜ್ಞಾನವು ಬರಬೇಕೆಂಬ ನಿಯಮವಿಲ್ಲ. ಏಕೆಂದರೆ ಮೃತ್ಪಿಂಡದ ದೃಷ್ಟಾಂತವನ್ನು ನೋಡಿದಾಗ,

ಮೃತ್ಪಿಂಡದ ದೃಷ್ಟಾಂತದಿಂದ ಕಾರಣಜ್ಞಾನದಿಂದ ತನ್ನ ಕಾರ್ಯದ ಜ್ಞಾನವಷ್ಟೇ ತಿಳಿಯುತ್ತದೆ ಎಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಬ್ರಹ್ಮನ ಜ್ಞಾನದಿಂದ ಎಲ್ಲವೂ ತಿಳಿಯುತ್ತದೆ ಎಂದು ಹೇಳಿದಾಗ ಬ್ರಹ್ಮನ ಕಾರ್ಯಭೂತವಾದ ವಸ್ತುಗಳಷ್ಟೇ ತಿಳಿಯುತ್ತದೆಂಬ ಅಭಿಪ್ರಾಯ ಶ್ರುತಿಗೆ ಇದೆ ಹೊರತು, ಬ್ರಹ್ಮನ ಕಾರ್ಯವಲ್ಲದ ಮತ್ತೊಬ್ಬ ಜಗತ್ಕಾರಣನ ಜ್ಞಾನವು ಬರಬೇಕಾಗಿಲ್ಲ. ಆದ್ದರಿಂದ ಬ್ರಹ್ಮನಿಗಿಂತ ಭಿನ್ನನಾದ ಮತ್ತೊಬ್ಬನು ಜಗತ್ತಿಗೆ ಕಾರಣನಿದ್ದರೂ ಅವನ ಜ್ಞಾನವು ಬಾರದಿದ್ದರೂ. ಪ್ರತಿಜ್ಞೆಯು ಉಪಪನ್ನವಾಗುತ್ತದೆ.

**किञ्च अनादित्वेनाब्रह्मकार्याणां प्रागभावाविद्यादीनां ब्रह्माभेदाभावेऽप्येक-विज्ञानेन सर्वविज्ञानवदुपादानकर्त्रभेदाभावेऽपि तत्किं न स्यात् ।**

ಮತ್ತು ಉಪಾದಾನಕಾರಣನಿಗಿಂತ ಭಿನ್ನನಾದ ಮತ್ತೊಬ್ಬ ನಿಮಿತ್ತಕಾರಣನ ಜ್ಞಾನವು ಬ್ರಹ್ಮಜ್ಞಾನದಿಂದಲೇ ಬರಬಹುದು. ಏಕೆಂದರೆ ಪ್ರಾಗಭಾವ, ಅವಿದ್ಯೆ ಮೊದಲಾದವುಗಳನ್ನು ನೀವು ಅನಾದಿಪದಾರ್ಥವಾದ್ದರಿಂದ ಬ್ರಹ್ಮನ ಕಾರ್ಯವಲ್ಲವೆಂದು ಹೇಳುತ್ತೀರಿ. ಇಂತಹ ಅನಾದಿ-ಪದಾರ್ಥಗಳು ಬ್ರಹ್ಮನಿಗಿಂತ ಭಿನ್ನಗಳೂ ಆಗಿಲ್ಲ. ಆದರೂ ಕೂಡ ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆಂದು ಹೇಳಿದಾಗ ಇಂತಹ ಪ್ರಾಗಭಾವಾದಿಗಳ ಜ್ಞಾನವು ಆಗುತ್ತದೆ ಎಂದು ಒಪ್ಪುತ್ತೀರಿ. ಅದರಂತೆ ಉಪಾದಾನಕಾರಣನಿಗಿಂತ ಭಿನ್ನನಾದ ಮತ್ತೊಬ್ಬ ನಿಮಿತ್ತಕಾರಣನ ಜ್ಞಾನವು ಏಕೆ ಬರಬಾರದು ?

**न चाविद्यादिकं प्रत्यधिष्ठानत्वरूपमुपादानत्वमस्तीति वाच्यम् ।**

ಪ್ರಶ್ನೆ - ಅವಿದ್ಯೆಗೂ ಕೂಡ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ. ಅವಿದ್ಯೆ ಹಾಗೂ ಪ್ರಾಗಭಾವಗಳು ಅನಾದಿಯಾಗಿದ್ದರೂ, ಇವುಗಳ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿರುವುದರಿಂದ ವಿವರ್ತೋಪಾದಾನತ್ವವು ಬ್ರಹ್ಮನಲ್ಲಿ ಬರುತ್ತದೆ. ಆದ್ದರಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವು ಬರುತ್ತದೆಂದು ಹೇಳಿದಾಗ ಅವಿದ್ಯೆ ಹಾಗೂ ಪ್ರಾಗಭಾವಗಳ ಜ್ಞಾನವೂ ಕೂಡ ಬರುತ್ತದೆಂದು ಹೇಳಬಹುದಲ್ಲವೇ?

**एवं हि कल्पितस्य कर्तुरपि कार्यान्तर्गतत्वात्कार्यमकर्तृकमेव स्यात् । न त्वभिन्नकर्त्रुपादानकम् ।**

ಉತ್ತರ - ಹಾಗಾದರೆ ಕಲ್ಪಿತನಾದ ಮತ್ತೊಬ್ಬ ಕರ್ತೃವೂ ಕೂಡ ಕಾರ್ಯಕೋಟಿಯಲ್ಲಿಯೇ ಸೇರುತ್ತಾನೆ. ಏಕೆಂದರೆ ಯಾವುದು ಕಲ್ಪಿತವೋ, ಅದೆಲ್ಲವೂ ಬ್ರಹ್ಮನ ಕಾರ್ಯವೆಂದು ನೀವೇ ಹೇಳಿದ್ದೀರಿ. ಆದ್ದರಿಂದ ಜಗತ್ತಿಗೆ ಯಾರೊಬ್ಬನೂ ಕರ್ತೃವೇ ಇಲ್ಲದಂತಾಗುತ್ತದೆ ನಿಮಿತ್ತಕಾರಣನಾದ ಕರ್ತೃವೇ ಉಪಾದಾನಕಾರಣನಾಗುತ್ತಾನೆಂದು ಸಮರ್ಥಿಸಿದಂತಾಗಲಿಲ್ಲ.

**नच प्रागभावादिवत्कर्तुरुपादानेन धर्मिसत्तासमानसत्ताकभेदसद्भावेऽपि पारमार्थिकभेदाभावमात्रेणाभिन्ननिमित्तकता ।**

ಪ್ರಶ್ನೆ - ಜಗತ್ತಿಗೆ ನಿರ್ಗುಣಬ್ರಹ್ಮನು ಉಪಾದಾನಕಾರಣನಾಗಿದ್ದಾನೆ. ಸಗುಣಬ್ರಹ್ಮನು ನಿಮಿತ್ತಕಾರಣನಾಗಿದ್ದಾನೆ. ಸಗುಣಬ್ರಹ್ಮನಿಂದ ನಿರ್ಗುಣಬ್ರಹ್ಮನಿಗೆ ಧರ್ಮಿಸತ್ತಾಸಮಾನಸತ್ತಾಕವಾದ ವ್ಯಾವಹಾರಿಕಭೇದವು ಇರಬಹುದು. ಆದರೆ ಪಾರಮಾರ್ಥಿಕ ಭೇದವಿಲ್ಲದ ಕಾರಣ ಜಗತ್ತಿಗೆ ನಿಮಿತ್ತಕಾರಣ ಹಾಗೂ ಉಪಾದಾನಕಾರಣನು ಒಬ್ಬನೇ ಆಗುತ್ತಾನೆಂದು ಹೇಳಬಹುದಲ್ಲವೇ?

**तदा हि गगनादिवद्घटादिकमप्यभिन्ननिमित्तोपादानकं स्यात् । मृत्कुलालयोरपि पारमार्थिकभेदाभावात् ।**

ಉತ್ತರ - ಹಾಗಾದರೆ ಜಗತ್ತಿನಲ್ಲಿ ಗಗನಾದಿಗಳಂತೆ ಘಟವೂ ಕೂಡ ಒಂದೇ ಉಪಾದಾನಕಾರಣ ನಿಮಿತ್ತಕಾರಣವನ್ನು ಹೊಂದಿದಂತಾಗುತ್ತದೆ. ಉಪಾದಾನಕಾರಣ ಮೃತ್ಪಿಂಡವಾಗಿದೆ. ಕುಲಾಲನು ನಿಮಿತ್ತಕಾರಣನಾಗಿದ್ದಾನೆಂದು ಭೇದವಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಮೃತ್ಪಿಂಡಕ್ಕೂ ಕುಲಾಲನಿಗೂ ಧರ್ಮಿಸತ್ತಾಸಮಾನಸತ್ತಾಕವಾದ ವ್ಯಾವಹಾರಿಕಭೇದವಿರಬಹುದು. ಆದರೆ ಪಾರಮಾರ್ಥಿಕಭೇದವು ಇರುವುದಿಲ್ಲ. ಜಗತ್ತಿನಲ್ಲಿ ಎಲ್ಲಿಯೂ ಕೂಡ ನೀವು ಪಾರಮಾರ್ಥಿಕ-ಭೇದವನ್ನು ಒಪ್ಪಿಲ್ಲ. ಆದ್ದರಿಂದ ಘಟಾದಿಗಳೂ ಕೂಡ ಅಭಿನ್ನನಿಮಿತ್ತೋಪಾದಾನಕವೇ ಆಗುತ್ತವೆ. ಹೀಗಿರುವಾಗ ನೀವು ಗಗನಾದಿಗಳಲ್ಲಿ ಮಾತ್ರ ನಿಮಿತ್ತಕಾರಣ ಉಪಾದಾನ ಕಾರಣ ಒಂದೇ ಆಗಿರುತ್ತದೆ. ಘಟಾದಿಗಳಲ್ಲಿ ಆಗಿರುವುದಿಲ್ಲವೆಂದು ಆಕ್ಷೇಪ ಮಾಡಿಕೊಂಡು ಈ ಅಧಿಕರಣವನ್ನು ಆರಂಭ ಮಾಡಿದ್ದು ತಪ್ಪಾಗುತ್ತದೆ.

**तथा च घटादौ कर्त्रुपादानभेदं स्वीकृत्य गगनादौ तयोरभेदाय प्राक् सृष्टेरद्वितीयमित्यादिश्रुत्या ब्रह्मान्यहेत्वभावव्युत्पादनं व्यर्थं स्यात् ।**

ಆದ್ದರಿಂದ ಘಟಾದಿಗಳಲ್ಲಿ ಕರ್ತೃ ಹಾಗೂ ಉಪಾದಾನಗಳಿಗೆ ಭೇದವಿದೆಯೆಂದು ಸ್ವೀಕರಿಸಿ, ಗಗನಾದಿಗಳಲ್ಲಿ ಕರ್ತೃ ಹಾಗೂ ಉಪಾದಾನಗಳಿಗೆ ಭೇದವಿಲ್ಲವೆಂದು ಸಮರ್ಥಿಸಲು ಸೃಷ್ಟಿಯ ಮೊದಲು 'ಸದೇವ ಸೌಮ್ಯ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಯ ಬಲದಿಂದ ಸತ್‌ಪದಾರ್ಥ ಮಾತ್ರ ಇತ್ತು ಎಂದು ಸಮರ್ಥಿಸುತ್ತಾ ಬ್ರಹ್ಮನಿಗಿಂತ ಭಿನ್ನವಾದ ಬೇರೆ ಯಾವುದೇ ಕಾರಣವು ಇರಲಿಲ್ಲವೆಂದು ಕಷ್ಟಪಟ್ಟು ಸಮರ್ಥಿಸುವುದು ವ್ಯರ್ಥವಲ್ಲವೇ? ಏಕೆಂದರೆ ಗಗನಾದಿಗಳಲ್ಲಿಯೂ ಕರ್ತೃ ಹಾಗೂ ಉಪಾದಾನಗಳಿಗೆ ವ್ಯಾವಹಾರಿಕ ಭೇದವು ಇದ್ದೇ ಇರುತ್ತದೆ. ಘಟಾದಿಗಳ ವಿಷಯದಲ್ಲಿಯೂ ಕರ್ತೃ ಹಾಗೂ ಉಪಾದಾನಗಳಿಗೆ ವ್ಯಾವಹಾರಿಕ ಭೇದವು ಇದ್ದೇ ಇರುತ್ತದೆ.

ಗಗನಾದಿಗಳ ವಿಷಯದಲ್ಲಿ ಕರ್ತೃ ಹಾಗೂ ಉಪಾದಾನಗಳಿಗೆ ಪಾರಮಾರ್ಥಿಕ ಭೇದವಿಲ್ಲವೆಂದು ಹೇಳಿದರೆ, ಇಲ್ಲಿಯೂ ಘಟಾದಿಗಳ ವಿಷಯದಲ್ಲಿ ಕರ್ತೃ ಹಾಗೂ ಉಪಾದಾನಗಳಿಗೆ ಪಾರಮಾರ್ಥಿಕ ಭೇದವು ಇರುವುದಿಲ್ಲ. ಆದ್ದರಿಂದ ಜಗತ್ತಿನ ಸೃಷ್ಟಿಗಿಂತ ಪೂರ್ವದಲ್ಲಿ ಬ್ರಹ್ಮನೆಂಬ ಉಪಾದಾನಕಾರಣವು ಇರಬಹುದು. ಕಲ್ಪಿತನಾದ ಸಗುಣಬ್ರಹ್ಮ ಎಂಬ ಕರ್ತೃವೂ ಕೂಡ ಇರಬಹುದು. ಬ್ರಹ್ಮಾನ್ಯಹೇತು ಯಾವುದೂ ಇರುವುದಿಲ್ಲವೆಂಬ ವ್ಯುತ್ಪಾದನೆಯು ವ್ಯರ್ಥವಾಗಿದೆ.

**किञ्च कर्तृकारकस्येव कालादिरूपाणामधिकरणादिकारकाणामपि ब्रह्माभिन्नत्व एकविज्ञानेन सर्वविज्ञानायोगात् ''सदेव सोम्येदमग्र आसीत्'' इति कार्योत्पत्तेः प्राक् ब्रह्म वच्छ्रुतकालाद्यपि कर्तृवत् ब्रह्माभिन्नं स्यात् ।**

ಮತ್ತು ಕರ್ತೃಕಾರಕವನ್ನು ಒಪ್ಪುವುದು ಹೇಗೆ ಅನಿವಾರ್ಯವೋ, ಅದರಂತೆ ಕಾಲ ಮೊದಲಾದ ಅಧಿಕರಣಕಾರಕಗಳನ್ನು ಒಪ್ಪುವುದೂ ಅನಿವಾರ್ಯ. ಕಾಲಾದಿ ಅಧಿಕರಣಕಾರಕಗಳನ್ನು ನೀವು ಬ್ರಹ್ಮನಿಗಿಂತ ಭಿನ್ನವೆಂದು ಹೇಳಿದರೆ ಏಕವಿಜ್ಞಾನದಿಂದ ಸರ್ವವಿಜ್ಞಾನ ಪ್ರತಿಜ್ಞೆಯು ಅಯುಕ್ತವಾಗುತ್ತದೆ. ಆದ್ದರಿಂದ 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಶ್ರುತಿ ಹೇಳುವಂತೆ ಕಾರ್ಯವು ಹುಟ್ಟುವ ಮೊದಲು ಬ್ರಹ್ಮನು ಹೇಗೆ ಇದ್ದಾನೋ, ಅದರಂತೆ ಕರ್ತೃವಾದ ಶಬಲಬ್ರಹ್ಮನೂ ಇರುತ್ತಾನೆ. ಅದರಂತೆ ದೇಶ, ಕಾಲ ಮೊದಲಾದ ಅಧಿಕರಣಕಾರಕಗಳೂ ಕೂಡ ಸೃಷ್ಟಿಯ ಮೊದಲು ಇರುತ್ತವೆಂದು ಒಪ್ಪಬೇಕು. ಅವುಗಳೆಲ್ಲವೂ ಬ್ರಹ್ಮನಿಗಿಂತ ಅಭಿನ್ನವಾಗಿವೆ ಎಂದೂ ಕೂಡ ಒಪ್ಪಬೇಕಾಗುತ್ತದೆ. ಇದನ್ನು ಬಿಟ್ಟು ಕೇವಲ ಕರ್ತೃವಿನಿಂದ ಅಭೇದ ಹೇಳಲು ಈ ಅಧಿಕರಣ ಹೊರಟಿದೆ ಎಂದು ನೀವು ಹೇಳುವುದು ಸರಿಯಲ್ಲ.

**प्रकाशः —**

**यत्तूक्तमुभाभ्यामिति ।।** ब्रह्म किं निमित्तमात्रमुतोपादानमपीति संशये ''स ईक्षांचक्रे स प्राणमसृजत'' इतीक्षापूर्वककर्तृत्वात्तस्येश्वरत्वप्रसिद्ध्या सर्वलोकनियन्तृत्वान्निर्गन्धरसत्वादिना ब्रह्मणः पृथिव्यादिजगतश्च विसदृशत्वाद्यथाक्रमं कुलालराजाभावा इव घटादिकं प्रति ब्रह्म नोपादानम् । अपि तु निमित्तमेव । ''यतो वा'' इत्यादिश्रुतयस्तु निमित्तत्वमात्रपराः । एकविज्ञानेन सर्वविज्ञानं च प्राधान्याद्यभिप्रायेण गौणम् । तदुक्तं भामत्यां

ईक्षापूर्वककर्तृत्वं प्रभुत्वमसरूपता ।
निमित्तकारणेष्वेव नोपादानेषु कर्हिचित् ।। इति ।

ಪ್ರಕೃತ್ಯಧಿಕರಣ (೧-೪-೬)

ವಿವರಣೆ - ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಅಧಿಕರಣಶರೀರವನ್ನು 'ಯತ್ತೂಕ್ತಮುಭಾಭ್ಯಾಮ್' ಇತ್ಯಾದಿ ಗ್ರಂಥದಿಂದ ಒಟ್ಟಿಗೆ ಅನುವಾದಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

ಅದ್ವೈತಿಗಳ ಅಧಿಕರಣಶರೀರವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಜಗತ್ತಿಗೆ ಬ್ರಹ್ಮನು ಕೇವಲ ನಿಮಿತ್ತಕಾರಣನಾಗಿದ್ದಾನೋ, ಅಥವಾ ನಿಮಿತ್ತಕಾರಣನಷ್ಟೇ ಅಲ್ಲದೇ, ಉಪಾದಾನಕಾರಣನೂ ಆಗಿದ್ದಾನೋ ಎಂಬುದು ಸಂದೇಹ.

ಮೂರು ಹೇತುಗಳಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಲ್ಲ ಎಂದು ತಿಳಿಯುತ್ತದೆ. 'ಸ ಇಕ್ಷಾಂಚಕ್ರೇ ಸ ಪ್ರಾಣಮಸೃಜತ' ಎಂಬ ಶ್ರುತಿಯು ಬುದ್ಧಿಪೂರ್ವಕವಾದ ಕರ್ತೃತ್ವವನ್ನು ಈಶ್ವರನಿಗೆ ಹೇಳುತ್ತಿದೆ. ಆದ್ದರಿಂದ ಬ್ರಹ್ಮನು ಉಪಾದಾನಕಾರಣನಾಗಲು ಸಾಧ್ಯವಿಲ್ಲ. ಮೊದಲನೆಯ ಅನುಮಾನವನ್ನು ಹೀಗೆ ತಿಳಿಯಬೇಕು. 'ಬ್ರಹ್ಮ ನ ಉಪಾದಾನಂ ಈಕ್ಷಾಪೂರ್ವಕಕರ್ತೃತ್ವಾತ್ ಕುಲಾಲವತ್' ಬುದ್ಧಿಪೂರ್ವಕವಾದ ಕರ್ತೃತ್ವವು ಕುಲಾಲನಲ್ಲಿ ಇರುತ್ತದೆ. ಆದ್ದರಿಂದ ಅವನು ಘಟಕ್ಕೆ ಉಪಾದಾನಕಾರಣನಾಗುವುದಿಲ್ಲ. ಹೊರತು ನಿಮಿತ್ತಕಾರಣನೇ ಆಗುತ್ತಾನೆ. ಅದರಂತೆ ಬ್ರಹ್ಮನೂ ಕೂಡ ಜಗತ್ತನ್ನು ಬುದ್ಧಿಪೂರ್ವಕವಾಗಿ ಸೃಷ್ಟಿ ಮಾಡಿದ್ದಾನೆ. ಇದು 'ಸ ಇಕ್ಷಾಂಚಕ್ರೇ' ಎಂಬ ಶ್ರುತಿಯ ಬಲದಿಂದ ಸಿದ್ಧವಾಗಿದೆ. ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗುವುದಿಲ್ಲ.

ಇದರಂತೆ ಸಕಲಕ್ಕೂ ನಿಯಾಮಕನಾದ ಬ್ರಹ್ಮನು ಉಪಾದಾನಕಾರಣನಾಗುವುದಿಲ್ಲ ಎಂದು ಮತ್ತೊಂದು ಅನುಮಾನದಿಂದ ಸಾಧನೆ ಮಾಡಬಹುದು. ಎರಡನೆಯ ಅನುಮಾನ ಹೀಗಿದೆ - 'ಬ್ರಹ್ಮ ನ ಉಪಾದಾನಂ ಸರ್ವನಿಯಂತೃತ್ವಾತ್ ರಾಜವತ್' ರಾಜನು ಸಮಸ್ತರಾಜ್ಯಕ್ಕೆ ನಿಯಾಮಕನಾಗಿರುತ್ತಾನೆ. ಅಂತಹ ರಾಜನು ಆ ದೇಶಕ್ಕೆ ಉಪಾದಾನಕಾರಣನಾಗಲು ಸಾಧ್ಯವಿಲ್ಲ. ಅದರಂತೆ ಬ್ರಹ್ಮನು ಸಕಲಕ್ಕೂ ನಿಯಾಮಕನಾಗಿರುವುದರಿಂದ ಉಪಾದಾನಕಾರಣನಾಗಲಾರ.

ಇದೇ ರೀತಿಯಾಗಿ ಜಗತ್ತಿಗಿಂತ ಅತ್ಯಂತ ವಿಲಕ್ಷಣನಾದ ಕಾರಣದಿಂದಲೂ ಬ್ರಹ್ಮನು ಜಗತ್ತಿಗೆ ಉಪಾದಾನನಾಗುವುದಿಲ್ಲ ಎಂಬುದು ಮೂರನೆಯ ಅನುಮಾನದಿಂದ ಸಿದ್ಧವಾಗುತ್ತದೆ. 'ಬ್ರಹ್ಮ ನ ಜಗದುಪಾದಾನಂ ವಿಸದೃಶತ್ವಾತ್ । ಯತ್ ಯದಪೇಕ್ಷ್ಯಾ ವಿಸದೃಶಂ ತತ್ ನ ತಸ್ಯಾ ಉಪಾದಾನಮ್ ಯಥಾ ಪ್ರಾಗಭಾವಃ' ಘಟಪ್ರಾಗಭಾವವು ಘಟಕ್ಕಿಂತ ವಿಲಕ್ಷಣವಾಗಿದೆ. ಆದ್ದರಿಂದ ಅದು ಘಟಕ್ಕೆ ಉಪಾದಾನಕಾರಣವಾಗುವುದಿಲ್ಲ. ಹೊರತು, ನಿಮಿತ್ತಕಾರಣವಾಗುತ್ತದೆ. ಅದರಂತೆ ಬ್ರಹ್ಮನು ಜಗತ್ತಿಗಿಂತ ವಿಲಕ್ಷಣವಾದ ಧರ್ಮಗಳನ್ನು ಹೊಂದಿರುತ್ತಾನೆ. ಜಗತ್ತಿನಲ್ಲಿ ರೂಪ, ರಸ, ಗಂಧ ಮೊದಲಾದ ಗುಣಗಳಿವೆ. ಆದರೆ ಬ್ರಹ್ಮನಲ್ಲಿ ಗಂಧ, ರಸ ಮೊದಲಾದ ಯಾವುದೇ ಗುಣಗಳಿಲ್ಲದ ಕಾರಣ ಜಗತ್ತಿಗಿಂತ ವಿಸದೃಶನಾಗಿದ್ದಾನೆ. ಆದ್ದರಿಂದ ಉಪಾದಾನಕಾರಣನೂ ಕೂಡ ಆಗುವುದಿಲ್ಲ. ಹೊರತು, ನಿಮಿತ್ತಕಾರಣನೇ ಆಗುತ್ತಾನೆ.

'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಿಂದ ಪರಮಾತ್ಮನೇ ಜಗತ್ತಿಗೆ ಉಪಾದಾನಕಾರಣನೆಂದು ತಿಳಿಯುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಇಂತಹ ಶ್ರುತಿಗಳಿಗೆಲ್ಲಾ ನಿಮಿತ್ತತ್ವಪರವಾಗಿಯೇ ಅರ್ಥೈಸಬೇಕು. ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞಾವಾಕ್ಯವನ್ನೂ ಕೂಡ ಬ್ರಹ್ಮನು ಪ್ರಧಾನನಾಗಿದ್ದಾನೆಂಬರ್ಥದಲ್ಲಿಯೇ ಗೌಣ ಮಾಡಬೇಕು. ಆದ್ದರಿಂದ ಭಾಮತಿಯ ವಾಕ್ಯ ಹೀಗಿದೆ-

ಈಕ್ಷಾಪೂರ್ವಕಕರ್ತೃತ್ವಂ ಪ್ರಭುತ್ವಮಸರೂಪತಾ ।
ನಿಮಿತ್ತಕಾರಣೇಷ್ವೇವ ನೋಪಾದಾನೇಷು ಕರ್ಹಿಚಿತ್ ॥

ಬುದ್ಧಿಪೂರ್ವಕವಾದ ಕರ್ತೃತ್ವ, ನಿಯಾಮಕತ್ವ, ವೈಲಕ್ಷಣ್ಯ ಈ ಮೂರು ಹೇತುಗಳು ನಿಮಿತ್ತಕಾರಣದಲ್ಲಷ್ಟೇ ಲೋಕದಲ್ಲಿ ಕಂಡಿದೆ. ಉಪಾದಾನಕಾರಣದಲ್ಲಿ ಎಲ್ಲಿಯೂ ಯಾವಾಗಲೂ ಕಂಡಿರುವುದಿಲ್ಲ.

ಇಷ್ಟು ಅದ್ವೈತಿಗಳ ಪೂರ್ವಪಕ್ಷ.

**प्रकाशः –** केषाञ्चित्तु परिणामित्वापरिणामित्वयोश्चेतनत्वाचेतनत्वयोः प्रेर्यत्व-प्रेरकत्वयोश्चैकस्मिन् व्याहतत्वादयोग्यं निमित्तोपादानयोरैक्यमिति ब्रह्म निमित्तमेवेति प्राप्ते तन्निरासकतया मतद्वयेऽपि सूत्रार्थमनुवदति – नेति ।।

ರಾಮಾನುಜರ ಪ್ರಕಾರ ಅಧಿಕರಣಶರೀರ ಹೀಗಿದೆ - ಪರಿಣಾಮಿತ್ವ ಹಾಗೂ ಅಪರಿಣಾಮಿತ್ವಗಳು ಒಂದೇ ಪದಾರ್ಥದಲ್ಲಿ ಬರುವುದಿಲ್ಲ. ಇದರಂತೆ ಚೇತನತ - ಅಚೇತನತ್ವಗಳು, ಪ್ರೇರ್ಯತ್ವ- ಪ್ರೇರಕತ್ವಗಳು ಒಂದೇ ಪದಾರ್ಥದಲ್ಲಿ ಹೇಳುವುದು ವ್ಯಾಹತವಾಗುತ್ತದೆ. ಒಬ್ಬನೇ ಬ್ರಹ್ಮನು ನಿಮಿತ್ತಕಾರಣನೂ ಆಗುತ್ತಾನೆ. ಉಪಾದಾನಕಾರಣನೂ ಆಗುತ್ತಾನೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನು ಜಗತ್ತಿಗೆ ಕೇವಲ ನಿಮಿತ್ತಕಾರಣನಾಗಿದ್ದಾನೆಂದು ಪೂರ್ವಪಕ್ಷ ಮಾಡಿದ್ದಾರೆ.

ಇವರಿಬ್ಬರ ಮತವನ್ನು ನಿರಾಕರಣೆ ಮಾಡುತ್ತಾ ಅವರ ಮತದ ಪ್ರಕಾರ ವ್ಯಾಖ್ಯಾನಿಸಿರುವ ಸೂತ್ರಾರ್ಥವನ್ನು ಅನುವಾದ ಮಾಡಲು 'ನ ಕೇವಲಂ' ಎಂಬ ವಾಕ್ಯವು ಹೊರಟಿದೆ.

**प्रकाशः – एवं हीति** ।। उपादानत्वे हीत्यर्थः । एकविज्ञानेन सर्वविज्ञानं चोपादानभाव एव युज्यते । तयोरैक्यात् ।

'ಏವಂ ಹಿ' ಎಂದರೆ ಉಪಾದಾನಕಾರಣವೆಂದು ಹೇಳಿದರೆ ಎಂದರ್ಥ. ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆಂದು ಒಪ್ಪಿದರೆ ಮಾತ್ರ ಏಕವಿಜ್ಞಾನದಿಂದ ಸರ್ವವು ವಿಜ್ಞಾತವಾಗುತ್ತದೆಂಬ ಪ್ರತಿಜ್ಞಾವಾಕ್ಯವು ಯುಕ್ತವಾಗುತ್ತದೆ. ಏಕೆಂದರೆ ಉಪಾದಾನ ಹಾಗೂ ಉಪಾದೇಯಗಳು ಅಭಿನ್ನವಾಗಿರುವುದರಿಂದ.

**प्रकाशः –** उपादानोपादेयदृष्टान्तमहिम्ना चोपादानमिति गम्यते । अन्यथा तत् द्वयमुपरुध्येत ।

ಉಪಾದಾನ ಹಾಗೂ ಉಪಾದೇಯಗಳ ದೃಷ್ಟಾಂತವನ್ನು 'ಯಥಾ ಸೋಮ್ಯೈಕೇನ' ಎಂಬ ವಾಕ್ಯದಿಂದ ಶ್ರುತಿಯು ಹೇಳುತ್ತಿದೆ. ಹೀಗೆ ಉಪಾದಾನ, ಉಪಾದೇಯಗಳ ದೃಷ್ಟಾಂತದ ಮಹಿಮೆಯಿಂದಲೇ ಬ್ರಹ್ಮನಲ್ಲಿ ಹಾಗೂ ಜಗತ್ತಿನಲ್ಲಿ ಉಪಾದಾನ, ಉಪಾದೇಯಭಾವವು ಇರುತ್ತದೆಂದು ತಿಳಿಯಬೇಕು. ಹೀಗೊಪ್ಪದಿದ್ದರೆ ಪ್ರತಿಜ್ಞಾದೃಷ್ಟಾಂತವಾಕ್ಯಗಳೆರಡೂ ಪರಸ್ಪರ ವಿರುದ್ಧವಾಗುತ್ತವೆ.

**प्रकाशः** – ''न मुख्ये सम्भवत्यर्थे जघन्या वृत्तिरिष्यत'' इति भामत्युक्तरीत्या मुख्यार्थतयैव प्रतिज्ञाया नेयत्वादित्यर्थः ।

'ನ ಮುಖ್ಯೇ ಸಂಭವತ್ಯರ್ಥೇ ಜಘನ್ಯಾ ವೃತ್ತಿರಿಷ್ಯತೇ' ಮುಖ್ಯವಾದ ಅರ್ಥವನ್ನೇ ಸ್ವೀಕರಿಸಲು ಬರುವಾಗ ಗೌಣವಾದ ಅರ್ಥವನ್ನು ಸ್ವೀಕರಿಸಬಾರದು ಎಂಬ ಭಾಮತಿಯ ವಚನದಂತೆ ಪ್ರತಿಜ್ಞಾವಾಕ್ಯಕ್ಕೆ ಮುಖ್ಯವಾದ ಅರ್ಥವನ್ನೇ ಸ್ವೀಕರಿಸಬೇಕು.

**प्रकाशः** – इयांस्तु भेदः । परमत उपादानत्वं नाम विवर्ताधिष्ठानत्वम् । यथोक्तं भामत्यां परिणामादित्यत्र ''इयं चोपादानपरिणामादिभाषा न विकाराभिप्राया । अपि तु यथा सर्पस्योपादानं रज्जुरेवं ब्रह्म जगदुपादानं द्रष्टव्यम्'' इति ।

ರಾಮಾನುಜರಿಗೂ ಅದ್ವೈತಿಗಳಿಗೂ ಇಷ್ಟು ಮಾತ್ರ ವ್ಯತ್ಯಾಸ. ಅದ್ವೈತಿಗಳ ಮತದಲ್ಲಿ ಬ್ರಹ್ಮನು ಉಪಾದಾನನಾಗಿದ್ದಾನೆಂದರೆ ವಿವರ್ತಾಧಿಷ್ಠಾನನಾಗಿದ್ದಾನೆಂದರ್ಥ. ಏಕೆಂದರೆ ಭಾಮತಿಯಲ್ಲಿ 'ಪರಿಣಾಮಾತ್' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ 'ಇಯಂ ಚೋಪಾದಾನಪರಿಣಾಮಾದಿಭಾಷಾ ನ ವಿಕಾರಾಭಿಪ್ರಾಯಾ । ಅಪಿ ತು ಯಥಾ ಸರ್ಪಸ್ಯೋಪಾದಾನಂ ರಜ್ಜುರೇವಂ ಬ್ರಹ್ಮ ಜಗದುಪಾದಾನಂ ದ್ರಷ್ಟವ್ಯಮ್' ಯಾವರೀತಿಯಾಗಿ ವಿವರ್ತಾಧಿಷ್ಠಾನವಾದ್ದರಿಂದ ಉಪಾದಾನವಾಗಿದೆಯೋ, ಅದರಂತೆ ಬ್ರಹ್ಮನೂ ಕೂಡ ಜಗತ್ತಿಗೆ ವಿವರ್ತಾಧಿಷ್ಠಾನರೂಪವಾದ ಉಪಾದಾನಕಾರಣನಾಗಿದ್ದಾನೆ. ಹೊರತು, ಜಗತ್ತಾಗಿ ವಿಕಾರ ಹೊಂದಿದ್ದಾನೆಂದರ್ಥವಲ್ಲ.

**प्रकाशः** – केषाञ्चित्तूपादानशरीरकतया । यथोक्तं तद्भाष्ये ''सर्वचिदचिद्वस्तुशरीरतया सर्वदा सर्वात्मभूतं ब्रह्म कदाचिद्विभक्तनामरूपं कदाचिदविभक्तनामरूपम्'' इत्यादि।

ರಾಮಾನುಜರ ವಿವರ್ತಾಧಿಷ್ಠಾನರೂಪವಾದ ಉಪಾದಾನಕಾರಣವನ್ನು ಒಪ್ಪುವುದಿಲ್ಲ ಹೊರತಾಗಿ, ಬ್ರಹ್ಮನ ಯಾವ ಶರೀರವಿದೆಯೋ, ಅದು ಜಗತ್ತಿಗೆ ಉಪಾದಾನಕಾರಣವೆಂದು ಹೇಳುತ್ತಾರೆ. ಅವರ ಭಾಷ್ಯದಲ್ಲಿ 'ಸರ್ವಚಿದಚಿದ್ವಸ್ತುಶರೀರತಯಾ ಸರ್ವದಾ ಸರ್ವಾತ್ಮಭೂತಂ ಬ್ರಹ್ಮ ಕದಾಚಿತ್ ಕದಾಚಿದವಿಭಕ್ತನಾಮರೂಪಮ್' 'ಬ್ರಹ್ಮನು ಚಿದಚಿತ್‌ವಸ್ತುವನ್ನೇ ಶರೀರವನ್ನಾಗಿ ಪಡೆದಿರುತ್ತಾನೆ. ಹೀಗೆ ಸರ್ವಾತ್ಮಕನಾದ ಬ್ರಹ್ಮನು ಕೆಲವೊಮ್ಮೆ ನಾಮ ಹಾಗೂ ರೂಪಗಳಿಂದ ವಿಭಕ್ತನಾಗುತ್ತಾನೆ ಅಂದರೆ ಸೃಷ್ಟಿಯನ್ನು ಮಾಡುತ್ತಾನೆ ಎಂದರ್ಥ. ಕೆಲವೊಮ್ಮೆ ಅವಿಭಕ್ತವಾದ ನಾಮ ಹಾಗೂ ರೂಪಗಳನ್ನು ಹೊಂದಿರುತ್ತಾನೆ. ಪ್ರಳಯಕಾಲದಲ್ಲಿರುತ್ತಾನೆ ಎಂದರ್ಥ'.

**प्रकाशः** – ''अत्र ब्रह्मणः परिणामित्वोक्तिरसङ्गतैव भवति'' इत्यादिटीकां विवृण्वन्नाह – **समन्वयस्येति** ।। क्रमेणान्वयः । पादे प्रासङ्गिकसङ्गतिमाशङ्क्य निराह – **सांख्येति** ।। **जगदिति** ।। परीत्यैतत् ।

ಪರಿಪೂರ್ಣಚಂದ್ರಿಕಾ

"ಅತ್ರ ಬ್ರಹ್ಮಣಃ ಪರಿಣಾಮಿತ್ವೋಕ್ತಿರಸಂಗತೈವ ಭವತಿ" ಇಲ್ಲಿ ಬ್ರಹ್ಮನಿಗೆ ಪರಿಣಾಮಿತ್ವವನ್ನು ಹೇಳಿದ್ದು ಅಸಂಗತವೇ ಆಗುತ್ತದೆ. ಇತ್ಯಾದಿ ಟೀಕೆಯನ್ನು ವಿವರಿಸಲು 'ಸಮನ್ವಯಸ್ಯ' ಎಂಬ ವಾಕ್ಯವು ಹೊರಟಿದೆ. ಕ್ರಮವಾಗಿ ಅನ್ವಯ ತಿಳಿಯಬೇಕು. ಪಾದದಲ್ಲಿ ಪ್ರಾಸಂಗಿಕ ಸಂಗತಿಯು ಇರುತ್ತದಲ್ಲವೇ? ಎಂದು ಆಶಂಕಿಸಿ 'ಸಾಂಖ್ಯೇ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. 'ಜಗತ್' ಇತ್ಯಾದಿ ವಾಕ್ಯವನ್ನು ಪರರೀತ್ಯಾ ಹೇಳಿದ್ದಾರೆ. 'ಜಗದ್ವಾಚಿತ್ವಾತ್' 'ವಾಕ್ಯಾನ್ವಯಾತ್' ಎಂಬ ಎರಡು ಸೂತ್ರಗಳೂ ಕೂಡ ನಮ್ಮ ಪ್ರಕಾರ ಪ್ರಧಾನ ಸೂತ್ರಗಳಲ್ಲ. ಆದ್ದರಿಂದ ಗ್ರಂಥಕಾರರು ಪರರೀತ್ಯ ಅವೆರಡನ್ನು ಪ್ರಧಾನಸೂತ್ರಗಳೆಂದು ವಿವಕ್ಷಿಸಿದ್ದಾರೆಂದು ತಿಳಿಯಬೇಕು.

**ಪ್ರಕಾಶಃ** – नन्वक्तं कल्पतरौ ''निर्णीततात्पर्यैर्वेदान्तैर्निमित्तत्वमात्रसाधकानुमानस्य कालातीतत्वमस्तीत्यत्र समन्वयावसानेऽलिखदिदमिति'' इति चेन्न ।

ಪ್ರಕೃತ್ಯಧಿಕರಣವು 'ಜಗದ್ವಾಚಿತ್ವಾತ್' ಮತ್ತು 'ವಾಕ್ಯಾನ್ವಯಾತ್' ಎಂಬ ಅಧಿಕರಣಗಳ ಅನಂತರವೇ ಸಂಗತವಾಗಲು ಕಲ್ಪತರು ಹೀಗೆ ಕಾರಣವನ್ನು ಹೇಳಿದೆ -

'ನಿರ್ಣೀತತಾತ್ಪರ್ಯೈರ್ವೇದಾಂತ್ಯೈರ್ನಿಮಿತ್ತತ್ವಮಾತ್ರಸಾಧಕಾನುಮಾನಸ್ಯ ಕಾಲಾತೀತತ್ವಮಸ್ತೀತ್ಯತ್ರ ಸಮನ್ವಯಾವಸಾನೇಽಲಿಖದಿದಮಿತಿ'' ಅನುಮಾನಗಳು ಕೇವಲ ಬ್ರಹ್ಮನು ನಿಮಿತ್ತಕಾರಣವೆಂದಷ್ಟೇ ಸಾಧನೆ ಮಾಡುತ್ತಿದೆ. ಆದರೆ ಯಾವ ವೇದಾಂತವಾಕ್ಯಗಳ ತಾತ್ಪರ್ಯವು ಈಗಾಗಲೇ ನಿರ್ಣಯವಾಗಿದೆಯೋ, ಅಂತಹ ವೇದಾಂತಗಳಿಂದ ಅನುಮಾನಗಳಿಗೆ ಬಾಧಾದಿದೋಷಗಳು ಬರುತ್ತವೆ. ಈ ವಿಷಯವನ್ನು ಸಮನ್ವಯಾಧ್ಯಾಯದ ಕೊನೆಯಲ್ಲೇ ಹೇಳಬೇಕು. ಅಧ್ಯಾಯವು ಮುಗಿಯುತ್ತಿರುವುದರಿಂದ ಪ್ರಕೃತ್ಯಧಿಕರಣವು ಇಲ್ಲಿಯೇ ಸಂಗತವಾಗುತ್ತದೆ.

**ಪ್ರಕಾಶಃ** – वेदान्तानां ब्रह्मोपादानत्वे तात्पर्यस्यातः पूर्वमनिर्णयात् । निर्णये वास्यानारम्भप्रसङ्गात् ।

ಕಲ್ಪತರುವಿನ ಸಮರ್ಥನೆ ತಪ್ಪು. ವೇದಾಂತಗಳಿಗೆ ಎಲ್ಲಿ ತಾತ್ಪರ್ಯವಿದೆ ಎಂಬ ವಿಚಾರವು ಮುಗಿದಿಲ್ಲ. ಮುಂದಿನ ಎರಡನೆಯ ಅಧ್ಯಾಯಲ್ಲಿರುವ ನವಿಲಕ್ಷಣತ್ವಾಧಿಕರಣ, ಆರಂಭಣಾಧಿಕರಣ ಮೊದಲಾದವುಗಳಲ್ಲಿ ವೇದಾಂತಗಳಿಗೆ ಎಲ್ಲಿ ತಾತ್ಪರ್ಯವಿದೆಯೆಂಬುದನ್ನು ನೀವೇ ಸಮರ್ಥಿಸುವಿರಿ. ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆಂದು ವೇದಾಂತಗಳಿಂದ ನಿರ್ಣಯವೇ ಆಗದಿದ್ದಾಗ ಅನುಮಾನಕ್ಕೆ ಬಾಧದೋಷವನ್ನು ಹೇಳಲಾಗದು. ಒಂದು ವೇಳೆ ಈಗಾಗಲೇ ವೇದಾಂತಗಳ ತಾತ್ಪರ್ಯವು ನಿರ್ಣೀತವಾಗಿದೆ ಎಂದು ಹೇಳುವುದಾದರೆ ಈ ಅಧಿಕರಣ ಹೊರಡಲು ಸಾಧ್ಯವೇ ಇಲ್ಲ. ಕೇವಲ ಯುಕ್ತಿಯನ್ನು ಆಶ್ರಯಿಸಿ ಈ ಅಧಿಕರಣ ಹೊರಟಿದೆ ಎಂದು ಹೇಳಬೇಕು. ಆದರೆ ಪ್ರಬಲವಾದ ಪೂರ್ವಪಕ್ಷವೇ ಹುಟ್ಟದಿದ್ದಾಗ ಅಧಿಕರಣವು ಅನಾರಂಭಣೀಯವಾಗುತ್ತದೆ.

**ಪ್ರಕಾಶಃ** – अत्रैव निर्णये त्रयानन्तर्यस्य वा जन्मादिसूत्रानन्तर्यस्य वा न्याय्यत्वात् । युक्तिविरोधपरिहारस्य युक्तिपाद एव कर्तव्यत्वाच्च ।

ವೇದಾಂತಗಳ ತಾತ್ಪರ್ಯವು ಇದೇ ಅಧಿಕರಣದಲ್ಲಿ ನಿರ್ಣಯವಾಗುತ್ತಿದೆ ಎಂದು ಹೇಳುವುದಾದರೆ, ಈ ಪಾದದ ಮೂರು ಅಧಿಕರಣಗಳ ಅನಂತರ ಈ ಅಧಿಕರಣವು ಬರಬೇಕಾಗಿತ್ತು. ಅಥವಾ ಜನ್ಮಾದ್ಯಧಿಕರಣದ ಅನಂತರ ಈ ಅಧಿಕರಣವನ್ನು ಹೇಳಬೇಕಾಗಿತ್ತು. ಅದನ್ನು ಬಿಟ್ಟು ಇಲ್ಲಿಯೇ ಪ್ರಕೃತ್ಯಧಿಕರಣವನ್ನು ಹೇಳಲು ಯಾವುದೇ ಕಾರಣವಿರುವುದಿಲ್ಲ.

**प्रकाशः** – युक्तिविरोधेनोपादानत्वं नेति शङ्कायां वेदान्तानां ब्रह्मोपादानत्वे तात्पर्यनिर्णयायोगेन तैर्युक्तेर्बाधोक्त्ययोगाच्च । मीमांसानारम्भापाताच्चेति ।

ನಿರ್ಣೀತತಾತ್ಪರ್ಯವುಳ್ಳ ಶ್ರುತಿಗಳಿಂದ ಯುಕ್ತಿಗೆ ಬಾಧದೋಷವನ್ನು ಹೇಳಿದರೆ ಯುಕ್ತಿವಿರೋಧ-ಪರಿಹಾರವನ್ನು ಮಾಡಿದಂತಾಯಿತು. ಆವಾಗ ಈ ಅಧಿಕರಣವು ಯುಕ್ತಿವಿರೋಧಪರಿಹಾರಭಾಗದಲ್ಲಿಯೇ ಬರಬೇಕು. ಎರಡನೆಯ ಅಧ್ಯಾಯದಲ್ಲಿ ಹೇಳಬೇಕೇ ಹೊರತು, ಈ ಸಮನ್ವಯಾಧ್ಯಾಯದಲ್ಲಿ ಅಪ್ರಸ್ತುತವಾಗುತ್ತದೆ. ಅದ್ವೈತಿಗಳಾದ ನೀವು ಪೂರ್ವಪಕ್ಷದಲ್ಲಿ ಯುಕ್ತಿಯಿಂದ ಜಗತ್ತಿಗೆ ನಿಮಿತ್ತಕಾರಣಗಳನ್ನಷ್ಟೇ ಸಮರ್ಥಿಸುತ್ತೀರಿ. ಸಿದ್ಧಾಂತದಲ್ಲಿ ಯುಕ್ತಿಗಳು ಶ್ರುತಿಯಿಂದ ಬಾಧಕವಾಗುತ್ತವೆ ಎನ್ನುತ್ತೀರಿ. ಆದರೆ ಈ ಸಿದ್ಧಾಂತವೇ ತಪ್ಪು. ಯಾವಾಗ ಯುಕ್ತಿಗಳು ನಿಮಿತ್ತತ್ವವನ್ನು ಹೇಳುತ್ತವೋ, ಅದಕ್ಕೆ ವಿರುದ್ಧವಾಗಿ ಶ್ರುತಿಯು ಉಪಾದಾನತ್ವವನ್ನು ಹೇಳುವುದಿಲ್ಲ. ಏಕೆಂದರೆ ಉಪಪತ್ತಿಯು ತಾತ್ಪರ್ಯ-ನಿರ್ಣಾಯಕಲಿಂಗಗಳಲ್ಲಿ ಅತ್ಯಂತ ಪ್ರಬಲವಾಗಿದೆ. ಆ ಉಪಪತ್ತಿಗೆ ಅನುಗುಣವಾಗಿ ಶ್ರುತಿಗಳಿಗೆ ವ್ಯಾಖ್ಯಾನ ಮಾಡಬೇಕು. ಹೀಗೊಪ್ಪದಿದ್ದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಯುಕ್ತಿಗಳು ಅಪ್ರಮಾಣವಾದರೆ, ಶ್ರುತಿಗಳಿಗೆ ಉಪಾದಾನತ್ವದಲ್ಲಿ ತಾತ್ಪರ್ಯವೆಂದು ನಿಶ್ಚಯವಾಗುತ್ತದೆ. ಶ್ರುತಿಗಳಿಗೆ ತಾತ್ಪರ್ಯವು ನಿಶ್ಚಯವಾದರೆ ಇದರಿಂದ ಯುಕ್ತಿಗಳು ಬಾಧಿತವಾಗುತ್ತವೆ.

ಅಷ್ಟೇ ಅಲ್ಲದೇ ಬ್ರಹ್ಮಮೀಮಾಂಸಾಶಾಸ್ತ್ರವೇ ಅನಾರಂಭಣೀಯವಾಗಬೇಕಾಗುತ್ತದೆ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರವು ಯುಕ್ತಿಗಳನ್ನು ಅನುಸರಿಸಿ ಶ್ರುತಿಗೆ ಅರ್ಥೈಸಲು ಹೊರಟಿದೆ. ಈಗ ನೀವು ಯುಕ್ತಿಗೆ ವಿರುದ್ಧವಾಗಿ ಶ್ರುತಿಗೆ ಅರ್ಥೈಸುವುದಾದರೆ ಈ ಶಾಸ್ತ್ರವು ಹೊರಟದ್ದೇ ವ್ಯರ್ಥವಾಗುತ್ತದಲ್ಲವೇ? ಶ್ರುತಿಗಳಿಂದಷ್ಟೇ ತಾತ್ಪರ್ಯವನ್ನು ನೇರವಾಗಿ ತಿಳಿಯಬಹುದು.

**प्रकाशः** – नन्वथापि सांख्येन प्रधानस्यैव जगदुपादानत्वमीश्वरस्य तु तदनुग्राहकत्वमेवेत्युपेतम् । तन्निरासार्थं ब्रह्मशरीरतया ब्रह्मात्मकमेव प्रधानम् । तदीयमुपादानत्वमपि ब्रह्मण एवेति वक्तुमिदमत्रारभ्यते । उक्तं च श्रीभाष्ये ''एवं निरीश्वरसांख्ये निरस्ते सेश्वरसांख्यः प्रत्यवतिष्ठते'' इति । श्रुतप्रकाशे च ''पूर्वत्राधिकरणत्रिकद्वयेन विकल्पेन नियमेन च प्रधानकारणत्वे क्रमेण निरस्ते समुच्चयेन कारणत्वमत्र निरस्यते इति'' इति चेन्न ।

ಆಕ್ಷೇಪ - ಸೇಶ್ವರಸಾಂಖ್ಯರು ಪ್ರಕೃತಿಯೇ ಜಗತ್ತಿಗೆ ಉಪಾದಾನಕಾರಣವಾಗಿದೆ. ಈಶ್ವರನು ಆ ಪ್ರಕೃತಿಗೆ ಅನುಗ್ರಾಹಕನಾಗಿದ್ದಾನೆನ್ನುತ್ತಾರೆ. ಪ್ರಕೃತಿಯು ಬ್ರಹ್ಮನ ಶರೀರವಾದ್ದರಿಂದ ಬ್ರಹ್ಮಸ್ವರೂಪವೇ ಆಗಿದೆ.

ಪ್ರಕೃತಿಯು ಜಗತ್ತಿಗೆ ಉಪಾದಾನವೆಂದರೆ ಬ್ರಹ್ಮನೇ ಜಗತ್ತಿಗೆ ಉಪಾದಾನಕಾರಣನೆಂದು ಹೇಳಿದಂತಾಗುತ್ತದೆ. ಹೀಗೆ ಸೇಶ್ವರ ಸಾಂಖ್ಯಮತವನ್ನು ನಿರಾಕರಿಸಲು ಈ ಪ್ರಕೃತ್ಯಧಿಕರಣವು ಹೊರಟಿದೆ. ಇದನ್ನು ಶ್ರೀಭಾಷ್ಯದಲ್ಲಿ 'ಏವಂ ನಿರೀಶ್ವರಸಾಂಖ್ಯೇ ನಿರಸ್ತೇ ಸೇಶ್ವರಸಾಂಖ್ಯಃ ಪ್ರತ್ಯವತಿಷ್ಠತೇ' ನಿರೀಶ್ವರಸಾಂಖ್ಯಮತವನ್ನು ನಿರಾಕರಣೆ ಮಾಡಿದ ಮೇಲೆ ಸೇಶ್ವರ ಸಾಂಖ್ಯಮತದ ನಿರಾಕರಣೆಯು ಪ್ರಸಕ್ತವಾಗುತ್ತದೆ ಎಂದು ಹೇಳಲಾಗಿದೆ. ಶ್ರುತಪ್ರಕಾಶದಲ್ಲಿಯೂ ಕೂಡ 'ಪೂರ್ವತ್ರಾಧಿಕರಣತ್ರಿಕದ್ವಯೇನ ವಿಕಲ್ಪೇನ ನಿಯಮೇನ ಚ ಪ್ರಧಾನಕಾರಣತ್ವೇ ಕ್ರಮೇಣ ನಿರಸ್ತೇ ಸಮುಚ್ಚಯೇನ ಕಾರಣತ್ವಮತ್ರ ನಿರಸ್ಯತೇ ಇತಿ' ಹಿಂದಿನ ಮೂರು ಅಧಿಕರಣಗಳಲ್ಲಿ ವಿಕಲ್ಪದಿಂದ ಮತ್ತು ನಿಯಮದಿಂದ ಪ್ರಧಾನವು ಜಗತ್ಕಾರಣವಾಗಿದೆ ಎಂದು ನಿರಾಸ ಮಾಡಿದ ಮೇಲೆ ಸಮುಚ್ಚಯದಿಂದ ಜಗತ್ಕಾರಣತ್ವವನ್ನು ಇಲ್ಲಿ ನಿರಾಕರಿಸಲಾಗಿದೆ. ಅಂದರೆ ಜಗತ್ತಿಗೆ ಪ್ರಕೃತಿ ಹಾಗೂ ಬ್ರಹ್ಮ ಎರಡು ಪದಾರ್ಥಗಳಲ್ಲಿ ಯಾವುದಾದರೂ ಒಂದು ಕಾರಣವಾಗಬಹುದು ಎಂಬುದು ವಿಕಲ್ಪ. ಪ್ರಕೃತಿಯೇ ಜಗತ್ತಿಗೆ ಕಾರಣ ಅಥವಾ ಬ್ರಹ್ಮನೇ ಜಗತ್ತಿಗೆ ಕಾರಣ ಎಂಬುದು ನಿಯಮ. ಇವೆರಡನ್ನೂ ಹಿಂದೆಯೇ ನಿರಾಕರಿಸಿದ್ದಾಯಿತು. ಈಗ ಪ್ರಕೃತಿ ಹಾಗೂ ಬ್ರಹ್ಮ ಇಬ್ಬರು ಸಮುಚ್ಚಿತವಾಗಿ ಜಗತ್ತಿಗೆ ಕಾರಣವಾಗಬಹುದು ಎಂಬುದನ್ನು ಇಲ್ಲಿ ನಿರಾಕರಿಸಲಾಗಿದೆ. ಸೇಶ್ವರ ಸಾಂಖ್ಯಮತವನ್ನು ನಿರಾಕರಿಸಲಾಗಿದೆ ಎಂದಭಿಪ್ರಾಯ.

**प्रकाशः** – ''अस्य समन्वयपादेऽकर्तव्यत्वादन्यत्राऽभावादिति समयपादे करिष्यमाणत्वाच'' इति सुधोक्तदूषणं ध्येयम् ।

ಈ ಸೇಶ್ವರ ಸಾಂಖ್ಯಮತವನ್ನು ಸಮನ್ವಯಾಧ್ಯಾಯದಲ್ಲಿ ನಿರಾಕರಣೆ ಮಾಡುವುದು ಅಪ್ರಸ್ತುತವಾಗುತ್ತದೆ. ಎರಡನೆಯ ಅಧ್ಯಾಯದ ಸಮಯಪಾದದಲ್ಲಿ 'ಅನ್ಯತ್ರಾಭಾವಾತ್' ಎಂಬ ಅಧಿಕರಣದಲ್ಲಿ ಇದನ್ನು ನಿರಾಕರಣೆ ಮಾಡುತ್ತಾರೆಂದು ನ್ಯಾಯಸುಧೆಯಲ್ಲಿ ದೋಷವನ್ನು ಹೇಳಿದ್ದಾರೆ. 'ಅಸ್ಯ ಸಮನ್ವಯಪಾದೇऽಕರ್ತವ್ಯತ್ವಾದನ್ಯತ್ರಾಭಾವಾದಿತಿ ಸಮಯಪಾದೇ ಕರಿಷ್ಯಮಾಣತ್ವಾಚ್ಚ' ಎಂದು. ಆ ದೋಷವನ್ನೇ ಇಲ್ಲಿ ತಿಳಿಯಬೇಕು.

**प्रकाशः – सूत्रार्थं निराह – अस्येति** ।। यथा ''हलोऽनन्तराः संयोगः । मुखनासिकावचनोऽनुनासिकः'' इत्यादौ संयोगादिशब्दानां संज्ञापरत्वं प्रकरणबलात्; तथेहापि समन्वयप्रकरणबलात् प्रकृतिरित्यपि तत्समन्वयपरमेव । अन्यथोपक्रमेऽपि तथात्वं न स्यादित्यर्थः ।।

ಪರರ ಸೂತ್ರಾರ್ಥವನ್ನೂ ಕೂಡ ನಿರಾಕರಿಸಲು 'ಅಸ್ಯ' ಇತ್ಯಾದಿ ಗ್ರಂಥವು ಹೊರಟಿದೆ. ವ್ಯಾಕರಣಶಾಸ್ತ್ರದಲ್ಲಿ 'ಹಲೋऽನಂತರಾಃ ಸಂಯೋಗಃ' ಎಂಬ ಸೂತ್ರದಲ್ಲಿ ಸಂಯೋಗ ಸಂಜ್ಞೆಯನ್ನು ಹೇಳಿದ್ದಾರೆ. 'ಮುಖನಾಸಿಕಾವಚನೋऽನುನಾಸಿಕಃ' ಎಂಬಲ್ಲಿ ಅನುನಾಸಿಕಸಂಜ್ಞೆಯನ್ನು ಹೇಳಿದ್ದಾರೆ. ಸಂಜ್ಞಾಪ್ರಕರಣವಾದ್ದರಿಂದ 'ಸಂಯೋಗ' ಎಂಬ ಶಬ್ದವು 'ಅನುನಾಸಿಕ' ಎಂಬ ಶಬ್ದವು ಸಂಜ್ಞಾಪರವಾಗಿದೆ

ಎಂದೇ ತಿಳಿಯುತ್ತದೆ ಹೊರತು, ಸಂಯೋಗಶಬ್ದಕ್ಕಾಗಲೀ, ಅನುನಾಸಿಕಶಬ್ದಕ್ಕಾಗಲೀ ಅದರ ಅರ್ಥವನ್ನು ಸ್ವೀಕರಿಸಬಾರದು. ಅದರಂತೆ ಇಲ್ಲಿಯೂ ಕೂಡ ಸಮನ್ವಯ ಪ್ರಕರಣದಲ್ಲಿ ಪ್ರಕೃತಿಶಬ್ದವು ಪ್ರಸ್ತಕವಾದರೆ, ಪ್ರಕೃತಿ ಎಂಬ ಸಂಜ್ಞೆಯನ್ನಷ್ಟೇ ಪರಮಾತ್ಮನಲ್ಲಿ ಕೂಡಿಸಬೇಕು. ಅದನ್ನು ಬಿಟ್ಟು ಪ್ರಕೃತಿಶಬ್ದದ ಅರ್ಥವೆನಿಸಿದ ಉಪಾದಾನತ್ವವನ್ನು ಸಮರ್ಥಿಸುವುದು ಪ್ರಕರಣಕ್ಕೆ ವಿರುದ್ಧವಾಗುತ್ತದೆ. ಹೀಗೊಪ್ಪದಿದ್ದರೆ ಆಕಾಶಾದಿಶಬ್ದಗಳ ವಿಷಯದಲ್ಲಿಯೂ ಕೂಡ ಹಾಗೇ ಹೇಳಬೇಕಾದೀತು. ಪರಮಾತ್ಮನಲ್ಲಿ ಆಕಾಶಾದಿಶಬ್ದಗಳನ್ನು ಸಮನ್ವಯ ಮಾಡದೇ ಪರಮಾತ್ಮನೇ ಆಕಾಶನಾಗಿದ್ದಾನೆಂದು ಹೇಳಬೇಕಾದೀತು.

**प्रकाशः – आरम्भणेति** ।। ''तदनन्यत्वमारम्भणशब्दादिभ्यः'' इत्यत्र युक्तिपादे ।। **यच्चोक्तमिति** ।। उभाभ्यामिति वर्तते । ''अधिष्ठात्रन्तराभावोऽपि प्रतिज्ञादृष्टान्तानुपरोधादेवोदितो वेदितव्यः'' इत्यादिना परभाष्ये ''नच ब्रह्मणोऽन्यन्निमित्तकारणं जगत इत्यपि युक्तम् । प्रतिज्ञादृष्टान्तोपरोधादेव'' इत्यादिना भामत्यां चाभिधानात् ''येनाश्रुतं श्रुतं भवति येनादेष्ट्राधिष्ठात्राश्रुतेनाश्रुतमपि श्रुतं भवतीति निमित्तोपादानयोरैक्यं प्रतीयते'' इत्यादिना केषाञ्चित् भाष्ये चोक्तेरिति भावः ।

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬುದು ಎರಡನೆಯ ಅಧ್ಯಾಯದ ಯುಕ್ತಿಪಾದದಲ್ಲಿ ಬರುತ್ತದೆ. 'ಯಚ್ಚೋಕ್ತಂ' ಎಂಬಲ್ಲಿ 'ಉಭಾಭ್ಯಾಮ್' ಎಂಬುದನ್ನು ವಿವಕ್ಷಿಸಬೇಕು. 'ಅಧಿಷ್ಠಾತ್ರಂತರಾಭಾವೋಽಪಿ ಪ್ರತಿಜ್ಞಾದೃಷ್ಟಾಂತಾನುಪರೋಧಾದೇವೋದಿತೋ ವೇದಿತವ್ಯಃ' ಪ್ರತಿಜ್ಞಾ ದೃಷ್ಟಾಂತಗಳು ಬ್ರಹ್ಮನ ಉಪಾದಾನತ್ವಕ್ಕೆ ಮಾತ್ರ ಕಾರಣವಾಗಿಲ್ಲ. ಹೊರತಾಗಿ, ಜಗತ್ತಿಗೆ ಮತ್ತೊಬ್ಬ ಅಧಿಷ್ಠಾತೃವಿಲ್ಲ (ಕರ್ತೃವಿಲ್ಲ) ಎಂಬ ವಿಷಯದಲ್ಲಿಯೂ ಹೇತುವಾಗಿದೆ ಎಂದು ಹೇಳಿದ್ದಾರೆ. ಭಾಮತಿಯಲ್ಲಿ 'ನಚ ಬ್ರಹ್ಮಣೋಽನ್ಯನ್ನಿಮಿತ್ತಕಾರಣಂ ಜಗತ ಇತ್ಯಪಿ ಯುಕ್ತಮ್ । ಪ್ರತಿಜ್ಞಾದೃಷ್ಟಾಂತೋಪರೋಧಾದೇವ' ಬ್ರಹ್ಮನಿಗಿಂತ ಭಿನ್ನನಾದ ಮತ್ತೊಬ್ಬ ನಿಮಿತ್ತಕಾರಣನು ಜಗತ್ತಿಗೆ ಇದ್ದಾನೆ ಎಂಬುದು ಕೂಡುವುದಿಲ್ಲ. ಪ್ರತಿಜ್ಞಾ ಹಾಗೂ ದೃಷ್ಟಾಂತಗಳ ಅನುಗುಣ್ಯದಿಂದ ಬ್ರಹ್ಮನೊಬ್ಬನೇ ಜಗತ್ತಿಗೆ ಕಾರಣನೆಂದು ತಿಳಿಯುತ್ತದೆ. ಹೀಗೆ ಹೇಳಲಾಗಿದೆ. 'ಯೇನಾಶ್ರುತಂ ಶ್ರುತಂ ಭವತಿ ಯೇನಾದೇಷ್ಟ್ರಾಧಿಷ್ಠಾತ್ರಾಶ್ರುತೇನಾಶ್ರುತಮಪಿ ಶ್ರುತಂ ಭವತೀತಿ ನಿಮಿತ್ತೋಪಾದಾನಯೋಃ ಐಕ್ಯಂ ಪ್ರತೀಯತೇ' ಯಾರ ಬಗ್ಗೆ ಕೇಳುವುದರಿಂದ ಅಶ್ರುತವಾದದ್ದೆಲ್ಲವೂ ಶ್ರುತವಾದಂತಾಗುತ್ತದೋ, ಇತ್ಯಾದಿಯಾಗಿ ಶ್ರುತಿ ಹೇಳುತ್ತಿರುವುದರಿಂದ ನಿಮಿತ್ತ ಹಾಗೂ ಉಪಾದಾನ ಕಾರಣಗಳಿಗೆ ಐಕ್ಯವು ಪ್ರತೀತವಾಗುತ್ತದೆ ಎಂಬುದಾಗಿ ರಾಮಾನುಜರ ಭಾಷ್ಯದಲ್ಲಿಯೂ ಹೇಳಲಾಗಿದೆ.

**प्रकाशः – तदुक्तप्रकारमाशङ्कते – नन्विति ।। प्रतिज्ञोपपत्तेरिति ।।** ब्रह्मज्ञानेन तत्कार्यसर्वज्ञानसम्भवादिति भावः ।

ಜಗತ್ತಿಗೆ ಉಪಾದಾನಕಾರಣನಾದವನು ನಿಮಿತ್ತಕಾರಣನಾಗಲು ಸಾಧ್ಯವಿಲ್ಲವೆಂದು ನಾವು ಇಲ್ಲಿಯತನಕ ಉಪಪಾದನೆ ಮಾಡಿದೆವು. ಆದರೆ ಅದ್ವೈತಿಯು ಉಪಾದಾನಕಾರಣತ್ವಕ್ಕಿಂತ ಅನ್ಯನಾದ ನಿಮಿತ್ತಕಾರಣನನ್ನು

ಒಪ್ಪಿದರೆ, ಅನುಪಪತ್ತಿಯು ಬರುತ್ತದೆಂದು 'ನನು' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾನೆ. 'ಪ್ರತಿಜ್ಞೋಪಪತ್ತೇಃ' ಎಂಬುದರ ಅಭಿಪ್ರಾಯ ಹೀಗಿದೆ - ಬ್ರಹ್ಮಜ್ಞಾನದಿಂದ ಬ್ರಹ್ಮನ ಕಾರ್ಯವಾದ ಸಮಸ್ತ ಪದಾರ್ಥಗಳ ಜ್ಞಾನವೇ ಬರುತ್ತದೆ ಎಂಬ ಪ್ರತಿಜ್ಞೆಯು ಉಪಪನ್ನವಾಗುತ್ತದೆ ಎಂದು.

**ಪ್ರಕಾಶಃ – परमते दोषान्तरं वक्तुमाह – किञ्चेति ।।**

ಅನಾದಿಯಾದ ಅವಿದ್ಯಾಪ್ರಾಗಭಾವಗಳಿಗೆ ಬ್ರಹ್ಮಾಭೇದವು ಇರುವುದಿಲ್ಲ. ಆದರೂ ಕೂಡ ಏಕವಿಜ್ಞಾನೇನ ಸರ್ವವೂ ವಿಜ್ಞಾತವಾಗುತ್ತದೆ ಎಂಬ ಶ್ರುತಿಯಲ್ಲಿ ಕೇಳಲ್ಪಟ್ಟ ಸರ್ವಪದಾರ್ಥಗಳಲ್ಲಿ ಅವಿದ್ಯಾದಿಗಳನ್ನೂ ಕೂಡ ವಿವಕ್ಷಿಸಬೇಕೆಂದು ಅದ್ವೈತಿಗಳಾದ ನೀವು ಹೇಳುತ್ತೀರಿ. ಅದೇ ರೀತಿಯಾಗಿ ಜಗತ್ತಿಗೆ ಉಪಾದಾನಕಾರಣನೇ ಬೇರೆ, ನಿಮಿತ್ತಕಾರಣನೇ ಬೇರೆ. ಹೀಗೆ ಹೇಳಿದರೂ ಕೂಡ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತೀತಿಯು ಉಪಪನ್ನವಾಗಬಹುದಲ್ಲವೇ? ಎಂಬುದಾಗಿ ಮತ್ತೊಂದು ದೋಷವನ್ನು ಅದ್ವೈತಿಗಳಿಗೆ ಹೇಳಲು 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.(೧)

**ಪ್ರಕಾಶಃ – अविद्यादिप्रत्यपि पारिभाषिकमुपादानत्वमाशङ्क्याह – नचेति ।। धर्मीति ।।** तन्मते तस्य व्यावहारिकत्वादिति भावः ।

ಅವಿದ್ಯಾದಿಗಳು ಬ್ರಹ್ಮನ ಕಾರ್ಯವಾಗದಿದ್ದರೂ, ಬ್ರಹ್ಮನಲ್ಲಿ ಆರೋಪಿತವಾಗಿವೆ. ಆರೋಪಾದಿ(ಧಿ) ಷ್ಠಾನತ್ವ- ರೂಪವಾದ ಉಪಾದಾನತ್ವವನ್ನು ಪಾರಿಭಾಷಿಕವಾಗಿ ಅವಿದ್ಯಾದಿಗಳಿಗೆ ನಾವು ಒಪ್ಪುತ್ತೇವೆ. ಬ್ರಹ್ಮಾಭೇದವನ್ನು ಅವಿದ್ಯಾದಿಗಳಿಗೂ ಕೂಡ ಹೇಳಬಹುದೆಂದು 'ನಚ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

ಇವರ ಆಶಂಕೆ ಅಸಾಧುವಾಗಿದೆ. ಏಕೆಂದರೆ ಅದ್ವೈತಿಗಳ ಮತದಲ್ಲಿ ಧರ್ಮಿಯಾದ ಸಗುಣಬ್ರಹ್ಮನು ವ್ಯಾವಹಾರಿಕ. ಅವನಲ್ಲಿರುವ ನಿರ್ಗುಣಬ್ರಹ್ಮಪ್ರತಿಯೋಗಿಕವಾದ ಭೇದವೂ ಕೂಡ ವ್ಯವಹಾರಿಕವಾಗಿದೆ; ಪಾರಮಾರ್ಥಿಕ ಭೇದವೇ ಇರುವುದಿಲ್ಲ ಎಂದು ತಿಳಿಯಬೇಕು.

**ಪ್ರಕಾಶಃ – निमित्तकता 'जगत इति वाच्यम्' इति शेषः । तदेवोपपादयति – मृदिति ।।**

'ನಿಮಿತ್ತಕತಾ' ಎಂಬ ಪದದ ಅನಂತರ 'ಜಗತ ಇತಿ ವಾಚ್ಯಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆ ವಾಕ್ಯದ ಅಭಿಪ್ರಾಯವನ್ನೇ 'ಮೃತ್ಕುಲಾಲಯೋಃ' ಎಂಬುದರಿಂದ ವಿವರಣೆ ಮಾಡುತ್ತಿದ್ದಾರೆ.

**ಪ್ರಕಾಶಃ – प्राक् सृष्टेरिति ।।** परभाष्ये हि ''प्रागुक्तोत्पत्तेरेकमेवाद्वितीय-मित्यवधारणात्'' इत्यादिनोपपादनाद्ब्रह्मणोऽन्यस्याभावावेदनेन ब्रह्मैवोपादानं निमित्तं

(೧) ವಿದ್ಯಾರ್ಥಿಗಳು ಈ ಸಂದರ್ಭದಲ್ಲಿ ಗುರುರಾಜೀಯ ಟಿಪ್ಪಣಿಯನ್ನು ಗಮನಿಸಬೇಕು.

ಎಂದೇ ತಿಳಿಯುತ್ತದೆ ಹೊರತು, ಸಂಯೋಗಶಬ್ದಕ್ಕಾಗಲೀ, ಅನುನಾಸಿಕಶಬ್ದಕ್ಕಾಗಲೀ ಅದರ ಅರ್ಥವನ್ನು ಸ್ವೀಕರಿಸಬಾರದು. ಅದರಂತೆ ಇಲ್ಲಿಯೂ ಕೂಡ ಸಮನ್ವಯ ಪ್ರಕರಣದಲ್ಲಿ ಪ್ರಕೃತಿಶಬ್ದವು ಪ್ರಸ್ತಕವಾದರೆ, ಪ್ರಕೃತಿ ಎಂಬ ಸಂಜ್ಞೆಯನ್ನಷ್ಟೇ ಪರಮಾತ್ಮನಲ್ಲಿ ಕೂಡಿಸಬೇಕು. ಅದನ್ನು ಬಿಟ್ಟು ಪ್ರಕೃತಿಶಬ್ದದ ಅರ್ಥವೆನಿಸಿದ ಉಪಾದಾನತ್ವವನ್ನು ಸಮರ್ಥಿಸುವುದು ಪ್ರಕರಣಕ್ಕೆ ವಿರುದ್ಧವಾಗುತ್ತದೆ. ಹೀಗೊಪ್ಪದಿದ್ದರೆ ಆಕಾಶಾದಿಶಬ್ದಗಳ ವಿಷಯದಲ್ಲಿಯೂ ಕೂಡ ಹಾಗೇ ಹೇಳಬೇಕಾದೀತು. ಪರಮಾತ್ಮನಲ್ಲಿ ಆಕಾಶಾದಿಶಬ್ದಗಳನ್ನು ಸಮನ್ವಯ ಮಾಡದೇ ಪರಮಾತ್ಮನೇ ಆಕಾಶನಾಗಿದ್ದಾನೆಂದು ಹೇಳಬೇಕಾದೀತು.

**प्रकाशः – आरम्भणेति** ।। ''तदनन्यत्वमारम्भणशब्दादिभ्यः'' इत्यत्र युक्तिपादे ।। **यच्चोक्तमिति** ।। उभाभ्यामिति वर्तते । ''अधिष्ठात्रन्तराभावोऽपि प्रतिज्ञादृष्टान्तानुपरोधादेवोदितो वेदितव्यः'' इत्यादिना परभाष्ये ''नच ब्रह्मणोऽन्यन्निमित्तकारणं जगत इत्यपि युक्तम् । प्रतिज्ञादृष्टान्तोपरोधादेव'' इत्यादिना भामत्यां चाभिधानात् ''येनाश्रुतं श्रुतं भवति येनादेष्टाधिष्ठात्राश्रुतेनाश्रुतमपि श्रुतं भवतीति निमित्तोपादानयोरैक्यं प्रतीयते'' इत्यादिना केषाञ्चित् भाष्ये चोक्तेरिति भावः ।

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬುದು ಎರಡನೆಯ ಅಧ್ಯಾಯದ ಯುಕ್ತಿಪಾದದಲ್ಲಿ ಬರುತ್ತದೆ. 'ಯಚ್ಚೋಕ್ತಂ' ಎಂಬಲ್ಲಿ 'ಉಭಾಭ್ಯಾಮ್' ಎಂಬುದನ್ನು ವಿವಕ್ಷಿಸಬೇಕು. 'ಅಧಿಷ್ಠಾತ್ರಂತರಾಭಾವೋಽಪಿ ಪ್ರತಿಜ್ಞಾದೃಷ್ಟಾಂತಾನುಪರೋಧಾದೇವೋದಿತೋ ವೇದಿತವ್ಯಃ' ಪ್ರತಿಜ್ಞಾ ದೃಷ್ಟಾಂತಗಳು ಬ್ರಹ್ಮನ ಉಪಾದಾನತ್ವಕ್ಕೆ ಮಾತ್ರ ಕಾರಣವಾಗಿಲ್ಲ. ಹೊರತಾಗಿ, ಜಗತ್ತಿಗೆ ಮತ್ತೊಬ್ಬ ಅಧಿಷ್ಠಾತೃವಿಲ್ಲ (ಕರ್ತೃವಿಲ್ಲ) ಎಂಬ ವಿಷಯದಲ್ಲಿಯೂ ಹೇತುವಾಗಿದೆ ಎಂದು ಹೇಳಿದ್ದಾರೆ. ಭಾಮತಿಯಲ್ಲಿ 'ನಚ ಬ್ರಹ್ಮಣ್ಮೋಽನ್ಯನ್ನಿಮಿತ್ತಕಾರಣಂ ಜಗತ ಇತ್ಯಪಿ ಯುಕ್ತಮ್ । ಪ್ರತಿಜ್ಞಾದೃಷ್ಟಾಂತೋಪರೋಧಾದೇವ' ಬ್ರಹ್ಮನಿಗಿಂತ ಭಿನ್ನನಾದ ಮತ್ತೊಬ್ಬ ನಿಮಿತ್ತಕಾರಣನು ಜಗತ್ತಿಗೆ ಇದ್ದಾನೆ ಎಂಬುದು ಕೂಡುವುದಿಲ್ಲ. ಪ್ರತಿಜ್ಞಾ ಹಾಗೂ ದೃಷ್ಟಾಂತಗಳ ಆನುಗುಣ್ಯದಿಂದ ಬ್ರಹ್ಮನೊಬ್ಬನೇ ಜಗತ್ತಿಗೆ ಕಾರಣನೆಂದು ತಿಳಿಯುತ್ತದೆ. ಹೀಗೆ ಹೇಳಲಾಗಿದೆ. 'ಯೇನಾಶ್ರುತಂ ಶ್ರುತಂ ಭವತಿ ಯೇನಾದೇಷ್ಟಾಧಿಷ್ಠಾತ್ರಾಶ್ರುತೇನಾಶ್ರುತಮಪಿ ಶ್ರುತಂ ಭವತೀತಿ ನಿಮಿತ್ತೋಪಾದಾನಯೋಃ ಐಕ್ಯಂ ಪ್ರತೀಯತೇ' ಯಾರ ಬಗ್ಗೆ ಕೇಳುವುದರಿಂದ ಅಶ್ರುತವಾದದ್ದೆಲ್ಲವೂ ಶ್ರುತವಾದಂತಾಗುತ್ತದೋ, ಇತ್ಯಾದಿಯಾಗಿ ಶ್ರುತಿ ಹೇಳುತ್ತಿರುವುದರಿಂದ ನಿಮಿತ್ತ ಹಾಗೂ ಉಪಾದಾನ ಕಾರಣಗಳಿಗೆ ಐಕ್ಯವು ಪ್ರತೀತವಾಗುತ್ತದೆ ಎಂಬುದಾಗಿ ರಾಮಾನುಜರ ಭಾಷ್ಯದಲ್ಲಿಯೂ ಹೇಳಲಾಗಿದೆ.

**प्रकाशः – तदुक्तप्रकारमाशङ्कते – नन्विति ।। प्रतिज्ञोपपत्तेरिति ।। ब्रह्मज्ञानेन** तत्कार्यसर्वज्ञानसम्भवादिति भावः ।

ಜಗತ್ತಿಗೆ ಉಪಾದಾನಕಾರಣನಾದವನು ನಿಮಿತ್ತಕಾರಣನಾಗಲು ಸಾಧ್ಯವಿಲ್ಲವೆಂದು ನಾವು ಇಲ್ಲಿಯತನಕ ಉಪಪಾದನೆ ಮಾಡಿದೆವು. ಆದರೆ ಅದ್ವೈತಿಯು ಉಪಾದಾನಕಾರಣತ್ವಕ್ಕಿಂತ ಅನ್ಯನಾದ ನಿಮಿತ್ತಕಾರಣನನ್ನು

ಒಪ್ಪಿದರೆ, ಅನುಪಪತ್ತಿಯು ಬರುತ್ತದೆಂದು 'ನನು' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾನೆ. 'ಪ್ರತಿಜ್ಞೋಪಪತ್ತೇಃ' ಎಂಬುದರ ಅಭಿಪ್ರಾಯ ಹೀಗಿದೆ - ಬ್ರಹ್ಮಜ್ಞಾನದಿಂದ ಬ್ರಹ್ಮನ ಕಾರ್ಯವಾದ ಸಮಸ್ತ ಪದಾರ್ಥಗಳ ಜ್ಞಾನವೇ ಬರುತ್ತದೆ ಎಂಬ ಪ್ರತಿಜ್ಞೆಯು ಉಪಪನ್ನವಾಗುತ್ತದೆ ಎಂದು.

**प्रकाशः – परमते दोषान्तरं वक्तुमाह – किञ्चेति ।।**

ಅನಾದಿಯಾದ ಅವಿದ್ಯಾಪ್ರಾಗಭಾವಗಳಿಗೆ ಬ್ರಹ್ಮಾಭೇದವು ಇರುವುದಿಲ್ಲ. ಆದರೂ ಕೂಡ ಏಕವಿಜ್ಞಾನೇನ ಸರ್ವವೂ ವಿಜ್ಞಾತವಾಗುತ್ತದೆ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಪದಾರ್ಥಗಳಲ್ಲಿ ಅವಿದ್ಯಾದಿಗಳನ್ನೂ ಕೂಡ ವಿವಕ್ಷಿಸಬೇಕೆಂದು ಅದ್ವೈತಿಗಳಾದ ನೀವು ಹೇಳುತ್ತೀರಿ. ಅದೇ ರೀತಿಯಾಗಿ ಜಗತ್ತಿಗೆ ಉಪಾದಾನಕಾರಣನೇ ಬೇರೆ, ನಿಮಿತ್ತಕಾರಣನೇ ಬೇರೆ. ಹೀಗೆ ಹೇಳಿದರೂ ಕೂಡ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತೀತಿಯು ಉಪಪನ್ನವಾಗಬಹುದಲ್ಲವೇ? ಎಂಬುದಾಗಿ ಮತ್ತೊಂದು ದೋಷವನ್ನು ಅದ್ವೈತಿಗಳಿಗೆ ಹೇಳಲು 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.(೧)

**प्रकाशः – अविद्यादिप्रत्यपि पारिभाषिकमुपादानत्वमाशङ्क्याह – नचेति ।। धर्मीति ।।** तन्मते तस्य व्यावहारिकत्वादिति भावः ।

ಅವಿದ್ಯಾದಿಗಳು ಬ್ರಹ್ಮನ ಕಾರ್ಯವಾಗದಿದ್ದರೂ, ಬ್ರಹ್ಮನಲ್ಲಿ ಆರೋಪಿತವಾಗಿವೆ. ಆರೋಪಾದಿ(ಧಿ) ಷ್ಠಾನತ್ವ- ರೂಪವಾದ ಉಪಾದಾನತ್ವವನ್ನು ಪಾರಿಭಾಷಿಕವಾಗಿ ಅವಿದ್ಯಾದಿಗಳಿಗೆ ನಾವು ಒಪ್ಪುತ್ತೇವೆ. ಬ್ರಹ್ಮಾಭೇದವನ್ನು ಅವಿದ್ಯಾದಿಗಳಿಗೂ ಕೂಡ ಹೇಳಬಹುದೆಂದು 'ನಚ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

ಇವರ ಆಶಂಕೆ ಅಸಾಧುವಾಗಿದೆ. ಏಕೆಂದರೆ ಅದ್ವೈತಿಗಳ ಮತದಲ್ಲಿ ಧರ್ಮಿಯಾದ ಸಗುಣಬ್ರಹ್ಮನು ವ್ಯಾವಹಾರಿಕ. ಅವನಲ್ಲಿರುವ ನಿರ್ಗುಣಬ್ರಹ್ಮಪ್ರತಿಯೋಗಿಕವಾದ ಭೇದವೂ ಕೂಡ ವ್ಯವಹಾರಿಕವಾಗಿದೆ; ಪಾರಮಾರ್ಥಿಕ ಭೇದವೇ ಇರುವುದಿಲ್ಲ ಎಂದು ತಿಳಿಯಬೇಕು.

**प्रकाशः – निमित्तकता** 'जगत इति वाच्यम्' इति शेषः । तदेवोपपादयति – **मृदिति ।।**

'ನಿಮಿತ್ತಕತಾ' ಎಂಬ ಪದದ ಅನಂತರ 'ಜಗತ ಇತಿ ವಾಚ್ಯಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆ ವಾಕ್ಯದ ಅಭಿಪ್ರಾಯವನ್ನೇ 'ಮೃತ್ಕುಲಾಲಯೋಃ' ಎಂಬುದರಿಂದ ವಿವರಣೆ ಮಾಡುತ್ತಿದ್ದಾರೆ.

**प्रकाशः – प्राक् सृष्टेरिति ।।** परभाष्ये हि ''प्रागुक्तोत्पत्तेरेकमेवाद्वितीयमित्यवधारणात्'' इत्यादिनोपपादनाद्ब्रह्मणोऽन्यस्याभावावेदनेन ब्रह्मैवोपादानं निमित्तं

(೧) ವಿದ್ಯಾರ್ಥಿಗಳು ಈ ಸಂದರ್ಭದಲ್ಲಿ ಗುರುರಾಜೀಯ ಟಿಪ್ಪಣಿಯನ್ನು ಗಮನಿಸಬೇಕು.
ಪ್ರಕೃತ್ಯಧಿಕರಣ (೧-೪-೬)

चेति व्युत्पादितम् । तदयुक्तमित्यर्थः । **ब्रह्माभिन्नं स्यादिति ।।** न चेष्टापत्तिः । 'अग्रे' इत्याधारत्वानुपपत्तेरिति भावः ।

ಅದ್ವೈತಿಗಳ ಭಾಷ್ಯದಲ್ಲಿ 'ಪ್ರಾಗುಕ್ತೋತ್ಪತ್ತೇರೇಕಮೇವಾದ್ವಿತೀಯಮಿತ್ಯವಧಾರಣಾತ್' ಇತ್ಯಾದಿ ವಾಕ್ಯದಿಂದ ಉಪಾದಾನನಾದ ಬ್ರಹ್ಮನಿಗಿಂತ ಮತ್ತೊಬ್ಬ ವ್ಯಕ್ತಿ ಸೃಷ್ಟಿಯ ಪೂರ್ವದಲ್ಲಿ ಇರಲಿಲ್ಲವೆಂದು ಹೇಳಲಾಗಿದೆ. ಇದರಿಂದ ಬ್ರಹ್ಮನೇ ಉಪಾದಾನಕಾರಣ ಮತ್ತು ನಿಮಿತ್ತಕಾರಣನೆಂದು ತಿಳಿಯುತ್ತದೆ. ಇದೂ ಕೂಡ ಅಸಾಧುವಾಗಿದೆ ಎಂದು 'ಬ್ರಹ್ಮಾಭಿನ್ನಂ ಸ್ಯಾತ್' ಎಂಬುದರಿಂದ ಆಕ್ಷೇಪ ಮಾಡಿದ್ದಾರೆ. ಅಧಿಷ್ಠಾನಕಾರಕ ಮೊದಲಾದವುಗಳಿಗೆ ಬ್ರಹ್ಮಾಧೀನತ್ವವನ್ನು ಒಪ್ಪುವುದು ಇಷ್ಟಾಪತ್ತಿಯೆಂದು ಉತ್ತರಿಸಿದರೆ ಶ್ರುತಿಯಲ್ಲಿ 'ಅಗ್ರೇ' ಎಂಬ ಪದದಿಂದ ಹೇಳಲ್ಪಟ್ಟ ಆಧಾರತ್ವವೇ ಅನುಪಪನ್ನವಾಗುತ್ತದೆ. 'ಅಗ್ರೇ' ಎಂಬ ಪದದಿಂದ ಈ ಅಧಿಷ್ಠಾನಭೂತವಾದ ಕಾಲ ಮೊದಲಾದವುಗಳಿಗೆ ಭೇದವು ಪ್ರತೀತವಾಗುತ್ತದೆ. ಆಧೇಯವನ್ನು ಒಪ್ಪಿದರೆ ಆಧಾರಾಧೇಯಭಾವವೇ ಅನುಪಪನ್ನವಾಗಬೇಕು.

**गुरुराजीयम् – अन्यस्य कर्तुरिति ।।** अन्यस्य कर्तुर्ब्रह्मकार्यत्वेन ब्रह्मज्ञानेन तदभावादिति भावः । किञ्च कर्त्रुपादानयोर्भिन्नत्वेन तस्य ब्रह्माकार्यत्वेन ब्रह्मज्ञानेन सर्वविज्ञानप्रतिज्ञाऽसिद्ध्यापत्त्या कर्त्रुपादानयोरभेदे अविद्यादेरप्यनादित्वेन ब्रह्माकार्यत्वेन ब्रह्मज्ञानेन सर्वविज्ञानप्रतिज्ञानुपपत्त्याऽविद्यादेरपि ब्रह्माभेदः स्यादित्याह – **किञ्चेति ।।** नन्वविद्यादेरनादित्वेन ब्रह्मणि परिणामरूपब्रह्मकार्यत्वा-भावेऽपि तद्विवर्तत्वरूपब्रह्मकार्यत्वेन ब्रह्मज्ञानेनाविद्याज्ञानसम्भवेन न तयोरभेद इत्याशङ्क्ते ।। **न चाविद्यादिकं प्रतीति ।।** कारणीभूतस्याप्यविद्यादेरप्यध्यस्तत्व-रूपकार्यत्वेन ब्रह्मज्ञानेन तज्ज्ञाने कर्तृत्वादिविशिष्टस्य कर्तुरप्यध्यस्तत्वरूपकार्यत्वस्यैव सत्त्वेन कर्तृत्वाभावापत्त्या न प्रपञ्चस्याभिन्न निमित्तोपादानकत्वमित्याह – **एवं हीति ।।** नन्वविद्याप्रागभावादेरध्यस्तत्वरूपकार्यत्वसत्त्वेऽपि कर्तृत्वोपयुक्तस्य धर्मिसमानसत्ताकभेदस्य सत्त्वेन कर्तृत्वं सम्भवत्येव । न चैवं प्रपञ्चस्य भिन्ननिमित्तोपादानकत्वापत्त्याऽभिन्ननिमित्तोपादानत्वं न सम्भवतीति शङ्क्यम् । अभिन्ननिमित्तोपादानकत्वं हि न निमित्तोपादानयोरभेदो विवक्षितः । येनोक्तदोषः स्यात् । किं नाम निमित्तोपादानयोर्भेदाभाव एव । तथा च कर्त्रुपादानयोर्धर्मि-समानसत्ताकभेदसत्त्वेऽपि पारमार्थिकभेदाभावेन निमित्तोपादानयोर्भेदाभावरूपस्याभिन्न निमित्तोपादानत्वस्याक्षतेरित्याशयवानाशङ्क्ते ।। **नच प्रागभावादिवदिति ।।**




**ಶಾಂಕರಭಾಷ್ಯದಲ್ಲಿ ಹಾಗೂ ರಾಮಾನುಜಭಾಷ್ಯದಲ್ಲಿ ಸೂತ್ರಗಳ ವ್ಯಾಖ್ಯಾನ ಒಂದೇ ರೀತಿಯಾಗಿದೆ -**

ಬ್ರಹ್ಮನು ಜಗತ್ತಿಗೆ ಕೇವಲ ನಿಮಿತ್ತಕಾರಣನಾಗಿದ್ದಾನೆ ಹೊರತು, ಉಪಾದಾನಕಾರಣನಲ್ಲ. ಕುಲಾಲನು ಮಣ್ಣಿನಿಂದ ಘಟವನ್ನು ನಿರ್ಮಾಣ ಮಾಡುತ್ತಾನೆ. ಮಣ್ಣು ವಿಕಾರವನ್ನು ಹೊಂದಿ, ಕಾರ್ಯರೂಪವನ್ನು ಪಡೆಯುವುದರಿಂದ ಉಪಾದಾನಕಾರಣ ಎನಿಸುತ್ತದೆ. ಇಚ್ಛಾಪೂರ್ವಕವಾಗಿ ಪ್ರಯತ್ನಪಡುವ ಕುಲಾಲನು ನಿಮಿತ್ತಕಾರಣನೆನಿಸುತ್ತಾನೆ. ಅದೇರೀತಿಯಾಗಿ ಬ್ರಹ್ಮನು ಪ್ರಕೃತಿಯಿಂದ ಜಗತ್ತನ್ನು ನಿರ್ಮಿಸುತ್ತಾನೆ. ಕಾರ್ಯರೂಪವನ್ನು ಪಡೆಯುವ ಪ್ರಕೃತಿಯು ಉಪಾದಾನಕಾರಣವೆನಿಸುತ್ತದೆ. ಇಚ್ಛಾಪೂರ್ವಕವಾಗಿ ಪ್ರಯತ್ನಪಡುವ ಬ್ರಹ್ಮನು ನಿಮಿತ್ತಕಾರಣನೆನಿಸುತ್ತಾನೆ. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷದ ನಿರಾಕರಣೆಗೆ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರವು ಹೊರಟಿದೆ. ಬ್ರಹ್ಮನು ಜಗತ್ತಿಗೆ ಪ್ರಕೃತಿಃ = ಉಪಾದಾನಕಾರಣನಾಗಿದ್ದಾನೆ. ಚ = ನಿಮಿತ್ತಕಾರಣನೂ ಆಗಿದ್ದಾನೆ. ಆದ್ದರಿಂದ ಜಗತ್ತಿಗೆ ಬ್ರಹ್ಮನು ಅಭಿನ್ನನಿಮಿತ್ತೋಪಾದಾನ ಎನಿಸುತ್ತಾನೆ. ಈ ವಿಷಯದಲ್ಲಿ ಶ್ರುತಿಯಲ್ಲಿರುವ ಪ್ರತಿಜ್ಞಾ ಮತ್ತು ದೃಷ್ಟಾಂತಗಳು ಆಧಾರವಾಗಿವೆ. ಛಾಂದೋಗ್ಯದಲ್ಲಿ 'ಯೇನಾಶ್ರುತಂ ಶ್ರುತಂ ಭವತಿ' ಎಂಬುದಾಗಿ ಬ್ರಹ್ಮನ ಜ್ಞಾನದಿಂದ ಸಮಸ್ತ ಜಗತ್ತು ತಿಳಿಯುತ್ತದೆ ಎಂದು ಉದ್ದಾಲಕರು ಪ್ರತಿಜ್ಞೆಮಾಡುತ್ತಾರೆ. ಆವಾಗ ಶ್ವೇತಕೇತು 'ಕಥಂ ನು ಭಗವಃ ಸ ಆದೇಶಾ ಭವತಿ' ಅದು ಹೇಗೆ ಸಾಧ್ಯ ? ಎಂದು ಕೇಳುತ್ತಾನೆ. ಅದರ ಸಮರ್ಥನೆಗಾಗಿ ಪುನಃ ಉದ್ದಾಲಕರು ಹೀಗೆ ಉತ್ತರಿಸುತ್ತಾರೆ - 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ವಿಜ್ಞಾತೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್' ಎಂಬುದಾಗಿ ದೃಷ್ಟಾಂತವನ್ನು ಹೇಳಿರುತ್ತಾರೆ. ಮಣ್ಣಿನಿಂದ ಘಟ-ಶರಾವ ಮೊದಲಾದವುಗಳು ಹುಟ್ಟುತ್ತವೆ. ಇದೆಲ್ಲವೂ ಮಣ್ಣಿನ ಆಕಾರ ವಿಶೇಷಗಳು. ಆದ್ದರಿಂದ ಈ ಘಟಾದಿಗಳೆಲ್ಲವೂ ಮಣ್ಣೇ ಆಗಿರುತ್ತವೆ. ಘಟ ಎಂಬುದು ಕೇವಲ ಹೆಸರು ಮಾತ್ರ. ಅದರಂತೆ ಈ ಜಗತ್ತೆಲ್ಲವೂ ಬ್ರಹ್ಮನೇ ಆಗಿರುತ್ತದೆ. ಜಗತ್ತು ಎಂಬುದು ಕೇವಲ ಹೆಸರು ಮಾತ್ರ. ಬ್ರಹ್ಮನನ್ನು ತಿಳಿದಾಗ ಈ ಸಮಸ್ತ ಜಗತ್ತನ್ನೂ ಕೂಡ ತಿಳಿದಂತೆ ಆಗುತ್ತದೆ. ಹೀಗೆ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ ಎಂದು ತಿಳಿಯಬೇಕು. ಇಷ್ಟು ಸಿದ್ಧಾಂತ.

ಪರರ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಇದು ಸಮನ್ವಯಾಧ್ಯಾಯವಾದ್ದರಿಂದ ಪ್ರಕೃತಿ ಎಂಬ ಶಬ್ದದ ಸಮನ್ವಯವೇ ಸೂತ್ರಕಾರರಿಗೆ ಅಭಿಪ್ರೇತವಾಗಿರುತ್ತದೆ. ಅದನ್ನು ಬಿಟ್ಟು ಬ್ರಹ್ಮನಿಗೆ ಉಪಾದಾನತ್ವವನ್ನು ಸಮರ್ಥನೆ ಮಾಡುವುದು ಅನುಚಿತ. ಮತ್ತು ಅದ್ವೈತಿಗಳ ಪ್ರಕಾರ ಈ ಪಾದದ ಪ್ರಾರಂಭದ ಮೂರು ಅಧಿಕರಣಗಳಲ್ಲಿ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯನ್ನು ನಿರಾಕರಿಸಿದ ಮೇಲೆ ಜಗತ್ತಿಗೆ ಉಪಾದಾನಕಾರಣವೇ ಇಲ್ಲವಾಗುತ್ತದಲ್ಲವೇ? ಎಂಬ ಆಶಂಕೆಯನ್ನು ನಿರಾಕರಣೆ ಮಾಡಲು ನಾಲ್ಕನೆಯ ಅಧಿಕರಣವನ್ನಾಗಿ ಇದನ್ನು ಪರಿಗಣಿಸಬೇಕಿತ್ತು. ಮಧ್ಯದಲ್ಲಿ 'ಜಗದ್ವಾಚಿತ್ವಾತ್' 'ವಾಕ್ಯಾನ್ವಯಾತ್' ಎಂಬೆರಡು ಅಧಿಕರಣಗಳು ಅಸಂಗತವಾಗುತ್ತವೆ.

ಒಂದು ವೇಳೆ 'ಪ್ರಕೃತಿಶ್ಚ' ಇತ್ಯಾದಿ ಸೂತ್ರವು ಪ್ರಕೃತಿಯೆಂಬ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡದೇ ಪ್ರಕೃತಿ ಶಬ್ದದ ಅರ್ಥವೆನಿಸಿದ ಉಪಾದಾನತ್ವವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡುವುದಾದರೆ 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದಲ್ಲಿರುವ ಸೂತ್ರವೂ ಕೂಡ ಬ್ರಹ್ಮನಲ್ಲಿ 'ಆಕಾಶ' ಎಂಬ ಶಬ್ದವನ್ನು ಸಮನ್ವಯ ಮಾಡದೇ, 'ಆಕಾಶ' ಎಂಬ ಶಬ್ದದ ಅರ್ಥವೆನಿಸಿದ ಆಕಾಶತ್ವವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡಬೇಕಾದೀತು.

ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆ ಆದ್ದರಿಂದ ಬ್ರಹ್ಮನಿಗೂ ಜಗತ್ತಿಗೂ ಅಭೇದವನ್ನು ಹೇಳಬೇಕೆಂಬ ವಿಚಾರವನ್ನು ಆರಂಭಣಾಧಿಕರಣದಲ್ಲಿ ನಿರಾಕರಣೆ ಮಾಡುವವರಿದ್ದಾರೆ. ಮತ್ತು ಈ ಸೂತ್ರವು ನಿಮ್ಮ ಪ್ರಕಾರ ಉಪಾದಾನತ್ವವನ್ನಷ್ಟೇ ಸಮರ್ಥನೆ ಮಾಡುತ್ತಿದೆ. ಚಶಬ್ದದಿಂದ ಹೇಳಲ್ಪಟ್ಟ ನಿಮಿತ್ತತ್ವವನ್ನು ಸಮರ್ಥನೆ ಮಾಡಲು ಯಾವುದೇ ಹೇತು ಕಾಣಿಸುತ್ತಿಲ್ಲ.

ಅನಾದಿಯಾದ ಅವಿದ್ಯಾ, ಪ್ರಾಗಭಾವ ಮೊದಲಾದವುಗಳು ಬ್ರಹ್ಮನಿಂದ ಅಭಿನ್ನವಾಗಿರುವುದಿಲ್ಲ. ಆದರೂ ಕೂಡ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತೀತಿಯಲ್ಲಿ ಅವಿದ್ಯಾದಿಗಳನ್ನೂ ಕೂಡ ನೀವು ತೆಗೆದುಕೊಳ್ಳುತ್ತೀರಿ. ಅದೇ ರೀತಿಯಾಗಿ ಜಗತ್ತಿಗೆ ಉಪಾದಾನಕಾರಣವೇ ಬೇರೆ ಆಗಲಿ, ನಿಮಿತ್ತಕಾರಣನೇ ಮತ್ತೊಬ್ಬನಿರಲಿ, ಇಬ್ಬರಿಗೆ ಅಭೇದವಿಲ್ಲದಿದ್ದರೂ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯು ಏಕೆ ಉಪಪನ್ನವಾಗಬಾರದು? ಆದ್ದರಿಂದ ಅದ್ವೈತಿಗಳ ಪ್ರಥಮಸೂತ್ರ ವ್ಯಾಖ್ಯಾನವು ಅಸಾಧುವಾಗಿದೆ.

## ಶ್ರುತಿಬಲದಿಂದ ಬ್ರಹ್ಮನು ನಿಮಿತ್ತಕಾರಣನೆಂದೇ ಸಿದ್ಧವಾಗುತ್ತದೆ

## तात्पर्यचन्द्रिका

**किञ्च –**

**एकज्ञानेन सर्वस्य विज्ञानात् ब्रह्म चेत् भवेत् ।**
**उपादानं तर्हि भवेत्तत एवानिमित्तता ।। १ ।।**

ಅನುವಾದ - ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆಂಬ ಶ್ರುತಿಯ ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಬ್ರಹ್ಮನು ಉಪಾದಾನಕಾರಣನಾಗುತ್ತಾನೆಂದು ನೀವು ಹೇಳುತ್ತಿದ್ದೀರಿ. ಹಾಗಾದರೆ ಅದೇ ಪ್ರತಿಜ್ಞಾವಾಕ್ಯದ ಬಲದಿಂದ ಬ್ರಹ್ಮನು ನಿಮಿತ್ತಕಾರಣನಲ್ಲವೆಂದೂ ಕೂಡ ಆಗಬೇಕಾದೀತು.

**निमित्तत्वे हि सति भेदापत्त्यैकविज्ञानेन सर्वविज्ञानं न युक्तम् । नहि व्याप्ये निमित्तत्वे सति व्यापकस्य भेदस्याभावः सम्भवतीति ।**

'ಯತ್ರ ಯತ್ರ ನಿಮಿತ್ತತ್ವಂ ತತ್ರ ತತ್ರ ಭೇದಃ' ಎಂಬುದಾಗಿ ವ್ಯಾಪ್ತಿಯು ಲೋಕಸಿದ್ಧವಾಗಿದೆ. ಒಂದುವೇಳೆ ಬ್ರಹ್ಮನು ನಿಮಿತ್ತಕಾರಣನಾಗುವುದಾದರೆ ಪ್ರಪಂಚದ ಭೇದವು ಅವನಲ್ಲಿ ಬರಬೇಕಾದೀತು. ಆವಾಗ ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆ ಎಂಬುದೇ ಅಯುಕ್ತವಾಗುತ್ತದೆ. ವ್ಯಾಪ್ಯವಾದ

ನಿಮಿತ್ತತ್ವವು ಬ್ರಹ್ಮನಲ್ಲಿದ್ದರೂ ಕೂಡ ವ್ಯಾಪಕವಾದ ಭೇದವು ಅವನಲ್ಲಿ ಬರುವುದಿಲ್ಲವೆಂದು ಹೇಳಲು ಸಾಧ್ಯವಿಲ್ಲವಷ್ಟೇ. ಎಲ್ಲಿ ವ್ಯಾಪ್ತಿಯು ಇರುತ್ತದೋ, ಅಲ್ಲಿ ವ್ಯಾಪಕವು ಇದ್ದೇ ಇರುತ್ತದೆ.

**न चोपादानत्वाभाव एव भेदव्याप्यो नतु निमित्तत्वमिति वाच्यम् ।**

ಶಂಕೆ - ಭೇದವ್ಯಾಪ್ಯವಾದದ್ದು ನಿಮಿತ್ತತ್ವವಲ್ಲ. ಹೊರತು, ಉಪಾದಾನತ್ವಭಾವ. 'ಯತ್ರ ಯತ್ಪ್ರತಿ ಉಪಾದಾನತ್ವಾಭಾವಃ ತತ್ರ ತಸ್ಮಾತ್ ಭೇದಃ' ಎಂಬ ವ್ಯಾಪ್ತಿಯನ್ನು ಹೇಳುತ್ತೇವೆ. ಪಟವು ಘಟಕ್ಕೆ ಉಪಾದಾನಕಾರಣವಲ್ಲ. ಅಂತಹ ಪಟವು ಘಟಕ್ಕಿಂತ ಭಿನ್ನವಾಗಿದೆ. ಪ್ರಕೃತ ಬ್ರಹ್ಮನಲ್ಲಿ ಉಪಾದಾನತ್ವಭಾವವು ಇರುವುದಿಲ್ಲ. ಆದ್ದರಿಂದ ಭೇದವೂ ಕೂಡ ಅವನಲ್ಲಿ ಬರುವುದಿಲ್ಲವೆಂದು ಹೇಳುತ್ತೇವೆ.

**मृदो मृदं प्रत्यनुपादानत्वेऽपि भेदाभावात् । गौरवाच्च ।**

'ಯತ್ಪ್ರತಿ ಉಪಾದಾನತ್ವಾಭಾವಃ ತತ್ರ ತತೋ ತಸ್ಮಾತ್ ಭೇದಃ' ಎಂಬ ನೀವು ಹೇಳಿದ ವ್ಯಾಪ್ತಿಗೆ ಮೃತ್‌ನಲ್ಲಿ ವ್ಯಭಿಚಾರ ಬರುತ್ತದೆ. ತನಗೆ ತಾನು ಉಪಾದಾನವಲ್ಲದ ಕಾರಣ ಮೃತ್‌ಪ್ರತಿ ಉಪಾದಾನತ್ವವು ಮೃತ್‌ನಲ್ಲಿ ಇರುವುದಿಲ್ಲ. ಆದರೆ ಭೇದವು ಅಲ್ಲಿ ಕಾಣಸುತ್ತಿಲ್ಲ. ಆದ್ದರಿಂದ ಯತ್ಪ್ರತಿ ಉಪಾದಾನತ್ವಾಭಾವಃ ಮೃತ್‌ನಲ್ಲಿ ಮೃದಂ ಪ್ರತಿ ಉಪಾದಾನತ್ವಾಭಾವವೂ ಇದೆ. ಆದರೆ ವ್ಯಾಪಕೀಭೂತವಾದ ಭೇದವು ಇರುವುದಿಲ್ಲ. ತನ್ನಲ್ಲಿ ತನ್ನ ಭೇದವು ಇರುವುದಿಲ್ಲವಷ್ಟೇ? ಮತ್ತು ನಿಮಿತ್ತತ್ವವನ್ನೇ ಭೇದವ್ಯಾಪ್ತವೆಂದು ಸುಲಭವಾಗಿ ಹೇಳಲು ಬರುವಾಗ ಉಪಾದಾನತ್ವಾಭಾವವು ಭೇದವ್ಯಾಪ್ತವೆಂದು ಹೇಳುವುದು ಗೌರವವಾಗಿದೆ.

**अत एव नोपादानत्वाभावविशिष्टं निमित्तत्वं व्याप्यम् ।**

ಹೀಗೆ ಗೌರವದೋಷಗ್ರಸ್ತವಾದ್ದರಿಂದಲೇ ಮತ್ತೊಂದು ಆಶಂಕೆಯನ್ನು ನಿರಾಕರಿಸಿದಂತಾಯಿತು -

ಶಂಕೆ - 'ಯತ್ರ ಉಪಾದಾನತ್ವಾಭಾವಃ ತತ್ರ ಭೇದಃ' ಎಂಬುದಾಗಿ ವ್ಯಾಪ್ತಿಯನ್ನು ಹೇಳುವುದಿಲ್ಲ. ಹೊರತಾಗಿ 'ಎಲ್ಲಿ ಉಪಾದಾನತ್ವಾಭಾವವಿಶಿಷ್ಟವಾದ ನಿಮಿತ್ತತ್ವವು ಇರುತ್ತದೋ ಅಲ್ಲಿ ಭೇದವಿರುತ್ತದೆ' ಎಂಬುದಾಗಿ ವ್ಯಾಪ್ತಿಯನ್ನು ಹೇಳುತ್ತೇವೆ. ಮೃತ್‌ನಲ್ಲಿ ಉಪಾದಾನತ್ವಾಭಾವವೆಂಬ ವಿಶೇಷಣ-ವಿರಬಹುದು. ಆದರೆ ತನಗೆ ತಾನು ನಿಮಿತ್ತವಲ್ಲದ ಕಾರಣ ನಿಮಿತ್ತತ್ವವೆಂಬ ವಿಶೇಷ್ಯವು ಬರುವುದಿಲ್ಲ. ಆದ್ದರಿಂದ ವಿಶಿಷ್ಟವೂ ಕೂಡ ಬರುವುದಿಲ್ಲವೆಂದು ವ್ಯಭಿಚಾರವನ್ನು ಪರಿಹರಿಸಿಕೊಳ್ಳುತ್ತೇವೆ.

ಸಮಾಧಾನ - ಈ ಪಕ್ಷದಲ್ಲಿಯೂ ಕೂಡ ಗೌರವದೋಷ ತಪ್ಪಿದ್ದಲ್ಲ. ಕೇವಲ ನಿಮಿತ್ತತ್ವವೇ ಭೇದವ್ಯಾಪ್ಯವೆಂಬ ವ್ಯಾಪ್ತಿಗೆ ಎಲ್ಲಿಯೂ ವ್ಯಭಿಚಾರ ಇಲ್ಲದಿರುವಾಗ ವಿಶೇಷಣಗಳನ್ನು ನೀಡಿ, ವ್ಯಾಪ್ತಿ ಹೇಳುವುದರಲ್ಲಿ ಅರ್ಥವಿಲ್ಲ.

**निमित्तत्वाभावविशिष्टमुपादानत्वमभेदप्रयोजकमित्यापाताच ।**

ಅಷ್ಟೇ ಅಲ್ಲದೇ ಯಾವುದು ಉಪಾದಾನಕಾರಣವಾಗಿರುತ್ತದೋ, ಅದು ಅದರಿಂದ ಅಭಿನ್ನವಾಗಿರುತ್ತದೆಂಬ ವ್ಯಾಪ್ತಿಯೂ ಲೋಕದಲ್ಲಿ ಸಿದ್ಧವಾಗಿದೆ. ಆದ್ದರಿಂದ ನಿಮಿತ್ತತ್ವಾಭಾವವಿಶಿಷ್ಟವಾದ ಉಪಾದಾನತ್ವವು ಅಭೇದಕ್ಕೆ ಪ್ರಯೋಜಕವೆಂದು ನಾವು ಆಪತ್ತಿ ಮಾಡುತ್ತೇವೆ. ಬ್ರಹ್ಮನಲ್ಲಿ ನಿಮಿತ್ತತ್ವಾಭಾವವಿಶಿಷ್ಟವಾದ ಉಪಾದಾನತ್ವಭಾವವು ಇರುವುದಿಲ್ಲ. ಏಕೆಂದರೆ ನೀವು ಬ್ರಹ್ಮನು ನಿಮಿತ್ತಕಾರಣನೂ ಆಗಿದ್ದಾನೆಂದು ಹೇಳುತ್ತಿದ್ದೀರಿ. ಆದ್ದರಿಂದ ಜಗತ್ತಿಗೂ ಬ್ರಹ್ಮನಿಗೂ ಅಭೇದವಿಲ್ಲವೆಂದು ಆಗಬೇಕಾದೀತು.

**त्वन्मते तन्तून् प्रति निमित्तोपादानेचोर्णनाभौ भेदस्योर्णनाभिज्ञानेऽपि तदज्ञानस्य च दर्शनाच ।**

ಅದ್ವೈತಿಗಳಾದ ನಿಮ್ಮ ಮತದಲ್ಲಿ ತಂತುವನ್ನು ಕುರಿತು ಊರ್ಣನಾಭಿಯು ನಿಮಿತ್ತಕಾರಣವೂ ಆಗಿದೆ, ಉಪಾದಾನಕಾರಣವೂ ಆಗಿದೆಯೆಂದು ಒಪ್ಪಿರುತ್ತೀರಿ. ಪ್ರಕೃತ ಉಪಾದಾನತ್ವವಷ್ಟೇ ಅಭೇದವ್ಯಾಪ್ಯವೆಂದು ಹೇಳಿದರೆ ಊರ್ಣನಾಭಿಯಲ್ಲಿ ಉಪಾದಾನತ್ವವಿದೆ. ಆದರೆ ಅಭೇದವು ಇರುವುದಿಲ್ಲ. ಆದ್ದರಿಂದ ಕೇವಲ 'ಯತ್ರ ಉಪಾದಾನತ್ವಂ ತತ್ರ ಅಭೇದಃ' ಎಂಬುದಾಗಿ ವ್ಯಾಪ್ತಿಯನ್ನು ಹೇಳಿದರೆ ಊರ್ಣನಾಭಿಯಲ್ಲಿ ಉಪಾದಾನತ್ವವು ಇದೆ, ಆದರೆ ಅಭೇದವು ಇರುವುದಿಲ್ಲ.ಮತ್ತು ಊರ್ಣನಾಭಿಯ ಜ್ಞಾನ ಬಂದರೂ ಕೂಡ ತಂತುವಿನ ಜ್ಞಾನವು ಬರುವುದಿಲ್ಲವೆಂದೂ ಕೂಡ ಕಂಡಿದೆ. ಇಲ್ಲಿ ವ್ಯಭಿಚಾರದೋಷವನ್ನು ಪರಿಹರಿಸಿಕೊಳ್ಳಲು ನಿಮಿತ್ತತ್ವಾಭಾವವಿಶಿಷ್ಟಾಭಾವವು ಎಲ್ಲಿ ಇರುತ್ತದೋ, ಅಲ್ಲಿ ಅಭೇದವಿರುತ್ತದೆ ಎಂಬುದಾಗಿ ನಾವು ಹೇಳಿದಂತೆ ಹೇಳಬೇಕು. ಊರ್ಣನಾಭಿಯಲ್ಲಿ ನಿಮ್ಮ ಪ್ರಕಾರ ನಿಮಿತ್ತತ್ವವೂ ಕೂಡ ಇರುವುದರಿಂದ ನಿಮಿತ್ತತ್ವಾಭಾವವಿಶಿಷ್ಟವಾದ ಉಪಾದಾನತ್ವವು ಇಲ್ಲದ ಕಾರಣ ವ್ಯಭಿಚಾರವು ಪರಿಹಾರವಾಗುತ್ತದೆ. ಆದ್ದರಿಂದ ನೀವು ಹೇಳಿದ ವ್ಯಾಪ್ತಿಗೆ ವ್ಯಭಿಚಾರ ಬರುತ್ತದೆ. ನಾವು ಹೇಳಿದ ವ್ಯಾಪ್ತಿಗೆ ಯಾವುದೇ ವ್ಯಭಿಚಾರಾದಿದೋಷಗಳು ಬರುವುದಿಲ್ಲ.

**अथ लोकदृष्टिमुल्लंघ्य श्रुतिबलान्निमित्तत्वेऽप्येक ज्ञानेन सर्वज्ञानं तर्ह्यनुपादानत्वेऽपि तद्बलादेव तदस्त्विति दिक् ।**

ಶಂಕೆ - ಲೋಕದೃಷ್ಟಿಯನ್ನು ಮೀರಿ ಶ್ರುತಿಬಲದಿಂದ ಬ್ರಹ್ಮನು ನಿಮಿತ್ತಕಾರಣನಾಗಿದ್ದಾನೆಂದು ಒಪ್ಪಬೇಕು. ಮತ್ತು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಿರುವುದರಿಂದ ಉಪಾದಾನತ್ವವೂ ಕೂಡ ಒಪ್ಪಬೇಕು.

ಸಮಾಧಾನ - ಹಾಗಾದಲ್ಲಿ ಬ್ರಹ್ಮನು ಉಪಾದಾನಕಾರಣನಾಗದಿದ್ದರೂ ಶ್ರುತಿಬಲದಿಂದಲೇ ನಿಮಿತ್ತಕಾರಣನಾಗಿದ್ದಾನೆಂದೂ ಕೂಡ ಒಪ್ಪಬಹುದು. ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ಪ್ರಾಧಾನ್ಯಾದ್ಯಭಿಪ್ರಾಯಗಳಿಂದ ಕೂಡಿಸಬಹುದು. ಇಷ್ಟು ನಿರಾಕರಣೆ ಕೇವಲ ದಿಕ್‌ಪ್ರದರ್ಶನ.

**प्रकाशः —**

मतद्वयेऽप्युपादानत्वे सति निमित्तत्वे सौत्रो हेतुरित्यत्र दोषान्तरमाह — **किं चैकज्ञानेनेति ।।**

ವಿವರಣೆ - ರಾಮಾನುಜಮತದಲ್ಲಿ ಮತ್ತು ಶಾಂಕರಮತದಲ್ಲಿ ಸೂತ್ರದಲ್ಲಿ ಹೇಳಿರುವ ಹೇತು, ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ ಮತ್ತು ನಿಮಿತ್ತಕಾರಣನಾಗಿದ್ದಾನೆ ಎಂಬ ಎರಡೂ ಸಾಧ್ಯಗಳನ್ನು ಸ್ಥಾಪಿಸುತ್ತದೆಂದು ಹೇಳಿರುತ್ತಾರೆ. ಆದರೆ ಪ್ರಕೃತ ಗ್ರಂಥಕಾರರು ಉಪಾದಾನತ್ವವಿಶಿಷ್ಟವಾದ ಅನಿಮಿತ್ತತ್ವಕ್ಕೆ ಸೂತ್ರದಲ್ಲಿರುವ ಹೇತು ಕಾರಣವಾಗುತ್ತದೆ ಎಂಬ ದೋಷವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः —** उपादानं चेद्भवेदित्यन्वयः ।। **तत एवेति** ।। एकविज्ञानेन सर्वविज्ञानादेवेत्यर्थः । उत्तरार्धोक्तमुपपादयति ।। **निमित्तत्व इति** ।। **भेदेति** ।। कार्येण सहेत्यर्थः ।

'ಉಪಾದಾನಂ ಚೇದ್ಭವೇತ್' ಎಂದು ಅನ್ವಯಕ್ರಮವನ್ನು ತಿಳಿಯಬೇಕು. 'ತತ ಏವ' ಎಂದರೆ ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗಿದ್ದರಿಂದ ಎಂದು ಹೇಳಿದ್ದರಿಂದಲೇ. ಶ್ಲೋಕದ ಉತ್ತರಾರ್ಧವನ್ನು 'ನಿಮಿತ್ತತ್ವ' ಎಂಬುದರಿಂದ ಉಪಪಾದನೆ ಮಾಡುತ್ತಿದ್ದಾರೆ. 'ಭೇದ' ಎಂದರೆ 'ಕಾರ್ಯದ ಜೊತೆಗೆ ನಿಮಿತ್ತತ್ವಕ್ಕೆ ಭೇದವೇ ಇರುತ್ತದೆ' ಎಂದರ್ಥ.

**प्रकाशः —** तत्र विप्रतिपन्नं प्रत्याह — **गौरवाच्चेति** ।। अभावघटित्वादिति भावः । अत एव गौरवादेव ।। **निमित्तत्वाभावेति** ।। तथा च ब्रह्मजगतोर-भेदाभावेनैकविज्ञानेन सर्वविज्ञानप्रतिज्ञाव्याकोप इति भावः ।

ಮೃತ್ತಿಗೆ ಮೃತ್ ಎಂಬುದು ಉಪಾದಾನವಾಗದಿದ್ದರೂ ಭೇದವು ಇರುವುದಿಲ್ಲ ಎಂಬುದಾಗಿ ಹೇಳಲ್ಪಟ್ಟ ವ್ಯಭಿಚಾರದಲ್ಲಿ ಪ್ರತಿವಾದಿಯು ಸಂಪ್ರತಿಪತ್ತಿಯನ್ನು ತೋರಿಸಿದರೆ ಮತ್ತೊಂದು ದೋಷವನ್ನು 'ಗೌರವಾಚ್ಚ' ಎಂಬುದರಿಂದ ಹೇಳಿದ್ದಾರೆ. ನೀವು ಹೇಳಿದ ವ್ಯಾಪ್ತಿಯು ಅಭಾವಘಟಿತವಾದ್ದರಿಂದ ಗೌರವದೋಷಗ್ರಸ್ತವಾಗಿದೆ ಎಂದು. 'ಅತ ಏವ' ಎಂದರೆ ಗೌರವದೋಷ ಇರುವುದರಿಂದಲೇ ಎಂದರ್ಥ. 'ನಿಮಿತ್ತತ್ವಾಭಾವ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ನಿಮಿತ್ತತ್ವಾಭಾವವಿಶಿಷ್ಟವಾದ ಉಪಾದಾನತ್ವವೇ ಅಭೇದಕ್ಕೆ

ಪ್ರಯೋಜಕವಾಗಿದೆ. ಬ್ರಹ್ಮನು ಕೇವಲ ನಿಮಿತ್ತನಾಗಿದ್ದಾನೆ. ಹೊರತು, ನಿಮಿತ್ತತ್ವಾಭಾವವಿಶಿಷ್ಟನಾಗಿಲ್ಲ. ಆದ್ದರಿಂದ ಬ್ರಹ್ಮ ಹಾಗೂ ಜಗತ್ತುಗಳಿಗೆ ಅಭೇದವಿಲ್ಲದಕಾರಣ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞಾವ್ಯಾಕೋಪವು ಬರುತ್ತದೆ.

**प्रकाशः** – निमित्तत्वे कार्याद्भेदेन भाव्यमिति स्वयमापादितेऽर्थे लोकदृष्टिं वदन्नेकविज्ञानेन सर्वविज्ञानोक्तेर्ब्रह्मोपादानमित्यप्ययुक्तमित्याह – **त्वन्मत इति** ।। मतद्वयेऽपीत्यर्थः । भेदस्येति 'दर्शनात्' इत्यनेना ।

ಯಾವುದು ನಿಮಿತ್ತಕಾರಣವೋ, ಅದು ಕಾರ್ಯಕ್ಕಿಂತ ಭಿನ್ನವಾಗಿರುತ್ತದೆ. ಈ ವಿಷಯವು ಅದ್ವೈತಿಗಳಿಗೂ ಕೂಡ ಸಮ್ಮತವೇ ಆಗಿದೆ. ಊರ್ಣನಾಭಿಯು ತಂತುವಿಗೆ ನಿಮಿತ್ತಕಾರಣವಾಗಿದೆ ಎಂಬ ಕಾರಣದಿಂದಲೇ ಅದ್ವೈತಿಗಳು ಭೇದವನ್ನು ಒಪ್ಪಿರುತ್ತಾರೆ. ಮತ್ತು ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞಾಬಲದಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ ಎಂಬ ವಿಷಯವೂ ಕೂಡ ಅಯುಕ್ತವಾಯಿತು. ಏಕೆಂದರೆ ಊರ್ಣನಾಭಿಯು ತಂತುವಿಗೆ ಉಪಾದಾನವಾಗಿದೆ. ಆದರೆ ಊರ್ಣನಾಭಿಯ ವಿಜ್ಞಾನದಿಂದ ತಂತುವಿನ ಜ್ಞಾನವು ಬರುವುದಿಲ್ಲ. ಆದ್ದರಿಂದ ಪ್ರತಿಜ್ಞಾಬಲದಿಂದಲೂ ಉಪಾದಾನತ್ವವನ್ನು ಸಮರ್ಥಿಸಲಾಗದು ಎಂಬುದಾಗಿ 'ತ್ವನ್ಮತೇ' ಇತ್ಯಾದಿ ವಾಕ್ಯದಿಂದ ದೋಷ ಹೇಳುತ್ತಿದ್ದಾರೆ. 'ತ್ವನ್ಮತೇ' ಎಂದರೆ ಶಾಂಕರಮತದಲ್ಲಿ ಹಾಗೂ ರಾಮಾನುಜ ಮತದಲ್ಲಿ ಎಂದು ತಿಳಿಯಬೇಕು. 'ಭೇದಸ್ಯ' ಎಂಬುದಕ್ಕೆ 'ದರ್ಶನಾತ್' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು.

**प्रकाशः** – ननु श्रुत्यैवोपादानत्वस्योक्त्या कथमनुपादानत्वेऽपीत्यादि । केवलश्रुतिगम्येऽर्थे तर्काणामाभासत्वात् । उक्तं च भामत्यां

न चानुमानिकं युक्तमागमेनापबाधितम् ।
सर्वेऽपि तावद्वेदान्ताः पौर्वापर्येण वीक्षिताः ।
एकान्तिकाद्वैतपराद्वैतमात्रनिषेधतः ।। इति ।

तथा च यथाशब्दमङ्गीकर्तव्यम् । स च निमित्तमुपपादनं चेश्वरं बोधयतीत्यभेदे नैकविज्ञानेन सर्वविज्ञानप्रतिज्ञानिर्वाहः कार्यः । लोकवैलक्षण्यं तु श्रुत्येकसमधिकाम्यत्वाद्युक्तमिति चेन्न ।

ಆಕ್ಷೇಪ - ಶ್ರುತಿಗೆ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆಂದು ಹೇಳುತ್ತಿರುವಾಗ ಉಪಾದಾನಕಾರಣನಾಗದಿದ್ದರೂ ಏಕವಿಜ್ಞಾನದಿಂದ ಸರ್ವವಿಜ್ಞಾನವು ಯುಕ್ತವಾಗುತ್ತಿದೆ ಎಂದು ನೀವು ಹೇಳುವುದು ಹೇಗೆ ಯುಕ್ತವಾಗುತ್ತದೆ. ಕೇವಲ ಶ್ರುತಿಗಮ್ಯವಾದ ಅರ್ಥದಲ್ಲಿ ತರ್ಕಗಳೆಲ್ಲವೂ ಆಭಾಸವಷ್ಟೇ. ಇದನ್ನು ಭಾಮತಿಯಲ್ಲಿಯೂ ಹೇಳಿದ್ದಾರೆ -

ನ ಚಾನುಮಾನಿಕಂ ಯುಕ್ತಮಾಗಮೇನಾಪಬಾಧಿತಮ್ ।
ಸರ್ವೇಽಪಿ ತಾವದ್ ವೇದಾಂತಾಃ ಪೌರ್ವಾಪರ್ಯೇಣ ವೀಕ್ಷಿತಾಃ ।
ಏಕಾಂತಿಕಾದ್ವೈತಪರಾದ್ವೈತಮಾತ್ರನಿಷೇಧತಃ ॥

ಆನುಮಾನಿಕವಾದ ವಿಷಯಗಳು ಅಯುಕ್ತವಾಗುತ್ತವೆ. ಏಕೆಂದರೆ ಅನುಮಾನಸಿದ್ಧವಾದ ವಿಚಾರಗಳೆಲ್ಲವೂ ಆಗಮದಿಂದ ಬಾಧಿತವಾಗಿರುತ್ತದೆ. ಉಪಕ್ರಮ ಹಾಗೂ ಉಪಸಂಹಾರಾದಿಗಳಿಂದ ವೇದಾಂತಗಳೆಲ್ಲವೂ ವಿಚಾರ ಮಾಡಲ್ಪಟ್ಟಿರುತ್ತವೆ. ಮುಖ್ಯವಾಗಿ ಶ್ರುತಿಗಳೆಲ್ಲವೂ ಅದ್ವೈತಪರವೇ ಆಗಿರುತ್ತವೆ. ಶ್ರುತಿಗೆ ಐಕ್ಯದಲ್ಲಿ ತಾತ್ಪರ್ಯವು ನಿಶ್ಚಯವಾದ ಮೇಲೆ ಭೇದವನ್ನು ಎಲ್ಲಾ ಶ್ರುತಿಗಳು ನಿಷೇಧ ಮಾಡುತ್ತಿವೆ. ಹೀಗೆ ತಾತ್ಪರ್ಯನಿಶ್ಚಯವಾದ ಮೇಲೆ ತರ್ಕಗಳು ಅಯುಕ್ತವಾಗುತ್ತವೆ.

ಆದ್ದರಿಂದ ಶ್ರುತಿಯಲ್ಲಿ ಹೇಳಿರುವಂತೆ ಅಂಗೀಕರಿಸಬೇಕು. ಶ್ರುತಿಯಾದರೂ ಬ್ರಹ್ಮನು ನಿಮಿತ್ತಕಾರಣನೂ ಆಗಿದ್ದಾನೆ, ಉಪಾದಾನಕಾರಣನೂ ಆಗಿದ್ದಾನೆಂದು ಸಮರ್ಥಿಸುತ್ತಿದೆ. ಆದ್ದರಿಂದ ಅಭೇದದ ವಿವಕ್ಷೆಯಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ನಿರ್ವಹಿಸಬೇಕು. ಲೋಕದಲ್ಲಿ ಎಲ್ಲಿಯೂ ಕೂಡ ಕಾಣದ್ದರಿಂದ ಲೋಕವಿಲಕ್ಷಣವಾಗಿದೆಯಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಶುತ್ಯೈಕಸಮಧಿಗಮ್ಯವಾದ ವಿಷಯದಲ್ಲಿ ಲೋಕದೃಷ್ಟಿಯನ್ನು ವಿವಕ್ಷಿಸಬೇಕಾಗಿಲ್ಲ.

**प्रकाशः** – एवं सति विचारशास्त्रानवतारप्रसङ्गात् । पूर्वापरपरामर्शे निमित्तत्वस्यैवावगमेनानुव्याख्यानाद्युक्तानेकमानविरोधेनोपादानत्वस्य श्रौतत्वायोगात् । एकविज्ञानेन सर्वविज्ञानप्रकारस्य तु ''अन्यार्थं तु जैमिनिः'' इत्यत्रैवोक्तत्वात् । तदेतदाह – **दिगिति** ॥

ಸಮಾಧಾನ - ಈ ಆಕ್ಷೇಪವು ಅಯುಕ್ತವಾಗಿದೆ. ಒಂದು ವೇಳೆ ಯುಕ್ತಿಗೆ ಅವಕಾಶವೇ ಇಲ್ಲವಾದರೆ ವಿಚಾರಶಾಸ್ತ್ರಕ್ಕೆ ಆರಂಭಣೀಯತ್ವವೇ ಕೂಡುವುದಿಲ್ಲ. ಶ್ರುತಿಗಳ ಪೌರ್ವಾಪರ್ಯವನ್ನು ವಿಮರ್ಶಿಸಿದಾಗ, ಬ್ರಹ್ಮನು ನಿಮಿತ್ತಕಾರಣನಾಗಿದ್ದಾನೆಂದೇ ತಿಳಿಯುತ್ತದೆ. ಅನುವ್ಯಾಖ್ಯಾನದಲ್ಲಿ ಉದಾಹರಿಸಿದ ಅನೇಕ ಪ್ರಮಾಣಗಳು ಈ ವಿಷಯದಲ್ಲಿ ಆಧಾರವಾಗಿವೆ. ಅಂತಹ ಪ್ರಮಾಣಗಳೆಲ್ಲದರ ವಿರೋಧ ಬರುವುದರಿಂದ ಉಪಾದಾನತ್ವದಲ್ಲಿ ಶ್ರುತಿಯ ಅಭಿಪ್ರಾಯವಿರಲು ಸಾಧ್ಯವೇ ಇಲ್ಲ. ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆಂಬ ಪ್ರತಿಜ್ಞಾವಾಕ್ಯಕ್ಕೆ 'ಅನ್ಯಾರ್ಥಂ ತು ಜೈಮಿನಿಃ' ಎಂಬ ಸೂತ್ರವ್ಯಾಖ್ಯಾನದಲ್ಲಿಯೇ ಉತ್ತರಿಸಿದ್ದೇವೆ. ಈ ದೃಷ್ಟಿಯಿಂದ ಗ್ರಂಥಕಾರರು 'ದಿಕ್' ಎಂದು ಹೇಳಿರುತ್ತಾರೆ. ಹೀಗೆ ಅನೇಕ ದೋಷಗಳು ಅದ್ವೈತಿಗಳಿಗೆ ಇರುವುದರಿಂದ ಗ್ರಂಥದಲ್ಲಿ ಹೇಳಿರುವ ದೋಷ ಕೇವಲ ದಿಕ್‌ಪ್ರದರ್ಶನ.




ಏಕಜ್ಞಾನೇನ ಸರ್ವಸ್ಯ ವಿಜ್ಞಾನಾತ್ ಬ್ರಹ್ಮ ಚೇತ್ ಭವೇತ್ ।
ಉಪಾದಾನಂ ತರ್ಹಿ ಭವೇತ್ತತ ಏವಾನಿಮಿತ್ತತಾ ॥

ಏಕವಿಜ್ಞಾನದಿಂದ ಸರ್ವವೂ ವಿಜ್ಞಾತವಾಗುತ್ತದೆ ಎಂಬ ಶ್ರುತಿಯ ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಬ್ರಹ್ಮನು ಉಪಾದಾನಕಾರಣನಾಗುತ್ತಾನೆ ಎಂದು ನೀವು ಹೇಳುತ್ತಿದ್ದೀರಿ. ಹಾಗಾದರೆ ಅದೇ ಪ್ರತಿಜ್ಞಾವಾಕ್ಯದ ಬಲದಿಂದಲೇ ಬ್ರಹ್ಮನು ನಿಮಿತ್ತಕಾರಣನಲ್ಲವೆಂದೂ ಕೂಡ ಆಗಬೇಕಾದೀತು.

ಅದ್ವೈತಿಗಳು ಬ್ರಹ್ಮನನ್ನು ಉಪಾದಾನಕಾರಣನೂ ಆಗಿದ್ದಾನೆ, ನಿಮಿತ್ತಕಾರಣನೂ ಆಗಿದ್ದಾನೆಂದು ಹೇಳುತ್ತಾರೆ. ಆದರೆ ಬ್ರಹ್ಮನು ನಿಮಿತ್ತಕಾರಣನಾದ ಮೇಲೆ ಜಗತ್ತಿನಿಂದ ಭಿನ್ನನೆಂದೇ ಹೇಳಿದಂತಾಗುತ್ತದೆ. ಹೀಗಿರುವಾಗ ಭಿನ್ನನಾದ ಬ್ರಹ್ಮನ ಜ್ಞಾನದಿಂದ ಸಮಸ್ತ ಜಗತ್ತು ತಿಳಿದಂತಾಗುತ್ತದೆಂದು ಅವರಿಗೆ ಸಮರ್ಥಿಸಲಾಗದು. ಆದ್ದರಿಂದ ಬ್ರಹ್ಮನು ಪ್ರಧಾನನಾಗಿದ್ದಾನೆ ಉಳಿದೆಲ್ಲ ಜಗತ್ತು ಅಪ್ರಧಾನವಾಗಿದೆ. ಪ್ರಧಾನಭೂತನಾದ ಬ್ರಹ್ಮನನ್ನು ತಿಳಿಯುವುದರಿಂದ ಅಪ್ರಧಾನವಾದ ಸಮಸ್ತ ಜಗತ್ತನ್ನು ತಿಳಿದಂತಾಗುತ್ತದೆ ಎಂಬುದಾಗಿಯೇ ಏಕವಿಜ್ಞಾನೇನ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ಕೂಡಿಸಬೇಕು.



## ಅದ್ವೈತಮತದ ಮತ್ತು ರಾಮಾನುಜಮತದ ಸೂತ್ರಾರ್ಥವಿಮರ್ಶೆ

## तात्पर्यचन्द्रिका

**यच्चोक्तं भामत्यां ''इहोपादानत्वं नाम भ्रमाधिष्ठानत्वम्'' इति ।**

ಅನುವಾದ - ಭಾಮತಿಯಲ್ಲಿ ಸೂತ್ರಗಳ ವ್ಯಾಖ್ಯಾನ ಹೀಗಿದೆ - ಪ್ರಥಮಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಇಹೋಪಾದಾನತ್ವಂ ನಾಮ ಭ್ರಮಾಧಿಷ್ಠಾನತ್ವಮ್' ಪ್ರಕೃತಿ ಶಬ್ದದಿಂದ ಹೇಳಲ್ಪಟ್ಟ ಉಪಾದಾನತ್ವವು 'ಅಧಿಷ್ಠಾನ' ಎಂಬರ್ಥವನ್ನು ಹೇಳುತ್ತಿದೆ. ಸಮಗ್ರ ಪ್ರಪಂಚದ ಭ್ರಮೆಗೆ ಬ್ರಹ್ಮನು ಅಧಿಷ್ಠಾನನಾದ್ದರಿಂದ ಉಪಾದಾನವಾಗಿದ್ದಾನೆ ಎಂದು.

**तत्राद्यसूत्रे प्रकृतिरिति प्रतिज्ञा न युक्ता । नहि सर्पस्य रज्जुःप्रकृतिरित्युच्यते ।**

ಹೀಗೆ ಅಧಿಷ್ಠಾನವನ್ನೇ ಉಪಾದಾನವೆಂದು ಹೇಳುವುದಾದರೆ, ಪ್ರಥಮಸೂತ್ರದಲ್ಲಿ ಪ್ರಕೃತಿ ಎಂಬ ಪ್ರತಿಜ್ಞೆಯೇ ಯುಕ್ತವಾಗುವುದಿಲ್ಲ. ಏಕೆಂದರೆ ಸರ್ಪದ ಭ್ರಮೆಗೆ ಹಗ್ಗವು ಅಧಿಷ್ಠಾನವಾಗುವುದಿಲ್ಲ.

ಆದರೆ ಯಾರೂ ಕೂಡ ಹಗ್ಗವನ್ನು ಸರ್ಪದ ಪ್ರಕೃತಿಯೆಂದು ಕರೆಯುವುದಿಲ್ಲ. ಆದ್ದರಿಂದ ಅಧಿಷ್ಠಾನವೇ ಬೇರೆ, ಉಪಾದಾನಕಾರಣವೇ ಬೇರೆ, ಉಪಾದಾನಕಾರಣವಾದದ್ದು ಅಧಿಷ್ಠಾನವಾಗಲು ಸಾಧ್ಯವೇ ಇಲ್ಲ.

**हेतुश्चायुक्तः । सूत्रोक्ते श्रौतमृत्पिण्डादिदृष्टान्ते मृन्मयाद्यधिष्ठानत्वाभावात् । नहि मृन्मयं मृद्यध्यस्तम् । मृत्तत्वज्ञानेऽप्यनिवृत्तेः ।**

'ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಹೇತುವೂ ಕೂಡ ಈ ಪಕ್ಷದಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ ಸೂತ್ರದಲ್ಲಿ ಉಲ್ಲೇಖಿಸಿದ ಯಾವ ಶ್ರುತಿಯಿದೆಯೋ, ಅದರಲ್ಲಿ ಮೃತ್ಪಿಂಡದ ದೃಷ್ಟಾಂತವನ್ನು ನೀಡಲಾಗಿದೆ. ಮೃತ್ಪಿಂಡದಿಂದ ಮೃನ್ಮಯವಾದ ಘಟಾದಿಗಳು ಹುಟ್ಟುತ್ತವೆ ಎಂದು ಹೇಳಿದಾಗ, ಘಟಕ್ಕೆ ಮೃತ್ಪಿಂಡವು ಉಪಾದಾನಕಾರಣವಾಯಿತು. ಆದರೆ ಯಾರೂ ಕೂಡ ಘಟಪಟಾದಿಗಳಿಗೆ ಮೃತ್ಪಿಂಡವನ್ನು ಅಧಿಷ್ಠಾನವೆಂದು ಹೇಳುವುದಿಲ್ಲ. ಘಟಪಟಾದಿಗಳು ಮಣ್ಣಿನಲ್ಲಿ ಅಧ್ಯಸ್ತವೆಂದಾಗಲಿ, ಮಣ್ಣು ಘಟಾದಿಗಳಿಗೆ ಅಧಿಷ್ಠಾನವೆಂದಾಗಲೀ ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ ಅಧಿಷ್ಠಾನದ ಜ್ಞಾನವು ಪ್ರಾಪ್ತವಾದಾಗ ಅಧ್ಯಸ್ತವು ನಿವೃತ್ತವಾಗುವುದು ಲೋಕಸಿದ್ಧವಾದ ವಿಷಯ. ಆದರೆ ಮಣ್ಣಿನ ಯಥಾರ್ಥಜ್ಞಾನ ಬಂದರೂ ಕೂಡ ನೀವು ಅಧ್ಯಸ್ತವೆಂದು ಹೇಳುವ ಘಟಾದಿಗಳು ನಿವೃತ್ತವಾಗದೇ ಹಾಗೆಯೇ ಇರುತ್ತದೆ.

**यच्चोक्तं ''सोऽकामयत बहुस्याम्'' इत्यभिध्योपदेशात् ब्रह्मैवोपादानं निमित्तं चेति द्वितीयार्थ इति ।**

'ಅಭಿಧ್ಯೋಪದೇಶಾಚ್ಚ' ಎಂಬ ಎರಡನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಲಾಗಿದೆ. 'ಸೋಽಕಾಮಯತ ಬಹುಸ್ಯಾಮ್ ಪ್ರಜಾಯೇಯ' ಎಂಬ ಶ್ರುತಿಯಲ್ಲಿ ಬ್ರಹ್ಮನು ಬಹುರೂಪವಾದ ಜಗತ್ತಿನ ರೂಪವನ್ನು ತಾಳಬೇಕೆಂದು ಇಚ್ಛಿಸುತ್ತಾನೆಂದು ಹೇಳಲಾಗಿದೆ. ಇಚ್ಛೆ ಮಾಡುವುದರಿಂದ ನಿಮಿತ್ತಕಾರಣನೆಂದು ಜಗತ್ತಾಗಿ ಪರಿಣಾಮವನ್ನು ಹೊಂದುವುದರಿಂದ ಉಪಾದಾನಕಾರಣನಾಗಿದ್ದಾನೆಂದು ಸಿದ್ಧವಾಗುತ್ತದೆ.

**तन्न । तत्र बहुभवनसङ्कल्पस्यैवोक्तत्वेन त्वदभिमताधिष्ठानत्वाप्रतीतेः । नहि स्थाणुः 'पुरुषः स्याम्' इत्यभिध्यायतीति ।**

ಎರಡನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಶ್ರುತಿಯಲ್ಲಿ ಬ್ರಹ್ಮನು ಅನೇಕರೂಪವನ್ನು ತಾಳುತ್ತೇನೆಂದು ಸಂಕಲ್ಪ ಮಾಡಿದ್ದಾನೆಂದು ಹೇಳಲಾಗಿದೆ ಹೊರತು, ನಿನಗೆ ಅಭಿಮತವಾದ ಅಧಿಷ್ಠಾನನಾಗುತ್ತೇನೆ ಎಂಬ ಸಂಕಲ್ಪವು ಕಾಣಿಸುತ್ತಿಲ್ಲ. ಸ್ಥಾಣುವಿನಲ್ಲಿ ಪುರುಷನು ಅಧ್ಯಸ್ತವಾದಾಗ

ಮೊದಲು ಸ್ಥಾಣುವಾದ ಪದಾರ್ಥವು 'ನಾನು ಪುರುಷನಾಗುತ್ತೇನೆ' ಎಂಬ ಇಚ್ಛೆಯನ್ನು ಮಾಡುವುದಿಲ್ಲವಷ್ಟೇ ?

**यच्चोक्तं ''सर्वाणि हवा इमानि भूतान्याकाशादेव समुत्पद्यन्त आकाशं प्रत्यस्तं यन्ति'' इति ब्रह्मण्येव जगदुत्पत्तिलययोः साक्षादाम्नानात् ब्रह्मैवोपादानम् । न ह्यनुपादाने कार्यस्य लय इति तृतीयार्थ इति ।**

ಮೂರನೆಯ ಸೂತ್ರ ವ್ಯಾಖ್ಯಾನ ಹೀಗಿದೆ - 'ಸರ್ವಾಣಿ ಹವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತಿ ಅಸ್ತಂ ಯಂತಿ' ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ನೇರವಾಗಿ ಬ್ರಹ್ಮನಲ್ಲಿಯೇ ಪ್ರಪಂಚದ ಉತ್ಪತ್ತಿ ಹಾಗೂ ಲಯಗಳನ್ನು ಹೇಳಲಾಗಿದೆ. ಒಂದು ವೇಳೆ ಬ್ರಹ್ಮನು ಉಪಾದಾನಕಾರಣನಾಗದಿದ್ದಲ್ಲಿ ಸಮಸ್ತ ಪ್ರಪಂಚವು ಅವರಲ್ಲೇ ಲಯವಾಗುತ್ತದೆ ಎಂದು ಹೇಳುವುದು ಯುಕ್ತವಾಗುವುದಿಲ್ಲ.

**तन्न । रूप्यस्य शुक्तितः प्रभवप्रलययोरप्रसिद्ध्या विवर्तवादप्रतिकूलत्वात् ।**

ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ರಜತವು ಶುಕ್ತಿಯಲ್ಲಿ ಅಧ್ಯಸ್ತವಾಗಿದೆ. ಆದರೆ ಯಾರೂ ಕೂಡ ಶುಕ್ತಿಯಿಂದ ರಜತವು ಹುಟ್ಟಿತು ಮತ್ತು ಅದರಲ್ಲೇ ಲಯಹೊಂದಿತು ಎಂದು ಹೇಳುವುದಿಲ್ಲ. ಶ್ರುತಿಯು ಬ್ರಹ್ಮನಲ್ಲೇ ಜಗತ್ತು ಹುಟ್ಟಿತು, ಅವನಲ್ಲೇ ಲಯಹೊಂದಿತು ಎಂದು ಹೇಳುತ್ತಿರುವುದರಿಂದ ಶುಕ್ತಿರೂಪ್ಯದ ದೃಷ್ಟಾಂತದಂತೆ ಬ್ರಹ್ಮನಲ್ಲಿ ಪ್ರಪಂಚವು ಅಧ್ಯಸ್ತವೆಂದು ನಿಮಗೆ ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಈ ಮೂರನೆಯ ಸೂತ್ರವೂ ಕೂಡ ನಿಮ್ಮ ವಿವರ್ತವಾದಕ್ಕೆ ಪ್ರತಿಕೂಲವೇ ಆಗಿದೆ.

**सौत्रस्योभयेत्यस्य सर्वनाम्न आद्यसूत्रप्रकृतनिमित्तत्वोपादानत्वत्यागेनाप्रकृत-प्रभवप्रलयपरत्वायोगाच्च ।**

ಮತ್ತು ಇದೇ ಸೂತ್ರದಲ್ಲಿ ಉಭಯ ಎಂಬ ಸರ್ವನಾಮಶಬ್ದದಿಂದ ಪ್ರಥಮಸೂತ್ರದಲ್ಲಿ ಪ್ರಸಕ್ತವಾದ ನಿಮಿತ್ತತ್ವ ಹಾಗೂ ಉಪಾದಾನತ್ವಗಳೆರಡನ್ನೂ ಪರಾಮರ್ಶಿಸಬೇಕು. ಆದರೆ ನೀವು ಪೂರ್ವಪ್ರಸಕ್ತವಾದದ್ದನ್ನು ಪರಾಮರ್ಶ ಮಾಡದೇ ಅಪ್ರಕೃತವಾದ ಪ್ರಭವ ಮತ್ತು ಪ್ರಲಯ ಎಂಬರ್ಥವನ್ನು ಹೇಳಿದ್ದೀರಿ. ಇದು ಅಯುಕ್ತವಾಗಿದೆ.

**उपादानत्वमात्रस्य प्रलयमात्रेण सिद्धेः । निमित्तत्वे सत्युपादानत्वस्य तु तन्तोरूर्णनाभौ नियमेन प्रलयादर्शनेन केवलोपादानासाधारणाभ्यां प्रभव-प्रलयाभ्यामप्यसिद्धेः उभयपदवैयर्थ्याच्च । साक्षाच्छब्दास्वारस्याच्च ।**

ಸೂತ್ರವು ಕೇವಲ ಬ್ರಹ್ಮನಿಗೆ ಉಪಾದಾನತ್ವವನ್ನಷ್ಟೇ ಪ್ರತಿಪಾದನೆ ಮಾಡುವುದಾದರೆ, ಪ್ರಲಯವನ್ನು ಹೇಳಿದರೆ ಸಾಕು. ಉತ್ಪತ್ತಿಯನ್ನು ಹೇಳುವ ಅವಶ್ಯಕತೆಯಿಲ್ಲ. ಯಾವುದು ಉಪಾದಾನಕಾರಣವೋ, ಅದರಲ್ಲಿಯೇ ಕಾರ್ಯವು ಲಯವಾಗುತ್ತದೆಂದು ಲೋಕದಲ್ಲಿ ಕಂಡಿದೆ. ಆದ್ದರಿಂದ ಸೂತ್ರದಲ್ಲಿ ಉತ್ಪತ್ತಿಯನ್ನು ಉಲ್ಲೇಖಿಸಿದ್ದು ತಪ್ಪಾಗುತ್ತದೆ. ಒಂದು ವೇಳೆ ಬ್ರಹ್ಮನು ನಿಮಿತ್ತಕಾರಣನೂ ಆಗಿದ್ದಾನೆ ಉಪಾದಾನಕಾರಣನೂ ಆಗಿದ್ದಾನೆಂದು ವಿವಕ್ಷಿಸುವುದಾದರೆ ಉಭಯಪದವೇ ವ್ಯರ್ಥವಾಗುತ್ತದೆ.[೧] ಏಕೆಂದರೆ ತಂತು ಊರ್ಣನಾಭಿಯಲ್ಲಿ ನಿಯಮೇನ ಲಯ ಹೊಂದುತ್ತದೆಂದು ಲೋಕದಲ್ಲಿ ಕಂಡಿಲ್ಲ. ಆದ್ದರಿಂದ ಕೇವಲ ಉಪಾದಾನದಲ್ಲಷ್ಟೇ ಅಸಾಧಾರಣವಾದ ಪ್ರಭವಪ್ರಲಯಗಳಿಂದ ನಿಮಿತ್ತತ್ವೇ ಸತ್ಯುಪಾದಾನತ್ವವನ್ನು ಸಮರ್ಥಿಸಲಾಗದು. ಆದ್ದರಿಂದ ಉಭಯಪದಕ್ಕೆ ಸಾರ್ಥಕ್ಯವೇ ಇರುವುದಿಲ್ಲ. ಮತ್ತು ಸಾಕ್ಷಾತ್ ಶಬ್ದಕ್ಕೆ ಯಾವುದೇ ವಿಶೇಷಾರ್ಥವನ್ನು ಹೇಳದ ಕಾರಣ ಅಸ್ವಾರಸ್ಯವು ಬರುತ್ತದೆ.

**ये हि निमित्तत्वोपादानत्वे परम्परया साधिते तयोरेव साक्षात् साघने हि साक्षात्पदं स्वरसम् ।**

ಒಂದು ವೇಳೆ ಹಿಂದಿನ ಸೂತ್ರದಲ್ಲಿ ಬ್ರಹ್ಮನು ನಿಮಿತ್ತಕಾರಣನೂ, ಉಪಾದಾನಕಾರಣನೂ ಆಗಿದ್ದಾನೆಂಬುದನ್ನು ಪರಂಪರೆಯಿಂದ ಸಾಧನೆ ಮಾಡಿದ್ದಲ್ಲಿ, ಈ ಸೂತ್ರದಲ್ಲಿರುವ ಸಾಕ್ಷಾತ್ ಪದದಿಂದ ನೇರವಾಗಿ ಅದನ್ನು ಸಾಧಿಸಲಾಗಿದೆಯೆಂದು ಹೇಳುವುದು ಸ್ವರಸವಾಗುತ್ತದೆ. ಆದರೆ ನೀವು ಪರಂಪರೆಯಿಂದ ನಿಮಿತ್ತತ್ವ ಹಾಗೂ ಉಪಾದಾನತ್ವಗಳನ್ನು ಹಿಂದೆ ಸಮರ್ಥನೆ ಮಾಡಿಯೇ ಇಲ್ಲ. ಹೀಗಿರುವಾಗ ಇಲ್ಲಿರುವ 'ಸಾಕ್ಷಾತ್' ಪದಕ್ಕೆ ಸಾರ್ಥಕ್ಯ ಹೇಳಲು ಹೇಗೆ ಸಾಧ್ಯ ?

(೧) ಈಗಿನ ಮುದ್ರಿತಪುಸ್ತಕದಲ್ಲಿ 'ನಿಮಿತ್ತತ್ವೇ ಸತಿ ಉಪಾದಾನತ್ವಸ್ಯ ತು ತಂತೋರೂರ್ಣನಾಭೌ ಪ್ರಲಯದರ್ಶನೇನ ಕೇವಲೋಪಾದಾನಾಸಾಧಾರಣಾಭ್ಯಾಂ ಪ್ರಭವಪ್ರಲಯಾಭ್ಯಾಮಪ್ರಸಿದ್ಧೇಃ ಉಭಯಪದವೈಯರ್ಥ್ಯಾಚ್ಚ' ಎಂಬ ಪಾಠವಿದೆ. ಈ ಪಾಠವನ್ನು ವಿವಕ್ಷಿಸಿದಾಗ 'ಉಪಾದಾನಾಸಾಧಾರಣಾಭ್ಯಾಂ' ಎಂಬುದಕ್ಕೆ ಅರ್ಥವನ್ನು ಹೇಳಲು ಕಠಿಣವಾಗುತ್ತದೆ. ಆದ್ದರಿಂದ 'ನಿಯಮೇನ' ಎಂಬ ಪದವನ್ನು ಸೇರಿಸಿ, 'ಪ್ರಲಯದರ್ಶನೇನ' ಎಂಬುದನ್ನು ತೆಗೆದು 'ಪ್ರಲಯ ಅದರ್ಶನೇನ' ಎಂದು ಇಲ್ಲಿ ವ್ಯತ್ಯಾಸ ಮಾಡಲಾಗಿದೆ. ನಿಮಿತ್ತತ್ವವಿದ್ದು, ಉಪಾದಾನತ್ವವೂ ಇದೆ ಎನ್ನಲು ಊರ್ಣನಾಭಿಯೇ ದೃಷ್ಟಾಂತವೆಂದು ನಾವು ಅನೇಕ ಕಡೆ ಹೇಳಿದ್ದೇವೆ. ಆದ್ದರಿಂದ ಎಲ್ಲಿ ನಿಮಿತ್ತತ್ವವು ಉಪಾದಾನತ್ವವೂ ಇರುತ್ತದೋ, ಅಂತಹ ಊರ್ಣನಾಭಿಯ ದೃಷ್ಟಾಂತದಲ್ಲಿ ಪ್ರಲಯವು ನಿಯಮೇನ ಆಗಿಯೇ ತೀರುತ್ತದೆಂಬುದು ಸಿದ್ಧವಾಗಿಲ್ಲ. ಕೆಲವೊಮ್ಮೆ ಜೇಡರ ಹುಳ ತಾನು ಕಟ್ಟದ ಬಲೆಯನ್ನು ನುಂಗದಿದ್ದರೆ, ಆ ಜೇಡರ ಬಲೆಯು ಜೇಡರ ಹುಳದಲ್ಲಿ ಲಯವನ್ನು ಹೊಂದುವುದಿಲ್ಲ. ಯಾವುದು ಕೇವಲ ಉಪಾದಾನಕಾರಣವಾಗಿದೆಯೋ, ಅಂತಹ ಸ್ಥಳದಲ್ಲಿ ಲಯವು ನಿಯಮೇನ ಇದ್ದೇ ಇರುತ್ತದೆ. ಉದಾಹರಣೆ - ಮಣ್ಣಿನಿಂದ ಘಟವು ತಯಾರಾದಾಗ, ಘಟವು ಮಣ್ಣಿನಲ್ಲೇ ಲಯವನ್ನು ಹೊಂದುತ್ತದೆ. ಆದರೆ ನಿಮಿತ್ತಕಾರಣ ಉಪಾದಾನಕಾರಣ ಎರಡು ಒಂದೇ ಆಗಿದ್ದಾಗ ಈ ನಿಯಮ ಇರುವುದಿಲ್ಲ. ಈ ವಾಕ್ಯಕ್ಕೆ ಹೀಗೆ ಅರ್ಥವನ್ನು ವಿವಕ್ಷಿಸಬೇಕೆಂದು ಕಾಣಸುತ್ತದೆ. ವಿದ್ವಾಂಸರು ಇದರ ಬಗ್ಗೆ ಸ್ವತಃ ಚಿಂತನೆ ಮಾಡಿ, ವಾಕ್ಯದ ಅರ್ಥವನ್ನು ತಿಳಿಯಬಹುದು.

**यच्चोक्तं ''तदात्मानं स्वयमकुरुत'' इत्यात्मन एव सृष्टौ कर्मत्वकर्तृत्वोक्तेः, ''सच्च त्यच्चाभवत्'' इति परिणामोक्तेः, ''यत् भूतयोनिम्'' इति योनिशब्दाच्चोपादानं ब्रह्मेति चतुर्थपञ्चमषष्ठानामर्थ इति ।**

'ಆತ್ಮಕೃತೇಃ' ಎಂಬ ಸೂತ್ರವೇ ಬೇರೆ, 'ಪರಿಣಾಮಾತ್' ಎಂಬ ಸೂತ್ರವೇ ಬೇರೆ. 'ಆತ್ಮಕೃತೇಃ' ಎಂದರೆ 'ತದಾತ್ಮಾನಂ ಸ್ವಯಮಕುರುತ' ಎಂಬ ಶ್ರುತಿಯಲ್ಲಿ ಪರಮಾತ್ಮನು ತನ್ನನ್ನೇ ಸೃಷ್ಟಿ ಮಾಡಿಕೊಳ್ಳುತ್ತಾನೆ ಎಂದು ಹೇಳಲಾಗಿದೆ. ಒಬ್ಬನಲ್ಲಿಯೇ ಕರ್ಮತ್ವ ಹಾಗೂ ಕರ್ತೃತ್ವಗಳು ಶ್ರುತವಾಗಿರುವುದರಿಂದ ನಿಮಿತ್ತತ್ವ ಉಪಾದಾನತ್ವಗಳೆರಡೂ ಸಿದ್ಧವಾಗುತ್ತವೆ. 'ಪರಿಣಾಮಾತ್' ಎಂಬ ಸೂತ್ರದಲ್ಲಿ 'ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿಯು ಬ್ರಹ್ಮನಿಗೆ ಪರಿಣಾಮವನ್ನು ಹೇಳುತ್ತಿದೆ. ಆದ್ದರಿಂದ ಉಪಾದಾನಕಾರಣತ್ವವು ಸಿದ್ಧವಾಗುತ್ತದೆ. 'ಯೋನಿಶ್ಚ ಹಿ ಗೀಯತೇ' ಎಂಬ ಸೂತ್ರದಲ್ಲಿ 'ಯದ್ಭೂತಯೋನಿಮ್' ಎಂಬ ಶ್ರುತಿಯಲ್ಲಿರುವ ಯೋನಿಶಬ್ದಕ್ಕೆ 'ಉಪಾದಾನ' ಎಂದರ್ಥ. ಹೀಗೆ ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನಷ್ಟೇ ಅಲ್ಲ. ಉಪಾದಾನಕಾರಣನೂ ಆಗಿದ್ದಾನೆ ಎಂಬ ವಿಷಯದಲ್ಲಿ ನಾಲ್ಕು, ಐದು, ಆರನೆಯ ಸೂತ್ರಗಳು ಆಧಾರವಾಗಿವೆ ಎಂದು ವ್ಯಾಖ್ಯಾನ ಮಾಡುತ್ತಾರೆ.

**तन्न । विवर्तमते श्रुतौ सूत्रे च प्रकृतिपरिणामयोनिशब्दानामयोगात् । नहि रज्जुः सर्पं करोतीति वा सर्पोऽभवदिति वा सर्पात्मना परिणतेति वा सर्पयोनिरिति वोच्यते ।**

ಈ ಮೂರು ಸೂತ್ರಗಳ ವ್ಯಾಖ್ಯಾನವೂ ಕೂಡ ಅತ್ಯಂತ ಅಯುಕ್ತವಾಗಿದೆ. ಏಕೆಂದರೆ ವಿವರ್ತಮತದಲ್ಲಿ ಶ್ರುತಿಯಲ್ಲಿರುವ ಹಾಗೂ ಸೂತ್ರದಲ್ಲಿರುವ ಪ್ರಕೃತಿಶಬ್ದ, ಪರಿಣಾಮಶಬ್ದ, ಯೋನಿಶಬ್ದಗಳಿಗೆ ಅರ್ಥವನ್ನು ಹೇಳಲು ಸಾಧ್ಯವೇ ಇಲ್ಲ. ರಜ್ಜುವಿನಲ್ಲಿ ಸರ್ಪವು ಆರೋಪಿತವಾಗಿದೆ ಎಂದು ತಿಳಿದಾಗ, ರಜ್ಜುವು ಸರ್ಪವನ್ನು ಮಾಡುತ್ತದೆ ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಪ್ರಕೃತಿ ಶಬ್ದವು ಅಯುಕ್ತವಾಗಿದೆ. ಅಥವಾ ರಜ್ಜುವು ಸರ್ಪವಾಯಿತು ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಪರಿಣಾಮಶಬ್ದವು ಅಯುಕ್ತವಾಗುತ್ತದೆ. ಅಥವಾ ಸರ್ಪರೂಪದಲ್ಲಿ ರಜ್ಜುವು ಪರಿಣತವಾಯಿತು ಎಂದೂ ಕೂಡ ಯಾರೂ ಹೇಳುವುದಿಲ್ಲ. ಆದ್ದರಿಂದ ಯೋನಿ ಶಬ್ದವು ಅಯುಕ್ತವಾಗಿದೆ.

**विवर्तपरिणामादिप्रक्रिया त्वन्यत्र निरस्ता ।**

ಅದ್ವೈತಿಗಳಲ್ಲಿ ವಿವರ್ತಪರಿಣಾಮವಾದದ ಪ್ರಕ್ರಿಯೆಯು ಬಹಳ ಇದೆ. ಅದನ್ನೆಲ್ಲ ನ್ಯಾಯಾಮೃತಾದಿಗ್ರಂಥಗಳಲ್ಲಿ ನಿರಾಕರಣೆ ಮಾಡಿದ್ದೇವೆ.

**चतुर्थसूत्रस्थपरिणामशब्दबलात्परैः परिणामादेरुक्तत्वात् भाष्ये तत् व्याख्यावसर एव परमतं परास्तमिति ।।**

ನಮ್ಮ ಪ್ರಕಾರ ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ನಾಲ್ಕನೆಯ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಮಾತ್ರ, ಆಚಾರ್ಯರು ಭಾಷ್ಯದಲ್ಲಿ ಅದ್ವೈತಮತವನ್ನು ನಿರಾಕರಣೆ ಮಾಡಿದ್ದಾರೆ. ಏಕೆಂದರೆ ನಾಲ್ಕನೆಯ ಸೂತ್ರದಲ್ಲಿರುವ ಪರಿಣಾಮಶಬ್ದ ನೇರವಾಗಿ ಉಪಾದಾನತ್ವವನ್ನು ಹೇಳುತ್ತಿದೆ. ಆದ್ದರಿಂದ ನಾಲ್ಕನೆಯ ಸೂತ್ರವನ್ನು ವ್ಯಾಖ್ಯಾನ ಮಾಡುವಾಗಲೇ ಪರಮತವನ್ನು ನಿರಾಕರಣೆ ಮಾಡಿದ್ದಾರೆ. ಆದ್ದರಿಂದ ಮೊದಲೇ ಏಕೆ ನಿರಾಕರಿಸಿಲ್ಲ ? ಎಂಬ ಪ್ರಶ್ನೆಗೆ ಅವಕಾಶವಿಲ್ಲ.

**टीकाक्षरार्थस्तु ।। नियामकविशेषाभावेनेति ।। नपुंसकलिङ्गब्रह्मादि-शब्दवाच्यत्व इव स्त्रीलिङ्गवाच्यत्वे विशेषमानाभावादित्यर्थः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् प्रकृत्यधिकरणं सम्पूर्णम् ।।६।।**

ಟೀಕೆಯ ಕಠಿಣಪದಾರ್ಥ ಹೀಗಿದೆ - 'ನಿಯಾಮಾಕವಿಶೇಷಾಭಾವೇನ ತಥಾ ಕಲ್ಪನಾಯೋಗಾತ್' ಎಂದು ಟೀಕೆಯಲ್ಲಿದೆ. ಇದರ ಅರ್ಥ ಹೀಗೆ - ಪರಮಾತ್ಮನು ನಪುಂಸಕ ಲಿಂಗದಲ್ಲಿರುವ ಬ್ರಹ್ಮ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆನ್ನಲು ವಿಶೇಷಪ್ರಮಾಣವಿದೆ. ಆದರೆ ಅದರಂತೆ ಸ್ತ್ರೀಲಿಂಗಶಬ್ದಗಳಿಂದಲೂ ಪ್ರತಿಪಾದ್ಯನಾಗುತ್ತಾನೆನ್ನಲು ಯಾವುದೇ ವಿಶೇಷ ಪ್ರಮಾಣವಿರುವುದಿಲ್ಲ ಎಂದರ್ಥ.

ಇಲ್ಲಿಗೆ ಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದಶಿಷ್ಯರಾದ ಶ್ರೀ ವ್ಯಾಸತೀರ್ಥರಿಂದ ರಚಿತವಾದ
ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪ್ರಕೃತ್ಯಧಿಕರಣವು ಸಂಪೂರ್ಣವಾಯಿತು

**प्रकाशः —**

**यच्चेति** ।। परिणामादित्यत्रैव तथाभिधानादित्यर्थः । आरोपाधिष्ठानत्वमित्यर्थः। द्वितीयार्थं निराह – **यच्चेति** ।

ವಿವರಣೆ - ಭಾಮತಿಯಲ್ಲಿ ವ್ಯಾಖ್ಯಾನ ಮಾಡುವ ಸೂತ್ರಾರ್ಥಗಳನ್ನು ಅನುವಾದ ಮಾಡಿ, ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ. 'ಪರಿಣಾಮಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಭಾಮತಿಯಲ್ಲಿ ''ಇಹೋಪಾದಾನತ್ವಂ ನಾಮ ಭ್ರಮಾಧಿಷ್ಠಾನತ್ವಮ್'' ಎಂದು ಹೇಳಲಾಗಿದೆ. ಅಧಿಷ್ಠಾನಶಬ್ದಕ್ಕೆ ಆರೋಪಕ್ಕೆ ಅಧಿಷ್ಠಾನವಾದದ್ದು ಎಂದರ್ಥ. ಎರಡನೆಯ ಸೂತ್ರವ್ಯಾಖ್ಯಾನವನ್ನು 'ಯಚ್ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – उभाभ्यामिति सम्बन्धः । अभिध्यानपूर्वकं बहुभवनस्योपदेशात् इत्यर्थः ।

'ಉಕ್ತಂ' ಎಂಬುದಕ್ಕೆ 'ಉಭಾಭ್ಯಾಮ್'' ಎಂಬಲ್ಲಿ ಅನ್ವಯ ತಿಳಿಯಬೇಕು. ರಾಮಾನುಜರು ಹಾಗೂ ಅದ್ವೈತಿಗಳು ಇಬ್ಬರೂ ಕೂಡ ಹೀಗೆಯೇ ವ್ಯಾಖ್ಯಾನಿಸುತ್ತಾರೆ ಎಂದಭಿಪ್ರಾಯ. ಇಚ್ಛಾಪೂರ್ವಕವಾದ ಬಹುಭವನವನ್ನು ಶ್ರುತಿಯಲ್ಲಿ ಹೇಳಿರುವುದರಿಂದ ನಿಮಿತ್ತಕಾರಣ ಹಾಗೂ ಉಪಾದಾನಕಾರಣಗಳೆರಡನ್ನು ಹೇಳಿದಂತಾಗುತ್ತದೆ.

**प्रकाशः** – त्वदिति द्वयोर्ग्रहणम् । परमत आरोपाधिष्ठानत्वस्याप्रतीतेरित्यर्थः । मतान्तरे तु रामकृष्णरूपेणापि बहुभवनसम्भवाच्चिदचिद्रूपेण बहुःस्यामिति तदुक्त्या तच्छरीरत्वरूपाधिष्ठानत्वस्याप्रतीतेरित्यर्थः ।

ಗ್ರಂಥದಲ್ಲಿ 'ತ್ವದಿತಿ ಮತಾತ್' ಎಂದು ಹೇಳಿದ್ದಾರೆ. ಎಂದರೆ ಅದ್ವೈತಿಗಳಿಗೆ ಹಾಗೂ ವಿಶಿಷ್ಟಾದ್ವೈತಿಗಳಿಗೆ ಅಭಿಮತವಾದದ್ದು ಎಂದೇ ಅರ್ಥ. ಅದ್ವೈತಿಗಳ ಮತದಲ್ಲಿ ಆರೋಪಾಧಿಷ್ಠಾನತ್ವವು ಪ್ರತೀತವಾಗುತ್ತಿಲ್ಲ ಎಂದರ್ಥ. ರಾಮಾನುಜಮತದಲ್ಲಿ ರಾಮಕೃಷ್ಣಾದಿರೂಪಗಳಿಂದಲೂ ಕೂಡ ಬ್ರಹ್ಮನಿಗೆ ಬಹುಭವನವು ಯುಕ್ತವಾಗುವುದರಿಂದ ಶ್ರುತಿಯನ್ನು ವ್ಯಾಖ್ಯಾನಿಸಬಹುದು. ಅದನ್ನು ಬಿಟ್ಟು, ಚಿದಚಿತ್‌ರೂಪದಿಂದ ಬ್ರಹ್ಮನು ಬಹುರೂಪವನ್ನು ತಾಳುತ್ತಾನೆಂದು ನೀವು ವ್ಯಾಖ್ಯಾನ ಮಾಡುವುದು ಸರಿಯಲ್ಲ. ಇವರ ಪಕ್ಷದಲ್ಲಿ 'ಅಧಿಷ್ಠಾನತ್ವಾಪ್ರತೀತೇಃ' ಎಂಬುದಕ್ಕೆ ಚಿದಚಿತ್‌ರೂಪವಾದ ಶರೀರತ್ವವೆಂಬ ಅಧಿಷ್ಠಾನತ್ವವು ಪ್ರತೀತವಾಗುತ್ತಿಲ್ಲ ಎಂದರ್ಥ.

**प्रकाशः** – आरोपपक्षेऽनानुगुण्यमुपपादयति – **न हीति** ।। नच वाक्यशेषे तेजःप्रभृतिसर्जनप्रतीतेरेवं कल्प्यत इति वाच्यम् । ईक्षतिकर्मेत्यत्रास्य वाक्यस्यान्यथाव्याख्यानादिति भावः ।

ಆರೋಪಾಧಿಷ್ಠಾನತ್ವವೆಂಬ ಅದ್ವೈತಮತದ ಪ್ರಕಾರ ಅನಾನುಗುಣ್ಯವನ್ನು 'ನ ಹಿ ಸ್ಥಾಣುಃ' ಎಂಬ ವಾಕ್ಯದಿಂದ ಉಪಪಾದಿಸಿದ್ದಾರೆ. ವಾಕ್ಯಶೇಷದಲ್ಲಿ 'ತತ್ತೇಜೋಽಸೃಜತ' ಇತ್ಯಾದಿಯಾಗಿ ತೇಜಸ್ಸು ಮೊದಲಾದವುಗಳ ಸರ್ಜನವನ್ನು ಹೇಳಿದ್ದಾರೆ. ಅದರ ಬಲದಿಂದ 'ಬಹುಸ್ಯಾಮ್'' ಎಂಬುದಕ್ಕೆ ಕೇವಲ ಬಹುರೂಪಗಳನ್ನು ತಾಳುತ್ತಾನೆಂದಷ್ಟೇ ಹೇಳಲಾಗದು. ಹೊರತಾಗಿ, ತೇಜಸ್ಸು ಮೊದಲಾದ ಜಗತ್ತಿನ

ಬಹುರೂಪನಾಗಿ ಸೃಷ್ಟಿಯನ್ನು ಹೊಂದುತ್ತಾನೆಂದು ಕಲ್ಪಿಸುತ್ತೇವೆ. ಹೀಗೆ ಪ್ರಶ್ನಿಸಬಾರದು. ಏಕೆಂದರೆ ಈಗಾಗಲೇ 'ಈಕ್ಷತಿಕರ್ಮವ್ಯಪದೇಶಾತ್ ಸಃ' ಎಂಬ ಅಧಿಕರಣದಲ್ಲಿ ನಾವು ಬೇರೆ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾಗಿದೆ.

**प्रकाशः** – तृतीयसूत्रार्थं निराह – **यच्चेति** ।। परैरिति शेषः ।। **विवर्तेति** ।। भामत्यां तथोक्तेरिति भावः ।। **सर्वनाम्न इति** ।। तस्य प्रकृतपरामर्शित्वादिति भावः।

ಮೂರನೆಯ ಸೂತ್ರವ್ಯಾಖ್ಯಾನವನ್ನು 'ಯಚ್ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಇದನ್ನು ಕೇವಲ ಅದ್ವೈತಮತದಂತೆ ತಿಳಿಯಬೇಕು. ಸಮಸ್ತ ಜಗತ್ತು ಬ್ರಹ್ಮನಿಂದಲೇ ಹುಟ್ಟಿ, ಬ್ರಹ್ಮನಲ್ಲೇ ಲಯ ಹೊಂದುತ್ತದೆಂದು ಅದ್ವೈತಿಗಳು ಹೇಳುತ್ತಾರೆ ಹೊರತು, ರಾಮಾನುಜರು ಹೇಳುವುದಿಲ್ಲ. 'ವಿವರ್ತವಾದ ಪ್ರತಿಕೂಲತ್ವಾತ್' ಎಂದು ಗ್ರಂಥದಲ್ಲಿ ಹೇಳಿದ್ದು, ಭಾಮತಿಗೆ ಹೇಳಿದ ದೋಷವೆಂದು ತಿಳಿಯಬೇಕು. ಏಕೆಂದರೆ ಭಾಮತಿಯಲ್ಲಿ ವಿವರ್ತವಾದವನ್ನು ಸಮರ್ಥಿಸಲಾಗಿದೆ. ಗ್ರಂಥದಲ್ಲಿ 'ಸರ್ವನಾಮ್ನಃ' ಎಂದು ಹೇಳಿದ್ದಾರೆ. ಸರ್ವನಾಮಶಬ್ದದಿಂದ ಪೂರ್ವಪ್ರಕೃತವಾದದ್ದನ್ನೇ ಪರಾಮರ್ಶಿಸಬೇಕು. ಹಿಂದೆ ಪ್ರಭವ-ಪ್ರಲಯಗಳು ಪ್ರಕೃತವೇ ಆಗಿಲ್ಲ ಎಂದಭಿಪ್ರಾಯ.

**प्रकाशः** – उपादानत्वमात्रे उभयाम्नानं हेतुरुत विशिष्ट इति विकल्पौ हृदि कृत्वा क्रमेण निराह – **उपादानत्वेति** ।। अस्वारस्यमेव व्यतिरेकमुखेन व्यनक्ति – **ये हीति** ।।

ಉಭಯಾಮ್ನಾನವು ಬ್ರಹ್ಮನು ಕೇವಲ ಉಪಾದಾನಕಾರಣನಾಗಿದ್ದಾನೆಂಬುದಕ್ಕೆ ಮಾತ್ರ ಹೇತುವಾಗುತ್ತದೋ, ಅಥವಾ ಉಪಾದಾನತ್ವವಿಶಿಷ್ಟವಾದ ನಿಮಿತ್ತತ್ವಕ್ಕೆ ಹೇತುವಾಗುತ್ತದೋ? ಹೀಗೆ ಎರಡು ವಿಕಲ್ಪಗಳನ್ನು ಮಾತ್ರ ಕ್ರಮವಾಗಿ 'ಉಪಾದಾನತ್ವ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಕೇವಲ ಉಪಾದಾನತ್ವವನ್ನು ಸಮರ್ಥಿಸಲು ಪ್ರಳಯವನ್ನು ಹೇಳಿದರೆ ಸಾಕು, ಸೃಷ್ಟಿಯನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಸಾಕ್ಷಾತ್‌ಪದವು ಅಸ್ವರಸವಾಗಿದೆಯೆಂದು ಹೇಳಿದ್ದನ್ನೇ ವ್ಯತಿರೇಕಮುಖದಿಂದ 'ಯೇ ಹಿ' ಇತ್ಯಾದಿ ವಾಕ್ಯವು ವಿವರಿಸುತ್ತಿದೆ.

**प्रकाशः** – एतेन न केवलं प्रतिज्ञादृष्टान्ताभिध्योपदेशादिभिरयमर्थो निश्चीयते किन्तु ''किंस्विद्वनं क उ स वृक्ष आसित्'' इत्यादिना जगदुपादाननिमित्तादौ पृष्टे ''ब्रह्मवनं ब्रह्मसवृक्ष आसीत्'' इत्यादिना निमित्तत्वोपादानत्वयोस्साक्षात् प्रत्यक्षमाम्नानादिति कैश्चिदुक्तं निरस्तम् ।

ಹೀಗೆ ಹೇಳಿದ್ದರಿಂದ ರಾಮಾನುಜರ ಸೂತ್ರಾರ್ಥವನ್ನು ನಿರಾಕರಿಸಿದಂತಾಯಿತು. ಅವರ ಸೂತ್ರವ್ಯಾಖ್ಯಾನ ಹೀಗಿದೆ - 'ಪ್ರತಿಜ್ಞಾದೃಷ್ಟಾಂತಾನುಪರೋಧಾತ್' 'ಅಭಿಧ್ಯೋಪದೇಶಾತ್' ಇವೇ ಮೊದಲಾದ ಹೇತುಗಳಿಂದ

ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನಷ್ಟೇ ಅಲ್ಲ ಉಪಾದಾನಕಾರಣನೂ ಆಗಿದ್ದಾನೆ ಎಂದು ನಿಶ್ಚಯವಾಗುತ್ತದೆ. 'ಕಿಂಸ್ವಿದ್ವನಂ ಕ ಉ ಸ ವೃಕ್ಷ ಆಸೀತ್' ಇತ್ಯಾದಿಯಾಗಿ ವನ ಮತ್ತು ವೃಕ್ಷ ಮೊದಲಾದ ಜಗತ್ತಿಗೆ ಯಾರು ಉಪಾದಾನಕಾರಣ ಮತ್ತು ಯಾರು ನಿಮಿತ್ತಕಾರಣ ಎಂದು ಪ್ರಶ್ನಿಸಿದಾಗ 'ಬ್ರಹ್ಮವನಂ ಬ್ರಹ್ಮ ಸ ವೃಕ್ಷ ಆಸೀತ್' ಇತ್ಯಾದಿಯಾಗಿ ಬ್ರಹ್ಮನೇ ವನ, ವೃಕ್ಷ ಮೊದಲಾದ ಜಗತ್ತಿಗೆ ಉಪಾದಾನಕಾರಣನೂ, ನಿಮಿತ್ತಕಾರಣನೂ ಆಗಿದ್ದಾನೆಂದು ನೇರವಾಗಿ ಹೇಳಲಾಗಿದೆ.

ಸಮಾಧಾನ - ರಾಮಾನುಜರ ಈ ವ್ಯಾಖ್ಯಾನವು ಅದ್ವೈತಮತದ ನಿರಾಕರಣೆಯಿಂದಲೇ ನಿರಸ್ತವಾಗಿದೆ.

**प्रकाशः –** श्रुतावुपादानत्वनिमित्तत्वयोस्स्पष्टमप्रतीतेः । साक्षादित्यस्य परम्परां विनेत्यर्थस्य स्वरसत्वाच्चेति ॥

ಈ ಶ್ರುತಿಯಲ್ಲಿ ಬ್ರಹ್ಮನೇ ಉಪಾದಾನಕಾರಣನು ಮತ್ತು ನಿಮಿತ್ತಕಾರಣನು ಆಗಿದ್ದಾನೆಂದು ಸ್ಪಷ್ಟವಾಗಿ ಕಾಣಿಸುತ್ತಲೇ ಇಲ್ಲ. ಮತ್ತು 'ಸಾಕ್ಷಾತ್' ಎಂಬ ಪದಕ್ಕೆ ಪರಂಪರೆಯಿಂದ ಹೇಳದೇ ನೇರವಾಗಿ ಹೇಳಿರಬೇಕು ಎಂದರ್ಥ. ಅದನ್ನು ಬಿಟ್ಟು ಸ್ಪಷ್ಟವಾಗಿ ಶ್ರುತಿಯಲ್ಲಿ ಹೇಳಿದ್ದರಿಂದ ಸಾಕ್ಷಾತ್ತಾಗಿ ಹೇಳಲಾಗಿದೆ ಎಂದು ವ್ಯಾಖ್ಯಾನಿಸುವುದು ಅಸ್ವರಸವಾಗುತ್ತದೆ.

**प्रकाशः – यच्चेति** ॥ उभाभ्यामित्यन्वयः । परिणामादित्यस्य मतद्वयेऽपि पार्थक्याच्चतुर्थपञ्चमषष्ठानामित्युक्तम् ।

ಗ್ರಂಥದಲ್ಲಿ ಮೂರು ಸೂತ್ರಗಳನ್ನು ಸೇರಿಸಿ, ವ್ಯಾಖ್ಯಾನ ಮಾಡಿದ್ದು, ಇಬ್ಬರ ಪ್ರಕಾರವೂ ಕೂಡ ಆಗಿರುತ್ತದೆಂದು ತಿಳಿಯಬೇಕು. 'ಪರಿಣಾಮಾತ್' ಎಂಬುದು ಇಬ್ಬರ ಪ್ರಕಾರವೂ ಕೂಡ ಪ್ರತ್ಯೇಕ ಸೂತ್ರವೆಂದು ಪರಿಗಣಿಸಲಾಗಿದೆ. ಅದಕ್ಕಾಗಿ 'ಚತುರ್ಥಪಂಚಮಷಷ್ಠಾನಾಮ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ.

**प्रकाशः – परमते दोषमाह – विवर्तेति** ॥ मतान्तरे तु विशिष्टस्यैव कृतिपरिणामादेरभ्युपगत्या केवलात्मनस्तदभावादात्मपदास्वारस्यादिकं ध्येयम् । मतद्वये परिणामादित्यस्य पार्थक्यं निर्बीजम् ।

ಅದ್ವೈತಮತದಲ್ಲಿ ಪ್ರಕೃತಿ, ಯೋನಿ ಮೊದಲಾದ ಯಾವುದೇ ಶಬ್ದಗಳು ಯುಕ್ತವಾಗುವುದಿಲ್ಲ ಎಂದು ಪ್ರತ್ಯೇಕವಾದ ದೋಷವನ್ನು 'ವಿವರ್ತ' ಇತ್ಯಾದಿ ದೋಷದಿಂದ ಹೇಳಿದ್ದಾರೆ. ವಿಶಿಷ್ಟಾದ್ವೈತಮತದಲ್ಲಿ ಕೃತಿ, ಪರಿಣಾಮ ಮೊದಲಾದವುಗಳೆಲ್ಲವೂ ವಿಶಿಷ್ಟನಾದ ಆತ್ಮನಿಗೆ ಇದೆ ಹೊರತು, ಶುದ್ಧನಾದ ಆತ್ಮನಿಗೆ ಇರುವುದಿಲ್ಲ. ಹೀಗಿರುವಾಗ ಸೂತ್ರದಲ್ಲಿ ಆತ್ಮಶಬ್ದವನ್ನು ಹೇಳಿದ್ದು ತಪ್ಪಾಗುತ್ತದೆ. 'ವಿಶಿಷ್ಟಕೃತೇಃ' ಎಂದೇ ಸೂತ್ರದಲ್ಲಿ ಹೇಳಬೇಕಿತ್ತು. ಆದ್ದರಿಂದ ಆತ್ಮಪದ, ಕೃತಿಪದ ಮೊದಲಾದವುಗಳಿಗೆ ಅಸ್ವಾರಸ್ಯ ಬರುತ್ತದೆ. ಇಬ್ಬರ ಮತದಲ್ಲಿ 'ಪರಿಣಾಮಾತ್' ಎಂಬುದನ್ನು ಪ್ರತ್ಯೇಕವಾಗಿ ಸೂತ್ರವೆಂದು ಪರಿಗಣಿಸಲು ಯಾವುದೇ ಕಾರಣವಿರುವುದಿಲ್ಲ.

**प्रकाशः** – नन्ववस्थाश्रयत्वमुपादानत्वं निर्विकारस्य ब्रह्मणो न युक्तमित्यतः परिणामाश्रयत्वं सद्वारकमिति वक्तुं परिणामादित्यस्य प्रवृत्तेः केषाञ्चित् भाष्यादावुक्तेः पार्थक्यमिति चेन्न ।

ಪ್ರಶ್ನೆ - 'ಪರಿಣಾಮಾತ್' ಎಂಬ ಸೂತ್ರವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದು ತಪ್ಪಲ್ಲ. ಏಕೆಂದರೆ 'ಉಪಾದಾನತ್ವ' ಎಂದರೆ 'ಮತ್ತೊಂದು ಅವಸ್ಥೆಯನ್ನು ಪಡೆಯುವಿಕೆ' ಎಂದರ್ಥ. ಬ್ರಹ್ಮನಾದರು ನಿರ್ವಿಕಾರನಾಗಿದ್ದಾನೆ. ಇವನಲ್ಲಿ ಅಂತಹ ಉಪಾದಾನತ್ವವನ್ನು ಹೇಗೆ ಹೇಳುವುದು? ಎಂಬ ಪ್ರಶ್ನೆಯು ಪ್ರಾಪ್ತವಾದರೆ, ಅದಕ್ಕೆ ಉತ್ತರಿಸಲು 'ಪರಿಣಾಮಾತ್' ಎಂಬ ಸೂತ್ರ ಹೊರಟಿದೆ. ಬ್ರಹ್ಮನಲ್ಲಿ ಪರಿಣಾಮತ್ವವು ಶರೀರದ್ವಾರಾ ಬರುತ್ತದೆ. ನೇರವಾಗಿ ಪರಿಣಾಮವಿಲ್ಲದ ಕಾರಣ ನಿರ್ವಿಕಾರತ್ವ, ಶ್ರುತಿವಿರೋಧವು ಬರುವುದಿಲ್ಲ. ಮತ್ತೊಂದರ ದ್ವಾರಾ ಪರಿಣಾಮ ಬರುವುದರಿಂದ ಉಪಾದಾನತ್ವವೂ ಕೂಡ ಯುಕ್ತವಾಗುತ್ತದೆ. ಅದಕ್ಕಾಗಿ ಈ ಸೂತ್ರವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದು ಅರ್ಥವತ್ತಾಗಿದೆ.

**प्रकाशः** – तादृशार्थस्य परिणामादित्यस्मादप्रतीतेः । अन्यत्र अनुव्याख्यानादौ न्यायामृते द्वितीयपरिच्छेदे चेत्यर्थः ।

ರಾಮಾನುಜರ ಈ ವಿಚಾರವು ಅಯುಕ್ತವಾಗಿದೆ. ಏಕೆಂದರೆ 'ಪರಿಣಾಮಾತ್' ಎಂಬ ಪದಕ್ಕೆ ಪರಿಣಾಮ ಹೊಂದುತ್ತಾನೆ ಎಂದಷ್ಟೇ ಅರ್ಥ. ಅದನ್ನು ಬಿಟ್ಟು ಮತ್ತೊಂದು ಪದಾರ್ಥದ ಮೂಲಕ ಪರಿಣಾಮ ಹೊಂದುತ್ತಾನೆ ಎಂಬರ್ಥವು ತಿಳಿಯುವುದಿಲ್ಲ. ಮತ್ತು ವಿವರ್ತವಾದವನ್ನಾಗಲೀ, ಈ ಪರಿಣಾಮ-ವಾದವನ್ನಾಗಲೀ, ಅನುವ್ಯಾಖ್ಯಾನದಲ್ಲಿ ಮತ್ತು ನ್ಯಾಯಾಮೃತದ ಎರಡನೆಯ ಪರಿಚ್ಛೇದದಲ್ಲಿ ಸಂಪೂರ್ಣವಾಗಿ ನಿರಾಕರಿಸಲಾಗಿದೆ.

**प्रकाशः** – ''यच्चोक्तं सोऽकामयत'' इत्यादिना परमत एव सूत्रार्थानुवाददूषणानि कृतानि । मतान्तरे तु तदेकार्थत्वादूहनीयानीति भावः ।

'ಯಚ್ಚೋಕ್ತಂ ಸೋಽಕಾಮಯತ' ಎಂಬ ಇತ್ಯಾದಿಯಾಗಿ ಅದ್ವೈತಮತದ ಪ್ರಕಾರ ಸೂತ್ರಾರ್ಥಗಳನ್ನು ಅನುವಾದ ಮಾಡಿ ದೂಷಿಸಲಾಗಿದೆ. ರಾಮಾನುಜಮತದಲ್ಲಿ ಪ್ರತ್ಯೇಕವಾಗಿ ದೋಷವನ್ನು ಹೇಳದಿದ್ದರೂ, ಅದ್ವೈತಮತದ ಪ್ರಕಾರವೇ ಸ್ವತಃ ದೋಷಗಳನ್ನು ಊಹಿಸಿಕೊಳ್ಳಬೇಕು.

**प्रकाशः** – एतेन कस्यचिच्छैवस्य रीतिरपि प्रत्युक्ता । केषाञ्चिन्मताविशेषात् ।

ಹೀಗೆ ಅದ್ವೈತಮತವನ್ನು ಮತ್ತು ವಿಶಿಷ್ಟಾದ್ವೈತಮತವನ್ನು ನಿರಾಕರಣೆ ಮಾಡಿರುವುದರಿಂದಲೇ ಶೈವರ ಮತವನ್ನೂ ಕೂಡ ನಿರಾಕರಿಸಿದಂತಾಯಿತು. ಸಾಮಾನ್ಯವಾಗಿ ಶೈವರು ರಾಮಾನುಜರ ಮತದಂತೆಯೇ ಇಲ್ಲಿ ಹೇಳಿದ್ದಾರೆ. ಏನೂ ವ್ಯತ್ಯಾಸವಿರುವುದಿಲ್ಲ.

ಪ್ರಕೃತ್ಯಧಿಕರಣ (೧-೪-೬)

**प्रकाशः –** यच्चोक्तं ''साक्षात्'' इत्यत्र साक्षात्प्रत्यक्षमेव शिवस्योपादाननिमित्तत्वे श्रूयेते । ''विश्वाधिको रुद्र'' इत्यादिना यथा विश्वाधिकत्वमवगम्यते तथा ''सर्वो वै रुद्र'' इति प्रकृतित्वाद्विश्वरूपत्वमपि शतरुद्रीये ''नमो हिरण्यबाहव'' इत्यारभ्य ''कुलुंचानां पतय'' इत्यन्तेन विश्वाधिपत्यं, ''नमः पर्ण्याय च पर्णशद्याय च'' इत्येतत्पर्यन्तेन जगत्कारणत्वं चेत्यादि ।

ಶೈವರ ವ್ಯಾಖ್ಯಾನ ಹೀಗಿದೆ - ಸೂತ್ರದಲ್ಲಿರುವ 'ಸಾಕ್ಷಾತ್' ಎಂಬ ಪದದಿಂದ ಪ್ರತ್ಯಕ್ಷವಾಗಿಯೇ ಶಿವನಲ್ಲಿ ಉಪಾದಾನಕಾರಣತ್ವ ಹಾಗೂ ನಿಮಿತ್ತಕಾರಣತ್ವಗಳೆರಡೂ ಶ್ರುತವಾಗುತ್ತಿದೆ. 'ವಿಶ್ವಾಧಿಕೋ ರುದ್ರಃ' ಎಂಬಲ್ಲಿ ವಿಶ್ವಕ್ಕಿಂತ ಶಿವನು ಅಧಿಕನಾಗಿದ್ದಾನೆಂದು ಹೇಳಿದ್ದರಿಂದ ನಿಮಿತ್ತಕಾರಣತ್ವವು ತಿಳಿಯುತ್ತಿದೆ. ಹೀಗೆ ವಿಶ್ವಾಧಿಕತ್ವವನ್ನು ರುದ್ರನಿಗೆ ಹೇಳಿದಂತೆ 'ಸರ್ವೋ ವೈ ರುದ್ರಃ' ಎಂಬುದಾಗಿ ಶಿವನೇ ವಿಷ್ಣುರೂಪನಾಗಿದ್ದಾನೆ ಎಂದು ಹೇಳಲಾಗಿದೆ. ಈ ಕಾರಣದಿಂದ ಶಿವನು ಜಗತ್ತಿಗೆ ಉಪಾದಾನಕಾರಣನೂ, ನಿಮಿತ್ತಕಾರಣನೂ ಆಗಿದ್ದಾನೆಂದು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲದೇ ಶತರುದ್ರೀಯದಲ್ಲಿ 'ನಮೋ ಹಿರಣ್ಯಬಾಹವೇ' ಎಂಬುದಾಗಿ ಪ್ರಾರಂಭಿಸಿ 'ಕುಲುಂಚಾನಾಂ ಪತಯೇ' ಎಂಬಲ್ಲಿಯ ತನಕ ರುದ್ರನು ವಿಶ್ವದ ಅಧಿಪತಿಯಾಗಿದ್ದಾನೆ ಎಂದು ಹೇಳಲಾಗಿದೆ. ಅಷ್ಟೇ ಅಲ್ಲದೇ 'ನಮಃ ಪರ್ಣ್ಯಾಯ ಚ ಪರ್ಣಶದ್ಯಾಯ ಚ' ಎಂಬಲ್ಲಿಯ ತನಕ ಜಗತ್ ಕಾರಣತ್ವವನ್ನು ಹೇಳಲಾಗಿದೆ.

**प्रकाशः –** तन्न । ''रुजं द्रावयते यस्मात्'' इति स्मृत्युक्तयोगस्य ''कम्पनात्'' इत्युक्तन्यायेन बलवत्तया रुद्रादिशब्दानां वैष्णवत्वात् । ''तत एवानिमित्ततः'' इत्याद्युक्तदिशा द्वयोर्विरोधाच्च ।

ಶೈವರ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ರುದ್ರಶಬ್ದವು ಲೋಕತಃ ಶಿವನಲ್ಲಿಯೇ ಪ್ರಸಿದ್ಧವಾಗಿದೆ. ಆದರೆ ಲೋಕಪ್ರಸಿದ್ಧಗಿಂತಲೂ ಪೌರಾಣಿಕಯೋಗವು ಬಲಿಷ್ಠವಾಗಿದೆ ಎಂದು ಈಗಾಗಲೇ ಹೇಳಿದ್ದೇವೆ. ಸ್ಮೃತಿಯಲ್ಲಿ 'ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾತ್ ಜನಾರ್ದನಃ' ಎಂಬುದಾಗಿ 'ಕಂಪನಾತ್' ಎಂಬ ಸೂತ್ರವ್ಯಾಖ್ಯಾನದಲ್ಲಿ ಹೇಳಲಾಗಿದೆ. 'ಕಂಪನಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ರುದ್ರಾದಿಶಬ್ದಗಳೆಲ್ಲವೂ ವಿಷ್ಣುವಿನಲ್ಲಿಯೇ ಬಲಿಷ್ಠವಾಗಿ ಇರುತ್ತವೆ. 'ತತ ಏವಾನಿಮಿತ್ತತಃ' ಇತ್ಯಾದಿಯಾಗಿ ಹೇಳಿದಂತೆ ರುದ್ರನಲ್ಲಿ ಇಂತಹ ರುದ್ರಶಬ್ದವೇ ಬರುವುದಿಲ್ಲ. ಈಗಾಗಲೇ ಅದ್ವೈತಿಗಳಿಗೆ ಹೇಳಿದಂತೆ ಎಲ್ಲಿ ಉಪಾದಾನತ್ವವು ಇರುತ್ತದೋ, ಅಲ್ಲಿ ನಿಮಿತ್ತತ್ವವು ಬರಲು ಸಾಧ್ಯವಿಲ್ಲ. ಇವೆರಡು ಪರಸ್ಪರ ವಿರುದ್ಧವಾಗಿವೆ.

**प्रकाशः –** ''सर्वं समाप्नोषि ततोऽसि सर्वः'' इत्यादिस्मृत्या सर्वात्मताया अन्ययैव व्याख्यानाच्च । गौणार्थत्वस्य त्वयापि वाच्यत्वात् । नहि त्वया सकलहेयात्मता रुद्रस्याङ्गीकृता । तावतोपादानत्वस्य स्पष्टमत्राप्रतीत्या साक्षात्पदायोगात् ।

'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ಎಂಬುದಾಗಿ ಗೀತೆಯಲ್ಲಿ ಸರ್ವವ್ಯಾಪಕನಾಗಿರುವುದರಿಂದ ತಾನು ಸರ್ವತ್ರ ವ್ಯಾಪ್ತನಾಗಿದ್ದೇನೆಂದು ವ್ಯಾಖ್ಯಾನಿಸಲಾಗಿದೆ. ಸರ್ವಾತ್ಮಕನಾಗಿದ್ದಾನೆಂಬುದಕ್ಕೆ ಹೀಗೆ ಗೌಣವಾಗಿ ಅರ್ಥೈಸುವುದು ತಪ್ಪಲ್ಲವೇ? ಎಂದರೆ ನೀನೂ ಕೂಡ ಇಂತಹ ಗೌಣವಾದ ಅರ್ಥವನ್ನು ಬ್ರಹ್ಮನಿಗೆ ಒಪ್ಪಿರುತ್ತಿ. ಆದರೆ ನೀನೂ ಕೂಡ ರುದ್ರನಿಗೆ ಸಕಲ ಹೇಯಸ್ವರೂಪವಾದ ಪದಾರ್ಥಸ್ವರೂಪತ್ವವನ್ನು ಅಂಗೀಕರಿಸಿಲ್ಲ. ರುದ್ರನು ಸರ್ವಾತ್ಮಕ ಎಂದು ಹೇಳಲಾಗಿದೆ ಹೊರತು, ಸರ್ವಕ್ಕೂ ರುದ್ರನು ಉಪಾದಾನಕಾರಣನಾಗಿದ್ದಾನೆಂದು ಸ್ಪಷ್ಟವಾಗಿ ಪ್ರತೀತವಾಗುತ್ತಿಲ್ಲ. ಆದ್ದರಿಂದ 'ಸಾಕ್ಷಾತ್' ಪದವು ವ್ಯರ್ಥವಾಗುತ್ತದೆ.

**प्रकाशः** – रुद्रस्य विश्वकर्तृत्वरूपनिमित्ततायाः प्रागेव निरासाच्च । आत्मनो मुख्यपरिणामाभावेन ''परिणामात्'' इत्यस्य मुख्यत्वाय मन्मतरीतेरेवानुसर्तव्यत्वाच्चेति ध्येयम् ।

ಹೀಗೆ ರುದ್ರನಿಗೆ ಹೇಗೆ ನಿಮಿತ್ತತ್ವವನ್ನು ಹೇಳಲು ಬರುವುದಿಲ್ಲವೋ, ಅದರಂತೆ ಕರ್ತೃತ್ವವನ್ನೂ ಕೂಡ ಹೇಳಲು ಬರುವುದಿಲ್ಲ. ಇದು ಹೇಗೆ ಎಂಬುದನ್ನು ಈಗಾಗಲೇ ನಾವು ನಿರಾಕರಿಸಿದ್ದೇವೆ. 'ಆತ್ಮಕೃತೇಃ ಪರಿಣಾಮಾತ್' ಎಂಬಲ್ಲಿ ಆತ್ಮಶಬ್ದಕ್ಕೆ ರುದ್ರನಿಗೆ ವಿಶ್ವಕರ್ತೃತ್ವರೂಪವಾದ ನಿಮಿತ್ತತ್ವವು ಇರುವುದಿಲ್ಲವೆಂದು ಈಗಾಗಲೇ ನಿರಾಕರಣೆ ಮಾಡಿದ್ದಾಗಿದೆ. ಮತ್ತು ಆತ್ಮನಿಗೆ ಮುಖ್ಯವಾದ ಪರಿಣಾಮವೇ ಇಲ್ಲದ ಕಾರಣ, 'ಪರಿಣಾಮಾತ್' ಎಂಬುದಕ್ಕೆ ಮುಖ್ಯಾರ್ಥವನ್ನು ಕೂಡಿಸಲು ನಾವು ಹೇಳುವಂತೆ ಹೇಳಬೇಕು. ಲ್ಯಬ್‌ಲೋಪನಿಮಿತ್ತಾರ್ಥದಲ್ಲಿ ಪಂಚಮೀವಿಭಕ್ತಿಯನ್ನು ಉಪಪಾದನೆ ಮಾಡಿ, ಪ್ರಕೃತಿಯನ್ನು ಪರಿಣಾಮ ಮಾಡಿ, ಅದರಲ್ಲಿ ತಾನು ಅನೇಕ ರೂಪಗಳಿಂದ ಪ್ರವೇಶಿಸಿದನು ಎಂದರ್ಥವನ್ನೇ ಹೇಳಬೇಕು.

**प्रकाशः** – ननु भाष्यस्य वादकथारूपेण प्रवृत्तसूत्रव्याख्यानपरत्वादन्ते परमतदूषणं कार्यम् । ''न चान्यत्कल्प्यम्'' इत्यादिना मध्ये निरासः किमर्थ इत्यत आह – **चतुर्थेति** ।। उपन्यासमुखेनाव्यक्तं वाक्यं व्यनक्ति ।। **नियामकेति** ।। शिष्टं स्पष्टमिति भावः ।। छ ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे प्रकृत्यधिकरणं सम्पूर्णम् ।।**

ವಾದಕಥಾರೂಪದಲ್ಲಿ ಪ್ರವೃತ್ತವಾದ ಸೂತ್ರಕ್ಕೆ ವ್ಯಾಖ್ಯಾನ ಮಾಡಲು ಭಾಷ್ಯವು ಹೊರಟಿದೆ. ಆದ್ದರಿಂದ ಪರಮತದೂಷಣವನ್ನು ಕೊನೆಯಲ್ಲಿಯೇ ಮಾಡಬೇಕಿತ್ತು. ಅದನ್ನು ಬಿಟ್ಟು, 'ನ ಚಾನ್ಯತ್ಕಲ್ಪ್ಯಮ್' ಎಂಬುದಾಗಿ ಮಧ್ಯದಲ್ಲೇ ಏಕೆ ಮಾಡಬೇಕಿತ್ತು ? ಎಂಬ ಪ್ರಶ್ನೆಗೆ 'ಚತುರ್ಥ' ಎಂಬುದರಲ್ಲಿ ಉತ್ತರಿಸಿದ್ದಾರೆ.

'ಪರಿಣಾಮಾತ್' ಎಂಬ ಶಬ್ದವು ಪರರಿಗೆ ಅನುಕೂಲವಾಗಿದೆಯೆಂದು ಆಪಾತತಃ ಭಾಸವಾಗುತ್ತದೆ. ಅದನ್ನು ನಿರಾಕರಿಸಲು ಮಧ್ಯದಲ್ಲಿ ಪರರ ಮತವನ್ನು ನಿರಾಕರಿಸಲಾಗಿದೆ.

ಉಪನ್ಯಾಸಮುಖದಿಂದ ವ್ಯಾಖ್ಯಾನಿಸುವಾಗಲೇ ಕಠಿಣಪದಾರ್ಥಗಳನ್ನು ಹೇಳಿದಂತಾಗಿದೆ. ಆದರೆ ಅವ್ಯಕ್ತಶಬ್ದದ ಅರ್ಥವು ಸ್ಪಷ್ಟವಾಗಿ ತೋರುವುದಿಲ್ಲ ಎಂದು 'ನಿಯಾಮಕ' ಇತ್ಯಾದಿಯಾಗಿ ಹೇಳಿದ್ದಾರೆ. ಉಳಿದದ್ದೆಲ್ಲವೂ ಅತ್ಯಂತ ಸ್ಪಷ್ಟವಾಗಿ ಇದೆ.

ಇಲ್ಲಿಗೆ ಸರ್ವತಂತ್ರಸ್ವತಂತ್ರ ಶ್ರೀಸುಧೀಂದ್ರತೀರ್ಥಗುರುಪಾದಶಿಷ್ಯರಾದ
ರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಪ್ರಕೃತ್ಯಧಿಕರಣವು ಮುಕ್ತಾಯವಾಯಿತು.

**गुरुराजीयम् – गौरवाचेति** ।। निमित्तत्वमात्रस्य भेदप्रयोजकत्वे तस्य भावरूपत्वाच्छब्दतोऽर्थतश्च लाघवम् । उपादानत्वाभावस्य भेदनिमित्तत्वे तस्य प्रतियोग्यादिज्ञानसापेक्षत्वेनार्थतः शब्दतश्च गौरवमित्यर्थः ।। **अत एवेति** ।। गौरवादेवेत्यर्थः । भेदं प्रत्युपादानत्वाविशिष्टनिमित्तत्वस्य प्रयोजकत्वेऽतिप्रसङ्गं चाह – **निमित्तत्वाभावेति** ।। तथा च ब्रह्मणो निमित्तत्वस्यापि विद्यमानत्वेन तदभावविशिष्टोपादानत्वरूपस्याभेदप्रयोजकस्याभावेनाभेदासिद्ध्या तज्ज्ञानेन सर्व-विज्ञानानुपपत्तिरित्यर्थः । लोकदृष्टिविरोधं चाह – **त्वन्मत इति** ।। तद्बलादेव श्रुतिबलादेवेत्यर्थः ।। **मृत्तत्वज्ञान इति** ।। मृन्मयादेर्मृद्यध्यस्तत्वेन मृत्तत्वज्ञाननिवर्त्यत्वं स्वीकर्तव्यम् । शुक्त्यध्यस्तरजतस्य शुक्तितत्वज्ञाननिवर्त्यताया दृष्टत्वात् । नच तदस्ति । न चायं सोपाधिकत्वभ्रमः । येनाधिष्ठानतत्वज्ञानेऽप्यनिवर्ततेति भावः ।। छ ।।

।। इति श्रीकेशवभट्टारकेण विरचितायां भावदीपिकायाम्
प्रकृत्यधिकरणं सम्पूर्णम् ।। ६ ।।

ಪರಿಪೂರ್ಣಚಂದ್ರಿಕಾ




ಭಾಮತಿಯಲ್ಲಿ 'ಉಪಾದಾನತ್ವ' ಎಂದರೆ ಭ್ರಮಕ್ಕೆ ಅಧಿಷ್ಠಾನವಾಗಿರುವಿಕೆ ಎಂಬರ್ಥವನ್ನು ಹೇಳಲಾಗಿದೆ. ಆದ್ದರಿಂದ ಸಮಸ್ತ ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿರುವ ಕಾರಣ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ ಎಂಬುದಾಗಿ ವ್ಯಾಖ್ಯಾನ ಮಾಡಲಾಗಿದೆ. ಇದು ಸರಿಯಲ್ಲ. ಏಕೆಂದರೆ ಹಗ್ಗವನ್ನು ನೋಡಿ ಹಾವು ಎಂಬ ಭ್ರಾಂತಿ ನಮಗೆ ಬರುತ್ತದೆ. ಇಲ್ಲಿ ಹಾವಿನ ಆರೋಪಕ್ಕೆ ಅಧಿಷ್ಠಾನವಾದದ್ದು ಹಗ್ಗ. ಆದರೆ ಯಾರೂ ಸಹ ಹಗ್ಗವು ಉಪಾದಾನಕಾರಣವೆಂದು ಹೇಳುವುದಿಲ್ಲ.

ಇದರಂತೆ ಎರಡನೆಯ ಸೂತ್ರ ವ್ಯಾಖ್ಯಾನವೂ ಕೂಡ ಸರಿಯಲ್ಲ. 'ಸೋಽಕಾಮಯತ ಬಹು ಸ್ಯಾಮ್' ಇತ್ಯಾದಿಯಾಗಿ ಶ್ರುತಿಯಲ್ಲಿ ಇಚ್ಛಾಪೂರ್ವಕವಾದ ಬಹುಭವನವು ಶ್ರುತವಾಗಿದೆ. ಇಚ್ಛೆಯು ಬರಬೇಕೆಂದರೆ ನಿಮಿತ್ತಕಾರಣನಾಗಿರಬೇಕು. ಬಹುಭವನವನ್ನು ಹೇಳಬೇಕೆಂದರೆ ಉಪಾದಾನಕಾರಣನಾಗಿರಬೇಕೆಂಬುದು ಎರಡನೆಯ ಸೂತ್ರದ ಅರ್ಥ. ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ಬ್ರಹ್ಮನು ಅನೇಕ ರೂಪಗಳನ್ನು ತಾಳುತ್ತಾನೆಂದಷ್ಟೇ ಶ್ರುತಿಯಲ್ಲಿ ಹೇಳಲಾಗಿದೆ. ಹೊರತು, ನೀನು ಹೇಳುವಂತೆ ಆರೋಪಕ್ಕೆ ಅಧಿಷ್ಠಾನಾಗಿದ್ದಾನೆಂಬ ಅರ್ಥವು ಇದರಿಂದ ತೋರುವುದೇ ಇಲ್ಲ. ಸ್ಥಾಣುವಿನಲ್ಲಿ ಪುರುಷನು ಆರೋಪಿತನಾದಾಗ ಮೊದಲು ಸ್ಥಾಣುವು ನಾನು ಪುರುಷನಾಗಬೇಕು ಎಂದು ಇಚ್ಛಿಸುವುದಿಲ್ಲವಷ್ಟೆ.

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಮೂರನೆಯ ಸೂತ್ರಕ್ಕೆ 'ಸರ್ವಾಣಿ ಹವಾ ಇಮಾನಿ ಭೂತಾನಿ' ಇತ್ಯಾದಿ ಛಾಂದೋಗ್ಯಶ್ರುತಿಯಲ್ಲಿ ನೇರವಾಗಿಯೇ ಬ್ರಹ್ಮನಲ್ಲಿ ಪ್ರಪಂಚದ ಉತ್ಪತ್ತಿ, ಲಯಗಳೆರಡನ್ನೂ ಹೇಳಲಾಗಿದೆ. ಸಸ್ಯ ಮೊದಲಾದವುಗಳ ಹುಟ್ಟುವಿಕೆಗೆ, ಮತ್ತು ಲಯಕ್ಕೆ ಅಧಿಷ್ಠಾನವಾದ್ದರಿಂದ ಘಟ-ಪಟಾದಿ ಪ್ರಪಂಚಕ್ಕೆ ಬ್ರಹ್ಮನು ಉಪಾದಾನಕಾರಣನಾಗುತ್ತಾನೆ, ನಿಮಿತ್ತಕಾರಣನೂ ಆಗುತ್ತಾನೆಂದು ವ್ಯಾಖ್ಯಾನಿಸಲಾಗಿದೆ. ಇದು ಸರಿಯಲ್ಲ. ಏಕೆಂದರೆ ಶುಕ್ತಿಯಲ್ಲಿ ಹುಟ್ಟುತ್ತದೆ ಎಂದಾಗಲೀ, ಶುಕ್ತಿಯಲ್ಲಿ ಲಯ ಹೊಂದುತ್ತವೆಂದಾಗಲೀ ಯಾರೂ ಕೂಡ ಹೇಳುವುದಿಲ್ಲ. ಆದ್ದರಿಂದ ಉತ್ಪತ್ತಿಲಯಗಳನ್ನು ಹೇಳಿದ್ದರಿಂದ ಆರೋಪಾಧಿಷ್ಠಾನತ್ವವನ್ನು ಸಮರ್ಥಿಸಲಾಗದು.

'ಆತ್ಮಕೃತೇಃ ಪರಿಣಾಮಾತ್' ಎಂಬ ನಾಲ್ಕನೆಯ ಸೂತ್ರಕ್ಕೆ ಹೀಗರ್ಥ - 'ತದಾತ್ಮಾನಂ ಸ್ವಯಮಕುರುತ' ಎಂಬುದಾಗಿ ಬ್ರಹ್ಮನು ಆತ್ಮವಿಷಯಕವಾದ, ಮತ್ತು ಆತ್ಮಕರ್ಮಕವಾದ ಕೃತಿಯುಳ್ಳವನು ಎನ್ನಲಾಗಿದೆ. ಬ್ರಹ್ಮನು ತನ್ನ ಪ್ರಯತ್ನದಿಂದ ತನ್ನನ್ನೇ ಅನೇಕ ರೂಪಗಳನ್ನಾಗಿ ನಿರ್ಮಿಸಿಕೊಳ್ಳುತ್ತಾನೆ. ಇದು ಹೇಗೆ ಎಂದರೆ - 'ಪರಿಣಾಮಾತ್' ತಾನು ಜಗತ್ತಿನ ರೂಪವಾಗಿ ತೋರಿಸಿಕೊಳ್ಳುವುದರಿಂದ, ಹಗ್ಗವು ಹಾವಿನ ರೂಪವಾಗಿ ಪರಿಣಾಮವು ಹೊಂದುವಂತೆ ಬ್ರಹ್ಮನೂ ಕೂಡ ಜಗತ್ತಿನ ರೂಪದಲ್ಲಿ ಪರಿಣಾಮ ಹೊಂದುತ್ತಾನೆ. ಇಲ್ಲಿ ಪ್ರಯತ್ನವನ್ನು ಹೇಳಿರುವುದರಿಂದ ನಿಮಿತ್ತಕಾರಣನೆಂದು, ಪರಿಣಾಮವನ್ನು ಹೇಳಿರುವುದರಿಂದ ಉಪಾದಾನಕಾರಣನೆಂದು ತಿಳಿಯುತ್ತದೆ. 'ಆತ್ಮಕೃತೇಃ' ಎಂಬ ಸೂತ್ರವೇ ಬೇರೆ, ಅದರ ಮೇಲೆ ಬರುವ ಆಶಂಕೆಯ ನಿವಾರಣೆಗಾಗಿ, 'ಪರಿಣಾಮಾತ್' ಎಂಬ ಸೂತ್ರವೇ ಬೇರೆ ಎಂಬುದು ಇಬ್ಬರ ಅಭಿಪ್ರಾಯವಾಗಿದೆ. 'ಪರಿಣಾಮಾತ್' ಎಂಬುದನ್ನು ಪ್ರತ್ಯೇಕ ಸೂತ್ರವೆಂದು ಪರಿಗಣಿಸಿದಾಗ, 'ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿಯು ಬ್ರಹ್ಮನು ಸದಾದಿಪ್ರಪಂಚರೂಪನಾಗಿದ್ದಾನೆಂದು ಹೇಳುತ್ತಿದೆ. ಇದರಿಂದ ಅವನು ಉಪಾದಾನಕಾರಣನೆಂದು ತಿಳಿಯುತ್ತದೆ.

ಪ್ರಕೃತ್ಯಧಿಕರಣ (೧-೪-೬)

'ಯೋನಿಶ್ಚ ಹಿ ಗೀಯತೇ' ಎಂಬುದು ಐದನೆಯ ಸೂತ್ರ. 'ಯದ್ ಭೂತಯೋನಿಂ' ಎಂದು ಉಪನಿಷತ್ತಿನಲ್ಲಿ ಬ್ರಹ್ಮನನ್ನು ಯೋನಿಶಬ್ದದಿಂದ ಕರೆಯಲಾಗಿದೆ. ಯೋನಿಶಬ್ದಕ್ಕೆ ಉಪಾದಾನಕಾರಣ ಎಂಬರ್ಥ ಪ್ರಸಿದ್ಧವಾದ್ದರಿಂದ ಬ್ರಹ್ಮನು ಉಪಾದಾನನೆಂದು ಸಿದ್ಧವಾಗುತ್ತದೆ. ಹೀಗೆ ವ್ಯಾಖ್ಯಾನಿಸುತ್ತಾರೆ.

ಇದು ಸರಿಯಲ್ಲ. ಏಕೆಂದರೆ ವಿವರ್ತಮತದಲ್ಲಿ ಶ್ರುತಿ ಹಾಗೂ ಸೂತ್ರಗಳಲ್ಲಿರುವ ಪ್ರಕೃತಿ, ಪರಿಣಾಮ, ಯೋನಿ ಮೊದಲಾದ ಶಬ್ದಗಳೆಲ್ಲವೂ ಕೂಡ ಅಸ್ವರಸವಾಗುತ್ತವೆ. ಏಕೆಂದರೆ ಹಗ್ಗವು ಹಾವನ್ನು ಮಾಡಿತು ಎಂದಾಗಲೀ, ಹಗ್ಗವು ಹಾವಿನ ರೂಪದಲ್ಲಿ ಪರಿಣಾಮ ಹೊಂದಿತು ಎಂದಾಗಲೀ, ಹಾವಿಗೆ ರಜ್ಜುವು ಕಾರಣವಾಗಿದೆ ಎಂದಾಗಲೀ ಯಾರೂ ಹೇಳುವುದಿಲ್ಲ. ಆದ್ದರಿಂದ ಬ್ರಹ್ಮನು ನಿಮಿತ್ತಕಾರಣನಾಗಿದ್ದಾನೆಂದಷ್ಟೇ ಹೇಳಲು ಬರುವಾಗ, ಅವನಿಗೆ ಉಪಾದಾನತ್ವವನ್ನೂ ಹೇಳಿ, ಸೂತ್ರಗಳಿಗೆ ಬಹಳ ಕಷ್ಟದಿಂದ ವ್ಯಾಖ್ಯಾನಿಸಿರುವುದು ಅತ್ಯಂತ ಅಸಾಧುವಾಗಿದೆ.

# ಪ್ರಕೃತ್ಯಧಿಕರಣ

(೧-೪-೬)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## प्रकृत्यधिकरणम् (१।४।६)

**प्रकृतिः**

ಪರಮಾತ್ಮನ ಇಚ್ಛೆಯು ಪ್ರಕೃತಿಯೆನಿಸುತ್ತದೆ. ಅವನ ಇಚ್ಛೆಯು ಅವನ ಸ್ವರೂಪವೇ ಆಗಿರುವುದರಿಂದ ಪರಮಾತ್ಮನೂ ಕೂಡ ಪ್ರಕೃತಿಯೆನಿಸುತ್ತಾನೆ. ಅಥವಾ ಪರಮಾತ್ಮನು ನೇರವಾಗಿಯೇ ಸ್ತ್ರೀಶಬ್ದವಾಚ್ಯನಾಗಿದ್ದಾನೆ ಎಂದು ಶ್ರುತಿಗಳು ಸಾರುತ್ತಿವೆ. ಅಥವಾ ಅನೇಕ ಸ್ತ್ರೀರೂಪಗಳನ್ನು ಹೊಂದಿರುವುದರಿಂದ ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ.

***

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## प्रकृत्यधिकरणम् (१।४।६)

नन्वथापि न हरेः सर्वशब्दवाच्यता । परमपुरुषे स्त्रीत्वाभावेन सर्वस्त्रीशिरोमणि-लक्ष्मीवाचिप्रकृत्यादिस्त्रीशब्दवाच्यत्वाभावात् ।

ಆದರೂ ಕೂಡ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಪರಮಪುರುಷನಾದ ಶ್ರೀಹರಿಯಲ್ಲಿ ಸ್ತ್ರೀತ್ವವು ಇರುವುದಿಲ್ಲ. ಹಾಗಾಗಿ ಸಕಲ ಸ್ತ್ರೀಯರಿಗೆ ಶಿರೋಮಣಿಯಾದ ಲಕ್ಷ್ಮೀದೇವಿಯನ್ನು

ಪ್ರತಿಪಾದನೆ ಮಾಡುವ ಪ್ರಕೃತಿ ಮೊದಲಾದ ಸ್ತ್ರೀವಾಚಕಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ.

**नच खट्वादिशब्दवदुपपत्तिः । समन्वयस्य गुणपूर्त्यर्थत्वेन अर्थसाधुत्वस्यैव वाच्यत्वात् ।**

'ಖಟ್ವಾ' ಮೊದಲಾದ ಶಬ್ದಗಳು ಸ್ತ್ರೀಲಿಂಗದಲ್ಲಿದ್ದರೂ ಇದರ ಅರ್ಥವು ಸ್ತ್ರೀಯಾಗಬೇಕೆಂದಿಲ್ಲ. ಶಬ್ದದ ಸಾಧುತ್ವಕ್ಕೋಸ್ಕರ ಸ್ತ್ರೀತ್ವವು ವಿವಕ್ಷಿತವಾಗಿರುತ್ತದೆ. ಅದರಂತೆ ಪರಮಾತ್ಮನು ಸ್ತ್ರೀಯಾಗದಿದ್ದರೂ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳು ಪರಮಾತ್ಮನಲ್ಲಿ ಸಮನ್ವಯವಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಸಮನ್ವಯ ಮಾಡುತ್ತಿರುವುದೇ ಗುಣಪೂರ್ಣತ್ವಕ್ಕೋಸ್ಕರ ಅರ್ಥಸಾಧುತ್ವದಿಂದ ಶಬ್ದಗಳನ್ನು ಹೇಳಿದರೆ ಮಾತ್ರ ಆಯಾ ಶಬ್ದಗಳಿಂದ ಪ್ರತಿಪಾದ್ಯವಾದ ಗುಣಗಳ ಸಮನ್ವಯವು ಪರಮಾತ್ಮನಲ್ಲಿ ಸಿದ್ಧವಾಗುತ್ತದೆ. ಶಬ್ದಸಾಧುತ್ವದಿಂದ ಶಬ್ದಗಳ ಸಮನ್ವಯ ಮಾಡಿದರೆ ಯಾವುದೇ ರೀತಿಯ ಪ್ರಯೋಜನವಿರುವುದಿಲ್ಲ.

**तदधीनत्वन्यायाश्रयणेऽपि स्वातन्त्र्यस्यैव सिद्ध्या स्त्रीशब्दप्रवृत्तिनिमित्तरूपगुणासिद्धेः ।**

ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ ಸ್ತ್ರೀವಾಚಕಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಹೇಳಬಹುದು ಎಂದರೆ ಸಕಲಸ್ತ್ರೀಯರಲ್ಲಿರುವ ಸ್ತ್ರೀತ್ವಕ್ಕೆ ಪರಮಾತ್ಮ ನಿಯಾಮಕನಾದ್ದರಿಂದ ಅವನಲ್ಲಿಯೂ ಕೂಡ ಸ್ತ್ರೀವಾಚಕಶಬ್ದಗಳು ಸಮನ್ವಯವಾಗಬಹುದು. ಆದರೆ ಇದರಿಂದಲೂ ಕೂಡ ಏನೂ ಪ್ರಯೋಜನವಿಲ್ಲ. ಕೇವಲ ಸ್ವಾತಂತ್ರ್ಯವೆಂಬ ಗುಣವು ಸಿದ್ಧವಾಗುತ್ತದೆ ಹೊರತು, ಆಯಾ ಶಬ್ದಗಳ ಪ್ರವೃತ್ತಿನಿಮಿತ್ತರೂಪವಾದ ಗುಣವು ಶ್ರೀಹರಿಯಲ್ಲಿ ಸಿದ್ಧವಾಗುವುದಿಲ್ಲ.

**'नामानि सर्वाणि' इत्यस्य सङ्कोचसंभवाच्चेत्यतः प्राप्तम् – प्रकृतिश्चेति सूत्रपञ्चकम् । तदर्थः – प्रकृतिरिति ।**

ಈ ಎಲ್ಲಾ ಕಾರಣಗಳಿಂದ ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲವೆಂದು ತಿಳಿಯುತ್ತದೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಅರ್ಥಸಂಕೋಚವನ್ನು ಮಾಡಬೇಕು ಎಂದರೆ ಸ್ತ್ರೀಲಿಂಗಶಬ್ದಗಳ ಸಮನ್ವಯ ಬಿಟ್ಟು, ಉಳಿದ ಶಬ್ದಗಳ ಸಮನ್ವಯವಷ್ಟೇ ಶ್ರುತಿಗೆ ವಿವಕ್ಷಿತವೆಂದು ಹೇಳಬೇಕು. ಈ ಆಕ್ಷೇಪಕ್ಕೆ 'ಪ್ರಕೃತಿಶ್ಚ' ಇತ್ಯಾದಿ ಐದು ಸೂತ್ರಗಳು ಹೊರಟಿವೆ. ಅದನ್ನು ಅಣುಭಾಷ್ಯದಲ್ಲಿ 'ಪ್ರಕೃತಿಃ' ಎಂದು ಸಂಗ್ರಹಿಸಿದ್ದಾರೆ.

ಪ್ರಕೃತ್ಯಧಿಕರಣ (೧-೪-೬)

**पूर्ववदनुषङ्गः । प्रकृतिः प्रकृष्टा कृतिः यस्येति प्रकृतिशब्दोक्तः प्रकृष्टकृतिमानेको जनार्दनः ।**

ಇಲ್ಲಿಯೂ ಕೂಡ ಹಿಂದಿನಂತೆ ಶಬ್ದಗಳನ್ನು ಅನುಷಂಗ ಮಾಡಿಕೊಳ್ಳಬೇಕು. ಪ್ರಕೃತಿಶಬ್ದಕ್ಕೆ ಪ್ರಕೃಷ್ಟವಾದ ಆ ಪರಮಾತ್ಮನು ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನಾದ್ದರಿಂದ ಪ್ರಕೃಷ್ಟವಾದ ಕೃತಿಯುಳ್ಳವನಾಗಿದ್ದಾನೆ. ಆದ್ದರಿಂದ ಪ್ರಕೃತಿಯೆನಿಸುತ್ತಾನೆ. ಇಂತಹ ಉತ್ಕೃಷ್ಟನಾದ ಕೃತಿಯುಳ್ಳವನು ಜನಾರ್ದನನೊಬ್ಬನೇ ಆಗಿದ್ದಾನೆ. 'ಪ್ರಕೃತಿಃ ಏಕೋ ಜನಾರ್ದನಃ' ಹೀಗೆ ಅಣುಭಾಷ್ಯದಲ್ಲಿ ಪದಗಳನ್ನು ಅನುಷಂಗ ಮಾಡಿಕೊಳ್ಳಬೇಕು.

**तथा स्त्रीलिङ्गेन अन्यत्र नियतैः अन्यत्रैव प्रसिद्धैः 'सैषा प्रकृतिः' इत्यादौ श्रुतप्रकृतितदुपलक्षितस्त्रीलिङ्गशब्दैरेको जनार्दनो मुख्यतया परममुख्यवृत्योदितो नतु लक्ष्म्यादिः ।**

ಆದ್ದರಿಂದ 'ಪ್ರಕೃತಿಃ' ಮೊದಲಾದ ಸ್ತ್ರೀಲಿಂಗಶಬ್ದಗಳು ಲಕ್ಷ್ಮ್ಯಾದಿಗಳಲ್ಲಷ್ಟೇ ನಿಯತವಾಗಿವೆ. ಅವರಲ್ಲಷ್ಟೇ ಪ್ರಸಿದ್ಧವಾಗಿದೆ. ಹೀಗೆ 'ಸೈಷಾ ಪ್ರಕೃತಿಃ' ಇತ್ಯಾದಿ ಶ್ರುತಿಗಳಲ್ಲಿರುವ ಪ್ರಕೃತಿಶಬ್ದ ಉಪಲಕ್ಷಿತವಾದ ಎಲ್ಲಾ ಸ್ತ್ರೀಲಿಂಗಶಬ್ದಗಳು ಲಕ್ಷ್ಮ್ಯಾದಿಗಳಲ್ಲಷ್ಟೇ ಪ್ರಸಿದ್ಧವಾಗಿದೆ. ಇಂತಹ ಶಬ್ದಗಳೆಲ್ಲಾ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಜನಾರ್ದನನು ಮಾತ್ರ. ಹೊರತು ಲಕ್ಷ್ಮ್ಯಾದಿಗಳಲ್ಲ.

**कुतः शब्दैः । 'हन्त एतमेव सर्वाणि नामान्यभिवदन्ति' इत्यादिप्रतिज्ञादृष्टान्ताभ्यां सर्वशब्दवाच्यत्वोपपादकप्रभृतिभिः 'नामानि सर्वाणि' इत्यादिभिः प्रागुक्तैश्च शब्दैरित्यर्थः ।**

ಏಕೆಂದರೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. 'ಹಂತ ಏತಮೇವ ಸರ್ವಾಣಿ ನಾಮಾನ್ಯಭಿವದಂತಿ' ಇತ್ಯಾದಿಯಾದ ಪ್ರತಿಜ್ಞಾವಾಕ್ಯ ಹಾಗೂ ದೃಷ್ಟಾಂತವಾಕ್ಯಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ತಿಳಿಯುತ್ತದೆ. ಮತ್ತು ಸರ್ವಶಬ್ದವಾಚ್ಯತ್ವವನ್ನು ಉಪಪಾದನೆ ಮಾಡುವ 'ನಾಮಾನಿ ಸರ್ವಾಣಿ' ಇತ್ಯಾದಿಯಾದ ಹಿಂದೆ ಉದಾಹರಿಸಿದ ಶ್ರುತಿಗಳಿಂದಲೂ ಪರಮಾತ್ಮನೇ ಸ್ತ್ರೀಲಿಂಗಶಬ್ದಗಳಿಂದೆಲ್ಲಾ ಪ್ರತಿಪಾದ್ಯವೆಂದು ದೃಢವಾಗುತ್ತದೆ.

**तथा हरेः प्रकृतिशब्दवाच्येच्छास्वरूपत्वावेदकैः 'प्रकृतिर्वासनेत्येव तवेच्छाऽनन्त कथ्यते' इति, 'सोऽभिद्या स जूतिः' इत्यादिशब्दैस्तथा 'एष स्त्र्येष पुरुषः' इत्यादिभिः साक्षात् स्त्रीपुरुषशब्दवाच्यत्वावेदकैः शब्दैः मुख्यतयोदितत्वं ज्ञायत इत्यर्थः ।**

ಮತ್ತೊಂದು ಕಾರಣದಿಂದ ಪರಮಾತ್ಮನು ಪ್ರಕೃತಿಯೆನಿಸುತ್ತಾನೆಂದು ತಿಳಿಯಬೇಕು. 'ಪ್ರಕೃತಿರ್ವಾಸನೇತ್ಯೇವ ತವೇಚ್ಛಾಽನಂತ ಕಥ್ಯತೇ' ಇತ್ಯಾದಿ ಶ್ರುತಿಗಳು ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆಯುತ್ತಿವೆ. 'ಸೋಽಭಿಧ್ಯಾ ಸ ಜೂತಿಃ' ಇತ್ಯಾದಿ ಶ್ರುತಿಗಳು ಪರಮಾತ್ಮನ ಇಚ್ಛೆಯೆಂದು ಅವನ ಸ್ವರೂಪವೆಂದೇ ಪ್ರತಿಪಾದಿಸುತ್ತಿವೆ. ಆದ್ದರಿಂದಲೂ ಪರಮಾತ್ಮನು ಪ್ರಕೃತಿಯೆಂದು ಕರೆಸಿಕೊಳ್ಳುತ್ತಾನೆ.

ಅಷ್ಟೇ ಅಲ್ಲದೇ 'ಏಷ ಸ್ತ್ರೀಷ ಪುರುಷಃ' ಇತ್ಯಾದಿ ಶ್ರುತಿಗಳಂತೆ ನೇರವಾಗಿಯೇ ಪರಮಾತ್ಮನನ್ನು, ಸ್ತ್ರೀ-ಪುರುಷ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನೆಂದು ಹೇಳುತ್ತಿವೆ.

**निमित्ताभाव इत्यतोऽपि – शब्दैरिति । 'अथ हैष आत्मा प्रकृतिमनुप्रविश्यात्मानं बहुधा चकार । तस्मात् प्रकृतिः' इत्यादिप्रकृतिशब्दप्रवृत्तिनिमित्तप्रकृष्टकृतिमत्त्वावेदकैः, तथा 'यद्भूतयोनिं' इति, 'सूतिरव्यवधानेन' इत्यादिभिः स्त्रीलिङ्गशब्दमात्रप्रवृत्तिनिमित्तभूताव्यवधानेन प्रसवहेतुत्वरूपस्त्रीत्वावेदकैः श्रुतिस्मृतिरूपैः शब्दैः हरौ निमित्तभावावगमादित्यर्थः ॥६॥**

ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಇರುವುದಿಲ್ಲವಲ್ಲವೇ ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದಲೇ ಉತ್ತರಿಸಬೇಕು. 'ಅಥ ಹೈಷ ಆತ್ಮಾ ಪ್ರಕೃತಿಮನುಪ್ರವಿಶ್ಯಾತ್ಮಾನಂ ಬಹುಧಾ ಚಕಾರ ತಸ್ಮಾತ್ ಪ್ರಕೃತಿಃ' ಇತ್ಯಾದಿಯಾದ ಶ್ರುತಿಯಲ್ಲಿ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಕೃಷ್ಟ ಕೃತಿಮತ್ವವನ್ನು ಹೇಳಲಾಗಿದೆ. ಅಂದರೆ ಪರಮಾತ್ಮನು ಪ್ರಕೃತಿಯಲ್ಲಿ ಪ್ರವೇಶ ಮಾಡಿ, ಆ ಪ್ರಕೃತಿಯನ್ನು ಮಹತ್ತತ್ವಾತ್ಮಕವಾಗಿ ಪರಿಣಾಮ ಮಾಡಿ, ಆ ಮಹತ್ತತ್ವವನ್ನು ಅಹಂಕಾರತತ್ವವನ್ನಾಗಿ, ಅದರಿಂದ ಸಮಸ್ತ ಜಗತ್ತಿನ ಅನೇಕ ಪದಾರ್ಥಗಳನ್ನಾಗಿ ಪರಿಣಾಮ ಮಾಡುತ್ತಾನೆ. ಮತ್ತು ಆ ಎಲ್ಲಾ ಪದಾರ್ಥಗಳಲ್ಲಿಯೂ ಸ್ವತಃ ತಾನು ಅನೇಕ ರೂಪಗಳನ್ನು ತಾಳಿ, ಪ್ರವೇಶಿಸಿ ಅವುಗಳನ್ನು ನಿಯಮನ ಮಾಡುತ್ತಾನೆ. ಹೀಗೆ ಶ್ರುತಿಯು ಹೇಳುತ್ತಿದೆ. ಇದರಿಂದ ಪರಮಾತ್ಮನಲ್ಲಿ ಪ್ರಕೃಷ್ಟವಾದ ಕೃತಿಮತ್ವ ಎಂಬ ಪ್ರವೃತ್ತಿನಿಮಿತ್ತವು ಸಿದ್ಧವಾಗುತ್ತದೆ.

ಅದರಂತೆ 'ಸೂತಿಃ ಅವ್ಯವಧಾನೇನ' ಎಂಬ ಶ್ರುತಿಯಲ್ಲಿ ಹೇಳಿದ ಅವ್ಯವಧಾನೇನ ವ್ಯುತ್ಪಾದಕತ್ವರೂಪವಾದ ಸ್ತ್ರೀಲಿಂಗಶಬ್ದಗಳಿಂದ ಬೋಧಿತವಾಗುವ ಸ್ತ್ರೀತ್ವವನ್ನು ಪರಮಾತ್ಮನಲ್ಲಿಯೇ ಬರುತ್ತದೆ. ಏಕೆಂದರೆ 'ಯದ್ಭೂತಯೋನಿಂ' ಎಂಬ ಶ್ರುತಿಯು ಹೇಳುವಂತೆ ಜಗತ್ತಿಗೆ ಪರಮಾತ್ಮನು ಸಾಕ್ಷಾತ್ತಾಗಿಯೇ ಉತ್ಪಾದಕನಾಗಿದ್ದಾನೆ. ಆದ್ದರಿಂದ ಸ್ತ್ರೀಲಿಂಗಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯವಧಾನೇನ ಪ್ರಸವಹೇತುತ್ವವು ಮುಖ್ಯವಾಗಿ ಪರಮಾತ್ಮನಲ್ಲಿ ಬರುವುದರಿಂದ ಪರಮಾತ್ಮನೇ 'ಪ್ರಕೃತಿ', 'ಸ್ತ್ರೀ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಶ್ರುತಿ-ಸ್ಮೃತಿರೂಪವಾದ ಶಬ್ದಗಳಿಂದ

पूर्ववदनुषङ्गः । प्रकृतिः प्रकृष्टा कृतिः यस्येति प्रकृतिशब्दोक्तः प्रकृष्टकृतिमानेको जनार्दनः ।

ಇಲ್ಲಿಯೂ ಕೂಡ ಹಿಂದಿನಂತೆ ಶಬ್ದಗಳನ್ನು ಅನುಷಂಗ ಮಾಡಿಕೊಳ್ಳಬೇಕು. ಪ್ರಕೃತಿಶಬ್ದಕ್ಕೆ ಪ್ರಕೃಷ್ಟವಾದ ಆ ಪರಮಾತ್ಮನು ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನಾದ್ದರಿಂದ ಪ್ರಕೃಷ್ಟವಾದ ಕೃತಿಯುಳ್ಳವನಾಗಿದ್ದಾನೆ. ಆದ್ದರಿಂದ ಪ್ರಕೃತಿಯೆನಿಸುತ್ತಾನೆ. ಇಂತಹ ಉತ್ಕೃಷ್ಟನಾದ ಕೃತಿಯುಳ್ಳವನು ಜನಾರ್ದನನೊಬ್ಬನೇ ಆಗಿದ್ದಾನೆ. 'ಪ್ರಕೃತಿಃ ಏಕೋ ಜನಾರ್ದನಃ' ಹೀಗೆ ಅಣುಭಾಷ್ಯದಲ್ಲಿ ಪದಗಳನ್ನು ಅನುಷಂಗ ಮಾಡಿಕೊಳ್ಳಬೇಕು.

तथा स्त्रीलिङ्गेन अन्यत्र नियतैः अन्यत्रैव प्रसिद्धैः 'सैषा प्रकृतिः' इत्यादौ श्रुतप्रकृतितदुपलक्षितस्त्रीलिङ्गशब्दैरेको जनार्दनो मुख्यतया परममुख्यवृत्योदितो नतु लक्ष्म्यादिः ।

ಆದ್ದರಿಂದ 'ಪ್ರಕೃತಿಃ' ಮೊದಲಾದ ಸ್ತ್ರೀಲಿಂಗಶಬ್ದಗಳು ಲಕ್ಷ್ಮ್ಯಾದಿಗಳಲ್ಲಷ್ಟೇ ನಿಯತವಾಗಿವೆ. ಅವರಲ್ಲಷ್ಟೇ ಪ್ರಸಿದ್ಧವಾಗಿದೆ. ಹೀಗೆ 'ಸೈಷಾ ಪ್ರಕೃತಿಃ' ಇತ್ಯಾದಿ ಶ್ರುತಿಗಳಲ್ಲಿರುವ ಪ್ರಕೃತಿಶಬ್ದ ಉಪಲಕ್ಷಿತವಾದ ಎಲ್ಲಾ ಸ್ತ್ರೀಲಿಂಗಶಬ್ದಗಳು ಲಕ್ಷ್ಮ್ಯಾದಿಗಳಲ್ಲಷ್ಟೇ ಪ್ರಸಿದ್ಧವಾಗಿದೆ. ಇಂತಹ ಶಬ್ದಗಳೆಲ್ಲಾ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಜನಾರ್ದನನು ಮಾತ್ರ. ಹೊರತು ಲಕ್ಷ್ಮ್ಯಾದಿಗಳಲ್ಲ.

कुतः शब्दैः । 'हन्त एतमेव सर्वाणि नामान्यभिवदन्ति' इत्यादिप्रतिज्ञादृष्टान्ताभ्यां सर्वशब्दवाच्यत्वोपपादकप्रभृतिभिः 'नामानि सर्वाणि' इत्यादिभिः प्रागुक्तैश्च शब्दैरित्यर्थः ।

ಏಕೆಂದರೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. 'ಹಂತ ಏತಮೇವ ಸರ್ವಾಣಿ ನಾಮಾನ್ಯಭಿವದಂತಿ' ಇತ್ಯಾದಿಯಾದ ಪ್ರತಿಜ್ಞಾವಾಕ್ಯ ಹಾಗೂ ದೃಷ್ಟಾಂತವಾಕ್ಯಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ತಿಳಿಯುತ್ತದೆ. ಮತ್ತು ಸರ್ವಶಬ್ದವಾಚ್ಯತ್ವವನ್ನು ಉಪಪಾದನೆ ಮಾಡುವ 'ನಾಮಾನಿ ಸರ್ವಾಣಿ' ಇತ್ಯಾದಿಯಾದ ಹಿಂದೆ ಉದಾಹರಿಸಿದ ಶ್ರುತಿಗಳಿಂದಲೂ ಪರಮಾತ್ಮನೇ ಸ್ತ್ರೀಲಿಂಗಶಬ್ದಗಳಿಂದಲ್ಲಾ ಪ್ರತಿಪಾದ್ಯವೆಂದು ದೃಢವಾಗುತ್ತದೆ.

तथा हरेः प्रकृतिशब्दवाच्येच्छास्वरूपत्वावेदकैः 'प्रकृतिर्वासनेत्येव तवेच्छाऽनन्त कथ्यते' इति, 'सोऽभिद्या स जूतिः' इत्यादिशब्दैस्तथा 'एष स्त्र्येष पुरुषः' इत्यादिभिः साक्षात् स्त्रीपुरुषशब्दवाच्यत्वावेदकैः शब्दैः मुख्यतयोदितत्वं ज्ञायत इत्यर्थः ।

ಮತ್ತೊಂದು ಕಾರಣದಿಂದ ಪರಮಾತ್ಮನು ಪ್ರಕೃತಿಯೆನಿಸುತ್ತಾನೆಂದು ತಿಳಿಯಬೇಕು. 'ಪ್ರಕೃತಿರ್ವಾಸನೇತ್ಯೇವ ತವೇಚ್ಛಾऽನಂತ ಕಥ್ಯತೇ' ಇತ್ಯಾದಿ ಶ್ರುತಿಗಳು ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆಯುತ್ತಿವೆ. 'ಸೋऽಭಿದ್ಯಾ ಸ ಜೂತಿಃ' ಇತ್ಯಾದಿ ಶ್ರುತಿಗಳು ಪರಮಾತ್ಮನ ಇಚ್ಛೆಯೆಂದು ಅವನ ಸ್ವರೂಪವೆಂದೇ ಪ್ರತಿಪಾದಿಸುತ್ತಿವೆ. ಆದ್ದರಿಂದಲೂ ಪರಮಾತ್ಮನು ಪ್ರಕೃತಿಯೆಂದು ಕರೆಸಿಕೊಳ್ಳುತ್ತಾನೆ.

ಅಷ್ಟೇ ಅಲ್ಲದೇ 'ಏಷ ಸ್ತ್ರೀಷ ಪುರುಷಃ' ಇತ್ಯಾದಿ ಶ್ರುತಿಗಳಂತೆ ನೇರವಾಗಿಯೇ ಪರಮಾತ್ಮನನ್ನು, ಸ್ತ್ರೀ-ಪುರುಷ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನೆಂದು ಹೇಳುತ್ತಿವೆ.

**निमित्ताभाव इत्यतोऽपि – शब्दैरिति । 'अथ हैष आत्मा प्रकृतिमनुप्रविश्यात्मानं बहुधा चकार । तस्मात् प्रकृतिः' इत्यादिप्रकृतिशब्दप्रवृत्तिनिमित्तप्रकृष्टकृतिमत्त्वावेदकैः, तथा 'यद्भूतयोनिं' इति, 'सूतिरव्यवधानेन' इत्यादिभिः स्त्रीलिङ्गशब्दमात्रप्रवृत्तिनिमित्तभूताव्यवधानेन प्रसवहेतुत्वरूपस्त्रीत्वावेदकैः श्रुतिस्मृतिरूपैः शब्दैः हरौ निमित्तभावावगमादित्यर्थः ॥६॥**

ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಇರುವುದಿಲ್ಲವಲ್ಲವೇ ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದಲೇ ಉತ್ತರಿಸಬೇಕು. 'ಅಥ ಹೈಷ ಆತ್ಮಾ ಪ್ರಕೃತಿಮನುಪ್ರವಿಶ್ಯಾತ್ಮಾನಂ ಬಹುಧಾ ಚಕಾರ ತಸ್ಮಾತ್ ಪ್ರಕೃತಿಃ' ಇತ್ಯಾದಿಯಾದ ಶ್ರುತಿಯಲ್ಲಿ ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಕೃಷ್ಟ ಕೃತಿಮತ್ತ್ವವನ್ನು ಹೇಳಲಾಗಿದೆ. ಅಂದರೆ ಪರಮಾತ್ಮನು ಪ್ರಕೃತಿಯಲ್ಲಿ ಪ್ರವೇಶ ಮಾಡಿ, ಆ ಪ್ರಕೃತಿಯನ್ನು ಮಹತ್ತತ್ತ್ವಾತ್ಮಕವಾಗಿ ಪರಿಣಾಮ ಮಾಡಿ, ಆ ಮಹತ್ತತ್ತ್ವವನ್ನು ಅಹಂಕಾರತತ್ತ್ವವನ್ನಾಗಿ, ಅದರಿಂದ ಸಮಸ್ತ ಜಗತ್ತಿನ ಅನೇಕ ಪದಾರ್ಥಗಳನ್ನಾಗಿ ಪರಿಣಾಮ ಮಾಡುತ್ತಾನೆ. ಮತ್ತು ಆ ಎಲ್ಲಾ ಪದಾರ್ಥಗಳಲ್ಲಿಯೂ ಸ್ವತಃ ತಾನು ಅನೇಕ ರೂಪಗಳನ್ನು ತಾಳಿ, ಪ್ರವೇಶಿಸಿ ಅವುಗಳನ್ನು ನಿಯಮನ ಮಾಡುತ್ತಾನೆ. ಹೀಗೆ ಶ್ರುತಿಯು ಹೇಳುತ್ತಿದೆ. ಇದರಿಂದ ಪರಮಾತ್ಮನಲ್ಲಿ ಪ್ರಕೃಷ್ಟವಾದ ಕೃತಿಮತ್ತ್ವ ಎಂಬ ಪ್ರವೃತ್ತಿನಿಮಿತ್ತವು ಸಿದ್ಧವಾಗುತ್ತದೆ.

ಅದರಂತೆ 'ಸೂತಿಃ ಅವ್ಯವಧಾನೇನ' ಎಂಬ ಶ್ರುತಿಯಲ್ಲಿ ಹೇಳಿದ ಅವ್ಯವಧಾನೇನ ಉತ್ಪಾದಕತ್ವರೂಪವಾದ ಸ್ತ್ರೀಲಿಂಗಶಬ್ದಗಳಿಂದ ಬೋಧಿತವಾಗುವ ಸ್ತ್ರೀತ್ವವನ್ನು ಪರಮಾತ್ಮನಲ್ಲಿಯೇ ಬರುತ್ತದೆ. ಏಕೆಂದರೆ 'ಯದ್ಭೂತಯೋನಿಂ' ಎಂಬ ಶ್ರುತಿಯು ಹೇಳುವಂತೆ ಜಗತ್ತಿಗೆ ಪರಮಾತ್ಮನು ಸಾಕ್ಷಾತ್ತಾಗಿಯೇ ಉತ್ಪಾದಕನಾಗಿದ್ದಾನೆ. ಆದ್ದರಿಂದ ಸ್ತ್ರೀಲಿಂಗಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯವಧಾನೇನ ಪ್ರಸವಹೇತುತ್ವವು ಮುಖ್ಯವಾಗಿ ಪರಮಾತ್ಮನಲ್ಲಿ ಬರುವುದರಿಂದ ಪರಮಾತ್ಮನೇ 'ಪ್ರಕೃತಿ', 'ಸ್ತ್ರೀ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಶ್ರುತಿ-ಸ್ಮೃತಿರೂಪವಾದ ಶಬ್ದಗಳಿಂದ

ಪರಮಾತ್ಮನಲ್ಲಿ ಪ್ರವೃತ್ತಿನಿಮಿತ್ತವಿರುತ್ತದೆಂದು ಸಿದ್ಧವಾಯಿತು. ಆದ್ದರಿಂದ ಪರಮಾತ್ಮನು ಎಲ್ಲಾ ಬಗೆಯ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ತ್ವಮಂಜರಿಯ ಕನ್ನಡಾನುವಾದದಲ್ಲಿ ಪ್ರಕೃತ್ಯಧಿಕರಣವು ಮುಗಿಯಿತು.

***

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## प्रकृत्यधिकरणम् (१।४।६)

**।। प्रकृतिश्च प्रतिज्ञादृष्टान्तानुपरोधात् ।। १-४-२४ ।।**

अत्र स्त्रीलिङ्गाः शब्दाः समन्वीयन्ते । श्रीवाचितया प्रधान्यात् प्रकृतिपदस्यान्योपलक्षणत्वात् । तत्त्वित्यस्ति । ''सैषा प्रकृतिः'' इत्याद्युक्तप्रकृत्यादि मुख्यतो ब्रह्मैव । न तु श्रीतत्वादि । कुतः ? ''हन्तैतमेव पुरुषं सर्वाणि नामान्यभिवदन्ति'' इति प्रतिज्ञा, ''यथा नद्यः स्यन्दमानाः समुद्रायणाः समुद्रमभिविशन्ति एवमेवैतानि नामानि'' इति दृष्टान्तः । तयोरनुपरोधात्तदनुसारादि त्यर्थः ।

'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಈ ಅಧಿಕರಣದಲ್ಲಿ ಸ್ತ್ರೀಲಿಂಗಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಲಕ್ಷ್ಮೀದೇವಿಯನ್ನು ಪ್ರತಿಪಾದನೆ ಮಾಡುವ ಶಬ್ದಗಳಲ್ಲಿ ಪ್ರಕೃತಿ ಶಬ್ದವು ಪ್ರಧಾನವಾಗಿದೆ. ಆದ್ದರಿಂದ ಅದನ್ನೇ ಸೂತ್ರದಲ್ಲಿ ಉಲ್ಲೇಖ ಮಾಡಿ, ಉಳಿದ ಸ್ತ್ರೀಲಿಂಗಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸಿದ್ದಾರೆ. ಈ ಸೂತ್ರದಲ್ಲಿಯೂ 'ತತ್ತು' ಎಂಬ ಪದಗಳು ಅನುವೃತ್ತವಾಗುತ್ತವೆ.

ಸೂತ್ರಾರ್ಥ - ಪ್ರಕೃತಿಶ್ಚ = 'ಸೈಷಾ ಪ್ರಕೃತಿಃ' ಇತ್ಯಾದಿ ಶ್ರುತಿಗಳಲ್ಲಿ ಪ್ರತಿಪಾದಿಸಲ್ಪಟ್ಟ ಪ್ರಕೃತಿ ಮೊದಲಾದ ಶಬ್ದಗಳು ಮುಖ್ಯವಾಗಿ 'ತತ್ತು' ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ ಹೊರತು, ಸ್ತ್ರೀತತ್ವವನ್ನಲ್ಲ. ಏಕೆಂದರೆ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ = 'ಹಂತ್ಯೆತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ' ಎಲ್ಲಾ ಶಬ್ದಗಳು ಪುರುಷರೂಪಿಯಾದ ಪರಮಾತ್ಮನನ್ನೇ ಹೇಳುತ್ತವೆ ಎಂಬ ಪ್ರತಿಜ್ಞೆ, 'ಯಥಾ ನದ್ಯಃ, ಸ್ಯಂದಮಾನಾಃ ಸಮುದ್ರಾಯಾಣಾಃ ಸಮುದ್ರಮಭಿವಿಶಂತಿ ಏವಮೇವೈತಾನಿ' ಹರಿಯುವ ನದಿಗಳು ಸಮುದ್ರಾಭಿಮುಖವಾಗಿ ಹರಿದು, ಸಮುದ್ರವನ್ನು ಪ್ರವೇಶಿಸುವಂತೆ ಎಂಬ ದೃಷ್ಟಾಂತ ವಚನ. ಇವೆರಡರ ಅನುಸಾರವಾಗಿ ಎಂದು ಸೂತ್ರಾರ್ಥ.

**अन्यथा तदुपरोधः स्यादिति भावः । सर्वस्त्रीशब्दसमुच्चायकः च इति तत्त्वप्रदीपे। न केवलं विष्णुरिति समुच्चिनोति । तेन स्त्रीत्वं चेत् पुंस्त्वं न स्यादिति न शङ्क्यमिति टीकाचन्द्रिकयोरुक्तम् ।**

ಒಂದು ವೇಳೆ ಸ್ತ್ರೀಲಿಂಗಶಬ್ದಗಳು ಭಗವಂತನನ್ನು ಪ್ರತಿಪಾದನೆ ಮಾಡದಿದ್ದರೆ, ಈ ಪ್ರತಿಜ್ಞಾದೃಷ್ಟಾಂತಗಳ ವಿರೋಧವು ಬರುತ್ತದೆಂದು ಅಭಿಪ್ರಾಯ.

ಸೂತ್ರದಲ್ಲಿರುವ ಚಶಬ್ದವು ಎಲ್ಲಾ ಬಗೆಯ ಸ್ತ್ರೀ ವಾಚಕ ಶಬ್ದಗಳನ್ನು ಸಮುಚ್ಚಯ ಮಾಡುತ್ತಿದೆ. ಹೀಗೆ ತತ್ತ್ವಪ್ರದೀಪದಲ್ಲಿ ವ್ಯಾಖ್ಯಾನಿಸಲಾಗಿದೆ.

ಪರಮಾತ್ಮನು ಕೇವಲ ಪುರುಷನಷ್ಟೇ ಅಲ್ಲ. ವ್ಯವಧಾನವಿಲ್ಲದ ಪ್ರಸವಹೇತುತ್ವ ರೂಪವಾದ ಸ್ತ್ರೀತ್ವವನ್ನೂ ಕೂಡ ಪಡೆದಿರುತ್ತಾನೆ. ಆದ್ದರಿಂದಲೇ ಪ್ರಕೃತಿ ಮೊದಲಾದ ಶಬ್ದಗಳಿಂದೆಲ್ಲಾ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಇದನ್ನು ಸೂತ್ರದಲ್ಲಿರುವ ಚಶಬ್ದವು ಸಮುಚ್ಚಯ ಮಾಡುತ್ತಿದೆ ಆದ್ದರಿಂದಲೇ ಭಗವಂತನಲ್ಲಿ ಸ್ತ್ರೀತ್ವವನ್ನು ಒಪ್ಪಿದರೆ, ಪುಂಸ್ತ್ವವನ್ನು ಅಲ್ಲಗಳೆಯಬೇಕಾಗುತ್ತದೆ ಎಂಬ ಆಶಂಕೆಗೆ ಅವಕಾಶವಿಲ್ಲ. ಹೀಗೆ ಟೀಕೆಯಲ್ಲಿ ಮತ್ತು ಚಂದ್ರಿಕಾಗ್ರಂಥದಲ್ಲಿ ವ್ಯಾಖ್ಯಾನಿಸಲಾಗಿದೆ.

**प्रागुक्तहेतुभिरेव पूर्वत्रैव प्रकृत्यादि ब्रह्मेति सिद्धावपि ''नामानि सर्वाणि'' इत्यत्र सर्वशब्दे सङ्कोचशङ्कानिरासाय पुनः साधकोक्तिः ।**

ಹಿಂದೆ ಹೇಳಿರುವ ಯುಕ್ತಿಗಳಿಂದಲೇ ಪ್ರಕೃತ್ಯಾದಿಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಈ ಹಿಂದೆ ಸಿದ್ಧವಾಗಿದೆ. ಆದರೂ ಕೂಡ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬಹುದೆಂಬ ಆಶಂಕೆಯ ನಿರಾಸಕ್ಕಾಗಿ ಸರ್ವಶಬ್ದವಾಚ್ಯತ್ವದ ವಿಷಯದಲ್ಲಿ ಪುನಃ ಈ ಸೂತ್ರವು ಸಾಧಕಪ್ರಮಾಣವನ್ನು ಸಮರ್ಥಿಸುತ್ತಿದೆ.

ಪ್ರಕೃತ್ಯಧಿಕರಣ (೧-೪-೬)

इतश्चैवमित्याह -

**।। अभिध्योपदेशाच्च ।। १-४-२५ ।।**

ಮತ್ತೊಂದು ಕಾರಣದಿಂದಲೂ ಬ್ರಹ್ಮನು ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲು ಮುಂದಿನ ಸೂತ್ರ ಹೊರಟಿದೆ - 'ಅಭಿಧ್ಯೋಪದೇಶಾಚ್ಚ'.

**प्रकृतिरित्यनुवर्तमानमावर्तते । द्वितीयं भावप्रधानम् । योग्यतयाऽभिध्येत्यनेनान्वेति । अभिध्येत्यप्यावर्तते । द्वितीयं भावप्रधानम् । प्रकृतिर्ब्रह्मैव । कुतः ? प्रकृतित्वेन प्रकृतिशब्दवाच्यत्वेनाभिध्यायाः इच्छाया उपदेशात्। ''प्रकृतिर्वासनेत्येवं तवेच्छाऽनन्त'' इति स्मृतौ तथा ब्रह्मणोऽभिध्यात्वोपदेशादिच्छारूपत्वोपदेशात् । ''सोऽभिध्या स जूतिः'' इति श्रुतावित्यर्थः । प्रकृतिशब्दवाच्येच्छात्मकत्वाच्च प्रकृतिशब्दं ब्रह्मेति भावः ।।**

ಹಿಂದಿನ ಸೂತ್ರದಿಂದ 'ಪ್ರಕೃತಿಃ' ಎಂಬ ಪದವು ಇಲ್ಲಿ ಅನುವೃತ್ತವಾಗುತ್ತವೆ. ಅದೇ ಪ್ರಕೃತಿ ಶಬ್ದವನ್ನು ಎರಡು ಬಾರಿ ವಿವಕ್ಷಿಸಬೇಕು. ಆವೃತ್ತಿಗೊಂಡ ಎರಡನೆಯ ಪ್ರಕೃತಿ ಶಬ್ದವು ಭಾವಪ್ರಧಾನದಲ್ಲಿ ನಿರ್ದಿಷ್ಟವಾಗಿರುತ್ತದೆ. ಅನ್ವಯಯೋಗ್ಯವಾದ 'ಅಭಿಧ್ಯಾ' ಎಂಬ ಪದದ ಜೊತೆಗೆ ಅನ್ವಯವನ್ನು ಪಡೆಯುತ್ತದೆ. 'ಅಭಿಧ್ಯಾ' ಎಂಬ ಪದವೂ ಕೂಡ ಎರಡು ಬಾರಿ ಆವೃತ್ತವಾಗುತ್ತದೆ. ಎರಡನೆಯ 'ಅಭಿಧ್ಯಾ' ಎಂಬ ಪದವು ಭಾವಪ್ರಧಾನದಲ್ಲಿ ನಿರ್ದೇಶಿಸಲ್ಪಡುತ್ತದೆ.

ಸೂತ್ರಾರ್ಥ ಹೀಗಿದೆ - ಪ್ರಕೃತಿಃ = ಪ್ರಕೃತಿಶಬ್ದವಾಚ್ಯನಾದವನು, ತತ್ತು = ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಪ್ರಕೃತಿಃ = 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾऽನಂತ (ಕ)ಪದ್ಯತೇ' ಎಂಬ ಸ್ಮೃತಿಯಲ್ಲಿ ಪ್ರಕೃತಿತ್ವೇನ ಪ್ರಕೃತಿಶಬ್ದವಾಚ್ಯವೆಂದು 'ಅಭಿಧ್ಯೆ' ಎಂದರೆ ಇಚ್ಛೆಯ ಉಪದೇಶವಿರುವುದರಿಂದ, ಮತ್ತು 'ಸೋऽಭಿಧ್ಯಾ ಸ ಜೂತಿಃ' ಎಂಬ ಶ್ರುತಿಯಲ್ಲಿ ಬ್ರಹ್ಮನಿಗೆ ಇಚ್ಛಾರೂಪತ್ವವನ್ನು ಹೇಳಿದ್ದರಿಂದ, ಅಂದರೆ ಪ್ರಕೃತಿಶಬ್ದವಾಚ್ಯವಾದ ಇಚ್ಛೆಯು ಭಗವದತ್ಮಕವಾದ್ದರಿಂದ ಬ್ರಹ್ಮನು ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ಅಭಿಪ್ರಾಯ.

**अद्योक्तं सामान्यरूपं द्वितीयोक्तं पारम्पर्यरूपं च मानं विना विशिष्य मानाभावात् कथं प्रकृत्यादिशब्दं ब्रह्मेत्यत आह -**

**।। साक्षाच्चोभयाम्नानात् ।। १-४-२६ ।।**

ಪ್ರಥಮ ಸೂತ್ರದಲ್ಲಿ ಪರಮಾತ್ಮನು ನೇರವಾಗಿ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಸಾಮಾನ್ಯವಾಗಿ ಹೇಳಲಾಯಿತು. 'ಅಭಿಧ್ಯೋಪದೇಶಾಚ್ಚ' ಎಂಬ ಎರಡನೆಯ

ಸೂತ್ರದಲ್ಲಿ ಭಗವಂತನ ಇಚ್ಛೆಯು ಪ್ರಕೃತಿಯೆನಿಸುವುದರಿಂದ ಇಚ್ಛಾರೂಪನಾದ ಭಗವಂತನೂ ಕೂಡ ಪ್ರಕೃತಿಶಬ್ದವಾಚ್ಯನಾಗುತ್ತಾನೆಂದು ಪರಂಪರೆಯಿಂದ ಹೇಳಲಾಯಿತು. ಈ ಎರಡೂ ಸೂತ್ರಗಳಲ್ಲಿ ಹೇಳಿದ ವಿಚಾರ ಪ್ರಮಾಣವಿಲ್ಲದೇ ಸಿದ್ಧವಾಗುವುದಿಲ್ಲ. ಹೀಗಿರುವಾಗ ಭಗವಂತನು ಪ್ರಕೃತಿಶಬ್ದದಿಂದ ವಾಚ್ಯನಾಗುತ್ತಾನೆಂದು ಹೇಗೆ ಹೇಳುತ್ತೀರಿ? ಈ ಆಕ್ಷೇಪಕ್ಕೆ ಉತ್ತರಿಸಲು 'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಸೂತ್ರವು ಹೊರಟಿದೆ.

**च एव । प्रकृत्यादिर्ब्रह्मैव । साक्षादेव सामान्यपारम्पर्ये विनोभयस्य प्रकृत्यादिशब्दत्वस्य पुरुषत्वस्य चाम्नानात् । ''एष स्त्री एष पुरुषः'' इति श्रुतावित्यर्थः ।**

ಸೂತ್ರಾರ್ಥ - ಚಶಬ್ದವು 'ಏವ' ಎಂಬ ಅವಧಾರಣಾರ್ಥದಲ್ಲಿದೆ. ಪ್ರಕೃತ್ಯಾದಿಃ = ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ವಾಚ್ಯನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ, ಸಾಕ್ಷಾಚ್ಚ = ನೇರವಾಗಿ ಮತ್ತು ಪರಂಪರೆಯಿಂದ ಸ್ತ್ರೀತ್ವವನ್ನು ಸಮರ್ಥಿಸುವ ಪ್ರಮಾಣಗಳನ್ನು ಬಿಟ್ಟು, ಉಭಯಾಮ್ನಾನಾತ್ = 'ಏಷ ಸ್ತ್ರೀ ಏಷ ಪುರುಷಃ' ಎಂಬಲ್ಲಿ ಪ್ರಕೃತ್ಯಾದಿ ಶಬ್ದವಾಚ್ಯತ್ವವನ್ನು ಪುರುಷತ್ವವನ್ನು ಎರಡೂ ಕೂಡ ಹೇಳಲಾಗಿದೆ ಎಂದು ಸೂತ್ರಾರ್ಥ.

**निमित्ताभावान्न प्रकृतिशब्दं ब्रह्मेत्यत आह -**

**।। आत्मकृतेः परिणामात् ।। १-४-२६ ।।**

ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಇಲ್ಲದ ಕಾರಣ ಹೇಗೆ ಪ್ರಕೃತಿಶಬ್ದವಾಚ್ಯನಾಗುತ್ತಾನೆ ? ಎಂಬ ಪ್ರಶ್ನೆಗೆ ಉತ್ತರಿಸಲು 'ಆತ್ಮಕೃತೇಃ ಪರಿಣಾಮಾತ್' ಎಂಬ ಸೂತ್ರ ಹೊರಟಿದೆ.

**योग्यतया प्रकृतेरित्यन्वेति । परिणामादिति ल्यब्लोपे पञ्चमी । प्रकृतेः परिणामं विधाय तत्प्रेरणयाऽत्मनः प्रकृतेर्बहुधा करणात् प्रकृतिर्ब्रह्मेत्यर्थः । प्रकृष्टा कृतिर्यस्येति योगसम्भवात् । तदधीनत्वे सत्यपि तदनादरेण गुणपूर्त्यर्थं निमित्तान्तरोक्तिः । परिणामादित्युक्तिरात्मप्रकृतेस्तत्प्रेरणरूपफलोक्त्यर्था ।।**

ಅನ್ವಯಯೋಗ್ಯವಾದ್ದರಿಂದ 'ಪ್ರಕೃತೇಃ' ಎಂಬ ಪದವು ಅನ್ವಯ ಪಡೆದಿದೆ. 'ಪರಿಣಾಮಾತ್' ಎಂಬಲ್ಲಿ ಲ್ಯಬ್‌ಪ್ರತ್ಯಯದ ಲೋಪನಿಮಿತ್ತದಿಂದಾಗಿ ಪಂಚಮೀ ವಿಭಕ್ತಿಯು ಇರುತ್ತದೆ. ಪರಮಾತ್ಮನು ಪ್ರಕೃತಿಯನ್ನು ಪರಿಣಾಮ ಮಾಡಿ, ಅಂತಹ ಪ್ರಾಕೃತವಾದ ವಿಕಾರಗಳನ್ನು ಪ್ರೇರಣೆ ಮಾಡಲು ತನ್ನನ್ನು ಬಹುಸ್ವರೂಪವನ್ನಾಗಿ ಮಾಡಿಕೊಳ್ಳುತ್ತಾನೆ ಎಂದು ಸೂತ್ರಾರ್ಥ. ಪ್ರಕೃಷ್ಟವಾದ ಆಕೃತಿಯುಳ್ಳವನಾದ್ದರಿಂದ ಅನೇಕ ಸ್ವರೂಪವನ್ನು ತಾಳುತ್ತಾನಾದ್ದರಿಂದ ಪರಮಾತ್ಮನು ಪ್ರಕೃತಿ ಆಗಿದ್ದಾನೆಂದು ಸೂತ್ರವು ಯೋಗವೃತ್ತಿಯನ್ನು ಹೇಳುತ್ತಿದೆ. ಪ್ರಕೃತಿ

ಶಬ್ದದ ಪ್ರವೃತ್ತಿನಿಮಿತ್ತವು ಭಗವದಧೀನವಾಗಿರುವುದರಿಂದಲೂ ಭಗವಂತನು ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ಹೇಳಬಹುದು. ಆದರೂ ಕೂಡ ಅದನ್ನು ಬಿಟ್ಟು, 'ಆತ್ಮಕೃತೇಃ' ಎಂಬ ಮತ್ತೊಂದು ನಿಮಿತ್ತವನ್ನು ಏಕೆ ಹೇಳಿದ್ದಾರೆಂದರೆ ಗುಣಪೂರ್ಣತ್ವವು ಸಿದ್ಧವಾಗಬೇಕೆಂಬ ಉದ್ದೇಶದಿಂದ. ಪರಮಾತ್ಮನು ತನ್ನ ಸ್ವರೂಪವನ್ನು ಬಹುವಿಧವಾಗಿ ಮಾಡಿಕೊಳ್ಳುವುದರ ಪ್ರಯೋಜನವೇನೆಂದರೆ ಎಲ್ಲಾ ಬಗೆಯ ವಸ್ತುಗಳನ್ನು ಪ್ರೇರಣೆ ಮಾಡುವುದೇ ಆಗಿದೆ ಎಂದು 'ಪರಿಣಾಮಾತ್' ಎಂಬ ಪದವು ತಿಳಿಸುತ್ತಿದೆ.

**कथं प्रकृत्यादिस्त्रीलिङ्गशब्दवाच्यत्वं विष्णोः स्त्रीत्वरूपनिमित्ताभावादत आह -**

**।। योनिश्च हि गीयते ।। १-४-२८ ।।**

ಸ್ತ್ರೀತ್ವವೆಂಬ ನಿಮಿತ್ತವೇ ಇಲ್ಲದ್ದಿದಾಗ ಪ್ರಕೃತ್ಯಾದಿಸ್ತ್ರೀಲಿಂಗಶಬ್ದದಿಂದ ಪರಮಾತ್ಮನು ಹೇಗೆ ವಾಚ್ಯನಾಗುತ್ತಾನೆ ? ಎಂಬ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರವು ಹೊರಟಿದೆ - 'ಯೋನಿಶ್ಚ ಹಿ ಗೀಯತೇ' ಎಂದು.

**हि यस्माद्योनिश्च स्वदेहादुत्पादकं ब्रह्म गीयते ''यद्भूतयोनिं परिपश्यन्ति'' इति श्रुतौ अतः प्रकृत्यादिशब्दं ब्रह्मेत्यर्थः ।**

ಹಿ = ಯಾವ ಕಾರಣದಿಂದ, ಯೋನಿಶ್ಚ = ತನ್ನ ದೇಹದಿಂದಲೇ ನೇರವಾಗಿ ಅಪತ್ಯೋತ್ಪಾದಕನಾಗಿರುವ ಕಾರಣದಿಂದ, ಬ್ರಹ್ಮ ಗೀಯತೇ = ಬ್ರಹ್ಮನು 'ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ' ಎಂಬ ಶ್ರುತಿಯಿಂದ ಪ್ರತಿಪಾದಿತನಾಗಿ ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ತಿಳಿಯಬೇಕು.

**''सूतिरव्यवधानेन'' इति स्मृतेरव्यवधानेन स्वदेहादेवोत्पादकत्वरूपयोनिशब्दतः स्त्रीत्वसम्भवादिति भावः । प्रकृतिशब्दनिमित्तेन सह तदुपलक्षितस्त्रीशब्दमात्रनिमित्तसमुच्चये चः ।। ६ ।।**

'ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ । ಸೂತಿರವ್ಯಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ ॥' ಎಂಬ ಸ್ಮೃತಿ ಪ್ರಮಾಣದಿಂದ ತನ್ನ ದೇಹದಿಂದಲೇ ಪರಮಾತ್ಮನು ಪುತ್ರೋತ್ಪಾದಕನಾಗಿರುವುದರಿಂದ ಯೋನಿ ಪದದ ಪ್ರವೃತ್ತಿನಿಮಿತ್ತವೆನಿಸಿದ ಸ್ತ್ರೀತ್ವವನ್ನು ಹೊಂದಿದ್ದಾನೆಂದು ತಿಳಿಯಬೇಕು. 'ಚ'ಶಬ್ದವು ಪ್ರಕೃತಿಶಬ್ದದ ನಿಮಿತ್ತದ ಜೊತೆಗೆ ಪ್ರಕೃತಿಶಬ್ದದಿಂದ ಉಪಲಕ್ಷಿತವಾಗುವ ಎಲ್ಲಾ ಸ್ತ್ರೀಲಿಂಗಶಬ್ದಗಳ ನಿಮಿತ್ತವನ್ನು ಸಮುಚ್ಚಯ ಮಾಡುತ್ತಿದೆ.

ಇಲ್ಲಿಗೆ ಪ್ರಕೃತ್ಯಧಿಕರಣವು ಮುಗಿಯಿತು.

श्री राघवेन्द्रतीर्थविरचिता

# श्रीन्यायमुक्तावळिः

## प्रकृत्यधिकरणम् (१।४।६)

।। प्रकृतिश्च प्रतिज्ञादृष्टान्तानुपरोधात् ।। ६ ।।

।। अभिध्योपदेशाच्च ।। ।। साक्षाच्चोभयाम्नानात् ।।

।। आत्मकृतेः परिणामात् ।।

।। योनिश्च हि गीयते ।।

अत्र सर्वशब्दानां विष्णावधिका वृत्तिः अन्यत्र हीनेति प्रागुक्तमयुक्तम् । स्त्रीलिङ्गशब्दानां मुख्यवृत्तेरेवायोगात् कुतः आधिक्यचिन्तेति शङ्कनात् सङ्गतिः ।

ಈ ಅಧಿಕರಣಕ್ಕೆ ಸಂಗತಿ ಹೀಗಿದೆ - ಸಕಲಶಬ್ದಗಳು ವಿಷ್ಣುವಿನಲ್ಲಿ ಅಧಿಕವಾದ ವೃತ್ತಿಯಿಂದ ಇರುತ್ತವೆ. ಬೇರೆಡೆ ಹೀನವೃತ್ತಿಯಿಂದ ಇರುತ್ತವೆ ಎಂದು ಹಿಂದಿನ ಅಧಿಕರಣದಲ್ಲಿ ಸಿದ್ಧಾಂತ ಮಾಡಲಾಯಿತು. ಇದು ಅಯುಕ್ತ. ಏಕೆಂದರೆ ಮುಖ್ಯವೃತ್ತಿಯಿಂದ ಸ್ತ್ರೀಲಿಂಗಶಬ್ದಗಳು ಮುಖ್ಯವೃತ್ತಿಯಿಂದ ಮಹಾವಿಷ್ಣುವಿನಲ್ಲಿ ಬರಲು ಸಾಧ್ಯವೇ ಇಲ್ಲ. ಹೀಗಿರುವಾಗ ಎಲ್ಲಾ ಶಬ್ದಗಳೂ ಅಧಿಕವೃತ್ತಿಯಿಂದ ಪರಮಾತ್ಮನಲ್ಲಿರುತ್ತದೆ ಎಂದು ವಿಚಾರ ಮಾಡಲು ಹೇಗೆ ಸಾಧ್ಯ? ಎಂದು ಆಕ್ಷೇಪಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಸಂಗತಿಯಿರುತ್ತದೆ.

''एषा ह्येव प्रकृतिरविकृतिः'' (वत्सश्रुतिः) इत्यादिवाक्योक्तस्त्रीलिङ्गप्रकृत्यादिशब्दाः किं विष्णुवाचिनोऽन्यवाचिनो वेति सन्देहः । अन्यवाचिन इति पूर्वः पक्षः ।

'ಏಷಾ ಹ್ಯೇವ ಪ್ರಕೃತಿರವಿಕೃತಿಃ' ಇತ್ಯಾದಿಯಾದ ವತ್ಸಶ್ರುತಿಯಲ್ಲಿ ಸ್ತ್ರೀಲಿಂಗದಲ್ಲಿ ಪ್ರಕೃತಿ ಮೊದಲಾದ ಶಬ್ದಗಳಿರುತ್ತವೆ. ಇಂತಹ ಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನೋ? ಅಥವಾ ಬೇರೆ ಪದಾರ್ಥಗಳು ಪ್ರತಿಪಾದ್ಯವೋ ? ಎಂಬುದು ಸಂದೇಹ. ಲಕ್ಷ್ಮೀ ಮೊದಲಾದ ಸ್ತ್ರೀಯರೇ ಈ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯರಾಗುತ್ತಾರೆಂದು ಪೂರ್ವಪಕ್ಷ.

**तेषां अन्यत्रैव प्रसिद्धत्वात् स्त्रीलिङ्गत्वाच्च । परमपुरुषे स्त्रीत्वाभावात् ।**

ಏಕೆಂದರೆ ಪ್ರಕೃತಿಃ, ವಿಕೃತಿಃ ಮೊದಲಾದ ಸ್ತ್ರೀಲಿಂಗಶಬ್ದಗಳು ಬೇರೆಡೆಯೇ ಪ್ರಸಿದ್ಧವಾಗಿದೆ. ಮತ್ತು ಪರಮಪುರುಷನಾದ ಈಶ್ವರನಲ್ಲಿ ಸ್ತ್ರೀತ್ವವಿಲ್ಲದ ಕಾರಣ ಸ್ತ್ರೀಲಿಂಗಶಬ್ದಗಳು ಅವನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ.

**''नैनं वाचा स्त्रियं ब्रुवन्'' इति स्त्रीत्वनिषेधेन रूपविशेषेण स्त्रीत्वमित्यस्याप्ययोगात् ।**

ಅಷ್ಟೇ ಅಲ್ಲದೇ 'ನೈನಂ ವಾಚಾ ಸ್ತ್ರಿಯಂ ಬ್ರುವನ್' ಎಂಬ ಶ್ರುತಿಯು ಪರಮಾತ್ಮನಲ್ಲಿ ಸ್ತ್ರೀತ್ವವನ್ನು ನಿಷೇಧ ಮಾಡುತ್ತಿದೆ. ಯಾವುದೋ ರೂಪದ ವಿಶೇಷದಿಂದ ಪರಮಾತ್ಮನಲ್ಲಿ ಸ್ತ್ರೀತ್ವವನ್ನು ಹೇಳಬಹುದಲ್ಲವೇ? ಎಂಬುದೂ ಕೂಡ ಯುಕ್ತವಾಗುವುದಿಲ್ಲ.

**ब्रह्मादिनपुंसकशब्दस्य कलत्रादिशब्देष्विव शब्दसाधुत्वमात्रेण युक्तत्वेऽपि इह न तथा, कल्पकाभावात् ।**

ಬ್ರಹ್ಮ ಮೊದಲಾದ ನಪುಂಸಕಲಿಂಗ ಶಬ್ದಗಳು ಕೇವಲ ಶಬ್ದಸಾಧುತ್ವ ಮಾತ್ರದಿಂದ ಪರಮಾತ್ಮನಲ್ಲಿ ಯುಕ್ತವಾಗುತ್ತವೆ. ಹೆಂಡತಿಯಲ್ಲಿ ನಪುಂಸಕಲಿಂಗದಲ್ಲಿರುವ 'ಕಲತ್ರಮ್' ಎಂಬ ಶಬ್ದವನ್ನು ಕೇವಲ ಶಬ್ದಸಾಧುತ್ವ ಮಾತ್ರದಿಂದ ಲೋಕದಲ್ಲಿ ಪ್ರಯೋಗಿಸುವಂತೆ. ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳನ್ನೂ ಕೂಡ ಶಬ್ದಸಾಧುತ್ವ ಮಾತ್ರದಿಂದ ಪರಮಾತ್ಮನಲ್ಲಿ ಸಮನ್ವಯ ಮಾಡಬಹುದೆಂಬ ವಿಷಯದಲ್ಲಿ ಯಾವುದೇ ಕಲ್ಪಕಗಳಿರುವುದಿಲ್ಲ.

**नामानि सर्वाणीत्यस्य सङ्कोचसम्भवात् । वशीकृतभार्येऽपि भार्यापदप्रयोगादर्शनेन अन्यगतस्त्रीत्वस्येशाधीनत्वमुपेत्य तदधीनत्वन्यायेन ईशे तच्छब्दवृत्तिरित्यस्याप्य-योगादिति ॥**

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಸರ್ವಶಬ್ದದಿಂದ ಎಲ್ಲಾ ಬಗೆಯ ಶಬ್ದಗಳ ಸಮನ್ವಯವನ್ನು ಹೇಳುತ್ತಿರಬಹುದು. ಆದರೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳ ಸಮನ್ವಯವನ್ನು ಹೇಳುತ್ತಿದೆಯೆಂದು ಸರ್ವಶಬ್ದಕ್ಕೆ ಸಂಕೋಚ ಮಾಡಬಹುದು. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದಗಳ ಸಮನ್ವಯವನ್ನು ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಯಾವ ಪುರುಷನು ತನ್ನ ಹೆಂಡತಿಯನ್ನು ವಶಮಾಡಿಕೊಂಡಿದ್ದಾನೋ, ಅವನಲ್ಲಿಯೂ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತ-ವಿರುವುದರಿಂದ ಭಾರ್ಯಾದಿ ಶಬ್ದಗಳನ್ನು ಪ್ರಯೋಗ ಮಾಡಬೇಕಾದೀತು. ಆದ್ದರಿಂದ ಉಳಿದದರಲ್ಲಿರುವ

ಸ್ತ್ರೀತ್ವಕ್ಕೆ ನಿಯಾಮಕನಾಗಿರುವುದರಿಂದ ತದಧೀನತ್ವನ್ಯಾಯವನ್ನು ವಿವಕ್ಷಿಸಿ, ಈಶನಲ್ಲಿ ಪ್ರಕೃತಿ ಮೊದಲಾದ ಶಬ್ದಗಳ ಪ್ರತಿಪಾದ್ಯತ್ವವನ್ನು ಹೇಳುವುದು ಅಯುಕ್ತವಾಗುತ್ತದೆ. ಇಷ್ಟು ಪೂರ್ವಪಕ್ಷ.

सिद्धान्तस्तु ।। ''हन्तैतमेव पुरुषं सर्वाणि नामान्यभिवदन्ति'' इत्यादिश्रुतौ (वत्सश्रुतिः) सामान्यतोऽशेषशब्दवाच्यत्वं ईशस्योक्त्वा नदीसमुद्रदृष्टान्तेन तदुपपादनात् ।

ಸಿದ್ಧಾಂತ ಹೀಗಿದೆ - 'ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವಂದತಿ' ಇತ್ಯಾದಿ ವತ್ಸಶ್ರುತಿಯಲ್ಲಿ ಸಾಮಾನ್ಯವಾಗಿ ಸಕಲವಿಧವಾದ ಶಬ್ದಗಳ ಪ್ರತಿಪಾದ್ಯತ್ವವನ್ನು ಈಶ್ವರನಲ್ಲಿ ಹೇಳಿ, ನದೀ, ಸಮುದ್ರಗಳ ದೃಷ್ಟಾಂತದಿಂದ ಅದನ್ನು ಉಪಪಾದನೆ ಮಾಡಲಾಗಿದೆ.

''मायां तु प्रकृतिं विद्यात्'' (श्वे.उ.४-१०) ''प्रकृतिर्वासनेत्येवं तवेच्छानन्त कथ्यते'' इत्यादिश्रुतिस्मृतिषु इच्छायाः प्रकृतिपदवाच्यत्वात् तस्याश्च ''सोऽभिध्या स जूतिः'' (पैङ्गिश्रुतिः) इत्यादिश्रुतौ ईशस्वरूपत्वोक्तेः, एष स्त्री एष पुरुषः एष प्रकृतिरिति साक्षात् प्रकृतिपुरुषशब्दवाच्यत्वाम्नानात् ।

'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ಈಶ್ವರನ ಮಾಯೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ. ಅನಂತರ 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ' ಎಂಬ ಶ್ರುತಿವಾಕ್ಯದಲ್ಲಿ ಈಶ್ವರನ ಇಚ್ಛೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ. ಆದ್ದರಿಂದ ಇಚ್ಛೆಯು ಪ್ರಕೃತಿಪದವಾಚ್ಯವಾದ ಮೇಲೆ ಅಂತಹ ಇಚ್ಛೆಯು 'ಸೋಽಭಿಧ್ಯಾ ಸ ಜೂತಿಃ' ಎಂಬ ಪೈಂಗಿಶ್ರುತಿ ಹೇಳುವಂತೆ ಈಶ್ವರನ ಸ್ವರೂಪವೇ ಆಗಿವೆ. ಆದ್ದರಿಂದ ಪ್ರಕೃತಿಶಬ್ದದಿಂದ ಈಶ್ವರನು ಪ್ರತಿಪಾದ್ಯನಾಗಿದ್ದಾನೆನ್ನಲು ಅನೇಕ ಶ್ರುತಿ-ಸ್ಮೃತಿಗಳು ಆಧಾರವಾಗಿವೆ. ಅಷ್ಟೇ ಅಲ್ಲದೇ 'ಏಷ ಸ್ತ್ರೀ ಏಷ ಪುರುಷಃ ಏಷ ಪ್ರಕೃತಿಃ' ಎಂಬುದಾಗಿ ಮತ್ತೊಂದು ಶ್ರುತಿಯು ನೇರವಾಗಿಯೇ ಪರಮಾತ್ಮನನ್ನು ಸ್ತ್ರೀ, ಪುರುಷ, ಪ್ರಕೃತಿಯೆಂದು ಪ್ರತಿಪಾದನೆ ಮಾಡುತ್ತಿದೆ.

प्रकृतिं प्रविश्य तां महदाद्यात्मना परिणाम्य तन्नियामकतया आत्मनो बहुधाकरणेन प्रकृष्टाकृतिः यस्येति योगसम्भवात् अव्यवधानेन सूतिहेतुत्वरूपस्त्रीत्वस्य यद्भूतयोनिमिति श्रुतौ योनिशब्देन गानात् प्रकृत्यादिसर्वस्त्रीलिङ्गशब्दमुख्यार्थो हरिरेवेति ।। ६ ।।

ಪ್ರಕೃತ್ಯಧಿಕರಣ (೧-೪-೬)

ಆದ್ದರಿಂದ ಪರಮಾತ್ಮನು ಪ್ರಕೃತಿಯ ಒಳಗಡೆ ಪ್ರವೇಶ ಮಾಡಿ, ಅಂತಹ ಪ್ರಕೃತಿಯನ್ನು ಮಹತ್ತತ್ತ್ವ ಮೊದಲಾದ ಸ್ವರೂಪದಲ್ಲಿ ಪರಿಣಾಮ ಮಾಡಿ, ಅವುಗಳಿಗೆ ನಿಯಾಮಕನಾಗಿ ಆ ಮಹತ್ತತ್ತ್ವವು ಅನೇಕ ಪದಾರ್ಥಗಳ ಸ್ವರೂಪದಲ್ಲಿ ಪರಿಣಾಮ ಹೊಂದಿದ ಮೇಲೆ, ತಾನು ಅನೇಕ ರೂಪಗಳನ್ನು ತಾಳಿ, ಅವುಗಳ ಒಳಗಡೆ ಪ್ರವೇಶಿಸುತ್ತಾನೆ. ಹೀಗೆ ಪ್ರಕೃಷ್ಟವಾದ ಆಕೃತಿಯನ್ನು = ರೂಪಗಳನ್ನು ತಾಳುತ್ತಾನಾದ್ದರಿಂದ ಭಗವಂತನು ಪ್ರಕೃತಿಯೆನಿಸಿಕೊಳ್ಳುತ್ತಾನೆ. ಹೀಗೆ ಪ್ರಕೃತಿ ಶಬ್ದದ ಯೌಗಿಕಾರ್ಥವು ಪರಮಾತ್ಮನಲ್ಲಿ ಸ್ಪಷ್ಟವಾಗಿ ಬರುತ್ತದೆ. ಅಷ್ಟೇ ಅಲ್ಲದೇ ಪ್ರಕೃತಿಶಬ್ದದ ರೂಢಿವೃತ್ತಿಯು ಪರಮಾತ್ಮನಲ್ಲಿ ಬರುತ್ತದೆ. ಏಕೆಂದರೆ ಸ್ತ್ರೀಶಬ್ದಕ್ಕೆ ಅವ್ಯವಧಾನೇನ ಸೂತಿಹೇತುತ್ವ ಎಂಬುದು ಪ್ರವೃತ್ತಿನಿಮಿತ್ತವಾಗಿದೆ. 'ಯದ್ಭೂತಯೋನಿಂ' ಎಂಬ ಶ್ರುತಿಯು ಪರಮಾತ್ಮನು ತನ್ನ ದೇಹದಿಂದ ನೇರವಾಗಿಯೇ ಜಗತ್ತಿಗೆ ಉತ್ಪಾದಕನಾಗಿದ್ದಾನೆಂದು ಹೇಳುತ್ತಿದೆ. ಹೀಗೆ ಯೋನಿಶಬ್ದದಿಂದ ಪರಮಾತ್ಮನಲ್ಲಿ ಅವ್ಯವಧಾನೇನ ಸೂತಿಹೇತುತ್ವ ಎಂಬ ಸ್ತ್ರೀತ್ವವು ಬರುತ್ತಿರುವುದರಿಂದ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದಲೂ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧವಾಯಿತು.

ಇಲ್ಲಿಗೆ ಶ್ರೀಮದ್‌ರಾಘವೇಂದ್ರಯತಿಗಳಿಂದ ವಿರಚಿತವಾದ ನ್ಯಾಯಮುಕ್ತಾವಳಿಯಲ್ಲಿ
ಪ್ರಕೃತ್ಯಧಿಕರಣವು ಮುಗಿಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಏತೇನಾಧಿಕರಣ

(೧-೪-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಏತೇನಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

### ।। अथ एतेन सर्वव्याख्याताधिकरणम् ।।

**सूत्रम् – ।। एतेन सर्वे व्याख्याता व्याख्याताः ।। १ ।।**

ಸೂತ್ರಾರ್ಥ - ತದಧೀನತ್ವ , ವಿದ್ವದ್ರೂಢಿ, ಮಹಾಯೋಗ ಮೊದಲಾದ ಯುಕ್ತಿಗಳಿಂದ ಶೂನ್ಯ , ತುಚ್ಛ, ಅಭಾವ, ಅದೃಶ್ಯ , ನಿರ್ಗುಣ ಮೊದಲಾದ ಶಬ್ದಗಳಿಂದಲೂ ಬ್ರಹ್ಮನೇ ಪ್ರತಿಪಾದ್ಯನೆಂದು ನಿರ್ಣೀತವಾಯಿತು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಏತೇನ ಸರ್ವವ್ಯಾಖ್ಯಾತಾಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – एतेन पूर्वोक्तहेतुनैव । सर्वे शून्यादिशब्दाः । व्याख्याताः मुख्यतो भगवद्वाचिन एवेत्यर्थः । एतदध्यायादिमारभ्यान्तमुक्तस्यार्थस्य इत्थमेवेत्यवधारणार्थमध्यायान्ते द्विरुक्तिः ।।१।।

**इति श्रीजगन्नाथयतिकृतायां सूत्रदीपिकायां**
**प्रथमाध्यायस्य चतुर्थः पादः ।।१।।४।।**
**।। इति प्रथमाध्यायः समाप्तः ।।**

ಅರ್ಥ -- ಏತೇನ = ಈ ಹಿಂದೆ ಹೇಳಿದ ತದಧೀನತ್ವ, ವಿದ್ವದ್ರೂಢಿ ಮೊದಲಾದ ನ್ಯಾಯಗಳಿಂದ, ಸರ್ವೇ = ಶೂನ್ಯ, ತುಚ್ಛ ಮೊದಲಾದ ಶಬ್ದಗಳೆಲ್ಲವೂ, ವ್ಯಾಖ್ಯಾತಾಃ = ಮುಖ್ಯವಾಗಿ ಭಗವತ್ ಪ್ರತಿಪಾದಕಗಳೆಂದು ನಿರ್ಣೀತವಾದವು. ಅಧ್ಯಾಯದ ಆರಂಭದಿಂದ ಕೊನೆಯತನಕ ಸಮರ್ಥಿಸಿದ ವಿಚಾರಗಳೆಲ್ಲವೂ ಇದಮಿತ್ಥಂ ಎಂಬ ನಿರ್ಣಯಕ್ಕಾಗಿ ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿಯಿರುತ್ತದೆ.

॥ ಸೂತ್ರದೀಪಿಕೆಯಲ್ಲಿ ಏತೇನ ಸರ್ವವ್ಯಾಖ್ಯಾತಾಧಿಕರಣವು ಸಮಾಪ್ತವಾಯಿತು ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – ।। एतेन सर्वे व्याख्याता व्याख्याताः ।।**

**एतेन सर्वे शून्यादिशब्दा अपि व्याख्याताः । 'एष ह्येव शून्य एष ह्येव तुच्छ एष ह्येवाभाव एष ह्येवाव्यक्तोऽदृश्योऽचिन्त्यो निर्गुणश्च' इति महोपनिषदि ।**

ಅನುವಾದ - ಹಿಂದಿನ ಅಧಿಕರಣದಲ್ಲಿ ಸ್ತ್ರೀಲಿಂಗಶಬ್ದಗಳ ಸಮನ್ವಯವನ್ನು ಮಾಡಿದ ನ್ಯಾಯದಿಂದಲೇ ಅಭಾವವಾಚಕವಾದ ನಿಷೇಧಾತ್ಮಕವಾದ ಶಬ್ದಗಳನ್ನೆಲ್ಲಾ ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಯಿತು. ಮಹೋಪನಿಷತ್ತಿನಲ್ಲಿ ವಿಷ್ಣುವೇ ಶೂನ್ಯ, ತುಚ್ಛ, ಅಭಾವ, ಅವ್ಯಕ್ತ, ಅದೃಶ್ಯ, ಅಚಿಂತ್ಯ, ನಿರ್ಗುಣ ಎಂದು ಹೇಳಲಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ನಿಷೇಧವಾಚಕವಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. ವಾಸ್ತವಿಕವಾಗಿ ಭಾಷ್ಯದಲ್ಲಿ ವಿಷಯವಾಕ್ಯವನ್ನು ಉದಾಹರಿಸಿಲ್ಲ. ಆದರೂ ಅಸದಾದಿಶಬ್ದ ಘಟಿತವಾದ ವಾಕ್ಯಾಂತರಗಳನ್ನು ಉದಾಹರಿಸಬೇಕೆಂದು ಚಂದ್ರಿಕಾದಲ್ಲಿ ಹೇಳಿರುವುದರಿಂದ ಅಸದಾದಿ ವಾಕ್ಯಗಳೇ ವಿಷಯವೆಂದು ತಿಳಿಯಬೇಕು. ಒಂದು ವೇಳೆ ಅಸದಾದಿ ಶಬ್ದವಾಚ್ಯತ್ವವು ಪರಮಾತ್ಮನಲ್ಲಿ ಬಾರದಿದ್ದರೆ, ಸಮನ್ವಯ ಸೂತ್ರದ ಪ್ರತಿಜ್ಞೆಗೆ ಭಂಗ ಬರುತ್ತದೆ. ಆದ್ದರಿಂದ ಮೊದಲು ಸಂಗತಿ, ವಿಷಯ, ಪೂರ್ವಪಕ್ಷಗಳನ್ನು ಸ್ವತಃ ಶಿಷ್ಯಂದಿರೇ ತಿಳಿದುಕೊಳ್ಳುತ್ತಾರೆಂದು ವಿವಕ್ಷಿಸಿ, ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. –

ಏತೇನ = ಹಿಂದೆ ಹೇಳಿದ ನ್ಯಾಯದಿಂದಲೇ, ಸರ್ವೇ = ಸಕಲವಿಧವಾದ, ಶೂನ್ಯಾದಿ ಶಬ್ದಾಃ = ಶೂನ್ಯ, ತುಚ್ಛ, ಅಸತ್ ಮೊದಲಾದ ಶಬ್ದಗಳೂ ಕೂಡ, ವ್ಯಾಖ್ಯಾತಾಃ = ಭಗವತ್‌ವಾಚಕಗಳೆಂದು ಸಮರ್ಥಿಸಿದಂತಾಯಿತು. ಏಷಃ ಹ್ಯೇವ = ಈ ಪರಮಾತ್ಮನೇ, ಶೂನ್ಯಃ = ಶೂನ್ಯನು, ಏಷಃ ಹ್ಯೇವ = ಈ ಪರಮಾತ್ಮನೇ, ತುಚ್ಛಃ = ತುಚ್ಛಪದವಾಚ್ಯನು, ಏಷ ಹ್ಯೇವ = ಇವನೇ ಅಭಾವ ಪದವಾಚ್ಯನು, ಏಷ ಹ್ಯೇವ = ಇವನೇ, ಅವ್ಯಕ್ತಃ = ಅವ್ಯಕ್ತಪದವಾಚ್ಯನು, ಅದೃಶ್ಯಃ = ಅದೃಶ್ಯನು, ಅಚಿಂತ್ಯಃ = ಚಿಂತನೆಗೆ ಸಿಗದವನು, ನಿರ್ಗುಣಃ = ಸತ್ವಾದಿಗುಣ ರಹಿತನು, ಇತಿ = ಹೀಗೆ, ಮಹೋಪನಿಷದಿ = ಮಹೋಪನಿಷತ್ತಿನಲ್ಲಿ ಹೇಳಲಾಗಿದೆ.

भाष्यम् – 'शमूनं कुरुते विष्णुरदृश्यः सन्परः स्वयम् ।
तस्माच्छून्य इति प्रोक्तस्तोदानत्तुच्छ उच्यते ॥
नैष भावयितुं योग्यः केनचित् पुरुषोत्तम् ।
अतोऽभावं वदन्त्येवं नाश्यत्वान्नाश इत्यपि ॥

ಅನುವಾದ - ವಿಷ್ಣುವು ಸರ್ವೋತ್ತಮನಾದ್ದರಿಂದ ಮತ್ತೊಬ್ಬರ ಸುಖವನ್ನು ತನ್ನ ಸುಖಕ್ಕಿಂತ ಕಡಿಮೆಯನ್ನಾಗಿ ಮಾಡುತ್ತಾನೆ. ಆದ್ದರಿಂದ ಶೂನ್ಯ ಎನಿಸುತ್ತಾನೆ. ದುರ್ಜನರಿಗೆ ದುಃಖಕ್ಕೆ ಕಾರಣನಾದ್ದರಿಂದ ತುಚ್ಛ ಎನಿಸುತ್ತಾನೆ. ಪುರುಷೋತ್ತಮನಾದ ವಿಷ್ಣುವು ಯಾರಿಂದಲೂ ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದವನು. ಆದ್ದರಿಂದ ಅಭಾವ ಎನಿಸುತ್ತಾನೆ. ಅವನು ಅಭಕ್ಷ್ಯನಾದ್ದರಿಂದ ನಾಶ ಎನಿಸುತ್ತಾನೆ.

ಪ್ರತಿಪದಾರ್ಥ -- ಯಸ್ಮಾತ್ = ಯಾವ ಕಾರಣದಿಂದ, ವಿಷ್ಣುಃ = ಪರಮಾತ್ಮನು, ಪರಾಃ ಸನ್ನೇವ = ಸರ್ವೋತ್ತಮತ್ವೇನ ಪೂರ್ಣಸುಖಸ್ವರೂಪನಾಗಿಯೇ, ಶಮ್ =

ಮತ್ತೊಬ್ಬರ ಸುಖವನ್ನು, ಸ್ವಯಂ = ತಾನು, ಊನಂ = ತನ್ನ ಸುಖಕ್ಕಿಂತ ಅಲ್ಪವನ್ನಾಗಿ, ಕುರುತೇ = ಮಾಡುತ್ತಾನೆ. ಅದೃಶ್ಯ ಸನ್ = ದುರ್ಜನರಿಗೆ ಅದೃಶ್ಯನಾಗಿ, ತೋದನಾತ್ = ದುಃಖವನ್ನು ಕೊಡುವುದರಿಂದ, ತುಚ್ಛಃ = ತುಚ್ಛನೆಂದು, ಉಚ್ಯತೇ = ಕರೆಸಿಕೊಳ್ಳುತ್ತಾನೆ. ಪುರುಷೋತ್ತಮಃ = ಕ್ಷರಾಕ್ಷರ ಪುರುಷಶ್ರೇಷ್ಠನಾದ, ಏಷಃ = ಈ ಪರಮಾತ್ಮನು, ಕೇನಚಿತ್ = ಯಾರಿಂದಲೂ, ಭಾವಯಿತುಂ = ಸಂಪೂರ್ಣವಾಗಿ ತಿಳಿಯಲು, ನ ಯೋಗ್ಯಃ = ಶಕ್ತನಲ್ಲ. ಅತಃ = ಆದ್ದರಿಂದ, ಏನಂ = ಇವನನ್ನು, ಅಭಾವಂ = ಅಭಾವಪದ ವಾಚ್ಯನನ್ನಾಗಿ, ವದಂತಿ = ಹೇಳುತ್ತಾರೆ. ಅಪಿ = ಮತ್ತು , ನಾಶ್ಯತ್ವಾತ್ = ಪ್ರಳಯಕಾಲದಲ್ಲಿ ನಾಶವಾಗದ ಕಾರಣ, ನಾಶಃ = ನಾಶಪದವಾಚ್ಯನೆಂದು, ವದಂತಿ = ಜ್ಞಾನಿಗಳು ಹೇಳುತ್ತಾರೆ.

**भाष्यम् – सर्वस्य तदधीनत्वात् तच्छब्दाभिधेयता ।**
**अन्येषां व्यवहारार्थमिष्यते व्यवहर्तृभिः ।। इति महाकौर्मे ।**

ಅನುವಾದ - ಸಕಲ ಪದಾರ್ಥಗಳು ವಿಷ್ಣುವಿನ ಅಧೀನವಾದ್ದರಿಂದ, ಆಯಾ ಶಬ್ದಗಳಿಂದ ವಿಷ್ಣುವು ಪ್ರತಿಪಾದ್ಯನಾಗುತ್ತಾನೆ. ಆದರೂ ಕೂಡ ಇತರ ವಸ್ತುಗಳಲ್ಲಿ ವ್ಯವಹಾರ ಸಿದ್ಧಿಗಾಗಿ ವಿಷ್ಣುವಾಚಕವಾದ ಶಬ್ದಗಳನ್ನೇ ಉಪಯೋಗಿಸಲಾಗುತ್ತದೆ. ಹೀಗೆ ಮಹಾಕೌರ್ಮ ಪುರಾಣವು ಹೇಳಿದೆ.

ಪ್ರತಿಪದಾರ್ಥ -- ನಿಷೇಧಮುಖದಿಂದ ವೇದ್ಯವಾದ ವಸ್ತುವಾಚಕ ಶಬ್ದಗಳನ್ನು ನಿಷೇಧ್ಯ, ಹಾಗೂ ನಿಷೇಧ ವಾಚಿತ್ವೇನ ಎರಡು ಬಗೆಯಲ್ಲಿ ವಿಂಗಡಿಸಬಹುದು. ಶ್ರುತಿಯಲ್ಲಿ ನಿಷೇಧ್ಯರೂಪವಾದ ಅಸತ್‌ವಾಚಕವಾದ ಶೂನ್ಯಾದಿಶಬ್ದಗಳ ಯೋಗವೃತ್ತಿಯನ್ನಷ್ಟೇ ಹೇಳಿದ್ದಾರೆ. ನಿಷೇಧ ರೂಪವಾದ ನಿರ್ಗುಣಾದಿ ಪದಗಳಲ್ಲಿ ಅಂತಹ ಯೋಗವೃತ್ತಿಯನ್ನು ಹೇಳಿರುವುದಿಲ್ಲ. ಇಂತಹ ನಿಷೇಧಸ್ವರೂಪವಾದ ಶಬ್ದಗಳು ಶ್ರೀಹರಿಯಲ್ಲಿ ಹೇಗೆ ಬರುತ್ತದೆ? ಈ ಆಶಂಕೆಗೆ ಉತ್ತರಿಸುತ್ತಿದ್ದಾರೆ. –

ಸರ್ವಸ್ಯ = ಅಸತ್, ಶೂನ್ಯ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವು ಸ್ವಗತವಾಗಲಿ, ಪರಗತವಾಗಲೀ, ತದಧೀನತ್ವಾತ್ = ಭಗವತ್‌ಸಾಧಕವಾದ್ದರಿಂದ, ತತ್ತಚ್ಛಬ್ದಾಭಿಧೇಯತಾ = ಅಸತ್, ಶೂನ್ಯ ಮೊದಲಾದ ಶಬ್ದಗಳ ಪರಮಮುಖ್ಯಾರ್ಥನು ಭಗವಂತನೇ ಆಗುತ್ತಾನೆ. ಅನ್ಯೇಷಾಂ = ಉಳಿದ ಪದಾರ್ಥಗಳು, ವ್ಯವಹಾರಾರ್ಥಂ = ಕೇವಲ ವ್ಯವಹಾರಕ್ಕೋಸ್ಕರ, ವ್ಯವಹರ್ತೃಭಿಃ = ವ್ಯವಹಾರ ಮಾಡುವವರಿಂದ, ಇಷ್ಯತೇ = ವ್ಯವಹರಿಸಲಾಗುತ್ತದೆ. ಇತಿ = ಹೀಗೆ, ಮಹಾಕೌರ್ಮೇ = ಮಹಾಕೂರ್ಮ ಪುರಾಣವು ಹೇಳಿದೆ.

**भाष्यम् – एतेन तदधीनत्वाद्युक्तयुक्तिसमुदायेन ।**

ಅನುವಾದ - ಸೂತ್ರದಲ್ಲಿ 'ಏತೇನ' ಎಂಬ ಪದಕ್ಕೆ 'ತದಧೀನತ್ವ' ಎಂದರ್ಥ. ವಿದ್ವದ್ರೂಢಿ ಹಾಗೂ ಮಹಾಯೋಗರೂಪವಾದ ಯುಕ್ತಿಗಳ ಸಮುದಾಯದಿಂದ ಎಂಬರ್ಥವನ್ನು ತಿಳಿಯಬೇಕು.

ಪ್ರತಿಪದಾರ್ಥ -- ಸೂತ್ರದಲ್ಲಿರುವ 'ಏತೇನ' ಎಂಬ ಪದದಿಂದ ಪರಾಮೃಷ್ಟವಾದ ಹೇತುವನ್ನು ತೋರಿಸುತ್ತಿದ್ದಾರೆ. –

ಏತೇನಾಧಿಕರಣ (೧-೪-೭)

ಏತೇನ = ಸೂತ್ರದಲ್ಲಿರುವ 'ಏತೇನ' ಎಂಬ ಪದದಿಂದ, ತದಧೀನತ್ವಾತ್ = ತದಧೀನತ್ವಾತ್ ಅರ್ಥವತ್ ಎಂಬ ಸೂತ್ರದಲ್ಲಿ, ಉಕ್ತಃ = ಹೇಳಲ್ಪಟ್ಟ, ಯುಕ್ತಿ ಸಮುದಾಯೇನ = ಯುಕ್ತಿಗಳ ಸಮುದಾಯದಿಂದ,

**भाष्यम् – 'अवधारणार्थं सर्वस्याऽप्युक्तस्याऽध्यायमूलतः । द्विरुक्तिं कुर्वते प्राज्ञा अध्यायान्ते विनिर्णये' ।। इति वाराहसंहितायाम् ।।२९।।**

**एतेन सर्वेव्याख्याताधिकरणम्**

**।। इति समन्वयाध्यायः समाप्तः ।।७।।**

**।। इति श्रीमदानन्दतीर्थभगवत्पादाचार्यविरचिते श्रीमद्ब्रह्मसूत्रभाष्ये प्रथमाध्यायस्य चतुर्थः पादः ।।**

**।। प्रथमाध्यायः समाप्तः ।।**

ಅನುವಾದ - ಸಂಪೂರ್ಣವಾದ ಈ ಸಮನ್ವಯಾಧ್ಯಾಯದಲ್ಲಿ ಪ್ರಾರಂಭದಿಂದ ಇಲ್ಲಿಯತನಕ ಹೇಳಿದ ಎಲ್ಲಾ ಸಮನ್ವಯದ ನಿರ್ಣಯಕ್ಕಾಗಿ, ಅಧ್ಯಾಯದ ಕೊನೆಯಲ್ಲಿ ಪ್ರಾಜ್ಞರು ಒಂದೇ ಶಬ್ದವನ್ನು ಎರಡು ಬಾರಿ ಪ್ರಯೋಗಿಸುತ್ತಾರೆ. ಹೀಗೆ ವಾರಾಹ ಸಂಹಿತೆಯು ಹೇಳಿದೆ.

ಪ್ರತಿಪದಾರ್ಥ -- ಕೊನೆಯ ಸೂತ್ರದಲ್ಲಿ 'ವ್ಯಾಖ್ಯಾತಾಃ' ಎಂಬ ಶಬ್ದವನ್ನು ಎರಡು ಬಾರಿ ಪ್ರಯೋಗಿಸಿದ್ದಾರೆ. ಹೀಗೆ ಹೇಳಿದರೆ ಆಲ್ಪಾಕ್ಷರತ್ವಕ್ಕೆ ವಿರೋಧ ಬರುತ್ತದಲ್ಲವೇ? ಈ ಆಶಂಕೆಗೆ ಉತ್ತರಿಸುತ್ತಿದ್ದಾರೆ. –

ಪ್ರಾಜ್ಞಾಃ = ಜ್ಞಾನಿ ಜನರು, ಅಧ್ಯಾಯಮೂಲತಃ = ಅಧ್ಯಾಯದ ಪ್ರಾರಂಭದಿಂದ ಕೊನೆಯತನಕ, ಉಕ್ತಸ್ಯ = ಹೇಳಲ್ಪಟ್ಟ, ಸರ್ವಸ್ಯ = ಸಕಲ ವಿಷಯಗಳ, ಅವಧಾರಣಾರ್ಥಂ = ದಾರ್ಢ್ಯಕ್ಕೋಸ್ಕರ, ಅಧ್ಯಾಯಾಂತೇ = ಅಧ್ಯಾಯದ ಕೊನೆಯಲ್ಲಿ, ದ್ವಿರುಕ್ತಿಂ = ಒಂದೇ ಪದವನ್ನು ಎರಡು ಬಾರಿ, ಕುರ್ವತೇ = ಪ್ರಯೋಗ ಮಾಡುತ್ತಾರೆ. ಇತಿ = ಹೀಗೆ, ವಾರಾಹ ಸಂಹಿತಾಯಾಮ್ = ವಾರಾಹ ಸಂಹಿತೆಯಲ್ಲಿ ಹೇಳಲ್ಪಟ್ಟಿದೆ.

ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್‌ಕೃಷ್ಣದ್ವೈಪಾಯನ ಕೃತ ಬ್ರಹ್ಮಸೂತ್ರದ ಭಾಷ್ಯದಲ್ಲಿ ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**अत्र निषेधमुखवेद्यत्वादिनाऽन्यत्रैव प्रसिद्धानामसदादिशब्दानां भगवति समन्वयप्रतिपादनादस्ति शास्त्रादि सङ्गतिः ।**

ಏತೇನ ಸರ್ವವ್ಯಾಖ್ಯಾತಾಧಿಕರಣದಲ್ಲಿ ನಿಷೇಧಮುಖದಿಂದ ಪ್ರತಿಪಾದ್ಯವಾದ ಅನ್ಯತ್ರೈವ ಪ್ರಸಿದ್ಧವಾದ ಅಸತ್, ಅಭಾವ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಮತ್ತು ಪಾದಸಂಗತಿಗಳು ಇರುತ್ತವೆ.

**तत्वप्रकाशिका – समन्वयसूत्रे सर्वशब्दानां परमात्मवाचित्वमुक्तम् । सर्वमध्यपतिता असदादिशब्दाः श्रुतिषु श्रूयन्ते। 'असद्वा इदमग्र आसीत्' इत्यादौ ।**

ಸಮನ್ವಯಸೂತ್ರದಲ್ಲಿ ಎಲ್ಲಾ ಬಗೆಯ ಶಬ್ದಗಳೂ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಪ್ರತಿಜ್ಞೆ ಮಾಡಲಾಯಿತು. ಆ ಎಲ್ಲಾ ಬಗೆಯ ಶಬ್ದಗಳ ಮಧ್ಯದಲ್ಲಿ ಅಸತ್, ಅಭಾವ ಮೊದಲಾದ ಶಬ್ದಗಳೂ ಕೂಡ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಲ್ಲಿ ಶ್ರುತವಾಗಿವೆ.

**तत्वप्रकाशिका – तेषां चान्यपरत्वे समन्वयसूत्रमयुक्तं स्यादित्यवश्य निर्णेयता । तदसदादिशब्दवाच्यं विषयः ।**

ಇಂತಹ ಅಸತ್, ಅಭಾವ ಮೊದಲಾದ ಶಬ್ದಗಳು ಮಹಾವಿಷ್ಣುವನ್ನು ಸಮನ್ವಯ ಮಾಡದೇ ಬೇರೆ ಪದಾರ್ಥವನ್ನೇ ಪ್ರತಿಪಾದನೆ ಮಾಡುವುದಾದರೆ, ಸಮನ್ವಯ ಸೂತ್ರದಲ್ಲಿ ಮಾಡಿದ ಪ್ರತಿಜ್ಞೆಯು ಅಯುಕ್ತವಾದೀತು. ಅದಕ್ಕೋಸ್ಕರ ಇಂತಹ ಶಬ್ದಗಳ ಸಮನ್ವಯದ ನಿರ್ಣಯವನ್ನು ಅವಶ್ಯವಾಗಿ ಮಾಡಲೇಬೇಕು. ಆದ್ದರಿಂದ ಅಸತ್, ಅಭಾವ, ಶೂನ್ಯ ಮೊದಲಾದ ಶಬ್ದವಾಚ್ಯತ್ವವೇ ಈ ಅಧಿಕರಣದ ವಿಷಯ.

**तत्वप्रकाशिका – किं विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देह बीजम् । न विष्णुरसदादिशब्दवाच्य इति पूर्वः पक्षः ।**

ಅಸದಾದಿ ಶಬ್ದಗಳಿಂದ ವಿಷ್ಣುಪ್ರತಿಪಾದ್ಯನೋ, ಅಥವಾ ಬೇರೆ ಪಾದರ್ಥಗಳೋ ಎಂಬುದು ಸಂದೇಹಬೀಜ. ಸಮನ್ವಯಸೂತ್ರ ಹಾಗೂ ಅನ್ಯತ್ರೈವಪ್ರಸಿದ್ಧಿ ಇವೆರಡು ಸಂದೇಹಬೀಜ. ವಿಷ್ಣು 'ಅಸತ್' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಲಾರ ಎಂಬುದು ಪೂರ್ವಪಕ್ಷ.

**तत्वप्रकाशिका – तेषां निषेधमुखवेद्यवस्तुवाचित्वात् । परमात्मनश्च भावरूपत्वेन तदयोगात् ।**

ಅಸತ್, ಅಭಾವ ಮೊದಲಾದ ಶಬ್ದಗಳು ನಿಷೇಧಮುಖವೇದ್ಯವಾದ ಅಸದಾದಿ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತಿವೆ. ಪರಮಾತ್ಮನು ಭಾವರೂಪನಾಗಿರುವುದರಿಂದ ನಿಷೇಧಮುಖವೇದ್ಯ-ನಾಗಿರುವುದಿಲ್ಲ.

**तत्वप्रकाशिका – नच स्वयं निषेधमुखवेद्यता भावेऽपि तद्वतोऽसतः परमात्माधीनत्वेन तस्यासदादिशब्दवाच्यतेति वाच्यम् । स्वरूपशून्यस्य नियम्यताऽभावेन पराधीनताऽयोगात् ।**

ಪ್ರಶ್ನೆ - ಪರಮಾತ್ಮನು ಸ್ವತಃ ನಿಷೇಧಮುಖವೇದ್ಯನಾಗದಿದ್ದರೂ ನಿಷೇಧಮುಖವೇದ್ಯ-ವಾಗಿರುವಂತಹ ಅಸತ್, ಅಭಾವ ಮೊದಲಾದವುಗಳು ಪರಮಾತ್ಮನ ಅಧೀನವಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, ಅಸದಾದಿ ಶಬ್ದವಾಚ್ಯತ್ವವನ್ನು ಪರಮಾತ್ಮನಿಗೆ ಹೇಳಬಹುದಲ್ಲವೇ?

ಉತ್ತರ - ಯಾವ ಪದಾರ್ಥಗಳ ಸ್ವರೂಪವೇ ಇರುವುದಿಲ್ಲವೋ ಅವುಗಳಿಗೆ ಪರಮಾತ್ಮನು ನಿಯಾಮಕನೆಂದು ಸ್ವರೂಪಶೂನ್ಯವಾದ ಪದಾರ್ಥಗಳು ನಿಯಮ್ಯವೆಂದು ಹೇಳಲು ಸಾಧ್ಯವೇ ಇಲ್ಲ.

**तत्वप्रकाशिका – अभावे तत्सम्भवेऽपि प्रयोगादर्शनात् । अतः शून्यादिशब्दानां परमात्मवाचित्वाभावात्समन्वयसूत्रं न युक्तमिति ।**

ಅಭಾವದಲ್ಲಿ ಅಂತಹ ಪರಾಧೀನತ್ವವನ್ನು ಹೇಳಬಹುದಾದರೂ, ಲೋಕದಲ್ಲಿ ಎಲ್ಲಿಯೂ ಕೂಡ ಪ್ರಯೋಗ ಕಂಡಿಲ್ಲ. ಆದ್ದರಿಂದ ಅಸತ್, ಶೂನ್ಯ, ಅಭಾವ ಮೊದಲಾದ ಶಬ್ದಗಳು ಪರಮಾತ್ಮವಾಚಕ-ಗಳಾಗಲು ಸಾಧ್ಯವಿಲ್ಲ. ಈ ಕಾರಣದಿಂದಲೇ ಸಮನ್ವಯ ಸೂತ್ರದಲ್ಲಿ ಮಾಡಿದ ಪ್ರತಿಜ್ಞೆಯು ಅಯುಕ್ತವಾಗುತ್ತದೆ.

**तत्वप्रकाशिका – सिद्धान्तयत्सूत्रमुपन्यस्य व्याचष्टे ।। एतेनेति ।। पूर्वोक्तहेतुनैव सर्वे शून्यादिशब्दा भगवद्विषया एवेति प्रतिपादिता इत्यर्थः ।**

ಮೇಲಿನ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಾ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಏತೇನ' ಇತ್ಯಾದಿಯಾಗಿ. ಹಿಂದಿನ ಅಧಿಕರಣದಲ್ಲಿ ಹೇಳಿರುವ ಅಧಿಕರಣಗಳಿಂದಲೇ ಶೂನ್ಯ, ಅಭಾವ ಮೊದಲಾದ ಶಬ್ದಗಳೆಲ್ಲವೂ ಭಗವತ್‌ಪ್ರತಿಪಾದಕವಾಗಿವೆ ಎಂದು ಸಿದ್ಧವಾಗಿದೆ ಎಂದರ್ಥ.

**तत्वप्रकाशिका – नन्वसदादिशब्दानां निषेधमुखवेद्यवस्तुवाचित्वात् । कथं परमात्मनस्तद्वाच्यत्वमित्यत आह – एष ह्येवेति ॥**

ಅಸತ್, ಶೂನ್ಯ ಮೊದಲಾದ ಶಬ್ದಗಳು ನಿಷೇಧಮುಖವೇದ್ಯವಸ್ತುವಾಚಕಗಳಾದ್ದರಿಂದ ಭಾವಸ್ವರೂಪನಾದ ಪರಮಾತ್ಮನನ್ನು ಹೇಗೆ ಪ್ರತಿಪಾದಿಸಲು ಸಮರ್ಥವಾಗುತ್ತವೆ ಎಂಬ ಪ್ರಶ್ನೆಗೆ 'ಏಷ ಹ್ಯೇವ' ಎಂಬ ಭಾಷ್ಯದ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – दुर्जनानामव्यक्तत्वादिना शमूनं कुरुत इत्यादि योगेन चेश्वरे निषेध-मुखवेद्यवस्तुवाचिशब्दप्रवृत्त्युपपत्तिरिति भावः ।**

ದುರ್ಜನರಿಗೆ ಪರಮಾತ್ಮನು ಅವ್ಯಕ್ತನಾಗಿರುವ ಕಾರಣ 'ಅಸತ್' ಎಂದು ಕರೆಸಿಕೊಳ್ಳುತ್ತಾನೆ. ತನ್ನನ್ನು ಹೊರತಾಗಿ ಉಳಿದವರೆಲ್ಲರ ಸುಖವನ್ನು ಮೊಟಕುಗೊಳಿಸುತ್ತಾನೆ ಎಂಬ ಯೋಗವೃತ್ತಿಯಿಂದ 'ಶೂನ್ಯ' ಎಂದು ಕರೆಸಿಕೊಳುತ್ತಾನೆ. ಹೀಗೆ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳು ಬೇರೆ ಬಗೆಯ ಪ್ರವೃತ್ತಿನಿಮಿತ್ತದಿಂದ ನಿಷೇಧಮುಖವೇದ್ಯವಸ್ತುವಾಚಕಗಳಾಗಿದ್ದರೂ, ಭಗವಂತನಲ್ಲಿ ಸಮನ್ವಯ-ಗೊಳ್ಳುತ್ತವೆ.

**तत्वप्रकाशिका – शमूनं कुरुते स्वसुखादन्यसुखमल्पं करोति । तोदनात्तुत् । अदृश्यः छः छन्नत्वात् । भावयितुमुत्पादयितुम् । नाश्यत्वादभक्ष्यत्वात् ।**

'ಶಂ ಊನಂ ಕುರುತೇ' ಎಂದರೆ ತನ್ನ ಸುಖಕ್ಕಿಂತಲೂ ಬೇರೆಯವರ ಸುಖವನ್ನು ಅಲ್ಪವನ್ನಾಗಿ ಮಾಡುತ್ತಾನೆ ಎಂದರ್ಥ. 'ತ್ತುತ್' ಎಂದರೆ ದುರ್ಜನರಿಗೆ ದುಃಖವನ್ನು ಕೊಡುತ್ತಾನೆ ಎಂದರ್ಥ. ಅದೃಶ್ಯನಾಗಿರುವುದರಿಂದ 'ಛಃ' ಎನಿಸುತ್ತಾನೆ. ಆದ್ದರಿಂದ 'ತುಚ್ಛ' ಎಂದರೆ ದುರ್ಜನರಿಗೆ ದುಃಖಶನ್ನು ಕೊಟ್ಟು, ಅದೃಶ್ಯನಾಗಿರುತ್ತಾನೆ ಎಂಬರ್ಥವು ದೊರೆಯುತ್ತದೆ. 'ಭಾವಯಿತುಮ್' ಎಂದರೆ ಉತ್ಪತ್ತಿ ಮಾಡಲು ಎಂದರ್ಥ. 'ನಾಶತ್ವಾತ್' ಎಂದರೆ ಅಭಕ್ಷನಾಗಿರುವುದರಿಂದ ಎಂದರ್ಥ.

**तत्वप्रकाशिका – सर्वस्य तदधीनत्वादित्युभयत्र सम्बध्यते । एतेनेति परमृष्टमेव हेतुं दर्शयति ॥ एतेनेति ॥**

'ಸರ್ವಸ್ಯ ತದಧೀನತ್ವಾತ್' ಎಂಬ ಹೇತುಬೋಧಕವಾದ ಪದವು ಅಸದ್ವಾಚಕ ಶಬ್ದಗಳಲ್ಲಿ ಮತ್ತು ಅಭಾವಾಚಕ ಶಬ್ದಗಳಲ್ಲಿ ಎರಡೂ ಕಡೆ ಸಂಬಂಧವನ್ನು ಹೊಂದುತ್ತದೆಂದು ತಿಳಿಯಬೇಕು. 'ಏತೇನ' ಎಂಬ ಸೂತ್ರದಲ್ಲಿರುವ ಪದದಿಂದ ಯಾವ ಹೇತುವನ್ನು ಪರಾಮರ್ಶಿಸಿದ್ದಾರೆ ಎಂಬುದನ್ನು ಭಾಷ್ಯದಲ್ಲಿ 'ಏತೇನ' ಎಂಬುದರಿಂದಲೇ ಹೇಳಿರುತ್ತಾರೆ.

ಏತೇನಾಧಿಕರಣ (೧-೪-೭)

**तत्वप्रकाशिका – आदिपदेन 'ज्योतिरुपक्रमात् तथाह्यधीयत एके' 'प्रतिज्ञादृष्टान्तानुपरोधात्' इत्यादेः सङ्ग्रहः ।**

ಆದಿಪದದಿಂದ 'ಜ್ಯೋತಿರುಪಕ್ರಮಾತ್ ತಥಾಹ್ಯಧೀಯತೇ ಏಕೇ' ಎಂಬ ಸೂತ್ರದಲ್ಲಿರುವ ಹೇತುವನ್ನು ಮತ್ತು 'ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದಲ್ಲಿರುವ ಹೇತುವನ್ನು ಸಂಗ್ರಹಿಸಬೇಕು.

**तत्वप्रकाशिका – न चासतोऽन्याधीनत्वायोगः । सर्वस्य तदधीनत्वादिति स्मृतेः । निषेधमुखवेद्यत्वादीनामपि भगवत्प्रेरणामन्तरेणानुपपत्तेः ।**

ಸ್ವರೂಪಶೂನ್ಯವಾದ 'ಅಸತ್' ಪದಾರ್ಥವು ಮತ್ತೊಬ್ಬರ ಅಧೀನವಾಗಲು ಹೇಗೆ ಸಾಧ್ಯ ? ಎಂದು ಪ್ರಶ್ನಿಸಬಾರದು. ಎಲ್ಲವೂ ಕೂಡ ಈಶ್ವರನ ಅಧೀನವಾಗಿದೆಯೆಂದು ಶ್ರುತಿವಾಕ್ಯವೇ ಹೇಳುತ್ತಿದೆ. ಏಕೆಂದರೆ 'ಅಸತ್' ಪದಾರ್ಥವು ನಿಷೇಧಮುಖವೇದ್ಯವಾಗಲು ಭಗವಂತನ ಪ್ರೇರಣೆಯಿಲ್ಲದೇ ಸಾಧ್ಯವಾಗುವುದಿಲ್ಲ. ಅಂದರೆ ಅಸತ್ ಪದಾರ್ಥವು ಮೂರು ಕಾಲದಲ್ಲಿಯೂ ಅಸತ್ತಾಗಿಯೇ ಉಳಿಯಲು ಭಗವದಧೀನವಾಗಿರುವಿಕೆಯೇ ಕಾರಣ ಎಂದಭಿಪ್ರಾಯ.

**तत्वप्रकाशिका – नहि कारणमन्तरेण तत्रैव तदुपपद्यते । ईश्वरस्य स्वातन्त्र्याददोषः ।**

ಯಾವ ಪ್ರದಾರ್ಥವು ಯಾವ ಕಾರಣವೂ ಇಲ್ಲದೇ ಒಂದೇ ರೀತಿಯಾಗಿ ಇರುತ್ತದೆಂಬುದು ಸಾಧ್ಯವಿಲ್ಲವಷ್ಟೇ. ಈಶ್ವರನಾದರೂ ಸ್ವತಂತ್ರನಾಗಿರುವುದರಿಂದ ಅಂತಹ ದೋಷಕ್ಕೆ ಆಸ್ಪದವಿಲ್ಲ.

**तत्वप्रकाशिका – ननु किमर्थेयं सूत्रपदस्य द्विरूक्तिः । अध्यायसमाप्तेरर्थभेदेनैव ज्ञातुं शक्यत्वात् । अन्यथा पादान्तेऽपि तत्प्रसङ्गदित्यत आह – अवधारणार्थमिति।।**

ಪ್ರಶ್ನೆ - ಕೊನೆಯ ಈ ಸೂತ್ರದಲ್ಲಿ 'ವ್ಯಾಖ್ಯಾತಃ' ಎಂಬ ಪದವನ್ನು ಎರಡು ಬಾರಿ ಏಕೆ ಹೇಳಿದ್ದಾರೆ. ಅಧ್ಯಾಯವು ಸಮಾಪ್ತವಾಯಿತೆಂಬುದನ್ನು ಅರ್ಥಭೇದದಿಂದಲೇ ತಿಳಿಯಬಹುದು. ಅಂದರೆ ಈ ಅಧ್ಯಾಯದಲ್ಲಿ ಸಮನ್ವಯವನ್ನು ಮುಂದಿನ ಅಧ್ಯಾಯದಲ್ಲಿ ಅವಿರೋಧವನ್ನು ಸಮರ್ಥಿಸುತ್ತಿದ್ದಾರೆಂಬ ಅರ್ಥಭೇದವು ಅಧ್ಯಾಯವನ್ನು ಅಧ್ಯಯನ ಮಾಡುವುದರಿಂದಲೇ ತಿಳಿಯುತ್ತದೆ. ಹಾಗೆಯೇ ತಿಳಿಯುವುದಿಲ್ಲವೆನ್ನುವುದಾದರೆ ಪ್ರತಿಯೊಂದು ಪಾದಗಳ ಕೊನೆಯಲ್ಲಿಯೂ ಸೂತ್ರದ ಕೊನೆಯ ಪದವನ್ನು ಎರಡು ಬಾರಿ ಉಚ್ಚರಿಸುವ ಪ್ರಸಂಗ ಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ ಶ್ರೀಮದಾಚಾರ್ಯರು 'ಅವಧಾರಣಾರ್ಥಮ್' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಸಮನ್ವಯಾಧ್ಯಾಯದಲ್ಲಿ ಮಾಡಿದ ಸಮಗ್ರ ವಿಚಾರಗಳ ದಾರ್ಢ್ಯಕ್ಕೋಸ್ಕರ

ಸೂತ್ರಕಾರರು ದ್ವಿರುಕ್ತಿಯನ್ನು ಮಾಡಿರುತ್ತಾರೆಂದು ತಿಳಿಯಬೇಕು.

**तत्वप्रकाशिका – विनिर्णये निर्णयग्रन्थे । अतोऽसदादिशब्दवाच्यत्वस्य हरेरुपपन्नत्वाद्युक्तमशेषस्वरवर्णपदवाक्यात्मकशास्त्रयोनित्वम् । ततो जगज्जन्मादिकर्तृत्वाप्रमुख्या(ख्या) नन्तगुणत्वं च सिद्धमिति ।।२९।।**

**इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायां श्रीमज्जयतीर्थमुनिविरचितायां तत्त्वप्रकाशिकायां प्रथमाध्यायस्य चतुर्थः पादः ।।**

**श्रीरस्तु ।।**

'ವಿನಿರ್ಣಯೇ' ಎಂದರೆ 'ನಿರ್ಣಾಯಕ ಗ್ರಂಥಗಳಲ್ಲಿ' ಎಂದರ್ಥ.

ಆದ್ದರಿಂದ 'ಅಸತ್', 'ಅಭಾವ', 'ಶೂನ್ಯ' ಮೊದಲಾದ ಶಬ್ದಗಳೆಲ್ಲವೂ ಶ್ರೀಹರಿಯಲ್ಲಿ ಸಮನ್ವಯಗೊಳ್ಳುತ್ತವೆ.

ಹೀಗೆ ಸಂಪೂರ್ಣ ಈ ಸಮನ್ವಯಾಧ್ಯಾಯದಲ್ಲಿ ಎಲ್ಲಾ ಬಗೆಯ ಸ್ವರ, ವರ್ಣ, ಪದ, ವಾಕ್ಯ, ಪ್ರಕರಣ, ಸಮಗ್ರ ಶಾಸ್ತ್ರ ಇವುಗಳಿಂದೆಲ್ಲಾ ಪ್ರತಿಪಾದ್ಯನಾದವನು ಮಹಾವಿಷ್ಣುವೊಬ್ಬನೇ ಆಗಿರುತ್ತಾನೆ ಎಂದು ಸಿದ್ಧವಾಯಿತು. ಆದ್ದರಿಂದಲೇ ಜಗಜ್ಜನ್ಮಾದಿಕರ್ತೃತ್ವ ಮೊದಲಾದ ಪ್ರಧಾನವಾದ ಅನಂತಗುಣಗಳೂ ಕೂಡ ಪರಮಾತ್ಮನಲ್ಲಿ ಅಂತಿಮವಾಗಿ ನಿರ್ಣಯವಾಯಿತು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆಯಲ್ಲಿ ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ತ್ವಪ್ರಕಾಶಿಕೆಯಲ್ಲಿ ಸಮನ್ವಯಾಧ್ಯಾಯವೆಂಬ ಮೊದಲನೆಯ ಅಧ್ಯಾಯದ ನಾಲ್ಕನೆಯಪಾದವು ಸಂಪೂರ್ಣವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

## ಭಾವದೀಪ

**भावदीपः –** स्त्रीनिषेधिनामित्यनुभाष्योक्तलिङ्गेन अन्यत्रैव प्रसिद्धिमाह **– अत्र निषेधमुखेति** ।। निः स्वरूपत्वमादिपदार्थः ।। **श्रूयन्त इति** ।। तैत्तिरीयादावित्यर्थः। निषेधश्चेत्यनुभाष्योक्तयुक्तिमाह **– तेषामिति** ।। प्रथमप्रतीताविति योज्यम् ।।

'ಸ್ತ್ರೀನಿಷೇಧಿನಾ' ಎಂಬ ಅನುವ್ಯಾಖ್ಯಾನದಲ್ಲಿ ನಿಷೇಧಿ ಎಂಬ ಶಬ್ದದಿಂದ ಏತೇನಾಧಿಕರಣದ ಲಿಂಗವನ್ನು ಹೇಳಿರುತ್ತಾರೆ. ಇದೇ ಲಿಂಗದಿಂದ ಅನ್ಯತ್ರೈವಪ್ರಸಿದ್ಧಿಯನ್ನು 'ಅತ್ರ ನಿಷೇಧಮುಖ' ಇತ್ಯಾದಿ ಟೀಕಾವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಟೀಕೆಯಲ್ಲಿರುವ ಆದಿಪದದಿಂದ ವಿಶ್ವರೂಪತ್ವವನ್ನು ವಿವಕ್ಷಿಸಬೇಕು.

'ಶ್ರೂಯಂತೇ' ಎಂಬುದಕ್ಕೆ ತೈತ್ತೀರಿಯಾ ಶ್ರುತಿ ಮೊದಲಾದವುಗಳಲ್ಲಿ ಎಂದರ್ಥ. ನಿಷೇಧಶ್ಚ ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಯುಕ್ತಿಯನ್ನು 'ತೇಷಾಮ್' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಪ್ರಥಮ ಪ್ರತೀತಿಯಲ್ಲಿ ಅಸದಾದಿ ಶಬ್ದಗಳು ಇತರ ಪದಾರ್ಥವನ್ನು ಪ್ರತಿಪಾದನೆ ಮಾಡಿದರೆ ಎಂಬರ್ಥದಿಂದ ಆ ವಾಕ್ಯವನ್ನು ಯೋಜನೆ ಮಾಡಿಕೊಳ್ಳಬೇಕು.

**भावदीपः – तदयोगादिति ।।** यद्यपि भावस्याऽप्यभावो नेत्यादिद्वितीयप्रतिपत्तौ निषेधमुखवेद्यवस्तुत्वमस्ति । तथापि प्रथमप्रतीतावयोगादिति भावः ।। **स्वयमिति।।** षष्ठ्यर्थेऽव्ययम् ।। **अत** इति हरेर्निषेधमुखवेद्यवस्तुत्वायोगात् तेषां च तादृशवस्तुवाचित्वादित्यर्थः ।

'ತದಯೋಗಾತ್' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಒಂದು ವೇಳೆ ಭಾವಪದಾರ್ಥವೂ ಕೂಡ 'ಅಭಾವೇನ' ಎಂಬುದಾಗಿ ದ್ವಿತೀಯ ಪ್ರತೀತಿಯಲ್ಲಿ ನಿಷೇಧಮುಖವೇದ್ಯವಾಗಿ ತೋರುತ್ತದೆ. ಆದರೂ ಕೂಡ ಪ್ರಥಮಪ್ರತೀತಿಯಲ್ಲಿ ಭಾವಪದಾರ್ಥವು ನಿಷೇಧಮುಖದಿಂದ ತೋರುವುದಿಲ್ಲ ಎಂದು.

'ಸ್ವಯಮ್' ಎಂಬುದು ಷಷ್ಠ್ಯರ್ಥದಲ್ಲಿರುವ ಅವ್ಯಯವಾಗಿದೆ. 'ಅತಃ' ಎಂಬ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಶ್ರೀಹರಿಯು ನಿಷೇಧಮುಖವೇದ್ಯನಾಗಿದ್ದಾನೆಂದು ಹೇಳಲು ಸಾಧ್ಯವಿಲ್ಲ. ನಿಧಿ ಮುಖವಾದ ಶಬ್ದದಿಂದಲೇ ವಾಚಿಯಾಗಿದ್ದಾನೆ. ಆದ್ದರಿಂದ ಶೂನ್ಯಾದಿಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲ ಎಂದು.

**भावदीपः – प्रसिद्धनुत्यनुरोधेन असदादिशब्दा इत्युपक्रमेऽपि भाष्यानुरोधाच्छून्यादिशब्दानामित्युपसंहारः । समन्वयेत्यादिफलोक्तिः ।। भाष्येऽनुदितसौत्रैतच्छब्दार्थं वदन् भाष्यसूत्रयोरर्थमाह – पूर्वोक्तेति ।।**

ಜಗತ್‌ಪ್ರಸಿದ್ಧಿಗೆ ಅನುಗುಣವಾಗಿ ಟೀಕೆಯ ಪ್ರಾರಂಭದಲ್ಲಿ 'ಅಸದಾದಿ ಶಬ್ದಾಃ' ಎಂದು ಹೇಳಿದ್ದರೂ ಕೂಡ, ಭಾಷ್ಯಕ್ಕೆ ಅನುಸಾರಿಯಾಗಿ ಪೂರ್ವಪಕ್ಷದ ಉಪಸಂಹಾರದಲ್ಲಿ 'ಶೂನ್ಯಾದಿ ಶಬ್ದಾನಾಂ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಸಮನ್ವಯ ಸೂತ್ರಂ ನಯುಕ್ತಮ್' ಎಂಬುದು ಪೂರ್ವಪಕ್ಷದ ಫಲ ಎಂದು ತಿಳಿಯಬೇಕು.

ಭಾಷ್ಯದಲ್ಲಿ 'ಏತೇನ' ಎಂಬ ಪದದ ಅರ್ಥವನ್ನು ಸ್ಪಷ್ಟವಾಗಿ ಹೇಳಿರುವುದಿಲ್ಲ. ಆ ಅರ್ಥವನ್ನು ಟೀಕಾರಾಯರು ವಿವಕ್ಷಿಸುತ್ತಾ ಭಾಷ್ಯ ಹಾಗೂ ಸೂತ್ರಗಳ ಅಭಿಪ್ರಾಯವನ್ನು 'ಪೂರ್ವೋಕ್ತ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – भाष्यस्थस्मृत्युक्तो योगो दुर्जनाव्यक्तता तथेत्यनुभाष्योक्त-निमित्तस्याप्युपलक्षणमिति मत्वाऽऽह – **दुर्जनेति** ।।

ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ ಹೇಳಲ್ಪಟ್ಟ ಯೋಗಾರ್ಥಗಳ ಜೊತೆ 'ದುರ್ಜನಾವ್ಯಕ್ತತಾ ತಥಾ' ಎಂಬ ಅನುಭಾಷ್ಯದಲ್ಲಿ ಹೇಳಲ್ಪಟ್ಟ ಪ್ರವೃತ್ತಿನಿಮಿತ್ತವನ್ನೂ ಕೂಡ ಉಪಲಕ್ಷಣೆಯಾ ವಿವಕ್ಷಿಸಬೇಕು. ಎಂಬ ಅಭಿಪ್ರಾಯದಿಂದ 'ದುರ್ಜನನಾಮ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः** – प्रसिद्धनिमित्तस्य हरावयोगेऽपि स्मृत्यादिप्रसिद्धं लोकतोऽप्रसिद्धं तु निमित्तं हरौ युज्यत इति तच्छब्दवाच्यत्वं स्यादेवेत्याकूतम् । स्मृत्युक्तयोग एव श्रुतौ ग्राह्य इत्यस्य कम्पनादित्यत्र निर्णीतत्वादिति भावः ।

ಪ್ರಸಿದ್ಧವಾದ ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಅಯುಕ್ತವಾದರೂ ಕೂಡ ಸ್ಮೃತ್ಯಾದಿಗಳಲ್ಲಿ ಪ್ರಸಿದ್ಧವಾದ ಮತ್ತು ಲೋಕದಲ್ಲಿ ಅಪ್ರಸಿದ್ಧವಾದ ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಶೂನ್ಯ ಮೊದಲಾದ ಶಬ್ದಗಳಿಂದ ಶ್ರೀಹರಿಯು ಪ್ರತಿಪಾದ್ಯನಾಗುತ್ತಾನೆ ಎಂಬುದು ಈ ವಾಕ್ಯದ ಅಭಿಪ್ರಾಯ.

ಸ್ಮೃತ್ಯಿಯಲ್ಲಿ ಹೇಳಲ್ಪಟ್ಟ ಯೋಗಾರ್ಥವನ್ನೇ ಶ್ರುತಿಯಲ್ಲೂ ಕೂಡ ವಿವಕ್ಷಿಸಬೇಕು ಎಂಬುದಾಗಿ 'ಕಂಪನಾತ್' ಎಂಬ ಸೂತ್ರದಲ್ಲಿ ನಿರ್ಣಯಿಸಲಾಗಿದೆ. ಇದನ್ನು ಟೀಕೆಯಲ್ಲಿ ನೆನಪಿಸಿದ್ದಾರೆ.

**भावदीपः** – **तुच्छशब्दे तुदित्यस्यार्थमाह** – **तोदनात्तुदिति** ।। **छ इत्यस्यार्थमाह** – **अदृश्यः छ इति** ।। अश भोजन इत्यतोऽश्यत्वादिति रूपं तस्य नञाऽन्वय इति अभक्ष्यत्वादित्यर्थमाह – **नाश्यत्वादिति** ।। **उभयत्रेति** ।। **असद्वाचिशब्देषु** अभाववाचिशब्देषु च इत्यर्थः ।

'ತುಚ್ಛ' ಶಬ್ದದಲ್ಲಿ 'ತುತು' ಎಂಬ ಪದದ ಅರ್ಥವನ್ನು 'ತೋದನಾತ್' ಇತ್ಯಾದಿ ಟೀಕೆಯಿಂದ ಹೇಳಿರುತ್ತಾರೆ. 'ಸ' ಎಂಬ ಪದದ ಅರ್ಥವನ್ನು 'ಅದೃಶ್ಯಃ' ಎಂಬ ವಾಕ್ಯದಿಂದ ಹೇಳಿರುತ್ತಾರೆ. 'ಅಶ ಭೋಜನೇ' ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ 'ಅಶ್ಯತ್ವಾತ್' ಎಂದು ಹೇಳಬೇಕು. 'ನಞ್'ನ ಜೊತೆಗೆ ಇದಕ್ಕೆ ಅನ್ವಯವನ್ನು ಮಾಡಿದಾಗ 'ಅಭಕ್ಷ್ಯತ್ವಾತ್' ಎಂಬರ್ಥವನ್ನು ಹೇಳಿದಂತಾಗುತ್ತದೆ. ಇದನ್ನೇ ಟೀಕೆಯಲ್ಲಿ 'ನಾಶ್ಯತ್ವಾತ್ ಅಭಕ್ಷ್ಯತ್ವಾತ್' ಎಂದು ಸ್ಪಷ್ಟಪಡಿಸಿದ್ದಾರೆ. ಉಭಯತ್ರ ಎಂದರೆ ಅಸದ್ವಾಚಕವಾದ ಶಬ್ದಗಳಲ್ಲಿ ಹಾಗೂ ಅಭಾವವಾಚಕ ಶಬ್ದಗಳಲ್ಲೂ ಕೂಡ ಎಂದರ್ಥ.

**भावदीपः** – युक्तिं चाऽऽह – **निषेधेति** ।। ईश्वरो वा कथं तत्रैव तत्करोतीत्यत आह – **ईश्वरस्येति** ।। फलोक्त्या सूत्रार्थमुपसंहरति ।। **अत इति** ।। साधकाभावात् बाधकाभावाच्चेत्यर्थः ।

ಏತೇನಾಧಿಕರಣ (೧-೪-೭)

ಈ ವಿಷಯದಲ್ಲಿ ಯುಕ್ತಿಯನ್ನು 'ನಿಷೇಧ' ಇತ್ಯಾದಿ ಟೀಕೆಯಿಂದ ಹೇಳಿರುತ್ತಾರೆ. ಈಶ್ವರನಾದರೂ ಏನೂ ಇಲ್ಲದೇ ಅಲ್ಲಿಯೇ ಆ ವಸ್ತುವನ್ನು ಹೇಗೆ ಹುಟ್ಟಿಸುತ್ತಾನೆ? ಎಂಬ ಪ್ರಶ್ನೆಗೆ 'ಈಶ್ವರಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಸಿದ್ಧಾಂತದ ಫಲವನ್ನು ಹೇಳುವ ಮೂಲಕ ಸೂತ್ರದ ಅರ್ಥವನ್ನು 'ಅತಃ' ಇತ್ಯಾದಿಯಾಗಿ ಉಪಸಂಹಾರ ಮಾಡುತ್ತಿದ್ದಾರೆ. 'ಅತ' ಎಂಬ ಪದಕ್ಕೆ ಸಾಧಕ ಇರುವುದರಿಂದ ಬಾಧಕಪ್ರಮಾಣವಿಲ್ಲದ್ದರಿಂದ ಎಂದರ್ಥ.

**भावदीपः – समन्वयसूत्रे तत्तु शास्त्रयोनीति प्रतिज्ञांशं विवृण्वन्नेव तत्समर्थनमस्य फलमिति दर्शयति ।। युक्तमिति तस्याऽपि जन्मादिसूत्रार्थसिद्धिद्वारा जिज्ञासासूत्रस्थब्रह्मशब्दार्थसिद्धिः फलमित्युपेत्याह – तत इति ।।** अनन्तगुणत्वं चेति ।। हरेरित्यनुकर्षः । एतच्च समन्वयाधिकरणान्त एव विवृतम् ।।२९।।

इति श्रीमद्भाष्यटीकाभावदीपे राघवेन्द्रयतिकृते प्रथमध्याये चतुर्थः पादः ।
प्रथमाध्यायः सम्पूर्णः ।।

ಸಮನ್ವಯಸೂತ್ರದಲ್ಲಿ ಪರಮಾತ್ಮನೊಬ್ಬನೇ ಶಾಸ್ತ್ರಪ್ರತಿಪಾದ್ಯನಾಗಿದ್ದಾನೆ ಎಂಬ ಪ್ರತಿಜ್ಞೆಯನ್ನು ಮಾಡಿರುತ್ತಾರೆ. ಇದನ್ನೇ ಈ ಅಧ್ಯಾಯದಲ್ಲಿ ಸಂಪೂರ್ಣವಾಗಿ ವಿವರಿಸಲಾಯಿತು. ಇದರ ಸಮರ್ಥನೆಯೇ ಅಧ್ಯಾಯದ ಫಲವೆಂದು ತಿಳಿಸಿದ್ದಾರೆ. ಪರಮಾತ್ಮನಲ್ಲಿ ಸಕಲಗುಣಪರಿಪೂರ್ಣತ್ವವನ್ನು ಸಮರ್ಥನೆ ಮಾಡಿದ್ದರಿಂದ ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಸೃಷ್ಟ್ಯಾದಷ್ಟಕರ್ತೃತ್ವವು ಸಿದ್ಧವಾಗುತ್ತದೆ. ತನ್ಮೂಲಕವಾಗಿ ಜಿಜ್ಞಾಸಾಸೂತ್ರದಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದದ ಅರ್ಥವು ಸಿದ್ಧವಾಗುತ್ತದೆ ಎಂಬ ಅಧ್ಯಾಯದ ಫಲವನ್ನು 'ತತಃ' ಎಂಬ ಮಾತಿನಿಂದ ಹೇಳಿರುತ್ತಾರೆ. ಶ್ರೀಹರಿಯು ಅನಂತಗುಣಪರಿಪೂರ್ಣನಾಗಿದ್ದಾನೆಂದು ಸಿದ್ಧವಾಯಿತು. 'ಹರೇಃ' ಎಂಬ ಪದವನ್ನು ಅನುಕರ್ಷ ಮಾಡಿಕೊಳ್ಳಬೇಕು. ಸಕಲಶಬ್ದಗಳ ಸಮನ್ವಯದಿಂದ ಅನಂತಗುಣಪರಿಪೂರ್ಣತ್ವವು ಹೇಗೆ ಸಿದ್ಧವಾಗುತ್ತದೆಂಬ ವಿಷಯವನ್ನು ಸಮನ್ವಯಾಧಿಕರಣದ ಕೊನೆಯಲ್ಲಿಯೇ ವಿವರಿಸಿದ್ದಾಗಿದೆ.

ಇಲ್ಲಿಗೆ ಬ್ರಹ್ಮಸೂತ್ರಭಾಷ್ಯದ ಟೀಕೆಯ ಭಾವದೀಪದಲ್ಲಿ ಶ್ರೀಮದ್‌ರಾಘವೇಂದ್ರತೀರ್ಥಯತಿಗಳಿಂದ
ವಿರಚಿತವಾದ ಪ್ರಥಮಧ್ಯಾಯದ ನಾಕನೆಯ ಪಾದವು ಸಮಾಪ್ತವಾಯಿತು.
ಪ್ರಥಮಾಧ್ಯಾಯವು ಸಂಪೂರ್ಣವಾಯಿತು.
ಶ್ರೀಕೃಷ್ಣಾರ್ಪಣಮಸ್ತು

ಏತೇನಾಧಿಕರಣ

(೧-೪-೭)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯವ್, ಭಾಟ್ಟಸಂಗ್ರಹ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ एतेनाधिकरणम्

### ಪೂರ್ವಪಕ್ಷನಿರಾಕರಣೆಯೊಂದಿಗೆ ಅಸತ್, ಶೂನ್ಯ ಮೊದಲಾದ ಶಬ್ದಗಳ ಸಮನ್ವಯ

**॥ ॐ एतेन सर्वे व्याख्याता व्याख्याताः ॐ ॥ अव्यवधानेन सूतिहेतुत्व रूपप्रकृतित्वमुक्तरीत्या ब्रह्मणि युक्तम् । रूपाहानेः । नतु निषेध्यत्वादिरूपमसत्त्वा दिकम् । रूपहानेः ।**

ಅನುವಾದ - 'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬುದಾಗಿ ಕೊನೆಯ ಏತೇನಾಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಪ್ರಕೃತ್ಯಧಿಕರಣದಲ್ಲಿ 'ಅವ್ಯವಧಾನೇನ ಸೂತಿಹೇತುತ್ವ' ರೂಪವಾದ ಪ್ರಕೃತಿತ್ವವನ್ನು ಹಿಂದೆ ಹೇಳಿದ ಕಾರಣಗಳಿಂದ ಬ್ರಹ್ಮನಲ್ಲಿ ಸಮರ್ಥಿಸಲಾಯಿತು. ಇಂತಹ 'ಅವ್ಯವಧಾನೇನ ಸೂತಿಹೇತುತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವುದರಿಂದ ಬ್ರಹ್ಮನ ಸ್ವರೂಪಕ್ಕೆ ಯಾವುದೇ ರೀತಿಯಾದ ಹಾನಿಯಿಲ್ಲ. ಆದರೆ ನಿಷೇಧ್ಯತ್ವಾದಿರೂಪವಾದ 'ಅಸತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಬ್ರಹ್ಮನಲ್ಲಿ ಸಮರ್ಥಿಸಲು ಸಾಧ್ಯವೇ ಇಲ್ಲ. ಒಂದು ವೇಳೆ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, ಅಸತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸುವುದಾದರೆ, ಬ್ರಹ್ಮನ ಸ್ವರೂಪವೇ ಹಾನಿಯಾಗುವ ಪ್ರಸಂಗ ಬರುತ್ತದೆ.

**तस्मात् ''असद्वा इदमग्र आसीत्'' इत्यादिवाक्यस्यासच्छून्यादिशब्दवाच्यो न विष्णुः ।**

ಆದ್ದರಿಂದ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಲ್ಲಿರುವ ಅಸತ್, ಶೂನ್ಯ ಮೊದಲಾದ ಶಬ್ದಗಳಿಂದ ಮಹಾವಿಷ್ಣುವು ಪ್ರತಿಪಾದ್ಯನಾಗಲಾರ.

**न चासत्त्वस्य तद्गतत्वाभावेऽपि तदधीनत्वादसच्छब्दवृत्तिः । असतो निःस्वरूपस्य नियमनाभावेनेशानधीनत्वादित्याक्षेपात्सङ्गतिपूर्वपक्षौ ।**

'ಅಸತ್' ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ, ಅಸತ್ವವು 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಪರಮಾತ್ಮನಲ್ಲಿ ಬಂದರೆ ಸ್ವರೂಪಹಾನಿ ಆಗಬಹುದು. ಆದರೆ 'ತದಧೀನತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಮಹಾವಿಷ್ಣುವಿನಲ್ಲಿ 'ಅಸತ್' ಶಬ್ದವು ಬರಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಅಸತ್' ಪದಾರ್ಥಕ್ಕೆ ಸ್ವರೂಪವೇ ಇರುವುದಿಲ್ಲ. ಸ್ವರೂಪವೇ ಇಲ್ಲದ ಅಂತಹ ಪದಾರ್ಥವನ್ನು ನಿಯಮನ ಮಾಡಲು ವಿಷ್ಣುವಿಗೆ ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಅದೂ ಕೂಡ ವಿಷ್ಣುವಿನ ಅಧೀನವಾಗಿಲ್ಲ. ಆದ್ದರಿಂದ ತದ್ಗತತ್ವ ಎಂಬ ಪ್ರವೃತ್ತಿನಿಮಿತ್ತದಿಂದಾಗಲೀ, ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಾಗಲೀ ಅಸದಾದಿ ಶಬ್ದಗಳು ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. ಹೀಗೆ ಪೂರ್ವಾಧಿಕರಣದಿಂದ ಸಂಗತಿ ಹಾಗೂ ಪೂರ್ವಪಕ್ಷಗಳನ್ನು ತಿಳಿದುಕೊಳ್ಳಬೇಕು.

**सिद्धान्तस्तु ।। प्रसिद्धस्य शून्यत्वादेर्ब्रह्मगतत्वाभावेऽपि ''शमूनं कुरुत'' इत्यादिभाष्योक्तस्यानुव्याख्यानोक्तस्य दुर्जनाव्यक्तत्वस्य च निमित्तस्य तद्गतत्वात्प्रसिद्धस्यापि तदधीनत्वाच्च शून्यादिशब्दवृत्तिः । शशविषाणादेरप्यत्यन्ताभावप्रतियोगित्वमीशाधीनम् ।**

ಸಿದ್ಧಾಂತ ಹೀಗಿದೆ - ಪ್ರಸಿದ್ಧವಾದ ಶೂನ್ಯತ್ವಾದಿಗಳು ಲೋಕಪ್ರಸಿದ್ಧವಾದ ಶೂನ್ಯತ್ವಾದಿಗಳು ವಿಷ್ಣುವಿನಲ್ಲಿ ಇರುವುದಿಲ್ಲವೆಂದು ಒಪ್ಪಿಕೊಳ್ಳೋಣ. ಆದರೂ 'ಶಮೂನಂ ಕುರುತೇ' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳಿದ ಯೌಗಿಕವಾದ ವೃತ್ತಿಯಿಂದ ಶೂನ್ಯಶಬ್ದವು ವಿಷ್ಣುವಿನಲ್ಲಿ ಬರುತ್ತದೆ. ಅಂದರೆ ಶೂನ್ಯತ್ವವಿರುವುದರಿಂದ ಅಥವಾ ಪರಮಾತ್ಮನು ಅತ್ಯಂತ 'ಅಸತ್' ಆದ್ದರಿಂದ ಶೂನ್ಯಶಬ್ದದಿಂದ ಪ್ರತಿಪಾದ್ಯನಾಗುವುದಿಲ್ಲ. ಹೊರತಾಗಿ ದುರ್ಜನರಿಗೆ ಸುಖವನ್ನು ಕಮ್ಮಿ ಮಾಡುತ್ತಾನೆ. ಆ ಕಾರಣದಿಂದ ಶೂನ್ಯಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಅನುವ್ಯಾಖ್ಯಾನದಲ್ಲಿಯೂ ಹೇಳಿದಂತೆ ದುರ್ಜನರಿಗೆ ಅವ್ಯಕ್ತನಾಗಿರುವ ಕಾರಣದಿಂದ ಶೂನ್ಯತ್ವವು ವಿಷ್ಣುವಿನಲ್ಲಿ ಬರುತ್ತದೆ. ಹೀಗೆ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದಲೇ ಶೂನ್ಯ, ಅಸತ್ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಬಹುದು.

ಅಥವಾ ಪ್ರಸಿದ್ಧವಾದ ಶೂನ್ಯತ್ವವನ್ನು ಶೂನ್ಯಶಬ್ದದ ಪ್ರವೃತ್ತಿನಿಮಿತ್ತವನ್ನಾಗಿ ವಿವಕ್ಷಿಸಿದಾಗಲೂ ಲೋಕದಲ್ಲಿರುವ ಅಂತಹ ಶೂನ್ಯತ್ವವು ಭಗವದಧೀನವಾದ್ದರಿಂದ ಶೂನ್ಯಾದಿಶಬ್ದಗಳು ಮಹಾವಿಷ್ಣುವಿನಲ್ಲಿ ಸಮನ್ವಯಗೊಳ್ಳುತ್ತವೆ. ಶಶವಿಷಾಣವು ಅತ್ಯಂತ ಅಸತ್ತಾಗಿದೆ. ಆದ್ದರಿಂದ ಅತ್ಯಂತಾಭಾವಪ್ರತಿಯೋಗಿ ಎನಿಸುತ್ತವೆ. ಇದೂ ಕೂಡ ಈಶ್ವರನ ಅಧೀನವೇ ಆಗಿದೆ.

ಏತೇನಾಧಿಕರಣ (೧-೪-೭)

**उत्पिपादयिषेदीशो यदि शृङ्गं शशादिके ।**
**गवादाविव जायेत तदभावादभूदसत् ।। १ ।।**

ಉತ್ಪಿಪಾದಯಿಷೇದೀಶೋ ಯದಿ ಶೃಂಗಂ ಶಶಾದಿಕೇ ।
ಗವಾದಾವಿವ ಜಾಯೇತ ತದಭಾವಾದಭೂದಸತ್ ॥೧॥

ಒಂದುವೇಳೆ ಈಶ್ವರನು ಮೊಲದಲ್ಲಿ ಕೊಂಬನ್ನು ಸೃಷ್ಟಿ ಮಾಡಬೇಕೆಂದು ಬಯಸಿಬಿಟ್ಟರೆ, ಹಸು, ಎಮ್ಮೆ ಮೊದಲಾದವುಗಳಿಗೆ ಕೊಂಬು ಇರುವಂತೆ, ಮೊಲ, ಕುದುರೆ ಇವುಗಳಿಗೂ ಕೊಂಬು ಬಂದುಬಿಡುತ್ತದೆ. ಆದರೆ ಹಾಗೆ ಈಶ್ವರನು ಯಾವ ಕಾಲದಲ್ಲಿಯೂ ಇಚ್ಛೆಯನ್ನು ಮಾಡಲಾರ. ಆ ಕಾರಣದಿಂದಲೇ ಶಶವಿಷಾಣಾದಿಗಳು ಅತ್ಯಂತ ಅಸತ್ತಾಗಿವೆ. ಅಂದರೆ ಅತ್ಯಂತಾಭಾವಪ್ರತಿಯೋಗಿ ಎನಿಸುತ್ತವೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः** – एतेन सर्वे व्याख्याता व्याख्याताः ।। अत्र निषेधार्थाः शून्यादिशब्दा उदाहरणमिति प्रागेवोक्तम् ।

ವಿವರಣೆ - 'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬ ಕೊನೆಯ ಅಧಿಕರಣವು ಪ್ರಾರಂಭವಾಗಿದೆ. ಈ ಅಧಿಕರಣದಲ್ಲಿ ನಿಷೇಧವಾಚಕವಾದ ಶೂನ್ಯ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಗುತ್ತದೆ ಎಂಬುದಾಗಿ ಈ ಹಿಂದೆಯೇ ಹೇಳಲಾಗಿದೆ.

**प्रकाशः** – ''असद्वा इदमग्र आसीत्'' इत्यादिश्रुतिगतासदादिशब्दाः किमन्यपरा उत ब्रह्मपरा इति चिन्ता ।

ಸಂಶಯ ಪರಂಪರೆಯು ಸುಲಭವಾಗಿರುವುದರಿಂದ ಗ್ರಂಥಕಾರರು ಹೇಳಿರುವುದಿಲ್ಲ. ಅದನ್ನು ಹೀಗೆ ತಿಳಿಯಬೇಕು - 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಲ್ಲಿರುವ ಅಸತ್, ಶೂನ್ಯ ಮೊದಲಾದ ಶಬ್ದಗಳು ಮಹಾವಿಷ್ಣುವನ್ನು ಬಿಟ್ಟು, ಬೇರೆ ಪದಾರ್ಥಗಳನ್ನೇ ಪ್ರತಿಪಾದನೆ ಮಾಡುತ್ತವೋ, ಅಥವಾ ಮಹಾವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೋ ? ಎಂಬುದು ಪ್ರಧಾನ ಸಂಶಯ.

**प्रकाशः** – तदर्थमसदादिशब्दप्रवृत्तिनिमित्तं ब्रह्मणि न युक्तमुत युक्तमिति चिन्ता ।

ಈ ಸಂಶಯದ ಪರಿಹಾರಕ್ಕಾಗಿ ಅಸತ್ ಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವೋ, ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः** – तदर्थं किं प्रसिद्धं निस्स्वरूपत्वादिकमेवासदादिशब्दप्रवृत्तिनिमित्तमुतान्यदिति ।

ಹಿಂದಿನ ಸಂಶಯ ಪರಿಹಾರಕ್ಕಾಗಿ ಪ್ರಸಿದ್ಧವಾದ ನಿಃಸ್ವರೂಪತ್ವವೇ ಅಸದಾದಿಶಬ್ದಗಳ ಪ್ರವೃತ್ತಿನಿಮಿತ್ತವೋ, ಅಥವಾ ಬೇರೆ ಪ್ರವೃತ್ತಿನಿಮಿತ್ತವಿದೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः** – तथा प्रसिद्धत्वेऽपि तत्प्रति स्वातन्त्र्यं न युक्तमुत युक्तमिति चिन्तापरम्परा सुज्ञा(ते)नेति तामनुक्त्वा पूर्ववैषम्येण पूर्वपक्षटीकां विवृण्वन् सङ्गतिं चाह – **अव्यवधानेनेति** ।।

ಅದರಂತೆ ಪ್ರಸಿದ್ಧವಾದ ನಿಃಸ್ವರೂಪತ್ವವೇ ಪ್ರವೃತ್ತಿನಿಮಿತ್ತವೆನಿಸಿದರೂ, ಅಂತಹ ಪ್ರವೃತ್ತಿನಿಮಿತ್ತಕ್ಕೆ ಸ್ವಾತಂತ್ರ್ಯವನ್ನು ಹೇಳುವುದು ಅಯುಕ್ತವೋ, ಅಥವಾ ಯುಕ್ತವೋ ? ಎಂಬ ಚಿಂತೆಯು ಪರಿಹಾರವಾಗಬೇಕು. ಈ ಸಂಶಯಕೋಟಿಗಳು ಸುಲಭವಾಗಿರುವುದರಿಂದ ಗ್ರಂಥಕಾರರು ಹೇಳಿರುವುದಿಲ್ಲ. ಆದ್ದರಿಂದ ಹಿಂದಿನ ಅಧಿಕರಣದಿಂದ ವೈಷಮ್ಯವನ್ನು ತೋರಿಸುತ್ತಾ ಪೂರ್ವಪಕ್ಷಟೀಕೆಯನ್ನು ವಿವರಿಸುವವರಾಗಿ, ಸಂಗತಿಯನ್ನೂ ಕೂಡ ಹೇಳುತ್ತಿದ್ದಾರೆ. 'ಅವ್ಯವಧಾನೇನ' ಇತ್ಯಾದಿ ಗ್ರಂಥದಿಂದ.

**प्रकाशः – सङ्गतीति ।।** प्रत्युदाहरणरूपेत्यर्थः । एतेन ''तेषां निषेधमुखवेद्यवस्तुवाचित्वात्'' इत्यादिटीका विवृता ।

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಪ್ರತ್ಯುದಾಹರಣರೂಪವಾದ ಸಂಗತಿಯನ್ನು ತಿಳಿದುಕೊಳ್ಳಬೇಕು. 'ತೇಷಾಂ ನಿಷೇಧಮುಖವೇದ್ಯವಸ್ತುವಾಚಿತ್ವಾತ್' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು.

**प्रकाशः** –''दुर्जनानामव्यक्तत्वादिनः'' इत्यादिटीकां विवृण्वन् सिद्धान्तयति ।। **प्रसिद्धस्येति** ।। ''शमूनं कुरुते विष्णुरदृश्यस्सन् परस्स्वयम् । तस्माच्छून्यः'' इत्यादिकौर्मस्मृत्युक्तस्यैव ''कम्पनात्'' इत्यत्रोक्तन्यायेन श्रुतौ ग्राह्यत्वादिति भावः ।।

'ದುರ್ಜನಾನಾಮವ್ಯಕ್ತತ್ವಾದಿನಃ' ಇತ್ಯಾದಿ ಟೀಕೆಯನ್ನು ವಿವರಿಸುತ್ತಾ, ಸಿದ್ಧಾಂತಸ್ಥಾಪನೆ ಮಾಡುತ್ತಿದ್ದಾರೆ 'ಪ್ರಸಿದ್ಧಸ್ಯ' ಇತ್ಯಾದಿ ವಾಕ್ಯದಿಂದ. 'ಶಮೂನಂ ಕುರುತೇ ವಿಷ್ಣುರದೃಶ್ಯಃ ಸನ್ ಪರಃ ಸ್ವಯಮ್ । ತಸ್ಮಾತ್ ಶೂನ್ಯಃ' ದುರ್ಜನರಿಗೆ ಸುಖವನ್ನು ಮೊಟಕುಗೊಳಿಸುತ್ತಾ ಅದೃಶ್ಯನಾಗಿರುವುದರಿಂದ ಶೂನ್ಯ ಎಂದು

ಕರಸಿಕೊಳ್ಳುತ್ತಾನೆ. ಹೀಗೆ ಕೌರ್ಮ ಶ್ರುತಿಯು ಹೇಳುತ್ತಿದೆ. ಅದನ್ನೇ 'ಕಂಪನಾತ್' ಎಂಬ ಅಧಿಕರಣದಲ್ಲಿ ಹೇಳಿದ ನ್ಯಾಯದಿಂದ ಶ್ರುತಿಯ ಅರ್ಥವನ್ನು ತಿಳಿಯಬೇಕೆಂದು ಗ್ರಂಥಕಾರರು ತಿಳಿಸಿದ್ದಾರೆ.

**प्रकाशः – उक्तस्येति ।।** ''उत्पादनं स्वदेहाच्च दुर्जनाव्यक्तता तथा'' इत्युक्तस्येत्यर्थः । ''न चासतोऽन्याधीनत्वायोगः'' इत्यादिटीकां व्यनक्ति ।। **प्रसिद्धस्यापीति ।।** तदेव व्यनक्ति – **उत्पिपादयिषेदिति ।।**

'ಉಕ್ತಸ್ಯ' ಎಂದರೆ 'ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ' ಎಂಬುದಾಗಿ ದುರ್ಜನರಿಗೆ ಅವ್ಯಕ್ತನಾದ ಕಾರಣ ಅಸತ್ಯ ಎನಿಸಿದ್ದಾನೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆಂದು ಅರ್ಥ. 'ನ ಚಾಸತೋಽನ್ಯಾಧೀನತ್ವಾಯೋಗಃ' ಅಸತ್ತಾದ ಮಾತ್ರಕ್ಕೆ ಈಶ್ವರನ ಅಧೀನವಾಗಬಾರದೆಂದೇನೂ ಇಲ್ಲ'. ಇತ್ಯಾದಿ ಟೀಕೆಯನ್ನು 'ಪ್ರಸಿದ್ಧಸ್ಯಾಪಿ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಅದನ್ನೇ 'ಉತ್ಪಿಪಾದಯಿಷೇತ್' ಎಂಬ ಶ್ಲೋಕದಿಂದ ಸಂಗ್ರಹಿಸಿ ಸ್ಪಷ್ಟಪಡಿಸಿದ್ದಾರೆ.




ಹಿಂದಿನ ಪ್ರಕೃತ್ಯಧಿಕರಣದಲ್ಲಿ 'ಅವ್ಯವಧಾನೇನ ಸೂತಿಹೇತುತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೂಲಕ ಸ್ತ್ರೀಲಿಂಗಶಬ್ದಗಳೆನಿಸಿದ ಪ್ರಕೃತಿ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಇದರಿಂದ ಮಹಾವಿಷ್ಣುವಿನ ಸ್ವರೂಪಕ್ಕೆ ಯಾವುದೇ ರೀತಿ ಚ್ಯುತಿ ಬರಲಿಲ್ಲ. ಎಲ್ಲಾ ಶಬ್ದಗಳನ್ನೂ ಸಮನ್ವಯ ಮಾಡಬೇಕೆಂಬ ಧೋರಣೆಯಿಂದ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲು ಸಾಧ್ಯವೇ ಇಲ್ಲ. ಹಾಗೇನಾದರೂ ಅಂತಹ ಶಬ್ದಗಳನ್ನು ಸಮನ್ವಯ ಮಾಡಿದರೆ, ಭಗವಂತನು ನಿಃಸ್ವರೂಪನೆಂದಾಗಬೇಕಾದೀತು. ಆದ್ದರಿಂದ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಲ್ಲಿರುವ 'ಅಸತ್' ಮೊದಲಾದ ಶಬ್ದಗಳು ಮಹಾವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. ಅಷ್ಟೇ ಅಲ್ಲದೇ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಗದು. ಏಕೆಂದರೆ ಅಸತ್‌ಪದಾರ್ಥಗಳು ನಿಃಸ್ವರೂಪಗಳಾದ್ದರಿಂದ ಅವುಗಳ ಸೃಷ್ಟಿ, ನಿಯಮನ ಮೊದಲಾದವುಗಳನ್ನು ಮಾಡಲು ಸಾಧ್ಯವಿಲ್ಲದ ಕಾರಣ, ಈಶಾಧೀನತ್ವವನ್ನು ಅವುಗಳಿಗೆ ಹೇಳಲು ಹೇಗೆ ಸಾಧ್ಯ ? ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಶೂನ್ಯ, ಅಸತ್ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿದ ಮಾತ್ರಕ್ಕೆ ಭಗವಂತನು ನಿಃಸ್ವರೂಪನೆಂದಾಗಬೇಕಾಗಿಲ್ಲ. ಹೊರತಾಗಿ, 'ಶಮೂನಂ ಕುರುತೇ' 'ದುರ್ಜನರಿಗೆ ಬರುವಂತಹ ಆನಂದಾದಿಗಳನ್ನು ಮೊಟುಕುಗೊಳಿಸುತ್ತಾನೆ' ಎಂಬುದಾಗಿ ಭಗವಂತನು ಶೂನ್ಯನೆನಿಸುತ್ತಾನೆ. ದುರ್ಜನರಿಗೆ ಅವ್ಯಕ್ತನಾದ ಕಾರಣ 'ಅಸತ್' ಎನಿಸುತ್ತಾನೆ. ಹೀಗೆ ಯೋಗವೃತ್ತಿಯಿಂದ ಶೂನ್ಯಾದಿಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ತಿಳಿದುಕೊಳ್ಳಬೇಕು. ಮತ್ತು ಲೋಕಪ್ರಸಿದ್ಧವಾದ ಶೂನ್ಯತ್ವಾದಿಗಳನ್ನೇ ಶೂನ್ಯಾದಿ ಶಬ್ದಗಳ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಿದರೂ ಕೂಡ ಅವುಗಳು ಭಗವದಧೀನವಾಗಿವೆ. ಯಾವುದೇ ಕಾಲದಲ್ಲೂ ಭಗವಂತನು ಶಶವಿಷಾಣಾದಿಗಳನ್ನು ಸೃಷ್ಟಿ ಮಾಡಲಾರ.

ಅವನಿಗೆ ಸೃಷ್ಟಿ ಮಾಡುವ ಸಾಮರ್ಥ್ಯವಿದೆ. ಆದರೂ ಕೂಡ ಅಸತ್‌ಪದಾರ್ಥವನ್ನು ಸೃಷ್ಟಿಮಾಡುವುದಿಲ್ಲ ಎಂಬ ಕಾರಣದಿಂದರೇ ಅಸತ್ ಪದಾರ್ಥವು ಭಗವದಧೀನವಾಗುತ್ತದೆ. ಹೀಗೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಶೂನ್ಯ, ಅಸತ್ ಮೊದಲಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಬಹುದೆಂದು ಸಿದ್ಧಾಂತ.

ಉತ್ಪಾದಯಿಷೇದೀಶೋ ಯದಿ ಶೃಂಗಂ ಶಶಾದಿಕೇ ।
ಗವಾದಾವಿವ ಜಾಯೇತ ತದಭಾವಾದಭೂದಸತ್ ॥೧॥

ಒಂದುವೇಳೆ ಈಶ್ವರನು ಮೊಲದಲ್ಲಿ ಕೊಂಬನ್ನು ಸೃಷ್ಟಿ ಮಾಡಬೇಕೆಂದು ಬಯಸಿ, ಹಸು, ಎಮ್ಮೆ ಮೊದಲಾದವುಗಳಿಗೆ ಕೊಂಬು ಇರುವಂತೆ, ಮೊಲ, ಕುದುರೆ ಇವುಗಳಿಗೂ ಕೊಂಬು ಬರುತ್ತದೆ. ಆದರೆ ಹಾಗೆ ಈಶ್ವರನು ಯಾವ ಕಾಲದಲ್ಲಿಯೂ ಇಚ್ಛೆಯನ್ನು ಮಾಡಲಾರ. ಆ ಕಾರಣದಿಂದರೇ ಶಶವಿಷಾಣಾದಿಗಳು ಅತ್ಯಂತ ಅಸತ್ತಾಗಿವೆ. ಅತ್ಯಾಂತಾಭಾವಪ್ರತಿಯೋಗಿ ಎನಿಸುತ್ತವೆಂದಭಿಪ್ರಾಯ.

• • • • •

## ಅದ್ವೈತಿಗಳ ಸೂತ್ರಾರ್ಥ ವಿಮರ್ಶೆ

## तात्पर्यचन्द्रिका

**अन्ये तु एतेन प्रधानकारणवादनिरासन्यायेन । परमाण्वादिकारणवादा अपि प्रतिषिद्धतया व्याख्याता इति सूत्रार्थ इत्याहुः ।**

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಏತೇನ' = ಪ್ರಧಾನವೇ ಜಗತ್ತಿಗೆ ಕಾರಣ ಎಂಬ ಸಾಂಖ್ಯಮತವನ್ನು ನಿರಾಕರಣೆ ಮಾಡಿದ ನ್ಯಾಯದಿಂದ , 'ಸರ್ವೇ' = ಪರಮಾಣು ಮೊದಲಾದವುಗಳು ಜಗತ್ತಿಗೆ ಕಾರಣವಾಗುತ್ತವೆ ಎಂಬ ವಾದವನ್ನೂ ಕೂಡ 'ವ್ಯಾಖ್ಯಾತಾಃ' ಪ್ರತಿಷೇಧ ಮುಖದಿಂದ ನಿರಾಕರಿಸಿದಂತಾಯಿತು. ಹೀಗೆ ಸೂತ್ರಾರ್ಥವನ್ನು ಹೇಳುತ್ತಾರೆ.

**तन्न । प्रधानपरमाण्वादिकारणवादानां समयपादे निरसिष्यमाणत्वात् ।**

ಇವರ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಮುಂದಿನ ಎರಡನೆಯ ಅಧ್ಯಾಯದಲ್ಲಿ ಪ್ರಧಾನವಾಗಲೀ, ಪರಮಾಣ್ವಾದಿಗಳಾಗಲೀ ಜಗತ್ತಿಗೆ ಕಾರಣವಾಗುತ್ತವೆ ಎಂಬ ಮತಗಳನ್ನು ನಿರಾಕರಣೆ ಮಾಡುವವರಿದ್ದಾರೆ. ಸಮಯಪಾದದಲ್ಲಿ ಮಾಡಬೇಕಾಗಿರುವ ನಿರಾಕರಣೆಯನ್ನು ಈ ಅಧಿಕರಣದಲ್ಲಿ ಮಾಡುವುದು ಅಯುಕ್ತವಾಗಿದೆ.

**तेषां श्रौतत्वमिह निरस्यत इति चेन्न । येषां श्रौतकारणवाक्यानां ब्रह्मपरत्वं निर्णीतं तेष्वण्वादिपरत्वशङ्काऽनुदयात् ।**

ಪ್ರಶ್ನೆ - ಸಮಯಪಾದದಲ್ಲಿ ಸಾಂಖ್ಯಮತ, ಪರಮಾಣ್ವಾದಿಮತಗಳನ್ನು ನಿರಾಕರಿಸುತ್ತಾರೆ. ಆದರೆ ಈ ಅಧಿಕರಣದಲ್ಲಿ ಅವುಗಳು ಶ್ರುತಿಪ್ರತಿಪಾದ್ಯವಲ್ಲ ಎಂದಷ್ಟೇ ನಿರಾಕರಣೆ ಮಾಡುತ್ತಿದ್ದಾರೆ. ಆದ್ದರಿಂದ ಸಮಯಪಾದದಲ್ಲಿ ಇದು ಸಂಗತವಾಗಬೇಕಾಗಿಲ್ಲವಲ್ಲವೇ?

ಉತ್ತರ - ಇದು ಸರಿಯಲ್ಲ. ಎಲ್ಲಾ ಶ್ರುತಿವಾಕ್ಯಗಳು ಬ್ರಹ್ಮಪರವೇ ಆಗಿವೆಯೆಂದು ಈಗಾಗಲೇ ನೀವು ನಿರ್ಣಯಿಸಿದ್ದೀರಿ. ಹೀಗಿರುವಾಗ ಪುನಃ ಶ್ರುತಿಗಳನ್ನು ನೋಡಿದಾಗ, ಪ್ರಕೃತಿಯೋ, ಪರಮಾಣುವೋ, ಜಗತ್ತಿಗೆ ಕಾರಣವಾಗುತ್ತವೆಂಬ ಆಶಂಕೆಯೇ ಹುಟ್ಟಲು ಸಾಧ್ಯವಿಲ್ಲ.

**येषां तु तन्न निर्णीतं तेषां ब्रह्मपरत्वमेवातिदेष्टव्यम् । तेन विनाऽण्वादिपरत्व-निरासासिद्धेः ।**

ಒಂದುವೇಳೆ ಯಾವುದಾದರೂ ಶ್ರುತಿವಾಕ್ಯಗಳಿಗೆ ಬ್ರಹ್ಮಪರತ್ವವು ನಿರ್ಣಯವಾಗಿಲ್ಲ ಎನ್ನುವುದಾದರೆ, ಅಂತಹ ವಾಕ್ಯವನ್ನು ಸ್ವೀಕರಿಸಿ, ಅದಕ್ಕೆ ಬ್ರಹ್ಮಪರತ್ವವನ್ನಷ್ಟೇ ಸಮರ್ಥಿಸಲು ಅತಿದೇಶ ಮಾಡಬೇಕು. ಅದನ್ನು ಬಿಟ್ಟು ಪರಮಾಣ್ವಾದಿಪರತ್ವವನ್ನು ನಿರಾಕರಣೆ ಮಾಡುವುದು ಅಸಿದ್ಧವಾಗುತ್ತದೆ.

**किं चाध्यायोपसंहारस्थेनैतेनेति शब्देनाध्यायादावुपक्रान्तस्य मध्ये चोक्तस्य समन्वयन्यायस्य परामर्शसम्भवेऽनेवंविधस्य प्रधाननिरासन्यायस्य परामर्शो न युक्तः ।**

ಮತ್ತು ಕೊನೆಯ ಈ ಸೂತ್ರದಲ್ಲಿ 'ಏತೇನ' ಎಂಬ ಶಬ್ದವಿದೆ. ಹೀಗೆ ಅಧ್ಯಾಯದ ಕೊನೆಯಲ್ಲಿರುವ ಈ ಶಬ್ದದಿಂದ ಅಧ್ಯಾಯದ ಪ್ರಾರಂಭದಲ್ಲಿ ಪ್ರಸಕ್ತವಾದ, ಮತ್ತು ಅಧ್ಯಾಯದ ಮಧ್ಯದಲ್ಲಿ ಪ್ರಸ್ತಕವಾದ ಸಮನ್ವಯನ್ಯಾಯವನ್ನೇ ಪರಾಮರ್ಶಿಸುವುದು ಅತ್ಯಂತ ಸೂಕ್ತವಾಗುತ್ತದೆ. ಅದನ್ನು ಬಿಟ್ಟು, ಅಧ್ಯಾಯದ ಪ್ರಾರಂಭದಲ್ಲಾಗಲೀ, ಅಧ್ಯಾಯದ ಮಧ್ಯದಲ್ಲಾಗಲೀ ಅಪ್ರಸಕ್ತವಾದ ಪ್ರಧಾನನಿರಾಸನ್ಯಾಯವನ್ನು ಕೊನೆಯ ಈ ಸೂತ್ರದಲ್ಲಿ ಪರಾಮರ್ಶಿಸುವುದು ಯಾವ ರೀತಿಯಿಂದಲೂ ಸೂಕ್ತವಲ್ಲ.

**सर्व इत्यस्याप्यध्यायार्थत्वेन प्रकृतसमन्वेतव्यशब्दजातीयपरत्वे सम्भवति नाण्वादिवादपरता युक्ता ।**

ಮತ್ತು ಸೂತ್ರದಲ್ಲಿರುವ 'ಸರ್ವೇ' ಎಂಬ ಪದವು ಸಮಗ್ರ ಅಧ್ಯಾಯದ ಅರ್ಥವಾಗಿ, ಪ್ರಕೃತವಾದ ಸಮನ್ವಯ ಮಾಡಬೇಕಾದ ಅಥವಾ ಸಮನ್ವಯ ಮಾಡಲ್ಪಟ್ಟ ಶಬ್ದಗಳಿಗೆ ಸಜಾತೀಯವಾದ ಶಬ್ದಗಳನ್ನೇ ಹೇಳುತ್ತದೆಂದು ವ್ಯಾಖ್ಯಾನಿಸಬೇಕು. ಅದನ್ನು ಬಿಟ್ಟು, ಸಮನ್ವಯ

ಮಾಡಲ್ಪಟ್ಟ ಶಬ್ದಗಳಿಗೆ ಸಜಾತೀಯವಲ್ಲದ ಪರಮಾಣ್ವಾದಿವಾದಪರವಾಗಿ ವ್ಯಾಖ್ಯಾನಿಸುವುದು ಯುಕ್ತವಲ್ಲ. (ಸಮನ್ವಯ ಮಾಡಲ್ಪಟ್ಟ ಆನಂದಮಯಾದಿ ಶಬ್ದಗಳಿಗೆ ಸಜಾತೀಯವಾದ ಶೂನ್ಯ, ಅಸತ್ ಮೊದಲಾದ ಶಬ್ದಗಳೆಲ್ಲವೂ ಸಮನ್ವಿತವಾಗುತ್ತವೆ ಎಂಬುದಾಗಿ ನಾವು 'ಸರ್ವೇ' ಎಂಬ ಪದದಿಂದ ಪರಾಮರ್ಶಿಸುತ್ತೇವೆ)

**व्याख्याता इत्यस्य निरस्ता इत्यर्थश्च न स्वरसः ।**

ಮತ್ತು 'ವ್ಯಾಖ್ಯಾತಾಃ' ಎಂಬ ಪದಕ್ಕೆ 'ನಿರಾಕರಿಸಲ್ಪಟ್ಟಿದೆ' ಎಂಬರ್ಥವನ್ನು ಹೇಳುವುದೂ ಕೂಡ ಅಸ್ವರಸವಾಗಿದೆ.

**यच्चोक्तमन्यैः अभ्यासोऽध्यायसमाप्तिप्रदर्शनार्थ इति । तन्न । पादभेदस्येव प्रमेयवैजात्यादेवाध्यायभेदस्य सुज्ञानत्वात् । अन्यथा पादान्तेऽपि स स्यात् ।**

ಕೊನೆಯ ಈ ಸೂತ್ರದಲ್ಲಿ ಎರಡು ಬಾರಿ, 'ವ್ಯಾಖ್ಯಾತಾಃ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಮೊದಲನೆಯ ಬಾರಿ ಪ್ರಯೋಗಿಸಿರುವ 'ವ್ಯಾಖ್ಯಾತಾಃ' ಎಂಬ ಪದಕ್ಕೆ 'ನಿರಾಕರಿಸಲ್ಪಡುತ್ತದೆ' ಎಂಬರ್ಥವನ್ನು ತಿಳಿಯಬೇಕು. ಎರಡನೆಯ 'ವ್ಯಾಖ್ಯಾತಾಃ' ಎಂಬ ಪದಕ್ಕೆ 'ಅಧ್ಯಾಯಸಮಾಪ್ತಿ' ಎಂಬರ್ಥವನ್ನು ತಿಳಿಯಬೇಕು ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನಿಸಿದ್ದಾರೆ. ಇದೂ ಕೂಡ ಸರಿಯಲ್ಲ. ಏಕೆಂದರೆ ಕೇವಲ ಪ್ರಮೇಯವೈಜಾತ್ಯವನ್ನು ತಿಳಿಸುವುದಕ್ಕಾಗಿ ಹೀಗೆ ದ್ವಿರುಕ್ತಿಯನ್ನು ಹೇಳುವ ಅವಶ್ಯಕತೆಯಿಲ್ಲ. ಯಾವರೀತಿಯಾಗಿ ಪಾದಭೇದವು ಸ್ವತಃ ತಿಳಿಯುತ್ತದೋ, ಅದರಂತೆ ಪ್ರಮೇಯವೈಜಾತ್ಯವೂ ಕೂಡ ಅಧ್ಯಾಯಭೇದದಿಂದಲೇ ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೊಪ್ಪದಿದ್ದರೆ, ಪಾದದ ಕೊನೆಯಲ್ಲಿಯೂ ಕೂಡ ಹೀಗೆ ಆವೃತ್ತಿ ಮಾಡಬೇಕಿತ್ತು. ಆದರೆ ಸೂತ್ರಕಾರರು ಯಾವುದೇ ಪಾದದ ಕೊನೆಯಲ್ಲಿ ಹಾಗೇ ಆವೃತ್ತಿಯನ್ನು ಮಾಡಿರುವುದಿಲ್ಲ. ಆದ್ದರಿಂದ ಅಧ್ಯಾಯದ ಕೊನೆಯ 'ವ್ಯಾಖ್ಯಾತಾಃ' ಎಂಬ ಪದದ ಆವೃತ್ತಿಗೆ ಕೃತ್ಯವನ್ನು ಹೇಳಲು ಅದ್ವೈತಿಗಳಿಗೆ ಸಾಧ್ಯವಿಲ್ಲ.

**प्रकाशः –**

**अन्ये त्विति ।।** छान्दोग्ये षष्ठेऽध्याये श्वेतकेतूद्दालकसंवादे श्रुतं "न्यग्रोधफलमत आहरेति । इदं भगवः इति भिन्धीति । भिन्नं भगव इति । किमत्र पश्यसीति । अण्व्य इवेमाधाना भगव इति । आसामङ्गैकां भिन्धीति । भिन्ना भगव इति । किमत्र पश्यसीति ।। न किञ्चन भगव इति । तं होवाच यं वै सौम्यैतमणिमानं न निभालयसे अस्य सोम्यैषोऽणिम्न एव महान्न्यग्रोधस्तिष्ठति" इति ।

**ವಿವರಣೆ** - ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಶ್ವೇತಕೇತು ಹಾಗೂ ಉದ್ದಾಲಕರ ಸಂವಾದ ಪ್ರಕರಣದಲ್ಲಿ ಶ್ರುತಿವಾಕ್ಯ ಹೀಗಿದೆ - ''ನ್ಯಗ್ರೋಧಫಲಮತ ಆಹಾರೇತಿ । ಇದಂ ಭಗವಃ ಇತಿ ಭಿಂಧೀತಿ । ಭಿನ್ನಂ ಭಗವ ಇತಿ । ಕಿಮತ್ರ ಪಶ್ಯಸೀತಿ । ಅಣ್ವ್ಯ ಇವೇಮಾಧಾನಾ ಭಗವ ಇತಿ । ಆಸಾಮಂಗೈಕಾಂ ಭಿಂದೀತಿ । ಭಿನ್ನಾ ಭಗವ ಇತಿ । ಕಿಮತ್ರ ಪಶ್ಯಸೀತಿ ॥ ನ ಕಿಂಚನ ಭಗವ ಇತಿ । ತಂ ಹೋವಾಚ ಯಂ ವೈ ಸೌಮ್ಯೈಯತಮಣಿಮಾನಂ ನ ನಿಭಾಲಯಸೇ ಅಸ್ಯ ಸೌಮ್ಯೈಷೋऽಣಿಮ್ನ ಏವ ಮಹಾನ್ನ್ಯಗ್ರೋಧಸ್ತಿಷ್ಠತಿ'' ಎಂದು.

**प्रकाशः** – तत्र ''अण्व्यः'' इति परमाणूनां ''न किञ्चन'' इत्युक्त्या शून्यादीनां कारणत्वप्रतीतेर्न ब्रह्म जगदुपादानमिति प्राप्ते एकविज्ञानेन सर्वविज्ञानादेः परमाण्वादिकारणत्वपक्षेऽनुपपत्तेः ''अण्व्यः'' इत्यादेश्च सूक्ष्मत्वादिपरत्वेनोपपत्तेर्ब्रह्मैवोपादानमिति सिद्धान्तितम् ।

ಈ ಶ್ರುತಿಯಲ್ಲಿರುವ 'ಅಣ್ವ್ಯಃ' ಎಂಬ ಪದದಿಂದ ಪರಮಾಣುಗಳಿಗೆ 'ನ ಕಿಂಚನ' ಎಂದು ಹೇಳಿದ್ದರಿಂದ ಶೂನ್ಯಾದಿಗಳಿಗೆ ಜಗತ್ಕಾರಣತ್ವವು ಪ್ರತೀತವಾಗುತ್ತದೆ. ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗುವುದಿಲ್ಲ - ಇಷ್ಟು ಪೂರ್ವಪಕ್ಷ.

ಏಕವಿಜ್ಞಾನದಿಂದ ಸರ್ವವು ವಿಜ್ಞಾತವಾಗುತ್ತದೆ ಎಂಬ ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಈ ಶ್ರುತಿಯನ್ನು ವ್ಯಾಖ್ಯಾನಿಸಬೇಕು. ಆದ್ದರಿಂದ ಪರಮಾಣ್ವಾದಿಗಳನ್ನು ಕಾರಣವೆಂದು ಒಪ್ಪಿದರೆ, ಈ ಪ್ರತಿಜ್ಞಾವಾಕ್ಯವು ಅನುಪಪನ್ನವಾಗುತ್ತದೆ. ಆದ್ದರಿಂದ 'ಅಣ್ವ್ಯಃ' ಇತ್ಯಾದಿ ಪದಗಳಿಗೆ ಕೇವಲ ಸೂಕ್ಷ್ಮನಾದವನು ಎಂದಷ್ಟೇ ಅರ್ಥವನ್ನು ಹೇಳಬೇಕು. ಆದ್ದರಿಂದ ಬ್ರಹ್ಮನೇ ಜಗತ್ತಿಗೆ ಉಪಾದಾನಕಾರಣನಾಗುತ್ತಾನೆ. ಇಷ್ಟು ಸಿದ್ಧಾಂತ.

**प्रकाशः** – तदुक्तं कल्पतरौ-

मृदादयो हि दृष्टान्ताः प्रतिज्ञामनुरुन्धते ।
धानास्तामुपरुन्धाना भक्तिमार्गं प्रपेदिरे ।। इति ।

ಇದನ್ನೇ ಕಲ್ಪತರುವಿನಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ಮೃದಾದಯೋ ಹಿ ದೃಷ್ಟಾಂತಾಃ ಪ್ರತಿಜ್ಞಾಮನುರುಂಧತೇ ।
ಧಾನಾಸ್ತಾಮುಪರುಂಧಾನಾ ಭಕ್ತಿಮಾರ್ಗಂ ಪ್ರಪೇದಿರೇ ॥

ಶ್ರುತಿಯಲ್ಲಿರುವ ಮೃಣ್ಮಯಾದಿ ದೃಷ್ಟಾಂತಗಳು ಪ್ರತಿಜ್ಞಾವಾಕ್ಯವನ್ನು ಅನುಸರಿಸಿವೆ. ಅದರಂತೆ ಈ ಛಾಂದೋಗ್ಯದಲ್ಲಿರುವ 'ಧಾನಾಃ' ಇತ್ಯಾದಿಗಳು ಆ ಪ್ರತಿಜ್ಞಾವಾಚ್ಯವನ್ನೇ ಅನುಸರಿಸಿ, ಭಕ್ತಿಮಾರ್ಗವನ್ನು ತಿಳಿಸುತ್ತಿವೆ ಎಂದು.

**प्रकाशः** – तत्र सूत्रार्थमनूद्य निराह – **एतेनेति** ।। ननु तत्र समयप्राप्ततयाऽत्र तु श्रुतिप्राप्ततयेत्याशङ्कते – **तेषामिति** ।।

ಅದ್ವೈತಿಗಳ ಈ ಸೂತ್ರವ್ಯಾಖ್ಯಾನವನ್ನು ಗ್ರಂಥಕಾರರು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಏತೇನ' ಇತ್ಯಾದಿಯಾಗಿ.

ಎರಡನೆಯ ಸಮಯಪಾದದಲ್ಲಿ ಆಯಾ ಸಮಯಗಳನ್ನು ನಿರಾಕರಿಸುತ್ತಾರೆ. ಪ್ರಕೃತ ಈ ಅಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಪರಮಾಣ್ವಾದಿಕಾರಣತ್ವವನ್ನು ನಿರಾಕರಿಸುತ್ತಾರೆಂದು 'ತೇಷಾಮ್' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

**प्रकाशः** – अधिकरणप्रमेयं निरस्य सूत्रार्थं प्रत्याचष्टे – **किञ्चेति** ।।

ಅಧಿಕರಣಪ್ರಮೇಯವನ್ನು ನಿರಾಕರಿಸುತ್ತಾ ಸೂತ್ರಾರ್ಥವನ್ನು ಪ್ರತ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः** – **सर्व इत्यस्येति** ।। एतेन यत्कैश्चिदुक्तं एतेन पादचतुष्टयोक्तन्यायकलापेन । सर्वे जगत्कारणत्वपरा वाक्यविशेषा ब्रह्मप्रतिपादनपरा व्याख्याता इत्यर्थ इति ।

ಗ್ರಂಥದಲ್ಲಿ ಅದ್ವೈತಿಗಳ 'ಸರ್ವೇ' ಇತ್ಯಾದಿ ಪದಗಳ ಅರ್ಥವನ್ನು ನಿರಾಕರಣೆ ಮಾಡಿದ್ದರಿಂದ ಕೆಲವರ ವಾದವನ್ನು ನಿರಾಕರಿಸಿದಂತಾಯಿತು.

ಕೆಲವರ ವ್ಯಾಖ್ಯಾನ - 'ಏತೇನ' = ಪಾದಚತುಷ್ಟಯಗಳಲ್ಲಿ ಹೇಳಿದ ನ್ಯಾಯದಿಂದ, ಸರ್ವೇ = ಜಗತ್ಕಾರಣತ್ವಪರವಾದ ವಾಕ್ಯವಿಶೇಷಗಳು, ವ್ಯಾಖ್ಯಾತಾಃ = ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು ವ್ಯಾಖ್ಯಾನಿಸಿದಂತಾಯಿತು ಎಂದು.

**प्रकाशः** – तन्निरस्तम् । सर्व इत्यस्य तादृशशब्दजातीयपरत्वस्यैव मन्मतरीत्या न्याय्यत्वात् । कारणवाक्यपरत्वे सर्वाणीत्युक्तेरेव स्वरसत्वाच्च ।

ಇವರ ಅರ್ಥವೂ ಕೂಡ ಈಗಾಗಲೇ ನಿರಾಕೃತವಾಯಿತು. 'ಸರ್ವೇ' ಎಂಬುದಕ್ಕೆ ಇದುವರೆಗೂ ಸಮನ್ವಯ ಮಾಡಲ್ಪಟ್ಟ ಶಬ್ದಗಳಿಗೆ ಸಮಾನಜಾತೀಯವಾದ ಶಬ್ದಗಳು ಎಂಬರ್ಥವನ್ನೇ ನಾವು ಹೇಳುವಂತೆ, ವಿವಕ್ಷಿಸುವುದು ನ್ಯಾಯಪ್ರಾಪ್ತವಾಗಿದೆ. ಅದನ್ನು ಬಿಟ್ಟು 'ಸರ್ವೇ' ಎಂಬುದಕ್ಕೆ ಜಗತ್‌ಕಾರಣತ್ವ ಪ್ರತಿಪಾದಕವಾದ ವಾಕ್ಯವಿಶೇಷಗಳು ಎಂದರ್ಥವನ್ನು ಹೇಳುವುದು ಸ್ವರಸವಲ್ಲ. ಅಷ್ಟೇ ಅಲ್ಲದೇ 'ಸರ್ವೇ' ಎಂಬ ಪದವು ಕಾರಣವಾಕ್ಯಗಳನ್ನು ಪರಾಮರ್ಶಿಸುವುದಾದರೆ, 'ಸರ್ವಾಣಿ' ಎಂಬುದಾಗಿ ನಪುಂಸಕಲಿಂಗದಲ್ಲಿ ಪ್ರಯೋಗಿಸಬೇಕಿತ್ತು. ಅದನ್ನು ಬಿಟ್ಟು 'ಸರ್ವೇ' ಎಂಬುದಾಗಿ ಪುಲ್ಲಿಂಗ ಪ್ರಯೋಗವು ಅಸ್ವರಸವಾಗುತ್ತದೆ.

ವಿವರಣೆ - ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಶ್ವೇತಕೇತು ಹಾಗೂ ಉದ್ದಾಲಕರ ಸಂವಾದ ಪ್ರಕರಣದಲ್ಲಿ ಶ್ರುತಿವಾಕ್ಯ ಹೀಗಿದೆ - "ನ್ಯಗ್ರೋಧಫಲಮತ ಆಹಾರೇತಿ । ಇದಂ ಭಗವಃ ಇತಿ ಭಿಂಧೀತಿ । ಭಿನ್ನಂ ಭಗವ ಇತಿ । ಕಿಮತ್ರ ಪಶ್ಯಸೀತಿ । ಅಣ್ವ್ಯ ಇವೇಮಾಧಾನಾ ಭಗವ ಇತಿ । ಆಸಾಮಂಗ್ಯೆಕಾಂ ಭಿಂದೀತಿ । ಭಿನ್ನಾ ಭಗವ ಇತಿ । ಕಿಮತ್ರ ಪಶ್ಯಸೀತಿ ॥ ನ ಕಿಂಚನ ಭಗವ ಇತಿ । ತಂ ಹೋವಾಚ ಯಂ ವೈ ಸೌಮ್ಯೈಯತಮಣಿಮಾನಂ ನ ನಿಭಾಲಯಸೇ ಅಸ್ಯ ಸೌಮ್ಯೈಷೋಽಣಿಮ್ನ ಏವ ಮಹಾನ್ನ್ಯಗ್ರೋಧಸ್ತಿಷ್ಠತಿ" ಎಂದು.

**प्रकाशः** – तत्र ''अण्व्यः'' इति परमाणूनां ''न किञ्चन'' इत्युक्त्या शून्यादीनां कारणत्वप्रतीतेर्न ब्रह्म जगदुपादानमिति प्राप्ते एकविज्ञानेन सर्वविज्ञानादेः परमाण्वादिकारणत्वपक्षेऽनुपपत्तेः ''अण्व्यः'' इत्यादेश्च सूक्ष्मत्वादिपरत्वेनोपपत्तेर्ब्रह्मैवोपादानमिति सिद्धान्तितम् ।

ಈ ಶ್ರುತಿಯಲ್ಲಿರುವ 'ಅಣ್ವ್ಯಃ' ಎಂಬ ಪದದಿಂದ ಪರಮಾಣುಗಳಿಗೆ 'ನ ಕಿಂಚನ' ಎಂದು ಹೇಳಿದ್ದರಿಂದ ಶೂನ್ಯಾದಿಗಳಿಗೆ ಜಗತ್‌ಕಾರಣತ್ವವು ಪ್ರತೀತವಾಗುತ್ತದೆ. ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗುವುದಿಲ್ಲ - ಇಷ್ಟು ಪೂರ್ವಪಕ್ಷ.

ಏಕವಿಜ್ಞಾನದಿಂದ ಸರ್ವವು ವಿಜ್ಞಾತವಾಗುತ್ತದೆ ಎಂಬ ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಈ ಶ್ರುತಿಯನ್ನು ವ್ಯಾಖ್ಯಾನಿಸಬೇಕು. ಆದ್ದರಿಂದ ಪರಮಾಣ್ವಾದಿಗಳನ್ನು ಕಾರಣವೆಂದು ಒಪ್ಪಿದರೆ, ಈ ಪ್ರತಿಜ್ಞಾವಾಕ್ಯವು ಅನುಪಪನ್ನವಾಗುತ್ತದೆ. ಆದ್ದರಿಂದ 'ಅಣ್ವ್ಯಃ' ಇತ್ಯಾದಿ ಪದಗಳಿಗೆ ಕೇವಲ ಸೂಕ್ಷ್ಮನಾದವನು ಎಂದಷ್ಟೇ ಅರ್ಥವನ್ನು ಹೇಳಬೇಕು. ಆದ್ದರಿಂದ ಬ್ರಹ್ಮನೇ ಜಗತ್ತಿಗೆ ಉಪಾದಾನಕಾರಣನಾಗುತ್ತಾನೆ. ಇಷ್ಟು ಸಿದ್ಧಾಂತ.

**प्रकाशः** – तदुक्तं कल्पतरौ-

मृदादयो हि दृष्टान्ताः प्रतिज्ञामनुरुन्धते ।
धानास्तामुपरुन्धाना भक्तिमार्गं प्रपेदिरे ।। इति ।

ಇದನ್ನೇ ಕಲ್ಪತರುವಿನಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ಮೃದಾದಯೋ ಹಿ ದೃಷ್ಟಾಂತಾಃ ಪ್ರತಿಜ್ಞಾಮನುರುಂಧತೇ।
ಧಾನಾಸ್ತಾಮುಪರುಂಧಾನಾ ಭಕ್ತಿಮಾರ್ಗಂ ಪ್ರಪೇದಿರೇ॥

ಶ್ರುತಿಯಲ್ಲಿರುವ ಮೃಣ್ಮಯಾದಿ ದೃಷ್ಟಾಂತಗಳು ಪ್ರತಿಜ್ಞಾವಾಕ್ಯವನ್ನು ಅನುಸರಿಸಿವೆ. ಅದರಂತೆ ಈ ಛಾಂದೋಗ್ಯದಲ್ಲಿರುವ 'ಧಾನಾಃ' ಇತ್ಯಾದಿಗಳು ಆ ಪ್ರತಿಜ್ಞಾವಾಕ್ಯವನ್ನೇ ಅನುಸರಿಸಿ, ಭಕ್ತಿಮಾರ್ಗವನ್ನು ತಿಳಿಸುತ್ತಿವೆ ಎಂದು.

**प्रकाशः** – तत्र सूत्रार्थमनूद्य निराह – **एतेनेति** ।। ननु तत्र समयप्राप्ततयाऽत्र तु श्रुतिप्राप्ततयेत्याशङ्कते – **तेषामिति** ।।

ಅದ್ವೈತಿಗಳ ಈ ಸೂತ್ರವ್ಯಾಖ್ಯಾನವನ್ನು ಗ್ರಂಥಕಾರರು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಏತೇನ' ಇತ್ಯಾದಿಯಾಗಿ.

ಎರಡನೆಯ ಸಮಯಪಾದದಲ್ಲಿ ಆಯಾ ಸಮಯಗಳನ್ನು ನಿರಾಕರಿಸುತ್ತಾರೆ. ಪ್ರಕೃತ ಈ ಅಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಪರಮಾಣ್ವಾದಿಕಾರಣತ್ವವನ್ನು ನಿರಾಕರಿಸುತ್ತಾರೆಂದು 'ತೇಷಾಮ್' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

**प्रकाशः** – अधिकरणप्रमेयं निरस्य सूत्रार्थं प्रत्याचष्टे – **किञ्चेति** ।।

ಅಧಿಕರಣಪ್ರಮೇಯವನ್ನು ನಿರಾಕರಿಸುತ್ತಾ ಸೂತ್ರಾರ್ಥವನ್ನು ಪ್ರತ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः** – **सर्व इत्यस्येति** ।। एतेन यत्कैश्चिदुक्तं एतेन पादचतुष्टयोक्तन्यायकलापेन । सर्वे जगत्कारणत्वपरा वाक्यविशेषा ब्रह्मप्रतिपादनपरा व्याख्याता इत्यर्थ इति ।

ಗ್ರಂಥದಲ್ಲಿ ಅದ್ವೈತಿಗಳ 'ಸರ್ವೇ' ಇತ್ಯಾದಿ ಪದಗಳ ಅರ್ಥವನ್ನು ನಿರಾಕರಣೆ ಮಾಡಿದ್ದರಿಂದ ಕೆಲವರ ವಾದವನ್ನು ನಿರಾಕರಿಸಿದಂತಾಯಿತು.

ಕೆಲವರ ವ್ಯಾಖ್ಯಾನ - 'ಏತೇನ' = ಪಾದಚತುಷ್ಟಯಗಳಲ್ಲಿ ಹೇಳಿದ ನ್ಯಾಯದಿಂದ, ಸರ್ವೇ = ಜಗತ್ಕಾರಣತ್ವಪರವಾದ ವಾಕ್ಯವಿಶೇಷಗಳು, ವ್ಯಾಖ್ಯಾತಾಃ = ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು ವ್ಯಾಖ್ಯಾನಿಸಿದಂತಾಯಿತು ಎಂದು.

**प्रकाशः** – तन्निरस्तम् । सर्व इत्यस्य तादृशशब्दजातीयपरत्वस्यैव मन्मतरीत्या न्याय्यत्वात् । कारणवाक्यपरत्वे सर्वाणीत्युक्तेरेव स्वरसत्वाच्च ।

ಇವರ ಅರ್ಥವೂ ಕೂಡ ಈಗಾಗಲೇ ನಿರಾಕೃತವಾಯಿತು. 'ಸರ್ವೇ' ಎಂಬುದಕ್ಕೆ ಇದುವರೆಗೂ ಸಮನ್ವಯ ಮಾಡಲ್ಪಟ್ಟ ಶಬ್ದಗಳಿಗೆ ಸಮಾನಜಾತೀಯವಾದ ಶಬ್ದಗಳು ಎಂಬರ್ಥವನ್ನೇ ನಾವು ಹೇಳುವಂತೆ, ವಿವಕ್ಷಿಸುವುದು ನ್ಯಾಯಪ್ರಾಪ್ತವಾಗಿದೆ. ಅದನ್ನು ಬಿಟ್ಟು 'ಸರ್ವೇ' ಎಂಬುದಕ್ಕೆ ಜಗತ್ಕಾರಣತ್ವ ಪ್ರತಿಪಾದಕವಾದ ವಾಕ್ಯವಿಶೇಷಗಳು ಎಂದರ್ಥವನ್ನು ಹೇಳುವುದು ಸ್ವರಸವಲ್ಲ. ಅಷ್ಟೇ ಅಲ್ಲದೇ 'ಸರ್ವೇ' ಎಂಬ ಪದವು ಕಾರಣವಾಕ್ಯಗಳನ್ನು ಪರಾಮರ್ಶಿಸುವುದಾದರೆ, 'ಸರ್ವಾಣಿ' ಎಂಬುದಾಗಿ ನಪುಂಸಕಲಿಂಗದಲ್ಲಿ ಪ್ರಯೋಗಿಸಬೇಕಿತ್ತು. ಅದನ್ನು ಬಿಟ್ಟು 'ಸರ್ವೇ' ಎಂಬುದಾಗಿ ಪುಲ್ಲಿಂಗ ಪ್ರಯೋಗವು ಅಸ್ವರಸವಾಗುತ್ತದೆ.

**प्रकाशः – आचार्योक्तमभ्यासकृत्यमग्रे विवक्षुः परोक्तं तावदनूद्य निराह – यच्चेति ।।**

ಆಚಾರ್ಯರು ಅಭ್ಯಾಸ ಪದಕ್ಕೆ ಹೇಳಿದ ಕೃತ್ಯವನ್ನು ಗ್ರಂಥಕಾರರು ಮುಂದೆ ಸಮರ್ಥಿಸುತ್ತಾರೆ. ಈಗ ಪರರು ಹೇಳಿದ ದ್ವಿರುಕ್ತಿಯ ಪ್ರಯೋಜನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ.




ಅದ್ವೈತಿಗಳ ಪ್ರಧಾನಕಾರಣತ್ವವನ್ನು ಈ ಹಿಂದೆ ನಿರಾಕರಿಸಿದ್ದಾಯಿತು. ಈಗ ಪರಮಾಣ್ವಾದಿಕಾರಣತ್ವವನ್ನು ನಿರಾಕರಿಸುತ್ತಿದ್ದಾರೆಂದು ವ್ಯಾಖ್ಯಾನ ಮಾಡುತ್ತಾರೆ. ಇದು ಸರಿಯಲ್ಲ. ಏಕೆಂದರೆ ಪ್ರಧಾನಕಾರಣತ್ವವಾದವನ್ನಾಗಲೀ, ಪರಮಾಣ್ವಾದಿಕಾರಣತ್ವವಾದವನ್ನಾಗಲೀ, ಸಮಯಪಾದದಲ್ಲಿ ನಿರಾಕರಿಸುವುದು ಸಂಗತವಾಗುತ್ತದೆ. ಈ ಸಮನ್ವಯಾಧ್ಯಾಯದಲ್ಲಿ ಶಬ್ದಗಳ ಸಮನ್ವಯವನ್ನಷ್ಟೇ ಮಾಡಬೇಕು. ಶ್ರುತಿಗಳಲ್ಲಿ ಪ್ರಸಕ್ತವಾದ ವಾದವನ್ನಷ್ಟೇ ನಿರಾಕರಿಸುತ್ತಿದ್ದೇವೆಂದು ಉತ್ತರಿಸಬಹುದು. ಆದರೆ ಈಗಾಗಲೇ ಅದ್ವೈತಿಗಳೇ ವ್ಯಾಖ್ಯಾನಿಸಿದಂತೆ ಎಲ್ಲಾ ಶ್ರುತಿಭಾಗಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದ್ದಾಗಿದೆ. ಪುನಃ ಪರಮಾಣ್ವಾದಿಗಳು ಜಗತ್ತಿಗೆ ಕಾರಣವಾಗಬಹುದೆಂಬ ಆಶಂಕೆ ಹುಟ್ಟಲು ಸಾಧ್ಯವೇ ಇಲ್ಲ. ಯಾವುದಾದರೂ ವಾಕ್ಯಗಳಿಗೆ ಬ್ರಹ್ಮಪರತ್ವವು ನಿರ್ಣೀತವಾಗದಿದ್ದಲ್ಲಿ, ಬ್ರಹ್ಮಪರತ್ವವನ್ನಷ್ಟೇ ಆ ವಾಕ್ಯಗಳಿಗೆ ಸಮರ್ಥನೆ ಮಾಡಿದರೆ ಸಾಕು. ಅದನ್ನು ಬಿಟ್ಟು ಪರಮಾಣ್ವಾದಿಪರತ್ವವನ್ನು ನಿರಾಕರಣೆ ಮಾಡುವುದು ಅಸಂಗತವಾಗುತ್ತದೆ.

ಅಧ್ಯಾಯದ ಕೊನೆಯಲ್ಲಿ 'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬ ಸೂತ್ರವು ಉಲ್ಲೇಖಿಸಲ್ಪಟ್ಟಿದೆ. ಇಲ್ಲಿರುವ 'ಏತೇನ' ಎಂಬ ಪದದಿಂದ ಅಧ್ಯಾಯದ ಪ್ರಾರಂಭದಲ್ಲಿ ಮತ್ತು ಮಧ್ಯದಲ್ಲಿ ಮಾಡಲ್ಪಟ್ಟ ಎಲ್ಲಾ ಸಮನ್ವಯಶಬ್ದಗಳನ್ನು ವಿವಕ್ಷಿಸಬೇಕು. ಆದರೆ ಅದ್ವೈತಿಗಳು ಕೇವಲ ಪ್ರಧಾನನಿರಾಸನ್ಯಾಯವನ್ನಷ್ಟೇ ವಿವಕ್ಷಿಸುತ್ತಾರೆ. ಇದು ಅಯುಕ್ತವಾಗಿದೆ. ಮತ್ತು 'ಸರ್ವೇ' ಎಂಬ ಪದದಿಂದ ಹಿಂದೆ ಸಮನ್ವಯ ಮಾಡಲ್ಪಟ್ಟ ಶಬ್ದಗಳಿಗೆ ಸಮಾನಜಾತೀಯವಾದ ಶಬ್ದಗಳನ್ನು ವಿವಕ್ಷಿಸಬೇಕು. ಆದರೆ ಪರಮಾಣ್ವಾದಿವಾದಪರತ್ವವನ್ನು ಸರ್ವಶಬ್ದದಿಂದ ಅದ್ವೈತಿಗಳು ವಿವಕ್ಷಿಸುತ್ತಾರೆ. ಇದೂ ಕೂಡ ಸರಿಯಲ್ಲ. ವ್ಯಾಖ್ಯಾತಾಃ' ಎಂಬ ಪದಕ್ಕೆ 'ವ್ಯಾಖ್ಯಾನ ಮಾಡಲ್ಪಟ್ಟವು' ಎಂಬರ್ಥವನ್ನೇ ಹೇಳಬೇಕು. ಆದರೆ ಅದ್ವೈತಿಗಳು 'ನಿರಾಕೃತವಾದವು' ಎಂಬರ್ಥವನ್ನು ಹೇಳುತ್ತಾರೆ. ಇದೂ ಕೂಡ ಅಸ್ವರಸ. 'ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬುದಾಗಿ ದ್ವಿರುಕ್ತಿಯಿದೆ. ಈ ದ್ವಿರುಕ್ತಿಯು ಅಧ್ಯಾಯಸಮಾಪ್ತಿಗೋಸ್ಕರ ಎಂದು ಅದ್ವೈತಿಗಳು ಹೇಳುತ್ತಾರೆ. ಹೇಗೆ ಪಾದವು ಮುಗಿಯಿತೆಂದು ಸ್ವತಃ ತಿಳಿಯುತ್ತದೋ, ಅದರಂತೆ ಅಧ್ಯಾಯವು ಮುಗಿಯಿತೆಂದು ಸ್ವತಃ ತಿಳಿಯುತ್ತಿರುವಾಗ ದ್ವಿರುಕ್ತಿಗೆ ಸಾರ್ಥಕ್ಯವನ್ನು ಹೇಳಲು ಸಾಧ್ಯವಿಲ್ಲ. 'ಆದ್ದರಿಂದ ಇದುವರೆಗೂ ಮಾಡಲ್ಪಟ್ಟ ಸಮನ್ವಯವು ಸಕಲ ಶ್ರುತಿ-ಸ್ಮೃತಿಗಳಿಂದ ಸ್ಪಷ್ಟವಾಗಿ ಸಿದ್ಧವಾಯಿತು' ಎಂಬ ದಾರ್ಢ್ಯಕ್ಕೋಸ್ಕರವೇ ದ್ವಿರುಕ್ತಿಯೆಂದು ವಿವಕ್ಷಿಸುವುದು ಸೂಕ್ತ.

**तात्पर्यचन्द्रिका**

**केचित्तु ब्रह्मकाण्ड एकैकविद्याविशेषादेव मुमुक्षोरिष्टसिद्धेर्ज्ञातव्यान्तरं नास्तीति दर्शयितुं तत्तद्विद्यावसाने ''नच पुनरावर्तते न च पुनरावर्तते'' इत्यादिरभ्यासः । कर्मकाण्डे त्वेकैकमात्रेण रागिण इष्टासिद्धिरिति दर्शयितुं तत्तत्कर्मावसाने तदभावः । तथा च निर्णेतव्यानुरोधाद् ब्रह्ममीमांसायामध्यायान्तेऽभ्यासः कर्ममीमांसायां तु नेत्याहुः ।**

ಅನುವಾದ - ರಾಮಾನುಜರು ಕೊನೆಯ ಸೂತ್ರದಲ್ಲಿ ಉಲ್ಲೇಖಿಸಿದ ಅಭ್ಯಾಸಕ್ಕೆ ಸಾರ್ಥಕ್ಯವನ್ನು ಹೀಗೆ ಚಿಂತನೆ ಮಾಡಿದ್ದಾರೆ - ಬ್ರಹ್ಮಕಾಂಡದಲ್ಲಿ ಒಂದೊಂದು ವಿದ್ಯೆಯನ್ನು ಸಂಪಾದನೆ ಮಾಡುವುದರಿಂದ ಮೋಕ್ಷವೆಂಬ ಪ್ರಯೋಜನವು ಜಿಜ್ಞಾಸುವಿಗೆ ಸಿದ್ಧವಾಗುತ್ತದೆ. ಒಂದೊಂದು ವಿದ್ಯೆಯನ್ನು ಹೀಗೆ ಸಂಪಾದನೆ ಮಾಡಿದ್ದರಿಂದ ಮೋಕ್ಷದಿಂದ ಇಷ್ಟ ಪ್ರಯೋಜನವು ಸಿದ್ಧವಾಗುವಾಗ ಮತ್ತೊಂದು ವಿದ್ಯೆಯನ್ನು ತಿಳಿದುಕೊಳ್ಳುವ ಅವಶ್ಯಕತೆಯಿಲ್ಲ. ಈ ಪ್ರಮೇಯವನ್ನು ತಿಳಿಸುವ ಸಲುವಾಗಿ ಆಯಾ ವಿದ್ಯೆಗಳ ಅಧ್ಯಾಯಗಳ ಕೊನೆಯಲ್ಲಿ ಸೂತ್ರಕಾರರು 'ನಚ ಪುನಾರಾವರ್ತತೇ ನಚ ಪುನರಾವರ್ತತೇ' ಇತ್ಯಾದಿಯಾಗಿ ಒಂದೇ ಪದವನ್ನು ಎರಡು ಬಾರಿ ಪ್ರಯೋಗಿಸುತ್ತಾರೆ. ಆದರೆ ಕರ್ಮಕಾಂಡದಲ್ಲಿ ಹೀಗೆ ಅಭ್ಯಾಸವಿರುವುದಿಲ್ಲ. ಏಕೆಂದರೆ ಸ್ವರ್ಗಾದಿ ಕಾಮನೆಯುಳ್ಳ ಅಧಿಕಾರಿಯಷ್ಟೇ ಕರ್ಮಕಾಂಡದಲ್ಲಿ ಪ್ರವೃತ್ತನಾಗುತ್ತಾನೆ. ಅವನಿಗೆ ಯಾವುದೇ ಒಂದು ವಿದ್ಯೆಯನ್ನು ತಿಳಿದ ಮಾತ್ರದಿಂದ ಅವನ ಇಷ್ಟವು ಸಿದ್ಧಿಸಿದಂತಾಗುವುದಿಲ್ಲ. ಏಕೆಂದರೆ ಅದು ಕೇವಲ ಕ್ಷಣಿಕವಾದ ಸುಖದಲ್ಲಷ್ಟೇ ಪರ್ಯವಸಾನವಾಗುತ್ತದೆ. ಆದಕ್ಕಾಗಿ ಕರ್ಮಕಾಂಡನಿರ್ಣಾಯಕವಾದ ಪೂರ್ವಮೀಮಾಂಸೆಯ ಅಧ್ಯಾಯದ ಕೊನೆಯಲ್ಲಿ ಹೀಗೆ ದ್ವಿರುಕ್ತಿಯಿರುವುದಿಲ್ಲ. ಆದ್ದರಿಂದ ನಿರ್ಣೇತವ್ಯವಾದ ವಿಷಯವನ್ನು ಅನುಸರಿಸಿ, ಬ್ರಹ್ಮಮೀಮಾಂಸಾಶಾಸ್ತ್ರದ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಅಭ್ಯಾಸವಿರುತ್ತದೆ. ಕರ್ಮಮೀಮಾಂಸಾದ ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿಯಿರುವುದಿಲ್ಲ.

**तन्न । तथात्वे प्रत्यधिकरणमेकैकविद्यानिर्णायकत्वेनाभ्यासापातात् । आद्याध्यायेऽभ्यासेन ज्ञातव्यान्तरं नेति सूचितत्वेन द्वितीयाध्यायानां वैयर्थ्यापाताच्च।**

ಇವರ ಈ ಚಿಂತನೆ ಅರ್ಥವಿಲ್ಲದ್ದು. ಒಂದುವೇಳೆ ಪ್ರತಿಯೊಂದು ವಿದ್ಯೆಗಳು ಮೋಕ್ಷಫಲಕ ಎಂಬ ಉದ್ದೇಶಕ್ಕಾಗಿ ಸೂತ್ರಕಾರರು ಅಧ್ಯಾಯದ ಕೊನೆಯಲ್ಲಿ ಅಭ್ಯಾಸ ಮಾಡಿರುತ್ತಾರೆ ಎಂದು ಹೇಳುವುದಾದರೆ ಪ್ರತಿಯೊಂದು ಅಧಿಕರಣಗಳ ಕೊನೆಯಲ್ಲಿಯೂ ಪ್ರತಿಯೊಂದು ಪಾದಗಳ

ಕೊನೆಯಲ್ಲಿಯೂ ದ್ವಿರುಕ್ತಿಯಿರಬೇಕಿತ್ತು. ಏಕೆಂದರೆ ಪ್ರತಿಯೊಂದು ಅಧಿಕರಣಗಳಲ್ಲಿಯೂ ಮೋಕ್ಷಪ್ರಯೋಜನಕವಾದ ಒಂದೊಂದು ವಿದ್ಯೆಗಳನ್ನು ಸಂಪಾದಿಸದಂತಾಗುತ್ತದೆ. ಅಷ್ಟೇ ಅಲ್ಲದೇ ಪ್ರಥಮಾಧ್ಯಾಯದ ಕೊನೆಯಲ್ಲಿ ದ್ವಿರುಕ್ತಿಯಿರುವುದರಿಂದ ಮೋಕ್ಷಕ್ಕೆ ಸಾಧಕವಾದ ತತ್ವಜ್ಞಾನವನ್ನು ಸಂಪಾದನೆ ಮಾಡಿದಂತಾಯಿತೆಂದು ಸೂತ್ರಕಾರರು ಸೂಚಿಸಿದ್ದಾರೆ. ಹಾಗಾದರೆ ಪ್ರಥಮಾಧ್ಯಾಯದ ಅಧ್ಯಯನದಿಂದಲೇ ಮೋಕ್ಷವು ಲಭಿಸುವಾಗ ಪುನಃ ಎರಡು, ಮೂರು ಮತ್ತು ನಾಲ್ಕನೆಯ ಅಧ್ಯಾಯಗಳ ಅಧ್ಯಯನವನ್ನು ಮಾಡುವುದು ವ್ಯರ್ಥವಾಗಬೇಕಾಗುತ್ತದೆ.

**छान्दोग्याद्युपनिषत्समाप्तावभ्यासेऽपि बृहदारण्यकादिसमाप्तौ तदभावाच्च ।**

ಮೋಕ್ಷಪ್ರಯೋಜನಕವಾದ ವಿದ್ಯೆಯಲ್ಲಿ ಹೀಗೆ ದ್ವಿರುಕ್ತಿಯಿರುತ್ತದೆ ಎಂಬ ನೀವು ಹೇಳಿದ ವ್ಯಾಪ್ತಿಗೆ ಅನ್ವಯವ್ಯಭಿಚಾರವಿದೆ. ಛಾಂದೋಗ್ಯೋಪನಿಷತ್ತಿನ ಕೊನೆಯಲ್ಲಿ ದ್ವಿರುಕ್ತಿಯಿದೆ. ಆದರೆ ಬೃಹದಾರಣ್ಯಕೋಪನಿಷತ್ತಿನ ಕೊನೆಯಲ್ಲಿ ದ್ವಿರುಕ್ತಿ ಕಾಣಿಸುವುದೇ ಇಲ್ಲ.

**''सन्धीयते प्रजया पशुभिर्यशसा ब्रह्मवर्चसेन स्वर्गेण लोकेन सर्वमायुरेति सर्वमायुरेति'' इत्यादौ पश्वादिफलकविद्यावसानेऽप्यभ्यासदर्शनाच्च ।**

ನಿಮ್ಮ ವ್ಯಾಪ್ತಿಗೆ ವ್ಯತಿರೇಕವ್ಯಭಿಚಾರವೂ ಇದೆ. 'ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇನ ಲೋಕೇನ ಸರ್ವಮಾಯುರೇತಿ ಸರ್ವಮಾಯುರೇತಿ' ಎಂಬುದು ಪಶ್ವಾದಿಫಲಕವಾದ ಐಹಿಕಪ್ರಯೋಜನವನ್ನು ತಿಳಿಸುವ ಕರ್ಮಕಾಂಡವಾಗಿದೆ. ಈ ವಿದ್ಯೆಯ ಕೊನೆಯಲ್ಲಿ ಅಭ್ಯಾಸವು ಕಾಣಿಸುತ್ತಿದೆ.

**कर्मकाण्डेऽप्यृग्वेदब्राह्मणादौ प्रत्यध्यायमन्तेऽभ्यासदर्शनाच्च ।**

ಅಷ್ಟೇ ಅಲ್ಲದೇ ಕರ್ಮಕಾಂಡವೆನಿಸಿದ ಋಗ್ವೇದದ ಬ್ರಾಹ್ಮಣಭಾಗದಲ್ಲಿ ಪ್ರತಿಯೊಂದು ಅಧ್ಯಾಯಗಳ ಕೊನೆಯಲ್ಲಿ ಅಭ್ಯಾಸವಿರುವುದು ಕಾಣಿಸುತ್ತಿದೆ.

**यच्चोक्तं अर्थसमाप्त्यानाध्यायसमाप्तिनिश्चयः । 'काष्ठैः स्थाल्याम्' इत्यादौ वाक्यासमाप्तौ वाक्यार्थस्येवाध्यायासमाप्तावध्यायार्थस्याप्यसमाप्तेः । तस्मादभ्यासेनैवाध्यायभेदो ज्ञेय इति ।**

ಹಿಂದೆ ಅದ್ವೈತಿಗಳಿಗೆ ದೋಷವನ್ನು ಹೇಳುವಾಗ ಅರ್ಥವೇದದಿಂದಲೇ ಅಧ್ಯಾಯ-ಸಮಾಪ್ತವಾಗಿದೆಯೆಂದು ತಿಳಿಯುತ್ತದೆ ಎಂದು ನಾವು ಉತ್ತರಿಸಿದೆವು. ಅದಕ್ಕೆ ಪುನಃ ಅದ್ವೈತಿಗಳು ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಾರೆ -

ಅರ್ಥಸಮಾಪ್ತಿಯಿಂದ ಅಧ್ಯಾಯವು ಸಮಾಪ್ತವಾಗಿದೆಯೆಂದು ನಿಶ್ಚಯಿಸಲಾಗದು. ಉದಾಹರಣೆ- 'ಕಾಷ್ಠೈಃ ಸ್ಥಾಲ್ಯಾಮ್' 'ಕಟ್ಟಿಗೆಗಳಿಂದ ಪಾತ್ರೆಯಲ್ಲಿ' ಎಂಬುದಾಗಿ ವಾಕ್ಯವನ್ನು ಪರಿಪೂರ್ಣ ಮಾಡದೇ ಪ್ರಯೋಗ ಮಾಡಿದರೆ ವಾಕ್ಯಗಳ ಅರ್ಥವು ಪೂರ್ಣವಾಗಿ ತಿಳಿಯುವುದಿಲ್ಲ. ಆದ್ದರಿಂದ ಕಾಷ್ಠಗಳಿಂದ ದೇವದತ್ತನು ಪಾತ್ರೆಯಲ್ಲಿ ಅನ್ನವನ್ನು ಬೇಯಿಸುತ್ತಾನೆ. ಹೀಗೆ ಕರ್ತೃ, ಕರ್ಮ, ಕ್ರಿಯಾಪದಗಳಿಂದ ಘಟಿತವಾದ ವಾಕ್ಯವನ್ನು ಪ್ರಯೋಗಿಸಬೇಕು. ಆವಾಗ ಮಾತ್ರ ವಾಕ್ಯದ ಅರ್ಥವು ಪೂರ್ಣವಾಗಿ ತಿಳಿಯುತ್ತದೆ. ಆದರಂತೆ ಅಧ್ಯಾಯವು ಮುಗಿಯದೇ, ಅಧ್ಯಾಯದ ಅರ್ಥವೂ ಕೂಡ ಮುಗಿಯುವುದಿಲ್ಲ. ಅಧ್ಯಾಯದ ಅರ್ಥವು ಮುಗಿಯಿತೆಂದು ತಿಳಿಯದೇ, ಅಧ್ಯಾಯ ಮುಗಿಯಿತೆಂದು ತಿಳಿಯುವುದಿಲ್ಲ. ಅಧ್ಯಾಯ ಮುಗಿಯಿತೆಂದು ತಿಳಿಯದೇ, ಅಧ್ಯಾಯದ ಅರ್ಥಮುಗಿಯಿತೆಂದು ತಿಳಿಯುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಅದಕ್ಕಾಗಿ ಸೂತ್ರಕಾರರು ಆಯಾ ಅಧ್ಯಾಯಗಳ ಕೊನೆಯಲ್ಲಿ ಅಭ್ಯಾಸ ಮಾಡುತ್ತಾರೆ. ಆವಾಗ ಅಭ್ಯಾಸದ ಬಲದಿಂದ ಅಧ್ಯಾಯವು ಮುಗಿಯಿತೆಂದು ತಿಳಿಯುತ್ತದೆ. ಸಂಪೂರ್ಣವಾಗಿ ಮುಗಿಯಲ್ಪಟ್ಟ ಅಧ್ಯಾಯದಿಂದ ಅಧ್ಯಾಯದ ಸಂಪೂರ್ಣದ ಅರ್ಥವು ಸಿದ್ಧವಾಯಿತು ಎಂದೂ ಕೂಡ ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಅಧ್ಯಾಯದ ಕೊನೆಯಲ್ಲಿರುವ ದ್ವಿರುಕ್ತಿಯು ಸಾರ್ಥಕವೇ ಆಗಿದೆ ಎಂದು.

**तन्न । पादान्तेऽप्यभ्यासापत्तेरुक्तत्वात् । काष्ठैः स्थाल्यामितिवदिह साकाङ्क्षत्वाभावाच्च ।**

ಇವರ ಈ ಸಮರ್ಥನೆ ಅರ್ಥವಿಲ್ಲದ್ದು. ಹಾಗಾದಲ್ಲಿ ಪ್ರತಿಯೊಂದು ಪಾದಗಳು ಮುಗಿಯಿತೆಂದೂ ಕೂಡ ದ್ವಿರುಕ್ತಿಯಿಲ್ಲದೇ ತಿಳಿಯುವುದಿಲ್ಲ. ಯಾವರೀತಿಯಾಗಿ ಅಧ್ಯಾಯದ ಅರ್ಥವು, ಅಧ್ಯಾಯವು ಮುಗಿಯಿತೆಂಬ ಜ್ಞಾನದಿಂದ ಸ್ಪಷ್ಟವಾಗುತ್ತದೋ, ಅದೇ ರೀತಿಯಾಗಿ ಪಾದದ ಅರ್ಥವೂ ಕೂಡ ಪಾದವು ಮುಗಿಯಿತೆಂಬ ಜ್ಞಾನದಿಂದ ಸ್ಪಷ್ಟವಾಗುತ್ತದೆ. ಪಾದವು ಮುಗಿಯಿತೆಂದು ತಿಳಿಸಲು ಪುನಃ ಪ್ರತಿಯೊಂದು ಪಾದಗಳ ಕೊನೆಯಲ್ಲಿ ದ್ವಿರುಕ್ತಿಯನ್ನು ಸೂತ್ರಕಾರರು ಉಲ್ಲೇಖಿಸಬೇಕಾಗುತ್ತದೆ. ಮತ್ತು ನೀವು ನೀಡಿದ ಉದಾಹರಣೆಯೇ ವಿಷಮವಾಗಿದೆ. 'ಕಾಷ್ಠೈಃ ಸ್ಥಾಲ್ಯಾಮ್' ಎಂಬುದಾಗಿ ಅಪರಿಪೂರ್ಣವಾದ ವಾಕ್ಯವನ್ನು ಪ್ರಯೋಗಿಸಿದರೆ 'ಯಾರು', 'ಏನನ್ನು' ಇತ್ಯಾದಿಯಾಗಿ ಆಕಾಂಕ್ಷೆ ಬರುತ್ತದೆ. ಆ ರೀತಿಯಾಗಿ ಈ ಅಧ್ಯಾಯದ ಕೊನೆಯಲ್ಲಿ ಆಕಾಂಕ್ಷೆ ಹುಟ್ಟುತ್ತಿಲ್ಲ.

**पादचतुष्टयन्यायागोचरस्य समन्वेतव्यशब्दस्याभावाच्च ।**

ಏಕೆಂದರೆ ನಾಲ್ಕು ಪಾದಗಳ ನ್ಯಾಯದಿಂದ, ನಾಲ್ಕು ವೇದಗಳಲ್ಲಿರುವ ಎಲ್ಲಾ ಶಬ್ದಗಳೂ ಕೂಡ ಬ್ರಹ್ಮನಲ್ಲಿ ಸಮನ್ವಯ ಮಾಡಿದಂತಾಗಿವೆ. ನಾಲ್ಕು ಪಾದಗಳಿಗೆ ಗೋಚರವಾಗದ ಯಾವುದೇ ಶಬ್ದಗಳ ಸಮನ್ವಯವೂ ಕೂಡ ಬಾಕಿ ಉಳಿದಿಲ್ಲ. ಹೀಗಿರುವಾಗ ಆಕಾಂಕ್ಷೆ ಹುಟ್ಟಲು ಸಾಧ್ಯವೇ ಇಲ್ಲ.

**समन्वयाविरोधयोर्भेदस्य स्फुटत्वाच्च । अन्यथा अर्थैकत्वनयेऽर्थभेदाभेदाभ्यां वाक्यभेदाभेदोक्तिरयुक्ता स्यात् ।**

ಅಷ್ಟೇ ಅಲ್ಲದೇ ಇದು ಸಮನ್ವಯಾಧ್ಯಾಯ, ಮುಂದಿನದ್ದು ಅವಿರೋಧಾಧ್ಯಾಯವೆಂದು ಸ್ಫುಟವಾಗಿ ತಿಳಿಯುತ್ತಿರುವಾಗ ಅದರ ಭೇದಜ್ಞಾನಕ್ಕೋಸ್ಕರ ಆವೃತ್ತಿಯೆಂಬ ಕಾರಣ ಹೇಳುವುದು ಅಸಾಧುವಾಗಿದೆ. ಇಲ್ಲದಿದ್ದರೆ ಪೂರ್ವಮೀಮಾಂಸೆಯ ಅರ್ಥೈಕತ್ವಾಧಿಕರಣದಲ್ಲಿ ಅರ್ಥಭೇದದಿಂದ ವಾಕ್ಯಭೇದವನ್ನು, ಅರ್ಥದ ಅಭೇದದಿಂದ ವಾಕ್ಯದ ಅಭೇದವನ್ನು ಸಮರ್ಥಿಸಿದ್ದಾರೆ. ಒಂದುವೇಳೆ ಅರ್ಥಭೇದದಿಂದ ವಾಕ್ಯಭೇದವು ತಿಳಿಯುವುದಿಲ್ಲವೆಂದು ನೀವು ಹೇಳುವುದಾದರೆ ಆ ಅರ್ಥೈಕತ್ವಾಧಿ-ಕರಣವೇ ಅಯುಕ್ತವಾಗಬೇಕಾಗುತ್ತದೆ.

**तस्मात् ''अवधारणार्थं सर्वस्य'' इति भाष्योदाहृतस्मृत्युक्तमेव द्विरुक्तेः प्रयोजनम् ।**

ಆದ್ದರಿಂದ ಅಧ್ಯಾಯದ ಕೊನೆಯಲ್ಲಿ 'ಅವಧಾರಣಾರ್ಥಂ ಸರ್ವಸ್ಯ' ಎಂಬುದಾಗಿ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯ ಹೇಳುವಂತೆ ಸಮನ್ವಯ ದಾರ್ಢ್ಯಕ್ಕೋಸ್ಕರವೇ ದ್ವಿರುಕ್ತಿಯಿರುತ್ತದೆ ಎಂಬ ಪ್ರಯೋಜನವನ್ನು ತಿಳಿಯಬೇಕು.

**प्रकाशः —**

मतान्तरे सूत्रार्थमुक्तरीत्या दूषितप्रायमिति मत्वा द्विरुक्तिकृत्यमेव तदुक्तमनूद्य निराह — **केचित्त्विति ।।**

ವಿವರಣೆ - ಅದ್ವೈತಮತದ ಸೂತ್ರವ್ಯಾಖ್ಯಾನವನ್ನು ನಿರಾಕರಣೆ ಮಾಡಿದ್ದರಿಂದಲೇ ರಾಮಾನುಜರ ಸೂತ್ರವ್ಯಾಖ್ಯಾನವನ್ನೂ ಕೂಡ ದೂಷಿಸಿದಂತಾಯಿತು ಎಂದು ತಿಳಿದು ಸೂತ್ರದ ಕೊನೆಯಲ್ಲಿ ಉಲ್ಲೇಖಿಸಿದ ದ್ವಿರುಕ್ತಿಯ ಪ್ರಯೋಜನವನ್ನು ರಾಮಾನುಜರು ತಮ್ಮ ಗ್ರಂಥದಲ್ಲಿ ಹೇಗೆ ಸಮರ್ಥಿಸಿದ್ದಾರೋ, ಅದನ್ನು ಮಾತ್ರ ಅನುವಾದ ಮಾಡಿ ನಿರಾಕರಿಸಲು ಹೊರಟಿದ್ದಾರೆ 'ಕೇಚಿತ್' ಇತ್ಯಾದಿ ಗ್ರಂಥದಿಂದ.

**प्रकाशः — बृहदारण्यकेति** ।। तथा च निर्णेतव्यानुसरणेऽभ्यासाभावप्रसङ्ग इति भावः ।

ಬೃಹದಾರಣ್ಯಕೋಪನಿಷತ್ತಿನ ಕೊನೆಯಲ್ಲಿ ಅಭ್ಯಾಸವಿಲ್ಲದ ಕಾರಣ ನಿರ್ಣೇತವ್ಯವಾದ ವಿಷಯಕ್ಕೆ ಅನುಸಾರಿಯಾಗಿ ಅಭ್ಯಾಸವಿದೆಯೆಂದು ಸಮರ್ಥಿಸಲಾಗದು. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನ ಪ್ರಮೇಯಗಳೆಲ್ಲವೂ ಮೋಕ್ಷಪ್ರಯೋಜನಕವಾಗಿವೆ.

ಪರಿಪೂರ್ಣಚಂದ್ರಿಕಾ

**प्रकाशः** – यदपि कर्मकाण्ड इत्यादि तदपि नेत्याह – **सन्धीयत इति** ।। ''अध्यायसमाप्तेरर्थभेदेनैव ज्ञातुं शक्यत्वात्'' इति टीकां समर्थयितुमाह – **यच्चोक्तमिति** ।।

ಕರ್ಮಕಾಂಡದ ಪ್ರಮೇಯಗಳು ಮೋಕ್ಷಪ್ರಯೋಜನಕವಲ್ಲದ ಕಾರಣ, ಆಯಾ ವಿದ್ಯೆಗಳ ಕೊನೆಯಲ್ಲಿ ಅಭ್ಯಾಸವಿರುವುದಿಲ್ಲ ಎಂಬ ವ್ಯಾಪ್ತಿಯೂ ಕೂಡ ಅಸಾಧುವಾಗಿದೆ ಎಂಬುದಾಗಿ 'ಸಂಧೀಯತೇ ಇತಿ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

'ಅಧ್ಯಾಯಸಮಾಪ್ತೇರರ್ಥಭೇದೇನೈವ ಜ್ಞಾತುಂ ಶಕ್ಯತ್ವಾತ್' ಅರ್ಥಭೇದದಿಂದ ಅಧ್ಯಾಯ-ಸಮಾಪ್ತಿಯನ್ನು ತಿಳಿಯಬಹುದು ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಅದನ್ನು ಸಮರ್ಥಿಸಲು ಗ್ರಂಥಕಾರರು 'ಯಚ್ಚೋಕ್ತಮ್' ಇತ್ಯಾದಿಯಾಗಿ ಅದ್ವೈತಿಗಳ ಪ್ರಶ್ನೆಯನ್ನು ಅನುವಾದ ಮಾಡುತ್ತಿದ್ದಾರೆ.

**प्रकाशः** – **असमाप्तेरिति** ।। तथा चान्योन्याश्रयान्निर्णयदर्शनं दुश्शकमापद्यत इति भावः ।

ಅಧ್ಯಾಯ ಮುಗಿಯದೇ ಅಧ್ಯಾಯದ ಅರ್ಥವು ತಿಳಿಯುವುದಿಲ್ಲ. ಅಧ್ಯಾಯದ ಅರ್ಥವು ತಿಳಿಯದೇ, ಅಧ್ಯಾಯವು ಮುಗಿಯಿತೆಂದು ತಿಳಿಯುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷವು ಬರುವುದರಿಂದ ನಿರ್ಣಯವನ್ನೇ ಮಾಡಲು ಸಾಧ್ಯವಾಗುವುದಿಲ್ಲ ಎಂಬುದು ಅದ್ವೈತಿಗಳ ಅಭಿಪ್ರಾಯ.

**प्रकाशः** – दृष्टान्तवैषम्यमाह – **काष्ठैरिति** ।। अर्थसमाप्तिज्ञानमध्यायसमाप्तिज्ञानं विना सुकरमित्याह – **पादेति** ।।

'ಕಾಷ್ಠೈಃ ಸ್ಥಾಲ್ಯಾಮ್' ಎಂಬ ಉದಾಹರಣೆಯು ವಿಷಮವಾಗಿದೆ ಎಂಬುದಾಗಿ 'ಕಾಷ್ಠೈಃ' ಇತ್ಯಾದಿ ವಾಕ್ಯವು ಸಮರ್ಥಿಸುತ್ತಿದೆ. ಅಧ್ಯಾಯದ ಅರ್ಥವು ಮುಗಿಯಿತು ಎಂಬ ಜ್ಞಾನವನ್ನು ಅಧ್ಯಾಯ ಮುಗಿಯಿತೆಂಬ ಜ್ಞಾನವಿಲ್ಲದೇ ಸುಲಭವಾಗಿ ಸಂಪಾದಿಸಬಹುದೆಂಬುದಾಗಿ 'ಪಾದ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – **अर्थैकत्वनय** इति ।। द्वितीयस्याद्यपादे ''अर्थैकत्वादेकं वाक्यं साकाङ्क्षं चेत् विभागे स्यात्'' इत्यधिकरणे ''देवस्य त्वा सवितुः प्रसव'' इति वाक्यमुदाहृत्य यावदेकप्रयोजनं विभागे च साकाङ्क्षं पदजातं तावदेकवाक्यम् । ततोऽन्यद्वाक्यान्तरम् । अत्र च सर्वाणि पदानि निर्वापप्रकाशनार्थानि विभागे च साकाङ्क्षाणीति ''निर्वपाति'' इत्यन्तमेकं वाक्यमित्युक्तम् । अन्यथा तत्राप्यन्योन्याश्रयस्स्यादित्यर्थः । तर्हि कोऽर्थस्तस्येत्यत आह – **तस्मादिति** ।।

ಪೂರ್ವಮೀಮಾಂಸೆಯ ಅರ್ಥೈಕತ್ವಾಧಿಕರಣ ಹೀಗಿದೆ - 'ಅರ್ಥೈಕತ್ವಾದೇಕಂ ವಾಕ್ಯಂ ಸಾಕಾಂಕ್ಷಂ ಚೇತ್ ವಿಭಾಗೇ ಸ್ಯಾತ್' ಎಂಬ ಎರಡನೆಯ ಅಧ್ಯಾಯದ ಪ್ರಥಮಪಾದದಲ್ಲಿ ಈ ಅಧಿಕರಣವು ಪ್ರಸಕ್ತವಾಗಿದೆ. 'ದೇವಸ್ಯ ತ್ವಾ ಸವಿತುಃ ಪ್ರಸವೇ' ಎಂಬ ದೀರ್ಘವಾದ ಮಂತ್ರವು ಇದರ ವಿಷಯವಾಕ್ಯ. 'ನಿರ್ವಪಾಮಿ' ಎಂಬಲ್ಲಿ ಈ ಮಂತ್ರವು ಪರ್ಯವಸಾನವಾಗುತ್ತದೆ. ಅಲ್ಲಿಯತನಕ ಇದು ಒಂದೇ ವಾಕ್ಯವೋ, ಅಥವಾ ಬೇರೆ ಬೇರೆ ವಾಕ್ಯಗಳು ಸೇರಿ ಇದು ಒಂದು ಮಂತ್ರವೆನಿಸಿದೆಯೋ? ಎಂಬುದು ಸಂದೇಹ. ಒಂದೇ ವಾಕ್ಯವೆಂದು ಸಿದ್ಧಾಂತ ಮಾಡಲಾಗಿದೆ. ಏಕೆಂದರೆ ಪದಗಳ ಸಮೂಹಗಳಲ್ಲಿ ಯಾವುದಾದರೂ ಒಂದು ಪದವನ್ನು ತೆಗೆದರೆ ಉಳಿದ ಪದಗಳು ಸಾಕಾಂಕ್ಷವಾಗಬೇಕು. ಮತ್ತು ಎಷ್ಟು ಪದಗಳು ಸೇರಿ, ಒಂದು ಅರ್ಥದ ನಿರ್ಣಯಕ್ಕೋಸ್ಕರ ಹೊರಟಿರುತ್ತವೋ, ಆ ಎಲ್ಲಾ ಪದಗಳು ಸೇರಿ ಒಂದೇ ವಾಕ್ಯವೆನಿಸುತ್ತವೆ. ಪ್ರಕೃತ 'ದೇವಸ್ಯ ತ್ವಾ ಸವಿತುಃ' ಎಂಬ ವಾಕ್ಯದಲ್ಲಿ ಯಾವುದೇ ಒಂದು ಪದವನ್ನು ತೆಗೆದರೂ ಉಳಿದಪದಗಳು ಸಾಕಾಂಕ್ಷಿತವಾಗುತ್ತವೆ. ಮತ್ತು 'ನಿರ್ವಪಾಮಿ' ಎಂಬಲ್ಲಿಯ ತನಕ ಇರುವ ಎಲ್ಲಾ ಪದಗಳೂ ಸೇರಿ 'ನಿರ್ವಾಪಣ' ಎಂಬ ಒಂದೇ ಅರ್ಥವನ್ನು ಸಮರ್ಥಿಸುತ್ತಿವೆ. ಆದ್ದರಿಂದ 'ನಿರ್ವಾಪ ಪ್ರಕಾಶ' ಎಂಬ ಒಂದೇ ಅರ್ಥದಲ್ಲಿ ಉದ್ದೇಶ ಹೊಂದಿರುವುದರಿಂದ, ಪೂರ್ವಾರ್ಧ, ಉತ್ತರಾರ್ಧಗಳೆಲ್ಲವೂ ಸೇರಿ ಒಂದೇ ವಾಕ್ಯವಾಗುತ್ತದೆ ಎಂದು ಸಿದ್ಧಾಂತ ಮಾಡಲಾಗಿದೆ. ಆವೃತ್ತಿಯಿದ್ದರೆ ಮಾತ್ರ ಅರ್ಥವು ಪರ್ಯವಸಾನವಾಗಿದೆಯೆಂದು ತಿಳಿಯುತ್ತದೆಂದು ನೀವು ಹೇಳುವುದಾದರೆ, ಇಲ್ಲಿಯೂ ಕೂಡ ಅನ್ಯೋನ್ಯಾಶ್ರಯದೋಷ ಬರಬೇಕಾದೀತು. ಹಾಗಾದರೆ ಅಭ್ಯಾಸಕ್ಕೆ ಯಾವ ಅರ್ಥವನ್ನು ಹೇಳಬೇಕು ಎಂಬ ಪ್ರಶ್ನೆಗೆ 'ತಸ್ಮಾತ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.




ರಾಮಾನುಜರು ದ್ವಿರುಕ್ತಿಯ ಸಾರ್ಥಕ್ಯವನ್ನು ಹೀಗೆ ಚಿಂತಿಸುತ್ತಾರೆ - ಬ್ರಹ್ಮಕಾಂಡದ ಪ್ರತಿಯೊಂದು ಅಧ್ಯಾಯಗಳ ಕೊನೆಯಲ್ಲಿ ದ್ವಿರುಕ್ತಿ ಇರಲೇ ಬೇಕು. ಏಕೆಂದರೆ ಪ್ರತಿಯೊಂದು ವಿದ್ಯೆಗಳು ಮೋಕ್ಷಕ್ಕೆ ಪ್ರತ್ಯೇಕವಾಗಿ ಸಾಧಕವಾಗುತ್ತದೆ. ಈ ಪ್ರಮೇಯವನ್ನು ತಿಳಿಸಲು ಸೂತ್ರಕಾರರು ಬ್ರಹ್ಮಕಾಂಡದ ಪ್ರತಿಯೊಂದು ಅಧ್ಯಾಯಗಳ ಕೊನೆಯಲ್ಲಿ ದ್ವಿರುಕ್ತಿಯನ್ನು ಮಾಡಿರುತ್ತಾರೆ. ಆದರೆ ಕರ್ಮಕಾಂಡದ ಯಾವುದೇ ಪ್ರಮೇಯಗಳು ಮೋಕ್ಷಕ್ಕೆ ಸಾಧಕವಲ್ಲ. ಆದ್ದರಿಂದ ಅಲ್ಲಿರುವ ಅಧ್ಯಾಯಗಳ ಕೊನೆಯಲ್ಲಿ ಎಲ್ಲಿಯೂ ಕೂಡ ಅಭ್ಯಾಸ ಇರುವುದಿಲ್ಲ.

ರಾಮಾನುಜರ ಈ ವಿಮರ್ಶೆ ಸರಿಯಿಲ್ಲ. ಏಕೆಂದರೆ ಪ್ರತಿಯೊಂದು ಅಧಿಕರಣಗಳಲ್ಲಿಯೂ ಜಿಜ್ಞಾಸುವಿಗೆ ಒಂದೊಂದು ವಿದ್ಯೆಯ ಸಂಪಾದನೆ ಉಂಟಾಗುತ್ತದೆ. ಹಾಗಾದರೆ ಅದು ಕೂಡ ಮೋಕ್ಷಸಾಧಕವಾದ್ದರಿಂದ ಎಲ್ಲಾ ಅಧಿಕರಣಗಳ ಕೊನೆಯಲ್ಲಿಯೂ ಅಭ್ಯಾಸವಿರಬೇಕಿತ್ತು. ಮತ್ತು ಮೊದಲನೆಯ ಅಧ್ಯಾಯದಿಂದಲೇ ಮೋಕ್ಷಸಾಧಕವಾದ ಜ್ಞಾನವನ್ನು ಸಂಪಾದನೆ ಮಾಡಿದ ಮೇಲೆ ಉಳಿದ ಅಧ್ಯಾಯಗಳ ಅಧ್ಯಯನವು ವ್ಯರ್ಥವಾಗುತ್ತದೆ. ಅಷ್ಟೇ ಅಲ್ಲದೇ, ಛಾಂದೋಗ್ಯೋಪನಿಷತ್ತಿನ ಕೊನೆಯಲ್ಲಿ ಅಭ್ಯಾಸವಿರಬಹುದು. ಆದರೆ ಬೃಹದಾರಣ್ಯಕೋಪನಿಷತ್ತಿನ ಕೊನೆಯಲ್ಲಿ ದ್ವಿರುಕ್ತಿಯಿರುವುದೇ ಇಲ್ಲ. ಕರ್ಮಕಾಂಡದ 'ಸಂಧಿಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ಸರ್ವಮಾಯುರೇತಿ' ಎಂಬಲ್ಲಿ ದ್ವಿರುಕ್ತಿ ಇದೆ. ಕರ್ಮಕಾಂಡವೆನಿಸಿದ

ಋಗ್ವೇದ ಬ್ರಾಹ್ಮಣದಲ್ಲಿಯೂ ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿ ಇದೆ. ಆದ್ದರಿಂದ ರಾಮಾನುಜರ ವಾದದಲ್ಲಿ ಯಾವುದೇ ಹುರುಳಿಲ್ಲ.

ಅರ್ಥಸಮಾಪ್ತಿಯಿಂದಲೇ ದ್ವಿತೀಯಾಧ್ಯಾಯದ ಅರ್ಥವು ಮುಗಿಯಿತೆಂಬ ವಿಚಾರದಿಂದಲೇ ಅಧ್ಯಾಯವು ಮುಗಿಯಿತೆಂದು ತಿಳಿಯುತ್ತದೆಂದು ನಾವು ಅದ್ವೈತಿಗಳಿಗೆ ಹಿಂದೆ ಉತ್ತರಿಸಿದ್ದೆವು. ಅದಕ್ಕೆ ಅದ್ವೈತಿಗಳು ಪುನಃ ಆಶಂಕಿಸುತ್ತಾರೆ. 'ಕಾಷ್ಠೈಃ ಸ್ಥಾಲ್ಯಾಮ್' 'ಕಟ್ಟಿಗೆಗಳಿಂದ ಪಾತ್ರೆಯಲ್ಲಿ' ಎಂದಷ್ಟೇ ಪ್ರಯೋಗ ಮಾಡಿದರೆ, ವಾಕ್ಯವು ಪೂರ್ಣವಾಗಿರುವುದಿಲ್ಲ. ಆದ್ದರಿಂದ ವಾಕ್ಯದ ಅರ್ಥವೂ ಕೂಡ ಪೂರ್ಣವಾಗಿ ತಿಳಿಯುವುದಿಲ್ಲ. ಅದರಂತೆ ಅಧ್ಯಾಯವು ಮುಗಿಯಿತೆಂದು ತಿಳಿಯದೇ, ಅಧ್ಯಾಯದ ಅರ್ಥವು ಮುಗಿಯಿತೆಂದು ತಿಳಿಯುವುದಿಲ್ಲ. ಅಧ್ಯಾಯದ ಅರ್ಥವು ಮುಗಿಯಿತೆಂದು ತಿಳಿಯದೇ, ಅಧ್ಯಾಯ ಮುಗಿಯಿತೆಂದು ತಿಳಿಯುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಸೂತ್ರಕಾರರು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿ ಮಾಡುತ್ತಾರೆ. ಆವಾಗ ಎಲ್ಲಿ ದ್ವಿರುಕ್ತಿ ಇರುತ್ತದೋ ಅಲ್ಲಿ ಅಧ್ಯಾಯ ಮುಗಿಯಿತೆಂದು ನಮಗೆ ತಿಳಿಯುತ್ತದೆ ಅನ್ಯೋನ್ಯಾಶ್ರಯವೂ ಕೂಡ ಪರಿಹಾರವಾಗುತ್ತದೆಂದು ಸಮರ್ಥಿಸುತ್ತಾರೆ.

ಈ ಸಮರ್ಥನೆಯೂ ಸರಿಯಿಲ್ಲ. ಹಾಗಾದರೆ ಪ್ರತಿಯೊಂದು ಪಾದಗಳು ಮುಗಿಯಿತೆಂದೂ ಕೂಡ ತಿಳಿಸಲು ಸೂತ್ರಕಾರರು ದ್ವಿರುಕ್ತಿಯನ್ನು ಅಲ್ಲಿಯೂ ಹೇಳಬೇಕಿತ್ತು. 'ಕಾಷ್ಠೈಃ ಸ್ಥಾಲ್ಯಾಮ್ 'ಎಂಬ ಉದಾಹರಣೆಯು ವಿಷಮವಾಗಿದೆ. ಅಲ್ಲಿರುವ ಪದಗಳಲ್ಲಿ ಆಕಾಂಕ್ಷೆಯು ಗೋಚರವಾಗುತ್ತಿದೆ. ಆದರೆ ನಾಲ್ಕು ಪಾದಗಳಿಂದ ಸಮಗ್ರವೇದದ ಪ್ರತಿಯೊಂದು ಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಸಾಧಿಸಿದ ಮೇಲೆ ಪುನಃ ಆಕಾಂಕ್ಷೆ ಹುಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ ಅದ್ವೈತಿಗಳ ವಿಚಾರವಾಗಲೀ, ರಾಮಾನುಜರ ವಿಚಾರವಾಗಲೀ, ಅತ್ಯಂತ ಅಸಾಧುವಾಗಿದೆ. ಅಂತಿಮವಾಗಿ ಭಾಷ್ಯದಲ್ಲಿ ಉದಾಹರಿಸಿದ 'ಅವಧಾರಣಾರ್ಥಂ ಸರ್ವಸ್ಯ' ಎಂಬ ಸ್ಮೃತಿಯ ವಚನದಂತೆ ಸಮಗ್ರ ಸಮನ್ವಯಾಧ್ಯಾಯದ ವಿಚಾರವು ದೃಢವಾಯಿತು ಎಂದು ತಿಳಿಸುವುದಕ್ಕಾಗಿ ಸೂತ್ರಕಾರರು ದ್ವಿರುಕ್ತಿಯನ್ನು ಮಾಡಿರುತ್ತಾರೆ ಎಂಬ ಪ್ರಯೋಜನವನ್ನೇ ಹೇಳಬೇಕು.

## ನಾಲ್ಕು ಪಾದಗಳ ಸಾರ ಸಂಗ್ರಹ

### तात्पर्यचन्द्रिका

**अत्र चाध्याये पादचतुष्टयेन यथाक्रमम् ।**

**नामानि लिङ्गान्यपि चेतरत्र प्रसिद्धियुक्तानि तथोभयत्र ।**
**प्रसिद्धिभांज्यन्यपदार्थ एव प्रसिद्धियुक्तानि समन्वितानि ।**

ಅನುವಾದ - ಈ ಅಧ್ಯಾಯದಲ್ಲಿರುವ ಪಾದಗಳಲ್ಲಿ ಅವಾಂತರ ವ್ಯತ್ಯಾಸವಿದೆ ಎಂಬುದನ್ನು ಹೀಗೆ ತಿಳಿಯಬೇಕು. ನಾಲ್ಕು ಪಾದಗಳಲ್ಲಿ ಯಥಾಕ್ರಮವಾಗಿ ಸಮನ್ವಯ ಮಾಡಿದ ಪ್ರಮೇಯಗಳು ಹೀಗಿವೆ -

ನಾಮಾನಿ ಲಿಂಗಾನ್ಯಪಿ ಚೇತರತ್ರ ಪ್ರಸಿದ್ಧಿಯುಕ್ತಾನಿ ತಥೋಭಯತ್ರ ।
ಪ್ರಸಿದ್ಧಿಭಾಂಜ್ಯನ್ಯಪದಾರ್ಥ ಏವ ಪ್ರಸಿದ್ಧಿಯುಕ್ತಾನಿ ಸಮನ್ವಿತಾನಿ ।

ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಪ್ರಥಮಪಾದದಲ್ಲಿ, ಇತರತ್ರ ಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳನ್ನು ದ್ವಿತೀಯಪಾದದಲ್ಲಿ, ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳನ್ನು ತೃತೀಯಪಾದದಲ್ಲಿ, ಅನ್ಯಪದಾರ್ಥದಲ್ಲೇ ಪ್ರಸಿದ್ಧವಾದ ಶಬ್ದಗಳನ್ನು ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡಲಾಗಿದೆ.

**तत्राप्यन्यत्रैव प्रसिद्धेषु वाक्यस्यान्यत्रावान्तरतात्पर्ये सत्येव ''ब्रह्मण्यपि तदधीनत्वात्'' इति न्यायेन प्रवृत्तिनिमित्तानुरोधेन वा ''ज्योतिरुपक्रमात्'' इति न्यायेन श्रुत्युक्तयोगेन वा पदसमन्वयः । वाक्यान्वयादिति न्यायेन ब्रह्मपरवाक्यैक वाक्यतारूपवाक्यसमन्वयो वा ।**

ಅನ್ಯತ್ರಪ್ರಸಿದ್ಧಿ ಮತ್ತು ಉಭಯತ್ರಪ್ರಸಿದ್ಧಿ, ಅನ್ಯತ್ರೈವಪ್ರಸಿದ್ಧಿ ಈ ಮೂರು ಬಗೆಯ ಶಬ್ದಗಳಲ್ಲಿ ಇರುವ ವ್ಯತ್ಯಾಸ ಹೀಗಿದೆ - ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ವಾಕ್ಯವು ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವನ್ನು ಹೊಂದಿರುವಾಗಲೇ 'ಬ್ರಹ್ಮಣ್ಯಪಿ ತದಧೀನತ್ವಾತ್' ಎಂಬ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಸಮನ್ವಯವನ್ನು ಮಾಡಲಾಗಿದೆ. ಅನ್ಯತ್ರೈವಪ್ರಸಿದ್ಧದಲ್ಲಿ ಮಾಡುವ ಸಮನ್ವಯವು ಎರಡು ಬಗೆ - ಒಂದು ತದಧೀನತ್ವ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಅಥವಾ 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ, ಶ್ರುತಿಯಲ್ಲಿ ಹೇಳಿದ ಯೋಗದಿಂದಲೇ ಬ್ರಹ್ಮನಲ್ಲಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಏನೇ ಆದರೂ ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವಿದ್ದೇ ಇರುತ್ತದೆಂಬುದನ್ನು ಗಮನಿಸಬೇಕು. ಮತ್ತು ಅನ್ಯತ್ರೈವಪ್ರಸಿದ್ಧವಾದ ಪಾದದಲ್ಲಿ ವಾಕ್ಯಸಮನ್ವಯವನ್ನೂ ಕೂಡ ಮಾಡಲಾಗಿದೆ. ಯಾವ ವಾಕ್ಯವು ಬ್ರಹ್ಮಪರವೆಂದು ನಿಶ್ಚಯವಾಗಿದೆಯೋ, ಅವುಗಳ ಮಧ್ಯದಲ್ಲಿರುವಂತಹ ಮತ್ತೊಂದು ವಾಕ್ಯವೂ ಕೂಡ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆಂದು ವಾಕ್ಯಸಮನ್ವಯದ ಕ್ರಮ. ಹೀಗೆ ಪದಸಮನ್ವಯ ಹಾಗೂ ವಾಕ್ಯಸಮನ್ವಯಗಳೆರಡನ್ನೂ ಈ ಪಾದದಲ್ಲಿ ಮಾಡಿದ್ದಾರೆ.

**उभयत्रप्रसिद्धेष्वन्यत्रप्रसिद्धेषु च तत्तद्वाक्यस्यापि ब्रह्मैकपरत्वम् ।**

ಉಭಯತ್ರಪ್ರಸಿದ್ಧವಾದ ಶಬ್ದಗಳಲ್ಲಿಯೂ ಯಾವ ವಿಷಯವಾಕ್ಯವನ್ನು ತಿಳಿದುಕೊಳ್ಳುತ್ತಾರೋ, ಆ ವಾಕ್ಯಗಳಿಗೆ ಅನ್ಯಪರತ್ವವನ್ನು ಸರ್ವಥಾ ಒಪ್ಪದೇ ಕೇವಲ ಬ್ರಹ್ಮನಲ್ಲಿ ಮಾತ್ರ ಸಮನ್ವಯ ಮಾಡುವುದೇ ಉದ್ದೇಶವಾಗಿರುತ್ತದೆ.

**तत्राप्युभयत्रप्रसिद्धेषु युभ्वाद्यायतनादिशब्देषु वाक्यान्तरे ब्रह्मपरत्वेऽपि विषयवाक्ये तत्परत्वं नेति प्राप्ते तन्निरासः ।**

ಅದರಲ್ಲಿಯೂ ಒಂದು ಅವಾಂತರ ವೈಲಕ್ಷಣ್ಯವಿದೆ. ಉಭಯತ್ರಪ್ರಸಿದ್ಧವಾದ ಒಂದು ವಾಕ್ಯವನ್ನು ಉದಾಹರಿಸಿದರೆ, ಪೂರ್ವಪಕ್ಷಿಯು ವಾಕ್ಯಾಂತರದಲ್ಲಿ ಬ್ರಹ್ಮಪರತ್ವವನ್ನು ಒಪ್ಪಿ, ತಾನು ಉದಾಹರಿಸಿದ ವಾಕ್ಯದಲ್ಲಿ ಸರ್ವಥಾ ಬ್ರಹ್ಮಪರತ್ವವಿಲ್ಲವೆಂದು ಆಕ್ಷೇಪಿಸುತ್ತಾನೆ. ಅದರ ನಿರಾಸೆಯನ್ನೂ ಕೂಡ ಉಭಯತ್ರಪ್ರಸಿದ್ಧ ಪಾದದಲ್ಲಿ ಮಾಡಲಾಗಿದೆ.

**अन्यत्रप्रसिद्धेषु तु क्वापि ब्रह्मपरत्वं नेति प्राप्ते तन्निरासः ।**

ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುವಾಗ ಶ್ರುತಿಯಲ್ಲಿ ಯಾವುದೇ ವಾಕ್ಯವಿದ್ದರೂ, ಅದಕ್ಕೆ ಬ್ರಹ್ಮಪರತ್ವವನ್ನು ಸರ್ವಥಾ ಒಪ್ಪುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ ಅದನ್ನು ನಿರಾಸಮಾಡುತ್ತಾ ಬ್ರಹ್ಮಲಿಂಗಗಳಿರುವ ಕಾರಣ ಬ್ರಹ್ಮಪರತ್ವವನ್ನು ಒಪ್ಪಲೇಬೇಕೆಂದು ಸಿದ್ಧಾಂತ ಮಾಡುತ್ತಾರೆ. ಹೀಗೆ ಪಾದಗಳಲ್ಲಿರುವ ಅವಾಂತರ ವ್ಯತ್ಯಾಸವನ್ನು ಗಮನಿಸಬೇಕು.

**एवं च यथा कामिनियोज्यसमभिव्याहारेण स्थायिकार्यस्य लिङर्थत्वे निश्चिते लोके क्रियाकार्ये प्रथमव्युत्पन्नेऽपि लक्षणा,**

ಶಬ್ದಗಳಿಗೆ ಲೋಕಸಿದ್ಧವಾದ ಅರ್ಥದಲ್ಲಿಯೇ ಪ್ರಥಮವ್ಯುತ್ಪತ್ತಿ ಬರುತ್ತದೆ. ಬ್ರಹ್ಮನಲ್ಲಿ ದ್ವಿತೀಯ ವ್ಯುತ್ಪತ್ತಿಯು ಬರುತ್ತಿದೆ. ಪ್ರಥಮವ್ಯುತ್ಪತ್ತಿಯೇ ಮುಖ್ಯವಾದ್ದರಿಂದ ಅದನ್ನೇ ಶಬ್ದಾರ್ಥವೆಂದು ಸ್ವೀಕರಿಸಬೇಕಲ್ಲವೇ?

ಈ ಪ್ರಶ್ನೆ ಅಯುಕ್ತ. ಏಕೆಂದರೆ ಪ್ರಥಮವ್ಯುತ್ಪತ್ತಿ ಇದ್ದ ಮಾತ್ರಕ್ಕೆ ಮುಖ್ಯಾರ್ಥವಾಗಬೇಕಿಲ್ಲ ಎನ್ನಲು ಅನೇಕ ಉದಾಹರಣೆಗಳಿವೆ. ಪೂರ್ವಮೀಮಾಂಸೆಯಲ್ಲಿ 'ಜ್ಯೋತಿಷ್ಟೋಮೇನ ಸರ್ವಕಾಮೋ ಯಜೇತ' ಇತ್ಯಾದಿವಾಕ್ಯಗಳನ್ನು ವಿಚಾರ ಮಾಡುವಾಗ ಪ್ರಥಮವ್ಯುತ್ಪತ್ತಿಯನ್ನು ಬಿಟ್ಟು, ದ್ವಿತೀಯವ್ಯುತ್ಪತ್ತಿಯನ್ನು ಸ್ವೀಕರಿಸುವುದು ಕಂಡಿದೆ. 'ಯಜೇತ' ಎಂಬಲ್ಲಿರುವ ಲಿಙ್ ಪ್ರತ್ಯಯಕ್ಕೆ ಲೌಕಿಕವಾದ ಜ್ಯೋತಿಷ್ಟೋಮಾದಿ ಯಾಗಗಳನ್ನು ಆಚರಿಸಬೇಕೆಂಬ ಅರ್ಥವು ತಿಳಿಯುತ್ತದೆ. ಇದು ಪ್ರಥಮವ್ಯುತ್ಪನ್ನವಾದದ್ದು. ಆದರೆ ಈ ಅರ್ಥವನ್ನು ಬಿಟ್ಟು, ಅಪೂರ್ವ ಎಂಬರ್ಥವನ್ನು ಸ್ವೀಕರಿಸಿದ್ದಾರೆ. ಅದು ಹೀಗೆ - 'ಸ್ವರ್ಗಕಾಮಃ' ಎಂಬ ಪದದಿಂದ ಸ್ವರ್ಗವನ್ನು ಅಪೇಕ್ಷಿಸುವ ಅಧಿಕಾರಿಯನ್ನು ನಿಯೋಜನೆ ಮಾಡಲಾಗಿದೆ. ಇಂತಹ 'ಸ್ವರ್ಗಕಾಮಃ' ಮೊದಲಾದ ಪದಗಳ ಸಮಭಿವ್ಯಾಹಾರದಿಂದ ಸ್ವರ್ಗಕ್ಕೂ, ಯಾಗಕ್ಕೂ ಸಾಧ್ಯಸಾಧನೆಯನ್ನು ಘಟನೆ ಮಾಡಲು ಅಪೂರ್ವವೇ ಲಿಙರ್ಥತ್ವವೆಂದು ನಿಶ್ಚಯಿಸಲಾಗಿದೆ. ಫಲಪರ್ಯಂತವಾಗಿ ಸ್ಥಾಯಿಯಾಗಿ ಇರುವುದು ಅಪೂರ್ವ ಮಾತ್ರ. ಆದ್ದರಿಂದ

ಅಪೂರ್ವ ಎಂಬ ಕಾರ್ಯವೇ ಲಿಙ್ಅರ್ಥವಾಗುತ್ತದೆ. ಲೋಕದಲ್ಲಿ ಕ್ರಿಯಾಕಾರ್ಯವು ಪ್ರಥಮವ್ಯುತ್ಪನ್ನವಾದರೂ, ಅದನ್ನು ಮುಖ್ಯಾರ್ಥವೆಂದು ಸ್ವೀಕರಿಸದೇ ಅದರಲ್ಲಿ ಲಕ್ಷಣಾವನ್ನು ಮಾಡಬೇಕು. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ.

**यथा वा ''सुखं स्वर्गपदास्पदम्'' इति श्रुतेरलौकिकसुखस्य स्वर्गपदार्थत्वे निश्चिते लोके चन्दनादौ प्रथमव्युत्पन्नेऽपि लक्षणा,**

ಮತ್ತೊಂದು ಉದಾಹರಣೆ - 'ಸುಖ' ಶಬ್ದಕ್ಕೆ ಲೋಕದಲ್ಲಿ ಸ್ರಕ್‌ಚಂದನಾದಿಗಳಲ್ಲಿ ಪ್ರಥಮವ್ಯುತ್ಪತ್ತಿಯಿದೆ. ಆದರೆ ಶ್ರುತಿಯಲ್ಲಿ ಅಲೌಕಿಕಸುಖವನ್ನು ಸ್ವರ್ಗವನ್ನು 'ಸುಖಂ ಸ್ವರ್ಗ-ಪದಾಸ್ಪದಮ್' ಎಂಬುದರಿಂದ ನಿಶ್ಚಯಿಸಲಾಗಿದೆ. ಆದ್ದರಿಂದ ಲೋಕಸಿದ್ಧವಾದ ಪ್ರಥಮವ್ಯುತ್ಪತ್ತಿಯನ್ನು ಬಿಟ್ಟು, ಅನಂತರದ ವ್ಯುತ್ಪತ್ತಿಯನ್ನು ಮುಖ್ಯವೃತ್ತಿಯೆಂದು ಸ್ವೀಕರಿಸಲಾಗಿದೆ. ಲೋಕಸಿದ್ಧವಾದ ಅರ್ಥದಲ್ಲಿ ಲಕ್ಷಣಾ ಮಾಡಲಾಗಿದೆ.

**यथा वा सिंहस्य सिंहशब्दार्थत्वे निश्चिते चित्रलिखितसिंहे प्रथमव्युत्पन्नेऽपि लक्षणा,**

ಮತ್ತೊಂದು ಉದಾಹರಣೆ - ಸಿಂಹಶಬ್ದಕ್ಕೆ ಸಿಂಹವೆಂಬರ್ಥವೇ ನಿಶ್ಚಿತವಾಗಿದೆ. ಚಿತ್ರಲಿಖಿತಸಿಂಹವನ್ನು ನೋಡಿ, 'ಸಿಂಹ' ಎಂದು ಪ್ರಯೋಗಿಸುತ್ತಾರೆ. ಆದ್ದರಿಂದ ಚಿತ್ರಲಿಖಿತಸಿಂಹದಲ್ಲಿ ಪ್ರಥಮವ್ಯುತ್ಪತ್ತಿಯಿದ್ದರೂ ಅದರಲ್ಲಿ ಲಕ್ಷಣಾ ಮಾಡಿ, ನಿಜವಾದ ಸಿಂಹದಲ್ಲಿಯೇ ಸಿಂಹಶಬ್ದದ ಮುಖ್ಯಾರ್ಥವನ್ನು ಸ್ವೀಕರಿಸುತ್ತಾರೆ.

**तयोक्तरीत्या चरमवैदिकव्युत्पत्तितो ब्रह्मणो मुख्यार्थत्वे निश्चिते प्रथमव्युत्पन्नोऽपि लौकिकार्थो न तथा मुख्यः ।**

ಮೇಲಿನ ಉದಾಹರಣೆಗಳಿಂದ 'ಜಾತಮೋತಂ ಹರೇರ್ಯಸ್ಮಾದ್' ಇತ್ಯಾದಿಯಾಗಿ ವೇದಸಿದ್ಧವಾದ ವ್ಯುತ್ಪತ್ತಿಯನ್ನು ಹೇಳಿದಂತೆ ಬ್ರಹ್ಮನಲ್ಲಿಯೇ 'ಜ್ಯೋತಿ' ಮೊದಲಾದ ಶಬ್ದಗಳು ಮುಖ್ಯಾರ್ಥವಾಗುತ್ತವೆಂದು ನಿಶ್ಚಯವಾಗುತ್ತವೆ. ಜ್ಯೋತಿಷ್ಟೋಮಾದಿ ಯಾಗದಲ್ಲಿ ಪ್ರಥಮ-ವ್ಯುತ್ಪತ್ತಿಗಳಿದ್ದರೂ ಬ್ರಹ್ಮನಲ್ಲಿ ಎಷ್ಟು ಮುಖ್ಯಾರ್ಥವಾಗಿರುತ್ತದೋ, ಅಷ್ಟೊಂದು ಲೌಕಿಕಾರ್ಥದಲ್ಲಿ ಮುಖ್ಯವಾಗಿರುವುದಿಲ್ಲವೆಂದು ತಿಳಿಯಬೇಕು.

**तदुक्तमनुव्याख्याने**

**''विपरीतप्रमाभावे पूर्वारोहस्तु कारणम् ।
सा भवेयत्र स व्यर्थः पूर्वारोहो भ्रमो यथा'' ।। इति ।**

ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ವಿಪರೀತಪ್ರಮಾಭಾವೇ ಪೂರ್ವಾರೋಹಸ್ತು ಕಾರಣಮ್ ।
ಸಾ ಭವೇದ್ಯತ್ರ ಸ ವ್ಯರ್ಥಃ ಪೂವಾರೋಹೋ ಭ್ರಮೋ ಯಥಾ ॥

ಶಬ್ದವನ್ನು ಕೇಳಿದಾಗ ಮೊದಲು ಬುದ್ಧಿಯಲ್ಲಿ ಯಾವ ಅರ್ಥವು ತಿಳಿಯುತ್ತದೋ, ಬಾಧಕವಿಲ್ಲದಿದ್ದರೆ, ಅದೇ ಅರ್ಥವನ್ನು ಸ್ವೀಕರಿಸಬೇಕು. ಒಂದುವೇಳೆ ಬಾಧಕ ಬಂದರೆ ಮೊದಲು ಬುದ್ಧಿಯಲ್ಲಿ ರೂಢವಾದ ಅರ್ಥವನ್ನು ಬಿಡಬೇಕು. ಯಾವರೀತಿಯಾಗಿ ಶುಕ್ತಿಯನ್ನು ನೋಡಿದಾಗ ರಜತ ಎಂಬ ಜ್ಞಾನವು ಮೊದಲು ಬರುತ್ತದೆ. ಬಾಧಕವಿರುವ ಕಾರಣ, ಮುಂದೆ ಅದನ್ನು ಬಿಟ್ಟು, ಶುಕ್ತಿಯೆಂಬ ಜ್ಞಾನವನ್ನೇ ಪಡೆಯುತ್ತೇವೋ ಅದರಂತೆ.

**तस्मात्-**

**अपर्यायानन्तशब्दैर्यौगिकैर्गुणवाचकैः ।**
**वाच्यत्वाद्ब्रह्मणः सिद्धा समस्तगुणपूर्णता ।। १ ।।**

ಅಪರ್ಯಾಯಾನಂತಶಬ್ದೈರ್ಯೌಗಿಕೈರ್ಗುಣವಾಚಕೈಃ ।
ವಾಚ್ಯತ್ವಾತ್ ಬ್ರಹ್ಮಣಃ ಸಿದ್ಧಾ ಸಮಸ್ತಗುಣಪೂರ್ಣತಾ ॥೧॥

ಈ ಎಲ್ಲಾ ಕಾರಣಗಳಿಂದ ಶಬ್ದಗಳೆಲ್ಲವೂ ಯೌಗಿಕವಾಗಿದ್ದು, ಗುಣವಾಚಕವೂ ಆಗಿರುವುದರಿಂದ ಅಪರ್ಯಾಯವಾದ ಅನಂತ ಶಬ್ದಗಳಿಂದ ಮಹಾವಿಷ್ಣು ಒಬ್ಬನೇ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಅವನಲ್ಲಿ ಸಮಸ್ತಗುಣಪರಿಪೂರ್ಣತ್ವವು ಸಿದ್ಧವಾಯಿತು.[೧]

**प्रकाशः —**

**पादचतुष्टयार्थं सङ्गृह्य बुद्ध्यारोहार्थमाह – अत्र चेति ।। पादेष्ववान्तरप्रमेयमप्याह – तत्रापीति ।।**

ವಿವರಣೆ - ಇಲ್ಲಿಯತನಕ ಪರರ ಅಧಿಕರಣಶರೀರವನ್ನು ಅನುವಾದ ಮಾಡಿ, ನಿರಾಕರಿಸಿದ್ದಾಯಿತು. ಪ್ರಕೃತ ಅಧ್ಯಾಯವು ಮುಗಿಯುತ್ತಿರುವುದರಿಂದ ಇಲ್ಲಿಯತನಕ ಪ್ರಸಕ್ತವಾದ ನಾಲ್ಕು ಪಾದಗಳ ಪ್ರಮೇಯವನ್ನು ಸಂಗ್ರಹಿಸಿ, ಮತ್ತೊಮ್ಮೆ ಬುದ್ಧಿಯಲ್ಲಿ ಆರೂಢ ಮಾಡುತ್ತಿದ್ದಾರೆ 'ಅತ್ರ ಚ' ಇತ್ಯಾದಿ

(೧) ಈ ಶ್ಲೋಕದಲ್ಲಿ ಸೆರೆಹಿಡಿದ ಅದ್ಭುತ ತತ್ವವನ್ನು ಗ್ರಂಥಕಾರರಾದ ಶ್ರೀವ್ಯಾಸತೀರ್ಥರು ಭಗವಂತನ ಪಾದಾರವಿಂದಗಳಿಗೆ ಸಮರ್ಪಿಸಿದ್ದಾರೆ. ವ್ಯಾಸತೀರ್ಥರು ಮಾಡಿದ ಈ ಸೇವೆ ಕಲ್ಪನಾತೀತ. ಮತ್ತು ಅನ್ಯಾದೃಶ್ಯ. ಇಂತಹ ವ್ಯಾಸತೀರ್ಥರಿಗೆ ಅನಂತ ಅನಂತ ನಮಸ್ಕಾರಗಳು.

ಗ್ರಂಥದಿಂದ. ಪ್ರತಿಯೊಂದು ಪಾದಗಳಲ್ಲಿರುವ ಪಾದಾಂತರಪ್ರಮೇಯಭಾವವನ್ನು 'ತತ್ರಾಪಿ' ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ.

**प्रकाशः – वाक्यैकवाक्यतेति ।।** यथा प्रयाजादिवाक्यानां क्रत्वपेक्षितोपकाराधायकप्रयाजादिबोधकतया क्रतुवाक्यैकवाक्यता तथा ''विविदिषन्ति यज्ञेन दानेन'' इत्यादेरन्तःकरणशुद्धिद्वारा ब्रह्मज्ञानाङ्गकर्मादिबोधकतया ब्रह्मपरवाक्यैकवाक्यतारूपेत्यर्थः । विवृतश्चैतत्प्रकारस्तत्वनिर्णयटीका(कां) सिद्धार्थेषु व्युत्पत्त्युक्तिप्रस्तावे।

ಪೂರ್ವಮೀಮಾಂಸೆಯಲ್ಲಿ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬ ವಾಕ್ಯವನ್ನು ವಿಚಾರ ಮಾಡಲಾಗಿದೆ. ಆವಾಗ 'ಇಡೋ ಯಜತಿ', 'ಸಮಿಧೋ ಯಜತಿ', 'ಬರ್ಹಿರ್ಯಜತಿ' ಇತ್ಯಾದಿ ಪಂಚಪ್ರಯಾಜಾದಿವಾಕ್ಯಗಳಿಗೆ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬ ಮಹಾವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಸಮರ್ಥಿಸಲಾಗಿದೆ. ದರ್ಶಪೂರ್ಣಮಾಸಯಾಗವೆಂಬ ಪ್ರಧಾನಕರ್ಮವನ್ನು ಬೋಧನೆ ಮಾಡುತ್ತಿರುವುದರಿಂದ, 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬುದು ಪ್ರಧಾನವಾಕ್ಯ ಎನಿಸುತ್ತದೆ. ಅವುಗಳಿಗೆ ಅಂಗಭೂತವಾದ ಯಾಗಗಳನ್ನು ಪಂಚಪ್ರಯಾಜಾದಿ ವಾಕ್ಯಗಳು ವಿಧಿಸುತ್ತಿರುವುದರಿಂದ, ಏಕವಾಕ್ಯತ್ವವನ್ನು ಹೊಂದಿವೆ. ಪ್ರಧಾನಯಾಗವು ಮುಖ್ಯವಾದ ಅಪೂರ್ವವನ್ನು ಹುಟ್ಟಿಸುತ್ತದೆ. ಪಂಚಪ್ರಯಾಜಾದಿ ವಾಕ್ಯಗಳು ಅಮುಖ್ಯವಾದ ಅಪೂರ್ವವನ್ನು ಹುಟ್ಟಿಸುತ್ತದೆ. ದರ್ಶಪೂರ್ಣಮಾಸಯಾಗದಿಂದ ಪ್ರಧಾನಯಾಗವು ಮೊದಲು ಪರಮ ಅಪೂರ್ವವನ್ನು ಹುಟ್ಟಿಸಬೇಕೆಂದರೆ ಅದಕ್ಕೆ ಪಂಚಪ್ರಯಾಜಗಳು ಅಮುಖ್ಯವಾದ ಅಪೂರ್ವವನ್ನು ಹುಟ್ಟಿಸುವ ಮೂಲಕ ಉಪಕಾರಕವಾಗಬೇಕು. ಕ್ರತ್ವಪೇಕ್ಷಿತವಾದ ಫಲೋಪಕಾರಕ್ಕೆ ಆದಾಯಕವಾದ ಪಂಚಪ್ರಯಾಜವೆಂಬ ಕರ್ಮಕ್ಕೆ ಬೋಧಕವಾಗುವ ಮೂಲಕ 'ಇಡೋ ಯಜತಿ' ಇತ್ಯಾದಿ ವಾಕ್ಯಗಳಿಗೆ 'ದರ್ಶಪೂರ್ಣಮಾಸಾಭ್ಯಾಂ' ಇತ್ಯಾದಿ ಮಹಾವಾಕ್ಯದ ಜೊತೆಗೆ ಏಕವಾಕ್ಯತ್ವವು ಇರುತ್ತದೆ.

ಮತ್ತು 'ವಿವಿದಿಷಂತಿ ಯಜ್ಞೇನ ದಾನೇನ' ಇತ್ಯಾದಿಯಾಗಿ, ಯಜ್ಞ, ದಾನ ಮೊದಲಾದ ಕರ್ಮಗಳನ್ನು ಈ ವಾಕ್ಯವು ವಿಧಾನ ಮಾಡುತ್ತಿದೆ. ಈ ಕರ್ಮಗಳೆಲ್ಲವೂ ಬ್ರಹ್ಮಜ್ಞಾನಕ್ಕೆ ಅಂಗಭೂತವಾಗಿವೆ. ಅಂದರೆ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಬ್ರಹ್ಮಜ್ಞಾನಬೋಧಕವಾದ ವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಪಡೆಯುತ್ತವೆ. ಆದ್ದರಿಂದ ಅವಾಂತರವಾಕ್ಯಗಳು ಮಹಾವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಪಡೆಯುವುದು ಅನೇಕ ಕಡೆ ಕಂಡಿದೆ. ಈ ಏಕವಾಕ್ಯತ್ವ ಪ್ರಕಾರವನ್ನು ತತ್ವನಿರ್ಣಯದಲ್ಲಿ ಸಿದ್ಧಾರ್ಥೇ ವ್ಯುತ್ಪತ್ತಿ ಪ್ರಕರಣದಲ್ಲಿ ಇನ್ನು ಹೆಚ್ಚು ಸ್ಪಷ್ಟಪಡಿಸಲಾಗಿದೆ. ಈ ಉದಾಹರಣೆಯಂತೆ ಪ್ರಕೃತ ಬ್ರಹ್ಮಪರವಾದ ವಾಕ್ಯಗಳ ಜೊತೆಗೆ ಉಳಿದ ವಾಕ್ಯಗಳು ಏಕವಾಕ್ಯತ್ವವನ್ನು ಪಡೆಯುತ್ತವೆ ಎಂಬುದನ್ನು ತಿಳಿಯಬೇಕು.

**प्रकाशः –** ननु ब्रह्मपरत्वं मुख्यवृत्त्याऽथामुख्यवृत्त्या । नाद्यः । अन्यत्र गृहीतप्रथमव्युत्पत्तेर्बलवत्तया त्यागायोगात् । नान्त्यः । ''पूर्णाशेषगुणात्मक''

इत्यनुव्याख्यानोपसंहृताध्यायार्थानुपपत्तिप्रसङ्गादित्यत आद्यपक्षमुपेत्य तत्रोक्तदोषं दृष्टान्तोक्त्योद्धरति ।। एवञ्चेति ।।

ವಾಕ್ಯಗಳಿಗೆ ಬ್ರಹ್ಮಪರತ್ವವನ್ನು ಮುಖ್ಯವೃತ್ತಿಯಿಂದ ಹೇಳುತ್ತೀರೋ, ಅಮುಖ್ಯವೃತ್ತಿಯಿಂದ ಹೇಳುತ್ತೀರೋ? ಮೊದಲಿನ ಪಕ್ಷ ಸರಿಯಿಲ್ಲ. ಏಕೆಂದರೆ ಎಲ್ಲಾ ವಾಕ್ಯಗಳು ಲೋಕದಲ್ಲಿ ಪ್ರಥಮವ್ಯುತ್ಪತ್ತಿಯನ್ನು ಪಡೆದಿರುತ್ತವೆ. ವಿನಾಕಾರಣ ಪ್ರಥಮವ್ಯುತ್ಪತ್ತಿಯನ್ನು ಬಿಟ್ಟು, ಬ್ರಹ್ಮನಲ್ಲಿ ದ್ವಿತೀಯವ್ಯುತ್ಪತ್ತಿಯನ್ನು ಒಪ್ಪುವುದು ಸರಿಯಲ್ಲ. ಅಮುಖ್ಯವೃತ್ತಿಯಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತವೆಂಬ ಎರಡನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ 'ಪೂರ್ಣಾಶೇಷಗುಣಾತ್ಮಕಃ' ಎಂಬುದಾಗಿ ಅನುವ್ಯಾಖ್ಯಾನದ ಅಧ್ಯಾಯದ ಉಪಸಂಹಾರದಲ್ಲಿ ಭಗವಂತನು ಪೂರ್ಣವಾದ ಅಶೇಷಗುಣಸ್ವರೂಪನಾಗಿದ್ದಾನೆಂದು ಸಮರ್ಥಿಸಿದ್ದಾರೆ. ಅಮುಖ್ಯವೃತ್ತಿಯಿಂದ ಪರಮಾತ್ಮನು ಪ್ರತಿಪಾದ್ಯನಾದಲ್ಲಿ, ಮುಖ್ಯವಾದ ಪೂರ್ಣವಾದ ಅಶೇಷಗುಣಾತ್ಮಕತ್ವವೇ ಭಂಗವಾಗುವ ಪ್ರಸಂಗಬರುತ್ತದೆ. ಆದ್ದರಿಂದ ಬ್ರಹ್ಮಪರತ್ವವನ್ನು ಶಬ್ದಗಳಿಗೆ ಹೇಗೆ ಸಮರ್ಥಿಸುತ್ತೀರಿ?

ಈ ಎರಡು ಪಕ್ಷಗಳಲ್ಲಿ ಮೊದಲನೆಯ ಪಕ್ಷವನ್ನೇ ಅಂಗೀಕರಿಸಿ, ಅದರಲ್ಲಿ ಬರುವ ದೋಷವನ್ನು ದೃಷ್ಟಾಂತವನ್ನು ಹೇಳುವ ಮೂಲಕ ಪರಿಹರಿಸುತ್ತಿದ್ದಾರೆ 'ಏವಂಚ' ಇತ್ಯಾದಿ ಗ್ರಂಥದಿಂದ.

**प्रकाशः** – प्राभाकरमते हि ''स्वर्गकामो यजेत'' इत्यादौ स्वर्गकामं नियोज्यं प्रति लिङ्शब्देन क्रिया कार्यतया बोधयितुमशक्या । कामी हि काम्यादन्यत्काम्या व्यवहितं साधनमेव कार्यतयाऽवैति । नतु व्यवहितसाधनम् । क्रिया चास्थायित्वेन काम्यव्यवहितत्वान्न कामिनियोज्यान्वययोग्येति फलपर्यंतस्थाय्यपूर्वमेव लिङा कार्यत्वेन बोध्यमिति स्थायिकार्यस्य लिङर्थत्वे निश्चितेऽपि चैत्र जलमाहरेत्यादौ लौकिक आहरणादिक्रियारूपकार्ये प्रथमतो गृहीतामपि व्युत्पत्तिं त्यक्त्वा लिङस्तत्र लक्षणोपेता ।

ಲಿಙ್‌ಪ್ರತ್ಯಯಕ್ಕೆ ಅಪೂರ್ವ ಎಂಬರ್ಥವನ್ನೇ ಒಪ್ಪಬೇಕೆಂದು ಪ್ರಾಭಾಕರರು ಹೀಗೆ ಸಮರ್ಥಿಸುತ್ತಾರೆ - 'ಸ್ವರ್ಗಕಾಮೋ ಯಜೇತ' ಎಂಬ ವಾಕ್ಯದಲ್ಲಿ ಸ್ವರ್ಗವನ್ನು ಕಾಮಿಸುವ ನಿಯೋಜ್ಯನಿಗೆ ಲಿಙ್‌ಪ್ರತ್ಯಯವು ಕಾರ್ಯತ್ವವನ್ನು ಬೋಧಿಸುತ್ತದೆ. ಯಜಧಾತುವು ಯಾಗಕ್ರಿಯೆಯನ್ನು ಹೇಳುತ್ತದೆ. ಧಾತು ಹಾಗೂ ಲಿಙ್ ಪ್ರತ್ಯಯ ಇವುಗಳ ಸಮಭಿವ್ಯಹಾರದಿಂದ ಯಾಗಕ್ಕೆ ಕಾರ್ಯತ್ವವನ್ನು ಹೇಳಬೇಕು. ಹೀಗೆ ಹೇಳಿದರೆ, ವೇದವಾಕ್ಯಕ್ಕೆ ಅಪ್ರಾಮಾಣ್ಯದೋಷ ಬರುತ್ತದೆ. ಏಕೆಂದರೆ ಯಾರು ಯಾವ ಫಲವನ್ನು ಅಪೇಕ್ಷಿಸುತ್ತಾನೋ, ಅವನು ತನ್ನ ಕಾಮನೆಗೆ ಅವ್ಯವಹಿತವಾದ ಸಾಧನವನ್ನೇ ಕಾರ್ಯವೆಂದು ತಿಳಿದು ಅದರಲ್ಲೇ ಪ್ರವೃತ್ತಿ ಮಾಡುತ್ತಾನೆ. ವ್ಯವಹಿತಸಾಧನವನ್ನು ಕಾರ್ಯತ್ವೇನ ಅವನು ತಿಳಿಯುವುದೇ ಇಲ್ಲ. ಉದಾಹರಣೆ - ಯಾರಿಗೆ ಹಸಿವಾಗಿರುತ್ತದೋ, ಅವನು ತೃಪ್ತಿಕಾಮನೆಯಿಂದ ಭೋಜನವನ್ನೇ ಕಾರ್ಯವೆಂದು ತಿಳಿಯುತ್ತಾನೆ. ಹೊರತು, ಪಾಕಕ್ರಿಯೆಯನ್ನು ಕಾರ್ಯವೆಂದು ತಿಳಿಯುವುದಿಲ್ಲ. ಆದ್ದರಿಂದ ಸ್ಪಷ್ಟವಾದ ಅಭಿಪ್ರಾಯವನ್ನು

ಹೀಗೆ ತಿಳಿಯಬೇಕು - ''ಯಾವ ಫಲವನ್ನು ಯಾರೂ ಕಾಮನೆ ಮಾಡುತ್ತಾನೋ, ಅವನು ಅದರ ಅವ್ಯವಹಿತಸಾಧನವನ್ನೇ ಕಾರ್ಯತ್ವೇನ ತಿಳಿಯುತ್ತಾನೆ'' ಎಂದು. ಒಂದುವೇಳೆ ವ್ಯವಹಿತಸಾಧನವನ್ನು ಕಾರ್ಯತ್ವೇನ ತಿಳಿದರೆ ಫಲಕಾಮಿತ್ವವು ಪ್ರಯೋಜಕವೇ ಆಗುವುದಿಲ್ಲ. ಫಲಕ್ಕೆ ಅವ್ಯವಹಿತಸಾಧನವನ್ನು ಕಾರ್ಯತ್ವೇನ ತಿಳಿಯುವಿಕೆಯೇ ನಿಜವಾದ ಪ್ರಯೋಜನ. ಪ್ರಕೃತ 'ಸ್ವರ್ಗಕಾಮೋ ಯಜೇತ' ಎಂಬ ವಾಕ್ಯವನ್ನು ಕೇಳಿದಾಗ, ಸ್ವರ್ಗವನ್ನು ಬಯಸುವವನು ಸ್ವರ್ಗಕ್ಕೆ ಅವ್ಯವಹಿತವಾದ ಅಪೂರ್ವವನ್ನೇ ಕಾರ್ಯತ್ವೇನ ಸಾಧನವನ್ನಾಗಿ ತಿಳಿಯುತ್ತಾನೆ. ಹೊರತು, ಯಾಗವನ್ನು ಕಾರ್ಯವೆಂದು ತಿಳಿಯುವುದಿಲ್ಲ. ಏಕೆಂದರೆ ಯಾಗಕ್ರಿಯೆಯು ಕ್ಷಣಿಕವಾಗಿದೆ. ಅಂದರೆ ಯಾಗವು ಈಗ ನಡೆಯುತ್ತದೆ. ಸ್ವರ್ಗವು ಯಾವತ್ತೋ ಒಂದುದಿವಸ ಲಭಿಸುತ್ತದೆ. ಈಗ ನಡೆದ ಯಾಗವು ಸ್ವರ್ಗಕ್ಕೆ ಸಾಧನವಾಗುತ್ತದೆ. ಆದ್ದರಿಂದ ಮಧ್ಯದಲ್ಲಿ ಚಾಯೆಯಾದ ಅಪೂರ್ವವನ್ನು ಒಪ್ಪಬೇಕು. ಯಾಗಕ್ರಿಯೆಯು ಈಗ ನಾಶವಾದರೂ ಅದರಿಂದ ಒಂದು ಅಪೂರ್ವವು ಹುಟ್ಟುತ್ತದೆ. ಆ ಅಪೂರ್ವವು ಸ್ವರ್ಗಪರ್ಯಂತವಾಗಿ ಸ್ಥಿರವಾಗಿರುತ್ತದೆ. ಆದ್ದರಿಂದ ಇಂತಹ ಅಪೂರ್ವವನ್ನೇ ಲಿಙ್ಪ್ರತ್ಯಯವು ಕಾರ್ಯತ್ವೇನ ಬೋಧಿಸುತ್ತದೆ. ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಗೂ 'ಯಜೇತ' ಎಂಬಲ್ಲಿರುವ ಲಿಙ್ಪ್ರತ್ಯಯದಿಂದ ಯಾಗವೇ ಸ್ವರ್ಗಸಾಧನವೆಂದು ಪ್ರಥಮವ್ಯುತ್ಪತ್ತಿ ಬರುತ್ತದೆ. ಆದರೆ ಯಾಗಕ್ರಿಯೆ ಕ್ಷಣಿಕವೆಂಬ ಭಾವನೆಯಿಂದ ಅಪೂರ್ವದಲ್ಲಿ ದ್ವಿತೀಯವ್ಯುತ್ಪತ್ತಿಯಾಗಿದ್ದರೂ ಲಕ್ಷಣಾವೃತ್ತಿಯನ್ನೇ ಸ್ವೀಕರಿಸಬೇಕು. ಶ್ರುತಿಯಲ್ಲಿ ಹೀಗೆ ಲಿಙರ್ಥಕ್ಕೆ ಅಪೂರ್ವದಲ್ಲಿ ವ್ಯುತ್ಪತ್ತಿಯನ್ನು ತಿಳಿದ ಮೇಲೆ 'ಚೈತ್ರ ಜಲಮಾಹರ' ಇತ್ಯಾದಿ ಲೌಕಿಕಪ್ರಯೋಗದಲ್ಲಿಯೂ ಪ್ರಾರಂಭದಲ್ಲಿ ಜಲಾಹರಣ-ಕ್ರಿಯಾರೂಪವಾದ ಕಾರ್ಯದಲ್ಲಿ ಪ್ರಥಮವ್ಯುತ್ಪತ್ತಿಯು ಬರುತ್ತದೆ. ಆದರೆ ಅದನ್ನು ಬಿಟ್ಟು, ಅಪೂರ್ವವದಲ್ಲಿ ಲಕ್ಷಣಾ ಮಾಡಬೇಕು. ದ್ವಿತೀಯವ್ಯುತ್ಪತ್ತಿಯಾಗಿದ್ದರೂ ಅಪೂರ್ವವನ್ನೇ ಲಿಙರ್ಥವೆಂದು ತಿಳಿಯಬೇಕು.

ಹೀಗೆ ಪ್ರಾಭಾಕರರು ಲಿಙ್, ಲೋಟ್‌ತವ್ಯ ಪ್ರತ್ಯಯಗಳಿಂದ ಯಾಗ, ಆಹರಣ ಮೊದಲಾದ ಕ್ರಿಯೆಗಳಲ್ಲಿ ಪ್ರಥಮವ್ಯುತ್ಪತ್ತಿಯಿದ್ದರೂ ಅದನ್ನು ಬಿಟ್ಟು, ಲಕ್ಷಣಾವೃತ್ತಿಯಿಂದ ತಿಳಿಯುವ ದ್ವಿತೀಯವ್ಯುತ್ಪತ್ತಿಯನ್ನೇ ಸ್ವೀಕರಿಸುತ್ತಾರೆ. ಅದರಂತೆ ಪ್ರಕೃತ ಲೌಕಿಕಪದಾರ್ಥಗಳಲ್ಲಿ ಸಕಲ ಶಬ್ದಾರ್ಥಗಳು ಪ್ರಥಮವ್ಯುತ್ಪತ್ತಿಯನ್ನು ಪಡೆದಿದ್ದರೂ ದ್ವಿತೀಯ ವ್ಯುತ್ಪತ್ತಿಯಿಂದ ತಿಳಿಯುವ ಬ್ರಹ್ಮನೆಂಬ ಅರ್ಥವನ್ನು ಸ್ವೀಕರಿಸಬಹುದು.

**प्रकाशः** – भट्टमते चाह – **यथा वेति ।।**

यत्र दुःखेन सम्भिन्नं न च ग्रस्तमनन्तरम् ।
अभिलाषोपनीतं च सुखं स्वर्गपदास्पदम् ।। इति श्रुतेरित्यर्थः ।

यथा वा सिंहस्येति लौकिको दृष्टान्तः ।।

'ಯಥಾ ವಾ' ಎಂಬ ವಾಕ್ಯದಿಂದ ಭಾಟ್ಟಮತವನ್ನು ಉದಾಹರಿಸಿದ್ದಾರೆ. ಸ್ವರ್ಗಪದಕ್ಕೆ ಸ್ರಕ್-ಚಂದನಾದಿ ಲೌಕಿಕಸುಖಸಾಮಗ್ರಿಗಳೆಂಬ ಅರ್ಥದಲ್ಲಿ ಪ್ರಥಮವ್ಯುತ್ಪತ್ತಿಯಿದ್ದರೂ ಶಾಶ್ವತಸುಖವೆಂಬ ದ್ವಿತೀಯ-ವ್ಯುತ್ಪತ್ತಿಯನ್ನೇ ಸ್ವೀಕರಿಸಬೇಕೆಂದು ಭಾಟ್ಟರು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

ಯನ್ನ ದುಃಖೇನ ಸಂಭಿನ್ನಂ ನ ಚ ಗ್ರಸ್ತಮನಂತರಮ್ ।
ಅಭಿಲಾಷೋಪನೀತಂ ಚ ಸುಖಂ ಸ್ವರ್ಗಪದಾಸ್ಪದಮ್ ॥

ಯಾವ ಸುಖವು ದುಃಖದಿಂದ ಮಿಶ್ರಣವಾಗಿರುವುದಿಲ್ಲವೋ, ಮತ್ತು ಆ ಸುಖವು ಮುಂದೆ ನಷ್ಟವಾಗುವುದಿಲ್ಲವೋ, ಶಾಶ್ವತವಾಗಿರುತ್ತದೋ, ಕೇವಲ ಇಚ್ಛಾಮಾತ್ರದಿಂದ ಹೆಚ್ಚುತ್ತಿರುತ್ತದೋ, ಅಂತಹ ಸುಖವೇ ಸ್ವರ್ಗ ಎನಿಸುತ್ತದೆ. (ನಾವು ಹೇಳುವ ಮೋಕ್ಷವನ್ನೇ ಭಾಟ್ಟರು ಸ್ವರ್ಗ ಎನ್ನುತ್ತಾರೆ.) 'ಯಥಾ ವಾ ಸಿಂಹಸ್ಯ' ಎಂಬುದು ಲೌಕಿಕ ದೃಷ್ಟಾಂತವೆಂದು ತಿಳಿಯಬೇಕು.

**प्रकाशः – न तथेति** ।। परममुख्यः । समाकर्षादित्यत्र तथा समर्थनादिति भावः ।। **तदुक्तमिति** ।। चतुर्थपादे ।

ಗ್ರಂಥದಲ್ಲಿ 'ನ ತಥಾ ಮುಖ್ಯಃ' ಎಂದು ಹೇಳಿದ್ದಾರೆ. ಅಂದರೆ ಬ್ರಹ್ಮನಲ್ಲಿ ಸಕಲಶಬ್ದಗಳು ಪರಮಮುಖ್ಯವೃತ್ತಿಯಿಂದ ಇರುತ್ತವೆ. ಲೌಕಿಕಪದಾರ್ಥಗಳಲ್ಲಿ ಹಾಗೇ ಪರಮಮುಖ್ಯವೃತ್ತಿಯಿಂದ ಇರುವುದಿಲ್ಲ ಎಂದರ್ಥ. ಹೊರತಾಗಿ, ಮುಖ್ಯವೃತ್ತಿಯಿಂದಲೇ ಇರುವುದಿಲ್ಲ ಎಂಬರ್ಥವನ್ನು ತಿಳಿಯಬೇಕು. ಏಕೆಂದರೆ ಸಮಾಕರ್ಷಾಧಿಕರಣದಲ್ಲಿ ಲೌಕಿಕಪದಾರ್ಥಗಳಲ್ಲಿ ಶಬ್ದಗಳು ಮುಖ್ಯವೃತ್ತಿಯಿಂದ ಇರುತ್ತವೆ. ಪರಮಮುಖ್ಯವೃತ್ತಿಯಿಂದ ಬ್ರಹ್ಮನಲ್ಲಿರುತ್ತವೆ ಎಂದು ಸಮರ್ಥಿಸಿದ್ದಾರೆ. 'ತದುಕ್ತಮ್' ಎಂದರೆ ಚತುರ್ಥಪಾದದ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ ಎಂದರ್ಥ.

**प्रकाशः – पूर्वं** बुद्ध्युपारूढत्वं बाधकाभावे स्वीकारस्य कारणम् । यत्र सा विपरीतप्रमा भवेत् तत्र पूर्वारोहो व्यर्थः । स्वीकारे कारणं न भवतीत्यर्थः ।। **भ्रमो यथेति** ।। प्रसिद्धशुक्तिकारजतभ्रमो यथेत्यर्थः । पादार्थानभिधायाध्यायार्थमुपसंहरति ।। **तस्मादिति** ।। **यौगिकैरिति** ।। रूढत्वे गुणासिद्धेरिति भावः ।

ಅನುವ್ಯಾಖ್ಯಾನದ ಶ್ಲೋಕಕ್ಕೆ ಹೀಗೆ ಅರ್ಥ - ಪೂರ್ವಾರೋಹಃ = ಮೊದಲು ಬುದ್ಧಿಯಲ್ಲಿ ಆರೂಢವಾದದ್ದು, ವಿಪರೀತಪ್ರಮಾಭಾವೇ = ಯಾವುದೇ ಬಾಧಕವಿಲ್ಲದಿದ್ದರೆ, ಕಾರಣಂ = ಸ್ವೀಕಾರಕ್ಕೆ ಕಾರಣವಾಗುತ್ತದೆ. ಯತ್ರ = ಯಾವಾಗ, ಸಾ = ಬಾಧಕಜ್ಞಾನವು ಬಂದರೆ, ತತ್ರ = ಆವಾಗ, ಪೂರ್ವಾರೋಹಃ = ಮೊದಲು ಬುದ್ಧಿಯಲ್ಲಿ ಆರೂಢವಾದದ್ದು, ವ್ಯರ್ಥಃ = ಸ್ವೀಕಾರಕ್ಕೆ ಕಾರಣವಾಗುವುದಿಲ್ಲ. ಬ್ರಹ್ಮೋ ಯಥಾ = ಪ್ರಸಿದ್ಧವಾದ ಶುಕ್ತಿರಜತಭ್ರಾಂತಿಯಂತೆ.

ಪಾದಾರ್ಥವನ್ನು ಸಮರ್ಥಿಸಿ ಅಧ್ಯಾಯಾರ್ಥವನ್ನು ಉಪಸಂಹಾರ ಮಾಡುತ್ತಿದ್ದಾರೆ 'ತಸ್ಮಾತ್' ಇತ್ಯಾದಿಯಾಗಿ. 'ಯೌಗಿಕೈಃ' ಎಂದು ಹೇಳಿದ್ದರಿಂದ, ಪ್ರತಿಯೊಂದು ಶಬ್ದಗಳು ಯೌಗಿಕವಾಗಿಯೇ ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆ. ರೂಢವಾದ ಶಬ್ದಗಳ ಸಮನ್ವಯದಿಂದ ಪರಮಾತ್ಮನಲ್ಲಿ ಗುಣಗಳು ಸಿದ್ಧಿಸುವುದಿಲ್ಲ ಎಂಬುದಾಗಿ ಸೂಚಿಸಿದ್ದಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम् – ॐ एतेन सर्वे व्याख्याता व्याख्याताः ॐ ।।** ननु समयपादे समयप्राप्तानां कारणवादानां निरासः अत्र श्रुतिप्राप्तानामिति न पौनरुक्तयमिति शङ्क्यते ।। **तेषामिति ।। अनेवं विधस्येति ।।** अध्यायादावनुपक्रान्तस्य मध्ये चानुक्तस्येत्यर्थः । भाष्यटीकयोरुक्तमभ्यासस्याध्यायावधारणार्थत्वमुपपादयितुं परोक्तं पक्षमनूद्य दूषयति ।। **यच्चेत्यादिना ।। अन्ययेति ।।** प्रमेयवैजात्यस्याध्यायभेद-ज्ञापकाभावे । सः अभ्यासः ।। **द्वितीयाध्यायानामिति ।।** उपनिषदीति शेषः । ननु चाभ्यासोऽध्यायसमाप्तिप्रदर्शनार्थ एवास्त्येयः । न चात्रोक्तं प्रमेयवैजात्यादेवाध्याय-भेदः सुज्ञान इतीति । तदनुपपन्नमिति भावेन परेषां मतमुत्थापयति ।। **यच्चेति ।।** अध्यायभेदो ज्ञेय इति ।। न च तदर्थपरिसमाप्तिरिति ज्ञायत इति भावः ।। **पादचतुष्टयेति ।।** त्वद्रीत्येति शेषः । अन्यथा वाक्यसमाप्त्यैव वाक्यार्थसमाप्त्यवगमे। उपसंहारव्याजेन पादचतुष्टयार्थं सङ्गृह्याह **– अत्र चेति ।। पूर्वं** प्रतिपादितमप्यन्यत्र-प्रसिद्धोभयत्र प्रसिद्धान्यत्रैवप्रसिद्धानां भेदं शिष्यावधानाय पुनः स्मारयति ।। **तत्रापीति** ।। नन्विन्द्रादि शब्दानामन्यत्र व्युत्पत्तेर्गृहीतत्वाद्ब्रह्मश्रुतितल्लिङ्गतत् प्रकरणादिभिर्ब्रह्मपरतायाः **प्रथमं** गृहीतव्युत्पत्तित्यागः स्यात् । स चायुक्तः । ततश्च कथं ब्रह्मपरतेत्यत आह – **एवञ्चेति ।।** कामी चासौ नियोज्यश्चेति विग्रहः – **प्रथमव्युत्पन्न इति ।।** क्रियार्थ इति योज्यम् । उत्तर ग्रन्थोपक्षेपायाह – **तस्मादिति।।**




ನಾಮಾನಿ ಲಿಂಗಾನ್ಯಪಿ ಚೇತರತ್ರ ಪ್ರಸಿದ್ಧಿಯುಕ್ತಾನಿ ತಥೋಭಯತ್ರ ।
ಪ್ರಸಿದ್ಧಿಭಾಂಜ್ಯನ್ಯಪದಾರ್ಥ ಏವ ಪ್ರಸಿದ್ಧಿಯುಕ್ತಾನಿ ಸಮನ್ವಿತಾನಿ ।

ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಪ್ರಥಮಪಾದದಲ್ಲಿ, ಇತರತ್ರ ಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳನ್ನು ದ್ವಿತೀಯಪಾದದಲ್ಲಿ, ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳನ್ನು ತೃತೀಯಪಾದದಲ್ಲಿ, ಅನ್ಯಪದಾರ್ಥದಲ್ಲೇ ಪ್ರಸಿದ್ಧವಾದ ಶಬ್ದಗಳನ್ನು ನಾಲ್ಕನೆಯ ಪಾದಗಳಲ್ಲಿ ಸಮನ್ವಯ ಮಾಡಲಾಗಿದೆ.

ಪರಿಪೂರ್ಣಚಂದ್ರಿಕಾ

ಅನ್ಯತ್ರಪ್ರಸಿದ್ಧಿ ಮತ್ತು ಉಭಯತ್ರಪ್ರಸಿದ್ಧಿ, ಅನ್ಯತ್ರೈವಪ್ರಸಿದ್ಧಿ ಈ ಮೂರು ಬಗೆಯ ಶಬ್ದಗಳಲ್ಲಿ ಇರುವ ವ್ಯತ್ಯಾಸ ಹೀಗಿದೆ - ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ವಾಕ್ಯವು ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವನ್ನು ಹೊಂದಿರುವಾಗಲೇ 'ಬ್ರಹ್ಮಣ್ಯಪಿ ತದಧೀನತ್ವಾತ್' ಎಂಬ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಸಮನ್ವಯವನ್ನು ಮಾಡಲಾಗಿದೆ. ಅನ್ಯತ್ರೈವಪ್ರಸಿದ್ಧದಲ್ಲಿ ಮಾಡುವ ಸಮನ್ವಯವು ಎರಡು ಬಗೆ - ಒಂದು ತದಧೀನತ್ವ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಮತ್ತೊಂದು 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ, ಶ್ರುತಿಯಲ್ಲಿ ಹೇಳಿದ ಯೋಗದಿಂದಲೇ ಬ್ರಹ್ಮನಲ್ಲಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಏನೇ ಆದರೂ ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವಿದ್ದೇ ಇರುತ್ತದೆಂಬುದನ್ನು ಗಮನಿಸಬೇಕು. ಮತ್ತು ಅನ್ಯತ್ರೈವಪ್ರಸಿದ್ಧವಾದ ಪಾದದಲ್ಲಿ ವಾಕ್ಯಸಮನ್ವಯವನ್ನೂ ಕೂಡ ಮಾಡಲಾಗಿದೆ. ಯಾವ ವಾಕ್ಯವು ಬ್ರಹ್ಮಪರವೆಂದು ನಿಶ್ಚಯವಾಗಿದೆಯೋ, ಅವುಗಳ ಮಧ್ಯದಲ್ಲಿರುವಂತಹ ಮತ್ತೊಂದು ವಾಕ್ಯವೂ ಕೂಡ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆಂಬುದು ವಾಕ್ಯಸಮನ್ವಯದ ಕ್ರಮ. ಹೀಗೆ ಪದಸಮನ್ವಯ ಹಾಗೂ ವಾಕ್ಯಸಮನ್ವಯಗಳೆರಡನ್ನೂ ಈ ಪಾದದಲ್ಲಿ ಮಾಡಿದ್ದಾರೆ.

ಉಭಯತ್ರಪ್ರಸಿದ್ಧವಾದ ಶಬ್ದಗಳಲ್ಲಿಯೂ ಯಾವ ವಿಷಯವಾಕ್ಯವನ್ನು ತಿಳಿದುಕೊಳ್ಳುತ್ತಾರೋ, ಆ ವಾಕ್ಯಗಳಿಗೆ ಅನ್ಯಪರತ್ವವನ್ನು ಸರ್ವಥಾ ಒಪ್ಪದೇ ಕೇವಲ ಬ್ರಹ್ಮನಲ್ಲಿ ಮಾತ್ರ ಸಮನ್ವಯ ಮಾಡುವುದೇ ಉದ್ದೇಶವಾಗಿರುತ್ತದೆ.

ಆದರಲ್ಲಿಯೂ ಒಂದು ಅವಾಂತರ ವೈಲಕ್ಷಣ್ಯವಿದೆ. ಉಭಯತ್ರಪ್ರಸಿದ್ಧವಾದ ಒಂದು ವಾಕ್ಯವನ್ನು ಉದಾಹರಿಸಿದರೆ, ಪೂರ್ವಪಕ್ಷಿಯು ವಾಕ್ಯಾಂತರದಲ್ಲಿ ಬ್ರಹ್ಮಪರತ್ವವನ್ನು ಒಪ್ಪಿ, ತಾನು ಉದಾಹರಿಸಿದ ವಾಕ್ಯದಲ್ಲಿ ಸರ್ವಥಾ ಬ್ರಹ್ಮಪರತ್ವವಿಲ್ಲವೆಂದು ಆಕ್ಷೇಪಿಸುತ್ತಾನೆ. ಆದರ ನಿರಾಸೆಯನ್ನೂ ಕೂಡ ಉಭಯತ್ರಪ್ರಸಿದ್ಧ ಪಾದದಲ್ಲಿ ಮಾಡಲಾಗಿದೆ.

ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುವಾಗ ಶ್ರುತಿಯಲ್ಲಿ ಯಾವುದೇ ವಾಕ್ಯವಿದ್ದರೂ, ಅದಕ್ಕೆ ಬ್ರಹ್ಮಪರತ್ವವನ್ನು ಸರ್ವಥಾ ಒಪ್ಪುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ ಅದನ್ನು ನಿರಾಸ ಮಾಡುತ್ತಾ ಬ್ರಹ್ಮಲಿಂಗಗಳಿರುವ ಕಾರಣ ಬ್ರಹ್ಮಪರತ್ವವನ್ನು ಒಪ್ಪಲೇಬೇಕೆಂದು ಸಿದ್ಧಾಂತ ಮಾಡುತ್ತಾರೆ. ಹೀಗೆ ಪಾದಗಳಲ್ಲಿರುವ ಅವಾಂತರವ್ಯತ್ಯಾಸವನ್ನು ಗಮನಿಸಬೇಕು.

ಯಾವುದೇ ಶಬ್ದಗಳನ್ನು ಕೇಳಿದಾಗ ಮೊದಲು ಲೌಕಿಕಾರ್ಥದ ಪ್ರತೀತಿಯೇ ಬರುತ್ತದೆ. ಅನಂತರ ಈಗ ನಾಲ್ಕು ಪಾದಗಳಲ್ಲಿ ಸಮರ್ಥನೆ ಮಾಡಿದ ಬ್ರಹ್ಮನೆಂಬ ಅರ್ಥವು ತಿಳಿಯುತ್ತದೆ. ಪ್ರಥಮಪ್ರತೀತವಾದದ್ದು, ಪ್ರಬಲವಾಗಿರುವುದರಿಂದ ಅದನ್ನೇ ಸ್ವೀಕರಿಸಬೇಕಲ್ಲವೇ ? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ ಪ್ರಥಮಪ್ರತೀತವಾದ ಅರ್ಥವೇ ಮುಖ್ಯವಾಗಿರುತ್ತದೆ ಎಂದು ಪ್ರಾಭಾಕರರಾಗಲೀ, ಭಾಟ್ಟರಾಗಲೀ ಅಂಗೀಕರಿಸಿಲ್ಲ. ಲೌಕಿಕವ್ಯವಹಾರದಲ್ಲಿಯೂ ಕೆಲವೊಮ್ಮೆ ಸಿಂಹದ ಚಿತ್ರವನ್ನು ನೋಡಿ, 'ಸಿಂಹ' ಎಂದು ಕರೆಯುತ್ತಾರೆ. ಅನಂತರ ಸಿಂಹಶಬ್ದದಿಂದ ಇದು ಪ್ರತಿಪಾದ್ಯವಲ್ಲ. ನಿಜವಾದ ಕಾಡಿನಲ್ಲಿರುವ ಸಿಂಹವೇ ಪ್ರತಿಪಾದ್ಯವೆಂಬ ಜ್ಞಾನೋದಯವಾಗುತ್ತದೆ. ಇಂತಹ ಸ್ಥಳದಲ್ಲಿ ಅನಂತರ ಪ್ರತೀತವಾದ ಅರ್ಥವನ್ನೇ ಮುಖ್ಯವಾಗಿ ಲೌಕಿಕರೂ ಕೂಡ ಸ್ವೀಕರಿಸಿದ್ದಾರೆ. ಆದ್ದರಿಂದ ಈ ನಾಲ್ಕು ಪಾದಗಳಲ್ಲಿ ಸಮರ್ಥಿಸಿದ ಶಬ್ದಗಳ ಪರಮಮುಖ್ಯಾರ್ಥ ಬ್ರಹ್ಮನೇ ಆಗಿದ್ದಾನೆಂಬ ವಿಚಾರವೇ ಮುಖ್ಯವಾದದ್ದು. ಸಕಲಸಜ್ಜನರೂ ಇದನ್ನೇ ಮನದಟ್ಟು ಮಾಡಿಕೊಳ್ಳಬೇಕು.

ಏತೇನಾಧಿಕರಣ (೧-೪-೭)

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम् – ॐ एतेन सर्वे व्याख्याता व्याख्याताः ॐ ।।** ननु समयपादे समयप्राप्तानां कारणवादानां निरासः अत्र श्रुतिप्राप्तानामिति न पौनरुक्तयमिति शङ्कते ।। **तेषामिति ।। अनेवं विधस्येति ।।** अध्यायादावनुपक्रान्तस्य मध्ये चानुक्तस्येत्यर्थः । भाष्यटीकयोरुक्तमभ्यासस्याध्यायावधारणार्थत्वमुपपादयितुं परोक्तं पक्षमनूद्य दूषयति ।। **यच्चेत्यादिना ।। अन्यथेति ।।** प्रमेयवैजात्यस्याध्यायभेद-ज्ञापकाभावे । सः अभ्यासः ।। **द्वितीयाध्यायानामिति ।।** उपनिषदीति शेषः । ननु चाभ्यासोऽध्यायसमाप्तिप्रदर्शनार्थ एवास्येयः । न चात्रोक्तं प्रमेयवैजात्यादेवाध्याय-भेदः सुज्ञान इतीति । तदनुपपन्नमिति भावेन परेषां मतमुत्थापयति ।। **यच्चेति ।।** अध्यायभेदो ज्ञेय इति ।। न च तदर्थपरिसमाप्तिरिति ज्ञायत इति भावः ।। **पादचतुष्टयेति ।।** त्वद्रीत्येति शेषः । अन्यथा वाक्यसमाप्त्यैव वाक्यार्थसमाप्त्यवगमे। उपसंहारव्याजेन पादचतुष्टयार्थं **सङ्गृह्णाह – अत्र चेति ।। पूर्वं** प्रतिपादितमप्यन्यत्र-प्रसिद्धोभयत्र प्रसिद्धान्यत्रैवप्रसिद्धानां भेदं शिष्यावधानाय पुनः स्मारयति ।। **तत्रापीति ।।** नन्विन्द्रादि शब्दानामन्यत्र व्युत्पत्तेर्गृहीतत्वाद्ब्रह्मश्रुतितल्लिङ्गतत् प्रकरणादिभिर्ब्रह्मपरतायाः प्रथमं गृहीतव्युत्पत्तित्यागः स्यात् । स चायुक्तः । ततश्च कथं ब्रह्मपरतेत्यत आह – **एवञ्चेति ।।** कामी चासौ नियोज्यश्चेति विग्रहः – **प्रथमव्युत्पन्न इति ।।** क्रियार्थ इति योज्यम् । उत्तर ग्रन्थोपक्षेपायाह – **तस्मादिति।।**




ನಾಮಾನಿ ಲಿಂಗಾನ್ಯಪಿ ಚೇತರತ್ರ ಪ್ರಸಿದ್ಧಿಯುಕ್ತಾನಿ ತಥೋಭಯತ್ರ ।
ಪ್ರಸಿದ್ಧಿಭಾಂಜ್ಯನ್ಯಪದಾರ್ಥ ಏವ ಪ್ರಸಿದ್ಧಿಯುಕ್ತಾನಿ ಸಮನ್ವಿತಾನಿ ।

ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಪ್ರಥಮಪಾದದಲ್ಲಿ, ಇತರತ್ರ ಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳನ್ನು ದ್ವಿತೀಯಪಾದದಲ್ಲಿ, ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳನ್ನು ತೃತೀಯಪಾದದಲ್ಲಿ, ಅನ್ಯಪದಾರ್ಥದಲ್ಲೇ ಪ್ರಸಿದ್ಧವಾದ ಶಬ್ದಗಳನ್ನು ನಾಲ್ಕನೆಯ ಪಾದಗಳಲ್ಲಿ ಸಮನ್ವಯ ಮಾಡಲಾಗಿದೆ.

ಪರಿಪೂರ್ಣಚಂದ್ರಿಕಾ

ಅನ್ಯತ್ರಪ್ರಸಿದ್ಧಿ ಮತ್ತು ಉಭಯತ್ರಪ್ರಸಿದ್ಧಿ, ಅನ್ಯತ್ರೈವಪ್ರಸಿದ್ಧಿ ಈ ಮೂರು ಬಗೆಯ ಶಬ್ದಗಳಲ್ಲಿ ಇರುವ ವ್ಯತ್ಯಾಸ ಹೀಗಿದೆ - ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ವಾಕ್ಯವು ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವನ್ನು ಹೊಂದಿರುವಾಗಲೇ 'ಬ್ರಹ್ಮಣ್ಯಪಿ ತದಧೀನತ್ವಾತ್' ಎಂಬ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಸಮನ್ವಯವನ್ನು ಮಾಡಲಾಗಿದೆ. ಅನ್ಯತ್ರೈವಪ್ರಸಿದ್ಧದಲ್ಲಿ ಮಾಡುವ ಸಮನ್ವಯವು ಎರಡು ಬಗೆ - ಒಂದು ತದಧೀನತ್ವ ನ್ಯಾಯದಿಂದ ಪ್ರವೃತ್ತಿನಿಮಿತ್ತವನ್ನು ಅನುಸರಿಸಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಮತ್ತೊಂದು 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ, ಶ್ರುತಿಯಲ್ಲಿ ಹೇಳಿದ ಯೋಗದಿಂದಲೇ ಬ್ರಹ್ಮನಲ್ಲಿ ಪದಗಳನ್ನು ಸಮನ್ವಯ ಮಾಡಲಾಗುತ್ತದೆ. ಏನೇ ಆದರೂ ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯವಿದ್ದೇ ಇರುತ್ತದೆಂಬುದನ್ನು ಗಮನಿಸಬೇಕು. ಮತ್ತು ಅನ್ಯತ್ರೈವಪ್ರಸಿದ್ಧವಾದ ಪಾದದಲ್ಲಿ ವಾಕ್ಯಸಮನ್ವಯವನ್ನೂ ಕೂಡ ಮಾಡಲಾಗಿದೆ. ಯಾವ ವಾಕ್ಯವು ಬ್ರಹ್ಮಪರವೆಂದು ನಿಶ್ಚಯವಾಗಿದೆಯೋ, ಅವುಗಳ ಮಧ್ಯದಲ್ಲಿರುವಂತಹ ಮತ್ತೊಂದು ವಾಕ್ಯವೂ ಕೂಡ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆಂಬುದು ವಾಕ್ಯಸಮನ್ವಯದ ಕ್ರಮ. ಹೀಗೆ ಪದಸಮನ್ವಯ ಹಾಗೂ ವಾಕ್ಯಸಮನ್ವಯಗಳೆರಡನ್ನೂ ಈ ಪಾದದಲ್ಲಿ ಮಾಡಿದ್ದಾರೆ.

ಉಭಯತ್ರಪ್ರಸಿದ್ಧವಾದ ಶಬ್ದಗಳಲ್ಲಿಯೂ ಯಾವ ವಿಷಯವಾಕ್ಯವನ್ನು ತಿಳಿದುಕೊಳ್ಳುತ್ತಾರೋ, ಆ ವಾಕ್ಯಗಳಿಗೆ ಅನ್ಯಪರತ್ವವನ್ನು ಸರ್ವಥಾ ಒಪ್ಪದೇ ಕೇವಲ ಬ್ರಹ್ಮನಲ್ಲಿ ಮಾತ್ರ ಸಮನ್ವಯ ಮಾಡುವುದೇ ಉದ್ದೇಶವಾಗಿರುತ್ತದೆ.

ಆದರಲ್ಲಿಯೂ ಒಂದು ಅವಾಂತರ ವೈಲಕ್ಷಣ್ಯವಿದೆ. ಉಭಯತ್ರಪ್ರಸಿದ್ಧವಾದ ಒಂದು ವಾಕ್ಯವನ್ನು ಉದಾಹರಿಸಿದರೆ, ಪೂರ್ವಪಕ್ಷಿಯು ವಾಕ್ಯಾಂತರದಲ್ಲಿ ಬ್ರಹ್ಮಪರತ್ವವನ್ನು ಒಪ್ಪಿ, ತಾನು ಉದಾಹರಿಸಿದ ವಾಕ್ಯದಲ್ಲಿ ಸರ್ವಥಾ ಬ್ರಹ್ಮಪರತ್ವವಿಲ್ಲವೆಂದು ಆಕ್ಷೇಪಿಸುತ್ತಾನೆ. ಆದರ ನಿರಾಸೆಯನ್ನೂ ಕೂಡ ಉಭಯತ್ರಪ್ರಸಿದ್ಧ ಪಾದದಲ್ಲಿ ಮಾಡಲಾಗಿದೆ.

ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುವಾಗ ಶ್ರುತಿಯಲ್ಲಿ ಯಾವುದೇ ವಾಕ್ಯವಿದ್ದರೂ, ಅದಕ್ಕೆ ಬ್ರಹ್ಮಪರತ್ವವನ್ನು ಸರ್ವಥಾ ಒಪ್ಪುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ ಅದನ್ನು ನಿರಾಸ ಮಾಡುತ್ತಾ ಬ್ರಹ್ಮಲಿಂಗಗಳಿರುವ ಕಾರಣ ಬ್ರಹ್ಮಪರತ್ವವನ್ನು ಒಪ್ಪಲೇಬೇಕೆಂದು ಸಿದ್ಧಾಂತ ಮಾಡುತ್ತಾರೆ. ಹೀಗೆ ಪಾದಗಳಲ್ಲಿರುವ ಅವಾಂತರವ್ಯತ್ಯಾಸವನ್ನು ಗಮನಿಸಬೇಕು.

ಯಾವುದೇ ಶಬ್ದಗಳನ್ನು ಕೇಳಿದಾಗ ಮೊದಲು ಲೌಕಿಕಾರ್ಥದ ಪ್ರತೀತಿಯೇ ಬರುತ್ತದೆ. ಅನಂತರ ಈಗ ನಾಲ್ಕು ಪಾದಗಳಲ್ಲಿ ಸಮರ್ಥನೆ ಮಾಡಿದ ಬ್ರಹ್ಮನೆಂಬ ಅರ್ಥವು ತಿಳಿಯುತ್ತದೆ. ಪ್ರಥಮಪ್ರತೀತವಾದದ್ದು, ಪ್ರಬಲವಾಗಿರುವುದರಿಂದ ಅದನ್ನೇ ಸ್ವೀಕರಿಸಬೇಕಲ್ಲವೇ ? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ ಪ್ರಥಮಪ್ರತೀತವಾದ ಅರ್ಥವೇ ಮುಖ್ಯವಾಗಿರುತ್ತದೆ ಎಂದು ಪ್ರಾಭಾಕರರಾಗಲೀ, ಭಾಟ್ಟರಾಗಲಿ ಅಂಗೀಕರಿಸಿಲ್ಲ. ಲೌಕಿಕವ್ಯವಹಾರದಲ್ಲಿಯೂ ಕೆಲವೊಮ್ಮೆ ಸಿಂಹದ ಚಿತ್ರವನ್ನು ನೋಡಿ, 'ಸಿಂಹ' ಎಂದು ಕರೆಯುತ್ತಾರೆ. ಅನಂತರ ಸಿಂಹಶಬ್ದದಿಂದ ಇದು ಪ್ರತಿಪಾದ್ಯವಲ್ಲ. ನಿಜವಾದ ಕಾಡಿನಲ್ಲಿರುವ ಸಿಂಹವೇ ಪ್ರತಿಪಾದ್ಯವೆಂಬ ಜ್ಞಾನೋದಯವಾಗುತ್ತದೆ. ಇಂತಹ ಸ್ಥಳದಲ್ಲಿ ಅನಂತರ ಪ್ರತೀತವಾದ ಅರ್ಥವನ್ನೇ ಮುಖ್ಯವಾಗಿ ಲೌಕಿಕರೂ ಕೂಡ ಸ್ವೀಕರಿಸಿದ್ದಾರೆ. ಆದ್ದರಿಂದ ಈ ನಾಲ್ಕು ಪಾದಗಳಲ್ಲಿ ಸಮರ್ಥಿಸಿದ ಶಬ್ದಗಳ ಪರಮಮುಖ್ಯಾರ್ಥ ಬ್ರಹ್ಮನೇ ಆಗಿದ್ದಾನೆಂಬ ವಿಚಾರವೇ ಮುಖ್ಯವಾದದ್ದು. ಸಕಲಸಜ್ಜನರೂ ಇದನ್ನೇ ಮನದಟ್ಟು ಮಾಡಿಕೊಳ್ಳಬೇಕು.

ಏತೇನಾಧಿಕರಣ (೧-೪-೭)

ಅಪರ್ಯಾಯಾನಂತಶಬ್ದೈರ್ಯೌಗಿಕೈರ್ಗುಣವಾಚಕೈಃ ।
ವಾಚ್ಯತ್ವಾತ್ ಬ್ರಹ್ಮಣಃ ಸಿದ್ಧಾ ಸಮಸ್ತಗುಣಪೂರ್ಣತಾ ॥೧॥

ಈ ಎಲ್ಲಾ ಕಾರಣಗಳಿಂದ ಯಾವ ಶಬ್ದಗಳೆಲ್ಲವೂ ಯೌಗಿಕವೂ, ಗುಣವಾಚಕವೂ ಆಗಿರುವುದರಿಂದ ಅಪರ್ಯಾಯವಾದ ಅನಂತ ಶಬ್ದಗಳಿಂದ ಮಹಾವಿಷ್ಣು ಒಬ್ಬನೇ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಅವನಲ್ಲಿ ಸಮಸ್ತಗುಣಪರಿಪೂರ್ಣತ್ವವು ಸಿದ್ಧವಾಯಿತು.

• • • • •

## ವಾಚ್ಯತ್ವವಿಷಯದಲ್ಲಿ ಅದ್ವೈತಮತ ನಿರಾಕರಣೆ

### तात्पर्यचन्द्रिका

**अन्ये तु आकाशादिशब्दानां ब्रह्मपरत्वमात्रेण तत्तद्वाक्यस्थब्रह्मलिङ्गानां जन्मादिसूत्रोक्तलक्षणातिव्याप्तिपरिहारस्य चोपपत्तेर्ब्रह्मवाचित्वमप्रमाणिकमप्रयोजनं चेत्याहुः ।**

ಅನುವಾದ - ಭಾಮತಿಯಲ್ಲಿ ಹೀಗೆ ಆಕ್ಷೇಪಿಸಲಾಗಿದೆ - ಆಕಾಶಾದಿಶಬ್ದಗಳೆಲ್ಲವೂ ಬ್ರಹ್ಮಪರವಾಗಿವೆ ಎಂದು ಸಮರ್ಥಿಸಿದರೆ ಸಾಕು. ಆಯಾ ವಾಕ್ಯಗಳಲ್ಲಿರುವ ಬ್ರಹ್ಮಲಿಂಗಗಳು ಬ್ರಹ್ಮನಲ್ಲಿ ಸಮನ್ವಯವಾಗುತ್ತವೆ. ಮತ್ತು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕರ್ತೃತ್ವ ಎಂಬ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನೂ ಕೂಡ ಪರಿಹರಿಸಿದಂತಾಗುತ್ತದೆ. ಹೀಗಿರುವಾಗ ನೀವು ಪ್ರತಿಯೊಂದು ಅಧಿಕರಣಗಳಲ್ಲಿಯೂ ಆಯಾ ಶಬ್ದಗಳ ವಾಚ್ಯತ್ವವನ್ನು ಬ್ರಹ್ಮನಲ್ಲಿ ಏಕೆ ಸಮರ್ಥಿಸುತ್ತಿದ್ದೀರಿ? ಪ್ರತಿಯೊಂದು ಶಬ್ದಗಳ ವಾಚ್ಯತ್ವವು ಬ್ರಹ್ಮನಲ್ಲಿ ಇದೆ ಎನ್ನಲು ಯಾವುದೇ ಪ್ರಮಾಣವಿಲ್ಲ. ಪ್ರಯೋಜನವೂ ಕೂಡ ಇರುವುದಿಲ್ಲ.

**तन्न । ''नामानि सर्वाणि यमाविशन्ति, अद्यतेऽत्ति च भूतानि तस्मादन्नं तदुच्यते, तद्वै त्वं प्राणो अभवः । महान् भोगः प्रजापतेः । भुजःकरिष्यमाणः । यद्देवान् प्राणयो नव, गायत्री वा इदं सर्वं, गायति त्रायते च'' इत्यादिश्रुतिभिः, ''आसमन्तात्काशते यदाकाशः'' इत्यादिस्मृतिभिश्चान्नादिशब्दानां यौगिकत्वोक्तेः ।**

ಭಾಮತಿಯ ಆಕ್ಷೇಪ ತಪ್ಪು. ಸಕಲಶಬ್ದಗಳು ಬ್ರಹ್ಮನಲ್ಲಿ ಯೌಗಿಕವಾಗಿ ಇರುತ್ತವೆನ್ನಲು ಅನೇಕ ಪ್ರಮಾಣಗಳಿವೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿ ಆಙ್ ಎಂಬ ಉಪಸರ್ಗದಿಂದ ಯೌಗಿಕವೃತ್ತಿಯಿಂದ ಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆಂದು ತಿಳಿಯುತ್ತದೆ. 'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಎಂಬ ಶ್ರುತಿಯು ಸ್ವತಃ ತಾನೇ

ಅನ್ನಶಬ್ದದ ನಿರ್ವಚನವನ್ನು ಪರಮಾತ್ಮನಲ್ಲಿ ಮಾಡುತ್ತಿದೆ. 'ತದ್ವೈ ತ್ವಂ ಪ್ರಾಣೋ ಅಭವಃ । ಮಹಾನ್ ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ । ಯದ್ದೇವಾನ್ ಪ್ರಾಣಯೋ ನವ' ಎಂಬ ಶ್ರುತಿಯಲ್ಲಿ ಒಂಭತ್ತು ಇಂದ್ರಿಯಾಭಿಮಾನಿದೇವತೆಗಳಿಗೆ ಚೇಷ್ಟಾಪ್ರದನಾದ್ದರಿಂದ ಪರಮಾತ್ಮನು ಪ್ರಾಣನೆನಿಸುತ್ತಾನೆಂದು ನಿಷ್ಪತ್ತಿ ಮಾಡಲಾಗಿದೆ. 'ಗಾಯತ್ರೀ ವಾ ಇದಂ ಸರ್ವಂ, ಗಾಯತಿ ತ್ರಾಯತೇ ಚ' ಎಂಬ ಶ್ರುತಿಯಲ್ಲಿಯೂ ಗಾನ ಮಾಡುವವರನ್ನು ರಕ್ಷಿಸುವ ಕಾರಣ ಪರಮಾತ್ಮನು ಗಾಯತ್ರಿ ಎನಿಸುತ್ತಾನೆಂದು ಯೋಗವೃತ್ತಿಯಿಂದಲೇ ಗಾಯತ್ರಿಶಬ್ದಸಮನ್ವಯವನ್ನು ಸ್ವತಃ ಶ್ರುತಿಯೇ ಮಾಡುತ್ತಿದೆ. ಹೀಗೆ ಅನೇಕ ಶ್ರುತಿಗಳ ಆಧಾರದಿಂದ ಪರಮಾತ್ಮನಲ್ಲಿ ಶಬ್ದವೃತ್ತಿಯು ಸಿದ್ಧವಾಗುತ್ತದೆ. ಅಷ್ಟೇ ಅಲ್ಲದೇ 'ಆಸಮಂತಾತ್ ಕಾಶತೇ ಯದಾಕಾಶಃ' ಎಲ್ಲೆಡೆ ಪ್ರಕಾಶಿಸುತ್ತಾನಾದ್ದರಿಂದ ಆಕಾಶನೆನಿಸುತ್ತಾನೆ ಇವೇ ಮೊದಲಾದ ಸ್ಮೃತಿವಾಕ್ಯಗಳಿಂದಲೂ ಅನ್ನ ಮೊದಲಾದ ಶಬ್ದಗಳು ಯೌಗಿಕವೆಂದು ಸಿದ್ಧವಾಗುತ್ತವೆ.

**''साक्षादप्यविरोधं जैमिनिः'' इति सूत्रे साङ्करभाष्येऽप्यग्निवैश्वानरादिशब्दानां ब्रह्मणि यौगिकत्वोक्तेश्च ।**

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದ ಸಾಂಕರಭಾಷ್ಯದಲ್ಲಿ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಗೆ ಬ್ರಹ್ಮನಲ್ಲಿ ಯೋಗವೃತ್ತಿಯನ್ನು ಹೇಳಲಾಗಿದೆ.

**अन्तर्यामिभूमादिशब्दानां ब्रह्मणि यौगिकत्वोक्तेश्च । अन्तर्यामिभूमादिशब्दानां ब्रह्मणोऽन्यत्र मुख्यत्वासम्भवाच ।**

ಅಂತರ್ಯಾಮಿ, ಭೂಮ ಮೊದಲಾದ ಶಬ್ದಗಳಿಗೂ ಬ್ರಹ್ಮನಲ್ಲಿ ಯೌಗಿಕಾರ್ಥವನ್ನು ನೀವು ಸಮರ್ಥಿಸಿದ್ದೀರಿ. ಮತ್ತು ಅಂತರ್ಯಾಮಿ, ಭೂಮ ಮೊದಲಾದ ಶಬ್ದಗಳಿಗೆ ಬ್ರಹ್ಮನನ್ನು ಬಿಟ್ಟು ಬೇರಡೆ ಮುಖ್ಯಾರ್ಥವನ್ನು ಹೇಳಲೂ ಕೂಡ ನಿಮ್ಮಿಂದ ಸಾಧ್ಯವಿಲ್ಲ. ಆದ್ದರಿಂದ ಶಬ್ದಗಳಿಗೆ ಯೌಗಿಕಾರ್ಥವಿಲ್ಲವೆಂದು ಹೇಳುವ ನಿಮಗೆ ಅಪಸಿದ್ಧಾಂತ ದೋಷ ಬರುತ್ತದೆ.

**''तं यच्छतं वर्षाणि'' इत्यादिश्रुत्या शतर्च्यादिशब्देषु स्वोक्तयोगविद्वद्रूढ्योः ''तावा एताः सर्वा ऋचः सर्वे वेदा'' इति शब्दान्तरेष्वप्यतिदेशाच ।**

'ತಂ ಯಚ್ಛತಂ ವರ್ಷಾಣಿ' ಇತ್ಯಾದಿ ಶ್ರುತಿಯಲ್ಲಿ ಶತರ್ಚಿ ಮೊದಲಾದ ಶಬ್ದಗಳಿಗೆ ಯೋಗವನ್ನು ಮತ್ತು ವಿದ್ವದ್ರೂಢಿಯನ್ನು ಹೇಳಲಾಗಿದೆ. 'ತಾವಾ ಏತಾ ಸರ್ವಾ ಋಚಃ ಸರ್ವೇ ವೇದಾಃ' ಎಂಬುದಾಗಿ ಬೇರೆ ಶ್ರುತಿಯಲ್ಲಿಯೂ ಕೂಡ ಇಂತಹ ಯೋಗಾರ್ಥವನ್ನು ಮತ್ತು ವಿದ್ವದ್ರೂಢಿಯನ್ನು ಅತಿದೇಶ ಮಾಡಲಾಗಿದೆ.

ಅಪರ್ಯಾಯಾನಂತಶಬ್ದೈರ್ಯೌಗಿಕೈರ್ಗುಣವಾಚಕೈಃ ।
ವಾಚ್ಯತ್ವಾತ್ ಬ್ರಹ್ಮಣಃ ಸಿದ್ಧಾ ಸಮಸ್ತಗುಣಪೂರ್ಣತಾ ॥೧॥

ಈ ಎಲ್ಲಾ ಕಾರಣಗಳಿಂದ ಯಾವ ಶಬ್ದಗಳೆಲ್ಲವೂ ಯೌಗಿಕವೂ, ಗುಣವಾಚಕವೂ ಆಗಿರುವುದರಿಂದ ಅಪರ್ಯಾಯವಾದ ಅನಂತ ಶಬ್ದಗಳಿಂದ ಮಹಾವಿಷ್ಣು ಒಬ್ಬನೇ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಅವನಲ್ಲಿ ಸಮಸ್ತಗುಣಪರಿಪೂರ್ಣತ್ವವು ಸಿದ್ಧವಾಯಿತು.




## ವಾಚ್ಯತ್ವವಿಷಯದಲ್ಲಿ ಅದ್ವೈತಮತ ನಿರಾಕರಣೆ

**तात्पर्यचन्द्रिका**

**अन्ये तु आकाशादिशब्दानां ब्रह्मपरत्वमात्रेण तत्तद्वाक्यस्थब्रह्मलिङ्गानां जन्मादिसूत्रोक्तलक्षणातिव्याप्तिपरिहारस्य चोपपत्तेर्ब्रह्मवाचित्वमप्रमाणिकमप्रयोजनं चेत्याहुः ।**

ಅನುವಾದ - ಭಾಮತಿಯಲ್ಲಿ ಹೀಗೆ ಆಕ್ಷೇಪಿಸಲಾಗಿದೆ - ಆಕಾಶಾದಿಶಬ್ದಗಳೆಲ್ಲವೂ ಬ್ರಹ್ಮಪರವಾಗಿವೆ ಎಂದು ಸಮರ್ಥಿಸಿದರೆ ಸಾಕು. ಆಯಾ ವಾಕ್ಯಗಳಲ್ಲಿರುವ ಬ್ರಹ್ಮಲಿಂಗಗಳು ಬ್ರಹ್ಮನಲ್ಲಿ ಸಮನ್ವಯವಾಗುತ್ತವೆ. ಮತ್ತು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕರ್ತೃತ್ವ ಎಂಬ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನೂ ಕೂಡ ಪರಿಹರಿಸಿದಂತಾಗುತ್ತದೆ. ಹೀಗಿರುವಾಗ ನೀವು ಪ್ರತಿಯೊಂದು ಅಧಿಕರಣಗಳಲ್ಲಿಯೂ ಆಯಾ ಶಬ್ದಗಳ ವಾಚ್ಯತ್ವವನ್ನು ಬ್ರಹ್ಮನಲ್ಲಿ ಏಕೆ ಸಮರ್ಥಿಸುತ್ತಿದ್ದೀರಿ? ಪ್ರತಿಯೊಂದು ಶಬ್ದಗಳ ವಾಚ್ಯತ್ವವು ಬ್ರಹ್ಮನಲ್ಲಿ ಇದೆ ಎನ್ನಲು ಯಾವುದೇ ಪ್ರಮಾಣವಿಲ್ಲ. ಪ್ರಯೋಜನವೂ ಕೂಡ ಇರುವುದಿಲ್ಲ.

**तन्न । ''नामानि सर्वाणि यमाविशन्ति, अद्यतेऽत्ति च भूतानि तस्मादन्नं तदुच्यते, तद्वै त्वं प्राणो अभवः । महान् भोगः प्रजापतेः । भुजःकरिष्यमाणः । यद्देवान् प्राणयो नव, गायत्री वा इदं सर्वं, गायति त्रायते च'' इत्यादिश्रुतिभिः, ''आसमन्तात्काशते यदाकाशः'' इत्यादिस्मृतिभिश्चान्नादिशब्दानां यौगिकत्वोक्तेः ।**

ಭಾಮತಿಯ ಆಕ್ಷೇಪ ತಪ್ಪು. ಸಕಲಶಬ್ದಗಳು ಬ್ರಹ್ಮನಲ್ಲಿ ಯೌಗಿಕವಾಗಿ ಇರುತ್ತವೆನ್ನಲು ಅನೇಕ ಪ್ರಮಾಣಗಳಿವೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿ ಆಙ್ ಎಂಬ ಉಪಸರ್ಗದಿಂದ ಯೌಗಿಕವೃತ್ತಿಯಿಂದ ಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆಂದು ತಿಳಿಯುತ್ತದೆ. 'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಎಂಬ ಶ್ರುತಿಯು ಸ್ವತಃ ತಾನೇ

ಅನ್ನಶಬ್ದದ ನಿರ್ವಚನವನ್ನು ಪರಮಾತ್ಮನಲ್ಲಿ ಮಾಡುತ್ತಿದೆ. 'ತದ್ವೈ ತ್ವಂ ಪ್ರಾಣೋ ಅಭವಃ । ಮಹಾನ್ ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ । ಯದ್ದೇವಾನ್ ಪ್ರಾಣಯೋ ನವ' ಎಂಬ ಶ್ರುತಿಯಲ್ಲಿ ಒಂಭತ್ತು ಇಂದ್ರಿಯಾಭಿಮಾನಿದೇವತೆಗಳಿಗೆ ಚೇಷ್ಟಾಪ್ರದನಾದ್ದರಿಂದ ಪರಮಾತ್ಮನು ಪ್ರಾಣನೆನಿಸುತ್ತಾನೆಂದು ನಿಷ್ಪತ್ತಿ ಮಾಡಲಾಗಿದೆ. 'ಗಾಯತ್ರೀ ವಾ ಇದಂ ಸರ್ವಂ, ಗಾಯತಿ ತ್ರಾಯತೇ ಚ' ಎಂಬ ಶ್ರುತಿಯಲ್ಲಿಯೂ ಗಾನ ಮಾಡುವವರನ್ನು ರಕ್ಷಿಸುವ ಕಾರಣ ಪರಮಾತ್ಮನು ಗಾಯತ್ರಿ ಎನಿಸುತ್ತಾನೆಂದು ಯೋಗವೃತ್ತಿಯಿಂದಲೇ ಗಾಯತ್ರಿಶಬ್ದಸಮನ್ವಯವನ್ನು ಸ್ವತಃ ಶ್ರುತಿಯೇ ಮಾಡುತ್ತಿದೆ. ಹೀಗೆ ಅನೇಕ ಶ್ರುತಿಗಳ ಆಧಾರದಿಂದ ಪರಮಾತ್ಮನಲ್ಲಿ ಶಬ್ದವೃತ್ತಿಯು ಸಿದ್ಧವಾಗುತ್ತದೆ. ಅಷ್ಟೇ ಅಲ್ಲದೇ 'ಆಸಮಂತಾತ್ ಕಾಶತೇ ಯದಾಕಾಶಃ' ಎಲ್ಲೆಡೆ ಪ್ರಕಾಶಿಸುತ್ತಾನಾದ್ದರಿಂದ ಆಕಾಶನೆನಿಸುತ್ತಾನೆ ಇವೇ ಮೊದಲಾದ ಸ್ಮೃತಿವಾಕ್ಯಗಳಿಂದಲೂ ಅನ್ನ ಮೊದಲಾದ ಶಬ್ದಗಳು ಯೌಗಿಕವೆಂದು ಸಿದ್ಧವಾಗುತ್ತವೆ.

**''साक्षादप्यविरोधं जैमिनिः'' इति सूत्रे साङ्करभाष्येऽप्यग्निवैश्वानरादिशब्दानां ब्रह्मणि यौगिकत्वोक्तेश्च ।**

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದ ಸಾಂಕರಭಾಷ್ಯದಲ್ಲಿ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಗೆ ಬ್ರಹ್ಮನಲ್ಲಿ ಯೋಗವೃತ್ತಿಯನ್ನು ಹೇಳಲಾಗಿದೆ.

**अन्तर्यामिभूमादिशब्दानां ब्रह्मणि यौगिकत्वोक्तेश्च । अन्तर्यामिभूमादिशब्दानां ब्रह्मणोऽन्यत्र मुख्यत्वासम्भवाच्च ।**

ಅಂತರ್ಯಾಮಿ, ಭೂಮ ಮೊದಲಾದ ಶಬ್ದಗಳಿಗೂ ಬ್ರಹ್ಮನಲ್ಲಿ ಯೌಗಿಕಾರ್ಥವನ್ನು ನೀವು ಸಮರ್ಥಿಸಿದ್ದೀರಿ. ಮತ್ತು ಅಂತರ್ಯಾಮಿ, ಭೂಮ ಮೊದಲಾದ ಶಬ್ದಗಳಿಗೆ ಬ್ರಹ್ಮನನ್ನು ಬಿಟ್ಟು ಬೇರಡೆ ಮುಖ್ಯಾರ್ಥವನ್ನು ಹೇಳಲೂ ಕೂಡ ನಿಮ್ಮಿಂದ ಸಾಧ್ಯವಿಲ್ಲ. ಆದ್ದರಿಂದ ಶಬ್ದಗಳಿಗೆ ಯೌಗಿಕಾರ್ಥವಿಲ್ಲವೆಂದು ಹೇಳುವ ನಿಮಗೆ ಅಪಸಿದ್ಧಾಂತ ದೋಷ ಬರುತ್ತದೆ.

**''तं यच्छतं वर्षाणि'' इत्यादिश्रुत्या शतर्च्यादिशब्देषु स्वोक्तयोगविद्वद्रूढ्योः ''तावा एताः सर्वा ऋचः सर्वे वेदा'' इति शब्दान्तरेष्वप्यतिदेशाच्च ।**

'ತಂ ಯಚ್ಛತಂ ವರ್ಷಾಣಿ' ಇತ್ಯಾದಿ ಶ್ರುತಿಯಲ್ಲಿ ಶತರ್ಚಿ ಮೊದಲಾದ ಶಬ್ದಗಳಿಗೆ ಯೋಗವನ್ನು ಮತ್ತು ವಿದ್ವದ್ರೂಢಿಯನ್ನು ಹೇಳಲಾಗಿದೆ. 'ತಾವಾ ಏತಾ ಸರ್ವಾ ಋಚಃ ಸರ್ವೇ ವೇದಾಃ' ಎಂಬುದಾಗಿ ಬೇರೆ ಶ್ರುತಿಯಲ್ಲಿಯೂ ಕೂಡ ಇಂತಹ ಯೋಗಾರ್ಥವನ್ನು ಮತ್ತು ವಿದ್ವದ್ರೂಢಿಯನ್ನು ಅತಿದೇಶ ಮಾಡಲಾಗಿದೆ.

**रूढानां श्येनादिशब्दानां तु कर्मणि मुख्यत्वे मानाभावाद्योगकल्पकाभावात् ''यथा वै श्येन'' इति वाक्यशेषानुसाराद्गौणत्वादिकम् ।**

ಮೀಮಾಂಸಕರೂ ಕೂಡ ಹೀಗೆ ಶಬ್ದಗಳಿಗೆ ಯೋಗಾರ್ಥವನ್ನೇ ಸ್ವೀಕರಿಸಿದ್ದಾರೆ -

'ಶ್ಯೇನೇನ ಅಭಿಚರನ್ ಯಜೇತ' ಎಂಬ ವಾಕ್ಯವು ಆಭಿಚಾರಯಾಗವನ್ನು ವಿಧಿಸುತ್ತಿದೆ. ಇಲ್ಲಿರುವ ಶ್ಯೇನಶಬ್ದಕ್ಕೆ ಮೀಮಾಂಸಕರು ಗೌಣಾರ್ಥವನ್ನು ಮಾಡುತ್ತಾರೆ. ಯಾಗವು ಶ್ಯೇನಪಕ್ಷಿಯಂತೆ ಶತ್ರುಸಂಹಾರಕ್ಕೆ ಸಾಧನವಾದ್ದರಿಂದ ಈ ಯಾಗವು 'ಶ್ಯೇನ' ಎಂಬ ಶಬ್ದದಿಂದ ಪ್ರತಿಪಾದ್ಯವಾಗಿದೆ. ಇಲ್ಲಿ ವಾಚಕತ್ವವನ್ನು ಹೇಳಲು ಬರುವಾಗ, ಗೌಣಾರ್ಥವನ್ನು ಮೀಮಾಂಸಕರು ಮಾಡಿದ್ದಾರಲ್ಲವೇ? ಎಂದರೆ ಹೀಗೆ ಉತ್ತರವನ್ನು ತಿಳಿಯಬೇಕು - 'ಶ್ಯೇನೇನ ಅಭಿಚರನ್ ಯಜೇತ' ಎಂಬಲ್ಲಿ ಶ್ಯೇನಶಬ್ದಕ್ಕೆ ಮುಖ್ಯಾರ್ಥವನ್ನು ಸ್ವೀಕರಿಸಲು ಪ್ರಮಾಣವಿಲ್ಲ. ಶ್ಯೇನಾದಿಶಬ್ದಗಳಿಗೆ ಯಾಗವೆಂಬ ಕರ್ಮದಲ್ಲಿ ಮುಖ್ಯಾರ್ಥವನ್ನು ಸ್ವೀಕರಿಸಲು ಆಧಾರವಿಲ್ಲದ ಕಾರಣ, ಯೋಗಾರ್ಥವನ್ನು ಸ್ವೀಕರಿಸಬಾರದು. ಅಷ್ಟೇ ಅಲ್ಲದೇ 'ಯಥಾ ವೈ ಶ್ಯೇನ' ಎಂಬ ವಾಕ್ಯಶೇಷದಿಂದ ಗೌಣಾರ್ಥವನ್ನೇ ಸ್ವೀಕರಿಸಬೇಕೆನ್ನಲು ಪ್ರಮಾಣವಿದೆ. ಆದ್ದರಿಂದ ಮೀಮಾಂಸಕರು ಇಲ್ಲಿ ಯೌಗಿಕಾರ್ಥವನ್ನು ಸ್ವೀಕರಿಸಿಲ್ಲ.

**येषां तूद्भिदादीनां योगः सम्भवति, येषां चाज्यादिशब्दानां ''यदाजिमीयुस्त-दाज्यानामाज्यत्वम्'' इति श्रुत्या योग उक्तस्तत्र यौगिकतैवाश्रिता ।**

ಆದರೆ ಇದೇ ಮೀಮಾಂಸಕರು 'ಉದ್ಭಿದಾ ಯಜೇತ ಪಶುಕಾಮಃ' ಎಂಬಲ್ಲಿ 'ಉದ್ಭಿತ್' ಎಂಬ ಶಬ್ದವು ಯೌಗಿಕಾರ್ಥವಾದ್ದರಿಂದ ಯಾಗದ ನಾಮಧೇಯವೆಂದು ಸಮರ್ಥಿಸಿದ್ದಾರೆ. ಮತ್ತು 'ಯದಾಜಿಮೀಯುಃ ತದಾಜ್ಯಾನಾಮಾಜ್ಯತ್ವಮ್' ಎಂಬ ಶ್ರುತಿಯಲ್ಲಿಯೂ ಯುದ್ಧಕ್ಕೆ ಹೋಗುವಾಗ ಪಠಿಸಬೇಕಾದ್ದರಿಂದ ಈ ಮಂತ್ರಗಳಿಗೆ ಆಜ್ಯ ಎಂದು ಹೆಸರು ಎಂಬುದಾಗಿಯೂ ಯೌಗಿಕಾರ್ಥವನ್ನು ಸ್ವೀಕರಿಸಿದ್ದಾರೆ. ಏಕೆಂದರೆ ಉದ್ಭಿತ್ ಮತ್ತು ಆಜ್ಯ ಮೊದಲಾದ ಶಬ್ದಗಳಲ್ಲಿ ಯೌಗಿಕಾರ್ಥವನ್ನು ಸ್ವೀಕರಿಸಲು ಆಧಾರವಿದೆ. ಮತ್ತು ವಿರೋಧವೂ ಕೂಡ ಇರುವುದಿಲ್ಲ. ಆದ್ದರಿಂದ ಎಲ್ಲಿ ಯೌಗಿಕಾರ್ಥವನ್ನು ಸ್ವೀಕರಿಸಲು ಸಾರ್ಥಕ್ಯವಿದೆಯೋ, ಅಲ್ಲಿ ಗೌಣಾರ್ಥವನ್ನು ಸ್ವೀಕರಿಸಬಾರದು.

**वैश्वदेवशब्दोऽपि ''यद्विश्वे देवाः समयजन्त तद्वैश्वदेवस्य वैश्वदेवत्वम्'' इति श्रुतेर्यागाष्टके यौगिक एव । नतु मीमांसकोक्तरीत्या ''वैश्वदेवीमामिक्षाम्'' इति श्रुतेरामिक्षायागस्य विश्वदेवदेवताकत्वाद्वैश्वदेवावैश्वदेवसमुदाये छत्रिशब्दवल्लाक्षणिकः।**

ವೈಶ್ವದೇವ ಶಬ್ದದಲ್ಲಿಯೂ ಕೂಡ 'ಯದ್ವಿಶ್ವೇ ದೇವಾಃ ಸಮಯಜಂತ ತದ್ವೈಶ್ವದೇವಸ್ಯ ವೈಶ್ವದೇವತ್ವಮ್' ಎಂಬ ಶ್ರುತಿಯು ಎಂಟು ಯಾಗಗಳನ್ನು ಹೇಳುತ್ತಿದೆ. ಈ ಅರ್ಥವನ್ನು

ಸ್ವೀಕರಿಸಬೇಕಾದರೆ ಶ್ರುತಿಗೆ ಯೌಗಿಕಾರ್ಥವನ್ನೇ ಸ್ವೀಕರಿಸಬೇಕೆಂದು ಹೇಳಬೇಕು. ಹೊರತು, ಮೀಮಾಂಸಕರು ಹೇಳುವಂತೆ 'ವೈಶ್ವದೇವೀಮಾಮಿಕ್ಷಾಮ್' ಎಂಬ ಶ್ರುತಿಯ ಆಧಾರದಿಂದ ಆಮಿಕ್ಷಾ ಯಾಗವು ವಿಶ್ವೇದೇವತೆಗಳನ್ನೇ ದೇವತೆಯನ್ನಾಗಿ ಒಳಗೊಂಡಿದೆ. ಆದ್ದರಿಂದ ವೈಶ್ವದೇವ ಹಾಗೂ ಅವೈಶ್ವದೇವ ಯಾಗಗಳ ಸಮುದಾಯದಲ್ಲಿ ಛತ್ರಿನ್ಯಾಯದಿಂದ ಲಕ್ಷಣಾವನ್ನು ಮಾಡಬಾರದು. ಆಮಿಕ್ಷಾಯಾಗದಲ್ಲಿ ವೈಶ್ವದೇವಶಬ್ದವು ಮುಖ್ಯವಾಗಿದೆಯೆಂದು ಸ್ವತಃ ಶ್ರುತಿಯೇ ಹೇಳುತ್ತಿದೆ. ಉಳಿದ ಯಾಗಗಳಲ್ಲಿ ವೈಶ್ವದೇವ ಶಬ್ದವು ಇರುವುದಿಲ್ಲ. ಆದ್ದರಿಂದ ಮೀಮಾಂಸಕರು ಇಲ್ಲಿ ವೈಶ್ವದೇವ ಹಾಗೂ ಅವೈಶ್ವದೇವಯಾಗಗಳ ಸಮುದಾಯದಲ್ಲಿ ವೈಶ್ವದೇವಶಬ್ದಕ್ಕೆ ಛತ್ರಿನ್ಯಾಯದಿಂದ ಲಕ್ಷಣಾ ಮಾಡಿರುವುದು ತಪ್ಪು.

**श्रुत्युक्ते योगे सति योगमुखलक्षणाया अयोगात् । उपपादिता च भाष्यकृता श्रुत्यादिभिस्तत्तदधिकरणेषु ब्रह्मणस्तत्तच्छब्दवाच्यता ।**

ಶ್ರುತಿಯಲ್ಲಿ ಹೇಳಲ್ಪಟ್ಟ ಯೋಗಾರ್ಥವನ್ನು ಸ್ವೀಕರಿಸಲು ಬರುವಾಗ ಯೋಗಮುಖವಾದ ಲಕ್ಷಣಾವನ್ನು ಮಾಡುವುದು ತಪ್ಪಾಗುತ್ತದೆ.

ಭಾಷ್ಯಕಾರರೂ ಕೂಡ ಅನೇಕ ಶ್ರುತಿಗಳಿಂದ ಆಯಾ ಅಧಿಕರಣಗಳಲ್ಲಿ ಬ್ರಹ್ಮನಿಗೆ ಪ್ರತಿಯೊಂದು ಶಬ್ದಗಳ ವಾಚ್ಯತ್ವವು ಯೋಗಾರ್ಥದಿಂದಲೇ ಸಮಂಜಸವಾಗಿ ಉಪಪನ್ನವಾಗುತ್ತದೆಂಬುದನ್ನು ಸಮರ್ಥಿಸಿದ್ದಾರೆ.

**प्रकाशः –**

प्रतिज्ञालक्षणं लक्ष्ये मानं पदसमन्वयः ।
वैदिकस्स च तत्रैव नान्यत्रेत्यत्र साधितम् ।।

इति भामत्युक्तं हृदि कृत्वाध्यायार्थमनुवदति ।। **अन्ये त्विति ।।**

ವಿವರಣೆ -

ಪ್ರತಿಜ್ಞಾಲಕ್ಷಣಂ ಲಕ್ಷ್ಯೇ ಮಾನಂ ಪದಸಮನ್ವಯಃ।
ವೈದಿಕಸ್ಸ ಚ ತತ್ರೈವ ನಾನ್ಯತ್ರೇತ್ಯತ್ರ ಚ ಸಾಧಿತಮ್ ॥

ಪ್ರತಿಜ್ಞೆ ಮಾಡಲ್ಪಟ್ಟ ಲಕ್ಷಣವು ಲಕ್ಷ್ಯನಾದ ಬ್ರಹ್ಮನಲ್ಲಿ ವೇದದಲ್ಲಿರುವ ಪದಸಮನ್ವಯವು ಆಗುತ್ತದೆ. ಆದ್ದರಿಂದ ಶಬ್ದಗಳೆಲ್ಲವೂ ಬ್ರಹ್ಮನಲ್ಲಿಯೇ ಸಮನ್ವಯಗೊಳ್ಳುತ್ತವೆ ಹೊರತು, ಬೇರೆಡೆಯಲ್ಲ ಎಂದು ಸಾಧಿಸಿದಂತಾಯಿತು. ಹೀಗೆ ಭಾಮತಿಯಲ್ಲಿ ಅಧ್ಯಾಯಾರ್ಥವನ್ನು ಸಂಗ್ರಹಿಸಲಾಗಿದೆ. ಅದನ್ನು

ಮನಸ್ಸಿನಲ್ಲಿಟ್ಟುಕೊಂಡು, ಅಧ್ಯಾಯಾರ್ಥವನ್ನು ಗ್ರಂಥಕಾರರು ಅನುವಾದ ಮಾಡುತ್ತಿದ್ದಾರೆ 'ಅನ್ಯೇತು' ಇತ್ಯಾದಿಯಾಗಿ.

**प्रकाशः** – आनन्दमयस्यादित्वेऽपि तस्य तन्मते समन्वयाभावादाकाशादीत्युक्तम् ।। **नामानीति** ।। आविशन्तीत्याङा योगरूढिभ्यां मुख्यत्वस्योक्तेरिति भावः ।।

ಗ್ರಂಥದಲ್ಲಿ 'ಆಕಾಶಾದಿಶಬ್ದಾನಾಮ್' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ ಆನಂದಮಯಶಬ್ದದ ಸಮನ್ವಯವೇ ಮೊದಲು ಪ್ರಸಕ್ತವಾದ್ದರಿಂದ, 'ಆನಂದಮಯಾದಿಶಬ್ದಾನಾಂ' ಎಂದು ಹೇಳಬೇಕಿತ್ತು. ಆದರೆ ಅದ್ವೈತಮತದ ಪ್ರಕಾರ ಆನಂದಮಯಾಧಿಕರಣವು ಕೇವಲ ಕೋಶಗಳನ್ನಷ್ಟೇ ಪ್ರತಿಪಾದನೆ ಮಾಡುತ್ತಿರುವುದರಿಂದ ಬ್ರಹ್ಮನಲ್ಲಿ ಯಾವುದೇ ಸಮನ್ವಯವನ್ನು ಮಾಡಿರುವುದಿಲ್ಲ. ಆಕಾಶಾಧಿಕರಣದಿಂದಲೇ ಸಮನ್ವಯವು ಅವರ ಪ್ರಕಾರ ಪ್ರಾರಂಭವಾಗುತ್ತದೆ. ಅದಕ್ಕೋಸ್ಕರ ಗ್ರಂಥಕಾರರು 'ಆಕಾಶಾದಿ ಶಬ್ದಾನಾಮ್' ಎಂದು ಹೇಳಿರುತ್ತಾರೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬಲ್ಲಿ 'ಆವಿಶಂತಿ' ಎಂಬಲ್ಲಿರುವ ಆಙ್ ಉಪಸರ್ಗದಿಂದ ಯೋಗ ಹಾಗೂ ರೂಢಿಗಳು ಪರಮಾತ್ಮನಲ್ಲೇ ಇರುತ್ತವೆಂದು ಮುಖ್ಯತ್ವವನ್ನು ಶ್ರುತಿ ಹೇಳುತ್ತಿವೆ.

**प्रकाशः** – **अन्यत्र मुख्यत्वेति** ।। तथा च ब्रह्मणि लक्षणा न युक्तेति भावः । कथं तर्हि तद्व्यपदेशाधिकरणे ''श्येनेनाभिचरन् यजेत'' इति श्येनसादृश्याद्यागे श्येनशब्दस्य गौणत्वमुक्तमित्यत आह – **रूढानामिति** ।।

'ಅನ್ಯತ್ರ ಮುಖ್ಯತ್ವ ಅಸಂಭವಾಚ್ಚ' ಬೇರೆಡೆ ಮುಖ್ಯಾರ್ಥವನ್ನು ಹೇಳಲು ಸಾಧ್ಯವಿಲ್ಲ ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಇದರಿಂದ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಸ್ವೀಕರಿಸಲಾಗದು ಎಂದು ತಿಳಿಸಿದಂತಾಯಿತು.

ಹಾಗಾದರೆ ಪೂರ್ವಮೀಮಾಂಸೆಯ 'ತದ್ವ್ಯಪದೇಶಾಧಿಕರಣ'ದಲ್ಲಿ 'ಶ್ಯೇನೇನಾಭಿಚರನ್ ಯಜೇತ' ಎಂಬ ಶ್ರುತಿಯನ್ನು ವಿಚಾರ ಮಾಡುವಾಗ ಶ್ಯೇನ ಪಕ್ಷದ ಸಾದೃಶ್ಯವು ಯಾಗದಲ್ಲಿರುವುದರಿಂದ, ಯಾಗವನ್ನು ಶ್ಯೇನವೆಂದು ಕರೆದಿದ್ದಾರೆ. ಇದರಿಂದ ಶ್ಯೇನಶಬ್ದಕ್ಕೆ ಗೌಣಾರ್ಥವನ್ನು ಸ್ವೀಕರಿಸಿದಂತಾಯಿತಲ್ಲವೇ? ಎಂಬ ಪ್ರಶ್ನೆಗೆ 'ರೂಢಾನಾಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – **योग इति** ।। ऊर्ध्वं भिनत्ति = यजमानं नयतीत्यादियोग इत्यर्थः ।। **आश्रितेति** ।। उद्भिदाद्यधिकरणेष्वित्यर्थः ।।

ಗ್ರಂಥದಲ್ಲಿ 'ಉದ್ಭಿದಾ ಯಜೇತ' ಇತ್ಯಾದಿ ವಾಕ್ಯಗಳಲ್ಲಿ ಮೀಮಾಂಸಕರು ಯೋಗಾರ್ಥವನ್ನು ಸ್ವೀಕರಿಸಿದ್ದಾರೆಂದು ಹೇಳಿದ್ದಾರೆ. 'ಉದ್ಭಿತ್' ಎಂದರೆ 'ಊರ್ಧ್ವಂ ಭಿನತ್ತಿ' ಎಂದರ್ಥ. ಅಂದರೆ

ಯಜಮಾನನನ್ನು ಮೇಲೆ ಕರೆದುಕೊಂಡು ಹೋಗುತ್ತದೆ ಎಂಬುದಾಗಿ ಯೋಗಾರ್ಥವೇ ಸ್ವೀಕರಿಸಿದ್ದಾರೆ. 'ಆಶ್ರಿತ' ಎಂದರೆ ಉದ್ಭಿದಾಧಿಕರಣದಲ್ಲಿ ಹೀಗೆ ಮೀಮಾಂಸಕರು ಸಮರ್ಥಿಸಿದ್ದಾರೆಂದು ತಿಳಿಯಬೇಕು.

**प्रकाशः – वैश्वदेवशब्दोऽपीति ।।** नामधेयपाद एवैकादशाधिकरणे शास्त्रदीपिकादौ लक्षणापक्षमेकमभिधाय ''नावश्यं लक्षणा । वाक्यशेषदर्शितयोगवशेन श्रुत्यैवाष्टानामपि यागानां नामत्वसम्भवात्'' इत्युक्तमिति भावः ।

ಪೂರ್ವಮೀಮಾಂಸೆಯ ನಾಮಧೇಯ ಪಾದದ ಏಕಾದಶಾಧಿಕರಣದಲ್ಲಿ ಶಾಸ್ತ್ರದೀಪಿಕಾ ಗ್ರಂಥವು ಹೀಗೆ ವಿಚಾರ ಮಾಡಿದೆ - ವೈಶ್ವದೇವಶಬ್ದಕ್ಕೆ ಛತ್ರಿನ್ಯಾಯದಿಂದ ಲಕ್ಷಣಾವನ್ನು ಮಾಡಬೇಕೆಂಬುದಾಗಿ ಒಂದು ಪಕ್ಷವನ್ನು ಹೇಳಿ 'ನಾವಶ್ಯಂ ಲಕ್ಷಣಾ । ವಾಕ್ಯಶೇಷದರ್ಶಿತಯೋಗವಶೇನ ಶ್ರುತ್ಯೈವಾಷ್ಟಾನಾಮಪಿ ಯಾಗಾನಾಂ ನಾಮತ್ವಸಂಭವಾತ್' ಲಕ್ಷಣಾ ಮಾಡುವ ಅನಿವಾರ್ಯತೆ ಇಲ್ಲ. ವಾಕ್ಯಶೇಷದ ಬಲದಿಂದ ಯೋಗಾರ್ಥವನ್ನೇ ಮಾಡಿ, ಎಂಟು ಯಾಗಗಳನ್ನು ಶ್ರುತಿಯಿಂದಲೇ ಸ್ವೀಕರಿಸಬೇಕು. ಆದ್ದರಿಂದ ವೈಶ್ವದೇವಶಬ್ದವು ಯಾಗದ ನಾಮಧೇಯವೇ ಆಗುತ್ತದೆ ಎಂದು ಸಮರ್ಥಿಸಲಾಗಿದೆ.

**प्रकाशः –** ''आग्नेयमष्टाकपालं निर्वपति, सौर्यं चरुं, सावित्रं द्वादशकपालं, सारस्वतं चरुं, पौष्णं चरुं, मारुतं सप्तकपालं वैश्वदेवीमामिक्षां द्यावापृथिव्यमेककपालम्'' इति श्रुतयागाष्टक इत्यर्थः ।।

'ಯದ್ವಿಶ್ವೇದೇವಾಃ' ಎಂಬಲ್ಲಿ ಹೇಳಲ್ಪಟ್ಟ ವಿಶ್ವೇದೇವತೆಗಳೇ ದೇವತೆಯಾಗಿವುಳ್ಳ ಎಂಟು ಯಾಗಗಳನ್ನು ಶ್ರುತಿ ಹೀಗೆ ಹೇಳಿದೆ - 'ಆಗ್ನೇಯಮಷ್ಟಾಕಪಾಲಂ ನಿರ್ವಪತಿ, ಸೌರ್ಯಂ ಚರುಂ, ಸಾವಿತ್ರಂ ದ್ವಾದಶಕಪಾಲಂ, ಸಾರಸ್ವತಂ ಚರುಂ, ಪೌಷ್ಣಂ ಚರುಂ, ಮಾರುತಂ ಸಪ್ತಕಪಾಲಂ ವೈಶ್ವದೇವೀಮಾಮಿಕ್ಷಾಂ ದ್ಯಾವಾಪೃಥಿವ್ಯಮೇಕಕಪಾಲಮ್' ೧. ಆಗ್ನೇಯಮಷ್ಟಾಕಪಾಲದಲ್ಲಿ ನಿರ್ವಾಪಣೆ ಮಾಡುವ ಆಗ್ನೇಯಯಾಗ. ೨. ಸೂರ್ಯದೇವತಾಕವಾದ ಚರುಯಾಗ, ೩. ದ್ವಾದಶಕಪಾಲದಲ್ಲಿ ಆಹುತಿ ನೀಡುವ ಸಾವಿತ್ರಯಾಗ, ೪. ಸಾರಸ್ವತಾಕವಾದ ಚರುಯಾಗ, ೫. ಪೌಷ್ಣದೇವತಾಕವಾದ ಚರುಯಾಗ, ೬. ಮರುತ್‌ದೇವತಾಕವಾದ ಸಪ್ತಕಪಾಲಯಾಗ, ೭. ವಿಶ್ವೇದೇವತೆಗಳಿಗೆ ಸಂಬಂಧಪಟ್ಟ ಆಮೀಕ್ಷಾಯಾಗ, ೮. ಏಕಕಪಾಲದಲ್ಲಿ ನಿರ್ವಾಪಣೆ ಮಾಡುವ ದ್ಯಾವಾಪೃಥಿವೀದೇವತಾಕ ಯಾಗ. ಹೀಗೆ ಎಂಟು ಯಾಗಗಳು ಶ್ರುತವಾಗಿವೆ.

**प्रकाशः – ननु मीमांसकेति ।।** प्राग्विवृतमेतदधिकरणशरीरं जिज्ञासाधिकरणे । भवत्वन्नादिशब्देषु क्वचिच्छ्रुतिबलाद्यौगिकत्वम् । न सर्वत्रेत्यत आह – **उपपादितेति ।।** वाच्यता योगादिनेति भावः ।

ಈ ವೈಶ್ವದೇವತಾಕಯಾಗವನ್ನು ವಿಚಾರ ಮಾಡುವ ಅಧಿಕರಣವನ್ನು ಹಿಂದೆ ಜಿಜ್ಞಾಸಾಧಿಕರಣದಲ್ಲಿಯೇ ವಿವರಿಸಿದ್ದೇವೆ.

ಏತೇನಾಧಿಕರಣ (೧-೪-೭)

'ಅನ್ನ' ಮೊದಲಾದ ಶಬ್ದಗಳಲ್ಲಿ ಶ್ರುತಿಪ್ರಮಾಣವಿರುವುದರಿಂದ ಯೋಗಾರ್ಥವನ್ನು ಒಪ್ಪಿಕೊಳ್ಳೋಣ. ಆದರೆ ಪ್ರತಿಯೊಂದು ಶಬ್ದಗಳಲ್ಲಿಯೂ ಯೋಗಾರ್ಥವನ್ನು ಏಕೆ ಒಪ್ಪಬೇಕು ಎಂಬ ಪ್ರಶ್ನೆಗೆ 'ಉಪಪಾದಿತಾ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪ್ರತಿಯೊಂದು ಅಧಿಕರಣಗಳಲ್ಲಿಯೂ ಶ್ರೀಮದಾಚಾರ್ಯರು ಶ್ರುತಿ-ಸ್ಮೃತಿಗಳ ಆಧಾರದಿಂದಲೇ ಆಯಾ ಶಬ್ದಗಳ ಯೋಗಾರ್ಥವನ್ನು ಪರಮಾತ್ಮನಲ್ಲಿ ಸಮರ್ಥಿಸಿದ್ದಾರೆಂದು ತಿಳಿಯಬೇಕು.




ಇಲ್ಲಿಯ ತನಕ ನಾಲ್ಕು ಪಾದಗಳಲ್ಲಿ ಪ್ರತಿಯೊಂದು ಶಬ್ದಗಳಿಗೆ ಶಕ್ತಿವೃತ್ತಿಯನ್ನು ಶ್ರೀಹರಿಯಲ್ಲಿ ನಾವು ಸಮನ್ವಯ ಮಾಡಿದೆವು. ಆದರೆ ಅದ್ವೈತಿಗಳು ಯಾವುದೇ ಒಂದು ಅಧಿಕರಣದಲ್ಲಿಯೂ ಶಬ್ದವಾಚ್ಯತ್ವವನ್ನು ಸಮರ್ಥನೆ ಮಾಡುವುದಿಲ್ಲ. ಅನೇಕ ಅಧಿಕರಣಗಳಲ್ಲಿ ಆಯಾಶಬ್ದಗಳು ಬ್ರಹ್ಮನಲ್ಲಿ ತಾತ್ಪರ್ಯ ಹೊಂದಿವೆ ಎಂದಷ್ಟೇ ಸಮರ್ಥಿಸುತ್ತಾರೆ. ಅಂತಹ ಅದ್ವೈತಿಗಳು ಇಲ್ಲಿ ಪ್ರಶ್ನಿಸುತ್ತಿದ್ದಾರೆ -

ಶಬ್ದಗಳ ಸಮನ್ವಯಕ್ಕೆ ಶಕ್ತಿವೃತ್ತಿಯನ್ನೇ ಏಕೆ ಆಶ್ರಯಿಸಬೇಕು. ಕೇವಲ ತಾತ್ಪರ್ಯವನ್ನು ಹೇಳಿದರೂ ಸಾಕಲ್ಲವೇ? ಬ್ರಹ್ಮನು ಆಯಾ ಶಬ್ದಗಳಿಂದ ಶಕ್ತಿವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ಪ್ರಮಾಣಗಳಿಲ್ಲ. ಮತ್ತು ಪ್ರಯೋಜನವೂ ಇಲ್ಲ ಎಂದು.

ಅದ್ವೈತಿಗಳ ಈ ಆಕ್ಷೇಪ ಸರಿಯಿಲ್ಲ. ಏಕೆಂದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ', 'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಇವೇ ಮೊದಲಾದ ಶ್ರುತಿಗಳು ಸ್ಪಷ್ಟವಾಗಿ ಪರಮಾತ್ಮನಲ್ಲಿ ಶಬ್ದಗಳು ಯೋಗವೃತ್ತಿಯಿಂದಲೇ ಇರುತ್ತವೆಂದು ಸಮರ್ಥಿಸುತ್ತಿವೆ. ಮತ್ತು 'ಆಸಮಂತಾತ್ ಕಾಶತೇ ಯದಾಕಾಶಃ' ಎಂಬ ಸ್ಮೃತಿಯು ಪರಮಾತ್ಮನಲ್ಲಿ ಯೋಗಾರ್ಥವನ್ನು ಹೇಳುವ ಮೂಲಕ, ಆಕಾಶಶಬ್ದವನ್ನು ಸಮನ್ವಯ ಮಾಡುತ್ತಿದೆ. ಶಾಂಕರಭಾಷ್ಯದಲ್ಲಿಯೂ ಕೂಡ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಗೆ ಯೌಗಿಕಾರ್ಥವನ್ನು ಸಮರ್ಥಿಸಿದ್ದಾರೆ. 'ಅಂತರ್ಯಾಮಿ', 'ಭೂಮಾ' ಮೊದಲಾದ ಶಬ್ದಗಳಿಗಂತೂ ಯೌಗಿಕಾರ್ಥವನ್ನು ಒಪ್ಪುವುದು ಅನಿವಾರ್ಯ. ಬೇರೆ ಅರ್ಥವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಪ್ರತಿಯೊಂದು ಶಬ್ದಗಳೂ ಪರಮಾತ್ಮನಲ್ಲಿ ಯೋಗವೃತ್ತಿಯಿಂದ ಮುಖ್ಯವಾಗಿವೆ ಎಂದು ಹೇಳಬೇಕು. ಭಾಷ್ಯಕಾರರು ಪ್ರತಿಯೊಂದು ಅಧಿಕರಣಗಳಲ್ಲಿಯೂ ಶಬ್ದಗಳನ್ನು ಸಮನ್ವಯ ಮಾಡುವಾಗ ಅನೇಕ ಶ್ರುತಿ-ಸ್ಮೃತಿ, ಪುರಾಣಗಳ ಆಧಾರವನ್ನು ನೀಡಿ, ಆಯಾ ಶಬ್ದಗಳಿಗೆ ಯೋಗವೃತ್ತಿಯನ್ನು ಸಮರ್ಥಿಸುತ್ತಾರೆ. ಇಷ್ಟೆಲ್ಲಾ ಪ್ರಮಾಣಗಳಿರುವುದರಿಂದ ಮತ್ತು ಅನಂತಗುಣಪರಿಪೂರ್ಣತ್ವವು ಸಿದ್ಧಿಸಬೇಕೆಂಬ ಮಹಾಪ್ರಯೋಜನವು ಇರುವುದರಿಂದಲೂ ಅದ್ವೈತಿಗಳ ತಿಳುವಳಿಕೆ ಅಯುಕ್ತವಾಗಿದೆ.




## तात्पर्यचन्द्रिका

**केचित्तु शरीरवाचिशब्दानां शरीरिपर्यंततया देवमनुष्यादिशब्देषु दर्शनात्सर्वस्य च ''यस्याव्यक्तं शरीरम्'' इत्यादिश्रुत्या ब्रह्मशरीरत्वात्सर्वेऽपि शब्दा ब्रह्मपर्यंता इत्याहुः ।**

ಅನುವಾದ - ರಾಮಾನುಜರ ಆಕ್ಷೇಪ - ಬ್ರಹ್ಮನಲ್ಲಿ ಯಾವುದೇ ಶಬ್ದಗಳು ಶಕ್ತಿವೃತ್ತಿಯಿಂದಾಗಲೀ, ಲಕ್ಷಣಾವೃತ್ತಿಯಿಂದಾಗಲೀ ಸಮನ್ವಯವಾಗುವುದಿಲ್ಲ. ಅದು ಹೀಗೆ - ದೇವತಾವಾಚಕವಾದ, ಮನುಷ್ಯವಾಚಕವಾದ ಶಬ್ದಗಳೆಲ್ಲವೂ ಶರೀರವನ್ನಷ್ಟೇ ಹೇಳುತ್ತದೆ. ಆದರೂ ಶರೀರಿಯಲ್ಲಿ ಪ್ರಯೋಗಿಸುವುದು ಕಂಡಿದೆ. 'ಚೈತ್ರನು ಬಂದನು' ಇತ್ಯಾದಿ ವಾಕ್ಯಗಳಲ್ಲಿ 'ಚೈತ್ರ' ಎಂಬ ಶಬ್ದವು ಅವನ ಶರೀರವನ್ನು ಹೇಳುತ್ತದೆ. ಆದರೆ ಗಮನಕ್ರಿಯಾದಿಗಳಿಗೆ ಆಶ್ರಯನಾದ ಆತ್ಮನನ್ನು ಶಬ್ದವು ತಿಳಿಸುತ್ತದೆ. ಇದರಂತೆ ಪ್ರತಿಯೊಂದು ಶಬ್ದಗಳು ಲೌಕಿಕಪದಾರ್ಥಗಳಲ್ಲೇ ಪ್ರತಿಪಾದನೆ ಮಾಡುತ್ತವೆ. 'ಯಸ್ಯಾವ್ಯಕ್ತಂ ಶರೀರಮ್' ಇತ್ಯಾದಿ ಶ್ರುತಿಯ ಆಧಾರದಿಂದ ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥಗಳು ಬ್ರಹ್ಮನ ಶರೀರವೇ ಆಗಿವೆ. ಆದ್ದರಿಂದ ಶರೀರಪ್ರತಿಪಾದಕವಾದ ಸಕಲಶಬ್ದಗಳು ಶರೀರಿಯಾದ ಬ್ರಹ್ಮನನ್ನು ತಿಳಿಸುತ್ತವೆ.

**तदपि न । जातिः शब्दार्थ इति भट्टादिमते व्यक्ताविव ब्रह्मणि लक्षणेति विवक्षायामुक्तश्रुत्यादिविरोधात् । अपसिद्धान्ताच्च ।**

ಇದು ತಪ್ಪು. ಭಾಟ್ಟರು ಜಾತಿಯನ್ನು ಶಬ್ದಾರ್ಥವೆನ್ನುತ್ತಾರೆ. ವ್ಯಕ್ತಿಯಲ್ಲಿ ಲಕ್ಷಣಾ ಮಾಡುತ್ತಾರೆ. ಅದರಂತೆ ನೀವೂ ಕೂಡ ಪ್ರತಿಯೊಂದು ಶಬ್ದಗಳು ಪ್ರತಿಪಾದನೆ ಮಾಡುತ್ತದೆ. ಶರೀರಿಯಲ್ಲಿ ಲಕ್ಷಣಾ ಮಾಡಬೇಕೆಂದು ಹೇಳುತ್ತಿದ್ದೀರಿ. ಹಾಗಾದರೆ ಹಿಂದೆ ಹೇಳಿದ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಅನೇಕ ಶ್ರುತಿಗಳ ವಿರೋಧ ನಿಮಗೂ ಕೂಡ ತಪ್ಪಿದ್ದಲ್ಲ. ಮತ್ತು ಅಪಸಿದ್ಧಾಂತವು ಬರುತ್ತದೆ. ಏಕೆಂದರೆ ನೀವು ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಶಬ್ದಗಳಿಗೆ ಒಪ್ಪಿಲ್ಲ. ಈಗ ಲಕ್ಷಣಾವೃತ್ತಿಯನ್ನು ಒಪ್ಪಿದರೆ ನಿಮ್ಮ ಸಿದ್ಧಾಂತಕ್ಕೆ ವಿರುದ್ಧವಾಗಿ ಹೇಳಿದಂತಾಯಿತು.

**ननु यथा प्राभाकरमते जातौ शक्तेनापि शब्देन व्यक्तिधीः । तथा हि । व्यक्ति परतन्त्रस्वभावैवाकृतिः प्रत्यक्षसिद्धा । न व्यक्त्यन्तरवत्स्वतन्त्रा । परतन्त्रा च परान्तर्भावघटितमूर्तिरिति शब्दादप्याकृतिस्तथैव भातीति जातिव्यक्त्योः शब्दजन्यैकधीवेद्यत्वेऽपि शब्दशक्तिरनन्यलभ्यायां जातावेव । नतु व्यक्तौ ।**

**नहि रूपिशून्या रूपधीरिति न्यायेन धर्मस्य धर्म्यालीढतयैव स्फूर्तिनियमान्नान्तरीयकतया जात्यन्तर्भावेणैव व्यक्तिधीसिद्ध्या व्यक्तेरनन्यलभ्यत्वाभावात् । नापि व्यक्तौ लक्षणा । एकधीवेद्यत्वात् । तथा सर्वस्यापि ब्रह्मपरतन्त्रस्वभावत्वाद्ब्रह्मणि शक्तेर्लक्षणायाश्चाभावेऽपि ब्रह्मणस्तत्तच्छब्दजन्यधीवेद्यतेति विवक्षितमिति चेन्न ।**

ಆಕ್ಷೇಪ - ಪ್ರಾಭಾಕರರ ಮತದಲ್ಲಿ ಜಾತಿಯನ್ನು ಶಬ್ದಗಳು ಶಕ್ತಿವೃತ್ತಿಯನ್ನು ಪ್ರತಿಪಾದನೆ ಮಾಡುತ್ತವೆ. ಆದರೂ ಕೂಡ ವ್ಯಕ್ತಿಯ ಜ್ಞಾನ ಬರುತ್ತದೆಂದು ಒಪ್ಪಿದ್ದಾರೆ. ಅದು ಹೀಗೆ - ಜಾತಿಯು ವ್ಯಕ್ತಿಪರತಂತ್ರಸ್ವಭಾವವುಳ್ಳದ್ದು. (ಆಕೃತಿ = ಜಾತಿ) ಅಂದರೆ ವ್ಯಕ್ತಿಯ ಅಧೀನವಾಗಿ ಜಾತಿಯಿರುತ್ತದೆಂದು ಪ್ರತ್ಯಕ್ಷಸಿದ್ಧವಾಗಿದೆ. ಹೊರತಾಗಿ, ಮತ್ತೊಂದು ವ್ಯಕ್ತಿಯಂತೆ ಜಾತಿಯು ಸ್ವತಂತ್ರವಲ್ಲ. ಹೀಗೆ ಪರತಂತ್ರವಾದ ಜಾತಿಯು ವ್ಯಕ್ತಿಯನ್ನೊಳಗೊಂಡೇ ಇರುತ್ತದೆ. ಅಂದರೆ ವ್ಯಕ್ಯಂತರ್ಭಾವಘಟಿತಮೂರ್ತಿಕವಾಗಿದೆ. ಯಾವಾಗ ಶಬ್ದವು ಜಾತಿಯನ್ನು ಪ್ರತಿಪಾದನೆ ಮಾಡುತ್ತದೋ, ಆವಾಗ ಜಾತಿಯ ಜೊತೆಗೆ ಇರುವಾಗ ವ್ಯಕ್ತಿಯ ಜ್ಞಾನವೂ ಕೂಡ ಬರುತ್ತದೆ. ಹೀಗೆ ಜಾತಿ ಹಾಗೂ ವ್ಯಕ್ತಿಗಳು ಶಬ್ದದಿಂದ ಹುಟ್ಟುವ ಒಂದೇ ಜ್ಞಾನದಲ್ಲಿ ವಿಷಯವಾಗಿರುತ್ತವೆ. ಆದರೂ ಕೂಡ ಅನನ್ಯಲಭ್ಯವಾದ ಜಾತಿಯಲ್ಲೇ ಶಬ್ದಗಳಿಗೆ ಶಕ್ತಿ ಹೊರತು, ವ್ಯಕ್ತಿಯಲ್ಲಲ್ಲ. ಅಂದರೆ ಜಾತಿಯನ್ನು ತಿಳಿಯಲು ಶಬ್ದಶಕ್ತಿ ಬಿಟ್ಟರೆ, ಮತ್ತೊಂದು ಆಧಾರವಿಲ್ಲ. ಹೀಗೆ ಅನನ್ಯಲಭ್ಯವಾದ ಕಾರಣ, ಶಬ್ದಗಳಿಗೆ ಜಾತಿಯಲ್ಲಿಯೇ ಶಕ್ತಿಯನ್ನು ಒಪ್ಪಬೇಕು.

ಯಾವರೀತಿಯಾಗಿ ರೂಪಜ್ಞಾನವು ರೂಪಿದ್ರವ್ಯರಹಿತವಾಗಿ ಬರಲಾರದು. 'ನಹಿ ರೂಪಶೂನ್ಯ ರೂಪಧೀಃ' ಎಂಬ ನ್ಯಾಯವು ಪ್ರಸಿದ್ಧವಾಗಿದೆಯೋ, ಅದರಂತೆ ಪ್ರಕೃತ ಧರ್ಮವೂ ಕೂಡ ಧರ್ಮಿಯಿಂದ ಸಹಿತವಾಗಿಯೇ ಇರುತ್ತದೆ. ಆದ್ದರಿಂದ ಧರ್ಮಜ್ಞಾನ ಬರಬೇಕಾದರೆ, ಧರ್ಮಿಜ್ಞಾನವೂ ಕೂಡ ಬಂದೇ ಬರುತ್ತದೆಂಬ ನಿಯಮವಿದೆ. ಹೀಗೆ ಅವ್ಯಭಿಚರಿತವಾಗಿ ವ್ಯಾಪ್ತಿಯನ್ನು ಹೊಂದಿರುವ ಕಾರಣ, ಜಾತ್ಯಂತರ್ಭಾವದಿಂದಲೇ ವ್ಯಕ್ತಿಜ್ಞಾನವು ಬರುತ್ತದೆಂದು ತಿಳಿಯಬೇಕು. ವ್ಯಕ್ತಿಯು ಜಾತಿಯಂತೆ ಅನನ್ಯಲಭ್ಯವಲ್ಲದ ಕಾರಣ ಅದರಲ್ಲಿ ಶಕ್ತಿಯನ್ನು ಒಪ್ಪಬೇಕಾಗಿಲ್ಲ. ಹಾಗಾದರೆ ಜಾತಿಯಲ್ಲಿ ಶಕ್ತಿಯನ್ನು ಒಪ್ಪಿ, ವ್ಯಕ್ತಿಯಲ್ಲಿ ಲಕ್ಷಣಾವನ್ನು ಒಪ್ಪಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಒಂದೇ ಜ್ಞಾನದಲ್ಲಿ ಜಾತಿ ಹಾಗೂ ವ್ಯಕ್ತಿಗಳು ಎರಡೂ ವಿಷಯವಾಗಿರುವುದರಿಂದ ಲಕ್ಷಣಾ ಮಾಡಲು ಸಾಧ್ಯವಿಲ್ಲ. ಮೊದಲು ಶಕ್ತಿ ಜ್ಞಾನ ಬಂದು ಅದರಲ್ಲಿ ಅನುಪಪತ್ತಿ ಕಂಡಿದ್ದರೆ ಲಕ್ಷಣಾವನ್ನು ಮಾಡಬಹುದಿತ್ತು.

ಪ್ರಾಭಾಕರರ ಈ ಸಮರ್ಥನೆಯಂತೆ ನಾವೂ ಕೂಡ ಸಕಲಪದಾರ್ಥಗಳು ಬ್ರಹ್ಮನ ಅಧೀನವಾಗಿರುವುದರಿಂದ ಬ್ರಹ್ಮನಲ್ಲಿ ಶಕ್ತಿಯನ್ನಾಗಲೀ, ಲಕ್ಷಣಾವನ್ನಾಗಲೀ ಒಪ್ಪುವುದಿಲ್ಲ. ಆದರೂ

ಕೂಡ ಬ್ರಹ್ಮನು ಎಲ್ಲಾ ಶಬ್ದಗಳಿಂದ ಹುಟ್ಟುವ ಜ್ಞಾನಕ್ಕೆ ವಿಷಯನಾಗುತ್ತಾನೆ. ಜಾತಿಯು ವ್ಯಕ್ತಿಯ ಅಧೀನವಾಗಿದೆ. ಅದರಂತೆ ಸಕಲಪದಾರ್ಥಗಳು ಬ್ರಹ್ಮನ ಅಧೀನವಾಗಿವೆ. ಅನನ್ಯಲಭ್ಯವಾದ ಜಾತಿಯಲ್ಲಿ ಶಕ್ತಿಯನ್ನು ಒಪ್ಪುವುದು ಅನಿವಾರ್ಯ. ಅದರಂತೆ ಅನನ್ಯಲಭ್ಯವಾದ ಇತರ ಪದಾರ್ಥಗಳಲ್ಲಿ ಶಕ್ತಿಯನ್ನು ಒಪ್ಪುವುದು ಅನಿವಾರ್ಯ. ಅಲ್ಲಿ ಜಾತಿಯು ವ್ಯಕ್ತಿಘಟಿತವಾಗಿಯೇ ಜ್ಞಾನದಲ್ಲಿ ವಿಷಯವಾಗುವಂತೆ, ಇಲ್ಲಿಯೂ ಕೂಡ ಸಕಲ ಪದಾರ್ಥಗಳು ಬ್ರಹ್ಮನಿಂದ ಘಟಿತವಾಗಿಯೇ ವಿಷಯವಾಗುತ್ತವೆ. ಆದ್ದರಿಂದ ವ್ಯಕ್ತಿಯಲ್ಲಿ ಹೇಗೆ ಶಕ್ತಿವೃತ್ತಿಯಾಗಲೀ, ಲಕ್ಷಣಾ-ವೃತ್ತಿಯಾಗಲೀ ಇರುವುದಿಲ್ಲವೋ, ಅದರಂತೆ ಇಲ್ಲಿಯೂ ಕೂಡ ಬ್ರಹ್ಮನಲ್ಲಿ, ಶಕ್ತಿವೃತ್ತಿಯನ್ನಾಗಲೀ, ಲಕ್ಷಣಾವೃತ್ತಿಯನ್ನಾಗಲೀ ಒಪ್ಪಬೇಕಾಗಿಲ್ಲ.

**तत्सङ्घटिततयैव प्रतीतियोग्यत्वं हि तत्परतन्त्रस्वभावत्वम् । न त्वन्यत् । प्रकृतानुपयोगात् ।**

ನಿರಾಕರಣೆ - ಆಕಾಶಾದಿ ಸಮಸ್ತ ಪದಾರ್ಥಗಳು ಬ್ರಹ್ಮಘಟಿತಮೂರ್ತಿಕವಾದ್ದರಿಂದ, ಆಕಾಶಾದಿ ಪದಾರ್ಥಗಳನ್ನು ತಿಳಿಸುವ ಶಬ್ದಗಳೇ ಒಳಗಿರುವ ಬ್ರಹ್ಮನನ್ನೂ ಕೂಡ ತಿಳಿಸುತ್ತವೆ. ಆದ್ದರಿಂದ ಶಕ್ತಿಯನ್ನಾಗಲೀ, ಲಕ್ಷಣಾವನ್ನಾಗಲೀ, ಬ್ರಹ್ಮನಲ್ಲಿ ಮಾಡಬೇಕಾಗಿಲ್ಲವೆಂದು ಆಕ್ಷೇಪ ಮಾಡಲಾಯಿತು. ಇದು ಸರಿಯಲ್ಲ. ಏಕೆಂದರೆ 'ಬ್ರಹ್ಮಪರತಂತ್ರಸ್ವಭಾವ' ಎಂಬ ಶಬ್ದಕ್ಕೆ ಹೀಗರ್ಥ - 'ತತ್ ಸಂಘಟಿತತಯೈವ ಪ್ರತೀತಿಯೋಗ್ಯತ್ವಂ' ಯಾವುದರ ಜೊತೆಗೆ ಸೇರಿಕೊಂಡೇ ಪ್ರತೀತಿ ಬರಲು ಯೋಗ್ಯವಾಗಿರುತ್ತದೋ, ಅದು ತತ್‌ಪರತಂತ್ರಸ್ವಭಾವ ಎನಿಸಿಕೊಳ್ಳುತ್ತದೆ. ಉದಾಹರಣೆ - ಗೋತ್ವವು ಗೋ ಎಂಬ ವ್ಯಕ್ತಿಯಿಂದ ಸಂಘಟಿತಮೂರ್ತಿಕವಾಗಿಯೇ ತೋರುತ್ತದೆ. ಆದ್ದರಿಂದ ಗೋತ್ವವು 'ಗೋಪರತಂತ್ರಸ್ವಭಾವ' ಎನಿಸುತ್ತದೆ. ಆದರೆ ಆಕಾಶಾದಿ ಸಮಸ್ತ ಪದಾರ್ಥಗಳು ಬ್ರಹ್ಮಸಂಘಟಿತವಾಗಿಯೇ ತೋರುತ್ತಿವೆ ಎಂದು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಬ್ರಹ್ಮಪರತಂತ್ರ ಸ್ವಭಾವವೆಂದು ಹೇಳಲಾಗದು. ಈ ಪರಿಷ್ಕಾರ ಬಿಟ್ಟು ನೀವು ಹೇಳಿದಂತೆ 'ತದಧೀನಸತ್ತಾಕತ್ವಮ್' ಅಥವಾ 'ತದಧೀನ ಪ್ರವೃತ್ತಿನಿಮಿತ್ತತ್ವಮ್' ಎಂಬುದನ್ನು ಬ್ರಹ್ಮಪರತಂತ್ರಸ್ವಭಾವ ಎನ್ನಲಾಗದು. ಹಾಗೇ ಹೇಳುವುದು ಪ್ರಕೃತಕ್ಕೆ ಅನುಪಯುಕ್ತವಾಗಿದೆ.

**न हि वृश्चिकवाप्वादिशब्दैस्तदुपादानस्य गोमयाकाशादेर्वा गन्धादि-शब्दैस्तदाश्रयस्य पृथिव्यादेर्वा धीरस्ति । तच्च योग्यत्वं तादृशप्रतीत्या कल्प्यम् ।**

ಯಾವುದು ಯಾವುದಕ್ಕೆ ಉಪಾದಾನಕಾರಣವೋ, ಅದು ಉಪಾದೇಯಜ್ಞಾನದಲ್ಲಿ ನಿಯಮೇನ ತೋರುತ್ತದೆ ಎಂಬ ಮತ್ತು ಯಾವುದು ಯಾವುದರಲ್ಲಿ ಆಶ್ರಿತವೋ, ಅದು ಆಶ್ರಯಜ್ಞಾನದಿಂದ

ನಿಯಮೇನ ತೋರುತ್ತದೆ ಎಂಬ ನಿಮ್ಮ ಮಾತಿಗೆ ವ್ಯಭಿಚಾರವಿದೆ. ವಾಯುವಿಗೆ ಆಕಾಶವು ಉಪಾದಾನಕಾರಣವಾಗಿದೆ. ಅದರಂತೆ ಚೇಳಿಗೆ ಗೋಮಯವು ಉಪಾದಾನಕಾರಣವಾಗಿದೆ. ಇಲ್ಲಿ ಉಪಾದೇಯವಾದ ವಾಯುವಿನ ಜ್ಞಾನ ಬರಬೇಕಾದರೆ, ಉಪಾದಾನಭೂತವಾದ ಆಕಾಶದ ಜ್ಞಾನ ಬರುವುದು ಕಂಡಿಲ್ಲ. ಅದರಂತೆ ಉಪಾದೇಯವಾದ ಚೇಳಿನ ಜ್ಞಾನ ಬರಬೇಕಾದರೆ ಉಪಾದಾನಭೂತವಾದ ಗೋಮಯದ ಜ್ಞಾನ ಬರುವುದು ಕಂಡಿಲ್ಲ. ಮತ್ತು ಗಂಧಾದಿಗಳಿಗೆ ಪೃಥಿವ್ಯಾದಿಗಳು ಆಶ್ರಯವಾಗಿವೆ. ಇಲ್ಲಿ ಆಶ್ರಿತವಾದ ಗಂಧಾದಿಗಳ ಜ್ಞಾನದಿಂದ ಆಶ್ರಯಭೂತವಾದ ಪೃಥಿವ್ಯಾದಿಗಳು ತಿಳಿಯುತ್ತವೆಂದೂ ಕೂಡ ಹೇಳಲಾಗದು.

ಪರತಂತ್ರಸ್ವಭಾವವೆಂದರೆ ತತ್‌ಸಂಘಟಿತತಯ್ಯೆವ ಪ್ರತೀತಿಯೋಗ್ಯತ್ವಂ' ಎಂದರ್ಥ. ಆದ್ದರಿಂದ ಪ್ರತೀತಿಯಿದ್ದರೆ ಯೋಗ್ಯತೆಯನ್ನು ಕಲ್ಪನೆ ಮಾಡಲೇಬೇಕು.

**नच गवादिशब्देभ्यो व्यक्तिघटितजातेरिव घटादिशब्देभ्यो लोके ब्रह्मघटितघटादिधीः ।**

ಗೋವು ಮೊದಲಾದ ಶಬ್ದಗಳನ್ನು ಕೇಳಿದಾಗ, ಗೋ ಎಂಬ ವ್ಯಕ್ತಿಸಹಿತವಾದ ಗೋತ್ವವು ತೋರುವಂತೆ ಘಟ ಮೊದಲಾದ ಶಬ್ದಗಳಿಂದ ಬ್ರಹ್ಮಘಟಿತವಾದ ಘಟಜ್ಞಾನವು ಬರುವುದು ಲೋಕದಲ್ಲಿ ಕಂಡಿಲ್ಲ.

**वेदेऽपि ''आकाशादेव समुत्पद्यन्त'' इत्यादौ केवलब्रह्मण एव धीः । अन्यथा तस्य ब्रह्मणि समन्वयो न स्यात् ।**

ವೇದದಲ್ಲಿಯೂ ಕೂಡ 'ಆಕಾಶಾದೇವ ಸಮುತ್ಪದ್ಯಂತೇ' ಇತ್ಯಾದಿ ವಾಕ್ಯಗಳನ್ನು ಕೇಳಿದಾಗ ಆಕಾಶಶಬ್ದದಿಂದ ಕೇವಲ ಬ್ರಹ್ಮಜ್ಞಾನವಷ್ಟೇ ಬರುತ್ತಿದೆ. ಹೊರತು, ಬ್ರಹ್ಮಘಟಿತಮೂರ್ತಿಕವಾದ ಆಕಾಶಾದಿಜ್ಞಾನ ಬರುತ್ತಿಲ್ಲ. ಹೀಗೊಪ್ಪದಿದ್ದರೆ, ಆಕಾಶಾದಿ ಶಬ್ದಗಳ ಸಮನ್ವಯವು ಬ್ರಹ್ಮನಲ್ಲಿ ಸಿದ್ಧವಾಗದೇ ಇರಬೇಕಾದೀತು.

**'आकाशः सम्भूतः' इत्यादौ तु केवलाकाशस्यैव धीः । व्युत्पत्तिबलादत्रापि ब्रह्मघटिताकाशप्रतीतिकल्पनायां त्वन्योन्याश्रयः ।**

'ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮನ ಜ್ಞಾನ ಬರುತ್ತಿಲ್ಲ. ಆದ್ದರಿಂದ ವ್ಯುತ್ಪತ್ತಿಬಲದಿಂದ ಬ್ರಹ್ಮಘಟಿತ ಆಕಾಶಪ್ರತೀತಿಯನ್ನು ಕಲ್ಪನೆ ಮಾಡುತಿದ್ದಿರಿ. ಬ್ರಹ್ಮಸಹಿತನಾದ ಆಕಾಶದ ಪ್ರತೀತಿಯು ಅನುಭವದಿಂದ ಬರುವುದಿಲ್ಲ. ಒಂದು ವೇಳೆ ವ್ಯುತ್ಪತ್ತಿಬಲದಿಂದ ಇಲ್ಲಿಯೂ

ಕೂಡ ಬ್ರಹ್ಮಘಟಿತಮೂರ್ತಿಕವಾದ ಆಕಾಶದ ಪ್ರತೀತಿ ಬರುತ್ತದೆಂದು ಕಲ್ಪನೆ ಮಾಡಿದರೆ, ಅನ್ಯೋನ್ಯಾಶ್ರಯದೋಷ ಬರುತ್ತದೆ. ಆದರೆ ಪ್ರತೀತಿಬಲದಿಂದಲೇ ವ್ಯುತ್ಪತ್ತಿ ಹುಟ್ಟಬೇಕು. ಹಾಗಾಗಿ ವ್ಯುತ್ಪತ್ತಿಯು ಸಿದ್ಧವಾದರೆ ಅದರ ಬಲದಿಂದ ತತ್‌ಘಟಿತವಾದ ಪ್ರತೀತಿಯು ಸಿದ್ಧವಾಗುತ್ತದೆ. ಪ್ರತೀತಿಯು ಸಿದ್ಧವಾದ ಮೇಲೆ ಆದರ ಬಲದಿಂದ ವ್ಯುತ್ಪತ್ತಿಯು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ.

**एवञ्च न काप्याकाशादिशब्दैर्ब्रह्मसङ्घटिताकाशादिधीरिति कथमाकाशादेर्ब्रह्मपरतन्त्रस्वभावता ।**

ಆದ್ದರಿಂದ ಎಲ್ಲಿಯೂ ಕೂಡ ಆಕಾಶಾದಿಶಬ್ದಗಳನ್ನು ಕೇಳಿದಾಗ ಬ್ರಹ್ಮಘಟಿತಮೂರ್ತಿಕವಾದ ಆಕಾಶಾದಿಗಳ ಪ್ರತೀತಿ ಬರುತ್ತಲೇ ಇಲ್ಲ. ಹೀಗಿರುವಾಗ ಆಕಾಶಾದಿಗಳು ಬ್ರಹ್ಮಪರತಂತ್ರಸ್ವಭಾವವಾಗಿವೆ ಎಂದು ಹೇಗೆ ಹೇಳಿದಿರಿ?

**एतेन यथा देवादिशब्दाः कृष्णरामादिशब्दा वा शरीरविशिष्ट शरीरिवाचकास्तथाऽऽकाशादिशब्दा अपि ब्रह्मशरीरभूताकाशादिविशिष्टब्रह्मवाचका इति निरस्तम् ।**

ಹೀಗೆ ರಾಮಾನುಜರ ಒಂದು ವಿಚಾರವನ್ನು ನಿರಾಕರಣೆ ಮಾಡಿದ್ದರಿಂದ, ಮತ್ತೊಂದು ವಿಚಾರವೂ ಕೂಡ ನಿರಾಕೃತವಾಯಿತು - 'ದೇವ ಮೊದಲಾದ ಶಬ್ದಗಳು ಕೃಷ್ಣ, ರಾಮ ಮೊದಲಾದ ಶಬ್ದಗಳು ಶರೀರವಿಶಿಷ್ಟವಾದ ಶರೀರಿಯನ್ನೇ ಹೇಳುತ್ತವೆ. ಅದೇ ರೀತಿಯಾಗಿ ಆಕಾಶ ಮೊದಲಾದ ಶಬ್ದಗಳೂ ಕೂಡ ಬ್ರಹ್ಮನಿಗೆ ಶರೀರಭೂತವಾದ ಆಕಾಶಾದಿವಿಶಿಷ್ಟವಾಗಿ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆ' ಎಂದು.

ಇವರ ವಾದವು ಈಗ ನಿರಸ್ತವಾಯಿತು.

**शरीरजडकृशस्थूलादिशब्दानां केवलशरीर इव लोक आकाशादिशब्दानां केवलाकाशादावेव प्रयोगात् ।**

'ಶರೀರ', 'ಜಡ', 'ಕೃಶ', 'ಸ್ಥೂಲ' ಇವೇ ಮೊದಲಾದ ಶಬ್ದಗಳನ್ನು ಕೇವಲ ಶರೀರದಲ್ಲಷ್ಟೇ ಪ್ರಯೋಗಿಸುತ್ತಾರೆ. ಹೊರತು, ಶರೀರವಿಶಿಷ್ಟವಾದ ಶರೀರಿಯಲ್ಲಿ ಈ ಶಬ್ದಗಳನ್ನು ಯಾರೂ ಪ್ರಯೋಗ ಮಾಡುವುದಿಲ್ಲ. ಅದರಂತೆ ಲೋಕದಲ್ಲಿ ಆಕಾಶ ಮೊದಲಾದ ಶಬ್ದಗಳನ್ನು ಕೇವಲ ಆಕಾಶಾದಿಗಳಲ್ಲಷ್ಟೇ ಪ್ರಯೋಗ ಮಾಡುತ್ತಾರೆ. ಹೊರತು, ಆಕಾಶಾದಿವಿಶಿಷ್ಟವಾದ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆ ಎಂದು ಯಾರೂ ಹೇಳುತ್ತಿಲ್ಲ.

**वेदेऽपि ''आकाशादेव समुत्पद्यन्ते'' इत्यादौ केवले विशेष्ये ''यस्याव्यक्तं शरीरं यस्य पृथिवी शरीरं यस्यापः शरीरं यस्याग्निः शरीरं यस्यात्मा शरीरम्'' इत्यादौ च केवलेविशेषणे प्रयोगेण विशिष्टे प्रयोगाभावात् ।**

ಲೋಕದಲ್ಲಿ ಹೇಗೆ ಪ್ರಯೋಗ ಕಂಡಿಲ್ಲವೋ, ಅದೇ ರೀತಿಯಾಗಿ ವೇದದಲ್ಲಿಯೂ ಅಂತಹ ಪ್ರಯೋಗ ಕಂಡಿಲ್ಲ. 'ಆಕಾಶಾದೇವ ಸಮುತ್ಪದ್ಯಂತೇ' ಇತ್ಯಾದಿ ವಾಕ್ಯಗಳಲ್ಲಿ 'ಆಕಾಶ' ಎಂಬ ಶಬ್ದವು ವಿಶೇಷ್ಯಭೂತವಾದ ಆಕಾಶವನ್ನಷ್ಟೇ ಪ್ರತಿಪಾದನೆ ಮಾಡುತ್ತಿದೆ. ಇನ್ನು 'ಯಸ್ಯಾವ್ಯಕ್ತಂ ಶರೀರಂ ಯಸ್ಯ ಪೃಥಿವೀ ಶರೀರಂ ಯಸ್ಯಾಪಃ ಶರೀರಂ ಯಸ್ಯಾಗ್ನಿಃ ಶರೀರಂ ಯಸ್ಯಾತ್ಮಾ ಶರೀರಮ್' ಇತ್ಯಾದಿ ವಾಕ್ಯಗಳಲ್ಲಿ ವಿಶೇಷಣನಾದ ಬ್ರಹ್ಮನಲ್ಲಿಯೇ ಪ್ರಯೋಗ ಕಂಡಿದೆ. ಹೊರತು, ನೀವು ಹೇಳುವಂತೆ ಆಯಾ ಶರೀರವಿಶಿಷ್ಟನಾದ ಬ್ರಹ್ಮನು ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬುದು ಕಂಡಿಲ್ಲ.

**सम्भूतादिवाक्ये न विशिष्टपरत्वम् । तथात्वे हि विशिष्ट उपादानकारणत्ववत्कार्यत्वस्यापि सत्त्वेन विशेष्ये कार्यत्ववत्कारणत्वस्याप्यभावेन श्रुतिषु ब्रह्मणि कार्यत्वं निषिध्य कारणत्वं न विधीयेत ।**

'ಆತ್ಮನಃ ಆಕಾಶಃಸಂಭೂತಃ' ಇತ್ಯಾದಿ ವಾಕ್ಯದಲ್ಲಿ ಆಕಾಶಾದಿವಿಶಿಷ್ಟನಾದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಹೇಳಲಾಗದು. ಹಾಗೇ ಹೇಳಿದರೆ ಸಂಭೂತತ್ವವನ್ನು ಕೇವಲ ಆಕಾಶದಲ್ಲಿ ಅನ್ವಯ ಮಾಡಬೇಕು. ಅಂದರೆ ಕಾರ್ಯತ್ವವು ವಿಶೇಷಣದಲ್ಲಿ ಮಾತ್ರ ಅನ್ವಯವಾಗುತ್ತವೆ, ವಿಶೇಷ್ಯದಲ್ಲಿ ಅನ್ವಯವಾಗುವುದಿಲ್ಲವೆಂದು ಹೇಳಿದಂತಾಗುತ್ತದೆ. ಹೀಗೆ ಹೇಳಿದರೆ, ಕೇವಲ ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ನೀವು ಒಪ್ಪಿಲ್ಲ. ಆದ್ದರಿಂದ ಸೂಕ್ಷ್ಮಚಿದಚಿದ್‌ವಿಶಿಷ್ಟನಾದ ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಹೇಳುತ್ತೀರಿ. ವಿಶಿಷ್ಟನಿಗೆ ಉಪಾದಾನಕಾರಣತ್ವವನ್ನು ಹೇಳುವಾದ ವಿಶೇಷ್ಯನಾದ ಬ್ರಹ್ಮನಿಗೆ ಹೇಗೆ ಉಪಾದಾನಕಾರಣತ್ವವು ಬರುತ್ತದೋ, ಅದೇ ರೀತಿಯಾಗಿ ವಿಶಿಷ್ಟಬ್ರಹ್ಮನಿಗೆ ಕಾರ್ಯತ್ವವನ್ನು ಹೇಳುವಾಗ, ವಿಶೇಷ್ಯನಾದ ಬ್ರಹ್ಮನಿಗೂ ಕಾರ್ಯತ್ವವು ಬರುತ್ತದೆ. ಹೀಗೆ ಬ್ರಹ್ಮನಿಗೆ ಕಾರ್ಯತ್ವ, ಕಾರಣತ್ವ ಎರಡೂ ಕೂಡ ಬರುತ್ತದೆಂದು ಹೇಳಬೇಕು. ಕೇವಲ ಕಾರಣತ್ವಮಾತ್ರ ಬರುತ್ತದೆಂದು ಹೇಳಲಾಗದು. ಇನ್ನು ಕಾರ್ಯತ್ವ ಹಾಗೂ ಕಾರಣತ್ವ ಎರಡನ್ನೂ ಕೂಡ ಗೌಣವಾಗಿ ಹೇಳುವುದಾದರೆ, ಶ್ರುತಿಗಳಲ್ಲಿ ಕಾರ್ಯತ್ವವನ್ನು ನಿಷೇಧ ಮಾಡಿ, ಕಾರಣತ್ವವನ್ನು ವಿಧಾನ ಮಾಡುವುದು ತಪ್ಪಾಗುತ್ತದೆ.

**ईश्वरविशिष्टे पुनरीश्वरप्रवेशायोगेन सृष्टिवाक्यस्याकाशादिशब्दानां केवलाकाशादिपरत्वस्यैव न्याय्यत्वाच्च ।**

'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್', 'ಬ್ರಹ್ಮನು ಜಗತ್ತನ್ನು ಸೃಷ್ಟಿಮಾಡಿ ಅನಂತರ ಪ್ರವೇಶಿಸಿದನು' ಎಂದು ಹೇಳಲಾಗಿದೆ. ಪ್ರಕೃತ ನೀವು ತೇಜಸ್ಸು, ಅಪ, ಅನ್ನ ಮೊದಲಾದ ಶಬ್ದಗಳಿಗೆ ವಿಶಿಷ್ಟನಾದ ಬ್ರಹ್ಮನೆಂದು ಅರ್ಥೈಸುವುದಾರೆ, ತೇಜಸ್ಸು ಮೊದಲಾದವುಗಳಿಂದ ವಿಶಿಷ್ಟನಾದ ಬ್ರಹ್ಮನಲ್ಲಿ ತಾನು ಪ್ರವೇಶಿಸಿದನು ಎಂದು ಹೇಳಬೇಕು. ಇದು ಹೇಗೆ ಸಾಧ್ಯ ? ಈಶ್ವರವಿಶಿಷ್ಟನಾದ ವಸ್ತುವಿನಲ್ಲಿ ಪುನಃ ಈಶ್ವರ ಪ್ರವೇಶವು ಅಯುಕ್ತವಾಗುತ್ತದಷ್ಟೇ. ಮತ್ತು ಸೃಷ್ಟಿವಾಕ್ಯದಲ್ಲಿ ಆಕಾಶಾದಿಶಬ್ದಗಳಿಗೆ ಕೇವಲ ಆಕಾಶಾದಿಪರತ್ವವನ್ನು ಹೇಳುವುದು ನ್ಯಾಯಸಮ್ಮತವಾಗಿದೆ.

**यदि च विशिष्टवाचिनां तेषां विशेषणे लक्षणा तर्हि समन्वयविषये विशेष्ये ब्रह्मण्यपि सा स्यात् ।**

ಒಂದು ವೇಳೆ ಆಕಾಶ ಮೊದಲಾದ ಶಬ್ದಗಳು ಆಕಾಶಾದಿವಿಶಿಷ್ಟನಾದ ಬ್ರಹ್ಮನಿಗೆ ವಾಚಕವಾಗಿದೆ. ಆಕಾಶಾದಿವಿಶೇಷಣಗಳಲ್ಲಿ ಲಕ್ಷಣಾವೃತ್ತಿಯಿಂದ ಬರುತ್ತವೆಂದು ಹೇಳಿದರೆ, ಸಮನ್ವಯಕ್ಕೆ ವಿಷಯನಾದ ವಿಶೇಷ್ಯಭೂತನಾದ ಬ್ರಹ್ಮನಲ್ಲಿಯೂ ಅಂತಹ ಶಬ್ದಗಳು ಬಾರದಿರಬೇಕಾದೀತು. ಆದ್ದರಿಂದ ಆಕಾಶಾದಿ ಶಬ್ದಗಳ ಸಮನ್ವಯವನ್ನೇ ಮಾಡಿದಂತಾಗುವುದಿಲ್ಲ.

**किञ्च लोकवेदानुसारेण विशेषणवाचितैव । वेदे कचिद्विशिष्टे लक्षणेत्येव किं न स्यात् ।**

ಮತ್ತು ಲೌಕಿಕಪ್ರಯೋಗ ಹಾಗೂ ವೈದಿಕಪ್ರಯೋಗಗಳಿಗೆ ಅನುಸಾರಿಯಾಗಿ ಶಬ್ದಗಳು ವಿಶೇಷಣವನ್ನೇ ಪ್ರತಿಪಾದನೆ ಮಾಡುತ್ತವೆಂದು ಹೇಳಬೇಕು. ವೇದದಲ್ಲಿ ಕೆಲವೊಮ್ಮೆ ವಿಶಿಷ್ಟದಲ್ಲಿ ಲಕ್ಷಣಾ ಮಾಡಲಾಗುತ್ತದೆ ಎಂದು ಏಕೆ ಹೇಳಬಾರದು ?

**प्रकाशः –**

''तदभिध्यानादेव तु तल्लिङ्गात् सः'' इत्यादिसूत्रभाष्योक्तमनूद्य निराह – **केचित्त्विति ।।**

ವಿವರಣೆ - 'ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ' ಇತ್ಯಾದಿ ಸೂತ್ರದ ಭಾಷ್ಯದಲ್ಲಿ ಹೇಳಿದ ವಿಚಾರವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಕೇಚಿತ್' ಇತ್ಯಾದಿ ಗ್ರಂಥದಿಂದ.

**प्रकाशः – उक्तेति ।।** ''नामानि सर्वाणि यमाविशन्ति, सर्वे वेदा यत्पदमामनन्ति, वचसां वाच्यमुत्तमं सर्वस्य तदधीनत्वात्तत्तच्छब्दाभिधेयता'' इत्यादिश्रुतिस्मृतिविरोधादित्यर्थः ।।

'ನಾಮಾನಿ ಸರ್ವಾಣಿ ಯಮಾವಿಶಂತಿ, ಸರ್ವೇ ವೇದಾ ಯತ್ಪದಮಾಮನಂತಿ, ವಚಸಾಂ ವಾಚ್ಯಮುತ್ತಮಂ ಸರ್ವಸ್ಯ ತದಧೀನತ್ವಾತ್ತತ್ತಚ್ಛಬ್ದಾಭಿಧೇಯತಾ' ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಬ್ರಹ್ಮನಲ್ಲಿಯೇ ಸಕಲಶಬ್ದಗಳು ಶಕ್ತಿವೃತ್ತಿಯಿಂದ ಇರುತ್ತವೆಂದು ಸಮರ್ಥಿಸಲಾಗಿದೆ. ನೀವು ಲಕ್ಷಣಾವೃತ್ತಿಯನ್ನು ಮಾಡಿದರೆ ಇವುಗಳ ವಿರೋಧ ಬರುತ್ತದೆ.

**प्रकाशः – अपसिद्धान्ताच्चेति** ।। ''चराचरव्यपाश्रयस्तु स्यात्तद् व्यपदेशो भाक्तः'' इत्यत्र वाच्यत्वोक्तेरिति भावः ।। **न त्वन्यदिति** ।। तदुपादानत्वादिकमित्यर्थः ।।

'ಚರಾಚರವ್ಯಪಾಶ್ರಯಸ್ತು ಸ್ಯಾತ್ ತದ್‌ವ್ಯಪದೇಶೋ ಭಾಕ್ತಃ ತದ್ಭಾವಭಾವಿತ್ವಾತ್' ಎಂಬ ಸೂತ್ರದಲ್ಲಿ ನೀವೇ ಬ್ರಹ್ಮನಿಗೆ ವಾಚ್ಯತ್ವವನ್ನು ಪ್ರತಿಪಾದನೆ ಮಾಡಿರುತ್ತೀರಿ. ಆದ್ದರಿಂದ ಅಪಸಿದ್ಧಾಂತ ಬರುತ್ತದೆ. 'ನ ತ್ವನ್ಯತ್' ಎಂದರೆ 'ತತ್ ಸಂಘಟಿತತಯೈವ ಪ್ರತೀತಿಯೋಗ್ಯತ್ವಮ್ ಬ್ರಹ್ಮಪರತಂತ್ರಸ್ವಭಾವತ್ವಮ್' ಎಂದು ಹೇಳಬೇಕು ಹೊರತು, 'ತದುಪಾದಾನಕತ್ವ' ಎಂದಾಗಲೀ 'ತದಾಶ್ರಿತತ್ವ' ಎಂದಾಗಲೀ ಹೇಳಬಾರದು ಎಂದರ್ಥ.

**प्रकाशः – प्रकृतेति** ।। एकवित्तिवेद्यत्वरूपप्रकृतप्रमेयानुपयोगादित्यर्थः । तदेव व्यनक्ति ।। **न हीति** ।।

'ಪ್ರಕೃತ ಅನುಪಯೋಗಾತ್' ಎಂದರೆ 'ಏಕವಿತ್ತಿವೇದ್ಯತ್ವ' ಎಂಬ ಪ್ರಕೃತ ಪ್ರಮೇಯಕ್ಕೆ ತದುಪಾದಾನತ್ವಾದಿಗಳು ಅನುಪಯುಕ್ತವಾಗಿವೆ ಎಂದರ್ಥ. ಅದನ್ನೇ 'ನ ಹಿ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः** – लोकेऽभावेऽपि स्याद्वेदे तथा धीरित्यत आह – **वेदेऽपीति** ।। **अन्योन्याश्रय इति** ।। व्युत्पत्तौ सिद्धायां तद्बलात्तद्घटिततत्प्रतीतिः तथाप्रतीतौ सिद्धायां तद्बलात्तथा व्युत्पत्तिग्रह इत्यन्योन्याश्रय इत्यर्थः ।।

ಲೋಕದಲ್ಲಿ ಹಾಗೇ ಪ್ರಯೋಗವಿಲ್ಲದಿದ್ದರೂ ವೇದದಲ್ಲಿ ಶರೀರವಾಚಕ ಶಬ್ದಗಳು ಶರೀರಿಯನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ವೇದೇಽಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅನ್ಯೋನ್ಯಾಶ್ರಯವನ್ನು ಹೀಗೆ ತಿಳಿಯಬೇಕು. ವ್ಯುತ್ಪತ್ತಿಯು ಸಿದ್ಧವಾದರೆ ಅದರ ಬಲದಿಂದ, ವ್ಯುತ್ಪತ್ತಿ ಘಟಿತವಾದ ಪ್ರತೀತಿಯು ಸಿದ್ಧವಾಗುತ್ತದೆ. ಪ್ರತೀತಿಯು ಸಿದ್ಧವಾದರೆ ಅದರ ಬಲದಿಂದ ವ್ಯುತ್ಪತ್ತಿಯು ಸಿದ್ಧವಾಗುತ್ತದೆ ಎಂದು.

**प्रकाशः – कृष्णेति** ।। तन्मते कृष्णरामादेरपि भिन्नशरीराङ्गीकारात्तद्विशिष्टवाचिता कृष्णादिशब्दस्य ध्येया ।।

ರಾಮಾನುಜ ಮತದಲ್ಲಿ ಕೃಷ್ಣ-ರಾಮಾದಿಗಳಿಗೆ ಭಿನ್ನವಾದ ಶರೀರವಿರುತ್ತದೆಂದು ಅಂಗೀಕರಿಸಲಾಗಿದೆ. ಆದ್ದರಿಂದ ಶರೀರವಾಚಕವಾದ ಶಬ್ದಗಳು ಕೃಷ್ಣ-ರಾಮಾದಿ ಶರೀರಿಯನ್ನು ಹೇಳುತ್ತವೆಂದು ಇವರ ಅಭಿಪ್ರಾಯ.

**प्रकाशः – सम्भूतादिवाक्य इति** ।। न विशिष्टपरत्वमिति पदच्छेदः ।। **श्रुतिष्विति** ।। न जायते म्रियत इत्यादिष्वित्यर्थः ।।

ಗ್ರಂಥದಲ್ಲಿ 'ಸಂಭೂತವಾಕ್ಯೇ ನ ವಿಶಿಷ್ಟಪರತ್ವಮ್' ಎಂದು ಹೇಳಿದ್ದಾರೆ. 'ಸಂಭೂತವಾಕ್ಯೇನ' ಎಂದು ಇಲ್ಲಿ ಪದಚ್ಛೇದ ಮಾಡಬಾರದು. ಹೊರತಾಗಿ 'ಸಂಭೂತವಾಕ್ಯೇ' 'ನ' ಎಂದೇ ಪದಚ್ಛೇದ ಮಾಡಬೇಕು. 'ಶ್ರುತಿಷು' ಎಂದರೆ 'ನ ಜಾಯತೇ ಮ್ರಿಯತೇ' ಇತ್ಯಾದಿ ಶ್ರುತಿಗಳಲ್ಲಿ ಎಂದರ್ಥ.

**प्रकाशः – पुनरीश्वरप्रवेशेति** ।। ''तत्सृष्ट्वा तदेवानुप्राविशत्'' इत्युक्तप्रवेशायोगेनेत्यर्थः । **विशेषणे** आकाशादावित्यर्थः ।।

'ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬುದಾಗಿ ತಾನು ಸೃಷ್ಟಿ ಮಾಡಿದ ವಸ್ತುಗಳಲ್ಲಿ ತಾನೇ ಪ್ರವೇಶ ಮಾಡುತ್ತಾನೆಂದು ಹೇಳಲಾಗಿದೆ. ಇದೂ ಕೂಡ ಅಯುಕ್ತವಾಗಬೇಕಾದೀತು. 'ವಿಶೇಷಣೇ' ಎಂದರೆ ಆಕಾಶಾದಿಗಳಲ್ಲಿ ಎಂದರ್ಥ.

**प्रकाशः – सा स्यादिति** ।। ननु विशिष्टवाचिनां स्वातन्त्र्येणोपस्थित्यर्थं विशेषणे लक्षणा न विशेष्यत इति चेन्न । नियामकाभावादिति भावः ।

ವಿಶಿಷ್ಟವಾಚಕವಾದ ಶಬ್ದಗಳು ಸ್ವಾತಂತ್ರ್ಯೇಣ ಉಪಸ್ಥಿತವಾಗಲು ವಿಶೇಷಣದಲ್ಲಿ ಲಕ್ಷಣಾ ಮಾಡುತ್ತೇವೆ. ಹೊರತು ವಿಶೇಷ್ಯದಲ್ಲಿ ಅಲ್ಲ ಎಂದರೆ ನಿಯಾಮಕವಿಲ್ಲ. ವಿಶೇಷ್ಯದಲ್ಲಿಯೇ ಲಕ್ಷಣಾ ಮಾಡಿ, ವಿಶೇಷಣದಲ್ಲಿ ಶಕ್ತಿವೃತ್ತಿಯನ್ನು ಒಪ್ಪಬಹುದೆಂದು ಆಕ್ಷೇಪ ಮಾಡಲಾಗಿದೆ.




ಶರೀರವಾಚಕವಾದ ಶಬ್ದಗಳೇ, ಶರೀರಿಯನ್ನು ಹೇಳುತ್ತವೆಂಬುದು ಲೋಕದಲ್ಲಿ ಕಂಡಿದೆ. 'ದೇವತೆಯು ಮಾತನಾಡಿದನು' 'ಮನುಷ್ಯನು ಬಂದನು' ಹೀಗೆಲ್ಲಾ ಪ್ರಯೋಗಿಸುವಾಗ ದೇವ, ಮನುಷ್ಯ ಮೊದಲಾದ ಶಬ್ದಗಳು ಶರೀರವನ್ನೇ ಹೇಳುತ್ತವಾದರೂ, ಕ್ರಿಯೆಗೆ ಆಶ್ರಯನಾದವನು ಚೇತನನಾದ್ದರಿಂದ ಶರೀರಿಯಲ್ಲಿ ಪ್ರಯೋಗಿಸಲಾಗುತ್ತದೆ. ಅದರಂತೆ ಜಗತ್ತಿನಲ್ಲಿರುವ ಸಕಲ ಪದಾರ್ಥಗಳು ಬ್ರಹ್ಮನ ಶರೀರವೇ ಆಗಿವೆ. ಇವುಗಳೆಲ್ಲವೂ ಶರೀರಿಯಾದ ಬ್ರಹ್ಮನಲ್ಲೇ ಪರ್ಯವಸಾನವಾಗುತ್ತವೆ. ಇದನ್ನು ಸಮರ್ಥಿಸುವುದೇ ಸಮನ್ವಯಾಧ್ಯಾಯದ ಮುಖ್ಯ ಉದ್ದೇಶ.

ರಾಮಾನುಜರ ಈ ಧೋರಣೆ ಸರಿಯಿಲ್ಲ. ಭಾಟ್ಟರು ವ್ಯಕ್ತಿಯಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿ, ಜಾತಿಯಲ್ಲಿ ಶಕ್ತಿವೃತ್ತಿಯನ್ನು ಒಪ್ಪುತ್ತಾರೆ. ಆದರಂತೆ ರಾಮಾನುಜರೂ ಕೂಡ ಹೇಳಿದರೆ ಅಪಸಿದ್ಧಾಂತ

ಬರುತ್ತದೆ. ಇನ್ನು ಪ್ರಾಭಾಕರರು ಜಾತಿಯಲ್ಲಿ ಶಕ್ತಿ ಇದ್ದರೂ ವ್ಯಕ್ತಿಯ ಜ್ಞಾನವೂ ಕೂಡ ಬರುತ್ತದೆ ಎನ್ನುತ್ತಾರೆ. ತುಲ್ಯವೃತ್ತಿವೇದ್ಯತಯಾ ಜಾತಿಜ್ಞಾನ ಬರುವಾಗಲೇ ವ್ಯಕ್ತಿಜ್ಞಾನ ಬರುತ್ತದೆಂಬುದೇ ಇವರ ಅಭಿಪ್ರಾಯ. ಅದರಂತೆ ಬ್ರಹ್ಮಘಟಿತಮೂರ್ತಿಕವಾದ ಪದಾರ್ಥಗಳನ್ನು ಬೋಧಿಸುವ ಶಬ್ದಗಳು ಬ್ರಹ್ಮನನ್ನೂ ಕೂಡ ಬೋಧಿಸುತ್ತವೆ ಎಂದು ಹೇಳಬೇಕು. ಇದೂ ಕೂಡ ಸರಿಯಲ್ಲ. ಏಕೆಂದರೆ ಸಕಲಪದಾರ್ಥಗಳು ಬ್ರಹ್ಮಪರತಂತ್ರಸ್ವಭಾವಭೂತವಾಗಿವೆಯೆಂದು ಹೇಳುತ್ತಿದ್ದೀರಿ. 'ಬ್ರಹ್ಮಪರತಂತ್ರ ಸ್ವಭಾವ' ಎಂದರೆ 'ತತ್ಸಂಘಟಿತತಯೈವ ಪ್ರತೀತಿಯೋಗ್ಯತ್ವ' ಎಂದರ್ಥ. ಆದರೆ ವೃಶ್ಚಿಕ, ವಾಯು ಮೊದಲಾದ ಶಬ್ದಗಳನ್ನು ಕೇಳಿದಾಗ, ಅವುಗಳಿಗೆ ಉಪಾದಾನಕಾರಣವಾದ ಗೋಮಯ, ಆಕಾಶ ಮೊದಲಾದವುಗಳ ಜ್ಞಾನ ಬರುವುದು ಕಂಡಿಲ್ಲ. ಆದ್ದರಿಂದ ತದುಪಾದಾನಕತ್ವವನ್ನು ಬ್ರಹ್ಮಪರತಂತ್ರಸ್ವಭಾವವೆಂದು ಹೇಳಲಾಗದು. ಅದರಂತೆ ಗಂಧ ಮೊದಲಾದ ಶಬ್ದಗಳನ್ನು ಕೇಳುವುದರಿಂದ, ಗಂಧಾದಿಗಳಿಗೆ ಆಶ್ರಯವಾದ ಪ್ರತಿವಾದಿಗಳ ಜ್ಞಾನ ಬರುವುದು ಕಂಡಿಲ್ಲ. ಆದ್ದರಿಂದ ತದಾಶ್ರಿತತ್ವವನ್ನು ಬ್ರಹ್ಮಪರತಂತ್ರಸ್ವಭಾವವೆಂದು ಹೇಳಲಾಗದು. ಹೊರತಾಗಿ 'ತತ್ಸಂಘಟಿತತಯೈವ ಪ್ರತೀತಿಯೋಗ್ಯತ್ವಮ್' ಎಂದು ಹೇಳಬೇಕು. ಹೀಗೆ ಹೇಳಿದರೆ ಗವಾದಿಶಬ್ದಗಳಿಂದ ಗೋ ಮೊದಲಾದ ವ್ಯಕ್ತಿಗಳಿಂದ ಘಟಿತವಾದ ಜಾತಿಯ ಜ್ಞಾನ ಬರುವಂತೆ ಘಟಾದಿ ಶಬ್ದಗಳಿಂದ ಬ್ರಹ್ಮಘಟಿತವಾದ ಘಟಾದಿಗಳ ಜ್ಞಾನ ಬರುತ್ತದೆಂಬುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ವೇದದಲ್ಲಿಯೂ ಕೂಡ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ವಾಕ್ಯವನ್ನು ಕೇಳಿದಾಗ ಬ್ರಹ್ಮನ ಜ್ಞಾನವಷ್ಟೇ ಬರುತ್ತಿದೆ. ಆದ್ದರಿಂದ ಲೋಕದಲ್ಲಿ ಎಲ್ಲಿಯೂ ಕೂಡ ಆಕಾಶಾದಿ ಶಬ್ದಗಳಿಂದ ಬ್ರಹ್ಮಘಟಿತವಾದ ಆಕಾಶಾದಿಗಳ ಜ್ಞಾನ ಬರುವುದು ಕಂಡಿಲ್ಲ. ಆದ್ದರಿಂದ ರಾಮಾನುಜರ ಸಮರ್ಥನೆ ಅಸಾಧುವಾಗಿದೆ.

## ರಾಮಾನುಜಮತದ ಸಂಪೂರ್ಣ ನಿರಾಕರಣೆ

## तात्पर्यचन्द्रिका

**एवं ''अहं ब्रह्मास्मि'' ''तत्त्वमसि'' इत्यादावहमर्थादिविशिष्टे ब्रह्मण्यहमादिशब्दानां मुख्यत्वे ''तदात्मानमेवावेदहं ब्रह्मास्मि'' ''तान्यहं वेद सर्वाणि न त्वं वेत्थ परतप'' इति निष्कृष्टे ब्रह्मादावहमादिशब्दानां लक्षणा स्यात् । ततो वरं लोकवेदानुसारेणाहमाद्यर्थे मुख्यता ।**

ಅನುವಾದ - ಸಕಲ ಪದಾರ್ಥಗಳು ಬ್ರಹ್ಮಘಟಿತಮೂರ್ತಿಕವಾಗಿಯೇ ತೋರುವುದಾದರೆ ಶ್ರುತಿಗೆ ವ್ಯಾಖ್ಯಾನವನ್ನು ನಿಮಗೆ ಮಾಡಲು ಸಾಧ್ಯವಾಗುವುದಿಲ್ಲ. 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' ಇವೇ ಮೊದಲಾದ ಶ್ರುತಿಗಳಲ್ಲಿ ಇರುವ 'ಅಹಂ' ಮೊದಲಾದ ಶಬ್ದಗಳು ಅಹಮರ್ಥವಿಶಿಷ್ಟನಾದ ಬ್ರಹ್ಮನಲ್ಲಿ ಮುಖ್ಯಾರ್ಥವನ್ನು ಹೇಳುತ್ತವೆಂದು ನೀವು ವ್ಯಾಖ್ಯಾನಿಸಬೇಕು. ಹಾಗಾದರೆ 'ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯಲ್ಲಿ 'ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ' ಎಂಬ ಸ್ಮೃತಿಯಲ್ಲಿ, ಬ್ರಹ್ಮ, ಜೀವ ಮೊದಲಾದವರಲ್ಲಿ 'ಅಹಂ ತ್ವಂ' ಮೊದಲಾದ

ಶಬ್ದಗಳಿಗೆ ಲಕ್ಷಣಾವನ್ನು ಮಾಡಬೇಕಾಗುತ್ತದೆ. ಏಕೆಂದರೆ 'ಅಹಂ ಬ್ರಹ್ಮಾಸ್ಮಿ' ಎಂಬಲ್ಲಿ 'ಅಹಂ' ಶಬ್ದಕ್ಕೆ ಅಹಮರ್ಥವಿಶಿಷ್ಟನಲ್ಲಿ ಮುಖ್ಯಾರ್ಥತ್ವವನ್ನು ಹೇಳುವುದಾದರೆ, ಈಶ್ವರನೇ ಸ್ವತಃ ತನ್ನನ್ನು ಬ್ರಹ್ಮನೆಂದು ತಿಳಿದುಕೊಳ್ಳುತ್ತಾನೆ ಎನ್ನುವ 'ತದಾತ್ಮಾನಾಂ' ಎಂಬ ಶ್ರುತಿಯಲ್ಲಿರುವ 'ಅಹಂ' ಶಬ್ದಕ್ಕೂ ಅಹಮರ್ಥವಿಶಿಷ್ಟನೇ ಮುಖ್ಯಾರ್ಥನಾಗುತ್ತಾನೆ. ಬ್ರಹ್ಮನು ಅಮುಖ್ಯಾರ್ಥನಾಗಬೇಕಾಗುತ್ತದೆ. ಅದೇ ರೀತಿಯಲ್ಲಿ ಗೀತಾವಾಕ್ಯದಲ್ಲಿರುವ 'ಅಹಂ' ಶಬ್ದಕ್ಕೂ ಕೂಡ ಕೃಷ್ಣನು ಲಕ್ಷಣಯಾ ಪ್ರತಿಪಾದ್ಯನಾಗಿ, ಅರ್ಜುನನೂ ಕೂಡ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನೆಂದಾಗಬೇಕಾದೀತು. ಹೀಗೆ ಕಷ್ಟದಿಂದ ವ್ಯಾಖ್ಯಾನ ಮಾಡುವುದಕ್ಕಿಂತಲೂ ಲೋಕ ಹಾಗೂ ವೇದಗಳಿಗೆ ಅನುಸಾರಿಯಾಗಿ 'ಅಹಂ' ಮೊದಲಾದ ಶಬ್ದಗಳಿಗೆ ಅಹಮಾದ್ಯರ್ಥದಲ್ಲಿಯೇ ಮುಖ್ಯತ್ವವನ್ನು ಹೇಳುವುದು ಸ್ವರಸವಾಗುತ್ತದೆ. ಅಂದರೆ 'ಅಹಂ ಬ್ರಹ್ಮಾಸ್ಮಿ' ಎಂಬಲ್ಲಿ ಒಂದು ಕಡೆ ನೀವು ಅಹಮರ್ಥಾದಿವಿಶಿಷ್ಟನಲ್ಲಿ ವಾಚ್ಯತ್ವವನ್ನು ಹೇಳಲು ಹೋಗಿ, ಉಳಿದೆಲ್ಲ ಲೌಕಿಕ ಹಾಗೂ ವೈದಿಕವ್ಯವಹಾರಗಳಲ್ಲಿರುವ 'ಅಹಂ' ಶಬ್ದಕ್ಕೆ ಲಕ್ಷಣಾ ಮಾಡುತ್ತಿದ್ದೀರಿ. ಅದಕ್ಕಿಂತಲೂ ಲೌಕಿಕ ಹಾಗೂ ವೈದಿಕಪ್ರಯೋಗಗಳಲ್ಲಿರುವಂತೆ ಅಹಮಾದ್ಯರ್ಥದಲ್ಲಿ ಮುಖ್ಯಾರ್ಥತ್ವವನ್ನು ಒಪ್ಪಿ, 'ಅಹಂ ಬ್ರಹ್ಮಾಸ್ಮಿ' ಎಂಬಲ್ಲಿರುವ 'ಅಹಂ' ಶಬ್ದಕ್ಕೆ ಅಹಮರ್ಥಾದಿ ವಿಶಿಷ್ಟನಲ್ಲಿ ಲಕ್ಷಣಾ ಮಾಡುವುದೇ ಸೂಕ್ತವಾಗುತ್ತದೆ.

**तद्विशिष्टे तु ब्रह्मणि कचिल्लक्षणा वा अस्मद्रीत्या प्रसिद्धनिमित्तस्य तदधीनत्वादिना शुद्ध एव ब्रह्मणि मुख्यता वा ।**

ಅಹಮರ್ಥಾದಿ ವಿಶಿಷ್ಟನಾದ ಬ್ರಹ್ಮನಲ್ಲಿ ಲಕ್ಷಣಾ ಮಾಡಬೇಕಾದ ಪ್ರಸಂಗ ಒಂದೆರಡು ಸ್ಥಳಗಳಲ್ಲಿ ಮಾತ್ರ. ಉಳಿದೆಲ್ಲೆಡೆ ಶಕ್ತಿವೃತ್ತಿಯನ್ನೇ ಒಪ್ಪಬಹುದು. ಹೀಗೆ ನೀವು ವ್ಯಾಖ್ಯಾನಿಸುವುದು ಸೂಕ್ತವಾಗುತ್ತದೆ.

ಅಥವಾ ನಾವು ಹೇಳುವಂತೆ ಅಹಮಾದಿ ಶಬ್ದಗಳಿಗೆ ಪ್ರಸಿದ್ಧವಾದ ಯಾವ ಪ್ರವೃತ್ತಿನಿಮಿತ್ತವಿರುತ್ತದೋ, ಅದು ಭಗವದಧೀನವಾಗಿರುತ್ತದೆಂದು ಶುದ್ಧಬ್ರಹ್ಮನಲ್ಲಿಯೇ ಮುಖ್ಯವಾದ ವ್ಯವಹಾರವನ್ನು ಕೂಡಿಸಬಹುದು. ಅಥವಾ ಅಹೇಯನಾದ್ದರಿಂದ ಅಹಂಶಬ್ದಪ್ರತಿಪಾದ್ಯ-ನಾಗಿದ್ದಾನೆಂದೂ ಕೂಡ ಮುಖ್ಯವ್ಯವಹಾರವನ್ನು ಕೂಡಿಸಬಹುದು.

**देवादिशब्दास्त्वात्ममात्रे शरीरमात्रे च न प्रयुज्यन्त इति वैषम्यम् ।**

ದೇವ, ಮನುಷ್ಯ ಮೊದಲಾದ ಶಬ್ದಗಳಿಗೆ ವಿಶಿಷ್ಟವಾಚಕತ್ವವನ್ನು ಒಪ್ಪಬಹುದು. ಕೇವಲ ಆತ್ಮನಲ್ಲಾಗಲೀ, ಕೇವಲ ಶರೀರದಲ್ಲಾಗಲೀ, 'ದೇವಃ' 'ಮನುಷ್ಯಃ' ಇತ್ಯಾದಿ ಪ್ರಯೋಗಗಳು ಸರ್ವಥಾ ಇರುವುದಿಲ್ಲ. ಹೊರತಾಗಿ ದೇಹವಿಶಿಷ್ಟನಾದ ಆತ್ಮನಲ್ಲಿಯೇ ಪ್ರಯೋಗಗಳಿರುತ್ತವೆ. ಆದ್ದರಿಂದ ಈ ದೃಷ್ಟಾಂತವೇ ವಿಷಮವಾಗಿದೆ. ಆದರೆ ಪ್ರಕೃತ ಆಕಾಶ ಮೊದಲಾದ ಶಬ್ದಗಳನ್ನು

ವಿಶಿಷ್ಟನಲ್ಲಿ ಪ್ರಯೋಗ ಮಾಡುವುದು ಕಂಡಿಯೇ ಇಲ್ಲ. ಲೋಕದಲ್ಲಾಗಲೀ, ವೇದದಲ್ಲಾಗಲೀ ಕೇವಲ ಆಕಾಶದಲ್ಲಷ್ಟೇ ಪ್ರಯೋಗಿಸುತ್ತಾರೆ. ಹೀಗಿರುವಾಗ ದೇವಾದಿಶಬ್ದಗಳ ದೃಷ್ಟಾಂತದಿಂದ ಆಕಾಶಾದಿ ಶಬ್ದಗಳಿಗೆ ವಿಶಿಷ್ಟವಾಚಕತ್ವವನ್ನು ಪ್ರತಿಪಾದನೆ ಮಾಡಲು ಬರುವುದೇ ಇಲ್ಲ.

**किञ्च सर्वं न मुख्यत ईश्वरस्य शरीरम् ।**

**अशरीरं शरीरेष्वनवस्थेष्ववस्थितम् ।**
**महान्तं विभुमात्मानं मत्वा धीरो न शोचति ।**

**स यश्चायमशरीरः प्रज्ञात्मः'' इत्यादिश्रुतिभिः, ''नैव प्रकृतिजाः क्वचित्'' इत्यादिस्मृतिभिश्च भगवतः प्राकृतशरीरनिषेधेन प्राकृतस्य पृथिव्यादेरीश्वर-शरीरत्वायोगात् ।**

ಮತ್ತು ಸಕಲ ಪದಾರ್ಥಗಳು ಈಶ್ವರನಿಗೆ ಮುಖ್ಯವಾಗಿ ಶರೀರವಾಗಲು ಸಾಧ್ಯವೇ ಇಲ್ಲ. ಏಕೆಂದರೆ -

'ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ।
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ।'

ಪರಮಾತ್ಮನು ಶರೀರಿಯಾಗಿದ್ದಾನೆ. ಶರೀರಗಳಲ್ಲಿ ನೆಲೆಸದಿದ್ದರೂ, ನೆಲೆಸಿದಂತೆ ಇರುತ್ತಾನೆ. ಮಹಾತ್ಮನೂ, ವ್ಯಾಪ್ತನೂ, ನಿಯಾಮಕನೂ ಆದ ಇಂತಹ ಪರಮಾತ್ಮನನ್ನು ಯಾರು ತಿಳಿಯುತ್ತಾನೋ, ಅಂತಹ ಧೀರನಿಗೆ ದುಃಖವೇ ಆಗುವುದಿಲ್ಲ. 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' ಪ್ರಜ್ಞಾತ್ಮನಾದ ಪರಮಾತ್ಮನು ಅಶರೀರಿಯಾಗಿದ್ದಾನೆ. ಇವೇ ಮೊದಲಾದ ಶ್ರುತಿಗಳಿಂದ 'ನೈವ ಪ್ರಕೃತಿಜಾಃ ಕ್ವಚಿತ್' ಪ್ರಾಕೃತ ಪದಾರ್ಥಗಳ ಸಂಪರ್ಕವು ಎಂದೂ ಬರುವುದಿಲ್ಲ. ಇವೇ ಮೊದಲಾದ ಶ್ರುತಿಗಳಿಂದ ಭಗವಂತನಿಗೆ ಪ್ರಾಕೃತ ಶರೀರದ ನಿಷೇಧವು ತಿಳಿಯುತ್ತದೆ. ಆದ್ದರಿಂದ ಪ್ರಾಕೃತವಾದ ಪೃಥ್ವೀ ಮೊದಲಾದವುಗಳು ಈಶ್ವರನಿಗೆ ಶರೀರವಾಗಲು ಸಾಧ್ಯವಿಲ್ಲ.

**पृथिव्यादेरीश्वरभोगायतनत्वाभावेनाशरीरत्वोक्तौ च भोगायतनवाचिनां देवादिशब्दानामेव शरीरिपर्यन्तताया दृष्टत्वेन पृथिव्यादिशब्दानामीश्वरपर्यन्तता न स्यात् ।**

ಪೃಥಿವ್ಯಾದಿಗಳು ಈಶ್ವರನ ಭೋಗಕ್ಕೆ ಆಶ್ರಯವಲ್ಲದ ಕಾರಣ, ಶ್ರುತಿ-ಸ್ಮೃತಿಗಳಲ್ಲಿ ಅವನನ್ನು ಅಶರೀರಿ ಎನ್ನಲಾಗಿದೆ. ಹೊರತು ಪೃಥಿವ್ಯಾದಿಗಳು ಶರೀರವೇ ಎಂದರ್ಥವಲ್ಲ ಎಂದು ವಿಶಿಷ್ಟಾದ್ವೈತಿಗಳು ವ್ಯಾಖ್ಯಾನ ಮಾಡಬಹುದು.

ಆದರೆ ಇದು ಸರಿಯಲ್ಲ. ಏಕೆಂದರೆ ಭೋಗಕ್ಕೆ ಆಶ್ರಯವಾದ ಪದಾರ್ಥವನ್ನು ಪ್ರತಿಪಾದಿಸುವ ದೇವ, ಮನುಷ್ಯ ಮೊದಲಾದ ಶಬ್ದಗಳಷ್ಟೇ ಶರೀರಿಯನ್ನು ಪ್ರತಿಪಾದನೆ ಮಾಡುತ್ತಿರುವುದು ಲೋಕದಲ್ಲಿ ಕಂಡಿದೆ. ಪ್ರಕೃತ ಪೃಥಿವ್ಯಾದಿಗಳು ಈಶ್ವರನ ಭೋಗಕ್ಕೆ ಆಶ್ರಯವಲ್ಲವೆಂದು ನೀವು ಹೇಳುವುದಾದರೆ, ಪೃಥಿವ್ಯಾದಿ ಶಬ್ದಗಳೂ ಕೂಡ ಶರೀರಿಯೆನಿಸಿದ ಈಶ್ವರನ ಪರ್ಯಂತವಾಗಿ ಹೋಗಲಾರವು.

**पृथिव्याद्या देवतास्तु देहवत्तद्वशत्वतः ।**
**शरीरमिति चोच्यन्ते यस्य विष्णोर्महात्मनः ।।**

**इति स्मृतेश्च न पृथिव्यादि मुख्यं शरीरम् ।**

ಪೃಥಿವ್ಯಾದ್ಯಾ ದೇವತಾಸ್ತು ದೇಹವತ್ತದ್ವಶತ್ವತಃ।
ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋರ್ಮಹಾತ್ಮನಃ ॥

ಪೃಥಿವ್ಯಾದಿ ದೇವತೆಗಳು ಪರಮಾತ್ಮನ ಅಧೀನರಾದ್ದರಿಂದ ಅವನ ದೇಹದಂತೆ ಇರುತ್ತಾರೆ. ಆದ್ದರಿಂದಲೇ ಶ್ರುತಿ-ಸ್ಮೃತಿಗಳಲ್ಲಿ ಕೆಲವೊಮ್ಮೆ ಪೃಥಿವ್ಯಾದಿಗಳನ್ನು ಮಹಾತ್ಮನಾದ ಪರಮಾತ್ಮನ ಶರೀರವೆಂದು ಹೇಳಲಾಗುತ್ತದೆ ಎಂಬ ಸ್ಮೃತಿವಾಕ್ಯದಿಂದ ಪೃಥಿವ್ಯಾದಿ ಪ್ರಾಕೃತ ಪದಾರ್ಥಗಳು ಪರಮಾತ್ಮನಿಗೆ ಮುಖ್ಯವಾದ ಶರೀರವಲ್ಲ. ತದಭಿಮಾನಿದೇವತೆಗಳು ಅಧೀನರಾದ್ದರಿಂದ ಶರೀರವೆಂದು ಕರೆಸಿಕೊಳ್ಳುತ್ತಾರೆ ಎಂದು ತಿಳಿಯಬೇಕು.

**किञ्च ''यस्य पृथिवी शरीरम्'' इत्यादिना न जडस्येश्वरशरीरत्वसिद्धिः, ''यं पृथिवी न वेद'' इत्यादिवाक्यशेषेण पृथिव्यादेश्चेतनत्वात् ।**

ಮತ್ತು 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿ ವಾಕ್ಯದಲ್ಲಿರುವ 'ಪೃಥಿವೀ' ಮೊದಲಾದ ಶಬ್ದಗಳು ಜಡವಾದ ಈಶ್ವರನ ಶರೀರವಾಗಲು ಸಾಧ್ಯವಿಲ್ಲ. ಏಕೆಂದರೆ 'ಯಂ ಪೃಥಿವೀ ನ ವೇದ' ಎಂಬ ವಾಕ್ಯಶೇಷದಲ್ಲಿ ಯಾರನ್ನು ಪೃಥಿವಿಯು ತಿಳಿಯವುದಿಲ್ಲವೋ ಎಂದು ಹೇಳಿರುವುದರಿಂದ ಪೃಥಿವಿಯು ಚೇತನವೆಂದು ತಿಳಿಯುತ್ತದೆ. ಆದ್ದರಿಂದ ಜಡವಾದ ಪೃಥಿವಿಯು 'ಪೃಥಿವೀ' ಶಬ್ದದಿಂದ ಪ್ರತಿಪಾದ್ಯವಾಗದೇ ತದಭಿಮಾನಿದೇವತೆಯಷ್ಟೇ ಪ್ರತಿಪಾದ್ಯರಾಗುತ್ತಾರೆ.

**किञ्च ''अशरीरम्'' इति श्रुत्या लोकतः प्राप्तशरीरस्यैव निषेधात्तदनुरोधेन ''यस्याव्यक्तं शरीरम्'' इत्यादिकं न लोकसिद्धशरीरपरमिति न देवमनुष्यादि-शब्दसाम्यसिद्धिः ।**

ಮತ್ತು 'ಅಶರೀರಮ್' ಎಂಬ ಶ್ರುತಿಯಿಂದ ಲೋಕತಃ ಪ್ರಾಪ್ತವಾದ ಪ್ರಾಕೃತ ಶರೀರವನ್ನಷ್ಟೇ ನಿಷೇಧ ಮಾಡಲಾಗಿದೆ. ಆದ್ದರಿಂದ ಅದಕ್ಕನುಸಾರಿಯಾಗಿ 'ಯಸ್ಯಾವ್ಯಕ್ತಂ ಶರೀರಮ್' ಇತ್ಯಾದಿ ವಾಕ್ಯಗಳಲ್ಲಿಯೂ ಲೋಕಸಿದ್ಧವಾದ ಶರೀರವನ್ನು ವಿವಕ್ಷಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ದೇವ, ಮನುಷ್ಯ ಮೊದಲಾದ ಶಬ್ದಗಳ ಸಾಮ್ಯವನ್ನು ಈ ಪೃಥಿವ್ಯಾದಿಶಬ್ದಗಳಲ್ಲಿ ಹೇಳಬಾರದು.

**अपि च यस्य चेतनस्य यद् द्रव्यं सर्वात्मना स्वार्थे नियन्तुं धारयितुं च शक्यं, तच्छेषतैकस्वरूपं च तत्तस्य शरीरमिति भवद्भिरुक्तत्वान्न तदधीनत्वातिरिक्तं शरीरत्वमस्ति ।**

ಮತ್ತು ಯಾವ ಚೇತನನಿಗೆ ಯಾವ ದ್ರವ್ಯವು ಎಲ್ಲ ರೀತಿಯಿಂದ ಸ್ವಾರ್ಥದಲ್ಲಿ ನಿಯಮನ ಮಾಡಿಕೊಳ್ಳಲು ಮತ್ತು ಧಾರಣೆ ಮಾಡಿಕೊಳ್ಳಲು ಸಮರ್ಥವಾಗುತ್ತದೋ, ಅಂತಹ ಪದಾರ್ಥವಷ್ಟೇ ಅವನಿಗೆ 'ಶೇಷತೈಕಸ್ವರೂಪಂ' ಶರೀರ ಎನಿಸುತ್ತದೆ ಮತ್ತು ಅಂಗಭೂತ ಅಪ್ರಧಾನವಾಗಿರುತ್ತದೆ. ಹೀಗೆ ನೀವು ಶರೀರ ಶಬ್ದವನ್ನು ನಿರ್ವಚನ ಮಾಡುತ್ತೀರಿ. ಈ ನಿರ್ವಚನವನ್ನು ನೋಡಿದಾಗ 'ತದಧೀನತ್ವವನ್ನೇ ಶರೀರತ್ವ' ಎಂದು ಹೇಳಿದಂತಾಗುತ್ತದೆ. ನಾವೂ ಕೂಡ ತದಧೀನತ್ವವನ್ನೇ ಶರೀರತ್ವ ಎಂದು ಹೇಳುತ್ತಿದ್ದೇವೆ. ಆದ್ದರಿಂದ ತದಧೀನತ್ವಕ್ಕಿಂತ ಅತಿರಿಕ್ತವಾದ ಶರೀರತ್ವವನ್ನೇನೂ ನೀವು ಹೇಳಿರುವುದಿಲ್ಲ.

**एतेन ''हन्ताहमिमास्तिस्रो देवता अनेन जीवेनात्मनानुप्रविश्य नामरूपे व्याकरवाणि नामरूपे व्याकरोत्'' इति श्रुतावीश्वरप्रवेशानन्तरं नामरूपव्याकरणोक्तेः सर्वशब्दास्तत्तद्विशिष्टेश्वरवाचिन इति निरस्तम् ।**

ಹೀಗೆ ಹೇಳಿದ್ದರಿಂದ 'ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ ನಾಮರೂಪೇ ವ್ಯಾಕರೋತ್' ಮೂರುಬಗೆಯ ದೇವತೆಗಳು ಅನಿರುದ್ಧರೂಪಿಯಾದ ಪರಮಾತ್ಮನಿಂದ ಪ್ರವೇಶಿಸಲ್ಪಟ್ಟವು. ಅನಂತರ ಅವುಗಳ ನಾಮ ಹಾಗೂ ರೂಪಗಳ ಸೃಷ್ಟಿಯಾಯಿತು. ಹೀಗೆ ಶ್ರುತಿಯಲ್ಲಿ ಈಶ್ವರನ ಪ್ರವೇಶದ ಅನಂತರ ನಾಮ ಹಾಗೂ ರೂಪಗಳ ಸೃಷ್ಟಿಯನ್ನು ಹೇಳಲಾಗಿದೆ. ಆದ್ದರಿಂದ ಸಕಲಶಬ್ದಗಳು ಆಯಾ ಪದಾರ್ಥಗಳ ವಿಶಿಷ್ಟನಾದ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ವಾದವನ್ನು ನಿರಾಕರಿಸಿದಂತಾಯಿತು.

**विशेषणादावपि प्रयोगस्य दर्शितत्वात् ।**

ಏಕೆಂದರೆ ವಿಶೇಷಣದಲ್ಲಷ್ಟೇ ಪ್ರಯೋಗವಿರುತ್ತದೆಂದು ಈಗಾಗಲೇ ನಾವು ಹೇಳಿದ್ದೇವೆ. ಜಡವಾಗಿದೆ, ಕೃಶವಾಗಿದೆ ಇತ್ಯಾದಿ ಶಬ್ದಗಳು ವಿಶೇಷಣವಾದ ಶರೀರದಲ್ಲಷ್ಟೇ ಪ್ರಯೋಗವಿರುತ್ತದೆ.

ಅಷ್ಟೇ ಅಲ್ಲದೇ ಇದೇ ಶ್ರುತಿಯಲ್ಲಿಯೂ ದೇವತಾ ಪದವು ವಿಶೇಷಣದಲ್ಲಿ ಪ್ರಯೋಗ ಮಾಡಿರುವುದು ಕಂಡಿದೆ.

**किञ्च जीवेनात्मनेति श्रवणात्त्वन्मते च जीवशब्दस्य जीवशरीरकब्रह्मवाचित्वा-ज्जीवशरीरकात्मनानुप्रविष्टस्य वाच्यत्वं स्यात्, नतु घटाद्यनुप्रविष्टस्य ।**

ಮತ್ತು 'ಜೀವೇನಾತ್ಮನಾ' ಎಂಬುದಾಗಿ ಶ್ರುತಿಯು ಜೀವಶಬ್ದವನ್ನು ಪ್ರಯೋಗಿಸಿದೆ. ನಿಮ್ಮ ಮತದಲ್ಲಿ ಜೀವಶಬ್ದವು ಜೀವಶರೀರಕನಾದ ಬ್ರಹ್ಮನನ್ನೇ ಪ್ರತಿಪಾದಿಸಬೇಕು. ಆದ್ದರಿಂದ ಜೀವಶಬ್ದದಿಂದ ಜೀವನೇ ಶರೀರವಾಗಿವುಳ್ಳ ಪರಮಾತ್ಮನ ಅನುಪ್ರವೇಶವನ್ನು ನೀವು ಹೇಳಬೇಕು. ಹೊರತು, ಘಟಾದಿಗಳಲ್ಲಿ ಅನುಪ್ರವಿಷ್ಟನಾದ ಪರಮಾತ್ಮನು ಪ್ರತಿಪಾದ್ಯನಾಗುತ್ತಾನೆಂದು ಹೇಳಲು ಸಾಧ್ಯವಾಗುವುದಿಲ್ಲ.

**कथं च देवतासु जीवशरीरकात्मनानुप्रवेशः । किञ्च अनुप्रवेशानन्तरं व्याकरणमात्रेणानुप्रवेशस्य वाच्यकोटित्वे सङ्कल्पानन्तरं सृष्ट्या सङ्कल्पस्य सृज्यकोटिता स्यात् ।**

ಅಷ್ಟೇ ಅಲ್ಲದೇ ಜೀವಶರೀರಕನಾದ ಆತ್ಮನಿಗೆ ದೇವತಾದಿಗಳಲ್ಲಿ ಅನುಪ್ರವೇಶವು ಹೇಗೆ ತಾನೇ ಕೂಡುತ್ತದೆ? ಮತ್ತು ಅನುಪ್ರವೇಶದ ಅನಂತರ ನಾಮಕರಣ ಮಾಡಿರುವುದರಿಂದ ಅನುಪ್ರವಿಷ್ಟನಿಗೆ ಆಯಾ ಶಬ್ದಗಳ ಪ್ರತಿಪಾದ್ಯತ್ವ ಬರುವುದಾದರೆ, ಸಂಕಲ್ಪವನ್ನು ಮಾಡಿ ಸೃಷ್ಟಿ ಮಾಡಿರುವುದರಿಂದ ಸಂಕಲ್ಪಕ್ಕಾಗಲೀ, ಸಂಕಲ್ಪ ಮಾಡಿರುವ ವ್ಯಕ್ತಿಯಾಗಲೀ, ಸೃಜ್ಯಕೋಟಿಯಲ್ಲಿ ಸೇರಬೇಕಾಗುತ್ತದೆ. (ಒಂದು ಮನೆಗೆ 'ವೆಂಕಟಾದ್ರಿ' ಎಂದು ಹೆಸರನ್ನಿಟ್ಟು ಮನೆಯ ಒಳಗಡೆ ಪ್ರವೇಶಿಸಿದಾಗ, ಮನೆಯ ಒಳಗಡೆಯಿರುವ ವ್ಯಕ್ತಿಗೆ 'ವೆಂಕಟಾದ್ರಿ' ಎಂಬ ಶಬ್ದವಾಚ್ಯತ್ವವು ಬರುವುದಿಲ್ಲವೆಂದು ಲೋಕದಲ್ಲಿ ಕಂಡಿದೆ.)

**श्रूयते च पूर्ववाक्येऽनुप्रवेशात्पूर्वमेव ''तत्तेजोऽसृजत तदपोऽसृजत ता अन्नमसृजन्त'' इति तेजआदीनां नाम सम्बन्धः ।**

ಅಷ್ಟೇ ಅಲ್ಲದೇ ಹಿಂದಿನ ವಾಕ್ಯದಲ್ಲಿ ಪರಮಾತ್ಮನು ಅನುಪ್ರವೇಶ ಮಾಡುವುದರ ಮೊದಲೇ 'ತತ್ತೇಜೋಽಸೃಜತ ತದಪೋಽಸೃಜತ ತಾ ಅನ್ನಮಸೃಜಂತ' ಇತ್ಯಾದಿಯಾಗಿ 'ತೇಜ', 'ಅಪ್', 'ಅನ್ನ' ಮೊದಲಾದ ನಾಮಗಳ ಸಂಬಂಧವನ್ನು ಹೇಳಲಾಗಿದೆ.

ಏತೇನಾಧಿಕರಣ (೧-೪-೭)

**श्रुतौ तु छान्दोग्यभाष्योक्तरीत्या तेजोऽबन्नानुप्रवेशानन्तरं तदितरनामरूपव्याकरणमेव विवक्षितमिति ।।**

ಆದ್ದರಿಂದ ಶ್ರುತಿಯಲ್ಲಿ ಛಾಂದೋಗ್ಯಭಾಷ್ಯ ಟೀಕೆಯಲ್ಲಿ ಹೇಳಿದ ಪ್ರಕಾರ 'ತೇಜಸ್ಸು', 'ಅಪ್ಪು', 'ಅನ್ನ' ಮೊದಲಾದವುಗಳ ಅನುಪ್ರವೇಶದ ಅನಂತರ ಉಳಿದ ನಾಮ ಹಾಗೂ ರೂಪಗಳ ಶಕ್ತಿಯನ್ನು ಮಾಡಿದನು ಎಂಬರ್ಥವನ್ನು ವಿವಕ್ಷಿಸಬೇಕು.

**टीकाक्षरार्थस्तु ।। तुच्छशब्दे तुदित्यस्यार्थमाह – तोदनात्तुदिति ।। छ इत्यस्यार्थमाह ।। अदृश्यः छ इति ।। उभयत्रेति ।। असद्वाचिशब्देष्वभाववाचिशब्देषु चेत्यर्थः । तस्मान्नारायणाख्यं ब्रह्मानन्तगुणमिति सिद्धम् ।। छ ।। एतेनाधिकरणम् ।। ७ ।।**

**इति श्रीमद्ब्रह्मण्यतीर्थपूज्यपादानां शिष्येण व्यासयतिना विरचितायां श्रीमद्भाष्यटीकाविवृतौ तात्पर्यचन्द्रिकायां प्रथमाध्यायस्य चतुर्थः पादः ।। छ ।। प्रथमाध्यायः सम्पूर्णः ।।**

ಟೀಕೆಯ ಕೆಲವು ಕಠಿಣಪದಾರ್ಥಗಳು ಹೀಗಿವೆ - 'ತುಚ್ಛ' ಶಬ್ದದಲ್ಲಿ 'ತುತ್' ಎಂಬ ಪದದ ಅರ್ಥವನ್ನು 'ತೋದನಾತ್ತುಃ' ಎಂಬುದರಿಂದ ಹೇಳಿರುತ್ತಾರೆ. 'ಛ' ಎಂಬ ಅಕ್ಷರದ ಅರ್ಥವನ್ನು 'ಅದೃಶ್ಯಃ ಛಃ' ಎಂಬುದರಿಂದ ಹೇಳಿದ್ದಾರೆ. 'ಉಭಯತ್ರ' ಎಂದರೆ ಅಸದ್ವಾಚಕವಾದ ಶಬ್ದಗಳಲ್ಲಿ ಮತ್ತು ಅಭಾವವಾಚಕವಾದ ಶಬ್ದಗಳಲ್ಲಿ ಎಂದರ್ಥ. ಹೀಗೆ ಸಮನ್ವಯಾಧ್ಯಾಯದಿಂದ ನಾರಾಯಣನೆಂಬ ಬ್ರಹ್ಮನು ಅನಂತಗುಣಪರಿಪೂರ್ಣನಾಗಿದ್ದಾನೆಂದು ಸಿದ್ಧವಾಯಿತು.

ಇಲ್ಲಿಗೆ ಶ್ರೀಮದ್ಬ್ರಹ್ಮಣ್ಯತೀರ್ಥಪೂಜ್ಯ ಶ್ರೀಪಾದರ ಶಿಷ್ಯಂದಿರಾದ ಶ್ರೀವ್ಯಾಸತೀರ್ಥಯತಿಗಳಿಂದ ವಿರಚಿತವಾದ ಶ್ರೀಮದ್ಭಾಷ್ಯಟೀಕಾವಿವೃತಿಯಲ್ಲಿ ತಾತ್ಪರ್ಯಚಂದ್ರಿಕಾ ಎಂಬ ಟಿಪ್ಪಣಿಯಲ್ಲಿ ಪ್ರಥಮಾಧ್ಯಾಯದ ನಾಲ್ಕನೇ ಪಾದವು ಸಮಾಪ್ತವಾಯಿತು. ಪ್ರಥಮಾಧ್ಯಾಯವು ಸಂಪೂರ್ಣವಾಯಿತು.

ಏತೇನಾಧಿಕರಣವು ಸಂಪೂರ್ಣವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

ಪರಿಪೂರ್ಣಚಂದ್ರಿಕಾ

**प्रकाशः —**

विशिष्टवाचित्वपक्षे दोषान्तरमाह — **एवमिति** ।। **ब्रह्मादौ** ब्रह्मजीवादौ । अहन्त्वमादिशब्दानामित्यर्थः ।

**ವಿವರಣೆ** - ಆಯಾ ಪಾದಾರ್ಥಗಳಿಂದ ವಿಶಿಷ್ಟನಾದ ಪರಮಾತ್ಮನೇ, ಆಯಾ ಪದಾರ್ಥಗಳಿಂದ, ಆಯಾ ಪದಗಳಿಂದ ಪ್ರತಿಪಾದ್ಯನಾಗುತ್ತಾನೆಂಬ ಪಕ್ಷದಲ್ಲಿ ಮತ್ತೊಂದು ದೋಷವನ್ನು ಹೇಳಲು 'ಏವಂ' ಇತ್ಯಾದಿ ಗ್ರಂಥವು ಹೊರಟಿದೆ. 'ಬ್ರಹ್ಮಾದೌ' ಎಂಬಲ್ಲಿರುವ ಆದಿಪದದಿಂದ ಜೀವನನ್ನು ವಿವಕ್ಷಿಸಬೇಕು. 'ಅಹಮಾದಿಶಬ್ದಾನಾಮ್' ಎಂಬಲ್ಲಿರುವ ಆದಿಪದದಿಂದ 'ತ್ವಮ್' ಎಂಬ ಶಬ್ದವನ್ನು ವಿವಕ್ಷಿಸಬೇಕು.

**प्रकाशः —** कथं तर्हि देवमनुष्यादिशब्दा विशिष्टवाचका दृश्यन्त इत्यत आह — **देवादीति** ।। **इति स्मृतेश्चेति** ।। बृहदारण्यकभाष्योक्तस्मृतेरित्यर्थः ।।

ಹಾಗಾದರೆ ದೇವ, ಮನುಷ್ಯ ಮೊದಲಾದ ಶಬ್ದಗಳು ವಿಶಿಷ್ಟವನ್ನೇ ಪ್ರತಿಪಾದನೆ ಮಾಡುವುದು ಕಂಡಿದೆಯಲ್ಲವೇ? ಎಂಬ ಪ್ರಶ್ನೆಗೆ ದೃಷ್ಟಾಂತವು ವಿಷಮವಾಗಿದೆಯೆಂದು ಉತ್ತರಿಸಲು 'ದೇವಾತ್' ಎಂಬ ವಾಕ್ಯವು ಹೊರಟಿದೆ. 'ಇತಿ ಸ್ಮೃತೇಶ್ಚ' ಎಂದರೆ 'ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ' ಎಂದರ್ಥ.

**प्रकाशः — चेतनत्वादिति** ।। यथा चैतत्तथोपपादितमन्तर्याम्यधिकरणे । तथा च तद्भाष्ये ''श्रूयते च सर्वशरीरत्वेन सर्वात्मकत्वं परस्य ब्रह्मणोऽन्तर्यामिब्राह्मणे'' इत्याद्युक्तिरयुक्तेति भावः ।।

'ಚೇತನತ್ವಾತ್' ಎಂಬುದನ್ನು ಅಂತರ್ಯಾಮ್ಯಧಿಕರಣದಲ್ಲಿ ಉಪಪಾದನ ಮಾಡಿದಂತೆ ತಿಳಿಯಬೇಕು. ಆದ್ದರಿಂದ ಶಾಂಕರಭಾಷ್ಯದಲ್ಲಿ 'ಶ್ರೂಯತೇ ಚ ಸರ್ವಶರೀರತ್ವೇನ ಸರ್ವಾತ್ಮಕತ್ವಂ ಪರಸ್ಯ ಬ್ರಹ್ಮಣೋಽಂತರ್ಯಾಮಿಬ್ರಾಹ್ಮಣೇ' ಪರಬ್ರಹ್ಮನಿಗೆ ಅಂತರ್ಯಾಮಿಬ್ರಾಹ್ಮಣದಲ್ಲಿ ಸರ್ವಾತ್ಮಕತ್ವ, ಸರ್ವಶರೀರತ್ವ ಹೇಳಿದ್ದು ಕೇಳಿಸುತ್ತಿದೆ ಇತ್ಯಾದಿಯಾಗಿ ಹೇಳಿದ ಮಾತು ಅಯುಕ್ತವಾಗುತ್ತದೆಂದು ತಿಳಿಯಬೇಕು.

**प्रकाशः — न लोकसिद्धशरीरपरमिति** ।। तथात्वे स्वोक्तस्यैव स्वयं निषेधेन स्वव्याहत्याऽप्रामाण्यप्रसङ्गादिति भावः । एतेनेत्युक्तं व्यनक्ति ।। **विशेषणेति** ।। शरीर जडकृशस्थूलादीत्यादिग्रन्थ इति भावः ।।

'ನ ಲೋಕಸಿದ್ಧಶರೀರಪರಮ್' ಲೋಕಸಿದ್ಧವಾದ ಶರೀರವನ್ನು ಹೇಳುವುದಿಲ್ಲ. ಹಾಗಾದಲ್ಲಿ ತಾನು ಹೇಳಿದ್ದನ್ನೇ ಸ್ವತಃ ನಿಷೇಧ ಮಾಡುತ್ತಿರುವುದರಿಂದ ಸ್ವವ್ಯಾಹತಿ ಬರುತ್ತದೆ. ಆದ್ದರಿಂದ ಅಪ್ರಾಮಾಣ್ಯದೋಷವನ್ನು ಹೇಳಿದಂತಾಗುತ್ತದೆ. 'ಏತೇನ' ಎಂಬುದರಿಂದ ಹೇಳಿದ್ದರಿಂದ ವ್ಯಾಖ್ಯಾನ

ಮಾಡಲು 'ವಿಶೇಷಣ' ಇತ್ಯಾದಿ ವಾಕ್ಯವು ಹೊರಟಿದೆ. ಶರೀರ, ಜಡ, ಕೃಶ, ಸ್ಥೂಲ ಮೊದಲಾದ ಶಬ್ದಗಳು ವಿಶೇಷಣದಲ್ಲಷ್ಟೇ ಪ್ರಯೋಗಿಸಲ್ಪಟ್ಟವೆ ಎಂದು ತಿಳಿಯಬೇಕು.

**प्रकाशः – कथञ्चेति** ।। देवतारूपजीवेषु जीवान्तरप्रवेशायोगेन तच्छरीरकेश्वरानुप्रवेशो न युक्त इत्यर्थः ।।

ದೇವತಾರೂಪವಾದ ಜೀವರಲ್ಲಿ ಇನ್ನೊಬ್ಬ ಜೀವನ ಪ್ರವೇಶವು ಕೂಡುವುದಿಲ್ಲ. ಆದ್ದರಿಂದ ಜೀವಶರೀರಕನಾದ ಈಶ್ವರನ ಪ್ರವೇಶವನ್ನು ಎಲ್ಲಿಯೂ ಹೇಳಲಾಗದು ಎಂದಭಿಪ್ರಾಯ.

**छान्दोग्यभाष्येति** ।।

सृष्टेष्वेतेषु भगवानीक्षांचक्रे स केशवः ।
जीवाख्येनैव रूपेण योऽनिरुद्ध इति स्मृतः ।
तेन रूपेण लक्ष्म्यादीन् प्रविष्टो रूपनामनी ।
करिष्ये त्रिवृतश्चैतानेकैकं करवाणि च ।
इति मत्वा प्रविश्याथ तेभ्य इन्द्रादिनामपि ।
नामरूपाणि कृतवांस्तांश्चान्योन्यप्रवेशिनः ।
कृत्वाऽग्निसोमसूर्यादिष्वेतांस्त्रीन् विदधे पुनः ।।

इत्यादिभाष्योक्तरीत्येत्यर्थः ।

ಛಾಂದೋಗ್ಯಭಾಷ್ಯದ ಮಾತು ಹೀಗಿದೆ -

ಸೃಷ್ಟೇಷ್ವೇತೇಷು ಭಗವಾನೀಕ್ಷಾಂಚಕ್ರೇ ಸ ಕೇಶವಃ।
ಜೀವಾಖ್ಯೇನೈವ ರೂಪೇಣ ಯೋಽನಿರುದ್ಧ ಇತಿ ಸ್ಮೃತಃ।
ತೇನ ರೂಪೇಣ ಲಕ್ಷ್ಮ್ಯಾದೀನ್ ಪ್ರವಿಷ್ಟೋ ರೂಪನಾಮನೀ।
ಕರಿಷ್ಯೇ ತ್ರಿವೃತಶ್ಚೈತಾನೇಕೈಕಂ ಕರವಾಣಿ ಚ।
ಇತಿ ಮತ್ವಾ ಪ್ರವಿಶ್ಯಾಥ ತೇಭ್ಯ ಇಂದ್ರಾದಿನಾಮಪಿ।
ನಾಮರೂಪಾಣಿ ಕೃತವಾಂಸ್ತಾಂಶ್ಚಾನ್ಯೋನ್ಯಪ್ರವೇಶಿನಃ।
ಕೃತ್ವಾಽಗ್ನಿಸೋಮಸೂರ್ಯಾದಿಷ್ವೇತಾಂಸ್ತ್ರೀನ್ ವಿದಧೇ ಪುನಃ॥

ಎಲ್ಲಾ ಪದಾರ್ಥಗಳನ್ನು ಭಗವಂತನು ಜ್ಞಾನಪೂರ್ವಕವಾಗಿ ಸೃಷ್ಟಿ ಮಾಡಿದನು. ಜೀವನೆಂದು ಕರೆಸಿಕೊಳ್ಳುವ ಅನಿರುದ್ಧನೇ ಹೀಗೆ ಸೃಷ್ಟಿ ಮಾಡಿದನೆಂದು ತಿಳಿಯಬೇಕು. ಆ ಅನಿರುದ್ಧರೂಪದಿಂದಲೇ

ಲಕ್ಷ್ಮ್ಯಾದಿಗಳಲ್ಲಿ ಪ್ರವೇಶಿಸಿ, ರೂಪ ಹಾಗೂ ನಾಮಾತ್ಮಕವಾದ ಪದಾರ್ಥಗಳನ್ನು ಸೃಷ್ಟಿ ಮಾಡಿದನು. ಪ್ರತಿಯೊಂದು ಪದಾರ್ಥಗಳು ಪೃಥಿವೀ, ಅಪ್, ತೇಜಸ್ಸು ಇವುಗಳಿಂದ ಮಿಶ್ರಣವಾಗಿರುತ್ತವೆ. ಅಂತಹ ಒಂದೊಂದೇ ಪದಾರ್ಥಗಳನ್ನು ಸೃಷ್ಟಿ ಮಾಡುವೆನು ಎಂದು ತಿಳಿದು ಭಗವಂತನು ಎಲ್ಲ ಪದಾರ್ಥಗಳನ್ನು ಸೃಷ್ಟಿ ಮಾಡಿ, ಅವುಗಳಲ್ಲಿ ಪ್ರವೇಶಿಸಿ ಪುನಃ ಇಂದ್ರ ಮೊದಲಾದ ಬೇರೆ ಬೇರೆ ಹೆಸರುಗಳನ್ನು ಮತ್ತು ರೂಪಗಳನ್ನು ಸೃಷ್ಟಿ ಮಾಡಿದನು. ಪೃಥಿವೀ, ಅಪ್, ತೇಜಸ್ಸು ಇವುಗಳಲ್ಲಿ ಪರಸ್ಪರವಾಗಿ ಪ್ರವೇಶ ಮಾಡಿ, ಅಗ್ನಿ, ಸೋಮ, ಸೂರ್ಯ ಮೊದಲಾದವರ ಶರೀರವನ್ನೂ ಕೂಡ ಸೃಷ್ಟಿ ಮಾಡಿದನು. ಹೀಗೆ ಭಾಷ್ಯದಲ್ಲಿ ಹೇಳಲಾಗಿದೆ.

**प्रकाशः** – यत्त्वत्राध्याये न्यायरक्षामणावाधुनिकेन केनचित्प्रतिनयं परमते सूत्राक्षरस्वारस्यवर्णनं कृतम् ।

ಆಧುನಿಕನಾದ ಅದ್ವೈತಿಯೊಬ್ಬನು 'ನ್ಯಾಯರಕ್ಷಾಮಣಿ' ಎಂಬ ಗ್ರಂಥವನ್ನು ಬರೆದಿರುತ್ತಾನೆ. ಅವನು ಈ ಅಧ್ಯಾಯದ ಪ್ರತಿಯೊಂದು ಅಧಿಕರಣಗಳಲ್ಲಿಯೂ ತನ್ನ ಮತದ ಪ್ರಕಾರ ಸೂತ್ರಾಕ್ಷರ ಸ್ವಾರಸ್ಯವನ್ನು ವರ್ಣನೆ ಮಾಡಿದ್ದಾನೆ.

**प्रकाशः** – यच्च पाराशर्यविजये रामानुजमते सूत्राक्षरस्वारस्यवर्णनं कृतम् । तदुभयमापातरमणीयम् ।

ರಾಮಾನುಜ ಪಂಥದಲ್ಲಿ ಬಂದಿರುವ ಮತ್ತೊಬ್ಬನು 'ಪಾರಾಶರ್ಯವಿಜಯ' ಎಂಬ ಗ್ರಂಥದಲ್ಲಿ ತನ್ನ ಮತದ ಪ್ರಕಾರ ಸೂತ್ರಾಕ್ಷರ ಸ್ವಾರಸ್ಯವನ್ನು ವರ್ಣಿಸಿರುತ್ತಾನೆ. ಇವರಿಬ್ಬರ ಮತವೂ ಕೂಡ ಕೇವಲ ಆಪಾತರಮಣೀಯವಾಗಿದೆ.

**प्रकाशः** – चन्द्रिकोक्तदूषणगणलङ्घने जङ्घालं च न भवतीति ग्रन्थगौरवभीरुभिरस्माभिर्न तत्र पराक्रान्तम् ।

ಚಂದ್ರಿಕೆಯಲ್ಲಿ ಹೇಳಿದ ದೋಷಗಳ ಸಮೂಹವನ್ನು ದಾಟಲು ಇವರಿಬ್ಬರಿಗೂ ಕೂಡ ಮೊಣಕಾಲೇ ಇರುವುದಿಲ್ಲ. ನಾವು ಗ್ರಂಥಗೌರವದ ಭಯದಿಂದ ಪ್ರತ್ಯೇಕವಾಗಿ ಅವರನ್ನು ನಿರಾಕರಿಸಿಲ್ಲ.

**प्रकाशः** – अत्राध्याये सिद्धान्ते प्रतिनयं पाराशर्यविजयोक्तदूषणालग्नताप्रकारस्त्रिपाद्यां भावदीपेऽस्माभिः प्रदर्शितो ध्येयः । चतुर्थपादेऽत्रैव व्यक्तः ।

ಈ ಅಧ್ಯಾಯದ ಸಿದ್ಧಾಂತದಲ್ಲಿ ಪ್ರತಿಯೊಂದು ಅಧಿಕರಣದ ಬಗ್ಗೆ ಪಾರಾಶರ್ಯವಿಜಯದಲ್ಲಿ ಹೇಳಿದ ದೋಷವನ್ನು ಭಾವದೀಪದಲ್ಲಿ ನಾವು ಪರಿಗಣಿಸಿದ್ದೇವೆ. ನಾಲ್ಕನೆಯ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿ ಹೇಳಲ್ಪಟ್ಟ ದೋಷಗಳನ್ನು ಇದೇ ಪ್ರಕಾಶಟಿಪ್ಪಣಿಯಲ್ಲಿ ವಿವರಿಸಿದ್ದೇವೆ.

ಏತೇನಾಧಿಕರಣ (೧-೪-೭)

**प्रकाशः** – अध्यायार्थोपसंहारपरटीकां व्यनक्ति ।। तस्मान्नारायणाख्यं ब्रह्मानन्तगुणमिति सिद्धमिति ।। छ ।। एतेनाधिकरणम् ।। ७ ।।

**इति श्रीमत्सर्वतन्त्रस्वतंत्रसुधीन्द्रतीर्थगुरुपादशिष्यश्रीराघवेन्द्रयतिकृते चन्द्रिकाप्रकाशे प्रथमाध्यायस्य चतुर्थः पादः ।।**

ಸಮನ್ವಯಾಧ್ಯಾಯದ ಅರ್ಥವನ್ನು ಉಪಸಂಹಾರ ಮಾಡುವ ಟೀಕೆಯನ್ನು ಗ್ರಂಥಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ 'ತಸ್ಮಾತ್ ನಾರಾಯಣಾಖ್ಯಂ ಬ್ರಹ್ಮಾನಂತಗುಣಮ್ ಇತಿ ಸಿದ್ಧಮ್' ಎಂಬುದಾಗಿ. ಹೀಗೆ ಸಮನ್ವಯಾಧ್ಯಾಯವು ನಾರಾಯಣನೆಂಬ ಬ್ರಹ್ಮನು ಅನಂತಗುಣಪರಿಪೂರ್ಣನಾಗಿದ್ದಾನೆ ಎಂಬ ಸಮರ್ಥನೆಯಲ್ಲಿ ಮುಕ್ತಾಯವಾಗುತ್ತದೆ.

ಇಲ್ಲಿಗೆ ಶ್ರೀಮತ್ ಸರ್ವತಂತ್ರಸ್ವತಂತ್ರರಾದ ಸುಧೀಂದ್ರತೀರ್ಥಗುರುಪಾದರ ಶಿಷ್ಯಂದಿರಾದ ಶ್ರೀರಾಘವೇಂದ್ರಯತಿಗಳಿಂದ ರಚಿಸಲ್ಪಟ್ಟ ಚಂದ್ರಿಕಾಪ್ರಕಾಶಟಿಪ್ಪಣಿಯಲ್ಲಿ ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಮುಗಿಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – समन्वयाध्यायेन न ब्रह्मणः सर्वशब्दवाच्यत्वसिद्धिरित्यन्येषां मतं दूषयितुमनुवदति ।। **अन्ये त्विति** ।। अन्तर्यामिभूमादिशब्दानामिति ।। तथा च ब्रह्मणि न लक्षणावृत्तिरिति भावः । नन्वेवं श्येनादिशब्दानां योगेनैव यागपरतायाः सम्भवेन श्येनशब्दे गौणी सोमेन यजेतेत्यत्र सोमशब्दे मत्वर्थे लक्षणा च नाश्रीयेतेत्यतस्तद्वैषम्यं दर्शयति ।। **रूढानामिति** ।। नन्वेवं वैश्वदेवशब्दस्य विश्व देवकृतत्वयोगेनाग्नेयादियागाष्टकपरत्वसम्भवे तत्र वैश्वदेवशब्दस्य मीमांसकोक्तलक्षणोक्तिविरोध इत्यतस्तदुक्तेरप्रामाणिकत्वान्न विरोध इत्यत आह – **वैश्वदेवशब्दोऽपीति**।। **ब्रह्मपर्यंता इति** ।। ब्रह्मणि न शक्तिर्न वा लक्षणेति भावः ।। **उक्त श्रुत्यादीति** ।। नामानि सर्वाणि यमाविशन्तीत्युक्तश्रुत्यादिविरोधादित्यर्थः ।। **अपसिद्धान्तादिति** ।। मायिना सर्वेषां शब्दानां ब्रह्मणि लक्षणाभ्युपगमेऽपि त्वया तदनभ्युपगमादित्यर्थः ।

आकृतिः जातिरित्यर्थः ।। **न त्वन्यदिति** ।। तदुपादानत्वं वा तद्गुणकत्वं वेत्यर्थः ।। **प्रकृतानुपयोगादिति** ।। जगद्यदा प्रतीयते तदा नियमेन ब्रह्मापि प्रतीयत इति तत्प्रकृतम् । तत्रान्यस्य तदुपादानकत्वस्य तद्गुणकत्वस्य वाऽनुपयोगादित्यर्थः। प्रकृतानुपयोगादित्युक्तम् । तत्र तदुपादानकत्वस्य प्रकृतानुपयोगत्वं दर्शयति ।। **न हीति** ।। तद्गुणकत्वस्यापि तदुपपादयति ।। **गन्धादिशब्दैरिति** ।। अस्तु तर्हि सङ्घटिततयैव प्रतीतियोग्यत्वं तत्परतन्त्रस्वभावत्वमित्यत आह – **तच्चेति** ।। **अन्यथेति** ।। आकाशादेव समुत्पद्यन्त इत्यत्र केवलब्रह्मण एव धियो भाव इत्यर्थः । ननु आत्मन आकाशः सम्भूत इत्यत्र नाकाशमात्रधीः । तस्य यस्याकाशः शरीरमित्यादिश्रुत्यनुसारेण ब्रह्मशरीरत्वात् । शरीरवाचकानां शरीरपर्यन्तताया देवतादिशब्देषु दर्शनादत्रापि ब्रह्मसङ्घटिताकाशस्यैव प्रतीत्या केवलाकाशस्या-प्रतिभासादित्यत आह – **व्युत्पत्तिबलादिति** ।। **अन्योन्याश्रय इति** ।। शरीरवाचकशब्दानां शरीरिपर्यन्तत्वे सिद्ध आकाशः सम्भूत इत्यादौ शरीरवाच-काकाशशब्दस्य ब्रह्मसङ्घटिताकाशप्रत्यायकत्वसिद्धिः आकाशस्सम्भूत इत्यत्र शरीरिपर्यन्तत्वे सिद्धे व्यभिचाराभावेन शरीरवाचकानां शब्दानां शरीरिपर्यन्तत्वसिद्धिरित्यन्योन्याश्रयः स्यादित्यर्थः । एवमाकाशादेर्ब्रह्म शरीरत्वमभ्युपेत्य शरीरवाचकानां शब्दानां शरीरिपर्यन्तत्वाभावेन न ब्रह्मशरीरत्वसिद्धिरित्युक्तम् । इदानीमाकाशादेः शरीरत्वस्यैवाभावेन तद्वाचकानां न ब्रह्मपरत्वमित्याह – **किञ्चेति** ।। **दर्शितत्वादिति**।। यस्याव्यक्तं शरीरमित्यादावित्यर्थः । वास्तवं श्रुत्यर्थमाह – **श्रुताविति** ।। उभयत्रेत्येतत्परामर्श्यव्याप्रतीतेर्व्याचष्टे ।। **असद्वाचिशब्देष्विति** ।।७।। एतेनाधिकरणम् ।।७।।

**इति श्रीमद्विद्याधीशपूज्यादानां शिष्येण केशवभट्टारकेण विरचितायां चन्द्रिकावाक्यार्थविवृतौ प्रथमाध्यायस्य चतुर्थःपादः ।। १ ।। ४ ।।**



## ಸಾರ

ಪ್ರತಿಯೊಂದು ಶಬ್ದಗಳಿಂದಲೂ ವಿಶಿಷ್ಟನಾದ ಬ್ರಹ್ಮನೇ ಪ್ರತಿಪಾದ್ಯನೆನ್ನುವುದಾದಲ್ಲಿ 'ಅಹಂ ಬ್ರಹ್ಮಾಸ್ಮಿ', 'ತತ್ತ್ವಮಸಿ' ಎಂಬ ಶ್ರುತಿಯಲ್ಲಿಯೂ ಅಹಮರ್ಥಾದಿವಿಶಿಷ್ಟನಾದ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆನ್ನಬೇಕು. ಆವಾಗ ಸ್ವತಃ ಪರಮಾತ್ಮನೇ ಹೇಳಿಕೊಳ್ಳುವ 'ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯಲ್ಲಿರುವ 'ಅಹಂ' ಶಬ್ದಕ್ಕೂ ಅಹಮರ್ಥವಿಶಿಷ್ಟನಾದ ಬ್ರಹ್ಮನೇ ಅರ್ಥವೆನ್ನಬೇಕು. ಇದೂ ಕೂಡುವುದಿಲ್ಲ. ಅದಕ್ಕಾಗಿ ನೀವು ಈ ಶ್ರುತಿಯಲ್ಲಿರುವ 'ಅಹಂ' ಶಬ್ದಕ್ಕೆ ಲಕ್ಷಣಾ ಮಾಡಬೇಕು. ಹೀಗೆ ಎಲ್ಲೆಡೆಯೂ ಅಹಮರ್ಥಾದಿವಿಶಿಷ್ಟನಾದ ಬ್ರಹ್ಮನಲ್ಲಿ ಮುಖ್ಯಾರ್ಥತ್ವವನ್ನು ಹೇಳಿ, ಅಹಮಾದ್ಯರ್ಥಗಳಲ್ಲಿ ಲಕ್ಷಣಾ ಮಾಡುವುದಕ್ಕಿಂತ ವಿಪರೀತವಾಗಿ ಲೋಕ ಹಾಗೂ ವೇದಗಳಲ್ಲಿರುವ 'ಅಹಂ' ಶಬ್ದಕ್ಕೆಲ್ಲಾ ಅಹಮರ್ಥನಲ್ಲಿಯೇ ಮುಖ್ಯಾರ್ಥತ್ವವನ್ನು ಒಪ್ಪಿ, ಕೆಲವೆಡೆ ಅಹಮರ್ಥವಿಶಿಷ್ಟನಲ್ಲಿ ಲಕ್ಷಣಾ ಮಾಡುವುದೇ ಲೇಸು.

ಇನ್ನು ದೇವ, ಮನುಷ್ಯ ಮೊದಲಾದ ಶಬ್ದಗಳು ಕೇವಲ ಶರೀರವನ್ನು ಪ್ರತಿಪಾದನೆ ಮಾಡುವುದೇ ಇಲ್ಲ. ಶರೀರವಿಶಿಷ್ಟನಾದ ಆತ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಕೇವಲ ದೇಹವನ್ನಾಗಲೀ, ಕೇವಲ ಚೇತನನ್ನಾಗಲೀ, ದೇವ, ಮನುಷ್ಯ ಮೊದಲಾದ ಶಬ್ದಗಳಿಂದ ಯಾರೂ ಪ್ರಯೋಗ ಮಾಡುವುದಿಲ್ಲ. ಆದ್ದರಿಂದ ದೇವ, ಮನುಷ್ಯಾದಿ ಶಬ್ದಗಳಂತೆ ಪ್ರತಿಯೊಂದು ಶಬ್ದಗಳೂ ಕೂಡ ವಿಶಿಷ್ಟನನ್ನೇ ಪ್ರತಿಪಾದನೆ ಮಾಡುತ್ತವೆ ಎಂದು ನೀವು ದೃಷ್ಟಾಂತ ಹೇಳಿದ್ದು ವಿಷಮವಾಗಿದೆ.

ಮತ್ತು ಪ್ರಾಕೃತವಾದ ಪದಾರ್ಥಗಳನ್ನು ರಾಮಾನುಜರು ಈಶ್ವರನ ಶರೀರವೆನ್ನುತ್ತಾರೆ. 'ನೈವ ಪ್ರಕೃತಿಜಾಃ ಕ್ವಚಿತ್' ಇವೇ ಮೊದಲಾದ ಸ್ಮೃತಿಗಳಿಂದ 'ಅಶರೀರಃ ಪ್ರಜ್ಞಾತ್ಮಾ' ಮೊದಲಾದ ಶ್ರುತಿಗಳಿಂದ ಈಶ್ವರನಿಗೆ ಪ್ರಾಕೃತ ಪದಾರ್ಥಗಳ ಸಂಪರ್ಕವೇ ಇಲ್ಲವೆಂದು ಸ್ಪಷ್ಟವಾಗುತ್ತಿದೆ. ಕೆಲವೆಡೆ ಶ್ರುತಿಯಲ್ಲಿ ಪೃಥಿವ್ಯಾದಿಗಳನ್ನು ಈಶ್ವರನ ಶರೀರವೆಂದು ಹೇಳಿರಬಹುದು. ಆದರೆ ಅಲ್ಲಿರುವ ಪೃಥಿವೀ ಮೊದಲಾದ ಶಬ್ದಗಳಿಗೆ ಪ್ರಾಕೃತವಾದ ಪದಾರ್ಥಗಳು ಪ್ರತಿಪಾದ್ಯವಲ್ಲ. ಹೊರತಾಗಿ ಪೃಥಿವ್ಯಾದ್ಯಭಿಮಾನಿದೇವತೆಗಳು ಈಶ್ವರನ ಅಧೀನವಾಗಿರುವುದರಿಂದ ಅವನ ಶರೀರವೆನಿಸಿಕೊಳ್ಳುತ್ತಾರೆ. ಆದ್ದರಿಂದ ರಾಮಾನುಜರು ಸಕಲ ಪದಾರ್ಥಗಳು ಈಶ್ವರನ ಶರೀರವಾಗಿದೆ ಎಂದು ಹೇಳುವುದು ಅತ್ಯಂತ ಅಸಾಧುವಾಗಿದೆ.

ಇಲ್ಲಿಗೆ ಸಮನ್ವಯಾಧ್ಯಾಯವು ಮುಗಿಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥



# ಏತೇನ ಸರ್ವವ್ಯಾಖ್ಯಾತಾಧಿಕರಣ
(೧-೪-೭)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## एतेन सर्वव्याख्याताधिकरणम् (१।४।७)

**शून्यमेव च । इत्याद्यन्यत्र नियतैरपि मुख्यतयोदितः । शब्दैः**

ಬೇರೆಡೆ ನಿಯತವಾದ ಶೂನ್ಯ, ಅಸತ್, ಅಭಾವ ಮೊದಲಾದ ಶಬ್ದಗಳಿಂದ ಮಹಾವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ತನ್ನನ್ನು ಹೊರತಾಗಿ, ಉಳಿದವರೆಲ್ಲರ ಸುಖವನ್ನು ಮೊಟಕುಗೊಳಿಸುತ್ತಾನಾದ್ದರಿಂದ 'ಶೂನ್ಯ'. ದುರ್ಜನರಿಗೆ ಅವ್ಯಕ್ತನಾದ ಕಾರಣ 'ಅಸತ್'. ದುರ್ಜನರಿಗೆ ದುಃಖಪಡಿಸುತ್ತಾನಾದ್ದರಿಂದ 'ತುಚ್ಛ'ನಾಗಿದ್ದಾನೆ.

***

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## एतेन सर्वव्याख्याताधिकरणम् (१।४।७)

नन्वथापि न हरेः सर्वशब्दवाच्यता । शून्यासत्तुच्छादिशब्दानां निःस्वरूपवाचिनां सस्वरूपे हरावयोगात्, निःस्वरूपे नियमनायोगेन तदधीनत्वन्यायासम्भवाच्चेत्यतः प्राप्तम् – **एतेन सर्वे व्याख्याता व्याख्याता** इति । तदर्थः – **शून्यमेव च । इत्याद्यन्यत्र नियतैरपि मुख्यतयोदितः । शब्दैरिति ।**

ಹಿಂದಿನ ಅಧಿಕರಣದಲ್ಲಿ ಸ್ತ್ರೀಲಿಂಗ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಿದ್ದರೂ ಕೂಡ ಸರ್ವಶಬ್ದವಾಚ್ಯತ್ವವು ಪರಮಾತ್ಮನಲ್ಲಿ ಸಿದ್ಧವಾಗುವುದಿಲ್ಲ. ಏಕೆಂದರೆ 'ಶೂನ್ಯ', 'ಅಸತ್', 'ತುಚ್ಛ', 'ಅಭಾವ' ಮೊದಲಾದ ಶಬ್ದಗಳು ಸ್ವರೂಪವೇ ಇಲ್ಲವೆಂದು ಹೇಳುತ್ತಿವೆ. ಸತ್ಯಸ್ವರೂಪನಾದ ಶ್ರೀಹರಿಯಲ್ಲಿ ಸ್ವರೂಪವಿಲ್ಲದಿರುವಿಕೆಯು ಕೂಡುವುದಿಲ್ಲ. ಹಾಗಾಗಿ ಶಬ್ದಗಳು ಅವನನ್ನು ಹೇಳಲು ಸಾಧ್ಯವಿಲ್ಲ. ಹೀಗೆ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಪರಮಾತ್ಮನಲ್ಲಿ ನಿಷೇಧವಾಚಕ ಶಬ್ದಗಳು ಸಮನ್ವಯಗೊಳ್ಳುವುದಿಲ್ಲ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಕೂಡ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಲಾರವು. ಏಕೆಂದರೆ ನಿಃಸ್ವರೂಪವನ್ನು ನಿಯಮನ ಮಾಡಲು ಸಾಧ್ಯವೇ ಇಲ್ಲ. ಆದ್ದರಿಂದ ಪರಮಾತ್ಮನು ಸಕಲಶಬ್ದವಾಚ್ಯನಾಗಿದ್ದಾನೆಂದು ಹೇಗೆ ಹೇಳುತ್ತೀರಿ ? ಈ ಪ್ರಶ್ನೆಗೆ 'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬ ಕೊನೆಯ ಸೂತ್ರವು ಸಮಾಧಾನ ನೀಡುತ್ತಿದೆ. ಇದರ ಅರ್ಥವನ್ನೇ ಅಣುಭಾಷ್ಯದಲ್ಲಿ 'ಶೂನ್ಯಮೇವ ಚ । ಇತ್ಯಾದ್ಯನ್ಯತ್ರ ನಿಯತೈರಪಿ ಮುಖ್ಯತಯೋದಿತಃ । ಶಬ್ದೈಃ' ಎಂಬುದರಿಂದ ಸಂಗ್ರಹಿಸಿದ್ದಾರೆ.

एवकारस्य अन्यत्रैवेत्यन्वयः । चः पूर्वोक्तसमुच्चये । इत्यादीत्यविभक्तिकम् । इत्यादिभिरित्यर्थः ।

'ಶೂನ್ಯಮೇವ' ಎಂಬಲ್ಲಿರುವ ಏವಕಾರಕ್ಕೆ 'ಅನ್ಯತ್ರೈವ' ಎಂಬಲ್ಲಿ ಅನ್ವಯ ಮಾಡಬೇಕು. 'ಚ'ಶಬ್ದವು ಹಿಂದೆ ಹೇಳಿದ್ದನ್ನು ಸಮುಚ್ಚಯ ಮಾಡುತ್ತಿದೆ. 'ಇತ್ಯಾದಿ' ಎಂಬುದು 'ಇತ್ಯಾದಿಭಿಃ' ಎಂಬಲ್ಲಿರುವ ಅವಿಭಕ್ತಿಕ ಪದ.

तथा चान्यत्रैव नियतैः निःस्वरूपवाचित्वेन अन्यत्रैव प्रसिद्धैः शब्दैः, असत्, अभावः, तुच्छमित्यादिशब्दैः एको जनार्दन एव मुख्यतयोदितः । न शून्यादिः ।

ಆದ್ದರಿಂದ ನಿಃಸ್ವರೂಪತ್ವವನ್ನು ಹೇಳುವುದರಿಂದ ಅನ್ಯತ್ರೈವ ಪ್ರಸಿದ್ಧವಾದ 'ಅಸತ್', 'ಅಭಾವ', 'ತುಚ್ಛ' ಮೊದಲಾದ ಶಬ್ದಗಳಿಂದ ಜನಾರ್ದನನೊಬ್ಬನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ ಹೊರತು, ಶೂನ್ಯಾದಿಗಳಲ್ಲ.

कुतः । शब्दैः । 'नामानि सर्वाणि', 'तमेवैकं जानथ', 'ता वा एताः सर्वा ऋचः', 'हन्तैतमेव पुरुषं सर्वाणि नामान्यभिवदन्ति इत्यादिभिः सर्वशब्दवाच्यत्वावेदकैः शब्दैरित्यर्थः ।

ಏಕೆಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. 'ನಾಮಾನಿ ಸರ್ವಾಣಿ', 'ತಮೇವೈಕಂ ಜಾನಥ' 'ತಾ ವಾ ಏತಾಃ ಸರ್ವಾ ಋಚಃ' 'ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ' ಇತ್ಯಾದಿ ಅನೇಕ ಶ್ರುತಿ-ಸ್ಮೃತಿಗಳಿಂದ ಪರಮಾತ್ಮನೊಬ್ಬನೇ ಸರ್ವಶಬ್ದವಾಚ್ಯನಾಗಿದ್ದಾನೆಂದು ಸಿದ್ಧವಾಗಿದೆ.

निमित्ताभाव इत्यतोऽपि – शब्दैरिति । 'शमूनं कुरुते यस्मात्' इति निर्वचनपरशब्दैः तत्प्रतिपादकस्वातन्त्र्यावेदकसर्वशब्दैरित्यर्थः ।

ಶೂನ್ಯಾದಿ ಶಬ್ದಗಳ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಬರುವುದಿಲ್ಲವೇ ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದಲೇ ಉತ್ತರಿಸಿದ್ದಾರೆ. ಶೂನ್ಯಶಬ್ದಕ್ಕೆ ಶೂನ್ಯತ್ವವು ಪ್ರವೃತ್ತಿನಿಮಿತ್ತವಲ್ಲ. ಹೊರತಾಗಿ, 'ಶಮೂನಂ ಕುರುತೇ ಯಸ್ಮಾತ್' ಎಂಬುದಾಗಿ ವೇದವೇ ನಿರ್ವಚನ ಮಾಡಿದಂತೆ ತನ್ನನ್ನು ಬಿಟ್ಟು ಉಳಿದವರ ಸುಖವನ್ನು ಮೊಟಕುಗೊಳಿಸುತ್ತಾನಾದ್ದರಿಂದ 'ಶೂನ್ಯ' ಎನಿಸಿಕೊಳ್ಳುತ್ತಾನೆ. ಮತ್ತು ಶೂನ್ಯಾದಿಶಬ್ದಗಳಿಗೆ ಶೂನ್ಯತ್ವಾದಿಗಳನ್ನು ಪ್ರವೃತ್ತಿನಿಮಿತ್ತವೆಂದು ಪರಿಗಣಿಸಿದರೂ ಕೂಡ ಅವುಗಳು ಭಗವದಧೀನವಾದ್ದರಿಂದ ಶೂನ್ಯ ಎನಿಸುತ್ತಾನೆ. ಏಕೆಂದರೆ ಮೂರು ಕಾಲದಲ್ಲಿಯೂ ಶೂನ್ಯಾದಿಗಳಲ್ಲಿ ಶೂನ್ಯತ್ವವಿರಬೇಕಾದರೂ ಕೂಡ ಪರಮಾತ್ಮನ ಪ್ರೇರಣೆ ಇರಲೇಬೇಕು. ಹೀಗೆ ಸಕಲಶಬ್ದಗಳಿಂದ ಪರಮಾತ್ಮನೇ ವಾಚ್ಯನಾಗಿದ್ದಾನೆಂದು ನಿರ್ಣಯವಾಯಿತು.

पादार्थमुपसंहरति – इत्याद्यन्यत्र नियतैरपि मुख्यतयोदितः । शब्दैरिति । इत्यादीत्यनेन समन्वितैतत्पादीयाव्यक्तादिकृत्स्नशब्दपरामर्शः । तथा च इत्यादिभिः अव्यक्तशब्दप्रभृतिभिः अन्यत्रैव प्रसिद्धैरेको जनार्दनो मुख्यतयोदित इति ।

ಸಮಗ್ರ ಪಾದದ ಸಾರವನ್ನು ಶ್ರೀಮದಾಚಾರ್ಯರು 'ಇತ್ಯಾದ್ಯನ್ಯತ್ರ ನಿಯತ್ಯೈರಪಿ ಮುಖ್ಯತಯೋದಿತಃ । ಶಬ್ದೈಃ' ಎಂಬುದರಿಂದ ಉಪಸಂಹಾರ ಮಾಡಿದ್ದಾರೆ. 'ಇತ್ಯಾದಿ' ಎಂಬುದರಿಂದ ಈ ಪಾದದಲ್ಲಿ ಸಮನ್ವಯ ಮಾಡಿದ, ಅವ್ಯಕ್ತ ಮೊದಲಾದ ಸಕಲಶಬ್ದಗಳನ್ನು ಪರಾಮರ್ಶಿಸಬೇಕು. ಆದ್ದರಿಂದ ಇತ್ಯಾದಿಭಿಃ = ಅವ್ಯಕ್ತ ಮೊದಲಾದ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಿಂದ ಜನಾರ್ದನನೊಬ್ಬನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸಿದಂತಾಯಿತು.

अध्यायार्थमुपसंहरति – **अतोऽनन्तगुणो यच्छब्दा योगवृत्तय इति** । अतः अन्यत्रोभयत्रान्यत्रैव च **प्रसिद्धैरशेषशब्दैः** वाच्यत्वात् जनार्दनोऽनन्तगुण इति । तावता कथमनन्तगुण इत्यत उक्तम् – **यच्छब्दा इति** । यद्यस्माद्योगेन अवयवार्थसम्बन्धेन वृत्तिः येषां त इति योगवृत्तयो यौगिकाः शब्दाः तस्मादित्यर्थः ।

ಸಮಗ್ರ ಸಮನ್ವಯಾಧ್ಯಾಯದ ಅರ್ಥವನ್ನು ಉಪಸಂಹಾರ ಮಾಡಲು 'ಅತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ' ಎಂದು ಹೇಳಿರುತ್ತಾರೆ. ಅತಃ = ಅನ್ಯತ್ರಪ್ರಸಿದ್ಧವಾದ, ಉಭಯತ್ರಪ್ರಸಿದ್ಧವಾದ, ಅನ್ಯತ್ರೈವಪ್ರಸಿದ್ಧವಾದ ಸಕಲವಿಧವಾದ ಶಬ್ದಗಳಿಂದ ಜನಾರ್ದನನೊಬ್ಬನೇ ಪ್ರತಿಪಾದ್ಯನೆಂದು ಹೇಳಿರುವುದರಿಂದ, ಅನಂತಗುಣಃ = ಅನಂತಗುಣಪರಿಪೂರ್ಣನೆಂದು ಸಿದ್ಧವಾಯಿತು. ಎಲ್ಲಾ ಬಗೆಯ ಶಬ್ದಗಳ ಸಮನ್ವಯದಿಂದ ಅನಂತಗುಣಪರಿಪೂರ್ಣತ್ವವು ಹೇಗೆ ಸಿದ್ಧವಾಯಿತು? ಎಂಬ ಪ್ರಶ್ನೆಗೆ 'ಯಚ್ಛಬ್ದಾ ಯೋಗವೃತ್ತಯಃ' ಎಂಬುದರಿಂದ ಉತ್ತರಿಸಿದ್ದಾರೆ. ಪ್ರತಿಯೊಂದು ಪದಗಳ ಅವಯವಾರ್ಥಕ್ಕೆ ಸಂಬಂಧಪಟ್ಟ ವೃತ್ತಿಯು ಪರಮಾತ್ಮನಲ್ಲಿರುವುದರಿಂದ ಆಯಾ ಪದಗಳಿಂದ ನಿರ್ಣಯವಾಗುವ ಗುಣಗಳೆಲ್ಲವೂ ಪರಮಾತ್ಮನಲ್ಲಿಯೇ ಸಮನ್ವಯಗೊಳ್ಳುತ್ತವೆ. ಹೀಗೆ ವೇದದಲ್ಲಿರುವ ಸಕಲಶಬ್ದಗಳು ವಿಷ್ಣುವಿನ ವಿಷಯದಲ್ಲಿ ಯೌಗಿಕವಾಗಿರುವುದರಿಂದ ಅನಂತಗುಣಪರಿಪೂರ್ಣತ್ವವು ವೇದದಿಂದ ಸಿದ್ಧವಾಯಿತು.

सङ्क्षेपभाष्यविवृतौ राघवेन्द्रेण भिक्षुणा ।
कृतायां तत्वमञ्जर्यां समाप्तोऽध्याय आदिमः ॥

इति श्रीमदानन्दतीर्थभगवत्पादाचार्यविरचितस्य ब्रह्मसूत्राणुभाष्यस्य टीकायां राघवेन्द्रयतिविरचितायां तत्वमञ्जर्याख्यायां प्रथमाध्यायस्य चतुर्थः पादः ॥४॥

इति प्रथमाध्यायः समाप्तः ।

ಸಂಕ್ಷೇಪಭಾಷ್ಯವಿವೃತೌ ರಾಘವೇಂದ್ರೇಣ ಭಿಕ್ಷುಣಾ ।
ಕೃತಾಯಾಂ ತತ್ತ್ವಮಂಜರ್ಯಾಂ ಸಮಾಪ್ತೋಽಧ್ಯಾಯ ಆದಿಮಃ ॥

ಶ್ರೀ ರಾಘವೇಂದ್ರಭಿಕ್ಷುವಿನಿಂದ ಶ್ರೀಮದಾಚಾರ್ಯರ ಸಂಕ್ಷೇಪಭಾಷ್ಯದ ವಿವೃತಿರೂಪವಾದ ತತ್ತ್ವಮಂಜರಿಯಲ್ಲಿ ಪ್ರಥಮಾಧ್ಯಾಯವು ಮುಗಿಯಿತು.

ಶ್ರೀಮದಾನಂದತೀರ್ಥರಿಂದ ವಿರಚಿತವಾದ ಸಂಕ್ಷೇಪಭಾಷ್ಯದ ಟೀಕೆಯಲ್ಲಿ
ಶ್ರೀ ರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ತ್ವಮಂಜರಿಯ ಕನ್ನಡಾನುವಾದದಲ್ಲಿ ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು.
ಇಲ್ಲಿಗೆ ಸಮನ್ವಯಾಧಿಕರಣವು ಮುಗಿಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು॥

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## एतेन सर्वव्याख्याताधिकरणम् (१।४।७)

।। एतेन सर्वे व्याख्याता व्याख्याताः ।। १-४-२९ ।।

अत्र नये निषेधार्थाः शब्दा समन्वीयन्ते । एतेन तदधीनत्वादिप्रागुक्तहेतुजातेन सर्वे शून्यासदादिशब्दास्तत्तु मुख्यवृत्त्या ब्रह्मैवेति व्याख्याताः प्रतिपादिता इत्यर्थः । प्रगुक्तसर्वप्रमेयावधारणार्था द्विरुक्तिः । ''अवधारणार्थं सर्वस्य'' इत्यादेः ।। ७ ।।

ಈ ಸರ್ವವ್ಯಾಖ್ಯಾನಾಧಿಕರಣದಲ್ಲಿ ನಿಷೇಧಾತ್ಮಕವಾದ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಲಾಗಿದೆ. ಏತೇನ = ತದಧೀನತ್ವ ಮೊದಲಾದ ಹಿಂದೆ ಹೇಳಿರುವ ಹೇತುಗಳ ಸಮೂಹದಿಂದ, ಸರ್ವೇ = ಶೂನ್ಯ, ಅಸತ್, ಅಭಾವ ಮೊದಲಾದ ಶಬ್ದಗಳು, ತತ್ತು = ಮಹಾಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು, ವ್ಯಾಖ್ಯಾತಾಃ = ವ್ಯಾಖ್ಯಾನಿಸಲ್ಪಟ್ಟಿವೆ. ಇಷ್ಟು ಸೂತ್ರಾರ್ಥ.

ಪರಿಪೂರ್ಣಚಂದ್ರಿಕಾ

ಹಿಂದೆ ಹೇಳಿದ ಎಲ್ಲಾ ಪ್ರಮೇಯಗಳ ಅವಧಾರಣಕ್ಕಾಗಿ ಸೂತ್ರದಲ್ಲಿ 'ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂದು ದ್ವಿರುಕ್ತಿ ಮಾಡಿರುತ್ತಾರೆ. 'ಅವಧಾರಣಾರ್ಥಂ ಸರ್ವಸ್ಯ' ಎಂಬ ವರಾಹಪುರಾಣದ ಮಾತಿನಂತೆ ಸಂಪೂರ್ಣವಾಗಿ ಪ್ರಥಮಾಧ್ಯಾಯದಲ್ಲಿ ಸಮನ್ವಯವು ಸಿದ್ಧವಾಯಿತು ಎಂಬುದನ್ನು ತಿಳಿಸುವುದಕ್ಕಾಗಿ ದ್ವಿರುಕ್ತಿಯನ್ನು ಮಾಡಿರುತ್ತಾರೆ.

**अत्राद्यनये तत्तन्निष्ठेशसम्बन्धादन्यत्र व्यवहारः स्वातन्त्र्यस्य शब्दप्रवृत्तौ निमित्तत्वं मुख्यत्वं च । ज्योतिर्नये शब्दानां पदवर्णरूपेणेशे वृत्तिरन्यत्र रूढिश्च । नसङ्ख्येति नये ईशस्य रूपभेदेनाधाराधेयभावः । कारणत्वेनेति नये ईशस्य रूपभेदेन व्यङ्ग्यव्यञ्जकत्वरूपकार्यकारणत्वम् । समाकर्षनये वृत्तितारतम्यम् । प्रकृतिनये एकस्मिन्नपि रूपे स्त्रीत्वपुंस्त्वसमावेशः । अन्त्यनये तुच्छनियन्तृत्वमिति ध्येयम् ॥**

ನಾಲ್ಕನೆಯ ಪಾದದ ಮೊದಲನೆಯ ಅಧಿಕರಣದಲ್ಲಿ ಭಗವಂತನ ಸಂಬಂಧದಿಂದಲೇ ಉಳಿದ ಪದಾರ್ಥಗಳು ಆಯಾ ಶಬ್ದಗಳಿಂದ ವ್ಯವಹರಿಸಲ್ಪಡುತ್ತವೆ. ಮತ್ತು ಸ್ವಾತಂತ್ರ್ಯವೇ ಶಬ್ದಗಳ ಮುಖ್ಯವಾದ ಪ್ರವೃತ್ತಿನಿಮಿತ್ತಗಳಾಗಿರುತ್ತವೆ ಎಂದು ಮತ್ತು ಅದೇ ಮುಖ್ಯವಾದದ್ದೆಂದು ಸಮರ್ಥಿಸಲಾಗಿದೆ. ಜ್ಯೋತಿರಧಿಕರಣದಲ್ಲಿ ಪದ, ವರ್ಣ, ರೂಪವಾದ ಶಬ್ದಗಳು ಭಗವದ್ವಾಚಕವೆಂದು ಆದರೂ ಕೂಡ ಇತರ ಪದಾರ್ಥಗಳಲ್ಲಿ ಶಬ್ದಗಳಿಗೆ ರೂಢಿಯು ಇರುವುದೆಂದು ನಿರೂಪಣೆ ಮಾಡಲಾಗಿದೆ. 'ನಸಂಖ್ಯೋಪಸಂಗ್ರಹಾಧಿಕರಣದಲ್ಲಿ ಭಗವಂತನು ರೂಪಭೇದದಿಂದ ಆಧಾರನು, ಆಧೇಯನೂ ಆಗಿರುತ್ತಾನೆಂದು ಹೇಳಲಾಗಿದೆ. 'ಕಾರಣತ್ವೇನಚ ಆಕಾಶಾದಿಷು' ಎಂಬ ಅಧಿಕರಣದಲ್ಲಿ ಈಶ್ವರನಿಗೆ ರೂಪಭೇದದಿಂದ ವ್ಯಂಗ್ಯವ್ಯಂಜಕಭಾವರೂಪವಾದ ಕಾರ್ಯಕಾರಣಭಾವವನ್ನು ಹೇಳಲಾಗಿದೆ. ಸಮಾಕರ್ಷಾಧಿಕರಣದಲ್ಲಿ ವೃತ್ತಿಗಳ ತಾರತಮ್ಯವನ್ನು ಸಮರ್ಥಿಸಲಾಗಿದೆ. ಪ್ರಕೃತ್ಯಧಿಕರಣದಲ್ಲಿ ಒಂದೇ ಭಗವದ್ರೂಪದಲ್ಲಿ ಸ್ತ್ರೀತ್ವ ಮತ್ತು ಪುಂಸ್ತ್ವಗಳ ಸಮರ್ಥನೆಯನ್ನು ಮಾಡಲಾಗಿದೆ. ಕೊನೆಯ ಈ ಅಧಿಕರಣದಲ್ಲಿ 'ತುಚ್ಛ' 'ಅಸತ್' ಮೊದಲಾದವುಗಳನ್ನು ಪರಮಾತ್ಮನು ನಿಯಮನ ಮಾಡುತ್ತಾನೆಂದು ಸಮರ್ಥಿಸಲಾಗಿದೆ.

शब्दा द्विधा गुणावयवाचित्वेन व्यवास्थिताः ।
अन्त्याः स्वातन्त्र्यतोऽन्ये तु तद्गतत्वाच्च विष्णुगाः ॥
अध्यायपादसङ्गत्यादि गुरुपादकृतन्यायसङ्ग्रहे बोध्यम् ॥

इति श्रीमद्राघवेन्द्रयतिकृतायां तन्त्रदीपिकायां प्रथमाध्यायः चतुर्थ पादः
॥ श्रीकृष्णार्पणमस्तु ॥
इति श्रीमद्राघवेन्द्रयतिकृतायां तन्त्रदीपिकायां प्रथमाध्यायः समाप्तः

ಏತೇನ ಸರ್ವವ್ಯಾಖ್ಯಾತಾಧಿಕರಣ (೧-೪-೭)

ಶಬ್ದಗಳು ಗುಣವಾಚಕ ಮತ್ತು ದೋಷವಾಚಕ ಎಂದು ಎರಡುವಿಧವಾಗಿ ವ್ಯವಸ್ಥೆ ಮಾಡಲ್ಪಟ್ಟಿವೆ. ಈ ರೀತಿಯ ಶಬ್ದಗಳು ತಮ್ಮ ಪ್ರವೃತ್ತಿನಿಮಿತ್ತವನ್ನು ಪರಮಾತ್ಮನಲ್ಲಿ ಸ್ವಾತಂತ್ರ್ಯವಿರುವುದರಿಂದಲೂ ಸಮನ್ವಯಗೊಳ್ಳುತ್ತವೆ. ಉಳಿದ ಶಬ್ದಗಳು ತಮ್ಮ ಪ್ರವೃತ್ತಿನಿಮಿತ್ತಗಳು ಭಗವಂತನಲ್ಲಿ ಇರುವುದರಿಂದಲೇ ಭಗವಂತನನ್ನು ಪ್ರತಿಪಾದನೆ ಮಾಡುತ್ತವೆ.

ಅಧ್ಯಾಯಸಂಗತಿ, ಪಾದಸಂಗತಿ ಮೊದಲಾದವುಗಳನ್ನು ಗುರುಪಾದರಾದ ಶ್ರೀವಿಜಯೀಂದ್ರತೀರ್ಥ ಸ್ವಾಮಿಗಳು ಮಾಡಿರುವ ನ್ಯಾಯಸಂಗ್ರಹವನ್ನು ಓದಿ ತಿಳಿದುಕೊಳ್ಳಬೇಕು.

ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥ ಯತಿಗಳಿಂದ ವಿರಚಿತವಾದ
ತಂತ್ರದೀಪಿಕೆಯಲ್ಲಿ ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು
ಸಮನ್ವಯಾಧ್ಯಾಯವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## एतेन सर्वव्याख्याताधिकरणम् (१।४।७)

।। एतेन सर्वे व्याख्याता व्याख्याताः ।। ७ ।।

अत्र पूर्ववैषम्येण पूर्वपक्षोत्थानात्सङ्गतिः ।

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವೈಷಮ್ಯದಿಂದ ಪೂರ್ವಪಕ್ಷವನ್ನು ಮಾಡಿ, ಉತ್ತರಿಸುತ್ತಿರುವುದರಿಂದ ಸಂಗತಿಯಿರುತ್ತದೆ.

असद्वा इदमग्र आसीदित्यादौ श्रुतासच्छून्यादिशब्दाः किं ईशवाचिनोऽन्यवाचिनो वेति सन्देहः ।

'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಯಲ್ಲಿ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳು ಶ್ರುತವಾಗಿವೆ. ಇವೆಲ್ಲವೂ ಈಶ್ವರನನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅಥವಾ ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿವೆಯೋ ಎಂದು ಸಂದೇಹ.

पूर्वपक्षस्तु युक्तं पूर्वोक्तरूपं स्त्रीत्वं, रूपाहानेः, न तु निषेध्यत्वादिरूपं असदादिशब्दवृत्तिनिमित्तं, रूपहानेः ।

ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದಂತೆ ಸ್ತ್ರೀತ್ವ ಮೊದಲಾದವು ಪರಮಾತ್ಮನಲ್ಲಿ ಬರಬಹುದು. ಏಕೆಂದರೆ ಪರಮಾತ್ಮನನ್ನು 'ಸ್ತ್ರೀ' ಎಂದು ಹೇಳುವುದರಿಂದ ಅವನ ಸ್ವರೂಪಕ್ಕೇನೂ ಚ್ಯುತಿಯಿಲ್ಲ. ಆದರೆ ಅಸದಾದಿಶಬ್ದಗಳ ಪ್ರತಿಪಾದ್ಯತ್ವವನ್ನು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಿದರೆ ನಿಷೇಧ್ಯತ್ವರೂಪವಾದ ಅಸದಾದಿಶಬ್ದಗಳ ಪ್ರವೃತ್ತಿಯನ್ನು ಪರಮಾತ್ಮನಲ್ಲಿ ಹೇಳಬೇಕಾಗುತ್ತದೆ. ಆವಾಗ ಪರಮಾತ್ಮನ ಸ್ವರೂಪಕ್ಕೆ ಚ್ಯುತಿ ಬರುತ್ತದೆ.

असतो निःस्वरूपस्य नियमनाभावेन तस्य ईशाधीनत्वायोगेन तदधीनन्यायस्याप्यनवतारात् । अतोऽसदादिशब्दा अन्यवाचिनः इति ।

ಪರಮಾತ್ಮನಲ್ಲಿ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಅಸದಾದಿಶಬ್ದಗಳು ಪ್ರತಿಪಾದನೆ ಮಾಡುವುದಿಲ್ಲವೆಂದು ಹೇಳಿದ್ದಾಯಿತು. ಅಷ್ಟೇ ಅಲ್ಲ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಅಸದಾದಿಶಬ್ದಗಳ ಪ್ರತಿಪಾದ್ಯತ್ವವನ್ನು ಪರಮಾತ್ಮನಲ್ಲಿ ಹೇಳಲಾಗದು. ಏಕೆಂದರೆ ಅಸತ್ ಪದಾರ್ಥವು ನಿಃಸ್ವರೂಪವಾದ್ದರಿಂದ ಅದನ್ನು ನಿಯಮನ ಮಾಡಲೂ ಕೂಡ ಸಾಧ್ಯವಿಲ್ಲ. ಯಾವ ಪದಾರ್ಥದ ಸ್ವರೂಪವೇ ಇರುವುದಿಲ್ಲವೋ, ಅದನ್ನೇ ಈಶ್ವರನ ಅಧೀನವೆಂದು ಹೇಳಲೂ ಕೂಡ ಬರುವುದಿಲ್ಲ. ಆದ್ದರಿಂದ ಅಸದಾದಿ ಶಬ್ದಗಳು ಅನ್ಯವಾಚಕಗಳೇ ಆಗಿವೆ. ಇಷ್ಟು ಪೂರ್ವಪಕ್ಷ.

सिद्धान्तस्तु ।। प्रसिद्धशून्यत्वादेः ईशगतत्वाभावेऽपि ''शमूनं कुरुते'' इत्यादि स्मृत्युक्तयोगसम्भवात् असतोऽप्यसत्त्वादिना नियमनसम्भवेन तदधीनत्वाद्युक्तसाधकेन च असच्छून्यादिशब्दमुख्यार्थो हरिरेवेति ।। फलं तूक्तमेव ।। ७ ।।

।। इति श्रीराघवेन्द्रयतिकृतायां न्यायमुक्तावल्यां आद्येऽध्याये चतुर्थः पादः ।।
।। प्रथमाध्यायः समाप्तः ।।

ಸಿದ್ಧಾಂತ ಹೀಗಿದೆ - ಪ್ರಸಿದ್ಧವಾದ ಶೂನ್ಯಾದಿ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಶೂನ್ಯತ್ವ, ಅತ್ಯಂತ ಅಸತ್ವ ಮೊದಲಾದವುಗಳು ಈಶ್ವರನಲ್ಲಿ ಸರ್ವಥಾ ಇರುವುದಿಲ್ಲ. ಇದನ್ನು ನಾವೂ ಕೂಡ ಒಪ್ಪಿಕೊಳ್ಳುತ್ತೇವೆ. ಆದರೆ 'ಶಮೂನಂ ಕುರುತೇ' ಇತ್ಯಾದಿ ಸ್ಮೃತಿಗಳಲ್ಲಿ ಶೂನ್ಯಾದಿ ಶಬ್ದಗಳ ಯಾವ ಪ್ರವೃತ್ತಿನಿಮಿತ್ತವನ್ನು ಹೇಳಿದ್ದಾರೋ, ಅದು ಪರಮಾತ್ಮನಲ್ಲಿ ಖಂಡಿತವಾಗಿಯೂ ಬರುತ್ತದೆ. ಆದ್ದರಿಂದ ಯೋಗವೃತ್ತಿಯಿಂದ ಪರಮಾತ್ಮನಲ್ಲಿ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳು ಸಮನ್ವಯವಾಗುತ್ತವೆ. ಒಂದು ವೇಳೆ ಅಸತ್ ಶಬ್ದಕ್ಕೆ ಪ್ರಸಿದ್ಧವಾದ ಅತ್ಯಂತ ಅಸತ್ವ ಮೊದಲಾದ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದರೂ ಕೂಡ, ಅಂತಹ

ಶಬ್ದಗಳು ಗುಣವಾಚಕ ಮತ್ತು ದೋಷವಾಚಕ ಎಂದು ಎರಡುವಿಧವಾಗಿ ವ್ಯವಸ್ಥೆ ಮಾಡಲ್ಪಟ್ಟಿವೆ. ಈ ರೀತಿಯ ಶಬ್ದಗಳು ತಮ್ಮ ಪ್ರವೃತ್ತಿನಿಮಿತ್ತವನ್ನು ಪರಮಾತ್ಮನಲ್ಲಿ ಸ್ವಾತಂತ್ರ್ಯವಿರುವುದರಿಂದಲೂ ಸಮನ್ವಯಗೊಳ್ಳುತ್ತವೆ. ಉಳಿದ ಶಬ್ದಗಳು ತಮ್ಮ ಪ್ರವೃತ್ತಿನಿಮಿತ್ತಗಳು ಭಗವಂತನಲ್ಲಿ ಇರುವುದರಿಂದಲೇ ಭಗವಂತನನ್ನು ಪ್ರತಿಪಾದನೆ ಮಾಡುತ್ತವೆ.

ಅಧ್ಯಾಯಸಂಗತಿ, ಪಾದಸಂಗತಿ ಮೊದಲಾದವುಗಳನ್ನು ಗುರುಪಾದರಾದ ಶ್ರೀವಿಜಯೀಂದ್ರತೀರ್ಥ ಸ್ವಾಮಿಗಳು ಮಾಡಿರುವ ನ್ಯಾಯಸಂಗ್ರಹವನ್ನು ಓದಿ ತಿಳಿದುಕೊಳ್ಳಬೇಕು.

ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥ ಯತಿಗಳಿಂದ ವಿರಚಿತವಾದ
ತಂತ್ರದೀಪಿಕೆಯಲ್ಲಿ ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು
ಸಮನ್ವಯಾಧ್ಯಾಯವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## एतेन सर्वव्याख्याताधिकरणम् (१।४।७)

।। एतेन सर्वे व्याख्याता व्याख्याताः ।। ७ ।।

अत्र पूर्ववैषम्येण पूर्वपक्षोत्थानात्सङ्गतिः ।

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವೈಷಮ್ಯದಿಂದ ಪೂರ್ವಪಕ್ಷವನ್ನು ಮಾಡಿ, ಉತ್ತರಿಸುತ್ತಿರುವುದರಿಂದ ಸಂಗತಿಯಿರುತ್ತದೆ.

असद्वा इदमग्र आसीदित्यादौ श्रुतासच्छून्यादिशब्दाः किं ईशवाचिनोऽन्यवाचिनो वेति सन्देहः ।

'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಯಲ್ಲಿ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳು ಶ್ರುತವಾಗಿವೆ. ಇವೆಲ್ಲವೂ ಈಶ್ವರನನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅಥವಾ ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿವೆಯೋ ಎಂದು ಸಂದೇಹ.

पूर्वपक्षस्तु युक्तं पूर्वोक्तरूपं स्त्रीत्वं, रूपाहानेः, न तु निषेध्यत्वादिरूपं असदादिशब्दवृत्तिनिमित्तं, रूपहानेः ।

ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದಂತೆ ಸ್ತ್ರೀತ್ವ ಮೊದಲಾದವು ಪರಮಾತ್ಮನಲ್ಲಿ ಬರಬಹುದು. ಏಕೆಂದರೆ ಪರಮಾತ್ಮನನ್ನು 'ಸ್ತ್ರೀ' ಎಂದು ಹೇಳುವುದರಿಂದ ಅವನ ಸ್ವರೂಪಕ್ಕೇನೂ ಚ್ಯುತಿಯಿಲ್ಲ. ಆದರೆ ಅಸದಾದಿಶಬ್ದಗಳ ಪ್ರತಿಪಾದ್ಯತ್ವವನ್ನು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಿದರೆ ನಿಷೇಧ್ಯತ್ವರೂಪವಾದ ಅಸದಾದಿಶಬ್ದಗಳ ಪ್ರವೃತ್ತಿಯನ್ನು ಪರಮಾತ್ಮನಲ್ಲಿ ಹೇಳಬೇಕಾಗುತ್ತದೆ. ಆವಾಗ ಪರಮಾತ್ಮನ ಸ್ವರೂಪಕ್ಕೆ ಚ್ಯುತಿ ಬರುತ್ತದೆ.

असतो निःस्वरूपस्य नियमनाभावेन तस्य ईशाधीनत्वायोगेन तदधीनन्यायस्याप्यनवतारात् । अतोऽसदादिशब्दा अन्यवाचिनः इति ।

ಪರಮಾತ್ಮನಲ್ಲಿ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಅಸದಾದಿಶಬ್ದಗಳು ಪ್ರತಿಪಾದನೆ ಮಾಡುವುದಿಲ್ಲವೆಂದು ಹೇಳಿದ್ದಾಯಿತು. ಅಷ್ಟೇ ಅಲ್ಲ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಅಸದಾದಿಶಬ್ದಗಳ ಪ್ರತಿಪಾದ್ಯತ್ವವನ್ನು ಪರಮಾತ್ಮನಲ್ಲಿ ಹೇಳಲಾಗದು. ಏಕೆಂದರೆ ಅಸತ್ ಪದಾರ್ಥವು ನಿಃಸ್ವರೂಪವಾದ್ದರಿಂದ ಅದನ್ನು ನಿಯಮನ ಮಾಡಲೂ ಕೂಡ ಸಾಧ್ಯವಿಲ್ಲ. ಯಾವ ಪದಾರ್ಥದ ಸ್ವರೂಪವೇ ಇರುವುದಿಲ್ಲವೋ, ಅದನ್ನೇ ಈಶ್ವರನ ಅಧೀನವೆಂದು ಹೇಳಲೂ ಕೂಡ ಬರುವುದಿಲ್ಲ. ಆದ್ದರಿಂದ ಅಸದಾದಿ ಶಬ್ದಗಳು ಅನ್ಯವಾಚಕಗಳೇ ಆಗಿವೆ. ಇಷ್ಟು ಪೂರ್ವಪಕ್ಷ.

सिद्धान्तस्तु ।। प्रसिद्धशून्यत्वादेः ईशगतत्वाभावेऽपि ''शमूनं कुरुते'' इत्यादि स्मृत्युक्तयोगसम्भवात् असतोऽप्यसत्त्वादिना नियमनसम्भवेन तदधीनत्वाद्युक्तसाधकेन च असच्छून्यादिशब्दमुख्यार्थो हरिरेवेति ।। फलं तूक्तमेव ।। ७ ।।

।। इति श्रीराघवेन्द्रयतिकृतायां न्यायमुक्तावल्यां आद्येऽध्याये चतुर्थः पादः ।।
।। प्रथमाध्यायः समाप्तः ।।

ಸಿದ್ಧಾಂತ ಹೀಗಿದೆ - ಪ್ರಸಿದ್ಧವಾದ ಶೂನ್ಯಾದಿ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಶೂನ್ಯತ್ವ, ಅತ್ಯಂತ ಅಸತ್ವ ಮೊದಲಾದವುಗಳು ಈಶ್ವರನಲ್ಲಿ ಸರ್ವಥಾ ಇರುವುದಿಲ್ಲ. ಇದನ್ನು ನಾವೂ ಕೂಡ ಒಪ್ಪಿಕೊಳ್ಳುತ್ತೇವೆ. ಆದರೆ 'ಶಮೂನಂ ಕುರುತೇ' ಇತ್ಯಾದಿ ಸ್ಮೃತಿಗಳಲ್ಲಿ ಶೂನ್ಯಾದಿ ಶಬ್ದಗಳ ಯಾವ ಪ್ರವೃತ್ತಿನಿಮಿತ್ತವನ್ನು ಹೇಳಿದ್ದಾರೋ, ಅದು ಪರಮಾತ್ಮನಲ್ಲಿ ಖಂಡಿತವಾಗಿಯೂ ಬರುತ್ತದೆ. ಆದ್ದರಿಂದ ಯೋಗವೃತ್ತಿಯಿಂದ ಪರಮಾತ್ಮನಲ್ಲಿ 'ಅಸತ್', 'ಶೂನ್ಯ' ಮೊದಲಾದ ಶಬ್ದಗಳು ಸಮನ್ವಯವಾಗುತ್ತವೆ. ಒಂದು ವೇಳೆ ಅಸತ್ ಶಬ್ದಕ್ಕೆ ಪ್ರಸಿದ್ಧವಾದ ಅತ್ಯಂತ ಅಸತ್ವ ಮೊದಲಾದ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದರೂ ಕೂಡ, ಅಂತಹ

ಅಸತ್‌ಪದಾರ್ಥಗಳು ಭಗವದಧೀನವಾಗಿದೆ. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೂ ಅಸದಾದಿಶಬ್ದಗಳ ಪ್ರತಿಪಾದ್ಯತ್ವ ಶ್ರೀಹರಿಯಲ್ಲಿ ಬರುತ್ತವೆ. ಮೂರುಕಾಲದಲ್ಲಿಯೂ ಅಸತ್ ಪದಾರ್ಥವು ಅತ್ಯಂತ ಅಸತ್ತಾಗಿಯೇ ಇರಬೇಕಾದರೂ ಈಶ್ವರನ ಪ್ರೇರಣೆಯಿಂದಷ್ಟೇ ಸಾಧ್ಯ. ಆದ್ದರಿಂದ ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ 'ಅಸತ್', 'ಶೂನ್ಯ' ಮೊದಲಾದ ನಿಷೇಧವಾಚಕ ಶಬ್ದಗಳಿಂದಲೂ ಶ್ರೀಹರಿಯೇ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧವಾಗುತ್ತದೆ. ಈ ಅಧಿಕರಣದ ಫಲವನ್ನು ಹಿಂದೆ ಹೇಳಿದಂತೆ ಸಮನ್ವಯಸೂತ್ರದ ಅವಧಾರಣದ ಆಕ್ಷೇಪವು ಪೂರ್ವಪಕ್ಷದ ಫಲ. ಅದರ ಸಮಾಧಾನ ಸಿದ್ಧಾಂತದ ಫಲವೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ರಾಘವೇಂದ್ರಯತಿಗಳಿಂದ ವಿರಚಿತವಾದ ನ್ಯಾಯಮುಕ್ತಾವಳಿಯಲ್ಲಿ
ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು
ಇಲ್ಲಿಗೆ ಸಮನ್ವಯಾಧ್ಯಾಯವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಸ್ಮೃತ್ಯಧಿಕರಣ
(೨-೧-೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

## ಎರಡನೆಯ ಅಧ್ಯಾಯ ಪ್ರಥಮಪಾದ

# ಸ್ಮೃತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – स्मृत्यनवकाशदोषप्रसङ्ग इति चेन्नान्यस्मृत्यनवकाशदोष-प्रसङ्गात् ।।**

ರುದ್ರ, ಕಪಿಲ ಮೊದಲಾದವರು ಸರ್ವಜ್ಞರಾಗಿದ್ದಾರೆ ಮತ್ತು ಆಪ್ತರಾಗಿದ್ದಾರೆ. ಇವರಿಂದ ರಚಿತವಾದ್ದರಿಂದ ಶೈವಾದಿ ಸ್ಮೃತಿಗಳು ಪ್ರಮಾಣವಾಗಿವೆ ಮತ್ತು ನಿರವಕಾಶವಾಗಿವೆ. ಇವುಗಳಿಗೆ ವಿರುದ್ಧವಾದ ವಿಷ್ಣುಕರ್ತೃತ್ವವನ್ನು ಸಮರ್ಥಿಸುವ ವಿರೋಧವು ಪ್ರಾಪ್ತವಾಗುತ್ತದೆ. ವೇದಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಅಂಥ ವೇದಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧವಾಗುವುದಿಲ್ಲ.

ಪಾಶುಪತಾದಿಸ್ಮೃತಿಗಳಿಗಿಂತ ಭಿನ್ನವಾದ ಪಂಚರಾತ್ರಾದಿಸ್ಮೃತಿಗಳು ಮಹಾವಿಷ್ಣುವಿನಿಂದಲೇ ರಚಿತವಾಗಿವೆ. ಮತ್ತು ಶ್ರುತಿಸಂವಾದಿಗಳಾಗಿವೆ. ರುದ್ರಾದಿಗಳಿಗಿಂತಲೂ ಸರ್ವಜ್ಞತಮನಾದ ವಿಷ್ಣುವಿನಿಂದ ಪ್ರಣೀತವಾದ್ದರಿಂದ ಪಾಶುಪತಾದಿಸ್ಮೃತಿಗಳಿಗಿಂತಲೂ ಅತ್ಯಂತ ಬಲಿಷ್ಠವಾಗಿವೆ. ಇಂಥ ಪಂಚರಾತ್ರಾದಿಸ್ಮೃತಿಗಳಿಂದ ಪಾಶುಪತಾದಿಸ್ಮೃತಿಗಳಿಗೆ ವಿರೋಧ ಬರುವುದರಿಂದ ಅಪ್ರಾಮಾಣ್ಯವೆಂಬ ದೋಷವು ಪ್ರಾಪ್ತವಾಗುತ್ತದೆ. ಆದರಿಂದ ರುದ್ರಾದಿಗಳಿಗೆ ಜಗತ್ಕರ್ತೃತ್ವವೂ ಕೂಡ ಸಿದ್ಧವಾಗುವುದಿಲ್ಲ. ವಿಷ್ಣುವೇ ಜಗತ್ಕರ್ತೃವಾಗಿದ್ದಾನೆಂದು ಸಿದ್ಧವಾಗುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

# ಸೂತ್ರದೀಪಿಕಾ

**सूत्रदीपिका — स्मृत्यनवकाशदोषप्रसङ्ग इति चेन्नान्यस्मृत्यनवाकाशदोषप्रसङ्गात् ।। यतः स्मृत्यनवकाशदोषप्रसङ्गः** स्मृतीनां पाशुपतादिरूपाणां अनवकाशेन विष्णुजगत्कर्तृत्वादौ निरवकाशत्वेन श्रुतीनां विष्णुकारणातापरत्वे तद्विरोधेन दोषप्रसङ्गः अप्रामाण्याख्यदोषप्राप्तिरस्ति । अतः न श्रुतीनां विष्णुकारणतापरत्वं युक्तम् । किन्तु शिवादिकर्तृतापरत्वमेव **युक्तमिति चेन्न** । कुतः ? **अन्यस्मृत्यनवकाशदोषप्रसङ्गात्** पाशुपतादिभ्यो अन्यासां श्रुतिसंवादित्वेन रुद्राद्यपेक्षया सर्वज्ञतमविष्ण्वादिप्रणीतत्वेन च इतरस्मृतिभ्यः । प्रबलानां पञ्चरात्रादिस्मृतीनां अनवकाशेन रुद्रादिजगत्कर्तृत्वादौ निरवकाशेन तद्विरुद्धशैवादिस्मृतीनां । दोषप्रसङ्गात् अप्रामाण्याख्यादोषेण प्रकर्षे सम्बन्धाङ्गीकारेण तद्विरोधस्या किञ्चितत्करत्वादित्यर्थः ।।१।।

ಅರ್ಥ -- ಯಾವ ಕಾರಣದಿಂದ, ಸ್ಮೃತ್ಯನವಕಾಶದೋಷ ಪ್ರಸಂಗಃ, ಸ್ಮೃತಿ = ಪಾಶುಪತಾದಿ ಸ್ಮೃತಿಗಳಿಗೆ, ಅನವಕಾಶ = ಶ್ರುತಿಗಳು ವಿಷ್ಣುವಿನ ಜಗತ್‌ಕರ್ತೃತ್ವವಿಷಯದಲ್ಲಿ ಪ್ರಮಾಣವಾಗುವುದಾದರೆ ಅವುಗಳ ವಿರೋಧವು ಪಾಶುಪತಾದಿಸ್ಮೃತಿಗಳಿಗೆ ಬರುವುದರಿಂದ ದೋಷಪ್ರಸಂಗಃ = ಅಪ್ರಾಮಾಣ್ಯವೆಂಬ ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರುತಿಗಳಿಗೆ ವಿಷ್ಣುವಿನ ಜಗತ್‌ಕಾರಣತ್ವವಿಷಯದಲ್ಲಿ ತಾತ್ಪರ್ಯವನ್ನು ಹೇಳಬಾರದು. ಹೊರತಾಗಿ, ಶಿವಾದಿಗಳಲ್ಲಿ ಜಗತ್‌ಕರ್ತೃತ್ವವಿಷಯದಲ್ಲಿಯೇ ತಾತ್ಪರ್ಯವನ್ನು ಹೇಳಬೇಕು. ಇತಿ ಚೇನ್ನ = ಇದು ತಪ್ಪು. ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್, ಅನ್ಯ ಸ್ಮೃತಿ = ಪಾಶುಪತಾದಿಗಳಿಗಿಂತ ಭಿನ್ನವಾದ ಶ್ರುತಿಸಂವಾದವಿರುವ ರುದ್ರಾದಿಗಳಿಗಿಂತಲೂ ಸರ್ವಜ್ಞತಮವಾದ ಮಹಾವಿಷ್ಣುವಿನಿಂದ ಪ್ರಣೀತವಾದ ಪಂಚರಾತ್ರಾದಿಸ್ಮೃತಿಗಳು, ಅನವಕಾಶ = ರುದ್ರಾದಿಗಳ ಜಗತ್‌ಕರ್ತೃತ್ವವಿಷಯದಲ್ಲಿ ಪಂಚರಾತ್ರಾದಿಸ್ಮೃತಿಗಳಿಗೆ ತಾತ್ಪರ್ಯವಿರುವುದಿಲ್ಲ. ಆದ್ದರಿಂದ ಪಂಚರಾತ್ರಾದಿ ಸ್ಮೃತಿಗಳಿಗೆ ವಿರುದ್ಧವಾದ, ಶೈವಾದಿಸ್ಮೃತಿಗಳಿಗೆ ದೋಷಪ್ರಸಂಗಾತ್ = ಅಪ್ರಾಮಾಣ್ಯವೆಂಬ ದೋಷದ ಅತ್ಯಂತವಾದ ಸಂಬಂಧವಿರುವುದರಿಂದ ಪಾಶುಪತಾದಿಸ್ಮೃತಿಗಳ ವಿರೋಧವು ಅಕಿಂಚಿತ್ಕರವಾಗಿದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — ।। उक्तेऽर्थेऽविरोधं दर्शयत्यनेनाध्यायेन । प्रथमपादे युक्त्यविरोधम् । प्रथमतः स्मृत्यविरोधं दर्शयति -**

ಅನುವಾದ - ಪ್ರಥಮಾಧ್ಯಾಯದಲ್ಲಿ ಜಗತ್ಕಾರಣನಾದ ವಿಷ್ಣುವೇ ಸಕಲಶಾಸ್ತ್ರಪ್ರತಿಪಾದ್ಯನೆಂದು ನಿರ್ಣಯಿಸಲಾಯಿತು. ಈ ವಿಷಯದಲ್ಲಿ ಆಪಾತತಃ ತೋರುವ ವಿರೋಧಗಳನ್ನು ಪರಿಹರಿಸಲು ಎರಡನೆಯ ಅಧ್ಯಾಯವು ಹೊರಡುತ್ತಿದೆ. ಪ್ರಥಮಪಾದದಲ್ಲಿ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾರೆ. ಅದರಲ್ಲಿಯೂ ಮೊದಲನೆಯ ಅಧಿಕರಣದಲ್ಲಿ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ.

ಪ್ರತಿಪದಾರ್ಥ -- ಸಮನ್ವಯಾಧ್ಯಾಯದಿಂದ ಅವಿರೋಧಾಧ್ಯಾಯವು ಸಂಗತವಾಗಿದೆ ಎಂದು ತಿಳಿಸಲು ಅವಿರೋಧಾಧ್ಯಾಯದ ಸಮಗ್ರ ತಾತ್ಪರ್ಯವನ್ನು ತೋರಿಸುತ್ತಿದ್ದಾರೆ - ಉಕ್ತೇऽರ್ಥೇ = ಜಗತ್ಕಾರಣನಾದ ಮಹಾವಿಷ್ಣುವಿನಲ್ಲಿ ಸಕಲ ಶಾಸ್ತ್ರಗಳು ಸಮನ್ವಯವಾಗುತ್ತವೆ ಎಂಬ ಹಿಂದಿನ ಅಧ್ಯಾಯದಲ್ಲಿ ನಿರೂಪಿತವಾದ ವಿಷಯದಲ್ಲಿ, ಅವಿರೋಧಂ= ಯುಕ್ತಿ, ಸಮಯ, ಶ್ರುತಿ , ಯುಕ್ತಿಸಹಿತ ಶ್ರುತಿ ಇವುಗಳ ಅವಿರೋಧವನ್ನು, ಅನೇನ = ಎರಡನೆಯ, ಅಧ್ಯಾಯೇನ = ಅವಿರೋಧಾಧ್ಯಾಯದಿಂದ, ದರ್ಶಯತಿ = ಸೂತ್ರಕಾರರು ತೋರಿಸುತ್ತಿದ್ದಾರೆ. ಪ್ರಥಮಪಾದೇ = ಮೊದಲನೆಯ ಪಾದದಲ್ಲಿ, ಯುಕ್ತ್ಯವಿರೋಧಂ = ಯುಕ್ತಿಯ ವಿರೋಧ ಪರಿಹಾರವನ್ನು ಮಾಡಿದ್ದಾರೆ. ಪ್ರಥಮತಃ = ಮೊದಲನೆಯ ಅಧಿಕರಣದಲ್ಲಿ, ಸ್ಮೃತ್ಯವಿರೋಧಂ= ಸ್ಮೃತಿಯ ವಿರೋಧಪರಿಹಾರವನ್ನು, ದರ್ಶಯತಿ = ತೋರಿಸುತ್ತಿದ್ದಾರೆ.

**भाष्यम् — स्मृत्यनवकाशदोषप्रसङ्ग इति चेन्नान्यस्मृत्यनवकाशदोषप्रसङ्गात् ।।१।।**

**सर्वज्ञा हि रुद्रादयः । अतस्तेषां वचनविरोधेऽप्रामाण्यमेव स्यादिति चेत् — न**

ಅನುವಾದ - ರುದ್ರ, ಕಪಿಲ ಮೊದಲಾದವರು ಸರ್ವಜ್ಞರಾಗಿದ್ದಾರೆ. ಅಂಥ ಸರ್ವಜ್ಞರಿಂದ ರಚಿತವಾದ ಪಾಶುಪತಾದಿ ಸ್ಮೃತಿಗಳ ವಿರೋಧವು ಶ್ರುತಿಗಳಿಗೆ ಪ್ರಾಪ್ತವಾಗುತ್ತದೆ. ಆದ್ದರಿಂದ ವೇದಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು.

ಪ್ರತಿಪದಾರ್ಥ -- ಪೂರ್ವಪಕ್ಷಾದಿಗಳನ್ನು ತೋರಿಸಲು ಸೂತ್ರವನ್ನು ಉಪನ್ಯಾಸ ಮಾಡುತ್ತಿದ್ದಾರೆ 'ಸ್ಮೃತಿ' ಇತ್ಯಾದಿಯಾಗಿ. ರುದ್ರಾದ್ಯ: = ಶಿವ, ಕಪಿಲ ಮೊದಲಾದವರು ಸರ್ವಜ್ಞಾ: = ಸರ್ವಜ್ಞರು, ಅತ: = ಆದ್ದರಿಂದ, ತೇಷಾಂ = ಆ ರುದ್ರಾದಿಗಳ, ವಚನವಿರೋಧೇ = ಪಾಶುಪತಾದಿಸ್ಮೃತಿವಚನಗಳ ವಿರೋಧವು ಪ್ರಾಪ್ತವಾದರೆ, ಅಪ್ರಾಮಾಣ್ಯಮೇವ = ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವ ಶ್ರುತಿಗಳಿಗೆ ಅಪ್ರಾಮಾಣ್ಯವೇ, ಸ್ಯಾತ್ = ಉಂಟಾಗುತ್ತದೆ. ಇತಿ ಚೇತ್ = ಹೀಗೆ ಆಕ್ಷೇಪ ಮಾಡಿದರೆ.

**भाष्यम् — अन्यस्मृतीनां विष्ण्वादिभिर्नितरां सर्वज्ञैरेव कृतत्वाच्छ्रुतेराधिक्यं च सिद्ध्यति ।।१।।**

ಅನುವಾದ - ಇದು ಸರಿಯಲ್ಲ. ಏಕೆಂದರೆ ಪಂಚರಾತ್ರಾದಿಸ್ಮೃತಿಗಳು ರುದ್ರಾದಿಗಳಿಗಿಂತಲೂ ಸರ್ವಜ್ಞತಮನಾದ ಮಹಾವಿಷ್ಣುವಿನಿಂದ ರಚಿತವಾಗಿವೆ. ಅಂಥ ಪಂಚರಾತ್ರಾದಿ ಸ್ಮೃತಿಗಳಿಗೆ ಶ್ರುತಿಸಂವಾದವಿರುವುದರಿಂದ ಹೆಚ್ಚಿನ ಪ್ರಾಮಾಣ್ಯವಿದೆ.

ಪ್ರತಿಪದಾರ್ಥ -- ಸಿದ್ಧಾಂತಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ - ಅನ್ಯಸ್ಮೃತೀನಾಂ = ಪಾಶುಪತಾದಿ ಸ್ಮೃತಿಗಳಿಗಿಂತ ಭಿನ್ನವಾದ ಪಂಚರಾತ್ರಾದಿಸ್ಮೃತಿಗಳಿಗೆ, ನಿತರಾಂ ಸರ್ವಜ್ಞೈರೇವ = ರುದ್ರಾದಿಗಳಿಗಿಂತಲೂ ಸರ್ವಜ್ಞತಮನಾದ, ವಿಷ್ಣ್ವಾದಿಭಿ: = ವಿಷ್ಣು ಮೊದಲಾದವರಿಂದ, ಕೃತತ್ವಾತ್ = ರಚಿತವಾಗಿರುವುದರಿಂದ ಇಂಥ ಪಂಚರಾತ್ರಾದಿಸ್ಮೃತಿಗಳ ಸಂವಾದವಿರುವ, ಶ್ರುತೇ: = ಶ್ರುತಿಗಳಿಗೆ, ಆಧಿಕ್ಯಂ ಚ = ಪಾಶುಪತಾದಿಸ್ಮೃತಿಗಳಿಗಿಂತಲೂ ಪ್ರಾಬಲ್ಯವು, ಸಿದ್ಧ್ಯತಿ = ಸಿದ್ಧವಾಗುತ್ತದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका — पूर्वाध्यायसङ्गतत्वेन एतदध्यायार्थं दर्शयति — उक्तेऽर्थे इति।।**

ಹಿಂದಿನ ಅಧ್ಯಾಯದಿಂದ ಈ ಅಧ್ಯಾಯಕ್ಕೆ ಸಂಗತಿಯನ್ನು ತೋರಿಸುವ ಮೂಲಕ ಈ ಎರಡನೆಯ ಅಧ್ಯಾಯದ ಅರ್ಥವನ್ನು 'ಉಕ್ತೇಽರ್ಥೇ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ವಿವರಣೆ - ಹಿಂದಿನ ಸಮನ್ವಯಾಧ್ಯಾಯದಲ್ಲಿ ಪರಮಾತ್ಮನೇ ಸಕಲಶಾಸ್ತ್ರಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅವನೇ ಜಗತ್ಕಾರಣನು ಮತ್ತು ಗುಣಪರಿಪೂರ್ಣನು ಎಂದು ಸ್ಥಾಪನೆ ಮಾಡಲಾಯಿತು. ಈ ಪ್ರಮೇಯಕ್ಕೆ ಯುಕ್ತಿವಿರೋಧ, ಸಮಯವಿರೋಧ ಮೊದಲಾದವುಗಳು ಪ್ರಾಪ್ತವಾದರೆ ಸಿದ್ಧವಾಗುವುದಿಲ್ಲ. ಆದ್ದರಿಂದ ಎಲ್ಲಾ ಬಗೆಯ

ವಿರೋಧಗಳನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. ಅದಕ್ಕಾಗಿ ಎರಡನೆಯ ಈ ಅಧ್ಯಾಯವು ಹೊರಟಿದೆ. ಈ ವಿಷಯವನ್ನು ಭಾಷ್ಯದಲ್ಲಿ 'ಉಕ್ತೇಽರ್ಥೇ' ಎಂಬುದಾಗಿ ಹೇಳಿರುತ್ತಾರೆ. ಆದ್ದರಿಂದ ಸಮನ್ವಯಾಧ್ಯಾಯದಿಂದ ಅವಿರೋಧಾಧ್ಯಾಯಕ್ಕೆ ಸಂಗತಿಯನ್ನು ನಿರೂಪಣೆ ಮಾಡಿದಂತಾಯಿತು. ಹಾಗೂ ಈ ಅವಿರೋಧಾಧ್ಯಾಯದ ಮುಖ್ಯತಾತ್ಪರ್ಯ ಏನೆಂದರೆ 'ಭಗವಂತನ ಜಗತ್‌ಕಾರಣತ್ವವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹರಿಸುವಿಕೆ' ಎಂದು.

**ತತ್ವಪ್ರಕಾಶಿಕಾ – अशेषशास्त्रप्रामाण्येन हरिरेव जगज्जन्मादिकर्तेति योऽर्थः प्रथमाध्याये प्रतिपादितस्तस्य युक्त्यादिविरूद्धत्वे न प्रेक्षावदुपादित्सागोचरत्वं स्यात् । अतस्तस्मिन्नुक्तार्थे युक्त्यादिविरोधाभावं दशयत्यनेनाध्यायेन सूत्रकर इत्यर्थः । एतत्पादप्रतिपाद्यं दर्शयति ।। प्रथमेति ।।**

ಪ್ರಥಮಾಧ್ಯಾಯದಲ್ಲಿ ಸಕಲ ಶಾಸ್ತ್ರಗಳು ಪರಮಾತ್ಮನಲ್ಲಿಯೇ ಸಮನ್ವಯಗೊಳ್ಳುವುದರಿಂದ ಪ್ರಮಾಣವಾಗಿವೆ ಆದ್ದರಿಂದ ಪರಮಾತ್ಮನೇ ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಸಮರ್ಥಿಸಲಾಯಿತು. ಈ ಪ್ರಮೇಯಕ್ಕೆ ಯುಕ್ತಿ ಮೊದಲಾದವುಗಳ ವಿರೋಧವು ಪ್ರಾಪ್ತವಾದರೆ ಪ್ರೇಕ್ಷಾವಂತರು ಪರಮಾತ್ಮನನ್ನು ಜಗಜ್ಜನ್ಮಾದಿಕಾರಣನೆಂಬ ಪ್ರಮೇಯವನ್ನು ಒಪ್ಪುವುದಿಲ್ಲ. ಆದ್ದರಿಂದ ಹಿಂದಿನ ಅಧ್ಯಾಯದಲ್ಲಿ ಸಮರ್ಥಿಸಿದ ಪ್ರಮೇಯಕ್ಕೆ ಯುಕ್ತಿ ಮೊದಲಾದವುಗಳ ವಿರೋಧವನ್ನು ಪರಿಹಾರ ಮಾಡಲೇಬೇಕು. ಅದನ್ನೇ ಈ ಅಧ್ಯಾಯದಲ್ಲಿ ಸೂತ್ರಕಾರರು ತೋರಿಸುತ್ತಿದ್ದಾರೆ. ಈ ಎರಡನೇ ಅಧ್ಯಾಯದ ಪ್ರಥಮಪಾದದಿಂದ ಪ್ರತಿಪಾದ್ಯವಾದ ವಿಷಯವನ್ನು ಪ್ರಥಮ ಇತ್ಯಾದಿ ಭಾಷ್ಯದಿಂದ ಹೇಳಿರುತ್ತಾರೆ.

ವಿವರಣೆ - ಪರಮಾತ್ಮನು ಸಕಲ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಪ್ರಕರಣ, ವಾಕ್ಯ, ಪದ, ವರ್ಣ, ಸ್ವರ ಇವುಗಳಿಂದೆಲ್ಲಾ ಪರಮಾತ್ಮನೊಬ್ಬನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ ಹಾಗಾಗಿ ಸಕಲವೇದಶಾಸ್ತ್ರಗಳು ಅವನ ವಿಷಯದಲ್ಲಿ ಪ್ರಮಾಣಭೂತವಾಗಿವೆ ಪ್ರತಿಯೊಂದು ಶಬ್ದಗಳಿಂದ ತಿಳಿಯಲ್ಪಡುವ ಗುಣಗಳಿಂದಲೂ ಕೂಡ ಪರಿಪೂರ್ಣನಾಗಿದ್ದಾನೆ. ಆದ್ದರಿಂದ ಪರಮಾತ್ಮನೊಬ್ಬನೇ ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಹಿಂದಿನ ಅಧ್ಯಾಯದಲ್ಲಿ ಸಮರ್ಥನೆ ಮಾಡಲಾಗಿದೆ. ಈ ಪ್ರಮೇಯವನ್ನು ಪ್ರೇಕ್ಷಾವಂತರು ಒಪ್ಪಬೇಕೆಂದರೆ ಇದಕ್ಕೆ ಯುಕ್ತ್ಯಾದಿವಿರೋಧಗಳು ಬರಬಾರದು. ಅದಕ್ಕಾಗಿ ಈ ಅಧ್ಯಾಯ ಹೊರಟಿದೆ.

**ತತ್ವಪ್ರಕಾಶಿಕಾ – उक्तेऽर्थे विरोधश्चतुर्विधः स्फुरति युक्तिसमय-भृतिन्यायोपेत श्रुतिविरोधभेदात् । तत्र सर्वविरेधानां युक्तिमूलत्वेन तदविरोधं प्रथमपादे दर्शयतीत्यर्थः । आद्याधिकरणार्थं दर्शयति – प्रथमत इति ।।**

ಹಿಂದಿನ ಅಧ್ಯಾಯದಲ್ಲಿ ಸಮರ್ಥನೆ ಮಾಡಿದ ಪ್ರಮೇಯಕ್ಕೆ ನಾಕುಬಗೆಯ ವಿರೋಧವು ಸ್ಫುರಣವಾಗುತ್ತದೆ - ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ, ಯುಕ್ತಿಸಹಿತವಾದ ಶ್ರುತಿವಿರೋಧ ಎಂದು.

ಈ ನಾಕು ಬಗೆಯ ವಿರೋಧಗಳೂ ಕೂಡ ಯುಕ್ತಿಮೂಲಕವಾದ್ದರಿಂದ ಇದರ ವಿರೋಧವನ್ನು ಪ್ರಥಮಪಾದದಲ್ಲಿ ತೋರಿಸಿ ಪರಿಹರಿಸುತ್ತಿದ್ದಾರೆ. ಮೊದಲು 'ಪ್ರಥಮತಃ' ಇತ್ಯಾದಿ ಭಾಷ್ಯದಿಂದ ಮೊದಲನೇ ಈ ಅಧಿಕರಣದ ಪ್ರಮೇಯವನ್ನು ತೋರಿಸುತ್ತಿದ್ದಾರೆ.

ವಿವರಣೆ - ಜಗಜ್ಜನ್ಮಾದಿಕಾರಣತ್ವ ವಿಷಯದಲ್ಲಿ ಒಟ್ಟು ನಾಕು ವಿರೋಧಗಳು ಪ್ರಾಪ್ತವಾಗುತ್ತವೆ. ಈ ನಾಕು ಬಗೆಯ ವಿರೋಧಗಳೂ ಕೂಡ ಯುಕ್ತಿಮೂಲಕವೇ ಆಗಿದೆ. ಏಕೆಂದರೆ ಶ್ರುತಿಯು ಯುಕ್ತಿಮೂಲಕವಾಗಿದ್ದರೆ ಮಾತ್ರ ವಿರೋಧ ಮಾಡಲು ಸಾಧ್ಯ. ಸಮಯಗಳು ತಮ್ಮ ತಮ್ಮ ಮತದ ವಿಷಯವನ್ನು ಯುಕ್ತಿಯಿಂದಲೇ ಸಮರ್ಥನೆ ಮಾಡುತ್ತವೆ. ಆದ್ದರಿಂದ ಪ್ರತಿಯೊಂದು ವಿರೋಧಕ್ಕೂ ಯುಕ್ತಿಯು ಆವಶ್ಯಕವಾಗಿದೆ. ಆದ್ದರಿಂದ ಮೊದಲು ಯುಕ್ತಿವಿರೋಧವನ್ನು ಪರಿಹಾರ ಮಾಡಿದರೆ ಉಳಿದ ವಿರೋಧವನ್ನು ಪರಿಹರಿಸುವುದು ಸುಲಭವಾಗುತ್ತದೆ. ಈ ದೃಷ್ಟಿಯಿಂದ ಸೂತ್ರಕಾರರು ಮೊದಲನೆಯ ಈ ಪಾದದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಿದ್ದಾರೆ. ಹಾಗಾದರೆ ಮೊದಲನೆಯ ಪಾದದ ಪ್ರಥಮಾಧಿಕರಣದಲ್ಲಿಯೂ ಯುಕ್ತಿವಿರೋಧವನ್ನು ಪರಿಹರಿಸಬೇಕಿತ್ತು. ಸ್ಮೃತಿಯ ವಿರೋಧವನ್ನು ಏಕೆ ಪರಿಹರಿಸಿದರು ? ಎಂಬ ಪ್ರಶ್ನೆಗೆ ಭಾಷ್ಯಕಾರರು 'ಪ್ರಥಮತಃ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**तत्वप्रकाशिका – यद्यप्ययं पादः प्रागुक्तार्थे युक्तिविरोधं परिहर्तुमेव प्रवृत्तस्तथापि प्रथमाधिकरणे पाशुपतादिस्मृतिविरोधाभावं दर्शयति । स्मृतीनां युक्तिसमयादिरूपत्वेन तद्विरोधपरिहारस्य समस्ताध्यायार्थभूतस्य प्राथम्योपपत्तेः पादार्थस्याऽप्यत्र सम्भवेन न कोऽपि दोष इति भावः ।**

ವಾಸ್ತವಿಕವಾಗಿ ಎರಡನೆಯ ಅಧ್ಯಾಯದ ಈ ಪ್ರಥಮಪಾದವು ಹಿಂದಿನ ಅಧ್ಯಾಯದ ಪ್ರಮೇಯದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡುವುದಕ್ಕಾಗಿಯೇ ಪ್ರವೃತ್ತವಾಗಿದೆ. ಆದರೂ ಕೂಡ ಮೊದಲನೆಯ ಈ ಅಧಿಕರಣವು ಪಾಶುಪತ ಮೊದಲಾದ ಸ್ಮೃತಿಗಳ ವಿರೋಧವನ್ನು ಪರಿಹರಿಸುತ್ತಿದೆ. ಪಾಶುಪತಾದಿಸ್ಮೃತಿಗಳು ಯುಕ್ತಿರೂಪವೂ ಆಗಿವೆ. ಸಮಯರೂಪವೂ ಆಗಿವೆ. ಆದ್ದರಿಂದ ಇವುಗಳ ವಿರೋಧ ಪರಿಹಾರವು ಸಮಸ್ತ ಅಧ್ಯಾಯದ ಅರ್ಥವೇ ಆಗಿದೆ. ಪಾದದ ಅರ್ಥವೂ ಕೂಡ ಇದರಲ್ಲಿರುವುದರಿಂದ ಇಲ್ಲಿ ಸ್ಮೃತಿವಿರೋಧವನ್ನು ಪರಿಹರಿಸಿದರೆ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ವಿವರಣೆ - ಇಲ್ಲಿಯ ತನಕ ಹಿಂದಿನ ಅಧ್ಯಾಯದಿಂದ ಎರಡನೆಯ ಅಧ್ಯಾಯಕ್ಕೆ ಹಾಗೂ ಪ್ರಥಮಪಾದಕ್ಕೆ ಸಂಗತಿಯನ್ನು ನಿರೂಪಣೆ ಮಾಡಿದ್ದಾಯಿತು. ಪ್ರಕೃತ ಈ ಪಾದದಲ್ಲಿರುವ

ಸ್ಮೃತ್ಯಧಿಕರಣಕ್ಕೆ ಸಂಗತಿಯನ್ನು ನಿರೂಪಣೆ ಮಾಡುತ್ತಿದ್ದಾರೆ. ಈ ಪಾದವು ಸಂಪೂರ್ಣವಾಗಿ ಯುಕ್ತಿವಿರೋಧದ ಪರಿಹಾರಕ್ಕಾಗಿಯೇ ಹೊರಟಿದೆ. ಆದರೆ ಮೊದಲನೆಯ ಅಧಿಕರಣ ಮಾತ್ರ ಯುಕ್ತಿವಿರೋಧವನ್ನು ಪರಿಹಾರ ಮಾಡದೇ ಸ್ಮೃತಿವಿರೋಧವನ್ನು ಪರಿಹಾರ ಮಾಡುತ್ತಿದೆ. ಇದು ಹೇಗೆ ಸರಿ ? ಪಾಶುಪತಾದಿಸ್ಮೃತಿವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಇದು ಸಮಯವಿರೋಧದಲ್ಲಿ ಸೇರುತ್ತದಾದ್ದರಿಂದ ಎರಡನೆಯ ಪಾದದಲ್ಲಿ ಸೇರಬೇಕು. ಅಥವಾ ಯುಕ್ತಿಸಂವಾದದಿಂದ ಕೂಡಿರುವ ಶ್ರುತಿ-ಸ್ಮೃತಿಗಳ ಆಧಾರವನ್ನು ಹೇಳುತ್ತಿರುವುದರಿಂದ ಮೂರನೆಯ ಅಥವಾ ನಾಕನೆಯ ಪಾದದಲ್ಲಿ ಈ ಅಧಿಕರಣವನ್ನು ಉಲ್ಲೇಖ ಮಾಡಬೇಕಿತ್ತು. ಯುಕ್ತಿವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಹೊರಟಿರುವ ಎರಡನೆಯ ಪಾದದಲ್ಲೇಕೆ ಇದನ್ನು ಸೇರಿಸಿದ್ದಾರೆ. ಅದರಲ್ಲೂ ಕೂಡ ಮೊದಲೇ ಇದನ್ನು ಉಲ್ಲೇಖ ಮಾಡಲು ಏನು ಕಾರಣ?

ಈ ಆಶಂಕೆಯನ್ನು ಇಲ್ಲಿ ಪರಿಹರಿಸಿದ್ದಾರೆ. ಸ್ಮೃತಿವಿರೋಧ ಪರಿಹಾರವನ್ನು ಮೊದಲು ಮಾಡುತ್ತಿರುವುದೇ ಸಮಂಜಸವಾಗಿದೆ. ಏಕೆಂದರೆ ಪಾಶುಪತ ಮೊದಲಾದ ಸ್ಮೃತಿಗಳು ಯುಕ್ತಿಯಿಂದ ಕೂಡಿರುವುದರಿಂದ ಯುಕ್ತಿವಿರೋಧರೂಪವೂ ಆಗಿದೆ. ಆದ್ದರಿಂದ ಯುಕ್ತಿವಿರೋಧಪರಿಹಾರಕ್ಕಾಗಿ ಹೊರಟಿರುವ ಈ ಪಾದದಲ್ಲಿ ಈ ಅಧಿಕರಣವು ಅಸಂಗತವಾಗುವುದಿಲ್ಲ. ಇನ್ನು ಎರಡನೆಯ ಅಥವಾ ಮೂರನೆಯ ಪಾದದಲ್ಲಿಯೂ ಕೂಡ ಈ ಅಧಿಕರಣವನ್ನು ಸೇರಿಸಬಹುದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಎರಡನೆಯ ಪಾದವು ಕೇವಲ ಸಮಯವಿರೋಧಪರಿಹಾರಕ್ಕಾಗಿ ಹೊರಟಿದೆ. ಮೂರನೆಯ ಪಾದವು ಶ್ರುತಿವಿರೋಧಪರಿಹಾರಕ್ಕಾಗಿ, ನಾಕನೆಯ ಪಾದವು ಶ್ರುತಿಸಹಿತಯುಕ್ತಿವಿರೋಧಪರಿಹಾರಕ್ಕಾಗಿ ಹೊರಟಿದೆ. ಪ್ರಕೃತ ಪಾಶುಪತಾದಿಸ್ಮೃತಿಗಳು ಕೇವಲ ಸಮಯರೂಪವೂ ಆಗಿಲ್ಲ, ಶ್ರುತಿರೂಪವೂ ಆಗಿಲ್ಲ. ಶ್ರುತಿ ಸಹಿತವಾದ ಯುಕ್ತಿರೂಪವೂ ಆಗಿರುವುದಿಲ್ಲ. ಆದ್ದರಿಂದ ಅವುಗಳಲ್ಲಿ ಉಲ್ಲೇಖ ಮಾಡಲು ಇದಕ್ಕೆ ಸಂಗತಿಯಿರುವುದಿಲ್ಲ.

ಹಾಗಾದರೆ ಕೇವಲ ಯುಕ್ತಿವಿರೋಧರೂಪವೂ ಅಲ್ಲದ ಕಾರಣ ಈ ಪಾದದಲ್ಲಿ ಹೇಗೆ ಸೇರುತ್ತದೆ?

ಹೌದು. ಆದ್ದರಿಂದಲೇ ಯುಕ್ತಿವಿರೋಧಪರಿಹಾರಕ್ಕೆ ಮುಂಚಿತವಾಗಿಯೇ ಈ ಅಧಿಕರಣವನ್ನು ಸೇರಿಸಿದ್ದಾರೆ. ಯುಕ್ತಿವಿರೋಧವನ್ನೂ ಕೂಡ ಪರಿಹಾರ ಮಾಡುತ್ತಿರುವುದರಿಂದ ಯುಕ್ತಿಪಾದದಲ್ಲಿ ಸಂಗತಿ ಇರುವುದಿಲ್ಲ. ಅಷ್ಟೇ ಅಲ್ಲದೇ ಎಲ್ಲಾ ಪಾದದಲ್ಲಿಯೂ ಕೂಡ ಈ ಅಧಿಕರಣವು ಸಂಗತವೇ ಆಗುತ್ತದೆ. ಆದರೆ ಯುಕ್ತಿಪಾದದಲ್ಲೂ ಸಂಗತವಾಗುವುದರಿಂದ 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಈ ಅಧಿಕರಣವನ್ನು ಉಲ್ಲೇಖ ಮಾಡಿದ್ದಾರೆ.

ಅಷ್ಟೇ ಅಲ್ಲದೇ ಯುಕ್ತಿ, ಸಮಯ, ಶ್ರುತಿ ಈ ಎಲ್ಲದರ ಸ್ವರೂಪವನ್ನು ತಾಳಿರುವುದರಿಂದ ಈ ಸ್ಮೃತಿವಿರೋಧವು ಅತ್ಯಂತ ಬಲಿಷ್ಠವಾಗಿದೆ. ಆದ್ದರಿಂದ ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಿ ಮೊದಲೇ ಇದರ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಪ್ರಥಮಪಾದದ ಪ್ರಾರಂಭದಲ್ಲಿ ಸಂಗತಿಯಿರುತ್ತದೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – अनेनास्याधिकरणस्य शास्त्रादिसङ्गतिरुक्ता भवति । वेदप्रामाण्येन जगज्जन्मादिकर्तृत्वं विष्णोरुक्तं । तस्य च पाशुपतादिस्मृतिविरोधे नोक्तजिज्ञासासम्भवतीत्यविरुद्धतां नेतव्यम् ।**

ಹೀಗೆ ಹೇಳಿದ್ದರಿಂದ ಈ ಸ್ಮೃತ್ಯಧಿಕರಣಕ್ಕೆ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳನ್ನು ಹೇಳಿದಂತಾಯಿತು.

ವೇದಪ್ರಾಮಾಣ್ಯದ ಮೂಲಕ ವಿಷ್ಣುವಿಗೆ ಜಗಜ್ಜನ್ಮಾದಿಕರ್ತೃತ್ವವನ್ನು ಹಿಂದಿನ ಅಧ್ಯಾಯದಲ್ಲಿ ಸಮರ್ಥಿಸಲಾಯಿತು. ಈ ಪ್ರಮೇಯಕ್ಕೆ ಪಾಶುಪತಾದಿಸ್ಮೃತಿಗಳ ವಿರೋಧವು ಪ್ರಾಪ್ತವಾದರೆ ಪರಮಾತ್ಮನ ವಿಷಯದಲ್ಲಿ ಜಿಜ್ಞಾಸೆಯು ಯುಕ್ತವಾಗುವುದಿಲ್ಲ. ಆದ್ದರಿಂದ ಈ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು. ಅದಕ್ಕಾಗಿ ಈ ಅಧಿಕರಣವು ಹೊರಟಿದೆ.

ವಿವರಣೆ - ಈ ಅಧಿಕರಣವು ಜಗಜ್ಜನ್ಮಾದಿಕಾರಣತ್ವ ವಿಷಯದಲ್ಲಿ ಬರುವ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸಂಗತಿಯನ್ನು ಹೊಂದುತ್ತದೆ. ವಿರೋಧ ಪರಿಹಾರ ಮಾಡುತ್ತಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಸಂಗತವಾಗುತ್ತದೆ. ಯುಕ್ತಿವಿರೋಧ ಪರಿಹಾರ ಮಾಡುತ್ತಿರುವುದರಿಂದ ಪ್ರಥಮಪಾದದಲ್ಲಿ ಸಂಗತವಾಗುತ್ತದೆ. ಮತ್ತು 'ಯತೋ ವಾ ಇಮಾನಿ ಜಾಯಂತೇ' ಇತ್ಯಾದಿ ಶ್ರುತಿಗಳು ವಿಷ್ಣುವಿಗೆ ಜಗಜ್ಜನ್ಮಾದಿಕಾರಣತ್ವವನ್ನು ಹೇಳುತ್ತಿವೆ. ಈ ಲಕ್ಷಣಕ್ಕೆ ಪಾಶುಪತಾದಿಸ್ಮೃತಿಗಳಿಂದ ವಿರೋಧವು ಬರುತ್ತದೆಂದು ಹೇಳಿದ್ದರಿಂದ ಸ್ಮೃತಿಸಂಗತಿಯನ್ನು ಹಾಗೂ ಹಿಂದಿನ ಏತೇನಾಧಿಕರಣದಲ್ಲಿ ಜಗಜ್ಜನ್ಮಾದಿಕರ್ತೃತ್ವದ ಸ್ಥಾಪನೆಯನ್ನು ವಿಷ್ಣುವಿನಲ್ಲಿ ಮಾಡಿರುವುದರಿಂದ ಅದನ್ನು ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದಲೂ ಕೂಡ ಸಂಗತಿಯನ್ನು ಹೊಂದಿರುತ್ತದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿ, ಶ್ರುತಿಸಂಗತಿ, ಅಧಿಕರಣಸಂಗತಿ ಎಂಬುದಾಗಿ ಐದು ಬಗೆಯ ಸಂಗತಿಗಳನ್ನು ಹೊಂದಿದೆಯೆಂದು ತಿಳಿಯಬೇಕು.

**तत्वप्रकाशिका – तद्विष्णोर्जगजन्मादि कर्तृत्वं विषयः ।। युक्तं न वेति सन्देहः । समयविगानं सन्देहबीजम् । पूर्वपक्षस्य सूत्र एवोक्तत्वात्तदुपन्यस्य पूर्वपक्षांशं तावद्व्याचष्टे – स्मृतीति ।।**

ಈ ಅಧಿಕರಣಕ್ಕೆ ವಿಷ್ಣುವಿನ ಜಗಜ್ಜನ್ಮಾದಿಕರ್ತೃತ್ವವು ವಿಷಯವಾಗಿದೆ. ವಿಷ್ಣುವಿನಲ್ಲಿ ಜಗಜ್ಜನ್ಮಾದಿಕರ್ತೃತ್ವವು ಯುಕ್ತವಾಗುತ್ತದೋ, ಇಲ್ಲವೋ ? ಎಂಬುದು ಅಧಿಕರಣದ ಸಂದೇಹ. ಸಮಯದಲ್ಲಿರುವ ಪರಸ್ಪರ ವಿರೋಧವು ಸಂದೇಹಕ್ಕೆ ಕಾರಣ.

ಪೂರ್ವಪಕ್ಷವನ್ನು ಸೂತ್ರದಲ್ಲಿಯೇ ಹೇಳಿರುವುದರಿಂದ ಸೂತ್ರವನ್ನೇ ಉಲ್ಲೇಖ ಮಾಡಿ, ಅದರಲ್ಲಿರುವ ಪೂರ್ವಪಕ್ಷಾಂಶವನ್ನು ಭಾಷ್ಯಕಾರರು 'ಸ್ಮೃತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ತತ್ವಪ್ರಕಾಶಿಕಾ – न विष्णोर्जगत्कारणत्वं युक्तम् । तत्प्रमाणाभावात् । न च यतो वा इमानि भूतानि जायन्त इत्यादि श्रुतिः प्रमाणम् । श्रुतेर्विष्णोः जगत्कारणत्वप्रतिपादकत्वे पाशुपतसांख्य-योगादिस्मृतिविरोधेनाप्रामाण्याख्य-दोषप्रसङ्गादन्यार्थतोपपत्तेः ॥**

ಅಧಿಕರಣದ ಪೂರ್ವಪಕ್ಷ - ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣವೇ ಇಲ್ಲ.

ಪ್ರಶ್ನೆ - 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯಾವ ಬ್ರಹ್ಮನಿಂದ ಈ ಸಮಸ್ತ ಪ್ರಾಣಿಗಳು ಹುಟ್ಟುತ್ತವೆಯೋ' ಎಂಬ ಶ್ರುತಿಯು ಪ್ರಮಾಣವಾಗಿದೆಯಲ್ಲವೇ?

ಉತ್ತರ - ಈ ಶ್ರುತಿಯು ವಿಷ್ಣುವಿನ ಜಗತ್ಕಾರಣತ್ವವನ್ನು ಪ್ರತಿಪಾದನೆ ಮಾಡುವುದಾದರೆ, ಪಾಶುಪತ ಸ್ಮೃತಿ, ಸಾಂಖ್ಯಸ್ಮೃತಿ, ಯೋಗಸ್ಮೃತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರುತಿಯು ಅಪ್ರಮಾಣವಾಗಬೇಕಾಗುತ್ತದೆ. ಹಾಗಾಗಿ ಶ್ರುತಿಗೆ ಅನ್ಯಾರ್ಥವನ್ನೇ ಕಲ್ಪನೆ ಮಾಡಬೇಕು.

ವಿವರಣೆ - ಪಾಶುಪತ, ಸಾಂಖ್ಯ, ಕಾಣಾದ ಮೊದಲಾದ ಸ್ಮೃತಿಗಳು ಪಶುಪತಿ, ಪ್ರಕೃತಿ ಮೊದಲಾದವುಗಳನ್ನೇ ಪ್ರತಿಪಾದನೆ ಮಾಡುತ್ತಿವೆ. ವಿಷ್ಣು ಜಗತ್ಕಾರಣನಾಗಿದ್ದಾನೆಂಬ ವಿಷಯದಲ್ಲಿ ಅವುಗಳು ತಾತ್ಪರ್ಯವನ್ನು ಹೊಂದಿರುವುದಿಲ್ಲ. ಆದರೆ ನೀವು ವಿಷ್ಣುವೇ ಜಗತ್ ಕಾರಣನಾಗಿದ್ದಾನೆಂದು ಶ್ರುತಿಗಳ ಆಧಾರದಿಂದ ಪ್ರತಿಪಾದನೆ ಮಾಡುತ್ತಿದ್ದೀರಿ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇವೇ ಮೊದಲಾದ ಶ್ರುತಿಗಳಿಗೆ ಈ ಪಾಶುಪತಾದಿಸ್ಮೃತಿಗಳ ವಿರೋಧವು ಬರುವುದರಿಂದ ಅಪ್ರಾಮಾಣ್ಯದೋಷವು ಬರುವ ಪ್ರಸಂಗವಿದೆ. ಆದ್ದರಿಂದ ಆ ಸ್ಮೃತಿಗಳಿಗೆ ವಿಷ್ಣುಪರವಾಗಿ ಅರ್ಥವನ್ನು ಮಾಡದೇ, ರುದ್ರಾದಿಪರವಾಗಿಯೇ ಅರ್ಥವನ್ನು ಮಾಡಬೇಕು. ಆಗ ಶ್ರುತಿಪ್ರಾಮಾಣ್ಯವನ್ನು ರಕ್ಷಣೆ ಮಾಡಿದಂತಾಗುತ್ತದೆ. ಹಾಗಾಗಿ ಹಿಂದಿನ ಅಧ್ಯಾಯದಲ್ಲಿ ವಿಷ್ಣು ಜಗತ್ಕಾರಣನಾಗಿದ್ದಾನೆಂದು ಹೇಳಿದ್ದು ಅಯುಕ್ತವಾಗಿದೆ.

**ತತ್ವಪ್ರಕಾಶಿಕಾ – पाशुपतादिस्मृतीनां रुद्रादेर्जगत्कारणत्वप्रतिपादकत्वात् ॥ न च विरोधेऽप्यप्रामाण्याभावः । वस्तुनि विकल्पप्रसंङ्गात् । न च देशकालादिभेदेन श्रुतिस्मृत्योरविरोधः । स्मृतिषु रुद्रादेः सकलजगज्जन्मादिकर्तृत्वाभिधानात् । न च वाच्यं श्रुतिविरोधेन स्मृतीनामेवान्यार्थत्वमप्रामाण्यं वा किं न स्यात् । विरोधे त्वनपेक्षं स्यादसति ह्यनुमानमिति न्यायादिति ।**

ಪ್ರಶ್ನೆ - ಪಾಶುಪತಾದಿಸ್ಮೃತಿಗಳಿಂದ ವೇದಕ್ಕೆ ವಿರೋಧ ಬಂದ ಮಾತ್ರಕ್ಕೆ ಅಪ್ರಾಮಾಣ್ಯವನ್ನೇಕೆ ಒಪ್ಪಬೇಕು?

ಉತ್ತರ - ಹಾಗಾದಲ್ಲಿ ವಸ್ತುವಿನಲ್ಲಿ ವಿಕಲ್ಪವನ್ನು ಒಪ್ಪಿದಂತಾಗುತ್ತದೆ. ಒಂದೇ ವಸ್ತುವಿಗೆ ವಿರುದ್ಧವಾದ ಎರಡು ಸ್ವರೂಪವು ಬರಬೇಕಾದೀತು.

ಪ್ರಶ್ನೆ - ಒಂದು ದೇಶ, ಒಂದು ಕಾಲದಲ್ಲಿ ಶಿವನಿಗೆ ಜಗತ್‌ಕಾರಣತ್ವವನ್ನು ಮತ್ತೊಂದು ದೇಶ, ಮತ್ತೊಂದು ಕಾಲದಲ್ಲಿ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಒಪ್ಪಿದರೆ ವಿರೋಧವು ಬರುವುದಿಲ್ಲ. ಶ್ರುತಿ-ಸ್ಮೃತಿಗಳೂ ಕೂಡ ಅವಿರುದ್ಧವಾಗುತ್ತವೆ.

ಉತ್ತರ - ಈ ಪ್ರಶ್ನೆಯೂ ಕೂಡ ತಪ್ಪು. ರುದ್ರನು ಸಕಲ ದೇಶ, ಸಕಲ ಕಾಲಗಳಲ್ಲಿ ಜಗತ್ ಕಾರಣನಾಗಿದ್ದಾನೆಂದು ಹೇಳಲಾಗಿದೆ. ಶ್ರುತಿಯಲ್ಲಿ ವಿಷ್ಣುವೇ ಸಕಲವೇದ, ಸಕಲ ಕಾಲಗಳಲ್ಲಿ ಜಗತ್ ಕಾರಣನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ವಿರೋಧ ತಪ್ಪಿದ್ದಲ್ಲ.

ಪ್ರಶ್ನೆ - ಶ್ರುತಿವಿರೋಧ ಬರುವುದರಿಂದ ಸ್ಮೃತಿಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬಹುದು. ಅಥವಾ ಅಪ್ರಾಮಾಣ್ಯವನ್ನು ಹೇಳಬಹುದು. ಶ್ರುತಿಗಳಿಗೆ ಏಕೆ ಅನ್ಯಾರ್ಥವನ್ನು ಹಾಗೂ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬೇಕು ?

'ವಿರೋಧೇ ತ್ವನಪೇಕ್ಷಂ ಸ್ಯಾತ್ ಅಸತಿ ಹ್ಯನುಮಾನಮ್' ಎಂಬ ಜೈಮಿನಿಸೂತ್ರದಲ್ಲಿ ಇದನ್ನೇ ಸಮರ್ಥಿಸಲಾಗಿದೆ.

ವಿವರಣೆ - ಪೂರ್ವಕ್ಷಕಾರರು ಪಾಶುಪತಾದಿಸ್ಮೃತಿಗಳು ಪರಮ ಪ್ರಮಾಣವಾಗಿವೆ. ಇದಕ್ಕನುಗುಣವಾಗಿ ಶ್ರುತಿಗಳಿಗೆ ಅರ್ಥವನ್ನು ಮಾಡಿದಾಗ, ಸಕಲ ಶ್ರುತಿ-ಸ್ಮೃತಿಗಳು ರುದ್ರನ ಜಗತ್‌ಕಾರಣತ್ವವನ್ನೇ ಸಮರ್ಥನೆ ಮಾಡುತ್ತಿದೆ ಎಂದು ಹೇಳುತ್ತಿದ್ದಾರೆ. ಪೂರ್ವಪಕ್ಷಕಾರರ ಮೇಲೆ ಬರುವ ಅಧಿಕ ಆಕ್ಷೇಪವನ್ನು ಇಲ್ಲಿ ಪರಿಹರಿಸಲಾಗಿದೆ -

ಪಾಶುಪತಾದಿಸ್ಮೃತಿಗಳಿಂದ ಶ್ರುತಿಗಳಿಗೆ ವಿರೋಧ ಬರಬಹುದು. ಅಂದಮಾತ್ರಕ್ಕೆ ಅಪ್ರಾಮಾಣ್ಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಶ್ರುತಿ ಹೇಳುವ ಅರ್ಥ ಹಾಗೂ ಸ್ಮೃತಿ ಹೇಳುವ ಅರ್ಥ ಎರಡನ್ನೂ ಸ್ವೀಕರಿಸಿದಾಗ ಏನೂ ಸಮಸ್ಯೆ ಬರುವುದಿಲ್ಲ. ಈ ಆಕ್ಷೇಪಕ್ಕೆ ವಿರುದ್ಧವಾದ ಎರಡು ಸ್ವರೂಪವನ್ನು ಹೇಳಿದಂತಾಗುತ್ತದೆಂಬ ದೋಷವನ್ನು ಹೇಳಿದ್ದಾರೆ.

ರುದ್ರನು ಯಾವ ದೇಶದಲ್ಲಿ ಕಾರಣಪುರುಷನಾಗಿದ್ದಾನೋ, ಆ ದೇಶವನ್ನು ಬಿಟ್ಟು, ಮತ್ತೊಂದು ದೇಶದಲ್ಲಿ ವಿಷ್ಣು ಕಾರಣಪುರುಷನಾಗಿದ್ದಾನೆ. ಅಥವಾ ಈ ಕಾಲದಲ್ಲಿ ರುದ್ರನು ಜಗತ್-ಕಾರಣನಾಗಿದ್ದರೂ ಕೂಡ ಮತ್ತೊಂದು ಕಾಲದಲ್ಲಿ ವಿಷ್ಣುವು ಜಗತ್‌ಕಾರಣನಾಗಿದ್ದಾನೆಂದು ಹೇಳಬಹುದು. ಹೀಗೆ ದೇಶ-ಕಾಲಗಳೆಂಬ ಉಪಾಧಿಯ ಭೇದದಿಂದ ವಿರೋಧವನ್ನು ಪರಿಹಾರ ಮಾಡಬಹುದೆಂಬುದು ಅಧಿಕಾಕ್ಷೇಪ. ಆದರೆ ಇದೂ ಕೂಡ ಸರಿಯಲ್ಲ. ಪಾಶುಪತಾದಿಸ್ಮೃತಿಗಳು,

ಸಕಲ ದೇಶ, ಸಕಲ ಕಾಲಗಳಲ್ಲಿ ಶಿವನೊಬ್ಬನನ್ನೇ ಜಗತ್‌ಕಾರಣನೆಂದು ಹೇಳುತ್ತಿರುವಾಗ, ಒಂದು ದೇಶ ಅಥವಾ ಒಂದು ಕಾಲದಲ್ಲಷ್ಟೇ ಶಿವನಿಗೆ ಜಗತ್‌ಕಾರಣತ್ವವನ್ನು ಒಪ್ಪುವುದು ಸ್ಮೃತಿ ಸಮ್ಮತವಾಗುವುದಿಲ್ಲ.

ಸ್ಮೃತಿ-ಶ್ರುತಿಗಳ ಪರಸ್ಪರ ವಿರೋಧ ಬಂದರೆ, ಸ್ಮೃತಿಯು ದುರ್ಬಲವಾದ್ದರಿಂದ ಅದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು ಹೊರತು, ಶ್ರುತಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬಾರದು. 'ವಿರೋಧೇ ತ್ವನಪೇಕ್ಷಂ ಸ್ಯಾತ್ ಅಸತಿ ಹ್ಯನುಮಾನಮ್' ಎಂಬ ಜೈಮಿನಿಸೂತ್ರವು ಇದನ್ನೇ ಹೇಳುತ್ತಿದೆ. ಸ್ಮೃತಿಯಿಂದ ವಿರೋಧವು ಪ್ರಾಪ್ತವಾದರೆ, 'ಅನಪೇಕ್ಷಂ' ಶ್ರುತಿಯ ಪ್ರಾಮಾಣ್ಯವನ್ನು ಸ್ವೀಕಾರ ಮಾಡದೇ ಇರುವುದು ತಪ್ಪುತ್ತದೆ. ಏಕೆಂದರೆ 'ವಿರೋಧೇ ಅಸತಿ' ಸ್ಮೃತಿಗೆ ಶ್ರುತಿಯಿಂದ ವಿರೋಧವಿಲ್ಲದಿದ್ದರೆ ಮಾತ್ರ ಸ್ಮೃತಿಯು 'ಅನುಮಾನಂ' ಅನುಮಾನಪ್ರಮಾಣದ ಮೂಲಕ ಪ್ರಮಾಣವೆನಿಸುತ್ತವೆ ಎಂಬುದು ಈ ಸೂತ್ರದ ಅಭಿಪ್ರಾಯ. ಆದ್ದರಿಂದ ಶ್ರುತಿಯ ವಿರೋಧವು ಬರುವುದರಿಂದ ಸ್ಮೃತಿವಾಕ್ಯಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು ಎಂಬುದು ಪೂರ್ವಪಕ್ಷಕಾರರ ಮೇಲಿರುವ ಆಕ್ಷೇಪ. ಈ ಆಕ್ಷೇಪವನ್ನು ಮುಂದೆ ಪೂರ್ವಪಕ್ಷಕಾರರು ಪರಿಹರಿಸುತ್ತಾರೆ.

**ತत्वप्रकाशिका – प्रबलविराधेनैव दुर्बलस्यान्यार्थतादेः कल्पनीयत्वात् । न हि स्मृतिभ्यः श्रुतेः प्राबल्यमस्ति । स्मृतीनां रुद्रकपिलकमलासनादिभिराप्तै-र्विरचितानां दोषाभावगुणयुक्तत्वात् । रुद्रादीनां सार्वज्ञस्य जगद्धितोपदेष्टृत्वस्य च प्रसिद्धत्वात् । श्रुतेश्च कर्तृगुणशून्यत्वेन पिपीलिकालिपिनिभत्वात् ।**

ಉತ್ತರ - ಪ್ರಬಲವಾದ ವಿರೋಧ ಬಂದಾಗ ದುರ್ಬಲವಾದದ್ದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು. ಪ್ರಕೃತ ಪಾಶುಪತಾದಿಸ್ಮೃತಿಗಳಿಗಿಂತ ಶ್ರುತಿಗಳಿಗೆ ಪ್ರಾಬಲ್ಯವು ಇರುವುದಿಲ್ಲ. ಏಕೆಂದರೆ ರುದ್ರ, ಕಪಿಲ, ಚತುರ್ಮುಖಬ್ರಹ್ಮ ಮೊದಲಾದ ಆಪ್ತರಿಂದ ಸ್ಮೃತಿಗ್ರಂಥಗಳು ರಚಿತವಾಗಿವೆ. ಆಪ್ತರಾದವರಲ್ಲಿ ದೋಷವಿಲ್ಲದ ಕಾರಣ ಅವರಿಂದ ರಚಿತವಾದ ಸ್ಮೃತಿಗ್ರಂಥಗಳಲ್ಲಿಯೂ ಕೂಡ ದೋಷವು ಇರುವುದಿಲ್ಲ. ರುದ್ರಾದಿಗಳಲ್ಲಿ ಸಾರ್ವಜ್ಞ್ಯ, ಜಗತ್ತಿಗೆ ಹಿತವಾದದ್ದನ್ನು ಉಪದೇಶ ಮಾಡುವಿಕೆ ಇವೇ ಮೊದಲಾದ ಗುಣಗಳು ಪ್ರಸಿದ್ಧವಾಗಿವೆ. ಆದರೆ ಶ್ರುತಿಗಳು ಯಾರಿಂದಲೂ ರಚಿತವಾಗಿರುವುದಿಲ್ಲ. ಇರುವೆಯ ಸಾಲುಗಳಂತೆ ಆಕಸ್ಮಿಕವಾದ ಅಕ್ಷರಗಳ ಜೋಡಣೆಯಾಗಿವೆ. ಆದ್ದರಿಂದಲೇ ದುರ್ಬಲ ಎನಿಸುತ್ತವೆ.

ವಿವರಣೆ - ಪರಸ್ಪರ ವಿರೋಧ ಬಂದರೆ ಅವೆರಡರಲ್ಲಿ ಯಾವುದು ಪ್ರಬಲ ಎಂಬುದನ್ನು ವಿಚಾರ ಮಾಡಬೇಕು. ಪ್ರಬಲವಾದ್ದರಿಂದ ದುರ್ಬಲಕ್ಕೆ ಬಾಧ ಹೇಳಬೇಕೇ ಹೊರತು, ದುರ್ಬಲವಾದ್ದರಿಂದ ಪ್ರಬಲಕ್ಕೆ ಬಾಧವನ್ನು ಹೇಳಲೇಬಾರದು. ಪ್ರಕೃತ ಶ್ರುತಿಯು ವಿಷ್ಣುವಿನ ಜಗತ್ಕಾರಣತ್ವವನ್ನು ಹೇಳುತ್ತಿದೆ. ಸ್ಮೃತಿಯು ರುದ್ರನ ಜಗತ್ಕಾರಣತ್ವವನ್ನು ಹೇಳುತ್ತಿದೆ. ಹೀಗೆ ಶ್ರುತಿ-ಸ್ಮೃತಿಗಳಲ್ಲಿ ಪರಸ್ಪರ ವಿರೋಧವು ಬಂದಿರುವುದರಿಂದ ಯಾವುದಕ್ಕೆ ಬಾಧವನ್ನು

ಹೇಳಬೇಕು ಎಂದರೆ ಶ್ರುತಿಗಳಿಗೆ ಬಾಧವನ್ನು ಹೇಳಬೇಕು ಹೊರತು, ಸ್ಮೃತಿಗಳಿಗೆ ಹೇಳಬಾರದು. ಶ್ರುತಿಗಳಿಗಿಂತಲೂ, ಸ್ಮೃತಿಗಳು ಬಲಿಷ್ಠವಾಗಿವೆ. ಜಗತ್ತಿಗೆ ಹಿತವಾದದ್ದನ್ನೇ ಉಪದೇಶ ಮಾಡುವ ಗುಣಗಳನ್ನು ಹೊಂದಿರುವ ಯಥಾರ್ಥವಾದ ಸಾರ್ವಜ್ಞ್ಯವನ್ನು ಹೊಂದಿರುವ ರುದ್ರಾದಿ ಆಪ್ತರು ಈ ಪಾಶುಪತಾದಿಸ್ಮೃತಿಗಳನ್ನು ರಚನೆ ಮಾಡಿರುತ್ತಾರೆ. ಆದ್ದರಿಂದ ಇವುಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡುವುದು ತಪ್ಪಾಗುತ್ತದೆ. ಆದರೆ ಶ್ರುತಿಗಳನ್ನು ಯಾರೊಬ್ಬರೂ ಕೂಡ ರಚನೆ ಮಾಡಿರುವುದಿಲ್ಲವಾದ್ದರಿಂದ ದುರ್ಬಲವಾಗಿವೆ ಎಂದು ಸಿದ್ಧವಾಗುತ್ತದೆ.

**तत्वप्रकाशिका – क्वचिच्छ्रुतिविरोधेन स्मृतेरर्थान्तरकल्पनादि तु स्मृतेः श्रुतिमूलत्व एव भवति । मूलमूलिनोर्मूलस्य प्रबलत्वात् ।**

ಕೆಲವೆಡೆ ಸ್ಮೃತಿವಿರೋಧ ಬಂದಾಗ ಸ್ಮೃತಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡುವುದು ಕಂಡಿದೆ. ಆದರೆ ಆ ಸ್ಮೃತಿಯು ಶ್ರುತಿಯನ್ನು ಉಪಜೀವಿಸಿಕೊಂಡಿದ್ದಾಗ ಮಾತ್ರ ಹೀಗೆ ಅನ್ಯಾರ್ಥವನ್ನು ಕಲ್ಪನೆ ಮಾಡಲಾಗುತ್ತದೆ. ಏಕೆಂದರೆ ಮೂಲ ಹಾಗೂ ಮೂಲಿಗಳಲ್ಲಿ ಮೂಲವೇ ಪ್ರಬಲವಾಗಿರುತ್ತದೆಂಬುದು ನಿಯಮಸಿದ್ಧವಾಗಿದೆ.

ವಿವರಣೆ - ಶ್ರುತಿ-ಸ್ಮೃತಿಗಳಿಗೆ ವಿರೋಧ ಬಂದರೆ ಸ್ಮೃತಿಯೇ ಬಲಿಷ್ಠ ಎಂಬುದು ಸಾಮಾನ್ಯನಿಯಮ. ಕೆಲವೊಮ್ಮೆ ಈ ಸ್ಮೃತಿಯು ದುರ್ಬಲವಾಗುತ್ತದೆ. ಯಾವಾಗ ಸ್ಮೃತಿಯು ಶ್ರುತಿಯನ್ನು ಅವಲಂಬಿಸಿರುತ್ತದೋ, ಆಗ ಶ್ರುತಿಯು ಮೂಲವಾಯಿತು. ಸ್ಮೃತಿಯು ಮೂಲಿಯಾಯಿತು. ಮೂಲ ಹಾಗೂ ಮೂಲಿಗಳಲ್ಲಿ ಮೂಲವೇ ಪ್ರಬಲವೆಂಬುದು ನಿಯಮ. ಆದ್ದರಿಂದ ಸ್ಮೃತಿಯು ಎಲ್ಲಿ ಶ್ರುತಿಯನ್ನು ಅವಲಂಬಿಸಿರುವುದಿಲ್ಲವೋ, ಅಲ್ಲಿ ಮಾತ್ರ ಪ್ರಬಲವಾಗಿರುತ್ತದೆ. ಒಂದು ವೇಳೆ ಶ್ರುತಿಯನ್ನು ಅವಲಂಬಿಸಿದರೆ ಆಗ ಶ್ರುತಿಯನ್ನು ಅವಲಂಬಿಸಿದ ಎಂಬ ಕಾರಣದಿಂದಲೇ ಅದು ದುರ್ಬಲವಾಗುತ್ತದೆಂದು ತಿಳಿಯಬೇಕು.

**तत्वप्रकाशिका – न च पाशुपतादिस्मृतीनां श्रुतिमूलत्वम् । रुद्रादिप्रत्यक्षस्यैव तन्मूलत्वात् । अतः पाशुपतादिस्मृतीनामाप्तप्रणीतानां प्रबलत्वेन निरवकाशत्वाच्छ्रुतेश्च तद्विरुद्धाभिधायकत्वेऽप्रामाण्यस्यैव प्रसङ्गान्न तया विष्णोर्जगत्कारणत्वं सिध्यति तस्मान्न तस्य जिज्ञास्यतेति भावः ।। सिद्धान्ताम्शं व्याचष्टे ।। नेति ।।**

ಪಾಶುಪತಾದಿಸ್ಮೃತಿಗಳು ಶ್ರುತಿಮೂಲಕವಲ್ಲ, ರುದ್ರಾದಿಪ್ರತ್ಯಕ್ಷಗಳೇ ಅದಕ್ಕೆ ಮೂಲ ಎನಿಸಿವೆ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಆಪ್ತಪ್ರಣೀತವಾದ್ದರಿಂದ ಪ್ರಬಲವಾಗಿವೆ. ಆದ್ದರಿಂದಲೇ ನಿರವಕಾಶವಾಗಿವೆ. ಶ್ರುತಿಗಳು ಇಂಥ ಸ್ಮೃತಿಗಳಿಗೆ ವಿರುದ್ಧವಾದ ವಿಷಯವನ್ನು ಪ್ರತಿಪಾದನೆ ಮಾಡುವುದಾದರೆ ಅಪ್ರಾಮಾಣ್ಯವನ್ನೇ ಹೊಂದುತ್ತವೆ. ಇಂಥ ಅಪ್ರಮಾಣವಾದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ವಿಷ್ಣುವಿನ ಜಿಜ್ಞಾಸೆಯು ಮಾಡಬೇಕಾಗಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸ್ಮೃತ್ಯಧಿಕರಣ (೨-೧-೧)

**तत्वप्रकाशिका – युक्तमेव विष्णोर्जगत्कारणत्वं श्रुत्युदितत्वात् । न च श्रुतेर्विष्णोर्जगत्कारणत्वाभिप्राये पाशुपतादिस्मृतिविरोधेनाप्रामाण्यप्रसङ्गादर्थान्तरत्वमिति वाच्यम् । श्रुतिविरोधेन स्मृतीनामेवाप्रामाण्याख्यदोषप्रसङ्गात् ।**

ವಿಷ್ಣುವಿಗೆ ಜಗತ್‌ಕಾರಣತ್ವವು ಯುಕ್ತವೇ ಆಗಿದೆ. ಈ ವಿಷಯದಲ್ಲಿ ಶ್ರುತಿಗಳು ಪ್ರಮಾಣವಾಗಿವೆ.

ಪ್ರಶ್ನೆ - ವಿಷ್ಣುವಿನ ಜಗತ್‌ಕಾರಣತ್ವ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳಲು ಸಾಧ್ಯವಿಲ್ಲ. ಈಗಾಗಲೇ ಪೂರ್ವಪಕ್ಷದಲ್ಲಿ ಹೇಳಿದಂತೆ ಪಾಶುಪತಾದಿಸ್ಮೃತಿಗಳ ವಿರೋಧವಿರುವುದರಿಂದ ಶ್ರುತಿಗೆ ಅಪ್ರಾಮಾಣ್ಯಪ್ರಸಂಗವಿದೆ. ಹಾಗಾಗಿ ಅರ್ಥಾಂತರವನ್ನೇ ಹೇಳಬೇಕಲ್ಲವೇ?

ಉತ್ತರ - ಈ ಪ್ರಶ್ನೆ ತಪ್ಪು. ಶ್ರುತಿ ವಿರೋಧವಿರುವುದರಿಂದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯದೋಷ ಬರುತ್ತದೆ.

**तत्वप्रकाशिका – न च स्मृतिभ्यः श्रुतेराधिक्याभावेनाबाधकत्वम् । पञ्चरादिस्मृत्यनुकूलत्वेन पाशुपतादिस्मृतिभ्यः श्रुतेराधिक्यसिद्धेः । न च वक्तव्यं पञ्चरात्रादिस्मृत्यानुकूल्येऽपि कथं श्रुतेराधिक्यमिति । तासां विष्णवादिभिर्नितरां सर्वज्ञैर्जगद्धितोपदेष्टृभिः प्रणीतत्वात् ।**

ಪ್ರಶ್ನೆ - ಸ್ಮೃತಿಗಳಿಗಿಂತ ಶ್ರುತಿಯಲ್ಲಿ ಯಾವುದೇ ಆಧಿಕ್ಯವಿಲ್ಲ. ಆದ್ದರಿಂದ ಸ್ಮೃತಿಗಳನ್ನು ಶ್ರುತಿಗಳು ಬಾಧಿಸುವುದಿಲ್ಲ.

ಉತ್ತರ - ಪಂಚರಾತ್ರಾದಿಸ್ಮೃತಿಗಳ ಅನುಕೂಲ್ಯವು ಶ್ರುತಿಗಳಿಗಿರುವುದರಿಂದ ಪಾಶುಪತಾದಿ-ಸ್ಮೃತಿಗಳಿಗಿಂತಲೂ ಶ್ರುತಿಗೆ ಆಧಿಕ್ಯವಿರುತ್ತದೆ.

ಪ್ರಶ್ನೆ - ಪಂಚರಾತ್ರಾದಿಸ್ಮೃತಿಗಳಿಂದ ಆನುಕೂಲ್ಯವಿದ್ದ ಮಾತ್ರಕ್ಕೆ ಶ್ರುತಿಯಲ್ಲಿ ಆಧಿಕ್ಯವು ಹೇಗೆ ಸಿದ್ಧವಾಗುತ್ತವೆ ?

ಉತ್ತರ - ಆ ಪಂಚರಾತ್ರಾದಿಸ್ಮೃತಿಗಳು ಸರ್ವಜ್ಞತಮನಾದ ಮಹಾವಿಷ್ಣುವಿನಿಂದ ರಚಿತವಾಗಿವೆ. ಮತ್ತು ಆ ವಿಷ್ಣುವು ಜಗತ್ತಿಗೆ ಅತ್ಯಂತ ಹಿತವಾದದ್ದನ್ನೇ ಉಪದೇಶ ಮಾಡುತ್ತಾನೆ.

ವಿವರಣೆ - ಪೂರ್ವಪಕ್ಷದಲ್ಲಿ ವೇದಗಳಿಗಿಂತ ಪಂಚರಾತ್ರಾದಿಸ್ಮೃತಿಗಳೇ ಪ್ರಬಲವಾಗಿವೆ ಎಂದು ಆಕ್ಷೇಪ ಮಾಡಲಾಗಿತ್ತು. ಅದಕ್ಕೆ ವಿರುದ್ಧವಾಗಿ ಇಲ್ಲಿ ಶ್ರುತಿಯೇ ಪ್ರಬಲವಾಗಿದೆಯೆಂದು ಸಮರ್ಥನೆ ಮಾಡುತ್ತಿದ್ದಾರೆ. ಪ್ರಬಲವಾದ ಶ್ರುತಿಗಳಿಂದ ವಿರೋಧವಿರುವ ಕಾರಣ ಪಾಶುಪತಾದಿಸ್ಮೃತಿಗಳೆಲ್ಲವೂ ಅಪ್ರಮಾಣವಾಗುತ್ತವೆ. ಪಂಚರಾತ್ರಾದಿಸ್ಮೃತಿಗಳ ಸಹಾಯವಿದ್ದ

ಮಾತ್ರಕ್ಕೆ ಶ್ರುತಿಯು ಪಾಶುಪತಾದಿಸ್ಮೃತಿಗಳಿಗಿಂತ ಹೇಗೆ ಪ್ರಬಲವಾಗುತ್ತದೆಂದು ಪೂರ್ವಪಕ್ಷಕಾರರು ಇಲ್ಲಿ ಆಕ್ಷೇಪ ಮಾಡಬಹುದು ಆದರೆ ಪಾಶುಪತಾದಿಸ್ಮೃತಿಗಳನ್ನು ರಚನೆ ಮಾಡುವ ರುದ್ರನಲ್ಲಿ ಎಷ್ಟು ಆಪ್ತತ್ವವಿದೆಯೋ, ಅದಕ್ಕಿಂತಲೂ ಹೆಚ್ಚು ಆಪ್ತತ್ವ ಪಂಚರಾತ್ರಸ್ಮೃತಿಯನ್ನು ರಚನೆ ಮಾಡಿದ ಮಹಾವಿಷ್ಣುವಿನಲ್ಲಿದೆ. ಏಕೆಂದರೆ ರುದ್ರನಿಗಿಂತ ಹೆಚ್ಚಿನ ಸಾರ್ವಜ್ಞ್ಯ ವಿಷ್ಣುವಿನಲ್ಲಿದೆ. ರುದ್ರನಿಗಿಂತ ಹೆಚ್ಚು ಜಗತ್ತಿಗೆ ಹಿತೋಪದೇಶಕತ್ವವೂ ಕೂಡ ವಿಷ್ಣುವಿನಲ್ಲಿದೆ. ಹಾಗಾಗಿ ರುದ್ರಾದಿಗಳಿಗಿಂತ ವಿಷ್ಣು ಹೆಚ್ಚು ಆಪ್ತನಾದ ಕಾರಣ ಪಂಚರಾತ್ರಸ್ಮೃತಿಯು ಪಾಶುಪತಸ್ಮೃತಿಗಿಂತ ಶ್ರೇಷ್ಠವಾಗುತ್ತದೆ. ಇಂಥ ಸ್ಮೃತಿಸಂವಾದವಿರುವ ಪ್ರಯುಕ್ತ ಶ್ರುತಿಯು ಇನ್ನಷ್ಟು ಪ್ರಬಲವಾಗುತ್ತದೆ.

**तत्वप्रकाशिका – कुतो विष्ण्वादीनां रुद्रादिभ्योऽप्याप्ततमत्वम् । तदुक्तस्य श्रुतौ संवाददर्शनात्। रुद्राद्युक्तस्य संवादहीनत्वात् । अतो वैष्णवस्मृतीनां परमाप्तैः पुरषोत्तमादिभिः तत्साहाय्यवत्या श्रुत्या विरोधेऽप्रमाण्यप्रसङ्ग इति युक्तमेव विष्णोर्जगत्करणत्वं जिज्ञास्यात्वं चेति भावः ।। १ ।।**

ಪ್ರಶ್ನೆ - ವಿಷ್ಣುವಿಗೆ ರುದ್ರಾದಿಗಳಿಗಿಂತ ಹೆಚ್ಚು ಆಪ್ತತಮತ್ವವು ಹೇಗೆ ಬರುತ್ತದೆ ?

ಉತ್ತರ - ವಿಷ್ಣುವಿನಿಂದ ಹೇಳಲ್ಪಟ್ಟ ವಿಷಯವು ಶ್ರುತಿಸಂವಾದವುಳ್ಳದ್ದಾಗಿದೆ. ರುದ್ರಾದಿಗಳಿಗೆ ಹೇಳಲ್ಪಟ್ಟ ವಿಷಯವು ಶ್ರುತಿಸಂವಾದ ಹೀನವಾಗಿದೆ. ಆದ್ದರಿಂದ ವೈಷ್ಣವಸ್ಮೃತಿಗಳೆನಿಸಿದ ಪಂಚರಾತ್ರಾದಿಗಳೆಲ್ಲವೂ ಪರಮಾಪ್ತತಮನಾದ ಪುರುಷಾಗ್ರಣಿಯಾದ ಮಹಾವಿಷ್ಣುವಿನಿಂದ ಪ್ರಣೀತವಾದ ಕಾರಣ ನಿರವಕಾಶ ಎನಿಸಿವೆ. ಪಾಶುಪತಾದಿಸ್ಮೃತಿಗಳಿಗೆ ಈ ಪಂಚರಾತ್ರಾದಿಸ್ಮೃತಿಗಳ ವಿರೋಧವು ಬರುವುದರಿಂದ ಅಪ್ರಾಮಾಣ್ಯವೇ ಪ್ರಾಪ್ತವಾಗುತ್ತದೆ. ಹೀಗಿರುವಾಗ ಪಂಚರಾತ್ರಾದಿಸ್ಮೃತಿಗಳ ಸಹಾಯವುಳ್ಳ ಶ್ರುತಿಯಿಂದ ವಿರೋಧವು ಬಂದರೆ ಅಪ್ರಾಮಾಣ್ಯವು ಬಂದೇ ಬರುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಹೀಗೆ ವಿಷ್ಣುವಿನ ಜಗತ್‌ಕಾರಣತ್ವವು ಯುಕ್ತವಾಗುತ್ತದೆ. ಅವನ ಜಿಜ್ಞಾಸ್ಯತ್ವವೂ ಯುಕ್ತವಾಗುತ್ತದೆ.

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – ।। इतरेषां चानुपलब्धेः ।।२।।**

ಪಾಶುಪತಾದಿ ಸ್ಮೃತಿಗಳಲ್ಲಿ ಕೆಲವೆಡೆ ದೃಷ್ಟ ಪ್ರಯೋಜನವು ದೊರೆಯುತ್ತದೆಂದು ಹೇಳಲಾಗಿದೆ. ಆದರೆ ಅಂತಹ ಪ್ರಯೋಜನಗಳು ದೊರೆಯುತ್ತಿಲ್ಲ. ಹಾಗಾಗಿ ಆ ಸ್ಮೃತಿಗಳು ಅಪ್ರಮಾಣವಾಗಿವೆ. ಕೆಲವು ಫಲಗಳು ದೊರೆಯಬಹುದೆಂಬುದನ್ನು ಚ ಶಬ್ದದಿಂದ ಸೂಚಿಸಿದ್ದಾರೆ.

ಸ್ಮೃತ್ಯಧಿಕರಣ (೨-೧-೧)

## ಸೂತ್ರದೀಪಿಕಾ

**सूत्रदीपिका — इतरेषां चानुपलब्धेः ।।** अनुपलब्धेरित्यावर्तते । चशब्दः किञ्चित्फलोपलब्ध्यङ्गीकारसूचकः । तथाचानुपलब्धेः अतीन्द्रियात् । इतरेषां भिन्नानां प्रत्यक्षयोग्यानां पाशुपताद्युक्तफलानाम् अनिष्टानां च तदुक्तक्रिया-नुष्ठानपरित्यागयोः कृतयोरप्यनुपलब्धेः प्रत्यक्षतोऽदर्शनात् तासमामप्रामाण्यमेव युक्तमित्यर्थः ।।२।।

ಅರ್ಥ -- ಸೂತ್ರದಲ್ಲಿ 'ಅನುಪಲಬ್ಧೇಃ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. ಆವಾಗ 'ಅನುಪಲಬ್ಧೇಃ ಇತರೇಷಾಂ ಅನುಪಲಬ್ಧೇಃ' ಎಂದು ಹೇಳಿದಂತಾಗುತ್ತದೆ. ಚಶಬ್ದವು ಕೆಲವು ದೃಷ್ಟಫಲಗಳು ದೊರೆಯುವುದನ್ನು ನಾವೂ ಕೂಡ ಅಂಗೀಕರಿಸಿದ್ದೇವೆ ಎಂಬುದನ್ನು ಸೂಚನೆ ಮಾಡುತ್ತಿದೆ. ಆದ್ದರಿಂದ ಅನುಪಲಬ್ಧೇಃ = ಅತೀಂದ್ರಿಯವಾದ ಜಗತ್‌ಕರ್ತೃತ್ವಾದಿಗಳಿಗಿಂತ, ಇತರೇಷಾಂ = ಭಿನ್ನವಾದ ಪ್ರತ್ಯಕ್ಷಯೋಗ್ಯವಾದ ಪಾಶುಪತಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಫಲಗಳು, ಅನುಪಲಬ್ಧೇಃ = ಪ್ರತ್ಯಕ್ಷವಾಗಿ ಕಾಣಿಸುತ್ತಿಲ್ಲ. ಅನಿಷ್ಟವಾದ ಆಚರಣೆಯಿಂದ ಕ್ರಿಯಾಪರಿಲೋಪವಾದರೂ ದುಷ್ಪರಿಣಾಮ ಕಾಣಸುತ್ತಿಲ್ಲ. ಮತ್ತು ವಿಧಾನ ಮಾಡಲ್ಪಟ್ಟ ಸತ್ಕರ್ಮಾಚರಣೆಯಿಂದ ಶುಭಫಲಗಳು ದೊರೆಯುತ್ತಿಲ್ಲ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಅಪ್ರಮಾಣವಾಗಿವೆ ಎಂದರ್ಥ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। इतरेषां चानुपलब्धेः ।।२।।**

**इतरेषां तासु स्मृतिषूक्तानां फलादीनां प्रत्यक्षतोऽनुपलब्धेरप्रामाण्यं तासां युक्तम् ।**

ಅನುವಾದ - ಪಾಶುಪತಾದಿಸ್ಮೃತಿಗಳಲ್ಲಿ ಹೇಳಲ್ಪಟ್ಟ ದೃಷ್ಟಫಲಕವಾದ ಕರ್ಮಗಳ ಫಲವು ಪ್ರತ್ಯಕ್ಷವಾಗಿ ಸಿದ್ಧವಾಗುತ್ತಿಲ್ಲ. ಆದ್ದರಿಂದ ಅವುಗಳಿಗೆ ಅಪ್ರಾಮಾಣ್ಯವನ್ನು ಹೇಳುವುದೇ ಯುಕ್ತ.

ಪ್ರತಿಪದಾರ್ಥ -- ವೈಷ್ಣವ ಸ್ಮೃತಿಗಳು ಪರಮಾತ್ಮನಾದ ಮಹಾವಿಷ್ಣುವಿನಿಂದ ಪ್ರಣೀತವಾದ ಕಾರಣ ಇವುಗಳ ಸಹಾಯ ಹೊಂದಿದ ಶ್ರುತಿಗಳು ಪ್ರಬಲವಾಗಿವೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ ಎಂದು ಹಿಂದಿನ ಸೂತ್ರದಲ್ಲಿ ಹೇಳಿದ್ದು ಸರಿಯಲ್ಲ. ಹಾಗಾದಲ್ಲಿ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯದೋಷವು ಬರಬೇಕಾದೀತು. ಆಪ್ತೋಕ್ತವಾದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ತಪ್ಪಲ್ಲವೇ? ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಇತರೇಷಾಂ = ರುದ್ರಾದಿಗಳ, ತಾಸು = ಕೃತಿಯನಿಸಿದ, ಸ್ಮೃತಿಷು = ಪಾಶುಪತಾದಿ ಸ್ಮೃತಿಗಳಲ್ಲಿ, ಉಕ್ತಾನಾಂ = ಹೇಳಲ್ಪಟ್ಟ, ಫಲಾದೀನಾಂ = ಫಲಗಳು, ಪ್ರತ್ಯಕ್ಷತಃ = ಪ್ರತ್ಯಕ್ಷವಾಗಿ, ಅನುಪಲಬ್ಧೇಃ = ಉಂಟಾಗುವುದು ಕಾಣಸುತ್ತಿಲ್ಲ. ಆದ್ದರಿಂದ ತಾಸಾಂ = ಪಾಶುಪತಾದಿಸ್ಮೃತಿಗಳಿಗೆ, ಅಪ್ರಾಮಾಣ್ಯಂ = ಅಪ್ರಾಮಾಣ್ಯವನ್ನು ಹೇಳುವುದು, ಯುಕ್ತಂ = ಯುಕ್ತವಾಗುತ್ತದೆ

**भाष्यम् — च शब्देन भागोपलब्धिरङ्गीकृता ॥२॥**

ಅನುವಾದ - ಸೂತ್ರದಲ್ಲಿರುವ ಚಶಬ್ದದಿಂದ ಪಾಶುಪತಾದಿ ಸ್ಮೃತಿಗಳಲ್ಲಿ ಕೆಲವು ಭಾಗಗಳಲ್ಲಿ ಹೇಳಲ್ಪಟ್ಟ ಪ್ರತ್ಯಕ್ಷಫಲಗಳು ಕಾಣಿಸುತ್ತಿವೆ ಎಂಬುದನ್ನು ನಾವೂ ಕೂಡ ಅಂಗೀಕರಿಸಿದ್ದೇವೆ ಎಂಬುದನ್ನು ಸೂಚಿಸಿದ್ದಾರೆ.

ಪ್ರತಿಪದಾರ್ಥ -- ಪಾಶುಪತಾದಿ ಸ್ಮೃತಿಗಳಲ್ಲಿ ವಿಹಿತವಾದ ಅನುಷ್ಠಾನವನ್ನು ಮಾಡಿದಾಗ ಫಲವು ದೊರೆಯುವುದು ಕಂಡಿದೆ. ಅದರಲ್ಲಿ ನಿಷೇಧ ಮಾಡಿದ್ದನ್ನು ಅನುಷ್ಠಾನ ಮಾಡಿದಾಗ ಅನರ್ಥವುಂಟಾಗುವುದೂ ಕೂಡ ಕಂಡಿದೆ. ಹೀಗಿರುವಾಗ ಸೂತ್ರದಲ್ಲಿ ಅನುಪಲಬ್ಧಿಯನ್ನು ಹೇಗೆ ಹೇಳಿದರು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಚ ಶಬ್ದೇನ = ಸೂತ್ರದಲ್ಲಿರುವ ಚ ಶಬ್ದದಿಂದ, ಭಾಗೋಪಲಬ್ಧಿಃ = ಕೆಲವು ಭಾಗಗಳಲ್ಲಿ ಹೇಳಲ್ಪಟ್ಟ ಅನುಷ್ಠಾನಗಳಿಂದ ಫಲವು ದೊರೆಯುತ್ತದೆ ಎಂಬುದನ್ನು, ಅಂಗೀಕೃತಾ = ಅಂಗೀಕರಿಸಿದ್ದೇವೆ.

## ತತ್ವಪ್ರಕಾಶಿಕಾ

**तत्वप्रकाशिका — यदुदितं(क्तं) वैष्णवस्मृतीनां परमाप्तप्रणीतत्वेन तत्साह्य्ययुक्तश्रुत्या विष्णोर्जगत्कारणत्वसिद्धिरिति न तद्युक्तम् । तथा सति पाशुपतादिस्मृतीनामप्रामाण्यसङ्गात् । न चाप्तोक्तानां तासामप्रामाण्यं युज्यत इत्याशङ्कां परिहरत्सूत्रं पठित्वा व्याचष्टे — इतरेषां चेति ॥**

ಹಿಂದಿನ ಸೂತ್ರದಲ್ಲಿ ವೈಷ್ಣವಸ್ಮೃತಿಗಳು ಪರಮಾತ್ಮನಾದ ವಿಷ್ಣುವಿನಿಂದ ಪ್ರಣೀತವಾಗಿದೆ. ಇಂಥ ಸ್ಮೃತಿಗಳ ಸಹಾಯವುಳ್ಳ ಶ್ರುತಿಗಳು ಅತ್ಯಂತ ಬಲಿಷ್ಠವಾಗಿವೆ. ಈ ಶ್ರುತಿಯಿಂದ ವಿಷ್ಣುವಿನ ಜಗತ್‌ಕಾರಣತ್ವವು ಸಿದ್ಧವಾಗುತ್ತದೆಂದು ಸಮರ್ಥಿಸಲಾಯಿತು. ಇದು ಅಯುಕ್ತ. ಹಾಗಾದಲ್ಲಿ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕಾಗುತ್ತದೆ. ಆಪ್ತವಾಕ್ಯವೆನಿಸಿದ ಈ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಒಪ್ಪುವುದು ಯುಕ್ತವಾಗುವುದಿಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ 'ಇತರೇಷಾಂ' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ವಿವರಣೆ** - ವಿಷ್ಣುವು ಪರಮಾಪ್ತನಾಗಿದ್ದಾನೆ. ಅವನಿಂದ ರಚಿತವಾದ ಪಂಚರಾತ್ರಸ್ಮೃತಿಯು ಪ್ರಮಾಣವಾಗಲಿ, ಅಂದಮಾತ್ರಕ್ಕೆ ಪಾಶುಪತಸ್ಮೃತಿಯು ಏಕೆ ಅಪ್ರಮಾಣವಾಗಬೇಕು? ಎಂಬ ಪ್ರಶ್ನೆಗೆ ಉತ್ತರಿಸಲು ಈ ಸೂತ್ರ ಹೊರಟಿದೆ.

**तत्वप्रकाशिका – यदुक्तं श्रुत्या विष्णोर्जगत्कारणत्वाभ्युपगमेऽन्यस्मृतीनामप्रामाण्यं प्रसज्जत इति तत्र यक्तमेव तासामप्रामाण्यमिति वक्तव्यम् । आप्तप्रणीतानां कथं तदिति चेत् ।**

ಶ್ರುತಿಗೆ ಅನುಸಾರಿಯಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಅಂಗೀಕಾರ ಮಾಡಿದರೆ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವು ಬರುತ್ತದೆ ಎಂದು ಏನು ಆಕ್ಷೇಪ ಮಾಡಲಾಯಿತೋ, ಅದು ತಪ್ಪು. ಏಕೆಂದರೆ ಪಾಶುಪತಾದಿಸ್ಮೃತಿಗಳೆಲ್ಲವೂ ಅಪ್ರಮಾಣವಾಗಿವೆ ಎಂದು ಹೇಳಲೇಬೇಕು.

ಪ್ರಶ್ನೆ - ರುದ್ರಾದಿಗಳೂ ಕೂಡ ಆಪ್ತರಾಗಿದ್ದಾರೆ. ತತ್ಪ್ರಣೀತವಾದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಹೇಗೆ ಸರಿ ?

**तत्वप्रकाशिका – मैवम् । तासु स्मृतिषूक्तानामदृष्टादितरेषां फलानर्थानामुक्तानुष्ठानपरित्यागयोः कृतयोरपि प्रत्यक्षतोऽनुपलब्धेराप्तोक्तत्वानिश्चयादिति भावः । प्रत्यक्षयोग्यत्वमितरेषामित्यनेनोच्यते । ननु पाशुपतादिस्मृतिविहितनिषिद्धाचरणे फलानर्थयोरूपलम्भात्कथं तदनुपलब्धिमसूत्रयदित्यत आह – चशब्देनेति ।।**

ಉತ್ತರ - ಮೇಲಿನ ಪ್ರಶ್ನೆ ಅಯುಕ್ತ. ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ಪ್ರತ್ಯಕ್ಷಯೋಗ್ಯವಾದ ಕರ್ಮಗಳನ್ನು ಅನುಷ್ಠಾನ ಮಾಡಿದರೆ ಫಲವು ದೊರಕುತ್ತಿಲ್ಲ. ಮತ್ತು ಯಾವ ಕರ್ಮವನ್ನು ಪರಿತ್ಯಾಗ ಮಾಡಿದರೆ ಅನರ್ಥವಾಗುತ್ತದೆಂದು ಹೇಳಲಾಗಿದೆಯೋ, ಆ ಕರ್ಮವನ್ನು ಪರಿತ್ಯಾಗ ಮಾಡಿದರೂ ಕೂಡ ಅನರ್ಥವಾಗುವುದು ಕಾಣಿಸುತ್ತಿಲ್ಲ. ಆದ್ದರಿಂದ ಈ ಶಾಸ್ತ್ರವು ಆಪ್ತೋಕ್ತವಾಗಿದೆಯೆಂದು ನಿಶ್ಚಯವೇ ಆಗುವುದಿಲ್ಲ ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

ಸೂತ್ರದಲ್ಲಿರುವ 'ಇತರೇಷಾಂ' ಎಂಬ ಪದವು ಪ್ರತ್ಯಕ್ಷಯೋಗ್ಯವಾದ ವಸ್ತುವನ್ನು ಹೇಳುತ್ತದೆ.

ಪ್ರಶ್ನೆ - ಪಾಶುಪತಾದಿ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ವಿಧಾನ ಮಾಡಲಾಗಿದೆಯೋ, ಅದನ್ನು ಆಚರಿಸಿದಾಗ ಫಲವು ದೊರಕುವುದು ಕಾಣಿಸುತ್ತಿದೆ. ನಿಷೇಧ ಮಾಡಿದ ಕರ್ಮವನ್ನು ಆಚರಣೆ ಮಾಡಿದಾಗ ಅನರ್ಥವಾಗುವುದೂ ಕೂಡ ಕಾಣಿಸುತ್ತಿದೆ. ಕೆಲವು ಕಡೆ ಹೀಗೆ ಕಾಣಿಸುತ್ತಿರುವುದರಿಂದ ಫಲಾನುಲಬ್ಧಿಯನ್ನು ಸೂತ್ರಕಾರರು ಹೇಗೆ ಹೇಳಿದರು ?

ಉತ್ತರ - ಈ ಪ್ರಶ್ನೆಗೆ ಉತ್ತರವನ್ನು 'ಚ'ಶಬ್ದೇನ ಎಂಬ ಭಾಷ್ಯದಿಂದ ಹೇಳಿರುತ್ತಾರೆ.

ವಿವರಣೆ - ಸೂತ್ರಕಾರರು ಪಾಶುಪತಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಿಹಿತಕರ್ಮದ ಆಚರಣೆಯಿಂದ ಫಲ ದೊರಕುವುದು ನಿಷಿದ್ಧ ಧರ್ಮಾಚರಣೆಯಿಂದ ಅನರ್ಥವಾಗುವುದು ಕಾಣಸುತ್ತಿಲ್ಲವೆಂದು ಹೇಳಿದ್ದಾರೆ. ಫಲ ಹಾಗೂ ಅನರ್ಥಗಳು ಸರ್ವಥಾ ಆಗುವುದೇ ಇಲ್ಲ ಎಂದಭಿಪ್ರಾಯವಲ್ಲ. ಕೆಲವೊಮ್ಮೆ ಫಲ ಸಿಗುವುದಿಲ್ಲ ಮತ್ತು ಅನರ್ಥವಾಗುತ್ತಿಲ್ಲ ಎಂದಷ್ಟೇ ಅಭಿಪ್ರಾಯ. ಆದ್ದರಿಂದ ರುದ್ರಾದಿಗಳನ್ನು ಪರಮಾಪ್ತರೆಂದು ನಿಶ್ಚಯಿಸಲು ಸಾಧ್ಯವಿಲ್ಲ. ರುದ್ರಾದಿಗಳು ಹೇಳಲ್ಪಟ್ಟ ಯಾವುದೇ ವಿಷಯದಲ್ಲೂ ಫಲಾನುಪಲಬ್ಧಿಯು ಉಂಟಾಗಬಾರದು. ಕೆಲವು ವಿಷಯದಲ್ಲಿ ಉಂಟಾಗುತ್ತಿರುವುದರಿಂದ ಪರಮಾಪ್ತತ್ವವನ್ನು ನಿರ್ಣಯಿಸಲಾಗದು ಎಂಬುದಷ್ಟೇ ಸೂತ್ರಕಾರರ ಅಭಿಪ್ರಾಯ.

**तत्वप्रकाशिका – न सूत्रकृता सर्वात्मनाऽनुपलब्धिरभ्युपगता यया प्रत्यक्षविरोधः किन्तु भागेनोपलब्धिरप्यङ्गीकृता । चशब्देन तस्याः सूचनात् । न च तथा सत्युपलब्धार्थभागवत्सर्वस्याप्तोक्तत्वम् । भागान्तरवदनाप्तोक्तत्व-सम्भवादिति भावः ।। २ ।।**

ಸೂತ್ರಕಾರರು ಸರ್ವಾತ್ಮನಾ ಫಲದ ಅನುಪಲಬ್ಧಿಯನ್ನು ಅಂಗೀಕರಿಸುವುದಿಲ್ಲ. ಹಾಗಾದಲ್ಲಿ ಪ್ರತ್ಯಕ್ಷ ವಿರೋಧ ಬರುತ್ತಿತ್ತು. ಆದ್ದರಿಂದ ಭಾಗಶಃ ಉಪಲಬ್ಧಿಯನ್ನು ಸೂತ್ರಕಾರರು ಅಂಗೀಕರಿಸಿದ್ದಾರೆ. ಸೂತ್ರದಲ್ಲಿರುವ 'ಚ'ಶಬ್ದವು ಇದನ್ನು ಸೂಚನೆ ಮಾಡುತ್ತಿದೆ.

ಪ್ರಶ್ನೆ - ಹಾಗಾದರೆ ಫಲದ ಉಪಲಬ್ಧಿಯಿಂದ ಯಾವ ವಾಕ್ಯಗಳಿಗೆ ಆಪ್ತೋಕ್ತತ್ವವು ಸಿದ್ಧವಾಗುತ್ತದೋ, ಅದರ ದೃಷ್ಟಾಂತದಿಂದ ಉಳಿದ ಭಾಗಗಳೂ ಕೂಡ ಆಪ್ತೋಕ್ತವೆಂದು ಸಮರ್ಥಿಸಬಹುದಲ್ಲವೇ?

ಉತ್ತರ - ಇದು ತಪ್ಪು. ಇದೇ ನ್ಯಾಯದಿಂದ ಯಾವ ಭಾಗವು ಫಲ ಅನುಪಲಬ್ಧಿಯಿಂದ ಆಪ್ತೋಕ್ತವಲ್ಲವೆಂದು ನಿರ್ಣಯವಾಗಿದೆಯೋ, ಇದರ ದೃಷ್ಟಾಂತದಿಂದ ಉಳಿದ ವಾಕ್ಯಗಳೂ ಕೂಡ ಅನಾಪ್ತೋಕ್ತವಾಗಿವೆ ಎಂದು ವಿಪರೀತವಾಗಿಯೂ ಸಾಧಿಸಬಹುದು. ಆದ್ದರಿಂದ ಪಾಶುಪತಾದಿಸ್ಮೃತಿಗಳಿಗೆ ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ.

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – एतेन योगः प्रत्युक्तः ।।**

ಯೋಗ ಶಾಸ್ತ್ರದಲ್ಲಿ ಹೇಳಿದ ಫಲಗಳು ಪ್ರತ್ಯಕ್ಷವಾಗಿ ದೊರೆಯುತ್ತಿರುವುದರಿಂದ ಯೋಗ ಶಾಸ್ತ್ರವು ಪ್ರಮಾಣವಲ್ಲವೇ ಎಂದು ಪ್ರಶ್ನಿಸಬಾರದು. ಅದೇ ಯೋಗಶಾಸ್ತ್ರವು ಹೇಳುವಂತೆ

ಕೆಲವೊಮ್ಮೆ ಯೋಗವನ್ನು ಅಭ್ಯಾಸ ಮಾಡಿದಾಗ ಯೋಗದ ಉತ್ಕರ್ಷಾವಸ್ಥೆಯಲ್ಲಿಯೂ ಫಲವು ದೊರೆಯುವುದಿಲ್ಲ. ಆದ್ದರಿಂದ ಯೋಗಶಾಸ್ತ್ರವೂ ಕೂಡ ಅಪ್ರಮಾಣವಾಗಿದೆ.

## ಸೂತ್ರದೀಪಿಕಾ

**सूत्रदीपिका — एतेन योगः प्रत्युक्तः ।। एतेन फलादर्शनलक्षणपूर्वोक्तहेतुनैव योगः योगशास्त्रम् । प्रत्युक्तः निरस्तमित्यर्थः ।।३।।**

ಅರ್ಥ -- ಏತೇನ = ಫಲ ಅದರ್ಶನವೆಂಬ ಹಿಂದಿನ ಹೇತುವಿನಿಂದಲೇ ಯೋಗಃ = ಯೋಗಶಾಸ್ತ್ರವು, ಪ್ರತ್ಯುಕ್ತಃ = ನಿರಾಕೃತವಾಯಿತು.

॥ ಇಲ್ಲಿಗೆ ಸೂತ್ರ ಹಾಗೂ ಸೂತ್ರದೀಪಿಕೆಯಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् — ।। एतेन योगः प्रत्युक्तः ।।३।।**

**योगफलं प्रत्यक्षोपलभ्यमिति न मन्तव्यम् ।**

**उक्ताभ्यासे तत्काल एव फलादृष्टेः ।।३।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये स्मृत्यधिकरणम् ।। १ ।।**

ಅನುವಾದ - ಯೋಗಶಾಸ್ತ್ರದಲ್ಲಿ ಯಾವ ಫಲವು ಹೇಳಲ್ಪಟ್ಟದೆಯೋ, ಅದು ಪ್ರತ್ಯಕ್ಷವಾಗಿ ಉಪಲಬ್ಧವಾಗುವುದು ಕಂಡಿದೆ. ಆದ್ದರಿಂದ ಯೋಗಶಾಸ್ತ್ರ ಪ್ರಮಾಣವಾಗುತ್ತದಲ್ಲವೇ? ಎಂದು ತಿಳಿಯಬಾರದು. ಏಕೆಂದರೆ ಯೋಗಶಾಸ್ತ್ರದಲ್ಲಿಯೇ ಹೇಳಿದಂತೆ ಯೋಗಾಭ್ಯಾಸ ಮಾಡಿದಾಗ ಅದರ ಉತ್ಕರ್ಷಕಾಲದಲ್ಲಿ ಅದೇ ಶಾಸ್ತ್ರದಲ್ಲಿ ಹೇಳಲ್ಪಟ್ಟ ಫಲವು ಕೆಲವೊಮ್ಮೆ ಉಂಟಾಗುವುದಿಲ್ಲ. ಆದ್ದರಿಂದ ಯೋಗಶಾಸ್ತ್ರವೂ ಕೂಡ ಅಪ್ರಮಾಣವಾಗಿವೆ.

ಪ್ರತಿಪದಾರ್ಥ -- ಪಾಶುಪತಾದಿಸ್ಮೃತಿಗಳು ಅಪ್ರಮಾಣವಾಗಬಹುದು. ಅಂದ ಮಾತ್ರಕ್ಕೆ ಎಲ್ಲಾ ಅವೈಷ್ಣವಶಾಸ್ತ್ರಗಳು ಅಪ್ರಮಾಣವಾಗುತ್ತವೆಂಬುದಕ್ಕೆ ಹಿಂದಿನ ಸೂತ್ರದಲ್ಲಿ ಹೇಳಿದ್ದು ಕಾರಣವಾಗುವುದಿಲ್ಲ. ಏಕೆಂದರೆ ಯೋಗಸ್ಮೃತಿಯಲ್ಲಿ ಹೇಳಿದ ಫಲಗಳು ನಿಯಮೇನ

ಉಂಟಾಗುವುದು ಕಾಣಿಸುತ್ತಿದೆ. ಆದ್ದರಿಂದ ಯೋಗಶಾಸ್ತ್ರವು ಆಪ್ತಪ್ರಣೀತವಾದ್ದರಿಂದ ಪ್ರಮಾಣವೆಂದು ನಿಶ್ಚಯಿಸಬಹುದಲ್ಲವೇ? ಈ ಆಶಂಕೆಗೆ ಮುಂದಿನ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - ಯೋಗಫಲಂ = ಯೋಗಶಾಸ್ತ್ರದಲ್ಲಿ ಹೇಳಿದ ಫಲವು, ಪ್ರತ್ಯಕ್ಷತಃ = ಪ್ರತ್ಯಕ್ಷಪ್ರಮಾಣದಿಂದ, ಉಪಲಭ್ಯತೇ = ದೊರೆಯುತ್ತಿದೆ. ಇತಿ = ಹೀಗೆ, ನ ಮಂತವ್ಯಮ್ = ತಿಳಿಯಬಾರದು. ಏಕೆಂದರೆ ಉಕ್ತಾಭ್ಯಾಸೇ = ಯೋಗಶಾಸ್ತ್ರದಲ್ಲಿ ಹೇಳಿದಂತೆ ಪರಿಶ್ರಮ ಪಟ್ಟರೂ, ತತ್ಕಾಲ ಏವ = ಅದೇ ಕಾಲದಲ್ಲಿ ನಿರ್ದೇಶಿಸಲ್ಪಟ್ಟ , ಫಲಾದೃಷ್ಟೇಃ = ಸ್ವೇದನ ಮೊದಲಾದ ಫಲಗಳು ಕಾಣಿಸುತ್ತಿಲ್ಲ. ಆದ್ದರಿಂದ ಅವೈಷ್ಣವಸ್ಮೃತಿಗಳೆಲ್ಲವೂ ಅಪ್ರಮಾಣವೆಂದು ನಿರ್ಧಾರವಾಯಿತು.

ಇಲ್ಲಿಗೆ ಸ್ಮೃತ್ಯಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – न तथापि सर्वासामवैष्णवस्मृतीनामप्रामाण्यं योगस्मृत्युक्तफलादीनामव्यभिचारेणोपलम्भादाप्तप्रणीतत्वनिश्चयोपपत्तेरित्याशङ्कां परिहरत्सूत्रमुपन्यस्य व्याचष्टे – एतेनेति ।।**

ಆದರೂ ಕೂಡ ಎಲ್ಲಾ ಅವೈಷ್ಣವ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಯೋಗಸ್ಮೃತಿಗಳಲ್ಲಿ ಹೇಳಲ್ಪಟ್ಟ ವಾಕ್ಯಗಳಿಂದ ನಿಯಮೇನ ಫಲ ದೊರಕುವುದು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಅದನ್ನು ಬರೆದ ಪತಂಜಲಿ ಮೊದಲಾದ ಋಷಿಗಳು ಆಪ್ತರೆಂದು ನಿರ್ಣಯ ಮಾಡಬಹುದಲ್ಲವೇ? ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ಏತೇನ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – योगस्मृत्युक्तफलादीनामव्यभिचारेणोपलम्भादाप्तोक्तत्व-निश्चयोपपत्तेरप्रामाण्यायोग इति न मन्तव्यम् । तदुक्तफलानां स्वेदनगात्रभन्जनादीनां प्रत्यक्षोपलब्धावपि प्रथमं स्वेदनं द्वितीयं गात्रभन्जनमित्या-युक्ताभ्यासावस्थोत्कर्षसम्पत्तिकाल एव स्वेदनादीनामदृष्टेराप्तोक्तत्वानिश्चयादिति भावः । अतोऽवैदिकस्मृतीनामप्रमाणत्वान्न श्रुत्युक्तस्य विष्णोर्जगत्कारणत्वस्य तद्विरोध इति सिद्धम् ।। ३ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् स्मृत्यधिकरणम् ।।**

ಯೋಗಸ್ಮೃತಿಯಲ್ಲಿ ಹೇಳಲ್ಪಟ್ಟ ಫಲವು ನಿಯಮೇನ ದೊರಕುತ್ತಿದೆ. ಆದ್ದರಿಂದ ಅದನ್ನು ರಚನೆ ಮಾಡಿದ ಪತಂಜಲಿ ಮೊದಲಾದವರು ಆಪ್ತರೇ ಆಗಿದ್ದಾರೆಂದು ನಿಶ್ಚಯ ಮಾಡಬಹುದು. ತದುಕ್ತವಾದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬ ವಿಷಯವು ಅಯುಕ್ತವಾಗಿದೆ. ಏಕೆಂದರೆ ಅಲ್ಲಿಯೂ ಕೂಡ ಫಲಾನುಪಲಬ್ಧಿಯು ಇದ್ದೇ ಇದೆ. ದೇಹ ಬೆವರುವುದು, ಶರೀರ ಕುಗ್ಗುವುದು ಇವೇ ಮೊದಲಾದ ಯೋಗಶಾಸ್ತ್ರದಲ್ಲಿ ಹೇಳಿದ ಫಲಗಳು ಪ್ರತ್ಯಕ್ಷತಃ ಸಿದ್ಧವಾಗಿವೆ. ಆದರೂ ಕೂಡ ಮೊದಲು ಬೆವರುವುದು, ಅನಂತರ ದೇಹ ಕುಗ್ಗುವುದು ಇತ್ಯಾದಿಯಾಗಿ ಯೋಗಾಭ್ಯಾಸದ ಉತ್ಕರ್ಷಾವಸ್ಥೆಯನ್ನು ಹೊಂದಿದಾಗಲೇ ಕೆಲವೊಮ್ಮೆ ದೇಹ ಬೆವರುವುದಿಲ್ಲ. ಆದ್ದರಿಂದ ಇವರ ಮಾತು ಸುಳ್ಳಾಯಿತಲ್ಲವೇ? ಹೀಗಿರುವಾಗ ಪತಂಜಲಿ ಮೊದಲಾದವರನ್ನು ಆಪ್ತರೆಂದು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಅವೈದಿಕವಾದ ಎಲ್ಲಾ ಸ್ಮೃತಿಗ್ರಂಥಗಳು ಅನಾಪ್ತೋಕ್ತವಾಗಿವೆ ಎಂಬುದು ಸೂತ್ರಕಾರರ ಅಭಿಪ್ರಾಯ.

ಆದ್ದರಿಂದ ಅವೈದಿಕ ಸ್ಮೃತಿಗಳು ಅಪ್ರಮಾಣವಾಗಿವೆ ಎಂದು ಸಿದ್ಧವಾಯಿತು. ಶ್ರುತಿಯಿಂದ ಪ್ರತಿಪಾದ್ಯವಾದ ವಿಷ್ಣುವಿನ ಜಗತ್ಕಾರಣತ್ವಕ್ಕೆ ಯಾವುದೇ ವಿರೋಧವಿಲ್ಲ ಎಂಬ ಪ್ರಮೇಯವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣ ಮುಗಿಯಿತು

ಸ್ಮೃತ್ಯಧಿಕರಣ
(೨-೧-೧)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆ ಮತ್ತು
ಸಾರದೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ द्वितीयाध्यायः ।।

### प्रथमः पादः

### स्मृत्यधिकरणम्

ಅಧ್ಯಾಯಸಂಗತಿ ಹಾಗೂ ಪಾದಭೇದ ವಿಚಾರ

**पूर्वेणोक्ते समन्वयेऽनेन विरोधः परिह्रियत इत्यध्याययोर्हेतुहेतुमद्भावलक्षणा सङ्गतिः ।**

ಹಿಂದಿನ ಅಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯ ಮಾಡುವ ಮೂಲಕ ಗುಣಪರಿಪೂರ್ಣತ್ವವನ್ನು ಸಮರ್ಥಿಸಲಾಯಿತು. ಪ್ರಕೃತ ಎರಡನೆಯ ಅಧ್ಯಾಯದಲ್ಲಿ ಸಮನ್ವಯ ವಿಷಯದಲ್ಲಿ ಬರುವಂತಹ ವಿರೋಧಗಳನ್ನು ಪರಿಹರಿಸಲಾಗಿದೆ. ಹೀಗೆ ಪ್ರಥಮಾಧ್ಯಾಯಕ್ಕೂ, ದ್ವಿತೀಯಾಧ್ಯಾಯಕ್ಕೂ 'ಹೇತುಹೇತುಮದ್ಭಾವ' ಎಂಬ ಸಂಗತಿಯನ್ನು ತಿಳಿಯಬೇಕು.

**पूर्वो ह्येतन्निरसनीयविरोधशङ्काविषयभूतसमन्वयोपस्थापकतयाऽस्य हेतुः ।**

ಒಟ್ಟು ಎರಡು ಬಗೆಯಲ್ಲಿ ಹೇತುಹೇತುಮದ್ಭಾವ ಸಂಗತಿಯನ್ನು ತಿಳಿಯಬಹುದು.

೧. ಈ ಅಧ್ಯಾಯದಲ್ಲಿ ಯಾವ ವಿರೋಧಾಶಂಕೆಯನ್ನು ಪರಿಹರಿಸುತ್ತಿದ್ದಾರೋ, ಅಂತಹ ವಿರೋಧಶಂಕೆಗೆ ವಿಷಯವನ್ನು ಸಮನ್ವಯವು ಉಪಸ್ಥಾಪನೆ ಮಾಡುತ್ತಿದೆ. ವಿಷಯದ ಉತ್ಥಾಪನದ ಮೂಲಕ ಅವಿರೋಧಾಧ್ಯಾಯಕ್ಕೆ ಸಮನ್ವಯಾಧ್ಯಾಯವು ಹೇತುವಾಗಿದೆ.

**अयं वा विरोधनिरासेन समन्वयस्थैर्यसाधकत्वात् तस्य हेतुः ।**

೨. ಅಥವಾ ಎರಡನೆಯ ಅವಿರೋಧಾಧ್ಯಾಯದಲ್ಲಿ ಸಮನ್ವಯವಿಷಯದಲ್ಲಿರುವ ಎಲ್ಲಾ ವಿರೋಧಗಳನ್ನು ನಿರಾಕರಣೆ ಮಾಡಿದ ಮೇಲೆ ಪ್ರಥಮಾಧ್ಯಾಯದಲ್ಲಿ ಮಾಡಿದ ಸಮನ್ವಯವು ಸ್ಥಾಪಿತವಾಗುತ್ತದೆ. ಆದ್ದರಿಂದ ಸಮನ್ವಯದ ಸ್ಥೈರ್ಯಕ್ಕೆ ವಿರೋಧ ನಿರಾಸವು ಹೇತುವಾಗಿರುವುದರಿಂದ ಪ್ರಥಮಾಧ್ಯಾಯಕ್ಕೆ ಎರಡನೆಯ ಅಧ್ಯಾಯವೇ ಕಾರಣವಾಗುತ್ತದೆ.

**तथा च समन्वयाक्षेपसमाधानार्थत्वादस्य तदनन्तरता युक्ता ॥**

ಆದ್ದರಿಂದ ಸಮನ್ವಯ ವಿಷಯದಲ್ಲಿ ಎದುರಾಗುವ ಆಕ್ಷೇಪಗಳಿಗೆ ಸಮಾಧಾನ ನೀಡಲು ಈ ಅಧ್ಯಾಯ ಹೊರಟಿರುವುದರಿಂದ ಸಮನ್ವಯಾಧ್ಯಾಯದ ಆನಂತರ್ಯವು ಇದಕ್ಕೆ ಸಮಂಜಸ-ವಾಗುತ್ತದೆ. ಇಷ್ಟು ಅಧ್ಯಾಯಸಂಗತಿ.

**युक्तिभिः समयैः शुद्धवेदैर्युक्त्युपबृंहितैः ।**
**वेदैश्चाप्यविरोधोऽत्र क्रमात् पादेषु कीर्त्यते ॥१॥**

ಯುಕ್ತಿಭಿಃ ಸಮಯೈಃ ಶುದ್ಧವೇದೈರ್ಯುಕ್ತ್ಯುಪಬೃಂಹಿತೈಃ ।
ವೇದೈಶ್ಚಾಪ್ಯವಿರೋಧೋಽತ್ರ ಕ್ರಮಾತ್ ಪಾದೇಷು ಕೀರ್ತ್ಯತೇ ॥೧॥

೧. ಯುಕ್ತಿಗಳ ವಿರೋಧಪರಿಹಾರ, ೨. ಸಮಯಗಳ ವಿರೋಧಪರಿಹಾರ, ೩. ಕೇವಲ ಶ್ರುತಿಗಳ ವಿರೋಧಪರಿಹಾರ, ೪. ಯುಕ್ತಿಸಹಿತವಾದ ಶ್ರುತಿಗಳ ವಿರೋಧಪರಿಹಾರ. ಈ ನಾಲ್ಕು ಬಗೆಯ ವಿರೋಧ ಪರಿಹಾರವನ್ನು ಕ್ರಮವಾಗಿ ನಾಲ್ಕು ಪಾದಗಳಲ್ಲಿ ಸೂತ್ರಕಾರರು ಮಾಡುತ್ತಿದ್ದಾರೆ.

**अत्राद्यपादे युक्त्यविरोधः ।**

ಎರಡನೆಯ ಅಧ್ಯಾಯದಲ್ಲಿ ಇರುವ ನಾಲ್ಕು ಪಾದಗಳ ಕ್ರಮವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಮೊದಲನೆಯ ಪಾದದಲ್ಲಿ ಸಕಲ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾರೆ. ಆದ್ದರಿಂದ ಇದು 'ಯುಕ್ತಿಪಾದ'.

**द्वितीयेऽलौकिकार्थगोचरबहुजनपरिगृहीतवाक्यसन्दर्भरूपसमयाविरोधः ।**

ಎರಡನೆಯ ಪಾದದಲ್ಲಿ ಎಲ್ಲಾ ಬಗೆಯ ಸಮಯಗಳ ವಿರೋಧವನ್ನು ಪರಿಹರಿಸಿದ್ದಾರೆ. ಸಮಯಗಳೆಂದರೆ ಬಹುಜನರಿಂದ ಕೂಡಿರುವ ಒಂದೊಂದು ಪಂಗಡಗಳು ತಮ್ಮದೇ ಆದ ಕೆಲವು ವಾಕ್ಯಸಂದರ್ಭಗಳಿಂದ ತಮ್ಮ ತಮ್ಮ ಮತಗಳನ್ನು ಸೃಷ್ಟಿಸಿರುತ್ತಾರೆ. ಆ ವಾಕ್ಯಸಂದರ್ಭವು ಲೌಕಿಕವಾದ ಅರ್ಥವನ್ನು ಸ್ವೀಕರಿಸಬಾರದು. ಅಲೌಕಿಕವಾದ ಅರ್ಥದ ಬಗ್ಗೆ ಹೊರಟಿರಬೇಕು. ಇದನ್ನೇ 'ಅಲೌಕಿಕಾರ್ಥಗೋಚರಬಹುಜನಪರಿಗೃಹೀತವಾಕ್ಯಸಂದರ್ಭಃ ಸಮಯಃ' ಎನ್ನುತ್ತಾರೆ. ಎರಡನೆಯ ಪಾದವನ್ನು 'ಸಮಯಪಾದ' ಎನ್ನುತ್ತಾರೆ.

**तृतीये केवलश्रुत्यविरोधः ।**

ಮೂರನೆಯ ಪಾದದಲ್ಲಿ ಯುಕ್ತಿಗಳ ಸಹಾಯವಿಲ್ಲದ ಕೇವಲ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಾರೆ. ಇದು 'ಶ್ರುತಿಪಾದ'

**चतुर्थे सयुक्तिकश्रुत्यविरोधः ।**

ನಾಲ್ಕನೆಯ ಪಾದದಲ್ಲಿ ಯುಕ್ತಿಗಳಿಂದ ಬಲಿಷ್ಠವಾದ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಾರೆ. ಇದು ಸಯುಕ್ತಿಕಶ್ರುತಿಪಾದ.

**इति विरोधिनां युक्त्यादीनां चातुर्विध्यात् तन्निरूप्याविरोधोऽपि चतुर्विध इति तत्प्रतिपादकपादभेदः ।**

ಹೀಗೆ ವಿರೋಧಿಗಳಾದ ಯುಕ್ತಿ ಮೊದಲಾದವು ನಾಲ್ಕು ಬಗೆಯಾದ್ದರಿಂದ ವಿರೋಧಿಗಳಿಂದ ನಿರೂಪ್ಯವಾದ ಅವಿರೋಧವೂ ಕೂಡ ನಾಲ್ಕು ಬಗೆಯಾಗಿವೆ. ಅಂತಹ ಅವಿರೋಧವನ್ನು ಪ್ರತಿಪಾದನೆ ಮಾಡುವ ಪಾದಗಳಲ್ಲಿ ಚಾತುರ್ವಿಧ್ಯವು ಯುಕ್ತವಾಗುತ್ತದೆ. ಅಭಿಪ್ರಾಯ ಹೀಗಿದೆ - ವಿರೋಧಿಗಳಿಂದ ವಿರೋಧಗಳು ಜ್ಞಾಪಿತವಾಗುತ್ತವೆ. ಆ ವಿರೋಧವೇ ಪ್ರತಿಯೋಗಿಯಾಗಿರುವಂತಹ ಅಭಾವಗಳು ನಾಲ್ಕುವಿಧವಾಗಿವೆ. ನಾಲ್ಕು ಬಗೆಯ ವಿರೋಧಾಭಾವಗಳನ್ನು ಪರಿಹರಿಸುವ ಪಾದಗಳೂ ಕೂಡ ನಾಲ್ಕು ಬಗೆಯಾಗಿವೆ ಎಂದು.

**यद्यपि तृतीयेऽपि क्वचित् विरोधिन्यः श्रुतयः सयुक्तिकाः ।**

ವಸ್ತುತಸ್ತು ಮೂರನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಆಪಾತತಃ ವ್ಯತ್ಯಾಸ ಕಾಣಿಸುವುದಿಲ್ಲ. ಏಕೆಂದರೆ ಮೂರನೆಯ ಪಾದದಲ್ಲಿ ಶ್ರುತಿವಿರೋಧವನ್ನು ಪರಿಹರಿಸುವಾಗ ಉಲ್ಲೇಖಿಸುವ ಕೆಲವು ಶ್ರುತಿಗಳು ಯುಕ್ತಿಸಹಿತವೇ ಆಗಿರುತ್ತವೆ.

**तथापि चतुर्थे विरोधिन्यः श्रुतयः श्रुत्याद्युक्तयुक्तिसहिता इति भेदः ।**

ಆದರೂ ಕೂಡ ವ್ಯತ್ಯಾಸವಿದೆ - ನಾಲ್ಕನೆಯ ಪಾದದಲ್ಲಿ ಯಾವ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಾರೋ, ಆ ಎಲ್ಲಾ ಶ್ರುತಿಗಳು ಶ್ರುತಿಯಲ್ಲೇ ಹೇಳಲ್ಪಟ್ಟ ಯುಕ್ತಿಗಳಿಂದ ಕೂಡಿರುತ್ತವೆ. ಆದರೆ ಮೂರನೆಯ ಪಾದದಲ್ಲಿ ಉಲ್ಲೇಖಿಸಿದ ಶ್ರುತಿಗಳಿಗೆ ಶ್ರುತಿಯಲ್ಲಿಯೇ ಹೇಳಿದ ಯುಕ್ತಿಗಳ ಬೆಂಬಲವಿರುವುದಿಲ್ಲ ಹೊರತಾಗಿ ಕೇವಲ ಯುಕ್ತಿಗಳ ಸಹಕಾರವಿರುತ್ತದೆ. ಕೇವಲ ಯುಕ್ತಿಗಳಿಗಿಂತ ಶ್ರುತಿಯ ಬೆಂಬವಿರುವ ಯುಕ್ತಿಗಳು ಪ್ರಬಲ. ಹೀಗೆ ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿರುವ ವ್ಯತ್ಯಾಸವನ್ನು ತಿಳಿಯಬೇಕು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

आम्नायोदितकल्याणगुणं श्रीरमणं भजे ।
यं द्रष्टुं नेशतेऽपाङ्गवीक्षयापि कुबुद्धयः ॥१॥

ಆಮ್ನಾಯೋದಿತಕಲ್ಯಾಣಗುಣಂ ಶ್ರೀರಮಣಂ ಭಜೇ।
ಯಂ ದ್ರಷ್ಟುಂ ನೇಶತೇऽಪಾಂಗವೀಕ್ಷಯಾಪಿ ಕುಬುದ್ಧಯಃ॥೧॥

ಸಮಗ್ರ ವೇದಶಾಸ್ತ್ರದಿಂದ ಪ್ರತಿಪಾದಿಸಲ್ಪಟ್ಟ ಎಲ್ಲಾ ಬಗೆಯ ಕಲ್ಯಾಣಗುಣಗಳ ಸ್ವರೂಪನಾದ ಲಕ್ಷ್ಮೀರಮಣನನ್ನು ಅನನ್ಯವಾಗಿ ಭಜಿಸುತ್ತೇನೆ. ಇವನನ್ನು ದುಷ್ಟಬುದ್ಧಿಗಳು ಕಣ್ಣಿನ ಕುಡಿಯಿಂದಲೂ ನೋಡಲು ಅಯೋಗ್ಯರು.

**प्रकाशः** – ''पूर्वाध्यायसङ्गतत्वेनैतदध्यायार्थं दर्शयति'' इत्यादिटीकार्थं सङ्गृह्णाह – **पूर्वेणेति** ।।

ಹಿಂದಿನ ಅಧ್ಯಾಯದಿಂದ ಈ ಅಧ್ಯಾಯಕ್ಕೆ ಸಂಗತಿಯನ್ನು ಹೇಳುವ 'ಪೂರ್ವಾಧ್ಯಾಯಸಂಗತತ್ವೇನೈ-ತದಧ್ಯಾಯಾರ್ಥಂ ದರ್ಶಯತಿ' ಪ್ರಥಮಾಧ್ಯಾಯದಿಂದ ಸಂಗತವಾದ ಎರಡನೆಯ ಅಧ್ಯಾಯದ ಅರ್ಥವನ್ನು ತೋರಿಸುತ್ತಿದ್ದಾರೆ.' ಇತ್ಯಾದಿ ಟೀಕಾ ಮಾತಿನ ಅರ್ಥವನ್ನು ಸಂಗ್ರಹಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪೂರ್ವೇಣ' ಇತ್ಯಾದಿಯಾಗಿ.

**प्रकाशः** – टीकायां ''उक्तेऽर्थे'' इति भाष्यानुरोधात् समन्वयलब्धार्थपर्यन्तोपन्यासेऽपि ''उक्तस्समन्वयस्साक्षादविरोधोऽत्र साध्यते'' इत्यनुभाष्योक्तदिशा समन्वय इत्येवोक्तम् ।

ಗ್ರಂಥದ ಪ್ರಾರಂಭದಲ್ಲಿ 'ಪೂರ್ವೇಣ ಉಕ್ತಿಃ ಸಮನ್ವಯೇ ಅನೇನ ವಿರೋಧಃ ಪರಿಹ್ರಿಯತೇ' 'ಹಿಂದಿನ ಅಧ್ಯಾಯದಲ್ಲಿ ಮಾಡಿದ ಸಮನ್ವಯದ ಮೇಲೆ ಬರುವ ವಿರೋಧವನ್ನು ಪರಿಹರಿಸಲಾಗುತ್ತಿದೆ' ಎಂದಿದ್ದಾರೆ. ಆದರೆ ಟೀಕಾದಲ್ಲಿ 'ಉಕ್ತೇऽರ್ಥೇ' ಎಂಬುದಾಗಿ ಭಾಷ್ಯಕ್ಕೆ ಅನುಸಾರಿಯಾಗಿ ಸಮನ್ವಯಶಬ್ದದಿಂದ ದೊರೆಯುವ ಗುಣಪರಿಪೂರ್ಣತ್ವ, ಜಗಜ್ಜನ್ಮಾದಿಕರ್ತೃತ್ವ ಎಂಬ ಅರ್ಥದ ಮೇಲೆ ಬರುವಂತಹ ವಿರೋಧವನ್ನು ಪರಿಹರಿಸಲು ಎರಡನೆಯ ಅಧ್ಯಾಯವು ಹೊರಟಿದೆ ಎಂದು ಹೇಳಿರುತ್ತಾರೆ. ಆದ್ದರಿಂದ

ಗ್ರಂಥದಲ್ಲಿ ಹೇಳಿದಂತೆ ಸಮನ್ವಯ ವಿಷಯದಲ್ಲಿ ಬರುವ ವಿರೋಧ ಪರಿಹಾರವನ್ನು ವಿವಕ್ಷಿಸಬೇಕೋ, ಅಥವಾ ಸಮನ್ವಯದಿಂದ ಲಾಭವಾಗುವ ಗುಣಪರಿಪೂರ್ಣತ್ವ ಮತ್ತು ಜಗಜ್ಜನ್ಮಾದಿಕರ್ತೃತ್ವ ಎಂಬುದರ ಬಗ್ಗೆ ವಿರೋಧವನ್ನು ಪರಿಹರಿಸಲು ಇದು ಹೊರಟಿದೆಯೋ, ಎಂಬ ಗೊಂದಲವುಂಟಾಗುತ್ತದೆ. ಆದರೆ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು 'ಉಕ್ತಃ ಸಮನ್ವಯಃ ಸಾಕ್ಷಾದವಿರೋಧೋಽತ್ರ ಸಾಧ್ಯತೇ' ಎಂದು ಹೇಳಿರುತ್ತಾರೆ. ಹಿಂದಿನ ಅಧ್ಯಾಯದಲ್ಲಿ ಯಾವ ಸಮನ್ವಯವು ಸಿದ್ಧವಾಯಿತೋ, ಅದರ ಮೇಲೆ ಬರುವ ವಿರೋಧವನ್ನು ಪರಿಹರಿಸಲು ಎರಡನೆಯ ಅಧ್ಯಾಯ ಹೊರಟಿದೆಯೆಂದು ಸ್ಪಷ್ಟವಾಗಿ ಹೇಳಿರುತ್ತಾರೆ. ಅನುವ್ಯಾಖ್ಯಾನದ ಈ ಮಾತನ್ನು ಆಧರಿಸಿ ಗ್ರಂಥಕಾರರು 'ಸಮನ್ವಯೇ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಟೀಕೆಯಲ್ಲಿ ಗುಣಪರಿಪೂರ್ಣತ್ವಾದಿ ವಿಷಯದಲ್ಲಿ ಬರುವ ವಿರೋಧವನ್ನು ಪರಿಹರಿಸಲು ಹೊರಟಿದೆಯೆಂಬ ಸಂಗತಿಯನ್ನು ಹೇಳಿರುವುದು ಒಂದು ಕ್ರಮ. ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸಮನ್ವಯವಿಷಯದಲ್ಲಿ ಬರುವ ವಿರೋಧಪರಿಹಾರಕ್ಕಾಗಿಯೂ ಇದು ಹೊರಟಿದೆ ಎಂಬುದು ಮತ್ತೊಂದು ಕ್ರಮ. ಪ್ರಕೃತ ಗ್ರಂಥಕಾರರು ಅನುವ್ಯಾಖ್ಯಾನವನ್ನು ಆಧರಿಸಿ ಸಂಗತಿಯನ್ನು ಹೇಳಿರುತ್ತಾರೆ.

**प्रकाशः – 'हरिरेव जगज्जन्मादिकर्ता' इत्याद्यर्थे शक्तितात्पर्यावधारणं समन्वयः प्रागुपक्रमादिन्यायैरुपपादितः ।**

'ಸಮನ್ವಯ' ಎಂದರೆ ಗುಣಪರಿಪೂರ್ಣತ್ವ, ಜಗಜ್ಜನ್ಮಾದಿಕರ್ತೃತ್ವ ಮೊದಲಾದ ವಿಷಯದಲ್ಲಿ ಶಕ್ತಿ ಹಾಗೂ ತಾತ್ಪರ್ಯಗಳನ್ನು ನಿಶ್ಚಯಿಸುವುದು. ಉಪಕ್ರಮ, ಉಪಸಂಹಾರ ಎಂಬ ಷಡ್ವಿಧ ತಾತ್ಪರ್ಯಲಿಂಗಗಳಿಂದ ವೇದದಲ್ಲಿರುವ ಸಮಗ್ರ ಶಬ್ದಗಳ ಶಕ್ತಿತಾತ್ಪರ್ಯವನ್ನು ನಿಶ್ಚಯಿಸುವ ಮೂಲಕ ಪರಮಾತ್ಮನು ಜಗಜ್ಜನ್ಮಾದಿಕರ್ತೃವಾಗಿದ್ದಾನೆ ಎಂದು ಸಮರ್ಥಿಸುವುದೇ 'ಸಮನ್ವಯ' ಎನಿಸುತ್ತದೆ. ಇದನ್ನು ಹಿಂದಿನ ಅಧ್ಯಾಯದಲ್ಲಿ ಸಾಧಿಸಿದ್ದಾಯಿತು.

**प्रकाशः – तस्मिन् विरोधो निरस्यत इत्यर्थः । तथा च विरोधपरिहाररूपैकार्थ्यादेकवाक्यत्वं स्वस्मिन्नस्योक्तं भवति । यथोक्तं ''अर्थैकत्वादेकं वाक्यम्'' इति ।**

ಇಂತಹ ಸಮನ್ವಯ ವಿಷಯದಲ್ಲಿ ಬರುವಂತಹ ವಿರೋಧವನ್ನು ಈ ಅಧ್ಯಾಯದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ಸಮಗ್ರ ಅಧ್ಯಾಯವು 'ವಿರೋಧಪರಿಹಾರ' ಎಂಬ ಒಂದೇ ಅರ್ಥವನ್ನು ಸಾಧಿಸಲು ಹೊರಟಿರುವುದರಿಂದ, ಏಕವಾಕ್ಯತ್ವವನ್ನು ಹೊಂದಿರುತ್ತದೆ. ಇದನ್ನೇ 'ಅರ್ಥೈಕತ್ವಾದೇಕಂ ವಾಕ್ಯಂ' 'ಅರ್ಥದಲ್ಲಿ ಐಕ್ಯವಿರುವುದರಿಂದ ವಾಕ್ಯದಲ್ಲಿಯೂ ಏಕತೆ ಬರುತ್ತದೆ' ಎಂದು ಹೇಳಿರುತ್ತಾರೆ.

**प्रकाशः – तां सङ्गतिं सुधोक्तरीत्या द्वेधा व्यनक्ति – पूर्वो हीति ।। एतेन सङ्गतिपरटीकापि द्वेधा व्याख्याता ज्ञेया ।**

ಪ್ರಥಮಾಧ್ಯಾಯದಿಂದ ಎರಡನೆಯ ಅಧ್ಯಾಯಕ್ಕಿರುವ ಸಂಗತಿಯನ್ನು ನ್ಯಾಯಸುಧೆಯಲಿ ಹೇಳಿದಂತೆ ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪೂರ್ವೋ ಹಿ' ಇತ್ಯಾದಿ ಗ್ರಂಥದಿಂದ. ಇದರಿಂದ ಸಂಗತಿಯನ್ನು ನಿರೂಪಿಸುವ ಟೀಕೆಯನ್ನೂ ಕೂಡ ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡಿದಂತಾಯಿತು.

**ಪ್ರಕಾಶಃ** – एतेनैव ''न ह्यनुपन्यस्ते समन्वये विरोधस्स्फुरति'' इत्यादिना सन्न्यायरत्नावळ्यां पूर्वस्य हेतुत्वमुक्तम् । तत्वप्रदीपे च ''यावन्न विरोधपरिहारस्तावन्न पुरुषार्थपर्यवसायित्वं शास्त्रस्य'' इत्यादिनाऽस्य हेतुत्वमुक्तमिति तयोर्विरोध इति निरस्तम् । सुधारीत्योभयोरनुमतत्वादिति ।

ಪ್ರಶ್ನೆ - ಸನ್ನ್ಯಾಯರತ್ನಾವಳಿಯಲ್ಲಿ 'ನ ಹ್ಯನುಪನ್ಯಸ್ತೇ ಸಮನ್ವಯೇ ವಿರೋಧಃ ಸ್ಫುರತಿ' ಸಮನ್ವಯವನ್ನು ಉಪಸ್ಥಾಪನೆ ಮಾಡದೇ ಇದ್ದರೆ ವಿರೋಧದ ಸ್ಫುರಣೆಯೇ ಆಗುವುದಿಲ್ಲ ಎಂಬುದಾಗಿ ಸಮನ್ವಯವೇ ಅವಿರೋಧಕ್ಕೆ ಹೇತುವೆಂದು ಹೇಳಿರುತ್ತಾರೆ. ಆದರೆ ತತ್ವಪ್ರದೀಪದಲ್ಲಿ 'ಯಾವನ್ನ ವಿರೋಧಪರಿಹಾರಃ ತಾವನ್ನ ಪುರುಷಾರ್ಥಪರ್ಯವಸಾಯಿತ್ವಂ ಶಾಸ್ತ್ರಸ್ಯ' ಎಷ್ಟೇ ಸಮನ್ವಯ ಮಾಡಿದರೂ ಎಲ್ಲಿಯ ತನಕ ವಿರೋಧವು ಪರಿಹಾರವಾಗುವುದಿಲ್ಲವೋ, ಅಲ್ಲಿಯ ತನಕ ಶಾಸ್ತ್ರವು ಪುರುಷಾರ್ಥಪ್ರದವೆಂದು ಸಿದ್ಧವಾಗುವುದಿಲ್ಲ. ಆದ್ದರಿಂದ ಎರಡನೆಯ ಅಧ್ಯಾಯದ ಅವಿರೋಧವೇ ಸಮನ್ವಯಕ್ಕೆ ಹೇತುವಾಗಿದೆ ಎಂದು ಹೇಳಿರುತ್ತಾರೆ. ಆದ್ದರಿಂದ ಸನ್ನ್ಯಾಯರತ್ನಾವಳಿಗೂ, ತತ್ವಪ್ರದೀಪಕ್ಕೂ ವಿರೋಧವು ಬರುತ್ತದಲ್ಲವೇ?

ಉತ್ತರ - ಈಗಾಗಲೇ ಈ ಪ್ರಶ್ನೆಗೂ ಕೂಡ ಉತ್ತರಿಸಿದಂತಾಯಿತು. ನ್ಯಾಯಸುಧೆಯಲ್ಲಿ ಹೇಳಿದಂತೆ ಸಮನ್ವಯವೂ ಕೂಡ ಹೇತುವಾಗಬಹುದು. ಮತ್ತು ಅವಿರೋಧವೂ ಕೂಡ ಹೇತುವಾಗಬಹುದು. ವಿವಕ್ಷಾಭೇದದಿಂದ ಎರಡೂ ಕೂಡ ತಪ್ಪಾಗುವುದಿಲ್ಲವೆಂದು ಗ್ರಂಥಕಾರರು ಸಮರ್ಥಿಸಿದ್ದಾರೆ.

**ಪ್ರಕಾಶಃ** – अविरोधरूपैकार्थ्येनास्याध्यायस्यैकवाक्यत्वे पादभेदः किं निमित्तः? इत्यतोऽवान्तरप्रमेयभेदादिति भावेन ''उक्तेऽर्थे विरोधश्चतुर्विधस्स्फुरति'' इत्यादिटीकार्थं सङ्गृह्णाह – युक्तिभिरिति ।।

ಸಮಗ್ರ ಅಧ್ಯಾಯವು ಅವಿರೋಧ ಎಂಬ ಒಂದೇ ಅರ್ಥವನ್ನು ಪ್ರತಿಪಾದನೆ ಮಾಡಲು ಹೊರಟಿದೆ ಎಂಬುದಾಗಿ ಏಕವಾಕ್ಯತ್ವವನ್ನು ಹೇಳುವುದಾದರೆ ಪಾದಭೇದಕ್ಕೆ ಯಾವ ನಿಮಿತ್ತವಿರುತ್ತದೆ ? ಎಂಬ ಪ್ರಶ್ನೆ ಬರುತ್ತದೆ. ಆದರೆ ಅವಿರೋಧ ಎಂಬ ಒಂದೇ ಅರ್ಥದಲ್ಲಿಯೂ ಅವಾಂತರ ಪ್ರಮೇಯಭೇದವಿದೆ. ಅದನ್ನು ವಿವಕ್ಷಿಸಿ, ನಾಲ್ಕು ಪಾದಗಳು ಹೊರಟಿವೆ. ಇದನ್ನು ಟೀಕೆಯಲ್ಲಿ 'ಉಕ್ತೇऽರ್ಥೇ ವಿರೋಧಶ್ಚತುರ್ವಿಧಃ ಸ್ಫುರತಿ' ಎಂದು ಹೇಳಿದ್ದಾರೆ. ಅದನ್ನು ಗ್ರಂಥಕಾರರು 'ಯುಕ್ತಿಭಿಃ' ಎಂಬ ವಾಕ್ಯದಿಂದ ವ್ಯಾಖ್ಯಾನಿಸಿದ್ದಾರೆ.

**ಪ್ರಕಾಶಃ** – तृतीयान्तानामविरोध इत्यत्रोपसर्जनीभूतविरोधपदेनान्वय इति भावेन श्लोकं व्याचष्टे – अत्राद्यपाद इति ।।

ಶ್ಲೋಕದಲ್ಲಿ 'ಅವಿರೋಧಃ' ಎಂಬ ಪದವು ಶ್ರುತವಾಗಿದೆ. 'ನ ವಿರೋಧಃ ಅವಿರೋಧಃ' ಎಂದು ವಿಗ್ರಹ. ಅವಿರೋಧ ಪದದಲ್ಲಿ ಉಪಸರ್ಜನೀಭೂತವಾದ ವಿರೋಧ ಎಂಬ ಪದದಲ್ಲಿ 'ಯುಕ್ತಿಭಿಃ' ಇತ್ಯಾದಿ ತೃತೀಯಾಂತವಾದ ಪದಗಳು ಅನ್ವಯವನ್ನು ಹೊಂದುತ್ತವೆ. ಅಂದರೆ 'ಯುಕ್ತಿಭಿಃ ಯಃ ವಿರೋಧಃ ತದಭಾವಃ ಅತ್ರ ಸಾಧ್ಯತೇ' ಎಂದರ್ಥ. ಇದರಂತೆ 'ಸಮಯೈಃ ಯಃ ವಿರೋಧಃ ತದಭಾವಃ ಅತ್ರ ಸಾಧ್ಯತೇ' ಇತ್ಯಾದಿಯಾಗಿ ಅನ್ವಯಕ್ರಮವನ್ನು ತಿಳಿಯಬೇಕು. ಈ ಅಭಿಪ್ರಾಯದಿಂದ ಶ್ಲೋಕವನ್ನು ಸ್ವತಃ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ - 'ಅತ್ರಾದ್ಯಪಾದೇ' ಇತ್ಯಾದಿಯಾಗಿ.

**प्रकाशः – तन्निरूप्येति ।। तन्निरूप्यविरोधप्रतियोगिक इत्यर्थः ।**

ಗ್ರಂಥವನ್ನು ನೋಡಿದಾಗ ವಿರೋಧಿಗಳಿಂದಲೇ ಅವಿರೋಧವು ನಿರೂಪ್ಯವಾಗಿದೆ ಎಂದು ಭಾಸವಾಗುತ್ತದೆ. ಆದರೆ ವಿರೋಧಿಯಿಂದ ನಿರೂಪ್ಯವಾದದ್ದು ವಿರೋಧ. ಆ ವಿರೋಧವೇ ಪ್ರತಿಯೋಗಿಯುಳ್ಳದ್ದು ವಿರೋಧಾಭಾವ ಎಂದರ್ಥ.

**प्रकाशः – एतेन कथमभावे चातुर्विध्यमिति निरस्तम् । उक्तं च सुधायां ''चतुर्विधा हि विरोधिन्यो युक्त्यादयः। तदुपधानात् विरोधोऽपि चतुर्विधोऽभिधीयते। ततस्तत्प्रतियोगिकोऽभावोऽपि चतुर्विधः'' इति ।**

ಹೀಗೆ ಹೇಳಿದ್ದರಿಂದ ಅಭಾವದಲ್ಲಿ ಚಾತುರ್ವಿಧ್ಯವು ಹೇಗೆ ಬರುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸಿದಂತಾಯಿತು. ಅಭಾವಕ್ಕೆ ಯಾವುದು ಪ್ರತಿಯೋಗಿಗಳೋ, ಅವುಗಳು ನಾಕು ಬಗೆಯಾದ್ದರಿಂದ ಅಭಾವದಲ್ಲಿಯೂ ಚಾತುರ್ವಿಧ್ಯವು ಬರುತ್ತದೆ. ಇದನ್ನೇ ನ್ಯಾಯಸುಧೆಯಲ್ಲಿ 'ಚತುರ್ವಿಧಾ ಹಿ ವಿರೋಧಿನ್ಯೋ ಯುಕ್ತ್ಯಾದಯಃ । ತದುಪಾಧಾನಾದ್ವಿರೋಧೋಽಪಿ ಚತುರ್ವಿಧೋಽಭಿಧೀಯತೇ । ತತಃ ತತ್ಪ್ರತಿಯೋಗಿಕೋಽಭಾವೋಽಪಿ ಚತುರ್ವಿಧಃ' ಯುಕ್ತಿ, ಸಮಯ ಮೊದಲಾದ ವಿರೋಧಿಗಳು ನಾಕುಬಗೆಯಾಗಿವೆ. ಇಂತಹ ವಿರೋಧಿಗಳಿಂದ ನಿರೂಪ್ಯವಾದ ವಿರೋಧಗಳೂ ಕೂಡ ನಾಕು ಬಗೆಯಾಗಿವೆ. ಆದ್ದರಿಂದಲೇ ವಿರೋಧ ಪ್ರತಿಯೋಗಿಕವಾದ ಅಭಾವಗಳೂ ಕೂಡ ನಾಕು ಬಗೆಯಾಗಿವೆ ಎಂದು.

**प्रकाशः – अन्त्योपान्त्ययोर्भेदमाक्षिप्य तत्रत्यटीकोक्तमेव समाधिमाह – यद्यपीति ।।**

ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ವೈಲಕ್ಷಣ್ಯವೇ ಕಾಣಿಸುತ್ತಿಲ್ಲವಲ್ಲ ಎಂಬ ಪ್ರಶ್ನೆಗೆ ಆಯಾ ಪಾದಗಳ ಟೀಕಾ ವಾಕ್ಯದಿಂದಲೇ ಸಮಾಧಾನವನ್ನು ಹೇಳಲು 'ಯದ್ಯಪಿ' ಇತ್ಯಾದಿ ಗ್ರಂಥವು ಹೊರಟಿದೆ.




ವೇದದಲ್ಲಿರುವ ಸಮಗ್ರ ಶಬ್ದಗಳು ಮಹಾವಿಷ್ಣುವಿನಲ್ಲಿಯೇ ಸಮನ್ವಯವಾಗುತ್ತವೆ. ಆದ್ದರಿಂದ ಅವನೇ ಜಗಜ್ಜನ್ಮಾದಿಕರ್ತೃವಾಗಿದ್ದಾನೆ. ಆದ್ದರಿಂದಲೇ ಸಕಲಗುಣಪರಿಪೂರ್ಣನಾಗಿದ್ದಾನೆ ಎಂಬುದಾಗಿ ಪ್ರಥಮಾಧ್ಯಾಯದಲ್ಲಿ ಸಾಧಿಸಲಾಯಿತು. ಈ ಸಮರ್ಥನೆಯ ಮೇಲೆ ಅನೇಕ ಬಗೆಯ ವಿರೋಧಗಳು ಎದುರಾಗುತ್ತವೆ. ಆ ಎಲ್ಲಾ ಬಗೆಯ ವಿರೋಧಗಳನ್ನು ಪರಿಹರಿಸುವುದಕ್ಕಾಗಿಯೇ ಎರಡನೆಯ ಅಧ್ಯಾಯವು ಪ್ರಾರಂಭವಾಗುತ್ತಿದೆ. ಆದ್ದರಿಂದಲೇ ಇದನ್ನು 'ಅವಿರೋಧಾಧ್ಯಾಯ' ಎಂದು ಕರೆಯುತ್ತಾರೆ. ಎರಡನೆಯ ಅಧ್ಯಾಯಕ್ಕೆ ಪ್ರಥಮಾಧ್ಯಾಯದಿಂದ ಎರಡು ಬಗೆಯ ಸಂಗತಿಗಳನ್ನು ತಿಳಿಯಬಹುದು. ಈ ಅಧ್ಯಾಯದಲ್ಲಿ ವಿರೋಧದ ಪರಿಹಾರವನ್ನು ಮಾಡುತ್ತಿದ್ದಾರೆ. ಯಾವುದರ ವಿರೋಧ ? ಎಂಬ ಪ್ರಶ್ನೆಯು ಬಂದರೆ ಸಮನ್ವಯ ವಿಷಯದಲ್ಲಿ ಬರುವಂತಹ ವಿರೋಧದ ಪರಿಹಾರವೆಂದು ಉತ್ತರಿಸಬೇಕು. ಆದ್ದರಿಂದ ಮೊದಲನೆಯ ಅಧ್ಯಾಯದಲ್ಲಿ ಮಾಡಿದ ಸಮನ್ವಯವೇ ಹೇತುವಾಗುತ್ತದೆ. ಈ ಅಧ್ಯಾಯದಲ್ಲಿ ಸಮರ್ಥಿಸುತ್ತಿರುವ ಅವಿರೋಧವು ಹೇತುಮತ್ ಆಗುತ್ತದೆ. ಆದ್ದರಿಂದ ಹೇತುಹೇತುಮದ್ಭಾವ ಸಂಗತಿಯನ್ನು ತಿಳಿಯಬಹುದು.

ಅಥವಾ ಎಲ್ಲಾ ಬಗೆಯ ವಿರೋಧವನ್ನು ಪರಿಹರಿಸಿದ ಮೇಲೆ ಪ್ರಥಮಾಧ್ಯಾಯದ ಸಮನ್ವಯವು ಸ್ಥಿರವಾಗುತ್ತದೆ. ಆವಾಗ ಅವಿರೋಧವೇ ಹೇತುವಾಗುತ್ತದೆ. ಸಮನ್ವಯವು ಹೇತುಮತ್ತಾಗುತ್ತದೆ. ಹೀಗೂ ಹೇತುಹೇತುಮದ್ಭಾವ ಸಂಗತಿಯನ್ನು ತಿಳಿಯಬಹುದು. ಏನೇ ಆಗಲಿ. ಸಮನ್ವಯ ವಿಷಯದಲ್ಲಿ ಮಾಡುತ್ತಿರುವ ಆಕ್ಷೇಪಕ್ಕೆ ಸಮಾಧಾನ ನೀಡಲು ಎರಡನೆಯ ಅಧ್ಯಾಯವು ಹೊರಟಿದೆ. ಆದ್ದರಿಂದ ಪ್ರಥಮಾಧ್ಯಾಯದ ಆನಂತರ್ಯವು ಇದಕ್ಕೆ ಯುಕ್ತವಾಗುತ್ತದೆ.

ಯುಕ್ತಿಭಿಃ ಸಮಯ್ಯೆಃ ಶುದ್ಧವೇದ್ಯೆರ್ಯುಕ್ತ್ಯುಪಬೃಂಹಿತೈಃ ।
ವೇದೈಶ್ಚಾಪ್ಯವಿರೋಧೋಽತ್ರ ಕ್ರಮಾತ್‌ಪಾದೇಷು ಕೀರ್ತ್ಯತೇ ॥೧॥

೧. ಯುಕ್ತಿಗಳ ವಿರೋಧಪರಿಹಾರ, ೨. ಸಮಯಗಳ ವಿರೋಧಪರಿಹಾರ, ೩. ಕೇವಲ ಶ್ರುತಿಗಳ ವಿರೋಧಪರಿಹಾರ, ೪. ಯುಕ್ತಿಸಹಿತವಾದ ಶ್ರುತಿಗಳ ವಿರೋಧಪರಿಹಾರ. ಈ ನಾಕು ಬಗೆಯ ವಿರೋಧ ಪರಿಹಾರವನ್ನು ಕ್ರಮವಾಗಿ ನಾಕು ಪಾದಗಳಲ್ಲಿ ಸೂತ್ರಕಾರರು ಮಾಡುತ್ತಿದ್ದಾರೆ.

ಮೂರನೆಯ ಪಾದದಲ್ಲಿ ಕೆಲವು ಶ್ರುತಿಗಳು ಸ್ವತಂತ್ರವಾದ ಯುಕ್ತಿಗಳಿಂದ ಕೂಡಿರುತ್ತದೆ. ನಾಲ್ಕನೆಯ ಪಾದವು ಶ್ರುತಿಗಳಲ್ಲಿಯೇ ಸೇರಿರುವ ಯುಕ್ತಿಗಳಿಂದ ಬಲಿಷ್ಠವಾಗಿರುತ್ತವೆ. ಕೇವಲ ಯುಕ್ತಿಗಳು ಶ್ರುತಿಯಲ್ಲಿ ಹೇಳಲ್ಪಟ್ಟ ಯುಕ್ತಿಗಳಿಗಿಂತ ದುರ್ಬಲವಾದ ಕಾರಣ ಮೂರು ಹಾಗೂ ನಾಕನೆಯ ಪಾದಗಳಲ್ಲಿ ಅವಾಂತರಭೇದವಿರುತ್ತದೆ.

## ಸ್ಮೃತ್ಯಧಿಕರಣ (೨-೧-೧)

## ಎರಡನೆಯ ಅಧ್ಯಾಯದ ನಾಕು ಪಾದಗಳಲ್ಲಿರುವ ತಾರತಮ್ಯಕ್ಕೆ ನಾಕು ಕಾರಣಗಳು

**तात्पर्यचन्द्रिका —**

**तत्क्रमस्तु-**

**पदात्यादिषु भग्नेषु गजाश्वादिप्रवृत्तिवत् ।**
**युक्त्यादिषु निरस्तेषु समयादिप्रवृत्तितः ॥१॥**

ಅನುವಾದ - ಪಾದಗಳ ಕ್ರಮ ಹೀಗಿದೆ -

ಪದಾತ್ಯಾದಿಷು ಭಂಗ್ನೇಷು ಗಜಾಶ್ವಾದಿಪ್ರವೃತ್ತಿವತ್ ।
ಯುಕ್ತ್ಯಾದಿಷು ನಿರಸ್ತೇಷು ಸಮಯಾದಿಪ್ರವೃತ್ತಿತಃ ॥೧॥

ಮಹಾಯುದ್ಧದಲ್ಲಿ ಮೊದಲು ಸೈನಿಕರು ಸತ್ತ ಮೇಲೆ ಆನೆ, ಕುದುರೆ ಮೊದಲಾದವುಗಳು ಪ್ರವೃತ್ತಿ ಮಾಡುತ್ತವೆ. ಕಡಿಮೆ ಶಕ್ತಿಯಿರುವವರು ಮೊದಲು ಯುದ್ಧ ಮಾಡಿ, ಹೆಚ್ಚಿನ ಶಕ್ತಿಯಿರುವವರು ಅನಂತರ ಯುದ್ಧಕ್ಕೆ ಬರುತ್ತಾರೆ. ಅದೇ ರೀತಿಯಲ್ಲಿ ದುರ್ಬಲವಾದ ಯುಕ್ತಿ ಮೊದಲಾದವುಗಳನ್ನು ಮೊದಲು ನಿರಾಕರಣೆ ಮಾಡಿದ ಮೇಲೆ ಹೆಚ್ಚು ಬಲಿಷ್ಠವಾದ ಸಮಯ, ಶ್ರುತಿ ಇವುಗಳ ವಿರೋಧವು ಪ್ರವೃತ್ತವಾಗುತ್ತವೆ.

**अनुमानमात्रस्य कामचारित्वेनाऽतिदुर्बलत्वात् समयानां च वेदवदकामचारित्वेऽप्यतिदार्ढ्येन बहुजनपरिगृहीतत्वेऽपि पौरुषेयतया शङ्कितदोषत्वेन दुर्बलत्वात् श्रुतिमात्रस्य च समयात् बलवत्त्वेऽपि सोपपत्तिकश्रुतिवत् प्रबलत्वाभावात् पदात्यादिभङ्गानन्तरमेवाश्वादिवदनुमानादिनिरासानन्तरमेव विरोधिसमयादेः प्रवृत्तेः पादक्रमः।**

ಕೇವಲ ಅನುಮಾನವು ಕಾಮಚಾರಿಯಾದ್ದರಿಂದ ಅತ್ಯಂತ ದುರ್ಬಲವಾಗಿದೆ. ಇದರ ವಿರೋಧವನ್ನು ಮೊದಲನೆಯ ಪಾದದಲ್ಲಿಯೇ ಪರಿಹರಿಸುತ್ತಾರೆ. ಅನಂತರ ಈ ಅನುಮಾನಗಳಿಗಿಂತ ಸಮಯಗಳು ಹೆಚ್ಚು ಪ್ರಬಲ. ಕಾರಣವೇನೆಂದರೆ ವೇದವು ಹೇಗೆ ಕಾಮಚಾರಿಯಲ್ಲವೋ, ಅದರಂತೆ ಈ ಸಮಯಗಳೂ ಕೂಡ ಕಾಮಚಾರಿಯಲ್ಲ. ಆದ್ದರಿಂದ ಅನುಮಾನಗಳಿಗಿಂತಲೂ ಹೆಚ್ಚು ಬಲಿಷ್ಠವಾಗಿದೆ. ಆದರೂ ಕೂಡ ಶ್ರುತಿಗಳಿಗಿಂತ ದುರ್ಬಲವಾಗಿವೆ. ಏಕೆಂದರೆ ಬಹಳ ಜನರಿಂದ ಪರಿಗೃಹೀತವಾಗಿದ್ದರು ಆಯಾ ಸಮಯಗಳು ಪೌರುಷೇಯವಾದ್ದರಿಂದ ದೋಷಶಂಕೆಗೆ ವಿಷಯಗಳಾಗಿವೆ. ಇಂತಹ ಸಮಯಗಳ ವಿರೋಧವನ್ನು ಎರಡನೆಯ ಪಾದದಲ್ಲಿ ಪರಿಹರಿಸಿದ್ದಾರೆ.

ಈ ಸಮಯಗಳಿಗಿಂತ ಶ್ರುತಿಯು ಇನ್ನೂ ಹೆಚ್ಚು ಬಲಿಷ್ಠ. ಅಪೌರುಷೇಯವಾದ್ದರಿಂದ ಯಾವುದೇ ದೋಷಶಂಕೆಗೆ ಆಸ್ಪದವಿರುವುದಿಲ್ಲ. ಆದರೂ ಕೂಡ ಉಪಪತ್ತಿಸಹಿತವಾದ ಶ್ರುತಿಗಿಂತ ದುರ್ಬಲವಾಗಿರುತ್ತವೆ. ಈ ಶ್ರುತಿಗಳ ವಿರೋಧವನ್ನು ಮೂರನೆಯ ಪಾದದಲ್ಲಿ ಪರಿಹರಿಸಿ, ಕೇವಲ ಶ್ರುತಿಗಳಿಗಿಂತಲೂ ಸೋಪಪತ್ತಿಕವಾದ ಶ್ರುತಿಗಳ ವಿರೋಧವು ಇನ್ನೂ ಹೆಚ್ಚು ಬಲಿಷ್ಠವಾದ್ದರಿಂದ ನಾಕನೆಯ ಪಾದದಲ್ಲಿ ಅವುಗಳ ವಿರೋಧ ಪರಿಹಾರವನ್ನು ಮಾಡಿರುತ್ತಾರೆ. ಹೀಗೆ ಸೈನಿಕಾದಿಗಳು ನಾಶವಾದ ಮೇಲೆಯೇ ಅಶ್ವಾದಿಗಳು ಯುದ್ಧಕ್ಕೆ ಹೊರಡುವಂತೆ ಅನುಮಾನಾದಿಗಳನ್ನು ನಿರಾಕರಣೆ ಮಾಡಿದ ಮೇಲೆಯೇ ವಿರೋಧಿಗಳಾದ ಸಮಯ, ಶ್ರುತಿ ಇವುಗಳ ವಿರೋಧವು ಪ್ರವೃತ್ತವಾಗುತ್ತದೆ. ಆದ್ದರಿಂದ ಸೂತ್ರಕಾರರು ಮಾಡಿರುವ ಪಾದಗಳ ಕ್ರಮದ ಹಿನ್ನೆಲೆ ಅರ್ಥಪೂರ್ಣವಾಗಿದೆ.

**यद्वा –**

**बहिरङ्गैर्विरोधोहि झटित्येव प्रतीयते ।**
**अन्तरङ्गैः स्वगौत्रैस्तु विलम्बेन प्रतीयते ॥१॥**

ಅಥವಾ ಮತ್ತೊಂದು ಬಗೆಯಲ್ಲಿಯೂ ಪಾದಕ್ರಮವನ್ನು ಚಿಂತಿಸಬಹುದು.

ಬಹಿರಂಗೈರ್ವಿರೋಧೋ ಹಿ ಝಟಿತ್ಯೇವ ಪ್ರತೀಯತೇ ।
ಅಂತರಂಗೈಃ ಸ್ವಗೌತ್ರೈಸ್ತು ವಿಲಂಬೇನ ಪ್ರತೀಯತೇ ॥೧॥

ನಮ್ಮ ಜೀವನದಲ್ಲಿ ಬೇರೆಯವರು ವಿರೋಧ ಮಾಡಿದರೆ ಕೂಡಲೇ ತಿಳಿಯುತ್ತದೆ. ಆದರೆ ನಮ್ಮ ಗೋತ್ರದವರೇ ಆದ ಮನೆಮಂದಿಯೇ ವಿರೋಧ ಮಾಡಿದರೆ ಕೂಡಲೇ ತಿಳಿಯುವುದಿಲ್ಲ. ವಿಳಂಬವಾಗಿ ಅರ್ಥವಾಗುತ್ತದೆ. ಬಹಿರಂಗವಿರೋಧಕ್ಕಿಂತ ಅಂತರಂಗವಿರೋಧವು ಬಲಿಷ್ಠವಷ್ಟೇ.

**अनुमानस्याशब्दत्वेन विजातीयतयाऽतिबहिरङ्गत्वम् । समयानान्तु शब्दत्वेऽपि श्रुतित्वाभावात् बहिरङ्गत्वम् ।**

ಅನುಮಾನವು ಅಶಾಬ್ದವಾದದ್ದರಿಂದ ವಿಜಾತೀಯವಾಗಿದೆ. ಆದ್ದರಿಂದಲೇ ಅತ್ಯಂತ ಬಹಿರಂಗವೆಂದು ತಿಳಿಯಬೇಕು. ಸಮಯಾದಿಗಳು ಶಬ್ದಪ್ರಮಾಣದಲ್ಲಿ ಸೇರುವುದಾದರೂ, ಅಪೌರುಷೇಯವಲ್ಲದ ಕಾರಣ ಬಹಿರಂಗವಾಗಿದೆ.

**श्रुतेस्तु सिद्धान्त्यभिमतसयुक्तिकश्रुत्याऽन्तरङ्गत्वम् । सयुक्तिकश्रुतेस्तु तयाऽत्यन्तान्तरङ्गत्वम् ।**

ಶ್ರುತಿಗಳು ಸಿದ್ಧಾಂತಿಗಳಿಗೆ ಅಭಿಮತವಾದ ಯುಕ್ತಿಪೇತವಾದ ಶ್ರುತಿಗಳಿಗಿಂತ ಅಂತರಂಗವೆನಿಸಿದೆ. ಸಯುಕ್ತಿಕವಾದ ಶ್ರುತಿಗಳು ಕೇವಲ ಶ್ರುತಿಗಳಿಗಿಂತಲೂ ಅಂತರಂಗವಾಗಿವೆ.

ಸ್ಮೃತ್ಯಧಿಕರಣ (೨-೧-೧)

## ಎರಡನೆಯ ಅಧ್ಯಾಯದ ನಾಕು ಪಾದಗಳಲ್ಲಿರುವ ತಾರತಮ್ಯಕ್ಕೆ ನಾಕು ಕಾರಣಗಳು

**तात्पर्यचन्द्रिका –**

**तत्क्रमस्तु-**

**पदात्यादिषु भग्नेषु गजाश्वादिप्रवृत्तिवत् ।**
**युक्त्यादिषु निरस्तेषु समयादिप्रवृत्तितः ॥१॥**

ಅನುವಾದ - ಪಾದಗಳ ಕ್ರಮ ಹೀಗಿದೆ -

ಪದಾತ್ಯಾದಿಷು ಭಂಗ್ನೇಷು ಗಜಾಶ್ವಾದಿಪ್ರವೃತ್ತಿವತ್ ।
ಯುಕ್ತ್ಯಾದಿಷು ನಿರಸ್ತೇಷು ಸಮಯಾದಿಪ್ರವೃತ್ತಿತಃ ॥೧॥

ಮಹಾಯುದ್ಧದಲ್ಲಿ ಮೊದಲು ಸೈನಿಕರು ಸತ್ತ ಮೇಲೆ ಆನೆ, ಕುದುರೆ ಮೊದಲಾದವುಗಳು ಪ್ರವೃತ್ತಿ ಮಾಡುತ್ತವೆ. ಕಡಿಮೆ ಶಕ್ತಿಯಿರುವವರು ಮೊದಲು ಯುದ್ಧ ಮಾಡಿ, ಹೆಚ್ಚಿನ ಶಕ್ತಿಯಿರುವವರು ಅನಂತರ ಯುದ್ಧಕ್ಕೆ ಬರುತ್ತಾರೆ. ಅದೇ ರೀತಿಯಲ್ಲಿ ದುರ್ಬಲವಾದ ಯುಕ್ತಿ ಮೊದಲಾದವುಗಳನ್ನು ಮೊದಲು ನಿರಾಕರಣೆ ಮಾಡಿದ ಮೇಲೆ ಹೆಚ್ಚು ಬಲಿಷ್ಠವಾದ ಸಮಯ, ಶ್ರುತಿ ಇವುಗಳ ವಿರೋಧವು ಪ್ರವೃತ್ತವಾಗುತ್ತವೆ.

**अनुमानमात्रस्य कामचारित्वेनाऽतिदुर्बलत्वात् समयानां च वेदवदकामचारित्वेऽप्यतिदार्ढ्येन बहुजनपरिगृहीतत्वेऽपि पौरुषेयतया शङ्कितदोषत्वेन दुर्बलत्वात् श्रुतिमात्रस्य च समयात् बलवत्त्वेऽपि सोपपत्तिकश्रुतिवत् प्रबलत्वाभावात् पदात्यादिभङ्गानन्तरमेवाश्वादिवदनुमानादिनिरासानन्तरमेव विरोधिसमयादेः प्रवृत्तेः पादक्रमः।**

ಕೇವಲ ಅನುಮಾನವು ಕಾಮಚಾರಿಯಾದ್ದರಿಂದ ಅತ್ಯಂತ ದುರ್ಬಲವಾಗಿದೆ. ಇದರ ವಿರೋಧವನ್ನು ಮೊದಲನೆಯ ಪಾದದಲ್ಲಿಯೇ ಪರಿಹರಿಸುತ್ತಾರೆ. ಅನಂತರ ಈ ಅನುಮಾನಗಳಿಗಿಂತ ಸಮಯಗಳು ಹೆಚ್ಚು ಪ್ರಬಲ. ಕಾರಣವೇನೆಂದರೆ ವೇದವು ಹೇಗೆ ಕಾಮಚಾರಿಯಲ್ಲವೋ, ಅದರಂತೆ ಈ ಸಮಯಗಳೂ ಕೂಡ ಕಾಮಚಾರಿಯಲ್ಲ. ಆದ್ದರಿಂದ ಅನುಮಾನಗಳಿಗಿಂತಲೂ ಹೆಚ್ಚು ಬಲಿಷ್ಠವಾಗಿದೆ. ಆದರೂ ಕೂಡ ಶ್ರುತಿಗಳಿಗಿಂತ ದುರ್ಬಲವಾಗಿವೆ. ಏಕೆಂದರೆ ಬಹಳ ಜನರಿಂದ ಪರಿಗೃಹೀತವಾಗಿದ್ದರು ಆಯಾ ಸಮಯಗಳು ಪೌರುಷೇಯವಾದ್ದರಿಂದ ದೋಷಶಂಕೆಗೆ ವಿಷಯಗಳಾಗಿವೆ. ಇಂತಹ ಸಮಯಗಳ ವಿರೋಧವನ್ನು ಎರಡನೆಯ ಪಾದದಲ್ಲಿ ಪರಿಹರಿಸಿದ್ದಾರೆ.

ಈ ಸಮಯಗಳಿಗಿಂತ ಶ್ರುತಿಯು ಇನ್ನೂ ಹೆಚ್ಚು ಬಲಿಷ್ಠ. ಅಪೌರುಷೇಯವಾದ್ದರಿಂದ ಯಾವುದೇ ದೋಷಶಂಕೆಗೆ ಆಸ್ಪದವಿರುವುದಿಲ್ಲ. ಆದರೂ ಕೂಡ ಉಪಪತ್ತಿಸಹಿತವಾದ ಶ್ರುತಿಗಿಂತ ದುರ್ಬಲವಾಗಿರುತ್ತವೆ. ಈ ಶ್ರುತಿಗಳ ವಿರೋಧವನ್ನು ಮೂರನೆಯ ಪಾದದಲ್ಲಿ ಪರಿಹರಿಸಿ, ಕೇವಲ ಶ್ರುತಿಗಳಿಗಿಂತಲೂ ಸೋಪಪತ್ತಿಕವಾದ ಶ್ರುತಿಗಳ ವಿರೋಧವು ಇನ್ನೂ ಹೆಚ್ಚು ಬಲಿಷ್ಠವಾದ್ದರಿಂದ ನಾಕನೆಯ ಪಾದದಲ್ಲಿ ಅವುಗಳ ವಿರೋಧ ಪರಿಹಾರವನ್ನು ಮಾಡಿರುತ್ತಾರೆ. ಹೀಗೆ ಸೈನಿಕಾದಿಗಳು ನಾಶವಾದ ಮೇಲೆಯೇ ಅಶ್ವಾದಿಗಳು ಯುದ್ಧಕ್ಕೆ ಹೊರಡುವಂತೆ ಅನುಮಾನಾದಿಗಳನ್ನು ನಿರಾಕರಣೆ ಮಾಡಿದ ಮೇಲೆಯೇ ವಿರೋಧಿಗಳಾದ ಸಮಯ, ಶ್ರುತಿ ಇವುಗಳ ವಿರೋಧವು ಪ್ರವೃತ್ತವಾಗುತ್ತದೆ. ಆದ್ದರಿಂದ ಸೂತ್ರಕಾರರು ಮಾಡಿರುವ ಪಾದಗಳ ಕ್ರಮದ ಹಿನ್ನೆಲೆ ಅರ್ಥಪೂರ್ಣವಾಗಿದೆ.

**यद्वा –**

**बहिरङ्गैर्विरोधोहि झटित्येव प्रतीयते ।**
**अन्तरङ्गैः स्वगौत्रैस्तु विलम्बेन प्रतीयते ॥१॥**

ಅಥವಾ ಮತ್ತೊಂದು ಬಗೆಯಲ್ಲಿಯೂ ಪಾದಕ್ರಮವನ್ನು ಚಿಂತಿಸಬಹುದು.

ಬಹಿರಂಗೈರ್ವಿರೋಧೋ ಹಿ ಝಟಿತ್ಯೇವ ಪ್ರತೀಯತೇ ।
ಅಂತರಂಗೈಃ ಸ್ವಗೌತ್ರೈಸ್ತು ವಿಲಂಬೇನ ಪ್ರತೀಯತೇ ॥೧॥

ನಮ್ಮ ಜೀವನದಲ್ಲಿ ಬೇರೆಯವರು ವಿರೋಧ ಮಾಡಿದರೆ ಕೂಡಲೇ ತಿಳಿಯುತ್ತದೆ. ಆದರೆ ನಮ್ಮ ಗೋತ್ರದವರೇ ಆದ ಮನೆಮಂದಿಯೇ ವಿರೋಧ ಮಾಡಿದರೆ ಕೂಡಲೇ ತಿಳಿಯುವುದಿಲ್ಲ. ವಿಳಂಬವಾಗಿ ಅರ್ಥವಾಗುತ್ತದೆ. ಬಹಿರಂಗವಿರೋಧಕ್ಕಿಂತ ಅಂತರಂಗವಿರೋಧವು ಬಲಿಷ್ಠವಷ್ಟೇ.

**अनुमानस्याशब्दत्वेन विजातीयतयाऽतिबहिरङ्गत्वम् । समयानान्तु शब्दत्वेऽपि श्रुतित्वाभावात् बहिरङ्गत्वम् ।**

ಅನುಮಾನವು ಅಶಾಬ್ದವಾದದ್ದರಿಂದ ವಿಜಾತೀಯವಾಗಿದೆ. ಆದ್ದರಿಂದಲೇ ಅತ್ಯಂತ ಬಹಿರಂಗವೆಂದು ತಿಳಿಯಬೇಕು. ಸಮಯಾದಿಗಳು ಶಬ್ದಪ್ರಮಾಣದಲ್ಲಿ ಸೇರುವುದಾದರೂ, ಅಪೌರುಷೇಯವಲ್ಲದ ಕಾರಣ ಬಹಿರಂಗವಾಗಿದೆ.

**श्रुतेस्तु सिद्धान्त्यभिमतसयुक्तिकश्रुत्याऽन्तरङ्गत्वम् । सयुक्तिकश्रुतेस्तु तयाऽत्यन्तान्तरङ्गत्वम् ।**

ಶ್ರುತಿಗಳು ಸಿದ್ಧಾಂತಿಗಳಿಗೆ ಅಭಿಮತವಾದ ಯುಕ್ತಿಪೇತವಾದ ಶ್ರುತಿಗಳಿಗಿಂತ ಅಂತರಂಗವೆನಿಸಿದೆ. ಸಯುಕ್ತಿಕವಾದ ಶ್ರುತಿಗಳು ಕೇವಲ ಶ್ರುತಿಗಳಿಗಿಂತಲೂ ಅಂತರಂಗವಾಗಿವೆ.

ಸ್ಮೃತ್ಯಧಿಕರಣ (೨-೧-೧)

**लोके चातिबहिरङ्गादिविरोधज्ञानानन्तरमेव बहिरङ्गादिविरोधधीरिति निरसनीयविरोधधीक्रमात् तत्क्रमः ।**

ಲೋಕದಲ್ಲಿ ಹೆಚ್ಚು ಬಹಿರಂಗವಾಗಿರುವ ವಿರೋಧಜ್ಞಾನ ಬಂದ ಮೇಲೆ ಸಾಮಾನ್ಯವಾಗಿ ಬಹಿರಂಗವಾದ ವಿರೋಧವು ತಿಳಿಯುತ್ತದೆ. ಅನಂತರವೇ ಅಂತರಂಗವಿರೋಧವು ತಿಳಿಯುತ್ತದೆ. ಕೊನೆಯಲ್ಲಿ ಅತ್ಯಂತ ಬಲಿಷ್ಠವಾದ ಅಂತರಂಗವಿರೋಧವು ತಿಳಿಯುತ್ತದೆ. ಈ ಕ್ರಮದಲ್ಲಿಯೇ ಪಾದಕ್ರಮವೂ ಕೂಡ ಇರುತ್ತದೆ ಎಂದು ತಿಳಿಯಬೇಕು.

**यद्वा विरोधादेर्युक्त्यधीनत्वात्, मीमांसाया युक्तिपुरस्कारेण प्रवृत्तेः, समयानामपि युक्तिमूलत्वात्, वेदोऽप्रमाणमाप्ताप्रणीतत्वादिति साक्षात् कृत्स्नवेदाप्रामाण्यसाधकत्वात्, एकस्य समयिनः समयान्तर इव युक्तावनादराभावाच्च युक्तिविरोधः समयविरोधादपि प्रबलः ।**

ಅಥವಾ ಮತ್ತೊಂದು ಬಗೆಯಲ್ಲಿ ಪಾದಕ್ರಮವನ್ನು ಚಿಂತಿಸಬಹುದು. ಮಹಾಮಲ್ಲಭಂಗನ್ಯಾಯದಿಂದಲೇ ಪಾದಕ್ರಮವು ಹೊರಟಿದೆ. ಪ್ರಥಮಪಾದದಲ್ಲಿ ಯುಕ್ತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಈ ಯುಕ್ತಿಗಳು ಶ್ರುತಿ ಹಾಗೂ ಸಮಯಗಳಿಗಿಂತಲೂ ಬಲಿಷ್ಠವಾಗಿವೆ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ಯುಕ್ತಿಯ ಪುರಸ್ಕಾರದಿಂದ ಪ್ರವೃತ್ತವಾಗಿದೆ. ಸಮಯಗಳೆಲ್ಲವೂ ಯುಕ್ತಿಮೂಲಕವೇ ಆಗಿವೆ. ಏಕೆಂದರೆ 'ವೇದಃ ಅಪ್ರಮಾಣಮ್ ಆಪ್ತ-ಅಪ್ರಣೀತತ್ವಾತ್' ಎಂಬ ಯುಕ್ತಿಯಿಂದ ಸಕಲ ವೇದಕ್ಕೆ ಅಪ್ರಾಮಾಣ್ಯವನ್ನು ಸಾಧಿಸಬಹುದು. ಮತ್ತು ಒಬ್ಬ ದಾರ್ಶನಿಕನಿಗೆ ಮತ್ತೊಬ್ಬನ ದರ್ಶನದಲ್ಲಿ ಅನಾದರ ಇರುತ್ತದೆ. ಆದರೆ ಯುಕ್ತಿಯ ವಿಷಯದಲ್ಲಿ ಯಾರೇ ಒಬ್ಬ ದಾರ್ಶನಿಕನಿಗೂ ಅನಾದರವಿರುವುದಿಲ್ಲ. ಪ್ರತಿಯೊಬ್ಬರೂ ಕೂಡ ಯುಕ್ತಿಯನ್ನು ಪ್ರಮಾಣವೆಂದು ಒಪ್ಪಿಕೊಂಡಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ಸಮಯವಿರೋಧಕ್ಕಿಂತ ಯುಕ್ತಿವಿರೋಧವು ಪ್ರಬಲ ಎನಿಸುತ್ತದೆ.

**समयानां तु अनादिकालतोऽविच्छेदेन बहुजनपरिग्रहेण वेदतुल्यत्वेऽपि वेदवन्निर्मूलत्वाभावादत्यन्तभ्रमहेतुतया तत्वज्ञानस्यातिविरोधित्वात् ।**

ಎಲ್ಲಾ ಸಮಯಗಳು ಅವಿಚ್ಛಿನ್ನವಾಗಿ ಅನಾದಿಕಾಲದಿಂದ ಬಹುಜನರಿಂದ ಪರಿಗೃಹೀತವಾಗಿ ಪ್ರಚಾರವಾಗುತ್ತಿವೆ. ಆದ್ದರಿಂದಲೇ ವೇದತುಲ್ಯವಾಗಿವೆ. ಆದರೂ ಕೂಡ ಯಾರೊಬ್ಬರೂ ಕೂಡ ನಿರ್ಮಾಣ ಮಾಡದ ಕಾರಣ ವೇದವು ನಿರ್ಮೂಲವಾಗಿದೆ. ಆದರೆ ಸಮಯಗಳು ಪೌರುಷೇಯವಾದ್ದರಿಂದ ನಿರ್ಮೂಲಗಳಲ್ಲ. ಹಾಗಾಗಿ ವೇದಗಳಿಗಿಂತ ಹೆಚ್ಚು ಭ್ರಮೆಗೆ ಕಾರಣವಾದ್ದರಿಂದ ತತ್ವಜ್ಞಾನಕ್ಕೆ ಅತ್ಯಂತ ವಿರೋಧಿಗಳಾಗಿವೆ.

**तथा श्रुतिविरोधवत् समयविरोधस्य प्रातीतिकमात्रत्वाभावाच्च श्रुतिविरोधात् समयविरोधः प्रबलः ।**

ಇದರಂತೆ ಶ್ರುತಿವಿರೋಧವು ಎಲ್ಲೆಡೆಯೂ ಪ್ರಾತೀತಿಕವಾಗಿರುತ್ತವೆ. ಆದರೆ ಸಮಯಗಳ ವಿರೋಧವು ಎಲ್ಲಿಯೂ ಕೂಡ ಪ್ರಾತೀತಿಕವಾಗಿರುವುದಿಲ್ಲ. ಅಂದರೆ ಮೇಲ್ನೋಟಕ್ಕೆ ಮಾತ್ರ ವಿರೋಧವೆಂದು ಕಾಣಿಸುವುದಿಲ್ಲ. ಸ್ಪಷ್ಟವಾಗಿಯೇ ತತ್ವಜ್ಞಾನವನ್ನು ವಿರೋಧ ಮಾಡುತ್ತವೆ. ಈ ಎಲ್ಲಾ ಕಾರಣಗಳಿಗಿಂದ ಶ್ರುತಿವಿರೋಧಕ್ಕಿಂತಲೂ ಸಮಯವಿರೋಧವು ಹೆಚ್ಚು ಪ್ರಬಲವಾಗಿವೆ.

**एवं च महामल्लभङ्गन्यायेन पादक्रमः । इममेव च क्रममभिप्रेत्य टीकायां ''तत्र सर्वविरोधानां युक्तिमूलत्वेन'' इत्यादि ।**

ಹೀಗೆ ಮಹಾಮಲ್ಲಭಂಗನ್ಯಾಯದಿಂದ ಹೆಚ್ಚು ಬಲಿಷ್ಠವಾದ ಯುಕ್ತಿವಿರೋಧಪರಿಹಾರವನ್ನು ಪ್ರಥಮಪಾದದಲ್ಲಿ ಸಮಯವಿರೋಧವನ್ನು ಎರಡನೆಯ ಪಾದದಲ್ಲಿ ಪರಿಹರಿಸಿ, ಕೊನೆಯಲ್ಲಿ ಶ್ರುತಿವಿರೋಧವನ್ನು ಪರಿಹರಿಸಿರುತ್ತಾರೆ. ಇದೇ ಕ್ರಮವನ್ನು ಮನಸ್ಸಿನಲ್ಲಿಟ್ಟುಕೊಂಡು ಟೀಕೆಯಲ್ಲಿ 'ತತ್ರ ಸರ್ವವಿರೋಧಾನಾಂ ಯುಕ್ತಿಮೂಲತ್ವೇನ' ಎಲ್ಲಾ ವಿರೋಧಗಳು ಯುಕ್ತಿಮೂಲಕವಾಗಿರುವುದರಿಂದ ಇತ್ಯಾದಿ ವಾಕ್ಯವು ಹೊರಟಿರುತ್ತದೆ.

**द्वितीये पादे च ''इतरविरोधत्रयेऽनादिकालानुवृत्तसमयविरोधस्यैव प्रबलत्वात्'' इत्युक्तम् ।**

ಮತ್ತು ಎರಡನೆಯ ಪಾದದ ಟೀಕೆಯಲ್ಲಿಯೂ 'ಇತರವಿರೋಧತ್ರಯೇऽನಾದಿಕಾಲಾನುವೃತ್ತ-ಸಮಯವಿರೋಧಸ್ಯೈವ ಪ್ರಬಲತ್ವಾತ್' ಉಳಿದ ಮೂರು ಬಗೆಯ ವಿರೋಧಗಳಲ್ಲಿ ಅನಾದಿಕಾಲದಿಂದ ಅನುವೃತ್ತವಾದ ಸಮಯವಿರೋಧಿಯೇ ಪ್ರಬಲವಾಗಿದೆ ಎಂದು ಹೇಳಿರುತ್ತಾರೆ.

**अयं च महामल्लभङ्गन्यायः पादत्रय एवाभिप्रेतः । चतुर्थपादस्य तु युक्तिश्रुत्युभयाविरोधपरत्वाद्वा मुमुक्षूणामन्ते जिज्ञास्याध्यात्मविषयत्वाद्वाऽन्त्यतेति द्रष्टव्यम् ।**

ಈ ಮಹಾಮಲ್ಲಭಂಗನ್ಯಾಯವು ಮೂರು ಪಾದಗಳಲ್ಲಷ್ಟೇ ಅನ್ವಯವಾಗುತ್ತದೆ. ನಾಕನೆಯ ಪಾದದಲ್ಲಿ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಎಲ್ಲಾ ವಿರೋಧಗಳಿಗಿಂತಲೂ ಅದು ಶ್ರೇಷ್ಠವಾಗಿದೆ. ಆದ್ದರಿಂದ ಅದನ್ನು ವಿವಕ್ಷಿಸಬಾರದು. ಮತ್ತು ಮುಮುಕ್ಷು ಆದವನು ಅಂತಿಮವಾಗಿ ಜಿಜ್ಞಾಸೆ ಮಾಡಬೇಕಾದ ಅಧ್ಯಾತ್ಮವಿಷಯವನ್ನು ನಾಕನೆಯ ಪಾದದಲ್ಲಿ ಸಮರ್ಥನೆ ಮಾಡುತ್ತಿರುವುದರಿಂದ ಅದು ಕೊನೆಯಲ್ಲಿಯೇ ಪ್ರಸಕ್ತವಾಗುತ್ತದೆ.

ಸ್ಮೃತ್ಯಧಿಕರಣ (೨-೧-೧)

**यद्वा उक्तरीत्या युक्तेः प्रबलत्वादादौ तदविरोधः । अथ ''इतरेषां चानुपलब्धेः'' इत्याद्यपादोक्तहेतुप्रपञ्चनरूपत्वात् समयाविरोधः ।**

ಅಥವಾ ಇನ್ನೊಂದು ಕ್ರಮದಲ್ಲಿಯೂ ಪಾದಕ್ರಮವನ್ನು ತಿಳಿಯಬಹುದು. ಇಲ್ಲಿಯ ತನಕ ಹೇಳಿದಂತೆ ಯುಕ್ತಿಯು ಶ್ರುತಿ ಮತ್ತು ಸಮಯಗಳಿಗಿಂತಲೂ ಪ್ರಬಲವಾಗಿದೆ. ಆದ್ದರಿಂದ ಮೊದಲೇ ಯುಕ್ತಿವಿರೋಧವನ್ನು ಪರಿಹರಿಸಿರುತ್ತಾರೆ. ಯುಕ್ತಿವಿರೋಧವನ್ನು ಪರಿಹರಿಸಿದ ಮೇಲೆ ಸಮಯ-ವಿರೋಧವನ್ನು ಏಕೆ ಪರಿಹರಿಸಿದ್ದಾರೆಂದರೆ ಇದೇ ಅಧಿಕರಣದಲ್ಲಿ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಸಾಮಾನ್ಯವಾಗಿ ಉಳಿದ ಮತದವರ ನಿರಾಕರಣೆಯನ್ನು ಮಾಡಿರುತ್ತಾರೆ. ಇದರ ವಿವರಣೆಗಾಗಿಯೇ ಎರಡನೆಯ ಪಾದವು ಹೊರಟಿದೆ.

**अनन्तरं यदि ''विप्रतिषेधाच्च'' इति द्वितीयान्त्यन्यायेन श्रुति विरोधात् परस्परविरोधाच्च मतान्तराप्रामाण्यं तर्हि तत एव परस्परविरोधाच्छ्रुतीनामप्रामाण्यमिति शङ्कोदयाच्छ्रुत्यविरोधः ।**

ಅನಂತರ ಎರಡನೆಯ ಪಾದದ ಕೊನೆಯಲ್ಲಿ 'ವಿಪ್ರತಿಷೇಧಾಚ್ಚ' ಎಂಬ ಸೂತ್ರದಿಂದ ಸಮಯಗಳಲ್ಲಿಯೇ ಪರಸ್ಪರ ವಿರೋಧವನ್ನು ಹೇಳಿದ್ದಾರೆ. 'ಶ್ರುತಿವಿರೋಧವಷ್ಟೇ ಅಲ್ಲ, ಸಮಯಗಳಲ್ಲೂ ಪರಸ್ಪರ ವಿರೋಧವಿದೆ' ಎಂಬುದು 'ವಿಪ್ರತಿಷೇಧಾಚ್ಚ' ಎಂಬ ಸೂತ್ರದ ಅಭಿಪ್ರಾಯ. ಹೀಗೆ ಎಲ್ಲಾ ಮತಗಳು ಅಪ್ರಮಾಣವಾಗುತ್ತವೆಂದು ಹೇಳಿದ ಮೇಲೆ ಅದೇ ಕಾರಣದಿಂದಲೇ ಶ್ರುತಿಗಳೂ ಕೂಡ ಅಪ್ರಮಾಣವಾಗುತ್ತವಲ್ಲವೇ? ಏಕೆಂದರೆ ಶ್ರುತಿಗಳಲ್ಲಿಯೂ ಪರಸ್ಪರ ವಿರೋಧವಿರುತ್ತದೆಂಬ ಶಂಕೆಯು ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ಮೂರನೆಯ ಪಾದವು ಹೊರಟಿದೆ.

**पश्चाद्यदि ''यावद्विकारं तु विभागो लोकवत्'' इति युक्त्यनुगृहीतयाऽऽकाशादे-रुत्पत्तिश्रुत्याऽनुत्पत्तिश्रुतिर्गौणी तर्ह्युपादानाऽभावादियुक्तिसहितया प्रमाणानामनु-त्पत्त्यादिश्रुत्या तदनित्यत्वादिश्रुतिर्गौणीति शङ्कोदयात् सयुक्तिकश्रुत्यविरोधः । इति पादक्रमः ।**

ಅನಂತರ 'ಯಾವದ್ವಿಕಾರಂ ತು ವಿಭಾಗೋ ಲೋಕವತ್' ಎಂಬ ಸೂತ್ರದಲ್ಲಿ ಹೇಳಿದಂತೆ ವಿಯತ್, ಉತ್ಪತ್ತಿಮತ್, ವಿಭಕ್ತತ್ವಾತ್ ಎಂಬ ಯುಕ್ತಿಯಿಂದ ಉಪೋದ್ಬಲಿತವಾದ ಆಕಾಶಾದಿಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯಿಂದ ಆಕಾಶಾದಿಗಳಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳಿಗೆ ಬಾಧವನ್ನು ಹೇಳಿ, ಬಾಧವು ಬರುವುದರಿಂದ ಗೌಣಾರ್ಥವನ್ನು ಮಾಡುವುದಾದರೆ ಅದೇ ಕಾರಣದಿಂದಲೇ

ಇಂದ್ರಿಯಾದಿಗಳಿಗೆ ಉಪಾದಾನವಿಲ್ಲದ ಕಾರಣ ಉತ್ಪತ್ತಿ ಇರುವುದಿಲ್ಲ ಎಂಬ ಯುಕ್ತಿಯಿಂದ ಸಹಿತವಾದ ಇಂದ್ರಿಯಗಳಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳಿಂದ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳುವ ಶ್ರುತಿಗಳನ್ನು ಬಾಧಿಸಬೇಕು. ಅನಿತ್ಯತ್ವಶ್ರುತಿಗಳಿಗೆ ಗೌಣಾರ್ಥವನ್ನು ಮಾಡಬೇಕು ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ಯುಕ್ತಿ ಸಹಿತವಾದ ಶ್ರುತಿಗಳ ವಿರೋಧವನ್ನು ನಾಕನೆಯ ಪಾದದಲ್ಲಿ ಮಾಡಲಾಗಿದೆ. ಹೀಗೆ ಅನೇಕ ಬಗೆಯಲ್ಲಿ ಪಾದಕ್ರಮಗಳ ಚಿಂತನೆಯನ್ನು ಮಾಡಬೇಕು.

**तदुक्तमनुव्याख्याने ''उक्तः समन्वयः साक्षादविरोधोऽत्र साध्यते । चतुर्विधस्य तस्यादौ यौक्तस्तत्रापि च स्मृतेः'' इति ।।**

ಇದನ್ನೇ ಅನುವ್ಯಾಖ್ಯಾನದಲ್ಲಿ 'ಉಕ್ತಃ ಸಮನ್ವಯಃ ಸಾಕ್ಷಾದವಿರೋಧೋಽತ್ರ ಸಾಧ್ಯತೇ । ಚತುರ್ವಿಧಸ್ಯ ತಸ್ಯಾದೌ ಯೌಕ್ತಸ್ತತ್ರಾಪಿ ಚ ಸ್ಮೃತೇಃ' ಸಮನ್ವಯವನ್ನು ಹಿಂದಿನ ಅಧ್ಯಾಯದಲ್ಲಿ ಮಾಡಿದ ಮೇಲೆ, ಅದೇ ವಿಷಯದಲ್ಲಿ ಬರುವ ಅವಿರೋಧವನ್ನು ಸಮರ್ಥಿಸಲು ಈ ಅಧ್ಯಾಯ ಹೊರಟಿದೆ. ಅವಿರೋಧವು ನಾಕು ಬಗೆಯಲ್ಲಿದೆ. ಅದರಲ್ಲಿಯೂ ಯುಕ್ತಿವಿರೋಧಪರಿಹಾರವು ಮೊದಲು ಪ್ರಾಪ್ತವಾಗುತ್ತದೆ. ಅದರಲ್ಲಿಯೂ ಸ್ಮೃತಿವಿರೋಧಪರಿಹಾರವು ಮೊಟ್ಟಮೊದಲು ಪ್ರಸಕ್ತವಾಗುತ್ತದೆ ಎಂಬುದಾಗಿ ಅಧ್ಯಾಯಸಂಗತಿ, ಪಾದಸಂಗತಿ, ಅಧಿಕರಣಸಂಗತಿಗಳನ್ನು ಹೇಳುವುದರ ಜೊತೆಗೆ ಅಧ್ಯಾಯಕ್ರಮ, ಪಾದಕ್ರಮಗಳನ್ನೂ ಕೂಡ ಸೂಚನೆ ಮಾಡಿರುತ್ತಾರೆ.

**प्रकाशः –**

एवं पादभेदमुक्त्वा ''सर्वविरोधानां युक्तिमूलत्वेन'' इति टीकोपलक्षणमिति भावेन चतुर्धा तत्क्रममाह – **पदात्यादिष्वित्यादिना ।।**

ಇಲ್ಲಿಯ ತನಕ ಪಾದಭೇದದ ವಿಚಾರವನ್ನು ಮಾಡಿದ್ದಾಯಿತು. ಈಗ 'ಸರ್ವವಿರೋಧಾನಾಂ ಯುಕ್ತಿಮೂಲತ್ವೇನ' ಎಲ್ಲಾ ವಿರೋಧಗಳೂ ಕೂಡ ಯುಕ್ತಿಮೂಲಕವೇ ಆಗಿದೆ ಎಂಬ ಟೀಕೆಯ ಮಾತು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ನಾಕು ಬಗೆಯಲ್ಲಿ ಪಾದಗಳ ಕ್ರಮಗಳನ್ನು ಚಿಂತನೆ ಮಾಡುತ್ತಿದ್ದಾರೆ 'ಪದಾತ್ಯಾದಿಷು' ಇತ್ಯಾದಿಯಾಗಿ.

**प्रकाशः – इति पादक्रम इत्यन्तेन ।। श्लोकस्थपञ्चम्यन्तस्य ''पादक्रमस्त्विति साध्येनान्वय इति भावेन श्लोकं व्याचष्टे – अनुमानेति ।।**

'ಪದಾತ್ಯಾದಿಷು' ಎಂಬ ಶ್ಲೋಕದಿಂದ ಪ್ರಾರಂಭಿಸಿ, 'ಇತಿ ಪಾದಕ್ರಮಃ' ಎಂಬಲ್ಲಿಯ ತನಕ ನಾಕು ಬಗೆಯಲ್ಲಿ ಪಾದಕ್ರಮಚಿಂತನೆಯನ್ನು ಮಾಡುತ್ತಿದ್ದಾರೆ. ಶ್ಲೋಕದಲ್ಲಿ ಪಂಚಮ್ಯಂತವಾದ 'ಸಮಯಾದಿ ಪ್ರವೃತ್ತಿತಃ' ಎಂಬುದಕ್ಕೆ ಪಾದಕ್ರಮಕ್ಕೂ ಎಂಬ ಸಾಧ್ಯದ ಜೊತೆಗೆ ಅನ್ವಯವನ್ನು ತಿಳಿದುಕೊಳ್ಳಬೇಕು. ಈ

ಅಭಿಪ್ರಾಯದಿಂದ ಸ್ವತಃ ಗ್ರಂಥಕಾರರೇ ಶ್ಲೋಕವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅನುಮಾನ' ಇತ್ಯಾದಿ ವಾಕ್ಯದಿಂದ.

**प्रकाशः – अकामचारित्वेऽपीति ।। नियतैकार्थप्रतिपादकत्वेऽपीत्यर्थः ।। अतिदार्ढ्येनेति ।। वेदवदित्यत्राप्यनुषज्यते ।। बलवत्त्वेऽपीति ।।** अपौरुषेयतया नाशङ्कितदोषत्वेनेति भावः ।।

'ಅಕಾಮಚಾರಿತ್ವೇಽಪಿ' ಎಂಬುದಕ್ಕೆ ನಿಯತವಾಗಿ ಏಕಾರ್ಥಪ್ರತಿಪಾದಕವಾಗಿದ್ದರೂ ಕೂಡ ಎಂದರ್ಥ. 'ಅತಿದಾರ್ಢ್ಯೇನ' ಎಂಬುದನ್ನು ವೇದವತ್' ಎಂಬಲ್ಲಿಯೂ ಅನ್ವಯ ಮಾಡಿಕೊಳ್ಳಬೇಕು. 'ಬಲವತ್ತ್ವೇಽಪಿ' ಎಂದರೆ ಅಪೌರುಷೇಯವಾಗಿರುವುದರಿಂದ ಯಾವುದೇ ದೋಷದ ಆಶಂಕೆಗೆ ಅವಕಾಶವಿರುವುದಿಲ್ಲ. ಆದ್ದರಿಂದ ಬಲಿಷ್ಠವಾಗಿದೆ ಎಂದರ್ಥ.

**प्रकाशः – अश्वादिवदिति ।।** अश्वादेरिव समयादेः प्रवृत्तेरित्यर्थः । अनतिप्रयत्नसाध्यतन्निरासक्रमात् सोपानारोहणन्यायेनायं क्रम इत्यर्थः ।

ಅಶ್ವಾದಿಗಳು ಸೈನಿಕರು ನಾಶವಾದ ಮೇಲೆ ಪ್ರವೃತ್ತಿ ಮಾಡುವಂತೆ ಯುಕ್ತಿಗಳು ನಾಶವಾದ ಮೇಲೆ, ಸಮಯಗಳು ಪ್ರವೃತ್ತವಾಗುತ್ತಿವೆ ಎಂದರ್ಥ. ಸುಲಭ ಪ್ರಯತ್ನದಿಂದ ಸಾಧ್ಯವಾಗುವ ನಿರಾಕರಣೆಯನ್ನು ಮೊದಲು ಮಾಡುತ್ತಿದ್ದಾರೆ. ಹೀಗೆ ಸೋಪಾನಾರೋಹಣನ್ಯಾಯದಿಂದ ಪಾದಕ್ರಮವನ್ನು ತಿಳಿಯಬೇಕು.

**प्रकाशः –** निरसनीयविरोधप्रतीतिक्रमात् पादक्रम इत्याह **– यद्वेति ।।** तथा प्रतीतौ बीजं वदन् श्लोकं व्याचष्टे **– अनुमानस्येति ।।**

ನಿರಾಕರಣೆ ಮಾಡಲ್ಪಡುವ ವಿರೋಧಗಳ ಪ್ರತೀತಿಕ್ರಮದಿಂದ ಪಾದಕ್ರಮಗಳು ವರ್ಣಿತವಾಗಿರುತ್ತವೆ ಎಂದು 'ಯದ್ವಾ' ಇತ್ಯಾದಿಯಾಗಿ ಮತ್ತೊಂದು ಪಕ್ಷವನ್ನು ಹೇಳುತ್ತಿದ್ದಾರೆ. ಅದೇ ರೀತಿಯಲ್ಲಿಯೇ ಪ್ರತೀತವಾಗಲು ಕಾರಣವನ್ನು ಹೇಳುತ್ತಾ ಶ್ಲೋಕವನ್ನು ಸ್ವತಃ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅನುಮಾನಸ್ಯ' ಇತ್ಯಾದಿ ವಾಕ್ಯದಿಂದ.

**प्रकाशः –** टीकोक्तपक्षं विवृणोति **– यद्वा विरोधादेरिति ।। युक्ताविति ।।** चार्वाकस्य तत्रानादरेऽपि तदन्यसर्वसमयिभिस्तत्र प्रामाण्याङ्गीकारादिति भावः ।

ಟೀಕೆಯಲ್ಲಿರುವ ಹೇಳಿರುವ ಪಕ್ಷವನ್ನು ಗ್ರಂಥಕಾರರು 'ಯದ್ವಾ' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ. ಎಲ್ಲಾ ದಾರ್ಶನಿಕರೂ ಕೂಡ ಅನುಮಾನವನ್ನು ಪ್ರಮಾಣವನ್ನಾಗಿ ಒಪ್ಪಿರುತ್ತಾರೆ. ಆದರೆ ಚಾರ್ವಾಕರು ಅನುಮಾನವನ್ನು ಪ್ರಮಾಣವೆಂದು ಒಪ್ಪುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಚಾರ್ವಾಕರನ್ನು ಬಿಟ್ಟು ಉಳಿದ ಎಲ್ಲಾ ದಾರ್ಶನಿಕರು ಅನುಮಾನವನ್ನು ಪ್ರಮಾಣವೆಂಬುದಾಗಿ ಒಪ್ಪಿರುವುದರಿಂದ ಗ್ರಂಥಕಾರರು ಸಕಲಸಮಯಿಗಳಿಗೆ ಅಭಿಮತವಾಗಿದೆ ಎಂದು ಹೇಳಿರುತ್ತಾರೆ.

**प्रकाशः** – यद्वा समयान्तर इव युक्तौ तेनाप्यनादरो न कृतः । सम्भावनाहेतुत्वेन युक्तीनां स्वग्रन्थेऽप्युपन्यासादिति भावः ।।

ಅಥವಾ ಊಳಿದ ದಾರ್ಶನಿಕರಂತೆ ಚಾರ್ವಾಕರಿಗೂ ಕೂಡ ಅನುಮಾನದ ವಿಷಯದಲ್ಲಿ ಅನಾದರವಿರುವುದಿಲ್ಲ. ಏಕೆಂದರೆ ಅವರು ತಮ್ಮ ಗ್ರಂಥದಲ್ಲಿ ಅನುಮಾನಕ್ಕೆ ಪ್ರಮಿತಿಸಾಧನತ್ವೇನ ಪ್ರಾಮಾಣ್ಯವನ್ನು ಒಪ್ಪದಿದ್ದರೂ ಸಂಭವನಾಹೇತುಕವಾದ ಪ್ರಾಮಾಣ್ಯವನ್ನು ಒಪ್ಪಿರುತ್ತಾರೆ. ಅಭಿಪ್ರಾಯವೇನೆಂದರೆ ಅನುಮಾನದಿಂದ ಯಾವುದೇ ಪ್ರಮೇಯ ಜ್ಞಾನವು ಬಾರದಿರಬಹುದು. ಆದರೆ ಸಂಭಾವನಾಜ್ಞಾನಕ್ಕೆ ಹೇತುವಾಗಿರುವುದರಿಂದ ಪ್ರಮಾಣವಾಗುತ್ತದೆ ಎಂದು ಹೇಳಿರುತ್ತಾರೆ.

**प्रकाशः** – **अविच्छेदेनेति** ।। प्रवाहत इति भावः ।। **निर्मूलत्वेति** ।। तदीयप्रत्यक्षादिमूलत्वादिति भावः ।। **प्रबल इति** ।। श्रुतिविरोधस्तु प्रातीतिकत्वात्ततो दुर्बल इति तदानन्तरिक इत्यर्थः ।।

ಎಲ್ಲಾ ಸಮಯಗಳು ಪ್ರವಾಹತಃ ಅನಾದಿಯಾಗಿವೆ. ಆದ್ದರಿಂದ 'ಅವಿಚ್ಛೇದೇನ' ಎಂದು ಹೇಳಿರುತ್ತಾರೆ. 'ನಿರ್ಮೂಲತ್ವಾಭಾವಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಏಕೆಂದರೆ ಎಲ್ಲಾ ದರ್ಶನಗಳು ಆಯಾ ದಾರ್ಶನಿಕರ ಪ್ರತ್ಯಕ್ಷ ಮೂಲಕವಾದ್ದರಿಂದ, ನಿರ್ಮೂಲವಾಗಿರುವುದಿಲ್ಲ ಎಂದಭಿಪ್ರಾಯ. 'ಪ್ರಬಲಃ' ಎಂದರೆ ಶ್ರುತಿವಿರೋಧವು ಪ್ರಾತೀತಿಕವಾದ್ದರಿಂದ ಸಮಯಗಳಿಗಿಂತಲೂ ದುರ್ಬಲವಾಗಿದೆ. ಆದ್ದರಿಂದ ಸಮಯವಿರೋಧದ ಪರಿಹಾರದ ಅನಂತರದ ಸ್ಥಾನವನ್ನೇ ಅದು ಹೊಂದುತ್ತದೆ ಎಂದಭಿಪ್ರಾಯ.

**प्रकाशः** – **इममेवेति** ।। प्राचीनपक्षद्वयं तु सूत्रभाष्यादौ तत्र तत्र युक्त्यादेर्दुबलत्वाद्युक्त्या सूचितमिति भावः ।।

ಮಹಾಮಲ್ಲಭಂಗನ್ಯಾಯದಿಂದ ಪಾದಕ್ರಮವನ್ನು ಟೀಕೆಯಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ. ಆದರೆ ಸೋಪಾನಾರೋಹಣಕ್ರಮದಿಂದ ಹೇಳಲ್ಪಟ್ಟ ಹಿಂದಿನ ಎರಡು ಬಗೆಯ ಪಾದಕ್ರಮವನ್ನು ಭಾಷ್ಯದಲ್ಲಾಗಲೀ, ಟೀಕೆಯಲ್ಲಾಗಲೀ ಹೇಳಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಆಯಾ ಸಂದರ್ಭಗಳಲ್ಲಿ ಯುಕ್ತ್ಯಾದಿಗಳಿಗೆ ದೌರ್ಬಲ್ಯವನ್ನು ಹೇಳಿರುತ್ತಾರೆ. ಹೀಗೆ ಸೋಪಾನಾರೋಹಣಕ್ರಮದಿಂದ ಪಾದಕ್ರಮವನ್ನು ತಿಳಿದುಕೊಳ್ಳಬಹುದು.

**प्रकाशः** – **हेत्विति** ।। फलव्यभिचारित्वरूपेत्यर्थः । अत एव तत्र भाष्यं ''इतरेषां चानुपलब्धेरिति सामान्यतो निराकरणम्'' इत्यादीति भावः ।।

ಗ್ರಂಥದಲ್ಲಿ 'ಆದ್ಯಪಾದೋಕ್ತಹೇತುಪ್ರಂಪಚನರೂಪತ್ವಾತ್' ಎಂದು ಹೇಳಿದ್ದಾರೆ. 'ಹೇತು' ಎಂದರೆ 'ಫಲವ್ಯಭಿಚಾರಿತ್ವ' ಎಂಬ ಹೇತುವಿನ ವಿವರಣೆಗಾಗಿಯೇ ಸಮಯಪಾದ ಹೊರಟಿದೆ ಎಂದಭಿಪ್ರಾಯ. ಆದ್ದರಿಂದ ಸಮಯಪಾದದ ಭಾಷ್ಯದಲ್ಲಿ 'ಇತರೇಷಾಂ ಚಾನುಪಲಬ್ಧೇರಿತಿ ಸಾಮಾನ್ಯತೋ ನಿರಾಕರಣಮ್'

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಗಿದೆ ಎಂದು ಹೇಳಿರುತ್ತಾರೆ.

**प्रकाशः – युक्तीति ।।** 'वियदुत्पत्तिमत् विभक्तत्वादल्पशक्तित्वाद्घटवत्' इत्यादियुक्त्यनुगृहीतया ''आकाशस्सम्भूतः'' इत्यादिश्रुत्या ''अनादिर्वा अयमाकाशः'' इति श्रुतिर्गौणीत्यर्थः ।।

ಗ್ರಂಥದಲ್ಲಿ 'ಯುಕ್ತ್ಯನುಗೃಹೀತಯಾ' ಎಂದು ಹೇಳಿದ್ದಾರೆ. ಯುಕ್ತಿ ಎಂದರೆ 'ವಿಯತ್, ಉತ್ಪತ್ತಿಮತ್ ಮತ್ತು ವಿಭಕ್ತತ್ವಾತ್, ಅಲ್ಪಶಕ್ತಿತ್ವಾತ್ ಘಟವತ್' ಘಟವು ಅಲ್ಪಶಕ್ತಿಯುಳ್ಳದ್ದಾಗಿದೆ ಮತ್ತು ವಿಭಕ್ತವಾಗಿದೆ. ಮತ್ತು ಉತ್ಪತ್ತಿಯುಳ್ಳದ್ದಾಗಿದೆ. ಅದರಂತೆ ಆಕಾಶವೂ ಕೂಡ ಅಲ್ಪಶಕ್ತಿಯುಳ್ಳದ್ದೂ, ವಿಭಕ್ತವೂ ಆಗಿರುವುದರಿಂದ ಉತ್ಪತ್ತಿವುಳ್ಳದ್ದಾಗಲೇ ಬೇಕು ಎಂಬ ಯುಕ್ತಿಯಿಂದ ಉಪೋದ್ಬಲಿತವಾದ 'ಆಕಾಶಃ ಸಂಭೂತಃ' ಎಂಬ ಶ್ರುತಿಯು ಆಕಾಶಕ್ಕೆ ಉತ್ಪತ್ತಿಯನ್ನು ಸಮರ್ಥನೆ ಮಾಡುತ್ತಿದೆ. ಇದರಿಂದ 'ಅನಾದಿರ್ವಾ ಅಯಮಕಾಶಃ' ಎಂಬ ಆಕಾಶಕ್ಕೆ ಅನಾದಿತ್ವವನ್ನು ಹೇಳುವ ಶ್ರುತಿಗೆ ವಿರೋಧವು ಬರುತ್ತದೆ. ಆದ್ದರಿಂದ 'ಅನಾದಿರ್ವಾ' ಎಂಬ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು ಎಂದಭಿಪ್ರಾಯ.

**प्रकाशः – क्रम इति ।।** निरसनीयशङ्काक्रमात् क्रम इत्यर्थः । भाष्यानुभाष्ययोरैकार्थ्यं दर्शयितुं टीकोक्तेर्मूलमाह – **तदुक्तमिति ।।**

ನಿರಾಕರಣೆ ಮಾಡಲ್ಪಡುವ ಆಶಂಕೆಯಲ್ಲಿರುವ ಕ್ರಮವನ್ನು ಅನುಸರಿಸಿ ಪಾದಗಳ ಕ್ರಮವು ಹೊರಟಿರುತ್ತದೆ ಎಂದರ್ಥ. ಭಾಷ್ಯ ಹಾಗೂ ಅನುವ್ಯಾಖ್ಯಾನಗಳು ಒಂದೇ ಅಭಿಪ್ರಾಯದಿಂದ ಹೊರಟಿವೆ ಎಂಬುದನ್ನು ತೋರಿಸಲು ಮೂಲಪ್ರಮಾಣವನ್ನು 'ತದುಕ್ತಮ್' ಎಂಬುದರಿಂದ ತೋರಿಸುತ್ತಿದ್ದಾರೆ.

**प्रकाशः –** ''पूर्वेणोक्तः'' इत्यादिनोक्तं प्रमेयमित्यर्थः । चतुर्विधस्येति निर्धारणे षष्ठी । यौक्तः युक्तिनिरूप्यविरोधप्रतियोगिक इत्यर्थः । तथापि प्रथमपादेऽपि । स्मृतेः अविरोधस्साध्यत इत्यर्थः ।

'ಪೂರ್ವೇಣೋಕ್ತಃ' ಎಂಬಲ್ಲಿಂದ ಪ್ರಾರಂಭಿಸಿ ಹೇಳಿದ ಪ್ರಮೇಯವನ್ನು ಎಂದರ್ಥ. 'ಚತುರ್ವಿಧಸ್ಯ' ಎಂಬಲ್ಲಿರುವ ಷಷ್ಠೀವಿಭಕ್ತಿಯು ನಿರ್ಧಾರಾರ್ಥದಲ್ಲಿ ಪ್ರಯುಕ್ತವಾಗಿದೆ. ನಾಕುಬಗೆಯ ಕ್ರಮಗಳಷ್ಟೇ ಇರುತ್ತವೆ ಎಂದರ್ಥ. 'ಯೌಕ್ತಃ' ಎಂದರೆ ಯುಕ್ತಿಯಿಂದ ನಿರೂಪ್ಯವಾದ ವಿರೋಧಪ್ರತಿಯೋಗಿಕವಾದ ಪರಿಹಾರ ಎಂದರ್ಥ. 'ತಥಾಪಿ' ಎಂಬ ಪದಕ್ಕೆ 'ಪ್ರಥಮಪಾದದಲ್ಲಿಯೂ ಕೂಡ' ಎಂದರ್ಥ. 'ಸ್ಮೃತೇಃ' ಎಂದರೆ 'ಸ್ಮೃತಿಯ ಅವಿರೋಧವನ್ನು ಮೊದಲು ಪರಿಹರಿಸುತ್ತಿದ್ದಾರೆ' ಎಂದರ್ಥ

**प्रकाशः –** अत्र श्लोके त्रिपादीमात्रोपयोगेऽपि तुरीयस्तूपयोक्ष्यत इति भावेनोपात्तः ।

ಅನುವ್ಯಾಖ್ಯಾನದ ಈ ಶ್ಲೋಕದಲ್ಲಿ ನಾಕನೆಯ ಪಾದವನ್ನು ಇಲ್ಲಿ ಉಲ್ಲೇಖಿಸುವ ಅಗತ್ಯವಿರಲಿಲ್ಲ. ಆದರೂ ಕೂಡ ಮುಂದೆ ಉಪಯೋಗವಾಗುತ್ತದೆಂಬ ಅಭಿಪ್ರಾಯದಿಂದ ಗ್ರಂಥಕಾರರು ಪೂರ್ಣಶ್ಲೋಕವನ್ನು ಉಲ್ಲೇಖಿಸಿದ್ದಾರೆ.

**प्रकाशः** – यद्यप्यत्राध्यायाद्यभिधेयमध्याययोस्सङ्गतिश्चेत्येतावदेव भाति । ननु पादक्रमे बीजमपि । नच तन्मात्र एवोदाहरणम् । तथात्वे क्रमोक्तेः प्रागेवोदाहरणत्वप्रसङ्गात् ।

ವಸ್ತುತಸ್ತು ಈ ಅನುವ್ಯಾಖ್ಯಾನ ಶ್ಲೋಕವನ್ನು ಗಮನಿಸಿದಾಗ ಅಧ್ಯಾಯಸಂಗತಿಯಷ್ಟೇ ಕಾಣಿಸುತ್ತದೆ. ಹೊರತು, ಪಾದಕ್ರಮದಲ್ಲಿ ಬೀಜವನ್ನು ಹೇಳಿದ್ದಾರೆಂದು ಕಾಣುವುದಿಲ್ಲ. ಇನ್ನು ಕೇವಲ ಅಧ್ಯಾಯಸಂಗತಿಗಷ್ಟೇ ಗ್ರಂಥಕಾರರು ಇದನ್ನು ಉಲ್ಲೇಖಿಸಿದ್ದಾರೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಅಧ್ಯಾಯಸಂಗತಿಯನ್ನು ಹೇಳುವಾಗಲೇ ಈ ಅನುವ್ಯಾಖ್ಯಾನ ಶ್ಲೋಕವನ್ನು ಉದಾಹರಿಸಬೇಕಿತ್ತು. ಪಾದಕ್ರಮವನ್ನು ಚಿಂತನೆ ಮಾಡಿದ ಕೊನೆಯಲ್ಲಿ ಇದನ್ನು ಉಲ್ಲೇಖಿಸಿದ್ದು ಅಸಂಗತವಾಗುತ್ತಿತ್ತು.

**प्रकाशः** – तथापि चतुर्विधविरोधमध्ये आदौ यौक्त इत्युक्त्या क्रमोऽपि सूचित इति भावः ।

ಆದರೆ ಈ ಅನುವ್ಯಾಖ್ಯಾನದ ಶ್ಲೋಕವು ಅಧ್ಯಾಯಸಂಗತಿಯ ಜೊತೆಗೆ ಪಾದಕ್ರಮವನ್ನೂ ಕೂಡ ಹೇಳುತ್ತಿದೆ. ಏಕೆಂದರೆ ಚತುರ್ವಿಧವಿರೋಧಗಳ ಮಧ್ಯದಲ್ಲಿ 'ಆದೌ ಯೌಕ್ತಃ' ಎಂದು ಹೇಳಿರುವುದರಿಂದ ಪಾದಕ್ರಮವನ್ನು ಸ್ಪಷ್ಟವಾಗಿ ಹೇಳಿದಂತಾಯಿತು. ಅಂದರೆ ನಾಕುಬಗೆಯ ವಿರೋಧಪರಿಹಾರಗಳಲ್ಲಿ ಯುಕ್ತಿವಿರೋಧಪರಿಹಾರವು ಮೊದಲು ಪ್ರಸಕ್ತವಾಗುತ್ತಿದೆ ಎಂಬ ಒಂದೇ ಮಾತಿನಿಂದ ಈ ಪಾದಗಳಲ್ಲಿರುವ ಕ್ರಮವನ್ನೂ ಕೂಡ ಶ್ರೀಮದಾಚಾರ್ಯರು ಸೂಚನೆ ಮಾಡಿದ್ದಾರೆ ಎಂದು ತಿಳಿಯಬೇಕು.




ಎರಡನೆಯ ಅಧ್ಯಾಯದಲ್ಲಿ ನಾಕು ಬಗೆಯ ವಿರೋಧಗಳನ್ನು ಪರಿಹರಿಸುತ್ತಿದ್ದಾರೆಂದು ತಿಳಿಯಿತು. ಮೊದಲು ಯುಕ್ತಿವಿರೋಧವನ್ನು ಪರಿಹರಿಸಿ ಅನಂತರ ಸಮಯವಿರೋಧವನ್ನೇ ಏಕೆ ಪರಿಹರಿಸಬೇಕು? ಅನಂತರವೇ ಶ್ರುತಿವಿರೋಧವನ್ನು, ತದನಂತರ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಲು ಏನು ಕಾರಣ? ವಿಪರೀತವಾಗಿ ಏಕೆ ಪಾದಗಳ ವಿನ್ಯಾಸವಿರಬಾರದು ? ಈ ಜಿಜ್ಞಾಸೆಗೆ ನಾಕು ಬಗೆಯಲ್ಲಿ ಉತ್ತರವನ್ನು ತಿಳಿಯಬಹುದು-

ಪದಾತ್ಯಾದಿಷು ಭಂಗೇಷು ಗಜಾಶ್ವಾದಿಪ್ರವೃತ್ತಿವತ್ ।
ಯುಕ್ತ್ಯಾದಿಷು ನಿರಸ್ತೇಷು ಸಮಯಾದಿಪ್ರವೃತ್ತಿತಃ ॥೧॥
ಸ್ಮೃತ್ಯಧಿಕರಣ (೨-೧-೧)

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಗಿದೆ ಎಂದು ಹೇಳಿರುತ್ತಾರೆ.

**प्रकाशः – युक्तीति ।।** 'वियदुत्पत्तिमत् विभक्तत्वादल्पशक्तित्वाद्घटवत्' इत्यादियुक्त्यनुगृहीतया ''आकाशस्सम्भूतः'' इत्यादिश्रुत्या ''अनादिर्वा अयमाकाशः'' इति श्रुतिर्गौणीत्यर्थः ।।

ಗ್ರಂಥದಲ್ಲಿ 'ಯುಕ್ತ್ಯನುಗೃಹೀತಯಾ' ಎಂದು ಹೇಳಿದ್ದಾರೆ. ಯುಕ್ತಿ ಎಂದರೆ 'ವಿಯತ್, ಉತ್ಪತ್ತಿಮತ್ ಮತ್ತು ವಿಭಕ್ತಿತ್ವಾತ್, ಅಲ್ಪಶಕ್ತಿತ್ವಾತ್ ಘಟವತ್' ಘಟವು ಅಲ್ಪಶಕ್ತಿಯುಳ್ಳದ್ದಾಗಿದೆ ಮತ್ತು ವಿಭಕ್ತವಾಗಿದೆ. ಮತ್ತು ಉತ್ಪತ್ತಿಯುಳ್ಳದ್ದಾಗಿದೆ. ಅದರಂತೆ ಆಕಾಶವೂ ಕೂಡ ಅಲ್ಪಶಕ್ತಿಯುಳ್ಳದ್ದೂ, ವಿಭಕ್ತವೂ ಆಗಿರುವುದರಿಂದ ಉತ್ಪತ್ತಿವುಳ್ಳದ್ದಾಗಲೇ ಬೇಕು ಎಂಬ ಯುಕ್ತಿಯಿಂದ ಉಪೋದ್ಬಲಿತವಾದ 'ಆಕಾಶಃ ಸಂಭೂತಃ' ಎಂಬ ಶ್ರುತಿಯು ಆಕಾಶಕ್ಕೆ ಉತ್ಪತ್ತಿಯನ್ನು ಸಮರ್ಥನೆ ಮಾಡುತ್ತಿದೆ. ಇದರಿಂದ 'ಅನಾದಿರ್ವಾ ಅಯಮಕಾಶಃ' ಎಂಬ ಆಕಾಶಕ್ಕೆ ಅನಾದಿತ್ವವನ್ನು ಹೇಳುವ ಶ್ರುತಿಗೆ ವಿರೋಧವು ಬರುತ್ತದೆ. ಆದ್ದರಿಂದ 'ಅನಾದಿರ್ವಾ' ಎಂಬ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು ಎಂದಭಿಪ್ರಾಯ.

**प्रकाशः – क्रम इति ।।** निरसनीयशङ्काक्रमात् क्रम इत्यर्थः । भाष्यानुभाष्ययोरैकार्थ्यं दर्शयितुं टीकोक्तेर्मूलमाह – **तदुक्तमिति ।।**

ನಿರಾಕರಣೆ ಮಾಡಲ್ಪಡುವ ಆಶಂಕೆಯಲ್ಲಿರುವ ಕ್ರಮವನ್ನು ಅನುಸರಿಸಿ ಪಾದಗಳ ಕ್ರಮವು ಹೊರಟಿರುತ್ತದೆ ಎಂದರ್ಥ. ಭಾಷ್ಯ ಹಾಗೂ ಅನುವ್ಯಾಖ್ಯಾನಗಳು ಒಂದೇ ಅಭಿಪ್ರಾಯದಿಂದ ಹೊರಟವೆ ಎಂಬುದನ್ನು ತೋರಿಸಲು ಮೂಲಪ್ರಮಾಣವನ್ನು 'ತದುಕ್ತಮ್' ಎಂಬುದರಿಂದ ತೋರಿಸುತ್ತಿದ್ದಾರೆ.

**प्रकाशः –** ''पूर्वेणोक्तः'' इत्यादिनोक्तं प्रमेयमित्यर्थः । चतुर्विधस्येति निर्धारणे षष्ठी । यौक्तः युक्तिनिरूप्यविरोधप्रतियोगिक इत्यर्थः । तथापि प्रथमपादेऽपि । स्मृतेः अविरोधस्साध्यत इत्यर्थः ।

'ಪೂರ್ವೇಣೋಕ್ತಃ' ಎಂಬಲ್ಲಿಂದ ಪ್ರಾರಂಭಿಸಿ ಹೇಳಿದ ಪ್ರಮೇಯವನ್ನು ಎಂದರ್ಥ. 'ಚತುರ್ವಿಧಸ್ಯ' ಎಂಬಲ್ಲಿರುವ ಷಷ್ಠೀವಿಭಕ್ತಿಯು ನಿರ್ಧಾರಾರ್ಥದಲ್ಲಿ ಪ್ರಯುಕ್ತವಾಗಿದೆ. ನಾಕುಬಗೆಯ ಕ್ರಮಗಳಷ್ಟೇ ಇರುತ್ತವೆ ಎಂದರ್ಥ. 'ಯೌಕ್ತಃ' ಎಂದರೆ ಯುಕ್ತಿಯಿಂದ ನಿರೂಪ್ಯವಾದ ವಿರೋಧಪ್ರತಿಯೋಗಿಕವಾದ ಪರಿಹಾರ ಎಂದರ್ಥ. 'ತಥಾಪಿ' ಎಂಬ ಪದಕ್ಕೆ 'ಪ್ರಥಮಪಾದದಲ್ಲಿಯೂ ಕೂಡ' ಎಂದರ್ಥ. 'ಸ್ಮೃತೇಃ' ಎಂದರೆ 'ಸ್ಮೃತಿಯ ಅವಿರೋಧವನ್ನು ಮೊದಲು ಪರಿಹರಿಸುತ್ತಿದ್ದಾರೆ' ಎಂದರ್ಥ

**प्रकाशः –** अत्र श्लोके त्रिपादीमात्रोपयोगेऽपि तुरीयस्तूपयोक्ष्यत इति भावेनोपात्तः ।

ಅನುವ್ಯಾಖ್ಯಾನದ ಈ ಶ್ಲೋಕದಲ್ಲಿ ನಾಕನೆಯ ಪಾದವನ್ನು ಇಲ್ಲಿ ಉಲ್ಲೇಖಿಸುವ ಅಗತ್ಯವಿರಲಿಲ್ಲ. ಆದರೂ ಕೂಡ ಮುಂದೆ ಉಪಯೋಗವಾಗುತ್ತದೆಂಬ ಅಭಿಪ್ರಾಯದಿಂದ ಗ್ರಂಥಕಾರರು ಪೂರ್ಣಶ್ಲೋಕವನ್ನು ಉಲ್ಲೇಖಿಸಿದ್ದಾರೆ.

**प्रकाशः** – यद्यप्यत्राध्यायाद्यभिधेयमध्याययोस्सङ्गतिश्चेत्येतावदेव भाति । नतु पादक्रमे बीजमपि । नच तन्मात्र एवोदाहरणम् । तथात्वे क्रमोक्तेः प्रागेवोदाहरणत्वप्रसङ्गात् ।

ವಸ್ತುತಸ್ತು ಈ ಅನುವ್ಯಾಖ್ಯಾನ ಶ್ಲೋಕವನ್ನು ಗಮನಿಸಿದಾಗ ಅಧ್ಯಾಯಸಂಗತಿಯಷ್ಟೇ ಕಾಣಿಸುತ್ತದೆ. ಹೊರತು, ಪಾದಕ್ರಮದಲ್ಲಿ ಬೀಜವನ್ನು ಹೇಳಿದ್ದಾರೆಂದು ಕಾಣುವುದಿಲ್ಲ. ಇನ್ನು ಕೇವಲ ಅಧ್ಯಾಯಸಂಗತಿಗಷ್ಟೇ ಗ್ರಂಥಕಾರರು ಇದನ್ನು ಉಲ್ಲೇಖಿಸಿದ್ದಾರೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಅಧ್ಯಾಯಸಂಗತಿಯನ್ನು ಹೇಳುವಾಗಲೇ ಈ ಅನುವ್ಯಾಖ್ಯಾನ ಶ್ಲೋಕವನ್ನು ಉದಾಹರಿಸಬೇಕಿತ್ತು. ಪಾದಕ್ರಮವನ್ನು ಚಿಂತನೆ ಮಾಡಿದ ಕೊನೆಯಲ್ಲಿ ಇದನ್ನು ಉಲ್ಲೇಖಿಸಿದ್ದು ಅಸಂಗತವಾಗುತ್ತಿತ್ತು.

**प्रकाशः** – तथापि चतुर्विधविरोधमध्ये आदौ यौक्त इत्युक्त्या क्रमोऽपि सूचित इति भावः ।

ಆದರೆ ಈ ಅನುವ್ಯಾಖ್ಯಾನದ ಶ್ಲೋಕವು ಅಧ್ಯಾಯಸಂಗತಿಯ ಜೊತೆಗೆ ಪಾದಕ್ರಮವನ್ನೂ ಕೂಡ ಹೇಳುತ್ತಿದೆ. ಏಕೆಂದರೆ ಚತುರ್ವಿಧವಿರೋಧಗಳ ಮಧ್ಯದಲ್ಲಿ 'ಆದೌ ಯೌಕ್ತಃ' ಎಂದು ಹೇಳಿರುವುದರಿಂದ ಪಾದಕ್ರಮವನ್ನು ಸ್ಪಷ್ಟವಾಗಿ ಹೇಳಿದಂತಾಯಿತು. ಅಂದರೆ ನಾಕುಬಗೆಯ ವಿರೋಧಪರಿಹಾರಗಳಲ್ಲಿ ಯುಕ್ತಿವಿರೋಧಪರಿಹಾರವು ಮೊದಲು ಪ್ರಸಕ್ತವಾಗುತ್ತಿದೆ ಎಂಬ ಒಂದೇ ಮಾತಿನಿಂದ ಈ ಪಾದಗಳಲ್ಲಿರುವ ಕ್ರಮವನ್ನೂ ಕೂಡ ಶ್ರೀಮದಾಚಾರ್ಯರು ಸೂಚನೆ ಮಾಡಿದ್ದಾರೆ ಎಂದು ತಿಳಿಯಬೇಕು.




ಎರಡನೆಯ ಅಧ್ಯಾಯದಲ್ಲಿ ನಾಕು ಬಗೆಯ ವಿರೋಧಗಳನ್ನು ಪರಿಹರಿಸುತ್ತಿದ್ದಾರೆಂದು ತಿಳಿಯಿತು. ಮೊದಲು ಯುಕ್ತಿವಿರೋಧವನ್ನು ಪರಿಹರಿಸಿ ಅನಂತರ ಸಮಯವಿರೋಧವನ್ನೇ ಏಕೆ ಪರಿಹರಿಸಬೇಕು? ಅನಂತರವೇ ಶ್ರುತಿವಿರೋಧವನ್ನು, ತದನಂತರ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಲು ಏನು ಕಾರಣ? ವಿಪರೀತವಾಗಿ ಏಕೆ ಪಾದಗಳ ವಿನ್ಯಾಸವಿರಬಾರದು ? ಈ ಜಿಜ್ಞಾಸೆಗೆ ನಾಕು ಬಗೆಯಲ್ಲಿ ಉತ್ತರವನ್ನು ತಿಳಿಯಬಹುದು-

ಪದಾತ್ಯಾದಿಷು ಭಂಗೇಷು ಗಜಾಶ್ವಾದಿಪ್ರವೃತ್ತಿವತ್ ।
ಯುಕ್ತ್ಯಾದಿಷು ನಿರಸ್ತೇಷು ಸಮಯಾದಿಪ್ರವೃತ್ತಿತಃ ॥೧॥
ಸ್ಮೃತ್ಯಧಿಕರಣ (೨-೧-೧)

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಗಿದೆ ಎಂದು ಹೇಳಿರುತ್ತಾರೆ.

**प्रकाशः – युक्तीति ।।** 'वियदुत्पत्तिमत् विभक्तत्वादल्पशक्तित्वाद्घटवत्' इत्यादियुक्त्यनुगृहीतया ''आकाशस्सम्भूतः'' इत्यादिश्रुत्या ''अनादिर्वा अयमाकाशः'' इति श्रुतिर्गौणीत्यर्थः ।।

ಗ್ರಂಥದಲ್ಲಿ 'ಯುಕ್ತ್ಯನುಗೃಹೀತಯಾ' ಎಂದು ಹೇಳಿದ್ದಾರೆ. ಯುಕ್ತಿ ಎಂದರೆ 'ವಿಯತ್, ಉತ್ಪತ್ತಿಮತ್ ಮತ್ತು ವಿಭಕ್ತತ್ವಾತ್, ಅಲ್ಪಶಕ್ತಿತ್ವಾತ್ ಘಟವತ್' ಘಟವು ಅಲ್ಪಶಕ್ತಿಯುಳ್ಳದ್ದಾಗಿದೆ ಮತ್ತು ವಿಭಕ್ತವಾಗಿದೆ. ಮತ್ತು ಉತ್ಪತ್ತಿಯುಳ್ಳದ್ದಾಗಿದೆ. ಅದರಂತೆ ಆಕಾಶವೂ ಕೂಡ ಅಲ್ಪಶಕ್ತಿಯುಳ್ಳದ್ದೂ, ವಿಭಕ್ತವೂ ಆಗಿರುವುದರಿಂದ ಉತ್ಪತ್ತಿವುಳ್ಳದ್ದಾಗಲೇ ಬೇಕು ಎಂಬ ಯುಕ್ತಿಯಿಂದ ಉಪೋದ್ಬಲಿತವಾದ 'ಆಕಾಶಃ ಸಂಭೂತಃ' ಎಂಬ ಶ್ರುತಿಯು ಆಕಾಶಕ್ಕೆ ಉತ್ಪತ್ತಿಯನ್ನು ಸಮರ್ಥನೆ ಮಾಡುತ್ತಿದೆ. ಇದರಿಂದ 'ಅನಾದಿರ್ವಾ ಅಯಮಕಾಶಃ' ಎಂಬ ಆಕಾಶಕ್ಕೆ ಅನಾದಿತ್ವವನ್ನು ಹೇಳುವ ಶ್ರುತಿಗೆ ವಿರೋಧವು ಬರುತ್ತದೆ. ಆದ್ದರಿಂದ 'ಅನಾದಿರ್ವಾ' ಎಂಬ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು ಎಂದಭಿಪ್ರಾಯ.

**प्रकाशः – क्रम इति ।।** निरसनीयशङ्काक्रमात् क्रम इत्यर्थः । भाष्यानुभाष्ययोरैकार्थ्यं दर्शयितुं टीकोक्तेर्मूलमाह – **तदुक्तमिति ।।**

ನಿರಾಕರಣೆ ಮಾಡಲ್ಪಡುವ ಆಶಂಕೆಯಲ್ಲಿರುವ ಕ್ರಮವನ್ನು ಅನುಸರಿಸಿ ಪಾದಗಳ ಕ್ರಮವು ಹೊರಟಿರುತ್ತದೆ ಎಂದರ್ಥ. ಭಾಷ್ಯ ಹಾಗೂ ಅನುವ್ಯಾಖ್ಯಾನಗಳು ಒಂದೇ ಅಭಿಪ್ರಾಯದಿಂದ ಹೊರಟಿವೆ ಎಂಬುದನ್ನು ತೋರಿಸಲು ಮೂಲಪ್ರಮಾಣವನ್ನು 'ತದುಕ್ತಮ್' ಎಂಬುದರಿಂದ ತೋರಿಸುತ್ತಿದ್ದಾರೆ.

**प्रकाशः –** ''पूर्वेणोक्तः'' इत्यादिनोक्तं प्रमेयमित्यर्थः । चतुर्विधस्येति निर्धारणे षष्ठी । यौक्तः युक्तिनिरूप्यविरोधप्रतियोगिक इत्यर्थः । तथापि प्रथमपादेऽपि । स्मृतेः अविरोधस्साध्यत इत्यर्थः ।

'ಪೂರ್ವೇಣೋಕ್ತಃ' ಎಂಬಲ್ಲಿಂದ ಪ್ರಾರಂಭಿಸಿ ಹೇಳಿದ ಪ್ರಮೇಯವನ್ನು ಎಂದರ್ಥ. 'ಚತುರ್ವಿಧಸ್ಯ' ಎಂಬಲ್ಲಿರುವ ಷಷ್ಠೀವಿಭಕ್ತಿಯು ನಿರ್ಧಾರಾರ್ಥದಲ್ಲಿ ಪ್ರಯುಕ್ತವಾಗಿದೆ. ನಾಕುಬಗೆಯ ಕ್ರಮಗಳಷ್ಟೇ ಇರುತ್ತವೆ ಎಂದರ್ಥ. 'ಯೌಕ್ತಃ' ಎಂದರೆ ಯುಕ್ತಿಯಿಂದ ನಿರೂಪ್ಯವಾದ ವಿರೋಧಪ್ರತಿಯೋಗಿಕವಾದ ಪರಿಹಾರ ಎಂದರ್ಥ. 'ತಥಾಪಿ' ಎಂಬ ಪದಕ್ಕೆ 'ಪ್ರಥಮಪಾದದಲ್ಲಿಯೂ ಕೂಡ' ಎಂದರ್ಥ. 'ಸ್ಮೃತೇಃ' ಎಂದರೆ 'ಸ್ಮೃತಿಯ ಅವಿರೋಧವನ್ನು ಮೊದಲು ಪರಿಹರಿಸುತ್ತಿದ್ದಾರೆ' ಎಂದರ್ಥ

**प्रकाशः –** अत्र श्लोके त्रिपादीमात्रोपयोगेऽपि तुरीयस्तूपयोक्ष्यत इति भावेनोपात्तः ।

ಅನುವ್ಯಾಖ್ಯಾನದ ಈ ಶ್ಲೋಕದಲ್ಲಿ ನಾಕನೆಯ ಪಾದವನ್ನು ಇಲ್ಲಿ ಉಲ್ಲೇಖಿಸುವ ಅಗತ್ಯವಿರಲಿಲ್ಲ. ಆದರೂ ಕೂಡ ಮುಂದೆ ಉಪಯೋಗವಾಗುತ್ತದೆಂಬ ಅಭಿಪ್ರಾಯದಿಂದ ಗ್ರಂಥಕಾರರು ಪೂರ್ಣಶ್ಲೋಕವನ್ನು ಉಲ್ಲೇಖಿಸಿದ್ದಾರೆ.

**प्रकाशः** – यद्यप्यत्राध्यायाद्यभिधेयमध्याययोस्सङ्गतिश्चेत्येतावदेव भाति । नतु पादक्रमे बीजमपि । नच तन्मात्र एवोदाहरणम् । तथात्वे क्रमोक्तेः प्रागेवोदाहरणत्वप्रसङ्गात् ।

ವಸ್ತುತಸ್ತು ಈ ಅನುವ್ಯಾಖ್ಯಾನ ಶ್ಲೋಕವನ್ನು ಗಮನಿಸಿದಾಗ ಅಧ್ಯಾಯಸಂಗತಿಯಷ್ಟೇ ಕಾಣಿಸುತ್ತದೆ. ಹೊರತು, ಪಾದಕ್ರಮದಲ್ಲಿ ಬೀಜವನ್ನು ಹೇಳಿದ್ದಾರೆಂದು ಕಾಣುವುದಿಲ್ಲ. ಇನ್ನು ಕೇವಲ ಅಧ್ಯಾಯಸಂಗತಿಗಷ್ಟೇ ಗ್ರಂಥಕಾರರು ಇದನ್ನು ಉಲ್ಲೇಖಿಸಿದ್ದಾರೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಅಧ್ಯಾಯಸಂಗತಿಯನ್ನು ಹೇಳುವಾಗಲೇ ಈ ಅನುವ್ಯಾಖ್ಯಾನ ಶ್ಲೋಕವನ್ನು ಉದಾಹರಿಸಬೇಕಿತ್ತು. ಪಾದಕ್ರಮವನ್ನು ಚಿಂತನೆ ಮಾಡಿದ ಕೊನೆಯಲ್ಲಿ ಇದನ್ನು ಉಲ್ಲೇಖಿಸಿದ್ದು ಅಸಂಗತವಾಗುತ್ತಿತ್ತು.

**प्रकाशः** – तथापि चतुर्विधविरोधमध्ये आदौ यौक्त इत्युक्त्या क्रमोऽपि सूचित इति भावः ।

ಆದರೆ ಈ ಅನುವ್ಯಾಖ್ಯಾನದ ಶ್ಲೋಕವು ಅಧ್ಯಾಯಸಂಗತಿಯ ಜೊತೆಗೆ ಪಾದಕ್ರಮವನ್ನೂ ಕೂಡ ಹೇಳುತ್ತಿದೆ. ಏಕೆಂದರೆ ಚತುರ್ವಿಧವಿರೋಧಗಳ ಮಧ್ಯದಲ್ಲಿ 'ಆದೌ ಯೌಕ್ತಃ' ಎಂದು ಹೇಳಿರುವುದರಿಂದ ಪಾದಕ್ರಮವನ್ನು ಸ್ಪಷ್ಟವಾಗಿ ಹೇಳಿದಂತಾಯಿತು. ಅಂದರೆ ನಾಕುಬಗೆಯ ವಿರೋಧಪರಿಹಾರಗಳಲ್ಲಿ ಯುಕ್ತಿವಿರೋಧಪರಿಹಾರವು ಮೊದಲು ಪ್ರಸಕ್ತವಾಗುತ್ತಿದೆ ಎಂಬ ಒಂದೇ ಮಾತಿನಿಂದ ಈ ಪಾದಗಳಲ್ಲಿರುವ ಕ್ರಮವನ್ನೂ ಕೂಡ ಶ್ರೀಮದಾಚಾರ್ಯರು ಸೂಚನೆ ಮಾಡಿದ್ದಾರೆ ಎಂದು ತಿಳಿಯಬೇಕು.




ಎರಡನೆಯ ಅಧ್ಯಾಯದಲ್ಲಿ ನಾಕು ಬಗೆಯ ವಿರೋಧಗಳನ್ನು ಪರಿಹರಿಸುತ್ತಿದ್ದಾರೆಂದು ತಿಳಿಯಿತು. ಮೊದಲು ಯುಕ್ತಿವಿರೋಧವನ್ನು ಪರಿಹರಿಸಿ ಅನಂತರ ಸಮಯವಿರೋಧವನ್ನೇ ಏಕೆ ಪರಿಹರಿಸಬೇಕು? ಅನಂತರವೇ ಶ್ರುತಿವಿರೋಧವನ್ನು, ತದನಂತರ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಲು ಏನು ಕಾರಣ? ವಿಪರೀತವಾಗಿ ಏಕೆ ಪಾದಗಳ ವಿನ್ಯಾಸವಿರಬಾರದು ? ಈ ಜಿಜ್ಞಾಸೆಗೆ ನಾಕು ಬಗೆಯಲ್ಲಿ ಉತ್ತರವನ್ನು ತಿಳಿಯಬಹುದು-

ಪದಾತ್ಯಾದಿಷು ಭಂಗೇಷು ಗಜಾಶ್ವಾದಿಪ್ರವೃತ್ತಿವತ್ ।
ಯುಕ್ತ್ಯಾದಿಷು ನಿರಸ್ತೇಷು ಸಮಯಾದಿಪ್ರವೃತ್ತಿತಃ ॥೧॥
ಸ್ಮೃತ್ಯಧಿಕರಣ (೨-೧-೧)

ಮಹಾಯುದ್ಧದಲ್ಲಿ ಮೊದಲು ಸೈನಿಕರು ಸತ್ತ ಮೇಲೆ ಆನೆ, ಕುದುರೆ ಮೊದಲಾದವುಗಳು ಪ್ರವೃತ್ತಿ ಮಾಡುತ್ತವೆ. ಕಡಿಮೆ ಶಕ್ತಿಯಿರುವವರು ಮೊದಲು ಯುದ್ಧ ಮಾಡಿ, ಹೆಚ್ಚಿನ ಶಕ್ತಿಯಿರುವವರು ಅನಂತರ ಯುದ್ಧಕ್ಕೆ ಬರುತ್ತಾರೆ. ಅದೇ ರೀತಿಯಲ್ಲಿ ದುರ್ಬಲವಾದ ಯುಕ್ತಿ ಮೊದಲಾದವುಗಳನ್ನು ಮೊದಲು ನಿರಾಕರಣೆ ಮಾಡಿದ ಮೇಲೆ ಹೆಚ್ಚು ಬಲಿಷ್ಠವಾದ ಸಮಯ, ಶ್ರುತಿ ಇವುಗಳ ವಿರೋಧವು ಪ್ರವೃತ್ತವಾಗುತ್ತವೆ. ಅತ್ಯಂತ ದುರ್ಬಲವಾದ ಅನುಮಾನವಿರೋಧವು ಮೊದಲು ನಿರಸ್ತವಾಗುತ್ತದೆ. ಅದಕ್ಕಿಂತ ಹೆಚ್ಚು ಪ್ರಬಲವಾದ ಸಮಯವಿರೋಧವು ಅನಂತರ ಪ್ರಾಪ್ತವಾಗುತ್ತದೆ. ಅದಕ್ಕಿಂತಲೂ ಹೆಚ್ಚು ಬಲಿಷ್ಠವಾದ ಶ್ರುತಿವಿರೋಧವು ತದನಂತರ ಪ್ರಸಕ್ತವಾಗುತ್ತದೆ. ಈ ಎಲ್ಲದಕ್ಕಿಂತ ಅತ್ಯಂತ ಬಲಶಾಲಿಯಾದ ಯುಕ್ತಿಸಹಿತವಾದ ಶ್ರುತಿವಿರೋಧವು ಕೊನೆಯಲ್ಲಿ ಪ್ರಾಪ್ತವಾಗುತ್ತದೆ. ಸೋಪಾನಾರೋಹಣ ಕ್ರಮದಿಂದಲೇ ದುರ್ಬಲವಾದ ವಿರೋಧಗಳನ್ನು ಮೊದಲು ಪರಿಹರಿಸಿ, ಬಲಿಷ್ಠವಾದ ವಿರೋಧವನ್ನು ಅನಂತರ ಪರಿಹರಿಸಿದ್ದಾರೆ.

ಮತ್ತೊಂದು ಬಗೆಯಲ್ಲಿಯೂ ಪಾದಕ್ರಮದ ವಿನ್ಯಾಸದ ಸ್ವಾರಸ್ಯವನ್ನು ತಿಳಿಯಬಹುದು -

ಬಹಿರಂಗೈರ್ವಿರೋಧೋ ಹಿ ಝಟಿತ್ಯೇವ ಪ್ರತೀಯತೇ ।
ಅಂತರಂಗೈಃ ಸ್ವಗೌತ್ರೈಸ್ತು ವಿಲಂಬೇನ ಪ್ರತೀಯತೇ ॥೧॥

ನಮ್ಮ ಜೀವನದಲ್ಲಿ ಬೇರೆಯವರು ವಿರೋಧ ಮಾಡಿದರೆ ಕೂಡಲೇ ತಿಳಿಯುತ್ತದೆ. ಆದರೆ ನಮ್ಮ ಗೋತ್ರದವರೇ ಆದ ಮನೆಮಂದಿಯೇ ವಿರೋಧ ಮಾಡಿದರೆ ಕೂಡಲೇ ತಿಳಿಯುವುದಿಲ್ಲ. ವಿಳಂಬವಾಗಿ ಅರ್ಥವಾಗುತ್ತದೆ. ಹೀಗೆ - ಬಹಿರಂಗವಿರೋಧಕ್ಕಿಂತ ಅಂತರಂಗವಿರೋಧವು ಬಲಿಷ್ಠವಾಗಿದೆ. ಅನುಮಾನವು ಶಬ್ದಕ್ಕಿಂತ ಬರ್ಹಿಭೂತವಾದ್ದರಿಂದ ಬಹಿರಂಗವಾಗಿದೆ. ಅತ್ಯಂತ ಬಹಿರಂಗವಾದ ಅನುಮಾನದಲ್ಲಿ ಯಾವುದೇ ಪ್ರಾಬಲ್ಯವಿರುವುದಿಲ್ಲ. ಆದ್ದರಿಂದ ಮೊದಲು ಇದರ ವಿರೋಧವನ್ನು ಪರಿಹರಿಸಿದ್ದಾರೆ. ಅನಂತರ ಸಮಯಗಳು ಶಬ್ದದಲ್ಲಿಯೇ ಸೇರುತ್ತವೆ. ಆದರೆ ಅಪೌರುಷೇಯವಲ್ಲದ ಕಾರಣ ಒಂದು ರೀತಿಯಲ್ಲಿ ಬಹಿರಂಗವೇ ಆಗುತ್ತದೆ. ಆದ್ದರಿಂದ ಅನುಮಾನವನ್ನು ನಿರಾಕರಣೆ ಮಾಡಿದ ಮೇಲೆ ಸಮಯಗಳ ವಿರೋಧವನ್ನು ಪರಿಹರಿಸಿದ್ದಾರೆ. ಕೇವಲ ಶ್ರುತಿಗಳು ಶಬ್ದಪ್ರಮಾಣದಲ್ಲಿ ಸೇರುವುದರಿಂದ ಅಂತರಂಗವಾಗಿವೆ. ಆದರೂ ಕೂಡ ಯಾವುದೇ ಯುಕ್ತಿಗಳ ಬೆಂಬಲವಿಲ್ಲದ ಕಾರಣ ಅಂತರಂಗವಾಗಿದ್ದರೂ ಕೂಡ ದುರ್ಬಲವೇ ಆಗಿವೆ. ಸಮಯಗಳಿಗಿಂತಲೂ ಹೆಚ್ಚು ಬಲಿಷ್ಠವಾದ್ದರಿಂದ ಮೂರನೆಯ ಪಾದದಲ್ಲಿ ಶ್ರುತಿವಿರೋಧವನ್ನು ಪರಿಹರಿಸಿದ್ದಾರೆ. ಕೇವಲ ಶ್ರುತಿಗಳಿಗಿಂತಲೂ ಯುಕ್ತಿಸಹಿತವಾದ ಶ್ರುತಿಗಳು ಇನ್ನೂ ಹೆಚ್ಚು ಬಲಿಷ್ಠವಾದ್ದರಿಂದ ನಾಕನೆಯ ಪಾದದಲ್ಲಿ ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಿದ್ದಾರೆ. ಹೀಗೆ ಬಹಿರಂಗವಿರೋಧದ ಅನಂತರವೇ ಬಲಿಷ್ಠವಾದ ಅಂತರಂಗವಿರೋಧವನ್ನು ಪರಿಹರಿಸುವ ಉದ್ದೇಶದಿಂದ ಪಾದಗಳ ವಿನ್ಯಾಸಕ್ರಮವು ಇರುತ್ತದೆ.

ಅಥವಾ ಯುಕ್ತಿಗಳನ್ನು ಅತ್ಯಂತ ದುರ್ಬಲವೆಂದು, ಅಥವಾ ಯುಕ್ತಿಗಳೇ ಹೆಚ್ಚು ಬಲಿಷ್ಠವೆಂದೂ ಕೂಡ ತಿಳಿಯಬಹುದು. ಕಾರಣವೇನೆಂದರೆ ಎಲ್ಲಾ ವಿರೋಧಗಳೂ ಕೂಡ ಯುಕ್ತಿಮೂಲಕವೇ ಆಗಿರುತ್ತವೆ. ಬ್ರಹ್ಮಮೀಮಾಂಸಾಶಾಸ್ತ್ರವೂ ಕೂಡ ಯುಕ್ತಿಯ ಮೂಲಕವೇ ಹೊರಟಿರುತ್ತದೆ. ಸಮಯಗಳೂ ಕೂಡ ಯುಕ್ತಿಮೂಲಕವೇ ಆಗಿದೆ. ಶ್ರುತಿಗಳೂ ಕೂಡ ಯುಕ್ತಿಮೂಲಕವೇ ಆಗಿವೆ. ಆದ್ದರಿಂದ ಎಲ್ಲವೂ ಕೂಡ ಯುಕ್ತಿಯನ್ನೇ ಆಶ್ರಯಿಸಿರುವುದರಿಂದ ಯುಕ್ತಿಯು ಅತ್ಯಂತ ಬಲಿಷ್ಠ. ಮತ್ತು ಈ ಯುಕ್ತಿಯಿಂದ ಸಮಗ್ರ ವೇದವನ್ನೇ ಅಪ್ರಮಾಣವೆಂದು ಸಾಧಿಸಲು ಬರುತ್ತದೆ. 'ವೇದಃ ಅಪ್ರಮಾಣಂ ಆಪ್ತ-ಅಪ್ರಣೀತತ್ವಾತ್' ಎಂಬ ಒಂದೇ

ಯುಕ್ತಿಯಿಂದ ಸಮಗ್ರ ವೇದಕ್ಕೆ ಅಪ್ರಾಮಾಣ್ಯ ಬರುತ್ತದೆ. ಅಷ್ಟೇ ಅಲ್ಲದೇ ಎಲ್ಲಾ ದಾರ್ಶನಿಕರೂ ಕೂಡ ಯುಕ್ತಿಯನ್ನು ಪ್ರಮಾಣವೆಂದು ಒಪ್ಪಿರುತ್ತಾರೆ. ಆದ್ದರಿಂದ ಸಮಯವಿರೋಧಕ್ಕಿಂತಲೂ ಯುಕ್ತಿವಿರೋಧವು ಹೆಚ್ಚು ಬಲಿಷ್ಠ. ಅತ್ಯಂತ ಬಲಿಷ್ಠವಾದ ಯುಕ್ತಿವಿರೋಧವನ್ನು ಪ್ರಥಮಪಾದದಲ್ಲಿ ನಿರಾಕರಣೆ ಮಾಡುವುದು ಹೆಚ್ಚು ಸೂಕ್ತ. ಅನಂತರ ಸಮಯವಿರೋಧವೂ ಪ್ರಸಕ್ತವಾಗುತ್ತದೆ. ಏಕೆಂದರೆ ವೇದವು ಅಪೌರುಷೇಯವಾದ್ದರಿಂದ ಆಪ್ತಪ್ರಣೀತವಲ್ಲದ ಕಾರಣ ಪ್ರಾಮಾಣ್ಯವನ್ನು ಸುಲಭವಾಗಿ ಸಮರ್ಥಿಸಲು ಬರುವುದಿಲ್ಲ. ಆದರೆ ಎಲ್ಲಾ ಸಮಯಿಗಳು ರಚನೆ ಮಾಡಿರುವ ಶಾಸ್ತ್ರಗಳು ಆಪ್ತೋಕ್ತವಾದ್ದರಿಂದ ಪ್ರಮಾಣವಾಗುತ್ತದೆ. ಮತ್ತು ಬಹುಜನಪರಿಗೃಹೀತವಾಗಿಯೂ ಅನಾದಿಕಾಲದಿಂದ ಅವಿಚ್ಛಿನ್ನಪರಂಪರೆಯಿಂದಲೂ ಬಂದಿರುತ್ತವೆ. ಮತ್ತು ಶ್ರುತಿಗಳಲ್ಲಿ ತೋರುವ ವಿರೋಧವು ಕೇವಲ ಆಪಾತತಃ ಭಾಸವಾಗುತ್ತದೆ ಹೊರತು, ಸ್ಪಷ್ಟವಾಗಿ ವಿರೋಧವು ಕಾಣಿಸುವುದಿಲ್ಲ. ಆದರೆ ಸಮಯಗಳ ವಿರೋಧವು ಅತ್ಯಂತ ಸ್ಪಷ್ಟವಾಗಿರುವುದರಿಂದ ಶ್ರುತಿವಿರೋಧಕ್ಕಿಂತಲೂ ಸಮಯವಿರೋಧವು ಹೆಚ್ಚು ಬಲಿಷ್ಠವಾಗಿರುತ್ತದೆ. ಆದ್ದರಿಂದ ಶ್ರುತಿವಿರೋಧಕ್ಕಿಂತ ಮೊದಲು ಎರಡನೆಯ ಪಾದದಲ್ಲಿ ಸಮಯವಿರೋಧವನ್ನು ಪರಿಹರಿಸಿದ್ದಾರೆ. ಅನಂತರ ಶ್ರುತಿವಿರೋಧವನ್ನು ಮೂರನೆಯ ಪಾದದಲ್ಲಿ ಪರಿಹರಿಸಿದ್ದಾರೆ. ಹೀಗೆ ಮಹಾಮಲ್ಲಭಂಗನ್ಯಾಯದಿಂದ ಪಾದಕ್ರಮವನ್ನು ತಿಳಿಯಬೇಕು. ನಾಕನೆಯ ಪಾದವನ್ನು ಬಿಟ್ಟು, ಉಳಿದ ಮೂರು ಪಾದಗಳಲ್ಲಷ್ಟೇ ಈ ಮಹಾಮಲ್ಲಭಂಗನ್ಯಾಯವನ್ನು ವಿವಕ್ಷಿಸಬೇಕು. ಏಕೆಂದರೆ ನಾಕನೆಯ ಪಾದವು ಯುಕ್ತಿಸಹಿತವಾದ ಶ್ರುತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಇವೆಲ್ಲದಕ್ಕಿಂತಲೂ ಶ್ರೇಷ್ಠವಾಗಿದೆ. ಮತ್ತು ಮುಮುಕ್ಷು ಆದವನು ಅಂತಿಮವಾಗಿ ತಿಳಿಯಬೇಕಾದ ಅಧ್ಯಾತ್ಮವಿಷಯದಲ್ಲಿ ಪ್ರವೃತ್ತವಾಗುವುದರಿಂದ ಕೊನೆಯಲ್ಲಿಯೇ ಅದು ಪ್ರಸಕ್ತವಾಗುತ್ತದೆ.

ಅಥವಾ ಸೋಪಾನಾರೋಹಣಕ್ರಮನ್ಯಾಯದಿಂದಲಾಗಲೀ, ಮಹಾಮಲ್ಲಭಂಗನ್ಯಾಯದಿಂದಾಗಲೀ, ಪಾದಕ್ರಮವನ್ನು ಚಿಂತಿಸುವ ಅಗತ್ಯವಿಲ್ಲ. ಪ್ರಪಂಚ್ಯಪ್ರಪಂಚಕಭಾವಸಂಗತಿಯಿಂದಲೇ ಪಾದಕ್ರಮವನ್ನು ತಿಳಿಯಬಹುದು. ಯುಕ್ತಿವಿರೋಧವಂತೂ ಈಗಾಗಲೇ ಹೇಳಿದಂತೆ ಬಹಳ ಬಲಿಷ್ಠವಾಗಿರುತ್ತದೆ ಆದ್ದರಿಂದ ಮೊದಲು ಅದರ ಪರಿಹಾರವನ್ನು ಮಾಡುವುದು ಸಂಗತವೇ ಆಗಿದೆ ಎಂಬ ವಿಷಯದಲ್ಲಿ ವಿವಾದವಿಲ್ಲ. ಅನಂತರ ಸಮಯವಿರೋಧವೇ ಏಕೆ ಪ್ರಸಕ್ತವಾಗಿದೆ ಎಂದರೆ ಸ್ಮೃತ್ಯಧಿಕರಣದಲ್ಲಿಯೇ ಇರುವ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾರೆ. ಇದರ ವಿವರಣೆಗಾಗಿಯೇ ಸಮಯಪಾದ ಹೊರಟಿದೆ. ಅನಂತರ 'ವಿಪ್ರತಿಷೇಧಾಚ್ಚ' ಎಂಬ ಸಮಯಪಾದದ ಕೊನೆಯ ಸೂತ್ರದಲ್ಲಿ ಪರಸ್ಪರ ಎಲ್ಲಾ ಮತಗಳಲ್ಲಿ ವಿರೋಧವನ್ನು ಹೇಳಿ, ಅಪ್ರಾಮಾಣ್ಯವನ್ನು ಸಾಧಿಸಿದ್ದಾರೆ. ಇದೇ ನ್ಯಾಯದಿಂದ ಶ್ರುತಿಗಳಲ್ಲಿಯೂ ಕೂಡ ಅಪ್ರಾಮಾಣ್ಯವು ಬರುತ್ತದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಲು ಶ್ರುತಿವಿರೋಧಪರಿಹಾರಕ್ಕಾಗಿ ಮೂರನೆಯ ಪಾದ ಹೊರಟಿದೆ. ಅನಂತರ 'ಯಾವದ್ವಿಕಾರಂ ತು ವಿಭಾಗೋ ಲೋಕವತ್' ಎಂಬ ಸೂತ್ರದಲ್ಲಿ ಯುಕ್ತಿಸಹಿತವಾದ ಶ್ರುತಿಯಿಂದ ಮತ್ತೊಂದು ಶ್ರುತಿಗೆ ಗೌಣಾರ್ಥವನ್ನು ಮಾಡುವುದಾದರೆ, ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳುವ ಶ್ರುತಿಗೂ ಕೂಡ ಗೌಣಾರ್ಥವನ್ನು ಮಾಡಬೇಕಾಗುತ್ತದೆ ಎಂಬ ಆಶಂಕೆಯು ಉದಯವಾಗುತ್ತದೆ. ಆದರ ಪರಿಹಾರಕ್ಕಾಗಿ ನಾಕನೆಯ ಪಾದವು ಹೊರಟಿರುತ್ತದೆ. ಹೀಗೆ ಪಾದಗಳ ಕ್ರಮದಲ್ಲಿ ಇರುವ ಸ್ವಾರಸ್ಯವನ್ನು ತಿಳಿಯಬೇಕು.

## ಅದ್ವೈತಿಗಳ ಪಾದಕ್ರಮ ವಿಮರ್ಶೆ

**तात्पर्यचन्द्रिका**

**अन्ये तु आद्यपादे स्वपक्षस्य साङ्ख्यादिस्मृतिभिस्तदुन्नीततर्कैश्च विरोधपरिहारः।**

ಅದ್ವೈತಿಗಳು ಎರಡನೆಯ ಅಧ್ಯಾಯದ ನಾಕುಪಾದಗಳ ಕ್ರಮವನ್ನು ತಮ್ಮ ಗ್ರಂಥಗಳಲ್ಲಿ ಹೀಗೆ ಮಂಡಿಸಿದ್ದಾರೆ - ತಮ್ಮ ಪಕ್ಷಕ್ಕೆ ಸಾಂಖ್ಯಾದಿಸ್ಮೃತಿಗಳ ವಿರೋಧವಾಗಲೀ, ಸಂಖ್ಯಾದಿಸ್ಮೃತಿಗಳಿಂದ ಹುಟ್ಟುವ ತರ್ಕಗಳಿಂದಾಗಲೀ, ವಿರೋಧವು ಬರುವುದಿಲ್ಲವೆಂದು ಪ್ರಥಮಪಾದದಲ್ಲಿ ಪರಿಹರಿಸಲಾಗಿದೆ.

**द्वितीये साङ्ख्यादिमतानां दुष्टत्वोक्तिः ।**

ಎರಡನೆಯ ಪಾದದಲ್ಲಿ ಸಾಂಖ್ಯ, ಚಾರ್ವಾಕ ಮೊದಲಾದ ಮತಗಳೆಲ್ಲವೂ ದುಷ್ಟವಾಗಿವೆ ಎಂದು ನಿರೂಪಣೆ ಮಾಡಲಾಗಿದೆ.

**तृतीये पूर्वभागे पञ्चमहाभूतश्रुतीनां उत्तरभागे तु जीवश्रुतीनां चतुर्थे लिङ्गशरीरश्रुतीनां परस्परविरोधपरिहार इति पादार्थानाहुः ।**

ಮೂರನೆಯ ಪಾದದ ಪೂರ್ವಾರ್ಧದಲ್ಲಿ ಪಂಚಮಹಾಭೂತಶ್ರುತಿಗಳಿಗೆ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಉತ್ತರಭಾಗದಲ್ಲಿ ಜೀವಶ್ರುತಿಗಳಿಗೆ ವಿರೋಧವನ್ನು ಪರಿಹರಿಸಲಾಗಿದೆ.

ನಾಕನೆಯ ಪಾದದಲ್ಲಿ ಲಿಂಗಶರೀರವನ್ನು ನಿರೂಪಣೆ ಮಾಡುವ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಇಷ್ಟು ನಾಕುಪಾದಗಳ ಅರ್ಥ.

**तन्न । आद्ये तृतीये च पाद एकोपाध्यभावात् ।**

ಅದ್ವೈತಿಗಳ ಈ ಪಾದಾರ್ಥಚಿಂತನೆಯು ಅಯುಕ್ತವಾಗಿದೆ. ಏಕೆಂದರೆ ಮೊದಲನೆಯ ಪಾದದ ಅರ್ಥವನ್ನು ಹೇಳುವಾಗ ಸ್ಮೃತಿವಿರೋಧ ಹಾಗೂ ತದುನ್ನೀತವಾದ ತರ್ಕವಿರೋಧ ಎಂಬ ಎರಡು ಉಪಾಧಿಗಳನ್ನು ಹೇಳಿದಿರಿ. ಒಂದು ಪಾದದಲ್ಲಿ ಒಂದೇ ಉಪಾಧಿಯು ಇರಬೇಕು. ತೃತೀಯಪಾದದಲ್ಲಿಯೂ ಪಂಚಮಹಾಭೂತಶ್ರುತಿವಿರೋಧ ಪರಿಹಾರ ಹಾಗೂ ಜೀವಶ್ರುತಿವಿರೋಧ ಪರಿಹಾರ ಎಂಬ ಎರಡು ಬಗೆಯ ಉಪಾಧಿಗಳನ್ನು ಹೇಳಿರುತ್ತೀರಿ. ಒಂದೇ ಉಪಾಧಿಯನ್ನು ಹೇಳಿರುವುದಿಲ್ಲ.

**आद्येऽपि ''इतरेषां चानुपलब्धेः । एतेन योगः प्रत्युक्तः । स्वपक्षदोषाच्च । एतेन शिष्टा अपरिग्रहा अपि व्याख्याताः''। इत्यादौ परमतानां दुष्टत्वोक्तेस्त्वयापि स्वीकृतत्वाच्च ।**

ಮತ್ತು ಎರಡನೆಯ ಪಾದದಲ್ಲಿ ಸಾಂಖ್ಯಾದಿ ಸಮಯಗಳಿಗೆ ದುಷ್ಟತ್ವವನ್ನು ಹೇಳಲಾಗಿದೆ ಎಂಬ ಉಪಾಧಿಯನ್ನು ಹೇಳಿದಿರಿ. ಆದರೆ ಪ್ರಥಮಪಾದದಲ್ಲಿಯೂ ಅನೇಕ ಕಡೆ ನೀವೇ ಇದನ್ನು ಹೇಳಿದ್ದೀರಿ. 'ಇತರೇಷಾಂ ಚಾನುಪಲಬ್ಧೇಃ' 'ಏತೇನ ಯೋಗಃ ಪ್ರತ್ಯುಕ್ತಃ' 'ಸ್ವಪಕ್ಷದೋಷಾಚ್ಚ' 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಇವೇ ಮೊದಲಾದ ಸೂತ್ರಗಳಲ್ಲಿ ಪರಮತವು ದುಷ್ಟವಾಗಿದೆ ಎಂದು ಸಮರ್ಥಿಸಿದ್ದೀರಿ.

**नन्वाद्ये तेषां दुष्टत्वोक्तिः । स्वपक्षस्य तैर्विरोधनिरासार्थ**

ಪ್ರಶ್ನೆ - ಪರಮತವು ದುಷ್ಟವಾಗಿದೆಯೆಂದು ಪ್ರಥಮಪಾದದಲ್ಲಿ ಹೇಳಿದ್ದರೂ, ಪರಮತದ ವಿರೋಧಪರಿಹಾರದಲ್ಲಿಯೇ ಪರ್ಯವಸಾನವಾಗುತ್ತದೆ. ಆದರೆ ಎರಡನೆಯ ಪಾದದಲ್ಲಿ ಪರಮತದಲ್ಲಿ ದೋಷವನ್ನು ಹೇಳುವುದೇ ಉದ್ದೇಶವಾಗಿರುತ್ತದೆ. ಈ ವೈಲಕ್ಷಣ್ಯದಿಂದ ಪ್ರಥಮಪಾದಕ್ಕೆ ದ್ವಿತೀಯಪಾದದಿಂದ ಸಾಂಕರ್ಯದೋಷವನ್ನು ಹೇಳಲು ಬರುವುದಿಲ್ಲವಲ್ಲವೇ ?

**इति चेन्न । द्वितीयेऽपि तदुक्तेस्तदर्थत्वात् । अन्यथा द्वितीयस्याविरोधाध्याया-सङ्गतिः स्यात् ।**

ಇದು ತಪ್ಪು. ಎರಡನೆಯ ಅಧ್ಯಾಯದಲ್ಲಿಯೂ ಕೂಡ ಪರಮತಕ್ಕೆ ದುಷ್ಟತ್ವವನ್ನು ಹೇಳಿದ್ದು, ಸ್ವಪಕ್ಷದಲ್ಲಿ ವಿರೋಧವಿರುವುದಿಲ್ಲವೆಂದು ತಿಳಿಸುವುದಕ್ಕಾಗಿಯೇ ಹೊರತು, ಬೇರೆ ಯಾವ ಉದ್ದೇಶವೂ ಇರುವುದಿಲ್ಲ. ಹೀಗೊಪ್ಪದಿದ್ದರೆ ಎರಡನೆಯ ಪಾದಕ್ಕೆ ಅವಿರೋಧಾಧ್ಯಾಯದಲ್ಲಿ ಸಂಗತಿಯೇ ಇಲ್ಲದಂತಾಗಬೇಕಾದೀತು. ಏಕೆಂದರೆ ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯವೆಂದು ಹೆಸರು. ಎಲ್ಲಾ ಬಗೆಯ ವಿರೋಧವನ್ನು ಪರಿಹರಿಸುವುದೇ ಇದರ ಉದ್ದೇಶ. ಪ್ರಕೃತ ಎರಡನೆಯ ಪಾದದಲ್ಲಿ ಕೇವಲ ಅನ್ಯಮತವನ್ನು ದುಷ್ಟವೆಂದು ಹೇಳಿ, ಯಾವುದೇ ವಿರೋಧವನ್ನು ಪರಿಹಾರ ಮಾಡದಿದ್ದರೆ ಅದಕ್ಕೆ ಸಂಗತಿಯೇ ಇಲ್ಲದಂತಾಗುತ್ತದೆ.

**किञ्च यथाऽद्यपादस्थे ''दृश्यते तु'' इत्यत्र विलक्षणयोरपि ब्रह्मप्रपञ्चयोर्वृश्चिक गोमययोरिव कार्यकारणभाव इत्येतदर्थप्रतिपादके स्वपक्षे तर्कविरोधपरिहारः ।**

ಮತ್ತು ಪ್ರಥಮಪಾದದಲ್ಲಿ ಸಾಂಖ್ಯಾದಿಸ್ಮೃತಿಗಳಿಂದ ನಿರ್ಮಿತವಾದ ತರ್ಕವಿರೋಧವನ್ನು ಪರಿಹರಿಸಿದ್ದೀರಿ - 'ದೃಶ್ಯತೇ ತು' ಎಂಬ ನವಿಲಕ್ಷಣತ್ವಾಧಿಕರಣದ ಸೂತ್ರದಲ್ಲಿ ಬ್ರಹ್ಮನು

ಸ್ಮೃತ್ಯಧಿಕರಣ (೨-೧-೧)

ಚೇತನನಾದ್ದರಿಂದ ಪ್ರಪಂಚಕ್ಕಿಂತ ವಿಲಕ್ಷಣನಾಗಿದ್ದಾನೆ. ಇವನು ಹೇಗೆ ಪ್ರಪಂಚಕ್ಕೆ ಕಾರಣನಾಗುತ್ತಾನೆ? ಎಂಬ ಪ್ರಶ್ನೆಯು ಬಂದರೆ ಗೋಮಯದಿಂದ ವೃಶ್ಚಿಕವು ಹುಟ್ಟಿದಾಗ ವೃಶ್ಚಿಕವು ಚೇತನವಾಗದ ಕಾರಣ ವಿಲಕ್ಷಣವಾಗಿದ್ದರೂ ಗೋಮಯವು ಕಾರಣವೆಂದು ವೃಶ್ಚಿಕವು ಕಾರ್ಯವೆಂದು ಲೋಕದಲ್ಲಿ ಕಂಡಿದೆ. ಅದರಂತೆ ಬ್ರಹ್ಮನು ಚೇತನನಾಗಿದ್ದರೂ ಜಡವಾದ ಪ್ರಪಂಚಕ್ಕೆ ಕಾರಣನಾಗುತ್ತಾನೆ. ಹೀಗೆ ಸ್ವಪಕ್ಷದಲ್ಲಿ ಬರುವಂತಹ ತತ್ವದ ವಿರೋಧವನ್ನು ಪರಿಹರಿಸುತ್ತೀರಿ.

**तथा द्वितीयेऽपि ''महद्दीर्घवद्वा'' इतिसूत्रे ''यथा व्यणुकादणोर्ह्रस्वाच्च सतो महद्दीर्घं च त्र्यणुकादि जायते । नाणु नापि ह्रस्वम् । एवं चेतनात् ब्रह्मणोऽचेतनं जगज्जनिष्यते'' इति त्वया भाषितत्वेन तत्रापि तर्कविरोधपरिहारोऽस्त्येव ।**

ಇದರಂತೆ ಎರಡನೆಯ ಪಾದದಲ್ಲಿರುವ 'ಮಹದ್ದೀರ್ಘವದ್ವಾ' ಇತ್ಯಾದಿ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಯಥಾ ದ್ವ್ಯಣುಕಾದಣೋರ್ಹ್ರಸ್ವಾಚ್ಚ ಸತೋ ಮಹದ್ದೀರ್ಘಂ ಚ ತ್ರ್ಯಣುಕಾದಿ ಜಾಯತೇ । ನಾಣು ನಾಪಿ ಹ್ರಸ್ವಮ್ । ಏವಂ ಚೇತನಾತ್ ಬ್ರಹ್ಮಣೋಽಚೇತನಂ ಜಗಜ್ಜನಿಷ್ಯತೇ' ಎಂದು ಹೇಳಿದ್ದೀರಿ. ಇದರ ಅಭಿಪ್ರಾಯ ಹೀಗಿದೆ - ಪರಮಾಣುವಿನಿಂದ ದ್ವ್ಯಣುಕದಲ್ಲಿ ಅಣುಪರಿಮಾಣ ಮತ್ತು ಹ್ರಸ್ವಪರಿಮಾಣವಿರುತ್ತದೆ. ಇದರಿಂದ ಮಹತ್‌ಪರಿಮಾಣವಿರುವ ಮತ್ತು ದೀರ್ಘಪರಿಮಾಣವಿರುವ ದ್ವ್ಯಣುಕವು ಹುಟ್ಟುತ್ತದೆ ಹೊರತು, ಅಣುಪರಿಮಾಣವಿರುವ ಹ್ರಸ್ವಪರಿಮಾಣವಿರುವ ಮತ್ತೊಂದು ವಸ್ತು ಹುಟ್ಟುವುದಿಲ್ಲ. ಹೀಗೆ ವಿಲಕ್ಷಣವಾದದ್ದಕ್ಕೂ ಕೂಡ ಕಾರ್ಯಕಾರಣಭಾವವಿರುತ್ತದೆಂದು ತಾರ್ಕಿಕರು ಒಪ್ಪಿದ್ದಾರೆ. ಅದರಂತೆ ಚೇತನನಾದ ಬ್ರಹ್ಮನಿಂದ ವಿಲಕ್ಷಣವಾದ ಅಚೇತನವಾದ ಜಗತ್ತು ಹುಟ್ಟುತ್ತದೆ ಎಂದು ನೀವೇ ಹೇಳಿರುತ್ತೀರಿ. ಆದ್ದರಿಂದ ಪ್ರಥಮಪಾದದಲ್ಲಷ್ಟೇ ಅಲ್ಲದೇ ಎರಡನೆಯ ಪಾದದಲ್ಲಿಯೂ ಕೂಡ ತರ್ಕವಿರೋಧವನ್ನು ಪರಿಹರಿಸುವುದರಿಂದ ಸಾಂಕರ್ಯದೋಷವು ಬಂದೇ ಬರುತ್ತದೆ.

**तृतीयस्य पूर्वभागेऽपि ''अन्तरा विज्ञानमनसी'' इत्यत्र त्वन्मते ''एतस्माज्जायते प्राणो मनः सर्वेन्द्रियाणि च'' इति प्राणमनआदिविषयश्रुत्य-विरोधस्याप्युक्तत्वेन न भूतश्रुत्यविरोध एवेति नियमः ।**

ಮತ್ತು ಮೂರನೆಯ ಅಧ್ಯಾಯದ ಪೂರ್ವಭಾಗದಲ್ಲಿ ಜೀವಶ್ರುತಿಗಳನ್ನು ವಿಚಾರ ಮಾಡಿಲ್ಲವೆಂದು ಹೇಳಿದಿರಿ. ಇದೂ ಕೂಡ ಸರಿಯಿಲ್ಲ. 'ಅಂತರಾ ವಿಜ್ಞಾನಮನಸೀ' ಎಂಬಲ್ಲಿ 'ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯನ್ನು ಉಲ್ಲೇಖ ಮಾಡುವ ಮೂಲಕ ಪ್ರಾಣ, ಮನಸ್ಸು ಮೊದಲಾದವುಗಳನ್ನು ವಿಷಯೀಕರಿಸುವ ಶ್ರುತಿಗಳ ವಿರೋಧ ಪರಿಹಾರವನ್ನು

ಮಾಡಿರುತ್ತೀರಿ. ಹೀಗಿರುವಾಗ ಕೇವಲ ಭೂತಶ್ರುತಿಗಳ ವಿರೋಧವನ್ನಷ್ಟೇ ಪೂರ್ವಭಾಗದಲ್ಲಿ ಮಾಡಲಾಗಿದೆಯೆಂದು ನಿಯಮ ಮಾಡಲು ಸಾಧ್ಯವಿಲ್ಲ.

**ननु ''अन्नमयं हि सोम्य मन आपोमयः प्राणस्तेजोमयी वाक्'' इतिश्रुतेर्मनआदीनि भूतान्येवेति तद्विचारो भूतविचार एवेति चेत् तर्हि चतुर्थे ''तथा प्राणाः । सप्तगतेर्विशेषितत्वाच्च । अणवश्च'' इत्यादिबह्वधिकरणैः कृत इन्द्रियविचारोऽपि तृतीयस्य पूर्वभागे स्यात् ।**

ಪ್ರಶ್ನೆ - 'ಅನ್ನಮಯಂ ಹಿ ಸೌಮ್ಯ ಮನ ಆಪೋಮಯಃ ಪ್ರಾಣಃ ತೇಜೋಮಯೀ ವಾಕ್' ಎಂಬ ಶ್ರುತಿಯಲ್ಲಿ ಮನಸ್ಸು, ಪ್ರಾಣ ಇವುಗಳೆಲ್ಲವೂ ಭೂತಾತ್ಮಕವೆಂದೇ ನಿಶ್ಚಯಿಸಲಾಗಿದೆ. ಆದ್ದರಿಂದ ತೃತೀಯಪಾದದ ಪೂರ್ವಭಾಗದಲ್ಲಿ ವಿಚಾರ ಮಾಡಿದ್ದು ಸಂಗತವಾಗುತ್ತದಲ್ಲವೇ?

ಉತ್ತರ - ಹಾಗಾದರೆ ನಾಕನೆಯ ಪಾದದಲ್ಲಿ 'ತಥಾ ಪ್ರಾಣಃ' 'ಸಪ್ತಗತೇರ್ವಿಶೇಷಿತತ್ವಾಚ್ಚ' 'ಅಣವಶ್ಚ' ಇವೇ ಮೊದಲಾದ ಅನೇಕ ಅಧಿಕರಣಗಳಲ್ಲಿ ಇಂದ್ರಿಯಾದಿಗಳ ಬಗ್ಗೆ ಏನು ವಿಚಾರ ಮಾಡಿದ್ದೀರೋ ಅದೆಲ್ಲವನ್ನು ಮೂರನೆಯ ಪಾದದ ಪೂರ್ವಭಾಗದಲ್ಲಿಯೇ ಮಾಡಬೇಕಿತ್ತು. ಏಕೆಂದರೆ ನೀವೇ ಹೇಳಿದಂತೆ ಇಂದ್ರಿಯ, ಮನಸ್ಸು ಮೊದಲಾದವುಗಳೆಲ್ಲವು ಭೂತಾತ್ಮಕವಾದ್ದರಿಂದ ತೃತೀಯಪಾದದ ಪೂರ್ವಭಾಗದಲ್ಲಿ ಇದರ ಉಲ್ಲೇಖವು ಸಂಗತವಾಗುತ್ತದೆ.

**चतुर्थेऽपि ''संज्ञामूर्तिक्लृप्तिः'' इत्यत्र ''अनेन जीवेन'' इत्यादिवाक्ये जीवस्य कर्तृता नोच्यते । किन्तु ब्रह्मण इति त्वया सिद्धान्तितत्वान्न लिङ्गशरीरस्यैव विचार इति नियमः ।**

ಲಿಂಗಶರೀರವಿಷಯಕವಾದ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸುವಿಕೆ ಎಂಬ ನಾಕನೆಯ ಪಾದದ ಉಪಾಧಿಯೂ ಕೂಡ ಅಸಾಧುವಾಗಿದೆ. 'ಸಂಜ್ಞಾಮೂರ್ತಿಕ್ಲೃಪ್ತಿಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಅನೇನ ಜೀವೇನ' ಎಂಬ ವಿಷಯವಾಕ್ಯವನ್ನು ವಿವಕ್ಷಿಸಿ, ಜೀವನಿಗೆ ಕರ್ತೃತ್ವವನ್ನು ಹೇಳಬಾರದು, ಬ್ರಹ್ಮನಿಗೆ ಮಾತ್ರ ಹೇಳಬೇಕೆಂದು ಸಿದ್ಧಾಂತ ಮಾಡಿದ್ದೀರಿ. ಹೀಗೆ ಬ್ರಹ್ಮಕರ್ತೃತ್ವವನ್ನು ಸಮರ್ಥನೆ ಮಾಡಿದ್ದರಿಂದ, ಲಿಂಗಶರೀರದ ಬಗ್ಗೆ ವಿರೋಧವನ್ನು ಪರಿಹರಿಸಿದಂತಾಗಲಿಲ್ಲ. ಆದ್ದರಿಂದ ಎಲ್ಲಾ ಅಧಿಕರಣಗಳಲ್ಲಿಯೂ ಲಿಂಗಶರೀರವಿಷಯಕವಾದ ವಿಚಾರವೇ ಹೊರಟಿದೆ ಎಂಬ ನಿಯಮಕ್ಕೂ ಕೂಡ ಭಂಗ ಬರುತ್ತದೆ.

**किञ्च तृतीयचतुर्थयोरप्याद्यवत् स्वपक्षविरोधपरिहाररूपत्वादाद्यानन्तर्यं स्यात्। द्वितीयस्य तु परपक्षदूषणरूपत्वादन्त्यता स्यादिति ॥**

ಸ್ಮೃತ್ಯಧಿಕರಣ (೨-೧-೧)

ಮತ್ತು ಮೊದಲು ಸ್ವಪಕ್ಷ ಸ್ಥಾಪನೆ ಮಾಡಿ, ಅನಂತರ ಪರಪಕ್ಷ ನಿರಾಕರಣೆ ಮಾಡಬೇಕು. ಮೂರು ಹಾಗೂ ನಾಕನೆಯ ಪಾದಗಳಲ್ಲಿ ನೀವೇ ಹೇಳಿದಂತೆ ಸ್ವಪಕ್ಷದಲ್ಲಿ ಬರುವ ವಿರೋಧಗಳನ್ನು ಪರಿಹರಿಸಿದ್ದೀರಿ. ಹಾಗಾದರೆ ಮೊದಲನೆಯ ಪಾದದ ಅನಂತರವೇ ಮೂರು ಹಾಗೂ ನಾಕನೆಯ ಪಾದಗಳು ಸಂಗತವಾಗುತ್ತವೆ. ಎರಡನೆಯ ಪಾದವು ಪರಪಕ್ಷದಲ್ಲಿ ದೋಷವನ್ನು ಹೇಳಿರುವುದರಿಂದ ಕೊನೆಯಲ್ಲಿ ಪ್ರಸಕ್ತವಾಗುತ್ತದೆ. ಆದ್ದರಿಂದ ಅದ್ವೈತಮತದಲ್ಲಿ ಪಾದದ ಪ್ರಮೇಯಗಳಾಗಲೀ, ಪಾದಕ್ರಮವಾಗಲೀ ದುಷ್ಟವಾಗಿರುತ್ತದೆ.

**प्रकाशः —**

''नान्यथा तददृष्टेः'' इति पूर्वाध्यायभाष्यमत्रापि संयोज्य परमतद्वयोक्तार्थदूषणपरतया योज्यमिति भावेन ''स्वपक्षे स्मृतिन्यायविरोधपरिहारः प्रधानादिवादानां च न्यायाभासोपबृंहितत्वं प्रतिवेदान्तं च सृष्ट्यादिप्रक्रियाया अविगीतत्वम्'' इत्याद्यद्वैतिभाष्यं हृदि कृत्वा परमतं तावदनूद्य निराह — **अन्ये तु** इति ।।

ಪ್ರಥಮಾಧ್ಯಾಯದ ಆನಂದಮಯಾಧಿಕರಣದಲ್ಲಿ ಸಿದ್ಧಾಂತದ ಪ್ರಕಾರ ಪಾದಪ್ರಮೇಯ ಹಾಗೂ ಪಾದೋಪಾಧಿಗಳನ್ನು ಹೇಳಿದ ಮೇಲೆ 'ನಾನ್ಯಥಾ ತದದೃಷ್ಟೇಃ' ಎಂಬುದಾಗಿ ಭಾಷ್ಯದಲ್ಲಿ ಹೇಳಿರುತ್ತಾರೆ. ಈ ಮಾತಿನಿಂದ ಪರಮತದಲ್ಲಿರುವ ಪಾದಪ್ರಮೇಯಗಳನ್ನು ಮತ್ತು ಪಾದಕ್ರಮಗಳನ್ನು ಸೂಚಿಸಿದ್ದಾರೆ. ಅದನ್ನೇ ಇಲ್ಲಿ ಯೋಜನೆ ಮಾಡಿಕೊಂಡು ಅದ್ವೈತಮತ ಹಾಗೂ ರಾಮಾನುಜಮತದವರಿಗೆ ದೋಷವನ್ನು ಹೇಳಬೇಕೆಂಬ ಅಭಿಪ್ರಾಯದಿಂದ ಗ್ರಂಥಕಾರರು ಪರಮತನಿರಾಸವನ್ನು ಮಾಡುತ್ತಿದ್ದಾರೆ. ಅದ್ವೈತಭಾಷ್ಯದಲ್ಲಿ 'ಸ್ವಪಕ್ಷೇ ಸ್ಮೃತಿನ್ಯಾಯವಿರೋಧಪರಿಹಾರಃ ಪ್ರಧಾನಾದಿವಾದಾನಾಂ ಚ ನ್ಯಾಯಾಭಾಸೋಪಬೃಂಹಿತತ್ವಂ ಪ್ರತಿವೇದಾಂತಂ ಚ ಸೃಷ್ಟ್ಯಾದಿಪ್ರಕ್ರಿಯಾಯಾ ಅವಿಗೀತತ್ವಮ್' ಸ್ವಪಕ್ಷದಲ್ಲಿ ಸ್ಮೃತಿನ್ಯಾಯವಿರೋಧ-ಪರಿಹಾರವನ್ನು ಸಾಂಖ್ಯಾದಿಮತಗಳು ನ್ಯಾಯಾಭಾಸದಿಂದ ಕೂಡಿರುತ್ತವೆ. ವೇದದಲ್ಲಿರುವ ಯಾವುದೇ ವಾಕ್ಯಗಳಿಗೂ ಸೃಷ್ಟ್ಯಾದಿ ಪ್ರಕ್ರಿಯೆಯಿಂದ ವಿರೋಧಬರುವುದಿಲ್ಲ ಇತ್ಯಾದಿಯಾಗಿ ಹೇಳಿದ್ದಾರೆ. ಅವರ ಈ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಪರಮತವನ್ನು ಅನುವಾದ ಮಾಡಿ, 'ಅನ್ಯೇತು' ಎಂಬುದಾಗಿ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः — पञ्चमहाभूतेति** ।। ''केचिदाकाशस्योत्पत्तिमामनन्ति केचिन्न तथा जीवस्य प्राणानां चैवम्'' इत्यादि तत्रत्यतदीयभाष्यादवगम्यत इति भावः ।।

ಮೂರನೆಯ ಪಾದದ ಪೂರ್ವಭಾಗದಲ್ಲಿ ಪಂಚಮಹಾಭೂತಗಳ ಪರಸ್ಪರ ವಿರೋಧವನ್ನು ಪರಿಹಾರ ಮಾಡಲಾಗಿದೆ ಎಂಬ ವಿಷಯವು ಅವರ ಭಾಷ್ಯದಿಂದಲೇ ತಿಳಿಯುತ್ತಿದೆ - 'ಕೇಚಿದಾಕಾಶಸ್ಯೋತ್ಪತ್ತಿಮಾಮನಂತಿ ಕೇಚಿನ್ನ ತಥಾ ಜೀವಸ್ಯ ಪ್ರಾಣಾನಾಂ ಚೈವಮ್' ಎಂಬ ಭಾಷ್ಯದ ಮಾತಿನಿಂದ ಇದು ಸ್ಪಷ್ಟವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः – लिङ्गेति ।।** प्राणादेर्लिङ्गशरीरात्मकत्वादिति भावः ।।

'ಲಿಂಗಶರೀರಶ್ರುತಿನಾಂ' ಎಂಬಲ್ಲಿ ಲಿಂಗಶಬ್ದಕ್ಕೆ ಪ್ರಾಣಾದಿಗಳನ್ನು ವಿವಕ್ಷಿಸಬೇಕು. ಪ್ರಾಣಾದಿಗಳೇ ಲಿಂಗಶರೀರವೆನಿಸುತ್ತವೆ.

**प्रकाशः – आद्य इति ।।** ननु सिद्धान्तेऽप्येष दोषस्तुल्यः । यदाहुः ''आदौ यौक्तस्तत्रापि च स्मृतेः'' इति ।। तृतीये च ''जीवपरमात्माधिभूताधिदैवेषु श्रुतीनां परस्परविरोधमपाकरोति'' इति चेति चेत्

ಪ್ರಶ್ನೆ - ಪ್ರಥಮಪಾದದಲ್ಲಿಯೂ ಕೂಡ ಪರಮತದ ದೋಷವನ್ನು ನಿರೂಪಣೆ ಮಾಡಿರುವುದರಿಂದ ಸಾಂಕರ್ಯದೋಷ ಬರುತ್ತದೆಂದು ಗ್ರಂಥದಲ್ಲಿ 'ಆದ್ಯೇ' ಇತ್ಯಾದಿ ವಾಕ್ಯದಿಂದ ಸಮರ್ಥಿಸಿದಿರಿ. ಆದರೆ ನಿಮ್ಮ ಅದ್ವೈತಸಿದ್ಧಾಂತದಲ್ಲಿಯೂ ಈ ದೋಷವು ಸಮಾನವಾಗಿವೆ. 'ಆದೌ ಯೌಕ್ತಸ್ತತ್ರಾಪಿ ಚ ಸ್ಮೃತೇಃ' ಎಂಬ ನಿಮ್ಮದೇ ಮಾತಿನಿಂದ ಪ್ರಥಮಪಾದದಲ್ಲಿ ಸ್ಮೃತಿವಿರೋಧವನ್ನೂ ಕೂಡ ಪರಿಹರಿಸಿದ್ದೀರಿ. ಮೂರನೆಯ ಪಾದದಲ್ಲಿ 'ಜೀವಪರಮಾತ್ಮಾಧಿಭೂತಾಧಿದೈವೇಷು ಶ್ರುತೀನಾಂ ಪರಸ್ಪರ-ವಿರೋಧಮಪಾಕರೋತಿ' ಜೀವ ಪರಮಾತ್ಮ ಹಾಗೂ ಅಧಿಭೂತ, ಅಧಿದೈವ ವಿಷಯಕವಾದ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ ಎಂದು ಹೇಳಿರುತ್ತೀರಿ. ಆದ್ದರಿಂದ ಮೂರನೆಯ ಪಾದದಲ್ಲಿ ಕೇವಲ ಶ್ರುತಿವಿರೋಧವನ್ನು ಪರಿಹರಿಸದೇ ಇರುವುದರಿಂದ ಸಾಂಕರ್ಯದೋಷವು ನಿಮಗೂ ಕೂಡ ಸಮಾನವಲ್ಲವೇ ?

**प्रकाशः – मैवम् ।** वक्ष्यमाणदिशा ''स्मृत्यनवकाशदोष'' इत्यत्र यौक्ताविरोधस्य सत्त्वात्। तृतीये चाभिधेयबहिर्भावेन श्रुत्यविरोधित्वेनैकीकरणात् ।

ಇದು ತಪ್ಪು. ಮುಂದೆ ಹೇಳುವಂತೆ 'ಸ್ಮೃತ್ಯನವಕಾಶದೋಷಃ' ಇತ್ಯಾದಿ ಸೂತ್ರದಲ್ಲಿ ಯುಕ್ತಿವಿರೋಧಪರಿಹಾರವೂ ಕೂಡ ಇರುತ್ತದೆ. ಆಂದರೆ ಕೇವಲ ಶ್ರುತಿವಿರೋಧಪರಿಹಾರವಷ್ಟೇ ಇದರ ಉದ್ದೇಶವಲ್ಲ. ಯುಕ್ತಿವಿರೋಧದ ಪರಿಹಾರವೂ ಕೂಡ ಮುಖ್ಯ ಉದ್ದೇಶವಾಗಿರುತ್ತದೆ ಎಂದು ನಾವು ಸಮರ್ಥಿಸುತ್ತೇವೆ. ಮತ್ತು ಮೂರನೆಯ ಪಾದದಲ್ಲಿ ಶ್ರುತಿವಿರೋಧ ಪರಿಹಾರವೇ ಮುಖ್ಯವಾದ ಉಪಾಧಿ. ಇದನ್ನು ವಿವಕ್ಷಿಸಿಯೇ ಪರಮಾತ್ಮಾದಿ ವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತೇವೆ. ಆದ್ದರಿಂದ ಪರಮಾತ್ಮ, ಅಧಿಭೂತ, ಅಧಿದೈವ, ಜೀವ ಇಷ್ಟು ಪದಾರ್ಥಗಳನ್ನು ವಿಷಯೀಕರಿಸುವ ಶ್ರುತಿಗಳ ವಿರೋಧ ಪರಿಹಾರವು ಮೂರನೆಯ ಪಾದದ ಉಪಾಧಿಯೆಂಬುದು ನಮ್ಮ ಅಭಿಪ್ರಾಯ.

**प्रकाशः – नचैवं परस्यापि सुवचम् ।** तुरीयसाङ्कर्यापातात् । सिद्धान्तेऽभिधेयबहिर्भावेन श्रुत्यविरोधित्वेनैव तस्यैकीकरणायोगात् । तदन्तर्भावे तूक्तो दोष इति भावः ।।

ಸ್ಮೃತ್ಯಧಿಕರಣ (೨-೧-೧)

ಇದರಂತೆ ಅದ್ವೈತಿಗಳೂ ಕೂಡ ಒಂದೇ ಉಪಾಧಿಯಿಂದ ಎಲ್ಲವನ್ನೂ ಏಕೀಕರಣ ಮಾಡಲು ಸಾಧ್ಯವಾಗುವುದಿಲ್ಲ. ಹಾಗಾದಲ್ಲಿ ನಾಕನೆಯ ಪಾದದಿಂದ ಅವರಿಗೆ ಸಾಂಕರ್ಯದೋಷವು ಬರುತ್ತದೆ. ಏಕೆಂದರೆ ನಾಕನೆಯ ಪಾದದಲ್ಲಿಯೂ ಕೂಡ ಅವರು ಶ್ರುತಿವಿರೋಧವನ್ನು ಪರಿಹರಿಸಿದ್ದಾರೆ.

ನಮ್ಮ ಸಿದ್ಧಾಂತದಲ್ಲಿ ಅಭಿಧೇಯದ ಬಹಿರ್ಭಾವದಿಂದ ಶ್ರುತಿಯ ಅವಿರೋಧಿತ್ವವೆಂಬ ಒಂದೇ ಉಪಾಧಿಯನ್ನು ಒಪ್ಪಿರುತ್ತೇವೆ. ನಾಕನೆಯ ಪಾದದಲ್ಲಿ ನ್ಯಾಯೋಪೇತವಾದ ಶ್ರುತ್ಯವಿರೋಧಿತ್ವವು ಉಪಾಧಿಯಾಗಿರುತ್ತದೆ. ಹೀಗೆ ಮೂರನೆಯ ಹಾಗೂ ನಾಕನೆಯ ಪಾದದ ಉಪಾಧಿಗಳು ಭಿನ್ನಭಿನ್ನವಾಗಿರುವುದರಿಂದ ಪರಸ್ಪರ ಸಾಂಕರ್ಯಕ್ಕೆ ಅವಕಾಶವಿಲ್ಲ. ನಮ್ಮಂತೆ ನೀವೂ ಕೂಡ ಶ್ರುತ್ಯವಿರೋಧಿತ್ವದಿಂದ ಏಕೀಕರಣ ಮಾಡುವುದಾದರೆ ನಾಕನೆಯ ಪಾದದಿಂದ ದೋಷವು ನಿಮಗೆ ತಪ್ಪಿದ್ದಲ್ಲ.

**प्रकाशः – त्वयापीति ।।** एतच्चाग्रे स्पष्टयिष्यते । तथा च द्वितीयसाङ्कर्यमाद्यस्येति भावः । अनेकोदाहरणेन प्रायिकत्वपरिहारोऽपि प्रत्युक्तः ।।

ಗ್ರಂಥದಲ್ಲಿ 'ತ್ವಯಾಪಿ' ಎಂಬುದರಿಂದ ಮೊದಲನೆಯ ಪಾದದಲ್ಲಿಯೂ ಕೂಡ ಪರಮತದ ದೋಷವನ್ನು ಹೇಳಿರುತ್ತೀರಿ ಎಂದು ಉಲ್ಲೇಖಿಸಿದ್ದಾರೆ. ಇದು ಮುಂದೆ ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಥಮಪಾದಕ್ಕೆ ಎರಡನೆಯ ಪಾದದಿಂದ ಸಾಂಕರ್ಯದೋಷವು ಬರುತ್ತದೆಂದು ಹೇಳಿದಂತಾಯಿತು. ಪ್ರಾಯಿಕವಾದ್ದರಿಂದ ದೋಷವಿಲ್ಲವೆಂದು ಉತ್ತರಿಸಲಾಗದು. ಏಕೆಂದರೆ ಗ್ರಂಥಕಾರರು ಅನೇಕ ದೃಷ್ಟಾಂತಗಳನ್ನು ನೀಡಿ ಪ್ರಥಮಪಾದದಲ್ಲಿ ಪರಮತದ ದೋಷವನ್ನು ಹೇಳಿದ್ದೀರೆಂದು ಸಮರ್ಥಿಸಿದ್ದಾರೆ.

**प्रकाशः – तर्केति ।।** ब्रह्मजगती नोपादानोपादेयभाववती । चेतनाचेतनत्वादिना विलक्षणत्वादित्यादितर्केत्यर्थः ।। **इन्द्रियविचारोऽपीति ।।** तेषामपि भौतिकत्वादिति भावः ।

ತರ್ಕವೆಂದರೆ 'ಬ್ರಹ್ಮಜಗತೀ ನ ಉಪಾದಾನೋಪಾದೇಯಭಾವವತೀ । ಚೇತನಾಚೇತನತ್ವಾದಿನಾ ವಿಲಕ್ಷಣತ್ವಾತ್' ಬ್ರಹ್ಮ ಹಾಗೂ ಜಗತ್ತು, ಚೇತನಾಚೇತನತ್ವದಿಂದ ವೈಲಕ್ಷಣ ಹೊಂದಿರುವ ಕಾರಣದಿಂದ ಉಪಾದಾನ ಉಪಾಧೇಯಭಾವವನ್ನು ಹೊಂದಿರುವುದಿಲ್ಲ ಎಂಬ ತರ್ಕದ ವಿರೋಧವು ಬರುತ್ತದೆಂದು ತಿಳಿಯಬೇಕು. 'ಇಂದ್ರಿಯವಿಚಾರೋಽಪಿ' ಎಂದು ತರ್ಕದಲ್ಲಿ ಹೇಳಿದ್ದಾರೆ. ಏಕೆಂದರೆ ಇಂದ್ರಿಯಗಳೂ ಕೂಡ ಭೌತಿಕವಾಗಿದೆಂಬುದು ಅಭಿಪ್ರಾಯ.




ಅದ್ವೈತಿಗಳ ಪಾದಪ್ರಮೇಯ ಮತ್ತು ಪಾದಕ್ರಮ ವಿಚಾರ ಹೀಗಿದೆ - ಸಾಂಖ್ಯಾದಿಸ್ಮೃತಿಗಳಿಂದ ಉನ್ನೀತವಾದ ತರ್ಕಗಳಿಂದ ಬರುವಂತಹ ವಿರೋಧ ಪರಿಹಾರಕ್ಕಾಗಿ ಪ್ರಥಮಪಾದ ಹೊರಟಿದೆ. ಸಾಂಖ್ಯಾದಿ ಮತಗಳಲ್ಲಿ ದೋಷವನ್ನು ಎತ್ತಿ ಹಿಡಿಯಲು ಎರಡನೆಯ ಪಾದ ಹೊರಟಿದೆ. ಪಂಚಮಹಾಭೂತಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ಮೂರನೆಯ ಪಾದದ ಪೂರ್ವಭಾಗ ಹೊರಟಿದೆ. ಜೀವವಿಷಯಕವಾದ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ತೃತೀಯಪಾದದ ಉತ್ತರಭಾಗ ಹೊರಟಿದೆ. ಲಿಂಗಶರೀರವಿಷಯಕವಾದ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ನಾಕನೆಯ ಪಾದ ಹೊರಟಿದೆ.

ಇದು ತಪ್ಪು. ಮೊದಲನೆಯ ಪಾದದಲ್ಲಿ ಸ್ಮೃತಿವಿರೋಧ ಮತ್ತು ತರ್ಕವಿರೋಧ ಎಂಬ ಎರಡು ಉಪಾಧಿಗಳನ್ನು ಹೇಳಿದಂತಾಯಿತು. ಇದರಂತೆ ಮೂರನೆಯ ಪಾದದಲ್ಲಿ ಪಂಚಮಹಾಭೂತಗಳ ಶ್ರುತಿವಿರೋಧ ಪರಿಹಾರ ಜೀವವಿಷಯಕವಾದ ಶ್ರುತಿಗಳ ವಿರೋಧಪರಿಹಾರ ಎಂಬ ಎರಡು ಉಪಾಧಿಗಳನ್ನು ಹೇಳಿದಂತಾಯಿತು. ಒಂದು ಪಾದದಲ್ಲಿ ಎರಡು ಉಪಾಧಿಗಳನ್ನು ವಿವಕ್ಷಿಸಿದರೆ ಪಾದಭೇದದೋಷವು ಬರುತ್ತದೆ. ಅಂದರೆ ಅದ್ವೈತಿಗಳ ಪ್ರಕಾರ ನಾಲ್ಕೇ ಪಾದ ಎಂದು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಮೊದಲನೆಯ ಪಾದದಲ್ಲಿಯೂ ದ್ವೈವಿಧ್ಯ ಮೂರನೆಯ ಪಾದದಲ್ಲಿಯೂ ದ್ವೈವಿಧ್ಯ ಬರಬೇಕಾದೀತು. ಮತ್ತು ಸಾಂಕರ್ಯದೋಷವೂ ಇದೆ. ಪರಮತದ ದೋಷವನ್ನು ಎತ್ತಿಹಿಡಿಯಲು ಎರಡನೆಯ ಪಾದ ಹೊರಡುತ್ತಿದೆಯೆಂದು ಹೇಳುವ ಅದ್ವೈತಿಗಳು ಪ್ರಥಮಪಾದದಲ್ಲಿಯೇ ಅನೇಕಬಾರಿ ಪರಮಮತದೋಷವನ್ನು ಎತ್ತಿ ತೋರಿಸಿದ್ದಾರೆ. ಆದ್ದರಿಂದ ಎರಡನೆಯ ಪಾದವು ಪ್ರಥಮಪಾದದಲ್ಲಿಯೇ ಅಂತರ್ಭಾವ ಹೊಂದಬೇಕಾಗುತ್ತದೆ.

ಎರಡನೆಯ ಪಾದದಲ್ಲಿ ಕೇವಲ ಪರಮತದೋಷವನ್ನಷ್ಟೇ ಹೇಳದೇ ತರ್ಕವಿರೋಧಗಳನ್ನೂ ಕೂಡ 'ಮಹದ್ದೀರ್ಘವದ್ವಾ' ಇತ್ಯಾದಿ ಸೂತ್ರಗಳಲ್ಲಿ ಪರಿಹರಿಸಿದ್ದಾರೆ. ಮೂರನೆಯ ಪಾದದ ಪೂರ್ವಭಾಗದಲ್ಲಿ ಪಂಚಮಹಾಭೂತವಿಷಯವಾದ ಶ್ರುತಿಗಳ ವಿರೋಧವನ್ನಷ್ಟೇ ಪರಿಹರಿಸದೆ ಇಂದ್ರಿಯಾದಿವಿಷಯಕವಾದ ಶ್ರುತಿಗಳ ವಿರೋಧವನ್ನೂ ಕೂಡ ಪರಿಹರಿಸಿದ್ದಾರೆ. ನಾಲ್ಕನೆಯ ಪಾದದಲ್ಲಿ ಲಿಂಗಶರೀರವಿಷಯಕವಾದ ಶ್ರುತಿಗಳ ವಿರೋಧವನ್ನು ಮಾತ್ರ ಪರಿಹರಿಸಬೇಕಿತ್ತು. ಆದರೆ 'ಸಂಜ್ಞಾಮೂರ್ತಿಕ್ಲೃಪ್ತಿಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಬ್ರಹ್ಮನಿಗೆ ಕರ್ತೃತ್ವವನ್ನು ಸಮರ್ಥನೆ ಮಾಡಿದ್ದಾರೆ. ಹೀಗೆ ತಾವೇ ಹಾಕಿಕೊಂಡ ನಿಯಮವನ್ನು ಪಾಲಿಸದೇ ಎಡವಿದ್ದಾರೆ.

ಅದ್ವೈತಮತದಲ್ಲಿ ಪಾದಪ್ರಮೇಯಗಳಷ್ಟೇ ಅಸಾಧುವಲ್ಲ, ಪಾದಕ್ರಮಗಳೂ ಕೂಡ ಅಸಾಧುವಾಗಿದೆ. ಮೊದಲು ಸ್ವಪಕ್ಷಸ್ಥಾಪನೆ ಮಾಡಿ, ಅನಂತರ ಪರಪಕ್ಷವನ್ನು ನಿರಾಕರಿಸಬೇಕು. ಪ್ರಥಮಪಾದದಲ್ಲಿ ಸ್ವಪಕ್ಷಸ್ಥಾಪನೆ ಮಾಡಿದಂತೆ ಮೂರನೆಯ ಮತ್ತು ನಾಲ್ಕನೆಯ ಪಾದದಲ್ಲಿಯೂ ಸ್ವಪಕ್ಷಸ್ಥಾಪನೆಯನ್ನೇ ಮಾಡಿರುತ್ತಾರೆ. ಆದ್ದರಿಂದ ಪ್ರಥಮಪಾದದ ಅನಂತರ ಮೂರು ಮತ್ತು ನಾಲ್ಕನೆಯ ಪಾದಗಳು ಸಂಗತವಾಗುತ್ತವೆ. ಎರಡನೆಯ ಪಾದದಲ್ಲಿ ಪರಪಕ್ಷದ ಪ್ರತಿಕ್ಷೇಪವನ್ನು ಮಾಡಿರುವುದರಿಂದ ಕೊನೆಯಲ್ಲಿಯೇ ಸಂಗತವಾಗುತ್ತದೆ. ಆದ್ದರಿಂದ ಅದ್ವೈತಿಗಳ ಪಾದಪ್ರಮೇಯಗಳಾಗಲೀ, ಪಾದಕ್ರಮಗಳಾಗಲೀ ಸಾಧುವಾಗಿರುವುದಿಲ್ಲ.

## ಸ್ಮೃತ್ಯಧಿಕರಣ (೨-೧-೧)

ರಾಮಾನುಜರ ಪಾದೋಪಾಧಿಯ ವಿಮರ್ಶೆ

**तात्पर्यचन्द्रिका**

**केचित्तु आद्यपादे स्वपक्षे कारणविषयदोषोद्धरः ।**

ರಾಮಾನುಜರ ಪ್ರಕಾರ ಅಧಿಕರಣಗಳ ಪ್ರಮೇಯ ಹೀಗಿದೆ - ಸ್ವಪಕ್ಷದಲ್ಲಿ ಕಾರಣವಿಷಯಕವಾದ ವಾಕ್ಯಗಳಲ್ಲಿ ದೋಷವನ್ನು ಪರಿಹರಿಸಲು ಪ್ರಥಮಪಾದ ಹೊರಟಿರುತ್ತದೆ.

**द्वितीये परपक्षे कारणविषयदोषक्तिः ।**

ಪರಪಕ್ಷದವರಿಗೆ ಕಾರಣವಿಷಯಕವಾದ ವಾಕ್ಯಗಳಲ್ಲಿ ದೋಷವನ್ನು ತೋರಿಸಲು ಎರಡನೆಯ ಪಾದ ಹೊರಟಿರುತ್ತದೆ.

**तृतीयचतुर्थपादयोस्तु स्वपक्षे कार्यविषयदोषोद्धार इति पादार्थानाहुः ।**

ಸ್ವಪಕ್ಷದಲ್ಲಿ ಕಾರ್ಯವಿಷಯಕವಾದ ವಾಕ್ಯಗಳಲ್ಲಿರುವ ದೋಷಪರಿಹಾರಕ್ಕಾಗಿ ಮೂರು ಮತ್ತು ನಾಕನೆಯ ಪಾದಗಳು ಹೊರಟಿರುತ್ತವೆ. ಇಷ್ಟು ರಾಮಾನುಜರು ನಿರೂಪಣೆ ಮಾಡುವ ಅಧಿಕರಣಗಳ ಪ್ರಮೇಯವಿಚಾರ.

**तन्न । आद्यपादेऽपि ''स्वपक्षदोषाच'' इत्यादौ परपक्षे दोषोक्तेः ।**

ಇದು ತಪ್ಪು. ಅದ್ವೈತಿಗಳಂತೆ ನಿಮಗೂ ಕೂಡ ಸಾಂಕರ್ಯಾದಿ ದೋಷಗಳು ಬರುತ್ತವೆ. ಪ್ರಥಮಪಾದದಲ್ಲಿ ಸ್ವಪಕ್ಷದಲ್ಲಿ ದೋಷಪರಿಹಾರವನ್ನಷ್ಟೇ ಮಾಡಬೇಕಿತ್ತು. ಆದರೆ 'ಸ್ವಪಕ್ಷದೋಷಾತ್' ಎಂಬ ಸೂತ್ರದಿಂದ ಪರಪಕ್ಷದಲ್ಲಿರುವ ದೋಷವನ್ನೂ ಕೂಡ ಎತ್ತಿ ತೋರಿಸಿದ್ದೀರಿ.

**द्वितीयेऽपि ''उत्पत्त्यसम्भवात्'' इत्यत्र पञ्चरात्राप्रामाण्यरूपस्वपक्ष-दोषोद्धारस्य त्वयापि स्वीकृतत्वाच ।**

ಎರಡನೆಯ ಪಾದದಲ್ಲಿ ಕಾರಣವಿಷಯಕವಾದ ವಾಕ್ಯಗಳಲ್ಲಿ ಪರಪಕ್ಷದವರಿಗೆ ದೋಷವನ್ನು ಮಾತ್ರ ತೋರಿಸಬೇಕಿತ್ತು. 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಪಂಚರಾತ್ರಾದಿಗಳಿಗೆ ಅಪ್ರಾಮಾಣ್ಯವೆಂಬ ಸ್ವಪಕ್ಷದಲ್ಲಿ ಬರುವ ದೋಷವನ್ನು ಪರಿಹರಿಸಿದ್ದೀರಿ.

**द्वितीये तु ''समवायाभ्युपगमाच'' इत्यादिषु बहुसूत्रेषु परपक्षे कारणादन्यत्रापि दोषोक्तेश्च ।**

ಮತ್ತು ಎರಡನೆಯ ಪಾದದಲ್ಲಿ 'ಸಮವಾಯಾಭ್ಯುಪಗಮಾಚ್ಚ' ಇತ್ಯಾದಿ ಅನೇಕ ಸೂತ್ರಗಳಿಂದ ಪರಪಕ್ಷದಲ್ಲಿ ಕಾರಣವಿಷಯದ ಬಗ್ಗೆ ಮಾತ್ರ ದೋಷವನ್ನು ಹೇಳದೇ ಸಮವಾಯ ಮೊದಲಾದವುಗಳ ಬಗ್ಗೆಯೂ ಕೂಡ ದೋಷವನ್ನು ಹೇಳಿರುತ್ತೀರಿ.

**तृतीयेऽपि ''नात्मा प्रकरणात् ज्ञोत एव उत्क्रान्तिगत्यागतीनाम्'' इत्यादावकार्यभूतजीवविषयकदोषोद्धाराच्च ।**

ಮೂರನೆಯ ಪಾದದಲ್ಲಿ 'ನಾತ್ಮಾ ಪ್ರಕರಣಾತ್' 'ಜ್ಞೋತ ಏವ' 'ಉತ್ಕ್ರಾಂತಿಗತ್ಯಾಗತೀನಾಮ್' ಇತ್ಯಾದಿ ಅನೇಕ ಸೂತ್ರಗಳಲ್ಲಿ ಕಾರ್ಯನಲ್ಲದ ಜೀವನ ಬಗ್ಗೆ ಬರುವಂತಹ ದೋಷಗಳನ್ನೆಲ್ಲಾ ಪರಿಹರಿಸಿದ್ದೀರಿ.

**तृतीयचतुर्थयोर्भेदानुक्तेश्च । परपक्षे कार्यविषयकदोषोक्त्यर्थं पादान्तरापाताच्च।**

ಮತ್ತು ಮೂರು ಹಾಗೂ ನಾಕನೆಯ ಪಾದಗಳಿಗೆ ಒಂದೇ ಉಪಾಧಿಯನ್ನು ಹೇಳಿದ್ದೀರಿ. ಪಾದಭೇದಕ್ಕೆ ಕಾರಣವಾದ ಉಪಾಧಿಭೇದವನ್ನು ಹೇಳಿರುವುದಿಲ್ಲ. ಮತ್ತು ಕಾರಣವಿಷಯದಲ್ಲಿ ಪರಪಕ್ಷದವರಿಗೆ ದೋಷವನ್ನು ಹೇಳಲು ಎರಡನೆಯ ಪಾದ ಹೊರಡುವುದಾದರೆ ಕಾರ್ಯವಿಷಯದಲ್ಲಿ ದೋಷವನ್ನು ಹೇಳಲು ಮತ್ತೊಂದು ಪಾದ ಇರಬೇಕಿತ್ತಲ್ಲವೇ?

**तृतीयचतुर्थयोः स्वमतदोषोद्धारकत्वसाम्येनाद्यानन्तर्यापाताच्चेति न परोक्ता पादव्यवस्था युक्ता ।।**

ಪಾದಕ್ರಮವೂ ಕೂಡ ಸರಿಯಿಲ್ಲ. ಏಕೆಂದರೆ ಪ್ರಥಮಪಾದವು ಸ್ವಪಕ್ಷಸ್ಥಾಪಕವಾದಂತೆ ಮೂರು ಹಾಗೂ ನಾಕನೆಯ ಪಾದಗಳೂ ಕೂಡ ಸ್ವಮತದಲ್ಲಿರುವ ದೋಷವನ್ನು ಪರಿಹರಿಸಿರುವುದರಿಂದ ಸ್ವಪಕ್ಷಸ್ಥಾಪಕವೇ ಆಗಿರುತ್ತವೆ. ಆದ್ದರಿಂದ ಪ್ರಥಮಪಾದದ ಅನಂತರ ಮೂರು ಹಾಗೂ ನಾಕನೆಯ ಪಾದಗಳು ಸಂಗತವಾಗುತ್ತವೆ. ಎರಡನೆಯ ಪಾದವನ್ನು ಕೊನೆಯಲ್ಲಿಯೇ ಹೇಳಬೇಕಿತ್ತು. ಆದ್ದರಿಂದ ಪಾದಗಳ ವ್ಯವಸ್ಥೆಯು ಅಯುಕ್ತವಾಗಿವೆ.

**प्रकाशः –**

**परस्परसाङ्कर्यान्मतान्तरोक्तमपि पादाभिधेयमयुक्तमित्याह – केचित्त्विति ।।**

ಅದ್ವೈತಮತದ ಪ್ರಕಾರ ಪಾದೋಪಾಧಿಗಳನ್ನು ನಿರಾಕರಣೆ ಮಾಡಿದ್ದಾಯಿತು. ಈಗ ರಾಮಾನುಜರ ಪ್ರಕಾರ ಪಾದೋಪಾಧಿಗಳನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. ಅದ್ವೈತಿಗಳಂತೆ ಇವರಿಗೂ

ಕೂಡ ಪರಸ್ಪರ ಸಾಂಕರ್ಯದೋಷ ಬರುವುದರಿಂದ ಪಾದಪ್ರಮೇಯಗಳು ಅಯುಕ್ತವಾಗಿವೆ ಎಂದು ಸಮರ್ಥಿಸಲು 'ಕೇಚಿತ್' ಇತ್ಯಾದಿ ಗ್ರಂಥವು ಹೊರಟಿವೆ.

**प्रकाशः – अधिकरणशरीराणि त्वग्रे व्यक्तानि – स्वपक्षेति ।।** ''न केवलं ब्रह्मकारणवादस्य निर्दोषतयैवैतत्समाश्रयणीयम् । प्रधानकारणवादस्य दुष्टत्वाच्च'' इत्यादिना त्वद्भाष्ये परपक्षे दोषोत्कीर्तनपरतया व्याख्यातत्वादिति भावः ।

ಗ್ರಂಥದಲ್ಲಿ ಉಲ್ಲೇಖಿಸಿರುವ ಅಧಿಕರಣಗಳಶರೀರವನ್ನು ಮುಂದೆ ಸ್ಪಷ್ಟಪಡಿಸುತ್ತೇವೆ. 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಭಾಷ್ಯದಲ್ಲಿ 'ನ ಕೇವಲಂ ಬ್ರಹ್ಮಕಾರಣವಾದಸ್ಯ ನಿರ್ದೋಷತಯಾ ಏತತ್‌ಸಮಾಶ್ರಯಣೀಯಮ್ ಪ್ರಧಾನಕಾರಣವಾದಸ್ಯ ದುಷ್ಟತ್ವಾಚ್ಚ' ಕೇವಲ ಬ್ರಹ್ಮಕಾರಣವಾದವು ನಿರ್ದುಷ್ಟವಾದ್ದರಿಂದ ಇದನ್ನು ಆಶ್ರಯಿಸಬಾರದು. ಪ್ರಧಾನಕಾರಣವಾದವೂ ಕೂಡ ದುಷ್ಟ ಆಗಿರುವುದರಿಂದ ಬ್ರಹ್ಮಕಾರಣವಾದವನ್ನು ಆಶ್ರಯಿಸಬೇಕು ಎಂಬುದಾಗಿ ಹೇಳಿರುತ್ತಾರೆ. ಇದರಿಂದ ಕೇವಲ ಸ್ವಪಕ್ಷ-ಸ್ಥಾಪನೆಯನ್ನಷ್ಟೇ ಮಾಡದೇ ಪರಪಕ್ಷದಲ್ಲಿ ದೋಷೋದ್ಧಾರವನ್ನೂ ಕೂಡ ಮಾಡಬೇಕೆಂದು ವ್ಯಾಖ್ಯಾನಿಸಿ-ದಂತಾಯಿತು.

**प्रकाशः –** आदिपदेन ''तर्काप्रतिष्ठानात्'' इत्यादिग्रहः । ''कपिलपातञ्जल-तर्काणामन्योन्यव्याघातात्तर्कस्याप्रतिष्ठितत्वात्'' इत्यादेस्त्वया भाषणादिति भावः ।।

'ಆದಿ' ಪದದಿಂದ 'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರಗಳನ್ನು ಪರಿಗ್ರಹಿಸಬೇಕು. 'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಕಪಿಲಪಾತಂಜಲತರ್ಕಾಣಾಮ್ ಅನ್ಯೋನ್ಯವ್ಯಾಘಾತಾತ್ ತರ್ಕಸ್ಯ ಅಪ್ರತಿಷ್ಠಿತತ್ವಾತ್' ಕಪಿಲ ಮತ್ತು ಪಾತಂಜಲರು ಹೇಳುವ ತರ್ಕಗಳು ಪರಸ್ಪರ ವ್ಯಾಹತವಾಗಿರುವುದರಿಂದ ಅಪ್ರತಿಷ್ಠಿತವಾಗಿದೆ ಎಂದು ನೀವೇ ಭಾಷ್ಯದಲ್ಲಿ ಹೇಳಿರುತ್ತೀರಿ. ಆದ್ದರಿಂದ ರಾಮಾನುಜರ ಪಾದೋಪಾಧಿಗಳಲ್ಲಿಯೂ ಪರಸ್ಪರ ಸಾಂಕರ್ಯದೋಷವು ಬರುತ್ತದೆ.




ರಾಮಾನುಜರು ಪಾದೋಪಾಧಿಗಳ ಬಗ್ಗೆ ಹೀಗೆ ತಮ್ಮ ಗ್ರಂಥಗಳಲ್ಲಿ ಹೇಳಿರುತ್ತಾರೆ - ಸ್ವಪಕ್ಷದಲ್ಲಿ ಕಾರಣವಿಷಯದಲ್ಲಿರುವ ಬಾಧಕಗಳನ್ನು ಪರಿಹರಿಸಲು ಸ್ವಪಕ್ಷಸ್ಥಾಪನೆಗಾಗಿ ಪ್ರಥಮಪಾದ ಹೊರಟಿದೆ. ಪರಮತನಿರಾಕರಣೆ ಮಾಡುವ ಮೂಲಕ ಕಾರಣವಿಷಯದಲ್ಲಿರುವ ದೋಷವನ್ನು ಹೇಳಲು ಎರಡನೆಯ ಪಾದವು ಹೊರಟಿದೆ. ಮೂರು ಮತ್ತು ನಾಕನೆಯ ಪಾದಗಳಲ್ಲಿ ಕಾರ್ಯವಿಷಯಕವಾದ ದೋಷವನ್ನು ಪರಿಹರಿಸುವ ಮೂಲಕ

ಸ್ವಪಕ್ಷವನ್ನು ಸ್ಥಾಪನೆ ಮಾಡಲು ಮೂರು ಮತ್ತು ನಾಕನೆಯ ಪಾದಗಳು ಹೊರಟವೆ. ಹೀಗೆ ಪಾದೋಪಾಧಿಗಳನ್ನು ಹೇಳುತ್ತಾರೆ.

ಇದು ತಪ್ಪು. ಹಾಗಾದರೆ ಪ್ರಥಮಪಾದದಲ್ಲಿ ಪರಪಕ್ಷವನ್ನು ಪ್ರತಿಕ್ಷೇಪ ಮಾಡಿಲ್ಲವೆಂದು ಹೇಳಿದಂತಾಯಿತು. ಆದರೆ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ರಾಮಾನುಜಭಾಷ್ಯದಲ್ಲಿ ಸ್ಪಷ್ಟವಾಗಿ ಪರಪಕ್ಷಪ್ರತಿಕ್ಷೇಪವನ್ನು ಮಾಡಿರುತ್ತಾರೆ. ಎರಡನೆಯ ಪಾದದಲ್ಲಿ 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಸ್ವಪಕ್ಷದಲ್ಲಿ ಬರುವ ದೋಷವನ್ನೂ ಕೂಡ ಪರಿಹರಿಸಿಕೊಂಡಿದ್ದಾರೆ. ಆದ್ದರಿಂದ ಪ್ರಥಮಪಾದದ ಉಪಾಧಿ, ಎರಡನೆಯ ಪಾದಲ್ಲಿ, ಎರಡನೆಯ ಪಾದದ ಉಪಾಧಿಯು ಪ್ರಥಮಪಾದದಲ್ಲಿ ಬರುವುದರಿಂದ ಪರಸ್ಪರ ಸಾಂಕರ್ಯದೋಷವು ಪ್ರಾಪ್ತವಾಗುತ್ತದೆ. ಅಷ್ಟೇ ಅಲ್ಲದೇ ಎರಡನೆಯ ಪಾದದಲ್ಲಿ ಬರುವ 'ಸಮವಾಯಾಭ್ಯುಪಗಮಾಚ್ಚ' ಇತ್ಯಾದಿ ಅನೇಕ ಸೂತ್ರಗಳಲ್ಲಿ ಕಾರಣವಿಷಯದ ಬಗ್ಗೆ ದೋಷವನ್ನು ಪರಿಹರಿಸುವುದಷ್ಟೇ ಅಲ್ಲದೇ ಸಮವಾಯಾದಿಗಳ ಬಗ್ಗೆಯೂ ದೋಷ ಪರಿಹಾರವನ್ನು ಮಾಡಿರುತ್ತಾರೆ. ಮೂರನೆಯ ಪಾದದಲ್ಲಿ ಕಾರ್ಯವಿಷಯದ ಬಗ್ಗೆ ಮಾತ್ರ ದೋಷವನ್ನು ಪರಿಹಾರ ಮಾಡದೇ, ಜೀವಾದಿಗಳ ಬಗ್ಗೆಯೂ ದೋಷವನ್ನು ಪರಿಹಾರ ಮಾಡಿದ್ದಾರೆ. ಆಶ್ಚರ್ಯವೆಂದರೆ ಮೂರು ಹಾಗೂ ನಾಕನೆಯ ಪಾದಭೇದವಿಷಯದಲ್ಲಿ ಉಪಾಧಿಭೇದವನ್ನೇ ಇವರು ಹೇಳಿರುವುದಿಲ್ಲ.

ಆದ್ದರಿಂದ ಆಮೂಲಾಗ್ರವಾಗಿ ರಾಮಾನುಜರ ಪಾದೋಪಾಧಿಗಳು ಅಸಮಿಚೀನವಾಗಿವೆ. ಅಷ್ಟೇ ಅಲ್ಲದೇ ಪಾದಕ್ರಮಗಳ ವಿಚಾರವೂ ಕೂಡ ಸರಿಯಿಲ್ಲ. ಏಕೆಂದರೆ ಸ್ವಪಕ್ಷಸ್ಥಾಪನೆಗಾಗಿ ಪ್ರಥಮಪಾದವು ಹೊರಟಿರುವಂತೆ, ಮೂರು ಹಾಗೂ ನಾಕನೆಯ ಪಾದಗಳು ಹೊರಟವೆ. ಎರಡನೆಯ ಪಾದದಲ್ಲಿ ಪರಪಕ್ಷಪ್ರತಿಕ್ಷೇಪವನ್ನು ಮಾಡಿದ್ದಾರೆ. ಆದ್ದರಿಂದ ಎರಡನೆಯ ಪಾದವನ್ನು ಕೊನೆಯಲ್ಲಿಯೇ ಹೇಳಬೇಕಿತ್ತು.

### ಸಂಗತಿ ಹಾಗೂ ಸಂಶಯಕೋಟಿಗಳು

## तात्पर्यचन्द्रिका

**।। स्मृत्यनवकाशदोषप्रसङ्ग इति चेन्नान्यस्मृत्यनवकाशदोषप्रसङ्गात् ।। अत्र लौकिकार्थविषयाऽऽप्तवाक्यरूपस्मृत्यविरोध उच्यते ।**

'ಸ್ಮೃತ್ಯನವಕಾಶದೋಷಪ್ರಸಂಗಃ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರದಿಂದ ಸ್ಮೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಕೇವಲ ಲೌಕಿಕಾರ್ಥವನ್ನು ವಿಷಯೀಕರಿಸುವ ಆಪ್ತವಾಕ್ಯವೆನಿಸಿದ ಪಾಶುಪತಾದಿಸ್ಮೃತಿಗಳ ವಿರೋಧವನ್ನು ಪರಿಹರಿಸಲಾಗಿದೆ.

**नच स्मृत्यविरोधस्य युक्तिपादे कथं निवेश इति वाच्यम् ।**

ಪ್ರಶ್ನೆ - ಇದು ಯುಕ್ತಿಪಾದ. ಆದರೆ ಸ್ಮೃತ್ಯಧಿಕರಣದಲ್ಲಿ ಶ್ರುತಿವಿರೋಧವನ್ನಷ್ಟೇ ಪರಿಹರಿಸಲಾಗಿದೆ. ಈ ಅಧಿಕರಣವು ಯುಕ್ತಿಪಾದದಲ್ಲಿ ಅಸಂಗತವಾಗುತ್ತದಲ್ಲವೇ ?

**पाशुपतादिस्मृतीनां समयरूपत्वेन स्वोक्तार्थे सम्मतित्वेन श्रुतियुक्तिकथनेन च चतुःस्वरूपत्वात् तदविरोधस्यैकैकाविरोधप्रतिपादके पादविशेषेऽनन्तर्भावेऽप्य-विरोधाध्यायान्तर्भावेणाध्यायस्यादावन्ते वा निवेशने कर्तव्ये प्रथमातिक्रमे हेत्वभावाच्चतुरात्मकत्वेन प्रबलतया प्रथमं निरसनीयत्वाच्चाध्यायादावेव निवेशनात्। तदाह टीकाकारः ''प्राथम्योपपत्तेः'' इति ।**

ಉತ್ತರ - ಈ ಅಧಿಕರಣಕ್ಕೆ ನಾಕು ಪಾದಗಳಲ್ಲಿಯೂ ಕೂಡ ಸಂಗತಿಯಿರುವುದಿಲ್ಲ. ಏಕೆಂದರೆ ಪಾಶುಪತಾದಿಸ್ಮೃತಿಗಳು ಒಂದೊಂದು ಸಿದ್ಧಾಂತವನ್ನು ಸಮರ್ಥನೆ ಮಾಡುತ್ತಿರುವುದರಿಂದ ಸಮಯರೂಪವಾಗಿವೆ. ಅಷ್ಟೇ ಅಲ್ಲದೇ ಆಯಾ ಸ್ಮೃತಿಕಾರರು ತಾವು ಹೇಳಿದ ಅರ್ಥದಲ್ಲಿ ಶ್ರುತಿ ಹಾಗೂ ಯುಕ್ತಿಗಳನ್ನು ಸಂವಾದಿಯಾಗಿ ಹೇಳುತ್ತಾರೆ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಕೇವಲ ಸಮಯರೂಪವಷ್ಟೇ ಅಲ್ಲ. ಶ್ರುತಿರೂಪವೂ ಆಗಿದೆ, ಯುಕ್ತಿರೂಪವೂ ಆಗಿದೆ. ಶ್ರುತಿಸಹಿತವಾದ ಯುಕ್ತಿರೂಪವೂ ಆಗಿದೆ. ಈ ಅಧ್ಯಾಯದ ನಾಕುಪಾದಗಳಲ್ಲಿ ಸಮರ್ಥಿಸುವ, ನಾಕೂ ಬಗೆಯ ಉಪಾಧಿಗಳನ್ನು ಹೊಂದಿರುತ್ತದೆ. ಆದರೆ ಒಂದೊಂದು ಪಾದಗಳಲ್ಲಿ ಕೇವಲ ಒಂದೊಂದು ಉಪಾಧಿಗಳ ಅವಿರೋಧವನ್ನಷ್ಟೇ ತೋರಿಸಲಾಗಿದೆ. ನಾಕು ಉಪಾಧಿಗಳನ್ನೊಳಗೊಂಡ ಸ್ಮೃತಿಗಳಿಗೆ ಯಾವುದೇ ಒಂದು ಪಾದದಲ್ಲಿ ಅಂತರ್ಭಾವಸಂಗತಿಯು ಕೂಡುವುದಿಲ್ಲ. ಆದರೆ ಸ್ಮೃತಿಗಳ ವಿರೋಧವನ್ನು ಪರಿಹರಿಸುತ್ತಿರುವುದರಿಂದ ಅವಿರೋಧಾಧ್ಯಾಯಲ್ಲಂತೂ ಅಂತರ್ಭಾವ ಮಾಡಲೇಬೇಕು. ಆದ್ದರಿಂದ ನಾಕು ಪಾದಗಳಲ್ಲಿಯೂ ಸ್ಮೃತ್ಯಧಿಕರಣವನ್ನು ನಿವೇಶ ಮಾಡದೇ ಅಧ್ಯಾಯದ ಆದಿಯಲ್ಲಾಗಲೀ, ಅಥವಾ ಕೊನೆಯಲ್ಲಾಗಲೀ, ಇದನ್ನು ನಿವೇಶ ಮಾಡಬೇಕು. 'ಪ್ರಥಮಾತಿಕ್ರಮಣೇ ಕಾರಣಾಭಾವತ್' ಅಧ್ಯಾಯದ ಪ್ರಾರಂಭದಲ್ಲಿಯೇ ಸ್ಮೃತ್ಯಧಿಕರಣವನ್ನು ಸೂತ್ರಕಾರರು ಉಲ್ಲೇಖಿಸಿದ್ದಾರೆ. ಮತ್ತು ಚತುಃಸ್ವರೂಪವನ್ನು ಹೊಂದಿರುವ ಕಾರಣ ಈ ಸ್ಮೃತಿಗಳ ವಿರೋಧವು ಅತ್ಯಂತ ಬಲಿಷ್ಠವಾಗಿದೆ. ಮಹಾಮಲ್ಲಭಂಗನ್ಯಾಯದಿಂದ ಪ್ರಾರಂಭದಲ್ಲಿಯೇ ಅಂತಹ ಸ್ಮೃತಿಗಳ ವಿರೋಧವನ್ನು ಪರಿಹರಿಸುವುದು ಸೂಕ್ತವಾಗುತ್ತದೆಂಬ ದೃಷ್ಟಿಯಿಂದಲೂ ಸೂತ್ರಕಾರರು ಸ್ಮೃತ್ಯಧಿಕರಣವನ್ನು ಪ್ರಾರಂಭದಲ್ಲಿಯೇ ನಿವೇಶಿಸಿದ್ದಾರೆ. ಇದನ್ನೇ ಶ್ರೀಮಟ್ಟೀಕಾಕೃತ್ಪಾದರು 'ಪ್ರಾಥಮ್ಯೋಪಪತ್ತೇಃ' ಸ್ಮೃತ್ಯಧಿಕರಣಕ್ಕೆ ಪ್ರಥಮಸ್ಥಾನವು ಯುಕ್ತವಾಗುತ್ತದೆ ಎಂಬ ಮಾತಿನಿಂದ ಹೇಳಿರುತ್ತಾರೆ.

**अभ्युपेत्य चेदमुक्तम् । वस्तुतस्तु । चतुःस्वरूपत्वादस्य चतुर्ष्वपि पादेष्व-न्तर्भावसंभवादुक्तहेतुभ्यां प्रबलत्वाच्चाद्यपादस्यादौ निवेशः । तदाह । ''पादार्थस्याप्यत्र संभवेन'' इति ।।**

ಮೇಲೆ ಹೇಳಿದ ಸಮಾಧಾನವು ಅಂಗೀಕಾರವಾದದಿಂದ ಹೊರಟಿರುತ್ತದೆ. ವಿಚಾರ ಮಾಡಿದರೆ

ಸ್ಮೃತ್ಯಧಿಕರಣವು ನಾಕು ಉಪಾಧಿಗಳನ್ನು ಹೊಂದಿರುವುದರಿಂದ ನಾಕುಪಾದಗಳಲ್ಲಿಯೂ ಸಂಗತವಾಗುತ್ತದೆ. 'ಪ್ರಥಮಾತಿಕ್ರಮಣೇ ಕಾರಣಾಭಾವಃ' 'ಚತುರಾತ್ಮಕತ್ವೇನ ಪ್ರಾಬಲ್ಯಮ್'[೧] ಎಂಬ ಎರಡು ಹೇತುಗಳಿಂದ ಪ್ರಥಮಪಾದದ ಆದಿಯಲ್ಲಿಯೇ ಸೂತ್ರಕಾರರು ಈ ಸ್ಮೃತ್ಯಧಿಕರಣವನ್ನು ಉಲ್ಲೇಖಿಸಿದ್ದಾರೆ. ಇದನ್ನೇ ಟೀಕೆಯಲ್ಲಿ 'ಪಾದಾರ್ಥಸ್ಯಾಪ್ಯತ್ರ ಸಂಭವೇನ' ಎಂಬ ಮಾತಿನಿಂದ ಸೂಚನೆ ಮಾಡಿದ್ದಾರೆ.

**इतः परं पूर्वपक्षादिकं न पृथगुच्यते ।**
**ग्रन्थगौरवभीत्या च टीकादौ च स्फुटत्वतः ॥१॥**

ಇತಃ ಪರಂ ಪೂರ್ವಪಕ್ಷಾದಿಕಂ ನ ಪೃಥಗುಚ್ಯತೇ ।
ಗ್ರಂಥಗೌರವಭೀತ್ಯಾ ಚ ಟೀಕಾದೌ ಚ ಸ್ಫುಟತ್ವತಃ ॥೧॥

ಇನ್ನು ಮುಂದೆ ಪ್ರತಿಯೊಂದು ಅಧಿಕರಣಗಳಲ್ಲಿಯೂ ಪೂರ್ವಪಕ್ಷ, ಸಿದ್ಧಾಂತ ಅನ್ಯಮತೀಯ ಅಧಿಕರಣದ ಅನುವಾದ, ಅದರ ನಿರಾಕರಣೆ ಇವುಗಳನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ. ಈಗಾಗಲೇ ಗ್ರಂಥವು ಬಹಳಷ್ಟು ಬೆಳೆದಿದೆ. ಇನ್ನೂ ಹೆಚ್ಚು ಗ್ರಂಥಗೌರವ ಬರಬಾರದೆಂಬ ಭಯದಿಂದ ವ್ಯಾಖ್ಯಾನವನ್ನು ಮೊಟಕುಗೊಳಿಸಿದ್ದೇವೆ. ಮತ್ತು ಟೀಕಾದಿಗಳಲ್ಲಿಯೇ ಪೂರ್ವಪಕ್ಷಾದಿಗಳನ್ನು ಸ್ಫುಟವಾಗಿ ಹೇಳಿರುತ್ತಾರೆ.[೨]

(೧) ತಾತ್ಪರ್ಯಚಂದ್ರಿಕಾ ಗ್ರಂಥಕ್ಕೆ 'ಚಂದ್ರಿಕಾಬಿಂದು' ಎಂಬ ವ್ಯಾಖ್ಯಾನವು ಪ್ರಸಿದ್ಧವಾಗಿದ್ದು. ಈಗಾಗಲೇ ಅದು ಮುದ್ರಿತವಾಗಿದೆ. ಪ್ರಥಮಾಧ್ಯಾಯಕ್ಕೆ 'ಚಂದ್ರಿಕಾಬಿಂದು' ಎಂಬ ವ್ಯಾಖ್ಯಾನವನ್ನು ಶ್ರೀಸತ್ಯಪ್ರಿಯತೀರ್ಥರು ಬರೆದಿರುತ್ತಾರೆ. ಆದರೆ ಎರಡನೇ ಅಧ್ಯಾಯಕ್ಕೆ ಶ್ರೀಸತ್ಯಾನಂದತೀರ್ಥರು ವ್ಯಾಖ್ಯಾನವನ್ನು ಬರೆದಿದ್ದಾರೆ. ಪ್ರಕೃತ 'ಉಕ್ತಹೇತುಭ್ಯಾಂ' ಎಂಬ ಮಾತಿಗೆ ಪ್ರಕಾಶಟಪ್ಪಣಿಯಲ್ಲಿ ವ್ಯಾಖ್ಯಾನಿಸಿಲ್ಲ. ಆದರೆ ಶ್ರೀಸತ್ಯಾನಂದತೀರ್ಥರು ಚಂದ್ರಿಕಾಬಿಂದುವಿನಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ- 'ಉಕ್ತಹೇತುಭ್ಯಾಂ' = 'ಪ್ರಥಮಾತಿಕ್ರಮೇ ಕಾರಣಾಭಾವಃ' ಚತುರಾತ್ಮಕತ್ವೇನ ಪ್ರಾಬಲ್ಯಂ ಚ ಇತಿ ಉಕ್ತಹೇತುಭ್ಯಾಂ' ಎಂದು. ಇವರ ಈ ವ್ಯಾಖ್ಯಾನವಿಲ್ಲದೇ ಉಕ್ತಹೇತುಭ್ಯಾಂ ಎಂಬ ಮಾತಿಗೆ ಅರ್ಥವಾಗುವುದು ಕಷ್ಟವಾಗುತ್ತದೆ. ಆದರೆ ಮುದ್ರಿತ ಪುಸ್ತಕದಲ್ಲಿ 'ಪ್ರಬಲತ್ವಾಚ್ಚ' ಎಂಬ ಪಾಠವಿದೆ. ಶ್ರೀಸತ್ಯಾನಂದತೀರ್ಥರು ಮಾಡಿದ ವ್ಯಾಖ್ಯಾನವನ್ನು ವಿವಕ್ಷಿಸಿದಾಗ 'ಪ್ರಬಲತ್ವಾಚ್ಚ' ಎಂಬ ಪದವು ಬೇಕಾಗುವುದಿಲ್ಲ. ಆವಾಗ 'ಉಕ್ತಹೇತುಭ್ಯಾಂ ಆದ್ಯಪಾದಸ್ಯ ಆದೌ ನಿವೇಶಃ' ಎಂದಷ್ಟೇ ಸಾಕು.

(೨) ಗ್ರಂಥಕಾರರು ಮೊದಲನೆಯ ಅಧ್ಯಾಯದಲ್ಲಿ ಪ್ರತಿಯೊಂದು ಅಧಿಕರಣಗಳನ್ನು ವ್ಯಾಖ್ಯಾನ ಮಾಡುವಾಗ ಸಂಶಯಬೀಜ, ಪೂರ್ವಪಕ್ಷ, ಸಿದ್ಧಾಂತ, ಸೂತ್ರಗಳ ಅರ್ಥ, ಸೂತ್ರಕ್ರಮ ಸ್ವಾರಸ್ಯ, ಅನ್ಯಮತೀಯರ ಅಧಿಕರಣ ಶರೀರ, ಅದರ ನಿರಾಕರಣೆ ಹಾಗೂ ಟೀಕೆಯ ಅಕ್ಷರಾರ್ಥ. ಇದೇ ಕ್ರಮದಲ್ಲಿ ಪ್ರತಿಯೊಂದು ಅಧಿಕರಣಗಳನ್ನು ವ್ಯಾಖ್ಯಾನ ಮಾಡಿದರು. ಇನ್ನು ಮುಂದೆ ಎರಡನೆಯ ಅಧ್ಯಾಯದಲ್ಲಿ ಈ ಕ್ರಮವನ್ನು

**अत्र पूर्वाध्यायोक्ते विष्णोः कारणत्वादौ श्रुतिसमन्वयो न युक्तो युक्तो वेति चिन्ता ।**

ಸ್ಮೃತ್ಯಧಿಕರಣದ ಸಂಶಯಪರಂಪರೆ ಹೀಗಿದೆ - ಹಿಂದಿನ ಅಧ್ಯಾಯದಲ್ಲಿ ಮಹಾವಿಷ್ಣುವೇ ಜಗತ್ ಕಾರಣನಾಗಿದ್ದಾನೆ ಎಂಬುದನ್ನು ಸಮರ್ಥಿಸಲು ಸಕಲಶ್ರುತಿಗಳ ಸಮನ್ವಯವನ್ನು ಮಾಡಲಾಯಿತು. ಇದು ಅಯುಕ್ತವೋ, ಅಥವಾ ಯುಕ್ತವೋ ಎಂಬುದು ಪ್ರಧಾನ ಸಂಶಯ.

**तदर्थं किं पाशुपतादिश्रुत्यनुसारेण श्रुतिर्नेयोत नेति ।**

ಅದರ ಪರಿಹಾರಕ್ಕಾಗಿ ಪಾಶುಪತಾದಿಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ವ್ಯಾಖ್ಯಾನ ಮಾಡಬೇಕೋ, ಅಥವಾ ಪಾಶುಪತಾದಿಸ್ಮೃತಿಗಳನ್ನು ಅನುಸರಿಸದಯೇ ವ್ಯಾಖ್ಯಾನ ಮಾಡಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किं स्मृतिः प्रबलोत नेति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಶ್ರುತಿ-ಸ್ಮೃತಿಗಳ ನಡುವೆ ಸ್ಮೃತಿಯು ಪ್ರಬಲವೋ, ಅಲ್ಲವೋ ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः —**

**स्मृत्यनवकाशेति** ।। अत्रान्यैः कैश्चिच्च कापिलस्मृत्यविरोध उच्यत इत्युक्तम् । तत्तु वक्ष्यमाणदिशा न युक्तमिति भावेन "प्रथमतस्स्मृत्यविरोधं दर्शयति" इति भाष्योक्तमधिकरणार्थमाह – **अत्रेति** ।। कृत्स्नावैदिकस्मृत्यविरोधोऽत्र साध्यत इत्यर्थः।

ಸ್ಮೃತ್ಯಧಿಕರಣವು ಸಾಂಖ್ಯಸ್ಮೃತಿಯ ವಿರೋಧವನ್ನು ಪರಿಹರಿಸುತ್ತಿದೆ ಎಂಬುದಾಗಿ ಅದ್ವೈತಿಗಳು

---

ಗ್ರಂಥಗೌರವಭಯದಿಂದ ಬಿಡುತ್ತಿದ್ದಾರೆ. ಕೇವಲ ಟೀಕೆಯಲ್ಲಿರುವ ಗ್ರಂಥಗೌರವಭಯದಿಂದ ಟೀಕೆಯ ಕೆಲವು ಪ್ರತೀಕಗಳನ್ನು ಗ್ರಹಣ ಮಾಡಿ, ಅದರ ವ್ಯಾಖ್ಯಾನದ ನೆಪದಲ್ಲಿಯೇ ಸಂಕ್ಷೇಪವಾಗಿ ಇವುಗಳನ್ನು ಹೇಳಿರುತ್ತಾರೆ. ಅಥವಾ ಟೀಕಾದಿಗಳನ್ನು ಅಧ್ಯಯನ ಮಾಡಿ, ಸ್ವತಃ ನೀವೇ ತಿಳಿದುಕೊಳ್ಳಿ ಎಂದು ಮಾರ್ಗದರ್ಶನ ಮಾಡಿರುತ್ತಾರೆ. ಮೂರು ಹಾಗೂ ನಾಕನೆಯ ಅಧ್ಯಾಯಗಳಿಗೆ ಗ್ರಂಥಕಾರರಾದ ಶ್ರೀವ್ಯಾಸತೀರ್ಥರು ಚಂದ್ರಿಕಾವ್ಯಾಖ್ಯಾನವನ್ನು ಮಾಡಿರುವುದಿಲ್ಲ. ಅವರ ಪರಂಪರೆಯಲ್ಲಿ ಬಂದ ಶೇಷಚಂದ್ರಿಕಾಚಾರ್ಯರೆಂದೇ ಪ್ರಸಿದ್ಧವಾದ ಶ್ರೀರಘುನಾಥಯತಿಗಳು ಚಂದ್ರಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಪ್ರಥಮಾಧ್ಯಾಯದಲ್ಲಿ ಗ್ರಂಥಕಾರರು ಯಾವ ಕ್ರಮವನ್ನು ಅನುಸರಿಸಿದ್ದಾರೋ, ಅದೇ ಕ್ರಮದಲ್ಲಿಯೇ ಪ್ರತಿಯೊಂದು ಅಧಿಕರಣಗಳನ್ನು ವ್ಯಾಖ್ಯಾನಿಸಿದ್ದಾರೆ.

ಹಾಗೂ ವಿಶಿಷ್ಟಾದ್ವೈತಿಗಳು ಹೇಳುತ್ತಾರೆ. ಗ್ರಂಥಕಾರರೇ ಮುಂದೆ ನಿರೂಪಣೆ ಮಾಡುವಂತೆ ಇವರ ಈ ವಿಚಾರ ಅಯುಕ್ತವಾಗಿದೆ. ಇದೇ ಅಭಿಪ್ರಾಯದಿಂದ 'ಪ್ರಥಮತಃ ಸ್ಮೃತ್ಯವಿರೋಧಂ ದರ್ಶಯತಿ' ಎಂಬ ಭಾಷ್ಯದಲ್ಲಿ ಹೇಳಿದ ಸ್ಮೃತ್ಯಧಿಕರಣದ ಅರ್ಥವನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ. ಕೇವಲ ಸಾಂಖ್ಯಸ್ಮೃತಿ ವಿರೋಧವನ್ನಷ್ಟೇ ಪರಿಹರಿಸುವುದು ಈ ಅಧಿಕರಣದ ಉದ್ದೇಶವಲ್ಲ. ವೇದಕ್ಕೆ ವಿರುದ್ಧವಾದ ಎಲ್ಲಾ ಬಗೆಯ ಸ್ಮೃತಿವಿರೋಧಗಳನ್ನು ಪರಿಹರಿಸುವುದೂ ಇದರ ಉದ್ದೇಶವಾಗಿದೆ.

**प्रकाशः** – यद्वा टीकायां ''पाशुपतादिस्मृतिविरोधाभावं दर्शयति'' इत्युक्तमयुक्तमिव । शास्त्रयोनिसूत्र एव तदप्रामाण्यस्योक्तत्वादित्यत आह – लौकिकेति ॥

ಅಥವಾ ಟೀಕೆಯಲ್ಲಿ 'ಪಾಶುಪತಾದಿಸ್ಮೃತಿವಿರೋಧಾಭಾವಂ ದರ್ಶಯತಿ' ಪಾಶುಪತ ಮೊದಲಾದ ಎಲ್ಲಾ ಬಗೆಯ ಸ್ಮೃತಿವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿದ್ದಾರೆ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದು ಅಯುಕ್ತವೆಂದು ಆಪಾತತಃ ಕಾಣಿಸುತ್ತದೆ. ಏಕೆಂದರೆ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸಾಧಿಸಲಾಗಿದೆ. ಅವುಗಳ ಅಪ್ರಾಮಾಣ್ಯದಿಂದಲೇ ವಿರೋಧವನ್ನೂ ಕೂಡ ಪರಿಹರಿಸಿದಂತಾಗುತ್ತದೆ. ಪುನಃ ಈ ಅಧಿಕರಣದ ಕೃತ್ಯವೇನು? ಎಂಬ ಆಶಂಕೆಯ ಪರಿಹಾರಕ್ಕಾಗಿ ಗ್ರಂಥದಲ್ಲಿ 'ಲೌಕಿಕಾರ್ಥವಿಷಯ' ಇತ್ಯಾದಿಯಾಗಿ ಹೇಳಿದ್ದಾರೆ.

**प्रकाशः** – तथा च दृष्टफलेष्वेव संवादादिना प्रामाण्यमिति प्राप्ते तत्रैव व्यभिचारव्युत्पादनेन तदविरोधोऽत्रोच्यते ।

ಶಾಸ್ತ್ರಯೋನಿತ್ವಾಧಿಕರಣದಲ್ಲಿ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಸಾಧಿಸಿದ್ದು ಸತ್ಯ. ಆದರೆ ಆ ಸ್ಮೃತಿಗಳಲ್ಲಿ ಹೇಳಿದಂತೆ ಕೆಲವು ಧರ್ಮಾನುಷ್ಠಾನಗಳಿಂದ ಫಲವು ದೊರೆಯುವುದು ಕಂಡಿದೆ. ಹೀಗೆ ಫಲಸಂವಾದದಿಂದ ಪುನಃ ಪಾಶುಪತಾದಿಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಬೇಕಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಅದರ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ. ದೃಷ್ಟಫಲಕವಾದ ವಾಕ್ಯಗಳಲ್ಲಿಯೇ ವ್ಯಭಿಚಾರವಿದೆ ಎಂದು ತೋರಿಸುವುದೇ ಇದರ ಉದ್ದೇಶ. ಆದ್ದರಿಂದ ಅಂತಹ ಸ್ಮೃತಿಗಳ ವಿರೋಧವನ್ನು ಇಲ್ಲಿ ಪರಿಹರಿಸುವುದು ಅರ್ಥಪೂರ್ಣವಾಗಿದೆ.

**प्रकाशः** – तत्र तु तदंशे प्रामाण्यमुपेत्य कारणत्वाद्यंश एवाप्रामाण्यमुच्यत इत्युक्तं भवति ।

ಹಾಗಾದರೆ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಅಪ್ರಾಮಾಣ್ಯವನ್ನು ಹೇಳಿದ್ದು ತಪ್ಪಾಯಿತಲ್ಲವೇ? ಎಂಬುದಾಗಿ ಮುಂದಿನ ಪ್ರಶ್ನೆ ಬರುತ್ತದೆ. ಇದಕ್ಕೆ ಹೀಗೆ ಉತ್ತರ - ದೃಷ್ಟಫಲಕವಾದ ವಾಕ್ಯಗಳಿಗೆ ಪ್ರಾಮಾಣ್ಯವನ್ನು ಒಪ್ಪಿಯೇ ಅದೃಷ್ಟಫಲಕವಾದ ಜಗತ್ಕಾರಣತ್ವಾದ್ಯಂಶದಲ್ಲಷ್ಟೇ ಅಪ್ರಾಮಾಣ್ಯವನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿ

ಸಮರ್ಥಿಸಲಾಗಿದೆ ಹೊರತು, ಎಲ್ಲಾ ವಾಕ್ಯಗಳಿಗೂ ಅಪ್ರಾಮಾಣ್ಯವನ್ನು ಅಲ್ಲಿ ಸಮರ್ಥಿಸಿಲ್ಲ. ಅದೃಷ್ಟಫಲಕವಾದ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸಮರ್ಥಿಸಿ, ಈ ಸ್ಮೃತ್ಯಧಿಕರಣದಲ್ಲಿ ದೃಷ್ಟಫಲಕವಾದ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸಮರ್ಥಿಸುತ್ತಿದ್ದಾರೆ. ಆದ್ದರಿಂದ ಗತಾರ್ಥತ್ವಾಶಂಕೆಯು ಬರುವುದಿಲ್ಲ.

**प्रकाशः** – अथवा श्रुतिविरुद्धस्मृतीनां पूर्वतन्त्रे ''विरोधे त्वनपेक्षं स्यात्'' इति विरोधाधिकरण एवाप्रामाण्यव्युत्पादनात्कथमत्र प्राक्समन्वितश्रुतिप्रामाण्याय स्मृत्यविरोध उच्यत इत्यत उक्तम् – **आप्तवाक्यरूपेति** । तत्र श्रुतिमूलत्वेनैव प्रामाण्याङ्गीकारात्तत्र तथात्वेऽपि नेह तथेति वक्ष्यत इति भावः ।

ಅಥವಾ ಶ್ರುತಿಗೆ ವಿರುದ್ಧವಾದ ಎಲ್ಲಾ ಸ್ಮೃತಿಗಳು ಅಪ್ರಮಾಣವಾಗುತ್ತವೆ ಎಂಬುದಾಗಿ 'ವಿರೋಧೇ ತ್ವನಪೇಕ್ಷಂ ಸ್ಯಾತ್' ಎಂಬ ಪೂರ್ವಮೀಮಾಂಸೆಯ ವಿರೋಧಾಧಿಕರಣದಲ್ಲಿಯೇ ಸಮರ್ಥಿಸಿದ್ದಾಗಿದೆ. ಈಗಾಗಲೇ ಪ್ರಥಮಾಧ್ಯಾಯದಲ್ಲಿ ಎಲ್ಲಾ ಶ್ರುತಿಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವ ಮೂಲಕ ಪ್ರಾಮಾಣ್ಯವನ್ನು ಒಪ್ಪಿದ್ದಾಗಿದೆ. ಅಂತಹ ಶ್ರುತಿಗೆ ವಿರುದ್ಧವಾದ ಸ್ಮೃತಿಗಳು ಅಪ್ರಮಾಣವೆಂದು ಪೂರ್ವಮೀಮಾಂಸೆಯ ಅಧಿಕರಣದಿಂದಲೇ ಸಿದ್ಧವಾಗಿರುವಾಗ ಪುನಃ ಈ ಅಧಿಕರಣದಲ್ಲಿ ಅಂತಹ ಶ್ರುತಿಗಳ ವಿರೋಧಪರಿಹಾರವು ಅನಾವಶ್ಯಕವಲ್ಲವೇ ? ಈ ಪ್ರಶ್ನೆಗೆ 'ಆಪ್ತವಾಕ್ಯರೂಪ' ಎಂಬ ವಿಶೇಷಣದಿಂದ ಉತ್ತರಿಸಿದ್ದಾರೆ.

ಅಭಿಪ್ರಾಯ ಹೀಗಿದೆ - ಪೂರ್ವಮೀಮಾಂಸೆಯ ವಿರೋಧಾಧಿಕರಣದಲ್ಲಿ ಸ್ಮೃತಿಗಳಿಗೆ ಶ್ರುತಿಮೂಲಕವಾಗಿ ಪ್ರಾಮಾಣ್ಯವನ್ನು ಹೇಳಬೇಕೆಂದು ನಿಶ್ಚಯಿಸಿ, ಅಪ್ರಾಮಾಣ್ಯವನ್ನು ಸಮರ್ಥಿಸಲಾಗಿದೆ. ಆದರೆ ಪ್ರಕೃತ ಆಪ್ತೋಕ್ತವಾದ್ದರಿಂದ ಸ್ಮೃತಿಗಳು ಪ್ರಮಾಣವಾಗಬೇಕಲ್ಲವೇ? ಎಂದು ಪೂರ್ವಪಕ್ಷ ಮಾಡಲಾಗಿದೆ. ಹೀಗೆ ವಿವಕ್ಷಾಭೇದವಿರುವುದರಿಂದ ಸ್ಮೃತಿಗಳಿಂದ ವಿರೋಧ ಪರಿಹರಿಸುತ್ತಿರುವುದು ವ್ಯರ್ಥವಾಗುವುದಿಲ್ಲ.

**प्रकाशः** – नन्वलौकिके कारणत्वादौ कथमाप्तत्वम् । संवादाभावादित्यत उक्तं – **लौकिकार्थेति** ।।

ಅಲೌಕಿಕವಾದ ಜಗತ್ಕಾರಣತ್ವಾದಿ ವಿಷಯದಲ್ಲಿ ರುದ್ರಾದಿಗಳು ಹೇಗೆ ಆಪ್ತರಾಗುತ್ತಾರೆ? ತಮ್ಮನ್ನು ತಾವು ಜಗತ್ಕಾರಣವೆಂದು ಅವರು ಹೇಳಿಕೊಳ್ಳಬಹುದು. ಆದರೆ ಆ ವಿಷಯದಲ್ಲಿ ಯಾವುದೇ ಸಂವಾದ ಪ್ರಮಾಣವಿರುವುದಿಲ್ಲವೇ? ಈ ಪ್ರಶ್ನೆಗೆ 'ಲೌಕಿಕಾರ್ಥ' ಎಂಬುದರಿಂದಲೇ ಉತ್ತರಿಸಿದ್ದಾರೆ.

**प्रकाशः** – ''स्मृतीनां युक्तिसमयादिरूपत्वेन'' इत्यादिटीकां ''तस्याश्रुतः स्वरूपत्वात्'' इत्यनुव्याख्यानानुसारेण शङ्कापूर्वं विवृणोति – **नचेति** ।।

'ಸ್ಮೃತಿಗಳು ಯುಕ್ತಿರೂಪವೂ ಆಗಿವೆ, ಸಮಯರೂಪವೂ ಆಗಿವೆ' ಇತ್ಯಾದಿ ಟೀಕೆಯನ್ನು 'ತಸ್ಯಾಶ್ಚತುಃ ಸ್ವರೂಪತ್ವಾತ್' ಸ್ಮೃತಿಯು ಚತುಃಸ್ವರೂಪವಾಗಿರುವುದರಿಂದ ಇತ್ಯಾದಿ ಅನುವ್ಯಾಖ್ಯಾನಕ್ಕೆ ಅನುಸಾರಿಯಾಗಿ ಶಂಕಾಪೂರ್ವಕವಾಗಿ ವಿವರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः – श्रुतीति ।।** तत्प्रामाण्यवादिस्मृत्यपेक्षयेदम् । सुधोक्तं हेतुमुक्त्वा ''प्रधानमल्लनिबर्हणन्यायेन'' इति सन्यायरत्नावल्युक्तमाह – **चतुरात्मकत्वेनेति ।।**

ಯಾರು ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪುತ್ತಾರೋ, ಅವರ ಪ್ರಕಾರ ಪಾಶುಪತಾದಿಸ್ಮೃತಿಗಳಿಗೆ ಶ್ರುತಿಸ್ವರೂಪವನ್ನು ತಿಳಿಯಬೇಕು. ಬೌದ್ಧಾದಿಗಳು ಶ್ರುತಿಗಳಿಗೆ ಪ್ರಾಮಾಣ್ಯವನ್ನೇ ಒಪ್ಪದ ಕಾರಣ, ಅವರಿಂದ ನಿರ್ಮಿಸಲಾದ ಸ್ಮೃತಿಗಳನ್ನು ಇಲ್ಲಿ ವಿವಕ್ಷಿಸಲಾಗದು. ನ್ಯಾಯಸುಧೆಯಲ್ಲಿ ಉಕ್ತವಾದ ಹೇತುವನ್ನು ಹೇಳಿ, 'ಪ್ರಧಾನಮಲ್ಲನಿಬರ್ಹಣನ್ಯಾಯೇನ' ಎಂಬ ಸನ್ನ್ಯಾಯರತ್ನಾವಳಿಯ ಅಭಿಪ್ರಾಯವನ್ನೂ ಕೂಡ 'ಚುತರಾತ್ಮಕತ್ವೇನ' ಎಂಬುದರಿಂದ ನಿರೂಪಣೆ ಮಾಡುತ್ತಿದ್ದಾರೆ.

**प्रकाशः –** ''पादार्थस्याप्यत्र सम्भवेन'' इत्युत्तरटीकावाक्यं विवृणोति – **अभ्युपेत्येति ।।** एतदर्थद्वयं सुधायां स्पष्टमुक्तमिति भावः ।

'ಪಾದಾರ್ಥಸ್ಯಾಪ್ಯತ್ರ ಸಂಭವೇನ' ಎಂಬ ಮುಂದಿನ ಟೀಕಾವಾಕ್ಯವನ್ನು 'ಅಭ್ಯುಪೇತ್ಯ' ಎಂಬುದರಿಂದ ವಿವರಿಸಿದ್ದಾರೆ. ಈ ಎರಡು ಬಗೆಯ ಪರಿಹಾರವನ್ನು ನ್ಯಾಯಸುಧೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

**प्रकाशः –** शास्त्रादिसङ्गत्युक्तिपरटीका विवृतप्रायेति भावेन विषयसंशयटीकां व्यनक्ति – **अत्रेति ।।**

ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಮೊದಲಾದವುಗಳನ್ನು ತಿಳಿಸುವ ಟೀಕೆಯು ವಿವೃತವಾಯಿತು ಎಂಬ ಅಭಿಪ್ರಾಯದಿಂದ ವಿಷಯ ಹಾಗೂ ಸಂಶಯಗಳನ್ನು ನಿರೂಪಣೆ ಮಾಡುವ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः –** कारणत्वादावित्यादिपदेन सार्वज्ञसर्वैश्वर्याद्यनन्तगुणत्वग्रहः । तेन चिन्तायास्तत्सिद्धिरेव फलमित्युक्तं भवति । उक्तः समन्वय इति शेषः ।

'ಕಾರಣತ್ವಾದೌ' ಎಂಬ ಆದಿಪದದಿಂದ ಸಾರ್ವಜ್ಞ್ಯ, ಸರ್ವೈಶ್ವರ್ಯ, ಅನಂತಗುಣತ್ವ ಮೊದಲಾವುಗಳನ್ನು ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ ಗ್ರಂಥದಲ್ಲಿ ತೋರಿಸುತ್ತಿರುವ ಚಿಂತಾಪರಂಪರೆಗೆ ಸಾರ್ವಜ್ಞಾದಿಗಳ ಸಮರ್ಥನೆಯೇ ಫಲವೆಂದು ಹೇಳಿದಂತಾಗುತ್ತದೆ. 'ಸಮನ್ವಯಃ' ಎಂಬಲ್ಲಿ 'ಉಕ್ತಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

**प्रकाशः –** सिद्धान्त्यभिमतसमन्वयस्यैवाक्षेप्यत्वाद्विशिष्टसमन्वयस्य विषयतोपदर्शिता । तेन टीकापि समन्वयपर्यन्तपरा व्याख्येयेति सूचितम् ।।

ಸ್ಮೃತ್ಯಧಿಕರಣ (೨-೧-೧)

ಈ ಸ್ಮೃತ್ಯಧಿಕರಣದಲ್ಲಿ ಅವೈದಿಕವಾದ ಸ್ಮೃತಿಗಳಿಗೆ ಪ್ರಾಮಾಣ್ಯವು ಇರುತ್ತದೋ, ಇಲ್ಲವೋ ? ಎಂಬ ಚಿಂತೆಯನ್ನು ವಿವಕ್ಷಿಸಬಾರದು. ಏಕೆಂದರೆ ಈ ಅಧಿಕರಣದ ಪೂರ್ವಪಕ್ಷಿಯು ಪ್ರತಿಯೊಂದು ಸ್ಮೃತಿಗಳಿಗೂ ಅಪ್ರಾಮಾಣ್ಯವನ್ನು ಒಪ್ಪಿರುವುದಿಲ್ಲ ಹೊರತಾಗಿ, ಪ್ರಥಮಾಧ್ಯಾಯದಲ್ಲಿ ಮಾಡಿದ ಸಮನ್ವಯವು ತಪ್ಪು. ಶ್ರುತಿಗಳನ್ನು ನೀವು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿದಿರಿ. ಅದೇ ಸ್ಮೃತಿಗಳನ್ನು ರುದ್ರನಲ್ಲಿ ಸಮನ್ವಯ ಮಾಡಬಹುದಲ್ಲವೇ? ಎಂಬುದಾಗಿ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ. ಆದ್ದರಿಂದಲೇ ಗ್ರಂಥದಲ್ಲಿ ಕೇವಲ 'ಸಮನ್ವಯಃ' ಎಂದಷ್ಟೇ ಹೇಳದೇ, ವಿಷ್ಣುವಿನಲ್ಲಿ ಸಮನ್ವಯವು ಕೂಡುವುದಿಲ್ಲ ಎಂದು ಹೇಳಿರುತ್ತಾರೆ. ಟೀಕೆಯಲ್ಲಿಯೂ ಕೂಡ 'ವಿಷ್ಣೋಃ ಜಗತ್‌ಕಾರಣತ್ವವಿಷಯೇ ಯಃ ಸಮನ್ವಯೇ ಉಕ್ತಃ ಸಃ ನ ಯುಕ್ತೋ ಯುಕ್ತೋ ವಾ' ಎಂಬ ಅಭಿಪ್ರಾಯವನ್ನೇ ವಿವಕ್ಷಿಸಬೇಕು.

**प्रकाशः –** श्रुतिर्नेयेति ।। श्रुतिगतोपक्रमादिकं नेयमित्यर्थः । तेनोपक्रमादिभिरेव श्रुतिर्नेया । नतु पाशुपतादिस्मृत्यनुरोधेनेत्यर्थस्य समन्वयसूत्र एव सिद्धत्वान्नेह पुनर्विचार्यतेति प्रत्युक्तम् । वक्ष्यते चैतद्ग्रन्थकृतैव ।

'ಶ್ರುತಿರ್ನೇಯಾ' ಎಂಬ ಪದಕ್ಕೆ ಶ್ರುತಿಯಲ್ಲಿರುವ ಉಪಕ್ರಮಾದಿಗಳಲ್ಲಿ ಪಾಶುಪತಾದಿಸ್ಮೃತಿಗಳಿಗನುಸಾರಿಯಾಗಿ ವ್ಯಾಖ್ಯಾನ ಮಾಡಬೇಕು ಎಂಬರ್ಥವನ್ನು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಒಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು -

ಆಕ್ಷೇಪ - ಉಪಕ್ರಮಾದಿಗಳಿಂದಲೇ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು ಹೊರತು ಪಾಶುಪತಾದಿ ಶ್ರುತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ವ್ಯಾಖ್ಯಾನ ಮಾಡಬಾರದು ಎಂಬುದಾಗಿ ಸಮನ್ವಯಸೂತ್ರದಲ್ಲಿ ನಿರ್ಣಯಿಸಿದ್ದಾಗಿದೆ. ಹೀಗಿರುವಾಗ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂಬ ಪೂರ್ವಪಕ್ಷವೇ ಇಲ್ಲಿ ಹುಟ್ಟಲು ಸಾಧ್ಯವಿಲ್ಲವಲ್ಲವೇ ?

ಸಮಾಧಾನ - ಈ ಆಕ್ಷೇಪಕ್ಕೆ ಈಗಾಗಲೇ ಉತ್ತರಿಸಿದ್ದಾಗಿದೆ. ಏಕೆಂದರೆ 'ಶ್ರುತಿರ್ನೇಯಾ' ಎಂಬ ಪದಕ್ಕೆ ಶ್ರುತಿಯಲ್ಲಿರುವ ಉಪಕ್ರಮಾದಿಗಳನ್ನು ಅರ್ಥೈಸಬೇಕು ಎಂಬರ್ಥವನ್ನು ಹೇಳಿದ್ದರಿಂದ ಪಾಶುಪತಾದಿ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯಲ್ಲಿರುವ ಉಪಕ್ರಮಾದಿಗಳನ್ನೇ ವ್ಯಾಖ್ಯಾನ ಮಾಡಬೇಕು. ಸಮಯನ್ವಯ ಸೂತ್ರದಲ್ಲಿ ಉಪಕ್ರಮಾದಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂದು ಹೇಳಿದ್ದು ತಪ್ಪಲ್ಲ. ಆದರೆ ಯಾವ ಉಪಕ್ರಮಾದಿಗಳನ್ನು ಆಶ್ರಯಿಸಿ ಶುತಿಗಳಿಗೆ ವ್ಯಾಖ್ಯಾನ ಮಾಡಬೇಕೋ, ಅಂಥ ಉಪಕ್ರಮಾದಿಗಳನ್ನೇ ಪಾಶುಪತಾದಿಸ್ಮೃತಿಗಳಿಗೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಬೇಕು ಎಂಬುದು ಈ ಅಧಿಕರಣದ ಪೂರ್ವಪಕ್ಷ.

**प्रकाशः –** यद्यप्यत्र स्मृतिविरोधाच्छ्रुतिरप्रमाणमुत नेति चिन्तायां न काचिदनुपपत्तिः । नच तत्प्रामाण्यवादिमत एवं वक्तुं न शक्यमिति वाच्यम् । विवक्षितार्थत्वेन प्रमाणमिति वक्तुं शक्यत्वात् । अन्यथा तदप्रामाण्यवादिमते श्रुतिर्नेयेत्यस्याप्ययोगात् ।

ಪ್ರಶ್ನೆ - ಸಂಶಯಕೋಟಿಯನ್ನು ತೋರಿಸುವಾಗ ಶ್ರುತಿವಿರೋಧವಿರುವುದರಿಂದ ಶ್ರುತಿಯು ಅಪ್ರಮಾಣವೋ, ಅಥವಾ ಅಲ್ಲವೋ? ಎಂಬುದಾಗಿಯೇ ತೋರಿಸಬಹುದಿತ್ತು. ಯಾವುದೇ ಅನುಪಪತ್ತಿಯು ಬರುತ್ತಿರಲಿಲ್ಲ. ಏಕೆಂದರೆ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪುವ ಸ್ಮೃತಿಕಾರರು ಕೆಲವರಿದ್ದಾರೆ. ಒಪ್ಪದ ಸ್ಮೃತಿಕಾರರು ಕೆಲವರಿದ್ದಾರೆ. ಯಾರು ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪದೇ ತಮ್ಮ ಸ್ಮೃತಿಗಳಿಗಷ್ಟೇ ಪ್ರಾಮಾಣ್ಯವನ್ನು ಒಪ್ಪುತ್ತಾರೋ, ಅವರ ಪ್ರಕಾರ ಈ ಸಂಶಯವನ್ನು ವಿವಕ್ಷಿಸಬಹುದು. ಒಂದು ವೇಳೆ ಗ್ರಂಥದಲ್ಲಿ ತೋರಿಸಿದಂತೆ 'ಶ್ರುತಿಸಮನ್ವಯಃ ನ ಯುಕ್ತಃ ? ಯುಕ್ತೋವಾ?' ಎಂಬ ಸಂಶಯವನ್ನು ಹೇಳಿದರೆ ಬೌದ್ಧಾದಿಗಳು ಶ್ರುತಿಸಮನ್ವಯವನ್ನು ಒಪ್ಪುವುದೇ ಇಲ್ಲ. ಆದ್ದರಿಂದ ಅವರ ಪ್ರಕಾರ ಗ್ರಂಥದಲ್ಲಿ ತೋರಿಸಿದ ಸಂಶಯವು ಅಯುಕ್ತವಾಗುತ್ತದೆ. ಆಪ್ತೋಕ್ತತ್ವ ಮೊದಲಾದ ಗುಣಗಳಿರುವುದರಿಂದ ಶ್ರುತಿಗಳು ಪರಮಪ್ರಮಾಣವಾಗಿವೆ. ತದ್ವಿರುದ್ಧವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕು ಎಂಬುದಾಗಿಯೂ ಪೂರ್ವಪಕ್ಷ ಮಾಡಬಹುದು.

ಬೌದ್ಧ-ಜೈನಾದಿ ಮತಗಳ ಪ್ರಕಾರ ಈ ಸಂಶಯವನ್ನು ತೋರಿಸಬಹುದು. ಆದರೆ ಕಪಿಲ, ಕಣಾದ, ಮೊದಲಾದವರು ವೇದಪ್ರಾಮಾಣ್ಯವನ್ನು ಒಪ್ಪುತ್ತಾರೆ. ಅವರ ಪ್ರಕಾರ ಶ್ರುತಿಯನ್ನು ಅಪ್ರಮಾಣವೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಗ್ರಂಥಕಾರರು ತೋರಿಸಿದ ಸಂಶಯವು ಸಾಧುವಾಗಿದೆಯಲ್ಲವೇ ? ಎಂದು ಪ್ರಶ್ನಿಸಬಾರದು. ಏಕೆಂದರೆ ಕಾಪಿಲರು ಹಾಗೂ ನೈಯಾಯಿಕರು ಶ್ರುತಿಗಳನ್ನು ಪ್ರಮಾಣವೆಂದು ಒಪ್ಪಿದರೂ ವಿಷ್ಣುವಿನ ಅನಂತಗುಣಪರಿಪೂರ್ಣತ್ವವಿಷಯದಲ್ಲಿ ಶ್ರುತಿಪ್ರಾಮಾಣ್ಯವನ್ನು ಅವರು ಒಪ್ಪುವುದಿಲ್ಲ. ಆದ್ದರಿಂದ 'ಸ್ಮೃತಿವಿರೋಧಾತ್ ಶ್ರುತಿಃ ಅಪ್ರಮಾಣಮ್ ಕುತೋ ನ' ಎಂಬ ಸಂಶಯವನ್ನು ತೋರಿಸಿದಾಗ ಬೌದ್ಧಾದಿಗಳ ಪ್ರಕಾರ ಶ್ರುತಿಯು ಸರ್ವಥಾ ಅಪ್ರಮಾಣವಾಗಿದೆಯೆಂಬ ಪೂರ್ವಪಕ್ಷವನ್ನು ವಿವಕ್ಷಿಸಬಹುದು. ಕಾಪಿಲಾದಿಗಳ ಪ್ರಕಾರ ವಿವಕ್ಷಿತಾರ್ಥದಲ್ಲಿ ಶ್ರುತಿಯು ಅಪ್ರಮಾಣವೆಂದು ವಿವಕ್ಷಿಸಬಹುದು. ಹೀಗೊಪ್ಪದಿದ್ದರೆ ಪಾಶುಪತಾದಿಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು ಎಂಬ ಪೂರ್ವಪಕ್ಷವನ್ನು ವಿವಕ್ಷಿಸುವುದಾದರೆ, ಬೌದ್ಧಾದಿ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂದು ಗ್ರಂಥಕಾರರು ವಿವಕ್ಷಿಸಿದ ಪಕ್ಷದಲ್ಲಿಯೂ ಕೂಡ ಹೇಳಲು ಸಾಧ್ಯವಾಗುವುದಿಲ್ಲ.

**प्रकाशः – तथापीह वक्ष्यमाणदिशा श्रुतेरपौरुषेयत्वप्रामाण्ये स्वीकृत्य पूर्वपक्ष इत्यस्य सूत्राद्यनुगुणत्वात्तदनुरोधेनेयं चिन्तोक्ता । अत एव टीका ''अन्यार्थतोपपत्तेः'' इति । सुधायां तु व्यक्तमेवैतत् । स्पष्टोऽत्र फलफलिभावः ।**

ಉತ್ತರ - ನೀವು ಹೇಳಿದ್ದನ್ನು ನಾವು ಒಪ್ಪುತ್ತೇವೆ. ಬೌದ್ಧಾದಿ ಸ್ಮೃತಿಗಳನ್ನು ವಿವಕ್ಷಿಸಿದಾಗ ಗ್ರಂಥದಲ್ಲಿ ವಿವಕ್ಷಿಸಿದ ಸಂಶಯವನ್ನು ಸರ್ವಥಾ ಇಟ್ಟುಕೊಳ್ಳಲು ಬರುವುದಿಲ್ಲ. ಆ ಸಂದರ್ಭದಲ್ಲಿ ನೀವು ಹೇಳಿದಂತೆ 'ಶ್ರುತಿಃ ಅಪ್ರಮಾಣಮ್ ಉತ ಪ್ರಮಾಣಮ್' ಎಂಬ ಸಂಶಯವನ್ನೇ ಇಟ್ಟುಕೊಳ್ಳಬೇಕು. ಆದರೆ ಗ್ರಂಥಕಾರರು 'ಶ್ರುತಿಸಮನ್ವಯಃ ನ ಯುಕ್ತಃ ಯುಕ್ತೋ ವಾ' ಎಂಬ ಸಂಶಯವನ್ನೇ ಏಕೆ ಉಲ್ಲೇಖಿಸಿದ್ದಾರೆ? ಎಂದರೆ ಪೂರ್ವಪಕ್ಷ ಮಾಡುವಾಗ ಶ್ರುತಿಗೆ ಅಪೌರುಷೇಯತ್ವವನ್ನು ಮತ್ತು ಪ್ರಾಮಾಣ್ಯವನ್ನು ಒಪ್ಪಿ

ಈ ಸ್ಮೃತ್ಯಧಿಕರಣದಲ್ಲಿ ಅವೈದಿಕವಾದ ಸ್ಮೃತಿಗಳಿಗೆ ಪ್ರಾಮಾಣ್ಯವು ಇರುತ್ತದೋ, ಇಲ್ಲವೋ ? ಎಂಬ ಚಿಂತೆಯನ್ನು ವಿವಕ್ಷಿಸಬಾರದು. ಏಕೆಂದರೆ ಈ ಅಧಿಕರಣದ ಪೂರ್ವಪಕ್ಷಿಯು ಪ್ರತಿಯೊಂದು ಸ್ಮೃತಿಗಳಿಗೂ ಅಪ್ರಾಮಾಣ್ಯವನ್ನು ಒಪ್ಪಿರುವುದಿಲ್ಲ ಹೊರತಾಗಿ, ಪ್ರಥಮಾಧ್ಯಾಯದಲ್ಲಿ ಮಾಡಿದ ಸಮನ್ವಯವು ತಪ್ಪು. ಶ್ರುತಿಗಳನ್ನು ನೀವು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿದಿರಿ. ಅದೇ ಸ್ಮೃತಿಗಳನ್ನು ರುದ್ರನಲ್ಲಿ ಸಮನ್ವಯ ಮಾಡಬಹುದಲ್ಲವೇ? ಎಂಬುದಾಗಿ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ. ಆದ್ದರಿಂದಲೇ ಗ್ರಂಥದಲ್ಲಿ ಕೇವಲ 'ಸಮನ್ವಯಃ' ಎಂದಷ್ಟೇ ಹೇಳದೇ, ವಿಷ್ಣುವಿನಲ್ಲಿ ಸಮನ್ವಯವು ಕೂಡುವುದಿಲ್ಲ ಎಂದು ಹೇಳಿರುತ್ತಾರೆ. ಟೀಕೆಯಲ್ಲಿಯೂ ಕೂಡ 'ವಿಷ್ಣೋಃ ಜಗತ್‌ಕಾರಣತ್ವವಿಷಯೇ ಯಃ ಸಮನ್ವಯೇ ಉಕ್ತಃ ಸಃ ನ ಯುಕ್ತೋ ಯುಕ್ತೋ ವಾ' ಎಂಬ ಅಭಿಪ್ರಾಯವನ್ನೇ ವಿವಕ್ಷಿಸಬೇಕು.

**प्रकाशः – श्रुतिर्नेयेति ।।** श्रुतिगतोपक्रमादिकं नेयमित्यर्थः । तेनोपक्रमादिभिरेव श्रुतिर्नेया । नतु पाशुपतादिस्मृत्यनुरोधेनेत्यर्थस्य समन्वयसूत्र एव सिद्धत्वान्नेह पुनर्विचार्यतेति प्रत्युक्तम् । वक्ष्यते चैतद्ग्रन्थकृतैव ।

'ಶ್ರುತಿರ್ನೇಯಾ' ಎಂಬ ಪದಕ್ಕೆ ಶ್ರುತಿಯಲ್ಲಿರುವ ಉಪಕ್ರಮಾದಿಗಳಲ್ಲಿ ಪಾಶುಪತಾದಿಸ್ಮೃತಿ-ಗಳಿಗನುಸಾರಿಯಾಗಿ ವ್ಯಾಖ್ಯಾನ ಮಾಡಬೇಕು ಎಂಬರ್ಥವನ್ನು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಒಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು -

ಆಕ್ಷೇಪ - ಉಪಕ್ರಮಾದಿಗಳಿಂದಲೇ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು ಹೊರತು ಪಾಶುಪತಾದಿ ಶ್ರುತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ವ್ಯಾಖ್ಯಾನ ಮಾಡಬಾರದು ಎಂಬುದಾಗಿ ಸಮನ್ವಯಸೂತ್ರದಲ್ಲಿ ನಿರ್ಣಯಿಸಿದ್ದಾಗಿದೆ. ಹೀಗಿರುವಾಗ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂಬ ಪೂರ್ವಪಕ್ಷವೇ ಇಲ್ಲಿ ಹುಟ್ಟಲು ಸಾಧ್ಯವಿಲ್ಲವಲ್ಲವೇ ?

ಸಮಾಧಾನ - ಈ ಆಕ್ಷೇಪಕ್ಕೆ ಈಗಾಗಲೇ ಉತ್ತರಿಸಿದ್ದಾಗಿದೆ. ಏಕೆಂದರೆ 'ಶ್ರುತಿರ್ನೇಯಾ' ಎಂಬ ಪದಕ್ಕೆ ಶ್ರುತಿಯಲ್ಲಿರುವ ಉಪಕ್ರಮಾದಿಗಳನ್ನು ಅರ್ಥೈಸಬೇಕು ಎಂಬರ್ಥವನ್ನು ಹೇಳಿದ್ದರಿಂದ ಪಾಶುಪತಾದಿ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯಲ್ಲಿರುವ ಉಪಕ್ರಮಾದಿಗಳನ್ನೇ ವ್ಯಾಖ್ಯಾನ ಮಾಡಬೇಕು. ಸಮಯನ್ವಯ ಸೂತ್ರದಲ್ಲಿ ಉಪಕ್ರಮಾದಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂದು ಹೇಳಿದ್ದು ತಪ್ಪಲ್ಲ. ಆದರೆ ಯಾವ ಉಪಕ್ರಮಾದಿಗಳನ್ನು ಆಶ್ರಯಿಸಿ ಶುತಿಗಳಿಗೆ ವ್ಯಾಖ್ಯಾನ ಮಾಡಬೇಕೋ, ಅಂಥ ಉಪಕ್ರಮಾದಿಗಳನ್ನೇ ಪಾಶುಪತಾದಿಸ್ಮೃತಿಗಳಿಗೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಬೇಕು ಎಂಬುದು ಈ ಅಧಿಕರಣದ ಪೂರ್ವಪಕ್ಷ.

**प्रकाशः –** यद्यप्यत्र स्मृतिविरोधाच्छ्रुतिरप्रमाणमुत नेति चिन्तायां न काचिदनुपपत्तिः । नच तत्प्रामाण्यवादिमत एवं वक्तुं न शक्यमिति वाच्यम् । विवक्षितार्थत्वेन प्रमाणमिति वक्तुं शक्यत्वात् । अन्यथा तदप्रामाण्यवादिमते श्रुतिर्नेयेत्यस्याप्ययोगात् ।

ಪ್ರಶ್ನೆ - ಸಂಶಯಕೋಟಿಯನ್ನು ತೋರಿಸುವಾಗ ಶ್ರುತಿವಿರೋಧವಿರುವುದರಿಂದ ಶ್ರುತಿಯು ಅಪ್ರಮಾಣವೋ, ಅಥವಾ ಅಲ್ಲವೋ? ಎಂಬುದಾಗಿಯೇ ತೋರಿಸಬಹುದಿತ್ತು. ಯಾವುದೇ ಅನುಪಪತ್ತಿಯು ಬರುತ್ತಿರಲಿಲ್ಲ. ಏಕೆಂದರೆ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪುವ ಸ್ಮೃತಿಕಾರರು ಕೆಲವರಿದ್ದಾರೆ. ಒಪ್ಪದ ಸ್ಮೃತಿಕಾರರು ಕೆಲವರಿದ್ದಾರೆ. ಯಾರು ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪದೇ ತಮ್ಮ ಸ್ಮೃತಿಗಳಿಗಷ್ಟೇ ಪ್ರಾಮಾಣ್ಯವನ್ನು ಒಪ್ಪುತ್ತಾರೋ, ಅವರ ಪ್ರಕಾರ ಈ ಸಂಶಯವನ್ನು ವಿವಕ್ಷಿಸಬಹುದು. ಒಂದು ವೇಳೆ ಗ್ರಂಥದಲ್ಲಿ ತೋರಿಸಿದಂತೆ 'ಶ್ರುತಿಸಮನ್ವಯಃ ನ ಯುಕ್ತಃ ? ಯುಕ್ತೋವಾ?' ಎಂಬ ಸಂಶಯವನ್ನು ಹೇಳಿದರೆ ಬೌದ್ಧಾದಿಗಳು ಶ್ರುತಿಸಮನ್ವಯವನ್ನು ಒಪ್ಪುವುದೇ ಇಲ್ಲ. ಆದ್ದರಿಂದ ಅವರ ಪ್ರಕಾರ ಗ್ರಂಥದಲ್ಲಿ ತೋರಿಸಿದ ಸಂಶಯವು ಅಯುಕ್ತವಾಗುತ್ತದೆ. ಆಪ್ತೋಕ್ತತ್ವ ಮೊದಲಾದ ಗುಣಗಳಿರುವುದರಿಂದ ಶ್ರುತಿಗಳು ಪರಮಪ್ರಮಾಣವಾಗಿವೆ. ತದ್ವಿರುದ್ಧವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕು ಎಂಬುದಾಗಿಯೂ ಪೂರ್ವಪಕ್ಷ ಮಾಡಬಹುದು.

ಬೌದ್ಧ-ಜೈನಾದಿ ಮತಗಳ ಪ್ರಕಾರ ಈ ಸಂಶಯವನ್ನು ತೋರಿಸಬಹುದು. ಆದರೆ ಕಪಿಲ, ಕಣಾದ, ಮೊದಲಾದವರು ವೇದಪ್ರಾಮಾಣ್ಯವನ್ನು ಒಪ್ಪುತ್ತಾರೆ. ಅವರ ಪ್ರಕಾರ ಶ್ರುತಿಯನ್ನು ಅಪ್ರಮಾಣವೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಗ್ರಂಥಕಾರರು ತೋರಿಸಿದ ಸಂಶಯವು ಸಾಧುವಾಗಿದೆಯಲ್ಲವೇ ? ಎಂದು ಪ್ರಶ್ನಿಸಬಾರದು. ಏಕೆಂದರೆ ಕಾಪಿಲರು ಹಾಗೂ ನೈಯಾಯಿಕರು ಶ್ರುತಿಗಳನ್ನು ಪ್ರಮಾಣವೆಂದು ಒಪ್ಪಿದರೂ ವಿಷ್ಣುವಿನ ಅನಂತಗುಣಪರಿಪೂರ್ಣತ್ವವಿಷಯದಲ್ಲಿ ಶ್ರುತಿಪ್ರಾಮಾಣ್ಯವನ್ನು ಅವರು ಒಪ್ಪುವುದಿಲ್ಲ. ಆದ್ದರಿಂದ 'ಸ್ಮೃತಿವಿರೋಧಾತ್ ಶ್ರುತಿಃ ಅಪ್ರಮಾಣಮ್ ಕುತೋ ನ' ಎಂಬ ಸಂಶಯವನ್ನು ತೋರಿಸಿದಾಗ ಬೌದ್ಧಾದಿಗಳ ಪ್ರಕಾರ ಶ್ರುತಿಯು ಸರ್ವಥಾ ಅಪ್ರಮಾಣವಾಗಿದೆಯೆಂಬ ಪೂರ್ವಪಕ್ಷವನ್ನು ವಿವಕ್ಷಿಸಬಹುದು. ಕಾಪಿಲಾದಿಗಳ ಪ್ರಕಾರ ವಿವಕ್ಷಿತಾರ್ಥದಲ್ಲಿ ಶ್ರುತಿಯು ಅಪ್ರಮಾಣವೆಂದು ವಿವಕ್ಷಿಸಬಹುದು. ಹೀಗೊಪ್ಪದಿದ್ದರೆ ಪಾಶುಪತಾದಿಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು ಎಂಬ ಪೂರ್ವಪಕ್ಷವನ್ನು ವಿವಕ್ಷಿಸುವುದಾದರೆ, ಬೌದ್ಧಾದಿ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂದು ಗ್ರಂಥಕಾರರು ವಿವಕ್ಷಿಸಿದ ಪಕ್ಷದಲ್ಲಿಯೂ ಕೂಡ ಹೇಳಲು ಸಾಧ್ಯವಾಗುವುದಿಲ್ಲ.

**प्रकाशः** – तथापीह वक्ष्यमाणदिशा श्रुतेरपौरुषेयत्वप्रामाण्ये स्वीकृत्य पूर्वपक्ष इत्यस्य सूत्राद्यनुगुणत्वात्तदनुरोधेनेयं चिन्तोक्ता । अत एव टीका ''अन्यार्थतोपपत्तेः'' इति । सुधायां तु व्यक्तमेवैतत् । स्पष्टोऽत्र फलफलिभावः ।

ಉತ್ತರ - ನೀವು ಹೇಳಿದ್ದನ್ನು ನಾವು ಒಪ್ಪುತ್ತೇವೆ. ಬೌದ್ಧಾದಿ ಸ್ಮೃತಿಗಳನ್ನು ವಿವಕ್ಷಿಸಿದಾಗ ಗ್ರಂಥದಲ್ಲಿ ವಿವಕ್ಷಿಸಿದ ಸಂಶಯವನ್ನು ಸರ್ವಥಾ ಇಟ್ಟುಕೊಳ್ಳಲು ಬರುವುದಿಲ್ಲ. ಆ ಸಂದರ್ಭದಲ್ಲಿ ನೀವು ಹೇಳಿದಂತೆ 'ಶ್ರುತಿಃ ಅಪ್ರಮಾಣಮ್ ಉತ ಪ್ರಮಾಣಮ್' ಎಂಬ ಸಂಶಯವನ್ನೇ ಇಟ್ಟುಕೊಳ್ಳಬೇಕು. ಆದರೆ ಗ್ರಂಥಕಾರರು 'ಶ್ರುತಿಸಮನ್ವಯಃ ನ ಯುಕ್ತಃ ಯುಕ್ತೋ ವಾ' ಎಂಬ ಸಂಶಯವನ್ನೇ ಏಕೆ ಉಲ್ಲೇಖಿಸಿದ್ದಾರೆ? ಎಂದರೆ ಪೂರ್ವಪಕ್ಷ ಮಾಡುವಾಗ ಶ್ರುತಿಗೆ ಅಪೌರುಷೇಯತ್ವವನ್ನು ಮತ್ತು ಪ್ರಾಮಾಣ್ಯವನ್ನು ಒಪ್ಪಿ

ದೌರ್ಬಲ್ಯ ವಿವಕ್ಷೆಯಿಂದಷ್ಟೇ ಆಕ್ಷೇಪ ಮಾಡಲಾಗಿದೆ. ಪಾಶುಪತಾದಿ ಸ್ಮೃತಿಗಳ ಅಪೇಕ್ಷೆಯಿಂದ ಶ್ರುತಿಗಳು ದುರ್ಬಲವಾಗಿದೆ ಎಂಬುದಷ್ಟೇ ಪೂರ್ವಪಕ್ಷದ ಅಭಿಪ್ರಾಯ. ಹೀಗೆ ಪೂರ್ವಪಕ್ಷ ಮಾಡುವುದೇ ಸೂತ್ರಕ್ಕೆ ಅನುಗುಣವಾಗಿದೆ. ಅದಕ್ಕನುಸಾರಿಯಾಗಿ ಗ್ರಂಥಕಾರರು ಹೀಗೆಯೇ ಸಂಶಯವನ್ನು ತೋರಿಸಿದ್ದಾರೆ. ಆದ್ದರಿಂದಲೇ ಟೀಕೆಯಲ್ಲಿ 'ಅನ್ಯಾರ್ಥತೋಪಪತ್ತೇಃ' ಎಂದು ಹೇಳಿದ್ದಾರೆ. ನ್ಯಾಯಸುಧೆಯಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ನಿರೂಪಣೆ ಮಾಡಿರುತ್ತಾರೆ.

ಪಾಶುಪತಾದಿಸ್ಮೃತಿಗಳು ಪ್ರಬಲವೆಂದು ನಿರ್ಣಯವಾದರೆ, ಪಾಶುಪತಾದಿ ಸ್ಮೃತಿಗಳಿಗನುಸಾರಿಯಾಗಿಯೇ ಶ್ರುತಿಗಳನ್ನು ವ್ಯಾಖ್ಯಾನ ಮಾಡಬೇಕು. ಆವಾಗ ಶ್ರುತಿಸಮನ್ವಯವು ಮಹಾವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷದ ಫಲ.

ಪಾಶುಪತಾದಿಶ್ರುತಿಗಳು ದುರ್ಬಲವಾದ ಕಾರಣ ಅವುಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕಾಗಿಲ್ಲ. ಆದ್ದರಿಂದ ಶ್ರುತಿಸಮನ್ವಯವು ಮಹಾವಿಷ್ಣುವಿನಲ್ಲಿ ಯುಕ್ತವಾಗುತ್ತದೆ ಎಂಬುದು ಸಿದ್ಧಾಂತದ ಫಲ. ಅಪ್ರಮಾಣ ಅಪ್ರಾಮಾಣ




ಸ್ಮೃತ್ಯಧಿಕರಣದಲ್ಲಿ ಅವೈದಿಕವಾದ ಎಲ್ಲಾ ಸ್ಮೃತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಇಲ್ಲಿ ಒಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಇದು ಯುಕ್ತಿಪಾದ. ಸ್ಮೃತಿವಿರೋಧದ ಪರಿಹಾರವು ಅಸಂಗತವಲ್ಲವೇ? ಎಂದು.

ಎರಡು ವಿಧದಲ್ಲಿ ಇದಕ್ಕೆ ಉತ್ತರಿಸಬಹುದು. ಪಾಶುಪತಾದಿ ಸ್ಮೃತಿಗಳು ಎಂದರೆ ರುದ್ರಾದಿಗಳು ಕಲ್ಪಿಸಿರುವ ಒಂದೊಂದು ಸಮಯಗಳು ಎಂದೇ ಅರ್ಥವಾಗಿರುತ್ತದೆ. ಮತ್ತು ತಾವು ಸಮರ್ಥಿಸಿದ ವಿಷಯದಲ್ಲಿ ಶ್ರುತಿ ಹಾಗೂ ಯುಕ್ತಿಗಳನ್ನು ಆಧಾರವನ್ನಾಗಿ ನೀಡುತ್ತಾರೆ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಯುಕ್ತಿ, ಶ್ರುತಿ, ಸಮಯ, ಯುಕ್ತಿಸಹಿತ ಶ್ರುತಿ ಹೀಗೆ ನಾಕು ಪಾದೋಪಾಧಿಗಳನ್ನು ಹೊಂದಿರುತ್ತವೆ. ನಾಕು ಪಾದೋಪಾಧಿಗಳನ್ನು ಹೊಂದಿರುವ ಸ್ಮೃತಿವಿರೋಧವನ್ನು ಪರಿಹರಿಸಲು ನಾಕು ಪಾದಗಳಲ್ಲಿಯೂ ಕೂಡ ಸಂಗತಿ ದೊರೆಯುವುದಿಲ್ಲ. ಅಧ್ಯಾಯದ ಪ್ರಾರಂಭದಲ್ಲಿಯೋ, ಅಥವಾ ಕೊನೆಯಲ್ಲಿಯೋ ಸ್ಮೃತಿವಿರೋಧವನ್ನು ಪರಿಹಾರ ಮಾಡಬೇಕು. 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಪ್ರಾರಂಭದಲ್ಲಿಯೇ ಸ್ಮೃತ್ಯಧಿಕರಣವು ಹೊರಟಿದೆ. ಮತ್ತು ನಾಲ್ಕು ಪಾದೋಪಾಧಿಗಳನ್ನು ಹೊಂದಿರುವ ಕಾರಣ, ಅತ್ಯಂತ ಪ್ರಬಲವಾಗಿದೆ. ಮಹಾಮಲ್ಲಭಂಗನ್ಯಾಯದಿಂದ ಬಲಿಷ್ಠವಾದದ್ದನ್ನು ಮೊದಲೇ ನಿರಾಕರಣೆ ಮಾಡುತ್ತಿದ್ದಾರೆ.

ಅಥವಾ ನಾಕು ಪಾದೋಪಾಧಿಗಳನ್ನು ಹೊಂದಿರುವುದರಿಂದ ಸ್ಮೃತ್ಯಧಿಕರಣಕ್ಕೆ ನಾಕು ಪಾದಗಳಲ್ಲಿಯೂ ಸಂಗತಿಯಿರುತ್ತದೆ. 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಎಂಬ ನ್ಯಾಯದಿಂದ ಮತ್ತು ನಾಕು ಪಾದೋಪಾಧಿಗಳನ್ನು ಹೊಂದಿರುವ ಕಾರಣ ಬಲಿಷ್ಠವಾಗಿರುವುದರಿಂದಲೂ ಅಧ್ಯಾಯದ ಪ್ರಾರಂಭದಲ್ಲಿಯೇ ಸ್ಮೃತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಈ ಎರಡು ಕಾರಣಗಳಿಂದ ಸ್ಮೃತ್ಯಧಿಕರಣವು ಅಧ್ಯಾಯದ ಮತ್ತು ಪಾದದ ಪ್ರಾರಂಭದಲ್ಲಿ ಅತ್ಯಂತ ಸಮ್ಮತವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಸ್ಮೃತ್ಯಧಿಕರಣದಿಂದ ಪ್ರಾರಂಭಿಸಿ ಗ್ರಂಥಕಾರರು ತಮ್ಮ ವ್ಯಾಖ್ಯಾನವನ್ನು ಮೊಟಕುಗೊಳಿಸಿದ್ದಾರೆ. ಇಲ್ಲಿಂದ ಸ್ವತಃ ಅವರೇ ಹೇಳುವ ಮಾತು ಹೀಗಿದೆ -

ಇತಃ ಪರಂ ಪೂರ್ವಪಕ್ಷಾದಿಕಂ ನ ಪೃಥಗುಚ್ಯತೇ ।
ಗ್ರಂಥಗೌರವಭೀತ್ಯಾ ಚ ಟೀಕಾದೌ ಚ ಸ್ಫುಟತ್ವತಃ ॥೧॥

ಇನ್ನು ಮುಂದೆ ಪ್ರತಿಯೊಂದು ಅಧಿಕರಣಗಳಲ್ಲಿಯೂ ಪೂರ್ವಪಕ್ಷ, ಸಿದ್ಧಾಂತ, ಅನ್ಯಮತೀಯ ಅಧಿಕರಣದ ಅನುವಾದ, ಅದರ ನಿರಾಕರಣೆ ಇವುಗಳನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ. ಈಗಾಗಲೇ ಗ್ರಂಥವು ಬಹಳಷ್ಟು ಬೆಳೆದಿದೆ. ಗ್ರಂಥಗೌರವ ಬರಬಾರದೆಂಬ ಭಯದಿಂದ ವ್ಯಾಖ್ಯಾನವನ್ನು ಮೊಟಕುಗೊಳಿಸಿದ್ದೇವೆ. ಮತ್ತು ಟೀಕಾದಿಗಳಲ್ಲಿಯೇ ಪೂರ್ವಪಕ್ಷಾದಿಗಳನ್ನು ಸ್ಫುಟವಾಗಿ ಹೇಳಿರುತ್ತಾರೆ.

ಹಿಂದಿನ ಅಧ್ಯಾಯದಲ್ಲಿ ಮಹಾವಿಷ್ಣು ಜಗಜ್ಜನ್ಮಕಾರಣನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಸಮನ್ವಯವನ್ನು ಮಾಡಲಾಯಿತು. ಅದು ಪಾಶುಪತಾದಿ ಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಅಯುಕ್ತವಾಗಿದೆಯೆಂಬ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ಸಂಶಯಪರಂಪರೆಯನ್ನು ಹೀಗೆ ತಿಳಿಯಬೇಕು - ಶ್ರುತಿಸಮನ್ವಯವು ಜಗತ್ಕಾರಣತ್ವಾದಿವಿಷಯದಲ್ಲಿ ಅಯುಕ್ತವೋ, ಯುಕ್ತವೋ? ಅದಕ್ಕಾಗಿ ಪಾಶುಪತಾದಿಸ್ಮೃತಿಗಳಿಗನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೋ? ಬೇಡವೋ ? ಅದಕ್ಕಾಗಿ ಪಾಶುಪತಾದಿಸ್ಮೃತಿಗಳು ಪ್ರಬಲವೋ, ಅಲ್ಲವೋ?

ಒಂದುವೇಳೆ ಪಾಶುಪತಾದಿಸ್ಮೃತಿಗಳು ಪ್ರಬಲವೆಂದು ನಿರ್ಣಯವಾದರೆ, ಪಾಶುಪತಾದಿ ಸ್ಮೃತಿಗಳಿಗನುಸಾರಿಯಾಗಿಯೇ ಶ್ರುತಿಗಳನ್ನು ವ್ಯಾಖ್ಯಾನ ಮಾಡಬೇಕು. ಆವಾಗ ಶ್ರುತಿಸಮನ್ವಯವು ಮಹಾವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷದ ಫಲ. ಪಾಶುಪತಾದಿಶ್ರುತಿಗಳು ದುರ್ಬಲವಾದ ಕಾರಣ ಅವುಗಳಿಗೆ ಅನುಸಾರಿಯಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕಾಗಿಲ್ಲ. ಆದ್ದರಿಂದ ಶ್ರುತಿಸಮನ್ವಯವು ಮಹಾವಿಷ್ಣುವಿನಲ್ಲಿ ಯುಕ್ತವಾಗುತ್ತದೆ ಎಂಬುದು ಸಿದ್ಧಾಂತದ ಫಲ.

### ರುದ್ರನು ಜಗತ್ಕಾರಣನೆಂದು ಪೂರ್ವಪಕ್ಷ

## तात्पर्यचन्द्रिका

**पूर्वपक्षमाह ।। न विष्णोरित्यादिना ।। अयं भावः – न श्रुतिसमन्वयेन विष्णोः कारणत्वं शिवादेः कारणत्वप्रतिपादकशैवादिस्मृतिविरोधात् ।**

ಈ ಅಧಿಕರಣದ ಪೂರ್ವಪಕ್ಷವನ್ನು 'ನ ವಿಷ್ಣೋಃ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ - ಸಕಲ ಶ್ರುತಿಸಮನ್ವಯದಿಂದ ಮಹಾವಿಷ್ಣುವಿನಲ್ಲಿ ಜಗತ್ಕಾರಣತ್ವವನ್ನು ಸಮರ್ಥಿಸಲಾಗದು. ಏಕೆಂದರೆ ಶೈವಾದಿ ಸ್ಮೃತಿಗಳೆಲ್ಲವೂ ರುದ್ರದೇವರಲ್ಲಿಯೇ ಜಗತ್ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ. ಶಿವನಿಗೆ ಜಗತ್ಕಾರಣತ್ವ ಪ್ರತಿಪಾದಕ ಸ್ಮೃತಿಗಳ ವಿರೋಧವು ಬರುತ್ತದೆ.

**नच षोडशिग्रहणाग्रहणवद् व्यवस्थितविकल्पो वा व्रीहियववदव्यवस्थितविकल्पो वा युक्तः ।**

ಪ್ರಶ್ನೆ - 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ಎಂಬ ಶ್ರುತಿವಾಕ್ಯವು ಅಧಿಕಾರಿಭೇದದಿಂದ ವ್ಯವಸ್ಥಿತವಿಕಲ್ಪವನ್ನು ಮಾಡಿದೆ. ಕೆಲವು ಅಧಿಕಾರಿಗಳು ಷೋಡಶಿಗ್ರಹಣವನ್ನು ಮಾಡಬೇಕು. ಕೆಲವು ಅಧಿಕಾರಿಗಳು ಷೋಡಶಿಗ್ರಹಣವನ್ನು ಮಾಡಬಾರದು ಎಂದು ಶ್ರುತಿಯು ವ್ಯವಸ್ಥೆ ಮಾಡಿರುವುದರಿಂದ ವ್ಯವಸ್ಥಿತವಿಕಲ್ಪ ಎಂದು ಕರೆಯುತ್ತಾರೆ. ಅದೇರೀತಿಯಾಗಿ ವಿಷ್ಣು ಹಾಗೂ ರುದ್ರ ಇವರಿಬ್ಬರ ವಿಷಯದಲ್ಲಿ ವ್ಯವಸ್ಥಿತವಿಕಲ್ಪವನ್ನು ಆಶ್ರಯಿಸಬಹುದು. ಅಥವಾ 'ವ್ರೀಹಿಭಿರ್ಯಜೇತ', 'ಯವೈರ್ಯಜೇತ' ಎಂಬ ಶ್ರುತಿಯು ವ್ರೀಹಿಯಿಂದಾಗಲೀ, ಯವದಿಂದಾಗಲೀ ಯಾಗವನ್ನು ಮಾಡಬೇಕು ಎಂಬಂತೆ ಅವ್ಯವಸ್ಥಿತವಿಕಲ್ಪವನ್ನು ಹೇಳುತ್ತಿದೆ. ವಿಷ್ಣುವೂ ಜಗತ್ತಿಗೆ ಕಾರಣನಾಗಬಹುದು ಅಥವಾ ರುದ್ರನು ಜಗತ್ತಿಗೆ ಕಾರಣನಾಗಬಹುದು.

**पुन्तन्त्रेऽनुष्ठेये विकल्पसंभवेऽपि तदतन्त्रे सिद्धे वस्तुनि तदयोगात् ।**

ಉತ್ತರ - ಹೀಗೆ ವ್ಯವಸ್ಥಿತವಿಕಲ್ಪವನ್ನಾಗಲೀ, ಅವ್ಯವಸ್ಥಿತವಿಕಲ್ಪವನ್ನಾಗಲೀ ಜಗತ್ಕಾರಣತ್ವವಿಷಯದಲ್ಲಿ ವಿವಕ್ಷಿಸಲಾಗದು. ಏಕೆಂದರೆ ಪುರುಷನ ಅಧೀನವಾಗಿರುವ ಅನುಷ್ಠೇಯವಿಷಯದಲ್ಲಿ ವಿಕಲ್ಪವು ಯುಕ್ತವಾಗಬಹುದು. ಆದರೆ ಯಾವುದು ಪುರುಷನ ಅಧೀನವಲ್ಲವೋ, ಸಿದ್ಧವಾದ ವಿಷಯವೋ ಅದರ ಬಗ್ಗೆ ವಿಕಲ್ಪವು ಯುಕ್ತವಾಗುವುದಿಲ್ಲ.

**न हीदमेवमनेवं वा कर्तव्यमितिवदिदमेवमनेवंवा भवतीति सम्भवति ।**

ಇದನ್ನು ಹೀಗೂ ಮಾಡಬಹುದು. ಮತ್ತೊಂದು ಬಗೆಯಲ್ಲಿಯೂ ಮಾಡಬಹುದು ಎಂದು ಕರ್ತವ್ಯದ ಬಗ್ಗೆ ವಿಕಲ್ಪವನ್ನು ಹೇಳಲು ಬರುತ್ತದೆ. ಆದರೆ ಈ ಪದಾರ್ಥ ಹೀಗೂ ಆಗುತ್ತದೆ, ಹಾಗೂಆಗುತ್ತದೆ ಎಂಬುದಾಗಿ ಸಿದ್ಧವಸ್ತುವಿನಲ್ಲಿ ವಿಕಲ್ಪವನ್ನು ಹೇಳಲಾಗದು. ಒಬ್ಬನಿಗೆ ನೀನು ಘಟವನ್ನಾದರೂ ಸೃಷ್ಟಿಮಾಡು, ಪಟವನ್ನಾದರೂ ಸೃಷ್ಟಿಮಾಡು ಎಂದು ಹೇಳಬಹುದೇ ಹೊರತು, ಸಿದ್ಧವಾದ ಘಟವನ್ನು ನೋಡಿ, ಇದು ಘಟವೂ ಆಗುತ್ತದೆ. ಪಟವೂ ಆಗುತ್ತದೆ ಎಂದು ಸಿದ್ಧವಸ್ತುವಿನಲ್ಲಿ ವಿಕಲ್ಪ ಮಾಡಲು ಸಾಧ್ಯವೇ ಇಲ್ಲ.

**समुचयश्च सापेक्षयोरेव । प्रकृते च श्रुतौ स्मृतौ च निरपेक्षस्यैव विष्णोः शिवस्य च हेतुतोच्यते ।**

ವಿಷ್ಣು ಹಾಗೂ ರುದ್ರ ಇಬ್ಬರು ಸೇರಿ ಜಗತ್ಕಾರಣರಾಗಬಹುದಲ್ಲವೇ? ಎಂದೂ ಕೂಡ ಪ್ರಶ್ನಿಸಲಾಗದು. ಪ್ರಕೃತ ಶ್ರುತಿಯಲ್ಲಿ ರುದ್ರನ ಅಪೇಕ್ಷೆಯಿಲ್ಲದೇ ವಿಷ್ಣುವೊಬ್ಬನೇ ಜಗತ್ಕಾರಣನಾಗಿದ್ದಾನೆಂದು ಹೇಳಲಾಗಿದೆ. ಸ್ಮೃತಿಗಳಲ್ಲಿ ವಿಷ್ಣುವಿನ ಅಪೇಕ್ಷೆಯಿಲ್ಲದೇ ರುದ್ರನೊಬ್ಬನೇ ಜಗತ್ಕಾರಣನಾಗಿದ್ದಾನೆಂದು ಹೇಳಲಾಗಿದೆ. ಹೀಗೆ ಪರಸ್ಪರ ನಿರಪೇಕ್ಷಿತವಾಗಿಯೇ ಜಗತ್ಕಾರಣತ್ವವನ್ನು ಸಮರ್ಥಿಸುತ್ತಿರುವಾಗ ಸಮುಚ್ಚಯಪಕ್ಷವನ್ನು ವಿವಕ್ಷಿಸಲಾಗದು. ಸಾಪೇಕ್ಷತ್ವವು ಇಲ್ಲದಿದ್ದರೆ ಸಮುಚ್ಚಯವನ್ನು ಮಾಡಲಾಗದು.

**''अजया क्रीणाति हिरण्येन क्रीणाति वाससा क्रीणाति'' इत्यत्र सोमक्रये प्रत्येकं तृतीयाश्रुत्या निरपेक्षत्वेन प्रतीतानामप्यजादीनां विक्रेत्रानतिरूपद्वार-भेदात्सापेक्षाणामेव समुच्चय उक्तः ।**

ಸಾಪೇಕ್ಷತ್ವ ಇಲ್ಲದಿದ್ದರೆ ಸಮುಚ್ಚಯವನ್ನು ಮಾಡಲಾಗದು ಎಂಬ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತ ಹೀಗಿದೆ - ಸೋಮವನ್ನು ಕ್ರಯಣ ಮಾಡುವ ಸಂದರ್ಭದಲ್ಲಿ 'ಅಜಯಾ ಕ್ರೀಣಾತಿ ಹಿರಣ್ಯೇನ ಕ್ರೀಣಾತಿ ವಾಸಸಾ ಕ್ರೀಣಾತಿ' ಎಂಬ ಶ್ರುತಿವಾಕ್ಯ ಹೊರಟಿದೆ. ಆಡನ್ನು ಕೊಟ್ಟು ಸೋಮಕ್ರಯಣ ಮಾಡಬಹುದು, ಬಂಗಾರವನ್ನು ಕೊಟ್ಟು ಸೋಮಕ್ರಯಣ ಮಾಡಬಹುದು. ಅಥವಾ ಬಟ್ಟೆಯನ್ನು ಕೊಟ್ಟು ಸೋಮಕ್ರಯಣ ಮಾಡಬಹುದು. ಕ್ರಯಣಕ್ಕೆ ಸಾಧನವಾಗಿ ಮೂರನ್ನು ಹೇಳಿದ್ದಾರೆ. ಈ ಮೂರನ್ನು ವಿಕಲ್ಪದಿಂದ ವಿವಕ್ಷಿಸಬೇಕೋ?, ಅಥವಾ ಸಮುಚ್ಚಯದಿಂದ ವಿವಕ್ಷಿಸಬೇಕೋ? ಎಂಬುದನ್ನು ಜೈಮಿನ್ಯಾಚಾರ್ಯರು ವಿಚಾರ ಮಾಡಿರುತ್ತಾರೆ. ಮೂರನ್ನೂ ಕೂಡ ನೀಡಿ ಸಮಕ್ರಯಣ ಮಾಡಬೇಕೆಂಬ ಸಮುಚ್ಚಯಪಕ್ಷದಲ್ಲೇ ಸಿದ್ಧಾಂತ ಮಾಡಿದ್ದಾರೆ. ಸಮುಚ್ಚಯ ಮಾಡಬೇಕಾದರೆ ಸಾಪೇಕ್ಷತ್ವವು ಇರಲೇಬೇಕೆಂದು ನಿಯಮವಿಲ್ಲ. ಏಕೆಂದರೆ ಬಂಗಾರವನ್ನು ಕೊಟ್ಟು ಸಮಕ್ರಯಣ ಮಾಡಬೇಕಾದರೆ ವಸ್ತ್ರದ ಅಪೇಕ್ಷೆಯಿಲ್ಲ. ವಸ್ತ್ರವನ್ನು ಕೊಟ್ಟು ಸಮಕ್ರಯಣ ಮಾಡಬೇಕಾದರೆ ಬಂಗಾರದ ಅಪೇಕ್ಷೆಯಿರುವುದಿಲ್ಲ. ಮತ್ತು ಶ್ರುತಿವಾಕ್ಯವನ್ನು ನೋಡಿದಾಗಲೂ ಕೂಡ ಪ್ರತಿಯೊಂದರಲ್ಲಿಯೂ ತೃತೀಯಾವಿಭಕ್ತಿಯು ಶ್ರುತವಾಗಿದೆ. ಶೇಷತ್ವಬೋಧಕವಾದ ಪ್ರತ್ಯೇಕವಾದ ತೃತೀಯಾವಿಭಕ್ತಿಗಳು ಕೇಳಿಸುತ್ತಿರುವುದರಿಂದ ಪ್ರತಿಯೊಂದೂ ಕೂಡ ಇತರ ನಿರಪೇಕ್ಷವಾಗಿಯೇ ಕ್ರಯಸಾಧನವಾಗಿವೆ ಎಂದು ತಿಳಿಯುತ್ತದೆ. ಆದ್ದರಿಂದ ಸಮುಚ್ಚಯಪಕ್ಷವನ್ನು ಏಕೆ ಸ್ವೀಕರಿಸಬೇಕು ? ಎಂಬ ಆಕ್ಷೇಪ ಬರುತ್ತದೆ. ಆದರೆ ವಿಕ್ರೇತೃವಿನ ಆನತಿರೂಪವಾದ ದ್ವಾರಭೇದವಿರುವುದರಿಂದ ಸಾಪೇಕ್ಷಿತವಾಗಿಯೇ ಅಜಾದಿಗಳನ್ನು ವಿವಕ್ಷಿಸಬೇಕು ಎಂಬುದಾಗಿ ಸಿದ್ಧಾಂತ ಮಾಡಿದ್ದಾರೆ.

ಸ್ಮೃತ್ಯಧಿಕರಣ (೨-೧-೧)

**नच षोडशिग्रहणाग्रहणवद् व्यवस्थितविकल्पो वा व्रीहियववदव्यवस्थितविकल्पो वा युक्तः ।**

ಪ್ರಶ್ನೆ - 'ಅತಿರಾತ್ರೇ ಷೋಡಶಿನಂ ಗ್ರಹ್ಣಾತಿ ನಾತಿರಾತ್ರೇ ಷೋಡಶಿನಂ ಗ್ರಹ್ಣಾತಿ' ಎಂಬ ಶ್ರುತಿವಾಕ್ಯವು ಅಧಿಕಾರಿಭೇದದಿಂದ ವ್ಯವಸ್ಥಿತವಿಕಲ್ಪವನ್ನು ಮಾಡಿದೆ. ಕೆಲವು ಅಧಿಕಾರಿಗಳು ಷೋಡಶಿಗ್ರಹಣವನ್ನು ಮಾಡಬೇಕು. ಕೆಲವು ಅಧಿಕಾರಿಗಳು ಷೋಡಶಿಗ್ರಹಣವನ್ನು ಮಾಡಬಾರದು ಎಂದು ಶ್ರುತಿಯು ವ್ಯವಸ್ಥೆ ಮಾಡಿರುವುದರಿಂದ ವ್ಯವಸ್ಥಿತವಿಕಲ್ಪ ಎಂದು ಕರೆಯುತ್ತಾರೆ. ಅದೇರೀತಿಯಾಗಿ ವಿಷ್ಣು ಹಾಗೂ ರುದ್ರ ಇವರಿಬ್ಬರ ವಿಷಯದಲ್ಲಿ ವ್ಯವಸ್ಥಿತವಿಕಲ್ಪವನ್ನು ಆಶ್ರಯಿಸಬಹುದು. ಅಥವಾ 'ವ್ರೀಹಿಭಿರ್ಯಜೇತ', 'ಯವೈರ್ಯಜೇತ' ಎಂಬ ಶ್ರುತಿಯು ವ್ರೀಹಿಯಿಂದಾಗಲೀ, ಯವದಿಂದಾಗಲೀ ಯಾಗವನ್ನು ಮಾಡಬೇಕು ಎಂಬಂತೆ ಅವ್ಯವಸ್ಥಿತವಿಕಲ್ಪವನ್ನು ಹೇಳುತ್ತಿದೆ. ವಿಷ್ಣುವೂ ಜಗತ್ತಿಗೆ ಕಾರಣನಾಗಬಹುದು ಅಥವಾ ರುದ್ರನು ಜಗತ್ತಿಗೆ ಕಾರಣನಾಗಬಹುದು.

**पुन्तन्त्रेऽनुष्ठेये विकल्पसंभवेऽपि तदतन्त्रे सिद्धे वस्तुनि तदयोगात् ।**

ಉತ್ತರ - ಹೀಗೆ ವ್ಯವಸ್ಥಿತವಿಕಲ್ಪವನ್ನಾಗಲೀ, ಅವ್ಯವಸ್ಥಿತವಿಕಲ್ಪವನ್ನಾಗಲೀ ಜಗತ್ಕಾರಣತ್ವವಿಷಯದಲ್ಲಿ ವಿವಕ್ಷಿಸಲಾಗದು. ಏಕೆಂದರೆ ಪುರುಷನ ಅಧೀನವಾಗಿರುವ ಅನುಷ್ಠೇಯವಿಷಯದಲ್ಲಿ ವಿಕಲ್ಪವು ಯುಕ್ತವಾಗಬಹುದು. ಆದರೆ ಯಾವುದು ಪುರುಷನ ಅಧೀನವಲ್ಲವೋ, ಸಿದ್ಧವಾದ ವಿಷಯವೋ ಅದರ ಬಗ್ಗೆ ವಿಕಲ್ಪವು ಯುಕ್ತವಾಗುವುದಿಲ್ಲ.

**न हीदमेवमनेवं वा कर्तव्यमितिवदिदमेवमनेवंवा भवतीति सम्भवति ।**

ಇದನ್ನು ಹೀಗೂ ಮಾಡಬಹುದು. ಮತ್ತೊಂದು ಬಗೆಯಲ್ಲಿಯೂ ಮಾಡಬಹುದು ಎಂದು ಕರ್ತವ್ಯದ ಬಗ್ಗೆ ವಿಕಲ್ಪವನ್ನು ಹೇಳಲು ಬರುತ್ತದೆ. ಆದರೆ ಈ ಪದಾರ್ಥ ಹೀಗೂ ಆಗುತ್ತದೆ, ಹಾಗೂಆಗುತ್ತದೆ ಎಂಬುದಾಗಿ ಸಿದ್ಧವಸ್ತುವಿನಲ್ಲಿ ವಿಕಲ್ಪವನ್ನು ಹೇಳಲಾಗದು. ಒಬ್ಬನಿಗೆ ನೀನು ಘಟವನ್ನಾದರೂ ಸೃಷ್ಟಿಮಾಡು, ಪಟವನ್ನಾದರೂ ಸೃಷ್ಟಿಮಾಡು ಎಂದು ಹೇಳಬಹುದೇ ಹೊರತು, ಸಿದ್ಧವಾದ ಘಟವನ್ನು ನೋಡಿ, ಇದು ಘಟವೂ ಆಗುತ್ತದೆ. ಪಟವೂ ಆಗುತ್ತದೆ ಎಂದು ಸಿದ್ಧವಸ್ತುವಿನಲ್ಲಿ ವಿಕಲ್ಪ ಮಾಡಲು ಸಾಧ್ಯವೇ ಇಲ್ಲ.

**समुच्चयश्च सापेक्षयोरेव । प्रकृते च श्रुतौ स्मृतौ च निरपेक्षस्यैव विष्णोः शिवस्य च हेतुतोच्यते ।**

ವಿಷ್ಣು ಹಾಗೂ ರುದ್ರ ಇಬ್ಬರು ಸೇರಿ ಜಗತ್ಕಾರಣರಾಗಬಹುದಲ್ಲವೇ? ಎಂದೂ ಕೂಡ ಪ್ರಶ್ನಿಸಲಾಗದು. ಪ್ರಕೃತ ಶ್ರುತಿಯಲ್ಲಿ ರುದ್ರನ ಅಪೇಕ್ಷೆಯಿಲ್ಲದೇ ವಿಷ್ಣುವೊಬ್ಬನೇ ಜಗತ್ಕಾರಣನಾಗಿದ್ದಾನೆಂದು ಹೇಳಲಾಗಿದೆ. ಸ್ಮೃತಿಗಳಲ್ಲಿ ವಿಷ್ಣುವಿನ ಅಪೇಕ್ಷೆಯಿಲ್ಲದೇ ರುದ್ರನೊಬ್ಬನೇ ಜಗತ್ಕಾರಣನಾಗಿದ್ದಾನೆಂದು ಹೇಳಲಾಗಿದೆ. ಹೀಗೆ ಪರಸ್ಪರ ನಿರಪೇಕ್ಷಿತವಾಗಿಯೇ ಜಗತ್ಕಾರಣತ್ವವನ್ನು ಸಮರ್ಥಿಸುತ್ತಿರುವಾಗ ಸಮುಚ್ಚಯಪಕ್ಷವನ್ನು ವಿವಕ್ಷಿಸಲಾಗದು. ಸಾಪೇಕ್ಷತ್ವವು ಇಲ್ಲದಿದ್ದರೆ ಸಮುಚ್ಚಯವನ್ನು ಮಾಡಲಾಗದು.

**''अजया क्रीणाति हिरण्येन क्रीणाति वाससा क्रीणाति'' इत्यत्र सोमक्रये प्रत्येकं तृतीयाश्रुत्या निरपेक्षत्वेन प्रतीतानामप्यजादीनां विक्रेत्रानतिरूपद्वार-भेदात्सापेक्षाणामेव समुच्चय उक्तः ।**

ಸಾಪೇಕ್ಷತ್ವ ಇಲ್ಲದಿದ್ದರೆ ಸಮುಚ್ಚಯವನ್ನು ಮಾಡಲಾಗದು ಎಂಬ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತ ಹೀಗಿದೆ - ಸೋಮವನ್ನು ಕ್ರಯಣ ಮಾಡುವ ಸಂದರ್ಭದಲ್ಲಿ 'ಅಜಯಾ ಕ್ರೀಣಾತಿ ಹಿರಣ್ಯೇನ ಕ್ರೀಣಾತಿ ವಾಸಸಾ ಕ್ರೀಣಾತಿ' ಎಂಬ ಶ್ರುತಿವಾಕ್ಯ ಹೊರಟಿದೆ. ಆಡನ್ನು ಕೊಟ್ಟು ಸೋಮಕ್ರಯಣ ಮಾಡಬಹುದು, ಬಂಗಾರವನ್ನು ಕೊಟ್ಟು ಸೋಮಕ್ರಯಣ ಮಾಡಬಹುದು. ಅಥವಾ ಬಟ್ಟೆಯನ್ನು ಕೊಟ್ಟು ಸೋಮಕ್ರಯಣ ಮಾಡಬಹುದು. ಕ್ರಯಣಕ್ಕೆ ಸಾಧನವಾಗಿ ಮೂರನ್ನು ಹೇಳಿದ್ದಾರೆ. ಈ ಮೂರನ್ನು ವಿಕಲ್ಪದಿಂದ ವಿವಕ್ಷಿಸಬೇಕೋ?, ಅಥವಾ ಸಮುಚ್ಚಯದಿಂದ ವಿವಕ್ಷಿಸಬೇಕೋ? ಎಂಬುದನ್ನು ಜೈಮಿನ್ಯಾಚಾರ್ಯರು ವಿಚಾರ ಮಾಡಿರುತ್ತಾರೆ. ಮೂರನ್ನೂ ಕೂಡ ನೀಡಿ ಸಮಕ್ರಯಣ ಮಾಡಬೇಕೆಂಬ ಸಮುಚ್ಚಯಪಕ್ಷದಲ್ಲೇ ಸಿದ್ಧಾಂತ ಮಾಡಿದ್ದಾರೆ. ಸಮುಚ್ಚಯ ಮಾಡಬೇಕಾದರೆ ಸಾಪೇಕ್ಷತ್ವವು ಇರಲೇಬೇಕೆಂದು ನಿಯಮವಿಲ್ಲ. ಏಕೆಂದರೆ ಬಂಗಾರವನ್ನು ಕೊಟ್ಟು ಸಮಕ್ರಯಣ ಮಾಡಬೇಕಾದರೆ ವಸ್ತ್ರದ ಅಪೇಕ್ಷೆಯಿಲ್ಲ. ವಸ್ತ್ರವನ್ನು ಕೊಟ್ಟು ಸಮಕ್ರಯಣ ಮಾಡಬೇಕಾದರೆ ಬಂಗಾರದ ಅಪೇಕ್ಷೆಯಿರುವುದಿಲ್ಲ. ಮತ್ತು ಶ್ರುತಿವಾಕ್ಯವನ್ನು ನೋಡಿದಾಗಲೂ ಕೂಡ ಪ್ರತಿಯೊಂದರಲ್ಲಿಯೂ ತೃತೀಯಾವಿಭಕ್ತಿಯು ಶ್ರುತವಾಗಿದೆ. ಶೇಷತ್ವಬೋಧಕವಾದ ಪ್ರತ್ಯೇಕವಾದ ತೃತೀಯಾವಿಭಕ್ತಿಗಳು ಕೇಳಿಸುತ್ತಿರುವುದರಿಂದ ಪ್ರತಿಯೊಂದೂ ಕೂಡ ಇತರ ನಿರಪೇಕ್ಷವಾಗಿಯೇ ಕ್ರಯಸಾಧನವಾಗಿವೆ ಎಂದು ತಿಳಿಯುತ್ತದೆ. ಆದ್ದರಿಂದ ಸಮುಚ್ಚಯಪಕ್ಷವನ್ನು ಏಕೆ ಸ್ವೀಕರಿಸಬೇಕು ? ಎಂಬ ಆಕ್ಷೇಪ ಬರುತ್ತದೆ. ಆದರೆ ವಿಕ್ರೇತೃವಿನ ಆನತಿರೂಪವಾದ ದ್ವಾರಭೇದವಿರುವುದರಿಂದ ಸಾಪೇಕ್ಷಿತವಾಗಿಯೇ ಅಜಾದಿಗಳನ್ನು ವಿವಕ್ಷಿಸಬೇಕು ಎಂಬುದಾಗಿ ಸಿದ್ಧಾಂತ ಮಾಡಿದ್ದಾರೆ.

ಸ್ಮೃತ್ಯಧಿಕರಣ (೨-೧-೧)

**नच देशकालकार्यभेदादविरोधः । श्रुतौ स्मृतौ च विष्णोः शिवस्य च सदा सर्वत्र सर्वकार्यहेतुत्वोक्तेः ।**

ಪ್ರಶ್ನೆ - ಒಂದು ದೇಶ ಒಂದು ಕಾಲದಲ್ಲಿ ವಿಷ್ಣು ಜಗತ್ಕಾರಣನಾಗಿದ್ದಾನೆ. ಮತ್ತೊಂದು ದೇಶ ಮತ್ತೊಂದು ಕಾಲದಲ್ಲಿ ರುದ್ರನು ಜಗತ್ಕಾರಣನಾಗಿದ್ದಾನೆ. ಹೀಗೆ ದೇಶಕಾಲಭೇದವಿವಕ್ಷೆಯಿಂದ ಪರಸ್ಪರ ವಿರೋಧ ಪರಿಹರಿಸಬಹುದಲ್ಲವೇ?

ಉತ್ತರ - ಇದೂ ಕೂಡ ತಪ್ಪು. ಏಕೆಂದರೆ ಶ್ರುತಿಯಲ್ಲಿ ಸರ್ವದೇಶ, ಸರ್ವಕಾಲಗಳಲ್ಲಿಯೂ ಜಗತ್ಕಾರಣತ್ವವನ್ನು ಹೇಳಲಾಗಿದೆ. ಪಾಶುಪತಾದಿ ಸ್ಮೃತಿಗಳಲ್ಲಿ ರುದ್ರನಿಗೆ ಸರ್ವದೇಶ, ಸರ್ವಕಾಲಗಳಲ್ಲಿ ಜಗತ್ಕಾರಣತ್ವವನ್ನು ಹೇಳಲಾಗಿದೆ.

**श्रुतौ शिवस्य स्मृतौ च विष्णोः कारणताया निषेधाच्च ।**

ಮತ್ತು ಶ್ರುತಿಯಲ್ಲಿ ವಿಷ್ಣುವೊಬ್ಬನೇ ಜಗತ್ಕಾರಣನಾಗಿದ್ದಾನೆಂದು ಹೇಳುವುದರ ಜೊತೆಗೆ ರುದ್ರಾದಿಗಳು ಜಗತ್ಕಾರಣರಲ್ಲ ಎಂಬುದಾಗಿ ನಿಷೇಧ ಮಾಡಲಾಗಿದೆ. ಸ್ಮೃತಿಯಲ್ಲಿಯೂ ಕೂಡ ರುದ್ರನಿಗೆ ಜಗತ್ಕಾರಣತ್ವವನ್ನು ಹೇಳುವುದಷ್ಟೇ ಅಲ್ಲದೇ ವಿಷ್ಣುವಿಗೆ ಜಗತ್ಕಾರಣತ್ವವನ್ನು ನಿಷೇಧ ಮಾಡಲಾಗಿದೆ.

**नच विरोधाधिकरणन्यायेन स्मृतेरेवाप्रामाण्यम् । वाक्यप्रामाण्यं प्रत्यासेर्मूलत्वात् ।**

ಪ್ರಶ್ನೆ - ಪೂರ್ವಮೀಮಾಂಸೆಯ ವಿರೋಧಾಧಿಕರಣನ್ಯಾಯದಿಂದ ಶ್ರುತಿ ವಿರುದ್ಧವಾದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಹುದಲ್ಲವೇ ?

ಉತ್ತರ - ಇದು ತಪ್ಪು. ಸ್ಮೃತಿಗಳು ಶ್ರುತಿಮೂಲಕವಾಗಿಯೇ ಪ್ರಮಾಣವಾಗುತ್ತವೆ. ಉಪಜೀವ್ಯವಾದ ಶ್ರುತಿಯೇ ವಿರೋಧ ಮಾಡಿದರೆ, ಅಂಥ ಸ್ಮೃತಿಗಳು ಪ್ರಮಾಣವಾಗುವುದಿಲ್ಲ ಎಂದಷ್ಟೇ ವಿರೋಧಾಧಿಕರಣದ ಅಭಿಪ್ರಾಯ.

ಪ್ರಕೃತ ಶೈವಾದಿಸ್ಮೃತಿಗಳು ಆಪ್ತಮೂಲಕವಾದ್ದರಿಂದ ಪರಮಪ್ರಮಾಣವಾಗಿದೆ ಎಂದು ಸಮರ್ಥಿಸಲಾಗಿದೆ. ಹೀಗಿರುವಾಗ ವಿರೋಧಾಧಿಕರಣನ್ಯಾಯದಿಂದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಆಶಂಕಿಸಲಾಗದು.

**शैवादिस्मृतीनां च सर्वज्ञत्वादिना प्रसिद्धशिवादिप्रणीतत्वेन समूलत्वात् ।**

ಶೈವಾದಿಸ್ಮೃತಿಗಳು ಸರ್ವಜ್ಞರೆಂದು ಪ್ರಸಿದ್ಧರಾದ ರುದ್ರಾದಿಗಳಿಂದ ರಚಿತವಾಗಿದೆ. ಆದ್ದರಿಂದ ಸಮೂಲವಾಗಿದೆ.

**श्रुतीनां च पौरुषेयत्वेन निर्मूलत्वात् । समूलानुसारेण च निर्मूलस्य नेयत्वात्।**

ಶ್ರುತಿಗಳಾದರೂ ಅಪೌರುಷೇಯವಾದ್ದರಿಂದ ನಿರ್ಮೂಲವಾಗಿವೆ. ಆಪ್ತಮೂಲಕವಲ್ಲದ ಕಾರಣ ನಿರ್ಮೂಲವಾದ ಶ್ರುತಿಯನ್ನು ಆಪ್ತಮೂಲಕವಾದ್ದರಿಂದ ಸಮೂಲವಾದ ಪಾಶುಪತಾದಿಶ್ರುತಿಗಳಿಗೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಬೇಕು.

**विरोधाधिकरणे तु श्रुतिमूलत्वेनाभिमतायाः सर्ववेष्टनादिस्मृतेः स्पर्शनश्रुतिविरोधेन स्पर्शनार्थं द्वित्राङ्गुलं हित्वा तदितरसर्ववेष्टनरूपमर्थान्तरमुक्तं भाट्टैः । प्राभाकरैस्त्वप्रामाण्यम् । पाशुपतादिस्मृतिस्तु शिवादिप्रत्यक्षमूला ।**

ವಿರೋಧಾಧಿಕರಣದಲ್ಲಿ ಶ್ರುತಿಮೂಲಕವೆಂದು ಅಭಿಮತವಾದ ಸರ್ವವೇಷ್ಟನಾದಿಸ್ಮೃತಿಗಳಿಗೆ ಸ್ಪರ್ಶನಶ್ರುತಿಯ ವಿರೋಧವಿರುವುದರಿಂದ ಗೌಣಾರ್ಥವನ್ನು ಅಂಗೀಕರಿಸಲಾಗಿದೆ. ಸ್ಪರ್ಶ ಮಾಡುವುದಕ್ಕಾಗಿ ಎರಡು ಮೂರು ಅಂಗುಲಗಳನ್ನು ಬಿಟ್ಟು ಉಳಿದ ಸಂಪೂರ್ಣ ಕಂಭವನ್ನು ವಸ್ತ್ರದಿಂದ ವೇಷ್ಟನ ಮಾಡಬೇಕು ಎಂಬರ್ಥವನ್ನು ಭಾಟ್ಟರು ಹೇಳಿರುತ್ತಾರೆ. ಪ್ರಾಭಾಕರರು ಸ್ಮೃತಿಗೆ ಅಪ್ರಾಮಾಣ್ಯವನ್ನೇ ಹೇಳಿದ್ದಾರೆ. ಆದ್ದರಿಂದ ಪೂರ್ವಮೀಮಾಂಸೆಯ ವಿರೋಧಾಧಿಕರಣದ ನ್ಯಾಯವನ್ನು ಇಲ್ಲಿ ವಿವಕ್ಷಿಸಲು ಬರುವುದಿಲ್ಲ. ಪಾಶುಪತಾದಿಸ್ಮೃತಿಗಳು ಶಿವಾದಿಪ್ರತ್ಯಕ್ಷ-ಮೂಲವಾದ್ದರಿಂದ ಅತ್ಯಂತ ಬಲಿಷ್ಠವಾಗಿದೆ.

**प्रकाशः –**

अप्रतीतेराह – **पूर्वपक्षमाहेति** ।। ''नच विरोधेऽप्यप्रामाण्याभावः । वस्तुनि विकल्पप्रसङ्गात्'' इति टीकां व्यनक्ति – **व्यवस्थितेति** ।।

ಟೀಕೆಯಲ್ಲಿ ಪೂರ್ವಪಕ್ಷವು ಸ್ಪಷ್ಟವಾಗದಿರುವುದರಿಂದ ಪ್ರಕೃತ ಗ್ರಂಥಕಾರರು 'ಪೂರ್ವಪಕ್ಷಮಾಹ' ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ನಚ ವಿರೋಧೇಽಪ್ಯಪ್ರಾಮಾಣ್ಯಾಭಾವಃ। ವಸ್ತುನಿ ವಿಕಲ್ಪಪ್ರಸಂಗಾತ್' ವಿರೋಧ ಬಂದರೂ ಕೂಡ ಅಪ್ರಾಮಾಣ್ಯ ಬರುವುದಿಲ್ಲವೆಂದು ಹೇಳಬಾರದು ವಸ್ತುವಿನಲ್ಲಿ ವಿಕಲ್ಪ ಕೂಡುವುದಿಲ್ಲ ಎಂಬ ಟೀಕೆಯನ್ನು 'ವ್ಯವಸ್ಥಿತಃ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – व्यक्तमेतदधिकरणशरीरं समन्वयसूत्रे । फलभूयस्त्वाय ग्रहणानुष्ठानमन्यथा तु नेति व्यवस्थितत्वं ध्येयम् ।।

ಷೋಡಶಗ್ರಹಣದ ಅಧಿಕರಣಶರೀರವನ್ನು ಸಮನ್ವಯಾಧಿಕರಣದಲ್ಲಿಯೇ ಸ್ಪಷ್ಟಪಡಿಸಿದ್ದಾರೆ. 'ಉದಿತೇ ಜುಹೋತಿ, ಅನುದಿತೇ ಜುಹೋತಿ' ಎಂಬ ಎರಡು ವಿರುದ್ಧ ಶ್ರುತಿಗಳಿಗೆ ಅಧಿಕಾರಭೇದದಿಂದ

ಅರ್ಥೈಸಬೇಕು. ಋಗ್ವೇದಿಗಳು ಉದಿತಹೋಮವನ್ನು ಯಜುರ್ವೇದಿಗಳಿಗೆ ಅನುದಿತಹೋಮವನ್ನು ಶ್ರುತಿಯು ವಿವಕ್ಷಿಸಿದೆಯೆಂದು ಅರ್ಥೈಸಲಾಗಿದೆ. ಹೆಚ್ಚು ಫಲವು ಅಪೇಕ್ಷಿತವಾಗಿದ್ದಲ್ಲಿ ಷೋಡಶಗ್ರಹಣವನ್ನು ಮಾಡಬೇಕು. ಸಾಮಾನ್ಯಫಲದ ವಿವಕ್ಷೆಯಿದ್ದರೆ ಷೋಡಶಗ್ರಹಣದ ಅನುಷ್ಠಾನವನ್ನು ಮಾಡಬೇಕಾಗಿಲ್ಲ ಎಂಬ ವ್ಯವಸ್ಥಿತವಿಕಲ್ಪವನ್ನು ಆಶ್ರಯಿಸಿದ್ದಾರೆ. ಹೀಗೆ ಷೋಡಶಗ್ರಹಣ ಮತ್ತು ಅಗ್ರಹಣವಿಷಯದಲ್ಲಿ ವ್ಯವಸ್ಥಿತವಿಕಲ್ಪವನ್ನು ತಿಳಿಯಬೇಕು.

**प्रकाशः – व्रीहीति ।।** द्वादशस्य तृतीये पादे ''एकार्थास्तु विकल्पेरन् समुच्चये त्वावृत्तिस्स्यात् प्रधानस्य'' इति चतुर्थेऽधिकरणे ''व्रीहिभिर्यजेत यवैर्यजेत'' इत्यादिषु सर्वाङ्गोपसंहारिप्रयोगवचनानुग्रहायाष्टदोषनिदानविकल्पपरिहाराय च समुच्चय इति प्राप्ते एकार्थानामेकस्मिन्नुपकारेऽन्योन्यनिरपेक्षतया विनियुक्तानां विकल्प इत्युक्तं फलविशेषाद्यभावादव्यवस्थितत्वम् । तथेत्यर्थः ।। **अजयेति ।।**

'ಏಕಾರ್ಥಸ್ತು ವಿಕಲ್ಪೇರನ್ ಸಮುಚ್ಚಯೇ ತ್ವಾವೃತ್ತಿಃ ಸ್ಯಾತ್ ಪ್ರಧಾನಸ್ಯ' (೨-೩-೪)

'ವ್ರೀಹಿಭಿರ್ಯಜೇತ ಯವೈರ್ಯಜೇತ' ಇತ್ಯಾದಿ ವಾಕ್ಯವನ್ನು 'ಪ್ರಯೋಗವಚನ' ಎಂದು ಕರೆಯುತ್ತಾರೆ. ಹೇಳಿದ್ದೆಲ್ಲವನ್ನೂ ಆಚರಣೆ ಮಾಡಲೇಬೇಕು ಎಂಬ ಸರ್ವಾಂಗವನ್ನು ಉಪಸಂಹಾರ ಮಾಡುವ ಪ್ರಯೋಗ ವಚನಕ್ಕೆ ಅನುಸಾರಿಯಾಗಿ ವ್ರೀಹಿ ಹಾಗೂ ಯವ ಎರಡನ್ನು ಸಮುಚ್ಚಯ ಮಾಡಬೇಕೆಂದು ತಿಳಿಸಿದ್ದಾರೆ. ಹೊರತು, ವಿಕಲ್ಪವನ್ನು ಆಶ್ರಯಿಸಬಾರದು. ಏಕೆಂದರೆ ವಿಕಲ್ಪವು ಅಷ್ಟದೋಷದುಷ್ಟವಾಗಿದೆ. ಒಂದನ್ನು ಮಾತ್ರ ವಿವಕ್ಷಿಸಿದರೆ ಮತ್ತೊಂದು ವಾಕ್ಯಕ್ಕೆ ಅಪ್ರಾಮಾಣ್ಯ ಬರುತ್ತದೆ ಇತ್ಯಾದಿ ಎಂಟು ದೋಷಗಳಿಗೆ ಅವಕಾಶವಿರುವ ವಿಕಲ್ಪವನ್ನು ಸರ್ವಥಾ ಆಶ್ರಯಿಸಬಾರದು. ಆದ್ದರಿಂದ ಸಮುಚ್ಚಯ ಪಕ್ಷವನ್ನೇ ವಿವಕ್ಷಿಸಬೇಕು. ಇಷ್ಟು ಪೂರ್ವಪಕ್ಷ.

ಈ ಪ್ರಕರಣದಲ್ಲಿ ಒಂದೇ ಫಲವನ್ನು ಹೇಳಿದ್ದಾರೆ. ಒಂದೇ ಫಲದಲ್ಲಿ ನಿರಪೇಕ್ಷಿತವಾಗಿ ವ್ರೀಹಿ ಮತ್ತು ಯವಗಳನ್ನು ಶ್ರುತಿ ಹೇಳುತ್ತಿದೆ. ಒಂದುವೇಳೆ ವ್ರೀಹಿಯಿಂದ ಮಾಡುವ ಹೋಮದ ಪ್ರಯೋಜನವೇ ಬೇರೆ, ಯವದಿಂದ ಮಾಡುವ ಹೋಮದ ಪ್ರಯೋಜನವೇ ಬೇರೆ ಎಂದು ಸಿದ್ಧವಾಗಿದ್ದರೆ ಸಮುಚ್ಚಯಪಕ್ಷವನ್ನು ಸ್ವೀಕರಿಸಬಹುದಿತ್ತು. ಯಾಗಸ್ವರೂಪನಿಷ್ಪತ್ತಿಯೆಂಬ ಒಂದೇ ಉಪಕಾರದಲ್ಲಿ ವ್ರೀಹಿ ಹಾಗೂ ಯವ ಎರಡೂ ಕೂಡ ನಿರಪೇಕ್ಷಿತವಾಗಿ ನಿಮಿತ್ತವಾಗಿದೆ. ಆದ್ದರಿಂದ ಸಮುಚ್ಚಯಪಕ್ಷವನ್ನು ವಿವಕ್ಷಿಸಬಾರದು. ಅಷ್ಟದೋಷ-ಯುಕ್ತವಾಗಿದ್ದರೂ ವಿಕಲ್ಪಪಕ್ಷವನ್ನೇ ಸ್ವೀಕರಿಸಬೇಕು. ಒಂದುವೇಳೆ ಸಮುಚ್ಚಯಪಕ್ಷವನ್ನು ವಿವಕ್ಷಿಸಿದರೆ ಪ್ರಧಾನಕರ್ಮಕ್ಕೆ ಆವೃತ್ತಿಯನ್ನು ಸ್ವೀಕರಿಸಬೇಕಾದ ಪ್ರಸಂಗ ಬರುತ್ತದೆ. ಒಮ್ಮೆ ವ್ರೀಹಿಯಿಂದ ಯಾಗವನ್ನು ಮಾಡಿ, ಪುನಃ ಯವದಿಂದಲೂ ಯಾಗವನ್ನು ಮಾಡಬೇಕಾದೀತು. ಆವಾಗ ಪ್ರಧಾನಕರ್ಮದ ಯಾಗದಲ್ಲಿ ಆವೃತ್ತಿಯನ್ನು ಒಪ್ಪಿಕೊಳ್ಳುವ ಪ್ರಸಂಗ ಬರುತ್ತದೆ. ವಿಕಲ್ಪಪಕ್ಷದಲ್ಲಿ ಪ್ರಧಾನಕರ್ಮಕ್ಕೆ ಆವೃತ್ತಿದೋಷವು ಬರುವುದಿಲ್ಲ. ಮತ್ತು ವ್ರೀಹಿಯಿಂದ ಮಾಡಿದರೆ ಫಲವು ಅಧಿಕವಾಗಿರುತ್ತದೆ. ಯವದಿಂದ ಫಲವು ಅಧಿ

ಕವಾಗಿರುವುದಿಲ್ಲ ಎಂಬ ಯಾವುದೇ ಫಲವಿಶೇಷವನ್ನು ಹೇಳಿರುವುದಿಲ್ಲ. ಆದ್ದರಿಂದ ಇದನ್ನು ಅವ್ಯವಸ್ಥಿತ-ವಿಕಲ್ಪವೆಂದೇ ಭಾವಿಸಬೇಕು.

**ಪ್ರಕಾಶಃ** – विवृतमेतदधिकरणशरीरं ''पत्यादिशब्देभ्यः'' इति सूत्रे । आनतिरावर्जनम् । एतेन टीकोपलक्षणं समुच्चयनिरासस्येत्युक्तं भवति । ''नच देशकाल'' इत्यादि टीकार्थमाह – **नचेति** ।।

'ಅಜಯಾ ಕ್ರೀಣಾತಿ' ಇತ್ಯಾದಿ ಶ್ರುತಿಯನ್ನು ವಿಚಾರ ಮಾಡುವ ಪೂರ್ವಮೀಮಾಂಸಾಧಿಕರಣದಲ್ಲಿ 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರದಲ್ಲಿಯೇ ನಾವು ವಿವರಿಸಿದ್ದೇವೆ. ಆನತಿಃ' ಎಂದರೆ ಕೊಡುವಂತೆ ಮಾಡುವಿಕೆ ಎಂದರ್ಥ. ಪೂರ್ವಮೀಮಾಂಸಾಧಿಕರಣದ ಅಭಿಪ್ರಾಯ ಹೀಗಿದೆ - ಸೋಮಕ್ರಯಣವನ್ನು ಮಾಡಬೇಕಾದರೆ ಮೇಕೆ, ಬಂಗಾರ, ಬಟ್ಟೆ ಮೂರನ್ನೂ ಕೂಡ ಕೊಡಬೇಕು. ಒಂದನ್ನು ಮಾತ್ರ ನೀಡಿದರೆ ಸೋಮವನ್ನು ಕೊಡಬೇಕೆಂಬ ಬುದ್ಧಿಯು ಅವನಿಗೆ ಉಂಟಾಗುವುದಿಲ್ಲ. ಮೂರನ್ನು ಒಟ್ಟಿಗೆ ಕೊಟ್ಟಾಗ ಹೆಚ್ಚು ಸಂತೋಷದಿಂದ ಸೋಮಲತೆಯನ್ನು ಅವನು ನೀಡುತ್ತಾನೆ. ಅದಕೋಸ್ಕರ ಸೋಮಕ್ರಯಣಕ್ಕೆ ಮೂರನ್ನೂ ಕೂಡ ಸಾಧನವೆಂದು ಪರಿಗಣಿಸಬೇಕು. ಹೀಗೆ ಪೂರ್ವಮೀಮಾಂಸೆಯಲ್ಲಿ ಪರಸ್ಪರ ಸಾಪೇಕ್ಷಿತವಾದ ಸಮುಚ್ಚಯಪಕ್ಷವನ್ನೇ ಸ್ವೀಕರಿಸಿದ್ದಾರೆ.

ಟೀಕೆಯಲ್ಲಿ 'ವಸ್ತುನಿವಿಕಲ್ಪಪ್ರಸಂಗಾತ್' ಎಂಬುದಾಗಿ ವಿಕಲ್ಪನಿರಾಸವನ್ನಷ್ಟೇ ಮಾಡಿದ್ದಾರೆ. ಸಮುಚ್ಚಯದ ನಿರಾಸವನ್ನೂ ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು ಎಂದು ಈಗ ವ್ಯಾಖ್ಯಾನಿಸಿದಂತಾಯಿತು. 'ನಚ ದೇಶಕಾಲ' ಇತ್ಯಾದಿ ಟೀಕಾವಾಕ್ಯವನ್ನು 'ನಚ' ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**ಪ್ರಕಾಶಃ** – यद्यप्यत्र श्रुत्यादौ ''स इदं सर्वमसृजत'' इति विष्ण्वादेः सर्वकरणत्वोक्तिस्तत्तत्कालसृज्याभिप्राया सर्वस्रष्टृत्वयोग्यताभिप्राया वा । अन्यथाऽऽगामिन्यसृजतेत्यादेरयोगात् । श्रुतौ शिवस्य स्मृतौ विष्णोः कारणतानिषेधस्तु यथोदितहोमादिनिन्दाऽनुदितहोमादिस्तुतिपरा तथा विष्ण्वादेः कारणताविधिपर इति सुवचम् ।

ಪ್ರಶ್ನೆ - ಶ್ರುತ್ಯಾದಿಗಳಲ್ಲಿ 'ಸ ಇದಂ ಸರ್ವಮಸೃಜತ' ಇತ್ಯಾದಿ ವಾಕ್ಯಗಳು ಮಹಾವಿಷ್ಣುವೇ ಸಕಲಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳುತ್ತಿರಬಹುದು. ಆದರೆ ಆಯಾ ಕಾಲದ ವಿವಕ್ಷೆಯಿಂದಷ್ಟೇ ಅದನ್ನು ಅರ್ಥೈಸಿಕೊಳ್ಳಬೇಕು. ಅಥವಾ ಸಕಲ ಪದಾರ್ಥಗಳನ್ನು ಸೃಷ್ಟಿ ಮಾಡುವ ಯೋಗ್ಯತೆ ಮಹಾವಿಷ್ಣುವಿಗೆ ಇರುತ್ತದೆ ಎಂಬ ಅಭಿಪ್ರಾಯದಿಂದಷ್ಟೇ ಅಂಥ ವಾಕ್ಯಗಳು ಹೊರಟಿರುತ್ತವೆ. ಹೀಗೊಪ್ಪದಿದ್ದರೆ ನಿಮ್ಮ ಪ್ರಕಾರವೂ ಕೂಡ ಮುಂದೆ ಆಗುವ ಸೃಷ್ಟಿಯನ್ನು ಮಹಾವಿಷ್ಣು ಇದುವರೆಗೂ ಮಾಡಿಲ್ಲವಾದ್ದರಿಂದ ಅಸಂಕುಚಿತವಾದ ಸರ್ವಸೃಷ್ಟಿಯನ್ನು ನಿಮ್ಮಿಂದಲೂ ಹೇಳಲಾಗದು. ಶ್ರುತಿಯಲ್ಲಿ ಶಿವನಿಗೆ ಜಗತ್ಕಾರಣತ್ವವನ್ನು

ನಿಷೇಧ ಮಾಡಿರಬಹುದು. ಮತ್ತು ಸ್ಮೃತಿಯಲ್ಲಿ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ನಿಷೇಧ ಮಾಡಿರಬಹುದು. ಇದರ ಅಭಿಪ್ರಾಯವೇನೆಂದರೆ ಉದಿತಹೋಮವನ್ನು ನಿಂದನೆ ಮಾಡುವುದು ಅನುದಿತಹೋಮದ ಸ್ತೋತ್ರಕ್ಕಾಗಿ, ಅನುದಿತಹೋಮದ ನಿಂದನೆಯು ಉದಿತಹೋಮದ ಸ್ತುತಿಗಾಗಿ ಎಂದು ಪೂರ್ವಮೀಮಾಂಸಕರು ಹೇಗೆ ಸಮರ್ಥಿಸುತ್ತಾರೋ, ಅದರಂತೆ ಶ್ರುತಿಯಲ್ಲಿ ಶಿವನಿಗೆ ಕಾರಣತ್ವವನ್ನು ನಿಷೇಧ ಮಾಡಿದ್ದು, ವಿಷ್ಣುವನ್ನು ಸ್ತೋತ್ರ ಮಾಡಲು ಮಾತ್ರ. ಸ್ಮೃತಿಗಳಲ್ಲಿ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ನಿಷೇಧ ಮಾಡಿದ್ದು, ಶಿವನನ್ನು ಸ್ತೋತ್ರ ಮಾಡಲು ಮಾತ್ರ. ಆದ್ದರಿಂದ ವಿಷ್ಣು ಹಾಗೂ ರುದ್ರ ಇವರಿಬ್ಬರೂ ಕೂಡ ಜಗತ್ತಿಗೆ ಕಾರಣರಾಗಬಹುದು. ದೇಶಭೇದ ಹಾಗೂ ಕಾಲಭೇದದಿಂದ ವಿರೋಧವನ್ನು ಪರಿಹರಿಸಲು ಬರುತ್ತಿರುವಾಗ ಶ್ರುತಿಗಾಗಲೀ, ಸ್ಮೃತಿಗಾಗಲೀ ಅಪ್ರಾಮಾಣ್ಯವನ್ನು ಏಕೆ ಒಪ್ಪಬೇಕು.

**प्रकाशः –** तथापि स्मृतेर्वक्ष्यमाणदिशा प्राबल्यात्तदनुरोधेन श्रुतिर्नेयेत्यत्र तात्पर्यम् । अत एव सुधायां विकल्पादिपक्षमनुक्त्वा स्मृत्या श्रुतिबाधपूर्वपक्ष एवोक्तः।

ಉತ್ತರ - ಆದರೂ ಕೂಡ ಮುಂದೆ ಪೂರ್ವಪಕ್ಷದಲ್ಲಿ ಹೇಳುವಂತೆ ಪಾಶುಪತಾದಿಸ್ಮೃತಿಗಳು ಅಪ್ತೋಕ್ತವಾದ್ದರಿಂದ ವೇದಕ್ಕಿಂತಲೂ ಪ್ರಬಲವಾಗಿದೆ. ವೇದವು ಆಪ್ತೋಕ್ತವಲ್ಲದ ಕಾರಣ ನಿರ್ಮೂಲವಾಗಿದೆ. ಅಂಥ ನಿರ್ಮೂಲವಾದ ವೇದಗಳನ್ನು ಸಮೂಲವಾದ ಸ್ಮೃತಿಗಳಿಗೆ ಅನುಸಾರಿಯಾಗಿಯೇ ವ್ಯಾಖ್ಯಾನ ಮಾಡಬೇಕು ಎಂಬುದು ಪೂರ್ವಪಕ್ಷಗಳ ಅಭಿಪ್ರಾಯ. ಆದ್ದರಿಂದ ನ್ಯಾಯಸುಧೆಯಲ್ಲಿ ವಿಕಲ್ಪಾದಿ ಪಕ್ಷಗಳನ್ನು ಹೇಳದೇ ಸ್ಮೃತಿಯಿಂದ ಶ್ರುತಿಯು ಬಾಧ್ಯವಾಗುತ್ತದೆ ಎಂಬ ಪೂರ್ವಪಕ್ಷವನ್ನೇ ನೇರವಾಗಿ ಮಾಡಿರುತ್ತಾರೆ.

**प्रकाशः –** यद्येवं तर्हि शैवादिस्मृतिविरोधान्न श्रुतिः कारणत्वे मानमित्युक्त्वा नच विरोधाधिकरणेत्यादिग्रन्थ एव वक्तव्यः । मध्ये विकल्पशङ्कापरिहारौ व्यर्थाविति चेत्तुल्यबलतामुपेत्य टीकायां सन्न्यायरत्नावल्यां च विकल्पादेराशङ्कनात्तदनुरोधेनात्रापि तथोक्तः । व्यक्तमेतदाकर एव शास्त्रयोनिसूत्रे ।

ಪ್ರಶ್ನೆ - ಹಾಗಾದರೆ ಗ್ರಂಥದಲ್ಲೇಕೆ ವಿಕಲ್ಪಪಕ್ಷವನ್ನು ಆಶ್ರಯಿಸಿದ್ದಾರೆ. ಕೇವಲ ಶೈವಾದಿಸ್ಮೃತಿಗಳ ವಿರೋಧ ಬರುವುದರಿಂದ ಶ್ರುತಿಗಳು ಜಗತ್‌ಕಾರಣತ್ವ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ ಎಂದು ಹೇಳಿ ಮುಂದೆ 'ನಚ ವಿರೋಧಾಧಿಕರಣ' ಇತ್ಯಾದಿ ಗ್ರಂಥವು ಹೊರಡಬೇಕಿತ್ತು. ಮಧ್ಯದಲ್ಲಿ ವಿಕಲ್ಪಪಕ್ಷವನ್ನು ಆಶ್ರಯಿಸಿ ಅದರ ಪರಿಹಾರವನ್ನು ಮಾಡಿದ್ದು ವ್ಯರ್ಥವಲ್ಲವೇ?

ಉತ್ತರ - ಹೌದು, ಆದರೆ ಶ್ರುತಿ-ಸ್ಮೃತಿಗಳೆರಡೂ ಸಮಾನಬಲವುಳ್ಳವುಗಳು ಎಂಬುದಾಗಿ ಟೀಕೆಯಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಸನ್ನ್ಯಾಯರತ್ನಾವಳಿಯಲ್ಲಿ ವಿಕಲ್ಪಪಕ್ಷವನ್ನು ಆಶಂಕಿಸಿದ್ದಾರೆ. ಟೀಕೆ ಹಾಗೂ ಸನ್ನ್ಯಾರತ್ನಾವಳಿಗೆ ಅನುಗುಣವಾಗಿ ಪ್ರಕೃತ ಗ್ರಂಥಕಾರರು ವಿಕಲ್ಪದ ಆಶಂಕೆಯನ್ನು ಮಾಡಿ ಪರಿಹರಿಸಿದ್ದಾರೆ. ಹೆಚ್ಚಿನ ವಿಚಾರವು ನ್ಯಾಯಸುಧೆಯ ಶಾಸ್ತ್ರಯೋನಿತ್ವಾಧಿಕರಣದಲ್ಲಿ ವಿವೃತವಾಗಿದೆ.

ಪರಿಪೂರ್ಣಚಂದ್ರಿಕಾ




ಶ್ರುತಿವಿರುದ್ಧವಾದ ಸ್ಮೃತಿಗಳು ಅಪ್ರಮಾಣ ಎಂಬುದು ಪೂರ್ವಮೀಮಾಂಸೆಯಲ್ಲಿ ಕಂಡಿದೆ - 'ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್' ಎಂಬ ಶ್ರುತಿಯು ಅತ್ತಿ ಮರದ ಯೂಪವನ್ನು ಮುಟ್ಟಿ ಗಾನ ಮಾಡಬೇಕು ಎನ್ನುತ್ತಿದೆ. ಆದರೆ ಇದಕ್ಕೆ ವಿರುದ್ಧವಾಗಿ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಅತ್ತಿಮರದ ಯೂಪವನ್ನು ಪೂರ್ತಿಯಾಗಿ ಬಟ್ಟೆಯಿಂದ ಮುಚ್ಚಬೇಕು ಎಂದು ಸ್ಮೃತಿ ಹೇಳುತ್ತಿದೆ. ಇಲ್ಲಿ ಶ್ರುತಿಗೆ ವಿರುದ್ಧವಾದ್ದರಿಂದ ಸ್ಮೃತಿಗೆ ಅರ್ಥಾಂತರವನ್ನು ಮಾಡಬೇಕೆಂದು ಭಾಟ್ಟರು ಹೇಳುತ್ತಾರೆ. ಪ್ರಾಭಾಕರರು ಶ್ರುತಿಗೆ ವಿರುದ್ಧವಾದ್ದರಿಂದ ಸ್ಮೃತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆನ್ನುತ್ತಾರೆ.

ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ ದೃಷ್ಟಾಂತವು ವಿಷಮವಾಗಿದೆ. ಯಾವ ಸ್ಮೃತಿಗಳನ್ನು ನೀವು ಉದಾಹರಿಸುತ್ತಿದ್ದೀರೋ, ಅವು ಶ್ರುತಿಯನ್ನೇ ಮೂಲಪ್ರಮಾಣವನ್ನಾಗಿಸಿಕೊಂಡು ಹೊರಟವೆ. ಆದ್ದರಿಂದ ಅವು ಶ್ರುತಿಯಲ್ಲಿ ಹೇಳಿದ್ದನ್ನೇ ಹೇಳಿದಾಗ ಅದಕ್ಕೆ ಮೂಲವಾಗಿ ಬೇರೆ ಶ್ರುತಿಯನ್ನು ಅನುಮಾನ ಮಾಡುವ ಮೂಲಕ ಪ್ರಮಾಣವೆಂದು ಸಿದ್ಧವಾಗುತ್ತವೆ. ಆದರೆ ಶ್ರುತಿಯಲ್ಲಿ ಹೇಳಿದ್ದಕ್ಕೆ ವಿರುದ್ಧವಾಗಿ ಸ್ಮೃತಿಯನ್ನು ಹೇಳಿದಾಗ ಅದಕ್ಕೆ ಮೂಲಭೂತವಾದ ಬೇರೆ ಶ್ರುತಿಯನ್ನು ಅನುಮಾನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಮಾಣವಾಗುತ್ತವೆಂಬುದು ಯುಕ್ತವೇ ಆಗಿದೆ. ಇದನ್ನೇ ಜೈಮಿನ್ಯಾಚಾರ್ಯರು 'ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್' ಎಂದು ಅನುಮಾನವನ್ನು ಹೇಳಿರುತ್ತಾರೆ. ಶ್ರುತಿಯ ವಿರೋಧವಿದ್ದರೆ ಸ್ಮೃತಿಗೆ ಪ್ರಾಮಾಣ್ಯವು ಅನಪೇಕ್ಷಿತವಾಗಿರುತ್ತದೆ. ಶ್ರುತಿವಿರೋಧವಿಲ್ಲದೇ ಇದ್ದಾಗ ಅದು ಮೂಲಶ್ರುತಿಗೆ ಅನುಮಾಪಕವಾಗುತ್ತದೆ. ಆದ್ದರಿಂದ ಪ್ರಮಾಣ.

ಆದರೆ ಪ್ರಕೃತದಲ್ಲಿ ಅದರಂತೆ ಹೇಳಲಾಗದು. ಪಾಶುಪತಾದಿಸ್ಮೃತಿಗಳು ಶ್ರುತಿಮೂಲಕವೇ ಆಗಿಲ್ಲ. ಹೊರತಾಗಿ ಶಿವನೇ ಮೊದಲಾದ ಆಪ್ತರ ಪ್ರತ್ಯಕ್ಷ ಮೂಲವಾಗಿದೆ ಎಂದು ಹೇಳುತ್ತಿದ್ದೀರಿ. ಆದ್ದರಿಂದ ಶ್ರುತಿಗಳ ಅಪೇಕ್ಷೆಯೇ ಇಲ್ಲದಾಗ ಅಪ್ರಾಮಾಣ್ಯವನ್ನೇ ಅವುಗಳಿಗೆ ಹೇಳಬೇಕಾಗುತ್ತದೆ. ಶಿವಾದಿಪ್ರತ್ಯಕ್ಷಮೂಲಕವಾದ್ದರಿಂದ ಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಪೂರ್ವಪಕ್ಷಿಗಳು ಒಪ್ಪಿಕೊಂಡಿದ್ದಾರೆ. ಹೊರತು ಶ್ರುತಿ ಮೂಲಕವಾಗಿ ಅಲ್ಲ.

### ರುದ್ರನೇ ಜಗತ್ಕಾರಣನೆಂದು ಪೂರ್ವಪಕ್ಷ

**तात्पर्यचन्द्रिका –**

**एतेन सुन्दोपसुन्दन्यायेन श्रुतिस्मृत्योः परस्परव्याघातादुभयाप्रामाण्यमिति निरस्तं । स्मृतेः प्रबलत्वादिति ।**

ಶ್ರುತಿ-ಸ್ಮೃತಿಗಳಲ್ಲಿ ಪರಸ್ಪರ ವಿರೋಧ ಬಂದಾಗ ಪೂರ್ವಮೀಮಾಂಸೆಯ ದೃಷ್ಟಾಂತದಿಂದ ಶ್ರುತಿವಿರುದ್ಧವಾದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ನಿರ್ಧಾರ ಮಾಡಲಾಯಿತು. ಆದರಿಂದಲೇ ಮತ್ತೊಂದು ಆಕ್ಷೇಪವೂ ಕೂಡ ನಿರಸ್ತವಾಯಿತು -

ಆಕ್ಷೇಪ - (೧)ಸುಂದೋಪಸುಂದನ್ಯಾಯದಿಂದ ಶ್ರುತಿ-ಸ್ಮೃತಿಗಳೆರಡರಲ್ಲಿಯೂ ಪರಸ್ಪರ ವಿರುದ್ಧವಾದ ಮಾತುಗಳಿವೆ. ಆದ್ದರಿಂದ ಎರಡಕ್ಕೂ ಕೂಡ ಅಪ್ರಾಮಾಣ್ಯವನ್ನು ಹೇಳಬೇಕು.

ಸಮಾಧಾನ - ಇದು ತಪ್ಪು. ಶ್ರುತಿ-ಸ್ಮೃತಿಗಳಲ್ಲಿ ವಿರೋಧ ಬಂದಾಗ ಶ್ರುತಿಯು ಪ್ರಬಲವಾದ್ದರಿಂದ ಶ್ರುತಿಗಳ ಅರ್ಥವು ಬಾಧಿತವಾಗುತ್ತದೆ.

**सुधायां तु ''स्मृतयो विस्पष्टवादिन्यः । प्रणेतृव्याख्यानसम्प्रदाययुक्ताश्च । श्रुतयस्त्वस्फुटविक्षिप्तवादिन्योऽव्यवस्थितालौकिकशाब्दलक्षणविषया अशक्याध्ययनानन्ता परिपूर्णवाक्यरूपा नार्थविशेषनिष्ठाः प्रणेतृव्याख्यानसम्प्रदायहीनाश्च न स्वतोऽर्थबोधकाः । किन्तु सहजसिद्धेन योगर्द्धिलब्धेन वा प्रत्यक्षेणाशेषार्थदर्शिनामाप्तानां वचनानुसारेण नेया इति न स्मृतिबाधिकाः । स्वातन्त्र्यदशायामबोधकत्वात्। पारतन्त्र्यदशायां तूपजीव्यविरोधात्'' इत्युक्तम् ।**

ಸುಧೆಯಲ್ಲಿ ಹೀಗೆ ಹೇಳಿದ್ದಾರೆ - 'ಸ್ಮೃತಿಗಳಲ್ಲಿರುವ ವಿಚಾರಗಳು ಅತ್ಯಂತ ಸ್ಪಷ್ಟವಾಗಿರುತ್ತವೆ. ಮತ್ತು ಸ್ಮೃತಿಗಳನ್ನು ರಚನೆ ಮಾಡಿದವರೇ ಅದರ ಅಭಿಪ್ರಾಯವನ್ನು ತಮ್ಮ ಶಿಷ್ಯಂದಿರಿಗೆ ಉಪದೇಶ ಮಾಡಿರುತ್ತಾರೆ. ಅದೇ ವ್ಯಾಖ್ಯಾನದ ಸಂಪ್ರದಾಯವು ಪರಂಪರಾಗತವಾಗಿರುತ್ತದೆ. ಆದರೆ ಶ್ರುತಿಗಳು ಯಾವುದೇ ಅರ್ಥವನ್ನು ಸ್ಫುಟವಾಗಿ ನಿರೂಪಣೆ ಮಾಡುವುದಿಲ್ಲ. ಶ್ರುತಿಗಳಲ್ಲಿ ಯಾವ ಪ್ರಯೋಗಗಳನ್ನು ಮಾಡಿರುತ್ತಾರೋ ಅದನ್ನು ಇದೇ ರೀತಿಯಾಗಿ ಎಂದು ನಿರ್ಣಯಿಸಲು ಬರುವುದಿಲ್ಲ. ಆದ್ದರಿಂದ ಅವ್ಯವಸ್ಥಿತವಾಗಿವೆ. ಮತ್ತು ಲೋಕದಲ್ಲಿ ಅವುಗಳ ಪ್ರಯೋಗವೇ ಇಲ್ಲದ ಕಾರಣ ಅಲೌಕಿಕವಾಗಿವೆ. ಅಧ್ಯಯನ ಮಾಡಲು ಸಾಧ್ಯವಿಲ್ಲದಷ್ಟು ಕೊನೆಯಿಲ್ಲದ ಅಪಾರಶಬ್ದರಾಶಿಯಾಗಿವೆ. ಯಾವುದೇ ವಾಕ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಬೇಕಾದಷ್ಟು ಶಬ್ದಗಳಿಲ್ಲದ ವಾಕ್ಯಗಳಿಂದ ಕೂಡಿವೆ. ಆದ್ದರಿಂದಲೇ ಅರ್ಥವಿಶೇಷದಲ್ಲಿ ನಿಶ್ಚಿತವಾದ ಸ್ಥಿತಿಯನ್ನು

(೧) ಸುಂದ ಹಾಗೂ ಉಪಸುಂದ ಎಂಬ ಇಬ್ಬರು ಸಹೋದರರು ಬ್ರಹ್ಮದೇವರ ವರವನ್ನು ಪಡೆದಿದ್ದರು. ಸಾಯುವುದಿದ್ದರೆ ಪರಸ್ಪರ ನಮ್ಮಿಂದಲೇ ಸಾಯಬೇಕು ಎಂದು. ಅವರ ಅಭಿಪ್ರಾಯವೇನೆಂದರೆ ನಾವಿಬ್ಬರು ಬಹಳ ಸ್ನೇಹಿತರು. ಒಂದೇ ಮನಸ್ಸಿರುವವರು. ನಮ್ಮಲ್ಲಿ ಎಂದೂ ಕೂಡ ವಿರೋಧ ಬರಲು ಸಾಧ್ಯವೇ ಇಲ್ಲ. ಅಂತಹ ವಿರೋಧದಿಂದ ಹೊಡೆದಾಡಿಕೊಂಡು ಸಾಯಲು ಸಾಧ್ಯವೇ ಆಗುವುದಿಲ್ಲ ಎಂಬ ದೃಷ್ಟಿಯಿಂದ ವರವನ್ನು ಕೇಳಿದ್ದರು. ಆದರೆ ಒಮ್ಮೆ ಒಬ್ಬ ಸುಂದರಿಯಾದ ಸ್ತ್ರೀಯನ್ನು ನೋಡಿ ಮೋಹಪರವಶದಿಂದ ನನಗೆ ಅವಳು ಬೇಕು ಎಂಬ ಧೋರಣೆಯಿಂದ ಇಬ್ಬರು ಪರಸ್ಪರ ಹೊಡೆದಾಡಿಕೊಂಡು ಸಾಯುತ್ತಾರೆ. ಈ ನಿಮಿತ್ತದಿಂದ ಅವರಿಬ್ಬರಲ್ಲಿ ಪರಸ್ಪರ ವಿರೋಧ ಬರುತ್ತದೆ. ಇದನ್ನು ಶಾಸ್ತ್ರದಲ್ಲಿ ಸುಂದೋಪಸುಂದನ್ಯಾಯವೆಂದು ಎಲ್ಲೆಡೆ ವ್ಯವಹರಿಸುತ್ತಾರೆ.

ಇವುಗಳು ಹೊಂದಿರುವುದಿಲ್ಲ. ಮತ್ತು ಅಪೌರುಷೇಯವಾದ್ದರಿಂದ ಅದನ್ನು ಯಾರೂ ಕೂಡ ರಚನೆ ಮಾಡಿಲ್ಲ. ರಚನೆ ಮಾಡಿದವರ ವ್ಯಾಖ್ಯಾನದ ಸಂಪ್ರದಾಯವೂ ಕೂಡ ಅವುಗಳಲ್ಲಿ ಇರುವುದಿಲ್ಲ. ಆದ್ದರಿಂದಲೇ ಸ್ವಾಭಾವಿಕವಾದ ಅರ್ಥವನ್ನು ಅವುಗಳು ಬೋಧನೆ ಮಾಡುವುದಿಲ್ಲ. ಹೊರತಾಗಿ, ಸ್ವಾಭಾವಿಕವಾಗಿ ಎಲ್ಲವನ್ನೂ ತಿಳಿಯುವ ಅಥವಾ ಯೋಗೇಶ್ವರ ಸಾಮರ್ಥ್ಯವನ್ನು ಪಡೆದಿರುವ ಪ್ರತ್ಯಕ್ಷದಿಂದ ಎಲ್ಲವನ್ನು ತಿಳಿಯುವ ಸಾಮರ್ಥ್ಯವುಳ್ಳ ಆಪ್ತರ ಮಾತುಗಳಿಗೆ ಅನುಸಾರಿಯಾಗಿ ಆ ಶ್ರುತಿಗಳನ್ನು ಅರ್ಥೈಸಬೇಕು. ಆದ್ದರಿಂದ ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ವಿಷಯಗಳನ್ನು ವಿರೋಧಿಸಲು ಶ್ರುತಿಗಳಿಗೆ ಹೇಗೆ ಸಾಮರ್ಥ್ಯ ಬರುತ್ತದೆ ? ಏಕೆಂದರೆ ಸ್ವತಂತ್ರದೆಶೆಯಲ್ಲಿ ಅವುಗಳು ಏನನ್ನೂ ಕೂಡ ಸಾಧನೆ ಮಾಡಲಾರವು. ಅಸ್ವತಂತ್ರವಾಗಿರುವಾಗ ಉಪಜೀವ್ಯವಾದ ಶ್ರುತಿಗಳನ್ನೇ ಅನುಸರಿಸಿ ಅರ್ಥವನ್ನು ಹೊಂದುತ್ತವೆ. ಆವಾಗ ಶ್ರುತಿಗಳನ್ನು ವಿರೋಧಿಸಲು ಸಾಧ್ಯವಾಗುವುದಿಲ್ಲ. ಹಾಗಾದಲ್ಲಿ ಉಪಜೀವ್ಯವಿರೋಧ ಬರುತ್ತದೆ ಎಂದು.[१]

---

(१) **न्यायसुधा –** ननु तर्हि स्मृतीनामुक्तरीत्या सावकाशत्वान्निरवकाशश्रुति-विरोधेनाप्रामाण्यमस्तु । मैवम् । वैपरीत्यात् । स्मृतयो हि विस्पष्टवादिन्यो न विवक्षितार्थात् प्रच्यावनमर्हन्ति । श्रुतयस्त्व (स्फुट)स्पष्टविक्षिप्तवादिन्योऽव्यवस्थिता-लौकिकशाब्दलक्षणविषया अशक्याध्ययनानन्तापरिपूर्णवाक्यरूपाः नार्थविशेषनिष्ठा लक्ष्यन्ते। अत एव भवतां मीमांसायासः। एतदप्युक्तं प्रकर्षेणोक्तमिति । विस्पष्टमुक्तमित्यर्थः । पिपीलिकालिपिनिभेति च । अ(स्फुटे)स्पष्टेत्यर्थः ।

ಹಾಗಿದ್ದರೆ ಹಿಂದೆ ಹೇಳಿದಂತೆ ಸ್ಮೃತಿಗಳು ಸಾವಕಾಶಗಳಾದುದರಿಂದ ನಿರವಕಾಶವಾದ ಶ್ರುತಿಯೇ ಪ್ರಬಲವಾಗುವುದರಿಂದ ಸ್ಮೃತಿಗಳು ಅಪ್ರಮಾಣವಾಗಲಿ ? ಎಂದರೆ ಹಾಗಾಗದು. ಏಕೆಂದರೆ, ಇಲ್ಲಿಯೂ ವೈಪರೀತ್ಯವಿದೆ. ಸ್ಮೃತಿಗಳು ತಾವು ಹೇಳುವುದನ್ನು ಸ್ಪಷ್ಟವಾಗಿ ನಿರೂಪಿಸುವುದರಿಂದ ಅವುಗಳು ಹೇಳುತ್ತಿರುವ ತಮ್ಮ ಅರ್ಥವನ್ನು ಬಿಟ್ಟುಕೊಡಲಾರವು. ಆದರೆ ಶ್ರುತಿಗಳು ಅಸ್ಪಷ್ಟವಾಗಿ ಮತ್ತು ಗೊಂದಲಕ್ಕೆಡೆಗೊಡುವಂತೆ ವಿಷಯಗಳನ್ನು ನಿರೂಪಿಸುತ್ತವೆ. ಹಾಗೂ ಲೋಕದಲ್ಲಿ ಬಳಕೆಯಲ್ಲಿಲ್ಲದ ಹಾಗೂ ಅವ್ಯವಸ್ಥಿತವಾದ ಶಬ್ದಪ್ರಯೋಗಗಳೂ ವಿಷಯಗಳೂ ಅಲ್ಲಿವೆ. ಆದ್ದರಿಂದ ಅವುಗಳನ್ನು ಅಧ್ಯಯನ ಮಾಡುವುದೂ ಕಷ್ಟ ಅಲ್ಲದೆ ಅನಂತವಾಗಿವೆ ಮತ್ತು ಅಪರಿಪೂರ್ಣವಾಕ್ಯಗಳಿಂದಲೂ ಕೂಡಿವೆ, ಇಷ್ಟೆಲ್ಲಾ ಸಮಸ್ಯೆಗಳಿಂದ ಅವು ಇದೇ ಅರ್ಥವನ್ನು ನಿರೂಪಿಸುತ್ತವೆ ಎಂದು ದೃಢವಾಗಿ ನಿಶ್ಚಯವಾಗಲಾರದು. ಹೀಗೆ ಅರ್ಥ ಸ್ಪಷ್ಟವಾಗದಿರುವುದರಿಂದಲೇ ಬ್ರಹ್ಮಸೂತ್ರಾದಿರೂಪದಲ್ಲಿ ಶ್ರುತ್ಯರ್ಥವನ್ನು ವಿಚಾರ ಮಾಡುವ ಪ್ರಯಾಸ ಪ್ರಾಪ್ತವಾಗಿದೆ. ಈ ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯವನ್ನು 'ಪ್ರೋಕ್ತಮ್'= ಪ್ರಕರ್ಷೇಣ ಉಕ್ತಮ್ = ಅತ್ಯಂತ ಸ್ಪಷ್ಟವಾಗಿ ಹೇಳಲ್ಪಟ್ಟದ್ದು ಎಂಬುದಾಗಿಯೂ, 'ಪಿಪೀಲಿಕಾಲಿಪಿನಿಭಾ' = ಇರುವೆ ಸಾಲಿನಲ್ಲಿ ಮೂಡಿದ ಅಕ್ಷರದಂತೆ ಅಸ್ಪಷ್ಟವಾಗಿವೆ ವೇದಗಳು ಎಂದೂ ಆಚಾರ್ಯರು ಸಂಗ್ರಹಿಸಿದ್ದಾರೆ.

**न्यायसुधा –** किञ्च श्रुतयस्तावदविस्पष्टार्थाः । प्रणेतृव्याख्यानसम्प्रदायविकला न स्वतन्त्राः कमप्यर्थं प्रतिपादयितुमीशते । किन्तु सहजसिद्धेन योगर्धिलब्धेन वा प्रत्यक्षेणाशेषार्थ-

**प्रकाशः —**

यद्वा कणादादिमते श्रुतेरप्याप्तिमूलत्वेन द्वयोस्तुल्यबलत्वात् श्रुत्यादावन्यकारणता- निषेधस्यान्यकारणताविधिपरत्वे लक्षणापत्तेः ''असृजत'' इत्यादेर्भूतार्थे तात्पर्याभावादिति कणादादिमतानुरोधेन विकल्पावतारः । तन्मते स्मृत्यनुसारेण श्रुतेर्नयने बीजं वक्ष्यते ।

ಗ್ರಂಥದಲ್ಲಿ ವಿಕಲ್ಪಾದಿಗಳನ್ನು ಆಶಂಕಿಸಿ ಪರಿಹರಿಸಿದ್ದಕ್ಕೆ ಮತ್ತೊಂದು ಕಾರಣ - ಕೆಲವರು ಶ್ರುತಿಗಳಿಗೆ ಪ್ರಾಮಾಣ್ಯವನ್ನೇ ಒಪ್ಪದಿರಬಹುದು. ಕೆಲವರು ಅಪೌರುಷೇಯವೆಂದು ಒಪ್ಪಿ, ನಿರ್ಮೂಲವೆಂದು ಅಪ್ರಮಾಣವೆಂದು ಭಾವಿಸಬಹುದು. ಆದರೆ ಕಣಾದ ಮೊದಲಾದವರು ಶ್ರುತಿಗೆ ಅಪೌರುಷೇಯತ್ವವನ್ನು ಒಪ್ಪದಿದ್ದರೂ ಪ್ರಾಮಾಣ್ಯವನ್ನು ಒಪ್ಪಿದ್ದಾರೆ. ಸಮಗ್ರ ವೇದವು ಈಶ್ವರನಿಂದ ಪ್ರಣೀತವಾದ ಕಾರಣ

दर्शिनामाप्तानां वचनमनुसृत्य नेतव्याः । यथोक्तम् । 'इतिहासपुराणाभ्यां वेदं समुपबृंहयेत्' इति। इतिहासपुराणग्रहणमुपलक्षणम् । तथाच कथं पाशुपतादिस्मृत्युक्तार्थनिवारणाय समर्थाः स्युः । तदिदमुक्तं पिपीलिकालिपिनिभा संवादेन विना कमप्यर्थं प्रतिपादयितुमसमर्था श्रुतिर्यद्वचन संवादापेक्षिणी तैरेवाप्तैः प्रत्यक्षतो दृष्ट्वा प्रोक्तमर्थं कथं वारयेत् । (स्वतन्त्र)स्वातन्त्र्यदशायाम प्रतिपादकत्वात् । पारतन्त्र्ये तु विरोधाभावादेव । किन्तु तदनुसारेणैव नेतव्येति ।

ಇನ್ನೊಂದು ರೀತಿಯಿಂದ ಹೇಳುವುದಾದರೆ, ಶ್ರುತಿಗಳು ಸ್ಪಷ್ಟವಾಗಿ ಅರ್ಥವನ್ನು ನಿರೂಪಿಸುವವುಗಳಲ್ಲ. ಏಕೆಂದರೆ, ರಚಿಸಿದವನ ವ್ಯಾಖ್ಯಾನದ ಸಂಪ್ರದಾಯ ಇಲ್ಲ. ಆದುದರಿಂದ ಸ್ವಾಭಾವಿಕವಾದ ಅಥವಾ ಯೋಗೈಶ್ವರ್ಯ ಸಾಮರ್ಥ್ಯದಿಂದ ಪಡೆದ ಪ್ರತ್ಯಕ್ಷದಿಂದ ಎಲ್ಲವನ್ನೂ ತಿಳಿಯುವ ಸಾಮರ್ಥ್ಯವುಳ್ಳ ಆಪ್ತರ ಮಾತುಗಳಿಗೆ ಅನುಸಾರಿಯಾಗಿ ಅವುಗಳನ್ನು ಅರ್ಥೈಸಬೇಕು, ಹೊರತು ಸ್ವತಂತ್ರವಾಗಿ ಯಾವ ಅರ್ಥವನ್ನೂ ಪ್ರತಿಪಾದನೆ ಮಾಡಲು ಅಸಮರ್ಥವಾಗಿವೆ. ಇದನ್ನು 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂದು ವ್ಯಾಸರೇ ತಿಳಿಸಿದ್ದಾರೆ. ಇಲ್ಲಿ ಇತಿಹಾಸ ಪುರಾಣ ಎಂಬುದಾಗಿ ಗ್ರಹಣಮಾಡಿದ್ದು ಉಪಲಕ್ಷಣವಾಗಿ ಅಂದರೆ ಆಪ್ತರ ಮಾತುಗಳನ್ನೆಲ್ಲಾ ಇತಿಹಾಸಪುರಾಣಶಬ್ದಗಳಿಂದ ಇಟ್ಟುಕೊಂಡು ಅವುಗಳಿಗೆ ಅನುಸಾರವಾಗಿ ವೇದವನ್ನು ಅರ್ಥೈಸಬೇಕು ಎಂಬುದಾಗಿ ತಿಳಿಯಬೇಕು. ಹೀಗಾಗಿ ಪಾಶುಪತಾದಿ ಸ್ಮೃತಿಗಳಲ್ಲಿ ಸೂಚಿಸಿದ ಅರ್ಥವನ್ನು ನಿರಾಕರಿಸಲು ಹೇಗೆ ತಾನೇ ವೇದಗಳು ಸಮರ್ಥವಾದಾವು ? ಇದನ್ನೇ ಪಿಪೀಲಿಕಾಲಿಪಿನಿಭಾ= ಇರುವೆ ಸಾಲಿನಲ್ಲಿ ಕಲ್ಪಿತವಾದ ಅಕ್ಷರಗಳಂತೆ ಸಂವಾದವಿಲ್ಲದೆ ಯಾವುದೇ ಅರ್ಥವನ್ನು ಪ್ರತಿಪಾದಿಸಲು ಅಸಮರ್ಥವಾದ ವೇದವು ಯಾರ ವಚನಗಳ ಸಂವಾದವನ್ನು ಅಪೇಕ್ಷಿಸವೆಯೋ ಅಂತಹ ಆಪ್ತರಾದವರಿಂದ ಪ್ರತ್ಯಕ್ಷವಾಗಿ ಕಂಡು ಸ್ಪಷ್ಟವಾಗಿ ಹೇಳಲಾಗಿರುವ ವಚನಗಳ ಅರ್ಥವನ್ನು ಹೇಗೆ ತಾನೆ ವಿರೋಧಿಸೀತು? ಸ್ವತಂತ್ರವಾಗಿರುವಾಗ ಯಾವುದನ್ನೂ ಅದು ಸಾಧಿಸಲಾರದು, ಪರತಂತ್ರವಾಗಿರುವಾಗ ಪಾಶುಪತಾದಿಗಳಿಗೆ ಅನುಗುಣವಾದ ಅರ್ಥವುಳ್ಳದ್ದಾಗಿ ವಿರೋಧವೇ ಇಲ್ಲ. ಅಲ್ಲದೆ ಸ್ಮೃತಿಗಳಿಗೆ ಅನುಸಾರಿಯಾಗಿಯೇ ಶ್ರುತಿಗಳ ಅರ್ಥವನ್ನು ಕೊಂಡೊಯ್ಯಬೇಕು.

ಆಪ್ತಮೂಲಕವಾಗಿದೆ. ಸ್ಮೃತಿಗಳು ಆಪ್ತಮೂಲಕವಾದ್ದರಿಂದ ಹೇಗೆ ಪ್ರಮಾಣವೋ, ಅದರಂತೆ ಎಲ್ಲಾ ಶ್ರುತಿಗಳೂ ಕೂಡ ಪ್ರಮಾಣವೆಂಬುದು ಇವರ ವಾದ. ಈ ಪಕ್ಷದಲ್ಲಿ ಶ್ರುತಿ-ಸ್ಮೃತಿಗಳೆರಡೂ ಸಮಬಲವೇ ಆಗುತ್ತವೆ. ಅದಕ್ಕಾಗಿ ಗ್ರಂಥದಲ್ಲಿ ವಿಷ್ಣು ಹಾಗೂ ರುದ್ರ ಇವರಿಬ್ಬರಲ್ಲಿ ಯಾರಾದರೂ ಕೂಡ ಜಗತ್ ಕಾರಣರಾಗಬಹುದೆಂಬ ವಿಕಲ್ಪವನ್ನು ಆಕ್ಷೇಪ ಮಾಡಿ ಪರಿಹರಿಸಿದ್ದಾರೆ.

ಶ್ರುತಿಯಲ್ಲಿ 'ಏಕೋ ನಾರಾಯಣ ಆಸೀತ್ ನ ಬ್ರಹ್ಮ ನಚ ಶಂಕರಃ' ನಾರಾಯಣನೊಬ್ಬನೇ ಜಗತ್ ಕಾರಣನು. ಬ್ರಹ್ಮ, ಶಂಕರ ಯಾರೂ ಜಗತ್ಕಾರಣಾಲ್ಲವೆಂದು ನಿಷೇಧಿಸಲಾಗಿದೆ. ಹಾಗಾದರೆ 'ನ ಬ್ರಹ್ಮ ನಚ ಶಂಕರಃ' ಎಂಬುದಕ್ಕೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾಗುತ್ತದೆ. ಮತ್ತು 'ಅಸೃಜತ' ಎಂಬುದಾಗಿ ಶ್ರುತಿಯು ಭೂತಕಾಲದಲ್ಲಿ ಜಗತ್ತಿನ ಸೃಷ್ಟಿಯನ್ನು ಮಹಾವಿಷ್ಣು ಮಾಡಿದನೆಂದು ತಿಳಿಯುತ್ತಿದೆ. ಒಂದುವೇಳೆ ಸರ್ವಕಾಲದಲ್ಲಿಯೂ ಮಹಾವಿಷ್ಣು ಜಗತ್ತನ್ನು ಸೃಷ್ಟಿ ಮಾಡುತ್ತಾನಾದರೆ ಭೂತಾರ್ಥದಲ್ಲಿರುವ 'ಲಙ್' ಪ್ರಯೋಗವು ಅಯುಕ್ತವಾಗುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಮಹಾವಿಷ್ಣುವಿನಲ್ಲಿ ಪ್ರಯೋಗಿಸುವ ಲಕಾರಗಳು ಕಾಲದಲ್ಲಿ ತಾತ್ಪರ್ಯವನ್ನು ಹೊಂದಿರುವುದಿಲ್ಲ. ಆದ್ದರಿಂದ 'ಅಸೃಜತ' ಎಂಬ ಲಙ್ ಲಕಾರವು ಭೂತಾರ್ಥದಲ್ಲಿ ತಾತ್ಪರ್ಯವನ್ನು ಹೊಂದಿರುವುದಿಲ್ಲ. ಆದ್ದರಿಂದ ಕಣಾದ ಮೊದಲಾದ ದಾರ್ಶನಿಕರ ಪ್ರಕಾರ ಸ್ಮೃತಿಯಂತೆ ಶ್ರುತಿಯಲ್ಲೂ ಪ್ರಾಮಾಣ್ಯವಿರುತ್ತದೆ. ಈ ದೃಷ್ಟಿಯಿಂದ ಗ್ರಂಥಕಾರರು ವಿಕಲ್ಪಪಕ್ಷವನ್ನು ಆಕ್ಷೇಪ ಮಾಡಿ ಪರಿಹರಿಸಿದ್ದಾರೆ. ಹಾಗಾದರೆ ಇವರ ಮತದ ಪ್ರಕಾರ ಸ್ಮೃತಿಗೆ ಅನುಸಾರಿಯಾಗಿ ಹೇಗೆ ನಯನ ಮಾಡಬೇಕು ಎಂಬುದರ ಬಗ್ಗೆ ಮುಂದೆ ಗ್ರಂಥಕಾರರೇ ಹೇಳುತ್ತಾರೆ.

**प्रकाशः – ''नच वाच्यम्''** इत्यादिटीकार्थमाह **– नच विरोधेति ।।** आद्यस्य तृतीये पादे ''विरोधे त्वनपेक्षं स्यादसति ह्यनुमानम्'' इति द्वितीयेऽधिकरणे ''औदुम्बरीं स्पृष्ट्वोद्गायेत्'' इति श्रुतिविरुद्धा ''औदुम्बरी सर्वा वेष्टयितव्यः'' इति स्मृतिर्मानमुत नेति विशये मूलश्रुत्यनुमानसम्भवेन व्रीहियववत् विकल्पेनोभयं मानमिति प्राप्ते शीघ्रप्रवृत्तप्रत्यक्षश्रुत्या स्मृतिमूलश्रुत्यनुमानप्रतिबन्धादप्रमाणं विरुद्धस्मृतिजातमित्युक्तम् । तन्न्यायेनेत्यर्थः ।

'ನಚ ವಾಚ್ಯಮ್' ಇತ್ಯಾದಿ ಟೀಕೆಯ ಅರ್ಥವನ್ನು 'ನಚ ವಿರೋಧಾಧಿಕರಣನ್ಯಾಯೇನ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

'ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್'[1] (೧-೩-೨)

(१) भाट्टसंग्रहः –

अथ भाष्यरीत्या द्वितीयं श्रुतिप्राबल्याधिकरणम् (सूत्रे -३)

विरोधे त्वनपेक्षं स्यात्, असति ह्यनुमान् ।।३।।

अत्र पूर्वसिद्धान्तन्यायेन शङ्कानादाक्षेपिकी सङ्गतिः । ज्योतिष्टोमे सदोनामकमण्टपस्य

'ಔಂದಬರೀಂ ಸ್ಪೃಷ್ಟ್ವೋದ್ಗಾಯೇತ್' ಉದುಂಬರ ಮರದ ಯಜ್ಞವೇದಿಕೆಯಲ್ಲಿರುವ ಯಜ್ಞವೇದಿಕೆಯಿರುವ ಯಾಗದ ಕಂಬವು ಉದುಂಬರ ವೃಕ್ಷದಿಂದ ನಿರ್ಮಾಣವಾಗಿರಬೇಕು. ಅದನ್ನು ಸ್ಪರ್ಶಿಸಿ, ಗಾನ ಮಾಡಬೇಕು ಎಂಬುದಾಗಿ ಶ್ರುತಿ ಹೇಳುತ್ತಿದೆ. ಆದರೆ ಇದಕ್ಕೆ ವಿರುದ್ಧವಾಗಿ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಎಂಬ ಸ್ಮೃತಿಯು ಔದುಂಬರಿಯನ್ನು ಸಂಪೂರ್ಣವಾಗಿ ಬಟ್ಟೆಯಿಂದ ಸುತ್ತಿರಬೇಕು ಎಂದು ಹೇಳುತ್ತಿದೆ. ಬಟ್ಟೆಯಿಂದ ಸಂಪೂರ್ಣವಾಗಿ ಸುತ್ತಿದ ಮೇಲೆ ಅದನ್ನು ಮುಟ್ಟಲು ಸಾಧ್ಯವಿಲ್ಲ. ಆದ್ದರಿಂದ ಶ್ರುತಿಗೆ ವಿರುದ್ಧವಾಗಿ ಸ್ಮೃತಿಯು ಹೇಳುತ್ತಿದೆ. ಆದ್ದರಿಂದ ಇದು ಪ್ರಮಾಣವೋ, ಅಲ್ಲವೋ? ಎಂಬುದು ಸಂಶಯ.

ಪೂರ್ವಪಕ್ಷ - ಯಾವುದೇ ಸ್ಮೃತಿ ವಾಕ್ಯಗಳಿಗೆ ಮೂಲಶ್ರುತಿಯು ಇರಲೇಬೇಕು. 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಎಂಬ ಸ್ಮೃತಿವಾಕ್ಯಕ್ಕೂ ಕೂಡ ಮೂಲಶ್ರುತಿ ಕಾಣದಿದ್ದರೂ ಅನುಮಾನದಿಂದ ಶ್ರುತಿಯನ್ನು ತಿಳಿಯಬೇಕು. ಆದ್ದರಿಂದ ಶ್ರುತಿಯಲ್ಲಿ ಹೇಳಿದಂತೆ ಔದುಂಬರಿಯನ್ನು ಸ್ಪರ್ಶಮಾಡಿ, ದಾನ ಮಾಡಬಹುದು. ಅಥವಾ ಸ್ಮೃತಿಯಲ್ಲಿ ಹೇಳಿದಂತೆ ಸರ್ವವೇಷ್ಟನವನ್ನೂ ಕೂಡ ಮಾಡಬಹುದು. ಹೀಗೆ ವಿಕಲ್ಪ ಪಕ್ಷವನ್ನು ಆಶ್ರಯಿಸಿದಾಗ ಶ್ರುತಿ-ಸ್ಮೃತಿಗಳೆರಡೂ ಪ್ರಮಾಣವಾಗುತ್ತವೆ.

ಸಿದ್ಧಾಂತ - ಶ್ರುತಿಯು ಪ್ರತ್ಯಕ್ಷವಾಗಿ ಔದುಂಬರಿಯನ್ನು ಸ್ಪರ್ಶ ಮಾಡಬೇಕೆಂದು ಹೇಳುತ್ತಿದೆ. ಆದರೆ ಸ್ಮೃತಿವಾಕ್ಯವನ್ನು ನೋಡಿ, ಅನುಮಾನ ಮಾಡಲ್ಪಟ್ಟ ಶ್ರುತಿಯು ಶೀಘ್ರವಾಗಿ ಉಪಶ್ರುತವಾಗುವುದಿಲ್ಲ. ಅನುಮಾನವೆಂಬ ಪ್ರತಿಬಂಧಕವಿರುವುದರಿಂದ ಊಹಿಸಲ್ಪಟ್ಟ ಶ್ರುತಿಯು ಅಪ್ರಮಾಣವಾಗುತ್ತದೆ. ಪ್ರತ್ಯಕ್ಷಶ್ರುತಿಗೆ ವಿರುದ್ಧವಾದ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಎಂಬ ಸ್ಮೃತಿವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳಬೇಕು.

ಈ ವಿರೋಧಾಧಿಕರಣ ನ್ಯಾಯದಿಂದ ಪ್ರಕೃತ ಶ್ರುತಿಗೆ ವಿರುದ್ಧವಾದ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಆಕ್ಷೇಪಿಸಲಾಗಿದೆ.

---

मध्ये औदुम्बरी शाखा निखन्यते । तस्याश्च वाससा वेष्टनं स्मर्यते 'औदुम्बरी सर्वा वेष्टयितव्या' इति सा स्मृतिः प्रमाणं उत नेति **सन्देहे** अष्टकादिस्मृतिवत् समूलत्वानुमानेन प्रमाणमेवेति **प्राप्ते सिद्धान्तः** 'औदुम्बरीं स्पृष्ट्वोद्गायेत्' इति प्रत्यक्षश्रुत्या स्पर्शो विधीयते । न च सर्ववेष्टने स्पर्शः सम्भवति । अतो मूलवेदानुमानस्य बाधितत्वाद्विप्रलम्भकवाक्यवन्निर्मूलं विततावसोलिप्सारूपहेतुमूलकं चैवंस्मृतिजातमप्रमाणमिति । **फलन्तु** सर्ववेष्टनानुष्ठाने । **सूत्रार्थस्तु** श्रुतिःस्मृत्योः **विरोधे** स्मृतिजातं **अनपेक्षं** मूलप्रमाणानपेक्षं **स्यात्** । **असति हि** विरोधे **अनुमानं** मूलानुमानमिति ।।३।।

**।। इति भाष्यरीत्या द्वितीयं श्रुतिप्राबल्याधिकरणम् ।।**

**प्रकाशः – स्मृतिप्राबल्येन तद्वैषम्योक्तिपरटीकां व्यनक्ति – वाक्येति ।। ''क्वचिच्छ्रुतिविरोधेन स्मृतेरर्थान्तरकल्पनादि'' इति टीकां व्यनक्ति – विरोधाधिकरणे त्विति ।। आदिपदार्थोक्तिः प्राभाकरैरिति ।।**

ಶ್ರುತಿಗಿಂತಲೂ ಸ್ಮೃತಿಯೇ ಪ್ರಬಲವೆಂದು ಸಮರ್ಥಿಸುವ ವಿರೋಧಾಧಿಕರಣನ್ಯಾಯವು ವಿಷಮವಾಗಿದೆ ಎಂದು ಸಮರ್ಥಿಸಿರುವ ಟೀಕೆಯನ್ನು ವ್ಯಾಖ್ಯಾನ ಮಾಡಲು 'ವಾಕ್ಯಪ್ರಾಮಾಣ್ಯಮ್' ಎಂಬ ಗ್ರಂಥವು ಹೊರಟಿದೆ.

'ಕ್ವಚಿತ್ ಶ್ರುತಿವಿರೋಧೇನ ಸ್ಮೃತೇರರ್ಥಾಂತರಕಲ್ಪನಾತ್' ಎಂಬ ಟೀಕಾವಾಕ್ಯವನ್ನು ವ್ಯಾಖ್ಯಾನಿಸಲು 'ವಿರೋಧಾಧಿಕರಣೇ ತು' ಎಂಬ ಗ್ರಂಥವು ಹೊರಟಿದೆ. ಟೀಕೆಯಲ್ಲಿರುವ ಆದಿಪದದ ಅರ್ಥವನ್ನು ಗ್ರಂಥದಲ್ಲಿ 'ಪ್ರಭಾಕರೇ ಇತಿ' ಎಂದು ಹೇಳಿರುತ್ತಾರೆ.

'ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್' ಇತ್ಯಾದಿ ಶ್ರುತಿಗಳು ವಿರುದ್ಧವಾಗಿವೆ ಎಂಬ ಕಾರಣದಿಂದ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಇತ್ಯಾದಿ ಸ್ಮೃತಿಗಳು ಅಪ್ರಮಾಣವಾಗಿವೆ ಎಂದು ಸಿದ್ಧವಾಗಿದೆ. ಅದರಂತೆ ಶ್ರುತಿಗಳಿಗೆ ವಿರುದ್ಧವಾಗಿ ಶೈವಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಏಕೆ ಹೇಳಬಾರದು ?

ಇದು ತಪ್ಪು. ಏಕೆಂದರೆ ಪೂರ್ವಮೀಮಾಂಸೆಯ ದೃಷ್ಟಾಂತವು ವ್ಯತ್ಯಾಸವಾಗಿದೆ. ಅದು ಹೀಗೆ - 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಇತ್ಯಾದಿ ಸ್ಮೃತಿಗಳು ಶ್ರುತಿಯನ್ನು ಉಪಜೀವಿಸಿ ಹೊರಟವೆ. ಅಂತಹ ಶ್ರುತಿಗಳು ಮೂಲಶ್ರುತಿಗೆ ಅನುಗುಣವಾಗಿದೆ. ಆದ್ದರಿಂದ ಸರ್ವವೇಷ್ಟನಸ್ಮೃತಿಯು ಪ್ರಮಾಣವಾಗುತ್ತದೆಂಬುದು ಎಲ್ಲರಿಗೂ ಅಭಿಮತವಾದ ವಿಚಾರ. ಆದರೆ ಶ್ರುತಿಗೆ ವಿರುದ್ಧವಾದ ಸ್ಮೃತಿಗಳು ಮೂಲಶ್ರುತಿಗೆ ಸರ್ವಥಾ ಅನುಮಾಪಕಗಳಾಗುವುದಿಲ್ಲ. ಅಂತಹ ಸ್ಮೃತಿಗಳು ಶ್ರುತಿವಿರೋಧದಿಂದ ಅಪ್ರಮಾಣವೇ ಆಗುತ್ತದೆ. ಇದನ್ನೇ ಜೈಮಿನ್ಯಾಚಾರ್ಯರು 'ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್' ಎಂದು ಹೇಳಿರುವರು. ಪಾಶುಪತಾದಿಸ್ಮೃತಿಗಳಿಗೆ ಶಿವಾದಿಗಳು ಪ್ರತ್ಯಕ್ಷವೇ ಮೂಲವಾಗಿದೆ ಹೊರತು, ಶ್ರುತಿಗಳಲ್ಲ.

ಗಮನಿಸಬೇಕಾದ ವಿಚಾರ - 'ಔದುಂಬರೀ' ಎಂದರೆ ಯಜಮಾನನಷ್ಟೇ ಗಾತ್ರವುಳ್ಳ, ಅತ್ತಿಮರದ ಒಂದು ಕಂಬ. ಇದನ್ನು ಯಜ್ಞವೇದಿಕೆಯ ನೈಋತ್ಯದಿಕ್ಕಿನಲ್ಲಿ ಸ್ಥಾಪಿಸುತ್ತಾರೆ. ಈ ಕಂಬವನ್ನು ಬಟ್ಟೆಯಿಂದ ಪೂರ್ತಿಯಾಗಿ ಮುಚ್ಚಬೇಕೆಂದು ಸ್ಮೃತಿ ಹೇಳುತ್ತಿದೆ. ಆದರೆ ಹಾಗೇ ಮುಚ್ಚಿದರೆ ನೇರವಾಗಿ ಕಂಬವನ್ನೇ ಮುಟ್ಟಿ ಗಾನ ಮಾಡಲು ಸಾಧ್ಯವಾಗುವುದಿಲ್ಲ. ಶ್ರುತಿಯು 'ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್' ಆ ಕಂಬವನ್ನು ಮುಟ್ಟಿಯೇ ಗಾನ ಮಾಡಬೇಕೆಂದು ವಿಧಿಸುತ್ತಿದೆ. ಒಂದುವೇಳೆ ಮುಟ್ಟುವಷ್ಟು ಸ್ಥಳವನ್ನು ಬಿಟ್ಟು ಪೂರ್ತಿಯಾಗಿ ಬಟ್ಟೆಯಿಂದ ಮುಚ್ಚಿದರೆ ಸಂಪೂರ್ಣವಾಗಿ ಮುಚ್ಚಬೇಕು ಎಂಬ ಸ್ಮೃತಿವಾಕ್ಯಕ್ಕೆ ಅಪ್ರಾಮಾಣ್ಯ ಬರುತ್ತದೆ. ಹೀಗೆ ಶ್ರುತಿ-ಸ್ಮೃತಿಗಳಲ್ಲಿ ಪರಸ್ಪರ ವಿರೋಧ ಕಾಣಿಸುತ್ತಿದೆ. ಈ ವಿರೋಧವನ್ನು ಪರಿಹರಿಸಲು ಪ್ರಾಭಾಕರರು ಸ್ಮೃತಿಯನ್ನು ಅಪ್ರಮಾಣವೆಂದು ನಿರ್ಧರಿಸಿ ಬಿಡುತ್ತಾರೆ. ಆದರೆ ಮೀಮಾಂಸಕರಲ್ಲೇ ಮತ್ತೊಂದು ಪಂಗಡವೆನಿಸಿದ ಭಾಟ್ಟಮತದವರು ಸ್ಮೃತಿಗೆ ಅರ್ಥಸಂಕೋಚ ಮಾಡಬೇಕೆನ್ನುತ್ತಾರೆ - ಮುಟ್ಟಲು ಆವಶ್ಯಕವಾದ ಮೂರು-ನಾಕು ಅಂಗುಲಗಳಷ್ಟು ಜಾಗವನ್ನು ಬಿಟ್ಟು ಉಳಿದಂತೆ ಪೂರ್ತಿಯಾಗಿ ಮುಚ್ಚಬೇಕು. ಹೀಗೆ 'ಸರ್ವಾ ವೇಷ್ಟಯಿತವ್ಯಾ' ಎಂಬ ಸ್ಮೃತಿಗೆ ಅರ್ಥೈಸಿ ಪ್ರಾಮಾಣ್ಯವನ್ನು ಒಪ್ಪುತ್ತಾರೆ.

ಸ್ಮೃತ್ಯಧಿಕರಣ (೨-೧-೧)

ಅಂತೂ ಇಬ್ಬರ ಮತದಲ್ಲಿಯೂ ಶ್ರುತಿಗೆ ವಿರೋಧ ಬಂದರೆ ಸ್ಮೃತಿಗೆ ಅರ್ಥಾಂತರವನ್ನು ಮಾಡಬೇಕೆಂದು ಅಥವಾ ಅಪ್ರಾಮಾಣ್ಯವನ್ನು ಹೇಳಬೇಕೆಂದು ನಿರ್ಧಾರವಾಗುತ್ತದೆ.




ಸ್ಮೃತ್ಯಧಿಕರಣದ ಪೂರ್ವಪಕ್ಷ ಹೀಗಿದೆ - ಹಿಂದಿನ ಅಧ್ಯಾಯದಲ್ಲಿ ಎಲ್ಲಾ ಶ್ರುತಿಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೂಲಕ ಜಗತ್ಕಾರಣತ್ವವನ್ನು ಸಮರ್ಥಿಸಲಾಯಿತು. ಏಕೆಂದರೆ ಪಾಶುಪತಾದಿಸ್ಮೃತಿಗಳೆಲ್ಲವೂ ರುದ್ರನಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸುತ್ತಿವೆ.

ಶ್ರುತಿಗಳು ವಿಷ್ಣುವನ್ನು ಜಗತ್ಕಾರಣವೆನ್ನುತ್ತಿದೆ, ಸ್ಮೃತಿಗಳು ರುದ್ರನನ್ನು ಜಗತ್ಕಾರಣವೆನ್ನುತ್ತಿದೆ. ಈ ಎರಡು ಪಕ್ಷಗಳಲ್ಲಿ ಯಾವುದೇ ಒಂದು ಪಕ್ಷವನ್ನು ಒಪ್ಪಿದರೂ ಶ್ರುತಿಗಾಗಲೀ, ಸ್ಮೃತಿಗಾಗಲೀ ಅಪ್ರಾಮಾಣ್ಯವನ್ನು ಹೇಳುವಂತಹ ಪರಿಸ್ಥಿತಿ ಬರುತ್ತದೆ. ಅದಕ್ಕಾಗಿ ರುದ್ರ ಹಾಗೂ ವಿಷ್ಣು ಇವರಿಬ್ಬರಲ್ಲಿ ಯಾರಾದರೂ ಕೂಡ ಜಗತ್ಕಾರಣರಾಗಬಹುದೆಂಬ ವಿಕಲ್ಪವನ್ನು ಆಶ್ರಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪುರುಷಾಧೀನವಾದ ಕಾರ್ಯಗಳಲ್ಲಿ ವಿಕಲ್ಪವನ್ನು ಆಶ್ರಯಿಸಬಹುದೇ ಹೊರತು, ಸಿದ್ಧವಾದ ವಿಷಯದಲ್ಲಿ ವಿಕಲ್ಪವು ಎಂದೂ ಕೂಡುವುದಿಲ್ಲ. ಜಗತ್ತಿಗೆ ಕಾರಣನಾದ ಒಬ್ಬ ವ್ಯಕ್ತಿಯು ಈಗಾಗಲೇ ಸಿದ್ಧನಾಗಿದ್ದಾನೆ. ಅವನ ಬಗ್ಗೆ ತಿಳಿಯಬೇಕಾದದ್ದಷ್ಟೇ ನಮ್ಮ ಕರ್ತವ್ಯ. ಅದನ್ನು ಬಿಟ್ಟು ಸಮಾಧಾನಕ್ಕಾಗಿ ವಿಕಲ್ಪಪಕ್ಷವನ್ನು ಆಶ್ರಯಿಸಬಾರದು.

ವಿಷ್ಣು ಹಾಗೂ ರುದ್ರ ಇವರಿಬ್ಬರೂ ಕೂಡ ಜಗತ್ಕಾರಣರೆಂದು ಒಪ್ಪಬಹುದಲ್ಲವೇ? ಕೆಲವು ದೇಶಗಳಲ್ಲಿ ಶ್ರುತಿ-ಸ್ಮೃತಿಗಳಲ್ಲಿ ನಿರಪೇಕ್ಷಿತವಾಗಿ ಒಬ್ಬೊಬ್ಬರೇ ಜಗತ್ಕಾರಣರೆಂದು ಹೇಳಿರಬಹುದು. ಆ ವಿರೋಧವನ್ನು ದೇಶಭೇದ, ಕಾಲಭೇದ ಮತ್ತು ಕಾರ್ಯಭೇದಗಳಿಂದ ಪರಿಹರಿಸಲು ಬರುತ್ತದೆ. ಈ ಬಗೆಯ ವಿಚಾರವೂ ಕೂಡ ಸರಿಯಿಲ್ಲ. ಏಕೆಂದರೆ ಶ್ರುತಿಯಲ್ಲಿ ವಿಷ್ಣುವೇ ಸರ್ವದೇಶ, ಸರ್ವಕಾಲಗಳಲ್ಲಿ ಸಕಲವಿಧಕಾರ್ಯಗಳಿಗೆ ಕಾರಣನಾಗಿದ್ದಾನೆಂದು ಹೇಳಲಾಗಿದೆ. ಸ್ಮೃತಿಯಲ್ಲಿ ರುದ್ರದೇವರೇ ಸಕಲದೇಶ, ಸಕಲಕಾಲಗಳಲ್ಲಿ ಸಕಲವಿಧಕಾರ್ಯಗಳಿಗೆ ಕಾರಣರಾಗಿದ್ದಾರೆಂದು ಹೇಳಲಾಗಿದೆ. ಅಷ್ಟೇ ಅಲ್ಲದೇ ಶ್ರುತಿಯಲ್ಲಿ ವಿಷ್ಣುವನ್ನು ಹೊರತಾಗಿ, ಬೇರೆ ಯಾರೂ ಕೂಡ ಜಗತ್ಕಾರಣರಾಗಲು ಸ್ವಾಥವಿಲ್ಲವೆಂಬ ನಿಷೇಧ ವಚನವಿದೆ. ಸ್ಮೃತಿವಾಕ್ಯದಲ್ಲೂ ಕೂಡ ರುದ್ರನನ್ನು ಹೊರತಾಗಿ, ಬೇರೆ ಯಾರೂ ಕೂಡ ಜಗತ್ಕಾರಣರಾಗಲು ಸ್ವಾಥವಿಲ್ಲವೆಂಬ ವಚನವಿದೆ. ಆದ್ದರಿಂದ ವಿಕಲ್ಪವನ್ನು ಆಶ್ರಯಿಸಲು ಹೇಗೆ ಸಾಧ್ಯವಿಲ್ಲವೋ? ಇಬ್ಬರೂ ಒಟ್ಟಿಗೆ ಸೇರಿ ಜಗತ್ಕಾರಣರಾಗುತ್ತಾರೆಂಬ ಸಮುಚ್ಚಯಪಕ್ಷವೂ ಕೂಡ ಸಾಧುವಲ್ಲ. ಪೂರ್ವಮೀಮಾಂಸೆಯ ವಿರೋಧಾಧಿಕರಣ ನ್ಯಾಯದಿಂದ ಸ್ಮೃತಿಗೆ ಅಪ್ರಾಮಾಣ್ಯವನ್ನು ಹೇಳಲಾಗದು. ಏಕೆಂದರೆ ಶ್ರುತಿಗಳು ಅಪೌರುಷೇಯವಾದ್ದರಿಂದ ನಿರ್ಮೂಲವಾಗಿವೆ. ಸ್ಮೃತಿಗಳು ಪೌರುಷೇಯವಾಗಿ ಆಪ್ತೋಕ್ತವಾದ್ದರಿಂದ ಸಮೂಲವಾಗಿವೆ. ಸಮೂಲವಾದ ಸ್ಮೃತಿಗಳಿಗೆ ಅನುಸಾರಿಯಾಗಿಯೇ ನಿರ್ಮೂಲವಾದ ವೇದಗಳನ್ನು ನಯನ ಮಾಡಬೇಕು. ಹೀಗೆ ಪ್ರಬಲವಾದ ಪಾಶುಪತಾದಿ ಸ್ಮೃತಿಗಳು ರುದ್ರನಿಗೆ ಜಗತ್ಕಾರಣತ್ವವನ್ನು ಸಮರ್ಥಿಸುತ್ತಿವೆ.

ಪರಿಪೂರ್ಣಚಂದ್ರಿಕಾ

**तात्पर्यचन्द्रिका**

**तत्र यद्यप्युपक्रमादिभिरेव तात्पर्यनिर्णय इति समन्वयसूत्र एवोक्तम् । शाखानामनन्तत्वेऽप्यविरोध इति तु ''गतिसामान्यात्'' इत्यत्रोक्तम् । पदार्थनिर्णयस्तु व्याकरणनिरुक्तादिभिरेव सुलभः । साकाङ्क्षवाक्यपूरणं चाध्याहारादिनेति लोकत एव सिद्धम् ।**

ಪ್ರಶ್ನೆ - ವಾಸ್ತವಿಕವಾಗಿ ಉಪಕ್ರಮಾದಿಗಳಿಂದಲೇ ಶ್ರುತಿಗಳ ತಾತ್ಪರ್ಯವು ನಿರ್ಣಯವಾಗುತ್ತದೆಂಬುದು ಸಮನ್ವಯಸೂತ್ರದಲ್ಲಿಯೇ ಹೇಳಿದ್ದಾಗಿದೆ. ಶಾಖೆಗಳು ಅನಂತವಾಗಿದ್ದರೂ ಅವುಗಳಲ್ಲಿ ಪರಸ್ಪರ ವಿರೋಧವಿಲ್ಲ ಎಂಬ ವಿಚಾರವು 'ಗತಿಸಾಮಾನ್ಯಾತ್' ಎಂಬ ಸೂತ್ರದಿಂದ ಸಿದ್ಧವಾಗಿದೆ. ಶ್ರುತಿಗಳಲ್ಲಿರುವ ಪದಗಳ ಅರ್ಥನಿರ್ಣಯವು ವ್ಯಾಕರಣ ನಿರುಕ್ತಾದಿಗಳಿಂದಲೇ ಸುಲಭವಾಗಿ ತಿಳಿಯುತ್ತದೆ. ಆಕಾಂಕ್ಷೆಯುಳ್ಳ ವಾಕ್ಯದ ಪೂರ್ತಿಯು ಅಧ್ಯಾಹಾರದಿಂದ ಸಿದ್ಧವಾಗುತ್ತದೆ ಎಂಬ ವಿಚಾರವನ್ನು ಲೋಕದಲ್ಲಿ ಎಲ್ಲರೂ ತಿಳಿದಿರುತ್ತಾರೆ. ಹೀಗಿರುವಾಗ ಶ್ರುತಿಗಳು ಸ್ಪಷ್ಟವಾಗಿ ಏನನ್ನೂ ಹೇಳದ ಕಾರಣ ಸ್ಮೃತಿಗಿಂತ ದುರ್ಬಲವಾಗಿದೆ ಎಂದು ಹೇಗೆ ಹೇಳುತ್ತೀರಿ ?

**तथापि समूलस्मृतिविरोधे निर्मूलश्रुतिप्रामाण्यायोगात्स्मृत्यनुसारेण श्रुतिर्नेयेति श्रुतिप्रामाण्येन पूर्वः पक्षः ।**

ಉತ್ತರ - ಹೌದು, ಆದರೆ ಸಮೂಲವಾದ ಸ್ಮೃತಿಗಳ ವಿರೋಧವಿದ್ದರೆ, ನಿರ್ಮೂಲವಾದ ಶ್ರುತಿಗಳಿಗೆ ಪ್ರಾಮಾಣ್ಯವು ಯುಕ್ತವಾಗುವುದಿಲ್ಲ. ಹೊರತಾಗಿ ಸ್ಮೃತಿಗೆ ಅನುಸಾರಿಯಾಗಿಯೇ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು. ನಾವು ಶ್ರುತಿಪ್ರಾಮಾಣ್ಯವನ್ನೇ ಅಲ್ಲಗಳೆಯುತ್ತಿಲ್ಲ. ಶ್ರುತಿಯು ಪ್ರಮಾಣವೆಂದು ಒಪ್ಪಿ, ಶ್ರುತಿಗಿಂತಲೂ ಸ್ಮೃತಿಯು ಪ್ರಬಲವಾಗಿರುವ ಕಾರಣ ಸ್ಮೃತಿಗಳಿಗೆ ಅನುಸಾರಿಯಾದ ಅರ್ಥವನ್ನೇ ಶ್ರುತಿಗಳಿಗೆ ತಿಳಿಯಬೇಕು ಎಂಬುದು ಪೂರ್ವಪಕ್ಷದ ಅಭಿಪ್ರಾಯ.

**अत एव सूत्रे शङ्काभागे प्रसङ्गशब्दः । भाष्ये च ''अप्रामाण्यमेव स्यात्'' इति स्याच्छब्दः । ''श्रुतेरप्रामाण्याख्यदोषप्रसङ्गात्'' इति टीका च ।**

ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿಯೇ ಪೂರ್ವಪಕ್ಷ ಮಾಡುತ್ತಿರುವುದರಿಂದ ಸೂತ್ರದ ಆಕ್ಷೇಪಭಾಗದಲ್ಲಿ ಪ್ರಸಂಗಶಬ್ದವು ಇರುತ್ತದೆ. ಅಂದರೆ ಶ್ರುತಿಗೆ ಅಪ್ರಾಮಾಣ್ಯವೆಂಬ ದೋಷವು ಬರಬೇಕಾದೀತು ಎಂದು. ಭಾಷ್ಯದಲ್ಲಿಯೂ ಕೂಡ 'ಅಪ್ರಾಮಾಣ್ಯಮೇವ ಸ್ಯಾತ್' ಎಂಬುದಾಗಿ

'ಸ್ಯಾತ್' ಎಂಬ ಶಬ್ದವು ಇರುತ್ತದೆ. ಟೀಕೆಯಲ್ಲಿಯೂ ಕೂಡ 'ಶ್ರುತೇರಪ್ರಾಮಾಣ್ಯಾಖ್ಯದೋಷ-ಪ್ರಸಂಗಾತ್' ಎಂದು ಪ್ರಸಂಗಶಬ್ದವನ್ನು ಬಳಸಿದ್ದಾರೆ. ಒಂದು ವೇಳೆ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಸಾಧಿಸುವುದೇ ಪೂರ್ವಪಕ್ಷಿಯ ಅಭಿಪ್ರಾಯವಾಗಿದ್ದಲ್ಲಿ, ಪ್ರಸಂಗಶಬ್ದವನ್ನಾಗಲೀ, 'ಸ್ಯಾತ್' ಎಂಬ ಶಬ್ದವನ್ನಾಗಲೀ ಬಳಸುವ ಅವಶ್ಯಕತೆಯಿರುವುದಿಲ್ಲ.

**येषां तु कणादादीनां मते पौरुषेयत्वप्रामाण्ये त इह न पूर्वपक्षिणः । स्वतः सर्वज्ञेशकृता श्रुतिः कणादादिस्मृत्यनुसारेण नेयेत्यत्र बीजाभावात् । अत एवेह टीकायां सुधायां च कणादादिशब्दाप्रयोगः ।**

ಕಣಾದಾದಿಗಳ ಮತದಲ್ಲಿ ಶ್ರುತಿಗೆ ಪೌರುಷೇಯತ್ವವನ್ನು ಮತ್ತು ಪ್ರಾಮಾಣ್ಯವನ್ನು ಒಪ್ಪಲಾಗಿದೆ. ಅವರ ಪ್ರಕಾರ ಮೇಲಿನ ಸಮಾಧಾನವು ಯುಕ್ತವಾಗುವುದಿಲ್ಲ. ಆದ್ದರಿಂದ ಅವರನ್ನು ಇಲ್ಲಿ ಪೂರ್ವಪಕ್ಷಿಗಳನ್ನಾಗಿ ವಿವಕ್ಷಿಸಬಾರದು. ಏಕೆಂದರೆ ಅವರೇ ಹೇಳುವಂತೆ ಶ್ರುತಿಗಳೆಲ್ಲವೂ ಸರ್ವಜ್ಞನಾದ ಈಶ್ವರನಿಂದ ಪ್ರಣೀತವಾಗಿವೆ. ಕಣಾದಾದಿಸ್ಮೃತಿಗಳು ಕಣಾದಾದಿಗಳಿಂದ ಪ್ರಣೀತವಾಗಿವೆ. ಈ ಕಣಾದಾದಿಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ಅರ್ಥೈಸಬೇಕು ಎನ್ನಲು ಯಾವುದೇ ಕಾರಣಗಳಿರುವುದಿಲ್ಲ. ಆದ್ದರಿಂದಲೇ ಟೀಕೆಯಲ್ಲಿ ಮತ್ತು ಸುಧೆಯಲ್ಲಿ ಕಣಾದಾದಿಶಬ್ದಗಳನ್ನು ಪ್ರಯೋಗಿಸಿಯೇ ಇಲ್ಲ.

**यद्वा कणादादिस्मृतेः स्पष्टार्थत्वं सयुक्तिकत्वं च तत्र बीजमिति तेऽपि पूर्वपक्षिणः । अस्मिंश्च पक्षे सुधास्थादिशब्दः कणादादिपरः ।**

ಅಥವಾ ಕಣಾದಾದಿಗಳನ್ನೂ ಕೂಡ ಪೂರ್ವಪಕ್ಷಿಗಳನ್ನಾಗಿ ವಿವಕ್ಷಿಸೋಣ. ಶ್ರುತಿಗಳನ್ನು ಕಣಾದಾದಿ ಸ್ಮೃತಿಗಳು ಬಾಧಿಸುತ್ತವೆನ್ನಲು ಹೇಳಬಹುದು. ಏಕೆಂದರೆ ಶ್ರುತಿ-ಸ್ಮೃತಿಗಳೆರಡೂ ಸರ್ವಜ್ಞರಿಂದ ಪ್ರಣೀತವಾಗಿದ್ದರೂ ಕಣದಾದಿಸ್ಮೃತಿಗಳು ಸ್ಪಷ್ಟವಾದ ಅರ್ಥವನ್ನು ಬೋಧಿಸುತ್ತಿದೆ. ಮತ್ತು ಯುಕ್ತಿಬದ್ಧವಾಗಿದೆ. ಆದರೆ ಶ್ರುತಿಗಳು ಯಾವುದೇ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಿಲ್ಲ. ಮತ್ತು ವಿಚಾರಗಳನ್ನು ಯುಕ್ತಿಬದ್ಧವಾಗಿಯೂ ಸಮರ್ಥನೆ ಮಾಡುತ್ತಿಲ್ಲ. ಹೀಗೆ ಕಣಾದಾದಿಸ್ಮೃತಿಗಳಿಂದ ಶ್ರುತಿಗಳು ಬಾಧಿತವಾಗುತ್ತವೆಂದು ಹೇಳಬಹುದು. ಆದ್ದರಿಂದ ಕಣಾದಾದಿಗಳೂ ಕೂಡ ಪೂರ್ವಪಕ್ಷಿಗಳಾಗುತ್ತಾರೆ. ಈ ಪಕ್ಷದಲ್ಲಿ ಸುಧೆಯಲ್ಲಿ ಕಣಾದಶಬ್ದವನ್ನು ಪ್ರಯೋಗ ಮಾಡದಿದ್ದರೂ ಬೌದ್ಧಾದಿ ಎಂಬಲ್ಲಿರುವ ಆದಿಪದದಿಂದ ಕಣಾದಾದಿಗಳನ್ನು ವಿವಕ್ಷಿಸಬೇಕು.

**बौद्धादिमते तु आप्तप्रणीतबौद्धाद्यागमविरोधादाप्ताप्रणीतो वेदोऽप्रमाणमित्येव पूर्वः पक्षः । अत एव सुधायां ''पाशुपतसांख्यबौद्धार्हतादि'' इति बौद्धादिशब्दः ।**

ಬೌದ್ಧಾದಿಮತಗಳ ಪ್ರಕಾರ ಹೀಗೆ ತಿಳಿಯಬೇಕು - ಆಪ್ತಪ್ರಣೀತವಾದ ಬೌದ್ಧಾದ್ಯಾಗಮಗಳ ವಿರೋಧ ಬರುವುದರಿಂದ ಆಪ್ತಪ್ರಣೀತವಲ್ಲದ ವೇದವು ಅಪ್ರಮಾಣವಾಗುತ್ತದೆಂದು ಪೂರ್ವಪಕ್ಷ. ಆದ್ದರಿಂದಲೇ ಸುಧೆಯಲ್ಲಿ 'ಪಾಶುಪತಸಾಂಖ್ಯಬೌದ್ಧಾರ್ಹತಾದಿ' ಎಂಬುದಾಗಿ ಬೌದ್ಧಾದಿಶಬ್ದವನ್ನು ಪ್ರಯೋಗಿಸಿರುತ್ತಾರೆ.

**सौत्रस्य शङ्काभागस्य त्वेतट्टीकायामिव सांख्यादिस्मृतेरनवकाशत्वेन श्रुतेरप्रामाण्याख्यदोषप्रसङ्ग इति नार्थः । नापि परिहारभागस्य पञ्चरात्रादिस्मृतेरनवकाशत्वेन शैवादिस्मृतेरप्रामाण्याख्यदोषप्रसङ्गादित्यर्थः ।**

ಸೂತ್ರದಲ್ಲಿರುವ ಶಂಕಾಭಾಗಕ್ಕೆ ಮತ್ತು ಪರಿಹಾರಭಾಗಕ್ಕೆ ತತ್ತ್ವಪ್ರಕಾಶಿಕೆಯಲ್ಲಿ ಹೇಳಿದ ಅರ್ಥ ಹೀಗಿದೆ -

ಶಂಕೆ - ಪಾಶುಪತಾದಿಸ್ಮೃತಿಗಳು ನಿರವಕಾಶವಾಗಿರುವುದರಿಂದ ಅದಕ್ಕೆ ವಿರುದ್ಧವಾಗಿ ಶ್ರುತಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡಿದರೆ, ಅಪ್ರಾಮಾಣ್ಯದೋಷ ಬರಬೇಕಾದೀತು.

ಪರಿಹಾರ - ಪಂಚರಾತ್ರಾದಿಸ್ಮೃತಿಗಳು ನಿರವಕಾಶವಾಗಿರುವುದರಿಂದ ಅದಕ್ಕೆ ವಿರುದ್ಧವಾದ ವಿಷಯವನ್ನು ಪ್ರತಿಪಾದನೆ ಮಾಡುವ, ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ ಎಂದು.

ಟೀಕೆಯ ಪ್ರಕಾರ ಸೂತ್ರದ ಶಂಕಾಭಾಗಕ್ಕೂ ಮತ್ತು ಪರಿಹಾರಭಾಗಕ್ಕೂ ಹೇಳಿದ ಈ ಅರ್ಥವನ್ನು ವಿವಕ್ಷಿಸಬಾರದು.

**किं तूभयत्रापि तासां स्मृतीनामेवानवकाशत्वेनाप्रामाण्यदोषप्रसङ्ग इत्यर्थ इति सुधायां तत्वप्रदीपे चोक्तम् ।**

ನ್ಯಾಯಸುಧೆಯಲ್ಲಿ ಮತ್ತು ತತ್ತ್ವಪ್ರದೀಪದಲ್ಲಿ ಹೀಗೆ ಹೇಳಿದ್ದಾರೆ - ಬೌದ್ಧಾದಿ ಸ್ಮೃತಿಗಳು ಆಪ್ತಪ್ರಣೀತವಾದ್ದರಿಂದ ನಿರವಕಾಶವಾಗಿ ಪ್ರಮಾಣವಾಗುತ್ತವೆ. ವೇದಗಳು ಆಪ್ತಪ್ರಣೀತವಲ್ಲದ ಕಾರಣ ಅಪ್ರಮಾಣವಾಗಿದೆ. ಒಂದುವೇಳೆ ವೇದಪ್ರಾಮಾಣ್ಯವನ್ನು ಒಪ್ಪಿದರೆ ಬೌದ್ಧಾದಿಸ್ಮೃತಿಗಳು ಅಪ್ರಮಾಣವಾಗಬೇಕಾದೀತು. ಆದರೆ ನಿರವಕಾಶವಾದ್ದರಿಂದ ಬೌದ್ಧಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಲಾಗದು ಎಂದು. ಈ ಅರ್ಥವನ್ನೇ ಪ್ರಕೃತ ಸ್ವೀಕರಿಸಬೇಕು.

**तत्र सांख्यशैवादिस्मृतिभिरेव पूर्वपक्षश्रुतुर्विघविरोघात्मको नतु बौद्धार्हतादिस्मृतिभिरिति ज्ञेयम् ।**

ಸೂತ್ರದಲ್ಲಿ ಒಂದು ವೇಳೆ ಸಾಂಖ್ಯ, ಶೈವ ಮೊದಲಾದವರ ಸ್ಮೃತಿಗಳಿಂದ ಪೂರ್ವಪಕ್ಷವನ್ನು ವಿವಕ್ಷಿಸುವುದಾದರೆ, ಸ್ಮೃತಿವಿರೋಧವು ನಾಲ್ಕು ಬಗೆಯ ವಿರೋಧಸ್ವರೂಪವನ್ನು ಪಡೆದಿರುತ್ತದೆ. ಏಕೆಂದರೆ ಸಾಂಖ್ಯರು, ಶೈವರು ಸ್ಮೃತಿಪ್ರಮಾಣವನ್ನು ಒಪ್ಪುವುದರಿಂದ ಅದು ಸ್ವತಃ ಸಮಯರೂಪವೂ ಆಗಿರುವುದರಿಂದ ಯುಕ್ತಿ, ಸಮಯ, ಶ್ರುತಿ, ಯುಕ್ತಿಸಹಿತ ಶ್ರುತಿ ಈ ನಾಲ್ಕರ ವಿರೋಧವನ್ನು ಪರಿಹಾರ ಮಾಡಿದಂತಾಗುತ್ತದೆ. ಒಂದು ವೇಳೆ ಬೌದ್ಧರ ಮತ್ತು ಆರ್ಹತರ ಸ್ಮೃತಿಗಳಿಂದ ವಿರೋಧವನ್ನು ಹೇಳುವುದಾದರೆ, ನಾಲ್ಕರ ವಿರೋಧವನ್ನು ಹೇಳಿದಂತಾಗುವುದಿಲ್ಲ. ಏಕೆಂದರೆ ಇವರು ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪುವುದಿಲ್ಲ. ಆದ್ದರಿಂದ ಕೇವಲ ಸಮಯವಿರೋಧವನ್ನು ಮತ್ತು ಸ್ಮೃತಿವಿರೋಧವನ್ನು ಮಾತ್ರ ಹೇಳಿದಂತಾಗುತ್ತದೆ. ಈ ವ್ಯತ್ಯಾಸವನ್ನು ಗಮನಿಸಬೇಕು.

**अत्र चाप्रामाण्येन पूर्वपक्षे सर्वथा श्रुतेः स्मृतिविरोधः । प्रामाण्येन पूर्वपक्षे तु सिद्धान्त्यभिमते श्रुत्यर्थे । ततो नाध्यायासङ्गतिः ।**

ಶ್ರುತಿಗಳು ಅಪ್ರಮಾಣವಾಗುತ್ತವೆಂದು ಪೂರ್ವಪಕ್ಷ ಮಾಡಿದಾಗ ಶ್ರುತಿಗಳಿಗೆ ಸಂಪೂರ್ಣವಾಗಿ ಸ್ಮೃತಿವಿರೋಧ ಬರುತ್ತದೆ ಎಂದೇ ಹೇಳಬೇಕು. ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿ ಪೂರ್ವಪಕ್ಷ ಮಾಡಿದಾಗ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಅರ್ಥದಲ್ಲಿ ಶ್ರುತಿಗಳು ಪ್ರಮಾಣವಲ್ಲ ಎಂದು ಪೂರ್ವಪಕ್ಷ ಮಾಡಬೇಕು. ಎರಡೂ ಪಕ್ಷಗಳಲ್ಲಿಯೂ ಶ್ರುತಿಗಳಿಗೆ ಸ್ಮೃತಿವಿರೋಧವು ಬರುವುದರಿಂದ ಅಧ್ಯಾಯದಲ್ಲಿ ಸ್ಮೃತ್ಯಧಿಕರಣವು ಅಸಂಗತವಾಗುತ್ತದೆಂಬ ಪ್ರಶ್ನೆಯೇ ಬರುವುದಿಲ್ಲ.

**प्रकाशः –**

तत्र प्रतीतानुपपत्तिं निरसितुमनुवदति – **सुधायां त्विति** ।। स्वातन्त्र्येत्यादि त्वभिप्रायविवरणम् ।।

ಶ್ರುತಿ-ಸ್ಮೃತಿಗಳಲ್ಲಿ ಸ್ಮೃತಿಗಳೇ ಪ್ರಬಲ, ಶ್ರುತಿಯು ದುರ್ಬಲ. ಶ್ರುತಿಗಳಲ್ಲಿ ಆಪಾತತಃ ಪ್ರತೀತವಾದ ಅನುಪಪತ್ತಿಗಳನ್ನು ನಿರಾಕರಣೆ ಮಾಡಲು ಮೊದಲು ಅನುವಾದ ಮಾಡುತ್ತಿದ್ದಾರೆ 'ಸುಧಾಯಾಂ ತು' ಇತ್ಯಾದಿ ಗ್ರಂಥದಿಂದ. 'ಸ್ವಾತಂತ್ರ್ಯ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಹೇಳಿರುವುದು ಕೇವಲ ಸುಧೆಯ ಅಭಿಪ್ರಾಯದ ವಿವರಣೆ ಮಾತ್ರ. ಶಬ್ದತಃ ಅನುವಾದವಲ್ಲ.

**प्रकाशः – पूर्वपक्षिणो भाव इति** ।। एतदनुसारेण श्रुत्यर्थस्य स्मृतिसंवादैकनिब न्धनत्वाभावादिति सिद्धान्तभागस्यापि यदि स्मृत्यनुसारेण श्रौतोपक्रमादिकं नेयमित्युच्यते तर्हि स्मृतावप्युपक्रमादिनैवार्थनिर्णयात्तत्रापि स्मृत्यन्तरानुसरणेऽनवस्था

स्यात् । यदि तु स्मृतावुपक्रमादिकं स्वत एव निर्णायकं तर्हि श्रुतावपि तथा स्यादित्याशय ऊह्य इति भावः ।

'ಪೂರ್ವಪಕ್ಷಿಣೋ ಭಾವಃ' ಎಂದು ಹೇಳುವ ಗ್ರಂಥಕಾರರ ಅಭಿಪ್ರಾಯ ಹೀಗಿದೆ - ಸಮೂಲವಾದ ಶ್ರುತಿಗಳನ್ನು ಸಮೂಲವಾದ ಸ್ಮೃತಿಗಳಿಗೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಬೇಕೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯವಾಗಿದೆ. ಇದಕ್ಕನುಸಾರಿಯಾಗಿ ಮುಂದೆ ಗ್ರಂಥಕಾರರು ಸಿದ್ಧಾಂತವನ್ನು ಸ್ಥಾಪನೆ ಮಾಡುವಾಗ 'ಶ್ರುತ್ಯರ್ಥಸ್ಯ ಸ್ಮೃತಿಸಂವಾದೈಕನಿಬಂಧನತ್ವಾಭಾವಾತ್' ಶ್ರುತ್ಯರ್ಥವು ಕೇವಲ ಸ್ಮೃತಿಸಂವಾದವನ್ನು ಅವಲಂಬಿಸಿರುವುದಿಲ್ಲ ಎಂದು ಹೇಳುತ್ತಾರೆ. ಅದಕ್ಕೂ ಇದೇ ರೀತಿಯಲ್ಲಿಯೇ ಅಭಿಪ್ರಾಯವನ್ನು ತಿಳಿಯಬೇಕು. ('ಸಿದ್ಧಾಂತಭಾಗಸ್ಯಾಪಿ' ಎಂಬ ಪದಕ್ಕೆ 'ಇತ್ಯಾಶಯಃ ಊಹ್ಯಃ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು) ಅದು ಹೀಗೆ - ಶ್ರುತಿಗಳ ಅರ್ಥವನ್ನು ಉಪಕ್ರಮಾದಿತಾತ್ಪರ್ಯಲಿಂಗದಿಂದ ತಿಳಿಯಬೇಕು. ಆ ಉಪಕ್ರಮಾದಿಗಳ ಅರ್ಥವನ್ನು ಸ್ಮೃತಿಗಳಿಗೆ ಅನುಸಾರಿಯಾಗಿ ತಿಳಿಯಬೇಕೆಂಬುದು ಪೂರ್ವಪಕ್ಷಿಗಳ ಆಕ್ಷೇಪ. ಒಂದು ವೇಳೆ ಸ್ಮೃತಿಗಳಿಗೆ ಅನುಸಾರಿಯಾಗಿಯೇ ಶ್ರೌತವಾದ ಉಪಕ್ರಮಾದಿಗಳನ್ನು ಅರ್ಥೈಸುವುದಾದಲ್ಲಿ, ಮತ್ತೊಂದು ಆಕ್ಷೇಪ ಬರುತ್ತದೆ. ಸ್ಮೃತಿಗಳ ಅರ್ಥದಲ್ಲಿ ಗೊಂದಲವುಂಟಾದಾಗ ಅದನ್ನು ಪರಿಹರಿಸಲು ಉಪಕ್ರಮಾದಿಗಳನ್ನು ಆಶ್ರಯಿಸಬೇಕೋ, ಅಥವಾ ಮತ್ತೊಂದು ಸ್ಮೃತಿಯನ್ನು ಅವಲಂಬಿಸಿ, ಅರ್ಥವನ್ನು ಸ್ಪಷ್ಟಪಡಿಸಿಕೊಳ್ಳಬೇಕೋ ಎಂದು. ಒಂದುವೇಳೆ ಸ್ಮೃತಿಯಲ್ಲಿಯೂ ಉಪಕ್ರಮಾದಿಗಳನ್ನು ಅವಲಂಬಿಸಿದರೆ, ಆ ಉಪಕ್ರಮಾದಿಗಳ ಅರ್ಥನಿರ್ಣಯಕ್ಕಾಗಿ ಮತ್ತೊಂದು ಸ್ಮೃತಿಯನ್ನೇ ಅವಲಂಬಿಸಬೇಕು. ಹಾಗಾಗಿ ಅನವಸ್ಥಾದೋಷವು ಬರುತ್ತದೆ. ಏಕೆಂದರೆ ಆ ಸ್ಮೃತಿಯ ಅರ್ಥನಿಶ್ಚಯದಲ್ಲಿ ಪುನಃ ಉಪಕ್ರಮಾದಿಗಳನ್ನು ಅವಲಂಬಿಸಿ, ಅದರ ಅರ್ಥನಿರ್ಣಯಕ್ಕಾಗಿ ಮತ್ತೊಂದು ಸ್ಮೃತಿಯನ್ನು ಅವಲಂಬಿಸಲೇ ಬೇಕಾಗುತ್ತದೆ. ಆದ್ದರಿಂದ ಸ್ಮೃತಿಗಳಲ್ಲಿರುವ ಉಪಕ್ರಮಾದಿಗಳ ಅರ್ಥನಿರ್ಣಯಕ್ಕೆ ಮತ್ತೊಂದು ಸ್ಮೃತಿಯನ್ನು ಅವಲಂಬಿಸಲಾಗದು. ಇನ್ನು ಸ್ಮೃತಿಗಳಲ್ಲಿರುವ ಉಪಕ್ರಮಾದಿಗಳು ತಾವಾಗಿಯೇ ಅರ್ಥನಿರ್ಣಾಯಕವಾಗುತ್ತವೆ ಎಂದು ಹೇಳುವುದಾದರೆ. ಶ್ರುತಿಯಲ್ಲಿಯೂ ಕೂಡ ಹಾಗೆಯೇ ಉಪಕ್ರಮಾದಿಗಳು ತಾವಾಗಿಯೇ ಅರ್ಥನಿಶ್ಚಾಯಕವಾಗುತ್ತವೆಂದು ಹೇಳುತ್ತೇವೆ. ಇಷ್ಟು ಅಭಿಪ್ರಾಯವನ್ನು 'ಶ್ರುತ್ಯರ್ಥಸ್ಯ ಸ್ಮೃತಿಸಂವಾದೈಕನಿಬಂಧನತ್ವಾಭಾವಾತ್' ಎಂಬ ವಾಕ್ಯಕ್ಕೆ ತಿಳಿಯಬೇಕು.

**प्रकाशः** – ननु श्रौतोपक्रमादिकं नेयमित्ययुक्तम् । कैश्चिच्छ्रुतेरपौरुषेयत्वानभ्युपगमेनाप्तोक्ततयोभयोस्तुल्यबलत्वात् । कैश्चित् प्रामाण्यस्यैवानभ्युपगमादित्यतो विवेकमाह – अत्र चेति ।।

ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳಲ್ಲಿರುವ ಉಪಕ್ರಮಾದಿಗಳ ಅರ್ಥವನ್ನು ತಿಳಿಯಬೇಕೆಂದು ಹೇಳಿದ್ದು ತಪ್ಪು. ಏಕೆಂದರೆ ಕೆಲವು ವಾದಿಗಳು ಶ್ರುತಿಗಳನ್ನು ಅಪೌರುಷೇಯವೆಂದೇ ಒಪ್ಪುವುದಿಲ್ಲ. ಹೊರತಾಗಿ ಸ್ಮೃತಿಗಳಂತೆ ಆಪ್ತೋಕ್ತವಾಗಿದೆಯೆಂದು ಒಪ್ಪಿ ಶ್ರುತಿ-ಸ್ಮೃತಿಗಳೆರಡೂ ಸಮಾನ ಬಲವುಳ್ಳವುಗಳೆಂದು ಹೇಳುತ್ತಾರೆ. ಶ್ರುತಿಯು ದುರ್ಬಲ, ಸ್ಮೃತಿಯು ಪ್ರಬಲ ಎಂಬ ಪೂರ್ವಪಕ್ಷವನ್ನು ಮಾಡಲು

ಸಾಧ್ಯವಾಗುವುದಿಲ್ಲ. ಕೆಲವು ವಾದಿಗಳು ಶ್ರುತಿಗಳಿಗೆ ಪ್ರಾಮಾಣ್ಯವನ್ನೇ ಒಪ್ಪುವುದಿಲ್ಲ. ಇವರ ಪ್ರಕಾರವೂ ಕೂಡ ಸ್ಮೃತಿಗಳಿಗಿಂತ ಶ್ರುತಿಗಳು ದುರ್ಬಲವಾಗಿವೆ ಎಂದು ಅಥವಾ ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ವ್ಯಾಖ್ಯಾನ ಮಾಡಬೇಕು ಎಂದು, ಪೂರ್ವಪಕ್ಷ ಮಾಡಬಾರದು. ಆದ್ದರಿಂದ ಗ್ರಂಥಕಾರರು ಉಲ್ಲೇಖಿಸಿರುವ ಪೂರ್ವಪಕ್ಷವು ಹೇಗೆ ಸಮಂಜಸವಾಗುತ್ತದೆ ? ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಒಬ್ಬೊಬ್ಬ ದಾರ್ಶನಿಕರ ಪ್ರಕಾರ ಒಂದೊಂದು ಪೂರ್ವಪಕ್ಷವನ್ನು ಇಲ್ಲಿ ತಿಳಿಯಬೇಕೆಂಬ ವೈಲಕ್ಷಣ್ಯವನ್ನು ಪುನಃ ಗ್ರಂಥಕಾರರೇ 'ಅತ್ರ ಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः – तत्वप्रदीपे स्पष्टं कणादादिशब्दप्रयोगात् तदनुरोधेनाह – यद्वेति ।। सुधास्येति ।।** ''पाशुपतबौद्धार्हतादि'' इत्यत्रत्यादिशब्द इत्यर्थः ।

ತತ್ವಪ್ರದೀಪದಲ್ಲಿ ಸ್ಪಷ್ಟವಾಗಿ 'ಕಣದಾದಿ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಅದಕ್ಕನುಸಾರಿಯಾಗಿಯೇ 'ಯದ್ವಾ' ಎಂಬ ಪಕ್ಷವನ್ನು ಹೇಳುತ್ತಿದ್ದಾರೆ. ನ್ಯಾಯಸುಧೆಯಲ್ಲಿ 'ಪಾಶುಪತಬೌದ್ಧಾರ್ಹತಾದಿ' ಎಂಬಲ್ಲಿಯೂ ಆದಿಶಬ್ದವನ್ನು ಪ್ರಯೋಗಿಸಿದ್ದಾರೆ. ಅದನ್ನು 'ಸುಧಾಸ್ಥ ಆದಿಶಬ್ದಃ' ಎಂದು ಗ್ರಂಥದಲ್ಲಿ ಹೇಳಿರುತ್ತಾರೆ.

**प्रकाशः – अस्मिंश्च पक्षे टीकाविरोधं निराह – सौत्रस्येति ।।** एवञ्च सूत्रस्य वृत्त्यन्तरं व्यवस्थितमित्युक्तं भवति । ''तस्याश्चतुस्स्वरूपत्वात्'' इत्येतदपि व्यवस्थितमित्याह – **तत्रेति ।।**

'ಯದ್ವಾ' ಎಂಬ ಪಕ್ಷದಲ್ಲಿ ಟೀಕೆಯ ವಿರೋಧವನ್ನು ಪರಿಹರಿಸಲು 'ಸೌತ್ರಸ್ಯ' ಎಂಬ ವಾಕ್ಯವು ಹೊರಟಿದೆ. ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವನ್ನು ಮಾಡಿದ್ದರಿಂದ, ಎರಡು ಪಕ್ಷಗಳು ವ್ಯವಸ್ಥಿತವಾಗಿವೆ ಎಂದು ಹೇಳಿದಂತಾಯಿತು. ಅಂದರೆ ಯಾರು ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿ, ದುರ್ಬಲವೆನ್ನುತ್ತಾರೋ, ಅವರ ಪ್ರಕಾರ ಶ್ರುತಿಗಳಿಗೆ ಅರ್ಥಾಂತರ ಮಾಡಬೇಕೆಂದು ಪೂರ್ವಪಕ್ಷ. ಯಾರು ಶ್ರುತಿಗಳಿಗೆ ಪ್ರಾಮಾಣ್ಯವನ್ನೇ ಒಪ್ಪುವುದಿಲ್ಲವೋ, ಅವರ ಪ್ರಕಾರ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆಂದು ಪೂರ್ವಪಕ್ಷ. ಹೀಗೆ ಎರಡೂ ಪಕ್ಷಗಳಲ್ಲಿಯೂ ವ್ಯವಸ್ಥೆಯನ್ನು ತಿಳಿಯಬೇಕು. 'ತಸ್ಯಾಃ ಚತುಃ ಸ್ವರೂಪತ್ವಾತ್' ಎಂಬುದೂ ಕೂಡ ವ್ಯವಸ್ಥಿತವಾಗಿದೆ ಎಂಬುದನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಸ್ಮೃತಿಯು ಚತುಃಸ್ವರೂಪವಾಗಿದೆಯೆಂದು ಈ ಹಿಂದೆ ಹೇಳಿದ್ದರು. ಆದರೆ ಪಾಶುಪತಾದಿಸ್ಮೃತಿಗಳಷ್ಟೇ ಚತುಃ ಸ್ವರೂಪವಾಗಿವೆಯೆಂದು ತಿಳಿಯಬೇಕು. ಬೌದ್ಧಾದಿಸ್ಮೃತಿಗಳು ಚತುಃಸ್ವರೂಪವಾಗಿಲ್ಲ. ಏಕೆಂದರೆ ಅವರು ಶ್ರುತಿಗಳಿಗೆ ಪ್ರಾಮಾಣ್ಯವನ್ನೇ ಒಪ್ಪಿರುವುದಿಲ್ಲ. ಹಾಗಾಗಿ ಕೇವಲ ಸಮಯರೂಪತ್ವವನ್ನು ಯುಕ್ತಿರೂಪತ್ವವನ್ನು ಮಾತ್ರ ಹೇಳಬಹುದೆಂದು ಅಭಿಪ್ರಾಯ.

**प्रकाशः – तथा च न प्राक्तनग्रन्थविरोध इति भावः ।। तत इति ।।** पक्षद्वयेऽप्यप्रामाण्येन पूर्वपक्षस्य प्राप्तत्वादित्यर्थः ।

ಪರಿಪೂರ್ಣಚಂದ್ರಿಕಾ

ಆದ್ದರಿಂದ ಮೇಲೆ ಹೇಳಿದಂತೆ ವ್ಯವಸ್ಥಿತವಾಗಿ ಚತುಃಸ್ವರೂಪತ್ವವನ್ನು ತಿಳಿಯಬೇಕೆಂದು ವ್ಯಾಖ್ಯಾನ ಮಾಡಿದ್ದರಿಂದ ಹಿಂದಿನ 'ತಸ್ಮಾಃಚತುಷ್ಸ್ವರೂಪತ್ವಾತ್' ಎಂಬ ಗ್ರಂಥದ ವಿರೋಧವು ಬರುವುದಿಲ್ಲ. 'ತತಃ' ಎಂದರೆ ಎರಡೂ ಪಕ್ಷಗಳಲ್ಲಿಯೂ ಅಪ್ರಾಮಾಣ್ಯೇನ ಪೂರ್ವಪಕ್ಷವು ಪ್ರಾಪ್ತವಾಗಿರುವುದರಿಂದ ದ್ವಿತೀಯಾಧ್ಯಾಯದಲ್ಲಿ ಈ ಅಧಿಕರಣಕ್ಕೆ ಅಸಾಂಗತ್ಯವು ಬರುವುದಿಲ್ಲವೆಂದು ತಿಳಿಯಬೇಕು.




ಸುಂದೋಪಸುಂದನ್ಯಾಯದಿಂದ ಶ್ರುತಿ-ಸ್ಮೃತಿಗಳೆರಡೂ ಪರಸ್ಪರ ವಿರುದ್ಧವಾಗಿವೆ. ಈ ಕಾರಣದಿಂದ ಎರಡಕ್ಕೂ ಅಪ್ರಾಮಾಣ್ಯವನ್ನು ಹೇಳಬೇಕು ಎಂಬ ಆಕ್ಷೇಪವನ್ನು ಕೈವರೇ ಪರಿಹರಿಸುತ್ತಾರೆ. ಸ್ಮೃತಿಗಳು ಅತ್ಯಂತ ಸ್ಪಷ್ಟವಾದ ವಿಷಯಗಳನ್ನು ಮಂಡಿಸುತ್ತವೆ. ಯಾವ ಶಿವಾದಿಗಳು ಸ್ಮೃತಿಗಳನ್ನು ರಚನೆ ಮಾಡಿರುತ್ತಾರೋ, ಅವರೇ ತಮ್ಮ ಶಿಷ್ಯಂದಿರಿಗೆ ಅದರ ಅರ್ಥವನ್ನು ಉಪದೇಶಿಸಿರುತ್ತಾರೆ. ಆದರೆ ಶ್ರುತಿಗಳಾದರೋ, ಎಲ್ಲಾ ವಿಷಯಗಳನ್ನು ಅಸ್ಪಷ್ಟವಾಗಿ ಹೇಳುತ್ತವೆ. ಒಂದು ವಿಷಯವನ್ನು ಹೇಳಲು ಪ್ರಾರಂಭಿಸಿ, ಅರ್ಧದಲ್ಲಿ ಆ ವಿಚಾರವನ್ನು ಕೈಬಿಟ್ಟು ಮತ್ತೊಂದು ವಿಚಾರದಲ್ಲಿ ತೊಡಗುತ್ತವೆ. ಅವ್ಯವಸ್ಥಿತವಾದ ಪ್ರಕರಣಗಳಿಂದ ಕೂಡಿವೆ. ಬಹಳ ವಿಸ್ತಾರವಾಗಿ ಅಧ್ಯಯನವನ್ನು ಮಾಡಲಾರದಷ್ಟು ವಾಕ್ಯಸಂದರ್ಭಗಳನ್ನು ಹೊಂದಿವೆ. ಅರ್ಥವಿಶೇಷದಲ್ಲಿ ನಿಷ್ಕವಾಗಿಲ್ಲ. ಯಾರೂ ಕೂಡ ರಚನೆ ಮಾಡದ ಕಾರಣ ಅದರ ಅರ್ಥವನ್ನು ಅವರಿಂದ ತಿಳಿಯಲೂ ಕೂಡ ಸಾಧ್ಯವಾಗುವುದಿಲ್ಲ. ಸ್ವತಃ ತಾವು ಯಾವುದೇ ಅರ್ಥವನ್ನು ಬೋಧನೆ ಮಾಡುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಶ್ರುತಿಗಳು ದುರ್ಬಲವಾಗಿವೆ. ಈ ಶ್ರುತಿಗಳ ಅರ್ಥವು ಸ್ಮೃತಿಯನ್ನೇ ಅವಲಂಬಿಸಿರುವುದರಿಂದ, ಸ್ಮೃತಿಗಳಿಗೆ ವಿರುದ್ಧವಾಗಿ ಏನನ್ನಾದರೂ ಹೇಳಲು ಹೊರಟರೆ ಉಪಜೀವ್ಯವಿರೋಧವು ಬರುತ್ತದೆ.

ಸಮೂಲವಾದ ಸ್ಮೃತಿಗಳ ವಿರೋಧವು ಪ್ರಾಪ್ತವಾದರೆ. ನಿರ್ಮೂಲವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆಂಬುದು ಪೂರ್ವಪಕ್ಷಿಗಳ ಬಲವಾದ ಆಕ್ಷೇಪ. ಈ ಅಧಿಕರಣದಲ್ಲಿ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡುತ್ತಿಲ್ಲ. ಹೊರತಾಗಿ, ಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ಅರ್ಥೈಸಬೇಕೆಂದು ಆಕ್ಷೇಪಿಸಲಾಗಿದೆ. ಆದ್ದರಿಂದಲೇ ಸೂತ್ರದಲ್ಲಿ ಪ್ರಸಂಗಶಬ್ದವು ಇರುತ್ತದೆ. ಭಾಷ್ಯದಲ್ಲಿ 'ಸ್ಯಾತ್' ಎಂಬ ಶಬ್ದವು, ಟೀಕೆಯಲ್ಲಿ 'ಪ್ರಸಂಗ' ಶಬ್ದವೂ ಕೂಡ ಇದೇ ಅಭಿಪ್ರಾಯದಲ್ಲಿ ಉಲ್ಲೇಖಿತವಾಗಿದೆ. ಇನ್ನು ಕಣಾದಾದಿಗಳ ಮತದಲ್ಲಿ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಹಾಗೂ ಪೌರುಷೇಯತ್ವವನ್ನು ಒಪ್ಪಿರುವುದರಿಂದ, ಸ್ಮೃತಿಯಂತೆ ಶ್ರುತಿಗಳು ಸಮಬಲವಾಗುತ್ತವೆ. ಆದರೆ ಅವರನ್ನು ಪೂರ್ವಪಕ್ಷಿಗಳನ್ನಾಗಿ ಇಲ್ಲಿ ವಿವಕ್ಷಿಸಬಾರದು.

ಒಂದುವೇಳೆ ಕಣಾದಾದಿಗಳೂ ಕೂಡ ಪೂರ್ವಪಕ್ಷಿಗಳಾದರೆ ಕಣಾದಾದಿಸ್ಮೃತಿಗಳು ಯುಕ್ತಿಬದ್ಧವಾಗಿ ವಿಚಾರವನ್ನು ಪ್ರತಿಪಾದನೆ ಮಾಡುತ್ತಿವೆ. ಶ್ರುತಿಗಳು ಹಾಗಿಲ್ಲದ ಕಾರಣ ದುರ್ಬಲವಾಗಿವೆಯೆಂದು ಪೂರ್ವಪಕ್ಷವನ್ನು ತಿಳಿಯಬೇಕಾಗುತ್ತದೆ.

## ಸ್ಮೃತ್ಯಧಿಕರಣ (೨-೧-೧)

ಬೌದ್ಧಾದಿಗಳೂ ಕೂಡ ವೇದವನ್ನು ಅಪ್ರಮಾಣವೆನ್ನುತ್ತಾರೆ. ಅವರ ಪ್ರಕಾರ ಆಪ್ತಪ್ರಣೀತವಾದ ಬೌದ್ಧಾಗಮಗಳ ವಿರೋಧ ಬರುವುದರಿಂದ ವೇದವು ಅಪ್ರಮಾಣವಾಗುತ್ತದೆಂಬ ಪೂರ್ವಪಕ್ಷವನ್ನು ತಿಳಿಯಬೇಕು. ಆದ್ದರಿಂದ ತತ್ವಪ್ರಕಾಶಿಕೆಯ ಪ್ರಕಾರ ಸೂತ್ರಕ್ಕೆ ಹೀಗರ್ಥ - ಸಾಂಖ್ಯಾದಿಸ್ಮೃತಿಗಳು ನಿರವಕಾಶವಾದ್ದರಿಂದ ಶ್ರುತಿಗಳಿಗೆ ಅರ್ಥಾಂತರ ಮಾಡಬೇಕೆಂದು ಆಕ್ಷೇಪ. ಪಂಚರಾತ್ರಾದಿಸ್ಮೃತಿಗಳೂ ಕೂಡ ನಿರವಕಾಶವಾಗಿರುವುದರಿಂದ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯ ಬರುತ್ತದೆಂದು ಸಿದ್ಧಾಂತ ಎಂದು. ನ್ಯಾಯಸುಧೆಯ ಮತ್ತು ತತ್ವಪ್ರದೀಪದ ಪ್ರಕಾರ ಬೌದ್ಧಾದಿಸ್ಮೃತಿಗಳು ನಿರವಕಾಶವಾಗಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡಿ, ಪಂಚರಾತ್ರಾದಿಸ್ಮೃತಿಗಳಿಗೆ ನಿರವಕಾಶತ್ವವನ್ನು ಸಮರ್ಥಿಸುವ ಮೂಲಕ, ಬೌದ್ಧಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಸಮರ್ಥಿಸಬೇಕೆಂಬ ಸಿದ್ಧಾಂತದ ಅರ್ಥವನ್ನು ತಿಳಿಯಬೇಕು. ಹೀಗೆ ವ್ಯವಸ್ಥಿತವಾಗಿ ಸೂತ್ರದ ಅರ್ಥವನ್ನು ಎರಡು ಬಗೆಯಲ್ಲಿ ಗಮನಿಸಬೇಕು. ಶ್ರುತಿಗಳೆಲ್ಲವೂ ಅಪ್ರಮಾಣವಾಗಿವೆಯೆಂದು ಪೂರ್ವಪಕ್ಷ ಮಾಡಿದಾಗ, ಶ್ರುತಿಗಳಿಗೆ ಸಂಪೂರ್ಣವಾಗಿ ಸ್ಮೃತಿವಿರೋಧವನ್ನು ಆಕ್ಷೇಪ ಮಾಡಬೇಕು. ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿದಾಗ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಅರ್ಥವನ್ನು ಕೈಬಿಡಬೇಕಾಗುತ್ತದೆಂದು ಆಕ್ಷೇಪ ಮಾಡಬೇಕು. ಎರಡೂ ಪಕ್ಷಗಳಲ್ಲಿಯೂ ಶ್ರುತಿಗಳಿಗೆ ಸ್ಮೃತಿವಿರೋಧವು ಬರುವುದರಿಂದ ಸ್ಮೃತ್ಯಧಿಕರಣಕ್ಕೆ ಅಧ್ಯಾಯದಲ್ಲಿ ಅಸಾಂಗತ್ಯವಿರುವುದಿಲ್ಲ.

## ಪಾಶುಪತಾದಿಸ್ಮೃತಿಗಳಿಗೆ ಐದು ಬಗೆಯ ಬಾಧದೋಷ
## (ಸಿದ್ಧಾಂತ)

### तात्पर्यचन्द्रिका

**सिद्धान्ते त्वयं भावः –**

**प्रतिरुन्धे स्मृतिस्तावत् परामर्शे तु बाधते ।**
**श्रुतिः सस्मृतिकाऽत्यन्तं बाधतेऽन्यस्मृतीः पुनः ॥१॥**

ಟೀಕೆಯಲ್ಲಿರುವ ಸಿದ್ಧಾಂತ ಭಾಗದ ಅಭಿಪ್ರಾಯ ಹೀಗಿದೆ -

ಪ್ರತಿರುಂಧೇ ಸ್ಮೃತಿಸ್ತಾವತ್‌ಪರಾಮರ್ಶೇ ತು ಬಾಧತೇ ।
ಶ್ರುತಿಃ ಸಸ್ಮೃತಿಕಾಽತ್ಯಂತಂ ಬಾಧತೇಽನ್ಯಸ್ಮೃತೀಃ ಪುನಃ ॥

ಪಾಶುಪತಾದಿ ಸ್ಮೃತಿಗಳನ್ನು ಪಂಚರಾತ್ರಾದಿ ಸ್ಮೃತಿಗಳು ಪ್ರತಿರೋಧ ಮಾಡುತ್ತವೆಂಬುದು ಮೇಲ್ನೋಟದಿಂದಲೇ ತಿಳಿಯುತ್ತದೆ. ಇನ್ನು ವಿಮರ್ಶೆ ಮಾಡಿದರೆ ಪಾಶುಪತಾದಿ ಸ್ಮೃತಿಗಳನ್ನು ಬಾಧಿಸುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅದೇ ಪಂಚರಾತ್ರಾದಿ ಸ್ಮೃತಿಗಳು ಅಪೌರುಷೇಯವಾದ ಶ್ರುತಿಗಳ ಬೆಂಬಲ ಪಡೆದಾಗ ಸರ್ವಾತ್ಮನಾ ಪಾಶುಪತಾದಿಸ್ಮೃತಿಗಳನ್ನು ಬಾಧಿಸುತ್ತವೆ.

ಪರಿಪೂರ್ಣಚಂದ್ರಿಕಾ

**आपाततस्तावच्छ्रौतस्मृतिः शैवादिस्मृतीः प्रतिरुन्धे । विष्ण्वादिसार्वज्ञादेरपि लोकप्रसिद्धत्वेन तत्स्मृतेर्विस्पष्टत्वेन च तुल्यबलत्वात् ।**

೧. ಆಪಾತತಃ ವಿಚಾರ ಮಾಡಿದಾಗ - ಪಂಚರಾತ್ರಾದಿಸ್ಮೃತಿಗಳು ಶೈವಾದಿಸ್ಮೃತಿಗಳನ್ನು ಪ್ರತಿರೋಧ ಮಾಡುತ್ತವೆ. ಯಾವರೀತಿಯಾಗಿ ರುದ್ರಾದಿಗಳು ಸರ್ವಜ್ಞರು, ಆಪ್ತರೂ ಆಗಿದ್ದಾರೆಂದು ಲೋಕಪ್ರಸಿದ್ಧವಾಗಿದೆಯೋ, ಅದೇ ರೀತಿಯಾಗಿ ವಿಷ್ಣು ಮೊದಲಾದವರೂ ಕೂಡ ಸರ್ವಜ್ಞರು, ಆಪ್ತರೂ ಆಗಿದ್ದಾರೆ ಎಂದು ಲೋಕಪ್ರಸಿದ್ಧವಾಗಿದೆ. ಮತ್ತು ಪಾಶುಪತಾದಿಸ್ಮೃತಿಗಳಂತೆ, ಪಂಚರಾತ್ರಾದಿಸ್ಮೃತಿಗಳೂ ಕೂಡ ಅತ್ಯಂತ ಸ್ಪಷ್ಟವಾಗಿ ವಿಷಯವನ್ನು ಪ್ರತಿಪಾದನೆ ಮಾಡುತ್ತಿವೆ. ಈ ಎರಡು ಕಾರಣಗಳಿಂದ ಪಾಶುಪತಾದಿಸ್ಮೃತಿಗಳಷ್ಟೇ ಪ್ರಾಬಲ್ಯ ಪಂಚರಾತ್ರಾದಿಸ್ಮೃತಿಗಳಲ್ಲಿಯೂ ಇರುತ್ತದೆ.

**सिद्धान्तीष्टं तु शैवादिस्मृतिषु वैदिकस्मृतिभिः प्रतिरुद्धास्वप्रतिबद्धश्रुतिभिरेव सेत्स्यति ।**

ಇದರಿಂದ ಸಿದ್ಧಾಂತಿಗಳ ಅಭಿಲಾಷೆಯು ಹೇಗೆ ಪೂರೈಸುತ್ತದೆ ಎಂದರೆ ಪಾಶುಪತಾದಿಸ್ಮೃತಿಗಳು ವೈದಿಕವಾದ ಪಂಚರಾತ್ರಾದಿಸ್ಮೃತಿಗಳಿಂದ ಪ್ರತಿರುದ್ಧವಾದಾಗ ಅಪೌರುಷೇಯವಾದ ಶ್ರುತಿಗಳಿಗೆ ಪಾಶುಪತಾದಿಸ್ಮೃತಿಗಳ ವಿರೋಧ ತಪ್ಪುತ್ತದೆ. ಆವಾಗ ಅಂತಹ ಶ್ರುತಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ.

**विमर्शे तु ''नित्यं वृद्धिक्षयापेतम्'' इत्यादिना विष्णोरनुपचरितसर्वज्ञत्वात् तदुक्तस्य श्रुतिसंवादित्वाच्च नितरामाप्तत्वात् प्रबला तत्स्मृतिरन्यस्मृतीर्बाधते ।**

೨. ವಿಮರ್ಶೆ ಮಾಡಿದಾಗ - 'ನಿತ್ಯಂ ವೃದ್ಧಿಕ್ಷಯಾಪೇತಮ್' ಇತ್ಯಾದಿ ಪ್ರಮಾಣದಂತೆ ವಿಷ್ಣುವಿನಲ್ಲಿರುವ ಸಾರ್ವಜ್ಞ್ಯವು ಅನುಪಚರಿತವಾಗಿದೆ. ಮತ್ತು ಅತ್ಯಂತ ಆಪ್ತನಾದ ವಿಷ್ಣುವಿನಿಂದ ಉಚ್ಚರಿತವಾದ ವಿಷಯದಲ್ಲಿ ಶ್ರುತಿಸಂವಾದವೂ ಕೂಡ ಇರುತ್ತದೆ. ರುದ್ರಾದಿಗಳಲ್ಲಿ ಅನುಪಚರಿತವಾದ ಸಾರ್ವಜ್ಞ್ಯ ಇದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಶ್ರುತಿಸಂವಾದ ಇರುವುದಿಲ್ಲ. ಅತ್ಯಂತ ಆಪ್ತತ್ವವೂ ಕೂಡ ಇರುವುದಿಲ್ಲ. ಆದ್ದರಿಂದ ಶಿವಾದಿಗಳು ರಚಿಸಿದ ಸ್ಮೃತಿಗಳಿಗಿಂತಲೂ ವಿಷ್ಣುವಿನಿಂದ ರಚಿತವಾದ ಪಂಚರಾತ್ರಾದಿಸ್ಮೃತಿಗಳೇ ಪ್ರಬಲವಾಗಿವೆ. ಆದ್ದರಿಂದಲೇ ಶೈವಾದಿಸ್ಮೃತಿಗಳನ್ನು ಪಂಚರಾತ್ರಾದಿಸ್ಮೃತಿಗಳು ಬಾಧಿಸುತ್ತವೆ.

**परोक्तरीत्या श्रुतेः शैवादिस्मृतितो दुर्बलत्वेऽपि प्रमाणत्वायुक्तस्तत्संवादेन शिवादिभ्योऽपि विष्णोराप्तत्वनिश्चयः ।**

ಬೌದ್ಧಾದಿಗಳೂ ಕೂಡ ವೇದವನ್ನು ಅಪ್ರಮಾಣವೆನ್ನುತ್ತಾರೆ. ಅವರ ಪ್ರಕಾರ ಆಪ್ತಪ್ರಣೀತವಾದ ಬೌದ್ಧಾಗಮಗಳ ವಿರೋಧ ಬರುವುದರಿಂದ ವೇದವು ಅಪ್ರಮಾಣವಾಗುತ್ತದೆಂಬ ಪೂರ್ವಪಕ್ಷವನ್ನು ತಿಳಿಯಬೇಕು. ಆದ್ದರಿಂದ ತತ್ವಪ್ರಕಾಶಿಕೆಯ ಪ್ರಕಾರ ಸೂತ್ರಕ್ಕೆ ಹೀಗರ್ಥ - ಸಾಂಖ್ಯಾದಿಸ್ಮೃತಿಗಳು ನಿರವಕಾಶವಾದ್ದರಿಂದ ಶ್ರುತಿಗಳಿಗೆ ಅರ್ಥಾಂತರ ಮಾಡಬೇಕೆಂದು ಆಕ್ಷೇಪ. ಪಂಚರಾತ್ರಾದಿಸ್ಮೃತಿಗಳೂ ಕೂಡ ನಿರವಕಾಶವಾಗಿರುವುದರಿಂದ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯ ಬರುತ್ತದೆಂದು ಸಿದ್ಧಾಂತ ಎಂದು. ನ್ಯಾಯಸುಧೆಯ ಮತ್ತು ತತ್ವಪ್ರದೀಪದ ಪ್ರಕಾರ ಬೌದ್ಧಾದಿಸ್ಮೃತಿಗಳು ನಿರವಕಾಶವಾಗಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡಿ, ಪಂಚರಾತ್ರಾದಿಸ್ಮೃತಿಗಳಿಗೆ ನಿರವಕಾಶತ್ವವನ್ನು ಸಮರ್ಥಿಸುವ ಮೂಲಕ, ಬೌದ್ಧಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಸಮರ್ಥಿಸಬೇಕೆಂಬ ಸಿದ್ಧಾಂತದ ಅರ್ಥವನ್ನು ತಿಳಿಯಬೇಕು. ಹೀಗೆ ವ್ಯವಸ್ಥಿತವಾಗಿ ಸೂತ್ರದ ಅರ್ಥವನ್ನು ಎರಡು ಬಗೆಯಲ್ಲಿ ಗಮನಿಸಬೇಕು. ಶ್ರುತಿಗಳೆಲ್ಲವೂ ಅಪ್ರಮಾಣವಾಗಿವೆಯೆಂದು ಪೂರ್ವಪಕ್ಷ ಮಾಡಿದಾಗ, ಶ್ರುತಿಗಳಿಗೆ ಸಂಪೂರ್ಣವಾಗಿ ಸ್ಮೃತಿವಿರೋಧವನ್ನು ಆಕ್ಷೇಪ ಮಾಡಬೇಕು. ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿದಾಗ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಅರ್ಥವನ್ನು ಕೈಬಿಡಬೇಕಾಗುತ್ತದೆಂದು ಆಕ್ಷೇಪ ಮಾಡಬೇಕು. ಎರಡೂ ಪಕ್ಷಗಳಲ್ಲಿಯೂ ಶ್ರುತಿಗಳಿಗೆ ಸ್ಮೃತಿವಿರೋಧವು ಬರುವುದರಿಂದ ಸ್ಮೃತ್ಯಧಿಕರಣಕ್ಕೆ ಅಧ್ಯಾಯದಲ್ಲಿ ಅಸಾಂಗತ್ಯವಿರುವುದಿಲ್ಲ.

## ಪಾಶುಪತಾದಿಸ್ಮೃತಿಗಳಿಗೆ ಐದು ಬಗೆಯ ಬಾಧದೋಷ
## (ಸಿದ್ಧಾಂತ)

**तात्पर्यचन्द्रिका**

**सिद्धान्ते त्वयं भावः –**

**प्रतिरुन्धे स्मृतिस्तावत् परामर्शे तु बाघते ।**
**श्रुतिः सस्मृतिकाऽत्यन्तं बाधतेऽन्यस्मृतीः पुनः ॥१॥**

ಟೀಕೆಯಲ್ಲಿರುವ ಸಿದ್ಧಾಂತ ಭಾಗದ ಅಭಿಪ್ರಾಯ ಹೀಗಿದೆ -

ಪ್ರತಿರುಂಧೇ ಸ್ಮೃತಿಸ್ತಾವತ್ ಪರಾಮರ್ಶೇ ತು ಬಾಧತೇ ।
ಶ್ರುತಿಃ ಸಸ್ಮೃತಿಕಾಽತ್ಯಂತಂ ಬಾಧತೇಽನ್ಯಸ್ಮೃತೀಃ ಪುನಃ ॥

ಪಾಶುಪತಾದಿ ಸ್ಮೃತಿಗಳನ್ನು ಪಂಚರಾತ್ರಾದಿ ಸ್ಮೃತಿಗಳು ಪ್ರತಿರೋಧ ಮಾಡುತ್ತವೆಂಬುದು ಮೇಲ್ನೋಟದಿಂದಲೇ ತಿಳಿಯುತ್ತದೆ. ಇನ್ನು ವಿಮರ್ಶೆ ಮಾಡಿದರೆ ಪಾಶುಪತಾದಿ ಸ್ಮೃತಿಗಳನ್ನು ಬಾಧಿಸುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅದೇ ಪಂಚರಾತ್ರಾದಿ ಸ್ಮೃತಿಗಳು ಅಪೌರುಷೇಯವಾದ ಶ್ರುತಿಗಳ ಬೆಂಬಲ ಪಡೆದಾಗ ಸರ್ವಾತ್ಮನಾ ಪಾಶುಪತಾದಿಸ್ಮೃತಿಗಳನ್ನು ಬಾಧಿಸುತ್ತವೆ.

ಪರಿಪೂರ್ಣಚಂದ್ರಿಕಾ

**आपाततस्तावच्छ्रौतस्मृतिः शैवादिस्मृतीः प्रतिरुन्धे । विष्ण्वादिसार्वज्ञादेरपि लोकप्रसिद्धत्वेन तत्स्मृतेर्विस्पष्टत्वेन च तुल्यबलत्वात् ।**

೧. ಆಪಾತತಃ ವಿಚಾರ ಮಾಡಿದಾಗ - ಪಂಚರಾತ್ರಾದಿಸ್ಮೃತಿಗಳು ಶೈವಾದಿಸ್ಮೃತಿಗಳನ್ನು ಪ್ರತಿರೋಧ ಮಾಡುತ್ತವೆ. ಯಾವರೀತಿಯಾಗಿ ರುದ್ರಾದಿಗಳು ಸರ್ವಜ್ಞರು, ಆಪ್ತರೂ ಆಗಿದ್ದಾರೆಂದು ಲೋಕಪ್ರಸಿದ್ಧವಾಗಿದೆಯೋ, ಅದೇ ರೀತಿಯಾಗಿ ವಿಷ್ಣು ಮೊದಲಾದವರೂ ಕೂಡ ಸರ್ವಜ್ಞರು, ಆಪ್ತರೂ ಆಗಿದ್ದಾರೆ ಎಂದು ಲೋಕಪ್ರಸಿದ್ಧವಾಗಿದೆ. ಮತ್ತು ಪಾಶುಪತಾದಿಸ್ಮೃತಿಗಳಂತೆ, ಪಂಚರಾತ್ರಾದಿಸ್ಮೃತಿಗಳೂ ಕೂಡ ಅತ್ಯಂತ ಸ್ಪಷ್ಟವಾಗಿ ವಿಷಯವನ್ನು ಪ್ರತಿಪಾದನೆ ಮಾಡುತ್ತಿವೆ. ಈ ಎರಡು ಕಾರಣಗಳಿಂದ ಪಾಶುಪತಾದಿಸ್ಮೃತಿಗಳಷ್ಟೇ ಪ್ರಾಬಲ್ಯ ಪಂಚರಾತ್ರಾದಿಸ್ಮೃತಿಗಳಲ್ಲಿಯೂ ಇರುತ್ತದೆ.

**सिद्धान्तीष्टं तु शैवादिस्मृतिषु वैदिकस्मृतिभिः प्रतिरुद्धास्वप्रतिबद्धश्रुतिभिरेव सेत्स्यति ।**

ಇದರಿಂದ ಸಿದ್ಧಾಂತಿಗಳ ಅಭಿಲಾಷೆಯು ಹೇಗೆ ಪೂರೈಸುತ್ತದೆ ಎಂದರೆ ಪಾಶುಪತಾದಿಸ್ಮೃತಿಗಳು ವೈದಿಕವಾದ ಪಂಚರಾತ್ರಾದಿಸ್ಮೃತಿಗಳಿಂದ ಪ್ರತಿರುದ್ಧವಾದಾಗ ಅಪೌರುಷೇಯವಾದ ಶ್ರುತಿಗಳಿಗೆ ಪಾಶುಪತಾದಿಸ್ಮೃತಿಗಳ ವಿರೋಧ ತಪ್ಪುತ್ತದೆ. ಆವಾಗ ಅಂತಹ ಶ್ರುತಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ.

**विमर्शे तु ''नित्यं वृद्धिक्षयापेतम्'' इत्यादिना विष्णोरनुपचरितसर्वज्ञत्वात् तदुक्तस्य श्रुतिसंवादित्वाच्च नितरामाप्तत्वात् प्रबला तत्स्मृतिरन्यस्मृतीर्बाधते ।**

೨. ವಿಮರ್ಶೆ ಮಾಡಿದಾಗ - 'ನಿತ್ಯಂ ವೃದ್ಧಿಕ್ಷಯಾಪೇತಮ್' ಇತ್ಯಾದಿ ಪ್ರಮಾಣದಂತೆ ವಿಷ್ಣುವಿನಲ್ಲಿರುವ ಸಾರ್ವಜ್ಞ್ಯವು ಅನುಪಚರಿತವಾಗಿದೆ. ಮತ್ತು ಅತ್ಯಂತ ಆಪ್ತನಾದ ವಿಷ್ಣುವಿನಿಂದ ಉಚ್ಚರಿತವಾದ ವಿಷಯದಲ್ಲಿ ಶ್ರುತಿಸಂವಾದವೂ ಕೂಡ ಇರುತ್ತದೆ. ರುದ್ರಾದಿಗಳಲ್ಲಿ ಅನುಪಚರಿತವಾದ ಸಾರ್ವಜ್ಞ್ಯ ಇದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಶ್ರುತಿಸಂವಾದ ಇರುವುದಿಲ್ಲ. ಅತ್ಯಂತ ಆಪ್ತತ್ವವೂ ಕೂಡ ಇರುವುದಿಲ್ಲ. ಆದ್ದರಿಂದ ಶಿವಾದಿಗಳು ರಚಿಸಿದ ಸ್ಮೃತಿಗಳಿಗಿಂತಲೂ ವಿಷ್ಣುವಿನಿಂದ ರಚಿತವಾದ ಪಂಚರಾತ್ರಾದಿಸ್ಮೃತಿಗಳೇ ಪ್ರಬಲವಾಗಿವೆ. ಆದ್ದರಿಂದಲೇ ಶೈವಾದಿಸ್ಮೃತಿಗಳನ್ನು ಪಂಚರಾತ್ರಾದಿಸ್ಮೃತಿಗಳು ಬಾಧಿಸುತ್ತವೆ.

**परोक्तरीत्या श्रुतेः शैवादिस्मृतितो दुर्बलत्वेऽपि प्रमाणत्वायुक्तस्तत्संवादेन शिवादिभ्योऽपि विष्णोराप्तत्वनिश्चयः ।**

ಪೂರ್ವಪಕ್ಷದಲ್ಲಿ ಆಕ್ಷೇಪ ಮಾಡಿದಂತೆ ಶ್ರುತಿಗಳೆಲ್ಲವೂ ಶೈವಾದಿಸ್ಮೃತಿಗಳಿಗಿಂತ ದುರ್ಬಲವಾಗಿದ್ದರೂ ಪ್ರಮಾಣವಾಗಿವೆ ಎಂದು ಒಪ್ಪಿಯೇ ಇದ್ದಾರೆ. ಅಂತಹ ಶ್ರುತಿಗಳ ಸಂವಾದವಿರುವ ಪ್ರಯುಕ್ತ ಶಿವಾದಿಗಳಿಗಿಂತಲೂ ವಿಷ್ಣು ಪರಮ ಆಪ್ತನಾಗಿದ್ದಾನೆಂದು ನಿಶ್ಚಯಿಸುತ್ತೇವೆ.

**युक्तिसंवादरहितार्थकथकादपि तत्संवाद्यर्थकथकस्येव ।**

ಉದಾಹರಣೆ : ಯುಕ್ತಿಯ ಸಂವಾದವಿಲ್ಲದ ವಿಷಯವನ್ನು ಪ್ರತಿಪಾದನೆ ಮಾಡುವವನಿಗಿಂತ ಯುಕ್ತಿಯ ಸಂವಾದವಿರುವ ವಿಷಯವನ್ನು ಪ್ರತಿಪಾದನೆ ಮಾಡುವವನು ಹೆಚ್ಚು ಆಪ್ತನೆಂದು ಲೋಕದಲ್ಲಿ ತಿಳಿಯುತ್ತಾರೆ. ಆದರಂತೆ ಶ್ರುತಿಸಂವಾದವಿಲ್ಲದ ಸ್ಮೃತಿಯನ್ನು ಹೇಳುವವನಿಗಿಂತ ಶ್ರುತಿಸಂವಾದವಿರುವ ಸ್ಮೃತಿಯನ್ನು ಹೇಳುವವನು ಹೆಚ್ಚು ಆಪ್ತನೆಂದು ನಿಶ್ಚಯಿಸುತ್ತೇವೆ.

**अतिविमर्शे तु शैवादिस्मृतेः समबलाभिरधिकबलाभिर्वा श्रौतस्मृतिभिः सहितया श्रुत्याऽतिबाधः ।**

೩. ಇನ್ನೂ ಹೆಚ್ಚು ವಿಮರ್ಶಿಸಿದಾಗ - ಪಂಚರಾತ್ರಾದಿಸ್ಮೃತಿಗಳಿಂದ ಕೂಡಿರುವ ಶ್ರುತಿಗಳಿಂದ ಶೈವಾದಿಸ್ಮೃತಿಗಳು ಅತ್ಯಂತವಾಗಿಯೇ ಬಾಧಿತವಾಗುತ್ತವೆ. ಅದು ಹೀಗೆ - ಶೈವಾದಿಸ್ಮೃತಿಗಳಿಗಿಂತ ಪಂಚರಾತ್ರಾದಿಸ್ಮೃತಿಗಳು ಸಮಬಲವಾಗಿವೆ ಎಂದು ವಿವಕ್ಷಿಸಿದಾಗ, ಅಥವಾ ಅಧಿಕಬಲವುಳ್ಳವುಗಳಾಗಿವೆ ಎಂದು ವಿವಕ್ಷಿಸಿದಾಗ ಶ್ರೌತ ಸ್ಮೃತಿಗಳಿಂದ ಕೂಡಿರುವ ಶ್ರುತಿಗಳಿಂದ ಪಾಶುಪತಾದಿಸ್ಮೃತಿಗಳು ಅತ್ಯಂತವಾಗಿಯೇ ಬಾಧಿತವಾಗುತ್ತವೆ.

**अश्वेन गजेन वा सहितेन पदातिनाऽश्वस्येव ।**

ಉದಾಹರಣೆ - ಕೇವಲ ಒಬ್ಬ ಸೈನಿಕನು ಕುದುರೆಯನ್ನು ಎದುರಿಸಲು ಸಮರ್ಥನಾಗುವುದಿಲ್ಲ. ಆದರೆ ಅದೇ ಸೈನಿಕ ಕುದುರೆಗೆ ಸಮಬಲವಾದ ಮತ್ತೊಂದು ಕುದುರೆಯ ಮೇಲೆ ಕುಳಿತು ಯುದ್ಧಮಾಡಿದಾಗ ಆ ಕುದುರೆಯನ್ನು ಎದುರಿಸುತ್ತಾನೆ. ಅಥವಾ ಕುದುರೆಗಿಂತಲೂ ಹೆಚ್ಚು ಬಲಿಷ್ಠವಾದ ಆನೆಯ ಜೊತೆಗೆ ಯುದ್ಧಮಾಡಲು ಹೊರಟಾಗ ಅತ್ಯಂತ ಸುಲಭವಾಗಿಯೇ ಕುದುರೆಯನ್ನು ಎದುರಿಸುತ್ತಾನೆ. ಅದೇ ರೀತಿಯಾಗಿ ಪೂರ್ವಪಕ್ಷಿಗಳು ಹೇಳುವಂತೆ ಶ್ರುತಿಗಳು ದುರ್ಬಲವಾಗಿರಬಹುದು. ಆದರೆ ಪಾಶುಪತಾದಿಸ್ಮೃತಿಗಳಿಗೆ ಸಮಾನಬಲ ಹೊಂದಿರುವ ಪಂಚರಾತ್ರಾದಿಸ್ಮೃತಿಗಳ ಸಹಕಾರವಿರುವ ಶ್ರುತಿಗಳು ಪಾಶುಪತಾದಿಸ್ಮೃತಿಗಳನ್ನು ಬಾಧಿಸುತ್ತವೆ. ಅಥವಾ ಪಾಶುಪತಾದಿಸ್ಮೃತಿಗಳಿಗಿಂತಲೂ ಹೆಚ್ಚು ಬಲಿಷ್ಠವಾದ ಪಂಚರಾತ್ರಾದಿಸ್ಮೃತಿಗಳಿಂದ ಸಹಿತವಾದ ಶ್ರುತಿಯು ಕೇವಲ ಪಾಶುಪತಾದಿಸ್ಮೃತಿಗಳನ್ನು ಅತ್ಯಂತವಾಗಿಯೇ ಬಾಧಿಸುತ್ತವೆ.

**शैवादिस्मृतीनां तु न श्रुतिसंवादो न वा तत्सहायत्वम् । श्रुतीनां विष्णौ समन्वयस्योक्तत्वात् ।**

ಪಾಶುಪತಾದಿಸ್ಮೃತಿಗಳಿಗೆ ಶ್ರುತಿಗಳ ಸಂವಾದವೇ ಇರುವುದಿಲ್ಲ. ಶ್ರುತಿಗಳ ಸಹಾಯವೂ ಕೂಡ ಇರುವುದಿಲ್ಲ. ಏಕೆಂದರೆ ಈಗಾಗಲೇ ಪ್ರಥಮಪಾದದಲ್ಲಿ ಸಮಗ್ರ ಶ್ರುತಿಗಳನ್ನು ಮಹಾವಿಷ್ಣುವಿನಲ್ಲಿ ನಾವು ಸಮನ್ವಯ ಮಾಡಿದ್ದೇವೆ.

**अत्र च स्मृत्या स्मृतिबाधप्रतिरोधौ सौत्रपरिहारभागस्यस्मृतिशब्द-वाच्यार्थानुसारिणौ ।**

ಮೇಲೆ ಹೇಳಿದ ಪಂಚರಾತ್ರಾದಿಸ್ಮೃತಿಗಳಿಂದ ಪಾಶುಪತಾದಿಸ್ಮೃತಿಗಳಿಗೆ ಬಾಧ ಮತ್ತು ಪ್ರತಿರೋಧಗಳು, ಸೂತ್ರದ ಪರಿಹಾರಭಾಗದಲ್ಲಿರುವ ಸ್ಮೃತಿ ಎಂಬ ಶಬ್ದದ ವಾಚ್ಯಾರ್ಥದಿಂದಲೇ ತಿಳಿಯುತ್ತದೆ.

**श्रुत्या स्मृतिबाधस्तूक्तस्य श्रुतिसमन्वयस्य स्मृतिविरोधे शङ्किते श्रुतिं त्यक्त्वा प्रतिस्मृतिमात्रोक्तेरयुक्तत्वात् सूत्रे च स्मृत्युपन्यासस्य श्रुतिप्राबल्यार्थत्वेनोपपत्तेः सूत्राभिप्रायानुसारी ।**

ಶ್ರುತಿಯಿಂದ ಸ್ಮೃತಿಗಳು ಬಾಧಿತವಾಗುತ್ತವೆಂಬುದೂ ಕೂಡ ಸೂತ್ರದಿಂದಲೇ ತಿಳಿಯುತ್ತದೆ. ಅದು ಹೀಗೆ - ಪ್ರಥಮಾಧ್ಯಾಯದಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯಕ್ಕೆ ಪಾಶುಪತಾದಿಸ್ಮೃತಿಗಳ ವಿರೋಧವನ್ನು ಆಕ್ಷೇಪ ಮಾಡಿದಾಗ ಶ್ರುತಿಗಳನ್ನು ಸಂಪೂರ್ಣವಾಗಿ ಕೈಬಿಟ್ಟು ಪಂಚರಾತ್ರಾದಿಸ್ಮೃತಿಗಳನ್ನು ಆಧಾರವನ್ನಾಗಿ ಹೇಳುವ ಮಾತ್ರದಿಂದ ಆಕ್ಷೇಪವನ್ನು ಪರಿಹರಿಸಿದಂತಾಗುವುದಿಲ್ಲ. ಆದ್ದರಿಂದ ಸೂತ್ರದಲ್ಲಿ ಸ್ಮೃತಿಶಬ್ದವನ್ನು ಹೇಳಿದ್ದೇ ಶ್ರುತಿಗಳ ಪ್ರಾಬಲ್ಯಕ್ಕೋಸ್ಕರ ಎಂದು ತಿಳಿಯಬೇಕು. ಅಂತಹ ಪ್ರಬಲವಾದ ಶ್ರುತಿಗಳಿಂದ ಪಾಶುಪತಾದಿಸ್ಮೃತಿಗಳು ಆತ್ಯಂತಿಕವಾಗಿ ಬಾಧಿತವಾಗುತ್ತವೆಂಬ ವಿಚಾರವೂ ಕೂಡ ಸ್ಮೃತಿಬದ್ದಿಂದಲೇ ತಿಳಿಯುತ್ತದೆ.

**तत्र प्रतिरोधो ''मानं ह्युभयत्र समं भवेत्'' इत्यनुव्याख्याने ''तथा च पाशुपतादिस्मृतीनां सत्प्रतिपक्षत्वम्'' इति सुधायां चोक्तः ।**

ಪ್ರತಿರೋಧಪಕ್ಷವನ್ನು 'ಮಾನಂ ಹಿ ಉಭಯತ್ರ ಸಮಂ ಭವೇತ್' ಪ್ರಮಾಣವು ಎರಡೂ ಕಡೆ ಸಮಾನವಾಗಿವೆ ಎಂಬ ಅನುವ್ಯಾಖ್ಯಾನದಿಂದ 'ತಥಾ ಚ ಪಾಶುಪತಾದಿಸ್ಮೃತೀನಾಂ ಸತ್ಪ್ರತಿಪಕ್ಷತ್ವಮ್' 'ಆದ್ದರಿಂದ ಪಾಶುಪತಾದಿಸ್ಮೃತಿಗಳು ಸತ್‌ಪ್ರತಿಪಕ್ಷಿತವಾಗಿವೆ' ಎಂಬ ಸುಧೆಯ ವಾಕ್ಯದಿಂದಲೂ ಸ್ಪಷ್ಟವಾಗುತ್ತದೆ.

ಸ್ಮೃತ್ಯಧಿಕರಣ (೨-೧-೧)

**बाधस्तु ''नितरां सर्वज्ञैः'' इति भाष्ये ''रुद्रादीनां सकाशाद्विष्ण्वादीनामेवाप्तत्वम् । श्रुत्यनुसारित्वात्'' इति न्यायविवरणे ''परमाप्तैः'' इति टीकादौ चोक्तः ।**

ಬಾಧವೂ ಕೂಡ 'ನಿತರಾಂ ಸರ್ವಜ್ಞೈಃ' ಎಂಬ ಭಾಷ್ಯದಲ್ಲಿ ವಿಷ್ಣುವಿಗೆ ಹೆಚ್ಚಿನ ಸಾರ್ವಜ್ಞವನ್ನು ಹೇಳಿದ್ದರಿಂದ 'ರುದ್ರಾದೀನಾಂ ಸಕಾಶಾತ್ ವಿಷ್ಣ್ವಾದೀನಾಮೇವಾಪ್ತತ್ವಮ್ । ಶ್ರುತ್ಯನುಸಾರಿತ್ವಾತ್' 'ರುದ್ರಾದಿಗಳಿಗಿಂತಲೂ ವಿಷ್ಣುವೇ ಹೆಚ್ಚು ಆಪ್ತನಾಗಿದ್ದಾನೆ ಶ್ರುತ್ಯನುಸಾರಿಯಾದ್ದರಿಂದ' ಎಂಬುದಾಗಿ ನ್ಯಾಯವಿವರಣದಲ್ಲಿ ಪರಮಾಪ್ತತ್ವವನ್ನು ವಿಷ್ಣುವಿಗೆ ಹೇಳಿದ್ದರಿಂದ, ಮತ್ತು ಟೀಕಾದಿಗಳಲ್ಲಿಯೂ 'ಪರಮಾಪ್ತೈಃ' ಎಂದು ಹೇಳಿರುವುದರಿಂದ ತಿಳಿಯುತ್ತದೆ. ಹೀಗೆ ಗ್ರಂಥಕಾರರು ಹೇಳಿದ ಬಾಧದೋಷಕ್ಕೆ ಭಾಷ್ಯ-ಟೀಕಾದಿಗಳ ಸಂವಾದವಿದೆ.

**अतिबाधस्तु ''श्रुतेराधिक्यं सिध्यति'' इति भाष्ये ''सुतरां तत्साहाय्यवत्या श्रुत्या'' इत्यादिटीकादौ चोक्तः ।**

ಅತಿಬಾಧವೂ ಕೂಡ ಭಾಷ್ಯಾದಿಗಳಿಗೆ ಸಮ್ಮತವೇ ಆಗಿದೆ. 'ಶ್ರುತೇರಾಧಿಕ್ಯಂ ಸಿಧ್ಯತಿ' ಸ್ಮೃತಿಗಳಿಗಿಂತಲೂ ಶ್ರುತಿಯೇ ಪ್ರಬಲವಾಗುತ್ತದೆ ಎಂಬುದು ಭಾಷ್ಯದ ಮಾತು. 'ಸುತರಾಂ ತತ್ ಸಾಹಾಯ್ಯವತ್ಯಾ ಶ್ರುತ್ಯಾ' 'ಸ್ಮೃತಿಗಳ ಸಹಾಯವಿರುವ ಶ್ರುತಿಗಳಲ್ಲಿ ಹೆಚ್ಚಿನ ಪ್ರಾಬಲ್ಯವು ಸುತರಾಂ ಸಿದ್ಧವಾಗುತ್ತದೆ'. ಇತ್ಯಾದಿ ವಾಕ್ಯವು ಟೀಕಾದಿಗಳಲ್ಲಿ ಇರುತ್ತದೆ. ಈ ವಾಕ್ಯಗಳಿಂದ ಗ್ರಂಥಕಾರರು ಹೇಳಿದ ಬಾಧವು ಟೀಕಾದಿಗಳಿಗೆ ಸಮ್ಮತವೆಂದು ತಿಳಿಯುತ್ತದೆ.

**उत्तराधिकरणन्यायेन तु श्रुतेरनाशङ्कितदोषतया स्वत एवाधिक्यसिद्धौ शैवादिस्मृतीनामतितरां बाधः ।**

೪. ಅತ್ಯಂತ ಪ್ರಬಲವಾದ ಬಾಧದೋಷ (ಅತಿತರಾಂ ಬಾಧಃ) - ಮುಂದಿನ ನವಿಲಕ್ಷಣತ್ವಾಧಿಕರಣದಲ್ಲಿ ಶ್ರುತಿಗಳಲ್ಲಿ ದೋಷಶಂಕೆಗೆ ಅವಕಾಶವೇ ಇಲ್ಲ. ಸ್ವಾಭಾವಿಕವಾಗಿಯೇ ಪ್ರಾಮಾಣ್ಯವಿದೆಯೆಂದು ಸಮರ್ಥಿಸುತ್ತಾರೆ. ಪಂಚರಾತ್ರಾದಿಸ್ಮೃತಿಗಳ ಸಹಕಾರವೂ ಕೂಡ ಇಲ್ಲದೇ ಸ್ವತಃ ಪ್ರಬಲವಾದ ಶ್ರುತಿಗಳು ಪಾಶುಪತಾದಿಸ್ಮೃತಿಗಳನ್ನು ಅತಿತರವಾಗಿ ಬಾಧಿಸುತ್ತವೆ.

**शास्त्रयोनिसूत्रे भाष्योक्तरीत्या च ''त्वं च रुद्र महाबाहो मोहशास्त्राणि कारय'' इत्यादि वाराहे ''स्वागमैः कल्पितैस्त्वं च जनान् मद्विमुखान् कुरु'' इत्यादि पाद्मे ''पाषण्डवामशैवाद्यैर्वेदमार्गाः कलौ यथा'' इत्यादि भागवते ''शैवान् पाशुपतांश्चैव लोकायतिकनास्तिकान्'' इत्यादिस्मृतिषु च साक्षादप्रामाण्योक्तेः । तथा**

**''अन्यागमेषु विप्रत्वमपि चण्डालजन्मनाम् । मण्डलान्तःप्रवेशेन क्रमशः प्रतिपाद्यते'' इत्याद्यनुव्याख्यानोक्तरीत्या श्रुतिविरोधाद्धेतुदर्शनाच्च विरोधाधिकरण-हेतुदर्शनाधिकरणन्यायविषयत्वेनातितमां बाधः ।**

ಸ. ಎಲ್ಲಾ ರೀತಿಯಿಂದಲೂ ದುರ್ಬಲವಾದ ಶೈವಾದಿಸ್ಮೃತಿಗಳಿಗೆ ಸಂಪೂರ್ಣವಾದ ಬಾಧ (ಅತಿತಮಾಂ ಬಾಧಃ) - ಶಾಸ್ತ್ರಯೋನಿತ್ವಾಧಿಕರಣದ ಭಾಷ್ಯದ ಮಾತುಗಳಿಂದ ಇನ್ನೂ ಅನೇಕ ಪ್ರಮಾಣಗಳಿಂದ ಪಾಶುಪತಾದಿಸ್ಮೃತಿಗಳು ಅಪ್ರಮಾಣವೆಂದು ನೇರವಾಗಿಯೇ ತಿಳಿಯುತ್ತದೆ. 'ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ' ಎಂಬ ವರಾಹಪುರಾಣದ ಮಾತಿನಿಂದ ಕೇವಲ ಮತ್ತೊಬ್ಬರನ್ನು ಮೋಹಗೊಳಿಸುವುದಕ್ಕಾಗಿಯೇ ಪಾಶುಪತಾದಿಶಾಸ್ತ್ರಗಳು ನಿರ್ಮಾಣ-ಗೊಂಡಿವೆಯೆಂದು ತಿಳಿಯುತ್ತದೆ. 'ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು' ಎಂಬ ಪದ್ಮಪುರಾಣದ ಮಾತಿನಿಂದ ವಿಷ್ಣುವಿನಿಂದ ವಿಮುಖರನ್ನಾಗಿ ಮಾಡಲು ಉದ್ದೇಶಪೂರ್ವಕವಾಗಿಯೇ ಪಾಶುಪತಾದ್ಯಾಗಮಗಳು ನಿರ್ಮಾಣಗೊಂಡಿವೆಯೆಂದು ತಿಳಿಯುತ್ತದೆ. 'ಪಾಷಂಡವಾಮಶೈವಾದ್ಯೈರ್ವೇದಮಾರ್ಗಾಃ ಕಲೌ ಯಥಾ' ಇತ್ಯಾದಿ ಭಾಗವತದ ಮಾತಿನಲ್ಲಿ ಪಾಷಂಡಮತ, ಶೈವಾದಿಮತಗಳೆಲ್ಲವೂ ವೇದವನ್ನು ನಿರಾಕರಣೆ ಮಾಡುವುದಕ್ಕಾಗಿಯೇ ಕಲಿಯುಗದಲ್ಲಿ ಹೊರಟಿರುತ್ತವೆ ಎಂದು ಹೇಳಲಾಗಿದೆ. 'ಶೈವಾನ್ ಪಾಶುಪತಾಂಶ್ಚೈವ ಲೋಕಾಯತಿಕನಾಸ್ತಿಕಾನ್' ಇತ್ಯಾದಿ ಸ್ಮೃತಿವಾಕ್ಯಗಳಲ್ಲಿಯೂ ಶೈವಮತ, ಪಾಶುಪತಮತ, ಚಾರ್ವಾಕನ ನಾಸ್ತಿಕಮತ ಇವೆಲ್ಲವೂ ಅಪ್ರಮಾಣವಾಗಿವೆಯೆಂದು ಸ್ಪಷ್ಟವಾಗಿಯೇ ಹೇಳಿದ್ದಾರೆ. ಇದರಂತೆ 'ಅನ್ಯಾಗಮೇಷು ವಿಪ್ರತ್ವಮಪಿ ಚಂಡಾಲಜನ್ಮನಾಮ್ । ಮಂಡಲಾಂತಃಪ್ರವೇಶೇನ ಕ್ರಮಶಃ ಪ್ರತಿಪಾದ್ಯತೇ' ಎಂಬ ಅನುವ್ಯಾಖ್ಯಾನದಲ್ಲಿ ಕೇವಲ ಮಂಡಲಪ್ರವೇಶದಿಂದ ಬ್ರಾಹ್ಮಣ್ಯವು ಬರುತ್ತದೆಂಬ ಪಾಶುಪತಸ್ಮೃತಿಗೆ ಶ್ರುತಿವಿರೋಧ ಬರುತ್ತದೆಂಬ ಕಾರಣವನ್ನು ನೀಡಿರುತ್ತಾರೆ. ಪೂರ್ವಮೀಮಾಂಸೆಯ ವಿರೋಧಾಧಿಕರಣನ್ಯಾಯದಿಂದ ಮತ್ತು ಹೇತುದರ್ಶನಾಧಿಕರಣದ ನ್ಯಾಯದಿಂದ ಪಾಶುಪತಾದಿಸ್ಮೃತಿಗಳಿಗೆ ಅತಿತಮವಾದ ಬಾಧವು. (ಇದಕ್ಕಿಂತ ಬಾಧದೋಷವನ್ನು ಹೇಳಲು ಸಾಧ್ಯವೇ ಇಲ್ಲ ಎಂದಭಿಪ್ರಾಯ.)

**प्रकाशः —**

अत्र सिद्धान्तटीकायामवैदिकस्मृतेर्बाधादिति बाधमात्रोक्तिप्रतीतावप्यन्यत्रोक्तं प्रतिरोधपक्षमुपलक्षणत्वेनोपादाय सिद्धान्तप्रमेयं सङ्गृह्णाह – **प्रतिरुन्ध इति ।।**

ಸಿದ್ಧಾಂತಟೀಕೆಯ ಅಭಿಪ್ರಾಯವನ್ನು ವರ್ಣಿಸುತ್ತಿದ್ದಾರೆ. ವಾಸ್ತವಿಕವಾಗಿ ಸಿದ್ಧಾಂತಟೀಕೆಯಲ್ಲಿ 'ಅವೈದಿಕ ಶ್ರುತೇಃ ಬಾಧಾತ್' ಅವೈದಿಕಶ್ರುತಿಗಳಿಗೆ ಬಾಧ ಬರುವುದರಿಂದ' ಎಂಬುದಾಗಿ ಬಾಧಮಾತ್ರವನ್ನು ಹೇಳಿದ್ದು

ಕಾಣಿಸುತ್ತದೆ. ಆದರೂ ಬೇರೆಡೆ ಹೇಳಲ್ಪಟ್ಟ ಪ್ರತಿರೋಧಪಕ್ಷವನ್ನು ಉಪಲಕ್ಷಣವನ್ನಾಗಿ ತಿಳಿದು, ಸಿದ್ಧಾಂತಪ್ರಮೇಯವನ್ನು ಗ್ರಂಥಕಾರರು ಸಂಗ್ರಹಿಸುತ್ತಿದ್ದಾರೆ 'ಪ್ರತಿರುಂಧೇ' ಎಂಬ ಶ್ಲೋಕದಿಂದ.

**प्रकाशः – श्लोकं व्याचष्टे – आपातत इति ।। श्रौतेति ।।** श्रुत्यनुसारिणी पञ्चरात्रादिस्मृतिरित्यर्थः । एतेन ''श्रौतस्मृतिविरुद्धत्वात्'' इत्यणुभाष्यसंवादः प्रतिरोधपक्षे सूचितो भवति ।।

ಶ್ಲೋಕವನ್ನು ಸ್ವತಃ ವ್ಯಾಖ್ಯಾನ ಮಾಡುತ್ತಿದ್ದಾರೆ 'ಆಪಾತತಃ' ಇತ್ಯಾದಿ ವಾಕ್ಯದಿಂದ. 'ಶ್ರೌತಸ್ಮೃತಿಃ' ಎಂದರೆ ಶ್ರುತಿಗೆ ಅನುಸಾರಿಯಾದ ಪಂಚರಾತ್ರಾದಿಸ್ಮೃತಿಗಳು ಎಂದರ್ಥ. 'ಶ್ರೌತಸ್ಮೃತಿಃ' ಎಂಬ ಪದವನ್ನು ಬಳಸಿದ್ದರಿಂದ 'ಶ್ರೌತಸ್ಮೃತಿವಿರುದ್ಧತ್ವಾತ್' ಪಾಶುಪತಾದಿಸ್ಮೃತಿಗಳು ಶ್ರೌತಸ್ಮೃತಿಗೆ ವಿರುದ್ಧವಾಗಿವೆ ಎಂಬ ಅಣುಭಾಷ್ಯದ ಸಂವಾದವನ್ನು ಪ್ರತಿರೋಧಪಕ್ಷದಲ್ಲಿ ಸೂಚನ ಮಾಡಿದಂತಾಯಿತು.

**प्रकाशः – नित्यमिति ।।**

नित्यं वृद्धिक्षयापेतं विष्णोः पूर्णं तु वेदनम् ।
स्पष्टातिस्पष्टविशदं ब्रह्मणोऽशेषवस्तुगम् ।
अन्येषां क्रमशो ज्ञानं मितवस्तुगतं सदा ।।

इति द्युभ्वादिपादीयानुव्याख्यानोक्तवचनेनेत्यर्थः ।।

ನಿತ್ಯಂ ವೃದ್ಧಿಕ್ಷಯಾಪೇತಂ ವಿಷ್ಣೋಃ ಪೂರ್ಣಂ ಚ ವೇದನಮ್ ।
ಸ್ಪಷ್ಟಾತಿಸ್ಪಷ್ಟವಿಶದಂ ಬ್ರಹ್ಮಣೋऽಶೇಷವಸ್ತುಗಮ್ ।
ಅನ್ಯೇಷಾಂ ಕ್ರಮಶೋ ಜ್ಞಾನಂ ಮಿತವಸ್ತುಗತಂ ಸದಾ ॥

ಯಾವ ಕಾಲದಲ್ಲಿಯೂ ವೃದ್ಧಿಕ್ಷಯಗಳಿಲ್ಲದ ವಿಷ್ಣುವಿನ ಜ್ಞಾನವು ಪರಿಪೂರ್ಣವಾದದ್ದು. ಸಕಲವಸ್ತುವಿಷಯಗಳಲ್ಲಿ ಅತ್ಯಂತ ಸ್ಪಷ್ಟ ಜ್ಞಾನವು ಚತುರ್ಮುಖನದ್ದು. ಉಳಿದವರ ಜ್ಞಾನ ಕ್ರಮವಾಗಿ ಕಡಿಮೆಯಾಗುತ್ತದೆ ಎಂಬುದಾಗಿ ದ್ಯುಭ್ವಾದ್ಯಧಿಕರಣದ ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ.

**प्रकाशः – टीकादाविति ।।** आदिपदेन सुधायामिति गृह्यते ।। **भाष्योक्तरीत्येति।।** ''अतोऽन्यो ग्रन्थविस्तारो नैव शास्त्रं कुवर्त्म तत् । साङ्ख्यं योगः पाशुपतं वेदारण्यकमेव चेत्यारभ्य'' इत्यादिनोक्तरीत्या साक्षादप्रामाण्योक्तेरित्यन्वयः ।।

'ಟೀಕಾದೌ' ಎಂಬಲ್ಲಿರುವ ಆದಿಪದದಿಂದ ನ್ಯಾಯಸುಧೆಯಲ್ಲಿ ಹೇಳಿದ್ದನ್ನು ವಿವಕ್ಷಿಸಬೇಕು. 'ಭಾಷ್ಯೋಕ್ತರೀತ್ಯಾ' ಎಂದರೆ. 'ಅತೋऽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್ । ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ' ಎಂಬಲ್ಲಿಂದ ಪ್ರಾರಂಭಿಸಿ ಶೈವಾದಿಸ್ಮೃತಿಗಳಿಗೆ ನೇರವಾಗಿ ಅಪ್ರಾಮಾಣ್ಯವನ್ನು ಹೇಳಿರುತ್ತಾರೆ.

**प्रकाशः – वाराह इति** ।। जिज्ञासासूत्रभाष्योक्तमेतत् ।। **पाद्म इति** ।। प्रथमभारततात्पर्यनिर्णयोक्तमेतत् ।। **भागवत इति** ।। दशमस्कन्धे वर्षर्तुवर्णनप्रस्तावे ''जलौघैर्निरभिद्यन्त सेतवो वर्षतीश्वरे ।'' पाषण्डेति पूर्वशेषः ।। **इत्यादिस्मृतिष्विति**।। तत्र तत्र मूलग्रन्थोक्तासु । रागादिदोषप्रदर्शनाय ''अन्यागमेषु विप्रत्वम्'' इत्युदाहरणम् । तदर्थस्सुधायां व्यक्तः । हेतुदर्शनात् रागादिरूपहेतुदर्शन च्चेत्यर्थः ।। **हेतुदर्शनाधिकरणेति** ।। विवृतमेतत्समाकर्षनये ।

'ವಾರಾಹೇ' ಎಂದರೆ ಜಿಜ್ಞಾಸಾಧಿಕರಣದ ಸೂತ್ರಭಾಷ್ಯದಲ್ಲಿ ವರಾಹಪುರಾಣದ ಮಾತನ್ನು ಉಲ್ಲೇಖಿಸಿದ್ದಾರೆ. 'ಪಾದ್ಮೇ' ಎಂಬಲ್ಲಿ ಹೇಳಲ್ಪಟ್ಟ ಪದ್ಮಪುರಾಣದ ವಚನವು ಮಹಾಭಾರತ ತಾತ್ಪರ್ಯನಿರ್ಣಯದ ಪ್ರಥಮಾಧ್ಯಾಯದಲ್ಲಿ ಉಲ್ಲೇಖಿಸಿದ್ದಾರೆ. 'ಭಾಗವತೇ' ಎಂದರೆ ದಶಮಸ್ಕಂಧದಲ್ಲಿ ವರ್ಷಋತುವನ್ನು ವರ್ಣನೆ ಮಾಡುವ ಪ್ರಸ್ತಾವದಲ್ಲಿ ಹೇಳಿರುತ್ತಾರೆ -

ಪಾಷಂಡವಾಮಶೈವಾದ್ಯೈರ್ವೇದಮಾರ್ಗಾಃ ಕಲೌ ಯಥಾ ।
ಜಲೌಘೈರ್ನಿರಭಿದ್ಯಂತೇ ಸೇತವೋ ವರ್ಷತೀಶ್ವರೇ ॥

ಕಲಿಯುಗದಲ್ಲಿ ಪಾಷಂಡಮತ ಶೈವಾದಿಗಳ ಮತವು ಹೇಗೆ ಧರ್ಮವನ್ನು ಸಂಪೂರ್ಣವಾಗಿ ನಾಶ ಮಾಡುತ್ತವೋ, ಅದೇ ರೀತಿಯಾಗಿ ವರ್ಷಋತುವಿನಲ್ಲಿ ದಟ್ಟವಾದ ಮೋಡದಿಂದ ಸುರಿದ ಮಳೆಯ ನೀರು ಗದ್ದೆಯ ಬದಿಯನ್ನು ನಿರ್ಮೂಲಗೊಳಿಸುತ್ತವೆ. 'ಇತ್ಯಾದಿಸ್ಮೃತಿಷು' ಎಂದರೆ ಆಯಾ ಶ್ರುತಿಗ್ರಂಥಗಳಲ್ಲಿ ಹೇಳಿದಂತೆ ಎಂದರ್ಥ. ರಾಗಾದಿದೋಷಗಳನ್ನು ತೋರಿಸಲು 'ಅನ್ಯಾಗಮೇಷು ವಿಪ್ರತ್ವಮ್' ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ. ಅದರ ಅರ್ಥವನ್ನು ನ್ಯಾಯಸುಧೆಯಲ್ಲಿಯೇ ಸ್ಪಷ್ಟಪಡಿಸಿದ್ದಾರೆ. 'ಹೇತುದರ್ಶನಾತ್' ಎಂದರೆ ರಾಗಾದಿಗಳೆಂಬ ಹೇತು ರುದ್ರಾದಿಗಳಲ್ಲಿರುವುದರಿಂದ ಹೇತುದರ್ಶನಾಧಿ ಕರಣವನ್ನು ಈ ಹಿಂದೆ ಸಮಕರ್ಷಾಧಿಕರಣದಲ್ಲಿ ವಿವರಿಸಿದ್ದಾಗಿದೆ.




ಪ್ರತಿರುಂಧೇ ಸ್ಮೃತಿಸ್ತಾವತ್ ಪರಾಮರ್ಶೇ ತು ಬಾಧತೇ ।
ಶ್ರುತಿಃ ಸಸ್ಮೃತಿಕಾಽತ್ಯಂತಂ ಬಾಧತೇಽನ್ಯಸ್ಮೃತೀಃ ಪುನಃ ॥

ಪಾಶುಪತಾದಿ ಸ್ಮೃತಿಗಳನ್ನು ಪಂಚರಾತ್ರಾದಿ ಸ್ಮೃತಿಗಳು ಆಪಾತತಃ ಪ್ರತಿರೋಧ ಮಾಡುತ್ತದೆ. ಸ್ವಲ್ಪ ವಿಮರ್ಶೆ ಮಾಡಿದರೆ, ಪಂಚರಾತ್ರಾದಿ ಸ್ಮೃತಿಗಳು ಪಾಶುಪತಾದಿ ಸ್ಮೃತಿಗಳನ್ನು ಬಾಧಿಸುತ್ತದೆ. ಅದೇ ಪಂಚರಾತ್ರಾದಿ ಸ್ಮೃತಿಗಳು ಅಪೌರುಷೇಯವಾದ ಶ್ರುತಿಗಳ ಬೆಂಬಲ ಪಡೆದಾಗ ಸರ್ವಾತ್ಮನಾ ಪಾಶುಪತಾದಿಸ್ಮೃತಿಗಳನ್ನು ಬಾಧಿಸುತ್ತದೆ.

ಸ್ಮೃತ್ಯಧಿಕರಣ (೨-೧-೧)

ಆಪಾತತಃ ನೋಡಿದರೆ ಶೈವಸ್ಮೃತಿಗಳು ಹೇಗೋ, ಆದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಸ್ಪಷ್ಟವಾಗಿಯೇ ವಿಷಯಗಳನ್ನು ಪ್ರತಿಪಾದನೆ ಮಾಡುತ್ತಿವೆ. ಸರ್ವಜ್ಞನಾದ ವಿಷ್ಣುವಿನಿಂದಲೇ ರಚಿತವಾಗಿವೆ. ಆದ್ದರಿಂದ ಶೈವಾದಿಸ್ಮೃತಿಗಳಿಂದ ಸಮಾನಬಲವನ್ನು ಹೊಂದಿರುತ್ತವೆ. ಇಂತಹ ಪಂಚರಾತ್ರಾದಿಸ್ಮೃತಿಗಳಿಂದ ಶೈವಾದಿಸ್ಮೃತಿಗಳು ಪ್ರತಿರುದ್ಧವಾಗುತ್ತವೆ. ಆವಾಗ ಶೈವಾದಿಸ್ಮೃತಿಗಳ ವಿರೋಧವಿಲ್ಲದ ಶ್ರುತಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆಂಬ ಸಿದ್ಧಾಂತಿಗಳ ಅಭಿಲಾಷೆಯು ಪೂರೈಸುತ್ತದೆ.

ಸ್ವಲ್ಪ ವಿಮರ್ಶೆ ಮಾಡಿದರೆ ವಿಷ್ಣುವಿನಲ್ಲಿ ರುದ್ರಾದಿಗಳಿಗಿಂತ ಹೆಚ್ಚಿನ ಸಾರ್ವಜ್ಞವಿದೆ. ವಿಷ್ಣುವಿನಿಂದ ಹೇಳಲ್ಪಟ್ಟ ಪಂಚರಾತ್ರಾದಿಸ್ಮೃತಿಗಳಿಗೆ ಶ್ರುತಿಗಳ ಸಂವಾದವೂ ಇದೆ. ರುದ್ರಾದಿಗಳಿಗಿಂತಲೂ ವಿಷ್ಣು ಹೆಚ್ಚು ಆಪ್ತನೆಂದು ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಶೈವಾದಿಸ್ಮೃತಿಗಳಿಗಿಂತಲೂ ಪಂಚರಾತ್ರಾದಿಸ್ಮೃತಿಗಳೇ ಪ್ರಬಲ ಎನಿಸುತ್ತವೆ. ಯುಕ್ತಿಯ ಸಂವಾದವಿಲ್ಲದೇ ಸುಮ್ಮನೆ ವಾಕ್ಯ ಪ್ರಯೋಗವನ್ನು ಮಾಡುವವನಿಗಿಂತಲೂ ಯುಕ್ತಿಬದ್ಧವಾಗಿ ಅರ್ಥಪೂರ್ಣವಾದ ವಾಕ್ಯಗಳನ್ನು ರಚನೆ ಮಾಡುವವನು ಹೇಗೆ ಬಲಿಷ್ಠನೋ ? ಆದರಂತೆ ಶ್ರುತಿಗಳ ಸಂವಾದವಿರುವ ಅರ್ಥಪೂರ್ಣವಾದ ಪಂಚರಾತ್ರಾದಿಸ್ಮೃತಿಗಳು ಬಲಿಷ್ಠವಾಗುತ್ತವೆ.

ಇನ್ನೂ ಹೆಚ್ಚು ವಿಮರ್ಶೆ ಮಾಡಿದರೆ ಶೈವಾದಿಸ್ಮೃತಿಗಳು ಶ್ರುತಿಗಳಿಂದಲೇ ಅತ್ಯಂತವಾಗಿ ಬಾಧಿತವಾಗುತ್ತವೆ. ಏಕೆಂದರೆ ಶೈವಾದಿಸ್ಮೃತಿಗಳಂತೆ ಸಮಾನಬಲಹೊಂದಿರುವ ಅಥವಾ ಹೆಚ್ಚು ಬಲಹೊಂದಿರುವ ಪಂಚರಾತ್ರಾದಿಸ್ಮೃತಿಗಳ ಬೆಂಬಲ ಶ್ರುತಿಗಳಿಗಿದೆ. ಕೇವಲ ಶ್ರುತಿಯು ಪೂರ್ವಪಕ್ಷಿಗಳು ಹೇಳುವಂತೆ ದುರ್ಬಲವಾಗಿರಬಹುದು. ಆದರೆ ಪಂಚರಾತ್ರಾದಿ ಸ್ಮೃತಿಗಳಿಂದ ಸಹಿತವಾದ ಶ್ರುತಿಯು ಬಹಳ ಬಲಿಷ್ಠವಾಗುತ್ತದೆ. ಕುದುರೆಯನ್ನು ಎದುರಿಸಲು ಕೇವಲ ಕಾಲಾಳುವಿಗೆ ಸಾಧ್ಯವಾಗದಿರಬಹುದು. ಆದರೆ ಮತ್ತೊಂದು ಕುದುರೆಯ ಮೇಲೆ, ಅಥವಾ ಆನೆಯ ಮೇಲೆ ಕುಳಿತಾಗ ಅದೇ ಕಾಲಾಳುವಿಗೆ ಹೆಚ್ಚಿನ ಬಲ ಬರುವಂತೆ ಶ್ರುತಿಗಳಿಗೂ ಪಾಶುಪತಾದಿಸ್ಮೃತಿಗಳಿಗಿಂತ ಹೆಚ್ಚಿನ ಬಲವಿರುತ್ತದೆ.

ಅಥವಾ ಮುಂದೆ ನವಿಲಕ್ಷಣತ್ವಾಧಿಕರಣದಲ್ಲಿ ಯಾವುದೇ ದೋಷಗಳ ಆಶಂಕೆಯಿಲ್ಲದ ಶ್ರುತಿಗಳು ಸಹಜವಾಗಿ ಪ್ರಬಲವಾಗಿರುತ್ತವೆಂದು ಸಮರ್ಥಿಸುತ್ತಾರೆ. ಅದನ್ನು ವಿವಕ್ಷಿಸಿದಾಗ ಪಾಶುಪತಾದಿಸ್ಮೃತಿಗಳಿಗೆ ಇನ್ನೂ ಹೆಚ್ಚಿನ ಬಾಧದೋಷವು ಬರುತ್ತದೆ. ಅಥವಾ ಅನೇಕ ಪ್ರಮಾಣಗಳಿಂದ ಶೈವಾದಿಸ್ಮೃತಿಗಳೆಲ್ಲವೂ ಅಪ್ರಮಾಣವಾಗಿವೆ ಎಂದು ನೇರವಾಗಿಯೇ ತೀರ್ಮಾನವಾಗುತ್ತಿದೆ. 'ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ' ಇತ್ಯಾದಿ ವಾಕ್ಯವನ್ನು ಗಮನಿಸಿದಾಗ ಕೇವಲ ದುರ್ಜನರಿಗೆ ದಿಕ್ಕು ತಪ್ಪಿಸುವುದಕ್ಕಾಗಿಯೇ ಶೈವಾದಿಸ್ಮೃತಿಗಳು ರಚಿತವಾಗಿವೆ ಎಂದು ತಿಳಿಯುವುದರಿಂದ ಸ್ವತಃ ಅಪ್ರಮಾಣಗಳಾಗಿವೆ. ಇಂತಹ ಶೈವಾದಿಸ್ಮೃತಿಗಳಿಗೆ ಯಾವುದೇ ರೀತಿಯಲ್ಲಿಯೂ ಪ್ರಾಬಲ್ಯ ಬರಲು ಸಾಧ್ಯವಿಲ್ಲ. ಹೊರತಾಗಿ ಅತಿತಮವಾದ ಬಾಧದೋಷವೇ ಬರುತ್ತದೆ.

## तात्पर्यचन्द्रिका

**शास्त्रयोनिसूत्रेणास्यागतार्थत्वं त्वस्माभिस्तत्रैवोक्तम् । पञ्चरात्रप्रामाण्यं तु शास्त्रयोनिसूत्रे भाष्य एवोक्तम् । वक्ष्यते च ''उत्पत्त्यसम्भवात्'' इत्यत्र ।**

ಸ್ಮೃತ್ಯಧಿಕರಣವು ಶಾಸ್ತ್ರಯೋನಿತ್ವಾಧಿಕರಣದಿಂದ ಗತಾರ್ಥವಾಗಿದೆ ಎಂಬ ಆಕ್ಷೇಪವನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿಯೇ ನಾವು ಪರಿಹರಿಸಿದ್ದೇವೆ. ಪಂಚರಾತ್ರಸ್ಮೃತಿಯ ಪ್ರಾಮಾಣ್ಯವನ್ನೂ ಕೂಡ ಶಾಸ್ತ್ರಯೋನಿತ್ವಾಧಿಕರಣದ ಭಾಷ್ಯದಲ್ಲಿಯೇ ಸಮರ್ಥಿಸಿದ್ದಾರೆ. 'ಉತ್ಪತ್ತ್ಯಸಂಭವಾತ್' ಎಂಬ ಮುಂದಿನ ಅಧಿಕರಣದಲ್ಲಿಯೂ ಪಂಚರಾತ್ರಪ್ರಾಮಾಣ್ಯವನ್ನು ಸಮರ್ಥಿಸುವವರಿದ್ದಾರೆ.

**नच रुद्रादेराप्तत्वे मानमस्ति । बुद्धादिसार्वज्ञादावपि बहुजनप्रसिद्धेः सत्त्वात् । सर्वेऽपि हि तस्य तस्याचार्यस्य सार्वज्ञादिकमाहुः ।**

ರುದ್ರಾದಿಗಳು ಆಪ್ತರಾಗಿದ್ದಾರೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿರುವುದಿಲ್ಲ. ಬಹುಜನಪ್ರಸಿದ್ಧಿಯನ್ನು ಪ್ರಮಾಣವೆನ್ನಬೇಕು. ಆದರೆ ಬೌದ್ಧರ ಅನುಯಾಯಿಗಳು ಆರ್ಹತರ ಅನುಯಾಯಿಗಳೂ ಕೂಡ ಬಹಳ ಮಂದಿ ಇರುವುದರಿಂದ ಅವರವರ ಮೂಲಪುರುಷರಾದ ಆಚಾರ್ಯರನ್ನು ಆಯಾ ಪಂಥಾನುಯಾಯಿಗಳು ಸರ್ವಜ್ಞರೆಂದೇ ಕರೆಯುತ್ತಾರೆ.

**सार्वजनीनप्रसिद्धिस्तु न शिवादावपि । बहुजनपरिग्रहोऽप्युभयत्र समः ।**

ಬಹುಜನಪ್ರಸಿದ್ಧವಿದ್ದರೆ ಸಾಲದು, ಸಕಲ ಜನರು ಸರ್ವಜ್ಞರೆಂದು ಒಪ್ಪಿಕೊಳ್ಳಬೇಕು. ಬುದ್ಧಾದಿಗಳನ್ನು ಸಕಲರು ಸರ್ವಜ್ಞರೆಂದು ಒಪ್ಪುವುದಿಲ್ಲವೆಂದು ಶೈವರು ಉತ್ತರಿಸಿದರೆ ಶೈವರ ಪಕ್ಷದಲ್ಲಿಯೂ ಅದು ಸಮಾನ. ಏಕೆಂದರೆ ವೈಷ್ಣವರು ಶಿವನನ್ನು ಸರ್ವಜ್ಞನೆಂದು ಒಪ್ಪುವುದೇ ಇಲ್ಲ. ಹೀಗೆ ಬಹುಜನಪರಿಗೃಹೀತತ್ವ ಎರಡೂ ಕಡೆ ಸಮಾನವಾಗಿದೆ.

**नच परस्परविरुद्धाः शैवादिस्मृतयः सर्वा अपि प्रमाणम् । न चेयमेव प्रमाणं नान्येत्यत्र हेतुरस्ति ।**

ಪರಸ್ಪರ ವಿರುದ್ಧವಾದ ಶೈವಾದಿಸ್ಮೃತಿಗಳೆಲ್ಲವೂ ಸಂಪೂರ್ಣವಾಗಿ ಪ್ರಮಾಣವೆಂದು ಹೇಳಲಾಗದು. ಮತ್ತು ಆ ಸ್ಮೃತಿಗಳಲ್ಲಿ ಕೆಲವು ಭಾಗ ಮಾತ್ರ ಪ್ರಮಾಣ. ಕೆಲವು ಅಪ್ರಮಾಣ ಎಂಬ ವಿಷಯದಲ್ಲಿ ಯಾವುದೇ ಹೇತು ಇರುವುದಿಲ್ಲ.

**नच शैवाद्युक्तदृष्टार्थकर्मानुष्ठाने फलसंवादाच्छिवादेराप्तसिद्धिः । कचित् तदुक्तदृष्टार्थकर्मानुष्ठानेऽपि फलस्य विसंवादात् ।**

ಶಿವಾದಿಗಳು ಶೈವಾದಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಕೆಲವು ದೃಷ್ಟಫಲಕವಾದ ಕರ್ಮಗಳನ್ನು ಅನುಷ್ಠಾನ ಮಾಡಿದಾಗ ಫಲವು ದೊರೆಯುವುದು ಕಂಡಿರುತ್ತದೆ. ಆ ಫಲಸಂವಾದದಿಂದ ಶಿವಾದಿಗಳು ಆಪ್ತರೆಂದು ಸಿದ್ಧವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಕೆಲವೆಡೆ ದೃಷ್ಟಫಲಕವಾದ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲಗಳು ದೊರೆಯುತ್ತಿಲ್ಲ. ಆದ್ದರಿಂದ ಫಲದ ಸಂವಾದದಿಂದ ನೀವು ಶಿವಾದಿಗಳನ್ನು ಆಪ್ತರೆಂದು ಸಾಧಿಸಿದರೆ ನಾವು ಫಲದ ವಿಸಂವಾದದಿಂದ ಶೈವಶಾಸ್ತ್ರಗಳು ಅಪ್ರಮಾಣವೆಂದು ಸಾಧಿಸುತ್ತೇವೆ.

**प्रामाण्यस्य हेत्वन्तरेण सिद्धावेव च वैगुण्यनिमित्तकता विसंवादस्य । नतु संवादेनैव सिद्धौ । अन्योन्याश्रयात् ।**

ಶೈವಾದಿ ಶಾಸ್ತ್ರಗಳಿಗೆ ಬೇರೆ ಹೇತುವಿನಿಂದ ಪ್ರಾಮಾಣ್ಯವು ಸಿದ್ಧವಾದರೆ ಮಾತ್ರ ಫಲದ ವಿಸಂವಾದಕ್ಕೆ ಕರ್ತೃವೈಗುಣ್ಯವನ್ನೇ ನಿಮಿತ್ತವೆಂದು ಸಾಧಿಸಬಹುದು. ಹೊರತು, ಫಲಸಂವಾದದಿಂದ ಪ್ರಾಮಾಣ್ಯವು ಸಿದ್ಧವಾದ ಮಾತ್ರಕ್ಕೆ ಫಲವಿಸಂವಾದಕ್ಕೆ ಕರ್ತೃವೈಗುಣ್ಯವನ್ನು ನಿಮಿತ್ತವೆಂದು ಹೇಳಲಾಗದು. ಹಾಗೇ ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಫಲಸಂವಾದದಿಂದ ಪ್ರಾಮಾಣ್ಯವು ಸಿದ್ಧವಾದರೆ ವಿಸಂವಾದಕ್ಕೆ ಕರ್ತೃವೈಗುಣ್ಯವೇ ನಿಮಿತ್ತವೆಂದು ಸಿದ್ಧವಾಗುತ್ತದೆ. ವಿಸಂವಾದಕ್ಕೆ ಕರ್ತೃವೈಗುಣ್ಯವೇ ನಿಮಿತ್ತವೆಂದು ಸಿದ್ಧವಾದರೆ ಮಾತ್ರ ಫಲಸಂವಾದದಿಂದ ಪ್ರಾಮಾಣ್ಯವು ಸಿದ್ಧವಾಗುತ್ತಿದೆ.

**कचित्संवादस्तु काकतालीयः । लोकव्यामोहनाय गुडजिह्विका वा ।**

ಕೆಲವೆಡೆ ಸಂವಾದವಿರಬಹುದು. ಆದರೆ ಅದು ಕೇವಲ ಕಾಕತಾಳಿಯ. ಅಥವಾ ಲೋಕವ್ಯಾಮೋಹನಕ್ಕಾಗಿ ಗುಡಜಿಹ್ವಿಕೆಯಂತೆ ರುಚಿ ತೋರಿಸಲು ಅಂತಹ ಫಲಗಳನ್ನು ಹೇಳಿರುತ್ತಾರೆ.

**श्रुतेस्तदनुसारिस्मृतेश्चापौरुषेयत्वादिना प्रामाण्ये सिद्धे विसंवादो वैगुण्यादिनैवेत्युत्तराधिकरणे वक्ष्यत इति ।। प्रत्यक्षयोग्यत्वमितरेषामित्यनेनोच्यत इति ।।**

ಶ್ರುತಿಗಾಗಲಿ, ಅಥವಾ ಶ್ರುತಿಗೆ ಅನುಸಾರಿಯಾದ ಸ್ಮೃತಿಗಾಗಲೀ ಅಪೌರುಷೇಯತ್ವದಿಂದ ಪ್ರಾಮಾಣ್ಯವು ಸಿದ್ಧವಾದ ಮೇಲೆ ವಿಸಂವಾದವು ಕರ್ತೃವೈಗುಣ್ಯನಿಮಿತ್ತಕವೆಂದು ನಾವು ಮುಂದಿನ ಅಧಿಕರಣದಲ್ಲಿ ಸಮರ್ಥಿಸುತ್ತೇವೆ. 'ಪ್ರತ್ಯಕ್ಷಯೋಗ್ಯತ್ವಮಿತರೇಷಾಮ್' ಎಂಬುದರಿಂದ ಸಮರ್ಥಿಸಲಾಗುತ್ತದೆ.

**न विद्यत उपलब्धिर्यस्यासावनुपलब्धिरुपलब्ध्ययोग्यः । तस्मादितरेषां उपलब्धियोग्यानां फलानाम् । अनुपलब्धेः अनुपलम्भादित्येवं सौत्रानुपलब्धिशब्दः काकाक्षिवदुभयत्रान्वेतीति भावः ।**

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿರುವ 'ಅನುಪಲಬ್ಧೇಃ' ಎಂಬ ಶಬ್ದಕ್ಕೆ 'ನ ವಿದ್ಯತೇ ಉಪಲಬ್ಧಿಃ ಯಸ್ಯಾಸೌ' ಎಂಬ ನಿಷ್ಪತ್ತಿಯನ್ನು ಮಾಡಿ, ಉಪಲಬ್ಧಿಗೆ ಅಯೋಗ್ಯವಾದ ಪುರುಷಾರ್ಥವೆಂದು ಅರ್ಥೈಸಬೇಕು. 'ಉಪಲಬ್ಧಿ' ಎಂದರೆ ಅಂತಹ ಪುರುಷಾರ್ಥಕ್ಕಿಂತ ಭಿನ್ನವಾದ ಉಪಲಬ್ಧಿಗೆ ಯೋಗ್ಯವಾದ ಫಲಗಳು ಎಂದರ್ಥ. 'ಅನುಪಲಬ್ಧೇಃ' ಅನುಪಲಂಭವಾಗಿರುವುದರಿಂದ ಎಂದು ಸೂತ್ರಾರ್ಥ. ಹೀಗೆ ಸೂತ್ರದಲ್ಲಿರುವ ಅನುಪಲಬ್ಧಿ ಶಬ್ದವು ಕಾಕಾಕ್ಷಿನ್ಯಾಯದಿಂದ ಎರಡೂ ಕಡೆಯೂ ಅನ್ವಯವನ್ನು ಪಡೆಯುತ್ತದೆ.

**अथवा पूर्वसूत्रे यस्मिन् प्रत्यक्षायोग्ये जगत्कारणत्वादौ स्मृतिविरोधः शङ्कितस्तदितरेषां प्रत्यक्षयोग्यानामनुपलब्धेरिति सूत्रार्थः । कथमन्यथाऽनुपलब्धि-मात्रेणासत्त्वसिद्धिरिति भावः ।**

ಅಥವಾ ಹಿಂದಿನ ಸೂತ್ರದಲ್ಲಿ ಯಾವ ಪ್ರತ್ಯಕ್ಷಾಯೋಗ್ಯವಾದ ಜಗತ್ಕಾರಣತ್ವಾದಿ ವಿಷಯದಲ್ಲಿ ಸ್ಮೃತಿವಿರೋಧವನ್ನು ಆಶಂಕಿಸಲಾಯಿತೋ, ಅದಕ್ಕಿಂತ ಭಿನ್ನವಾದ ಪ್ರತ್ಯಕ್ಷಯೋಗ್ಯವಾದ ವಿಷಯದಲ್ಲಿ ಫಲಗಳು ಅನುಪಲಬ್ಧವಾಗಿರುವುದರಿಂದ ಎಂಬರ್ಥವನ್ನು ತಿಳಿಯಬಹುದು. 'ಇತರೇಷಾಂ' = ಜಗತ್ಕಾರಣತ್ವಾದಿಗಳಿಗಿಂತ ಭಿನ್ನವಾದ ಪ್ರತ್ಯಕ್ಷಯೋಗ್ಯವಾದ 'ಅನುಪಲಬ್ಧೇಃ' = ಫಲಗಳು ದೊರೆಯದೇ ಇರುವುದರಿಂದ ಎಂದು ಸೂತ್ರಾರ್ಥ. ಹೀಗೊಪ್ಪದಿದ್ದರೆ ಕೇವಲ ಅನುಪಲಬ್ಧಿ ಮಾತ್ರದಿಂದ ಅಸತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಅತೀಂದ್ರಿಯವಿಷಯವನ್ನು ಬಿಟ್ಟು, ಪತ್ಯಕ್ಷಯೋಗ್ಯವಾದ ವಿಷಯದಲ್ಲಿಯೂ ಅನುಪಲಬ್ಧವಿದೆಯೆಂದು ಹೇಳಿದಾಗ ಅಪ್ರಾಮಾಣ್ಯವು ಸಿದ್ಧವಾಗುತ್ತದೆ.

**''एतेन'' इति सूत्रातिदेशोपयुक्तामधिकां शङ्कां दर्शयति – न तथापीत्यादिना।।**

'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಕೊನೆಯ ಸೂತ್ರದಲ್ಲಿ 'ಏತೇನ' ಎಂಬ ಪದದಿಂದ ಅತಿದೇಶವನ್ನು ಮಾಡಿರುತ್ತಾರೆ. ಅದಕ್ಕೆ ಕಾರಣವನ್ನು ಹೇಳಲು ಮೊದಲು ಅಧಿಕಾಶಂಕೆಯನ್ನು 'ನ ತಥಾಪಿ' ಇತ್ಯಾದಿ ಟೀಕಾವಾಕ್ಯದಿಂದ ತೋರಿಸುತ್ತಿದ್ದಾರೆ.

**नचैवं परमत इवेदं सूत्रमधिकरणान्तरं स्यादिति युक्तम् । ''नान्यस्मृति'' इति सौत्रप्रधानहेतावधिकाशङ्कादेरभावात् ।**

'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರವನ್ನು ಬೇರೆ ಮತದವರು ಹೇಳುವಂತೆ ಅಧಿಕರಣಾಂತರವೆಂದು ಪರಿಗಣಿಸಬಾರದು. ಏಕೆಂದರೆ 'ನಾನ್ಯಸ್ಮೃತಿಃ' ಎಂಬ ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ ಪ್ರಧಾನಹೇತುವಿನ ಮೇಲೆ ಅಧಿಕಾಶಂಕೆಯನ್ನು ಈ ಸೂತ್ರವು ಪರಿಹರಿಸುತ್ತಿಲ್ಲ. ಪ್ರಧಾನಹೇತುವಿನ ಮೇಲೆ ಬರುವಂತಹ ಅಧಿಕಾಶಂಕೆಯನ್ನು ಪರಿಹರಿಸಲು ಅತಿದೇಶ ಮಾಡಿದಾಗ ಮಾತ್ರ ಅಧಿಕರಣಾಂತರವಾಗುತ್ತದೆ. ಆದರೆ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಅಪ್ರಮಾಣಹೇತುವಿನ ಮೇಲೆ ಬರುವಂತಹ ಅಧಿಕಾಶಂಕೆಯನ್ನು ಈ ಸೂತ್ರವು ಪರಿಹಾರ ಮಾಡುತ್ತಿರುವುದರಿಂದ ಅಧಿಕರಣಾಂತರವಾಗುವುದಿಲ್ಲ.

**आद्यसूत्रस्थस्मृतिशब्देन योगस्मृतेरपि गृहीततयाऽधिकरणान्तरत्वायोगाच्चेति दिक् ।**

ಮತ್ತು ಪ್ರಥಮಸೂತ್ರದಲ್ಲಿರುವ ಸ್ಮೃತಿಶಬ್ದದಿಂದ ಯೋಗಸ್ಮೃತಿಯನ್ನೂ ಕೂಡ ಸ್ವೀಕರಿಸಿ, ಬಾಧದೋಷವನ್ನು ಹೇಳಿದ್ದಾರೆ. ಅದನ್ನೇ ಸಮರ್ಥಿಸಲು ಈ ಸೂತ್ರ ಹೊರಟಿರುತ್ತದೆ. ಹೀಗಿರುವಾಗ ಅಧಿಕರಣಾಂತರವೆಂದು ಹೇಳುವುದು ಅತ್ಯಂತ ಅಯುಕ್ತ. ಇದು ಕೇವಲ ದಿಕ್‌ಪ್ರದರ್ಶನ. ಇನ್ನೂ ಹೆಚ್ಚು ದೋಷಗಳನ್ನು ಸ್ವತಃ ಶಿಷ್ಯಂದಿರು ಊಹಿಸಿಕೊಳ್ಳಬೇಕು.

**प्रकाशः –**

एवमाद्यसूत्रभाष्यटीकातात्पर्यमुक्त्वा ननु कथमाप्तोक्तानामवैदिकस्मृतीनामप्रामाण्यमिति टीकोक्तशङ्कां हृदि कृत्वा द्वितीयसूत्रभाष्यटीकातात्पर्यं ''न चाप्तिनिश्चयस्तत्र शक्यते व्यभिचारत'' इत्यनुव्याख्यानसुधां हृदि कृत्वा व्यनक्ति – **नच रुद्रादेरिति ।।**

ಇಲ್ಲಿಯತನಕ ಪ್ರಥಮಸೂತ್ರ ಅದರ ಭಾಷ್ಯ, ಮತ್ತು ಟೀಕೆ ಇವುಗಳ ತಾತ್ಪರ್ಯವನ್ನು ಹೇಳಿದ್ದಾಯಿತು. ಈಗ 'ನನು ಕಥಮಾಪ್ತೋಕ್ತಾನಾಮವೈದಿಕಸ್ಮೃತೀನಾಮಪ್ರಾಮಾಣ್ಯಮ್' ಅಪ್ತೋಕ್ತವಾದ ಅವೈದಿಕಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಗೆ ಹೇಳುತ್ತೀರಿ ಎಂಬ ಟೀಕೆಯಲ್ಲಿ ಹೇಳಿದ ಆಶಂಕೆಯನ್ನು ಮನಸ್ಸಿಲ್ಲಿಟ್ಟುಕೊಂಡು ಎರಡನೆಯ ಸೂತ್ರ, ಅದರ ಭಾಷ್ಯ ಮತ್ತು ಟೀಕೆಗಳ ತಾತ್ಪರ್ಯವನ್ನು ವಿವರಿಸಲು ಹೊರಟಿದ್ದಾರೆ. ಮತ್ತು 'ನಚಾಪ್ತಿನಿಶ್ಚಯಸ್ತತ್ರ ಶಕ್ಯತೇ ವ್ಯಭಿಚಾರತಃ' ವ್ಯಭಿಚಾರದೋಷ ಬರುವುದರಿಂದ ಶೈವಾದಿಸ್ಮೃತಿಗಳಲ್ಲಿ ಆಪ್ತೋಕ್ತತ್ವವನ್ನು ನಿಶ್ಚಯಿಸಲಾಗದು ಎಂಬ ಅನುವ್ಯಾಖ್ಯಾನ, ಅದರ ನ್ಯಾಯಸುಧೆಯಲ್ಲಿ ಹೇಳಿದ ವಿಷಯವನ್ನೇ ಗ್ರಂಥಕಾರರು 'ನಚ ರುದ್ರಾದೇಃ' ಎಂಬ ವಾಕ್ಯದಿಂದ ಮಂಡನೆ ಮಾಡುತ್ತಿದ್ದಾರೆ.

**प्रकाशः** – टीकोक्तं सूत्रारूढतया दर्शयति – **प्रत्यक्षेति** ।। तस्मात् उपलब्ध्ययोग्यात्पुरुषार्थादित्यर्थः ।

ಟೀಕೆಯಲ್ಲಿ ಹೇಳಿದ್ದನ್ನು ಸೂತ್ರಾರೂಢ ಮಾಡಲು 'ಪ್ರತ್ಯಕ್ಷ' ಇತ್ಯಾದಿ ವಾಕ್ಯಗಳು ಹೊರಟವೆ. 'ತಸ್ಮಾತ್' ಎಂಬ ಪದಕ್ಕೆ ಉಪಲಬ್ಧಿಗೆ ಅಯೋಗ್ಯವಾದ ಪುರುಷಾರ್ಥಗಳಿಗಿಂತ ಎಂದರ್ಥ.

**प्रकाशः** – तेन फलविशेषणत्वेऽनुपलब्धिनः फलादितरेषामिति स्यादिति न शङ्क्यम् ।

ಸೂತ್ರದಲ್ಲಿರುವ 'ಅನುಪಲಬ್ಧೇಃ' ಎಂಬ ಪದಕ್ಕೆ 'ನ ವಿದ್ಯತೇ ಉಪಲಬ್ಧಿಃ ಯಸ್ಯಾಸೌ ಅನುಪಲಬ್ಧಿಃ' ಎಂಬ ನಿಷ್ಪತ್ತಿಯನ್ನು ಮಾಡಿದರು. ಇದು ಫಲದಲ್ಲಿ ವಿಶೇಷಣವಾದರೆ, 'ಅನುಪಲಬ್ಧಿನಃ' ಎಂದಾಗಬೇಕು. 'ಅನುಲಬ್ಧೇಃ' ಎಂಬ ಪುಲ್ಲಿಂಗ ಪ್ರಯೋಗವು ಅಸಾಧುವಾಗುತ್ತದೆ. ! ಅನುಪಲಬ್ಧಿನಃ ಫಲಾದಿತರೇಷಾಮ್' ಎಂದೇ ಹೇಳಬೇಕಿತ್ತಲ್ಲವೇ ? ಈ ಆಶಂಕೆಯನ್ನು ಪರಿಹರಿಸಿದಂತಾಯಿತು. ಏಕೆಂದರೆ ಅನುಪಲಬ್ಧಿಯು ಫಲದಲ್ಲಿ ವಿಶೇಷಣವೇ ಆಗಿಲ್ಲ. ಹೊರತು, ಪುರುಷಾರ್ಥದಲ್ಲಿ ವಿಶೇಷಣವಾಗಿದೆ. ಪುರುಷಾರ್ಥಶಬ್ದವು ಪುಲ್ಲಿಂಗವಾದ್ದರಿಂದ 'ಅನುಪಲಬ್ಧೇಃ' ಎಂಬುದೂ ಕೂಡ ಪುಲ್ಲಿಂಗವಾಗುತ್ತದೆ.

**प्रकाशः** – यद्वा फलविशेषणत्वेऽपि ''तृतीयादिषु भाषितपुंस्कं पुंवद्गालवस्य'' इति पुंवद्भावादनुपलब्धेरिति साधु । जम्बूजनिश्रियस्सुमेरुशृङ्गस्येतिवत् ।

ಅಥವಾ ಫಲದಲ್ಲಿ ವಿಶೇಷಣವಾದರೂ ಕೂಡ ಪುಲ್ಲಿಂಗ ಪ್ರಯೋಗವು ಅಸಾಧುವಲ್ಲ. ಏಕೆಂದರೆ 'ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' ಎಂಬ ಸೂತ್ರದಲ್ಲಿ ತೃತೀಯಾದಿ ವಿಭಕ್ತಿಗಳಲ್ಲಿ ಗಾಲವ ಋಷಿಗಳ 'ಭಾಷಿತಪುಂಸ್ಕ' ಶಬ್ದಗಳಿಗೆ ಪುಂವದ್ಭಾವವನ್ನು ಹೇಳಲಾಗಿದೆ. ಎಲ್ಲಾ ಲಿಂಗಗಳಲ್ಲಿಯೂ ಪ್ರವೃತ್ತಿನಿಮಿತ್ತವು ಒಂದೇ ಆಗಿದ್ದರೆ 'ಭಾಷ್ಯದಪುಂಸ್ಕ' ಎಂದು ಕರೆಯುತ್ತಾರೆ. ಶುಚಿ ಎಂಬ ಶಬ್ದವು ಎಲ್ಲಾ ಲಿಂಗಗಳಲ್ಲಿಯೂ ಶುಚಿತ್ವ ಎಂಬ ಒಂದೇ ಪ್ರವೃತ್ತಿಲಿಂಗವನ್ನು ಹೊಂದಿದೆ. ಇಂತಹ ಶಬ್ದಗಳನ್ನು ಭಾಷಿತ ಪುಂಸ್ಕ ಎಂದು ಕರೆಯುತ್ತಾರೆ. 'ಪೀಲು' ಎಂಬ ಶಬ್ದವು ಎಲ್ಲಾ ಲಿಂಗಗಳಲ್ಲಿಯೂ ಒಂದೇ ಪ್ರವೃತ್ತಿನಿಮಿತ್ತವನ್ನು ಹೊಂದಿರುವುದಿಲ್ಲ. 'ವೃಕ್ಷಃ ಪೀಲುಃ' ಎಂದು ಹೇಳಿದಾಗ ಪೀಲತ್ವವು ಪ್ರವೃತ್ತಿನಿಮಿತ್ತವಾಗಿದೆ. 'ಫಲಂ ಪೀಲುಃ' ಎಂದು ಹೇಳಿದಾಗ 'ಪೀಲುವೃಕ್ಷಜನ್ಯತ್ವ' ಎಂಬುದು ಪ್ರವೃತ್ತಿನಿಮಿತ್ತ. ಆದ್ದರಿಂದ 'ಪೀಲುನೇ ಫಲಾಯ' ಎನ್ನಬೇಕೇ ಹೊರತು, 'ಪೀಲವೇ ಫಲಾಯ' ಎಂದು ಹೇಳಬಾರದು. ಪ್ರಕೃತ 'ಅನುಪಲಬ್ಧೇಃ' ಎಂಬ ಪದವು ಎಲ್ಲಾ ಲಿಂಗಗಳಲ್ಲಿಯೂ 'ಉಪಲಬ್ಧ್ಯಯೋಗ್ಯತ್ವ' ಎಂಬ ಒಂದೇ ಪ್ರವೃತ್ತಿನಿಮಿತ್ತವನ್ನು ಪಡೆದಿದೆ. ಆದ್ದರಿಂದ ಈ ಶಬ್ದವೂ ಕೂಡ 'ಭಾಷ್ಯತಪುಂಸ್ಕ' ಎಂದು ಕರೆಸಿಕೊಳ್ಳುತ್ತದೆ. ಹೀಗಿರುವಾಗ ಪುಂವದ್ಭಾವವು ಪ್ರಾಪ್ತವಾಗಿ 'ಫಲಸ್ಯ ಅನುಪಲಬ್ಧೇಃ' ಎಂದು ವಿವಕ್ಷಿಸಬಹುದು. ಉದಾ - 'ಜಂಬೂಜನಿಶ್ರಿಯಃಸುಮೇರುಶೃಂಗಸ್ಯ' ಎಂಬಲ್ಲಿ ಶೃಂಗಶಬ್ದವು ನಪುಂಸಕಲಿಂಗದಲ್ಲಿರುವುದರಿಂದ ಅದಕ್ಕೆ ವಿಶೇಷಣವಾದ ಶ್ರೀಶಬ್ದವೂ ಕೂಡ ನಪುಂಸಕಲಿಂಗದಲ್ಲಿಯೇ ಪ್ರಯೋಗಿಸಬೇಕಿತ್ತು. 'ಜಂಬೂಜನಿಶ್ರಿನಃ ಸುಮೇರುಶೃಂಗಸ್ಯ' ಎಂದು ಹೇಳಬೇಕಿತ್ತು. ಆದರೆ ಭಾಷಿತಪುಂಸ್ಕವಾದ್ದರಿಂದ ಪುಂವದ್ಭಾವವನ್ನು ವಿವಕ್ಷಿಸಿ, 'ಶ್ರಿಯಃ' ಎಂದು ಪ್ರಯೋಗಿಸಿರುತ್ತಾರೆ.

**ಸ್ಮೃತ್ಯಧಿಕರಣ (೨-೧-೧)**

**प्रकाशः –** ननु कथमनुपलब्धेरिति पञ्चमी । ''विभाषा गुणेऽस्त्रियाम्'' इति निषेधात् । सत्यम् । अत्रोक्तं मञ्जर्यां ''विभाषा गुण इति योगविभागान्नास्तीह घटोऽनुपलब्धेरिति स्त्रियामपि क्वचिद्भवति'' इति ।।

ಪ್ರಶ್ನೆ - 'ಅನುಪಲಬ್ಧೇಃ' ಎಂಬ ಪಂಚಮೀಪ್ರಯೋಗವು ಹೇಗೆ ಯುಕ್ತವಾಗುತ್ತದೆ ? 'ವಿಭಾಷಾ ಗುಣೋಽಸ್ತ್ರಿಯಾಮ್' ಎಂಬ ಸೂತ್ರವು ಗುಣವಾಚಕ ಶಬ್ದಗಳನ್ನು ಪಂಚಮೀ ವಿಭಕ್ತಿಯಲ್ಲಿ ಪ್ರಯೋಗಿಸಬಾರದೆಂದು ನಿಷೇಧಿಸುತ್ತಿದೆಯಲ್ಲವೇ ?

ಉತ್ತರ - ಹೌದು ! ಆದರೆ ಮಂಜರೀ ಗ್ರಂಥದಲ್ಲಿ 'ವಿಭಾಷಾ ಗುಣೇ' ಎಂಬುದು ಬೇರೆ ಸೂತ್ರ.'ಅಸ್ತ್ರಿಯಾಮ್' ಎಂಬುದು ಬೇರೆ ಸೂತ್ರ ಎಂದು ಯೋಗವಿಭಾಗ ಮಾಡಲಾಗಿದೆ. 'ನಾಸ್ತಿ ಇಹ ಘಟಃ ಅನುಪಲಬ್ಧೇಃ' ಎಂಬ ಪ್ರಯೋಗವಿದೆ. ಇಂತಹ ಕಡೆ ಪಂಚಮ್ಯಂತವಾದ 'ಅನುಪಲಬ್ಧೇಃ' ಎಂಬ ಪ್ರಯೋಗವನ್ನು ಲೋಕದಲ್ಲಿ ಎಲ್ಲರೂ ಮಾಡುತ್ತಾರೆ. ಆದರಂತೆ ಪ್ರಕೃತ 'ಅನುಪಲಬ್ಧ್ಯಾ' ಎಂಬುದಾಗಿ ತೃತೀಯಾವಿಭಕ್ತಿಯಲ್ಲಿ ಪ್ರಯೋಗ ಮಾಡದೇ 'ಅನುಪಲಬ್ಧೇಃ' ಎಂದು ಪಂಚಮೀವಿಭಕ್ತಿಯನ್ನೇ ಪ್ರಯೋಗ ಮಾಡಿರುತ್ತಾರೆ.

**प्रकाशः – उपयुक्तामिति ।।** अभ्यधिकाशङ्कामिति शेषः । क्वचिच्छङ्कामित्यपि पाठः ।। **दिगिति ।।**

'ಉಪಯುಕ್ತಾಂ' ಎಂಬಲ್ಲಿ 'ಅಭ್ಯಧಿಕಾಶಂಕಾಂ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಕೆಲವೆಡೆ 'ಶಂಕಾಂ' ಎಂಬ ಪಾಠವಿದೆ. 'ಏತೇನ ಇತಿ ಸೂತ್ರಾತಿದೇಶೋಪಯುಕ್ತಾಂ ದರ್ಶಯತಿ' ಎಂಬ ಪಾಠವಿದ್ದಾಗ, 'ಅಭ್ಯಧಿಕಾಶಂಕಾಂ' ಎಂದು ಶೇಷಪೂರಣ ಮಾಡಿಕೊಳ್ಳಬೇಕು. ಕೆಲವು ಪುಸ್ತಕಗಳಲ್ಲಿ 'ಏತೇನ ಸೂತ್ರಾತಿದೇಶೋಪಯುಕ್ತಾಂ ಅಧಿಕಾಶಂಕಾಂ ದರ್ಶಯತಿ' ಎಂಬ ಪಾಠವಿದೆ. ಈ ಪಾಠದಲ್ಲಿ ಯಾವ ಸಮಸ್ಯೆಯೂ ಇಲ್ಲ. 'ದಿಕ್' ಎಂಬ ಪದದಿಂದ ಗ್ರಂಥಕಾರರು ಪರಮತದಲ್ಲಿರುವ ದೋಷಗಳಿಗೆ ದಿಕ್‌ಪ್ರದರ್ಶನವನ್ನು ಮಾಡಿದ್ದಾರೆ.

**प्रकाशः –** अयं भावः । यदि सौत्रप्रधानहेतावधिकाशङ्काभावो यदि चाद्यसूत्रस्थस्मृतिपदेन योगस्मृतेरपि ग्रहणं तर्ह्यतिदेशोऽपि न स्यादिति न शङ्क्यम्। टीकोक्तरीत्याऽधिकाशङ्कासद्भावेनातिदेशोपपत्तेरित्यादिशङ्कानुदयादिति ।

ಅಭಿಪ್ರಾಯವಿಷ್ಟು - ಒಂದು ವೇಳೆ ಸೂತ್ರದಲ್ಲಿರುವ ಪ್ರಧಾನ ಹೇತುವಿನ ಮೇಲೆ ಅಭ್ಯಧಿಕಾಶಂಕೆಯನ್ನು ತೋರಿಸಲು 'ಏತೇನ ಯೋಗಃ' ಎಂಬ ಸೂತ್ರವು ಹೊರಟಿಲ್ಲವಾದರೆ, ಮತ್ತು ಮೊದಲನೆಯ ಸೂತ್ರದಲ್ಲಿರುವ ಸ್ಮೃತಿಪದದಿಂದ ಯೋಗಸ್ಮೃತಿಯನ್ನೂ ಕೂಡ ವಿವಕ್ಷಿಸುವುದಾದರೆ ಅತಿದೇಶ ಮಾಡಿದ್ದೂ ಕೂಡ ತಪ್ಪಾಗುತ್ತದೆ ಎಂದರೆ 'ಏತೇನ ಯೋಗಃ' ಎಂಬ ಸೂತ್ರವು ಹೊರಟಿದ್ದೇ ವ್ಯರ್ಥವಾಗುತ್ತದೆ. ಈ

ಆಶಂಕೆಯು ತಪ್ಪು. ಟೀಕೆಯಲ್ಲಿ ಹೇಳಿದಂತೆ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದ ಮೇಲೆ ಅಧಿಕಾಶಂಕೆಯು ಪ್ರಾಪ್ತವಾಗುತ್ತಿರುವುದರಿಂದ ಅತಿದೇಶ ಮಾಡಿದ್ದು ಸಮಂಜಸವೇ ಆಗಿದೆ.

**प्रकाशः** – नन्वेतदाशङ्क्योक्तं भामत्यां ''वेदस्येश्वरबुद्धिपूर्वकत्वस्य शास्त्रयोनिसूत्रेऽभिहितत्वात् कापिलस्मृतेरपि तथात्वेन वेदतुल्यत्वादनन्यपरत्वेन निरवकाशत्वात्तर्कानुसारित्वाच्च श्रुतिरन्यथा नेयेति पुनराक्षेप'' इतीति चेन्न ।

ಪ್ರಶ್ನೆ - ಈ ಪಕ್ಷವನ್ನು ಆಕ್ಷೇಪ ಮಾಡಿ, ಭಾಮತಿಯಲ್ಲಿ 'ವೇದಸ್ಯೇಶ್ವರಬುದ್ಧಿಪೂರ್ವಕತ್ವಸ್ಯ ಶಾಸ್ತ್ರಯೋನಿಸೂತ್ರೇಽಭಿಹಿತತ್ವಾತ್ ಕಾಪಿಲಸ್ಮೃತೇರಿತಿ ತಥಾತ್ವೇನ ವೇದತುಲ್ಯತ್ವಾದನನ್ಯಪರತ್ವೇನ ನಿರವಕಾಶತ್ವಾತ್ತರ್ಕಾನುಸಾರಿತ್ವಾಚ್ಚ ಶ್ರುತಿರನ್ಯಥಾ ನೇಯೇತಿ ಪುನರಾಕ್ಷೇಪಃ' ವೇದವು ಈಶ್ವರ ಬುದ್ಧಿಪೂರ್ವಕವಾಗಿದೆ ಎಂದು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸಮರ್ಥಿಸಿದ್ದರಿಂದ ಕಾಪಿಲಸ್ಮೃತಿಯೂ ಕೂಡ ಬುದ್ಧಿಪೂರ್ವಕವೇ ಆಗಿರುವುದರಿಂದ, ವೇದ ಹಾಗೂ ಕಾಪಿಲಸ್ಮೃತಿಗಳೆರಡೂ ಸಮಾನಬಲವುಳ್ಳವುಗಳಾಗುತ್ತವೆ. ಆದರೆ ಕಾಪಿಲಸ್ಮೃತಿಗಳು ಬೇರೆ ಯಾರನ್ನೂ ಪ್ರತಿಪಾದನೆ ಮಾಡದ ಕಾರಣ ನಿರವಕಾಶವಾಗಿದೆ. ತರ್ಕಗಳ ಬೆಂಬಲವನ್ನೂ ಕೂಡ ಪಡೆದಿವೆ. ಆದ್ದರಿಂದ ಸಾವಕಾಶವಾದ ತರ್ಕದ ಬೆಂಬಲವಿಲ್ಲದ ಶ್ರುತಿಯನ್ನು ಅನ್ಯಥಾ ವ್ಯಾಖ್ಯಾನ ಮಾಡಬೇಕು. ಈ ಆಕ್ಷೇಪದ ಪರಿಹಾರಕ್ಕಾಗಿ 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರವು ಹೊರಟಿದೆಯೆಂದು ಉತ್ತರಿಸಿದ್ದಾರೆ. ಆದ್ದರಿಂದ ಅಧಿಕರಣಾಂತರವಾಗುವುದಿಲ್ಲವೆಂದು ಹೇಗೆ ಹೇಳುತ್ತೀರಿ ?

**प्रकाशः** – वेदस्यापौरुषेयत्वेन बुद्धिपूर्वकत्वस्य प्रागेव निरासात् । दुर्बलस्य बाध्यतायां निरवकाशत्वस्य हेतुत्वात् । नहि शशशावको निरवकाश इति सिंहेन न बाध्यते । तर्कस्य चाप्रतिष्ठितत्वेन स्वयं दुर्बलत्वादिति भावः ।।

ಉತ್ತರ - ಇದು ಸರಿಯಲ್ಲ. ವೇದವು ಅಪೌರುಷೇಯವಾಗಿರುವುದರಿಂದ ಬುದ್ಧಿಪೂರ್ವಕವಾಗಿಲ್ಲವೆಂದು ಈ ಹಿಂದೆಯೇ ನಾವು ನಿರಾಕರಣೆ ಮಾಡಿದ್ದೇವೆ. ಮತ್ತು ಕಾಪಿಲಸ್ಮೃತಿಗಳು ಶ್ರುತಿಯಿಂದ ಬಾಧಿತವಾಗಿವೆ ಎಂದು ಆಕ್ಷೇಪ ಬರುತ್ತದೆ. ಈ ಆಕ್ಷೇಪವನ್ನು ನಿರವಕಾಶವಾದ್ದರಿಂದ ಬಾಧ್ಯವಾಗುವುದಿಲ್ಲವೆಂದು ಹೇಳಲಾಗದು. ಮೊಲದ ಮರಿಯು ನಿರವಕಾಶವಾಗಿದೆಯೆಂಬ ಕಾರಣದಿಂದ ಸಿಂಹದಿಂದ ಬಾಧ್ಯವಾಗುವುದಿಲ್ಲವೆಂದು ಯಾರೂ ಹೇಳುವುದಿಲ್ಲ. ತರ್ಕವು ಅಪ್ರತಿಷ್ಠಿತವಾದ್ದರಿಂದ ಸ್ವತಃ ದುರ್ಬಲವಾಗಿದೆ. ಇಂತಹ ತರ್ಕದ ಬೆಂಬಲವಿರುವುದರಿಂದ ಕಾಪಿಲಾದಿಸ್ಮೃತಿಗಳು ಬಲಿಷ್ಠವೆಂದು ಹೇಳುವುದೂ ಕೂಡ ತಪ್ಪಾಗುತ್ತದೆ. ಆದ್ದರಿಂದ ಭಾಮತಿಯಲ್ಲಿ 'ಏತೇನ ಯೋಗಃ ಪ್ರತ್ಯುಕ್ತಃ'ಎಂಬ ಸೂತ್ರವನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ್ದು ಅಸಾಧುವಾಗಿದೆ.

## ಸ್ಮೃತ್ಯಧಿಕರಣ (೨-೧-೧)




ಪಾಶುಪತಾದಿಸ್ಮೃತಿಗಳಿಂದ ವೇದ, ಪಂಚರಾತ್ರಗಳಲ್ಲಿ ಹೇಳಲ್ಪಟ್ಟ ವಿಷ್ಣುಪಾರಮ್ಯವನ್ನು ನಿರಾಕರಣೆ ಮಾಡಬೇಕಾದರೆ ಮೊದಲು ಪಾಶುಪತಾದಿ ಸ್ಮೃತಿಗಳಿಗೆ ಪ್ರಾಮಾಣ್ಯವನ್ನು ನಿರ್ಧಾರ ಮಾಡಬೇಕು. ಆದರೆ ಇದು ಸಾಧ್ಯವಿಲ್ಲ. ಶೈವ, ಪಂಚರಾತ್ರ, ಸೌರ ಮೊದಲಾದ ಆಗಮಗಳು ಏಕರೂಪವಾಗಿ ಯಾವುದೇ ವಿಷಯವನ್ನು ಪ್ರತಿಪಾದನೆ ಮಾಡುತ್ತಿಲ್ಲ. ಒಂದು ಆಗಮದಲ್ಲಿ ಯಾವ ವಿಚಾರವನ್ನು ಪ್ರತಿಪಾದನೆ ಮಾಡಲಾಗಿರುತ್ತದೋ, ಅದಕ್ಕೆ ವಿರುದ್ಧವಾಗಿ ಇನ್ನೊಂದು ಆಗಮವು ವಿಷಯವನ್ನು ಪ್ರತಿಪಾದನೆ ಮಾಡುತ್ತದೆ. ಶಿವಪಾರಮ್ಯವನ್ನು ಶೈವಶಾಸ್ತ್ರವು ನಿರೂಪಣೆ ಮಾಡಿದರೆ, ಕಾಪಿಲಾದಿ ಆಗಮಗಳು ಅದನ್ನು ನಿರಾಕರಣೆ ಮಾಡುತ್ತವೆ. ಪರಸ್ಪರ ವಿರೋಧಿಯಾದ ನಿರೂಪಣೆಯಿರುವ ಈ ಎರಡು ಆಗಮಗಳು ಪ್ರಮಾಣವಾಗಲಾರವು. ಇವುಗಳಲ್ಲಿ ಒಂದು ಮಾತ್ರ ಸಾಧುವಾಗುತ್ತದೆ. ಇದಕ್ಕೆ ವಿರೋಧಿಯಾಗಿರುವ ಉಳಿದ ಆಗಮಗಳು ಅಸಾಧುವಾಗಿವೆಯೆಂದು ನಿರ್ಧಾರ ಮಾಡಲು ಹೇಗೆ ಸಾಧ್ಯ? ಆಯಾ ಪಂಥದವರು ತಮ್ಮ ತಮ್ಮ ಗುರುಗಳನ್ನೇ ಸರ್ವಜ್ಞರೆಂದು, ಆಪ್ತರೆಂದು ಹೇಳುತ್ತಾರೆ. ಪ್ರತಿಯೊಬ್ಬರೂ ಕೂಡ ಹೀಗೆಯೇ ಹೇಳುವುದರಿಂದ ಇವನೇ ಸರ್ವಜ್ಞನಾಗಿದ್ದಾನೆ, ಇವನೇ ವಿಶ್ವಾಸಕ್ಕೆ ಅರ್ಹನಾಗಿದ್ದಾನೆ ಎಂಬ ನಿರ್ಧಾರವು ಬಹಳ ಕಷ್ಟವಾಗುತ್ತದೆ. ಏಕೆಂದರೆ ಆಯಾ ಆಗಮಗಳು ಅನುಯಾಯಿಗಳು ತಮ್ಮ ಮೂಲಪುರುಷರ ಬಗ್ಗೆ ಹೇಳುವ ಚರಿತ್ರೆ ಮಹಾತ್ಮ್ಯಗಳನ್ನು ಉಳಿದವರು ಒಪ್ಪುವುದಿಲ್ಲ. ಹೀಗೆ ಎಲ್ಲಾ ಸ್ಮೃತಿಗಳು ಸಮಾನವಾಗಿರುವಾಗ ಇವುಗಳಲ್ಲಿ ಯಾವುದನ್ನು ಪ್ರಮಾಣವೆಂದು ಸ್ವೀಕಾರ ಮಾಡಬೇಕು, ಯಾವುದನ್ನು ಅಪ್ರಮಾಣವೆಂದು ಪರಿತ್ಯಾಗ ಮಾಡಬೇಕು ಎಂಬ ನಿರ್ಧಾರವೇ ಕಷ್ಟವಾಗುತ್ತದೆ. ಅಂತಿಮವಾಗಿ ಇದರ ಪರಿಹಾರಕ್ಕಾಗಿ ಅಪೌರುಷೇಯವಾದ ವೇದವನ್ನೇ ಅವಲಂಬಿಸಬೇಕು. ಅಪೌರುಷೇಯವಾದ ವೇದವು ಸ್ವತಃಪ್ರಮಾಣವಾಗಿದೆ. ಈ ದೃಷ್ಟಿಯಿಂದ ವೇದದ ಸಂವಾದವಿರುವ ಪಂಚರಾತ್ರ ಮೊದಲಾದ ಆಗಮಗಳು ಪ್ರಮಾಣವಾಗುತ್ತವೆಂದು ನಿರ್ಧಾರ ಮಾಡಬಹುದು.

ಮತ್ತು ಶೈವಾದಿ ಆಗಮಗಳು ಹೇಳುವ ರೀತಿಯಲ್ಲಿ ಕರ್ಮಾನುಷ್ಠಾನಗಳನ್ನು ಮಾಡಿದರೂ ಕೂಡ ಕೆಲವು ವೇಳೆ ಮಾತ್ರ ಫಲ ದೊರೆಯುತ್ತದೆ. ಅನೇಕ ಬಾರಿ ಅನುಷ್ಠಾನಗಳು ವಿಫಲವಾಗುವುದನ್ನು ನಾವು ಕಂಡಿದ್ದೇವೆ. ನಮ್ಮ ಲೋಪದೋಷಗಳಿಂದ ಫಲವು ದೊರೆಯುತ್ತಿಲ್ಲವೋ, ಅಥವಾ ಆಯಾ ಆಗಮಪ್ರವರ್ತಕರೇ ಸುಳ್ಳು ಹೇಳಿ ವಂಚನೆ ಮಾಡಿದ್ದಾರೋ, ಎಂಬ ಸಂದೇಹ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಆವಾಗ ಆಯಾ ಗ್ರಂಥಗಳ ಪ್ರಾಮಾಣ್ಯವನ್ನೂ ಕೂಡ ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ. ಇದರಂತೆ ವೇದ ಪಂಚರಾತ್ರಗಳಲ್ಲಿ ಹೇಳಿದ ಕರ್ಮಾನುಷ್ಠಾನಗಳನ್ನು ಮಾಡಿದರೂ ಅನೇಕ ಬಾರಿ ನಮಗೆ ಫಲ ದೊರೆಯುತ್ತಿಲ್ಲ. ಆದ್ದರಿಂದ ವೇದ ಪಂಚರಾತ್ರಗಳನ್ನೂ ಕೂಡ ನೀವು ಅಪ್ರಮಾಣವೆಂದು ಹೇಳಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ವೇದದಲ್ಲಿ ಹೇಳಿದ ಕರ್ಮಾನುಷ್ಠಾನ ಬಹಳ ಕಠಿಣ. ಕುಲಶುದ್ಧಿ, ಬಾಲ್ಯದಿಂದ ಅನುಷ್ಠಾನ ಮಾಡಬೇಕಾದ ಎಲ್ಲಾ ವೈದಿಕಸಂಸ್ಕಾರಗಳ ಸಂಪನ್ನತೆ, ಸ್ವಲ್ಪವೂ ಲೋಪವಿಲ್ಲದ ಕರ್ಮಾನುಷ್ಠಾನ ಮುಂತಾದವುಗಳು ಪರಿಪೂರ್ಣವಾಗಿದ್ದರೆ ಮಾತ್ರ ಫಲವು ದೊರೆಯುತ್ತದೆ. ಕಠಿಣ ನಿಯಮನಿಬಂಧನೆಗಳನ್ನೊಳಗೊಂಡ ವೈದಿಕ ಕರ್ಮಾನುಷ್ಠಾನಗಳಿಂದ ಅನೇಕ ಬಾರಿ ಫಲವು ದೊರೆಯಲಿಲ್ಲವೆಂದು ವೇದಗಳನ್ನು ಅಪ್ರಮಾಣವೆಂದು ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಇಷ್ಟೊಂದು ಕಠಿಣನಿಯಮಗಳು ಆಗಮದಲ್ಲಿ

ಹೇಳಿರುವುದಿಲ್ಲ. ಶೈವಾದಿ ಆಗಮಗಳಲ್ಲಿ ಹೇಳಲ್ಪಟ್ಟ ನಿಯಮಗಳೆಲ್ಲವೂ ಬಹಳ ಸುಲಭ ಹಾಗೂ ಸರಳ. ಹೀಗಿದ್ದರೂ ಕೂಡ ಅವುಗಳಿಂದ ಫಲವು ದೊರೆಯದಿದ್ದಾಗ ಅವುಗಳ ಪ್ರಾಮಾಣ್ಯದ ಬಗ್ಗೆಯೇ ಸಂದೇಹವುಂಟಾಗುತ್ತದೆ. ಕರ್ಮಾನುಷ್ಠಾನಗಳು ವಿಫಲವಾಗಿರುವುದೇ ಹೆಚ್ಚು ಕಂಡಿರುವುದರಿಂದ ಪಾಶುಪತ ಮುಂತಾದ ಆಗಮಗಳಿಗೆ ಪ್ರಾಮಾಣ್ಯವನ್ನು ನಿರ್ಧರಿಸುವುದು ಸಾಧ್ಯವಿಲ್ಲ.

ವೇದದಲ್ಲಿ ಹೇಳಿದಂತೆ ಕರ್ಮಗಳನ್ನು ಆಚರಣೆ ಮಾಡಿದಾಗ ಫಲವು ದೊರೆಯದಿದ್ದರೂ ವೇದದ ಪ್ರಾಮಾಣ್ಯಕ್ಕೆ ಯಾವುದೇ ಚ್ಯುತಿಯಿಲ್ಲ ಎನ್ನಲು ಇನ್ನೂ ಒಂದು ಕಾರಣವಿದೆ. ಯಾವುದೇ ಒಂದು ವಾಕ್ಯವು ಅಪ್ರಮಾಣವೆನಿಸಬೇಕಾದರೆ ಅದನ್ನು ರಚನೆ ಮಾಡಿರುವ ವ್ಯಕ್ತಿಯಲ್ಲಿ ಅಜ್ಞಾನ, ಭ್ರಾಂತಿ ಮೊದಲಾದ ಮಾನಸಿಕ ದೋಷಗಳಿರಬೇಕು. ವಸ್ತುಗಳನ್ನು ಸರಿಯಾಗಿ ತಿಳಿದುಕೊಳ್ಳದಿರುವಾಗ ಅದನ್ನು ತಪ್ಪಾಗಿ ಗ್ರಹಿಸಿ, ಇನ್ನೊಬ್ಬರಿಗೆ ಭ್ರಾಂತಿಯನ್ನು ಹುಟ್ಟಿಸಿ, ಮೋಸಗೊಳಿಸಬೇಕೆಂಬ ಉದ್ದೇಶವಿದ್ದಾಗ ವಾಕ್ಯಗಳು ಭ್ರಮೆಯನ್ನುಂಟು ಮಾಡಿ, ಅಪ್ರಮಾಣವಾಗುತ್ತವೆ. ಇದು ಪೌರುಷೇಯ ಗ್ರಂಥಗಳಲ್ಲಿ ಮಾತ್ರ ಮನೋದೋಷದಿಂದ ಬರುವಂತಹ ಅಪ್ರಾಮಾಣ್ಯದೋಷ. ಆದರೆ ವೇದಗಳು ಅಪೌರುಷೇಯವಾದ್ದರಿಂದ ಇಂತಹ ಮಾನಸಿಕದೋಷ ದೌರ್ಬಲ್ಯಗಳಿಗೆ ಅವಕಾಶವೇ ಇಲ್ಲ. ಯಾವುದೇ ವ್ಯಕ್ತಿಯು ವೇದವನ್ನು ರಚನೆ ಮಾಡಿಲ್ಲ. ಆದ್ದರಿಂದ ವೇದವನ್ನು ಅಪ್ರಮಾಣವೆಂದು ಸಾಧಿಸಲಾಗದು. ಅಪೌರುಷೇಯವಾದ್ದರಿಂದಲೇ ಅದು ಪ್ರಮಾಣವೆಂದು ಸಿದ್ಧವಾಗಿದೆ.

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರವನ್ನು ಬೇರೆ ಮತದವರು ಪ್ರತ್ಯೇಕ ಅಧಿಕರಣವೆನ್ನುತ್ತಾರೆ. ಅಭ್ಯಧಿಕಾಶಂಕೆಯಿದ್ದ ಮಾತ್ರಕ್ಕೆ ಪ್ರತ್ಯೇಕ ಅಧಿಕರಣವಾಗುವುದಿಲ್ಲ. ಸೂತ್ರಗಳಲ್ಲಿ ಹೇಳಲ್ಪಟ್ಟ ಪ್ರಧಾನ ಹೇತುವಿನ ಮೇಲೆ ಅಭ್ಯಧಿಕಾಶಂಕೆ ಬಂದರೆ ಮಾತ್ರ ಅದರ ಪರಿಹಾರಕ್ಕಾಗಿ ಮತ್ತೊಂದು ಅಧಿಕರಣ ಹೊರಡಬೇಕು. ಆದರೆ 'ಇತರೇಷಾಂ ಚಾನುಪಲಬ್ಧೇಃ' ಎಂಬಲ್ಲಿ ಅಪ್ರಮಾಣವಾದ ಫಲದ ಅನುಪಲಂಭವೆಂಬ ಹೇತುವಿನ ಮೇಲೆ ಅಭ್ಯಧಿಕಾಶಂಕೆಯು ಪ್ರಾಪ್ತವಾದಾಗ ಅದರ ಪರಿಹಾರಕ್ಕಾಗಿ ಅತಿದೇಶ ಮಾಡುತ್ತಾ 'ಏತೇನ ಯೋಗಃ' ಎಂಬ ಸೂತ್ರವು ಹೊರಟಿದೆ, ಹೊರತು ಪಾಶುಪತಾದಿಸ್ಮೃತಿಗಳಿಗೆ ಯಾವ ಬಾಧಾದಿದೋಷಗಳನ್ನು ಪ್ರಥಮಸೂತ್ರವು ಹೇಳುತ್ತಿದೆಯೋ, ಅದರ ಮೇಲೆ ಅಭ್ಯಧಿಕಾಶಂಕೆಯ ಪರಿಹಾರಕ್ಕಾಗಿ ಹೊರಟಿಲ್ಲ. ಆದ್ದರಿಂದ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬಾರದು.

## ಮಾಯಾವಾದದಲ್ಲಿ ಸೂತ್ರಾರ್ಥ

## तात्पर्यचन्द्रिका

**यदुक्तमुभाभ्यां वेदान्तानां बहुमुखतया परतन्त्रप्रज्ञानां पुंसां तैः स्वतोऽर्थनिश्चयायोगेन स्मृत्या तदर्थे निश्चेतव्ये सति । मन्वादिस्मृतीनामनुष्ठेयपरत्वेन सावकाशत्वात् कापिलस्मृतेस्तु सिद्धार्थनिष्ठाया मोक्षसाधनसम्यग्दर्शनमधिकृत्य प्रवृत्ताया अन्यपरत्वायोगान्निरवकाशत्वरूपदोषप्रसङ्गात् तदनुसारेण वेदान्ता अचेतनकारणत्वपरतया व्याख्येया इति प्राप्ते**

ಮಾಯಾವಾದದಲ್ಲಿ ಮತ್ತು ರಾಮಾನುಜಮತದಲ್ಲಿ ಅಧಿಕರಣರಚನೆ ಹೀಗಿದೆ - ವೇದಾಂತಗಳು ಬಹುಮುಖವಾದ ಅರ್ಥಗಳನ್ನು ಹೊಂದಿರುತ್ತವೆ. ಶ್ರುತಿಗಳ ಅರ್ಥವು ಅತ್ಯಂತ ಕ್ಲಿಷ್ಟಕರ-ವಾಗಿರುವುದರಿಂದ ಮನುಷ್ಯ ಸಾಮಾನ್ಯರಿಗೆ ನೇರವಾಗಿ ಶ್ರುತಿಗಳ ಅರ್ಥವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಪರತಂತ್ರಪ್ರಜ್ಞಾವಂತರಾದ್ದರಿಂದ ಶ್ರುತಿಗಳ ಅಪೇಕ್ಷೆ ಬೇಕಾಗುತ್ತದೆ. ಸ್ಮೃತಿಗಳಿಂದಲೇ ವೇದದ ಅರ್ಥವನ್ನು ನಿಶ್ಚಯ ಮಾಡಬೇಕು. ಈ ಸಂದರ್ಭದಲ್ಲಿ ಯಾವ ಸ್ಮೃತಿಗಳನ್ನು ಅವಲಂಬಿಸಬೇಕೆಂಬ ಗೊಂದಲವುಂಟಾಗುತ್ತದೆ. ಮನ್ವಾದಿಸ್ಮೃತಿಗಳು ಆಚರಣೆ ಮೊದಲಾದವುಗಳನ್ನು ನಿರೂಪಣೆ ಮಾಡುತ್ತಾ ಅನ್ಯತ್ರ ಸಾವಕಾಶವಾಗಿವೆ. ಕಾಪಿಲಸ್ಮೃತಿಯು ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ಉಂಟಾಗುತ್ತವೆಂದು ತಿಳಿಸುವ ಮೂಲಕ ಸಿದ್ಧಾರ್ಥಬೋಧಕವಾಗಿದೆ. ಮೋಕ್ಷಸಾಧನವಾದ ಯಥಾರ್ಥಜ್ಞಾನವನ್ನು ತಂದುಕೊಡುವುದಕ್ಕಾಗಿಯೇ ಕಾಪಿಲಸ್ಮೃತಿಯು ಹೊರಟಿರುತ್ತದೆ. ಇಂತಹ ಸ್ಮೃತಿಗೆ ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಮಾಣವಾಗುತ್ತದೆ. ಆದರೆ ಕಪಿಲಮಹರ್ಷಿ ಈ ಸ್ಮೃತಿಯನ್ನು ರಚನೆ ಮಾಡಿರುವುದರಿಂದ ಅಪ್ರಾಮಾಣ್ಯವನ್ನು ಸರ್ವಥಾ ಹೇಳಬಾರದು. ಆದ್ದರಿಂದ ಸ್ಮೃತಿಗಳಿಗೆ ವಿರೋಧ ಬರದಂತೆ ವೇದಾಂತವಾಕ್ಯಗಳಿಗೆ ವ್ಯಾಖ್ಯಾನ ಮಾಡಬೇಕು. ಹೊರತು ವಿರುದ್ಧವಾಗುವಂತೆ ಬ್ರಹ್ಮನೇ ಜಗತ್ತಿಗೆ ಕಾರಣ ಎಂಬುದಾಗಿ ವ್ಯಾಖ್ಯಾನ ಮಾಡಬಾರದು. ಇಷ್ಟು ಪೂರ್ವಪಕ್ಷ.

**मन्वादिस्मृतिषु पुराणादिषु च बहूनां ब्रह्मकारणत्ववादिवाक्यानां सत्त्वात् तेषामनवकाशत्वरूपदोषप्रसङ्गात् तदनुरोधेन चेतनकारणत्वपरतया वेदान्ता व्याख्येया इति सिद्धान्त इति ॥**

ಮನ್ವಾದಿಸ್ಮೃತಿಗಳಲ್ಲಿ ಮತ್ತು ಪುರಾಣಾದಿಗಳಲ್ಲಿ ಅನೇಕ ಕಡೆ ಬ್ರಹನೇ ಜಗತ್ತಿಗೆ ಕಾರಣನಾಗಿದ್ದಾನೆಂಬ ವಾಕ್ಯಗಳಿವೆ. ಒಂದು ವೇಳೆ ಕಾಪಿಲಸ್ಮೃತಿಯ ಪ್ರಾಮಾಣ್ಯವನ್ನು ಒಪ್ಪಿ, ಪ್ರಕೃತಿಗೆ ಕಾರಣತ್ವವನ್ನು ಹೇಳುವುದಾದರೆ, ಈ ಸ್ಮೃತಿಪುರಾಣವಾಕ್ಯಗಳ ಪ್ರಾಮಾಣ್ಯವನ್ನು ಕೈಬಿಡಬೇಕಾಗುತ್ತದೆ. ಇವೆರಡರಲ್ಲಿ ಯಾವುದಾದರು ಒಂದನ್ನು ಪರಿತ್ಯಾಗ ಮಾಡಲೇಬೇಕು. ಯಾವುದನ್ನು ಪರಿತ್ಯಾಗ ಮಾಡಬೇಕು ? ಎಂಬ ಪ್ರಶ್ನೆಯು ಬಂದರೆ ವೇದಗಳಿಗೆ ಅನುಸಾರಿಯಾದ ಸ್ಮೃತಿಗಳು ಹೇಳುವಂತೆ ಬ್ರಹ್ಮಕಾರಣತ್ವವಾದವನ್ನೇ ಒಪ್ಪಬೇಕು. ಅಂದರೆ ಸ್ಮೃತಿಗಳಿಗೆ ಅನುಸಾರಿಯಾಗಿ ವೇದಾಂತಗಳನ್ನು ವ್ಯಾಖ್ಯಾನ ಮಾಡಬೇಕು. ಸ್ಮೃತಿವಿರುದ್ಧವಾದ ಕಾಪಿಲಸ್ಮೃತಿಯ ಪ್ರಾಮಾಣ್ಯವನ್ನು ಪರಿತ್ಯಾಗ ಮಾಡಬೇಕು. ಇಷ್ಟು ಸಿದ್ಧಾಂತ.

**तन्न ॥ वेदान्तानां चेतनकारणतायामैकमुख्यस्य ''गतिसामान्यात्'' इत्यत्रोक्तत्वेन समन्वयाध्याय उपपादितत्वेन च बहुमुखत्वशङ्कानुदयात् ।**

**ಪರಿಪೂರ್ಣಚಂದ್ರಿಕಾ**

ಈ ಅಧಿಕರಣಶರೀರ ಅಸಾಧು. ಏಕೆಂದರೆ ವೇದಾಂತಗಳು ಬ್ರಹ್ಮನೇ ಜಗತ್ತಿಗೆ ಕಾರಣನಾಗಿದ್ದಾನೆಂಬ ಒಂದೇ ಅಭಿಪ್ರಾಯವುಳ್ಳವುಗಳು. ಈ ವಿಷಯವನ್ನು 'ಗತಿಸಾಮಾನ್ಯಾತ್' ಎಂಬ ಸೂತ್ರದಲ್ಲಿ ಸಮರ್ಥಿಸಿದ್ದೇವೆ. ಮತ್ತು ಸಮನ್ವಯಾಧ್ಯಾಯದಲ್ಲಿ ಸಮಗ್ರ ವೇದವು ಬ್ರಹ್ಮನ ಜಗತ್ಕಾರಣತ್ವವನ್ನೇ ಪ್ರತಿಪಾದನೆ ಮಾಡುತ್ತಿದೆಯೆಂದು ಸಮರ್ಥನೆ ಮಾಡಿರುವುದರಿಂದ ಶ್ರುತಿಗಳು ಬಹುಮುಖವಾಗಿದೆಯೆಂಬ ಆಶಂಕೆಯೇ ಹುಟ್ಟುವುದಿಲ್ಲ.

**स्पर्शनश्रुतिविरोधेन सर्ववेष्टनादिस्मृत्यप्रामाण्यस्य पूर्वतन्त्र एवोक्तत्वेनेह स्मृतिविरोधेन श्रुत्यस्वारस्यशङ्कानुदयाच ।**

ಮತ್ತು ರಾಮಾನುಜರು ಇಪ್ಪತ್ತು ಅಧ್ಯಾಯಗಳಿಂದ ಕೂಡಿರುವ ಪೂರ್ವಮೀಮಾಂಸಾ ಸಹಿತವಾದ ಬ್ರಹ್ಮಮೀಮಾಂಸವು ಒಂದೇ ಶಾಸ್ತ್ರವೆನ್ನುತ್ತಾರೆ. ಹೀಗಿರುವಾಗ ಪೂರ್ವಮೀಮಾಂಸೆಯಲ್ಲಿ ಸ್ಪರ್ಶನಶ್ರುತಿವಿರೋಧ ಬಂದಾಗ ಸರ್ವವೇಷ್ಟನಸ್ಮೃತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆಂದು ನಿರ್ಣಯಿಸಲಾಗಿದೆ. ಪುನಃ ಉತ್ತರಮೀಮಾಂಸೆಯಲ್ಲಿ ಸ್ಮೃತಿವಿರೋಧ ಬರುವುದರಿಂದ ಶ್ರುತಿಗೆ ಅನ್ಯಾರ್ಥ ಮಾಡಬೇಕೆಂಬ ಆಶಂಕೆಯೇ ಹುಟ್ಟುವುದಿಲ್ಲ.

**अस्याधिकरणस्य सौत्रस्मृतिशब्दासङ्कोचायावैदिकस्मृतिमात्रविषयत्वसम्भवे तत्सङ्कोचेन कापिलस्मृतिमात्रविषयत्वोक्त्ययोगाच ।**

'ಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರದಲ್ಲಿ ಸ್ಮೃತಿಯೆಂಬ ಶಬ್ದವಿದೆ. ಇದಕ್ಕೆ ಅವೈದಿಕಸ್ಮೃತಿಗಳು ಎಂಬುದಾಗಿ ಅಸಂಕುಚಿತವಾದ ಅರ್ಥವನ್ನೇ ಪೂರ್ವಪಕ್ಷದಲ್ಲಿ ವಿವಕ್ಷಿಸಲು ಬರುವಾಗ ಅವೈದಿಕಸ್ಮೃತಿಗಳಲ್ಲಿ ಕೇವಲ ಕಾಪಿಲಸ್ಮೃತಿಯನ್ನು ಮಾತ್ರ ವಿವಕ್ಷಿಸುವುದು ಅಯುಕ್ತವಾಗುತ್ತದೆ.

**यथा च ''महद्दीर्घवद्वा'' इत्यादौ कणादादिमतं दूषयिष्यते तथा ''रचनानुपपत्तेः'' इत्यत्र सांख्यमतमपि ।**

'ಮಹದ್ದೀರ್ಘವದ್ವಾ' ಎಂಬ ಸೂತ್ರದಲ್ಲಿ ಕಣಾದಮತವನ್ನು ನಿರಾಕರಣೆ ಮಾಡಿರುವಂತೆ 'ರಚನಾನುಪತ್ತೇಃ' ಎಂಬ ಅಧಿಕರಣದಲ್ಲಿ ಸಾಂಖ್ಯಮತವನ್ನೂ ಕೂಡ ಅಯುಕ್ತವೆಂದೇ ನಿರಾಕರಿಸಲಾಗಿದೆ. ಇಷ್ಟು ಪ್ರಥಮಸೂತ್ರವ್ಯಾಖ್ಯಾನದ ನಿರಾಕರಣೆ.

**यच्चोक्तं परैः प्रधानादितरेषां महदादीनामनुपलब्धेः सांख्यमतमयुक्तमिति द्वितीयार्थ इति ।**

ಸ್ಮೃತ್ಯಧಿಕರಣ (೨-೧-೧)

'ಇತರೇಷಾಂ ಚಾನುಪಲಬ್ಧೇಃ' ಎಂಬ ಎರಡನೆಯ ಸೂತ್ರಕ್ಕೆ ಪರರು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಸಾಂಖ್ಯಸಿದ್ಧಾಂತ ಹೇಳುವ ಪ್ರಕೃತಿಯಿಂದ ಹುಟ್ಟುವ ಮಹತ್ತತ್ತ್ವ ಅಹಂಕಾರತತ್ತ್ವಗಳು ಶ್ರುತಿಗಳಲ್ಲಿ ಉಲ್ಲೇಖಿತವಾಗಿಲ್ಲ. ಆದ್ದರಿಂದ ಅವುಗಳು ಸರ್ವಥಾ ಅಪ್ರಮಾಣವಾಗಿವೆ. ಈ ಕಾರಣದಿಂದಲೂ ಸಾಂಖ್ಯಮತವು ಅಯುಕ್ತ ಎಂಬುದು ಎರಡನೆಯ ಸೂತ್ರಾರ್ಥ.

**तन्न । ''न संख्योपसङ्ग्रहात्'' इत्यत्रैव श्रुत्यादिषु महदादीनामुपलब्धेः दर्शितत्वात् ।**

ಇದೂ ಕೂಡ ಸರಿಯಲ್ಲ. ಏಕೆಂದರೆ 'ನ ಸಂಖ್ಯೋಪಸಂಗ್ರಹಾತ್' ಎಂಬ ಅಧಿಕರಣದಲ್ಲಿ 'ಮಹತಃ ಪರಮವ್ಯಕ್ತಮ್' ಇತ್ಯಾದಿ ಶ್ರುತಿಗಳನ್ನು ಉಲ್ಲೇಖಿಸುತ್ತಾ ಮಹತ್ತತ್ತ್ವಾದಿಗಳ ಪ್ರಸ್ತಾವವಿರುವುದನ್ನು ನಾವು ಈ ಹಿಂದೆಯೇ ತೋರಿಸಿರುತ್ತೇವೆ. ಆದ್ದರಿಂದ ಶ್ರುತಿಗಳಲ್ಲಿ ಮಹತ್ತತ್ತ್ವಾದಿಗಳ ಉಲ್ಲೇಖವಿಲ್ಲವೆಂಬ ವ್ಯಾಖ್ಯಾನವು ಅಯುಕ್ತ.

**यच्चोक्तं ''विद्यामेतां योगविधिं च कृत्स्नम्'' इत्यादिश्रुत्या योगस्य परिगृहीतत्वान्न सांख्यतुल्यतेत्यधिकाशङ्कायां ''एतेन'' इति तृतीयेऽतिदेश इति ।**

ಪರರು 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಮೂರನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಇದು ಪ್ರತ್ಯೇಕ ಅಧಿಕರಣ. ಹಿಂದಿನ ಅಧಿಕರಣದಲ್ಲಿ ಈ ಸೂತ್ರವು ಇರುವುದಿಲ್ಲ. 'ವಿದ್ಯಾಮೇತಂ ಯೋಗವಿಧಿಂ ಚ ಕೃತ್ಸ್ನಮ್' ಇತ್ಯಾದಿ ಶ್ರುತಿಗಳಿಂದ ಯೋಗವನ್ನು ಪರಿಗ್ರಹಿಸಲಾಗಿದೆ. ಆದ್ದರಿಂದ ಸಾಂಖ್ಯಮತಕ್ಕಿಂತ ಯೋಗಸ್ಮೃತಿಯಲ್ಲಿ ವೈಲಕ್ಷಣ್ಯವಿದೆ. ಈ ಅಧಿಕಾಶಂಕೆಯನ್ನು 'ಏತೇನ ಯೋಗಃ' ಎಂಬ ಸೂತ್ರವು ಪರಿಹರಿಸುತ್ತಾ ಅತಿದೇಶ ಮಾಡುತ್ತಿದೆ.

**तन्न । ''तत्कारणं सांख्ययोगाधिगम्यं ज्ञात्वा देवं मुच्यते सर्वपापैः'' इत्यादिस्मृतिषु सांख्यस्यापि परिगृहीतत्वेनाधिकाशङ्काभावात् ।**

ಇದು ತಪ್ಪು. ಯೋಗದರ್ಶನದ ನಿರಾಕರಣೆಗಾಗಿ ಇದನ್ನು ಪ್ರತ್ಯೇಕ ಅಧಿಕರಣವೆಂದು ಹೇಳಬೇಕಾಗಿಲ್ಲ. ಏಕೆಂದರೆ 'ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಪೈಃ' ಎಂಬುದಾಗಿ ಸಾಂಖ್ಯಶಾಸ್ತ್ರವೂ ಕೂಡ ವೇದಾಂತದರ್ಶನವೆಂದು ಸ್ವೀಕರಿಸಲ್ಪಟ್ಟಿದೆ. ಆದ್ದರಿಂದ ಯೋಗಶಾಸ್ತ್ರವು ಮಾತ್ರ ವೇದಾಂತದರ್ಶನವಾಗುತ್ತದೆ. ಸಾಂಖ್ಯಶಾಸ್ತ್ರವು ಆಗುವುದಿಲ್ಲವೆಂಬ ಪರಿಕಲ್ಪನೆ ತಪ್ಪು.

**तत्र वैदिकं ज्ञानमेव सांख्यशब्दार्थश्चेदिहापि ज्ञानोपाय एव योगशब्दार्थोऽस्तु।**

ಸಾಂಖ್ಯಶಬ್ದಕ್ಕೆ ವೈದಿಕವಾದ ತತ್ವಜ್ಞಾನ ಎಂದರ್ಥ ಹೊರತು, ಸಾಂಖ್ಯದರ್ಶನ ಎಂದರ್ಥವಲ್ಲ ಎಂದು ಉತ್ತರಿಸುವುದಾದರೆ ಯೋಗಶಬ್ದಕ್ಕೂ ಕೂಡ ಜ್ಞಾನೋಪಾಯ ಎಂದೇ ಅರ್ಥ. ಹೊರತು ಯೋಗದರ್ಶನ ಎಂದರ್ಥವಲ್ಲ.

**एवञ्च**

**पूर्वपक्षसमुत्थानमाद्ये हेतोरसिद्धतः ।**
**द्वितीयेऽभ्यधिकाशङ्कानुपपत्तिस्तृतीयके ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् स्मृत्यधिकरणं सम्पूर्णम् ॥१॥**

ಪೂರ್ವಪಕ್ಷಸಮುತ್ಥಾನಮಾದ್ಯೇ ಹೇತೋರಸಿದ್ಧತಾ ।
ದ್ವಿತೀಯೇಽಭ್ಯಧಿಕಾಶಂಕಾನುಪಪತ್ತಿಸ್ತೃತೀಯಕೇ ॥

ಅದ್ವೈತಿಗಳ ಅಧಿಕರಣಶರೀರದಲ್ಲಿ ಮೊದಲನೇ ಸೂತ್ರದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಎರಡನೆಯ ಸೂತ್ರವು ಹೇತು ಅಸಿದ್ಧವಾಗಿದೆ. ಅಭ್ಯಧಿಕಾಶಂಕೆಯೇ ಹುಟ್ಟದ ಕಾರಣ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಸ್ಮೃತ್ಯಧಿಕರಣವು ಸಂಪೂರ್ಣವಾಯಿತು

**प्रकाशः —**

**अवैदिकस्मृतिमात्रेति** ॥ नन्वत्रोक्तं परभाष्यादौ ''एतेनेत्यत्र सतीष्वप्यध्यात्मविषयासु बह्वीषु बौद्धार्हतकापिलकाणादाद्यासु स्मृतिषु सांख्ययोगौ पुमर्थहेतुतया प्रख्यातौ शिष्टपरिगृहीतौ श्रौतलिङ्गेन चोपबृंहिताविति तयोरेव निरासः कृतः'' इतीति चेन्न । तासामपि सर्वज्ञप्रणीतत्वेनाप्तमूलत्वादिना बलवत्त्वोपपादनादिति तात्पर्यात् ।

ಸೂತ್ರದಲ್ಲಿರುವ ಸ್ಮೃತಿಶಬ್ದದಿಂದ ಅವೈದಿಕಸ್ಮೃತಿಗಳೆಲ್ಲವನ್ನೂ ಅಸಂಕುಚಿತವಾಗಿ ಸ್ವೀಕರಿಸಬೇಕು. ಆದರೂ ಸಾಂಖ್ಯಸ್ಮೃತಿ ಮತ್ತು ಯೋಗಸ್ಮೃತಿಗಳನ್ನು ಮಾತ್ರ ವಿವಕ್ಷಿಸಲು ಕಾರಣವಿದೆಯೆಂದು ಶಾಂಕರಭಾಷ್ಯದಲ್ಲಿ ಸಮರ್ಥಿಸಲಾಗಿದೆ. 'ಏತೇನೇತ್ಯತ್ರ ಸತೀಷ್ವಪ್ಯಧ್ಯಾತ್ಮವಿಷಯಾಸು ಬಹ್ವೀಷು ಬೌದ್ಧಾರ್ಹತಕಾಪಿಲಕಾಣಾದಾದ್ಯಾಸು ಸ್ಮೃತಿಷು ಸಾಂಖ್ಯಯೋಗೌ ಪುಮರ್ಥಹೇತುತಯಾ ಪ್ರಖ್ಯಾತೌ ಶಿಷ್ಟಪರಿಗ್ರಹೀತೌ ಶ್ರೌತಲಿಂಗೇನ ಚೋಪಬೃಂಹಿತಾವಿತಿ ತಯೋರೇವ ನಿರಾಸಃ ಕೃತಃ' ''ಅಧ್ಯಾತ್ಮವಿಷಯಕವಾದ ಬೌದ್ಧ, ಆರ್ಹತ, ಕಾಪಿಲ, ಕಣಾದ ಮೊದಲಾದ ಅನೇಕ ಸ್ಮೃತಿಗಳು ಪ್ರಸಿದ್ಧವಾಗಿವೆ. ಆದರೂ ಸಾಂಖ್ಯಸ್ಮೃತಿಗಳು ಮತ್ತು ಯೋಗಸ್ಮೃತಿಗಳು ಪುರುಷಾರ್ಥಪ್ರದವೆಂದು ವಿಶೇಷವಾಗಿ ಹೇಳಲಾಗಿದೆ. ಮತ್ತು ಶಿಷ್ಟಪರಿಗೃಹೀತವಾಗಿವೆ. ಅನೇಕ ಶ್ರುತಿಲಿಂಗಗಳಿಂದ ಯುಕ್ತವಾಗಿವೆ. ಆದ್ದರಿಂದ ಇವೆರಡರ ನಿರಾಕರಣೆಯನ್ನು ವಿಶೇಷವಾಗಿ ಮಾಡುತ್ತಿದ್ದೇವೆ'' ಹೀಗೆ ತಮ್ಮ ಗ್ರಂಥಗಳಲ್ಲಿ ಸಮರ್ಥಿಸಿಕೊಂಡಿದ್ದಾರಲ್ಲವೇ?

ಇದು ತಪ್ಪು. ಬೌದ್ಧಾದಿಸ್ಮೃತಿಗಳೂ ಕೂಡ ಸರ್ವಜ್ಞಪ್ರಣೀತವಾದ್ದರಿಂದ ಆಪ್ತಿಮೂಲಕವೆಂಬ ಕಾರಣದಿಂದ ಬಲವತ್ವವನ್ನು ಅವುಗಳಲ್ಲಿಯೂ ಪ್ರತಿಪಾದನೆ ಮಾಡಬಹುದು. ಹೀಗಿರುವಾಗ ಸಾಂಖ್ಯಸ್ಮೃತಿ, ಯೋಗಸ್ಮೃತಿಗಳು ಮಾತ್ರ ಬಲಿಷ್ಠವೆಂದು ಹೇಳಲಾಗದು.

**प्रकाशः –** ननु स्मृत्यन्तरं समयपादे निरसिष्यत इति न तासामत्र चिन्त्यत्वमिति चेत्समं कापिलस्मृतेरपीत्याह **– यथा चेति ।।**

ಬೇರೆ ಸ್ಮೃತಿಗಳನ್ನು ಸಮಯಪಾದದಲ್ಲಿ ನಿರಾಕರಣೆ ಮಾಡುವುದರಿಂದ ಈ ಪಾದದಲ್ಲಿ ಅವುಗಳ ನಿರಾಕರಣೆಯು ಅಸಂಗತವಾಗುತ್ತದೆ ಅಲ್ಲವೇ ? ಎಂದು ಪ್ರಶ್ನಿಸಬಾರದು. ಕಾಪಿಲಸ್ಮೃತಿಯನ್ನೂ ಕೂಡ 'ರಚನಾನುಪಪತ್ತೇಶ್ಚ' ಇತ್ಯಾದಿ ಸೂತ್ರದಲ್ಲಿ ಮುಂದೆ ನಿರಾಕರಿಸುವವರಿದ್ದಾರೆ. ಹೀಗಿರುವಾಗ ಅವುಗಳ ನಿರಾಕರಣೆ ಈ ಅಧಿಕರಣದಲ್ಲಿ ಅಸಂಗತವೇ ಆಗುತ್ತದೆ.

**प्रकाशः – परैरिति ।। कैश्चित्तु** इतरेषां मन्वादीनां बहूनां कपिलोपदिष्टप्रकारेण तत्वानुपलब्धेस्तज्ज्ञानं भ्रम इत्यर्थ इत्युक्तम् । तन्मते प्रधानादितत्वानामन्यत्रोपलम्भात्तददृष्टसर्वानुपलम्भस्य सन्दिग्धत्वादिति दूषणं ध्येयम् ।।

ವಿಶಿಷ್ಟಾದ್ವೈತದರ್ಶನದಲ್ಲಿ ಎರಡನೆಯ ಸೂತ್ರದ ಅರ್ಥ ಹೀಗಿದೆ - ಕಪಿಲಾದಿ ಋಷಿಗಳಿಗೆ ಗೋಚರವಾದ ಪ್ರಕೃತಿಕಾರಣತ್ವವು ಮನ್ವಾದಿಸ್ಮೃತಿಕಾರರಿಗೆ ಉಪಲಬ್ಧವಾಗಿಲ್ಲ. ಮನ್ವಾದಿಸ್ಮೃತಿಕಾರರ ಅನುಭವವು ಶ್ರುತಿಗೆ ಅನುಗುಣವಾಗಿದೆ. ಕಪಿಲಋಷಿಯ ಅನುಭವ ಶ್ರುತಿಗೆ ವಿರುದ್ಧವಾಗಿದೆ. ಆದ್ದರಿಂದ ಕಾಪಿಲಸ್ಮೃತಿಯು ಅಪ್ರಮಾಣವಾಗಿದೆ. ಅವರ ಅನುಭವವು ಭ್ರಾಂತಿಯಾಗಿದೆ.

ಈ ವ್ಯಾಖ್ಯಾನ ಅಯುಕ್ತ. ಏಕೆಂದರೆ ಪ್ರಧಾನಾದಿ ತತ್ತ್ವಗಳು ಜಗತ್ತಿಗೆ ಕಾರಣವಾಗಿವೆ ಎಂಬುದನ್ನು ಬೇರೆ ಶ್ರುತಿ-ಸ್ಮೃತಿಗಳಲ್ಲಿ ಉಲ್ಲೇಖವಾಗಿರುವುದು ಕಂಡಿದೆ. ಆದ್ದರಿಂದ ಕಪಿಲ ಋಷಿಗೆ ಗೋಚರವಾದ ಪ್ರಕೃತಿಕಾರಣತ್ವವಾದವು ಬೇರೆ ಯಾವ ಸ್ಮೃತಿ-ಶ್ರುತಿಗಳಲ್ಲಿಯೂ ಉಪಲಬ್ಧವಾಗಿಲ್ಲ ಎಂಬ ವ್ಯಾಖ್ಯಾನವೇ ಅಯುಕ್ತವಾಗುತ್ತದೆ.

**प्रकाशः – यच्चोक्तमिति** ।। परैरिति वर्तते । तेषां मते ''वेदवेदान्तप्रवर्तनाधिकृतहिरण्यगर्भप्रणीतत्वान्मोक्षसाधनतया विहितप्रयोगाभिधानादीश्वराभ्युपगमाच्च न सांख्यतौल्यं योगस्येत्येव शङ्का प्रदर्शनात् ।

ಮೂರನೆಯ ಸೂತ್ರ ವ್ಯಾಖ್ಯಾನ ಹೀಗಿದೆ - ಸಕಲ ವೇದ ಹಾಗೂ ವೇದಾಂತಗಳನ್ನು ಹಿರಣ್ಯಗರ್ಭನು ರಚನೆ ಮಾಡಿರುತ್ತಾನೆ. ಆದ್ದರಿಂದ ಕಪಿಲಸ್ಮೃತಿಗಿಂತಲೂ ವಿಶಿಷ್ಟವಾಗಿರುತ್ತದೆ ಎಂಬ ಕಾರಣಕ್ಕಾಗಿ ಮೋಕ್ಷಸಾಧನೆಗೆ ಆವಶ್ಯಕವಾದ ವಿಹಿತಪ್ರಯೋಗಗಳನ್ನು ಹೇಳಿರುವುದರಿಂದ ಈಶ್ವರನಿಂದ ರಚನೆ ಮಾಡಿರುವುದರಿಂದ ಸಾಂಖ್ಯಮತದ ಸಾಮ್ಯವನ್ನು ಯೋಗಶಾಸ್ತ್ರಕ್ಕೆ ವಿವಕ್ಷಿಸಲಾಗದು.

**प्रकाशः** – श्रुत्या काठकश्वेताश्वतरगतयेत्यर्थः ।। **तत्कारणमिति** ।। परभाष्योदाहृतेयं स्मृतिः ।

'ಶ್ರುತ್ಯಾ' ಎಂದರೆ ಕಾಠಕೋಪನಿಷತ್ತು, ಶ್ವೇತಾಶ್ವತರೋಪನಿಷತ್ತಿನಲ್ಲಿರುವ ಶ್ರುತಿವಾಕ್ಯ ಎಂದರ್ಥ. ಪರಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯವನ್ನು 'ತತ್‌ಕಾರಣಮ್' ಎಂದಿದ್ದಾರೆ.

**प्रकाशः** – ननु ''ज्ञानं ध्यानं सांख्ययोगशब्दाभ्यामभिलप्येते'' इति परभाष्योक्तमाशङ्क्याह – **तत्रेति** ।।

'ಜ್ಞಾನಂ ಧ್ಯಾನಂ ಸಾಂಖ್ಯಯೋಗಶಬ್ದಾಭ್ಯಾಮಭಿಲಪ್ಯೇತೇ' ಎಂಬುದಾಗಿ ಪರಭಾಷ್ಯದಲ್ಲಿ ಹೇಳಿದ್ದನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ.

**प्रकाशः** – इहापि श्रुतावपीत्यर्थः । परमते सूत्रत्रयदूषणं सङ्गृह्णाति – **एवञ्चेति**।। एतेन कस्यचिच्छैवस्य मतमपि प्रत्युक्तं ध्येयम् ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे स्मृत्यधिकरणं सम्पूर्णम् ।।१।।**

ಸ್ಮೃತ್ಯಧಿಕರಣ (೨-೧-೧)

'ಇಹಾಪಿ' ಎಂದರೆ ಈ ಶ್ರುತಿಯಲ್ಲಿಯೂ ಕೂಡ ಎಂದರ್ಥ. ಹಿರಣ್ಯಗರ್ಭನಿಗೂ ದೇಹಸಂಪರ್ಕವಿರುವುದರಿಂದ ತಮೋಗುಣದ ಪ್ರಭಾವಿರುತ್ತದೆ. ಆದ್ದರಿಂದ ಅವನೂ ಕೂಡ ತನ್ನ ಎರಡು ಸಿದ್ಧಾಂತಗಳಲ್ಲಿ ಬ್ರಹ್ಮನು ಕೇವಲ ನಿಮಿತ್ತಕಾರಣ ಎಂಬ ಅವೈದಿಕ ಪ್ರಮೇಯಗಳನ್ನು ನಿರೂಪಿಸಿದ್ದಾನೆ. ಆದ್ದರಿಂದ ಅವು ಅಪ್ರಮಾಣ ಎಂದು ಅಭಿಪ್ರಾಯ. ಪರಮತದಲ್ಲಿರುವ ಮೂರೂ ಸೂತ್ರಗಳ ದೋಷವನ್ನು 'ಏವಂಚ' ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ. ಹೀಗೆ ಅದ್ವೈತಮತವನ್ನು ಹಾಗೂ ವಿಶಿಷ್ಟಾದ್ವೈತಮತವನ್ನು ನಿರಾಕರಣೆ ಮಾಡಿದ್ದರಿಂದ ಶೈವರ ಮತವನ್ನೂ ಕೂಡ ಪ್ರತ್ಯೇಕವಾಗಿ ನಿರಾಕರಣೆ ಮಾಡುವ ಅವಶ್ಯಕತೆಯಿರುವುದಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ
ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ಮಾಯಾವಾದಿಗಳ ಅಧಿಕರಣ ರಚನೆ ಹೀಗಿದೆ - ಶ್ರುತಿಗಳಿಂದ ವೇದಾಂತ ತತ್ವಗಳನ್ನು ತಿಳಿಯುವುದು ಬಹಳ ಕಷ್ಟ. ಶ್ರುತಿಗಳ ವ್ಯಾಖ್ಯಾನದಿಂದ ಮಾತ್ರ ಅವುಗಳ ಅರ್ಥವನ್ನು ನಾವು ತಿಳಿಯಬಹುದು. ಸ್ವತಂತ್ರವಾಗಿ ನಮ್ಮಿಂದ ಶ್ರುತಿಯ ಅರ್ಥಗಳನ್ನು ತಿಳಿಯಲು ಸಾಧ್ಯವಿಲ್ಲ. ಶ್ರುತಿಗಳ ವ್ಯಾಖ್ಯಾನವೆಂದರೆ ಸ್ಮೃತಿಗಳೇ ಆಗಿವೆ. ಆದರೆ ಮನುಸ್ಮೃತಿ ಮೊದಲಾದವು ಷೋಡಶಸಂಸ್ಕಾರಾದಿ ಆಚರಣೆಯಲ್ಲಿಯೇ ಕೃತಕೃತ್ಯವಾಗಿವೆ. ಆದ್ದರಿಂದ ಮನ್ವಾದಿ ಶ್ರುತಿಗಳ ಆಧಾರದಿಂದ ಸ್ಮೃತಿಗಳ ಅರ್ಥವನ್ನು ತಿಳಿಯಲಾಗದು. ಕಾಪಿಲಸ್ಮೃತಿಯು ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟಿಯು ಆಗುತ್ತದೆಂದು ನಿರೂಪಣೆ ಮಾಡುತ್ತಿದೆ. ಈ ಕಾಪಿಲಸ್ಮೃತಿಗೆ ಬೇರೆ ಅರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ. ಮತ್ತು ಕಪಿಲನಂತಹ ಮಹರ್ಷಿಗಳು ರಚನೆ ಮಾಡಿರುವುದರಿಂದ ಸರ್ವಥಾ ಅಪ್ರಾಮಾಣ್ಯವನ್ನು ಹೇಳಬಾರದು. ಈ ಸ್ಮೃತಿಗಳಿಗೆ ಅವಿರುದ್ಧವಾಗಿ ವೇದಾಂತವಾಕ್ಯಗಳಿಗೆ ಅರ್ಥವನ್ನು ಹೇಳಬೇಕು. ಹೊರತಾಗಿ ವಿರುದ್ಧವಾಗಿ ಬ್ರಹ್ಮನೇ ಜಗತ್ತಿಗೆ ಕಾರಣನೆಂದು ಹೇಳಬಾರದು. ಇಷ್ಟು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

ಮನ್ವಾದಿಸ್ಮೃತಿಗಳಲ್ಲಿ ಇತರ ಪುರಾಣಾದಿಗಳಲ್ಲಿ ಬ್ರಹ್ಮನೇ ಜಗತ್ತಿಗೆ ಕಾರಣವೆಂಬ ಅನೇಕ ವಾಕ್ಯಗಳಿವೆ. ಕಾಪಿಲಸ್ಮೃತಿಯ ಪ್ರಾಮಾಣ್ಯಕ್ಕಾಗಿ ಪ್ರಕೃತಿಯನ್ನು ಜಗತ್‌ಕಾರಣವೆಂದು ಒಪ್ಪಿದರೆ ಈ ಎಲ್ಲಾ ಸ್ಮೃತಿಗಳ ಪ್ರಾಮಾಣ್ಯವನ್ನು ಕೈಬಿಡಬೇಕಾಗುತ್ತದೆ. ಮನ್ವಾದಿಸ್ಮೃತಿಗಳು ವೇದಗಳಿಗೆ ಅನುಸಾರಿಯಾಗಿವೆ. ಆದ್ದರಿಂದ ಮನ್ವಾದಿಸ್ಮೃತಿಗಳಲ್ಲಿ ಹೇಳಿದ್ದನ್ನೇ ಒಪ್ಪಿ, ವಿರುದ್ಧವಾದ ಸ್ಮೃತಿಗಳನ್ನೇ ಪರಿತ್ಯಾಗ ಮಾಡಬೇಕು. ಪ್ರಧಾನಕಾರಣತ್ವವಾದವನ್ನು ಸಮರ್ಥಿಸುವ ಕಾಪಿಲಸ್ಮೃತಿಯನ್ನು ಅಪ್ರಮಾಣವೆನ್ನಬೇಕು. ಅಂತಹ ಸ್ಮೃತಿಯನ್ನು ರಚನೆ ಮಾಡಿದ ಕಪಿಲಾದಿಗಳು ಸರ್ವಜ್ಞರೂ ಆಗಿರುವುದಿಲ್ಲ. ಹೀಗಿರುವಾಗ ಅಪ್ರಮಾಣವೆನ್ನಲು ಏಕೆ ಸಂಕೋಚ. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ಮಂಡನೆಯು ಅಸಾಧುವಾಗಿದೆ. ಏಕೆಂದರೆ ಶ್ರುತಿಗಳ ಅರ್ಥವನ್ನು ತಿಳಿಯುವುದು ಕ್ಲಿಷ್ಟವೆಂಬ ಉಪಪಾದನೆಯೇ ತಪ್ಪು. ಈಗಾಗಲೇ ಈಕ್ಷತ್ಯಧಿಕರಣದಲ್ಲಿ 'ಗತಿಸಾಮಾನ್ಯಾತ್' ಎಂಬ ಸೂತ್ರದಲ್ಲಿ ಸಕಲ ವೇದಾಂತಗಳು ಒಂದೇ ಅಭಿಪ್ರಾಯವುಳ್ಳವುಗಳು ಎಂದು ಸಮರ್ಥಿಸಿದ್ದೇವೆ. ಬ್ರಹ್ಮನೇ ಜಗತ್ತಿಗೆ ಕಾರಣನಾಗಿದ್ದಾನೆಂಬ ವಿಷಯವನ್ನು ಸಂಪೂರ್ಣ ಸಮನ್ವಯಾಧ್ಯಾಯದಲ್ಲಿ ಸ್ಪಷ್ಟವಾಗಿ ಉಪಪಾದನೆ ಮಾಡಿದ್ದೇವೆ. ಹೀಗಿರುವಾಗ ಶ್ರುತಿಗಳೆಲ್ಲವು ಬಹುಮುಖವಾಗಿರುವುದರಿಂದ ಕ್ಲಿಷ್ಟ ಎಂಬ ವಾದವೇ ತಪ್ಪು.

ಮತ್ತು ಪೂರ್ವಮೀಮಾಂಸೆಯಲ್ಲಿ ಶ್ರುತಿವಿರುದ್ಧವಾದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ನಿಶ್ಚಯಿಸಿದ್ದಾಗಿದೆ. ಹೀಗಿರುವಾಗ ಪುನಃ ಉತ್ತರಮೀಮಾಂಸೆಯ ಈ ಸ್ಮೃತ್ಯಧಿಕರಣದಲ್ಲಿ ಅದೇ ಆಕ್ಷೇಪ ಮಾಡಲು ಸಾಧ್ಯವಿಲ್ಲ. ಮತ್ತು ಸೂತ್ರದಲ್ಲಿರುವ ಸ್ಮೃತಿಯೆಂಬ ಶಬ್ದವು ಅವೈದಿಕವಾದ ಸಕಲ ಸ್ಮೃತಿಗಳನ್ನು ಹೇಳುತ್ತಿದೆ. ಆದರೆ ನೀವು ಅವೈದಿಕ ಸ್ಮೃತಿಗಳಲ್ಲಿ ಸಾಂಖ್ಯಸ್ಮೃತಿಯೆಂಬುದನ್ನು ಮಾತ್ರ ವಿವಕ್ಷಿಸಿ ವ್ಯಾಖ್ಯಾನಿಸುತ್ತಿದ್ದೀರಿ. ಇದು ತಪ್ಪು.

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಸಾಂಖ್ಯಸಿದ್ಧಾಂತ ಹೇಳುವ ಪ್ರಕೃತಿಯಿಂದ ಹುಟ್ಟುವ ಮಹತ್ತತ್ತ್ವ ಅಹಂಕಾರತತ್ವಗಳ ಉಲ್ಲೇಖ ಯಾವುದೇ ಶ್ರುತಿಗಳಲ್ಲಿ ಕಾಣಸುವುದಿಲ್ಲ. ಆದ್ದರಿಂದಲೂ ಕಾಪಿಲಸ್ಮೃತಿಯು ಅಪ್ರಮಾಣವೆಂದು.

ಇದೂ ಕೂಡ ಸರಿಯಲ್ಲ. ಕಾಠಕೋಪನಿಷತ್ತಿನಲ್ಲಿ 'ಮಹತಃ ಪರಮವ್ಯಕ್ತಮ್' ಎಂಬುದಾಗಿ ಮಹತ್ತತ್ತ್ವದ ಉಲ್ಲೇಖವಿರುವುದು ಸ್ಪಷ್ಟವಾಗಿ ಗೋಚರವಾಗುತ್ತಿದೆ.

'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರವನ್ನು ಶಾಂಕರಭಾಷ್ಯದಲ್ಲಿ ಪ್ರತ್ಯೇಕ ಅಧಿಕರಣವೆಂದಿದ್ದಾರೆ. ಸಾಂಖ್ಯಸ್ಮೃತಿಯನ್ನು ನಿರಾಕರಣೆ ಮಾಡಿರುವುದರಿಂದ ಯೋಗಸ್ಮೃತಿಯೂ ಕೂಡ ವೇದವಿರುದ್ಧವಾಗಿರುವ ಕಾರಣದಿಂದಲೇ ನಿರಾಕರಿಸಲ್ಪಟ್ಟಿದೆ ಎಂಬುದು ಅವರ ವ್ಯಾಖ್ಯಾನ.

ಇದೂ ಕೂಡ ತಪ್ಪು. ಯೋಗ ದರ್ಶನದ ನಿರಾಕರಣೆಗಾಗಿ ಪ್ರತ್ಯೇಕ ಅಧಿಕರಣದ ಅವಶ್ಯಕತೆಯಿಲ್ಲ. 'ತತ್ ಕಾರಣಂ ಸಾಂಖ್ಯಯೋಗಾಧಿಮ್ಯಂ' ಎಂದು ಸಾಂಖ್ಯವೂ ಕೂಡ ವೇದಾಂತದರ್ಶನವೆಂದೇ ಪರಿಗ್ರಹೀತವಾಗಿದೆ. ಒಂದು ವೇಳೆ ಸಾಂಖ್ಯಶಬ್ದಕ್ಕೆ ತತ್ತ್ವಜ್ಞಾನ ಎಂಬರ್ಥವನ್ನು ವಿವಕ್ಷಿಸಿ ವ್ಯಾಖ್ಯಾನ ಮಾಡುವುದಾದರೆ, ನಾವೂ ಕೂಡ

ಯೋಗಶಬ್ದಕ್ಕೆ ಜ್ಞಾನೋಪಾಯ ಎಂಬ ಅರ್ಥವನ್ನು ಸ್ವೀಕರಿಸಿ, ಯೋಗದರ್ಶನವಲ್ಲವೆಂದು ಸಮರ್ಥಿಸುತ್ತೇವೆ. ಆದ್ದರಿಂದ

ಪೂರ್ವಪಕ್ಷಸಮುತ್ಥಾನಮಾದ್ಯೇ ಹೇತೋರಸಿದ್ಧತಾ ।
ದ್ವಿತೀಯೇಽಭ್ಯಧಿಕಾಶಂಕಾನುಪಪತ್ತಿಸ್ತೃತೀಯಕೇ ॥

ಅದ್ವೈತಿಗಳ ಅಧಿಕರಣಶರೀರದಲ್ಲಿ ಮೊದಲನೇ ಸೂತ್ರದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಎರಡನೆಯ ಸೂತ್ರದ ಹೇತು ಅಸಿದ್ಧವಾಗಿದೆ. ಅಭ್ಯಧಿಕಾಶಂಕೆಯೇ ಹುಟ್ಟದ ಕಾರಣ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ.

* * * * *

ಪರಿಪೂರ್ಣಚಂದ್ರಿಕಾ

# ಸ್ಮೃತ್ಯಧಿಕರಣ
(೨-೧-೧)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣ ಟೀಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

## द्वितीयाध्याये प्रथमः पादः

### स्मृत्यधिकरणम् ।। २।१।१।।

**न्या.वि.— रुद्रादीनां सकाशात् विष्ण्वादीनामेवाप्तत्वम् ।। श्रुत्यनुसारित्वात् ।।**

ನ್ಯಾಯವಿವರಣೆ

ರುದ್ರಾದಿಗಳಿಗಿಂತಲೂ ಮಹಾವಿಷ್ಣುವೇ ಹೆಚ್ಚು ಆಪ್ತನಾಗಿದ್ದಾನೆ. ಇಂಥ ಪರಮಾಪ್ತನಾದ ವಿಷ್ಣುವಿನಿಂದ ಪ್ರಣೀತವಾದ ಪಂಚರಾತ್ರಾದಿಸ್ಮೃತಿಗಳೇ ಶ್ರೇಷ್ಠಪ್ರಮಾಣಗಳು ಶ್ರುತಿಸಂವಾದವಿರುವುದೂ ಕೂಡ ಮತ್ತೊಂದು ಹೆಗ್ಗಳಿಕೆ.

।। श्री रामकृष्णवेदव्यासात्मक श्रीहयग्रीवाय नमः ।।

भा.बो.— आनन्दमयाद्युपलक्षिताशेषवैदिकशब्दसमन्वयेन सिद्धे जगज्जन्मादिऽकारणत्वादौ प्रथमाध्यायार्थे युक्त्यादिविरोधपरिहारार्थमयं द्वितीयोऽध्यायः प्रवृत्तः । तत्र सर्वविरोधानां युक्तिमूलकत्वाद्युक्तेरेव प्राधान्यात् तद्विरोधपरिहारार्थोऽयं प्रथमः पादः प्रवृत्तः ।

## ನ್ಯಾಯವಿವರಣೆ ಭಾವಬೋಧ

ಆನಂದಮಯ ಮೊದಲಾದ ಎಲ್ಲಾ ವೈದಿಕ ಶಬ್ದಗಳ ಸಮನ್ವಯದಿಂದ ಮಹಾವಿಷ್ಣುವೇ ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಮೊದಲನೆಯ ಅಧ್ಯಾಯದಲ್ಲಿ ನಿರ್ಣಯವಾಯಿತು. ಈ ವಿಷಯದಲ್ಲಿ ಯುಕ್ತಿ, ಸಮಯಾದಿವಿರೋಧಗಳನ್ನು ಪರಿಹರಿಸಲು ಎರಡನೆಯ ಈ ಅಧ್ಯಾಯವು ಹೊರಟಿದೆ.

भा.बो.— एतत्पादीयाधिकरणपूर्वपक्षसिद्धान्तन्यायाः सङ्ग्रहेणानुव्याख्यायामुक्ताः ।।

आप्तता समतादृष्टिश्रुतिसाम्यबलोद्भवाः ।
सर्वानुसारो लघुता विशेषाऽदर्शनाऽफले ।।
इष्टासिद्धिश्च नियमः पूर्वपक्षेषु युक्तयः ।
एता एव त्वतिबलाः सिद्धान्तस्य नियामकाः ।। इति ।

ನಾಕು ಬಗೆಯ ವಿರೋಧಗಳೂ ಕೂಡ ಯುಕ್ತಿಮೂಲಕವಾದ್ದರಿಂದ ಯುಕ್ತಿವಿರೋಧವೇ ಪ್ರಬಲವಾಗುತ್ತವೆ. ಆದ್ದರಿಂದ ಪ್ರಥಮಪಾದದಲ್ಲಿ ಬಲಿಷ್ಠವಾದ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಈ ಯುಕ್ತಿಪಾದದಲ್ಲಿರುವ ಎಲ್ಲಾ ಅಧಿಕರಣಗಳ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ಆಪ್ತತಾ ಸಮತಾದೃಷ್ಟಿಶ್ರುತಿಸಾಮ್ಯಬಲೋದ್ಭವಾಃ।
ಸರ್ವಾನುಸಾರೋ ಲಘುತಾ ವಿಶೇಷಾऽದರ್ಶನಾऽಫಲೇ॥
ಇಷ್ಟಾಸಿದ್ಧಿಶ್ಚ ನಿಯಮಃ ಪೂರ್ವಪಕ್ಷೇಷು ಯುಕ್ತಯಃ।
ಏತಾ ಏವ ತ್ವತಿಬಲಾಃ ಸಿದ್ಧಾಂತಸ್ಯ ನಿಯಾಮಕಾಃ॥

೧. ಆಪ್ತತ್ವ, ೨. ಸಮತಾ, ೩. ಅದೃಷ್ಟಿ, ೪. ಶ್ರುತಿಸಾಮ್ಯ, ೫. ಬಲೋದ್ಭವ, ೬. ಸರ್ವಾನುಸಾರ, ೭. ಲಘುತ್ವ, ೮. ವಿಶೇಷಾದರ್ಶನ, ೯. ಅಫಲ, ೧೦. ಇಷ್ಟಾಸಿದ್ಧಿ, ೧೧. ನಿಯಮ ಇವುಗಳು ಪೂರ್ವಪಕ್ಷ ಯುಕ್ತಿಗಳು.

ಇದೇ ಯುಕ್ತಿಗಳು ಶ್ರುತಿ ಹಾಗೂ ಬಲಿಷ್ಠವಾದ ಆಗಮಗಳ ಸಹಾಯದಿಂದ ಸಿದ್ಧಾಂತಯುಕ್ತಿಗಳೂ ಆಗುತ್ತವೆ.

भा.बो.— ।। स्मृत्यनवकाशदोषप्रसङ्ग इति चेन्नाऽन्यस्मृत्यनवकाशदोषप्रसङ्गात् ।।

इत्यत्र मतविमत्या जगजन्मादिकर्तृत्वं विष्णोर्युक्तं न वेति सन्देहे न युक्तमिति पूर्वः पक्षः । युक्तमेवेति सिद्धान्तः । तत्र 'आप्तता' इत्युक्तन्यायं पूर्वपक्ष-सिद्धान्तोभयसम्बन्धित्वेन विवृणोति — रुद्रादीनामिति ।।

ಸ್ಮೃತ್ಯಧಿಕರಣ (೨-೧-೧)

'ಸ್ಮೃತ್ಯನವಕಾಶದೋಷಪ್ರಸಂಗಾತ್ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರದಲ್ಲಿ ಮತಗಳ ವಿರುದ್ಧಾಭಿಪ್ರಾಯವಿರುವುದರಿಂದ ಜಗಜ್ಜನ್ಮಾದಿಕರ್ತೃತ್ವ ಎಂಬುದು ವಿಷ್ಣುವಿನಲ್ಲಿ ಯುಕ್ತವಾಗುತ್ತದೋ, ಇಲ್ಲವೋ ? ಎಂಬುದು ಸಂದೇಹ. ಜಗಜ್ಜನ್ಮಾದಿಕರ್ತೃತ್ವವು ಯುಕ್ತವಾಗುವುದಿಲ್ಲವೆಂದು ಪೂರ್ವಪಕ್ಷ. ಜಗಜ್ಜನ್ಮಾದಿಕರ್ತೃತ್ವ ವಿಷ್ಣುವಿನಲ್ಲಿ ಸರ್ವಥಾ ಸಿದ್ಧವಾಗುತ್ತದೆಂಬುದು ಸಿದ್ಧಾಂತ. 'ಆಪ್ತತಾ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ನ್ಯಾಯವನ್ನು ಪೂರ್ವಪಕ್ಷ ಹಾಗೂ ಸಿದ್ಧಾಂತ ಎರಡಕ್ಕೂ ಸಂಬಂಧಪಟ್ಟಂತೆ ವಿವರಿಸುತ್ತಿದ್ದಾರೆ 'ರುದ್ರಾದೀನಾಂ' ಎಂಬ ಮೂಲದಿಂದ.

भा.बो.—अनेन 'रुद्रादीनामाप्तत्वंपूर्वपक्षन्यायः' इति सूचितं भवति । तथा च रुद्रादीनां जगद्धितोपदेष्टृत्वेन सर्वज्ञत्वेन वाक्यार्थज्ञानादिमत्त्वरूपाप्ततावत्त्वात् तद्विरचितानां स्मृतीनां दोषाभावगुणयुक्ततया प्रबलत्वेन निरवकाशत्वात् तद्विरुद्धाभिधायकश्रुतेरप्रामाण्यस्यैव प्रसङ्गान्न तया विष्णोर्जगत्कारणत्वं सिद्धतीति पूर्वः पक्ष इति भावः ।

ಈ ವಾಕ್ಯದಿಂದ ರುದ್ರಾದಿಗಳಲ್ಲಿ ಇರುವ ಆಪ್ತತ್ವವು ಪೂರ್ವಪಕ್ಷನ್ಯಾಯವಾಗಿದೆ ಎಂದು ಸೂಚಿಸಿದಂತಾಯಿತು. ಆದ್ದರಿಂದ ರುದ್ರಾದಿಗಳು ಜಗತ್ತಿಗೆ ಹಿತವಾದದ್ದನ್ನು ಉಪದೇಶ ಮಾಡುವುದರಿಂದ ಮತ್ತು ಸರ್ವಜ್ಞರಾಗಿರುವುದರಿಂದ ವಾಕ್ಯಾರ್ಥಜ್ಞಾನಾದಿಮತ್ತ್ವ ಎಂಬ ಆಪ್ತತ್ವವೆಂಬ ಗುಣವನ್ನು ಹೊಂದಿರುವುದರಿಂದ ಅವರಿಂದ ರಚಿಸಲ್ಪಟ್ಟ ಪಾಶುಪತಾದಿಸ್ಮೃತಿಗಳು ಪ್ರಮಾಣವಾಗಿವೆ. ಮತ್ತು ಯಾವುದೇ ದೋಷಗಳಿಲ್ಲದ ಕಾರಣ ದೋಷಾಭಾವವೆಂಬ ಗುಣದಿಂದ ಯುಕ್ತವಾಗಿರುವುದರಿಂದ ಪ್ರಬಲವಾಗಿವೆ. ಆದ್ದರಿಂದಲೇ ನಿರವಕಾಶ ಆಗಿವೆ. ಇಂಥ ನಿರವಕಾಶವಾದ ಪಾಶುಪತಾದಿಸ್ಮೃತಿಗಳಿಗೆ ವಿರುದ್ಧವಾಗಿ ವಿಷ್ಣುವಿನ ಜಗತ್ಕಾರಣತ್ವವನ್ನು ಸಮರ್ಥಿಸುವ ಶ್ರುತಿಗೆ ಅಪ್ರಾಮಾಣ್ಯಪ್ರಸಂಗವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್‌ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ನ್ಯಾಯವಿವರಣ ಟೀಕೆಯಲ್ಲಿ

ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು.

भा.बो.—**'विष्ण्वादीनामेव'** इत्येवकारेण सिद्धान्तयुक्तेः प्राबल्यमाह । तत्र हेतुमाह — **श्रुतीति** ।। विष्ण्वादिविरचितस्मृतीनामिति शेषः । अत्र श्रुत्यनुसारो नाम यथातथं तत्संवादस्तन्मूलत्वं चेति द्वयमपि ग्राह्यम् । अनेन **पाशुपतादिश्रुतीनां** श्रुतिविरोधेनाप्यप्रामाण्यमुक्तं भवति ।

ಪರಿಪೂರ್ಣಚಂದ್ರಿಕಾ

'ವಿಷ್ಣ್ವಾದೀನಾಮೇವ' ಎಂಬಲ್ಲಿರುವ ಏವಕಾರದಿಂದ ಸಿದ್ಧಾಂತಯುಕ್ತಿಯಲ್ಲಿ ಪ್ರಾಬಲ್ಯವಿರುತ್ತದೆಂದು ತಿಳಿಸಿದ್ದಾರೆ. ಇದೇ ವಿಷಯದಲ್ಲಿ ಹೇತುವನ್ನು 'ಶ್ರುತ್ಯನುಸಾರಿತ್ವಾತ್' ಎಂಬ ವಾಕ್ಯದಿಂದ ಹೇಳಿದ್ದಾರೆ. ವಿಷ್ಣುವಿನಿಂದ ವಿರಚಿತವಾದ ಪಂಚರಾತ್ರಾದಿಸ್ಮೃತಿಗಳಿಗೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅಂದರೆ ಪಂಚರಾತ್ರಾದಿಸ್ಮೃತಿಗಳಿಗೆ ಶುತಿಯ ಅನುಗುಣ್ಯವಿರುವುದರಿಂದ ಪರಮಪ್ರಮಾಣವಾಗಿವೆ ಎಂದರ್ಥ. ಶ್ರುತಿಯ ಆನುಗುಣ್ಯವಿದೆ ಎಂಬುದರ ಅಭಿಪ್ರಾಯವೇನೆಂದರೆ ಶ್ರುತಿಯಲ್ಲಿಹೇಳಿದಂತೆಯೇ ಪಂಚರಾತ್ರಾದಿಸ್ಮೃತಿಗಳಲ್ಲಿಯೂ ಹೇಳಲಾಗಿದೆ ಎಂದು, ಅಥವಾ ಶ್ರುತಿಮೂಲವಾಗಿದೆ ಎಂದೂ ಕೂಡ ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ ಪಾಶುಪತಾದಿಸ್ಮೃತಿಗಳಿಗೆ ಶ್ರುತಿವಿರೋಧದಿಂದ ಅಪ್ರಾಮಾಣ್ಯವನ್ನು ಹೇಳಿದಂತಾಯಿತು.

**तथा च वैष्णवस्मृतीनां परमाप्तैर्विष्ण्वादिभिः प्रणीतत्वेन निरवकाशत्वात् पाशुपतादिस्मृतीनां तद्विरोध एवाप्रामाण्यप्रसङ्गात् सुतरां तत्साहाय्यवत्या श्रुत्या विरोधेऽप्रामाण्यप्रसङ्ग इति युक्तमेव विष्णोर्जगत्कर्तृत्वमिति भावः ।**

ಆದ್ದರಿಂದ ವೈಷ್ಣವಸ್ಮೃತಿಯೆನಿಸಿದ ಪಂಚರಾತ್ರಾದಿಸ್ಮೃತಿಗಳು ಸರ್ವಜ್ಞತಮನಾದ ಪರಮಾಪ್ತನಾದ ಮಹಾವಿಷ್ಣುವಿನಿಂದ ವಿರಚಿತವಾದ ಕಾರಣ ನಿರವಕಾಶವಾಗಿವೆ. ಪಾಶುಪತಾದಿಸ್ಮೃತಿಗಳಿಗೆ ಇಂಥ ಪಂಚರಾತ್ರಾದಿಸ್ಮೃತಿಗಳಿಂದ ವಿರೋಧ ಬರುವುದರಿಂದ ಅಪ್ರಾಮಾಣ್ಯಪ್ರಸಂಗವು ಬರುತ್ತದೆ. ಆದ್ದರಿಂದ ಶ್ರುತಿಸಹಾಯವಿರುವ ಪಂಚರಾತ್ರಾದಿಸ್ಮೃತಿಗಳಲ್ಲಿ ಹೇಳಿದಂತೆ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

ಇಲ್ಲಿಗೆ ಶ್ರೀಮನ್ನ್ಯಾಯವಿವರಣ ಭಾವಬೋಧದಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು.

* * * * *

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## स्मृत्यधिकरणम् (२।१।१)

अणुभाष्यम्

'सर्वदोषोज्झितस्तस्मात् भगवान् पुरुषोत्तमः ।
उक्ता गुणाश्चाविरुद्धास्तस्य वेदेन सर्वशः '

ಸರ್ವದೋಷಜ್ಝಿತಸ್ತಸ್ಮಾತ್ ಭಗವಾನ್ ಪುರುಷೋತ್ತಮಃ।
ಉಕ್ತಾ ಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ॥

ಷಡ್ಗುಣೈಶ್ವರ್ಯ ಸಂಪನ್ನನಾದ ಪುರುಷೋತ್ತಮನಾದ ನಾರಾಯಣನು ಸಕಲದೋಷರಹಿತನಾದ್ದರಿಂದ ಹಿಂದಿನ ಸಮನ್ವಯಾಧ್ಯಾಯದಲ್ಲಿ ನಿರ್ಣಯಿಸಿದ ಸಕಲ ಗುಣಪರಿಪೂರ್ಣತ್ವ ವಿಷಯವು ಅವಿರುದ್ಧವಾಗಿ ನಿರ್ಣಯವಾಗುತ್ತದೆ. ಆದ್ದರಿಂದ ಸಮಗ್ರವೇದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ.

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## स्मृत्यधिकरणम् (२।१।१)

ननु यदुक्तं अतोऽनन्तगुण इति तदसाध्विव । तत्र युक्त्यादिभिर्विरोधात् । तत एव हरेर्दोषित्वस्याप्यापाताच्चेति । अतः प्राप्तो द्वितीयोऽध्यायः । तस्यैकवाक्यत्वसिद्धये प्रतिपाद्योक्तिपरतया -

'सर्वदोषोज्झितस्तस्मात् भगवान् पुरुषोत्तमः ।
उक्ता गुणाश्चाविरुद्धास्तस्य वेदेन सर्वशः '

इति अन्तिमभाष्यमादावाकृष्य योज्यम् ।

ಸಮನ್ವಯಾಧ್ಯಾಯದಲ್ಲಿ ಎಲ್ಲಾ ವೈದಿಕಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾ ಅನಂತಗುಣಪರಿಪೂರ್ಣನಾಗಿದ್ದಾನೆಂದು ನಿರ್ಣಯಿಸಲಾಯಿತು. ಇದು ಅಸಾಧು ಎಂದು ತೋರುತ್ತದೆ. ಏಕೆಂದರೆ ಸಮನ್ವಯ ವಿಷಯದಲ್ಲಿ ಯುಕ್ತಿವಿರೋಧ, ಸಮನ್ವಯವಿರೋಧ, ಶ್ರುತಿವಿರೋಧ ಮತ್ತು ಯುಕ್ತಿಸಹಿತವಾದ ಶ್ರುತಿವಿರೋಧಗಳು ಬರುತ್ತವೆ. ಅಷ್ಟೇ ಅಲ್ಲದೇ ಪರಮಾತ್ಮನು ಗುಣವುಳ್ಳವನಾದರೆ ದೋಷವುಳ್ಳವನೂ ಕೂಡ ಆಗಲಿ ಎಂಬ ಆಪಾದನೆಯನ್ನು ಎದುರಿಸಬೇಕಾಗುತ್ತದೆ.

ಮೇಲಿನ ಆಕ್ಷೇಪವನ್ನು ಪರಿಹರಿಸಲು ಅವಿರೋಧಾಧ್ಯಾಯವೆಂಬ ಈ ಎರಡನೆಯ ಅಧ್ಯಾಯವು ಹೊರಟಿದೆ. ಈ ಅಧ್ಯಾಯದಲ್ಲಿ ಹೇಳಲ್ಪಟ್ಟ ಎಲ್ಲಾ ವಿಷಯಗಳಿಗೆ ಏಕವಾಕ್ಯತ್ವವನ್ನು ದೊರಕಿಸಲು ಎರಡನೆಯ ಅಧ್ಯಾಯದ ಸಮಗ್ರ ಸಾರವನ್ನು ಹೇಳುವ ಅಧ್ಯಾಯದ ಕೊನೆಯ ಅಣುಭಾಷ್ಯದ ಶ್ಲೋಕವನ್ನು ಪ್ರಾರಂಭದಲ್ಲಿಯೂ ಆಕರ್ಷಣೆ ಮಾಡಿ ಯೋಜನೆ ಮಾಡಿಕೊಳ್ಳಬೇಕು.

तथा हि । उक्ता इत्यावर्त्यम् । सर्वशः इत्यपि । तस्य भगवतः । सर्वशो वेदेन कृत्स्नवेदेन । पूर्वाध्यायोक्तन्यायानुगृहीतेनेति भावः । उक्ताः सर्वशो गुणाः

सर्वकर्तृत्वादयो गुणाः अविरुद्धाश्च युक्तिसमयादिविरोधहिताश्चोक्ताः । सूत्रकृता प्रतिपादिता इत्यर्थः ।

'ಉಕ್ತಾಃ' ಎಂಬುದನ್ನು ಎರಡು ಬಾರಿ ಆವೃತ್ತಿ ಮಾಡಿಕೊಳ್ಳಬೇಕು. 'ಸರ್ವಶಃ' ಎಂಬುದನ್ನೂ ಕೂಡ ಎರಡು ಬಾರಿ ಆವೃತ್ತಿ ಮಾಡಿಕೊಳ್ಳಬೇಕು. 'ತಸ್ಯ' ಭಗವಂತನಿಗೆ, 'ಸರ್ವಶಃ' = ಸಮಗ್ರವಾದ, 'ವೇದೇನ' = ವೇದದಿಂದ, ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟ ನ್ಯಾಯಗಳಿಂದ ಸಹಿತವಾದ ಎಂದಭಿಪ್ರಾಯ. 'ಉಕ್ತಾಃ' = ಹಿಂದೆ ಹೇಳಲ್ಪಟ್ಟ ಎಲ್ಲಾ ಬಗೆಯ, ಗುಣಾಃ = ಸರ್ವಕರ್ತೃತ್ವಾದಿಗುಣಗಳು, ಅವಿರುದ್ಧಾಃ = ಯುಕ್ತಿ, ಸಮಯ ಮೊದಲಾದವುಗಳ ವಿರೋಧದಿಂದ ರಹಿತವಾಗಿವೆ. ಇತಿ ಉಕ್ತಾಃ = ಸೂತ್ರಕಾರದಿಂದ ಪ್ರತಿಪಾದಿಸಲ್ಪಟ್ಟವೆ.

तस्मात् सर्वविरोधानां परिहृतत्वात् भगवान् पुरुषोत्तमः । सर्वदोषोज्झित उक्तः प्रतिपादित इति । पूर्वोक्तार्थे प्रतीताशेषविरोधनिरासेन निर्दोषाशेषगुणता हरेरत्र निर्णीता सूत्रकृतेति यावत् ।

ಆದ್ದರಿಂದ ಎಲ್ಲಾ ಬಗೆಯ ವಿರೋಧಗಳನ್ನು ಪರಿಹರಿಸುತ್ತಿರುವುದರಿಂದ ಪುರುಷೋತ್ತಮನಾದ ಸದ್ಗುಣೈಶ್ವರ್ಯಸಂಪನ್ನನಾದ ನಾರಾಯಣನು ಎಲ್ಲಾ ದೋಷಗಳಿಂದ ರಹಿತನಾಗಿದ್ದಾನೆ. ಆದ್ದರಿಂದ ಹಿಂದಿನ ಅಧ್ಯಾಯದಲ್ಲಿ ಸಮರ್ಥಿಸಲ್ಪಟ್ಟ ಸಕಲ ಗುಣಪರಿಪೂರ್ಣತ್ವ ವಿಷಯದಲ್ಲಿ ಆಪಾತತಃ ತೋರುವ ಎಲ್ಲಾ ವಿರೋಧವನ್ನು ಪರಿಹರಿಸುವುದರಿಂದ ಮಹಾವಿಷ್ಣುವೇ ಸಕಲಗುಣಪರಿಪೂರ್ಣನೆಂದು ಸೂತ್ರಕಾರರು ನಿರ್ಣಯಿಸಿದ್ದಾರೆ.

आद्यपादार्थोक्तिपरतया 'नायुक्तं तद्वदेत् श्रुतिः' इत्यप्यादावाकृष्य योज्यम् । 'अतोऽनन्तगुणः' इत्युक्तं प्रमेयं नायुक्तम् युक्तिविरुद्धं न वदेत् श्रुतिरित्याह आत्राद्यपादे सूत्रकृदिति शेषः । युक्तिसमय-श्रुति-युक्त्युपेतश्रुतिविरोधभेदेन विरोधस्य स्मृत्यविरोधपरस्य युक्तिविरोधपरत्वमप्यस्ति । स्मृतिविरोधस्य युक्तिसमयादि-चतुर्विधविरोधरूपत्वादिति भावः ।

ಅಣುಭಾಷ್ಯದ ಈ ಅಧ್ಯಾಯದ ಎರಡನೆಯ ಶ್ಲೋಕದಲ್ಲಿರುವ 'ನಾಯುಕ್ತಂ ತದ್ವದೇತ್ ಶ್ರುತಿಃ' ಎಂಬುದನ್ನು ಮೊದಲನೆಯ ಪಾದದ ಸಾರಸಂಗ್ರಹ ವಾಕ್ಯವಾಗಿ ಆರಂಭದಲ್ಲಿಯೂ ಯೋಜನೆ ಮಾಡಿಕೊಳ್ಳಬೇಕು. 'ಅತೋऽನಂತಗುಣಃ' 'ಪರಮಾತ್ಮನು ಅನಂತಗುಣಪರಿಪೂರ್ಣನಾಗಿದ್ದಾನೆ' ಎಂಬುದಾಗಿ ಪ್ರಥಮಾಧ್ಯಾಯದಲ್ಲಿ ಹೇಳಿದ ಪ್ರಮೇಯವು ಅಯುಕ್ತವಲ್ಲ. ಶ್ರುತಿಯು ಯುಕ್ತಿವಿರೋಧವನ್ನು

ಹೇಳುವುದಿಲ್ಲ. ಹೀಗೆ ಯುಕ್ತಿವಿರೋಧದ ಪರಿಹಾರವನ್ನು ಮೊದಲನೆಯ ಪಾದದಲ್ಲಿ ಸೂತ್ರಕಾರರು ಮಾಡಿರುತ್ತಾರೆ. ಇಷ್ಟು ಅಣುಭಾಷ್ಯದ ಅಭಿಪ್ರಾಯ. ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ, ಯುಕ್ತಿಸಹಿತವಾದ ಶ್ರುತಿವಿರೋಧ ಹೀಗೆ ನಾಕು ಬಗೆಯ ವಿರೋಧಗಳ ಪರಿಹಾರವನ್ನು ಈ ಅಧ್ಯಾಯದ ನಾಕು ಪಾದಗಳಲ್ಲಿ ಕ್ರಮವಾಗಿ ಮಾಡುತ್ತಿದ್ದಾರೆ. ಇವುಗಳಲ್ಲಿ ಯುಕ್ತಿವಿರೋಧವು ಪ್ರಬಲವಾಗಿರುವುದರಿಂದ ಮೊದಲು ಯುಕ್ತಿವಿರೋಧವನ್ನು ಪರಿಹರಿಸಿದ್ದಾರೆ. ಮೊದಲನೆಯ ಅಧಿಕರಣವಾದ ಸ್ಮೃತ್ಯಧಿಕರಣದಲ್ಲಿ ಸ್ಮೃತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಈ ಸ್ಮೃತಿವಿರೋಧವು ಯುಕ್ತಿ, ಸಮಯ ಮೊದಲಾದ ನಾಕು ಬಗೆಯ ವಿರೋಧರೂಪವಾಗಿರುವುದರಿಂದ ಬಲಿಷ್ಠವಾಗಿದೆ. ಆದ್ದರಿಂದ ಇದನ್ನು ಮೊದಲು ಪರಿಹರಿಸಿದ್ದಾರೆ. ಸ್ಮೃತಿವಿರೋಧವು ಯುಕ್ತಿ ವಿರೋಧರೂಪವೂ ಆಗಿರುವುದರಿಂದ ಯುಕ್ತಿಪಾದದಲ್ಲಿ ಇದು ಸಂಗತವೂ ಆಗುತ್ತದೆ.

**अणुभाष्यम् - श्रौतस्मृतिविरुद्धत्वात् स्मृतयो न गुणान् हरेः ।**
**निषेद्धुं शक्नुयुरिति ।**

ಶ್ರುತಿಸಂವಾದಿಯಾದ ಪಂಚರಾತ್ರಾದಿಸ್ಮೃತಿಗಳು ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಸಮರ್ಥಿಸುತ್ತಿವೆ. ಬಲಿಷ್ಠವಾದ ಪಂಚರಾತ್ರಾದಿಸ್ಮೃತಿಗಳು ಭಗವಂತನಲ್ಲಿ ಗುಣಪರಿಪೂರ್ಣತ್ವವನ್ನು ಸಮರ್ಥಿಸುತ್ತಿವೆ. ಶ್ರುತಿ-ಸ್ಮೃತಿವಿರುದ್ಧವಾದ ಪಾಶುಪತಾದಿಸ್ಮೃತಿಗಳಿಗೆ ಶ್ರುತಿಗಳನ್ನು ವಿರೋಧಿಸಲು ಸಾಮರ್ಥ್ಯವಿರುವುದಿಲ್ಲ.

ननु यदुक्तं अतोऽनन्तगुण इति । तन्न । शैवसांख्यबौद्धार्हतादिस्मृतिषु शिवादेरेव सर्वकर्तृत्वादिमहिम्नो वर्णनेन तद्विरोधात् । न च तासामप्रामाण्यम् । सर्वज्ञशिवादिप्रत्यक्षमूलत्वेन तदयोगादित्याशंक्य तन्निरासाय प्राप्तं — **स्मृत्यनवकाशे-त्यादिसूत्रत्रयम् ।**

ಪ್ರಥಮಾಧ್ಯಾಯದಲ್ಲಿ ವಿಷ್ಣುವೇ ಅನಂತಗುಣಪರಿಪೂರ್ಣನಾಗಿದ್ದಾನೆಂದು ಸಮರ್ಥಿಸಲಾಯಿತು. ಇದು ಸರಿಯಲ್ಲ. ಏಕೆಂದರೆ ಶೈವ, ಸಾಂಖ್ಯ, ಬೌದ್ಧ, ಆರ್ಹತ ಮೊದಲಾದ ಸ್ಮೃತಿಗಳಲ್ಲಿ ಶಿವಾದಿಗಳಲ್ಲಿಯೇ ಸರ್ವಕರ್ತೃತ್ವ ಎಂಬ ಮಹಿಮೆಯನ್ನು ವರ್ಣಿಸಲಾಗಿದೆ. ಅದರ ವಿರೋಧವು ಶ್ರುತಿಗಳಿಗೆ ಪ್ರಾಪ್ತವಾಗುತ್ತದೆ.

ಶೈವಾದಿ ಸ್ಮೃತಿಗಳನ್ನು ಅಪ್ರಮಾಣವೆಂದು ಹೇಳಬಾರದು. ಏಕೆಂದರೆ ಶಿವಾದಿಗಳೆಲ್ಲರೂ ಸರ್ವಜ್ಞರಾಗಿದ್ದಾರೆ. ಅಂಥ ಸರ್ವಜ್ಞರಾದ ಶಿವಾದಿಗಳ ಪ್ರತ್ಯಕ್ಷ ಮೂಲಕವಾದ್ದರಿಂದ ಪಾಶುಪತಾದಿಸ್ಮೃತಿಗಳು ಪರಮಪ್ರಮಾಣವಾಗುತ್ತವೆ. ಈ ಆಶಂಕೆಯನ್ನು ನಿರಾಕರಿಸಲು 'ಸ್ಮೃತ್ಯನವಕಾಶದೋಷ' ಇತ್ಯಾದಿ ಮೂರು ಸೂತ್ರಗಳು ಹೊರಟಿವೆ. ಅದರ ಅರ್ಥವನ್ನೇ ಅಣುಭಾಷ್ಯದಲ್ಲಿ 'ಶ್ರೌತಸ್ಮೃತಿವಿರುದ್ಧತ್ವಾತ್' ಎಂದು ಸಂಗ್ರಹಿಸಿದ್ದಾರೆ.

श्रौतीभिः श्रुतिसंवादिनीभिः पञ्चरात्रादिभिः स्मृतिभिः विरुद्धत्वात् विशेषेण रुद्धत्वात् बाधितत्वादिति यावत् शैवादिस्मृतयो हरेर्गुणान् निषेद्धुं न शक्नुयुः । तद्भावबोधनाक्षमा इत्यर्थः । सर्वज्ञतमविष्णुप्रत्यक्षमूलत्वात् श्रुतिसंवादाच्च वैष्णत्वस्मृतीनां प्राबल्यमिति भावः ।

ಶೈವ, ಸಾಂಖ್ಯಾದಿ ಸ್ಮೃತಿಗಳು ಶ್ರುತಿಸಂವಾದಿಯಾದ ಪಂಚರಾತ್ರಾದಿಸ್ಮೃತಿಗಳಿಂದ ವಿರುದ್ಧವಾಗಿವೆ. ವಿಶೇಷವಾಗಿ ಬಾಧಿತವಾಗಿವೆ. ಆದ್ದರಿಂದ ಪಂಚರಾತ್ರಾದಿಸ್ಮೃತಿಗಳಿಂದ ಸಿದ್ಧವಾಗುವ ವಿಷ್ಣುವಿನ ಸರ್ವಕರ್ತೃತ್ವಾದಿಗುಣಗಳನ್ನು ವಿರೋಧಿಸಲು ಪಾಶುಪತಾದಿಸ್ಮೃತಿಗಳಿಗೆ ಸಾಮರ್ಥ್ಯವಿಲ್ಲ. ಏಕೆಂದರೆ ಸರ್ವಜ್ಞತಮನಾದ ವಿಷ್ಣುವಿನ ಪ್ರತ್ಯಕ್ಷಮೂಲಕವಾಗಿರುವುದರಿಂದ ಮತ್ತು ಅಪೌರುಷೇಯವಾದ ಶ್ರುತಿಸಂವಾದವಿರುವುದರಿಂದಲೂ ವೈಷ್ಣವಸ್ಮೃತಿಯೆನಿಸಿದ ಪಂಚರಾತ್ರಾದಿಗಳಿಗೆ ಪಾಶುಪತಾದಿಗಳಿಗಿಂತಲೂ ಹೆಚ್ಚಿನ ಪ್ರಾಬಲ್ಯವಿರುತ್ತದೆ.

न चाप्तोक्तानां शैवादिस्मृतीनां अप्रामाण्यायोगादनवकाशत्वमित्यतो न निषेधेयुरित्यनुक्त्वा न शक्नुयुरित्युक्तम् । तदुक्तसाधनानुष्ठानेऽपि योग्यफलानुपलब्धेः अलब्धप्रामाण्यानामेतन्निषेधे शक्त्याभावादित्यर्थः । शिवादेः सर्वज्ञत्वेऽप्ययोग्यजनप्रत ारणार्थं कृतत्वेन आप्तोक्तत्वस्यैव तासाभावात् अप्रामाण्यस्यैवोपपत्तेरिति भावः ।।१।।

ಶೈವಾದಿ ಸ್ಮೃತಿಗಳೂ ಕೂಡ ಆಪ್ತೋಕ್ತವಾಗಿವೆ. ಆದ್ದರಿಂದ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲವೇ? ಎಂದೂ ಕೂಡ ಪ್ರಶ್ನಿಸಬಾರದು. ಏಕೆಂದರೆ ಅಣುಭಾಷ್ಯದಲ್ಲಿ 'ನ ನಿಷೇಧೇಯುಃ' ಎಂದು ಹೇಳದೇ 'ನ ಶಕ್ನುಯುಃ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಶೈವಾದ್ಯಾಗಮಗಳಲ್ಲಿ ಕೆಲವು ಸಾಧನಾನುಷ್ಠಾನಗಳನ್ನು ಮಾಡಿದರೂ ಕೂಡ ಯೋಗ್ಯವಾದ ಫಲವು ಉಪಲಬ್ಧವಾಗುತ್ತಿಲ್ಲ. ಆದ್ದರಿಂದ ಸ್ವತಃ ಪ್ರಾಮಾಣ್ಯವನ್ನು ಹೊಂದದ ಪಾಶುಪತಾದಿಸ್ಮೃತಿಗಳು ಪಂಚರಾತ್ರಾದಿಸ್ಮೃತಿಗಳನ್ನು ವಿರೋಧ ಮಾಡಲು ಶಕ್ತಿಯನ್ನು ಹೊಂದಿರುವುದಿಲ್ಲ. ರುದ್ರಾದಿಗಳು ಸರ್ವಜ್ಞರಾಗಿದ್ದರೂ ಕೂಡ ಅಯೋಗ್ಯರಿಗೆ ಮೋಸ ಮಾಡಲು ಶಾಸ್ತ್ರಗಳನ್ನು ರಚಿಸಿರುತ್ತಾರೆ. ಆದ್ದರಿಂದ ಅವುಗಳಲ್ಲಿ ಆಪ್ತೋಕ್ತತ್ವವೆಂಬ ಗುಣವೇ ಇರುವುದಿಲ್ಲ. ಆದ್ದರಿಂದ ಶೈವಸ್ಮೃತಿಗಳಿಗೆಲ್ಲಾ ಅಪ್ರಾಮಾಣ್ಯವನ್ನೇ ಹೇಳಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣ ಮುಗಿಯಿತು.

* * *

ಪರಿಪೂರ್ಣಚಂದ್ರಿಕಾ

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## स्मृत्यधिकरणम् (२।१।१)

पूर्वेणोक्तसमन्वयेऽनेनोध्यायेन विरोधो निरस्यते । युक्ति-समय-श्रुति-युक्त्युपेतश्रुतिविरोधाः पादेषु क्रमेण निरस्यन्ते । आद्यपादे प्रबलत्वाद्युक्तिविरोधः, स्मृतिविरोधश्चतूरूपत्वादाद्यनये निरस्यते ।।

**।। स्मृत्यनवकाशदोषप्रसङ्ग इति चेन्नाऽन्यस्मृत्यनवकाशदोषप्रसङ्गात् ।।२-१-१।।**

ಹಿಂದಿನ ಸಮನ್ವಯಾಧ್ಯಾಯದ ವಿಷಯದಲ್ಲಿ ಯಾವ ವಿರೋಧವು ಪ್ರಾಪ್ತವಾಗುತ್ತದೋ, ಅದರ ನಿರಾಕರಣೆಗಾಗಿ ಎರಡನೆಯ ಈ ಅಧ್ಯಾಯವು ಹೊರಟದೆ. ಸಮನ್ವಯದ ವಿಷಯದಲ್ಲಿ ಒಟ್ಟು ನಾಕು ಬಗೆಯ ವಿರೋಧಗಳಿವೆ. ೧. ಯುಕ್ತಿವಿರೋಧ, ೨. ಸಮಯವಿರೋಧ, ೩. ಶ್ರುತಿವಿರೋಧ, ೪. ಯುಕ್ತಿಸಹಿತವಾದ ಶ್ರುತಿವಿರೋಧ. ಈ ನಾಕು ಬಗೆಯ ವಿರೋಧಗಳನ್ನು ಕ್ರಮವಾಗಿ ನಾಕು ಪಾದಗಳಲ್ಲಿ ಸೂತ್ರಕಾರರು ನಿರಾಕರಿಸುತ್ತಿದ್ದಾರೆ. ಎಲ್ಲಾ ಬಗೆಯ ವಿರೋಧಗಳನ್ನು ಪರಿಹರಿಸುತ್ತಿರುವುದರಿಂದ ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯವೆಂದು ಹೆಸರು. ಮೊದಲನೆಯ ಪಾದದಲ್ಲಿ ಪ್ರಬಲವಾದ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ಇದಕ್ಕೆ ಯುಕ್ತಿಪಾದವೆಂದು ಹೆಸರು. ಶ್ರುತಿವಿರೋಧವು ಮೇಲೆ ಹೇಳಿದ ನಾಕು ವಿರೋಧಗಳ ಸ್ವರೂಪವಾಗಿರುವುದರಿಂದ ಪ್ರಥಮದಲ್ಲಿಯೇ ಅದರ ವಿರೋಧವನ್ನು ನಿರಾಕರಿಸುತ್ತಿದ್ದಾರೆ. 'ಸ್ಮೃತ್ಯನವಕಾಶದೋಷಪ್ರಸಂಗಃ ಇತಿ ಚೇನ್ನಾಽನ್ಯಸ್ಮೃತ್ಯನವಕಾಶದೋಷಪ್ರಸಂಗಾತ್'

अत्र स्मार्तास्तावद्वेदप्रामाण्यवादिनस्तदवादिन इति द्वेधा । आद्येऽपि तदपौरुषेयत्ववादिनस्तदवादिन इति द्वेधा । तत्सर्वस्मृत्यविरोधोऽत्रोच्यते ।

ಯಾವ ದಾರ್ಶನಿಕರು ಸ್ಮೃತಿಯನ್ನು ಪ್ರಮಾಣವನ್ನಾಗಿ ಒಪ್ಪುತ್ತಾರೋ, ಅವರಲ್ಲಿ ಎರಡು ಪಂಗಡವಿದೆ - ೧. ವೇದಪ್ರಾಮಾಣ್ಯವನ್ನು ಒಪ್ಪಿ ಸ್ಮೃತಿಪ್ರಾಮಾಣ್ಯವನ್ನು ಒಪ್ಪುವವರು. ೨. ವೇದಪ್ರಾಮಾಣ್ಯವನ್ನು ಒಪ್ಪದೇ ಸ್ಮೃತಿಪ್ರಾಮಾಣ್ಯವನ್ನು ಒಪ್ಪುವವರು ಎಂದು. ವೇದಪ್ರಾಮಾಣ್ಯ ವಾದಿಗಳಲ್ಲಿಯೂ ಎರಡು ಪಂಗಡ - ೧. ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪುವವರು, ೨. ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪದವರು ಎಂದು. ಈ ಎಲ್ಲಾ ಬಗೆಯ ದಾರ್ಶನಿಕರು ಒಪ್ಪುವ ಸ್ಮೃತಿಗಳ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ.

**स्मृतीनां शैवमाङ्ख्यकाणादादिस्मृतीनां अन्यपरत्वाभावरूपानवकाशेन विष्णु-कर्तृत्वादिबोधकश्रुतेरप्रामाण्यदोषप्रसङ्ग इति तदनुरोधेन श्रुतिर्नेयेति चेन्न । अन्यासां पञ्चरात्रस्मृतीनां विष्णुकर्तृत्वादर्थान्तरपरत्वाभावरूपानवकाशेन तद्विरुद्धत्वादितर-स्मृतीनामेवाप्रामाण्यदोषप्रसङ्गात् । एवञ्च शैवादिस्मृतिषु श्रौतस्मृतिभिः प्रतिरुद्धास्व प्रतिबद्धश्रुतिभिरेव विष्णुकर्तृत्वादिसिद्धिरिति भावः ।**

ಸೂತ್ರಾರ್ಥ - ಸ್ಮೃತ್ಯನವಕಾಶದೋಷಪ್ರಸಂಗಃ = ಸ್ಮೃತೀನಾಂ = ಶೈವ, ಸಾಂಖ್ಯ, ಕಾಣಾದ ಮೊದಲಾದ ಸ್ಮೃತಿಗಳು ಶಿವ, ಪ್ರಕೃತಿ, ಅಷ್ಟಗುಣೋಪೇತನಾದ ವಿಷ್ಣು ಮೊದಲಾದವುಗಳನ್ನು ನಿರವಕಾಶದಿಂದ ಪ್ರತಿಪಾದನೆ ಮಾಡುತ್ತವೆ. ಈ ಸ್ಮೃತಿಗಳಿಗೆ ಶಿವಾದಿಗಳನ್ನು ಹೊರತಾಗಿ, ಬೇರೆಡೆ ತಾತ್ಪರ್ಯವೇ ಇರುವುದಿಲ್ಲ. ಆದ್ದರಿಂದ ಸಕಲಗುಣಪರಿಪೂರ್ಣನಾದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧವಾಗುವುದಿಲ್ಲ. ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿಗೆ ಅಪ್ರಾಮಾಣ್ಯವೆಂಬ ದೋಷಪ್ರಸಂಗ ಬರುತ್ತದೆ. ಆದ್ದರಿಂದ ಸಾಂಖ್ಯಾದಿಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳನ್ನು ವ್ಯಾಖ್ಯಾನಿಸಬೇಕು. ಇತಿ ಚೇನ್ನ = ಇದು ತಪ್ಪು. ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ = ಸಾಂಖ್ಯಾದಿ ಸ್ಮೃತಿಗಳಿಗಿಂತ ವಿಭಿನ್ನವಾದ ಪಂಚರಾತ್ರಾದಿಸ್ಮೃತಿಗಳು ನಿರವಕಾಶವಾಗಿವೆ. ಇವುಗಳು ವಿಷ್ಣುಕರ್ತೃತ್ವವನ್ನು ಬಿಟ್ಟು, ಬೇರೆ ವಿಷಯದಲ್ಲಿ ತಾತ್ಪರ್ಯವನ್ನು ಹೊಂದಿಯೇ ಇರುವುದಿಲ್ಲ. ಹೀಗೆ ನಿರವಕಾಶವಾಗಿರುವ ಪಂಚರಾತ್ರಾದಿಸ್ಮೃತಿಗಳಿಗೆ ವಿರುದ್ಧವಾಗಿ ಸಾಂಖ್ಯಾದಿಸ್ಮೃತಿಗಳು ಹೊರಟಿರುವುದರಿಂದ ಅಪ್ರಮಾಣವಾಗಿವೆ. ಆದ್ದರಿಂದ ಶೈವಾದಿಸ್ಮೃತಿಗಳು ಶ್ರುತಿಸಿದ್ಧವಾದ ಪಂಚರಾತ್ರಾದಿಸ್ಮೃತಿಗಳಿಂದಲೇ ಪ್ರತಿರುದ್ಧವಾಗುತ್ತದೆ. ವಿಷ್ಣುಕರ್ತೃತ್ವವನ್ನು ಸಮರ್ಥಿಸುವ ಶ್ರುತಿಗಳಿಗೆ ಯಾವುದರ ವಿರೋಧವೂ ಕೂಡ ಇರುವುದಿಲ್ಲ. ಹೀಗೆ ಶ್ರುತಿಗೆ ಅನುಗುಣವಾದ ಸ್ಮೃತಿಗಳಿಂದ ಶೈವಾದಿಸ್ಮೃತಿಗಳು ಪ್ರತಿರುದ್ಧವಾಗುವುದಷ್ಟೇ ಅಲ್ಲದೇ ಶ್ರುತಿಗಳಿಗೆ ಯಾವುದರಿಂದಲೂ ವಿರೋಧವೇ ಇರುವುದಿಲ್ಲ. ಅಂಥ ಶ್ರುತಿಗಳಿಂದ ಮಹಾವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ. ಇಷ್ಟು ಸೂತ್ರದ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

यद्वा अन्यासां श्रौतस्मृतीनां श्रुतिसंवादेन बलवत्त्वादनवकाशेन शैवादिस्मृतीनामप्रामाण्याख्यादोषस्य प्रकर्षेण सङ्गात् सम्बन्धादत्यान्तप्रमण्यादित्यर्थः ।

'ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸಿದ್ಧಾಂತ ಭಾಗಕ್ಕೆ ಮತ್ತೊಂದು ಅರ್ಥ - ಅಥವಾ ಅನ್ಯಸ್ಮೃತಿಗಳೆಂದರೆ ಶ್ರುತಿಗೆ ಅನುಸಾರಿಯಾದ ಪಂಚರಾತ್ರಾದಿಸ್ಮೃತಿಗಳು ಶ್ರುತಿಸಂವಾದವನ್ನು ಹೊಂದಿರುವುದರಿಂದ ಅತ್ಯಂತ ಬಲಿಷ್ಠವಾಗಿ ನಿರವಕಾಶವಾಗಿವೆ. ಆದರೆ ಶೈವಾದಿಸ್ಮೃತಿಗಳಿಗೆ ಇಂಥ ಪ್ರಾಬಲ್ಯವಿರುವುದಿಲ್ಲ. ನಿರವಕಾಶವಾದ ಪಂಚರಾತ್ರಾದಿಸ್ಮೃತಿಗಳಿಂದಲೇ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯ ಎಂಬ ದೋಷವು ಪ್ರಾಪ್ತವಾಗುತ್ತದೆ. 'ಅಪ್ರಾಮಾಣ್ಯದೋಷಪ್ರಸಂಗಃ' ಎಂದರೆ ಅಪ್ರಾಮಾಣ್ಯವೆಂಬ ದೋಷವು ಪ್ರಕರ್ಷವಾಗಿ ಪ್ರಾಪ್ತವಾಗುತ್ತದೆ. ಅಂದರೆ ಅತ್ಯಂತವಾಗಿ ಅಪ್ರಮಾಣವಾಗುತ್ತದೆ ಎಂದಭಿಪ್ರಾಯ.

तत्त्वित्यत्रोपक्रमाद्यैरेव वेदार्थो निर्णेय इति सिद्धावपीहोपक्रमादयोऽपि स्मृत्यनुरोधेन नेया इति शङ्केति ध्येयम् ।

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಉಪಕ್ರಮೋಪಸಂಹಾರಾದಿಗಳಿಂದಲೇ ವೇದದ ಅರ್ಥವನ್ನು ನಿರ್ಣಯಿಸಬೇಕು ಎಂಬುದು ಸಿದ್ಧವಾಗಿದೆ. ಆದ್ದರಿಂದ ಪುನಃ ಸ್ಮೃತಿಗಳ ವಿರೋಧವನ್ನು ಈ ಅಧಿಕರಣದಲ್ಲಿ ಆಕ್ಷೇಪ ಮಾಡಿದ್ದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಉಪಕ್ರಮಾದಿಗಳನ್ನೂ ಕೂಡ ಪಾಶುಪತಾದಿಸ್ಮೃತಿಗಳಿಗೆ ಅನುಸಾರವಾಗಿಯೇ ವ್ಯಾಖ್ಯಾನ ಮಾಡಬೇಕು ಎಂಬ ಆಕ್ಷೇಪವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆಂಬ ವ್ಯತ್ಯಾಸವನ್ನು ಗಮನಿಸಬೇಕು.

वृत्त्यन्तरं तु बौद्धार्हतादिस्मृतीनामन्यपरत्वाभावरूपानवकाशेन तासामेवाप्तोक्ता नामप्रामाण्यदोषप्रसङ्गः इति तद्विरुद्धश्रुतिर्न मानमिति चेन्न । अन्यस्मृतीनां श्रौतस्मृतीनामनवकाशेन श्रौतस्मृतीनामेवाप्रामाण्यदोषप्रसङ्गादिति । तात्पर्यं तु पूर्ववत् ।

ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ - 'ಸ್ಮೃತ್ಯನವಕಾಶದೋಷಪ್ರಸಂಗಃ' ಬೌದ್ಧ, ಜೈನ ಈ ಮತದವರ ಸ್ಮೃತಿಗಳು ಅನ್ಯಪರವಾಗದ ಕಾರಣ ನಿರವಕಾಶವಾಗಿವೆ. ಆಪ್ತರಿಂದ ರಚಿತವಾದ ಬೌದ್ಧಾದಿಗಳ ಸ್ಮೃತಿಯು ಪರಮಪ್ರಮಾಣವಾಗಿವೆ. ಇವುಗಳಿಗೆ ಅಪ್ರಾಮಾಣ್ಯದೋಷವು ಬರಬಾರದೆಂದರೆ ಈ ಸ್ಮೃತಿಗಳಿಗೆ ವಿರುದ್ಧವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಇತಿ ಚೇನ್ನ = ಇದು ತಪ್ಪು. 'ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' = ಶ್ರುತಿಗೆ ಅನುಸಾರಿಯಾದ

ಪಂಚರಾತ್ರಾದಿಸ್ಮೃತಿಗಳೂ ಕೂಡ ನಿರವಕಾಶವಾಗಿವೆ. ಈ ಪಂಚರಾತ್ರಾದಿ ಸ್ಮೃತಿಗಳಿಗೇ ಅಪ್ರಾಮಾಣ್ಯದೋಷವು ಬರಬಾರದೆಂದರೆ ಬೌದ್ಧಾದಿ ಸ್ಮೃತಿಗಳಿಗೇನೇ ಅಪ್ರಾಮಾಣ್ಯವನ್ನು ಹೇಳಬೇಕು. ಸೂತ್ರದ ತಾತ್ಪರ್ಯವನ್ನು ಹಿಂದಿನಂತೆ ತಿಳಿಯಬೇಕು.

**श्रौतस्मृतिविरोधेऽप्याप्तोक्तानामवैदिकस्मृतीनां कथमप्रामाण्यमित्यत आह —**

**।। इतरेषां चानुपलब्धेः ।।२-१-२।।**

ಶ್ರುತಿಗೆ ಅನುಸಾರಿಯಾದ ಪಂಚರಾತ್ರಾದಿಸ್ಮೃತಿಗಳ ವಿರೋಧ ಇದ್ದ ಮಾತ್ರಕ್ಕೆ ಸಾಂಖ್ಯಾದಿಸ್ಮೃತಿಗಳು ಏಕೆ ಅಪ್ರಮಾಣವಾಗಬೇಕು. ಆಪ್ತೋಕ್ತವಾದ್ದರಿಂದ ಅವೈದಿಕವಾಗಿದ್ದರೂ ಪ್ರಮಾಣವೇ ಆಗುತ್ತವಲ್ಲವೇ? ಈ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ -

'ಇತರೇಷಾಂ ಚಾನುಪಲಬ್ಧೇಃ'

**नास्त्युपलब्धिर्यस्य तदनुपलब्धिः उपलब्ध्ययोग्यं फलं तस्मादितरेषां उपलब्धियोग्यानां फलानां, तृतीयादिष्विति, पुंवद्भावः, अनुपलब्धेरनुपलम्भादित्यावृत्त्या योज्यम् ।**

ಯಾವುದರ ಉಪಲಬ್ಧಿಯು ಇರುವುದಿಲ್ಲವೋ, ಅದು 'ಅನುಪಲಬ್ಧಿ' ಎಂದು ಕರೆಸಿಕೊಳ್ಳುತ್ತದೆ. ಹೊಂದಲು ಅಯೋಗ್ಯವಾದ ಫಲ ಯಾವುದು ಇದೆಯೋ, ಅದಕ್ಕಿಂತ ಭಿನ್ನವಾದ ಹೊಂದಲು ಯೋಗ್ಯವಾದ ಫಲವನ್ನು ಪಡೆಯುವುದರಿಂದ ಎಂದು 'ಅನುಪಲಬ್ಧೇಃ' ಎಂಬ ಪದದ ಅರ್ಥವನ್ನು ತಿಳಿಯಬೇಕು. ಆದ್ದರಿಂದ 'ಅನುಪಲಬ್ಧೇಃ' ಎಂಬ ಪದವನ್ನು ಆವೃತ್ತಿ ಮಾಡಿಕೊಂಡು ಯೋಜನೆ ಮಾಡಿಕೊಳ್ಳಬೇಕು. ('ಅನುಪಲಬ್ಧೇಃ' ಎಂಬ ಪದವನ್ನು ಆವೃತ್ತಿ ಮಾಡಿಕೊಂಡಾಗ 'ಅನುಪಲಬ್ಧೇಃ ಇತರೇಷಾಂ ಅನುಪಲಬ್ಧೇಃ' ಎಂದು ಸೂತ್ರದ ವಿನ್ಯಾಸವಾಗುತ್ತದೆ. ಹೊಂದಲು ಯೋಗ್ಯವಲ್ಲದ ಫಲಗಳಿಂದ ಬೇರೆಯಾದ ಹೊಂದಲು ಯೋಗ್ಯವಾದ ಫಲಗಳನ್ನು ಪಡೆಯದಿರುವುದರಿಂದ ಎಂಬುದು ಸೂತ್ರಾರ್ಥವಾಗುತ್ತದೆ.)

**यद्वा पूर्वसूत्रे यस्मिन् प्रत्यक्षायोग्ये विश्वकर्तृत्वादौ स्मृतिविरोधः शङ्कि तदितरेषां प्रत्यक्षयोग्यानां फलानामनुपलब्धेरित्यर्थः ।**

ಅಥವಾ ಹಿಂದಿನ ಸೂತ್ರದಲ್ಲಿ ಕಣ್ಣಿಗೆ ಕಾಣದ ವಿಶ್ವಕರ್ತೃತ್ವಾದಿಗಳ ವಿಷಯದಲ್ಲಿ ಶೈವಾದಿಸ್ಮೃತಿಗಳ ವಿರೋಧವನ್ನು ಆಶಂಕಿಸಲಾಯಿತು. ಅದಕ್ಕೆ ವಿರುದ್ಧವಾದ ಕಣ್ಣಿಗೆ ಕಾಣಸಲು ಯೋಗ್ಯವಾದ

ಫಲಗಳೂ ಕೂಡ ಅನುಪಲಬ್ಧವಾಗಿರುವುದರಿಂದ ಎಂಬುದಾಗಿಯೂ 'ಅನುಪಲಬ್ಧೇಃ' ಎಂಬ ಪದದ ಅರ್ಥವನ್ನು ತಿಳಿಯಬಹುದು.

**प्रत्यक्षफलविसंवादादाप्तोक्तत्वमेव नेत्यवैदिकस्मृतीनामप्रामाण्यमिति भावः । चशब्दः किञ्चित् फलोपलब्ध्यङ्गीकारार्थः ।।**

ಅವೈದಿಕವಾದ ಸಾಂಖ್ಯಾದಿಸ್ಮೃತಿಗಳು ಆಪ್ತೋಕ್ತವೇ ಆಗಿರುವುದಿಲ್ಲ. ಏಕೆಂದರೆ ಆ ಸ್ಮೃತಿಗಳಲ್ಲಿ ಹೇಳಿದ ಕೆಲವು ಅನುಷ್ಠಾನಗಳನ್ನು ಮಾಡಿದರೂ ಕೂಡ ಪ್ರತ್ಯಕ್ಷವಾದ ಫಲಗಳು ದೊರೆಯುತ್ತಿಲ್ಲ. ಹೀಗೆ ಪ್ರತ್ಯಕ್ಷಫಲಕ್ಕೆ ವಿಸಂವಾದಿಯಾಗಿರುವುದರಿಂದ ಅವೈದಿಕಸ್ಮೃತಿಗಳು ಅಪ್ರಮಾಣವಾಗುತ್ತವೆ ಎಂದು ಸೂತ್ರದ ಅಭಿಪ್ರಾಯ. ಚಶಬ್ದವು ಕೆಲವು ಫಲಗಳು ಉಂಟಾಗುತ್ತವೆಂದು ಅಂಗೀಕರಿಸಿರುವುದನ್ನು ಸೂಚನೆ ಮಾಡುತ್ತಿದೆ.

**नन्ववैदिकस्मृतीनां मध्ये योगस्मृत्युक्तफले विसंवादाभावान्नाप्रामाण्यमित्यधिकाशङ्कायामाह —**

**एतेन योगः प्रत्युक्तः ।।२-१-३।।**

ಅವೈದಿಕಸ್ಮೃತಿಗಳಲ್ಲಿ ಯೋಗಸ್ಮೃತಿಯೂ ಕೂಡ ಒಂದು. ಅದರಲ್ಲಿ ಹೇಳಿರುವ ಎಲ್ಲಾ ಫಲಗಳೂ ಕೂಡ ಪ್ರತ್ಯಕ್ಷವಾಗಿ ದೊರೆಯುವುದು ಕಂಡಿದೆಯಲ್ಲವೇ? ಇಂಥ ಯೋಗಸ್ಮೃತಿಗೆ ವಿಸಂವಾದ-ಪ್ರಮಾಣವಿಲ್ಲದ ಕಾರಣ ಅಪ್ರಾಮಾಣ್ಯವನ್ನು ಆಶಂಕಿಸಲು ಹೇಗೆ ಸಾಧ್ಯ ? ಈ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ.

'ಏತೇನ ಯೋಗಃ ಪ್ರತ್ಯುಕ್ತಃ'

**एतेन प्रागुक्तफलानुपलम्भेन योगशास्त्रमपि प्रत्युक्तं निरस्तमित्यर्थः । प्रथमं स्वेदनं द्वितीयं गात्रभञ्जनमित्याद्युक्ताभ्यासावस्थोत्कर्षकाल एव स्वेदनादीनामदृष्टेरित्यर्थः ।।१।।**

ಸೂತ್ರಾರ್ಥ - ಏತೇನ = ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಫಲನುಪಲಬ್ಧಿ ಎಂಬ ಹೇತುವಿನಿಂದಲೇ, ಯೋಗಃ = ಯೋಗಶಾಸ್ತ್ರವನ್ನೂ ಕೂಡ, ಪ್ರತ್ಯುಕ್ತಃ = ನಿರಾಕರಿಸಿದಂತಾಯಿತು. ಯೋಗಾಭ್ಯಾಸ ಮಾಡುವಾಗ ಮೊದಲು ಬೆವರುತ್ತದೆ. ಅನಂತರ ದೇಹ ಭಂಜನವಾಗುತ್ತದೆ ಎಂಬ ಫಲವನ್ನು ಯೋಗಶಾಸ್ತ್ರದಲ್ಲಿ ಹೇಳಿರುತ್ತಾರೆ. ಆದರೆ ಯೋಗಾಭ್ಯಾಸದ ಉತ್ಕರ್ಷವನ್ನು ಪಡೆದಾಗ ಈ ಫಲಗಳು

ಸಿದ್ಧಿಸುವುದಿಲ್ಲ. ಆದ್ದರಿಂದ ಯೋಗಶಾಸ್ತ್ರವೂ ಕೂಡ ಅಪ್ರಮಾಣವಾಗಿದೆ. ('ಗಾತ್ರಭಂಜನಮ್' ಎಂಬ ಪಾಠವನ್ನು ಗುರ್ವರ್ಥದೀಪಿಕಾದಲ್ಲಿ ಸ್ವೀಕರಿಸಲಾಗಿದೆ. ಪಾದದ ತುದಿಯನ್ನು ಪಾದದ ಮೂಲಕ್ಕೆ ಮುಟ್ಟಿಸಿದಾಗ ಕಾಮದಹನವಾಗುತ್ತದೆ ಎಂಬ ಫಲವನ್ನು ಯೋಗಶಾಸ್ತ್ರದಲ್ಲಿ ಹೇಳಲಾಗಿದೆ. ಆದರೆ ಈ ಫಲವೂ ಕೂಡ ಕೆಲವೊಮ್ಮೆ ಕಾಣಿಸುವುದಿಲ್ಲ.)

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು.

### श्री राघवेन्द्रतीर्थविरचिता

# न्यायमुक्तावलिः

## स्मृत्यधिकरणम् (२।१।१)

।। हरिः ॐ ।। पूर्वोक्तसमन्वयस्य अत्र विरोधनिरासात् पूर्वाध्यायेनास्य हेतुहेतुमद्भावसङ्गतिः । युक्ति समय श्रुति युक्तियुक्तश्रुतिविरोधानां पदात्यादिभङ्गेन अश्वादित्वप्रवर्तमानां क्रमेण पादचतुष्टयेन निरासः क्रियते । चतूरूपत्वात् आद्यनये स्मृतिविरोधो निरस्यते ।

ಹಿಂದಿನ ಅಧ್ಯಾಯದಲ್ಲಿ ಸಕಲಶಾಸ್ತ್ರಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಿದ್ದಾಯಿತು. ಈ ಸಮನ್ವಯದ ವಿಷಯದಲ್ಲಿ ಬರುವ ವಿರೋಧವನ್ನು ಈ ಅಧ್ಯಾಯದಲ್ಲಿ ಪರಿಹರಿಸುತ್ತಿದ್ದಾರೆ. ಆದ್ದರಿಂದ ಹಿಂದಿನ ಅಧ್ಯಾಯದಿಂದ ಈ ಅಧ್ಯಾಯಕ್ಕೆ ಹೇತುಹೇತುಮದ್ಭಾವರೂಪವಾದ ಸಂಗತಿಯಿರುತ್ತದೆ. ಯುಕ್ತಿವಿರೋಧ, ಶ್ರುತಿವಿರೋಧ, ಯುಕ್ತಿಸಹಿತವಾದ ಶ್ರುತಿವಿರೋಧ ಎಂಬುದಾಗಿ ವಿರೋಧಗಳು ನಾಕುವಿಧವಾಗಿವೆ. ಇವುಗಳನ್ನು ನಾಕುಪಾದಗಳ ಮೂಲಕ ಕ್ರಮವಾಗಿ ನಿರಾಕರಣೆ ಮಾಡುತ್ತಿದ್ದಾರೆ. ಯುದ್ಧದಲ್ಲಿ ದುರ್ಬಲರಾದ ಸೈನಿಕರನ್ನು ಮೊದಲು ಕೊಂದು, ಕ್ರಮವಾಗಿ ಕುದುರೆ,

ಆನೆ ಕೊಲ್ಲುವಂತೆ ಇಲ್ಲಿಯೂ ಕೂಡ ದುರ್ಬಲವಾದ ವಿರೋಧಗಳನ್ನು ಮೊದಲು ಪರಿಹರಿಸಿ, ಅನಂತರ ಪ್ರಬಲವಾದ ವಿರೋಧವನ್ನು ನಾಕುಪಾದಗಳಲ್ಲಿ ಕ್ರಮವಾಗಿ ಪರಿಹರಿಸುತ್ತಿದ್ದಾರೆ. ಮೊದಲನೆಯ ಪಾದದಲ್ಲಿ ಯಾವ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೋ, ಇದು ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ, ಯುಕ್ತಿಸಹಿತ ಶ್ರುತಿವಿರೋಧ ಇಂಥ ಸ್ಮೃತಿವಿರೋಧದ ಪರಿಹಾರಕ್ಕಾಗಿ ಮೊದಲನೆಯ ಅಧಿಕರಣ ಹೊರಟಿದೆ.

।। स्मृत्यनवकाशदोषप्रसङ्ग इति चेन्नान्यस्मृत्यनवकाशदोषप्रसङ्गात् ।।

।। इतरेषां चानुपलब्धेः ।। ।। एतेन योगः प्रत्युक्तः ।।

प्राक् श्रुतिसमन्वयेनोक्तं विष्णोर्विश्वकर्तृत्वं युक्तं नवेति सन्देहः । न युक्तमिति पूर्वः पक्षः । शिवादिकर्तृत्वबोधकस्यैव साङ्ख्यकापिलादिसर्वश्रौतस्मृतिविरोधात् । तासां च सर्वज्ञत्वादिना प्रसिद्धशिवाद्यप्रणीतत्वेन आप्तिरूपगुणयुक्तत्वेन प्राबल्यात्। श्रुतेश्च अपौरुषेयत्वेन निर्मूलतया दौर्बल्यात् ।

ಹಿಂದಿನ ಅಧ್ಯಾಯದಲ್ಲಿ ಶ್ರುತಿಸಮನ್ವಯದ ಮೂಲಕ ಸಮಸ್ತ ಜಗತ್ತಿಗೆ ಮಹಾವಿಷ್ಣುವೇ ಕರ್ತೃವಾಗಿದ್ದಾನೆಂದು ಸಮರ್ಥಿಸಲಾಯಿತು. ಈ ವಿಶ್ವಕರ್ತೃತ್ವವು ವಿಷ್ಣುವಿನಲ್ಲಿ ಯುಕ್ತವಾಗುತ್ತದೋ, ಇಲ್ಲವೋ ? ಎಂಬುದು ಅಧಿಕರಣದ ಸಂಗತಿ. ಯುಕ್ತವಾಗುವುದಿಲ್ಲ ಎಂದು ಪೂರ್ವಪಕ್ಷ. ಏಕೆಂದರೆ ಶಿವಾದಿಗಳೇ ಜಗತ್ತಿಗೆ ಕರ್ತೃವಾಗಿದ್ದಾನೆಂದು ತಿಳಿಸುವ ಸಾಂಖ್ಯಸ್ಮೃತಿ ಕಾಪಿಲಸ್ಮೃತಿ ಮೊದಲಾದವು ಶ್ರುತಿಸಿದ್ಧವಾದ ಪಂಚರಾತ್ರಸ್ಮೃತಿಗೆ ವಿರುದ್ಧವಾಗಿವೆ. ಇಂಥ ಸಾಂಖ್ಯಸ್ಮೃತಿಗಳು ಸರ್ವಜ್ಞನಾದ ಶಿವಾದಿಗಳಿಂದ ಪ್ರಣೀತವಾಗಿವೆ. ಆ ಶಿವಾದಿಗಳು 'ಆಪ್ತಿ' ಎಂಬ ಗುಣವುಳ್ಳವಾಗಿದ್ದಾರೆ. ಆದ್ದರಿಂದ ಅವರಿಂದ ರಚಿತವಾದ ಈ ಪಾಶುಪತಾದಿಸ್ಮೃತಿಗಳು ಪ್ರಬಲವಾಗಿವೆ. ಶ್ರುತಿಯು ಅಪೌರುಷೇಯವಾದ್ದರಿಂದ ನಿರ್ಮೂಲವಾದ ಕಾರಣ ದುರ್ಬಲವಾಗಿದೆ.

कणादादिमते श्रुतेराप्तोक्तत्वेन समूलकत्वेपि तत्स्मृतीनां विस्पष्टार्थत्वसयुक्तिकत्वाभ्यां प्राबल्यात्तुल्यबलत्वाभावेन विरुद्धत्वेन न वस्तुनि विकल्पस्य दुर्बलत्वे श्रुत्या बाधस्यायोगात् देशादिभेदेन अविरोधस्य च श्रुत्यादौ तत्र तत्र तस्य तस्य सर्वकर्तृत्वोक्त्या युक्तत्वात् ''विरोधेत्वनपेक्षम्'' इति (पू.मी.) पूर्वतन्त्रस्य विरोधनये स्मृतीनां श्रुतिमूलत्वेन प्रामाण्यमिति पक्ष एव श्रुतिविरोधेन तासां बाधोक्तेः इह तु स्मृतीनां शिवादिप्रत्यक्षमूलत्वेन वैषम्यात् । अतः तत्तत्

**स्मृत्यनुरोधेन शिवादिकर्तृत्व एव श्रुतीनां नेयत्वात् बौद्धार्हतादिस्मृतिविरोधेन अप्रामाण्याद्वा इति ।।**

ತಾರ್ಕಿಕಮತದಲ್ಲಿ ಶ್ರುತಿಯು ಆಪ್ತೋಕ್ತವಾಗಿದೆ ಎಂದು ಹೇಳಲಾಗಿದೆ. ಆದ್ದರಿಂದ ಪಾಶುಪತಾದಿಸ್ಮೃತಿಗಳಂತೆ ಶ್ರುತಿಯೂ ಕೂಡ ಸಮೂಲಕವಾಯಿತು. ಆದ್ದರಿಂದ ಶ್ರುತಿ ಹಾಗೂ ಪಾಶುಪತಾದಿಸ್ಮೃತಿಗಳು ಸಮಬಲವಾಗುತ್ತಲ್ಲವೇ? ಎಂದು ಪ್ರಶ್ನಿಸಬಾರದು.

ಶ್ರುತಿಗಳಿಗಿಂತಲೂ ಪಾಶುಪತಾದಿಸ್ಮೃತಿಗಳು ಅತ್ಯಂತ ಸ್ಪಷ್ಟವಾಗಿ ವಿಷಯವನ್ನು ಪ್ರತಿಪಾದನೆ ಮಾಡುತ್ತಿವೆ. ಮತ್ತು ಅನೇಕ ಯುಕ್ತಿಗಳನ್ನೂ ಕೂಡ ಹೇಳುತ್ತಿವೆ. ಈ ಕಾರಣದಿಂದ ಶ್ರುತಿಗಿಂತಲೂ ಪಾಶುಪತಾದಿಸ್ಮೃತಿಗಳೇ ಪ್ರಬಲವಾಗುತ್ತವೆ. ಹಾಗಾಗಿ ಶ್ರುತಿ-ಸ್ಮೃತಿಗಳಿಗೆ ಸಮಾನಬಲವನ್ನು ಹೇಳಬಾರದು. ಪ್ರಬಲವಾದ ಪಾಶುಪತಾದಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಆದ್ದರಿಂದಲೇ ವಸ್ತುವಿನಲ್ಲಿ ವಿಕಲ್ಪವೂ ಕೂಡ ಕೂಡುವುದಿಲ್ಲ. ದುರ್ಬಲವಾದ ಶ್ರುತಿಯಿಂದ ಸ್ಮೃತಿಗೆ ಬಾಧವನ್ನು ಹೇಳುವುದೂ ಕೂಡ ಸಮಂಜಸವಾಗುವುದಿಲ್ಲ. ಬೇರೆ ದೇಶ ಮತ್ತು ಬೇರೆ ಕಾಲಗಳಲ್ಲಿ ಶಿವ, ವಿಷ್ಣು ಇಬ್ಬರು ಜಗತ್ತಿಗೆ ಕಾರಣರಾಗಿರುವುದರಿಂದ ಶ್ರುತಿಸ್ಮೃತಿಗಳಿಗೆ ವಿರೋಧವು ಬರುವುದಿಲ್ಲವೆಂದು ಹೇಳಬಾರದು. ಶ್ರುತಿಯಲ್ಲಿ ವಿಷ್ಣುವೇ ಸಾರ್ವಕಾಲಿಕ, ಸಾರ್ವದೇಶಿಕವಾಗಿ ಕರ್ತೃವಾಗಿದ್ದಾನೆಂದು ಹೇಳಿರುವುದರಿಂದ ವಿರೋಧ ಬಂದೇ ಬರುತ್ತದೆ.

ಶ್ರುತಿ-ಸ್ಮೃತಿಗಳಿಗೆ ವಿರೋಧ ಬಂದಾಗ ಶ್ರುತಿವಿರೋಧದಿಂದ ಸ್ಮೃತಿಗೆ ಬೇರೆ ಅರ್ಥವನ್ನು ಕಲ್ಪನೆ ಮಾಡಬೇಕೆಂದು ಪೂರ್ವಮೀಮಾಂಸೆಯ 'ವಿರೋಧೇತ್ವನಪೇಕ್ಷಮ್‌ಸ್ಯಾತ್' ಎಂಬ ಸೂತ್ರದಲ್ಲಿ ಹೇಳಲಾಗಿದೆ. ಆದ್ದರಿಂದ ಪಾಶುಪತಾದಿಸ್ಮೃತಿಗಳಿಗೆ ಶ್ರುತಿಯಿಂದ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಎಲ್ಲಿ ಸ್ಮೃತಿಗೆ ಶ್ರುತಿಯು ಉಪಜೀವ್ಯವಾಗಿರುತ್ತದೋ, ಅಲ್ಲಿ ಮಾತ್ರ ಈ ನಿಯಮವನ್ನು ಅನುಸರಿಸಬೇಕು. ಪ್ರಕೃತ ಪಾಶುಪತಸ್ಮೃತಿಯು ಶ್ರುತಿಯನ್ನು ಉಪಜೀವಿಸಿಕೊಂಡಿಲ್ಲವಾದ್ದರಿಂದ ಅನ್ಯಾರ್ಥವನ್ನು ಸ್ಮೃತಿಗಳಿಗೆ ಮಾಡುವ ಅವಶ್ಯಕತೆಯಿರುವುದಿಲ್ಲ. ಶಿವಾದಿ ಪ್ರತ್ಯಕ್ಷ ಮೂಲಕವಾಗಿ ಪಾಶುಪತಾದಿಸ್ಮೃತಿಗಳು ಹೊರಟವೆ. ಆದ್ದರಿಂದ ಪಾಶುಪತಾದಿಸ್ಮೃತಿಗಳಿಗೆ ಅನುಸಾರಿಯಾಗಿ ಶ್ರುತಿಗಳಿಗೆ ಶಿವಾದಿಕರ್ತೃತ್ವ ಪರವಾಗಿಯೇ ವ್ಯಾಖ್ಯಾನ ಮಾಡಬೇಕು. ಅಥವಾ ಬೌದ್ಧಸ್ಮೃತಿ, ಆರ್ಹತಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಇಷ್ಟು ಅಧಿಕರಣದ ಪೂರ್ವಪಕ್ಷ.

**सिद्धान्तस्तु ।। पञ्चरात्रादिस्मृतीनां सर्वज्ञतमविष्ण्वादिप्रणीतत्वेन श्रुत्युक्तसंवादेन तत्सहायेन विस्पष्टार्थवादित्वेन च बलवत्तया तद् बाधितत्वात्**

शैवादिस्मृत्युक्तसाधानानुष्ठानेपि तत्फलत्वेनोक्तस्य प्रत्यक्षयोग्यानुपलब्ध्या फलविसंवादात् आप्तोक्तत्वस्याप्यभावेन अवैदिकस्मृतीनाप्रामाण्यात् श्रुतिसमन्वयेनोक्तं विष्णोर्विश्वकर्तृत्वं युक्तमिति ।

ಅಧಿಕರಣ ಸಿದ್ಧಾಂತ ಹೀಗಿದೆ - ಪಂಚರಾತ್ರಾದಿಸ್ಮೃತಿಗಳು ಸರ್ವಜ್ಞತಮನಾದ ವಿಷ್ಣುವಿನಿಂದ ಪ್ರಣೀತವಾಗಿವೆ. ಶ್ರುತಿಯಲ್ಲಿ ಹೇಳಲ್ಪಟ್ಟ ವಿಷಯಗಳಿಂದ ಸಂವಾದಿತವಾಗಿವೆ. ಶ್ರುತಿಯ ಸಹಾಯದಿಂದ ಅತ್ಯಂತ ಸ್ಪಷ್ಟವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಈ ಎಲ್ಲಾ ಕಾರಣಗಳಿಂದ ಅತ್ಯಂತ ಬಲಿಷ್ಠವಾಗಿವೆ. ಇಂಥ ಪಂಚರಾತ್ರಾದಿಸ್ಮೃತಿಗಳಿಂದ ಪಾಶುಪತಾದಿಸ್ಮೃತಿಗಳು ಬಾಧಿತವಾಗುತ್ತವೆ. ಆದ್ದರಿಂದ ಶೈವಾದಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಸಾಧನೆಗಳನ್ನು ಅನುಷ್ಠಾನ ಮಾಡಿದರೂ ಕೂಡ ಅವುಗಳಿಂದ ದೊರೆಯಲ್ಪಡುವ ಫಲವು ದೊರೆಯುವುದು ಕಾಣಸುತ್ತಿಲ್ಲ. ಫಲವಿಸಂವಾದವಿರುವುದರಿಂದ ಆಪ್ತೋಕ್ತತ್ವವು ಇಲ್ಲದ ಕಾರಣ ಅವೈದಿಕವಾದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಆದ್ದರಿಂದ ಶ್ರುತಿಸಮನ್ವಯದ ಮೂಲಕ ವಿಷ್ಣುವಿಗೆ ಜಗತ್ಕಾರಣತ್ವ ಹೇಳಿರುವುದು ಅತ್ಯಂತ ಯುಕ್ತವಾಗುತ್ತದೆ.

समन्वयसूत्रे उपक्रमदिभिरेव वेदार्थो निर्णेय इत्युक्तावपि अत्र तेपि तदनुरोधेन नेया इति शङ्कनात् पुनरारम्भः । शास्त्रयोनिनये दृष्टफलेषु प्रामाण्यं अपस्मृतीनामुपेत्य तत्रेव विश्वकारणत्वेप्यस्तु प्रामाण्यमिति प्राप्ते ''नावेदविः'' इत्यादिना तत्र नमानत्वमित्युक्तम् । अत्र तु प्रत्यक्षफल एव विसंवादात् अप्रामाण्यमुच्यत इति तेनास्य अगतार्थत्वमिति ध्येयम् । फलं तु अत्राध्याये सर्वत्र जन्मादिसूत्रोक्तविश्व-कर्तृत्वाक्षेपः तत्समाधिश्च ।।१।।

ಸಮನ್ವಯ ಸೂತ್ರದಲ್ಲಿ ಉಪಕ್ರಮಾದಿ ಷಡ್ವಿಧತಾತ್ಪರ್ಯಲಿಂಗಗಳಿಂದ ವೇದಗಳ ಅರ್ಥವನ್ನು ಮಾಡಬೇಕೆಂದು ನಿರ್ಣಯ ಮಾಡಲಾಗಿದೆ. ಆದರೂ ಕೂಡ ಪಾಶುಪತಾದಿಸ್ಮೃತಿಗಳಲ್ಲೂ ಕೂಡ ಉಪಕ್ರಮಾದಿ ತಾತ್ಪರ್ಯಲಿಂಗಗಳಿಗೆ ಅನುಸಾರಿಯಾಗಿ ಅರ್ಥವನ್ನು ಮಾಡಬಹುದಲ್ಲವೇ ಎಂಬ ಆಶಂಕೆಯು ಬರುವುದರಿಂದ ಪುನಃ ಇದು ಆರಂಭಣೀಯವಾಗಿದೆ. ಶಾಸ್ತ್ರಯೋನಿಧಿಕರಣದಲ್ಲಿ ದೃಷ್ಟವಾದ ಫಲಗಳಲ್ಲಿ ಪ್ರಾಮಾಣ್ಯವು ಪಾಶುಪತಾದಿಸ್ಮೃತಿಗಳಿಗೂ ಕೂಡ ಕಾಣಸುತ್ತಿದೆ ಎಂದು ಅಂಗೀಕಾರ ಮಾಡಿ, ರುದ್ರಾದಿಗಳ ವಿಶ್ವಕಾರಣತ್ವ ವಿಷಯದಲ್ಲೂ ಕೂಡ ಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂದು ಪೂರ್ವಪಕ್ಷವು ಬರುತ್ತದೆ. ಆಗ 'ನಾವೇದವಿಃನ್ಮುತೇ' ಇತ್ಯಾದಿ ಶ್ರುತಿಯ

ಆಧಾರದಿಂದ ಇದು ರುದ್ರಾದಿಗಳ ಜಗತ್‌ಕಾರಣತ್ವವಿಷಯದಲ್ಲಿ ಪ್ರಮಾಣವಾಗುವುದಿಲ್ಲವೆಂದು ಹೇಳಿದಂತಾಗುತ್ತದೆ ಎಂದು ಶಾಸ್ತ್ರಯೋನಿಧಿಕರಣದಲ್ಲಿ ಹೇಳಿದ್ದಾರೆ. ಪ್ರಕೃತ ಈ ಅಧಿಕರಣದಲ್ಲಿ ಪ್ರತ್ಯಕ್ಷಫಲದಲ್ಲೇ ವಿಸಂವಾದವಿರುವುದರಿಂದ ಅಪ್ರಾಮಾಣ್ಯವು ಬರುತ್ತದೆಂದು ಹೇಳುತ್ತಿದ್ದಾರೆ. ಆದ್ದರಿಂದ ಈ ಅಧಿಕರಣವು ಶಾಸ್ತ್ರಯೋನಿತ್ವಾಧಿಕರಣದಿಂದ ಗತಾರ್ಥವಾಗುವುದಿಲ್ಲ. ಏಕೆಂದರೆ ಆ ಶಾಸ್ತ್ರಯೋನಿಧಿಕರಣದಲ್ಲಿ ದೃಷ್ಟಫಲದಲ್ಲಿ ಪ್ರಾಮಾಣ್ಯವು ಈ ಅಧ್ಯಾಯದಲ್ಲಿ ಎಲ್ಲೆಡೆಯು ಜನ್ಮಾದಿಸೂತ್ರದಲ್ಲಿ ಹೇಳಲ್ಪಟ್ಟ ವಿಶ್ವಕರ್ತೃತ್ವದ ಆಕ್ಷೇಪವು ಪೂರ್ವಪಕ್ಷದ ಫಲ. ಇದರ ಸಮಾಧಾನವು ಸಿದ್ಧಾಂತದ ಫಲವೆಂದು ತಿಳಿಯಬೇಕು.

ಇಲ್ಲಿಗೆ ನ್ಯಾಯಮುಕ್ತಾವಳಿಯಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು.

# ನವಿಲಕ್ಷಣತ್ವಾಧಿಕರಣ

(೨-೧-೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ನವಿಲಕ್ಷಣತ್ವಾಧಿಕರಣ

**ದೇವದೇವೋತ್ತಮ ದೇವತಾಸಾರ್ವಭೌಮ**
**ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ**
**ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ**

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – न विलक्षणत्वादस्य तथात्वं च शब्दात्**

ಪಾಶುಪತಾದಿಗಳಲ್ಲಿ ಹೇಳಿದ ಕರ್ಮಗಳಿಗೆ ಫಲವು ದೊರೆಯದ ಕಾರಣ ಅಪ್ರಮಾಣವಾಗುವಂತೆ ವೇದ ಹಾಗೂ ವೇದಾನುಸಾರಿಯಾದ ಪಂಚರಾತ್ರಾದಿ ಸ್ಮೃತಿಗಳು ಅಪ್ರಮಾಣವಾಗುವುದಿಲ್ಲ. ಏಕೆಂದರೆ ವೇದಗಳು ನಿತ್ಯವಾಗಿವೆ. ಪಂಚರಾತ್ರಾದಿಸ್ಮೃತಿಗಳು ವೇದಕ್ಕೆ ಅನುಸಾರಿಯಾಗಿವೆ. ಹೀಗೆ ಪಾಶುಪತಾದಿ ಸ್ಮೃತಿಗಳಿಗಿಂತ ಪಂಚರಾತ್ರಾದಿ ಸ್ಮೃತಿಗಳಲ್ಲಿ ವೈಲಕ್ಷಣ್ಯ ಇರುವುದರಿಂದ ಅಪ್ರಾಮಾಣ್ಯ ದೋಷವು ಬರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – न विलक्षणत्वादस्य तथात्वं च शब्दात् ॥** अस्य श्रुतितदनुसारिस्मृत्यादेः न शैवादिस्मृतिवदप्रामाण्यम् । कुतः विलक्षणत्वात् स्वतः प्रामाण्याख्येतरवैलक्षण्यात् । किञ्च श्रुतेर्नित्यत्वाख्यवैलक्षण्यवत्त्वात् । स्मृतेः श्रुत्यनुसारित्वाख्यवैलक्षण्यवत्त्वाच्च नाप्रामाण्यं तथात्वं च उक्तवैलक्षण्यवत्त्वं च । शब्दात् 'वाचा विरूप नित्यया' इत्यागमान्निश्चितमित्यर्थः ।।१।।

ಅರ್ಥ -- ಅಸ್ಯ = ಪಂಚರಾತ್ರಾದಿ ಸ್ಮೃತಿಗಳಿಗೆ ಪಾಶುಪತಾದಿ ಸ್ಮೃತಿಗಳಂತೆ ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ, ವಿಲಕ್ಷಣತ್ವಾತ್= ಸ್ವತಃ ಪ್ರಾಮಾಣ್ಯ ಎಂಬ ವೈಲಕ್ಷಣ್ಯವಿರುವುದರಿಂದ. ಅಥವಾ ಅಪೌರುಷೇಯತ್ವ ಮತ್ತು ಅಪೌರುಷೇಯವೇದ ವಾಕ್ಯಾನುಸಾರಿತ್ವ ಎಂಬ ವೈಲಕ್ಷಣ್ಯವಿರುವುದರಿಂದ ಅಪ್ರಾಮಾಣ್ಯವು ಇರುವುದಿಲ್ಲ. ತಥಾತ್ವಂ ಚ = ವೇದಗಳ ಅಪೌರುಷೇಯತ್ವ ಹಾಗೂ ಪಂಚರಾತ್ರಾದಿ ಸ್ಮೃತಿಗಳಿಗೆ ವೇದಾನುಸಾರಿತ್ವ ಎಂಬ ವೈಲಕ್ಷಣ್ಯವು, ಶಬ್ದಾತ್ = 'ವಾಚಾ ವಿರೂಪ ನಿತ್ಯಯಾ' ಮೊದಲಾದ ಪ್ರಮಾಣಗಳಿಂದ ನಿಶ್ಚಿತವಾಗಿದೆ.

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – ।। न विलक्षणत्वादस्य तथात्वं च शब्दात् ।।१।।**

**नैवं श्रुतेस्तदनुसारिस्मृतेश्च तदुक्तानुपलब्धेरप्रामाण्यं वाच्यम् । विलक्षणत्वात् नित्यत्वात् तदनुसारित्वाच्च ।**

ಅನುವಾದ - ಪಾಶುಪತಸ್ಮೃತಿಯಲ್ಲಿ ವಿಧಿಸಿದ ಕರ್ಮಗಳನ್ನು ಆಚರಣೆ ಮಾಡಿದರೂ ಫಲವು ದೊರೆಯುತ್ತಿಲ್ಲ. ಆದ್ದರಿಂದ ಅದು ಅಪ್ರಮಾಣವಾಗಿದೆ. ಅದರಂತೆ ವೇದ ಹಾಗೂ ವೇದಾನುಸಾರಿಯಾದ ಸ್ಮೃತಿಗಳಲ್ಲಿಯೂ ವಿಧಿಸಿದ ಕರ್ಮಗಳನ್ನು ಆಚರಣೆ ಮಾಡಿದರೆ ಫಲವು ದೊರೆಯುತ್ತಿಲ್ಲ. ಆದ್ದರಿಂದ ವೇದ ಹಾಗು ವೇದಾನುಸಾರಿಯಾದ ಸ್ಮೃತಿಗಳಿಗೆ ಅಪ್ರಮಾಣ್ಯವನ್ನು ಹೇಳಬೇಕು.

ಹೀಗೆ ಆಶಂಕೆ ಮಾಡಬಾರದು. ಏಕೆಂದರೆ ವೇದಗಳು ಅಪೌರುಷೆಯವಾಗಿವೆ. ಪಂಚರಾತ್ರಾಗಮಗಳು ಅಪೌರುಷೆಯವಾದ ವೇದಕ್ಕೆ ಅನುಸಾರಿಯಾಗಿವೆ. ಹೀಗೆ ಪಾಶುಪತಶಾಸ್ತ್ರಕ್ಕಿಂತಲೂ ವೇದ ಹಾಗೂ ಪಂಚರಾತ್ರಾಗಮಗಳಲ್ಲಿ ವೈಲಕ್ಷಣ್ಯವಿರುವುದರಿಂದ ಫಲವು ದೊರೆಯುತ್ತಿಲ್ಲವೆಂದು ಅಪ್ರಮಾಣ್ಯವನ್ನು ಹೇಳಬಾರದು.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಪ್ರಮಾಣವನ್ನಾಗಿ ಹೇಳಿದ ವೇದಾದಿಗಳಿಗೆ ಯುಕ್ತಿವಿರೋಧವನ್ನು ಆಕ್ಷೇಪ ಮಾಡಿ ಪರಿಹಾರ ಮಾಡಲಾಗಿದೆ. ಭಾಷ್ಯದಲ್ಲಿ ನೇರವಾಗಿ ಸಿದ್ಧಾಂತವನ್ನೇ ಸ್ಥಾಪನೆ ಮಾಡುತ್ತಿದ್ದಾರೆ. ಶ್ರುತೇಃ = ವೇದಗಳಿಗೆ, ಚ = ಮತ್ತು, ತದನುಸಾರಿಸ್ಮೃತೇಃ = ವೇದಗಳಿಗೆ ಅನುಸಾರಿಯಾದ ಪಂಚರಾತ್ರಾಮಗಳಿಗೆ, ತದುಪಲಬ್ಧಾರ್ಥ ಅನುಪಲಬ್ಧೇಃ = ಅವುಗಳಲ್ಲಿ ಹೇಳಲ್ಪಟ್ಟ ಫಲಗಳು ಕಾಣಸದಿರುವುದರಿಂದ, ಅಪ್ರಾಮಾಣ್ಯಮ್ = ಅಪ್ರಾಮಾಣ್ಯವನ್ನು,

ಏವಂ = ಪಾಶುಪತಾದ್ಯಾಗಮಗಳಂತೆ, ನ = ಹೇಳಬಾರದು, ವಿಲಕ್ಷಣತ್ವಾತ್ = ಪಾಶುಪತಾಮಗಳಿಂತಲೂ ಇವುಗಳಲ್ಲಿ ವೈಲಕ್ಷಣ್ಯವಿದೆ, ಹಿ = ಏಕೆಂದರೆ, ನಿತ್ಯತ್ವಾತ್ = ವೇದಗಳು ಅಪೌರುಷೇಯಗಳಾಗಿವೆ. ತದನುಸಾರಿತ್ವಾಚ್ಚ = ವೈಷ್ಣವಸ್ಮೃತಿಗಳು ವೇದಾನುಸಾರಿಗಳಾಗಿವೆ.

**भाष्यम् — न हि नित्ये दोषाः कल्प्याः । स्वतश्च प्रामाण्यम् । अन्यथाऽनवस्थितेः।**

ಅನುವಾದ - ಅಪೌರುಷೇಯವಾದ ವೇದಗಳಲ್ಲಿ ದೋಷಗಳನ್ನು ಎಂದೂ ಕೂಡ ಕಲ್ಪನೆ ಮಾಡಬಾರದು ಮತ್ತು ಪ್ರಾಮಾಣ್ಯವು ಫಲೋಪಲಬ್ಧಿಯ ಅಪೇಕ್ಷೆಯನ್ನು ಹೊಂದುವುದಿಲ್ಲ. ಹಾಗೆ ಅಪೇಕ್ಷೆ ಪಟ್ಟರೆ ಅನವಸ್ಥಾದೋಷವು ಬರುತ್ತದೆ.

ಪ್ರತಿಪದಾರ್ಥ -- ವೇದವು ಅಪೌರುಷೇಯವಾದರೂ ಅಪ್ರಾಮಾಣ್ಯವನ್ನು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ನಿತ್ಯೇ = ಅಪೌರುಷೇಯವಾದ ವೇದದಲ್ಲಿ, ದೋಷಾಃ = ದೋಷಗಳನ್ನು ನ ಹಿ ಕಲ್ಪ್ಯಾಃ = ಕಲ್ಪನೆ ಮಾಡಬಾರದು. ಸ್ವತಶ್ಚ ಪ್ರಾಮಾಣ್ಯಮ್ = ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿರುವುದರಿಂದ, ಅನ್ಯಥಾ = ಪ್ರಾಮಾಣ್ಯಸ್ತ್ವವನ್ನು ಒಪ್ಪದಿದ್ದರೆ, ಅನವಸ್ಥಿತೇಃ = ಅನವಸ್ಥಾ ದೋಷವು ಬರುತ್ತದೆ.

**भाष्यम् — 'न चक्षुर्न श्रोत्रं न तर्को न स्मृतिर्वेदा ह्येवैनं वेदयन्ति' इति भाल्लवेयश्रुतेश्च ।**

ಅನುವಾದ - ವೇದಪ್ರತಿಪಾದ್ಯನಾದ ಪರಮಾತ್ಮನನ್ನು ಕಣ್ಣು ನೋಡುವುದಿಲ್ಲ , ಕಿವಿ ಕೇಳುವುದಿಲ್ಲ. ತರ್ಕವು ಸಾಧನೆ ಮಾಡುವುದಿಲ್ಲ. ಸ್ಮೃತಿಗ್ರಂಥಗಳು ಮಾತನಾಡುವುದಿಲ್ಲ. ವೇದಗಳು ಮಾತ್ರ ಅವನನ್ನು ಪ್ರತಿಪಾದನೆ ಮಾಡುತ್ತವೆ. ಹೀಗೆ ಭಾಲ್ಲವೇಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ವೇದವು ಸ್ವತಃಪ್ರಮಾಣವಾಗಿದೆ. 'ಶಬ್ದಾತ್' ಎಂಬ ಸೂತ್ರದ ಭಾಗದಿಂದ ಉಲ್ಲೇಖ ಮಾಡಿದ ವೇದದ ಸ್ವತಃ ಪ್ರಾಮಾಣ್ಯವಿಷಯದಲ್ಲಿ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. ಚಕ್ಷುಃ = ಅಜ್ಞಾನಿಗಳ ಕಣ್ಣು ಏನಂ = ಈ ಪರಮಾತ್ಮನನ್ನು ನ = ನೋಡುವುದಿಲ್ಲ. ಶ್ರೋತ್ರಂ = ಅಜ್ಞಾನಿಗಳ ಕಿವಿಯು, ಏನಂ = ಈ ಪರಮಾತ್ಮನನ್ನು, ನ = ಕೇಳುವುದಿಲ್ಲ. ತರ್ಕಃ = ಶುಷ್ಕವಾದ ಅನುಮಾನವು, ಏನಂ = ಈ ಪರಮಾತ್ಮನನ್ನು, ನ = ಸಾಧನೆ ಮಾಡುವುದಿಲ್ಲ. ಸ್ಮೃತಿಃ = ವೇದಕ್ಕೆ ಅನುಕೂಲವಾಗದ ಸ್ಮೃತಿಃ = ಸ್ಮೃತಿಯು, ಏನಂ = ಈ ಪರಮಾತ್ಮನನ್ನು, ನ = ಪ್ರತಿಪಾದನೆ ಮಾಡುವುದಿಲ್ಲ. ವೇದಾ ಹಿ = ವೇದಗಳು ಮಾತ್ರ, ಏನಂ = ಈ ಪರಮಾತ್ಮನನ್ನು, ವೇದಯಂತಿ = ಪ್ರತಿಪಾದನೆ ಮಾಡುತ್ತವೆ. ಇತಿ = ಹೀಗೆ, ಭಾಲ್ಲವೇಯಶ್ರುತೇಶ್ಚ = ಭಾಲ್ಲವೇಶ್ರುತಿಯು ಪ್ರಮಾಣವಾಗಿದೆ.

ಪರಿಪೂರ್ಣಚಂದ್ರಿಕಾ

**भाष्यम् – नित्यत्वं च शब्दादेव प्रतीयते 'वाचा विरूप नित्यया' (ऋ.८.६४.६.) इत्यादेः । 'अनादिनिधना नित्या' इति च स्मृतिः ।।१।।**

ಅನುವಾದ - ವೇದದ ಅಪೌರುಷೆಯತ್ವವೂ ಕೂಡ ವೇದದಿಂದಲೇ ತಿಳಿಯುತ್ತದೆ. 'ವಾಚಾ ವಿರೂಪನಿತ್ಯಯಾ' ಎಂಬ ವೇದವಾಕ್ಯವು 'ಅನಾದಿ ನಿಧನಾ ನಿತ್ಯಾ' ಎಂಬ ಸ್ಮೃತಿವಾಕ್ಯವು **ವೇದಗಳಿಗೆ ಅಪೌರುಷೇಯತ್ವವನ್ನು 'ನಿತ್ಯಾ' ಎಂಬ ಶಬ್ದದಿಂದ ಪ್ರತಿಪಾದನೆ ಮಾಡುತ್ತಿದೆ.**

ಪ್ರತಿಪಾದಾರ್ಥ -- ಅಪೌರುಷೇಯತ್ವವೆಂಬ ಯಾವ ವೈಲಕ್ಷಣ್ಯವನ್ನು ಸೂತ್ರದಲ್ಲಿ ಹೇಳಿದರೋ, ಅದು ಅಸಿದ್ಧವಾಗಿದೆ ಎಂದು ಆಶಂಕಿಸಿ ವೇದಪ್ರಮಾಣದಿಂದಲೇ ಅದನ್ನು ಪರಿಹರಿಸುತ್ತಿದ್ದಾರೆ. ನಿತ್ಯತ್ವಂ ಚ = ವೇದದ ಅಪೌರುಷೇಯತ್ವವಾದರೂ ಶಬ್ದಾದೇವ ಆಗಮಪ್ರಮಾಣದಿಂದಲೇ ಪ್ರತೀಯತೇ = ಸಿದ್ಧವಾಗುತ್ತಿದೆ. ವಾಚಾ ವಿರೂಪ ನಿತ್ಯಯಾ = ವಾಚಾ ವಿರೂಪ ನಿತ್ಯಯಾ ಇವೇ ಮೊದಲಾದ ವೇದಮಾತುಗಳಿಂದ ಅನಾದಿನಿಧನಾ ನಿತ್ಯಾ = 'ಅನಾದಿನಿಧನಾ ನಿತ್ಯಾ' ಇತ್ಯಾದಿ ಸ್ಮೃತಿವಾಕ್ಯಗಳಿಂದ ವೇದದ ಅಪೌರುಷೇಯತ್ವವು ಸಿದ್ಧವಾಗಿದೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका –**

**अत्र विष्णोर्जगत्कारणत्वे प्रमाणत्वेनोक्तवेदादिप्रामाण्यस्य युक्तिविरोधपरिहारादस्ति शास्त्रादिसङ्गतिः ।।**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ಯಾವ ವೇದಾದಿಗಳನ್ನು ಪ್ರಮಾಣಗಳನ್ನಾಗಿ ಹಿಂದೆ ಹೇಳಲಾಯಿತೋ, ಆ ವಿಷಯಗಳಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಇರುತ್ತವೆ.

ವಿವರಣೆ - ವೇದಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ವೇದವು ಪ್ರಾಮಾಣವೇ ಆಗುವುದಿಲ್ಲ. ಆಗ ತನ್ಮೂಲಕವಾಗಿ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ. ಆದ್ದರಿಂದ ಯುಕ್ತಿವಿರೋಧವನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. ಹೀಗೆ ಯುಕ್ತಿವಿರೋಧವನ್ನು

ಪರಿಹಾರ ಮಾಡಲು ಹೊರಟಿರುವುದರಿಂದ ಅವಿರೋಧಾಧ್ಯಾಯದಲ್ಲಿ ಹಾಗೂ ಯುಕ್ತಿಪಾದದಲ್ಲಿ ಇದು ಸಂಗತವಾಗುತ್ತದೆ.

**तत्वप्रकाशिका – श्रुत्यादिप्रामाण्यात् विष्णोर्जगत्कारणत्वं सिध्यतीत्युक्तम्। श्रुत्यादिप्रामाण्यस्य च युक्तिविरोधे न ब्रह्मणो जगत्कारणत्वसिद्धिः । अतोऽसौ परिहर्तव्य एव । श्रुत्याद्येव विषयः प्रमाणं न वेति सन्देहः । उभयविधवाक्योपलब्धिः, सन्देहबीजम् ।**

ಶ್ರುತಿ-ಸ್ಮೃತಿಗಳು ಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವು ಸಿದ್ಧವಾಯಿತು. ಈ ಶ್ರುತ್ಯಾದಿಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಬ್ರಹ್ಮನಿಗೆ ಜಗತ್‌ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು. ಶ್ರುತ್ಯಾದಿಗಳೇ ಅಧಿಕರಣಕ್ಕೆ ವಿಷಯ. ಶ್ರುತ್ಯಾದಿಗಳು ಪ್ರಮಾಣವೋ, ಅಲ್ಲವೋ ಎಂಬುದು ಅಧಿಕರಣದ ಸಂದೇಹ. ಎರಡು ಬಗೆಯ ವಾಕ್ಯಗಳ ಉಪಲಬ್ಧಿಯು ಸಂದೇಹಕ್ಕೆ ಕಾರಣ.

**तत्वप्रकाशिका – श्रुत्यादिकं न प्रमाणमिति पूर्वः पक्षः । 'कारीर्या यजेत वृष्टिकामः' इत्यादिश्रुतेः कारीर्याद्यनुष्ठानेऽपि वृष्ट्याद्यदृष्टाऽविद्यमानार्थाभिधायकत्वात् ।**

ಶ್ರುತ್ಯಾದಿಗಳು ಪ್ರಮಾಣವಲ್ಲವೆಂದು ಪೂರ್ವಪಕ್ಷ. 'ಕಾರಿರ್ಯಾ ಯಜೇತ ವೃಷ್ಟಿಕಾಮಃ' ಮಳೆಯನ್ನು ಬಯಸುವವನು ಕಾರೀರ್ಯಾ ಯಾಗವನ್ನು ಆಚರಿಸಬೇಕು ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಆದರೆ ಕಾರೀರ್ಯಾ ಯಾಗವನ್ನು ಅನುಷ್ಠಾನ ಮಾಡಿದರೂ ಕೂಡ ಕೆಲವೊಮ್ಮೆ ಮಳೆ ಬರುವುದು ಕಾಣಸುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಶ್ರುತಿಗಳು ಅಪ್ರಮಾಣವಾಗುತ್ತವೆ.

**तत्वप्रकाशिका – तथा स्मृतीनामप्यनुपलभ्यमानफलभिधायकत्वेनाविद्यमानार्थत्वात् । अविध्यमानाभिधायकानां च पाशुपतादिस्मृतिवदप्रामाण्यनियमात्।**

ಇದೇ ರೀತಿಯಾಗಿ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ. ಏಕೆಂದರೆ ಆಯಾ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ, ಫಲವು ದೊರೆಯುತ್ತದೆಂದು ಹೇಳುತ್ತಿದೆಯೋ, ಆಯಾ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲಗಳು ದೊರೆಯುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ.

ಪಾಶುಪತಾದಿಸ್ಮೃತಿಗಳು ಹೀಗೆ ಅವಿದ್ಯಮಾನವಾದ ಅರ್ಥವನ್ನು ಹೇಳುವುದರಿಂದ ಅಪ್ರಮಾಣವಾಗಿವೆಯೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವೆ.

**तत्वप्रकाशिका – अविद्यमानाभिघात्रीणामपि श्रुतिस्मृतीनां प्रामाण्ये, अन्यस्मृतीनामपि तत्प्रसङ्गात् । न हि अविद्यमानाभिधायकत्वसाम्येऽपि 'श्रुत्यादेरेव प्रामाण्यं, नान्यस्य' इति विभागे हेतुरस्ति । एवं च वेदाद्येकदेशस्याप्रामाण्येऽन्यदशप्रमाणतयामनाश्वासान्न विष्णोर्जगत्कारणत्वसिद्धिरिति ।**

ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡಿದರೂ ಕೂಡ ಶ್ರುತಿ-ಸ್ಮೃತಿಗಳು ಪ್ರಮಾಣವಾಗುವುದಾದರೆ, ಪಾಶುಪತಾದಿಸ್ಮೃತಿಗಳೂ ಕೂಡ ಪ್ರಮಾಣವಾಗಲಿ. ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವಿಕೆ ಎಂಬುದು ಎರಡು ಕಡೆ ಸಮಾನವಾಗಿರುವಾಗ ಶ್ರುತಿಗಳು ಹಾಗೂ ಪಂಚರಾತ್ರಸ್ಮೃತಿಗಳು ಮಾತ್ರ ಪ್ರಮಾಣವಾಗುತ್ತವೆ. ಪಾಶುಪತಸ್ಮೃತಿಗಳು ಪ್ರಮಾಣವಾಗುವುದಿಲ್ಲ ಎಂದು ವಿಭಾಗ ಮಾಡಲು ಯಾವುದೇ ಕಾರಣ ಇರುವುದಿಲ್ಲ. ಹೀಗೆ ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ ಉಳಿದ ಏಕದೇಶವು ಪ್ರಮಾಣವಾಗಿವೆ ಎಂಬ ವಿಷಯದಲ್ಲಿ ವಿಶ್ವಾಸ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವು ಸಿದ್ಧವಾಗುವುದಿಲ್ಲ.

**तत्वप्रकाशिका – सिद्धान्तयत्सूत्रमुपन्यस्य प्रतिज्ञांशं तावद् व्याचष्टे – नेति ।। अस्य श्रुत्यादेस्तथात्वं पाशुपतादिस्मृतिवत्, उक्तानुपलब्धिहेतुनानाप्रामाण्यं कल्प्यमिति भावः । तत्र हेत्वाकाङ्क्षायां सौत्रं हेतुमुपन्यस्य व्याचष्टे – विलक्षणत्वादिति ।।**

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ಪ್ರತಿಜ್ಞಾಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ ಅಸ್ಯ ತಥಾತ್ವಮ್' ಎಂಬುದು ಸೂತ್ರದಲ್ಲಿರುವ ಪ್ರತಿಜ್ಞಾವಾಕ್ಯವಾಗಿದೆ. ಇದಕ್ಕೆ 'ವಿಲಕ್ಷಣತ್ವಾತ್' ಎಂಬುದು ಹೇತುವಾಕ್ಯವಾಗಿದೆ. 'ಶಬ್ದಾತ್' ಎಂಬುದು ಹೇತು ಸಮರ್ಥಕವಾದ ವಾಕ್ಯವಾಗಿದೆ. 'ಅಸ್ಯ' ಎಂಬ ಪದಕ್ಕೆ ಶ್ರುತ್ಯಾದಿಗಳಿಗೆ ಎಂದರ್ಥ. 'ನ ತಥಾತ್ವಮ್' ಎಂದರೆ ಪಾಶುಪತಾದಿಸ್ಮೃತಿಗಳಂತೆ 'ಅನುಪಲಬ್ಧಿ' ಎಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂದಭಿಪ್ರಾಯ. ಈ ವಿಷಯದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ, ಸೂತ್ರದಲ್ಲಿರುವ ಹೇತುವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡಲು 'ವಿಲಕ್ಷಣತ್ವಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಪರಿಹಾರ ಮಾಡಲು ಹೊರಟಿರುವುದರಿಂದ ಅವಿರೋಧಾಧ್ಯಾಯದಲ್ಲಿ ಹಾಗೂ ಯುಕ್ತಿಪಾದದಲ್ಲಿ ಇದು ಸಂಗತವಾಗುತ್ತದೆ.

**तत्वप्रकाशिका – श्रुत्यादिप्रामाण्यात् विष्णोर्जगत्कारणत्वं सिध्यतीत्युक्तम्। श्रुत्यादिप्रामाण्यस्य च युक्तिविरोधे न ब्रह्मणो जगत्कारणत्वसिद्धिः । अतोऽसौ परिहर्तव्य एव । श्रुत्याद्येव विषयः प्रमाणं न वेति सन्देहः । उभयविधवाक्योपलब्धिः, सन्देहबीजम् ।**

ಶ್ರುತಿ-ಸ್ಮೃತಿಗಳು ಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಯಿತು. ಈ ಶ್ರುತ್ಯಾದಿಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಬ್ರಹ್ಮನಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು. ಶ್ರುತ್ಯಾದಿಗಳೇ ಅಧಿಕರಣಕ್ಕೆ ವಿಷಯ. ಶ್ರುತ್ಯಾದಿಗಳು ಪ್ರಮಾಣವೋ, ಅಲ್ಲವೋ ಎಂಬುದು ಅಧಿಕರಣದ ಸಂದೇಹ. ಎರಡು ಬಗೆಯ ವಾಕ್ಯಗಳ ಉಪಲಬ್ಧಿಯು ಸಂದೇಹಕ್ಕೆ ಕಾರಣ.

**तत्वप्रकाशिका – श्रुत्यादिकं न प्रमाणमिति पूर्वः पक्षः । 'कारीर्या यजेत वृष्टिकामः' इत्यादिश्रुतेः कारीर्याद्यनुष्ठानेऽपि वृष्ट्याद्यदृष्टाऽविद्यमानार्थाभिधायकत्वात् ।**

ಶ್ರುತ್ಯಾದಿಗಳು ಪ್ರಮಾಣವಲ್ಲವೆಂದು ಪೂರ್ವಪಕ್ಷ. 'ಕಾರಿರ್ಯಾ ಯಜೇತ ವೃಷ್ಟಿಕಾಮಃ' ಮಳೆಯನ್ನು ಬಯಸುವವನು ಕಾರೀರ್ಯಾ ಯಾಗವನ್ನು ಆಚರಿಸಬೇಕು ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಆದರೆ ಕಾರೀರ್ಯಾ ಯಾಗವನ್ನು ಅನುಷ್ಠಾನ ಮಾಡಿದರೂ ಕೂಡ ಕೆಲವೊಮ್ಮೆ ಮಳೆ ಬರುವುದು ಕಾಣಿಸುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಶ್ರುತಿಗಳು ಅಪ್ರಮಾಣವಾಗುತ್ತವೆ.

**तत्वप्रकाशिका – तथा स्मृतीनामप्यनुपलभ्यमानफलभिधायकत्वेनाविद्यमानार्थत्वात् । अविध्यमानाभिधायकानां च पाशुपतादिस्मृतिवदप्रामाण्यनियमात्।**

ಇದೇ ರೀತಿಯಾಗಿ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ. ಏಕೆಂದರೆ ಆಯಾ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ, ಫಲವು ದೊರೆಯುತ್ತದೆಂದು ಹೇಳುತ್ತಿದೆಯೋ, ಆಯಾ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲಗಳು ದೊರೆಯುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ.

ಪಾಶುಪತಾದಿಸ್ಮೃತಿಗಳು ಹೀಗೆ ಅವಿದ್ಯಮಾನವಾದ ಅರ್ಥವನ್ನು ಹೇಳುವುದರಿಂದ ಅಪ್ರಮಾಣ-ವಾಗಿವೆಯೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವೆ.

**तत्वप्रकाशिका – अविद्यमानाभिधात्रीणामपि श्रुतिस्मृतीनां प्रामाण्ये, अन्यस्मृतीनामपि तत्प्रसङ्गात् । न हि अविद्यमानाभिधायकत्वसाम्येऽपि 'श्रुत्यादेरेव प्रामाण्यं, नान्यस्य' इति विभागे हेतुरस्ति । एवं च वेदाद्येकदेशस्याप्रामाण्येऽन्य-दशप्रमाणतयामनाश्वासान्न विष्णोर्जगत्कारणत्वसिद्धिरिति ।**

ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡಿದರೂ ಕೂಡ ಶ್ರುತಿ-ಸ್ಮೃತಿಗಳು ಪ್ರಮಾಣವಾಗುವುದಾದರೆ, ಪಾಶುಪತಾದಿಸ್ಮೃತಿಗಳೂ ಕೂಡ ಪ್ರಮಾಣವಾಗಲಿ. ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವಿಕೆ ಎಂಬುದು ಎರಡು ಕಡೆ ಸಮಾನವಾಗಿರುವಾಗ ಶ್ರುತಿಗಳು ಹಾಗೂ ಪಂಚರಾತ್ರಸ್ಮೃತಿಗಳು ಮಾತ್ರ ಪ್ರಮಾಣವಾಗುತ್ತವೆ. ಪಾಶುಪತಸ್ಮೃತಿಗಳು ಪ್ರಮಾಣ-ವಾಗುವುದಿಲ್ಲ ಎಂದು ವಿಭಾಗ ಮಾಡಲು ಯಾವುದೇ ಕಾರಣ ಇರುವುದಿಲ್ಲ. ಹೀಗೆ ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ ಉಳಿದ ಏಕದೇಶವು ಪ್ರಮಾಣವಾಗಿವೆ ಎಂಬ ವಿಷಯದಲ್ಲಿ ವಿಶ್ವಾಸ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

**तत्वप्रकाशिका – सिद्धान्तयत्सूत्रमुपन्यस्य प्रतिज्ञांशं तावद् व्याचष्टे – नेति ।। अस्य श्रुत्यादेस्तथात्वं पाशुपतादिस्मृतिवत्, उक्तानुपलब्धिहेतुनानाप्रामाण्यं कल्प्यमिति भावः । तत्र हेत्वाकाङ्क्षायां सौत्रं हेतुमुपन्यस्य व्याचष्टे – विलक्षणत्वादिति ।।**

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ಪ್ರತಿಜ್ಞಾಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ ಅಸ್ಯ ತಥಾತ್ವಮ್' ಎಂಬುದು ಸೂತ್ರದಲ್ಲಿರುವ ಪ್ರತಿಜ್ಞಾವಾಕ್ಯವಾಗಿದೆ. ಇದಕ್ಕೆ 'ವಿಲಕ್ಷಣತ್ವಾತ್' ಎಂಬುದು ಹೇತುವಾಕ್ಯವಾಗಿದೆ. 'ಶಬ್ದಾತ್' ಎಂಬುದು ಹೇತು ಸಮರ್ಥಕವಾದ ವಾಕ್ಯವಾಗಿದೆ. 'ಅಸ್ಯ' ಎಂಬ ಪದಕ್ಕೆ ಶ್ರುತ್ಯಾದಿಗಳಿಗೆ ಎಂದರ್ಥ. 'ನ ತಥಾತ್ವಮ್' ಎಂದರೆ ಪಾಶುಪತಾದಿಸ್ಮೃತಿಗಳಂತೆ 'ಅನುಪಲಬ್ಧಿ' ಎಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂದಭಿಪ್ರಾಯ. ಈ ವಿಷಯದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ, ಸೂತ್ರದಲ್ಲಿರುವ ಹೇತುವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡಲು 'ವಿಲಕ್ಷಣತ್ವಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಪರಿಹಾರ ಮಾಡಲು ಹೊರಟಿರುವುದರಿಂದ ಅವಿರೋಧಾಧ್ಯಾಯದಲ್ಲಿ ಹಾಗೂ ಯುಕ್ತಿಪಾದದಲ್ಲಿ ಇದು ಸಂಗತವಾಗುತ್ತದೆ.

**तत्वप्रकाशिका – श्रुत्यादिप्रामाण्यात् विष्णोर्जगत्कारणत्वं सिध्यतीत्युक्तम्। श्रुत्यादिप्रामाण्यस्य च युक्तिविरोधे न ब्रह्मणो जगत्कारणत्वसिद्धिः । अतोऽसौ परिहर्तव्य एव । श्रुत्याद्येव विषयः प्रमाणं न वेति सन्देहः । उभयविधवाक्योपलब्धिः, सन्देहबीजम् ।**

ಶ್ರುತಿ-ಸ್ಮೃತಿಗಳು ಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವು ಸಿದ್ಧವಾಯಿತು. ಈ ಶ್ರುತ್ಯಾದಿಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಬ್ರಹ್ಮನಿಗೆ ಜಗತ್‌ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು. ಶ್ರುತ್ಯಾದಿಗಳೇ ಅಧಿಕರಣಕ್ಕೆ ವಿಷಯ. ಶ್ರುತ್ಯಾದಿಗಳು ಪ್ರಮಾಣವೋ, ಅಲ್ಲವೋ ಎಂಬುದು ಅಧಿಕರಣದ ಸಂದೇಹ. ಎರಡು ಬಗೆಯ ವಾಕ್ಯಗಳ ಉಪಲಬ್ಧಿಯು ಸಂದೇಹಕ್ಕೆ ಕಾರಣ.

**तत्वप्रकाशिका – श्रुत्यादिकं न प्रमाणमिति पूर्वः पक्षः । 'कारीर्या यजेत वृष्टिकामः' इत्यादिश्रुतेः कारीर्याद्यनुष्ठानेऽपि वृष्ट्याद्यदृष्टाऽविद्यमानार्थाभिधायकत्वात् ।**

ಶ್ರುತ್ಯಾದಿಗಳು ಪ್ರಮಾಣವಲ್ಲವೆಂದು ಪೂರ್ವಪಕ್ಷ. 'ಕಾರಿರ್ಯಾ ಯಜೇತ ವೃಷ್ಟಿಕಾಮಃ' ಮಳೆಯನ್ನು ಬಯಸುವವನು ಕಾರೀರ್ಯಾ ಯಾಗವನ್ನು ಆಚರಿಸಬೇಕು ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಆದರೆ ಕಾರೀರ್ಯಾ ಯಾಗವನ್ನು ಅನುಷ್ಠಾನ ಮಾಡಿದರೂ ಕೂಡ ಕೆಲವೊಮ್ಮೆ ಮಳೆ ಬರುವುದು ಕಾಣಿಸುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಶ್ರುತಿಗಳು ಅಪ್ರಮಾಣವಾಗುತ್ತವೆ.

**तत्वप्रकाशिका – तथा स्मृतीनामप्यनुपलभ्यमानफलभिधायकत्वेनाविद्यमानार्थत्वात् । अविध्यमानाभिधायकानां च पाशुपतादिस्मृतिवद्प्रामाण्यनियमात्।**

ಇದೇ ರೀತಿಯಾಗಿ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ. ಏಕೆಂದರೆ ಆಯಾ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ, ಫಲವು ದೊರೆಯುತ್ತದೆಂದು ಹೇಳುತ್ತಿದೆಯೋ, ಆಯಾ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲಗಳು ದೊರೆಯುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ.

ಪಾಶುಪತಾದಿಸ್ಮೃತಿಗಳು ಹೀಗೆ ಅವಿದ್ಯಮಾನವಾದ ಅರ್ಥವನ್ನು ಹೇಳುವುದರಿಂದ ಅಪ್ರಮಾಣವಾಗಿವೆಯೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವೆ.

**तत्वप्रकाशिका – अविद्यमानाभिधात्रीणामपि श्रुतिस्मृतीनां प्रामाण्ये, अन्यस्मृतीनामपि तत्प्रसङ्गात् । न हि अविद्यमानाभिधायकत्वसाम्येऽपि 'श्रुत्यादेरेव प्रामाण्यं, नान्यस्य' इति विभागे हेतुरस्ति । एवं च वेदाद्येकदेशस्याप्रामाण्येऽन्यदशप्रमाणतयामनाश्वासान्न विष्णोर्जगत्कारणत्वसिद्धिरिति ।**

ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡಿದರೂ ಕೂಡ ಶ್ರುತಿ-ಸ್ಮೃತಿಗಳು ಪ್ರಮಾಣವಾಗುವುದಾದರೆ, ಪಾಶುಪತಾದಿಸ್ಮೃತಿಗಳೂ ಕೂಡ ಪ್ರಮಾಣವಾಗಲಿ. ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವಿಕೆ ಎಂಬುದು ಎರಡು ಕಡೆ ಸಮಾನವಾಗಿರುವಾಗ ಶ್ರುತಿಗಳು ಹಾಗೂ ಪಂಚರಾತ್ರಸ್ಮೃತಿಗಳು ಮಾತ್ರ ಪ್ರಮಾಣವಾಗುತ್ತವೆ. ಪಾಶುಪತಸ್ಮೃತಿಗಳು ಪ್ರಮಾಣವಾಗುವುದಿಲ್ಲ ಎಂದು ವಿಭಾಗ ಮಾಡಲು ಯಾವುದೇ ಕಾರಣ ಇರುವುದಿಲ್ಲ. ಹೀಗೆ ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ ಉಳಿದ ಏಕದೇಶವು ಪ್ರಮಾಣವಾಗಿವೆ ಎಂಬ ವಿಷಯದಲ್ಲಿ ವಿಶ್ವಾಸ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

**तत्वप्रकाशिका – सिद्धान्तयत्सूत्रमुपन्यस्य प्रतिज्ञांशं तावद् व्याचष्टे – नेति ।। अस्य श्रुत्यादेस्तथात्वं पाशुपतादिस्मृतिवत्, उक्तानुपलब्धिहेतुनानाप्रामाण्यं कल्प्यमिति भावः । तत्र हेत्वाकाङ्क्षायां सौत्रं हेतुमुपन्यस्य व्याचष्टे – विलक्षणत्वादिति ।।**

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ಪ್ರತಿಜ್ಞಾಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ ಅಸ್ಯ ತಥಾತ್ವಮ್' ಎಂಬುದು ಸೂತ್ರದಲ್ಲಿರುವ ಪ್ರತಿಜ್ಞಾವಾಕ್ಯವಾಗಿದೆ. ಇದಕ್ಕೆ 'ವಿಲಕ್ಷಣತ್ವಾತ್' ಎಂಬುದು ಹೇತುವಾಕ್ಯವಾಗಿದೆ. 'ಶಬ್ದಾತ್' ಎಂಬುದು ಹೇತು ಸಮರ್ಥಕವಾದ ವಾಕ್ಯವಾಗಿದೆ. 'ಅಸ್ಯ' ಎಂಬ ಪದಕ್ಕೆ ಶ್ರುತ್ಯಾದಿಗಳಿಗೆ ಎಂದರ್ಥ. 'ನ ತಥಾತ್ವಮ್' ಎಂದರೆ ಪಾಶುಪತಾದಿಸ್ಮೃತಿಗಳಂತೆ 'ಅನುಪಲಬ್ಧಿ' ಎಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂದಭಿಪ್ರಾಯ. ಈ ವಿಷಯದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ, ಸೂತ್ರದಲ್ಲಿರುವ ಹೇತುವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡಲು 'ವಿಲಕ್ಷಣತ್ವಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಪರಿಹಾರ ಮಾಡಲು ಹೊರಟಿರುವುದರಿಂದ ಅವಿರೋಧಾಧ್ಯಾಯದಲ್ಲಿ ಹಾಗೂ ಯುಕ್ತಿಪಾದದಲ್ಲಿ ಇದು ಸಂಗತವಾಗುತ್ತದೆ.

**तत्वप्रकाशिका – श्रुत्यादिप्रामाण्यात् विष्णोर्जगत्कारणत्वं सिध्यतीत्युक्तम्। श्रुत्यादिप्रामाण्यस्य च युक्तिविरोधे न ब्रह्मणो जगत्कारणत्वसिद्धिः । अतोऽसौ परिहर्तव्य एव । श्रुत्याद्येव विषयः प्रमाणं न वेति सन्देहः । उभयविधवाक्योपलब्धिः, सन्देहबीजम् ।**

ಶ್ರುತಿ-ಸ್ಮೃತಿಗಳು ಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವು ಸಿದ್ಧವಾಯಿತು. ಈ ಶ್ರುತ್ಯಾದಿಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಬ್ರಹ್ಮನಿಗೆ ಜಗತ್‌ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು. ಶ್ರುತ್ಯಾದಿಗಳೇ ಅಧಿಕರಣಕ್ಕೆ ವಿಷಯ. ಶ್ರುತ್ಯಾದಿಗಳು ಪ್ರಮಾಣವೋ, ಅಲ್ಲವೋ ಎಂಬುದು ಅಧಿಕರಣದ ಸಂದೇಹ. ಎರಡು ಬಗೆಯ ವಾಕ್ಯಗಳ ಉಪಲಬ್ಧಿಯು ಸಂದೇಹಕ್ಕೆ ಕಾರಣ.

**तत्वप्रकाशिका – श्रुत्यादिकं न प्रमाणमिति पूर्वः पक्षः । 'कारीर्या यजेत वृष्टिकामः' इत्यादिश्रुतेः कारीर्याद्यनुष्ठानेऽपि वृष्ट्याद्यदृष्टाऽविद्यमानार्थाभिधायकत्वात् ।**

ಶ್ರುತ್ಯಾದಿಗಳು ಪ್ರಮಾಣವಲ್ಲವೆಂದು ಪೂರ್ವಪಕ್ಷ. 'ಕಾರಿರ್ಯಾ ಯಜೇತ ವೃಷ್ಟಿಕಾಮಃ' ಮಳೆಯನ್ನು ಬಯಸುವವನು ಕಾರೀರ್ಯಾ ಯಾಗವನ್ನು ಆಚರಿಸಬೇಕು ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಆದರೆ ಕಾರೀರ್ಯಾ ಯಾಗವನ್ನು ಅನುಷ್ಠಾನ ಮಾಡಿದರೂ ಕೂಡ ಕೆಲವೊಮ್ಮ ಮಳೆ ಬರುವುದು ಕಾಣಸುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಶ್ರುತಿಗಳು ಅಪ್ರಮಾಣವಾಗುತ್ತವೆ.

**तत्वप्रकाशिका – तथा स्मृतीनामप्यनुपलभ्यमानफलभिधायकत्वेनाविद्यमानार्थत्वात् । अविध्यमानाभिधायकानां च पाशुपतादिस्मृतिवदप्रामाण्यनियमात्।**

ಇದೇ ರೀತಿಯಾಗಿ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ. ಏಕೆಂದರೆ ಆಯಾ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ, ಫಲವು ದೊರೆಯುತ್ತದೆಂದು ಹೇಳುತ್ತಿದೆಯೋ, ಆಯಾ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲಗಳು ದೊರೆಯುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ.

ಪಾಶುಪತಾದಿಸ್ಮೃತಿಗಳು ಹೀಗೆ ಅವಿದ್ಯಮಾನವಾದ ಅರ್ಥವನ್ನು ಹೇಳುವುದರಿಂದ ಅಪ್ರಮಾಣವಾಗಿವೆಯೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವೆ.

**तत्वप्रकाशिका – अविद्यमानाभिधात्रीणामपि श्रुतिस्मृतीनां प्रामाण्ये, अन्यस्मृतीनामपि तत्प्रसङ्गात् । न हि अविद्यमानाभिधायकत्वसाम्येऽपि 'श्रुत्यादेरेव प्रामाण्यं, नान्यस्य' इति विभागे हेतुरस्ति । एवं च वेदाद्येकदेशस्याप्रामाण्येऽन्यदशप्रमाणतयामनाश्वासान्न विष्णोर्जगत्कारणत्वसिद्धिरिति ।**

ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡಿದರೂ ಕೂಡ ಶ್ರುತಿ-ಸ್ಮೃತಿಗಳು ಪ್ರಮಾಣವಾಗುವುದಾದರೆ, ಪಾಶುಪತಾದಿಸ್ಮೃತಿಗಳೂ ಕೂಡ ಪ್ರಮಾಣವಾಗಲಿ. ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವಿಕೆ ಎಂಬುದು ಎರಡು ಕಡೆ ಸಮಾನವಾಗಿರುವಾಗ ಶ್ರುತಿಗಳು ಹಾಗೂ ಪಂಚರಾತ್ರಸ್ಮೃತಿಗಳು ಮಾತ್ರ ಪ್ರಮಾಣವಾಗುತ್ತವೆ. ಪಾಶುಪತಸ್ಮೃತಿಗಳು ಪ್ರಮಾಣವಾಗುವುದಿಲ್ಲ ಎಂದು ವಿಭಾಗ ಮಾಡಲು ಯಾವುದೇ ಕಾರಣ ಇರುವುದಿಲ್ಲ. ಹೀಗೆ ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ ಉಳಿದ ಏಕದೇಶವು ಪ್ರಮಾಣವಾಗಿವೆ ಎಂಬ ವಿಷಯದಲ್ಲಿ ವಿಶ್ವಾಸ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

**तत्वप्रकाशिका – सिद्धान्तयत्सूत्रमुपन्यस्य प्रतिज्ञांशं तावद् व्याचष्टे – नेति ।। अस्य श्रुत्यादेस्तथात्वं पाशुपतादिस्मृतिवत्, उक्तानुपलब्धिहेतुनानाप्रामाण्यं कल्प्यमिति भावः । तत्र हेत्वाकाङ्क्षायां सौत्रं हेतुमुपन्यस्य व्याचष्टे – विलक्षणत्वादिति ।।**

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ಪ್ರತಿಜ್ಞಾಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ ಅಸ್ಯ ತಥಾತ್ವಮ್' ಎಂಬುದು ಸೂತ್ರದಲ್ಲಿರುವ ಪ್ರತಿಜ್ಞಾವಾಕ್ಯವಾಗಿದೆ. ಇದಕ್ಕೆ 'ವಿಲಕ್ಷಣತ್ವಾತ್' ಎಂಬುದು ಹೇತುವಾಕ್ಯವಾಗಿದೆ. 'ಶಬ್ದಾತ್' ಎಂಬುದು ಹೇತು ಸಮರ್ಥಕವಾದ ವಾಕ್ಯವಾಗಿದೆ. 'ಅಸ್ಯ' ಎಂಬ ಪದಕ್ಕೆ ಶ್ರುತ್ಯಾದಿಗಳಿಗೆ ಎಂದರ್ಥ. 'ನ ತಥಾತ್ವಮ್' ಎಂದರೆ ಪಾಶುಪತಾದಿಸ್ಮೃತಿಗಳಂತೆ 'ಅನುಪಲಬ್ಧಿ' ಎಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂದಭಿಪ್ರಾಯ. ಈ ವಿಷಯದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ, ಸೂತ್ರದಲ್ಲಿರುವ ಹೇತುವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡಲು 'ವಿಲಕ್ಷಣತ್ವಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**तत्वप्रकाशिका** – श्रुतेः पाशुपतादिस्मृतितो नित्यत्वाख्यवैलक्षण्यात्, स्मृतेः तदनुसारित्वाख्यवैलक्षण्यान्न पाशुपतादिस्मृतिवत्, श्रुत्यादेरप्रामाण्यमित्यर्थः । ननु नित्यत्वादिसद्भावेऽपि कुतोऽप्रामाण्याभाव इत्यत आह – नहीति ।।

ಪಾಶುಪತಾದಿಸ್ಮೃತಿಗಳಿಗಿಂತ ಶ್ರುತಿಯಲ್ಲಿ ನಿತ್ಯತ್ವವೆಂಬ ವೈಲಕ್ಷಣ್ಯವಿದೆ. ಪಂಚರಾತ್ರಾದಿಸ್ಮೃತಿಗಳಲ್ಲಿ ವೇದಾನುಸಾರಿತ್ವ ಎಂಬ ವೈಲಕ್ಷಣ್ಯವಿದೆ. ಆದ್ದರಿಂದ ಶ್ರುತಿಗೆ ಹಾಗೂ ಪಂಚರಾತ್ರಸ್ಮೃತಿಗೆ ಪಾಶುಪತಸ್ಮೃತಿಯಂತೆ ಅಪ್ರಾಮಾಣ್ಯವನ್ನು ಹೇಳಬಾರದು ಎಂದಭಿಪ್ರಾಯ. ವೇದದಲ್ಲಿ ನಿತ್ಯತ್ವಾದಿಗಳಿದ್ದರೂ ಕೂಡ ಏಕೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

**तत्वप्रकाशिका** – वाक्याप्रामाण्यं तावद् वक्तृदोषनिबन्धनम् । न हि नित्ये वेदे ते दोषाः कल्पयितुं शक्यन्ते । यतो नित्यत्वाददोषत्वं, ततोऽप्रामाण्याभावः श्रुतेः सिध्यति। प्रमाणानुकूलत्वात्, स्मृतेरपि तत्सिद्धिरिति भावः ।।

ವಕ್ತೃವಿನಲ್ಲಿ ದೋಷವಿದ್ದರೆ ಮಾತ್ರ ಅವನಿಂದ ಉಚ್ಚರಿಸಲ್ಪಟ್ಟ ವಾಕ್ಯವು ಅಪ್ರಮಾಣವಾಗುತ್ತದೆ. ವೇದವು ನಿತ್ಯವಾಗಿರುವುದರಿಂದ ಯಾವುದೇ ವ್ಯಕ್ತಿಯಿಂದ ಅದು ಉಚ್ಚರಿತವಾಗಿಲ್ಲ. ಆದ್ದರಿಂದ ಅದರಲ್ಲಿ ದೋಷವನ್ನು ಕಲ್ಪನೆ ಮಾಡಲು ಸಾಧ್ಯವಿಲ್ಲ. ಯಾವ ಕಾರಣದಿಂದ ವೇದವು ನಿತ್ಯವಾಗಿರುವುದರಿಂದ ದೋಷರಹಿತವಾಗಿದೆಯೋ, ಆದ್ದರಿಂದಲೇ ಅದು ಅಪ್ರಮಾಣವೂ ಕೂಡ ಆಗುವುದಿಲ್ಲ ಎಂದು ಸಿದ್ಧವಾಗುತ್ತದೆ. ಇಂಥ ವೇದಗಳಿಗೆ ಅನುಸಾರಿಯಾಗಿರುವುದರಿಂದ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುವುದಿಲ್ಲ ಎಂದಭಿಪ್ರಾಯ.

**तत्वप्रकाशिका** – 'फलव्यभिचारेऽपि न पाशुपतादिस्मृतिवद्वेदादेरप्रामाण्यम्' इत्यत्रोक्तवैलक्षण्याख्यं हेतुं प्रकारान्तरेण व्याचष्टे – स्वतश्चेति ।।

ಫಲವ್ಯಭಿಚಾರವಿದ್ದರೂ ಕೂಡ ಪಾಶುಪತಾದಿಸ್ಮೃತಿಗಳಂತೆ ವೇದಾದಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಈ ವಿಷಯದಲ್ಲಿ ಪಾಶುಪತಾದಿಸ್ಮೃತಿಗಳಿಗಿಂತ ವೇದದಲ್ಲಿರುವ ವೈಲಕ್ಷಣ್ಯವನ್ನು ಮತ್ತೊಂದು ಪ್ರಕಾರದಿಂದ 'ಸ್ವತಶ್ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका** – भवेदुक्तानुपलब्ध्या वेदाद्यप्रामाण्यकल्पनं, यदि पाशुपतादिस्मतिवत् फलोपलब्ध्यादिसंवादाधीनज्ञानं तत्प्रामाण्यस्य स्यात् । नैतदस्ति। वेदादिप्रामाण्यस्य संवादनिरपेक्षतज्ज्ञानादेव सिद्ध्यङ्गीकारात् । न हि निर्दोषतदनुसारितत्तत्स्वरूपग्रहे पुनः प्रामाण्योपलब्ध्यै संवादसापेक्षताऽनुभूयते ।

ಒಂದುವೇಳೆ ಹಿಂದೆ ಹೇಳಿದಂತೆ ಫಲದ ಅನುಪಲಬ್ಧಿಯಿಂದ ವೇದ ಹಾಗು ಪಂಚರಾತ್ರಗಳಿಗೆ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಿದ್ದರೆ ನೀವು ಹೇಳಿದಂತೆ ವೇದವು ಅಪ್ರಮಾಣವಾಗುತ್ತಿತ್ತು. ಒಂದುವೇಳೆ ಪಾಶುಪತಾದಿ ಸ್ಮೃತಿಗಳಂತೆ ಪ್ರಾಮಾಣ್ಯವನ್ನು ಫಲೋಪಲಬ್ಧಿ ಮೊದಲಾದ ಸಂವಾದ ಪ್ರಮಾಣದ ಅಧೀನವಾಗಿ ತಿಳಿಯುವುದಾಗಿದ್ದಲ್ಲಿ; ಆದರೆ ವೇದಾದಿಗಳ ವಿಷಯದಲ್ಲಿ ಹೀಗಿಲ್ಲ. ವೇದಾದಿಗಳ ಪ್ರಾಮಾಣ್ಯವು ಸಂವಾದದ ಸಾಪೇಕ್ಷವಲ್ಲ. ಯಾವುದರಿಂದ ಜ್ಞಾನವು ಬರುತ್ತದೋ ಅದರಿಂದಲೇ ಅದರ ಪ್ರಾಮಾಣ್ಯವು ಕೂಡ ಸಾಕ್ಷಿಯಿಂದ ಸಿದ್ಧವಾಗುತ್ತದೆ. ಹೀಗಿರುವಾಗ ಫಲಸಂವಾದ ಇಲ್ಲದ ಕಾರಣ ಅಪ್ರಮಾಣವೆಂದು ಹೇಳಬಾರದು.

**तत्वप्रकाशिका – न च पाशुपतादिस्मृतीनामपि तथात्वं वाच्यम् । निर्दोषत्वाद्यनिश्चयादिति भावः ।**

ಪಾಶುಪತಾದಿಸ್ಮೃತಿಗಳಲ್ಲೂ ಕೂಡ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಬಹುದಲ್ಲವೆ ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ವೇದದಲ್ಲಿ ನಿರ್ದೋಷತ್ವವು ಸಿದ್ಧವಾದಂತೆ ಪಾಶುಪತಾದಿಸ್ಮೃತಿಗಳಲ್ಲಿ ನಿರ್ದೋಷತ್ವವು ಸಿದ್ಧವಾಗಿರುವುದಿಲ್ಲ.

**तत्वप्रकाशिका – प्रामाण्यं संवादाधीनज्ञानमेव किं न स्यादित्यत आह – अन्यथेति ।।**

ಸಕಲ ಪ್ರಮಾಣಗಳ ಪ್ರಾಮಾಣ್ಯವು ಸಂವಾದದಿಂದಲೇ ಗೃಹೀತವಾಗುತ್ತದೆಂದು ಏಕೆ ಒಪ್ಪಬಾರದು? ಎಂಬ ಆಕ್ಷೇಪಕ್ಕೆ 'ಅನ್ಯಥಾ' ಎಂಬ ಮಾತಿನಿಂದ ಉತ್ತರಿಸಿದ್ದಾರೆ.

**तत्वप्रकाशिका – यदि प्रामाण्यं संवादादेव ज्ञायते तर्हि संवादकप्रामाण्यमपि संवादान्तरेण ज्ञायते स्वत एव वा ।**

ಒಂದುವೇಳೆ ಪ್ರಾಮಾಣ್ಯವು ಸಂವಾದದಿಂದಲೇ ಸಿದ್ಧವಾಗುತ್ತದೆ ಎಂದು ಹೇಳಿದರೆ ಆ ಸಂವಾದಕ ಪ್ರಮಾಣದಲ್ಲಿಯೂ ಪ್ರಾಮಾಣ್ಯವು ಗೃಹಿತವಾಗಬೇಕು. ಅದರಲ್ಲೂ ಪ್ರಾಮಾಣ್ಯವು ಮತ್ತೊಂದು ಸಂವಾದದಿಂದಲೇ ತಿಳಿಯುತ್ತದೆಂದು ಹೇಳುತ್ತಿರೋ ಅಥವಾ ಸ್ವತಃ ತಿಳಿಯುತ್ತದೆಂದು ಹೇಳುತ್ತಿರೋ?

**तत्वप्रकाशिका – आद्ये तदप्येवमित्यनवस्था स्यात् । द्वितीये परम्पराकल्पनं व्यर्थं स्यात् । आद्यप्रामाण्यस्यैव स्वतस्त्वाभ्युपगमोपपत्तेरिति भावः ।।**

ಮೊದಲನೆಯ ಪಕ್ಷದಲ್ಲಿ ಸಂವಾದಕಪ್ರಮಾಣದ ಪ್ರಾಮಾಣ್ಯವು ಮತ್ತೊಂದು ಸಂವಾದ ಪ್ರಮಾಣದಿಂದಲೇ ತಿಳಿಯಬೇಕಾದ್ದರಿಂದ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಎರಡನೆಯ

ಪಕ್ಷದಲ್ಲಿ ಸಂವಾದ ಪರಂಪರೆಯನ್ನು ಒಪ್ಪುವ ಆವಶ್ಯಕತೆಯೇ ಇರುವುದಿಲ್ಲ. ಮೊದಲ ಪ್ರಮಾಣದ ಪ್ರಾಮಾಣ್ಯವನ್ನು ಸ್ವತಃ ಎಂದೇ ಅಂಗೀಕರಿಸಬಹುದು.

**तत्वप्रकाशिका – कदाचित् प्रामाण्यजिज्ञासायामेव संवादापेक्षणान्नानवस्थेति चेन्मैवम् । प्रामाण्याध्यवसायं विना प्रवृत्त्यनुपपत्त्या तज्जिज्ञासाध्रौव्यात् ।**

ಯಾವ ಸಂದರ್ಭದಲ್ಲಿ ಪ್ರಾಮಾಣ್ಯದ ಜಿಜ್ಞಾಸೆಯು ಉಂಟಾಗುತ್ತದೋ ಆವಾಗ ಮಾತ್ರ ಮತ್ತೊಂದು ಸಂವಾದಪ್ರಮಾಣದ ಅಪೇಕ್ಷೆ ಬೇಕಾಗುತ್ತದೆ. ಎಲ್ಲಿ ಜಿಜ್ಞಾಸೆ ಹುಟ್ಟುವುದಿಲ್ಲವೋ ಅಲ್ಲಿ ಪ್ರಾಮಾಣ್ಯಗ್ರಹಣಕ್ಕೆ ಮತ್ತೊಂದು ಸಂವಾದದ ಅಪೇಕ್ಷೆಯೇ ಇರುವುದಿಲ್ಲ. ಹೀಗಿರುವಾಗ ಅನವಸ್ಥಾ ದೋಷವನ್ನು ಹೇಗೆ ಹೇಳುವಿರಿ.

ಹೀಗೆ ಆಕ್ಷೇಪ ಮಾಡಬಾರದು ಏಕೆಂದರೆ ಪ್ರಾಮಾಣ್ಯವು ನಿಶ್ಚಯವಾಗದಿದ್ದರೆ ಪ್ರವೃತ್ತಿಯೇ ಉಂಟಾಗುವುದಿಲ್ಲ. ಪ್ರವೃತ್ತಿಗೋಸ್ಕರ ಪ್ರಾಮಾಣ್ಯದ ಜಿಜ್ಞಾಸೆಯನ್ನು ಮಾಡಲೇಬೇಕು.

**तत्वप्रकाशिका – फलसन्देहेऽपि कृष्यादौ प्रवृत्तिर्दृश्यत इति चेत् सत्यम् । सापि न निःशङ्का । यावच्छंकमेव संवादापेक्षणान्नानवस्थेति चेत् ।**

ಫಲದಲ್ಲಿ ಸಂದೇಹವಿದ್ದರೂ ಪ್ರವೃತ್ತಿಯು ಉಂಟಾಗುತ್ತದೆ. ಕೃಷಿ ಮಾಡುವಾಗ ಸಂಶಯದಿಂದಲೇ ಮೊದಲು ಪ್ರವೃತ್ತಿ ಮಾಡುವುದು ಕಂಡಿದೆ. ಆದ್ದರಿಂದ ಪ್ರವೃತ್ತಿಯಾಗಲು ಪ್ರಾಮಾಣ್ಯನಿಶ್ಚಯದ ಅವಶ್ಯಕತೆ ಇರುವುದಿಲ್ಲವಲ್ಲವೆ ?

ಹೀಗೆ ಆಕ್ಷೇಪ ಮಾಡಬಾರದು. ಕೃಷಿ ಮೊದಲಾದ ಲೌಕಿಕವ್ಯಾಪಾರಗಳಲ್ಲಿ ಸಂಶಯದಿಂದ ಪ್ರವೃತ್ತಿ ಮಾಡುವುದು ಸತ್ಯ. ಆದರೆ ಅದು ನಿಃಶಂಕಾಪ್ರವೃತ್ತಿಯೆಂದು ಕರೆಸಿಕೊಳ್ಳುವುದಿಲ್ಲ. ನಿಶ್ಶಂಕಾಪ್ರವೃತ್ತಿಗಾಗಿ ಪ್ರಾಮಾಣ್ಯದ ನಿಶ್ಚಯ ಆಗಲೇಬೇಕು. ಹಾಗಾದರೆ ಎಲ್ಲಿಯ ತನಕ ಶಂಕೆಯು ಇರುತ್ತದೋ ಅಲ್ಲಿಯ ತನಕ ಸಂವಾದದ ಅಪೇಕ್ಷೆ ಇರುತ್ತದೆ. ಶಂಕೆಯು ಪರಿಹಾರವಾದ ಕೂಡಲೇ ಸಂವಾದದ ಅಪೇಕ್ಷೆ ಇರುವುದಿಲ್ಲವಾದ್ದರಿಂದ ಅನವಸ್ಥಾದೋಷ ಹೇಗೆ ಬರುತ್ತದೆ ?

**तत्वप्रकाशिका – तत्र वक्तव्यम् । किं शङ्का सर्वत्रानुवर्तते क्वचिन्नोत्पद्यत एव वा ?**

ಇಲ್ಲಿ ಪ್ರಶ್ನಿಸುತ್ತೇವೆ - ಈ ಶಂಕೆಯು ಎಲ್ಲೆಡೆಯೂ ಸಮಾನವಾಗಿರುತ್ತದೋ, ಅಥವಾ ಕೆಲವೆಡೆ ಹುಟ್ಟುವುದೇ ಇಲ್ಲವೋ ?

**तत्वप्रकाशिका – आद्ये कथमनवस्थाऽभावः । द्वितीयो निरस्तप्रायः ।**

ಮೊದಲ ಪಕ್ಷವನ್ನು ಒಪ್ಪಿದರೆ ಎಲ್ಲೆಡೆಯು ಶಂಕೆಯ ಪರಿಹಾರಕ್ಕಾಗಿ ಸಂವಾದವನ್ನು ಅಪೇಕ್ಷೆ ಪಡಲೇಬೇಕಾದ್ದರಿಂದ ಅನವಸ್ಥಾ ತಪ್ಪಿದ್ದಲ್ಲ. ಸಂಶಯ ಹುಟ್ಟುವುದಿಲ್ಲ ಎಂಬ ಎರಡನೆಯ ಪಕ್ಷವನ್ನು ಈಗಾಗಲೇ ನಿರಾಕರಿಸಿದ್ದಾಗಿದೆ.

**तत्वप्रकाशिका – अपि च संवादकमप्रामाण्यशङ्कां निवर्तयति प्रामाण्यं ज्ञापयति वा ।**

ಪ್ರಾಮಾಣ್ಯವನ್ನು ನಿಶ್ಚಯಿಸಲು ಮತ್ತೊಂದು ಸಂವಾದಪ್ರಮಾಣವು ಬೇಕೇಬೇಕು ಎಂದು ಹೇಳುವುದಾದರೆ ಯಾವ ಕಾರಣಕ್ಕಾಗಿ ಬೇಕೆಂಬುದನ್ನು ಸ್ಪಷ್ಟಪಡಿಸಬೇಕು. ಅಪ್ರಾಮಾಣ್ಯಶಂಕೆಯನ್ನು ಪರಿಹರಿಸಲೋ ? ಅಥವಾ ಇರುವ ಪ್ರಾಮಾಣ್ಯವನ್ನು ತಿಳಿಸಲೋ ?

**तत्वप्रकाशिका – आद्ये प्रामाण्यस्य स्वतस्त्वप्राप्तिः । द्वितीये शङ्काभावेऽपि संवादापेक्षा स्यात् ।**

ಮೊದಲನೆಯ ಪಕ್ಷದಲ್ಲಿ ಸಂವಾದಕಪ್ರಮಾಣವು ಅಪ್ರಾಮಾಣ್ಯಶಂಕೆಯನ್ನಷ್ಟೇ ಪರಿಹರಿಸುತ್ತದೆಂದು ಹೇಳುತ್ತಿರುವುದರಿಂದ ಪ್ರಾಮಾಣ್ಯಸ್ವತಸ್ತ್ವವನ್ನೇ ಒಪ್ಪಿದಂತಾಯಿತು.

ಎರಡನೆಯ ಪಕ್ಷದಲ್ಲಿ ಇರುವ ಪ್ರಾಮಾಣ್ಯವನ್ನು ತಿಳಿಸಲು ಮತ್ತೊಂದು ಸಂವಾದ ಪ್ರಮಾಣವು ಬೇಕೆಂದು ಹೇಳಿದಂತಾಗುತ್ತದೆ. ಆವಾಗ ಯಾವ ಸ್ಥಳದಲ್ಲಿ ಸಂಶಯವೇ ಇರುವುದಿಲ್ಲವೋ ಅಂಥ ಸ್ಥಳದಲ್ಲಿಯೂ ಸಂವಾದವು ಬೇಕು ಎಂದು ಹೇಳಿದಂತಾಗುತ್ತದೆ.

**तत्वप्रकाशिका – संवादकमुभयत्रापि प्रवर्तत इति चेन्न ।**

ಅಪ್ರಾಮಾಣ್ಯಶಂಕೆಯ ನಿವೃತ್ತಿಗಾಗಿ ಹಾಗೂ ಇರುವ ಪ್ರಾಮಾಣ್ಯದ ಗ್ರಹಣಕ್ಕಾಗಿ ಎರಡೂ ಪಕ್ಷಗಳಲ್ಲಿಯೂ ಮತ್ತೊಂದು ಸಂವಾದಪ್ರಮಾಣವು ಬೇಕೆಂದು ಹೇಳಬೇಕು. ಹೀಗೆ ಎರಡೂ ಪಕ್ಷವನ್ನು ಒಪ್ಪುವುದು ಸರಿಯಲ್ಲ.

**तत्वप्रकाशिका – कल्पकाभावात् । बाधकवदुभयत्र व्यापारः किं न स्यादिति चेन्न ।**

ಹೀಗೆ ಕಲ್ಪಿಸಲು ಯಾವುದೇ ಪ್ರಮಾಣ ಇರುವುದಿಲ್ಲ.

ವಿಸಂವಾದಾದಿಬಾಧಕಕ್ಕೆ ಪ್ರಾಮಾಣ್ಯಶಂಕೆಯ ನಿರಾಸೆಯಲ್ಲಿ ಮತ್ತು ಅಪ್ರಾಮಾಣ್ಯಜ್ಞಾನದಲ್ಲಿ ವ್ಯಾಪಾರ ಇರುವುದು ಅನ್ವಯವ್ಯತಿರೇಕದಿಂದ ಸಿದ್ಧವಾಗಿದೆ. ಅದರಂತೆ ಸಂವಾದಪ್ರಮಾಣವೂ ಕೂಡ ಅಪ್ರಾಮಾಣ್ಯಶಂಕೆಯ ನಿವೃತ್ತಿ ಹಾಗೂ ಪ್ರಾಮಾಣ್ಯದ ನಿಶ್ಚಯ ಎರಡರಲ್ಲೂ ವ್ಯಾಪಾರವನ್ನು

ಹೊಂದಿದೆ. ಏಕೆಂದರೆ 'ತತ್‌ಸತ್ವೇ ತತ್‌ಸತ್ವಮ್ ತದಭಾವೇ ತದಭಾವಃ' ಎಂಬ ಅನ್ವಯವ್ಯತಿರೇಕವು ಇರುತ್ತದೆ ಹೀಗೆ ಹೇಳಬಹುದಲ್ಲವೆ ?

**तत्वप्रकाशिका – अप्रामाण्यशङ्काशून्यस्य प्रामाण्यज्ञाने संवादनिरपेक्षत्वात् ।**

ಈ ಶಂಕೆ ತಪ್ಪು. ಯಾವ ಸ್ಥಳದಲ್ಲಿ ಅಪ್ರಾಮಾಣ್ಯದ ಶಂಕೆಯೇ ಹುಟ್ಟುವುದಿಲ್ಲವೋ ಅಂಥ ಸ್ಥಳದಲ್ಲಿ ಪ್ರಾಮಾಣ್ಯದ ನಿಶ್ಚಯಕ್ಕಾಗಿ ಮತ್ತೊಂದು ಸಂವಾದವು ಬೇಕಾಗಿರುವುದಿಲ್ಲ. ಉದಾಹರಣೆ- ಸುಖಾದಿಜ್ಞಾನದಲ್ಲಿ ಅಪ್ರಾಮಾಣ್ಯಶಂಕೆಯು ಸ್ವಾಭಾವಿಕವಾಗಿಯೇ ಇಲ್ಲದಿರುವುದರಿಂದ ಪ್ರಾಮಾಣ್ಯದ ನಿಶ್ಚಯವು ಸ್ವತಃ ಬರುತ್ತದೆ. ಅಪ್ರಾಮಾಣ್ಯಶಂಕೆಯ ನಿವೃತ್ತಿಗೆ ಸಂವಾದವು ಕಾರಣವೇ ಆಗಿರುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಭಿಚಾರವು ಬರುತ್ತದೆ.

**तत्वप्रकाशिका – बाधकेन विना निवृत्ताप्रामाण्यशङ्कस्याप्यप्रामाण्य-बुध्यनुदयानुभवात् ।**

ಯಾವುದೇ ಸಂವಾದಪ್ರಮಾಣವಿಲ್ಲದೆ ಸುಖಾದಿಗಳ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಯವಾಗುವುದು ಕಂಡಿದೆ. ಆದ್ದರಿಂದ ವ್ಯತಿರೇಕವ್ಯಭಿಚಾರ ಹೇಗೆ ಬರುತ್ತದೋ, ಅದರಂತೆ ಬಾಧಕವಿಲ್ಲದೆ ಅಪ್ರಾಮಾಣ್ಯಜ್ಞಾನವೂ ಕೂಡ ಬರುವುದಾದರೆ ವ್ಯತಿರೇಕವ್ಯಭಿಚಾರ ಬರುತ್ತದೆ. ಎಲ್ಲಿ ಬಾಧಕಪ್ರಮಾಣ ಇರುವುದಿಲ್ಲವೋ ಅಲ್ಲಿ ಅಪ್ರಾಮಾಣ್ಯನಿಶ್ಚಯ ಬರುವುದಿಲ್ಲ, ಪ್ರಾಮಾಣ್ಯನಿಶ್ಚಯವೇ ಬರುತ್ತದೆ. ಇದು ಎಲ್ಲರ ಅನುಭವದಿಂದ ಸಿದ್ಧವಾದ ವಿಚಾರ. ಆದ್ದರಿಂದ ಬಾಧಕವು ಹೇಗೆ ಪ್ರಾಮಾಣ್ಯಸಂದೇಹದ ನಿರಾಸ ಮತ್ತು ಅಪ್ರಾಮಾಣ್ಯಜ್ಞಾನಗಳಲ್ಲಿ ವ್ಯಾಪಾರ ಹೊಂದಿದೆಯೋ ಅದರಂತೆ ಸಂವಾದಕ್ಕೂ ಕೂಡ ಉಭಯತ್ರ ವ್ಯಾಪಾರವನ್ನು ಹೇಳುತ್ತೇವೆ ಎಂಬ ಆಶಂಕೆಯು ಅತ್ಯಂತ ಅಸಾಧುವೆಂದು ಸಿದ್ಧವಾಯಿತು.

**तत्वप्रकाशिका – यदपि प्रामाण्यं परतो ज्ञायते अनभ्यासदशायां सांशयिकत्वात् अप्रामाण्यवदिति ।**

ನೈಯಾಯಿಕರು ಪರತಃಪ್ರಾಮಾಣ್ಯವನ್ನು ಅನುಮಾನದಿಂದ ಹೀಗೆ ಸಾಧಿಸುತ್ತಾರೆ -

'ಪ್ರಾಮಾಣ್ಯಂ ಪರತಃ ಜ್ಞಾಯತೇ ಅನಭ್ಯಾಸದಶಾಯಾಮ್ ಸಾಂಶಯಿಕತ್ವಾತ್ ಅಪ್ರಾಮಾಣ್ಯವತ್' ಅಪ್ರಾಮಾಣ್ಯದಲ್ಲಿ ಸಾಂಶಯಿಕತ್ವ(ಸಂಶಯವಿಶಯತ್ವ) ಎಂಬ ಹೇತುವಿದೆ. ಮತ್ತು ಬಾಧಕಪ್ರಮಾಣವೆಂಬ ಮತ್ತೊಂದರಿಂದ ತಿಳಿಯಲ್ಪಟ್ಟಿರುವುದರಿಂದ ಸಾಧ್ಯವಿದೆ. ಇದೇ ರೀತಿಯಾಗಿ ಪ್ರಾಮಾಣ್ಯ ಎಂಬ ಪಕ್ಷದಲ್ಲಿ 'ಅನಭ್ಯಾಸದಶಾಯಾಂ ಸಾಂಶಯಿಕತ್ವ' ಎಂಬ ಹೇತುವಿದೆ. ಯಾವ ವಿಷಯದಲ್ಲಿ ಹೆಚ್ಚಿನ ಅಭ್ಯಾಸವಿರುವುದಿಲ್ಲವೋ ಆ ವಿಷಯದ ಬಗ್ಗೆ ಜ್ಞಾನವು ಪ್ರಾಪ್ತವಾದಾಗ ಅದರ ಪ್ರಾಮಾಣ್ಯದಲ್ಲಿ ನಮಗೆ ಸಂದೇಹ ಬರುತ್ತದೆ. ಆದ್ದರಿಂದ ಸಂವಾದದಿಂದಲೇ ಪ್ರಾಮಾಣ್ಯವು

ತಿಳಿಯಲ್ಪಡಬೇಕೆಂದು ಸಾಧಿಸುತ್ತೇವೆ. ಹೀಗಿರುವಾಗ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುವ ಸಿದ್ಧಾಂತ ಸರಿಯಲ್ಲ. ಇಷ್ಟು ನೈಯಾಯಿಕರ ಆಕ್ಷೇಪ

**तत्वप्रकाशिका – तदप्युक्तप्रतिकूलतर्कपराहतमुकूलतर्कशून्यं च । संशयस्य च दोषादेवोपपत्तेः ।**

ಹಿಂದೆ ನಿರೂಪಣೆ ಮಾಡಿದ ಪ್ರಕಾರ ಸಂವಾದದಿಂದ ಪ್ರಾಮಾಣ್ಯವನ್ನು ನಿಶ್ಚಯ ಮಾಡುವುದಾದರೆ ಆ ಸಂವಾದಪ್ರಮಾಣದ ಪ್ರಾಮಾಣ್ಯಕ್ಕೆ ಮತ್ತೊಂದು ಸಂವಾದಪ್ರಾಮಾಣ್ಯ ಬೇಕು. ಆದ್ದರಿಂದ ಅನವಸ್ಥಾದೋಷ ತಪ್ಪಿದ್ದಲ್ಲ. ಹೀಗೆ ಪ್ರತಿಕೂಲತರ್ಕದಿಂದ ನೈಯಾಯಿಕರ ಅನುಮಾನವು ಪರಾಹತವಾಗುತ್ತದೆ. ಮತ್ತು ಅನುಮಾನದಲ್ಲಿ 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂಬ ಹೇತುವಿರಲಿ ಪರತಸ್ತ್ವವೆಂಬ ಸಾಧ್ಯವಿರುವುದು ಬೇಡ ಎಂದು ಅಪ್ರಯೋಜಕಾಶಂಕೆಯನ್ನು ಮಾಡಿದರೆ ನಿಮಗೆ ಅನುಕೂಲತರ್ಕವನ್ನು ಹೇಳಲು ಸಾಧ್ಯವಿಲ್ಲ.

**तत्वप्रकाशिका – स्वतस्त्वेनाभ्युपगतोपमानानुमानप्रामाण्येऽपि संशयदर्शनाच्च।**

ಧರ್ಮಿಯ ಜ್ಞಾನವಿದೆ ಆದರೆ ಪ್ರಾಮಾಣ್ಯವು ನಿಶ್ಚಯವಾಗಿಲ್ಲ. ಹೀಗೆ ಅನುಕೂಲತರ್ಕವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗೆ ಹೇಳಿದರೆ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುತ್ತದೆ.

'ಅನಭ್ಯಾಸದಶಾಯಾಮ್ ಸಾಂಶಯಿಕತ್ವ' ಎಂಬ ಹೇತುವಿರಲಿ ಸಾಧ್ಯವಿರುವುದು ಬೇಡ ಎಂದು ಹೇಳಿದರೆ 'ಅನಭ್ಯಾಸದಶಾಯಾಮ್ ಸಾಂಶಯಿಕತ್ವ' ಎಂಬ ಹೇತುವೂ ಕೂಡ ಇರುವುದು ಬೇಡ ಎಂದು ಅನುಕೂಲತರ್ಕವನ್ನು ಹೇಳುತ್ತೇವೆ. ಎಲ್ಲಿ ಧರ್ಮಿಯ ಜ್ಞಾನ ಬರುತ್ತದೋ ಅಲ್ಲಿ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಹೀಗೆ ಹೇಳಿದರೆ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುತ್ತದೆ. ಅದಕ್ಕಾಗಿ ಧರ್ಮಿಯ ಜ್ಞಾನ ಬಂದಿರುವ ಸ್ಥಳದಲ್ಲಿ ಪ್ರಾಮಾಣ್ಯವು ಗೃಹೀತವಾಗಿದೆ ಎಂದೇ ಹೇಳಬೇಕು. ಆವಾಗ ಎರಡು ಕೋಟಿಗಳಲ್ಲಿ ಒಂದು ನಿಶ್ಚಯವಾಗಿದೆ ಎಂದು ಒಪ್ಪಿದಂತಾಯಿತು. ಆಗ ಸಂಶಯ ಮೂಡಲು ಸಾಧ್ಯವಿಲ್ಲ. ಆದರೆ ನಮ್ಮೆಲ್ಲರ ಅನುಭವದಿಂದ ಸಂಶಯ ಬರುವುದು ಸಿದ್ಧವಾಗಿದೆ. ಆದ್ದರಿಂದ ಪ್ರಾಮಾಣ್ಯವನ್ನು ಸ್ವತಃ ಎಂದು ಹೇಳಲು ಬರುವುದಿಲ್ಲ. ಹೀಗೆ ಅನುಕೂಲತರ್ಕವನ್ನು ಹೇಳುತ್ತೇವೆ.

ಈ ಆಶಂಕೆಯು ತಪ್ಪು. ಧರ್ಮಿಜ್ಞಾನವಿದ್ದರೂ ತಾತ್ಪರ್ಯಭ್ರಮ ಮೊದಲಾದ ದೋಷದಿಂದಾಗಿ ಸಂಶಯವು ಹುಟ್ಟಬಹುದಾದ್ದರಿಂದ ಅನುಕೂಲತರ್ಕವನ್ನು ಹೇಳಲು ಸಾಧ್ಯವಿಲ್ಲ.

ಪ್ರಾಚೀನತಾರ್ಕಿಕರು ಉಪಮಿತಿ ಮತ್ತು ಅನುಮಿತಿಗಳಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿರುತ್ತಾರೆ. ಆದರೂ ಅಲ್ಲಿ ಪ್ರಾಮಾಣ್ಯಸಂಶಯವು ಬರುತ್ತದೆ. ಏಕೆಂದರೆ ಬೌದ್ಧ ಚಾರ್ವಾಕ ಮೊದಲಾದ

ದಾರ್ಶನಿಕರು ಅನುಮಾನವನ್ನು ಅಪ್ರಮಾಣವೆನ್ನುತ್ತಾರೆ. ಇದನ್ನು ಕೇಳಿದ ಮೂರನೇ ವ್ಯಕ್ತಿಗೆ ಅನುಮಾನವು ಪ್ರಮಾಣವೂ ಅಲ್ಲವೋ ? ಎಂಬ ಸಂಶಯವು ವಿಪ್ರತಿಪತ್ತಿಯಿಂದ ಹುಟ್ಟುತ್ತದೆ. ಹೀಗೆ ಸಂಶಯವು ಅನುಭವಸಿದ್ಧವಾಗಿದ್ದರೂ ಅನುಮಿತಿಪ್ರಾಮಾಣ್ಯವನ್ನು ಸ್ವತಃ ಎಂದು ಹೇಗೆ ಒಪ್ಪಿದ್ದಾರೊ, ಅದರಂತೆ ನಾವೂ ಕೂಡ ಸಹ ಧರ್ಮಿಜ್ಞಾನವಿದ್ದರೂ ಪ್ರಾಮಾಣ್ಯವಿಷಯದಲ್ಲಿ ಸಂಶಯವಿದ್ದರೂ ಕೂಡ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುತ್ತೇವೆ.

**तत्वप्रकाशिका – अनभ्यासदाशायामपि सन्देहाभावस्यापि दर्शनाचेत्यलम् ।**

ಇನ್ನು 'ಅನಭ್ಯಾಸದಶಾಯಾಮ್ ಸಾಂಶಯಿಕತ್ವಾತ್' ಎಂಬ ಹೇತುವಿನಲ್ಲಿ 'ಅನಭ್ಯಾಸದಶಾಯಾಂ' ಎಂಬ ವಿಶೇಷಣದಿಂದ 'ಅಭ್ಯಾಸವಿಲ್ಲದ ಸ್ಥಳದಲ್ಲಿ' ಎಂದು ಹೇಳಿರುತ್ತಾರೆ. ಇದಕ್ಕೆ ಭಾಗಾಸಿದ್ಧಿ ದೋಷ ಬರುತ್ತದೆ. ಏಕೆಂದರೆ ಆಗ ತಾನೇ ಹುಟ್ಟಿದ ಮಡಿಕೆಯನ್ನು ನೋಡಿ ಇದು ಘಟವೆಂದು ನಾವು ತಿಳಿಯುತ್ತೇವೆ. ಈ ಜ್ಞಾನವು ಪ್ರಮಾಣವೋ ಅಲ್ಲವೋ ? ಎಂಬ ಸಂಶಯ ನಮಗಿರುವುದಿಲ್ಲ. ಆದರೆ ಈ ಮಡಿಕೆಯನ್ನು ಹಿಂದೆ ನೋಡದ ಕಾರಣ ಅನಭ್ಯಾಸದಶಾಪನ್ನವಾಗಿದೆ. ಆದರೂ ಸಂಶಯವಿಲ್ಲದ ಕಾರಣ ಹೇತುವಿಗೆ ಭಾಗಾಸಿದ್ಧಿದೋಷ ಬರುತ್ತದೆ. ಇಷ್ಟು ಪ್ರಾಮಾಣ್ಯಸ್ವತಸ್ತ್ವದ ಸಂಕ್ಷೇಪ. ಹೆಚ್ಚಿನ ವಿಚಾರಗಳನ್ನು ಬೇರೆ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

**तत्वप्रकाशिका – वेदस्य स्वतःप्रामाण्ये सूत्रसूचितां श्रुतिं चाह – नेति ।।**

ವೇದವು ಸ್ವತಃಪ್ರಮಾಣವಾಗಿದೆ ಎಂಬ ವಿಷಯದಲ್ಲಿ 'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರಭಾಗವು ಶ್ರುತಿಯನ್ನು ಪ್ರಮಾಣವನ್ನಾಗಿ ಉಲ್ಲೇಖ ಮಾಡಿದೆ. ಅದನ್ನು ಶ್ರೀಮದಾನಂದತೀರ್ಥರು 'ನ ಚಕ್ಷುಃ ನ ಶ್ರೋತ್ರಂ' ಇತ್ಯಾದಿ ಭಾಷ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ನ ಚಕ್ಷುಃ ನ ಶ್ರೋತ್ರಮ್ ನ ತರ್ಕೋ ನ ಸ್ಮೃತಿಃ ವೇದಾಹ್ಯೇವೇನಂ ವೇದಯಂತಿ' ಎಂಬುದು ವೇದದ ಪ್ರಾಮಾಣ್ಯಸ್ವತಸ್ತ್ವದಲ್ಲಿ ಪ್ರಮಾಣವಾಗಿದೆ.

**तत्वप्रकाशिका – अत्र चक्षुरादीनां परमात्माऽप्रमापकत्वमुक्त्वा वेदस्यैव तत् प्रमापकत्वोक्तेः संवादानपेक्षतया प्रामाण्यमित्युक्तं भवति । वेदस्य नित्यत्वं कुत इत्यत आह – नित्यत्वश्चेति ।**

'ಪರಮಾತ್ಮನನ್ನು ತಿಳಿಯಲು ಚಕ್ಷುರಿಂದ್ರಿಯ ಶ್ರೋತ್ರೇಂದ್ರಿಯ ಮೊದಲಾದವುಗಳಿಗೆ ಸಾಧ್ಯವಿಲ್ಲ. ಅನುಮಾನದಿಂದಲೂ ಸಾಧ್ಯವಿಲ್ಲ. ಸ್ಮೃತಿಗಳಿಂದ ಸಾಧ್ಯವಿಲ್ಲ. ಕೇವಲ ವೇದಗಳು ಪರಮಾತ್ಮನನ್ನು ತಿಳಿಸಲು ಸಮರ್ಥವಾಗಿವೆ' ಎಂಬುದು ಶ್ರುತಿಯ ಅರ್ಥ. ಈ ಶ್ರುತಿಯಲ್ಲಿ ಕಣ್ಣು ಮೊದಲಾದ ಯಾವುದೇ ಇಂದ್ರಿಯಗಳು ಪರಮಾತ್ಮನನ್ನು ತಿಳಿಸುವುದಿಲ್ಲವೆಂದು ಹೇಳಿದ್ದರಿಂದ ಪರಮಾತ್ಮನನ್ನು ತಿಳಿಸುವ ವೇದಗಳಿಗೆ ಸಂವಾದಪ್ರಮಾಣವೇ ಇಲ್ಲವೆಂದು ಹೇಳಿದಂತಾಯಿತು. ಆದರೂ ವೇದಗಳು

ಪರಮಾತ್ಮನ ವಿಷಯದಲ್ಲಿ ಪ್ರಮಾಣವೆಂದು ಹೇಳಿದ್ದರಿಂದ ಮತ್ತೊಂದು ಪ್ರಮಾಣದ ಅಪೇಕ್ಷೆ ಇಲ್ಲದೆ ವೇದಗಳು ಸ್ವತಃ ಪ್ರಮಾಣವಾಗಿವೆ ಎಂದು ಪ್ರಾಮಾಣ್ಯಸ್ವತಸ್ತ್ವವನ್ನು ಪ್ರತಿಪಾದನೆ ಮಾಡಿದಂತಾಯಿತು. (ವೇದವು ಅಪೌರುಷೇಯವೆಂಬುದು ಹೇಗೆ ಸಿದ್ಧವಾಯಿತು? ಎಂಬ ಪ್ರಶ್ನೆಗೆ 'ನಿತ್ಯತ್ವಂ ಚ ಶಬ್ದಾದೇವ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ವೇದಗಳ ಅಪೌರುಷೇಯತ್ವವೂ ಕೂಡ ವೇದದಿಂದಲೇ ಸಿದ್ಧವಾಗಿದೆ ಎಂಬುದು ಭಾಷ್ಯಕಾರರ ಅಭಿಪ್ರಾಯ)

**तत्वप्रकाशिका – अनेन तथात्वमित्युभयतः सम्बध्यते इत्युक्तं भवति । तस्मै सर्वतः प्रकाशायातिसमर्थाय विष्णवे नित्यया वेदवाचा साध्वीं स्तुतिं प्रेरय कुर्वित्यर्थः ।**

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಸೂತ್ರದಲ್ಲಿರುವ 'ತಥಾತ್ವಮ್' ಎಂಬ ಪದಕ್ಕೆ ಎರಡು ಕಡೆ ಸಂಬಂಧವನ್ನು ಹೇಳಿದಂತಾಯಿತು. ಒಮ್ಮೆ ಸಂಬಂಧವನ್ನು ಹೊಂದಿರುವ 'ತಥಾತ್ವಮ್' ಎಂಬ ಪದಕ್ಕೆ 'ವೈಲಕ್ಷಣ್ಯ' ಎಂದರ್ಥ. ಮತ್ತೊಂದು ಬಾರಿ ಸಂಬಂಧವನ್ನು ಹೊಂದುವ 'ತಥಾತ್ವಮ್' ಎಂಬುದಕ್ಕೆ ನಿತ್ಯತ್ವ ಎಂದರ್ಥ.

ಭಾಷ್ಯದಲ್ಲಿ ಉದಾಹರಿಸಿದ 'ತಸ್ಮೈ ನೂನಮ್ ಅಭಿದ್ಯವೇ' ಎಂಬ ಶ್ರುತಿಯ ಅರ್ಥ ಹೀಗಿದೆ - 'ವಿರೂಪ' ಎಂಬುದಾಗಿ ತನ್ನನ್ನೇ ತಾನು ಸಂಬೋಧಿಸಿ ಎಲ್ಲಾ ರೀತಿಯಿಂದಲೂ ಪ್ರಕಾಶಮಾನನಾದ ಅತ್ಯಂತ ಸಮರ್ಥನಾದ ವಿಷ್ಣುವನ್ನು ಕುರಿತು ನಿತ್ಯವಾದ ವೇದಮಾತುಗಳಿಂದ ಒಳ್ಳೆಯ ಸ್ತೋತ್ರವನ್ನು ಮಾಡು. ಹೀಗೆ ವಿರೂಪ ಎಂಬ ಋಷಿಯು ಹೇಳಿರುತ್ತಾರೆ.

**तत्वप्रकाशिका – विरूपेति स्वात्मानं प्रति सम्बोधनम् । बहुकालीनत्वमात्रेण नित्यत्वोपचारः किं न स्यादित्यत आह – अनादीति ।।**

ಈ ಶ್ರುತಿಯಲ್ಲಿ ನಿತ್ಯವೆಂಬ ಪದದಿಂದ ವೇದಗಳಿಗೆ ಅಪೌರುಷೇಯತ್ವವನ್ನು ಹೇಳಲಾಗಿದೆ. ಬಹುಕಾಲದಿಂದ ಇರುವುದರಿಂದಲೂ ನಿತ್ಯವೆಂದು ಔಪಚಾರಿಕವಾಗಿ ಕರೆಯಲಾಗಿದೆ ಎಂದು ಏಕೆ ವ್ಯಾಖ್ಯಾನ ಮಾಡಬಾರದು ? ಎಂಬ ಪ್ರಶ್ನೆಗೆ 'ಅನಾದಿನಿಧನಾ ನಿತ್ಯಾ ಇತಿ ಸ್ಮೃತೇಶ್ಚ' ಎಂಬುದಾಗಿ ಭಾಷ್ಯದಲ್ಲಿ ಉತ್ತರ ನೀಡಿದ್ದಾರೆ.

**तत्वप्रकाशिका – अनादिनिधनतया नित्या न तु बहुकालीनतामात्रेण नित्यत्वोपचार इत्यर्थः ।**

ನಿತ್ಯಪದಕ್ಕೆ ಉತ್ಪತ್ತಿನಾಶವಿಲ್ಲದ್ದು ಎಂದರ್ಥ. ಬಹುಕಾಲ ಇರುವುದೆಂಬ ಔಪಚಾರಿಕಾರ್ಥವನ್ನು ನಿತ್ಯಪದಕ್ಕೆ ತಿಳಿಯಬಾರದು.

**तत्वप्रकाशिका – न च वाच्यं वेदप्रामाण्ये विव(दन्तं)दमानं प्रति कथं तत्प्रामाण्योपपादनायोपन्यस्तयोर्नित्यत्वस्वतःप्रामाण्ययोः साक्षितया श्रुत्युपादानं युक्तमिति । परेणापि फलव्यभिचारेणाप्रामाण्ये वेदस्यापि तत्प्रसङ्ग इत्यापादनमात्रस्य क्रियमाणत्वात् । युक्तेश्चोपन्यस्तत्वात् ।। ४ ।।**

ವೇದಪ್ರಾಮಾಣ್ಯವಿಷಯದಲ್ಲಿ ವಿವಾದ ಮಾಡುವವನನ್ನು ಕುರಿತು ನಿತ್ಯತ್ವವಿಷಯದಲ್ಲಿ ಮತ್ತು ಸ್ವತಃ ಪ್ರಾಮಾಣ್ಯವಿಷಯದಲ್ಲಿ ವೇದವನ್ನು ಉದಾಹರಿಸುವುದು ತಪ್ಪು. ಏಕೆಂದರೆ ಪ್ರಾಮಾಣ್ಯವು ಸಿದ್ಧವಾದ ಮೇಲೆ ಅಂಥ ವೇದದಿಂದ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗುತ್ತದೆ. ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾದ ಮೇಲೆ ವೇದವು ಪ್ರಮಾಣವೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆಂದು ಆಕ್ಷೇಪ ಮಾಡಬಾರದು.

ವೇದಪ್ರಾಮಾಣ್ಯವನ್ನು ಒಪ್ಪಿ ಪಾಶುಪತಾದಿಸ್ಮೃತಿಗಳು ಪ್ರಮಾಣವಲ್ಲವೆಂದು ಹೇಳಿದರೆ ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಫಲವು ದೊರೆಯದ ಕಾರಣ ಪಾಶುಪತಾದಿ ಸ್ಮೃತಿಗಳಂತೆ ವೇದವೂ ಸಹ ಅಪ್ರಮಾಣವಾಗಬೇಕಾದೀತು ಎಂದು ಈ ಅಧಿಕರಣದ ಪೂರ್ವಪಕ್ಷಿಯು ಆಪಾದನೆ ಮಾಡುತ್ತಿದ್ದಾನೆ. ಆದ್ದರಿಂದ ವೇದಪ್ರಾಮಾಣ್ಯವಿಷಯದಲ್ಲಿ ಪೂರ್ವಪಕ್ಷಿಗೆ ವಿವಾದವಿರುವುದಿಲ್ಲ. ಅಂಥವನನ್ನು ಕುರಿತು ಅಪೌರುಷೇಯತ್ವವನ್ನು ಹಾಗೂ ಸ್ವತಃಪ್ರಾಮಾಣ್ಯವನ್ನು ನಾವು ವೇದದಿಂದ ಸಮರ್ಥಿಸುವುದು ತಪ್ಪಾಗುವುದಿಲ್ಲ. ವೇದದ ನಿತ್ಯತ್ವ ಹಾಗೂ ಸ್ವತಃಪ್ರಾಮಾಣ್ಯ-ಗಳನ್ನೂ ಯುಕ್ತಿಯಿಂದ ಈಗಾಗಲೇ ಸಮರ್ಥಿಸಿದ್ದಾಗಿದೆ. ಯುಕ್ತಿಸಿದ್ಧವಾದ ವಿಷಯದಲ್ಲಿ ವೇದಪ್ರಮಾಣವನ್ನು ಹೇಳಿದರೆ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ.

**सूत्रम् – दृश्यते तु ।।२।।**

ವೇದದಲ್ಲಿ ಹೇಳಿದ ಕರ್ಮಾನುಷ್ಠಾನದಿಂದ ಯೋಗ್ಯಾಧಿಕಾರಿಗಳಿಗೆ ಫಲವು ಖಂಡಿತವಾಗಿಯೂ ಲಭಿಸುತ್ತದೆ. ಆದ್ದರಿಂದ ವೇದವು ಅಪ್ರಮಾಣವೆಂದು ಆಶಂಕಿಸಬಾರದು.

## ಸೂತ್ರದೀಪಿಕಾ

**सूत्रदीपिका – दृश्यते तु ।। तुशब्दो विशेषार्थे । यतः तत्फलयोग्याधिकारि-विशेषाणां श्रुत्याद्युक्तं फलं दृश्यते उपलभ्यते । अतो नाप्रामाण्यमित्यर्थः ।।२।।**

'ತು' ಎಂಬ ಪದವು ವಿಶೇಷಾರ್ಥದಲ್ಲಿದೆ. ವೇದೋಕ್ತಫಲಕ್ಕೆ ಯೋಗ್ಯವಾದ ಅಧಿಕಾರಿವಿಶೇಷ ವರ್ಗಕ್ಕೆ ಶ್ರುತಿಯಲ್ಲಿ ಹೇಳಿದ ಫಲವು ದೃಶ್ಯತೇ = ಉಪಲಬ್ಧವಾಗುತ್ತಿದೆ. ಆದ್ದರಿಂದಲೂ ಅಪ್ರಾಮಾಣ್ಯವನ್ನು ಹೇಳಬಾರದು.

॥ ಇಲ್ಲಿಗೆ ಸೂತ್ರ ಹಾಗೂ ಸೂತ್ರದೀಪಿಕೆಯಲ್ಲಿ ನ ವಿಲಕ್ಷಣತ್ವಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**।। दृश्यते तु ।।२।।**

**भाष्यम् – अधिकारिणां फलम् ।**

**भविष्यत्पुराणे च –**

**'ऋग्यजुस्सामाथर्वाख्या मूलरामायणं तथा ।**
**भारतं पञ्चरात्रं च वेदा इत्येव शब्दिताः ।।**
**पुराणानि च यानीह वैष्णवानि विदो विदुः ।**
**स्वतः प्रामाण्यमेतेषां नात्र किञ्चिद्विचार्यते ।।**

ಅನುವಾದ - ವೇದೋಕ್ತವಾದ ಕರ್ಮಗಳನ್ನು ಆಚರಣೆ ಮಾಡಿದರೆ ಫಲವು ದೊರೆಯುವುದಿಲ್ಲವೆಂಬ ಆಕ್ಷೇಪವು ತಪ್ಪು. ಯಾರು ನಿಜವಾದ ಅಧಿಕಾರಿಗಳಾಗಿರುತ್ತಾರೋ ಅವರುವೇದೋಕ್ತಕರ್ಮಗಳನ್ನುಅನುಷ್ಠಾನಮಾಡಿದರೆಉತ್ತಮವಾದಫಲವನ್ನುಹೊಂದುತ್ತಾರೆ. ಭವಿಷ್ಯತ್‌ಪುರಾಣದ ವಚನದಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಹೀಗೆ ಸಮರ್ಥಿಸಲಾಗಿದೆ - ಋಗ್

ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಮೂಲರಾಮಾಯಣ, ಮಹಾಭಾರತ, ಪಂಚರಾತ್ರ ಇವುಗಳೆಲ್ಲವೂ ವೇದವೆಂದೇ ಕರೆಸಿಕೊಳ್ಳುತ್ತವೆ. ಜ್ಞಾನಿಗಳು ಯಾವುದನ್ನು ವೈಷ್ಣವ ಪುರಾಣಗಳೆಂದು ಕರೆಯುತ್ತಾರೋ ಅವುಗಳು ಸ್ವತಃಪ್ರಮಾಣವಾಗಿವೆ. ಈ ವಿಷಯದಲ್ಲಿ ಸ್ವಲ್ಪವೂ ವಿಚಾರ ಮಾಡಬೇಕಾಗಿಲ್ಲ.

ಪ್ರತಿಪದಾರ್ಥ -- ಯಾರು ವೇದಗಳಿಗೆ ಸ್ವತಃಪ್ರಾಮಾಣ್ಯವನ್ನು ಒಪ್ಪುತ್ತಾರೊ, ಅವರು ಕೂಡ ದೋಷವನ್ನು ಕಂಡಾಗ ಅಪ್ರಾಮಾಣ್ಯವನ್ನು ಒಪ್ಪಬೇಕು. ವೇದದಲ್ಲಿ ಹೇಳಿದ ಕರ್ಮಗಳನ್ನು ಆಚರಣೆ ಮಾಡಿದರೆ ಫಲವು ದೊರೆಯುತ್ತಿಲ್ಲ. ಆದ್ದರಿಂದ ಅಪ್ರಾಮಾಣ್ಯವನ್ನು ಹೇಳಬೇಕಲ್ಲವೆ? ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. ಅಧಿಕಾರಿಣಾಂ = ಕರ್ಮವೈಗುಣ್ಯ ಮೊದಲಾದ ದೋಷಗಳಿಂದ ರಹಿತರಾದ ಯೋಗ್ಯರಾದ ಅಧಿಕಾರಿಗಳಿಗೆ, ಫಲಂ = ವೇದದಲ್ಲಿ ಹೇಳಿದ ಸಂಪೂರ್ಣ ಫಲವು ದೊರೆಯುವುದು ಕಂಡಿದೆ. ಭವಿಷ್ಯತ್ಪುರಾಣೇ ಚ = ಭವಿಷ್ಯತ್ ಪುರಾಣದಲ್ಲಿ ವೇದಪ್ರಾಮಾಣ್ಯವನ್ನು ಹೀಗೆ ಸಮರ್ಥಿಸಿದ್ದಾರೆ - ಋಗ್ಯಜುಸ್ಸಾಮಾಥರ್ವಾಖ್ಯಾ = ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದಗಳು, ತಥಾ = ಹಾಗೆಯೇ, ಮೂಲರಾಮಾಯಣಂ = ಮೂಲರಾಮಾಯಣವು, ಚ = ಮತ್ತು, ಭಾರತಂ = ಮಹಾಭಾರತವು, ಪಂಚರಾತ್ರಂ = ಪಂಚರಾತ್ರಾಗಮವು, ವೇದಾ ಇತ್ಯೇವ = ವೇದಗಳು ಎಂದೇ, ಶಬ್ದಿತಾಃ = ಕರೆಸಿಕೊಳ್ಳುತ್ತವೆ. ಇಹ = ಈ ಪುರಾಣಗಳ ಮಧ್ಯದಲ್ಲಿ, ವಿದುಃ = ಜ್ಞಾನಿಗಳು, ಯಾನಿ = ಯಾವುಗಳನ್ನು, ವೈಷ್ಣವಾನಿ ಪುರಾಣಾನಿ = ವಿಷ್ಣುವಿನ ಉತ್ಕರ್ಷವನ್ನು ಹೇಳುವ ಪುರಾಣಗಳೆಂದು, ವಿದೋ ವಿದುಃ = ತಿಳಿಯುತ್ತಾರೋ, ತಾನಿ ಚ = ಅವುಗಳೆಲ್ಲವೂ, ಸ್ವತಃ = ಮತ್ತೊಂದನ್ನು ಅಪೇಕ್ಷಿಸದೆ, ಪ್ರಾಮಾಣ್ಯಮ್ = ಪ್ರಾಮಾಣ್ಯವನ್ನು ಹೊಂದುತ್ತವೆ. ಏತೇಷಾಂ = ಈ ಪುರಾಣಗಳ ಪ್ರಾಮಾಣ್ಯಜ್ಞಾನದಲ್ಲಿ, ಕಿಂಚದ್ = ಸಂವಾದಿಗಳನ್ನು, ಅತ್ರ ಏತೇಷಾಂ = ಈ ಪುರಾಣಾದಿಗಳ ಪ್ರಮಾಣ್ಯವಿಷಯದಲ್ಲಿ, ಕಿಂಚಿತ್ = ಸಂವಾದಿವಿಚಾರಗಳನ್ನು, ನ ವಿಚಾರ್ಯತೇ = ಹುಡುಕಬೇಕಾಗಿಲ್ಲ.

**ಭಾಷ್ಯಮ್ —**

**यत्तेषूक्तं न दृश्येत पूर्वकर्मात्र कारणम् ।**
**नाप्रामाण्यं भवेदेषां दृश्यते ह्यधिकारतः ।।**

ಅನುವಾದ - ವೇದ ಮತ್ತು ವೇದಾನುಸಾರಿಯಾದ ಪುರಾಣಗಳಲ್ಲಿ ಯಾವ ಕರ್ಮಗಳನ್ನು ವಿಧಾನ ಮಾಡಿದ್ದಾರೋ ಅದನ್ನು ಅನುಷ್ಠಾನ ಮಾಡಿದರೆ ಫಲವು ಕೆಲವೊಮ್ಮೆ ದೊರೆಯುತ್ತಿಲ್ಲ.

ಇಂಥ ಸಂದರ್ಭಗಳಲ್ಲಿ ಕರ್ತೃವಿನ ವೈಗುಣ್ಯವನ್ನು ಅಥವಾ ಪ್ರಾಚೀನಕರ್ಮಗಳ ಪ್ರತಿಬಂಧಕತ್ವವನ್ನು ಊಹಿಸಬೇಕು. ಹೊರತು ಅಪ್ರಾಮಾಣ್ಯವನ್ನು ಊಹಿಸಬಾರದು.

ಪ್ರತಿಪದಾರ್ಥ -- ಆ ವಿಷಯದಲ್ಲಿ ಕರ್ತೃವಿನ ಪ್ರಾಚೀನಕರ್ಮವು ಅಥವಾ ಕರ್ಮದ ವೈಗುಣ್ಯದೋಷವು, ಕಾರಣಮ್ = ಕಾರಣವಾಗಿದೆ. ಏಷಾಂ = ಈ ಪುರಾಣ ಮತ್ತು ವೇದಗಳಿಗೆ, ಅಪ್ರಾಮಣ್ಯಮ್ = ಅಪ್ರಾಮಾಣ್ಯವನ್ನು, ನ ಭವೇತ್ = ಎಂದೂ ಕೂಡ ಒಪ್ಪಬಾರದು, ಅಧಿಕಾರತಃ = ಯೋಗ್ಯರಾದ ಅಧಿಕಾರಿಗಳ ಯೋಗ್ಯತಾನುಸಾರವಾಗಿ, ಏಷಾಂ = ಇವುಗಳಿಗೆ, ದೃಶ್ಯತೇ = ಫಲವು ದೊರೆಯುವುದು ಕಾಣಸುತ್ತದೆ.

**भाष्यम् —**

**इतः प्रामाण्यमन्येषां न स्वतस्तु कथञ्चन ।**
**अदृश्योक्तौ ततस्तेषामप्रामाण्यं न संशयः ।। इति ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये नविलक्षणत्वाधिकरणम् ।। २ ।।**

ಅನುವಾದ - ಪಾಶುಪತಾದಿಸ್ಮೃತಿಗಳಿಗೆ ಸ್ವತಃಪ್ರಾಮಾಣ್ಯವನ್ನು ಎಂದೂ ಕೂಡ ಒಪ್ಪಲು ಸಾಧ್ಯವಿಲ್ಲ. ಪಾಶುಪತಸ್ಮೃತಿಗಳಲ್ಲಿ ವಿಧಿಸಲ್ಪಟ್ಟ ಕರ್ಮವನ್ನು ಆಚರಣೆ ಮಾಡಿದಾಗ ಫಲವು ದೊರೆಯದಿದ್ದರೆ ಅವುಗಳಿಗೆ ಅಪ್ರಾಮಾಣ್ಯವನ್ನು ಒಪ್ಪಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.

ಪ್ರತಿಪದಾರ್ಥ-- ಅನ್ಯೇಷಾಂ ತು = ಪಾಶುಪತಾದಿಶಾಸ್ತ್ರಗಳಾದರೂ, ಕಥಂಚನ = ಯಾವುದೇ ಕಾರಣದಿಂದಲೂ, ಇತಃ = ಫಲದರ್ಶದಿಂದಲೇ ಪ್ರಾಮಾಣ್ಯವನ್ನು ಬುದ್ಧಿದೋಷವನ್ನು ನಿರಾಸ ಮಾಡುವ ಮೂಲಕ ಒಪ್ಪಬೇಕು. ಹೊರತು ಸ್ವತಃ = ಪ್ರಾಮಾಣ್ಯವನ್ನು ಉತ್ಪತ್ತಿಯ ಮೂಲಕ, ಅದೃಶ್ಯೋಕ್ತೌ = ಅತೀಂದ್ರಿಯವಿಷದಲ್ಲಿ, ತೇಷಾಂ = ಶ್ರುತಿವಿರುದ್ಧವಾದ ಪಾಶುಪತಾದಿಶಾಸ್ತ್ರಗಳಿಗೆ, ಅಪ್ರಾಮಾಣ್ಯಂ = ಅಪ್ರಾಮಾಣ್ಯವನ್ನು ಹೇಳಲೇಬೇಕು, ನ ಸಂಶಯಃ = ಈ ವಿಷಯದಲ್ಲಿ ಯಾವುದೇ ಸಂಶಯವಿಲ್ಲ.

ಇಲ್ಲಿಗೆ ನವಿಲಕ್ಷಣತ್ವಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – यदुदितं नित्यत्वेन निर्दोषस्य वैदस्य नाप्रामाण्यमिति न तद्युक्तम् । तदुक्तफलस्यादर्शनात् ।**

ಹಿಂದೆ ವೇದವು ನಿತ್ಯವಾದ್ದರಿಂದ ನಿರ್ದುಷ್ಟವಾಗಿದೆ. ಆದ್ದರಿಂದ ಅಪ್ರಮಾಣವಾಗುವುದಿಲ್ಲವೆಂದು ಸಮರ್ಥಿಸಲಾಯಿತು. ಆದರೆ ಇದು ಸರಿಯಲ್ಲ. ಏಕೆಂದರೆ ವೇದದಲ್ಲಿ ಹೇಳಲ್ಪಟ್ಟ ಕರ್ಮವನ್ನು ಆಚರಣೆ ಮಾಡಿದರೂ ಕೂಡ ಫಲವು ಕಾಣಸುತ್ತಿಲ್ಲ. ಆದ್ದರಿಂದ ವೇದವು ಅಪ್ರಮಾಣ.

**तत्वप्रकाशिका – यावता तदेवाप्रामाण्यं न च प्रामाण्यस्य स्वतस्त्वेन संवादानपेक्षितेत्युक्तमिति वाच्यम् । स्वतःप्रामाण्यवादिनाऽपि दोषदर्शनेऽप्रामाण्यस्यावश्यं ग्राह्यत्वात् ।**

ಅಪ್ರಾಮಾಣ್ಯವೆಂದರೆ 'ಕರ್ಮವನ್ನು ಆಚರಿಸಿದರೂ ಫಲವು ಕಾಣಸದಿರುವಿಕೆ' ಎಂದರ್ಥ. ಪ್ರಾಮಾಣ್ಯವನ್ನು ಸ್ವತಃ ಎಂದು ಸಮರ್ಥನೆ ಮಾಡಿರುವುದರಿಂದ ಫಲಸಂವಾದದ ಅಪೇಕ್ಷೆ ಇರುವುದಿಲ್ಲ. ಈ ವಿಷಯವನ್ನು ಈಗಾಗಲೇ ಸಮರ್ಥನೆ ಮಾಡಿದ್ದೇವಲ್ಲವೆ ? ಎಂದು ಪ್ರಶ್ನಿಸಬಾರದು. ಪ್ರಾಮಾಣ್ಯಸ್ವತಸ್ತ್ವವಾದಿಯೂ ಕೂಡ ದೋಷ ಕಂಡಾಗ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಅವಶ್ಯವಾಗಿ ಒಪ್ಪಿಕೊಳ್ಳಲೇಬೇಕು.

**तत्वप्रकाशिका – अयमेव हि दोषो यदुक्तस्यादर्शनमित्याशङ्कां परिहरत्सूत्रमुपन्यस्य तच्छेषं पूरयति – दृश्यते त्विति ॥**

ಫಲ ಕಾಣದಿರುವುವಿಕೆ ಎಂಬ ದೋಷವಿರುವುದರಿಂದ ವೇದವು ಅಪ್ರಮಾಣವಾಗುತ್ತದೆ ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಮತ್ತು ಸೂತ್ರದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕಾದ ಪದಗಳನ್ನು ಭಾಷ್ಯದಲ್ಲಿ ಉಲ್ಲೇಖಿಸುತ್ತಿದ್ದಾರೆ 'ದೃಶ್ಯತೇ ತು' ಇತ್ಯಾದಿಯಾಗಿ.

**तत्वप्रकाशिका – न फलादर्शनेन श्रुत्यादेरप्रामाण्यं वक्तव्यम् । फलादर्शनस्य कर्तृरयोग्यतयोपपत्तेः । तत्कुतः कल्प्यते । योग्यानां फलदर्शनात् ।**

ಫಲ ಕಾಣಸುತ್ತಿಲ್ಲವೆಂಬ ಕಾರಣದಿಂದ ಶ್ರುತ್ಯಾದಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ ಫಲವು ಕಾಣಸದಿರಲು ಬೇರೆ ಕಾರಣ ಇರಬಹುದು.

ಪರಿಪೂರ್ಣಚಂದ್ರಿಕಾ

ಫಲ ಕಾಣಸದಿರಲು ವೇದವು ಅಪ್ರಮಾಣವಾಗಬೇಕಾಗಿಲ್ಲ. ಕರ್ತೃವಿನ ದೋಷದಿಂದ ಅಥವಾ ಫಲವನ್ನು ಪಡೆಯುವ ಯೋಗ್ಯತೆ ಕರ್ತೃವಿನಲ್ಲಿ ಇಲ್ಲದಿರುವುದರಿಂದ ಫಲವು ಕಾಣಸದಿರಬಹುದು. ಹೀಗೇಕೆ ಕಲ್ಪನೆ ಮಾಡಬೇಕು ? ಎಂದರೆ ಯೋಗ್ಯರಾದ ವ್ಯಕ್ತಿಗಳು ಅನುಷ್ಠಾನ ಮಾಡುವುದರಿಂದ ಫಲವು ಕಾಣಸುತ್ತಿದೆ. ಆದ್ದರಿಂದ ಫಲ ಕಾಣಸುತ್ತಿಲ್ಲವೆಂಬ ಕಾರಣದಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ.

**ತत्वप्रकाशिका – न च शङ्कनीयं पाशुपतादिस्मृत्युक्तफलव्यभिचारस्यापि कर्तृरयोग्यतानिबन्धनतोपपत्तेर्नाप्रामाण्यं योग्यानां फलदर्शनादिति ।**

ಪ್ರಶ್ನೆ - ಪಾಶುಪತಾದಿ ಸ್ಮೃತಿಗಳ ವಿಷಯದಲ್ಲಿಯೂ ಇದು ಸಮಾನ. ಪಾಶುಪತಾದಿಸ್ಮೃತಿಗಳಲ್ಲಿ ಯಾವ ಕರ್ಮಗಳನ್ನು ಅನುಷ್ಠಾನ ಮಾಡಬೇಕೆಂದು ಹೇಳಿರುತ್ತಾರೋ ಅಂಥ ಫಲವು ದೊರೆಯದಿದ್ದರೆ ಕರ್ತೃವಿಗೆ ಯೋಗ್ಯತೆ ಇಲ್ಲವೆಂದೇ ಹೇಳುತ್ತೇವೆ. ಆದ್ದರಿಂದ ಫಲವ್ಯಭಿಚಾರದಿಂದ ಪಾಶುಪತಾದಿ-ಸ್ಮೃತಿಗಳಿಗೂ ಕೂಡ ಅಪ್ರಾಮಾಣ್ಯವನ್ನು ಸಾಧಿಸಲಾಗದು.

ಉತ್ತರ - ಹೀಗೆ ಕಲ್ಪನೆ ಮಾಡಲು ಯಾವುದೇ ಆಧಾರವಿಲ್ಲ.

**तत्वप्रकाशिका – कल्पकाभावात् । वेदस्य तु निर्दोषतया स्वतःप्रामाण्ये सिद्धेऽवश्यं व्यभिचारस्य गत्यन्तरं कल्पनीयम् । पाशुपतादीनां फलदर्शनमन्तरेण प्रामाण्यसाधकाभावात् ।**

ವೇದವು ನಿರ್ದುಷ್ಟವಾದ್ದರಿಂದ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗಿದೆ. ಹೀಗಿರುವಾಗ ಫಲವ್ಯಭಿಚಾರವು ಕಂಡರೆ ಅದಕ್ಕೆ ಕರ್ತೃವೈಗುಣ್ಯಾದಿ ಗತ್ಯಂತರವನ್ನು ಕಲ್ಪನೆ ಮಾಡಬೇಕು. ಆದರೆ ಪಾಶುಪತಾದಿಸ್ಮೃತಿಗಳಿಗೆ ಫಲದರ್ಶನದಿಂದಷ್ಟೆ ಪ್ರಾಮಾಣ್ಯವನ್ನು ಸಾಧಿಸಲು ಸಾಧ್ಯ. ಫಲವ್ಯಭಿಚಾರದಿಂದ ಅಪ್ರಾಮಾಣ್ಯವನ್ನು ಒಪ್ಪುವುದು ಅನಿವಾರ್ಯವಾಗುತ್ತದೆ.

**तत्वप्रकाशिका – तस्यापि स्वतःप्रामाण्यमिति चेत् । सत्यम् । निर्दोषत्वानिर्णये फलविसंवाददर्शनेनाप्रामाण्यप्राप्तेरेवोक्तत्वादिति भावः ।**

ಪ್ರಶ್ನೆ- ವೇದದಂತೆ ಪಾಶುಪತಾದಿಶಾಸ್ತ್ರಗಳಿಗೂ ಕೂಡ ಸ್ವತಃಪ್ರಾಮಾಣ್ಯವನ್ನು ಒಪ್ಪಬಹುದಲ್ಲವೆ?

ಉತ್ತರ - ಇದು ಸರಿಯಲ್ಲ. ಏಕೆಂದರೆ ಪಾಶುಪತಾದಿಸ್ಮೃತಿಗಳ ನಿರ್ದೋಷತ್ವವು ಇನ್ನು ಕೂಡ ನಿರ್ಧಾರವಾಗಿಲ್ಲ. ಅಷ್ಟೇ ಅಲ್ಲದೆ ಫಲಸಂವಾದವೇ ಕಾಣಸುತ್ತಿದೆ. ಆದ್ದರಿಂದ ಅಪ್ರಾಮಾಣ್ಯವೇ ಸಿದ್ಧವಾಗುತ್ತದೆ. ಹೊರತು ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಈ ವಿಷಯವನ್ನು ಹಿಂದೆಯೇ ನಾವು ಹೇಳಿರುತ್ತೇವೆ.

**तत्वप्रकाशिका – तुशब्दः कर्तृविशेषद्योतकः । अधिकारित्वं नाम तत्फलयोग्यत्वं कर्मवैगुण्यप್ರतिबन्धादिशून्यत्वं वा।**

ಸೂತ್ರದಲ್ಲಿರುವ 'ತು'ಶಬ್ದವು ಕರ್ತೃವಿಶೇಷವನ್ನು ತಿಳಿಸುತ್ತಿದೆ. ಎಲ್ಲಾ ಬಗೆಯ ಕರ್ತೃಗಳಿಗೂ ವೇದೋಕ್ತಕರ್ಮದಲ್ಲಿ ಅಧಿಕಾರವಿಲ್ಲ. ವಿಶೇಷ ಅಧಿಕಾರಿಗಳಿಗೆ ಮಾತ್ರ ಅಂಥ ಕರ್ಮಾಚರಣೆಯ ಯೋಗ್ಯತೆ ಇರುತ್ತದೆಂದು ಇದರ ಅಭಿಪ್ರಾಯ.

**तत्वप्रकाशिका – अधिकरणार्थे स्मृतिं चाह – भविष्यत्पुरणे चेति ।।**

'ಅಧಿಕಾರ' ಎಂದರೆ 'ತತ್‌ಫಲಯೋಗ್ಯತ್ವಮ್' 'ಕರ್ಮಫಲವನ್ನು ಪಡೆಯುವ ಅರ್ಹತೆ' ಎಂದರ್ಥ. ಅಥವಾ 'ಕರ್ಮವೈಗುಣ್ಯಪ್ರತಿಬಂಧಶೂನ್ಯತ್ವ' 'ಕರ್ಮದಲ್ಲಿ ನ್ಯೂನತೆ ಮೊದಲಾದ ಪ್ರತಿಬಂಧಕಗಳು ಇಲ್ಲದಿರುವಿಕೆ' ಎಂದರ್ಥ. ಸಂಪೂರ್ಣ ಅಧಿಕರಣದ ಅಭಿಪ್ರಾಯವನ್ನು ಭವಿಷ್ಯತ್-ಪುರಾಣದ ವಚನವು ಸ್ಪಷ್ಟಪಡಿಸುತ್ತಿದೆಂಬುದನ್ನು 'ಭವಿಷ್ಯತ್‌ಪುರಾಣೇ ಚ' ಇತ್ಯಾದಿ ಭಾಷ್ಯದಲ್ಲಿ ಹೇಳಿರುತ್ತಾರೆ.

**तत्वप्रकाशिका – स्वतःफलसंवादादिरहितनिर्दोषतयैव । पूर्वकर्मान्योपलक्षणम्।**

ಈ ಭವಿಷತ್‌ಪುರಾಣದ ವಚನದಲ್ಲಿ 'ಸ್ವತಃ' ಎಂಬ ಪದವಿದೆ. ಇದಕ್ಕೆ 'ಫಲಸಂವಾದದ ಅಪೇಕ್ಷೆ ಇಲ್ಲದೆ ನಿರ್ದುಷ್ಟವಾದ್ದರಿಂದ' ಎಂದರ್ಥ. ಅಥವಾ 'ಫಲವು ಕಾಣಸದಿರಲು ಹಿಂದಿನ ಕರ್ಮವು ಕಾರಣವಾಗಿದೆ' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

**तत्वप्रकाशिका – इतः फलदर्शनतः । अदृश्योक्तौ अनुपलभ्यमानवचने । अतो वेदादिप्रामाण्यस्य युक्तिविरुद्धत्वाभावाद्युक्तं तेन हरेजगत्काणत्वमिति सिद्धम् ।।९।।**

**।। इति श्रीमज्जयतीर्थभिक्षुविरचितायां तत्वप्रकाशिकायाम् न विलक्षणत्वाधिकरणम् ।।**

'ಇತಃ' ಎಂಬ ಪದಕ್ಕೆ ಫಲದರ್ಶನದಿಂದ ಎಂದರ್ಥ. 'ಅದೃಶ್ಯೋಕ್ತೌ' ಎಂದರೆ ಯಾವ ಫಲವನ್ನು ಹೇಳಿರುತ್ತಾರೋ ಅದು ಕಾಣಸದಿದ್ದಾಗ ಎಂದರ್ಥ. ಹೀಗೆ ವೇದಪ್ರಾಮಣ್ಯವು ಯುಕ್ತಿವಿರುದ್ಧವಲ್ಲ ಎಂದು ಈ ಸೂತ್ರದಿಂದ ಸಿದ್ಧವಾಗುತ್ತದೆ. ಇಂಥ ನಿರ್ದುಷ್ಟವಾದ ವೇದದಿಂದ ಶ್ರೀಹರಿಯಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಸಿದ್ಧವಾಗುತ್ತದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ನವಿಲಕ್ಷಣತ್ವಾಧಿಕರಣವು ಮುಗಿಯಿತು

# ನವಿಲಕ್ಷಣತ್ವಾಧಿಕರಣ
# (೨-೧-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆ ಮತ್ತು
ಸಾರದೊಂದಿಗೆ

**ಸರಳ ಅನುವಾದ**

ಗಮನಿಸಿ : ಗ್ರಂಥಕಾರರಾದ ಶ್ರೀಮದ್ ವ್ಯಾಸತೀರ್ಥಗುರುಸಾರ್ವಭೌಮರು ಗ್ರಂಥಗೌರವಭಯದಿಂದ ತಮ್ಮ ವ್ಯಾಖ್ಯಾನವನ್ನು ಈ ಅಧಿಕರಣದಿಂದ ಸಂಕ್ಷೇಪ ಮಾಡಿದ್ದಾರೆ. ಹಾಗಾಗಿ ಪರಿಪೂರ್ಣಚಂದ್ರಿಕೆಯ ಈ ಹತ್ತನೆಯ ಸಂಪುಟದಲ್ಲಿ ಈ ಅಧಿಕರಣದಿಂದ ಪ್ರಾರಂಭಿಸಿ ಮುಂದಿನ ಅಧಿಕರಣಗಳಲ್ಲಿ ಶಂಕರಭಾಷ್ಯ, ರಾಮಾನುಜಭಾಷ್ಯ ಹಾಗೂ ಭಾಟ್ಟಸಂಗ್ರಹಗಳ ಅಡಿಟಿಪ್ಪಣಿಯನ್ನು ನೀಡಲಾಗುತ್ತಿಲ್ಲ. ಹಾಗೂ ಭಾಗ -3 ಎಂಬ ಶೀರ್ಷಿಕೆಯಲ್ಲಿ ಇರುವ ಯಾವುದೇ ಗ್ರಂಥಗಳ ಅನುವಾದವನ್ನೂ ಕೂಡ ಮಾಡುತ್ತಿಲ್ಲ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## न विलक्षणत्वाधिकरणम्

### ಸಂಗತಿ, ಸಂಶಯ, ಪೂರ್ವಪಕ್ಷಗಳು

**न विलक्षणत्वादस्य तथात्वं च शब्दात् ॥**

**स्मृत्यविरोध उक्तः । युक्त्यविरोध उच्यते । अत्र पूर्वसिद्धान्तन्यायेन पूर्वपक्षप्रवृत्तेरनन्तरसङ्गतिः ।**

'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಸೂತ್ರದಿಂದ ಅಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಲ್ಲಿ ಸ್ಮೃತಿಯ ವಿರೋಧವನ್ನು ಪರಿಹರಿಸಲಾಯಿತು. ಈ ಅಧಿಕರಣದಲ್ಲಿ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು ಅವಲಂಬಿಸಿ ಪೂರ್ವಪಕ್ಷವು ಹೊರಟಿರುವುದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು.

**अत्र श्रुतिसमन्वयेनोक्तं विष्णोः कारणत्वादि न युक्तमुत युक्तमिति चिन्ता ।**

ಈ ಅಧಿಕರಣದಲ್ಲಿ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಯಾವ ಜಗತ್ಕಾರಣತ್ವವನ್ನು ಹಿಂದಿನ ಅಧ್ಯಾಯದಲ್ಲಿ ಸಮರ್ಥಿಸಲಾಯಿತೋ, ಅದು ಅಯುಕ್ತವೋ, ಅಥವಾ ಯುಕ್ತವೋ? ಎಂಬುದು ಪ್ರಧಾನ ಸಂಶಯ.

**तदर्थं वेदोऽप्रमाणमुत नेति ।**

ಅದರ ಪರಿಹಾರಕ್ಕಾಗಿ ವೇದವು ಅಪ್ರಮಾಣವೋ, ಅಥವಾ ಪ್ರಮಾಣವೋ ? ಎಂಬ ಎರಡನೆಯ ಸಂಶಯವು ಪರಿಹಾರವಾಗಬೇಕು.

**तदर्थं वेदैकदेशभूतकारीर्यादिवाक्यं युक्तिविरुद्धमुत नेति ।।**

ಅದಕ್ಕಾಗಿ ವೇದದ ಏಕದೇಶವಾದ ಕಾರೀರ್ಯಾದಿ ವಾಕ್ಯಗಳು ಯುಕ್ತಿವಿರುದ್ಧವೋ ಅಥವಾ ಅಲ್ಲವೋ ? ಎಂಬ ಮೂರನೆಯ ಸಂಶಯವು ಪರಿಹಾರವಾಗಬೇಕು.

**तदर्थं कारीर्याद्यनुष्ठानेऽपि वृष्ट्यदृष्टिः किं व्यभिचारात्किं वा कर्त्रादिवैगुण्यादिनेति।**

ಅದಕ್ಕಾಗಿ ಕಾರೀರ್ಯಾದಿ ಯಾಗಗಳನ್ನು ಅನುಷ್ಠಾನ ಮಾಡಿದರೂ ಕೂಡ ಮಳೆಯಾಗುವುದು ಕಾಣಿಸುತ್ತಿಲ್ಲ. ಇದಕ್ಕೆ ಕಾರಣ ವ್ಯಭಿಚಾರದೋಷವೋ, ಅಥವಾ ಕರ್ತೃವಿನ ಕ್ರಿಯಾಲೋಪವು ಕಾರಣವೋ? ಎಂಬ ನಾಲ್ಕನೆಯ ಸಂಶಯವು ಪರಿಹಾರವಾಗಬೇಕು.

**तदर्थं वेदप्रामाण्यं किं संवादादुत स्वत इति ।**

ಅದಕ್ಕಾಗಿ ವೇದಪ್ರಾಮಾಣ್ಯವು ಸಂವಾದವಾಕ್ಯಗಳಿಂದ ಸಿದ್ಧವಾಗುತ್ತದೋ, ಅಥವಾ ಸ್ವಾಭಾವಿಕವಾಗಿ ಸಿದ್ಧವಾಗುತ್ತದೋ ? ಎಂಬ ಕೊನೆಯ ಸಂಶಯವು ಪರಿಹಾರವಾಗಬೇಕು.

**पूर्वत्र श्रुतेरपौरुषेयत्वप्रामाण्ये स्वीकृत्य दुर्बला सा प्रबलस्मृत्यनुसारेण नेयेति पूर्वः पक्षः ।**

ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕೂ, ಈ ಅಧಿಕರಣದ ಪೂರ್ವಪಕ್ಷಕ್ಕೂ ಇಷ್ಟು ವ್ಯತ್ಯಾಸವಿದೆ- ಹಿಂದಿನ ಅಧಿಕರಣದಲ್ಲಿ ಅಪೌರುಷೇಯತ್ವ ಹಾಗೂ ಪ್ರಾಮಾಣ್ಯಗಳನ್ನು ಶ್ರುತಿಗೆ ಒಪ್ಪಿ, ದುರ್ಬಲವಾದ ಶ್ರುತಿಯನ್ನು ಪ್ರಬಲವಾದಸ್ಮೃತಿಗೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಬೇಕೆಂದು ಪೂರ್ವಪಕ್ಷ ಮಾಡಲಾಗಿತ್ತು.

**अत्र त्वपौरुषेयत्वेऽपि शैवादिस्मृतिवद्विसंवादेनाप्रामाण्यमिति वाऽपौरुषेयत्वमेव नेति वेति पूर्वपक्ष इति भेदः ।**

ಆದರೆ ಈ ಅಧಿಕರಣದಲ್ಲಿ ಶ್ರುತಿಯು ಅಪೌರುಷೇಯವಾಗಿದ್ದರೂ ಕೂಡ ಶೈವಾದಿಸ್ಮೃತಿಗಳಂತೆ ಸಂವಾದಪ್ರಮಾಣವಿಲ್ಲದ ಕಾರಣ ಅಪ್ರಮಾಣವಾಗಿದೆ. ಅಥವಾ ಶ್ರುತಿಯು ಅಪೌರುಷೇಯವೇ ಆಗಿರುವುದಿಲ್ಲ. ಹೀಗೆ ಎರಡು ಬಗೆಯಲ್ಲಿ ಪೂರ್ವಪಕ್ಷ ಮಾಡಲಾಗುತ್ತಿದೆ. ಈ ವ್ಯತ್ಯಾಸವಿರುವುದರಿಂದ ಈ ಅಧಿಕರಣವು ಆರಂಭಣೀಯವಾಗುತ್ತದೆ.

ನ ವಿಲಕ್ಷಣತ್ವಾಧಿಕರಣ (೨-೧-೨)

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

।। **न विलक्षणत्वात्** ।। अपौनुरुक्त्याय सुधोक्तं प्रमेयभेदमाह – **स्मृतीति** ।।

'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಸೂತ್ರದಿಂದ ನ ವಿಲಕ್ಷಣತ್ವಾಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಸ್ಮೃತ್ಯಧಿಕರಣದಿಂದ ಈ ನ ವಿಲಕ್ಷಣತ್ವಾಧಿಕರಣಕ್ಕೆ ಪುನರುಕ್ತಿದೋಷವು ಬರಬಾರದೆಂಬ ಉದ್ದೇಶದಿಂದ ಸುಧೆಯಲ್ಲಿ ಹೇಳಿದ ಪ್ರಮೇಯಭೇದವನ್ನು ಗ್ರಂಥಕಾರರು 'ಸ್ಮೃತ್ಯವಿರೋಧಃ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः – युक्तीति** ।। वेदोऽप्रमाणं फलव्यभिचारित्वादिति युक्तिविरोधाभाव उच्यते ।।

ಈ ಅಧಿಕರಣದಲ್ಲಿ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. 'ವೇದಃ ಅಪ್ರಮಾಣಂ ಫಲವ್ಯಭಿಚಾರಿತ್ವಾತ್' ವೇದದಲ್ಲಿ ಹೇಳಿದ ಫಲವು ಕೆಲವೊಮ್ಮೆ ದೊರೆಯುತ್ತಿಲ್ಲ. ಆದ್ದರಿಂದ ಅಪ್ರಮಾಣವಾಗಿದೆ. ಹೀಗೆ ಯುಕ್ತಿಯಿಂದ ವೇದದ ಅಪ್ರಾಮಾಣ್ಯಶಂಕೆಯು ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ನ ವಿಲಕ್ಷಣತ್ವಾಧಿಕರಣವು ಹೊರಟಿದೆ. ಹಿಂದಿನ ಅಧಿಕರಣದಲ್ಲಿ ಶ್ರುತಿಯ ವಿರೋಧವನ್ನು ಪರಿಹರಿಸಲಾಗಿದೆ. ಈ ಅಧಿಕರಣದಲ್ಲಿ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿರುವುದರಿಂದ ಪುನರುಕ್ತಿ ಬರುವುದಿಲ್ಲವೆಂದು ತಿಳಿಯಬೇಕು.

**प्रकाशः – पूर्वसिद्धान्तेति** ।। यथा फलव्यभिचारेण स्मृतीनामप्रामाण्यं तथैव श्रुतीनामिति प्रवृत्तेरापवादिकी **सङ्गतिरित्यर्थः** ।।

ಗ್ರಂಥದಲ್ಲಿ 'ಪೂರ್ವಸಿದ್ಧಾಂತನ್ಯಾಯೇನ' ಎಂಬ ವಾಕ್ಯದಿಂದ ಆನಂತರ್ಯಸಂಗತಿಯನ್ನು ಹೇಳಿದ್ದಾರೆ. ಅದು ಹೀಗೆ - ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು ಅವಲಂಬಿಸಿ, ಈ ಅಧಿಕರಣದ ಪೂರ್ವಪಕ್ಷವು ಪ್ರವೃತ್ತವಾಗುತ್ತಿದೆ. ಹೇಗೆಂದರೆ ಸ್ಮೃತಿಗಳು ಫಲವ್ಯಭಿಚಾರಿಯಾಗಿರುವುದರಿಂದ ಅಪ್ರಮಾಣವಾಗುತ್ತವೆ ಎಂದು ಹಿಂದೆ ಸಾಧಿಸಲಾಯಿತು. ಅದೇ ಕಾರಣದಿಂದಲೇ ಶ್ರುತಿಗಳೂ ಕೂಡ ಅಪ್ರಮಾಣವಾಗಬಹುದಲ್ಲವೇ?

ಎಂಬ ಪೂರ್ವಪಕ್ಷವು ಪ್ರವೃತ್ತವಾಗುತ್ತದೆ. ಅದರ ನಿರಾಸಕ್ಕಾಗಿ ಈ ಅಧಿಕರಣ ಹೊರಟಿರುವುದರಿಂದ ಆಪವಾದಿಕೀ ಸಂಗತಿಯನ್ನು ತಿಳಿಯಬೇಕು.

**प्रकाशः – वेदैकदेशेति** ।। तथा च तद्दृष्टान्तेन कृत्स्नवेदाप्रामाण्यं तत्सामान्यादितरेषु तथात्वमिति न्यायादिति भावः ।

ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ ಏಕದೇಶವಾದ ವೇದದ ದೃಷ್ಟಾಂತದಿಂದ ಸಕಲ ವೇದಕ್ಕೂ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. 'ತತ್ ಸಾಮಾನ್ಯಾತ್ ಇತರೇಷು ತಥಾತ್ವಮ್' ಎಂಬ ನ್ಯಾಯದಂತೆ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದರೆ ಅದೇ ವೇದತ್ವ ಎಂಬ ಹೇತುವಿರುವುದರಿಂದ ಉಳಿದ ಏಕದೇಶಕ್ಕೂ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂದು ತಿಳಿಯಬೇಕು.

**प्रकाशः** – नन्वेकदेशे फलविसंवादेऽपि कथं सर्वत्राप्रामाण्यानुमानम् । तत्प्रयोजकविसंवादस्य तत्राभावादिति चेन्न ।

ಪ್ರಶ್ನೆ - ವೇದದ ಏಕದೇಶವು ಫಲವಿಸಂವಾದವಾಗಿರುತ್ತದೆ. ಆದಕಾರಣ ಅದು ಅಪ್ರಮಾಣವಾಗುತ್ತದೆ. ಅಂದ ಮಾತ್ರಕ್ಕೆ ಉಳಿದೆಲ್ಲಾ ವೇದವು ಅಪ್ರಮಾಣವಾಗುತ್ತದೆಂದು ಅನುಮಾನ ಮಾಡುವುದು ತಪ್ಪಲ್ಲವೇ? ಏಕೆಂದರೆ ಅಪ್ರಾಮಾಣ್ಯಕ್ಕೆ ಪ್ರಯೋಜಕವಾದ ವಿಸಂವಾದವು ಎಲ್ಲೆಡೆ ಇರುವುದಿಲ್ಲವಷ್ಟೇ.

**प्रकाशः** – प्रामाण्यनिर्णयस्य संवादैकनिबन्धनत्वोपगमेन क्वचिद्विसंवादेनाप्रामाण्येऽन्यत्रापि प्रामाण्यनिश्चयहेतुसंवादाभावाद्विसंवाद्यैकदेशसाधारण्यानुमानाप्रतिहतेरिति भावः ।।

ಪ್ರಾಮಾಣ್ಯಸ್ವತಸ್ತ್ವವನ್ನು ಪೂರ್ವಪಕ್ಷಿಯು ಒಪ್ಪುವುದಿಲ್ಲ. ಪ್ರಾಮಾಣ್ಯವು ಸಂವಾದೈಕನಿಬಂಧನ ಎನ್ನುತ್ತಾನೆ. ಯಾವಾಗ ಸಂವಾದ ಸಿಗುವುದಿಲ್ಲವೋ, ಆವಾಗ ಪ್ರಮಾಣವೇ ಆಗುವುದಿಲ್ಲ. ಪ್ರಕೃತ ಕಾರೀರ್ಯಾಗದಲಿ ಸಂವಾದವಿಲ್ಲದೇ ವಿಸಂವಾದವೇ ಇರುತ್ತದೆ. ಆದ್ದರಿಂದ ಈ ವಾಕ್ಯದ ದೃಷ್ಟಾಂತದಿಂದ ಉಳಿದ ವೇದಭಾಗಕ್ಕೂ ಅಪ್ರಾಮಾಣ್ಯವನ್ನು ಅನುಮಾನ ಮಾಡಬಹುದು. ಇಲ್ಲಿ ಎರಡು ಬಗೆಯ ಅನುಮಾನಗಳನ್ನು ತಿಳಿಯಬೇಕು. ಮೊದಲು ಕಾರೀರ್ಯಾದಿ ಯಾಗ ಪ್ರತಿಪಾದಕಂ ವಾಕ್ಯಂ ಅಪ್ರಮಾಣಂ, ವಿಸಂವಾದಾತ್, ಎಂಬ ಅನುಮಾನದಿಂದ ವಿಸಂವಾದ ಎಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಸಾಧಿಸ ಬೇಕು. ಅನಂತರ 'ಯತೋ ವಾ ಇತ್ಯಾದಿ ವಾಕ್ಯಂ ಅಪ್ರಮಾಣಮ್ ವೇದತ್ವಾತ್ ಕಾರೀರ್ಯಾದಿ ವಾಕ್ಯವತ್' ಎಂಬುದಾಗಿ ವೇದತ್ವ ಅನುಮಾನದಿಂದ ಉಳಿದ ವೇದಭಾಗಕ್ಕೆ ಅಪ್ರಾಮಾಣ್ಯವನ್ನು ಸಾಧನೆ ಮಾಡಬೇಕು. ಇಷ್ಟು ಪೂರ್ವಪಕ್ಷಿಯ ಅಭಿಪ್ರಾಯ.

**प्रकाशः – युक्तीति** ।। फलानुपलम्भादित्यर्थः ।। **संवादादिति** ।। ज्ञायत इति शेषः । स्पष्टः फलफलिभावः ।

ನ ವಿಲಕ್ಷಣತ್ವಾಧಿಕರಣ (೨-೧-೨)

ಮೂಲದಲ್ಲಿ 'ಯುಕ್ತಿವಿರುದ್ಧಂ' ಎಂದಿದ್ದಾರೆ. 'ಫಲಾನುಪಲಂಭಾತ್' ಎಂಬ ಯುಕ್ತಿವಿರುದ್ಧವಾಗಿದೆ ಎಂದು ಇದರ ಅರ್ಥ. 'ಸಂವಾದಾತ್' ಎಂಬಲ್ಲಿ 'ಜ್ಞಾಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ವೇದಪ್ರಾಮಾಣ್ಯವು ಸಂವಾದದಿಂದ ತಿಳಿಯುತ್ತದೋ, ಅಥವಾ ಸ್ವಾಭಾವಿಕವಾಗಿ ತಿಳಿಯುತ್ತದೋ ? ಎಂದು ಸಂಶಯ ಬರುತ್ತದೆ. ಒಂದು ವೇಳೆ ವೇದಪ್ರಾಮಾಣ್ಯವು ಸಂವಾದೈಕನಿಬಂಧನವಾದರೆ ಕಾರೀರ್ಯಾದ್ಯನುಷ್ಠಾನಗಳಿಂದ ಫಲ ಉಂಟಾಗುವುದು ಕಾಣಿಸುತ್ತಿಲ್ಲ. ಹೀಗೆ ವೇದದ ಏಕದೇಶವಾದ ಕಾರೀರ್ಯಾದಿವಾಕ್ಯಗಳು ಯುಕ್ತಿವಿರುದ್ಧವೆಂದು ಸಿದ್ಧವಾಗುವುದರಿಂದ ವೇದವು ಅಪ್ರಮಾಣವಾಗುತ್ತದೆ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಫಲ.

ಒಂದು ವೇಳೆ ವೇದಪ್ರಾಮಾಣ್ಯವು ಸಹಜವಾಗಿ ಸಿದ್ಧವಾಗುವುದಾದರೆ, ಕಾರೀರ್ಯಾದ್ಯನುಷ್ಠಾನ ಮಾಡಿದಾಗ ವೃಷ್ಟ್ಯಾದಿಗಳ ಅದೃಷ್ಟವು ಕರ್ತೃವೈಗುಣ್ಯನಿಮಿತ್ತಕವೆಂದು ಸಿದ್ಧವಾಗುತ್ತದೆ. ಆದ್ದರಿಂದ ವೇದದ ಏಕದೇಶರೂಪವಾದ ಕಾರೀರ್ಯಾದಿವಾಕ್ಯಗಳು ಯುಕ್ತಿವಿರುದ್ಧವಲ್ಲವೆಂದು ಸಿದ್ಧವಾಗುವುದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಲಾಗದು. ಆವಾಗ ಪ್ರಥಮಾಧ್ಯಾಯದಲ್ಲಿ ಸಮನ್ವಯ ಮಾಡಿದ ವಿಷ್ಣುವಿನ ಜಗತ್ ಕಾರಣತ್ವವು ಯುಕ್ತವಾಗುತ್ತದೆ. ಇಷ್ಟು ಸಿದ್ಧಾಂತದ ಫಲ. ಈ ಫಲಫಲಿಭಾವವು ಅತ್ಯಂತ ಸ್ಪಷ್ಟವಾಗಿ ತಿಳಿಯುತ್ತದೆ.

**ಪ್ರಕಾಶಃ** – टीकायामेव पूर्वपक्षस्य स्पष्टमुपपादितत्वात् स्वयं पूर्वपूर्वपक्षेणास्य फलभेदमाह – **पूर्वत्रेति** ।।

ಗ್ರಂಥಕಾರರು ಈ ಅಧಿಕರಣದ ಪೂರ್ವಪಕ್ಷವನ್ನು ಪ್ರತ್ಯೇಕವಾಗಿ ಉಪಪಾದನೆ ಮಾಡಿರುವುದಿಲ್ಲ. ಏಕೆಂದರೆ ಟೀಕೆಯಲ್ಲಿಯೇ ಸ್ಪಷ್ಟವಾಗಿ ವಿವರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದ ಪೂರ್ವಪಕ್ಷದಿಂದ ಈ ಅಧಿಕರಣದ ಪೂರ್ವಪಕ್ಷದಲ್ಲಿರುವ ಫಲಭೇದವನ್ನಷ್ಟೇ 'ಪೂರ್ವತ್ರ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಪ್ರಕಾಶಃ** – इदं च सांख्यादिपूर्वपक्ष्येकदेश्यभिप्रायेण । विसंवादेनेत्युपलक्षणम् । आप्तोक्तत्वरूपप्रामाण्यकारणगुणाभावेनेत्यपि ध्येयम् ।

ವೇದಕ್ಕೆ ಅಪೌರುಷೇಯತ್ವ ಮತ್ತು ಪ್ರಾಮಾಣ್ಯವನ್ನು ಒಪ್ಪಿ, ಸ್ಮೃತಿಯನ್ನೇ ಪ್ರಬಲವೆಂದು ಯಾವ ಸಾಂಖ್ಯರು ಹೇಳುತ್ತಾರೋ, ಆ ಪೂರ್ವಪಕ್ಷಿ ಏಕದೇಶಿಗಳ ಪ್ರಕಾರ ಫಲವನ್ನು ಹೇಳಿದ್ದಾರೆಂದು ತಿಳಿಯಬೇಕು. ಹೊರತು, ಬೌದ್ಧಾದಿಗಳ ಪ್ರಕಾರ ತಿಳಿಯಬಾರದು. 'ವಿಸಂವಾದೇನ' ಎಂದು ಗ್ರಂಥದಲ್ಲಿ ಹೇಳಿರುವುದು ಕೇವಲ ಉಪಲಕ್ಷಣ. ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಲು ವಿಸಂವಾದ ಎಂಬುದಷ್ಟೇ ಕಾರಣವಲ್ಲ. ಆಪ್ತೋಕ್ತತ್ವ ಎಂಬ ಪ್ರಾಮಾಣ್ಯಕ್ಕೆ ಕಾರಣೀಭೂತವಾದ ಗುಣದ ಇಲ್ಲದಿರುವಿಕೆಯೂ ಕೂಡ ಕಾರಣವಾಗಿದೆ. ಆದ್ದರಿಂದ 'ವಿಸಂವಾದೇನ' ಎಂಬುದನ್ನು ಉಪಲಕ್ಷಣ ಎಂದು ಭಾವಿಸಬೇಕು.

**प्रकाशः** – ''विलक्षणत्वात्'' इति सौत्रांशव्यावर्त्यमुक्त्वा ''तथात्वं च शब्दात्'' इत्यंशव्यावर्त्यमाह – **अपौरुषेयत्वमेव नेतीति ।।** विसंवादेनाप्रामाण्ये प्राप्ते तत्कारणतया भ्रान्त्यादिमूलकत्वस्यावश्यं वाच्यत्वादिति भावः ।

'ವಿಲಕ್ಷಣತ್ವಾತ್' ಎಂಬ ಸೂತ್ರಭಾಗದಿಂದ ವ್ಯಾವರ್ತ್ಯವಾಗುವ ಆಕ್ಷೇಪವನ್ನು ತೋರಿಸಿ, 'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರಭಾಗದಿಂದ ವ್ಯಾವರ್ತ್ಯವಾಗುವ ಆಕ್ಷೇಪವನ್ನು 'ಅಪೌರುಷೇಯತ್ವಮೇವ ನ' ಎಂಬುದರಿಂದ ತೋರಿಸುತ್ತಿದ್ದಾರೆ. ಯಾವಾಗ ವಿಸಂವಾದದಿಂದ ವೇದಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೋ, ಆವಾಗ ವೇದಗಳೆಲ್ಲವೂ ಸಾಂಖ್ಯಾದಿ ಸಮಯ ಮೂಲಕವಾಗಿದೆಯೆಂಬುದನ್ನು ಅವಶ್ಯವಾಗಿ ಒಪ್ಪಬೇಕು ಎಂದು ಅಭಿಪ್ರಾಯ.




ಹಿಂದಿನ ಸ್ಮೃತ್ಯಧಿಕರಣದಲ್ಲಿ ಎಲ್ಲಾ ಬಗೆಯ ಸ್ಮೃತಿಗಳ ವಿರೋಧವನ್ನು ಪರಿಹರಿಸಿದರು. ಈಗ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಫಲವ್ಯಭಿಚಾರವಿರುವುದರಿಂದ ಸ್ಮೃತಿಗಳೆಲ್ಲವೂ ಅಪ್ರಮಾಣವಾಗುತ್ತವೆ ಎಂಬುದನ್ನು ಸಿದ್ಧಾಂತ ಮಾಡಲಾಯಿತು. ಅದೇ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಶ್ರುತಿಗಳೂ ಕೂಡ ಫಲವ್ಯಭಿಚರಿತವಾದ್ದರಿಂದ ಅಪ್ರಮಾಣವಾಗಬೇಕಲ್ಲವೇ? ಎಂಬ ಆಕ್ಷೇಪ ಬರುತ್ತದೆ. ಅದರ ಪರಿಹಾರಕ್ಕಾಗಿ ಈ ಅಧಿಕರಣ ಹೊರಡುತ್ತಿದೆ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಈ ಅಧಿಕರಣದ ಪೂರ್ವಪಕ್ಷ ಹೊರಡುತ್ತಿರುವುದರಿಂದ ಅಪವಾದಿಕೀ ಸಂಗತಿಯನ್ನು ತಿಳಿಯಬೇಕು.

ಮೂಲದಲ್ಲಿ 'ಯುಕ್ತಿವಿರುದ್ಧಂ' ಎಂದಿದ್ದಾರೆ. 'ಫಲಾನುಪಲಂಭ' ಎಂಬ ಯುಕ್ತಿವಿರುದ್ಧವಾಗಿದೆ ಎಂದು ಇದರ ಅರ್ಥ. 'ಸಂವಾದಾತ್' ಎಂಬಲ್ಲಿ 'ಜ್ಞಾಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ವೇದಪ್ರಾಮಾಣ್ಯವು ಸಂವಾದದಿಂದ ತಿಳಿಯುತ್ತದೋ, ಅಥವಾ ಸ್ವಾಭಾವಿಕವಾಗಿ ತಿಳಿಯುತ್ತದೋ ಎಂದು ಸಂಶಯ. ಒಂದು ವೇಳೆ ವೇದಪ್ರಾಮಾಣ್ಯವು ಸಂವಾದೈಕನಿಬಂಧನವಾದರೆ ಕಾರೀರ್ಯಾದ್ಯನುಷ್ಠಾನಗಳಿಂದ ವೃಷ್ಟ್ಯಾದಿಗಳ ಕಾಣದಿರುವಿಕೆಯು ವ್ಯಭಿಚರಿತವಾಗಿದೆ ಎಂದು ಸಿದ್ಧವಾಗುತ್ತದೆ. ವೇದದ ಏಕದೇಶವಾದ ಕಾರೀರ್ಯಾದಿ ವಾಕ್ಯಗಳು ಯುಕ್ತಿವಿರುದ್ಧವೆಂದು ಸಿದ್ಧವಾಗುವುದರಿಂದ ವೇದವು ಅಪ್ರಮಾಣವಾಗುತ್ತದೆ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಫಲ.

ಒಂದು ವೇಳೆ ವೇದಪ್ರಾಮಾಣ್ಯವು ಸಹಜವಾಗಿ ಸಿದ್ಧವಾಗುವುದಾದರೆ, ಕಾರೀರ್ಯಾದ್ಯನುಷ್ಠಾನ ಮಾಡಿದಾಗ ವೃಷ್ಟ್ಯಾದಿಗಳ ಅದೃಷ್ಟವು ಕರ್ತ್ರಾದಿವೈಗುಣ್ಯನಿಮಿತ್ತಕವೆಂದು ಸಿದ್ಧವಾಗುತ್ತದೆ. ಆದ್ದರಿಂದ ವೇದದ ಏಕದೇಶರೂಪವಾದ ಕಾರೀರ್ಯಾದಿವಾಕ್ಯಗಳು ಯುಕ್ತಿವಿರುದ್ಧವಲ್ಲವೆಂದು ಸಿದ್ಧವಾಗುವುದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು

ಹೇಳಲಾಗದು. ಆವಾಗ ಪ್ರಥಮಾಧ್ಯಾಯದಲ್ಲಿ ಸಮನ್ವಯ ಮಾಡಿದ ವಿಷ್ಣುವಿನ ಜಗತ್‌ಕಾರಣತ್ವವು ಯುಕ್ತವಾಗುತ್ತದೆ. ಇಷ್ಟು ಸಿದ್ಧಾಂತದ ಫಲ.

ಶ್ರುತಿಗಳಿಗೆ ಅಪೌರುಷೇಯತ್ವವನ್ನು ಮತ್ತು ಪ್ರಾಮಾಣ್ಯವನ್ನು ಒಪ್ಪುವುದಾದರೂ, ದುರ್ಬಲವಾಗಿವೆ. ಇವುಗಳನ್ನು ಪ್ರಬಲವಾದ ಸ್ಮೃತಿವಾಕ್ಯಗಳು ಪರಿಹರಿಸುತ್ತವೆ ಎಂದು ಹಿಂದಿನ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದರು. ಆದರೆ ಈ ಅಧಿಕರಣದಲ್ಲಿ ವೇದವು ಅಪೌರುಷೇಯವಾಗಿದ್ದರೂ ಶೈವಾದಿಸ್ಮೃತಿಗಳಂತೆ ವಿಸಂವಾದಿಯಾಗಿರುವುದರಿಂದ ಅಪ್ರಮಾಣವಾಗುತ್ತದೆ. ಅಥವಾ ಅಪೌರುಷೇಯವೇ ಆಗಿರುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಮಾಡುತ್ತಿದ್ದಾರೆ. ಹೀಗೆ ಪೂರ್ವಪಕ್ಷದಲ್ಲಿ ವೈಲಕ್ಷಣ್ಯವಿರುವುದರಿಂದ ಈ ಅಧಿಕರಣವು ಪ್ರತ್ಯೇಕವಾಗಿ ಹೊರಡಲೇ ಬೇಕು.

### ವೇದಕ್ಕೆ ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥಿಸುವ ಮೂಲಕ ಸಿದ್ಧಾಂತ ಸ್ಥಾಪನೆ

## तात्पर्यचन्द्रिका

**सिद्धान्तमाह – सिद्धान्तयदित्यादिना ॥ अयं भावः – न तावदाद्योऽपौरुषेयत्वपक्षो युक्तः ।**

ಟೀಕೆಯಲ್ಲಿ 'ಸಿದ್ಧಾಂತಯತ್' ಇತ್ಯಾದಿ ವಾಕ್ಯದಿಂದ ಸಿದ್ಧಾಂತವನ್ನು ಸ್ಥಾಪನೆ ಮಾಡುತ್ತಿದ್ದಾರೆ. ಸಿದ್ಧಾಂತದ ಅಭಿಪ್ರಾಯ ಹೀಗಿದೆ - ವೇದಗಳು ಅಪೌರುಷೇಯವಾಗಿದ್ದರೂ ಶೈವಾದಿಸ್ಮೃತಿಗಳಂತೆ ವಿಸಂವಾದಿಯಾಗಿರುವುದರಿಂದ ಅಪ್ರಮಾಣವಾಗುತ್ತವೆಂಬ ಮೊದಲನೆಯ ಪೂರ್ವಪಕ್ಷವು ಯುಕ್ತವಲ್ಲ. ಏಕೆಂದರೆ

**गुणाभावेऽपि वेदस्य प्रामाण्यं साक्षिवत्स्वतः ।**
**अपवादकदोषस्य राहित्यादेव हि स्थितम् ॥१॥**

ಸಾಕ್ಷಿಯು ಯಾವುದೇ ದೋಷವಿಲ್ಲವೆಂಬ ಕಾರಣದಿಂದ ಗುಣವಿಲ್ಲದಿದ್ದರೂ ಸ್ವತಃ ಪ್ರಮಾಣವಾಗುತ್ತದೆ. ಅದರಂತೆ ವೇದದಲ್ಲಿಯೂ ಯಾವುದೇ ಅಪವಾದಕವಾದ ದೋಷವಿಲ್ಲದಿರುವುದರಿಂದ ಆಪ್ತೋಕ್ತತ್ವ ಮೊದಲಾದ ಗುಣಗಳಿಲ್ಲದಿದ್ದರೂ ಸ್ವತಃ ಪ್ರಮಾಣವಾಗುತ್ತದೆಂಬುದು ಸಿದ್ಧವಾಯಿತು.

**प्रामाण्यस्योत्पत्तौ स्वतस्त्वस्य देवताधिकरणे ज्ञप्तौ स्वतस्त्वस्य चेह भाष्यादौ समर्थितत्वेन श्रुतेः स्वतः प्राप्ते गुणानपेक्षे प्रामाण्येऽपवादकस्य दोषस्याभावेन**

**साक्षिप्रत्यक्षस्येव प्रतिष्ठिते सत्यप्रामाण्यानुमितेर्बाधः । तदुक्तं न्याय विवरणे ''साक्षिप्रत्यक्षसाम्यमेव'' इति ।**

ಪ್ರಾಮಾಣ್ಯದಲ್ಲಿ ಉತ್ಪತ್ತೌ ಸ್ವತಸ್ತ್ವವನ್ನು ದೇವತಾಧಿಕರಣದಲ್ಲಿ ಉಪಪಾದನೆ ಮಾಡಿದ್ದಾರೆ. ಜ್ಞಪ್ತೌ ಸ್ವತಸ್ತ್ವವನ್ನು ಈ ಅಧಿಕರಣದ ಭಾಷ್ಯ, ಟೀಕಾದಿಗಳಲ್ಲಿ ಸಮರ್ಥಿಸಿರುತ್ತಾರೆ. ಶ್ರುತಿಯು ಗುಣವನ್ನು ಅಪೇಕ್ಷೆ ಪಡದೇ ಸ್ವತಃ ಪ್ರಮಾಣವಾಗುತ್ತದೆ. ಮತ್ತು ಪ್ರಾಮಾಣ್ಯಕ್ಕೆ ಅಪವಾದಕವಾದ ಯಾವುದೇ ದೋಷವಿರುವುದಿಲ್ಲ. ಆದ್ದರಿಂದ ಹೇಗೆ ಸಾಕ್ಷಿಪ್ರತ್ಯಕ್ಷವು ಸ್ವತಃಪ್ರಮಾಣವಾಗುತ್ತದೋ, ಅದರಂತೆ ಶ್ರುತಿಯೂ ಕೂಡ ಸ್ವತಃಪ್ರಮಾಣವಾಗುತ್ತದೆ. ಹೀಗೆ ಪ್ರಮಾಣವಾಗಿರುವ ಶ್ರುತಿಯಿಂದ 'ವೇದಃ ಅಪ್ರಮಾಣಂ ಫಲವಿಸಂವಾದಿತ್ವಾತ್' ಎಂಬ ಪೂರ್ವಪಕ್ಷಿಯು ಹೇಳಿದ ಅಪ್ರಾಮಾಣ್ಯಾ-ಮಿತಿಯು ಬಾಧಿತವಾಗುತ್ತದೆ. ಇದನ್ನೇ ನ್ಯಾಯವಿವರಣದಲ್ಲಿ 'ಸಾಕ್ಷಿಪ್ರತ್ಯಕ್ಷಸಾಮ್ಯಮೇವ' - ಎಂದು ಹೇಳಿರುತ್ತಾರೆ.

**विसंवादस्त्वन्यथासिद्धः । कारीर्यादेर्वृष्ट्यादिहेतुता हि तत्तद्वाक्यार्थः । नच सहकारिवैकल्यात्प्रतिबन्धाद्वा कार्यानुत्पत्तावहेतुता । येन विसंवादो प्रामाण्येन विनाऽनुपपन्नःस्यात् ।**

ಕೆಲವು ವೇದವಾಕ್ಯಗಳಲ್ಲಿ ವಿಸಂವಾದವಿರುತ್ತದೆಂದು ಆಕ್ಷೇಪ ಮಾಡುತ್ತಿದ್ದೀರಿ. ಆದರೆ ಈ ವಿಸಂವಾದವು ಅನ್ಯಥಾಸಿದ್ಧವಾಗಿದೆ. ಏಕೆಂದರೆ ಕಾರೀರ್ಯಾದಿಯಾಗಗಳು ಮಳೆ ಬರಲು ಕಾರಣವಾಗಿದೆ ಎಂದಷ್ಟೇ ಶ್ರುತಿವಾಕ್ಯದ ಅರ್ಥ. ಸಹಕಾರಿಯಲ್ಲಿ ನ್ಯೂನತೆಯು ಬಂದರೆ ಅಥವಾ ಪ್ರಬಲವಾದ ಪ್ರತಿಬಂಧಕವಿದ್ದರೆ ಕಾರೀರ್ಯಾದಿ ಯಾಗಗಳನ್ನೂ ಮಾಡಿದರೂ ಮಳೆ ಬರುವುದಿಲ್ಲ. ಆದ್ದರಿಂದ ಕಾರ್ಯದ ಅನುತ್ಪತ್ತಿಗೆ ಕಾರೀರ್ಯಾದಿಯಾಗವು ಕಾರಣವಲ್ಲವೆಂದು ನಿಮ್ಮಿಂದ ಹೇಳಲಾಗದು. ಒಂದುವೇಳೆ ಸಹಕಾರಿವೈಕಲ್ಯವಿದ್ದರೂ ಮತ್ತು ಪ್ರತಿಬಂಧಕವಿದ್ದರೂ ಕಾರ್ಯವಾಗಿಲ್ಲ ಅನ್ನುವ ಕಾರಣದಿಂದ ಕಾರೀರ್ಯಾದಿಯಾಗವು ಕಾರಣವೇ ಅಲ್ಲವೆಂದು ಹೇಳುವುದಾದರೆ ವಿಸಂವಾದದಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತಿತ್ತು. ವಿಸಂವಾದವು ಅಪ್ರಾಮಾಣ್ಯವಿಲ್ಲದೇ ಅನುಪಪನ್ನವಾಗುತ್ತಿತ್ತು.

**अपौरुषेयत्वं तु न प्रामाण्यं विनोपपन्नम् । दोषाभावेऽप्यप्रामाण्येऽहेतुक-कार्यापातात् ।**

ಅಪ್ರಾಮಾಣ್ಯವನ್ನು ಒಪ್ಪದಿದ್ದರೂ ವಿಸಂವಾದವು ಯುಕ್ತವಾಗುತ್ತದೆ. ಆದರೆ ನಾವು ಹೇಳುತ್ತಿರುವ ಅಪೌರುಷೇಯತ್ವವು ಪ್ರಾಮಾಣ್ಯವನ್ನೊಪ್ಪದೇ ಉಪಪನ್ನವೇ ಆಗುವುದಿಲ್ಲ. ಪ್ರಾಮಾಣ್ಯವಿದ್ದರೆ ಮಾತ್ರ

ಅಪೌರುಷೇಯತ್ವವನ್ನು ನಿರ್ವಾಹ ಮಾಡಲು ಸಾಧ್ಯ. ಒಂದು ವೇಳೆ ಅಪೌರುಷೇಯತ್ವವನ್ನು ಒಪ್ಪಿ, ಪ್ರಾಮಾಣ್ಯವನ್ನು ಒಪ್ಪದಿದ್ದರೆ ಅಪ್ರಾಮಾಣ್ಯವನ್ನು ಒಪ್ಪಿದಂತಾಗುತ್ತದೆ. ಆಗ ಅಪ್ರಾಮಾಣ್ಯ ಮೂಲಕವಾದ ದೋಷವನ್ನು ನೀವು ಒಪ್ಪಬೇಕು. ದೋಷವಿಲ್ಲದಿದ್ದರೂ ಅಪ್ರಾಮಾಣ್ಯವನ್ನು ಒಪ್ಪಿದರೆ ಅಕಾರಣಕಾರ್ಯವ್ಯುತ್ಪತ್ತಿಯನ್ನು ಒಪ್ಪಿದಂತಾಗುತ್ತದೆ. ಏಕೆಂದರೆ ಅಪ್ರಾಮಾಣ್ಯವು ದೋಷಜನ್ಯವಾಗಿದೆ. ದೋಷವಿಲ್ಲದೇ ಅಪ್ರಾಮಾಣ್ಯವನ್ನು ಒಪ್ಪಲು ಸಾಧ್ಯವೇ ಇಲ್ಲ.

**दृश्यते च वैगुण्याद्यभावे कारीर्यादिफलमिति न काचित्कादर्शनेनाहेतुता । शैवादिस्मृतेस्तु संवादात्प्रामाण्यमिति वैषम्यम् ।**

ಎರಡನೆಯ 'ದೃಶ್ಯತೇ ಚ' ಎಂಬ ಸೂತ್ರದ ಅಭಿಪ್ರಾಯ ಹೀಗಿದೆ - ಕರ್ತೃವೈಗುಣ್ಯಾದಿ ದೋಷಗಳು ಇಲ್ಲದಿದ್ದಾಗ ಕಾರೀರ್ಯಾದಿಯಾಗಗಳು ಮಳೆ ಬರಲು ಕಾರಣವೇ ಆಗಿರುತ್ತವೆ. ಕೆಲವೆಡೆ ಫಲವುಂಟಾಗುವುದು ಕಾಣಿಸುತ್ತಿಲ್ಲವೆಂಬ ಮಾತ್ರಕ್ಕೆ ಕಾರೀರ್ಯಾದಿಯಾಗಗಳು ಕಾರಣವೇ ಅಲ್ಲವೆಂದು ಹೇಳಬಾರದು. ಶೈವಾದಿಸ್ಮೃತಿಗಳು ಸಂವಾದಪ್ರಮಾಣವಿದ್ದರೆ ಮಾತ್ರ ಪ್ರಮಾಣವಾಗುತ್ತದೆಂದು ನೀವು ಒಪ್ಪಿದ್ದೀರಿ. ಆದರೆ ನಾವು ಸಂವಾದಪ್ರಮಾಣದಿಂದ ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತಿಲ್ಲ. ಶ್ರುತಿಪ್ರಾಮಾಣ್ಯವನ್ನು ಒಪ್ಪುತ್ತಿದ್ದೇವೆ. ಹೀಗೆ ವೈಷಮ್ಯವನ್ನು ತಿಳಿಯಬೇಕು.

**भेषजत्वेन निर्णीतादपि दैवात् कचिद्गुणः ।**
**चेन्न दृश्येत किं तस्य तावता तदहेतुता ।।१।।**

ಯಾವುದು ರೋಗಕ್ಕೆ ಔಷಧಿಯೆಂದು ನಿರ್ಣಯವಾಗಿರುತ್ತದೋ, ಅಂತಹ ಔಷಧಿಯನ್ನು ಸೇವನೆ ಮಾಡಿದಾಗ ಕೆಲವೊಮ್ಮೆ ಕೆಲವು ರೋಗಿಗಳಿಗೆ ಗುಣವಾಗುವುದಿಲ್ಲ. ಅಂದಮಾತ್ರಕ್ಕೆ ರೋಗಕ್ಕೆ ಅದು ಔಷಧಿಯೇ ಅಲ್ಲವೆಂದು ಯಾರೂ ಹೇಳುವುದಿಲ್ಲ.

**अपथ्यत्वेन निर्णीतादपि दैवात् कचिद्गुणः ।**
**दृश्यते वद किं तस्य तावता तत्र हेतुता ।।२।।**

ಅಪಥ್ಯಸೇವನೆಯಿಂದ ರೋಗವೇ ಬರುತ್ತದೆ ಹೊರತು ಆರೋಗ್ಯವು ಬರಲು ಸಾಧ್ಯವಿಲ್ಲ. ಕೆಲವೊಮ್ಮೆ ಯಾವುದನ್ನು ಅಪಥ್ಯವೆಂದು ನಿರ್ಣಯ ಮಾಡಿರುತ್ತಾರೋ, ಅದನ್ನು ಸೇವನೆ ಮಾಡಿದಾಗಲೂ ರೋಗವು ಬಾರದೇ ಆರೋಗ್ಯವಂತನಾಗಿಯೇ ಇರುತ್ತಾನೆ. ಅಂದಮಾತ್ರಕ್ಕೆ ಅಪಥ್ಯವಾದ ವಸ್ತುವನ್ನು ಯಾರೂ ಕೂಡ ಆರೋಗ್ಯಕ್ಕೆ ಕಾರಣವೆಂದು ಹೇಳುವುದಿಲ್ಲ.

ಆದರಂತೆ ವೇದದಲ್ಲಿ ಕೆಲವೊಮ್ಮೆ ಫಲಸ್ವರೂಪವಿದ್ದ ಮಾತ್ರಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದು. ಶೈವಾದಿಸ್ಮೃತಿಗಳಲ್ಲಿ ಕೆಲವೊಮ್ಮೆ ಫಲ ದೊರೆತಿದೆ ಎಂಬ ಕಾರಣಕ್ಕೆ ಪ್ರಾಮಾಣ್ಯವನ್ನೂ ಕೂಡ ಹೇಳಬಾರದು.

**प्रकाशः –**

अत्र टीकायां नित्यत्वाद्वेदस्य निर्दोषत्वेनाप्रामाण्याभाव एवोक्तो नतु प्रामाण्यम्। अतो वेदस्यापौरुषेयत्वेनाप्तोक्तत्वगुणाभावात्कथं प्रामाण्यमिति शङ्का तु न परिहृतैव। तथा च ''प्रमाणानुकूलत्वात् स्मृतेरपि तत्सिद्धिः'' इत्युत्तरवाक्यायोग इत्यतः ''नित्यत्वात् पुरुषोद्भवैः । उज्झितं सर्वदोषैश्च कथं नो मानतां व्रजेत्'' इत्येतद्व्याख्याने सुधायां ''बोधकत्वेन खलु करणानां प्रामाण्यम् । दोषात्तु कदाचिदपनीयते'' इत्यादिनोक्तमर्थं सङ्गृह्णाह – **गुणाभावेऽपीति** ।।

ಈ ಅಧಿಕರಣದ ಟೀಕೆಯಲ್ಲಿ ವೇದವು ನಿತ್ಯವಾಗಿರುವುದರಿಂದ ನಿರ್ದುಷ್ಟವಾಗಿದೆ. ಆದ್ದರಿಂದಲೇ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲವೆಂದು ಸಮರ್ಥಿಸಿದ್ದಾರೆ. ಹೊರತು, ಪ್ರಾಮಾಣ್ಯವನ್ನು ಸಮರ್ಥಿಸಿಯೇ ಇಲ್ಲ. ಹೀಗಿರುವಾಗ ಅಪೌರುಷೇಯವಾದ ವೇದದಲ್ಲಿ ಆಪ್ತೋಕ್ತತ್ವ ಎಂಬ ಗುಣವಿಲ್ಲದ ಕಾರಣ ಪ್ರಾಮಾಣ್ಯವನ್ನು ಹೇಗೆ ಸಮರ್ಥಿಸುತ್ತೀರಿ? ಎಂಬ ಪೂರ್ವಪಕ್ಷಿಯ ಆಶಂಕೆಯನ್ನು ಪರಿಹರಿಸಿದಂತಾಗುವುದಿಲ್ಲ.

ಆದ್ದರಿಂದ 'ಪ್ರಮಾಣಾನುಕೂಲತ್ವಾತ್ ಸ್ಮೃತೇರಪಿ ತತ್‌ಸಿದ್ಧಿಃ' ಎಂಬ ಮುಂದೆ ಬರುವ ವಾಕ್ಯವು ಅಯುಕ್ತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

'ನಿತ್ಯತ್ವಾತ್ ಪುರುಷೋದ್ಭವೈಃ। ಉಜ್ಝಿತಂ ಸರ್ವದೋಷೈಶ್ಚ ಕಥಂ ನೋ ಮಾನತಾಂ ವ್ರಜೇತ್' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನ ಮಾಡುವ ನ್ಯಾಯಸುಧೆಯಲ್ಲಿ 'ಬೋಧಕತ್ವೇನ ಖಲು ಕರಣಾನಾಂ ಪ್ರಾಮಾಣ್ಯಮ್। ದೋಷಾತ್ತು ಕದಾಚಿದಪನೀಯತೇ' ಕರಣಗಳ ಪ್ರಾಮಾಣ್ಯವು ಬೋಧಕತ್ವೇನ ಬರುತ್ತದೆ. ದೋಷವಿದ್ದಾಗ ಕೆಲವೊಮ್ಮೆ ಪ್ರಾಮಾಣ್ಯವು ಹುಟ್ಟುವುದಿಲ್ಲ ಇತ್ಯಾದಿಯಾಗಿ ಹೇಳಿರುತ್ತಾರೆ. ಅದನ್ನೇ ಪ್ರಕೃತ ಗ್ರಂಥಕಾರರು ಸಂಗ್ರಹಿಸಿ 'ಗುಣಾಭಾವೇಽಪಿ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

**प्रकाशः –** आप्तिमूलकत्वरूपगुणेत्यर्थः । प्रामाण्यं प्रमाजनकत्वम् । स्वतः ज्ञानजनकत्वमिव सहजम् । न त्वन्यतः प्राप्यम् । प्रमाजननस्वभावस्यापि दोषवशादप्रमाजनकत्वमपि स्यादित्यत उक्तमपवादकेति ।।

ನ ವಿಲಕ್ಷಣತ್ವಾಧಿಕರಣ (೨-೧-೨)

'ಗುಣಾಭಾವೇऽಪಿ' ಎಂದರೆ ಆಪ್ತಿಮೂಲಕತ್ವವೆಂಬ ಗುಣವಿಲ್ಲದಿದ್ದರೂ ಎಂದರ್ಥ. 'ಪ್ರಾಮಾಣ್ಯಂ' ಎಂದರೆ ಯಥಾರ್ಥಜ್ಞಾನಜನಕವಾದದ್ದು ಎಂದರ್ಥ. ಸ್ವತಃ ಜ್ಞಾನಜನಕತ್ವವು ಹೇಗೆ ಸಹಜವೋ? ಅದರಂತೆ ಪ್ರಮಾಜನಕತ್ವವೂ ಕೂಡ ಸಹಜವಾಗಿದೆ. ಮತ್ತೊಂದರಿಂದ ಹುಟ್ಟುವಂತಹದ್ದು ಅಲ್ಲ. ಪ್ರಮಾಜನನಸ್ವಭಾವವಿದ್ದರೂ ದೋಷವಶಾತ್ ಅಪ್ರಮಾಜನಕವೂ ಕೂಡ ಆಗಬಹುದಲ್ಲವೇ? ಚಕ್ಷುರಾದಿ ಇಂದ್ರಿಯಗಳು ಸಾಮಾನ್ಯವಾಗಿ ಯಥಾರ್ಥಜ್ಞಾನವನ್ನು ಹುಟ್ಟಿಸುವುದಾದರೂ ದೋಷವಿದ್ದರೂ ಅಪ್ರಾಮಾಣ್ಯವನ್ನು ಹುಟ್ಟಿಸುತ್ತವಲ್ಲವೇ? ಎಂಬ ಪ್ರಶ್ನೆಗೆ ಅಪವಾದಕ ದೋಷವಿದ್ದಾಗ ಮಾತ್ರ ಹಾಗಾಗುತ್ತದೆ. ಪ್ರಕೃತ ವೇದದಲ್ಲಿ ಅಂತಹ ಅಪವಾದಕ ದೋಷಗಳಿರುವುದಿಲ್ಲವೆಂದು ಉತ್ತರಿಸಿದ್ದಾರೆ.

**प्रकाशः – देवतेति ।।** अत एव तदेव श्लोकेऽत्र सङ्गृहीतमिति भावः । ''स्वतश्च प्रामाण्यम्'' इत्यादिभाष्यटीकाभावमाह – **ज्ञप्ताविति ।।**

'ಜ್ಞಪ್ತೌ ಸ್ವತಸ್ತ್ವ'ವನ್ನು ದೇವತಾಧಿಕರಣದಲ್ಲಿ ಹೇಳಲಾಗಿದೆ. ಈ ದೇವತಾಧಿಕರಣದಲ್ಲಿ ಸಮರ್ಥನೆ ಮಾಡಿದ್ದನ್ನೇ ಪ್ರಕೃತ ಗ್ರಂಥಕಾರರು ಶ್ಲೋಕದಲ್ಲಿ ಸಂಗ್ರಹಿಸಿರುತ್ತಾರೆ. 'ಸ್ವತಶ್ಚ ಪ್ರಾಮಾಣ್ಯಮ್' ಎಂಬ ಈ ಅಧಿಕರಣದ ಭಾಷ್ಯ ಟೀಕಾದಿಗಳಲ್ಲಿ ಜ್ಞಪ್ತೌ ಸ್ವತಸ್ತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆಂದು 'ಜ್ಞಪ್ತೌ' ಎಂಬ ವಾಕ್ಯದಿಂದ ಹೇಳಿದ್ದಾರೆ.

**प्रकाशः – इदानीं श्लोकार्थमाह – श्रुतेरिति ।।** स्वतः प्राप्त इत्यस्य विवरणं गुणानपेक्ष इति । भाष्यटीकयैव न्यायविवरणं विवृतं भवतीति भावेनाह – **तदुक्तमिति ।।**

ಪ್ರಕೃತ ಗ್ರಂಥಕಾರರು ಶ್ಲೋಕದ ಅರ್ಥವನ್ನು 'ಶ್ರುತೇಃ' ಎಂಬುದರಿಂದ ಹೇಳುತ್ತಿದ್ದಾರೆ. 'ಸ್ವತಃ ಪ್ರಾಪ್ತವಾಗಿದೆ' ಎಂಬುದರ ವಿವರಣೆಯನ್ನೇ 'ಗುಣಾನಪೇಕ್ಷಃ' ಎಂಬುದರಿಂದ ಮಾಡಿರುತ್ತಾರೆ. ಭಾಷ್ಯ ಹಾಗೂ ಟೀಕಾವಾಕ್ಯಗಳಿಂದಲೇ ನ್ಯಾಯವಿವರಣವನ್ನು ವಿವರಿಸಿದಂತಾಯಿತು ಎಂಬುದಾಗಿ 'ತದುಕ್ತಮ್' ಎಂದು ಹೇಳಿದ್ದಾರೆ.

**प्रकाशः –** पूर्ववाद्युक्तविसंवादयुक्तेः का गतिरित्यतः ''दृश्यते तु'' इति सूत्रभाष्यविवृतिपरां ''न फलादर्शनेन वेदादेरप्रामाण्यम्'' इत्यादिटीकां व्यनक्ति – **विसंवादस्त्विति ।।**

ಪ್ರಾಮಾಣ್ಯವು ಸ್ವತಃಪ್ರಾಪ್ತವಾಯಿತು. ಅಪವಾದಕದೋಷಗಳಂತೂ ವೇದದಲ್ಲಿ ಇರುವುದಿಲ್ಲ. ಆದ್ದರಿಂದ ಪ್ರಾಮಾಣ್ಯವು ಸ್ಥಾಪಿತವಾಯಿತು. ಇಂತಹ ವೇದದಿಂದ ಅಪ್ರಾಮಾಣ್ಯಾನುಮಾನವು ಬಾಧಿತವಾಯಿತು ಎಂದು ಸಮರ್ಥಿಸಿದಂತಾಯಿತು. ಈ ಪಕ್ಷದಲ್ಲಿ ಪೂರ್ವಪಕ್ಷಿಯು ಹೇಳಿದ ವಿಸಂವಾದವೆಂಬ ಯುಕ್ತಿಗೆ ಏನು ಗತಿ? ಎಂಬ ಪ್ರಶ್ನೆಗೆ 'ದೃಶ್ಯತೇ ತು' ಎಂಬ ಸೂತ್ರದ ಭಾಷ್ಯವನ್ನು ವಿವರಿಸುವಾಗ ಟೀಕೆಯಲ್ಲಿ

'ನ ಫಲಾದರ್ಶನೇನ ವೇದಾದೇಃ ಅಪ್ರಾಮಾಣ್ಯಮ್' ಫಲವು ಕಂಡಿಲ್ಲವಾದ ಮಾತ್ರದಿಂದ ವೇದವನ್ನು ಅಪ್ರಮಾಣವೆನ್ನಬಾರದು ಎಂದು ಹೇಳಿದ್ದಾರೆ. ಅದನ್ನೇ 'ವಿಸಂವಾದಸ್ತು' ಎಂಬುದರಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಪ್ರಕಾಶಃ – वैपरीत्यं किं नेत्यत आह – अपौरुषेयत्वमिति ।।**

ವಿಸಂವಾದದಿಂದ ಅಪ್ರಾಮಾಣ್ಯ ಬರುತ್ತದೆ. ಅಪೌರುಷೇಯತ್ವದಿಂದ ಪ್ರಾಮಾಣ್ಯವು ಬರುತ್ತದೆ ಎಂದು ಹೇಳಿದರೆ, ವಿಸಂವಾದವು ವೇದದಲ್ಲಿ ಇರುವುದರಿಂದ ಅಪ್ರಮಾಣವಾಗಬೇಕಲ್ಲವೇ? ಎಂದು ಪೂರ್ವಪಕ್ಷದಲ್ಲಿ ಆಕ್ಷೇಪಿಸಲಾಗಿತ್ತು. ಆದರೆ ನೀವು ವಿಸಂವಾದವು ವೈಗುಣ್ಯನಿಮಿತ್ತಕವಾಗಿದೆ ಆದ್ದರಿಂದ ಅಪೌರುಷೇಯತ್ವೇನ ಪ್ರಾಮಾಣ್ಯವೇ ಸಿದ್ಧವಾಗುತ್ತದೆಂದು ಉತ್ತರಿಸಿದಿರಿ. ಹೀಗೆ ಹೇಳುವುದಾದರೆ ಅಪೌರುಷೇಯತ್ವವೇ ಬೇರೆ ಕಾರಣದಿಂದ ಸಿದ್ಧವಾಗುತ್ತದೆ. ವಿಸಂವಾದದಿಂದ ಅಪ್ರಾಮಾಣ್ಯವು ಸ್ವತಃ ಸಿದ್ಧವಾಗುತ್ತದೆಂದು ನಾವು ಹೇಳುತ್ತೇವೆ. ಹೀಗೆ ವೈಪರೀತ್ಯವನ್ನು ಏಕೆ ಹೇಳಬಾರದು ? ಎಂಬ ಪ್ರಶ್ನೆಗೆ 'ಅಪೌರುಷೇಯತ್ವಮ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**ಪ್ರಕಾಶಃ – कथमनुपपन्नमित्यतः परम्परयेत्याह – दोषेति ।। एतेन ''वेदस्यतु'' इत्यादिटीका विवृता ।**

ಪ್ರಾಮಾಣ್ಯವನ್ನು ಒಪ್ಪದಿದ್ದರೆ ಅಪೌರುಷೇಯತ್ವವೇ ಅನುಪಪನ್ನವಾಗುತ್ತದೆಂದು ಹೇಳಿದರು. ಹೇಗೆ ಅನುಪಪನ್ನವಾಗುತ್ತದೆ ? ಎಂಬ ಪ್ರಶ್ನೆಗೆ 'ಪರಂಪರೆಯಿಂದ' ಎಂಬುದಾಗಿ 'ದೋಷಾಭಾವ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಅಭಿಪ್ರಾಯವಿಷ್ಟು- ಒಂದುವೇಳೆ ಪ್ರಾಮಾಣ್ಯವನ್ನು ಒಪ್ಪದಿದ್ದರೆ ಅಪ್ರಾಮಾಣ್ಯವನ್ನು ಹೇಳಬೇಕಾಗುತ್ತದೆ. ಅಪ್ರಾಮಾಣ್ಯಕ್ಕಾಗಿ ದೋಷವನ್ನೇ ಕಾರಣವೆಂದು ಹೇಳಬೇಕು. ಅಪೌರುಷೇಯವಾದ್ದರಿಂದ ದೋಷವನ್ನು ಹೇಳಲಾಗದು. ಆವಾಗ ದೋಷವೆಂಬ ಕಾರಣವಿಲ್ಲದೇ ಅಪ್ರಾಮಾಣ್ಯವೆಂಬ ಕಾರಣವು ಹುಟ್ಟಿತೆಂದು ಹೇಳಿದಂತಾಗುತ್ತದೆ. ಆಗ ಅಕಾರಣಕಾರ್ಯೋತ್ಪತ್ತಿಯೆಂಬ ದೋಷ ಬರುತ್ತದೆ. ಹೀಗೆ ಹೇಳಿದ್ದರಿಂದ 'ವೇದಸ್ಯ ತು' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು.

**ಪ್ರಕಾಶಃ – ''तत्कुतः कल्प्यते'' इति टीकोक्तशङ्कां हृदि कृत्वा ''योग्यानां फलदर्शनात्'' इति टीकार्थमाह – दृश्यत इति ।।**

'ತತ್ಕುತಃ ಕಲ್ಪ್ಯತೇ' ವೇದದಲ್ಲಿ ಯಾವುದೇ ದೋಷವಿಲ್ಲ ಎಂಬುದನ್ನು ಹೇಗೆ ಕಲ್ಪಿಸುತ್ತೀರಿ? ಎಂಬುದಾಗಿ ಟೀಕೆಯಲ್ಲಿಯೇ ಆಶಂಕಿಸಿದ್ದಾರೆ. ಅದಕ್ಕೆ 'ಯೋಗ್ಯಾನಾಂ ಫಲದರ್ಶನಾತ್' ಯೋಗ್ಯರಿಗೆ ಕಾರೀರ್ಯಾದಿಯಾಗದಿಂದಲೂ ಫಲವಾಗುವುದು ಕಂಡಿದೆ ಎಂಬ ಮಾತಿನಿಂದ ಟೀಕೆಯಲ್ಲಿಯೇ ಉತ್ತರಿಸಿದ್ದಾರೆ. ಅದನ್ನು ಗ್ರಂಥಕಾರರು 'ದೃಶ್ಯತೇ' ಎಂಬ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. ಹೀಗೆ ಹೇಳಿದ್ದರಿಂದ

ವೇದಃ ಅಪ್ರಮಾಣಂ ಫಲವಿಸಂವಾದಿತ್ವಾತ್' ಎಂಬ ಪೂರ್ವಪಕ್ಷಿಯ ಅನುಮಾನಕ್ಕೆ 'ಸ್ವರೂಪಾಸಿದ್ಧಿ' ಎಂಬ ದೋಷವನ್ನು ತೋರಿಸಿದಂತಾಯಿತು.

**प्रकाशः** – ''नच शङ्कनीयं पाशुपतादिस्मृत्युक्तफलव्यभिचारस्यापि'' इत्यादिटीकोक्तशङ्कां हृदि कृत्वा ''पाशुपतादीनां तु फलदर्शनमन्तरेणप्रामाण्यस्य साधकाभावात्'' इति टीकार्थमाह – **शैवादीति** ।।

'ನಚ ಶಂಕನೀಯಂ ಪಾಶುಪತಾದಿಸ್ಮೃತ್ಯುಕ್ತಫಲವ್ಯಭಿಚಾರಸ್ಯಾಪಿ' 'ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ವಾಕ್ಯಗಳಲ್ಲಿಯೂ ಫಲವ್ಯಭಿಚಾರವು ಕಂಡಿದೆಯೆಂದು ಆಶಂಕಿಸಬಾರದು' ಇತ್ಯಾದಿಯಾಗಿ ಟೀಕೆಯಲ್ಲಿ ಆಶಂಕಿಸಲಾಗಿದೆ. ಇದಕ್ಕೆ 'ಪಾಶುಪತಾದೀನಾಂ ತು ಫಲದರ್ಶನಮಂತರೇಣ ಪ್ರಾಮಾಣ್ಯಸ್ಯ ಸಾಧಕಾಭಾವಾತ್' ಪಾಶುಪತಾದಿಶಾಸ್ತ್ರಗಳಲ್ಲಾದರೂ ಫಲದರ್ಶನವನ್ನು ಬಿಟ್ಟು ಪ್ರಾಮಾಣ್ಯಕ್ಕೆ ಸಾಧಕವಾದದ್ದು ಬೇರೆ ಯಾವುದೂ ಇಲ್ಲ ಎಂಬುದಾಗಿ ಉತ್ತರಿಸಿದ್ದಾರೆ. ಆದನ್ನೇ ಗ್ರಂಥಕಾರರು 'ಶೈವಾದಿ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – तेन स्वतस्त्वानभ्युपगमात् ''तस्यापि स्वतः प्रामाण्यं चेत्'' इत्यादिना टीकायां स्वतः प्रामाण्यमाशङ्क्य प्रामाण्यस्य स्पष्टमुपपादितत्वादिति भावः ।

ಹೀಗೆ ಹೇಳಿದ್ದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಶೈವರು ಒಪ್ಪಿರುವುದಿಲ್ಲ. ಆದ್ದರಿಂದ 'ತಸ್ಯಾಪಿ ಸ್ವತಃ ಪ್ರಾಮಾಣ್ಯಂ ಚೇತ್' ಒಂದು ವೇಳೆ ಶೈವರೂ ಕೂಡ ಪ್ರಾಮಾಣ್ಯಸ್ವತಸ್ತ್ವವನ್ನೂ ಒಪ್ಪುವುದಾದರೆ ಇತ್ಯಾದಿ ಟೀಕೆಯಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಆಶಂಕಿಸಿ ಅಪ್ರಾಮಾಣ್ಯವನ್ನೇ ಸ್ಪಷ್ಟವಾಗಿ ಉಪಪಾದನೆ ಮಾಡಿದಂತಾಯಿತು. ತತ್ವವಾದಿಗಳು ವೇದಾದಿಶಾಸ್ತ್ರಗಳಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುತ್ತಾರೆ. ಅದರಂತೆ ಶೈವಾದಿಶಾಸ್ತ್ರಗಳೂ ಕೂಡ ಸ್ವತಃ ಪ್ರಮಾಣವೆಂದು ಶೈವರು ಉತ್ತರಿಸಬಹುದು. ಆದರೆ ಅಪವಾದಕವಾದ ದೋಷವಿಲ್ಲದಿದ್ದರೆ ಮಾತ್ರ ಸ್ವತಃಪ್ರಮಾಣವೆನ್ನಬಹುದು. ಶೈವರಿಗೆ ಅಪವಾದಕವಾದ ದೋಷಾಭಾವವನ್ನು ಸಮರ್ಥಿಸಲು ಯಾವುದೇ ಯುಕ್ತಿ ಇರುವುದಿಲ್ಲ.

**प्रकाशः** – उपपादितं द्वितीयसूत्रभाष्यटीकाप्रमेयं सङ्गृह्णाह – **भेषजत्वेनेति** ।।

ಇಲ್ಲಿಯ ತನಕ ಉಪಪಾದನೆ ಮಾಡಿದ ದ್ವಿತೀಯಸೂತ್ರದ ಭಾಷ್ಯ ಹಾಗೂ ಟೀಕಾಪ್ರಮೇಯವನ್ನು 'ಭೇಷಜತ್ವೇನ' ಎಂಬೆರಡು ಶ್ಲೋಕಗಳಿಂದ ಸಂಗ್ರಹಿಸಿದ್ದಾರೆ.




ಅಪೌರುಷೇಯವಾದ ವೇದವನ್ನು ಅಪ್ರಮಾಣವೆಂದು ಹೇಳಲು ಸಾಧ್ಯವೇ ಇಲ್ಲ. ವೇದದಲ್ಲಿ ಹೇಳಿದ ಅನುಷ್ಠಾನಗಳನ್ನು ಮಾಡಿದಾಗ ಕೆಲವೊಮ್ಮೆ ಫಲವು ದೊರೆಯುವುದಿಲ್ಲವೆಂಬ ಕಾರಣದಿಂದ ವೇದವನ್ನು ಅಪ್ರಮಾಣವೆಂದು ತಿಳಿಯಬಾರದು. ಅಪೌರುಷೇಯವಾದ ವೇದದಲ್ಲಿ ಪುರುಷನ ದೋಷಗಳಿಗೆ ಅವಕಾಶವೇ ಇಲ್ಲ. ಆದ್ದರಿಂದ ಅಪ್ರಾಮಾಣ್ಯಕ್ಕೆ ಕಾರಣವಾದ ಯಾವುದೇ ದೋಷವು ಇರುವುದಿಲ್ಲ.

ಗುಣಾಭಾವೇಽಪಿ ವೇದಸ್ಯ ಪ್ರಾಮಾಣ್ಯಂ ಸಾಕ್ಷಿವತ್ ಸ್ವತಃ ।
ಅಪವಾದಕದೋಷಸ್ಯ ರಾಹಿತ್ಯಾದೇವ ಹಿ ಸ್ಥಿತಮ್ ॥

ಸಾಕ್ಷಿಯು ಯಾವುದೇ ದೋಷವಿಲ್ಲವೆಂಬ ಕಾರಣದಿಂದ ಗುಣವಿಲ್ಲದಿದ್ದರೂ ಸ್ವತಃ ಪ್ರಮಾಣವಾಗುತ್ತದೆ. ಅದರಂತೆ ವೇದದಲ್ಲಿಯೂ ಯಾವುದೇ ಅಪವಾದಕವಾದ ದೋಷವಿಲ್ಲದಿರುವುದರಿಂದ ಆಪ್ತೋಕ್ತತ್ವ ಮೊದಲಾದ ಗುಣಗಳಿಲ್ಲದಿದ್ದರೂ ಸ್ವತಃ ಪ್ರಮಾಣವಾಗುತ್ತದೆ ಎಂಬುದು ಸಿದ್ಧವಾಯಿತು.

ಕೆಲವೊಮ್ಮೆ ವೇದದಲ್ಲಿ ಹೇಳಿದ ಕರ್ಮವನ್ನು ಅನುಷ್ಠಾನ ಮಾಡಿದಾಗಲೂ ವಿಫಲವಾಗಬಹುದು. ಅದಕ್ಕೆ ಕಾರಣ ಕರ್ತೃವಿನ ದೋಷವೇ ಹೊರತು, ವೇದದ ದೋಷವಲ್ಲ. ಕಾರೀರಿ ಎಂಬ ಯಾಗವನ್ನು ಅನುಷ್ಠಾನ ಮಾಡಿದಾಗ ಕರ್ತೃವಿನಲ್ಲಿ ದೋಷವಿದ್ದರೆ ಮಳೆ ಬರುವುದಿಲ್ಲ. ಕರ್ತೃವಿನಲ್ಲಿ ದೋಷವಿಲ್ಲದಿದ್ದಾಗ ಅಂತಹ ಯಾಗವನ್ನು ಅನುಷ್ಠಾನ ಮಾಡಿದಾಗ ಮಳೆ ಬರುವುದು ಅನೇಕ ಕಡೆ ಕಂಡಿದೆ. ವೇದವನ್ನು ಸ್ವತಃ ಪ್ರಮಾಣವೆಂದು ಹೇಳುವಂತೆ ಶೈವರೂ ಕೂಡ ಶೈವಾದಿಶಾಸ್ತ್ರಗಳನ್ನು ಸ್ವತಃ ಪ್ರಮಾಣವೆನ್ನಬಹುದು. ಆದರೆ ಅಪವಾದಕವಾದ ದೋಷಾಭಾವವಿದ್ದರೆ ಮಾತ್ರ ನಾವು ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುತ್ತೇವೆ. ಶೈವಶಾಸ್ತ್ರಗಳಲ್ಲಿ ಅಪವಾದಕವಾದ ದೋಷಗಳಿರುವುದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥಿಸಲು ಅವರಿಗೆ ಸಾಧ್ಯವಿಲ್ಲ.

ಭೇಷಜತ್ವೇನ ನಿರ್ಣೀತಾದಪಿ ದೈವಾತ್ ಕ್ವಚಿದ್ಗುಣಃ ।
ಚೇನ್ನ ದೃಶ್ಯತೇ ಕಿಂ ತಸ್ಯ ತಾವತಾ ತದಹೇತುತಾ ॥೧॥

ಯಾವುದು ರೋಗಕ್ಕೆ ಔಷಧಿಯೆಂದು ನಿರ್ಣಯವಾಗಿರುತ್ತದೋ, ಅಂತಹ ಔಷಧಿಯನ್ನು ಸೇವನೆ ಮಾಡಿದಾಗ ಕೆಲವೊಮ್ಮೆ ಕೆಲವು ರೋಗಿಗಳಿಗೆ ಗುಣವಾಗುವುದಿಲ್ಲ. ಅಂದಮಾತ್ರಕ್ಕೆ ರೋಗಕ್ಕೆ ಅದು ಔಷಧಿಯೇ ಅಲ್ಲವೆಂದು ಯಾರೂ ಹೇಳುವುದಿಲ್ಲ.

ನ ವಿಲಕ್ಷಣತ್ವಾಧಿಕರಣ (೨-೧-೨)

ಅಪಥ್ಯತ್ವೇನ ನಿರ್ಣೀತಾದಪಿ ದೈವಾತ್ ಕ್ವಚಿದ್ಗುಣಃ।
ದೃಶ್ಯತೇ ವದ ಕಿಂ ತಸ್ಯ ತಾವತಾ ತತ್ರ ಹೇತುತಾ ॥೨॥

ಅಪಥ್ಯಸೇವನೆಯಿಂದ ರೋಗವೇ ಬರುತ್ತದೆ ಹೊರತು ಆರೋಗ್ಯವು ಬರಲು ಸಾಧ್ಯವಿಲ್ಲ. ಕೆಲವೊಮ್ಮೆ ಯಾವುದನ್ನು ಅಪಥ್ಯವೆಂದು ನಿರ್ಣಯ ಮಾಡಿರುತ್ತಾರೋ, ಅದನ್ನು ಸೇವನೆ ಮಾಡಿದಾಗಲೂ ರೋಗವು ಬಾರದೇ ಆರೋಗ್ಯವಂತನಾಗಿಯೇ ಇರುತ್ತಾನೆ. ಅಂದಮಾತ್ರಕ್ಕೆ ಅಪಥ್ಯವಾದ ವಸ್ತುವನ್ನು ಯಾರೂ ಕೂಡ ಆರೋಗ್ಯಕ್ಕೆ ಕಾರಣವೆಂದು ಹೇಳುವುದಿಲ್ಲ.

ಅದರಂತೆ ವೇದದಲ್ಲಿ ಕೆಲವೊಮ್ಮೆ ಫಲಸ್ವರೂಪವಿದ್ದ ಮಾತ್ರಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದು. ಶೈವಾದಿಸ್ಮೃತಿಗಳಲ್ಲಿ ಕೆಲವೊಮ್ಮೆ ಫಲ ದೊರೆತಿದೆ ಎಂಬ ಕಾರಣಕ್ಕೆ ಪ್ರಾಮಾಣ್ಯವನ್ನೂ ಕೂಡ ಹೇಳಬಾರದು.

## ವೇದವು ಅಪೌರುಷೇಯ ಅಲ್ಲವೆಂಬ ಪಕ್ಷದ ನಿರಕಾರಣೆ

## तात्पर्यचन्द्रिका

**नाप्यपौरुषेयत्वमेव नेति द्वितीयः । ''वाचा विरूप नित्यया'' इत्यादिश्रुत्यैव तत्सिद्धेः ।**

ವೇದವು ಅಪೌರುಷೇಯವಾಗಿದ್ದರೂ ಅಪ್ರಮಾಣವಾಗುತ್ತದೆಂಬ ಪ್ರಥಮಪಕ್ಷವನ್ನು ಇಲ್ಲಿಯ ತನಕ ನಿರಾಕರಿಸಿದ್ದಾಯಿತು. ವೇದವು ಅಪೌರುಷೇಯವೇ ಅಲ್ಲ ಎಂಬ ಎರಡನೆಯ ಪಕ್ಷವೂ ಕೂಡ ಸರಿಯಿಲ್ಲ. 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿಯೇ ಅಪೌರುಷೇಯತ್ವವನ್ನು ಸಮರ್ಥಿಸುತ್ತಿದೆ.

**न चान्योन्याश्रयः ।।**

'ವಾಚಾ ವಿರೂಪನಿತ್ಯಯಾ' ಎಂಬ ವಾಕ್ಯದಿಂದ ವೇದಕ್ಕೆ ಅಪೌರುಷೇಯತ್ವವನ್ನು ಸಮರ್ಥಿಸಲು ಹೊರಟರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ವೇದವು ಪ್ರಮಾಣವೆಂದು ಸಿದ್ಧವಾದರೆ ವೇದದಲ್ಲಿಯೇ ಸೇರಿದ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಈ ವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ಇದರಿಂದ ವೇದಪ್ರಾಮಾಣ್ಯವು ಸಿದ್ಧವಾಗುತ್ತದೆಂದು ಅನ್ಯೋನ್ಯಾಶ್ರಯದೋಷವನ್ನು ಆಕ್ಷೇಪಿಸಬಾರದು. ಏಕೆಂದರೆ -

**विसंवादविहीनेन श्रुतिवाक्येन साधिता ।**
**नित्यता सर्ववेदानां विसंवादं धुनोति हि ।।१।।**

ವಿಸಂವಾದವಿಲ್ಲದ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿವಾಕ್ಯದಿಂದ ಸಕಲ ವೇದಕ್ಕೆ

ನಿತ್ಯತ್ವವು ಸಿದ್ಧವಾಗುತ್ತದೆ. ಆದರಿಂದಲೇ ಸಕಲ ವೇದಗಳಲ್ಲಿ ವಿಸಂವಾದವಿಲ್ಲವೆಂಬುದೂ ಕೂಡ ನಿಶ್ಚಯವಾಗುತ್ತದೆ.

**अत्र हि पूर्वपक्षिणा विसंवादेतरहेतुकाप्रामाण्याभावं स्वीकृत्य विसंवादेनैकदेशस्य प्रामाण्यापवादे तद्दृष्टान्तेनान्यस्यापि स शंक्यते ।**

ಪ್ರಕೃತ ಪೂರ್ವಪಕ್ಷಿಯು ವಿಸಂವಾದವಿಲ್ಲದ ವಾಕ್ಯಗಳಲ್ಲಿ ಅಪ್ರಾಮಾಣ್ಯವನ್ನು ಒಪ್ಪಿರುವುದಿಲ್ಲ. ವಿಸಂವಾದವಿರುವ ಏಕದೇಶಕ್ಕೆ ಪ್ರಾಮಾಣ್ಯವನ್ನು ಒಪ್ಪಲಾಗದೆಂದು ಅಪವಾದಸ್ಥಳವನ್ನು ಹೇಳಿ, ಆದರ ದೃಷ್ಟಾಂತದಿಂದ ಉಳಿದ ವಾಕ್ಯಗಳಿಗೂ ಅಪ್ರಾಮಾಣ್ಯವನ್ನು ಸಮರ್ಥಿಸುತ್ತಿದ್ದಾನೆ.

**नच वेदनित्यत्वश्रुतेर्विसंवादोऽस्तीति निर्बाधया तया कृत्स्नवेदप्रामाण्योपयोग्यपौरुषेयत्वसिद्धिरिति ।**

ವೇದನಿತ್ಯತ್ವವನ್ನು ಸಮರ್ಥಿಸುವ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯಲ್ಲಿ ಯಾವುದೇ ವಿಸಂವಾದವಿರುವುದಿಲ್ಲವೆಂದು ನಿರ್ಬಾಧಿತವಾಗಿದೆ. ಈ ಶ್ರುತಿವಾಕ್ಯದಿಂದ ಸಮಗ್ರವೇದದ ಪ್ರಾಮಾಣ್ಯಕ್ಕೆ ಉಪಯೋಗಿಯಾದ ಅಪೌರುಷೇಯತ್ವವು ಸಿದ್ಧವಾಗುತ್ತದೆ.

**अत एव बाधान्यथासिद्धी सूत्रारूढे कर्तुमपौरुषेयत्वं संवादानपेक्षत्वं च सौत्रवैलक्षण्यशब्दार्थ इति भाष्यटीकयोरुक्तम् ।**

'ವೇದಃ ಅಪ್ರಮಾಣಂ ಫಲವಿಸಂವಾದಿತ್ವಾತ್' ಎಂಬ ಅನುಮಾನದಲ್ಲಿ ಬಾಧದೋಷವನ್ನು ಹೇಳಿದಂತಾಯಿತು. ಏಕೆಂದರೆ ವೇದಕ್ಕೆ 'ವಾಚಾ ವಿರೂಪನಿತ್ಯಯಾ' ಎಂಬ ವಾಕ್ಯದಿಂದ ನಿತ್ಯತ್ವವು ಮತ್ತು ಪ್ರಾಮಾಣ್ಯವು ಸಿದ್ಧವಾಗುವುದರಿಂದ ಅಪ್ರಾಮಾಣ್ಯವೆಂಬ ಸಾಧ್ಯವು ಪಕ್ಷದಲ್ಲಿ ಬರುವುದಿಲ್ಲ. ಮತ್ತು ಅನ್ಯಥಾಸಿದ್ಧಿಯನ್ನೂ ಕೂಡ ಹೇಳಿದಂತಾಯಿತು. ವೈಗುಣ್ಯನಿಮಿತ್ತದಿಂದ ಫಲವಿಸಂವಾದವು ಕಂಡಿರುತ್ತದೆ ಹೊರತು, ಅಪ್ರಾಮಾಣ್ಯಮೂಲಕವಾಗಿ ಅಲ್ಲ. ಈ ಬಾಧ ಮತ್ತು ಅನ್ಯಥಾಸಿದ್ಧಿದೋಷಗಳನ್ನು ಸೂತ್ರಾರೂಢ ಮಾಡಲು ಭಾಷ್ಯ ಹಾಗೂ ಟೀಕೆಗಳಲ್ಲಿ ಸೂತ್ರಗಳಲ್ಲಿರುವ ವೈಲಕ್ಷಣ್ಯ ಶಬ್ದಕ್ಕೆ ೧. ಅಪೌರುಷೇಯತ್ವ, ೨. ಸಂವಾದಾನಪೇಕ್ಷತ್ವ ಎಂಬ ಎರಡು ಅರ್ಥಗಳನ್ನು ಹೇಳಿರುತ್ತಾರೆ.

**प्रामाण्यस्वतस्त्वापौरुषेयत्वादिसाधनप्रपञ्चस्त्वन्यत्र द्रष्टव्यः ।**

ಪ್ರಾಮಾಣ್ಯಸ್ವತಸ್ತ್ವವನ್ನು ಮತ್ತು ಅಪೌರುಷೇಯತ್ವವನ್ನು ತರ್ಕತಾಂಡವದಲ್ಲಿ ವಿವರವಾಗಿ ಸಮರ್ಥಿಸಲಾಗಿದೆ.

ನ ವಿಲಕ್ಷಣತ್ವಾಧಿಕರಣ (೨-೧-೨)

**अत्र चाद्यं सूत्रं अस्य श्रुत्यादेः । तथात्वं शैवादिस्मृतिवदप्रामाण्यम् न । श्रुतावपौरुषेयत्वादिरूपस्य श्रौतस्मृतौ च तदनुसारित्वरूपस्य वैलक्षण्यस्य सत्त्वात्। तथात्वं च वैलक्षण्यं च अपौरुषेयत्वरूपम् । ''वाचा विरूपनित्यय'' इत्यादिशब्दात्। संवादानपेक्षत्वरूपं तु ''न चक्षुर्न श्रोत्रम्'' इत्यादिश्रुतेरिति तथात्वमित्यस्योभयतः सम्बन्धं स्वीकृत्य भाष्यटीकाभ्यामेव योजितम् ।**

ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸಾಧುವಾಗಿದೆ. ಪ್ರಥಮಸೂತ್ರದ ವ್ಯಾಖ್ಯಾನ ಹೀಗಿದೆ - ಅಸ್ಯ = ಶ್ರುತ್ಯಾದಿಗಳಿಗೆ, ತಥಾತ್ವಂ = ಶೈವಾದಿಸ್ಮೃತಿಯಂತೆ ಅಪ್ರಾಮಾಣ್ಯವನ್ನು, ನ = ಹೇಳಬಾರದು. ಏಕೆಂದರೆ, ವಿಲಕ್ಷಣತ್ವಾತ್ = ಶ್ರುತಿಯಲ್ಲಿ ಅಪೌರುಷೇಯತ್ವ ಹಾಗೂ ಸಂವಾದಾನಪೇಕ್ಷತ್ವ ಎಂಬೆರಡು ಹೇತುಗಳಿರುವುದರಿಂದ, ಪಂಚರಾತ್ರಾದಿಸ್ಮೃತಿಗಳಲ್ಲಿ ಇಂತಹ ಅಪೌರುಷೇಯವಾದ ವೇದಾನುಸಾರಿತ್ವ ಇರುವುದರಿಂದ, ಶೈವಾದಿಸ್ಮೃತಿಗಳಿಗಿಂತಲೂ ವೈಲಕ್ಷಣ್ಯವಿದೆ. ತಥಾತ್ವಂ ಚ = ಅಪೌರುಷೇಯತ್ವ-ರೂಪವಾದ ವೈಲಕ್ಷಣ್ಯವು, ಶಬ್ದಾತ್ = ವಾಚಾ ವಿರೂಪ ನಿತ್ಯಯಾ ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಸಂವಾದಾನಪೇಕ್ಷತ್ವ ಎಂಬ ವೈಲಕ್ಷಣ್ಯವಾದರೂ 'ನ ಚಕ್ಷುರ್ನ ಶ್ರೋತ್ರಮ್' ಇತ್ಯಾದಿ ಶ್ರುತಿಯಿಂದ ಸಿದ್ಧವಾಗಿದೆ. (ಇವೆರಡು ಶ್ರುತಿಗಳು ಪರಮಾತ್ಮನನ್ನು ಯಾವುದೇ ಇಂದ್ರಿಯಗಳು ತಿಳಿಯುವುದಿಲ್ಲ ಎಂದು ಹೇಳಿವೆ. ಆದ್ದರಿಂದ ಸಂವಾದಪ್ರಮಾಣವನ್ನು ಹೇಳಲಾಗದು) ಸೂತ್ರದಲ್ಲಿರುವ 'ತಥಾತ್ವಂ' ಎಂಬ ಶಬ್ದಕ್ಕೆ ಎರಡು ಕಡೆ ಸಂಬಂಧವನ್ನು ತಿಳಿಯಬೇಕು. 'ನ ತಥಾತ್ವಂ' ಎಂಬ ಪ್ರತಿಜ್ಞಾವಾಕ್ಯದಲ್ಲಿ 'ತಥಾತ್ವಂ ಶಬ್ದಾತ್' ಎಂಬ ಹೇತುವಾಕ್ಯದಲ್ಲಿಯೂ ಸಂಬಂಧ ಹೊಂದುತ್ತದೆ. ಭಾಷ್ಯ ಹಾಗೂ ಟೀಕೆಗಳಲ್ಲಿ 'ತಥಾತ್ವಂ' ಎಂಬ ಶಬ್ದವನ್ನು ಹೀಗೆ ಎರಡು ಕಡೆ ಯೋಜನೆ ಮಾಡಿಕೊಂಡಿದ್ದಾರೆ.

**द्वितीयो निरस्तप्राय इति ।। प्रामाण्याग्रहणे शङ्काया आवश्यकत्वादिति शेषः।।**

ಟೀಕೆಯ ಕಠಿಣಪದಾರ್ಥ - ನಿಃಶಂಕಾಪ್ರವೃತ್ತಿ ಮಾಡಬೇಕಾದರೆ ಜ್ಯೋತಿಷ್ಟೋಮಾದಿ ವಾಕ್ಯಗಳಿಂದ ಯಾಗಾದಿಗಳು ಸ್ವರ್ಗಸಾಧನವೆಂದು ತಿಳಿದು ನಿಶ್ಶಂಕೆಯಿಂದ ಪ್ರವೃತ್ತಿ ಮಾಡಬೇಕಾದರೆ ಪ್ರಾಮಾಣ್ಯನಿಶ್ಚಯವಿರಬೇಕು. ಪ್ರಾಮಾಣ್ಯನಿಶ್ಚಯವಿಲ್ಲದಿದ್ದರೆ ನಿಶ್ಶಂಕಾಪ್ರವೃತ್ತಿಯು ಸರ್ವಥಾ ಕೂಡುವುದಿಲ್ಲ. ಶಂಕೆಯು ಬರುತ್ತದೆಂದೇ ಅವಶ್ಯವಾಗಿ ಒಪ್ಪಬೇಕು. ಇಷ್ಟು ವಿಷಯವನ್ನು 'ದ್ವಿತೀಯೋ ನಿರಸ್ತಪ್ರಾಯಃ' ಎಂಬ ಟೀಕಾಮಾತಿನಲ್ಲಿ ತಿಳಿಯಬೇಕು.

**बाधकवदिति ।। यथा बाधकस्य प्रामाण्यशङ्कानिरासाप्रामाण्यज्ञानयोर्व्यापारस्तथा संवादस्याप्रामाण्यशङ्कानिरासप्रामाण्यज्ञानयोर्व्यापारोऽस्त्वित्यर्थः ।।**

'ಬಾಧಕವತ್' ಎಂಬ ಟೀಕಾವಾಕ್ಯಕ್ಕೆ ಹೀಗರ್ಥ - ಬಾಧಕವು ಪ್ರಾಮಾಣ್ಯಶಂಕೆಯನ್ನು ನಿರಾಕರಿಸುತ್ತದೆ. ಮತ್ತು ಅಪ್ರಾಮಾಣ್ಯಜ್ಞಾನವನ್ನು ಹುಟ್ಟಿಸುವುದರಲ್ಲಿ ವ್ಯಾಪಾರವುಳ್ಳದ್ದಾಗಿದೆ. ಅದರಂತೆ ಸಂವಾದವೂ ಕೂಡ ಅಪ್ರಾಮಾಣ್ಯಶಂಕೆಯನ್ನು ನಿರಾಕರಿಸುತ್ತದೆ. ಮತ್ತು ಪ್ರಾಮಾಣ್ಯಜ್ಞಾನವನ್ನು ತಂದುಕೊಡುವುದರಲ್ಲಿ ವ್ಯಾಪಾರವುಳ್ಳದ್ದಾಗಿದೆ ಎಂದರ್ಥ.

**बाधकेन विनेति ।। यथा सुखादिज्ञाने संवादेन विना निवृत्ताप्रामाण्यशङ्कस्य प्रामाण्यबुद्ध्युदयोऽनुभूयते तथा क्वचिदपि बाधकेन विना निवृत्त प्रामाण्यशङ्कस्याप्रामाण्यबुद्ध्युदयो नानुभूयते । प्रत्युत तदनुदय एवानुभूयते । तेन संवादाभावेऽपि सुखादिज्ञाने प्रामाण्यज्ञप्त्या व्यतिरेकव्यभिचारान्न संवादस्य प्रामाण्यधीहेतुता । बाधकस्य त्वव्यभिचारादप्रामाण्यधीहेतुतेत्यर्थः ।।**

'ಬಾಧಕೇನ ವಿನಾ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - ನಮಗೆ ಬರುವಂತಹ ಸುಖಜ್ಞಾನದಲ್ಲಾಗಲೀ, ದುಃಖಜ್ಞಾನದಲ್ಲಾಗಲೀ, ಯಾರೊಬ್ಬರ ಸಂವಾದವೂ ಕೂಡ ಬೇಕಾಗುವುದಿಲ್ಲ. ಸಂವಾದವಿಲ್ಲದಿದ್ದರೂ ಅಪ್ರಾಮಾಣ್ಯಶಂಕೆಯು ಪರಿಹಾರವಾಗುತ್ತದೆ. ಪ್ರಾಮ್ಯಾಣ್ಯ-ಬುದ್ಧಿಯು ಉದಯವಾಗುತ್ತದೆ. ಅಪ್ರಾಮಾಣ್ಯಶಂಕೆಯ ನಿರಾಸಕ್ಕಾಗಲೀ ಪ್ರಾಮಾಣ್ಯಗ್ರಹಣಕ್ಕಾಗಲೀ ಸಂವಾದವು ಆವಶ್ಯಕವೇ ಅಲ್ಲ. ಒಂದು ವಾಕ್ಯದಿಂದ ತಿಳುವಳಿಕೆಯು ಪ್ರಾಪ್ತವಾದಾಗ ಅದರಲ್ಲಿ ಪ್ರಾಮಾಣ್ಯಶಂಕೆಯು ಪ್ರಾಪ್ತವಾಗುತ್ತದೆ. ಮತ್ತು ಅಪ್ರಾಮಾಣ್ಯಬುದ್ಧಿಯೂ ಕೂಡ ಬರುತ್ತದೆ. ಇವೆರಡು ಬಾಧಕಜ್ಞಾನವಿಲ್ಲದೇ ಬರುವುದಿಲ್ಲ. ಪ್ರಾಮಾಣ್ಯಶಂಕೆಯೂ ಬರುವುದಿಲ್ಲ. ಅಪ್ರಾಮಾಣ್ಯಬುದ್ಧಿಯೂ ಕೂಡ ಬರುವುದಿಲ್ಲವೆಂಬ ಅನುಭವವೇ ನಮಗೆ ಇರುತ್ತದೆ. ಆದ್ದರಿಂದ ಸಂವಾದವಿಲ್ಲದಿದ್ದರೂ ಸುಖಾದಿಜ್ಞಾನದಲ್ಲಿ ಪ್ರಾಮ್ಯಾಣ್ಯಜ್ಞಾನ ಬರುತ್ತಿರುವುದರಿಂದ ವ್ಯತಿರೇಕವ್ಯಭಿಚಾರ ಬರುತ್ತದೆ. 'ಯತ್ರ ಸಂವಾದಃ ತತ್ರ ಪ್ರಾಮಾಣ್ಯಗ್ರಹಣಂ ಯತ್ರ ಸಂವಾದಾಭಾವಃ ತತ್ರ ಪ್ರಾಮಾಣ್ಯಗ್ರಹಣಾಭಾವಃ' ಎಂಬ ಅನ್ವಯವ್ಯಾಪ್ತಿ, ಹಾಗೂ ವ್ಯತಿರೇಕವ್ಯಾಪ್ತಿಯಿಂದಷ್ಟೇ ಪ್ರಾಮಾಣ್ಯಗ್ರಹಣಕ್ಕೆ ಸಂವಾದವನ್ನು ಕಾರಣವನ್ನಾಗಿ ಹೇಳಬೇಕು. ಆದರೆ ಎಲ್ಲಿ ಸಂವಾದವಿರುವುದಿಲ್ಲವೋ, ಅಲ್ಲಿ ಪ್ರಾಮಾಣ್ಯಗ್ರಹಣವೂ ಇರುವುದಿಲ್ಲ ಎಂಬ ವ್ಯತಿರೇಕವ್ಯಾಪ್ತಿಗೆ ವ್ಯಭಿಚಾರ ಬರುತ್ತದೆ. ಸುಖಾದಿಗಳಲ್ಲಿ ಸಂವಾದವಿಲ್ಲದಿದ್ದರೂ ಪ್ರಾಮಾಣ್ಯಗ್ರಹಣವೇ ಉಂಟಾಗುತ್ತಿದೆ. ಆದ್ದರಿಂದ ಸಂವಾದವು ಪ್ರಾಮಾಣ್ಯಜ್ಞಾನಕ್ಕೆ ಕಾರಣವಲ್ಲವೆಂದು ಸಿದ್ಧವಾಯಿತು.

ಮತ್ತು ಬಾಧಕವು ಅಪ್ರಾಮಾಣ್ಯಜ್ಞಾನಕ್ಕೆ ಅವ್ಯಭಿಚರಿತವಾಗಿ ಕಾರಣವಾಗಿದೆ ಎಂಬುದೂ ಸಿದ್ಧವಾಯಿತು. 'ಯತ್ರ ಬಾಧಕಂ ತತ್ರ ಅಪ್ರಾಮಾಣ್ಯಗ್ರಹಣಂ, ಯತ್ರ ಬಾಧಕಾಭಾವಃ ತತ್ರ ಅಪ್ರಾಮಾಣ್ಯಗ್ರಹಣಾಭಾವಃ' ಈ ಅನ್ವಯವ್ಯಾಪ್ತಿ ಮತ್ತು ವ್ಯತಿರೇಕವ್ಯಾಪ್ತಿಗಳಿಗೆ ಯಾವುದೇ

ವ್ಯಭಿಚಾರವಿರುವುದಿಲ್ಲ. ಈ ಕಾರಣದಿಂದ ಪ್ರಾಮಾಣ್ಯವನ್ನು 'ಸ್ವತಃ' ಎಂದು ಅಪ್ರಾಮಾಣ್ಯವನ್ನು 'ಪರತಃ' ಎಂದು ಸಮರ್ಥಿಸಿದ್ದೇವೆ.

**अनुमानप्रामाण्येऽपि संशयदर्शनाच्चेति ।। बौद्धचार्वाकादिविप्रतिपत्त्याऽनुमान प्रामाण्येऽपि संशयदर्शनादित्यर्थः । यद्वा लिङ्गादिज्ञानप्रामाण्यसन्देहेन तज्जन्यानुमितिप्रामाण्येऽपि संशयदर्शनादित्यर्थः ।।**

'ಅನುಮಾನಪ್ರಾಮಾಣ್ಯೇऽಪಿ ಸಂಶಯದರ್ಶನಾಚ್ಚ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಅನುಮಾನಪ್ರಾಮಾಣ್ಯವನ್ನು ಸ್ವತಃ ಎಂದು ಹೇಳಬಾರದು. ಇದು ಅನುಭವವಿರುದ್ಧ. ಅನೇಕ ಕಡೆ ಸಂಶಯಬರುವುದೇ ಕಂಡಿದೆ. ಬೌದ್ಧ, ಚಾರ್ವಾಕ ಮೊದಲಾದವರ ಪ್ರಕಾರ ವಿಪ್ರತಿಪತ್ತಿಯಿಂದ ಅನುಮಾನಪ್ರಾಮಾಣ್ಯದಲ್ಲಿಯೂ ಸಂಶಯವು ಬರುತ್ತದೆ. ಬೌದ್ಧ ಚಾರ್ವಾಕಾದಿಗಳು ಅನುಮಾನಕ್ಕೆ ಪ್ರಾಮಾಣ್ಯವನ್ನೇ ಒಪ್ಪುವುದಿಲ್ಲ. ಆದ್ದರಿಂದ ಅನುಮಾನ-ಪ್ರಾಮಾಣ್ಯದಲ್ಲಿ ಸಂಶಯವುಂಟಾಗಬಹುದು.

ಅಥವಾ ಲಿಂಗಾದಿಜ್ಞಾನಪ್ರಾಮಾಣ್ಯಸಂದೇಹದಿಂದ ತಜ್ಜನ್ಯವಾದ ಅನುಮಿತಿ ಪ್ರಾಮಾಣ್ಯದಲ್ಲಿಯೂ ಸಂಶಯ ಬರುತ್ತದೆ. ಅನುಮಿತಿ ಎಂಬ ಫಲ ಹುಟ್ಟಬೇಕೆಂದರೆ ಲಿಂಗಜ್ಞಾನ, ಪಕ್ಷಧರ್ಮತಾಜ್ಞಾನ, ವ್ಯಾಪ್ತಿಜ್ಞಾನ ಇವುಗಳು ಕರಣಗಳು. ಎಲ್ಲವೂ ಕೂಡ ಜ್ಞಾನರೂಪವಾದರೆ ಲಿಂಗಾದಿಜ್ಞಾನಗಳಲ್ಲಿಯೂ ಪ್ರಾಮಾಣ್ಯಸಂದೇಹವು ಬರುತ್ತದೆ. ತಜ್ಜನ್ಯವಾದ ಅನುಮಿತಿಪ್ರಾಮಾಣ್ಯದಲ್ಲಿಯೂ ಸಂದೇಹವು ಉಂಟಾಗುತ್ತದೆ. ಅನುಮಿತಿಪಾಮಾಣ್ಯಸಂದೇಹದಲ್ಲಿ ಲಿಂಗಾದಿಜ್ಞಾನಸಂದೇಹವೇ ಕಾರಣವಾಗಿದೆ.

**आपादनमात्रस्य क्रियमाणत्वादिति ।। अन्यहेतुकस्याप्रामाण्यस्याभावं स्वीकृत्य विसंवादहेतुकाप्रामाण्यशङ्कामात्रस्य क्रियमाणत्वादित्यर्थः ।।**

'ಆಪಾದನಮಾತ್ರಸ್ಯ ಕ್ರಿಯಮಾಣತ್ವಾತ್' ಎಂಬ ಟೀಕಾ ಮಾತಿನ ಅಭಿಪ್ರಾಯ ಹೀಗಿದೆ - ವೇದದ ಅಪೌರುಷೇಯತ್ವವನ್ನೇ ಒಪ್ಪುವುದಿಲ್ಲವೆಂಬ ಆಶಂಕೆಗೆ 'ವಾಚಾ ವಿರೂಪನಿತ್ಯಯಾ' ಎಂಬ ಶ್ರುತಿಯಿಂದ ಅಪೌರುಷೇಯತ್ವವನ್ನು ಸಮರ್ಥಿಸಲಾಯಿತು. ಯಾರು ಶ್ರುತಿವಾಕ್ಯವನ್ನು ಪ್ರಮಾಣವೆಂದೇ ಒಪ್ಪುವುದಿಲ್ಲವೋ, ಅವರಿಗೆ ಇದು ಹೇಗೆ ಆಧಾರವಾಗುತ್ತದೆ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ಆಪಾದನಮಾತ್ರಸ್ಯ ಕ್ರಿಯಮಾಣತ್ವಾತ್' ಎಂದು ಉತ್ತರಿಸಿದ್ದಾರೆ. ಪೂರ್ವಪಕ್ಷಿಯು ವೇದಗಳಿಗೆ ಅಪ್ರಾಮಾಣ್ಯವನ್ನು ಆಪಾದನೆ ಮಾಡಿದ್ದಾನೆ ಹೊರತು, ಸಾಧನೆ ಮಾಡಿರುವುದಿಲ್ಲ. ಪೂರ್ವಪಕ್ಷಿಯೂ ಕೂಡ ವೇದಪ್ರಾಮಾಣ್ಯವಾದಿಯೇ ಆಗಿದ್ದಾನೆ ಎಂಬ ಧ್ವನಿಯು ಕಾಣಿಸುತ್ತದೆ. ಆದರೆ ಇದು ಸರಿಯಲ್ಲ. 'ಆಪಾದನಾ' ಎಂಬ ಶಬ್ದಕ್ಕೆ 'ಶಂಕಾ' ಎಂದರ್ಥ. ಪೂರ್ವಪಕ್ಷಿಯ ಶಂಕೆಯ ಪ್ರಕಾರ

ವೇದಪ್ರಾಮಾಣ್ಯದಲ್ಲಿ ಬೇರೆ ಹೇತುವನ್ನು ಅವರು ಹೇಳುತ್ತಿಲ್ಲ. ಬೇರೆ ಕಾರಣದಿಂದ ಅಪ್ರಾಮಾಣ್ಯವನ್ನು ಒಪ್ಪುತ್ತಿಲ್ಲ. ಹೊರತಾಗಿ, ವಿಸಂವಾದವೆಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಸಮರ್ಥಿಸುತ್ತಿದ್ದೇನೆ ಎಂದು ಹೇಳಿದ್ದಾನೆ. ಪ್ರಕೃತ 'ವಾಚಾ ವಿರೂಪ ನಿತ್ಯಯಾ'ಎಂಬ ವಾಕ್ಯದಲ್ಲಿ ಅಂತಹ ವಿಸಂವಾದ ಹೇತುವು ಇಲ್ಲದ ಕಾರಣ ಅಪೌರುಷೇಯತ್ವವನ್ನು ಸಾಧನೆ ಮಾಡಬಹುದು.'

**युक्तेश्चोपन्यस्तत्वादिति ।। देवताधिकरणभाष्येऽपौरुषेयत्वे युक्तेश्चोपन्यस्तत्वादित्यर्थः।।**

'ಯುಕ್ತೇಶ್ಚೋಪನ್ಯಸ್ತತ್ವಾತ್' ಎಂಬ ಟೀಕಾವಾಕ್ಯದ ಅರ್ಥವು ಹೀಗಿದೆ - ದೇವತಾಧಿಕರಣದ ಭಾಷ್ಯದಲ್ಲಿ ಅಪೌರುಷೇಯತ್ವ ವಿಷಯದಲ್ಲಿ ಯುಕ್ತಿಯನ್ನೂ ಕೂಡ ನಾವು ಆಧಾರವನ್ನಾಗಿ ಹೇಳಿದ್ದೇವೆ. ಆದ್ದರಿಂದ ಕೇವಲ ಶ್ರುತಿಯಷ್ಟೇ ಪ್ರಮಾಣವಲ್ಲ ಎಂದು ತಿಳಿಯಬೇಕು.

**अधिकारित्वं नामेति ।। कर्मवैगुण्यप्रतिबन्धादिशून्यत्वरूपं योग्यत्वमधिकारित्वमित्यर्थः ।। छ ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् न विलक्षणत्वाधिकरणम् सम्पूर्णम् ।।२।।**

'ಅಧಿಕಾರಿತ್ವಂ ನಾಮ' ಎಂಬ ಟೀಕೆಯ ಅರ್ಥ ಹೀಗಿದೆ - ಅಧಿಕಾರಿ ಎಂದರೆ ಕರ್ಮವೈಗುಣ್ಯವಿರಬಾರದು. ಯಾವುದೇ ಪ್ರತಿಬಂಧಕಗಳಿರಬಾರದು. ಯೋಗ್ಯನಾಗಿರಬೇಕು. ಅಂತಹವನೇ ಯಾಗಾಧಿಕಾರಿಯಾಗುತ್ತಾನೆ ಎಂದರ್ಥ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ನ ವಿಲಕ್ಷಣತ್ವಾಧಿಕರಣವು ಸಂಪೂರ್ಣವಾಯಿತು

**प्रकाशः —**

**''वेदस्य नित्यत्वं कुत इत्यत आह'' इत्यादिटीकां व्यनक्ति ।। नापीति ।।**

'ವೇದಸ್ಯ ನಿತ್ಯತ್ವಂ ಕುತ ಇತ್ಯತ ಆಹ' 'ವೇದವನ್ನು ನಿತ್ಯವೆಂದು ಏಕೆ ಒಪ್ಪಬೇಕು ?' ಇತ್ಯಾದಿ ಟೀಕೆಯನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – ''नच वाच्यं वेद प्रामाण्य'' इत्यादिशङ्कापरटीकातात्पर्यमाह – **नचेति ।।**

'ನಚ ವಾಚ್ಯಂ ವೇದಪ್ರಾಮಾಣ್ಯೇ' ವೇದವನ್ನು ಪ್ರಮಾಣವೆಂದು ಒಪ್ಪಬಾರದು. ಇತ್ಯಾದಿ ಆಶಂಕಾಪರವಾಗಿ ಟೀಕೆಯ ತಾತ್ಪರ್ಯಶನ್ನು 'ನಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – वाचा विरूपनित्ययेत्यादिश्रुतेः प्रामाण्ये सति तेन वेदनित्यत्वसिद्धिः। सिद्धे च तस्मिन्दोषरूपापवादकाभावेन स्वतः प्रामाण्यसिद्धिरित्यन्योन्याश्रय इत्यर्थः।

'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿಯಿಂದ ಪ್ರಾಮಾಣ್ಯವು ಸಿದ್ಧವಾದರೆ, ಅದರಿಂದ ವೇದನಿತ್ಯತ್ವವು ಸಿದ್ಧವಾಗುತ್ತದೆ. ವೇದನಿತ್ಯತ್ವವು ಸಿದ್ಧವಾದರೆ, ಯಾವುದೇ ದೋಷವಿಲ್ಲದ ಕಾರಣ ಅಪವಾದಕವನ್ನು ಹೇಳಲಾಗದು. ಆದ್ದರಿಂದ ಸ್ವತಃಪ್ರಾಮಾಣ್ಯವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವನ್ನು ತಿಳಿಯಬೇಕು.

**प्रकाशः** – ''परेणापि'' इत्यादिटीकाभिप्रायं सङ्गृह्य समाधिमाह – **विसंवादेति।।** श्लोकं व्याचष्टे ।। **अत्र हीति ।।**

'ಪರೇಣಾಪಿ' ಇತ್ಯಾದಿ ಟೀಕೆಯ ಅಭಿಪ್ರಾಯವನ್ನು ಸಂಗ್ರಹಿಸಿ, 'ವಿಸಂವಾದ' ಇತ್ಯಾದಿ ವಾಕ್ಯದಿಂದ ಸಮಾಧಾನವನ್ನು ನೀಡುತ್ತಿದ್ದಾರೆ. ಸ್ವತಃ ತಾವೇ ಶ್ಲೋಕವನ್ನು 'ಅತ್ರ ಹಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – सौत्रवैलक्षण्यपदस्य भाष्यादौ द्व्यर्थतोक्तेः कृत्यमाह – **अत एवेति।।** यद्वा सूत्रानभिमतं बाधमन्यथासिद्धत्वं चाप्रामाण्याद्यनुमितेर्बाध इति विसंवादस्त्वन्यथासिद्ध इति च कस्मादुपपादितमित्यत आह – **अत एवेति ।।**

ಸೂತ್ರದಲ್ಲಿರುವ ವೈಲಕ್ಷಣ್ಯಪದಕ್ಕೆ ಭಾಷ್ಯಾದಿಗಳಲ್ಲಿ ಎರಡು ಅರ್ಥಗಳನ್ನು ಹೇಳಿದ್ದಾರೆ. ಅದರ ಸಾರ್ಥಕ್ಯಚಿಂತೆಯನ್ನು 'ಅತ ಏವ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಮಾಡುತ್ತಿದ್ದಾರೆ.

ಅಥವಾ ಸೂತ್ರಕಾರರಿಗೆ ಅಭಿಪ್ರೇತವಲ್ಲದ 'ಬಾಧ' ಹಾಗೂ 'ಅನ್ಯಥಾಸಿದ್ಧಿ' ಎಂಬ ದೋಷಗಳನ್ನು ಅಪ್ರಾಮಾಣ್ಯವನ್ನು ಸಾಧಿಸುವ ಅನುಮಿತಿಗೆ ಬಾಧವನ್ನು ವಿಸಂವಾದವೆಂಬ ಹೇತುವಿಗೆ ಅನ್ಯಥಾಸಿದ್ಧಿಯನ್ನು ಹೇಗೆ ಹೇಳಿದಿರಿ ? ಎಂಬ ಪ್ರಶ್ನೆಗೆ 'ಅತ ಏವ' ಇತ್ಯಾದಿ ವಾಕ್ಯದಿಂದಲೇ ಉತ್ತರಿಸಿದ್ದಾರೆ.

**प्रकाशः** – द्वयोरत्राभिमतत्वादेवेत्यर्थः । अन्यत्र तर्कताण्डवे प्रथमपरिच्छेदे । तथा च स्वतः प्रामाण्यसमर्थनटीकातात्पर्यानुक्तिरत्र न दोष इति भावः ।

ಪರಿಪೂರ್ಣಚಂದ್ರಿಕಾ

'ಅತ ಏವ' ಎಂದರೆ ಬಾಧ ಹಾಗೂ ಅನ್ಯಥಾಸಿದ್ಧಿ ಎರಡೂ ದೋಷಗಳು ಸೂತ್ರಕಾರರಿಗೆ ಅಭಿಪ್ರೇತವಾದ್ದರಿಂದಲೇ ಎಂದು ಅರ್ಥ. 'ಅನ್ಯತ್ರ' ಎಂದರೆ ತರ್ಕತಾಂಡವದ ಪ್ರಥಮ ಪರಿಚ್ಛೇದದಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥಿಸಲಾಗಿದೆ ಎಂದರ್ಥ. ತರ್ಕತಾಂಡವದಲ್ಲಿ ಹೀಗೆ ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥನೆ ಮಾಡಿದ್ದರಿಂದಲೇ ಸ್ವತಃ ಪ್ರಾಮಾಣ್ಯವನ್ನು ಸಮರ್ಥಿಸುವ ಟೀಕೆಯ ತಾತ್ಪರ್ಯವನ್ನು ಇಲ್ಲಿ ಏಕೆ ಹೇಳಿರುವುದಿಲ್ಲ ? ಎಂಬ ಅನುಕ್ತದೋಷಕ್ಕೆ ಅವಕಾಶವಿರುವುದಿಲ್ಲ.

**प्रकाशः** – सूत्रार्थोक्तिपरटीकार्थं सूत्रारूढं दर्शयति – **अत्र चाद्यमिति** ।। **अपौरुषेयत्वादीति** ।। संवादिनिरपेक्षत्वमादिपदार्थः ।।

ಸೂತ್ರಾರ್ಥವನ್ನು ಸಮರ್ಥಿಸುವ ಟೀಕಾವಾಕ್ಯಗಳನ್ನು ವ್ಯಾಖ್ಯಾನಿಸುತ್ತಾ ಸೂತ್ರಾರೂಢ ಮಾಡುತ್ತಿದ್ದಾರೆ 'ಅತ್ರ ಚಾದ್ಯಮ್' ಇತ್ಯಾದಿ ಗ್ರಂಥದಿಂದ 'ಅಪೌರುಷೇಯತ್ವಾದಿ' ಎಂಬಲ್ಲಿರುವ ಆದಿಪದದಿಂದ ಸಂವಾದನಿರಪೇಕ್ಷತ್ವ ಎಂಬ ಧರ್ಮವನ್ನು ವಿವಕ್ಷಿಸಬೇಕು.

**प्रकाशः** – **न चक्षुरिति** ।। चक्षुरादीनां परमात्माप्रमापकत्वमुक्त्वा वेदस्यैव तत्प्रमापकत्वोक्तेरिति भावः ।

ಚಕ್ಷುರಾದಿ ಇಂದ್ರಿಯಗಳು ಪರಮಾತ್ಮನಿಗೆ ಪ್ರಮಾಪಕವಲ್ಲ ಎಂದು ಹೇಳಿ, ವೇದವೇ ಪರಮಾತ್ಮ ಪ್ರಮಾತ್ಮಕವಾಗಿವೆ ಎಂದು ತಿಳಿಸಿದ್ದಾರೆ.

**प्रकाशः** – उपन्यासेनास्पष्टीकृतानि कानिचिद्वाक्यानि व्यनक्ति ।। **द्वितीय इत्यादिना** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे न विलक्षणत्वाधिकरणम् सम्पूर्णम् ।।२।।**

ಉಪನ್ಯಾಸಮುಖದಿಂದ ಅಸ್ಪಷ್ಟವಾದ ಕೆಲವು ಟೀಕೆಯ ಕಠಿಣಪದಾರ್ಥಗಳನ್ನು 'ದ್ವಿತೀಯಃ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ನ ವಿಲಕ್ಷಣತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ವೇದವು ಅಪೌರುಷೇಯವೇ ಅಲ್ಲವೆಂದು ಹೇಳಲಾಗದು. ಏಕೆಂದರೆ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯು ವೇದವು ನಿತ್ಯವಾಗಿದೆ ಮತ್ತು ಪ್ರಮಾಣವಾಗಿದೆ ಎಂದು ಸಮರ್ಥನೆ ಮಾಡುತ್ತಿದೆ. ಹಾಗಾದರೆ ವೇದಪ್ರಾಮಾಣ್ಯಸಿದ್ಧವಾದರೆ ತದಂತರ್ಗತವಾದ 'ವಾಚಾ ವಿರೂಪ ನಿತ್ಯಯಾ' ಎಂಬ ವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಈ ವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ಮಾತ್ರ, ಸಮಗ್ರವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆಂಬ ಅನ್ಯೋನ್ಯಾಶ್ರಯದೋಷ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

ವಿಸಂವಾದವಿಹೀನೇನ ಶ್ರುತಿವಾಕ್ಯೇನ ಸಾಧಿತಾ ।
ನಿತ್ಯತಾ ಸರ್ವವೇದಾನಾಂ ವಿಸಂವಾದಂ ಧುನೋತಿ ಹಿ ॥೧॥

ವಿಸಂವಾದವಿಲ್ಲದ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿವಾಕ್ಯದಿಂದ ಸಕಲ ವೇದಕ್ಕೆ ನಿತ್ಯತ್ವವು ಸಿದ್ಧವಾಗುತ್ತದೆ. ಆದರಿಂದಲೇ ಸಕಲ ವೇದಗಳಲ್ಲಿ ವಿಸಂವಾದವಿಲ್ಲವೆಂಬುದೂ ಕೂಡ ನಿಶ್ಚಯವಾಗುತ್ತದೆ.

'ವೇದಃ ಅಪ್ರಮಾಣಂ ಫಲವಿಸಂವಾದಿತ್ವಾತ್' ಎಂದು ಪೂರ್ವಪಕ್ಷಿಯು ಅನುಮಾನ ಮಾಡಿದ್ದನು. ಈ ಅನುಮಿತಿಗೆ ಬಾಧದೋಷವನ್ನು 'ಫಲವಿಸಂವಾದಿತ್ವ' ಎಂಬ ಹೇತುವಿಗೆ ಅನ್ಯಥಾಸಿದ್ಧಿದೋಷವನ್ನು ಗ್ರಂಥಕಾರರು ಇಲ್ಲಿ ಸಮರ್ಥಿಸಿದ್ದಾರೆ. ಹೀಗೆ ಪೂರ್ವಪಕ್ಷಿಗೆ ವೇದದಲ್ಲಿ ಅಪ್ರಾಮಾಣ್ಯವನ್ನು ಸಮರ್ಥನೆ ಮಾಡಲು ಸಾಧ್ಯವೇ ಇಲ್ಲ.

* * * *

# ಅಭಿಮಾನ್ಯಧಿಕರಣ

(೨-೧-೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅಭಿಮಾನ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अभिमानिव्यपदेशस्तु विशेषानुगतिभ्याम् ।।**

'ಮಣ್ಣುಮಾತನಾಡಿತು' ಮೊದಲಾದ ವೇದ ವಾಕ್ಯಗಳು ಯುಕ್ತಿಗೆ ವಿರುದ್ಧವಾಗಿದೆಯೆಂದು ಪ್ರಶ್ನಿಸಬಾರದು. ಸೂತ್ರದೀಪಿಕಾ.

ಅಂತಹ ವಾಕ್ಯಗಳಲ್ಲಿ ಅಭಿಮಾನಿ ದೇವತೆಗಳೇ ಪ್ರತಿಪಾದ್ಯರಾಗಿದ್ದಾರೆ. ಹೊರತು ಜಡವಸ್ತುಗಳಲ್ಲ. ಅಭಿಮಾನಿ ದೇವತೆಗಳು ಬೇರೆ ಚೇತನರಿಗಿಂತಲೂ ವಿಶಿಷ್ಟವಾದ ಅಂತರ್ಧಾನಶಕ್ತಿಯನ್ನೂ ಸರ್ವತ್ರ ವ್ಯಾಪ್ತಿಯನ್ನೂ ಹೊಂದಿದ್ದಾರೆ. ಆದ್ದರಿಂದ ವೇದವಾಕ್ಯಗಳಲ್ಲಿ ಹೇಳಿದ ವಿಷಯಗಳೆಲ್ಲವೂ ಯುಕ್ತಿಯುಕ್ತವೇ ಆಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – अभिमानिव्यपदेशस्तु विशेषानुगतिभ्याम् ।।** तुशब्दोऽवधारणे। **अभिमानिव्यपदेशः** मृदब्रवीदित्यादौ अभिमानिनश्चेतनस्यैव व्यपदेशः उक्तिः न त्वचेतनस्य । कुतः? मृन्न वक्त्री जडत्वादिति युक्तिविरुद्धत्वात् । तथा च

न वेदाप्रामाण्यम् । नन्वभिमानिनः विदेहत्वायोगेन सदेहत्वे तस्यादर्शनम् अन्यवस्त्वधिष्ठानेन वक्तृत्वम् अनेकाभिमन्यमानाधिष्ठातृत्वं चेत्यादिकं कथं युज्यत इत्यत उक्तम् — **विशेषेत्यादि । विशेषः सामर्थ्यम् । अनुगतिः** सर्वाभिमन्यमानव्याप्तिः । ताभ्यां सर्वं युज्यत इत्यर्थः ।।१।।

'ತು' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ಅಭಿಮಾನಿವ್ಯಪದೇಶಃ = 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಲ್ಲಿ ಅಭಿಮಾನಿಯಾದ ಚೇತನರೇ ಪ್ರತಿಪಾದ್ಯರಾಗಿದ್ದಾರೆ ಹೊರತು ಜಡವಾದ ಮಣ್ಣು ಮೊದಲಾದವು ಅಲ್ಲ. ಏಕೆಂದರೆ 'ಮೃತ್ ನ ವಕ್ತ್ರೀ ಜಡತ್ವಾತ್' ಜಡವಾದ್ದರಿಂದ ಮಣ್ಣು ಮಾತನಾಡುವುದಿಲ್ಲ ಇತ್ಯಾದಿ ಯುಕ್ತಿಗಳ ವಿರೋಧವು ಬರುತ್ತದೆ.

ಅಭಿಮಾನಿ ದೇವತೆಗಳು ದೇಹವಿಲ್ಲದೆ ಇರಲಾರರು. ದೇಹವುಳ್ಳವರಾದರೆ ಅವರೇಕೆ ಕಾಣಿಸುವುದಿಲ್ಲ? ಮತ್ತು ಜಡಪದಾರ್ಥದಲ್ಲಿ ಅಧಿಷ್ಠಿತರಾಗಿ ಮಾತನಾಡಲು ಹೇಗೆ ಸಮರ್ಥರಾಗುತ್ತಾರೆ? ಜಡಪದಾರ್ಥಗಳು ಬಹಳಷ್ಟು ಇರುವುದರಿಂದ ಅವುಗಳಲ್ಲೆಲ್ಲಾ ಒಬ್ಬರೇ ಇರಲು ಹೇಗೆ ಸಾಧ್ಯ ? ಹೀಗೆ ಪ್ರಶ್ನಿಸಬಾರದು. ಏಕೆಂದರೆ 'ವಿಶೇಷಾನುಗತಿಭ್ಯಾಂ' ಅಭಿಮಾನಿದೇವತೆಗಳಿಗೆ ಸಕಲ ಪದಾರ್ಥಗಳಲ್ಲಿ ನೆಲೆಸಿರುವಿಕೆಯೆಂಬ ಅಂತಹ ಸಾಮರ್ಥ್ಯವು ಯುಕ್ತವಾಗುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — ।। 'मृदब्रवीत्' (श.ब्रा.६.१.३) 'आपोऽब्रुवन्' (श.ब्रा.६.१.३) इत्यादिवचनाद् युक्तिविरुद्धो वेद इति ।**

ಅನುವಾದ - ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕರ್ತೃತ್ವ ಪ್ರತಿಪಾದಕ ವೇದಕ್ಕೆ ದೃಢವಾದ ಯುಕ್ತಿವಿರೋಧವನ್ನು ಹೇಳುವ ಮೂಲಕ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡಿ ಪರಿಹರಿಸಲಾಗಿದೆ. ಪೂರ್ವಪಕ್ಷವನ್ನು 'ಮೃದಬ್ರವೀತ್' ಇತ್ಯಾದಿ ಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

ಪ್ರತಿಪದಾರ್ಥ -- ಮೃದಬ್ರವೀತ್ = ಮಣ್ಣು ಮಾತನಾಡಿತು, ಆಪೋऽಬ್ರುವನ್= ನೀರುಗಳು ಮಾತನಾಡಿದವು. ಇತ್ಯಾದಿವಚನಾದ್ = ಇವೇ ಮೊದಲಾದ ಮಾತುಗಳಿಂದ, ವೇದ = ಶ್ರುತಿಯು, ಯುಕ್ತಿವಿರುದ್ಧಃ = ಯುಕ್ತಿಯಿಂದ ವಿರುದ್ಧವಾಗುತ್ತದೆ. ಆದ್ದರಿಂದ ಅಪ್ರಮಾಣವಾಗಿದೆ.

ಅಭಿಮಾನ್ಯಧಿಕರಣ (೨-೧-೩)

भाष्यम् — अतोऽब्रवीत् —

।। अभिमानिव्यपदेशस्तु विशेषानुगतिभ्याम् ।।१।।

मृदाद्यभिमानिदेवता तत्र व्यपदिश्यते ।

ಅನುವಾದ - ಈ ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಎಂದು ಉತ್ತರಿಸುತ್ತಿದ್ದಾರೆ. 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳು ಜಡಪದಾರ್ಥಕ್ಕೆ ವಚನಕ್ರಿಯೆಯನ್ನು ಹೇಳುತ್ತಿಲ್ಲ. ಜಡಪದಾರ್ಥದಲ್ಲಿರುವ ಅಭಿಮಾನಿಗಳಾದ ದೇವತೆಗಳನ್ನು ಪ್ರತಿಪಾದನೆ ಮಾಡುತ್ತಿವೆ.

ಪ್ರತಿಪದಾರ್ಥ -- ಅತೋಽಬ್ರವೀತ್ = ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ತತ್ರ = ಪ್ರತ್ಯಕ್ಷವಿರುದ್ಧವಾದ ಸ್ಥಳದಲ್ಲಿ, ಮೃದಾದ್ಯಭಿಮಾನಿದೇವತಾ = ಮಣ್ಣು ಮೊದಲಾದ ಭೂತಪದಾರ್ಥಗಳ ಅಭಿಮಾನಿದೇವತೆಗಳು, ವ್ಯಪದಿಶ್ಯತೇ = ಪ್ರತಿಪಾದ್ಯರಾಗಿದ್ದಾರೆ.

भाष्यम् — तासां चेतरेभ्यो विशिष्टं सामर्थ्यमनुगतिश्च सर्वत्र । अतस्तासां सर्वमुक्तं युज्यते ।।१।।

ಅನುವಾದ - ಅಭಿಮಾನಿದೇವತೆಗಳಿಗೆ ಬೇರೆ ಚೇತನಾದಿಗಳಿಗಿಂತ ವಿಶಿಷ್ಟವಾದ ಸಾಮರ್ಥ್ಯವಿದೆ. ಅಂತರ್ಧಾನ ಶಕ್ತಿ ಹಾಗೂ ಎಲ್ಲೆಡೆ ಇರುವಿಕೆ ಎಂಬ ಸಾಮರ್ಥ್ಯವಿರುವುದರಿಂದ ವೇದವಾಕ್ಯಗಳಲ್ಲಿ ಹೇಳಿದ ವಿಷಯವು ಯುಕ್ತಿ ಯುಕ್ತವೇ ಆಗಿದೆ.

ಆದರೂ ಕೂಡ ಅಭಿಮಾನಿದೇವತೆಗಳನ್ನು ಒಪ್ಪುವುದು ಕಷ್ಟ. ಏಕೆಂದರೆ ಅವರಿಗೆ ದೇಹವಿಲ್ಲವೆಂದು ಹೇಳಿದರೆ ವಚನಕರ್ತೃತ್ವವನ್ನು ನಿರಾಕರಣೆ ಮಾಡಿದಂತಾಗುತ್ತದೆ. ದೇಹವನ್ನು ಒಪ್ಪಿದರೆ ಅಭಿಮನ್ಯವಾದ ಸಕಲ ಪದಾರ್ಥಗಳಲ್ಲಿ ಇದ್ದಾರೆಂದು ಹೇಳಬೇಕು. ಆವಾಗ ಪ್ರತಿಯೊಬ್ಬರಿಗೂ ಅವರ ದರ್ಶನವಾಗಬೇಕಾಗುತ್ತದೆ. ಕೆಲವು ಅಭಿಮನ್ಯಮಾನವಾದ ವಸ್ತುಗಳಲ್ಲಿ ಇದ್ದಾರೆಂದು ಹೇಳಿದರೆ ಎಲ್ಲಿ ಇರುವುದಿಲ್ಲವೋ ಆ ಸ್ಥಳದಲ್ಲಿ ಅವರು ಇಲ್ಲದಿದ್ದರೂ ಯುಕ್ತವಾಗುವುದರಿಂದ ವೈಯರ್ಥ್ಯದೋಷ ಬರುತ್ತದೆ ಹೀಗೆ ಯುಕ್ತಿವಿರುದ್ಧವಾದ್ದರಿಂದ ಅಭಿಮಾನಿದೇವತೆಗಳನ್ನು ಒಪ್ಪದಿರುವುದೇ ಲೇಸು. ಈ ಆಕ್ಷೇಪಕ್ಕೆ 'ವಿಶೇಷಾನುಗತಿಭ್ಯಾಂ' ಎಂಬ ಸೂತ್ರಭಾಗವು ಉತ್ತರವನ್ನು ನೀಡುತ್ತಿದೆ. ಅದನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ತಾಸಾಂ ಚ = ತತ್ತ್ವಾಭಿಮಾನಿದೇವತೆಗಳಿಗೆ, ಇತರೇಭ್ಯಃ = ಸಾಮಾನ್ಯದೇವತೆಗಳಿಗಿಂತ, ವಿಶಿಷ್ಟಂ ಸಾಮರ್ಥ್ಯಮ್ = ಹೆಚ್ಚಿನ ಸಾಮಾರ್ಥ್ಯವು, ಸರ್ವತ್ರ = ಎಲ್ಲೆಡೆಯು, ಅನುಗತಿಶ್ಚ = ಇರುವಿಕೆಯೂ ಕೂಡ ಯುಕ್ತವಾಗುತ್ತದೆ. ಅತಃ = ಈ ವೈಶಿಷ್ಟ್ಯ ಇರುವುದರಿಂದ, ತಾಸಾಂ = ಆ ತತ್ತ್ವಾಭಿಮಾನಿದೇವತೆಗಳಿಗೆ, ಉಕ್ತಂ ಸರ್ವಂ = ಹಿಂದೆ ಹೇಳಿದ್ದೆಲ್ಲವೂ, ಯುಜ್ಯತೇ = ಯುಕ್ತಿಯುಕ್ತವಾಗುತ್ತದೆ.

## ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र पुनर्विष्णोः, सर्वकर्तृत्वादिप्रतिपादकवेदप्रामाण्ये युक्तिविरोधपरिहारादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ ಮಹಾವಿಷ್ಣು ಕರ್ತೃವಾಗಿದ್ದಾನೆ ಎಂದು ಪ್ರತಿಪಾದನೆ ಮಾಡುವ ವೇದಗಳಿಗೆ ಯುಕ್ತಿವಿರೋಧದ ಮೂಲಕ ಅಪ್ರಾಮಾಣ್ಯವನ್ನು ಆಶಂಕಿಸಿದರೆ ಅದನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

**तत्वप्रकाशिका – वेदप्रामाण्यत् सर्वकारणत्वं विष्णोरित्युक्तम् । तत्प्रामाण्यस्य च युक्तिविरोधे न विष्णोर्जगत्कारणत्वं सिध्यतीत्यतोऽसौ परिहार्य एव ।**

ಸಕಲವೇದಗಳು ಪ್ರಮಾಣವಾಗಿರುವುದರಿಂದ ಮಹಾವಿಷ್ಣುವೇ ಸಕಲಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಈ ಹಿಂದೆ ಸಮರ್ಥಿಸಲಾಯಿತು. ಇಂಥ ವೇದಪ್ರಾಮಾಣ್ಯವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – स वेदो विषयः । प्रमाणं न वेति सन्देहः । पूर्वोक्तमेवात्र सन्देहबीजम् । पूर्वपक्षयति – मृदिति ।**

ಈ ಅಧಿಕರಣದಲ್ಲಿ ಆಪಾತತಃ ಯುಕ್ತಿವಿರೋಧವಿರುವ ವೇದವಾಕ್ಯಗಳು ವಿಷಯವಾಗಿವೆ. ಅಂಥ ವೇದವಾಕ್ಯಗಳು ಪ್ರಮಾಣವೋ ಅಲ್ಲವೊ ? ಎಂಬುದೇ ಸಂದೇಹ. ಕೆಲವು ವೇದವಾಕ್ಯಗಳು

ಫಲಸಂವಾದವಿಲ್ಲದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಇನ್ನು ಕೆಲವು ವಾಕ್ಯಗಳು ಫಲಸಂವಾದಿಯಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಇದು ಸಂದೇಹಕ್ಕೆ ಬೀಜ. ಪೂರ್ವಪಕ್ಷವನ್ನು 'ಮೃದಬ್ರವೀತ್' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

**तत्वप्रकाशिका – न वेदः प्रमाणम् । 'मृदब्रवीत्' 'आपोऽपब्रुवन्', 'ता आप ऐक्षन्त' 'तत्तेज ऐक्षत' 'ओषधयः संवदन्ते' इत्यादिना मृदादीनां वचनदर्शनाद्यभिधायकत्वात् ।**

ವೇದವು ಪ್ರಮಾಣವಲ್ಲ. ಏಕೆಂದರೆ 'ಮೃದಬ್ರವೀತ್' 'ಆಪೋ ಅಬ್ರುವನ್' 'ತಾ ಆಪ ಐಕ್ಷಂತ' 'ತತ್‌ತೇಜ ಐಕ್ಷತ' 'ಓಷಧಯಃ ಸಂವದಂತೇ' ಇವೇ ಮೊದಲಾದ ಶ್ರುತಿವಾಕ್ಯಗಳು ಜಡಪದಾರ್ಥಗಳಾದ ಮಣ್ಣು ನೀರು ಮೊದಲಾದವುಗಳಲ್ಲಿಯೂ 'ಮಾತನಾಡುವಿಕೆ' 'ನೋಡುವಿಕೆ' ಮೊದಲಾದ ಕ್ರಿಯೆಗಳನ್ನು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಇವುಗಳಿಗೆ ಅಪ್ರಾಮಾಣ್ಯವನ್ನು ಒಪ್ಪಬೇಕು.

**तत्वप्रकाशिका – तथात्वेऽपि कुतोऽप्रामाण्यम् । मृन्न वक्त्री जडत्वादित्यादियुक्तिविरुद्धत्वेन मृदादिवचनादेरसत्त्वात् । असदभिधायकत्वमेवाप्रामाण्यम् ।**

ಜಡಪದಾರ್ಥಗಳಿಗೆ ದರ್ಶನಾದಿಕ್ರಿಯೆಗಳನ್ನು ಪ್ರತಿಪಾದನೆ ಮಾಡಿದ ಮಾತ್ರಕ್ಕೆ ಶ್ರುತಿಯು ಏಕೆ ಅಪ್ರಮಾಣವಾಗಬೇಕು ಎಂದು ಪ್ರಶ್ನಿಸಬಾರದು. 'ಮೃತ್ ನ ವದತಿ ಜಡತ್ವಾತ್' ಜಡವಾದ್ದರಿಂದ ಮಣ್ಣು ಮಾತನಾಡುವುದಿಲ್ಲ, ಇವೇ ಮೊದಲಾದ ಯುಕ್ತಿಯ ವಿರೋಧ ಇರುವುದರಿಂದ ಅಂಥ ವಾಕ್ಯಗಳು ಅಪ್ರಮಾಣವಾಗಲೇ ಬೇಕು. ಮಣ್ಣು ಮೊದಲಾದ ಜಡಪದಾರ್ಥಗಳಲ್ಲಿ ವಚನಕ್ರಿಯಾದಿಗಳು ಇರಲು ಸಾಧ್ಯವೇ ಇಲ್ಲ. ಇಲ್ಲದ ವಿಷಯವನ್ನು ಪ್ರತಿಪಾದನೆ ಮಾಡುವ ವೇದವಾಕ್ಯಗಳು ಅಪ್ರಾಮಾಣ್ಯವನ್ನು ಹೊಂದುತ್ತವೆ.

**तत्वप्रकाशिका – एव च युक्तिविरुद्धार्थत्वेन वेदैकदेशस्याप्रामाण्येऽन्यस्याप्यप्रामाण्यमिति न विष्णोस्तेन जगत्कारणत्वसिद्धिरिति भावः ।**

ಆದ್ದರಿಂದ ಯುಕ್ತಿವಿರುದ್ಧವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ 'ಮೃದಬ್ರವೀತ್' ಇತ್ಯಾದಿ ವೇದದ ಕೆಲವು ವಾಕ್ಯಗಳು ಅಪ್ರಮಾಣವಾಗುತ್ತವೆ ಎಂದು ಸಾಧಿಸಬಹುದು. ಆದ್ದರಿಂದ ವಿಷ್ಣುವಿಗೆ ಸರ್ವಕರ್ತೃತ್ವವನ್ನು ಪ್ರತಿಪಾದಿಸುವ 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿ ವೇದವಾಕ್ಯಗಳೂ ಕೂಡ ಅಪ್ರಮಾಣವಾಗುತ್ತವೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – ननु मृदादिवचनाद्यभिधायकवाक्यस्य प्रत्यक्षविरोध एव प्रथमं स्फुरत्यतो न पादसङ्गतिः ।**

ಪ್ರಶ್ನೆ - 'ಮಣ್ಣು ಮಾತನಾಡುತ್ತದೆ' 'ನೀರು ನೋಡುತ್ತದೆ' ಇತ್ಯಾದಿಯಾಗಿ ಹೇಳುವ ಶ್ರುತಿವಾಕ್ಯಗಳಿಗೆ ಪ್ರತ್ಯಕ್ಷವಿರೋಧವೇ ಮೊಟ್ಟಮೊದಲು ಉಪಸ್ಥಿತವಾಗುತ್ತದೆ. ಹೀಗಿರುವಾಗ ಯುಕ್ತಿವಿರೋಧವನ್ನು ಪರಿಹರಿಸುವ ಈ ಪಾದದಲ್ಲಿ ಅಭಿಮಾನ್ಯಧಿಕರಣಕ್ಕೆ ಹೇಗೆ ಸಂಗತಿಯು ಕೂಡುತ್ತದೆ ?

**तत्वप्रकाशिका – मैवम् । आदिसृष्टावेवपृथिव्यादीनां तदभिधानात् । तदानीन्तनवचनाद्यभावस्यास्मदाद्यप्रत्यक्षत्वेन युक्तेरेवाश्रयणीयत्वात् ।**

ಉತ್ತರ - ಈ ಆಕ್ಷೇಪ ಸರಿಯಲ್ಲ. ಏಕೆಂದರೆ 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳಲ್ಲಿ ಸೃಷ್ಟಿಯ ಪ್ರಾರಂಭದ ಪೃಥಿವ್ಯಾದಿಗಳನ್ನು ವಿವಕ್ಷಿಸಿ ವಚನಕ್ರಿಯೆಯನ್ನು ಹೇಳಲಾಗಿದೆ. ಸೃಷ್ಟಿಯ ಪ್ರಾರಂಭದ ಪೃಥಿವ್ಯಾದಿಗಳು ನಮ್ಮ ಪ್ರತ್ಯಕ್ಷದಿಂದ ಸಿದ್ಧವಾಗಿಲ್ಲ. ಹೀಗಿರುವಾಗ ಪ್ರತ್ಯಕ್ಷವಿರೋಧವನ್ನು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಯುಕ್ತಿವಿರೋಧವನ್ನೇ ಆಶ್ರಯಿಸಬೇಕು. ವೇದವಾಕ್ಯಗಳಿಗೆ ಹೀಗೆ ಯುಕ್ತಿವಿರೋಧವೇ ಸ್ಪಷ್ಟವಾಗಿರುವುದರಿಂದ ಯುಕ್ತಿವಿರೋಧವನ್ನು ಪರಿಹರಿಸುವ ಈ ಪಾದದಲ್ಲಿ ಅಭಿಮಾನ್ಯಧಿಕರಣವು ಸಂಗತವಾಗುತ್ತದೆ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। तुशब्दोऽवधारणे ।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ಅಥ' ಇತ್ಯಾದಿ ಭಾಷ್ಯದ ಮಾತು ಹೊರಟಿದೆ. 'ತು' ಶಬ್ದವು ಅವಧಾರಣಾರ್ಥದಲ್ಲಿದೆ.

**तत्वप्रकाशिका – भवेदेतदुक्तं यद्यत्र मृदाद्येवोच्यते नैतदस्ति । मृदाद्यभिमानिनीनां देवतानामेव तत्र व्यपदेशादित्यर्थः ।**

ಒಂದುವೇಳೆ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳು ಜಡಪದಾರ್ಥಗಳಿಗೆ ವಚನಾದಿಗಳನ್ನು ಹೇಳಿದ್ದಲ್ಲಿ ಅಪ್ರಾಮಾಣ್ಯವು ಬರುತ್ತಿತ್ತು. ಆದರೆ ಜಡಪದಾರ್ಥಗಳಿಗೆ ವಚನಾದಿಕ್ರಿಯೆಗಳನ್ನು ಹೇಳುವುದರಲ್ಲಿ ಶ್ರುತಿಗೆ ಅಭಿಪ್ರಾಯವಿಲ್ಲ. ಹೊರತು ಮಣ್ಣು, ನೀರು ಮೊದಲಾದ ಜಡಪದಾರ್ಥಗಳಲ್ಲಿ ಯಾವ ಅಭಿಮಾನಿದೇವತೆಗಳು ನೆಲೆಸಿದ್ದಾರೊ ಅಂಥ ದೇವತೆಗಳು

ಮಾತನಾಡಿದರು, ನೋಡಿದರು ಎಂದು ಶ್ರುತಿ ಪ್ರತಿಪಾದನೆ ಮಾಡುತ್ತಿದೆ. ಚೇತನರಾದ ದೇವತೆಗಳಲ್ಲಿ ವಚನಾದಿಕ್ರಿಯೆಗಳು ಯುಕ್ತವಾಗುತ್ತವೆ.

**ತತ್ವಪ್ರಕಾಶಿಕಾ – स्यान्मतम् । श्रुतियुक्त्योः श्रुतेरेव प्राबल्यात् तद्विरुद्ध-युक्तेवाप्रामाण्यं वक्तव्यं किं युक्तिविरोधपरिहाराय श्रुतेरन्यार्थकल्पनया ।**

ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡುತ್ತಿರುವುದೇ ತಪ್ಪು. ಏಕೆಂದರೆ ಶ್ರುತಿ ಮತ್ತು ಯುಕ್ತಿಗಳಲ್ಲಿ ಪರಸ್ಪರ ವಿರೋಧ ಬಂದಾಗ ಶ್ರುತಿಯು ಅಪೌರುಷೇಯವಾದ್ದರಿಂದ ಪ್ರಬಲವಾಗಿದೆ. ಅದರ ವಿರೋಧವನ್ನು ಯುಕ್ತಿಗೆ ಹೇಳಬೇಕೆ ಹೊರತು ದುರ್ಬಲವಾದ ಯುಕ್ತಿಯ ವಿರೋಧವನ್ನು ಶ್ರುತಿಗೆ ಹೇಳಬಾರದು. ಯುಕ್ತಿವಿರೋಧದಿಂದ ಶ್ರುತಿಗೆ ಅನ್ಯಾರ್ಥವನ್ನು ಏಕೆ ಕಲ್ಪಿಸುತ್ತಿದ್ದೀರಿ ?

**ತತ್ವಪ್ರಕಾಶಿಕಾ – न चोपजीव्यप्रत्यक्षविरोध इत्युक्तमिति ।**

ವೇದವಾಕ್ಯಗಳಿಗೆ ಉಪಜೀವ್ಯವಾದ ಪ್ರತ್ಯಕ್ಷವಿರೋಧ ಬಂದಾಗ ಅನ್ಯಾರ್ಥವನ್ನು ಕಲ್ಪಿಸುವುದು ಕಂಡಿದೆ. ಆದರೆ 'ಮೃದಬ್ರವೀತ್' ಇತ್ಯಾದಿ ಸ್ಥಳದಲ್ಲಿ ಪ್ರತ್ಯಕ್ಷವಿರೋಧಕ್ಕೆ ಅವಕಾಶವೇ ಇಲ್ಲ ಎಂದು ಈ ಹಿಂದೆಯೇ ನಿರೂಪಣೆ ಮಾಡಿದ್ದಾಗಿದೆ. ಆದ್ದರಿಂದ ಅಭಿಮಾನಿದೇವತಾಪರವಾಗಿ ಈ ವಾಕ್ಯಗಳನ್ನು ಏಕೆ ವ್ಯಾಖ್ಯಾನ ಮಾಡುತ್ತಿದ್ದೀರಿ ?

**ತತ್ವಪ್ರಕಾಶಿಕಾ – मैवम् । अन्यार्थकल्पने मुख्यार्थलाभात् ।**

ಉತ್ತರ - ಈ ಪ್ರಶ್ನೆ ಸರಿಯಿಲ್ಲ. ಏಕೆಂದರೆ 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡುವುದರಿಂದಲೇ ಮುಖ್ಯಾರ್ಥವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಮುಖ್ಯಾರ್ಥವನ್ನು ಬಿಟ್ಟಿರುವ ದೋಷವು ತಟ್ಟುವುದಿಲ್ಲ.

**ತತ್ವಪ್ರಕಾಶಿಕಾ – (ननु) नाभिमानिदेवता नाम सन्ति । तथाहि किं ता अभिमन्यमानव्यापिन्यः किं वा तदेकदेशवर्तिन्यः ।**

ಅಭಿಮಾನಿದೇವತೆಗಳೇ ಇರುವುದಿಲ್ಲ. ಹೀಗಿರುವಾಗ 'ಅಭಿಮಾನಿದೇವತೆಯು ಮಾತನಾಡಿತು' ಎಂದು ಅರ್ಥೈಸುವುದು ಹೇಗೆ ಸರಿ ? ಏಕೆಂದರೆ ಅಭಿಮಾನಿದೇವತೆಗಳು ಇರುವುದಾದರೆ ಅಭಿಮಾನ್ಯಮಾನವಾದ ಸಕಲ ಪದಾರ್ಥಗಳಲ್ಲಿ ವ್ಯಾಪಿಸಿಕೊಂಡು ಇದ್ದರೋ, ಅಥವಾ ಏಕದೇಶದಲ್ಲಿ ಇದ್ದರೋ ? ಎಂಬ ಪ್ರಶ್ನೆಗೆ ಉತ್ತರಿಸಬೇಕು.

**तत्वप्रकाशिका – आद्येऽपि विग्रहवत्यो न वा । न प्रथमः । उपलम्भप्रसङ्गात्। न द्वितीयः । वचनाद्ययोगात् । नान्त्यः । तद्रहितदेशवद्देशान्तरावस्थानोपपत्तौ तद्वैयर्थ्यादित्यत आह – तासां चेति ।।**

ಅಭಿಮನ್ಯಮಾನವಾದ ಸಕಲ ಪದಾರ್ಥದಲ್ಲಿ ವ್ಯಾಪಿಸಿದ್ದಾರೆ ಎಂದು ಉತ್ತರಿಸುವುದಾದರೆ ಅವರಿಗೆ ಶರೀರ ಇದೆಯೋ, ಇಲ್ಲವೊ? ಎಂಬ ಪ್ರಶ್ನೆಗೆ ಉತ್ತರಿಸಬೇಕು. 'ಶರೀರ ಇದೆ' ಎನ್ನುವುದಾದರೆ ನಮಗೂ ಕಾಣಸಬೇಕಾದೀತು. ಶರೀರ ಇಲ್ಲದಿದ್ದರೆ ಮಾತನಾಡಲು ಅಸಮರ್ಥರಾಗುತ್ತಾರೆ. ಇನ್ನು ಏಕದೇಶದಲ್ಲಿ ಅಭಿಮಾನಿದೇವತೆಗಳು ಇರುತ್ತಾರೆ ಎಂದು ಹೇಳಬೇಕು. ಇದು ವ್ಯರ್ಥ. ಏಕೆಂದರೆ ಯಾವ ಏಕದೇಶದಲ್ಲಿ ಅಭಿಮಾನಿದೇತೆಗಳು ಇಲ್ಲವೊ, ಆದರೂ ಅಲ್ಲಿ ಹೇಗೆ ವ್ಯವಹಾರ ನಡೆಯುತ್ತದೋ; ಆದರಂತೆ ಉಳಿದ ಕಡೆಯು ಕೂಡಿಸಲು ಬರುವಾಗ ಕೆಲವು ಸ್ಥಳದಲ್ಲಿ ಮಾತ್ರ ಅಭಿಮಾನಿದೇವತೆಗಳನ್ನು ಕಲ್ಪಸುವುದು ವ್ಯರ್ಥವಾಗಿದೆ. ಈ ಆಕ್ಷೇಪಕ್ಕೆ 'ತಾಸಾಂಚ' ಇತ್ಯಾದಿ ಭಾಷ್ಯದ ಮಾತುಗಳಿಂದ ಉತ್ತರಿಸಿದ್ದಾರೆ.

**तत्वप्रकाशिका – न चाभिमानिदेवताभावो वाच्यः । यत् प्रागुक्तं तत्रास्त्येव तासां सर्वत्रानुगतिर्विग्रहश्चेति ब्रूमः ।**

ಅಭಿಮಾನಿದೇವತೆಗಳೇ ಇಲ್ಲವೆಂದು ಹೇಳಬಾರದು. ಮತ್ತು ಹಿಂದೆ ಹೇಳಿದಂತೆ ಶರೀರವಿಲ್ಲವೆಂದು ಹೇಳಬಾರದು. ಅಭಿಮಾನಿದೇವತೆಗಳಿಗೆ ಅಭಿಮನ್ಯಮಾನವಸ್ತುಗಳಲ್ಲಿ ವ್ಯಾಪ್ತಿಯು ಬರುತ್ತದೆ. ಮತ್ತು ಶರೀರವೂ ಕೂಡ ಇರುತ್ತದೆ.

**तत्वप्रकाशिका – न च दर्शनप्रसङ्गः सर्वगतानां विग्रहवतीनामपि तासामितरपदार्थेभ्यो विशेषसामार्थ्येनादर्शनसम्भवादिति भावः ।**

ಹಾಗಾದರೆ ಅಭಿಮಾನಿದೇವತೆಗಳ ದರ್ಶನವು ನಮಗೂ ಆಗಬೇಕಲ್ಲವೆ ? ಎಂದು ಪ್ರಶ್ನಿಸಬಾರದು. ಅಭಿಮಾನಿದೇವತೆಗಳು ಎಲ್ಲೆಡೆ ಇದ್ದರೂ, ಶರೀರವುಳ್ಳವರಾಗಿದ್ದರೂ ಉಳಿದ ಪದಾರ್ಥಗಳಿಗಿಂತ ವಿಶೇಷಸಾಮರ್ಥ್ಯವು ಅವರಲ್ಲಿದೆ. ನಮ್ಮ ಕಣ್ಣಿಗೆ ಕಾಣದೆ ಇರುವ ಶಕ್ತಿ ಅವರಲ್ಲಿ ಇದೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

**तत्वप्रकाशिका – सन्तु देवताः प्रकृते किमायातमित्यत आह – अत इति।। यतोऽत्र मृदादिशब्दैर्देवता व्यपदिश्यन्तेऽतस्तासां चेतनत्वनेन श्रुत्युक्तं सर्वं वचनादिकं युक्तमतो न युक्तिविरुद्धं वेदवाक्यमिति भावः ।**

ಅಭಿಮಾನ್ಯಧಿಕರಣ (೨-೧-೩)

ಅಭಿಮಾನಿದೇವತೆಗಳಿರಲಿ; ಅವರಲ್ಲಿ ಅಂಥ ವಿಶೇಷಶಕ್ತಿಯೂ ಕೂಡ ಇರಲಿ ಇದರಿಂದ ಪ್ರಕೃತದಲ್ಲಿ ಏನು ಹೇಳಿದಂತಾಯಿತು ? ಎಂಬ ಪ್ರಶ್ನೆಗೆ 'ಅಥ' ಎಂಬ ಭಾಷ್ಯದ ಮಾತಿನಿಂದ ಉತ್ತರಿಸಿದ್ದಾರೆ. ಯಾವ ಕಾರಣದಿಂದ ಮೃದಾದಿಶಬ್ದಗಳಿಂದ ಆಯಾ ದೇವತೆಗಳನ್ನು ಕರೆಯಲಾಗಿದೆಯೊ ಆ ಕಾರಣದಿಂದ ಚೇತನರಾದ ದೇವತೆಗಳಲ್ಲಿ ವಚನಕ್ರಿಯಾದಿಗಳೆಲ್ಲವೂ ಸಂಗತವಾಗುತ್ತವೆ. ಮತ್ತು ವೇದವಾಕ್ಯಕ್ಕೆ ಹಿಂದೆ ಹೇಳಿದಂತೆ ಯುಕ್ತಿವಿರೋಧವು ಕೂಡ ಬರುವುದಿಲ್ಲ. ಇಷ್ಟು ಅಭಿಪ್ರಾಯವನ್ನು 'ಅತಃ' ಎಂಬ ವಾಕ್ಯಕ್ಕೆ ತಿಳಿಯಬೇಕು.

**तत्वप्रकाशिका – अत्रैकवचनस्य सूत्रगतत्वादभिमानिदेवतेत्युक्तम् । तच्च समुदायविवक्षयेति भावेन तासामित्यादि दृश्यते । चेत्युत्तरसूत्रानुगुण्येनात्र विग्रहस्य ग्राह्यत्वात् ।**

'ಅಭಿಮಾನಿದೇವತಾ ವ್ಯಪದಿಶ್ಯತೇ' ಎಂಬಲ್ಲಿ ಏಕವಚನಪ್ರಯೋಗವನ್ನು ಮಾಡಿದ್ದಾರೆ. ವಾಸ್ತವಿಕವಾಗಿ ಅಭಿಮಾನಿದೇವತೆಗಳು ಅನೇಕ ಮಂದಿ ಇರುವುದರಿಂದ ಬಹುವಚನವನ್ನು ಪ್ರಯೋಗಿಸಬೇಕಿತ್ತು. ಆದರೂ ಏಕವಚನವನ್ನು ಹೇಗೆ ಪ್ರಯೋಗಿಸಿದರು ? ಅಭಿಮಾನಿದೇವತೆಗಳು ಅನೇಕರಿಲ್ಲದ ಕಾರಣ ಏಕವಚನವನ್ನು ಪ್ರಯೋಗಿಸಿದ್ದಾರೆ ಎನ್ನುವುದಾದರೆ ಮುಂದಿನ ವಾಕ್ಯದಲ್ಲಿ 'ತಾಸಾಂ ಚ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ. ಹಿಂದಿನ ವಾಕ್ಯದಲ್ಲಿ ಪ್ರಕೃತವಾದದ್ದನ್ನೇ ಮುಂದಿರುವ ಸರ್ವನಾಮಶಬ್ದದಿಂದ ಪರಾಮರ್ಶೆ ಮಾಡಬೇಕು. ಹೀಗಿರುವಾಗ ಏಕವಚನವನ್ನು ಪ್ರಯೋಗ ಮಾಡಿದ್ದು ತಪ್ಪು.

ಇದು ತಪ್ಪು. ಸೂತ್ರದಲ್ಲಿ ಏಕವಚನವಿರುವುದರಿಂದ ಅದಕ್ಕೆ ಅನುಗುಣವಾಗಿ ಭಾಷ್ಯದಲ್ಲಿಯೂ ಏಕವಚನವನ್ನೇ ಪ್ರಯೋಗಿಸಿದ್ದಾರೆ. ಸಮುದಾಯವನ್ನು ಹೇಳುವ ಸಂದರ್ಭದಲ್ಲಿ ಏಕವಚನವನ್ನು ಪ್ರಯೋಗ ಮಾಡಬೇಕೆಂಬ ನಿಯಮವಿದೆ. ಅದಕ್ಕೆ ಅನುಗುಣವಾಗಿ ಸೂತ್ರ ಹಾಗೂ ಭಾಷ್ಯಗಳಲ್ಲಿ ಏಕವಚನವನ್ನು ಪ್ರಯೋಗಿಸಿದ್ದಾರೆ. ಅದಕ್ಕೆ ಅನುಗುಣವಾಗಿ ಟೀಕೆಯಲ್ಲಿಯೂ ಕೂಡ ಏಕವಚನವನ್ನು ಕೂಡಿಸಬೇಕು. ಆದ್ದರಿಂದ ದೇವತೆಗಳು ಬಹಳ ಮಂದಿ ಇದ್ದಾರೆಂದು ತಿಳಿಯುತ್ತದೆ. ಆದ್ದರಿಂದ ಮುಂದಿನ ವಾಕ್ಯದಲ್ಲಿರುವ 'ತಾಸಾಮ್' ಎಂಬ ಬಹುವಚನಶಬ್ದದಿಂದ ಅನೇಕ ದೇವತೆಗಳನ್ನು ಪರಾಮರ್ಶೆ ಮಾಡಬಹುದು.

**तत्वप्रकाशिका – दृश्यन्ते मुनिभिरिति स्मृत्यानुकूल्याच्च तत्र शक्तिमात्रमुच्यते ॥६॥**

ಸೂತ್ರದಲ್ಲಿ 'ಅಭಿಮಾನಿನಾಮ್ ವ್ಯಪದೇಶಃ' ಎಂದು ವಿಗ್ರಹ ಮಾಡಬೇಕೋ 'ಅಭಿಮಾನಿನಃ ವ್ಯಪದೇಶಃ' ಎಂದು ವಿಗ್ರಹ ಮಾಡಬೇಕೋ ? ಎಂಬ ಪ್ರಶ್ನೆಗೆ 'ದೃಶ್ಯತೇ ಚ' ಎಂಬ ಮುಂದಿನ ಸೂತ್ರದಲ್ಲಿ ಏಕವಚನವಿರುವುದರಿಂದ 'ಅಭಿಮಾನಿನಃ ವ್ಯಪದೇಶಃ' ಎಂದು ಏಕವಚನಾಂತವಿಗ್ರಹನ್ನು ಮಾಡಬೇಕು.

ಪ್ರಶ್ನೆ - 'ದೃಶ್ಯತೇ ಚ' ಎಂಬ ಸೂತ್ರದ ಭಾಷ್ಯದಲ್ಲಿ 'ದೃಶ್ಯಂತೇ ಮುನಿಭಿಃ' ಎಂಬುದಾಗಿ ಭವಿಷ್ಯತ್ ಪುರಾಣದ ಮಾತಿನಿಂದ ಬಹುವಚನವನ್ನು ಪ್ರಯೋಗಿಸಿದ್ದಾರೆ. ಅದಕ್ಕೆ ಅನುಗುಣವಾಗಿ ಸೂತ್ರದಲ್ಲಿರುವ 'ದೃಶ್ಯತೇ ಚ' ಎಂಬ ಏಕವಚನವನ್ನು ಕೂಡ ಬಹುವಚನಾರ್ಥದಲ್ಲೇ ವಿವಕ್ಷಿಸಬೇಕು. ಆದ್ದರಿಂದ ಅಭಿಮಾನಿದೇವತೆಗಳು ಮುನಿಗಳ ಪ್ರತ್ಯಕ್ಷದಿಂದ ಸಿದ್ಧರಾಗಿದ್ದಾರೆ. ಅಭಿಮಾನಿದೇವತೆಗಳ ಶಕ್ತಿ ಸಾಮರ್ಥ್ಯಗಳು ಕೂಡ ಮುನಿಗಳ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಇದಕ್ಕೆ ಅನುಗುಣವಾಗಿ 'ದೃಶ್ಯತೇ ಚ' ಎಂಬ ಸೂತ್ರಕ್ಕೆ ದೇವತೆಗಳನ್ನು ಅವರ ಸಾಮರ್ಥ್ಯವನ್ನು ಮುನಿಗಳು ಕಂಡಿದ್ದಾರೆ ಎಂದು ಅರ್ಥೈಸಬೇಕು. ಆದ್ದರಿಂದ ಸೂತ್ರದಲ್ಲಿ ಶಕ್ತಿಮಾತ್ರವನ್ನು ಹೇಳುತ್ತಿಲ್ಲವಾದ್ದರಿಂದ ಹಿಂದಿನ ಸೂತ್ರದ ವಿಗ್ರಹವಾಕ್ಯವು ನಿರ್ಣಯವಾಗುತ್ತದೆ.

## ಬ್ರಹ್ಮಮೀಮಾಂಸಾಶಾಸ್ತ್ರ

**ಸೂತ್ರಮ್ – ದೃಶ್ಯತೇ ಚ ।।೨।।**

ಅಭಿಮಾನಿದೇವತೆಗಳಲ್ಲಿ ವಿಚಿತ್ರವಾದ ಸಾಮರ್ಥ್ಯವು ಇರುತ್ತದೆಂಬುದನ್ನು ಯೋಗಿಗಳು ಪ್ರತ್ಯಕ್ಷವಾಗಿ ಕಂಡಿರುತ್ತಾರೆ. ಆದ್ದರಿಂದ ವಿರೋಧವಿಲ್ಲ.

## ಸೂತ್ರದೀಪಿಕಾ

**सूत्रदीपिका — दृश्यते च ।। अभिमानिदेवतायां सामर्थ्यं योगिभिः उपलभ्यते च। अतोऽपि नादर्शनविरोध इत्यर्थः ।।२।।**

ಅರ್ಥ -- ದೃಶ್ಯತೇ ಚ = ಅಭಿಮಾನಿದೇವತೆಗಳಲ್ಲಿ ಇರುವಂತಹ ಅದ್ಭುತವಾದ ಸಾಮರ್ಥ್ಯವನ್ನು ಯೋಗಿಗಳು ತಮ್ಮ ಪ್ರತ್ಯಕ್ಷದಿಂದ ಕಾಣುತ್ತಾರೆ. ಆದ್ದರಿಂದ ಅದರ್ಶನವಿರೋಧಕ್ಕೆ ಕಾರಣವಿಲ್ಲ.

॥ ಇಲ್ಲಿಗೆ ಸೂತ್ರ ಹಾಗೂ ಸೂತ್ರದೀಪಿಕೆಯಲ್ಲಿ ಅಭಿಮಾನ್ಯಧಿಕರಣವು ಸಮಾಪ್ತವಾಯಿತು ॥

ಅಭಿಮಾನ್ಯಧಿಕರಣ (೨-೧-೩)

## ಬ್ರಹ್ಮಸೂತ್ರಭಾಷ್ಯ

**भाष्यम् – ।। दृश्यते च ।।२।।**

**तासां समार्थ्यं महद्भिः ।।**

ಅನುವಾದ - ಅಭಿಮಾನಿದೇವತೆಗಳಿರುವ ವಿಶಿಷ್ಟಸಾಮರ್ಥ್ಯವು ಯೋಗಿ ಜನರಿಂದ ಕಾಣಲ್ಪಟ್ಟಿದೆ.

ಪ್ರತಿಪದಾರ್ಥ -- ಅಪ್ರಾಮಾಣಿಕವಾದ ಅಭಿಮಾನಿದೇವತೆಗಳನ್ನು ಒಪ್ಪಿ ಅವರಲ್ಲಿ ಅಪ್ರಾಮಾಣಿಕವಾದ ಸಾಮರ್ಥ್ಯವನ್ನು ಒಪ್ಪುವುದಕ್ಕಿಂತ ಕೇವಲ ವೇದಕ್ಕೆ ಅಪ್ರಾಮಾಣ್ಯವನ್ನು ಒಪ್ಪುವುದು ಸುಲಭವಲ್ಲವೆ? ಎಂಬ ಪ್ರಶ್ನೆಗೆ ಮುಂದಿನ ಸೂತ್ರದಿಂದ ಉತ್ತರವನ್ನು ಹೇಳುತ್ತಿದ್ದಾರೆ. ತಾಸಾಂ = ಪೃಥಿವ್ಯಾದ್ಯಭಿಮಾನಿದೇವತೆಗಳ, ಸಾಮರ್ಥ್ಯಂ = ಅಂತರ್ಧಾನ ಶಕ್ತಿ ಹಾಗೂ ಎಲ್ಲೆಡೆ ಇರುವಿಕೆಯ ಸಾಮರ್ಥ್ಯವು, ಮಹದ್ಭಿಃ = ಜ್ಞಾನಿಜನರಿಂದ ಕಾಣಲ್ಪಟ್ಟಿದೆ,

**भाष्यम् – भविष्यत्पुराणे च –**

**'पृथिव्याद्यभिमानिन्यो देवताः प्रथितौजसः ।**
**अचिन्त्याश्शक्तयस्तासां दृश्यन्ते मुनिभिश्च ताः ।**
**ताश्च सर्वगता नित्यं वासुदेवैकसंश्रयाः ।।' इति ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये अभिमान्यधिकरणम् ।। ३ ।।**

ಅನುವಾದ - ಭವಿಷ್ಯತ್‌ಪುರಾಣದಲ್ಲಿ ಇದನ್ನು ಸಮರ್ಥಿಸಿದ್ದಾರೆ. ಪ್ರಸಿದ್ಧವಾದ ಸಾಮರ್ಥ್ಯವುಳ್ಳ ಪೃಥಿವ್ಯಾದ್ಯಭಿಮಾನಿದೇವತೆಗಳು ಹಾಗೂ ಅವರಲ್ಲಿರುವ ಅಚಿಂತ್ಯವಾದ ಶಕ್ತಿಸಾಮರ್ಥ್ಯಗಳು ಜ್ಞಾನಿಜನರಿಂದ ಕಾಣಲ್ಪಟ್ಟಿದೆ. ಆ ದೇವತೆಗಳು ನಿರಂತರವಾಗಿ ಎಲ್ಲೆಡೆ ವ್ಯಾಪ್ತರಾಗಿ ಪರಮಾತ್ಮನನ್ನೇ ಆಶ್ರಯಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- 'ಪರಬುದ್ಧೇರಪ್ರತ್ಯಕ್ಷತ್ವಾತ್' ಎಂಬ ನಿಯಮದಂತೆ, ಜ್ಞಾನಿಜನರು ಅಭಿಮಾನಿದೇವತೆಗಳನ್ನು ಕಂಡಿದ್ದಾರೆ ಎಂಬ ಹೇತುವು ಅಸಿದ್ಧವಾಗಿದೆ. ಈ ಪ್ರಶ್ನೆಗೆ ಪ್ರಮಾಣವಾಕ್ಯವನ್ನು ಭವಿಷ್ಯತ್ ಪುರಾಣದಿಂದ ನೀಡಿದ್ದಾರೆ. ಭವಿಷ್ಯತ್ ಪುರಾಣೇ ಚ = ಭವಿಷ್ಯತ್‌ಪುರಾಣದಲ್ಲಿ ಹೀಗೆ ಹೇಳಲ್ಪಟ್ಟಿದೆ - ಪೃಥಿವ್ಯಾದ್ಯಭಿಮಾನಿನ್ಯಃ = ಪೃಥಿವೀ, ಅಪ್ ಮೊದಲಾದ ಅಭಿಮಾನಿದೇವತೆಗಳಾದ, ದೇವತಾಃ = ದೇವತೆಗಳು ಪ್ರಥಿತೌಜಸಃ = ಪ್ರಸಿದ್ಧವಾದ ಶಕ್ತಿಯಿಂದ ಪೂರ್ಣರು, ತಾಸಾಂ = ಆ ದೇವತೆಗಳ, ಶಕ್ತಯಃ = ಸಾಮರ್ಥ್ಯವು, ಅಚಿಂತ್ಯಾಃ = ಚಿಂತಿಸಲು ಅಸಾಧ್ಯವಾಗಿದೆ. ಮುನಿಭಿಃ = ಜ್ಞಾನಿಜನರಿಂದ ತಾಃ = ಆ ಶಕ್ತಿಸಾಮರ್ಥ್ಯಗಳು, ದೃಶ್ಯಂತೇ = ಕಾಣಲ್ಪಡುತ್ತವೆ. ಯಾಃ = ಯಾವ ದೇವತೆಗಳು ನಿತ್ಯಂ = ನಿರಂತರವಾಗಿ, ಸರ್ವಗತಾಃ = ಎಲ್ಲೆಡೆ ವ್ಯಾಪ್ತರಾಗಿರುವ, ವಾಸುದೇವೈಕಸಂಶ್ರಯಾಃ = ವಾಸುದೇವರೂಪಿಯಾದ ಪರಮಾತ್ಮನನ್ನು ಆಶ್ರಯಿಸಿರುತ್ತಾರೆ.

ಇಲ್ಲಿಗೆ ಅಭಿಮಾನ್ಯಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – नन्वत्राप्रामणिकदेवताकल्पनात्तासां च विशिष्टसामर्थ्य-कल्पनाद्वरं वेदाप्रमाण्यग्रणहमेव लाघवात् ।**

ಪ್ರಶ್ನೆ - 'ಮೃದಬ್ರವೀತ್' ಇವೇ ಮೊದಲಾದ ವೇದವಾಕ್ಯಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುವುದಕ್ಕಾಗಿ 'ಅಭಿಮಾನಿದೇವತೆಗಳು ಮಾತನಾಡಿದರು' ಇತ್ಯಾದಿಯಾಗಿ ಅನ್ಯಾರ್ಥವನ್ನು ಕಲ್ಪನೆ ಮಾಡುತ್ತಿದ್ದೀರಿ. ಇಂಥ ದೇವತೆಗಳನ್ನು ಕಲ್ಪನೆ ಮಾಡಲು ಯಾವುದೇ ಪ್ರಮಾಣ ಇರುವುದಿಲ್ಲ. ಅಷ್ಟೇ ಅಲ್ಲದೆ ಕಲ್ಪಿಸಿದ ದೇವತೆಗಳಲ್ಲಿ ಮಾತನಾಡಲು ಆವಶ್ಯಕವಾದ ವಿಶಿಷ್ಟಸಾಮರ್ಥ್ಯಾದಿಗಳನ್ನು ಕೂಡ ಕಲ್ಪನೆ ಮಾಡಬೇಕು. ಹೀಗೆ ಅನೇಕ ವಿಷಯವನ್ನು ಕಲ್ಪನೆ ಮಾಡುವುದಕ್ಕಿಂತ ವೇದವನ್ನು ಅಪ್ರಮಾಣವೆಂದು ಕಲ್ಪನೆ ಮಾಡುವುದೇ ಲಘುಭೂತವಾಗಿದೆ.

**तत्वप्रकाशिका – न च वेदेन तत्सिद्धिस्तत्प्रामाण्ये विवादादित्याशङ्कां परिहरत्सूत्रं पठित्वा तच्छेषमेव पूरयति – दृश्यते चेति ।।**

ವೇದದಿಂದಲೇ ದೇವತೆಗಳು ಸಿದ್ಧರಾಗಿದ್ದಾರೆ ಮತ್ತು ಅವರ ಸಾಮರ್ಥ್ಯವೂ ಕೂಡ ಸಿದ್ಧವಾಗಿದೆ ಆದ್ದರಿಂದ ಕಲ್ಪನಾಗೌರವದೋಷವು ಬರುವುದಿಲ್ಲವೆಂದು ಹೇಳಬಾರದು. ಏಕೆಂದರೆ ವೇದ ಪ್ರಾಮಾಣ್ಯವಿಷಯದಲ್ಲಿಯೇ ವಿವಾದವಿದೆ. ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಪಠನ ಮಾಡಿ ಸೂತ್ರದಲ್ಲಿ ಇಲ್ಲದೆ ಇರುವ ಪದಗಳನ್ನು ಅಧ್ಯಹಾರ ಮಾಡುವ ಮೂಲಕ ವ್ಯಾಖ್ಯಾನ ಮಾಡಲು ಭಾಷ್ಯದಲ್ಲಿ 'ದೃಶ್ಯತೇ ಚ' ಇತ್ಯಾದಿ ವಾಕ್ಯಗಳು ಹೊರಟಿವೆ.

**तत्वप्रकाशिका – नाप्रामाणिकत्वमभिमानिदेवतानां तत्सामर्थ्यस्य च महद्भिर्दृश्यमानत्वादित्यर्थः :**

ಅಭಿಮಾನಿದೇವತೆಗಳು ಅಪ್ರಾಮಾಣಿಕರಲ್ಲ. ಅವರಲ್ಲಿರುವ ವಿಶಿಷ್ಟಸಾಮರ್ಥ್ಯಾದಿಗಳೂ ಕೂಡ ಅಪ್ರಾಮಾಣಿಕವಲ್ಲ. ಏಕೆಂದರೆ ಮಹಾಜನರು ಅಂಥ ದೇವತೆಗಳನ್ನು, ಅವರಲ್ಲಿರುವ ಶಕ್ತಿ ಸಾಮರ್ಥ್ಯಾದಿಗಳನ್ನು ಸಾಕ್ಷಾತ್ತಾಗಿ ನೋಡಿರುತ್ತಾರೆ. ಇಷ್ಟು 'ದೃಷ್ಯತೇ ಚ' ಎಂಬ ಸೂತ್ರದ ಅರ್ಥ.

**तत्वप्रकाशिका – परबुद्धेरप्रत्यक्षत्वात् कुत एतदित्यत आह – भविष्यत्पुराणे चेति**

'ಪರಬುದ್ಧೇರಪ್ರತ್ಯಕ್ಷತ್ವಾತ್' ಮತ್ತೊಬ್ಬರ ಬುದ್ಧಿಯು ಪ್ರತ್ಯಕ್ಷವಿಷಯವಲ್ಲ. ಆದ್ದರಿಂದ ಇದನ್ನು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಭವಿಷ್ಯತ್‌ಪುರಾಣದ ವಚನದಿಂದ ಸಿದ್ಧವಾಗಿದೆ. ಎಂದು ಉತ್ತರಿಸುತ್ತಿದ್ದಾರೆ. 'ಭವಿಷ್ಯತ್ ಪುರಾಣೇ ಚ' ಎಂಬುದಾಗಿ

**तत्वप्रकाशिका – ता देवताः शक्तयश्च । अथवा विग्रहवतीनां सर्वगतानां तासां दर्शनप्रसङ्ग इत्युक्ते प्रष्टव्यम् । किमज्ञैर्दृश्येरन् महद्भिर्वा ।**

'ಮುನಿಭಿಶ್ಚ ತಾಃ' ಎಂಬಲ್ಲಿರುವ 'ತಾಃ' ಎಂಬ ಪದಕ್ಕೆ ದೇವತೆಗಳು ಮತ್ತು ಅವರ ಶಕ್ತಿ ಸಾಮರ್ಥ್ಯಗಳು ಎಂದರ್ಥ.

ಅಥವಾ ಅಭಿಮಾನಿದೇವತೆಗಳು ಶರೀರವನ್ನು ಹೊಂದಿದ್ದಾರೆ ಮತ್ತು ಎಲ್ಲೆಡೆ ವ್ಯಾಪ್ತರಾಗಿದ್ದಾರೆ ಆದ್ದರಿಂದ ಅವರು ಎಲ್ಲರಿಗೂ ಕಾಣಸಬೇಕಾದೀತು ಎಂದು ಆಕ್ಷೇಪಿಸಿದರೆ ಹೀಗೆ ಪ್ರಶ್ನಿಸುತ್ತೇವೆ - ಅಜ್ಞಜನರಿಗೆ ಕಾಣಸಬೇಕೆಂದು ಅಭಿಪ್ರಾಯವೋ ? ಮಹಾಜನರಿಗೆ ಕಾಣಸಬೇಕೆಂದು ಅಭಿಪ್ರಾಯವೊ?

**तत्वप्रकाशिका – आद्यस्योत्तरं विशेषसामर्थ्यम् । द्वितीयेऽभ्युपगमो दृश्यते चेति ।**

ಅಜ್ಞಜನರಿಗೆ ದರ್ಶನವಾಗಲು ಸಾಧ್ಯವಿಲ್ಲ. ಏಕೆಂದರೆ ದೇವತೆಗಳಿಗೆ ವಿಶೇಷಸಾಮರ್ಥ್ಯವಿರುವುದರಿಂದ ಅಜ್ಞಾನಿಗಳಿಗೆ ಅವರು ಕಾಣಿಸಿಕೊಳ್ಳುವುದಿಲ್ಲ. ಇನ್ನು ಮಹಜ್ಜನರಿಗೆ ಕಾಣಿಸಬೇಕಾದೀತು ಎಂಬ ಆಕ್ಷೇಪಕ್ಕೆ 'ದೃಶ್ಯತೇ ಚ' ಎಂಬ ಸೂತ್ರವೇ ಉತ್ತರಿಸುತ್ತಿದೆ. ಮಹಾತ್ಮರಿಗೆ ದೇವತೆಗಳ ಶಕ್ತಿ ಸಾಮರ್ಥ್ಯಗಳು ಪ್ರತ್ಯಕ್ಷವಾಗಿಯೇ ಸಿದ್ಧವಾಗಿದೆ.

**तत्वप्रकाशिका – अथवा वस्त्वन्तरमधिष्ठाय तासां वचनादिकं कथमित्यस्योत्तरं तासामिति । परिच्छिन्नानामभिमानिनीनां कथमनेकाभिमन्यमानाधिष्ठातृत्वमपीत्यस्यानुगतिरिति । अनुपलब्धिबाधपरिहाराय सूत्रमिति ।**

ಅಥವಾ ಮತ್ತೊಂದು ಬಗೆಯಲ್ಲಿಯೂ ಸೂತ್ರದ ಅರ್ಥವನ್ನು ತಿಳಿಯಬಹುದು-

ದೇವತೆಗಳು ಮತ್ತೊಂದು ವಸ್ತುವನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ವಚನಾದಿಕ್ರಿಯೆಗಳಲ್ಲಿ ತೊಡಗುತ್ತಾರೆಂದು ಹೇಳುವುದು ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ 'ತಾಸಾಮ್' ಎಂಬ ಉತ್ತರವನ್ನು ನೀಡಿದ್ದಾರೆ. ದೇವತೆಗಳಿಗೆ ವಿಶಿಷ್ಟವಾದ ಸಾಮರ್ಥ್ಯವಿರುವುದರಿಂದ ಬೇರೆ ವಸ್ತುವನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ವಚನಾದಿಕ್ರಿಯೆಗಳ ಕಾರ್ಯದಲ್ಲಿ ತೊಡಗಬಹುದು.

ಪರಿಚ್ಛಿನ್ನರಾದ ಅಭಿಮಾನಿದೇವತೆಗಳು ಅಭಿಮನ್ಯಮಾನವಾದ ಎಲ್ಲಾ ವಸ್ತುಗಳಲ್ಲಿಯೂ ಅಧಿಷ್ಠಿತರಾಗಿ ವಚನಾದಿಕ್ರಿಯೆಗಳನ್ನು ನಡೆಸಲು ಹೇಗೆ ಸಾಧ್ಯ ? ಎಂಬ ಆಶಂಕೆಗೆ 'ಅನುಗತಿಃ' ಎಂದು ಉತ್ತರಿಸಿದ್ದಾರೆ. ವಿಶೇಷಸಾಮರ್ಥ್ಯವುಳ್ಳ ದೇವತೆಗಳು ಎಲ್ಲಾ ಪದಾರ್ಥಗಳಲ್ಲಿ ಇರುವುದಾದರೆ ನಮ್ಮ ಕಣ್ಣಿಗೇಕೆ ಕಾಣಿಸುತ್ತಿಲ್ಲ. ಆದ್ದರಿಂದ ಅಂಥ ದೇವತೆಗಳು ಇಲ್ಲವೆಂದೇ ಹೇಳಬೇಕಲ್ಲವೆ ? ಎಂಬ ಅನುಪಲಬ್ಧಿ ದೋಷವನ್ನು ಪರಿಹಾರ ಮಾಡುವುದಕ್ಕಾಗಿ 'ದೃಶ್ಯತೇ ಚ' ಎಂಬ ಸೂತ್ರವು ಹೊರಟಿದೆ. ಜ್ಞಾನಿಗಳಿಗೆ ಆ ದೇವತೆಗಳು ಕಾಣಿಸುತ್ತಾರಾದ್ದರಿಂದ ಯಾವುದೇ ದೋಷಕ್ಕೂ ಅವಕಾಶವಿಲ್ಲ.

**तत्वप्रकाशिका – न च वाच्यं देवतासद्भावेऽपि कुतोऽत्र तद् व्यपदेशकल्पनेति। अचेतनानां वचनाद्यदृष्ट्या निर्दोषवाक्यस्याप्रामाण्यदृष्ट्या च तत्कल्पनोपपत्तेः ।**

ಅಭಿಮಾನಿದೇವತೆಗಳು ಇರುತ್ತಾರೆಂದು ಒಪ್ಪೋಣ. ಆದರೆ ಅಂಥ ದೇವತೆಗಳನ್ನೇ ವಾಕ್ಯಗಳು ಪ್ರತಿಪಾದನೆ ಮಾಡುತ್ತವೆಂದೇಕೆ ಒಪ್ಪಬೇಕು ? ಎಂದು ಪ್ರಶ್ನಿಸಬಾರದು. ಏಕೆಂದರೆ ಜಡಪದಾರ್ಥವು ಮಾತನಾಡುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ವೇದಗಳು ನಿರ್ದುಷ್ಟವಾಗಿವೆ ಎಂದು ಸಿದ್ಧವಾಗಿದೆ. ನಿರ್ದುಷ್ಟವಾದ ವಾಕ್ಯಗಳು ಅಪ್ರಮಾಣವಾಗಲು ಸಾಧ್ಯವಿಲ್ಲ. ಇವೆರಡನ್ನು ಕೂಡಿಸಬೇಕೆಂದರೆ ಅಭಿಮಾನಿದೇವತೆಗಳನ್ನು ವೇದವು ಪ್ರತಿಪಾದನೆಮಾಡುತ್ತಿದೆಯೆಂದು ಒಪ್ಪಬೇಕು.

ಅಭಿಮಾನ್ಯಧಿಕರಣ (೨-೧-೩)

**तत्वप्रकाशिका – अतो वेदप्रामाण्ये युक्तिविरोधाभावद्युक्तं तेन भगवतो जगत्कारणत्वसाधनमिति सिद्धम् ।। ७ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् अभिमान्यधिकरणम् ।।**

ಆದ್ದರಿಂದ ವೇದಪ್ರಾಮಾಣ್ಯವಿಷಯದಲ್ಲಿ ಯಾವುದೇ ಯುಕ್ತಿಯ ವಿರೋಧಕ್ಕೆ ಆಸ್ಪದವಿಲ್ಲ. ಆದ್ದರಿಂದ ಅಂಥ ನಿರ್ದುಷ್ಟವಾದ ವೇದವಾಕ್ಯದಿಂದ ಭಗವಂತನಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಸಿದ್ಧವಾಗುತ್ತದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಭಿಮಾನ್ಯಧಿಕರಣ ಮುಗಿಯಿತು

ದ್ವಿತೀಯ ಅಧ್ಯಾಯ-ಪ್ರಥಮ ಪಾದ

## ಅಭಿಮಾನ್ಯಧಿಕರಣ

(೨-೧-೩)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆ ಮತ್ತು
ಸಾರದೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अभिमान्यधिकरणम्

### ದೃಢವಾದ ಯುಕ್ತಿಗಳ ಪರಿಹಾರಕ್ಕಾಗಿ ಅಭಿಮಾನ್ಯಧಿಕರಣ

**अभिमानिव्यपदेशस्तु विशेषानुगतिभ्यां ।। पूर्वत्र केवलयुक्त्यविरोध उक्तः । अत्र तु दृढयुक्त्यविरोध उच्यते । तदुक्तमनुव्याख्याने – ''दृढयुक्तिविरोधे तु सर्वत्र न्याय ईदृशः'' इति ।**

'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ' ಎಂಬ ಸೂತ್ರದಿಂದ ಅಭಿಮಾನ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ನ ವಿಲಕ್ಷಣತ್ವಾಧಿಕರಣದಲ್ಲಿ ಶ್ರುತಿಗೆ ಕೇವಲ ಯುಕ್ತಿವಿರೋಧವನ್ನಷ್ಟೇ ಪರಿಹರಿಸಲಾಯಿತು. ಈ ಅಧಿಕರಣದಲ್ಲಿ ಬಲಿಷ್ಠವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಈ ವಿಷಯವನ್ನು ಅನುವ್ಯಾಖ್ಯಾನವು 'ದೃಢಯುಕ್ತಿವಿರೋಧೇ ತು ಸರ್ವತ್ರ ನ್ಯಾಯ ಈದೃಶಃ' ದೃಢಯುಕ್ತಿಗಳ ವಿರೋಧವು ಪ್ರಾಪ್ತವಾದಾಗ ಎಲ್ಲೆಡೆ ಇದೇ ನ್ಯಾಯವನ್ನು ಅನುಸರಿಸಬೇಕು ಎಂಬ ಮಾತಿನಿಂದ ಹೇಳಿರುತ್ತಾರೆ.

**युक्तेर्दार्ढ्यं च न श्रुत्यप्रामाण्यं विनाऽनुपपद्यमानत्वम् । सिद्धान्तदशायामिहाप्यभावात् । पूर्वपक्षदशायां तु पूर्वत्रापि भावात् ।**

ಪ್ರಶ್ನೆ - ಯುಕ್ತಿಯು ದೃಢವಾಗಿರಬೇಕು ಎಂಬುದಕ್ಕೆ ಏನರ್ಥ ? ಯುಕ್ತಿವಿರೋಧವು ಬಂದರೆ ಏನೇ ಆದರೂ ಕೂಡ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಲೇಬೇಕು. ಇಲ್ಲದಿದ್ದರೆ ಯುಕ್ತಿಯಲ್ಲಿ ದಾರ್ಢ್ಯವು ಕೂಡುವುದಿಲ್ಲ. ಇದನ್ನೇ 'ದೃಢಯುಕ್ತಿವಿರೋಧೇ' ಎಂಬ ಶಬ್ದದ ಅರ್ಥವೆನ್ನಬೇಕು. ಆದರೆ ಈ ಅರ್ಥವನ್ನು ಸಿದ್ಧಾಂತದಶೆಯಲ್ಲಾಗಲೀ, ಪೂರ್ವಪಕ್ಷದಶೆಯಲ್ಲಾಗಲೀ ವಿವಕ್ಷಿಸಲಾಗದು. ಯುಕ್ತಿವಿರೋಧ ಬಂದಾಗ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಸಿದ್ಧಾಂತದಶೆಯಲ್ಲಿ ಈ

ಅಧಿಕರಣದಲ್ಲಿಯೂ ಕೂಡ ಹಾಗೇ ಸ್ಥಾಪನೆ ಮಾಡಿಲ್ಲ. ಪೂರ್ವಪಕ್ಷದಲ್ಲಿ ಯುಕ್ತಿವಿರೋಧ ಬಂದಾಗ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಈ ಅಧಿಕರಣದಲ್ಲಿ ಮಾತ್ರವಲ್ಲ, ಹಿಂದಿನ ಅಧಿಕರಣದಲ್ಲಿಯೂ ಕೂಡ ಹೇಳಿದ್ದಾಗಿದೆ. ಆದ್ದರಿಂದ 'ದೃಢಯುಕ್ತಿಯ ವಿರೋಧ ಪರಿಹಾರ' ಎಂಬುದಕ್ಕೆ ಏನರ್ಥ ?

**किन्तु श्रुतिप्रतीतार्थत्यागं विनाऽनुपपद्यमानत्वम् ।**

ಉತ್ತರ - 'ಶ್ರುತಿಯನ್ನು ನೋಡಿದಾಗ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗ ಮಾಡದೇ ಯುಕ್ತಿಯಲ್ಲಿ ದಾರ್ಢ್ಯವು ಯುಕ್ತವಾಗುವುದಿಲ್ಲ' ಇದೇ ಯುಕ್ತಿಯ ದಾರ್ಢ್ಯ.

**पूर्वत्र हि कारीयदिर्वृष्ट्यादि हेतुत्वरूपप्रतीतार्थात्यागेऽपि विसंवादो वैगुण्यादिनोपपन्नः ।**

ಹಿಂದಿನ ಅಧಿಕರಣದಲ್ಲಿ ಕಾರೀರ್ಯಾದಿ ವಾಕ್ಯಗಳಿಗೆ ಪ್ರತೀತವಾದ ಅರ್ಥವನ್ನೇ ಸ್ವೀಕರಿಸುತ್ತೇವೆ. ಕಾರೀರ್ಯಾದಿಯಾಗವು ವೃಷ್ಟ್ಯಾದಿಗಳಿಗೆ ಕಾರಣವಾಗಿದೆ ಎಂದು ಅಂಗೀಕರಿಸಿದಾಗಲೂ ಯಾವುದೇ ಬಾಧಕವಿಲ್ಲ. ಕೆಲವೊಮ್ಮೆ ಅನುಷ್ಠಾನ ಮಾಡಿದರೂ ಫಲವಿಸಂವಾದವು ಇರಬಹುದು. ಅದನ್ನು ಕರ್ತೃವೈಗುಣ್ಯಾದಿಗಳಿಂದ ಉಪಪಾದನೆ ಮಾಡುತ್ತೇವೆ. ಹೀಗೆ ಅನ್ಯಥಾ ಉಪಪನ್ನವಾಗುವುದರಿಂದ ಪ್ರತೀತಾರ್ಥವನ್ನು ಬಿಡಬೇಕಾಗಿಲ್ಲ.

**इह तु जडस्य मृदादेर्वक्तृत्वादिरूपप्रतीतार्थात्यागे जडत्वादिकमनुपपन्नम् ।**

ಈ ಅಧಿಕರಣದ ಸಿದ್ಧಾಂತದಲ್ಲಿ ಜಡವಾದ ಮೃತ್ ಮೊದಲಾದವುಗಳಲ್ಲಿ ವಕ್ತೃತ್ವಾದಿಗಳು ಪ್ರತೀತವಾಗುತ್ತಿವೆ. ಇದನ್ನು ತ್ಯಾಗ ಮಾಡದಿದ್ದರೆ 'ಜಡತ್ವಾತ್' ಎಂಬ ಹೇತುವು ಅನುಪಪನ್ನವಾಗುತ್ತದೆ. 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಅನುಮಾನದಲ್ಲಿ ಜಡತ್ವವೆಂಬ ಹೇತುವು ವಕ್ತೃತ್ವವನ್ನು ಒಪ್ಪಿದರೆ, ಅನುಪಪನ್ನವಾಗುತ್ತದೆ.

**जडस्य कर्मज्ञानेन्द्रियादिहीनस्य वक्तृत्वकामयितृत्वादेरयोगात् ।**

ಜಡಪದಾರ್ಥಕ್ಕೆ ಯಾವುದೇ ಕರ್ಮೇಂದ್ರಿಯಗಳಾಗಲೀ, ಜ್ಞಾನೇಂದ್ರಿಯಗಳಾಗಲೀ ಇರುವುದಿಲ್ಲ. ಆದ್ದರಿಂದ ವಕ್ತೃತ್ವ ಹಾಗೂ ಕಾಮಯಿತೃತ್ವ ಜಡವಾದ ಮಣ್ಣಿನಲ್ಲಿ ಸರ್ವಥಾ ಕೂಡುವುದಿಲ್ಲ. ಆದ್ದರಿಂದ ಜಡತ್ವವೆಂಬ ಹೇತು ಅನನ್ಯಥಾಸಿದ್ಧವಾಗಿದೆ. ಜಡತ್ವವಿರಲಿ ವಕ್ತೃತ್ವಾಭಾವವು ಇರುವುದು ಬೇಡ ಎಂಬ ಅಪ್ರಯೋಜಕಾಶಂಕೆಗೆ ಬಾಧಕತರ್ಕವಿದೆ.

**इन्द्रियाणामपि संवादादिश्रवणात्तेषां चेन्द्रियान्तराभावात् ।**

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अभिमान्यधिकरणम्

### ದೃಢವಾದ ಯುಕ್ತಿಗಳ ಪರಿಹಾರಕ್ಕಾಗಿ ಅಭಿಮಾನ್ಯಧಿಕರಣ

**अभिमानिव्यपदेशस्तु विशेषानुगतिभ्यां ।। पूर्वत्र केवलयुक्त्यविरोध उक्तः । अत्र तु दृढयुक्त्यविरोध उच्यते । तदुक्तमनुव्याख्याने – ''दृढयुक्तिविरोधे तु सर्वत्र न्याय ईदृशः'' इति ।**

'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ' ಎಂಬ ಸೂತ್ರದಿಂದ ಅಭಿಮಾನ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ನ ವಿಲಕ್ಷಣತ್ವಾಧಿಕರಣದಲ್ಲಿ ಶ್ರುತಿಗೆ ಕೇವಲ ಯುಕ್ತಿವಿರೋಧವನ್ನಷ್ಟೇ ಪರಿಹರಿಸಲಾಯಿತು. ಈ ಅಧಿಕರಣದಲ್ಲಿ ಬಲಿಷ್ಠವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಈ ವಿಷಯವನ್ನು ಅನುವ್ಯಾಖ್ಯಾನವು 'ದೃಢಯುಕ್ತಿವಿರೋಧೇ ತು ಸರ್ವತ್ರ ನ್ಯಾಯ ಈದೃಶಃ' ದೃಢಯುಕ್ತಿಗಳ ವಿರೋಧವು ಪ್ರಾಪ್ತವಾದಾಗ ಎಲ್ಲೆಡೆ ಇದೇ ನ್ಯಾಯವನ್ನು ಅನುಸರಿಸಬೇಕು ಎಂಬ ಮಾತಿನಿಂದ ಹೇಳಿರುತ್ತಾರೆ.

**युक्तेर्दार्ढ्यं च न श्रुत्यप्रामाण्यं विनाऽनुपपद्यमानत्वम् । सिद्धान्तदशायामिहाप्यभावात् । पूर्वपक्षदशायां तु पूर्वत्रापि भावात् ।**

ಪ್ರಶ್ನೆ - ಯುಕ್ತಿಯು ದೃಢವಾಗಿರಬೇಕು ಎಂಬುದಕ್ಕೆ ಏನರ್ಥ ? ಯುಕ್ತಿವಿರೋಧವು ಬಂದರೆ ಏನೇ ಆದರೂ ಕೂಡ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಲೇಬೇಕು. ಇಲ್ಲದಿದ್ದರೆ ಯುಕ್ತಿಯಲ್ಲಿ ದಾರ್ಢ್ಯವು ಕೂಡುವುದಿಲ್ಲ. ಇದನ್ನೇ 'ದೃಢಯುಕ್ತಿವಿರೋಧೇ' ಎಂಬ ಶಬ್ದದ ಅರ್ಥವೆನ್ನಬೇಕು. ಆದರೆ ಈ ಅರ್ಥವನ್ನು ಸಿದ್ಧಾಂತದಶೆಯಲ್ಲಾಗಲೀ, ಪೂರ್ವಪಕ್ಷದಶೆಯಲ್ಲಾಗಲೀ ವಿವಕ್ಷಿಸಲಾಗದು. ಯುಕ್ತಿವಿರೋಧ ಬಂದಾಗ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಸಿದ್ಧಾಂತದಶೆಯಲ್ಲಿ ಈ

ಅಧಿಕರಣದಲ್ಲಿಯೂ ಕೂಡ ಹಾಗೇ ಸ್ಥಾಪನೆ ಮಾಡಿಲ್ಲ. ಪೂರ್ವಪಕ್ಷದಲ್ಲಿ ಯುಕ್ತಿವಿರೋಧ ಬಂದಾಗ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಈ ಅಧಿಕರಣದಲ್ಲಿ ಮಾತ್ರವಲ್ಲ, ಹಿಂದಿನ ಅಧಿಕರಣ-ದಲ್ಲಿಯೂ ಕೂಡ ಹೇಳಿದ್ದಾಗಿದೆ. ಆದ್ದರಿಂದ 'ದೃಢಯುಕ್ತಿಯ ವಿರೋಧ ಪರಿಹಾರ' ಎಂಬುದಕ್ಕೆ ಏನರ್ಥ ?

**किन्तु श्रुतिप्रतीतार्थत्यागं विनाऽनुपपद्यमानत्वम् ।**

ಉತ್ತರ - 'ಶ್ರುತಿಯನ್ನು ನೋಡಿದಾಗ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗ ಮಾಡದೇ ಯುಕ್ತಿಯಲ್ಲಿ ದಾರ್ಢ್ಯವು ಯುಕ್ತವಾಗುವುದಿಲ್ಲ' ಇದೇ ಯುಕ್ತಿಯ ದಾರ್ಢ್ಯ.

**पूर्वत्र हि कारीयदिर्वृष्ट्यादि हेतुत्वरूपप्रतीतार्थात्यागेऽपि विसंवादो वैगुण्यादिनोपपन्नः ।**

ಹಿಂದಿನ ಅಧಿಕರಣದಲ್ಲಿ ಕಾರೀರ್ಯಾದಿ ವಾಕ್ಯಗಳಿಗೆ ಪ್ರತೀತವಾದ ಅರ್ಥವನ್ನೇ ಸ್ವೀಕರಿಸುತ್ತೇವೆ. ಕಾರೀರ್ಯಾದಿಯಾಗವು ವೃಷ್ಟ್ಯಾದಿಗಳಿಗೆ ಕಾರಣವಾಗಿದೆ ಎಂದು ಅಂಗೀಕರಿಸಿದಾಗಲೂ ಯಾವುದೇ ಬಾಧಕವಿಲ್ಲ. ಕೆಲವೊಮ್ಮೆ ಅನುಷ್ಠಾನ ಮಾಡಿದರೂ ಫಲವಿಸಂವಾದವು ಇರಬಹುದು. ಅದನ್ನು ಕರ್ತ್ರ್ಯವೈಗುಣ್ಯಾದಿಗಳಿಂದ ಉಪಪಾದನೆ ಮಾಡುತ್ತೇವೆ. ಹೀಗೆ ಅನ್ಯಥಾ ಉಪಪನ್ನವಾಗುವುದರಿಂದ ಪ್ರತೀತಾರ್ಥವನ್ನು ಬಿಡಬೇಕಾಗಿಲ್ಲ.

**इह तु जडस्य मृदादेर्वक्तृत्वादिरूपप्रतीतार्थात्यागे जडत्वादिकमनुपपन्नम् ।**

ಈ ಅಧಿಕರಣದ ಸಿದ್ಧಾಂತದಲ್ಲಿ ಜಡವಾದ ಮೃತ್ ಮೊದಲಾದವುಗಳಲ್ಲಿ ವಕ್ತೃತ್ವಾದಿಗಳು ಪ್ರತೀತವಾಗುತ್ತಿವೆ. ಇದನ್ನು ತ್ಯಾಗ ಮಾಡದಿದ್ದರೆ 'ಜಡತ್ವಾತ್' ಎಂಬ ಹೇತುವು ಅನುಪಪನ್ನವಾಗುತ್ತದೆ. 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಅನುಮಾನದಲ್ಲಿ ಜಡತ್ವವೆಂಬ ಹೇತುವು ವಕ್ತೃತ್ವವನ್ನು ಒಪ್ಪಿದರೆ, ಅನುಪಪನ್ನವಾಗುತ್ತದೆ.

**जडस्य कर्मज्ञानेन्द्रियादिहीनस्य वक्तृत्वकामयितृत्वादेरयोगात् ।**

ಜಡಪದಾರ್ಥಕ್ಕೆ ಯಾವುದೇ ಕರ್ಮೇಂದ್ರಿಯಗಳಾಗಲೀ, ಜ್ಞಾನೇಂದ್ರಿಯಗಳಾಗಲೀ ಇರುವುದಿಲ್ಲ. ಆದ್ದರಿಂದ ವಕ್ತೃತ್ವ ಹಾಗೂ ಕಾಮಯಿತೃತ್ವ ಜಡವಾದ ಮಣ್ಣಿನಲ್ಲಿ ಸರ್ವಥಾ ಕೂಡುವುದಿಲ್ಲ. ಆದ್ದರಿಂದ ಜಡತ್ವವೆಂಬ ಹೇತು ಅನನ್ಯಥಾಸಿದ್ಧವಾಗಿದೆ. ಜಡತ್ವವಿರಲಿ ವಕ್ತೃತ್ವಾಭಾವವು ಇರುವುದು ಬೇಡ ಎಂಬ ಅಪ್ರಯೋಜಕಾಶಂಕೆಗೆ ಬಾಧಕತರ್ಕವಿದೆ.

**इन्द्रियाणामपि संवादादिश्रवणात्तेषां चेन्द्रियान्तराभावात् ।**

ಕೇವಲ ಜಡಪದಾರ್ಥಗಳಿಗೆ ವಕ್ತೃತ್ವವಷ್ಟೇ ಇಲ್ಲಿ ಶ್ರುತವಾಗಿಲ್ಲ. ಇಂದ್ರಿಯಗಳಿಗೆ ಪರಸ್ಪರ ಸಂವಾದವಿರುವುದೂ ಶ್ರುತವಾಗಿದೆ. 'ಅಹಂ ಶ್ರೇಯಸಿ ವ್ಯೂದಿರೇ' ಇತ್ಯಾದಿಯಾಗಿ ಜಡವಾದ ಇಂದ್ರಿಯಗಳಲ್ಲಿ ಸಂವಾದವು ಕೂಡುವುದಿಲ್ಲ. ಇಂದ್ರಿಯಗಳು ಮಾತನಾಡಿದವು ಎಂದು ಹೇಳಬೇಕಾದರೆ ಅವುಗಳಿಗೆ ಮತ್ತೊಂದು ಇಂದ್ರಿಯವನ್ನು ಒಪ್ಪಬೇಕಾಗುತ್ತದೆ. ಇದು ಸಾಧ್ಯವಿಲ್ಲ. ಆದ್ದರಿಂದ 'ಚಕ್ಷುರಾದಿ ಇಂದ್ರಿಯಮ್ ಸಂವಾದಾದಿಕರ್ತೃ ನ ಭವತಿ ಸ್ವಯಮೇವ ಇಂದ್ರಿಯತ್ವಾತ್' ಎಂಬ ಯುಕ್ತಿಯೂ ಕೂಡ ಅನ್ಯಥಾ ಅನುಪಪನ್ನವಾಗಿದೆ.

ಹೀಗೆ ಶ್ರುತಿಯಲ್ಲಿ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗ ಮಾಡದಿದ್ದರೆ ಯುಕ್ತಿಯು ಅನುಪಪನ್ನವಾಗುತ್ತದೆ ಎಂಬ ದಾರ್ಢ್ಯವನ್ನು ಹೇಳಿದಂತಾಯಿತು.

**व्याप्तिपक्षधर्मतावत्त्वं दार्ढ्यमिति सुधायामपि श्रुतिप्रतीतार्थाभावेन सह हेतोर्व्याप्त्यादिमत्त्वं विवक्षितम् । न त्वभिप्रेतार्थाभावेन ।**

ಪ್ರಶ್ನೆ - ನೀವು 'ಶ್ರುತಿಯಲ್ಲಿ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗ ಮಾಡದೇ ಯುಕ್ತಿಯಲ್ಲಿ ದಾರ್ಢ್ಯವು ಯುಕ್ತವಾಗುವುದಿಲ್ಲ' ಎಂದು ಹೇಳಿದಿರಿ. ಆದರೆ ನ್ಯಾಯಸುಧೆಯಲ್ಲಿ 'ವ್ಯಾಪ್ತಿಪಕ್ಷಧರ್ಮತಾವತ್ತ್ವಂ ದಾರ್ಢ್ಯಮ್' ಎಂದು ಹೇಳಿದ್ದಾರೆ. ಇದನ್ನು ಪೂರ್ವಪಕ್ಷದ ಪ್ರಕಾರ ವಿವಕ್ಷಿಸಿದರೆ ಎಲ್ಲಾ ಅಧಿಕರಣಗಳಲ್ಲಿಯೂ ಇದು ಇದ್ದೇ ಇರುತ್ತದೆ. ಸಿದ್ಧಾಂತದ ಪ್ರಕಾರ ಯಾವ ಅಧಿಕರಣದಲ್ಲಿಯೂ ಇರುವುದೇ ಇಲ್ಲ. ಆದ್ದರಿಂದ ಸುಧೆಯಲ್ಲಿ ಹೇಳಿದ್ದು ತಪ್ಪಾಯಿತಲ್ಲವೇ ?

ಉತ್ತರ - ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಯಾವುದಕ್ಕೆ ಇರಬೇಕು ಎಂಬುದನ್ನು ವಿಚಾರ ಮಾಡಬೇಕು. ಶ್ರುತಿಯಲ್ಲಿ ಪ್ರತೀತಾರ್ಥವೇ ಬೇರೆಯಾಗಿರುತ್ತದೆ. ಅಭಿಪ್ರೇತವಾದ ಅರ್ಥವೇ ಬೇರೆಯಾಗಿರುತ್ತದೆ. ಜಡವಾದ ಕಲ್ಲು ಮಣ್ಣು ಮೊದಲಾದವುಗಳು ಮಾತನಾಡಿದವು ಎಂಬುದು ಪ್ರತೀತಾರ್ಥವೆನಿಸುತ್ತದೆ. ಮಣ್ಣು, ಕಲ್ಲು ಮೊದಲಾದವುಗಳಲ್ಲಿ ಅಂತರ್ಗತರಾದ ಅಭಿಮಾನಿ-ದೇವತೆಗಳು ಮಾತನಾಡಿದರು ಎಂಬುದು ಅಭಿಪ್ರೇತವಾದ ಅರ್ಥ. ಅಭಿಪ್ರೇತವಾದ ಅರ್ಥದ ಅಭಾವವನ್ನು ಯುಕ್ತಿಯಿಂದ ಸಾಧನೆ ಮಾಡಲು ಹೊರಟಾಗ, ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಅನುಮಾನದಲ್ಲಿ ಇರುವುದಿಲ್ಲ. ಪ್ರತೀತವಾದ ಅರ್ಥದ ಅಭಾವವನ್ನು ಸಾಧನೆ ಮಾಡಲು ಯುಕ್ತಿಯನ್ನು ಹೇಳಿದರೆ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಇರುತ್ತವೆ. ಜಡವಾದ ಪದಾರ್ಥಗಳಿಗೆ ವಕ್ತೃತ್ವವಿದೆ ಎಂಬುದು ಪ್ರತೀತಾರ್ಥ. 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಅನುಮಾನದಲ್ಲಿ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಇವೆ. ವಕ್ತೃತ್ವಾಭಾವದಿಂದ ಸಾಧ್ಯದ ಜೊತೆಗೆ ಜಡತ್ವಹೇತುವಿಗೆ ವ್ಯಾಪ್ತಿಯು ಎಲ್ಲೆಡೆ ಇರುತ್ತದೆ. ಪಕ್ಷವಾದ ಮೃತ್‌ನಲ್ಲಿ ಜಡತ್ವವೆಂಬ ಹೇತುವಿರುವುದರಿಂದ ಪಕ್ಷಧರ್ಮತಾ ಇರುತ್ತದೆ. ಹೀಗೆ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳಿರುವುದು ಸಿದ್ಧಾಂತದಲ್ಲಿಯೂ ಒಪ್ಪಿರುತ್ತೇವೆ. ಒಂದುವೇಳೆ ಅಭಿಪ್ರೇತವಾದ ಅಭಿಮಾನಿಚೇತನರಿಗೆ ವಕ್ತೃತ್ವವೆಂಬ ಯಾವ

ಅರ್ಥವಿದೆಯೋ, ಅದರ ಅಭಿಪ್ರೇತವಾದ ಅರ್ಥದ ಅಭಾವವನ್ನು ಸಾಧನೆ ಮಾಡಲು ಹೊರಟಾಗ 'ಮೃದಭಿಮಾನೀ ಚೇತನಃ ನ ವಕ್ತಾ ಜಡತ್ವಾತ್' ಎಂದು ಅನುಮಾನವನ್ನು ಪ್ರಯೋಗಿಸಬೇಕು. ಚೇತನವೆಂಬ ಪಕ್ಷದಲ್ಲಿ ಜಡತ್ವ ಹೇತುವೇ ಇರುವುದಿಲ್ಲ. ಮತ್ತು ವಕ್ತೃತ್ವಾಭಾವದ ಜೊತೆಗೆ ಜಡತ್ವವು ವ್ಯಾಪ್ತವೂ ಆಗಿರುವುದಿಲ್ಲ. ಆದ್ದರಿಂದ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಇರುವುದಿಲ್ಲ. ಆದ್ದರಿಂದ ಜಡತ್ವವನ್ನು ಪಕ್ಷವನ್ನಾಗಿ ಮಾಡಿದರೆ ಸಿದ್ಧಸಾಧನತಾ ಎಂಬ ದೋಷ ಬರುತ್ತದೆ. ಚೇತನತ್ವವನ್ನು ಪಕ್ಷವನ್ನಾಗಿ ಮಾಡಿದರೆ ನಿಮಗೆ ಅಸಿದ್ಧಿ ಎಂಬ ದೋಷವು ಬರುತ್ತದೆ ಎಂದು ಸಿದ್ಧಾಂತದಲ್ಲಿ ಹೇಳುತ್ತೇವೆ. ಆದ್ದರಿಂದ ನ್ಯಾಯಸುಧೆಯಲ್ಲಿರುವ 'ವ್ಯಾಪ್ತಿಪಕ್ಷಧರ್ಮತಾವತ್ವಂ ದಾರ್ಢ್ಯಮ್' ಎಂಬ ಮಾತಿಗೆ 'ಶ್ರುತಿಪ್ರತೀತಾರ್ಥಾಭಾವೇನ ಸಹ ಯಾ ವ್ಯಾಪ್ತಿಃ ತದನುಕೂಲಾ ಯಾ ಪಕ್ಷಧರ್ಮತಾ ತದ್ವತ್ವಮ್ ನ ತು ಅಭಿಪ್ರೇತಾರ್ಥಾಭಾವೇನ ಸಹ ಯಾ ವ್ಯಾಪ್ತಿಃ ತದನುಕೂಲಾ ಯಾ ಪಕ್ಷಧರ್ಮತಾ ತದ್ವತ್ವಮ್' ಎಂದು ವಿವಕ್ಷಿಸಬೇಕು.

**अत्र श्रुतिसमन्वयेनोक्तं ब्रह्मणः कारणत्वादिकं न युक्तमुत युक्तमिति चिन्ता।**

ಅಧಿಕರಣದ ಸಂಶಯಕೋಟಿಗಳು ಹೀಗಿವೆ - ಈ ಅಧಿಕರಣದಲ್ಲಿ ಶ್ರುತಿಸಮನ್ವಯದಿಂದ ಬ್ರಹ್ಮನಲ್ಲಿ ಮಾಡಿದ ಜಗತ್ಕಾರಣತ್ವಾದಿಗಳು ಅಯುಕ್ತವೋ, ಅಥವಾ ಯುಕ್ತವೋ ? ಎಂಬುದು ಪ್ರಧಾನ ಸಂಶಯ.

**तदर्थं वेदोऽप्रमाणमुत नेति ।**

ಅದಕ್ಕಾಗಿ ವೇದವು ಅಪ್ರಮಾಣವೋ, ಅಥವಾ ಪ್ರಮಾಣವೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''मृदब्रवीत्'' इत्यादिवेदैकदेशो युक्तिविरुद्ध उत नेति ।**

ಅದಕ್ಕಾಗಿ 'ಮೃದಬ್ರವೀತ್' ಇತ್ಯಾದಿ ವೇದದ ಏಕದೇಶವಾಕ್ಯಗಳು ಯುಕ್ತಿವಿರುದ್ಧವೋ, ಅಥವಾ ಅಲ್ಲವೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं मृदादिशब्दः किं जडपरः किं वाऽभिमानिचेतनपर इति ।**

ಅದಕ್ಕಾಗಿ ಮೃದಾದಿಶಬ್ದಗಳು ಜಡಪರವೋ, ಅಥವಾ ಅಭಿಮಾನಿಯಾದ ಚೇತನಪರವೋ? ಎಂಬ ಸಂಶಯ ಪರಿಹಾರವಾಗಬೇಕು.

**तदर्थमभिमन्यमानमृदाद्यनुगतानां विग्रहवतामभिमानिनामनुपलब्धिः किमभावात्किं वाऽन्तर्धानादिति ।**

ಅಭಿಮಾನ್ಯಧಿಕರಣ (೨-೧-೩)

ಅದಕ್ಕಾಗಿ ಅಭಿಮನ್ಯಮಾನವಾದ ಮೃದಾದಿಗಳಲ್ಲಿ ಅನುಗತವಾದ ದೇಹವನ್ನು ಧರಿಸಿದ ಅಭಿಮಾನಿಗಳು ಕಾಣಸದೇ ಇರಲು ಅವರ ಇಲ್ಲದಿರುವಿಕೆಯು ಕಾರಣವೋ? ಅಥವಾ ಇದ್ದೂ ಕೂಡ ಅಂತರ್ಧಾನಶಕ್ತಿ ಇರುವುದು ಕಾರಣವೋ?

**नच वेदापौरुषेयत्वस्य पूर्वत्र साधितत्वादपौरुषेयस्य चाप्रामाण्यायोगात्-पूर्वपक्षानुदय इति वाच्यम् ।**

ಪ್ರಶ್ನೆ - ಹಿಂದಿನ ನ ವಿಲಕ್ಷಣತ್ವಾಧಿಕರಣದಲ್ಲಿ ವೇದಾಪೌರುಷೇಯತ್ವವನ್ನು ಸಾಧಿಸಿದ್ದಾಗಿದೆ. ಯಾವುದು ಅಪೌರುಷೇಯವೋ ಅದು ಪ್ರಮಾಣವೇ ಆಗಿರುತ್ತದೆಂದೂ ಕೂಡ ಸಾಧಿಸಿದ್ದಾಗಿದೆ. ಹೀಗಿರುವಾಗ ಈ ಅಧಿಕರಣದಲ್ಲಿ ಅಪೌರುಷೇಯವಾದ ವೇದಕ್ಕೆ ಅಪ್ರಾಮಾಣ್ಯ ಬರುತ್ತದೆಂಬ ಪೂರ್ವಪಕ್ಷವು ಹೇಗೆ ಹುಟ್ಟುತ್ತದೆ ?

**१. अपौरुषेयत्वस्य प्रामाण्यं विनेव जडत्वादेर्वक्तृत्वाभावं विनानुपपत्तेर्न वेदप्रामाण्यनिश्चय इति वा**

**२. पिपीलिकालिपिवदप्रमाणानुकरणशुकादिवाक्यवच्च न पुरुषदोषाभावमात्रेण प्रामाण्यमिति वा**

**३. युक्तिविरोधादपौरुषेयत्वमेव नेति वेति पूर्वपक्षोदयात् ।**

ಉತ್ತರ - ಒಟ್ಟು ಮೂರು ಬಗೆಯಲ್ಲಿ ಈ ಅಧಿಕರಣದ ಪೂರ್ವಪಕ್ಷವು ಪ್ರಾಪ್ತವಾಗುತ್ತದೆ -

೧. ಪ್ರಾಮಾಣ್ಯವನ್ನು ಬಿಟ್ಟು ಅಪೌರುಷೇಯತ್ವವು ಅನುಪಪನ್ನವಾಗುತ್ತದೆ. ಅಪೌರುಷೇಯತ್ವವು ನಿಯಮೇನ ಪ್ರಾಮಾಣ್ಯಕ್ಕೆ ಸಾಧಕವೇ ಆಗುತ್ತದೆ ಎಂದು ನೀವು ಹೇಗೆ ಹೇಳುತ್ತೀರೋ ಅದರಂತೆ ನಾವೂ ಕೂಡ ವಕ್ತೃತ್ವಾಭಾವವನ್ನು ಬಿಟ್ಟು ಜಡತ್ವವು ಅನುಪಪನ್ನವಾಗುತ್ತದೆಂದು ಹೇಳುತ್ತೇವೆ. ಅಂದರೆ ವಕ್ತೃತ್ವವನ್ನು ಒಪ್ಪಿದರೆ ಜಡತ್ವವೇ ಕೂಡುವುದಿಲ್ಲ ಎಂಬ ಅನುಪಪತ್ತಿಯು ಇರುತ್ತದೆ. ಆದ್ದರಿಂದ ಪ್ರಾಮಾಣ್ಯಕ್ಕೆ ಸಾಧಕವಾಗಿ ಅನ್ಯಥಾನುಪಪತ್ತಿ ಇರುತ್ತದೆ. ಅದರಂತೆ ಅಪ್ರಾಮಾಣ್ಯಕ್ಕೆ ಸಾಧಕವಾಗಿಯೂ ಅನ್ಯಥಾನುಪಪತ್ತಿಯು ಇರುತ್ತದೆ. ಇಂತಹ ಸಂದರ್ಭದಲ್ಲಿ ಅಪೌರುಷೇಯ-ವಾದ್ದರಿಂದ ಪ್ರಮಾಣವೋ? ಅಥವಾ ಅನನ್ಯಥಾಸಿದ್ಧವಾದ ಯುಕ್ತಿವಿರೋಧವು ಇರುವುದರಿಂದ ವೇದವು ಅಪ್ರಮಾಣವೋ? ಎಂಬ ಸಂಶಯವೇ ಬರುತ್ತದೆ ಹೊರತು, ವೇದಪ್ರಾಮಾಣ್ಯದಲ್ಲಿ ನಿಶ್ಚಯವು ಉಂಟಾಗುವುದಿಲ್ಲ.

೨. ಪಿಪೀಲಿಕಾಲಿಪಿಯಲ್ಲಿ ಯಾವುದೇ ಪುರುಷದೋಷ ಇರುವುದಿಲ್ಲ. ಅಥವಾ ಅನುಕರಣ ಮಾಡುವ ಶುಕಾದಿವಾಕ್ಯದಲ್ಲಿಯೂ ಪುರುಷದೋಷ ಇರುವುದಿಲ್ಲ. ಪಶ್ಚಿಮದಲ್ಲಿ ಸೂರ್ಯನು ಹುಟ್ಟುತ್ತಾನೆ ಎಂದು ಪುರುಷನೊಬ್ಬನು ಹೇಳಿದರೆ ಅದನ್ನೇ ಗಿಳಿಯು ಉಚ್ಚರಿಸುತ್ತದೆ. ಆ ಗಿಳಿಯಲ್ಲಿ ವಕ್ತೃವಿನ ದೋಷ ಇರುವುದಿಲ್ಲ. ಏಕೆಂದರೆ ವಿಪ್ರಲಿಪ್ಸಾದಿದೋಷಗಳು ಆ ಗಿಳಿಯಲ್ಲಿ ಇರುವುದಿಲ್ಲ. ಇಂತಹ ಪಿಪಿಲೀಕಾಲಿಪಿಯಲ್ಲಿ ಮತ್ತು ಶುಕಾದಿವಾಕ್ಯಗಳಲ್ಲಿ ಪ್ರಾಮಾಣ್ಯವು ಇರುವುದಿಲ್ಲ. ಆದ್ದರಿಂದ ಅಪೌರುಷೇಯವಾದ ಮಾತ್ರಕ್ಕೆ ಪುರುಷದೋಷವಿರುವುದಿಲ್ಲ. ಆದ್ದರಿಂದ ಪ್ರಮಾಣವಾಗುತ್ತದೆಂದು ಸಮರ್ಥನೆ ಮಾಡಲು ಸಾಧ್ಯವೇ ಇಲ್ಲ. ಅಪೌರುಷೇಯವಾದ ಕೆಲವು ವಾಕ್ಯಗಳಲ್ಲಿಯೂ ಪ್ರಾಮಾಣ್ಯವು ಕಂಡಿರುವುದಿಲ್ಲ.

೩. ಅಥವಾ ಬಲಿಷ್ಠವಾದ ಯುಕ್ತಿವಿರೋಧವಿರುವುದರಿಂದ ವೇದದಲ್ಲಿ ಅಪೌರುಷೇಯತ್ವವೇ ಇರುವುದಿಲ್ಲ. 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿಗಳಿಗೆ ಕೇವಲ ಬಹುಕಾಲದ ತನಕ ವೇದವು ಇರುತ್ತದೆಂದು ಗೌಣಾರ್ಥವನ್ನು ಮಾಡುತ್ತೇವೆ. ಹೀಗೆ ಮೂರು ಬಗೆಯಲ್ಲಿ ಪೂರ್ವಪಕ್ಷವು ಹುಟ್ಟುತ್ತದೆ.

**एवं चास्याधिकरणस्योपाधिमभिदधता ''दृढयुक्ति'' इत्यनुव्याख्यानेनास्य पूर्वेण सङ्गतिरगतार्थता चोक्तेति ज्ञेयम् ।**

ಆದ್ದರಿಂದಲೇ ಈ ಅಧಿಕರಣದ ಉಪಾಧಿಯನ್ನು ಹೇಳುವ ಸಂದರ್ಭದಲ್ಲಿ ಶ್ರೀಮದಾಚಾರ್ಯರು 'ದೃಢಯುಕ್ತಿವಿರೋಧೇ ತು'ಎಂಬುದಾಗಿ ದೃಢ ಎಂಬ ಪದದಿಂದ ಈಗಾಗಲೇ ಮೂರುಬಗೆಯಲ್ಲಿ ಹೇಳಿದಂತೆ ಯುಕ್ತಿಯ ಪ್ರಾಬಲ್ಯವನ್ನು ಸೂಚನೆ ಮಾಡಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಮತ್ತು ಅಗತಾರ್ಥತ್ವವನ್ನು ಹೇಳಿದಂತಾಯಿತು.

## ಶ್ರೀರಾಘವೇಂದ್ರತೀರ್ಥವಿರಚಿತ
## ಪ್ರಕಾಶ

**प्रकाशः –**

**अभिमानिव्यपदेशस्तु** ।। सङ्गतिटीकादौ युक्तीत्येवोक्तिः पूर्वेणापौनरुक्त्यं सङ्गतिं च दर्शयितुं वृत्तवर्तिष्यमाणे वक्ति ।। **पूर्वत्रेति** ।।

'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ' ಎಂಬುದರಿಂದ ಅಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಸಂಗತಿ ಟೀಕೆಯಲ್ಲಿ ಯುಕ್ತಿ ಎಂದಷ್ಟೇ ಹೇಳಿರುತ್ತಾರೆ. ಈ ಮಾತಿನಿಂದಲೇ ಹಿಂದಿನ

ಅಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ಬರುವುದಿಲ್ಲವೆಂದು, ಮತ್ತು ಸಂಗತಿ ಇರುತ್ತದೆಂದು ಗ್ರಂಥಕಾರರು ತೋರಿಸಲು 'ಪೂರ್ವತ್ರ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈ ಅಧಿಕರಣದಲ್ಲಿ ಪರಿಹರಿಸುತ್ತಿರುವ ಯುಕ್ತಿವಿರೋಧದ ಸ್ವರೂಪವನ್ನು, ಹಿಂದಿನ ಅಧಿಕರಣದಲ್ಲಿ ಪರಿಹರಿಸುತ್ತಿರುವ ಯುಕ್ತಿವಿರೋಧದ ಸ್ವರೂಪವನ್ನು ಈ ವಾಕ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

**प्रकाशः – कैवल्यं** नामान्यथोपपत्त्या श्रुतिप्रतीतार्थाप्रमापकत्वम् । सोपानारोहणन्यायेन क्रम इति भावः । भाष्यटीकयोरस्फुटत्वादाह – **तदुक्तमिति** ।।

'ಕೇವಲಯುಕ್ತ್ಯವಿರೋಧಃ' ಎಂಬಲ್ಲಿರುವ ಕೇವಲ ಶಬ್ದಕ್ಕೆ ಅನ್ಯಥೋಪಪತ್ತಿಯಿಂದ ಶ್ರುತಿಪ್ರತೀತವಾದ ಅರ್ಥವನ್ನು ತ್ಯಾಗ ಮಾಡಬಾರದು ಎಂದರ್ಥ. ಹಿಂದಿನ ಅಧಿಕರಣದಲ್ಲಿ ಹೇಳಿದ ಫಲವ್ಯಭಿಚಾರ ಎಂಬ ಯುಕ್ತಿಯು ಫಲವೈಗುಣ್ಯದಿಂದ ಅನ್ಯಥಾ ಉಪಪನ್ನವಾಗಿತ್ತು. ಆದರೆ ಈ ಅಧಿಕರಣದಲ್ಲಿ ಅದು ಶ್ರುತಿಪ್ರತೀತವಾದ ಅರ್ಥಕ್ಕೆ ತ್ಯಾಜಕವಾಗಿದೆ ಎಂಬ ವ್ಯತ್ಯಾಸವನ್ನು ವಿವಕ್ಷಿಸಬೇಕು. ಸೋಪಾನಾರೋಹಣ-ನ್ಯಾಯದಿಂದ ಕ್ರಮವನ್ನು ತಿಳಿಯಬೇಕು. ಭಾಷ್ಯ ಹಾಗೂ ಟೀಕೆಯಲ್ಲಿ ಅಸ್ಪಷ್ಟವಾದ್ದರಿಂದ 'ತದುಕ್ತಮ್' ಎಂದು ವ್ಯಾಖ್ಯಾನ ಮಾಡಿದ್ದಾರೆ.

**प्रकाशः – सर्वत्रेति** ।। न केवलं ''मृदब्रवीत्'' इत्यादौ । किन्तु सर्वत्रापि वेदवाक्ये दृढयुक्तिविरोधे सति ईदृशः अन्यार्थस्वीकारेण विरोधपरिहारे न्यायप्रकारो द्रष्टव्य इत्यर्थः ।।

'ಸರ್ವತ್ರ' ಎಂದರೇ ಕೇವಲ 'ಮೃದಬ್ರವೀತ್' ಎಂಬ ವಾಕ್ಯಗಳಲ್ಲಷ್ಟೇ ಅಲ್ಲ. ಎಲ್ಲಾ ವಾಕ್ಯಗಳಲ್ಲಿಯೂ ದೃಢಯುಕ್ತಿಯ ವಿರೋಧವು ಬಂದಾಗ ಹೀಗೆ ಅನ್ಯಾರ್ಥವನ್ನು ಸ್ವೀಕಾರ ಮಾಡಿ ವಿರೋಧ ಪರಿಹರಿಸುವ ನ್ಯಾಯಪ್ರಕಾರವನ್ನು ತಿಳಿಯಬೇಕು ಎಂದರ್ಥ.

**प्रकाशः – श्रुतिप्रतीतार्थत्यागं विनेति** ।। अत एव सुधायां ''युक्तिविरोधाः किं प्रत्येकं परिहरणीयाः'' इत्यादिना पुनर्युक्तिविरोधपरिहारमाक्षिप्यात्रत्ययुक्तेः व्याप्त्यादिमत्त्वोपपादनेन निरवकाशतोक्तेति भावः ।।

'ಶ್ರುತಿಪ್ರತೀತಾರ್ಥತ್ಯಾಗಂ ವಿನಾ' ಎಂಬುದರ ಅಭಿಪ್ರಾಯ ಹೀಗಿದೆ - 'ಯುಕ್ತಿವಿರೋಧಾಃ ಕಿಂ ಪ್ರತ್ಯೇಕಂ ಪರಿಹರಣೀಯಾಃ' ಇತ್ಯಾದಿ ವಾಕ್ಯದಿಂದ ಯುಕ್ತಿವಿರೋಧ ಪರಿಹಾರವನ್ನು ಆಕ್ಷೇಪ ಮಾಡಿ ಇಲ್ಲಿರುವ ಯುಕ್ತಿಗೆ ವ್ಯಾಪ್ತ್ಯಾದಿಮತ್ವವನ್ನು ಉಪಪಾದನೆ ಮಾಡಿದ್ದರಿಂದ ನಿರವಕಾಶತ್ವವಿರುತ್ತದೆಂದು ತಿಳಿಯಬೇಕು.

**प्रकाशः – व्याप्तिपक्षधर्मतेति** ।। प्रमितव्याप्तिपक्षधर्मतावद्युक्तः'' इति सुधावाक्यतात्पर्यानुवादोऽयम् ।। न त्वभिप्रेतेति ।। अप्रामाण्येनेत्यर्थः ।

'ಪ್ರಮಿತವ್ಯಾಪ್ತಿಪಕ್ಷಧರ್ಮತಾವದ್ಯುಕ್ತಃ' ಎಂಬ ಸುಧಾವಾಕ್ಯದ ತಾತ್ಪರ್ಯವನ್ನು ಪ್ರಕೃತ ಗ್ರಂಥಕಾರರು ವ್ಯಾಪ್ತಿಪಕ್ಷಧರ್ಮತಾವದ್ಯುಕ್ತಃ ಇತ್ಯಾದಿಯಾಗಿ ಅನುವಾದ ಮಾಡಿದ್ದಾರೆ. 'ಅಭಿಪ್ರೇತ' ಎಂದರೆ ಅಪ್ರಾಮಾಣ್ಯದಿಂದ ಶ್ರುತಿಯನ್ನು ಕೂಡಿಸಬಾರದು ಎಂದರ್ಥ.

**प्रकाशः – ''वेदो विषयः । प्रमाणं न वेति संशयः'' इति टीकां फलचिन्तोक्तिपूर्वं व्यनक्ति – अत्र श्रुतीति ।।**

'ವೇದೋ ವಿಷಯಃ । ಪ್ರಮಾಣಂ ನ ವೇತಿ ಸಂಶಯಃ' ವೇದವು ವಿಷಯವಾಗಿದೆ. ಅದು ಪ್ರಮಾಣವೋ, ಅಲ್ಲವೋ ? ಎಂಬುದು ಈ ಅಧಿಕರಣದ ಸಂಶಯ. ಈ ಸಂಶಯದ ಫಲೀಭೂತವಾದ ಮತ್ತೊಂದು ಅಂಶವನ್ನು ಗ್ರಂಥಕಾರರು 'ಅತ್ರ ಶ್ರುತಿಸಮನ್ವಯೇನ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಶ್ರುತಿಸಮನ್ವಯದಿಂದ ಹೇಳಲ್ಪಟ್ಟ ಬ್ರಹ್ಮನ ಜಗತ್‌ಕಾರಣತ್ವವು ಅಯುಕ್ತವೋ, ಯುಕ್ತವೋ? ಎಂಬುದು ಫಲೀಭೂತವಾದ ಸಂಶಯ. ಇದರ ನಂತರ ಬರುವ ಸಂಶಯವನ್ನು ವೇದವು ಅಪ್ರಮಾಣವೋ ಅಲ್ಲವೋ? ಎಂಬ ಸಂಶಯವನ್ನು ಟೀಕೆಯಲ್ಲಿ ಹೇಳಿದ್ದಾರೆ.

**प्रकाशः – युक्तीति ।। मृन्न वक्त्री जडत्वादित्यादियुक्तीत्यर्थः ।। विग्रहवतामिति।।** वचनाद्युपपत्त्यर्थमेतत् ।

'ಯುಕ್ತಿವಿರುದ್ಧಃ ಉತ ನ' ಎಂದು ಮೂರನೆಯ ಸಂಶಯವನ್ನು ಹೇಳಿದ್ದಾರೆ. 'ಯುಕ್ತಿವಿರೋಧ' ಎಂಬುದರಿಂದ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿಯ ವಿರುದ್ಧವಾದ ವೇದಭಾಗವನ್ನು ವಿವಕ್ಷಿಸಬೇಕು. 'ವಿಗ್ರಹವತಾಮ್' ಎಂಬುದರಿಂದ ಶರೀರಾದಿಗಳನ್ನು ಹೊಂದಿರುವ ಅಭಿಮಾನಿದೇವತೆಗಳು ಎಂದೇಕೆ ಹೇಳಿದ್ದಾರೆ ? ಎಂದರೆ ಅಭಿಮಾನಿಚೇತನರಲ್ಲಿ ವಕ್ತೃತ್ವಾದಿಗಳನ್ನು ಉಪಪಾದನೆ ಮಾಡಲು ಹೇಳಿದ್ದಾರೆ. ದೇವತೆಗಳಿಗೆ ದೇಹ, ಇಂದ್ರಿಯ ಮೊದಲಾದವುಗಳು ಇಲ್ಲದಿದ್ದರೆ ವಕ್ತೃತ್ವವೇ ಯುಕ್ತವಾಗುವುದಿಲ್ಲ. ವಕ್ತೃತ್ವಾದಿಗಳನ್ನು ಕೂಡಿಸಬೇಕೆಂದರೆ ದೇಹಾದಿಗಳನ್ನು ಒಪ್ಪಲೇಬೇಕು. ಅಂತಹ ದೇಹಾದಿಗಳು ಕಾಣಿಸದೇ ಇರಲು ಏನು ಕಾರಣ ? ಎಂಬುದನ್ನು ವಿಚಾರ ಮಾಡಿದ್ದಾರೆ.

**प्रकाशः –** यद्यपि विग्रहादिमद्देवतासत्त्वमात्रेण मृदादिशब्दस्य न तत्परत्वम् । तस्य तात्पर्यनिर्णायकाधीनत्वात् ।

ಪ್ರಶ್ನೆ - ಶರೀರ ಇಂದ್ರಿಯ ಮೊದಲಾದವುಗಳನ್ನು ಹೊಂದಿರುವ ದೇವತೆಗಳು ಇದ್ದಾರೆಂಬ ವಿಷಯದಲ್ಲಿ ಪ್ರಮಾಣವನ್ನು ಹೇಳಿದ ಮಾತ್ರಕ್ಕೆ ಮೃದಾದಿಶಬ್ದಗಳು ಅಭಿಮಾನಿಚೇತನಪರವಾಗಿವೆ ಎಂಬುದು ಸಿದ್ಧವಾಗುವುದಿಲ್ಲ. ಅದು ಸಿದ್ಧವಾಗಬೇಕಾದರೆ ತಾತ್ಪರ್ಯನಿರ್ಣಾಯಕವನ್ನು ಹೇಳಬೇಕು. ತಾತ್ಪರ್ಯನಿರ್ಣಾಯಕವಾದ ಪ್ರಮಾಣವನ್ನು ನೀಡದಿದ್ದರೆ ಮೃದಾದಿಶಬ್ದಗಳಿಗೆ ಆ ದೇವತೆಗಳಲ್ಲಿ ತಾತ್ಪರ್ಯವು ಸಿದ್ಧವಾಗುವುದಿಲ್ಲ. ಆದ್ದರಿಂದ ತಾತ್ಪರ್ಯನಿರ್ಣಾಯಕವನ್ನು ಕೂಡ ಗ್ರಂಥಕಾರರು ತೋರಿಸಬೇಕಿತ್ತಲ್ಲವೇ?

**प्रकाशः – तथापि वचनादेश्चेतनपरत्वतात्पर्यनिर्णायकस्यात्र व्यक्तत्वाद्बाधपरिहारायाभि मानिसत्त्वासत्त्वोपयुक्तैव चिन्ता प्रदर्शिता ।**

ಉತ್ತರ - ಹೌದು, ಆದರೂ ಕೂಡ ವಕ್ತೃತ್ವಾದಿಗಳೇ ಇಲ್ಲಿ ತಾತ್ಪರ್ಯನಿರ್ಣಾಯಕಗಳಾಗಿವೆ. ಏಕೆಂದರೆ ಪ್ರಾಮಾಣ್ಯವು ಅಪೌರುಷೇಯತ್ವ ಯುಕ್ತಿಯಿಂದ ಈ ಮೊದಲೇ ಸಿದ್ಧವಾಗಿದೆ. ಪ್ರಬಲವಾದ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿವಿರೋಧವೂ ಕೂಡ ಪ್ರಾಪ್ತವಾಗುತ್ತಿದೆ. ಈ ಎರಡರ ಅನ್ಯಥಾನುಪಪತ್ತಿಯಿಂದ ಮೃದಾದಿಶಬ್ದಗಳು ಅಭಿಮಾನಿಚೇತನಪರವೆಂದು ಸಿದ್ಧವಾಗುತ್ತದೆ. ತಾತ್ಪರ್ಯಕ್ಕೆ ವಕ್ತೃತ್ವಾದಿಗಳು ನಿರ್ಣಾಯಕವಾಗಿವೆ. ಒಂದುವೇಳೆ ದೇವತೆಗಳೇ ಇಲ್ಲವೆಂದಾದರೆ ಶಬ್ದಪ್ರತಿಪಾದ್ಯವಾದ ಅರ್ಥವೇ ಇಲ್ಲವೆಂದಾಗುತ್ತದೆ. ಈ ಬಾಧವನ್ನು ಪರಿಹರಿಸಲು ಅಭಿಮಾನಿದೇವತೆಗಳು ಇದ್ದಾರೋ? ಇಲ್ಲವೋ? ಎಂಬುದಕ್ಕೆ ಉಪಯುಕ್ತವಾದ ಸಂಶಯವನ್ನು ಗ್ರಂಥಕಾರರು ತೋರಿಸಿರುತ್ತಾರೆ.

**प्रकाशः – तथा चायमर्थः । यद्यभावनिमित्ता तेषामनुपलब्धिस्तदा तेषामभावेन तदभिप्रायेण वचनादेर्नेतुमशक्यत्वाद्युक्तिविरोधेन वेदोऽप्रमाणमिति न तेन जगत्कारणत्वस्यसिद्धिः । अन्यथा तु सिद्धिरिति ।**

ಒಟ್ಟು ಅಭಿಪ್ರಾಯ - ಒಂದು ವೇಳೆ ದೇವತೆಗಳೇ ಇರುವುದಿಲ್ಲ. ಆದ್ದರಿಂದ ಅವರು ಕಾಣಿಸುತ್ತಿಲ್ಲ ಎಂದು ಹೇಳುವುದಾದರೆ ಆ ದೇವತೆಗಳ ವಿವಕ್ಷೆಯಿಂದ ಶ್ರುತಿಯಲ್ಲಿರುವ ಮಾತುಗಳು ಯುಕ್ತವಾಗುತ್ತವೆಂದು ನಿರ್ಣಯಿಸಲು ಬರುವುದಿಲ್ಲ. ಆವಾಗ ವೇದವೂ ಕೂಡ ಅಪ್ರಮಾಣವಾಗುತ್ತದೆ. ಆಗ ನಿಮ್ಮ ಉದ್ದೇಶವಾದ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ. ಇದು ಪೂರ್ವಪಕ್ಷದ ಫಲ.

ಸಿದ್ಧಾಂತದಲ್ಲಿ ದೇವತೆಗಳ ಕಾಣದಿರುವಿಕೆಯು ಅಂತರ್ಧಾನನಿಮಿತ್ತಿಕವಾಗಿದೆ. ಆದ್ದರಿಂದ ವಕ್ತೃತ್ವಾದಿಗಳನ್ನು ಹೇಳುವ ಶಬ್ದಗಳನ್ನು ಅವರಲ್ಲಿ ಸಮನ್ವಯ ಮಾಡಲು ಬರುತ್ತದೆ. ಆದ್ದರಿಂದ ಯಾವುದೇ ಯುಕ್ತಿಯ ವಿರೋಧಕ್ಕೆ ಅವಕಾಶವಿಲ್ಲ. ವೇದವೂ ಕೂಡ ಪ್ರಮಾಣವೆಂದು ಸಿದ್ಧವಾಗುತ್ತದೆ. ಇದರಿಂದ ನಮ್ಮ ಉದ್ದೇಶವಾದ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ. ಇದು ಸಿದ್ಧಾಂತದ ಫಲ.

**प्रकाशः – ''ननु नित्यतया वेदस्य प्रामाण्ये व्यवस्थिते तद्विरुद्धाया युक्तेरेवाप्रामाण्यमुचितमिति । मैवम् । व्याप्तिपक्षधर्मतोपेताया युक्तेर्निरवकाशत्वात् । ततश्च सत्प्रतिपक्षतया निश्चायकत्वाभावेनाप्रामाण्यं वेदस्य'' इति सुधावाक्यं विवृण्वन्नेतदारम्भमाक्षिप्य समाधत्ते ।। नचेति ।।**

ಪ್ರಶ್ನೆ - 'ನನು ನಿತ್ಯತಯಾ ವೇದಸ್ಯ ಪ್ರಾಮಾಣ್ಯೇ ವ್ಯವಸ್ಥಿತೇ ತದ್ವಿರುದ್ಧಾಯಾ ಯುಕ್ತೇರೇವಾಪ್ರಾಮಾಣ್ಯಮುಚಿತಮಿತಿ । ಮೈವಮ್ । ವ್ಯಾಪ್ತಿಪಕ್ಷಧರ್ಮತೋಪೇತಾಯಾ ಯುಕ್ತೇರ್ನಿರವಕಾಶತ್ವಾತ್ । ತತಶ್ಚ ಸತ್‌ಪ್ರತಿಪಕ್ಷತಯಾ ನಿಶ್ಚಾಯಕತ್ವಾಭಾವೇನಾಪ್ರಾಮಾಣ್ಯಂ ವೇದಸ್ಯ' ಹಿಂದಿನ ಅಧಿಕರಣದಲ್ಲಿಯೇ ಅಪೌರುಷೇಯವಾದ್ದರಿಂದ ವೇದವು ಪ್ರಮಾಣವಾಗಿದೆ ಎಂದು ನಿರ್ಣಯವಾಯಿತು. ಆದಕ್ಕೆ ವಿರುದ್ಧವಾದ

ಯುಕ್ತಿ ಅಪ್ರಮಾಣವಾಗುತ್ತದೆಂದು ಹೇಳಬೇಕು. ಹೀಗಿರುವಾಗ ಈ ಅಧಿಕರಣವು ಅನಾರಂಭಣೀಯ-ವಾಗುತ್ತದಲ್ಲವೇ? ಎಂದು ಆಕ್ಷೇಪ ಮಾಡಿಕೊಂಡು. ವೇದವು ಅಪೌರುಷೇಯವಾದ್ದರಿಂದ ಪ್ರಮಾಣವೆಂದು ನಿಶ್ಚಯವಾದಂತೆ ಯುಕ್ತಿಯೂ ಕೂಡ ವ್ಯಾಪ್ತಿ ಹಾಗೂ ಪಕ್ಷಧರ್ಮತಾಗಳಿಂದ ಯುಕ್ತವಾಗಿರುವ ಕಾರಣ ಅತ್ಯಂತ ನಿರವಕಾಶವಾಗಿದೆ. ಹೀಗೆ ಶ್ರುತಿ ಹಾಗೂ ಯುಕ್ತಿಗಳೆರಡೂ ನಿರವಕಾಶವಾಗಿ ಸಮಬಲವಾದಾಗ ವೇದಪ್ರಾಮಾಣ್ಯದಲ್ಲಿ ಸಂದೇಹವು ಪ್ರಾಪ್ತವಾಗುತ್ತದೆ. ಆದ್ದರಿಂದ ಸತ್ಪ್ರತಿಪಕ್ಷವು ಬರುವುದರಿಂದ ಯಾವುದೇ ನಿಶ್ಚಾಯಕವಿರುವುದಿಲ್ಲ. ಆದ್ದರಿಂದ ವೇದಕ್ಕೆ ಅಪ್ರಾಮಾಣ್ಯವೇ ಬರುತ್ತದಲ್ಲವೇ? ಈ ಸುಧಾವಾಕ್ಯವನ್ನು ವಿವರಿಸುವವರಾಗಿ ಈ ಅಧಿಕರಣದ ಆರಂಭಣೀಯತ್ವವನ್ನು ಆಕ್ಷೇಪ ಮಾಡಿ ಸಮಾಧಾನವನ್ನು ನೀಡಲು 'ನಚ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – निश्चायकत्वाभावेनेत्येतदुपलक्षणमिति भावेनाह – **पिपीलिकेति** ।। ''पिपीलिकालिपिश्चापि प्रमाणमविरोधतः'' इत्युक्तेः सापि प्रमाणमेवेत्यनुशयादाह – **अप्रमाणेति** ।।

ಗ್ರಂಥದಲ್ಲಿ ನ್ಯಾಯಸುಧೆಯು ಹೇಳಿದ ಸಮಾಧಾನವನ್ನು ಹೇಳಲಾಗಿದೆ. 'ನಿಶ್ಚಾಯಕತ್ವಾಭಾವೇನ' ಎಂಬುದು ನ್ಯಾಯಸುಧೆಯಲ್ಲಿ ಹೇಳಿದ್ದು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ 'ಪಿಪೀಲಿಕಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಪಿಪೀಲಿಕಾಲಿಪಿಶ್ಚಾಪಿ ಪ್ರಮಾಣಮವಿರೋಧತಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದರಿಂದ ಪಿಪೀಲಿಕಾಲಿಪಿಯೂ ಕೂಡ ಪ್ರಮಾಣವೇ ಆಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಅಪ್ರಮಾಣಾನುಕರಣ' ಎಂಬ ವಾಕ್ಯದಿಂದ ಮತ್ತೊಂದು ಉದಾಹರಣೆಯನ್ನು ನೀಡುತ್ತಿದ್ದಾರೆ.

**प्रकाशः** – ननु तत्रापि मूलपुरुषदोषवत्त्वमस्तीति चेन्न । अनुकरणशब्दस्य शुकोदीरितस्यान्यत्वेन तज्जातीये पुरुषदोषसत्त्वेऽपि तत्र तदभावात् ।

ಪ್ರಶ್ನೆ - ಇಲ್ಲಿಯೂ ಕೂಡ ಮೂಲಪುರುಷನ ದೋಷವನ್ನು ಹೇಳಬಹುದು. ಗಿಳಿಗೆ ಏನೂ ಗೊತ್ತಿಲ್ಲದ ಕಾರಣ ಅನುಕರಣ ಮಾಡುತ್ತಿದೆ. ಆದರೆ ಗಿಳಿಗೆ ಹೇಳಿಕೊಟ್ಟ ಮೂಲಪುರುಷನಲ್ಲಿ ದೋಷವಿದೆಯಲ್ಲವೇ?

ಉತ್ತರ - ಅನುಕರಣ ಶಬ್ದವೇ ಬೇರೆ. ಮೂಲಪುರುಷನು ಉಚ್ಚರಿಸಿದ ಶಬ್ದವೇ ಬೇರೆ. ತಜ್ಜಾತೀಯವಾದ ಮೂಲಪುರುಷನು ಉಚ್ಚರಿಸಿದ ಶಬ್ದದಲ್ಲಿ ದೋಷವಿದ್ದರೂ ಅನುಕರಣ ಮಾಡಿದ ಶಬ್ದದಲ್ಲಿ ದೋಷವು ಸರ್ವಥಾ ಇರುವುದಿಲ್ಲ.

**प्रकाशः** – एतदनुशयाद्वा प्रकारान्तरं युक्तीति ।।

ಮೇಲಿನ ಸಮಾಧಾನವು ಸಮಂಜಸವಾಗದಿದ್ದರೆ ಮತ್ತೊಂದು ಪ್ರಕಾರದಿಂದ ಉತ್ತರಿಸುತ್ತಿದ್ದಾರೆ. ('ಅನುಶಯಾತ್' ಪಶ್ಚಾತ್ತಾಪದಿಂದ)

**प्रकाशः** – युक्तिविरोधे भ्रान्त्यादिमूलत्वावश्यंभावादिति भावः ।। **सङ्गतिरिति**।। सोपानारोहणरूपाऽऽक्षेपरूपा वेत्यर्थः ।

ಯುಕ್ತಿವಿರೋಧವು ಪ್ರಾಪ್ತವಾದಾಗ ಶ್ರುತಿಗೆ ಭ್ರಾಂತ್ಯಾದಿಮೂಲತ್ವವನ್ನು ಅವಶ್ಯವಾಗಿ ಹೇಳಲೇ ಬೇಕು. ಸಂಗತಿಃ ಎಂದರೆ ಹಿಂದಿನ ಅಧಿಕರಣದಲ್ಲಿ ಕೇವಲ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಈ ಅಧಿಕರಣದಲ್ಲಿ ದೃಢವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ಸೋಪಾನಾರೋಹಣ-ರೂಪವಾದ ಸಂಗತಿಯನ್ನು ತಿಳಿಯಬಹುದು. ಅಥವಾ ಹಿಂದಿನ ಅಧಿಕರಣದಲ್ಲಿ ಅಪೌರುಷೇಯತ್ವದಿಂದ ಯಾವ ಪ್ರಾಮಾಣ್ಯವನ್ನು ಸಮರ್ಥಿಸಲಾಯಿತೋ, ಅದನ್ನೇ ಆಕ್ಷೇಪ ಮಾಡುತ್ತಿರುವುದರಿಂದ ಆಕ್ಷೇಪಿಕೀ ರೂಪವಾದ ಸಂಗತಿಯನ್ನೂ ಕೂಡ ತಿಳಿಯಬಹುದು.




ಹಿಂದಿನ ಅಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಈ ಅಭಿಮಾನ್ಯಧಿ-ಕರಣದಲ್ಲಿ ಬಲಿಷ್ಠವಾದ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಯುಕ್ತಿಗಳು ದೃಢವಾಗಿವೆ ಎಂಬುದನ್ನು ಉಪಪಾದನೆ ಮಾಡಲು ಶ್ರುತಿಗೆ ಅಪ್ರಾಮಾಣ್ಯವೆನ್ನೇನೂ ಅಂಗೀಕರಿಸಬೇಕಾಗಿಲ್ಲ. ಶ್ರುತಿಯು ಆಪಾತತಃ ಯಾವ ಅರ್ಥವನ್ನು ಹೇಳುತ್ತಿದೆಯೋ, ಅದನ್ನು ಪರಿತ್ಯಾಗ ಮಾಡಿ, ಅನ್ಯಾರ್ಥವನ್ನು ಕಲ್ಪಿಸಬೇಕು ಎಂದು ಅಂಗೀಕರಿಸಿದರೆ ಸಾಕು. 'ಮೃದಬ್ರವೀತ್' ಇತ್ಯಾದಿ ಶ್ರುತಿವಾಕ್ಯಗಳು 'ಮಣ್ಣು ಮಾತನಾಡಿತು' ಇತ್ಯಾದಿಯಾಗಿ ಜಡಪದಾರ್ಥಗಳಲ್ಲಿ ವಕ್ತೃತ್ವಾದಿಗಳನ್ನು ಪ್ರತಿಪಾದನೆ ಮಾಡುತ್ತಿವೆ. 'ಮೃತ್ ನವಕ್ತ್ರೀ ಜಡತ್ವಾತ್' ಎಂಬ ಪ್ರಬಲವಾದ ಯುಕ್ತಿಯ ವಿರೋಧವಿರುವುದರಿಂದ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗಮಾಡಬೇಕು. ಮೃದಭಿಮಾನಿ ದೇವತೆಗಳು ಮಾತನಾಡುತ್ತಾರೆ ಎಂದರ್ಥವನ್ನು ಮಾಡಬೇಕು. ಯಾವುದೇ ಶ್ರುತಿಗಳಿಗೂ ಪ್ರಬಲವಾದ ಯುಕ್ತಿಯ ವಿರೋಧ ಬಂದರೆ ಹೀಗೆಯೇ ಅರ್ಥಾಂತರವನ್ನು ಹೇಳಲೇಬೇಕೆಂಬುದು ಈ ಅಧಿಕರಣದ ಮುಖ್ಯ ಉದ್ದೇಶ. ಆದ್ದರಿಂದ ಪ್ರಬಲ ಯುಕ್ತಿವಿರೋಧವನ್ನು ಸಿದ್ಧಾಂತದಲ್ಲಿಯೂ ಕೂಡ ಒಪ್ಪಿದ್ದಾರೆ.

ಶರೀರಾದಿಗಳನ್ನು ಹೊಂದಿರುವ ಮೃದಭಿಮಾನಿ ದೇವತೆಗಳು ಇಲ್ಲವಾದ್ದರಿಂದಲೇ ಅವರು ಕಾಣಿಸುತ್ತಿಲ್ಲ. ಹಾಗಾಗಿ ಮೃದಾದಿ ಶಬ್ದಗಳು ಜಡವಾದ ಪದಾರ್ಥವನ್ನೇ ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ 'ಮೃದಬ್ರವೀತ್' ಎಂಬ ವೇದದ ಏಕದೇಶವು ಯುಕ್ತಿವಿರುದ್ಧವಾದ್ದರಿಂದ ಅಪ್ರಮಾಣವಾಗುತ್ತದೆ. ಇದೇ ದೃಷ್ಟಾಂತದಿಂದ ಸಮಗ್ರ ವೇದವೂ ಕೂಡ ಅಪ್ರಮಾಣವಾಗುತ್ತದೆ. ಆದ್ದರಿಂದ ಸಮಗ್ರ ಶ್ರುತಿಗಳ ಸಮನ್ವಯದಿಂದ ಬ್ರಹ್ಮನಲ್ಲಿ ಜಗತ್ಕಾರಣತ್ವವನ್ನು ಸಮರ್ಥನೆ ಮಾಡಿದ್ದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷದ ಸಾರ.

ಶರೀರಾದಿಗಳನ್ನು ಹೊಂದಿರುವ ಮೃದಭಿಮಾನಿ ದೇವತೆಗಳು ಅಂತರ್ಧಾನಶಕ್ತಿಯನ್ನು ಹೊಂದಿರುವುದರಿಂದ ನಮಗೆ ಕಾಣಿಸುತ್ತಿಲ್ಲ. ಆದ್ದರಿಂದ ಮೃದಾದಿಗಳಿಗೆ ಅಭಿಮಾನಿಯಾದ ದೇವತೆಗಳನ್ನೇ ಪ್ರತಿಪಾದನೆ ಮಾಡುತ್ತಿವೆ. ಹಾಗಾಗಿ 'ಮೃದಬ್ರವೀತ್' ಇತ್ಯಾದಿ ವೇದದ ವಾಕ್ಯೈಕದೇಶಕ್ಕೆ ಯುಕ್ತಿವಿರೋಧವು ಬರುವುದಿಲ್ಲ. ಆದ್ದರಿಂದ ಈ ದೃಷ್ಟಾಂತದಿಂದ ಸಮಗ್ರ ವೇದಕ್ಕೆ ಅಪ್ರಾಮಾಣ್ಯವನ್ನೂ ಕೂಡ ಹೇಳಲು ಸಾಧ್ಯವಿಲ್ಲ. ಪ್ರಥಮಾಧ್ಯಾಯದಲ್ಲಿ ಸಮಗ್ರ ಶ್ರುತಿಗಳ ಸಮನ್ವಯದಿಂದ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಸಮರ್ಥಿಸಿದ್ದು ಯುಕ್ತವೇ ಆಗಿದೆ. ಇಷ್ಟು ಸಿದ್ಧಾಂತದ ಸಾರ.

ಪರಿಪೂರ್ಣಚಂದ್ರಿಕಾ

ಈ ಅಧಿಕರಣವು ಹೇಗೆ ಆರಂಭಣೀಯವಾಗುತ್ತದೆ? ಹಿಂದಿನ ಅಧಿಕರಣದಲ್ಲಿ ವೇದಾಪೌರುಷೇಯತ್ವವನ್ನು ಸಮರ್ಥನೆ ಮಾಡಿದ್ದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳುವ ಮೂಲಕ ಪೂರ್ವಪಕ್ಷವನ್ನು ಇಲ್ಲಿ ಮಾಡಲು ಹೇಗೆ ಸಾಧ್ಯವಾಗುತ್ತದೆ ? ಎಂಬ ಪ್ರಶ್ನೆ ಬರುತ್ತದೆ. ಅಪೌರುಷೇಯತ್ವವು ಪ್ರಾಮಾಣ್ಯವಿಲ್ಲದಿದ್ದರೂ ಯುಕ್ತವಾಗಬಹುದು. ಅಥವಾ ಪಿಪೀಲಿಕಾಲಿಪಿಯಂತೆ ಅಥವಾ ಅನುಕರಿಸುವ ಗಿಳಿಯ ಮಾತುಗಳಂತೆ ವೇದಾಪೌರುಷೇಯತ್ವವಿದ್ದರೂ ಪ್ರಾಮಾಣ್ಯವನ್ನು ಒಪ್ಪಬೇಕಾಗಿಲ್ಲ. ಪಿಪೀಲಿಕಾಲಿಪಿಯಲ್ಲಿ ಪುರುಷದೋಷವಿಲ್ಲದಿದ್ದರೂ ಪ್ರಾಮಾಣ್ಯವಿರುವುದಿಲ್ಲ. ಗಿಳಿಯ ಮಾತುಗಳಲ್ಲಿಯೂ ಪುರುಷದೋಷವಿಲ್ಲದಿದ್ದರೂ ಪ್ರಾಮಾಣ್ಯವಿರುವುದಿಲ್ಲ. ಅದರಂತೆ ವೇದವೂ ಕೂಡ ಅಪ್ರಮಾಣವಾಗಬಹುದೆಂಬ ಪೂರ್ವಪಕ್ಷವು ಇಲ್ಲಿ ಉದಯವಾಗುತ್ತದೆ. ಆದ್ದರಿಂದ ಈ ಅಧಿಕರಣವು ಆರಂಭಣೀಯವೇ ಆಗಿದೆ.

### ಅಧಿಕರಣಕ್ಕೆ ಗತಾರ್ಥತ್ವ ಪರಿಹಾರ, ಸಿದ್ಧಾಂತ ಸ್ಥಾಪನೆ

## तात्पर्यचन्द्रिका

**ननु पूर्वत्र कारीर्यादिर्वृष्ट्यादिकं प्रति कारणत्वस्य शक्तिरूपस्यातीन्द्रियत्वान्न तदभावः प्रत्यक्षः । किन्तु युक्तिसिद्धः ।**

ಪ್ರಶ್ನೆ - ಹಿಂದಿನ ನ ವಿಲಕ್ಷಣತ್ವಾಧಿಕರಣದಲ್ಲಿ ವೃಷ್ಟ್ಯಾದಿಗಳನ್ನು ಕುರಿತು ಕಾರೀರ್ಯಾದಿ ಯಾಗಗಳಿಗೆ ಯಾವ ಕಾರಣತ್ವವನ್ನು ಹೇಳಲಾಯಿತೋ, ಅದು ಶಕ್ತಿರೂಪವಾಗಿದೆ. ಶಕ್ತಿರೂಪವಾದ ಕಾರಣತ್ವವು ಅತೀಂದ್ರಿಯವಾಗಿರುವುದರಿಂದ ಕಾರಣತ್ವಾಭಾವವು ಪ್ರತ್ಯಕ್ಷಸಿದ್ಧವಾಗುವುದಿಲ್ಲ ಹೊರತು, ಯುಕ್ತಿಯಿಂದಲೇ ಸಿದ್ಧವಾಗಬೇಕು. ಆದ್ದರಿಂದ ಕಾರೀರ್ಯಾದಿಯಾಗಗಳಿಗೆ ವೃಷ್ಟ್ಯಾದಿಕಾರಣತ್ವವನ್ನು ಶ್ರುತಿಗಳು ಹೇಳಿದರೆ ಯುಕ್ತಿವಿರೋಧವು ಪ್ರಾಪ್ತವಾಗುತ್ತದೆ. 'ಇದಂ ಕಾರೀರ್ಯಾದಿಕಂ ವೃಷ್ಟ್ಯಾದಿಕಂ ಪ್ರತಿ ನ ಕಾರಣಮ್ ತದನುಷ್ಠಾನೇಪಿ ತದನುಪಲಂಭಾತ್' ಎಂಬ ಯುಕ್ತಿಯ ವಿರೋಧವನ್ನಷ್ಟೇ ಹೇಳಬೇಕು.

**अत्र तु मृदादीनां वचनक्रियाद्यभावः प्रत्यक्ष इति प्रत्यक्षविरोध एवात्र नतु युक्तिविरोध इति कथं पादसङ्गतिः**

ಆದರೆ ಈ ಅಧಿಕರಣದಲ್ಲಿ 'ಮೃದಬ್ರವೀತ್' ಇತ್ಯಾದಿ ಶ್ರುತಿವಾಕ್ಯಗಳನ್ನು ನೋಡಿದಾಗ ಮಣ್ಣು ಮೊದಲಾದ ಜಡಪದಾರ್ಥಗಳಿಗೆ ವಚನಕ್ರಿಯಾದಿಗಳನ್ನು ಹೇಳುತ್ತಿರುವುದು ಕಾಣಸುತ್ತಿದೆ. ಇದು ಪ್ರತ್ಯಕ್ಷವಿರುದ್ಧ. ಏಕೆಂದರೆ ಮಣ್ಣು, ನೀರು ಮೊದಲಾದವುಗಳು ಮಾತನಾಡುವುದಿಲ್ಲವೆಂಬುದು ಪ್ರತ್ಯಕ್ಷದಿಂದಲೇ ತಿಳಿಯುತ್ತಿದೆ. ಇದರಿಂದ ಶ್ರುತಿಗೆ ಪ್ರತ್ಯಕ್ಷವಿರೋಧವು ಪ್ರಾಪ್ತವಾಗುತ್ತದೆ ಹೊರತು, ಯುಕ್ತಿವಿರೋಧವಲ್ಲ. ಯುಕ್ತಿಪಾದದಲ್ಲಿ ಈ ಅಧಿಕರಣಕ್ಕೆ ಸಂಗತಿಯನ್ನು ಹೇಗೆ ಹೇಳುತ್ತೀರಿ ?

**इति चेन्न । अस्मदाद्यप्रत्यक्षादिकालीनमृदादेरेव वक्तृत्वादिश्रवणात् ।**

ಉತ್ತರ - ಇದು ತಪ್ಪು. ನಮ್ಮ ಪ್ರತ್ಯಕ್ಷಕ್ಕೆ ಕಾಣಿಸುತ್ತಿರುವ ಮಣ್ಣು, ನೀರು ಮೊದಲಾದವುಗಳನ್ನು ಇಲ್ಲಿ ವಿವಕ್ಷಿಸಬಾರದು. ಹೊರತಾಗಿ, ಸೃಷ್ಟಿಯ ಪ್ರಾರಂಭದಲ್ಲಿ ಯಾವ ಮಣ್ಣು ನೀರು ಮೊದಲಾದವುಗಳು ಇದ್ದವೋ, ಅವುಗಳಿಗೆ ವಕ್ತೃತ್ವವನ್ನು ಶ್ರುತಿಯು ಹೇಳುತ್ತಿದೆ ? ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗದ ಆದಿಕಾಲದ ಮಣ್ಣು ನೀರು ಮೊದಲಾದವುಗಳಲ್ಲಿ ವಕ್ತೃತ್ವವನ್ನು ಶ್ರುತಿ ಹೇಳುತ್ತಿದೆ. ಆದ್ದರಿಂದ ಪ್ರತ್ಯಕ್ಷ ವಿರೋಧಕ್ಕೆ ಅವಕಾಶವಿಲ್ಲ.

**न चादिकालीनमृदादेः श्रुत्येकगम्यत्वाद्धर्मिग्राहकश्रुतिबाध इति वाच्यम् ।**

ಪ್ರಶ್ನೆ - ಆದಿಕಾಲದ ಮಣ್ಣು, ನೀರು ಮೊದಲಾದವುಗಳು ಶ್ರುತಿಗೆ ಮಾತ್ರ ವಿಷಯವಾಗಿವೆ. ಹಾಗಾಗಿ ಧರ್ಮಿಗ್ರಾಹಕವಾದ ಶ್ರುತಿಬಾಧ ಬರುತ್ತದೆ. ಅಭಿಪ್ರಾಯ ಹೀಗಿದೆ - 'ಆದಿಕಾಲೀನಾ ಮೃತ್ ನ ವಕ್ತ್ರೀ, ಜಡತ್ವಾತ್ ವರ್ತಮಾನಕಾಲೀನಮೃದ್ವತ್' ಈಗ ಕಣ್ಣಿಗೆ ಕಾಣಿಸುತ್ತಿರುವ ಮಣ್ಣು, ನೀರು ಮೊದಲಾದವುಗಳು ಜಡವಾಗಿವೆ ಮತ್ತು ವಕ್ತೃತ್ವವು ಅವುಗಳಲ್ಲಿರುವುದಿಲ್ಲ. ಅದರಂತೆ ಆದಿಕಾಲದಲ್ಲಿರುವ ಮೃದಾದಿಗಳಲ್ಲಿ ಜಡತ್ವವಿರುವುದರಿಂದ ವಕ್ತೃತ್ವವಿಲ್ಲವೆಂದು ಸಾಧಿಸುತ್ತೇವೆ. ಈ ಅನುಮಾನದಲ್ಲಿ ಪಕ್ಷವು ಶ್ರುತಿಯಿಂದಲೇ ಸಿದ್ಧವಾಗಿದೆ. ಅದೇ ಶ್ರುತಿಯು ಆದಿಕಾಲದ ಮೃತ್‌ನಲ್ಲಿ ವಕ್ತೃತ್ವಾದಿಗಳನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಧರ್ಮಿಗ್ರಾಹಕವಾದ ಶ್ರುತಿಯ ವಿರೋಧ ಬರುತ್ತದಲ್ಲವೇ?

**इदानीन्तनमृदादिकारणत्वेनादिकालीनमृदाद्यनुमानात् ।**

ಉತ್ತರ - ಇದು ತಪ್ಪು. ಆದಿಕಾಲದಲ್ಲಿರುವ ಮೃದಾದಿಗಳೂ ಕೂಡ ಶ್ರುತಿಯಿಂದ ಸಿದ್ಧವಲ್ಲ. ಹೊರತು, ಅನುಮಾನದಿಂದಲೇ ಸಿದ್ಧವಾಗಿವೆ - 'ವರ್ತಮಾನಕಾಲೀನಾ ಮೃತ್ ಸ್ವಸಜಾತೀಯ ಕಾರಣೋಪೇತಾ ಕಾರ್ಯತ್ವಾತ್ ಘಟವತ್' ಎಂಬ ಅನುಮಾನದಿಂದ ಘಟವು ಕಾರ್ಯವಾದ್ದರಿಂದ ತನಗೆ ಸಮಾನಜಾತೀಯವಾದ ಕಾರಣದಿಂದ ಕೂಡಿರುವಂತೆ ಈಗ ಕಾಣಿಸುತ್ತಿರುವ ಮೃದಾದಿಗಳು ಕಾರ್ಯವಾಗಿರುವುದರಿಂದ ಅದಕ್ಕೆ ಸಜಾತೀಯವಾದ ಕಾರಣದಿಂದ ಕೂಡಿವೆ ಎಂಬುದಾಗಿ ಆದಿಕಾಲದ ಮೃದಾದಿಗಳು ಸಿದ್ಧವಾಗುತ್ತವೆ.

**परसिद्धमात्रस्य वा पक्षीकरणात् । आदिकालीनमृदादेर्जडत्वं च मृत्त्वादिनाऽनुमेयम् ।**

ಅಥವಾ 'ಆದಿಕಾಲೀನಾ ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಅನುಮಾನದಲ್ಲಿ ಪರರಿಗೆ ಸಿದ್ಧವಾದ ಪಕ್ಷವು ವಿವಕ್ಷಿತವಾಗಿದೆ. ವಕ್ತೃತ್ವವಿಲ್ಲದ ಮೃದಾದಿಗಳನ್ನಷ್ಟೇ ಪರರು ಒಪ್ಪಿರುತ್ತಾರೆ. ಅದನ್ನೇ ಪಕ್ಷವನ್ನಾಗಿ

ವಿವಕ್ಷಿಸಿ ಅನುಮಾನವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಧರ್ಮಿಗ್ರಾಹಕವಾದ ವಕ್ತೃತ್ವ-ಪ್ರತಿಪಾದಕವಾದ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ.

ಆದಿಕಾಲದ ಮೃದಾದಿಗಳಲ್ಲಿ ಜಡತ್ವವನ್ನು ಮೃತ್ತ್ವಾದಿಗಳಿಂದ ಅನುಮಾನ ಮಾಡಬೇಕು. ಅದು ಹೀಗೆ - 'ಆದಿಕಾಲೀನಾ ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಅನುಮಾನದಿಂದ ಜಡವಾದ್ದರಿಂದ ಆದಿಕಾಲದ ಮೃದಾದಿಗಳಲ್ಲಿ ವಕ್ತೃತ್ವವಿಲ್ಲವೆಂದು ಸಿದ್ಧವಾಗುತ್ತವೆ. ಈ ಅನುಮಾನದಲ್ಲಿ ಜಡತ್ವವೆಂಬ ಹೇತುವೇ ಸಂದಿಗ್ಧವಾಗಿರುವುದರಿಂದ ಸಂದಿಗ್ಧಾಸಿದ್ಧಿದೋಷವು ಬರುತ್ತದೆಂದರೆ 'ಆದಿಕಾಲೀನಾ ಮೃತ್ ಜಡಭೂತೈವ ಮೃತ್ತ್ವಾತ್ ಇದಾನೀಂತನಮೃದ್ವತ್' ಈಗಿರುವ ಮೃತ್‌ನಲ್ಲಿ ಮೃತ್ವವಿದೆ ಮತ್ತು ಜಡವಾಗಿದೆ. ಅದರಂತೆ ಆದಿಕಾಲದ ಮೃತ್‌ನಲ್ಲಿಯೂ ಮೃತ್ವವಿರುವುದರಿಂದ ಜಡತ್ವವಿರಲೇಬೇಕು ಎಂದು ಸಾಧಿಸಬೇಕು. ಆದ್ದರಿಂದ ಜಡತ್ವಹೇತುವಿಗೆ ಸಂದಿಗ್ಧಾಸಿದ್ಧಿದೋಷವು ಬರುವುದಿಲ್ಲ.

**नचैवं मृत्त्वादिनैवावक्तृत्वाद्यनुमीयतामिति वाच्यम् ।**

ಪ್ರಶ್ನೆ - ಮೃತ್ತ್ವಾದಿಹೇತುವಿನಿಂದ ಅವಕ್ತೃತ್ವವನ್ನೇ ನೇರವಾಗಿ ಸಾಧನೆ ಮಾಡಬಹುದು. ಜಡತ್ವ ಹೇತುವಿನಿಂದ ಅವಕ್ತೃತ್ವವನ್ನು ಸಾಧನೆ ಮಾಡಿ, ಪುನಃ ಮೃತ್ತ್ವಹೇತುವಿನಿಂದ ಜಡತ್ವವನ್ನು ಸಮರ್ಥಿಸುವ ಪರಂಪರೆಯನ್ನು ಆಶ್ರಯಿಸುವುದು ತಪ್ಪಲ್ಲವೇ?

**वक्तृत्वादिना जडत्वस्येव मृत्त्वादेर्विरोधाप्रतीतेरवक्तृत्वादिना मृत्त्वादेर्व्याप्तेर-स्फुटत्वात् ।**

ಅಭಿಪ್ರಾಯವಿಷ್ಟು - 'ಮೃತ್ ನ ವಕ್ತ್ರೀ ಮೃತ್ತ್ವಾತ್' ಎಂದು ಸಾಧನೆ ಮಾಡಿದರೆ ಪಕ್ಷಧರ್ಮ ಮತ್ತು ವ್ಯಾಪ್ತಿಗಳು ಸ್ಪಷ್ಟವಾಗಿ ತಿಳಿಯುವುದಿಲ್ಲ. ಜಡತ್ವಹೇತುವಿನಲ್ಲಿ ವ್ಯಾಪ್ತಿಯು ಸ್ಪಷ್ಟವಾಗಿ ತಿಳಿಯುತ್ತದೆ. ಮೃತ್ತ್ವಹೇತುವಿನಲ್ಲಿ ವ್ಯಾಪ್ತಿಯು ಸ್ಪಷ್ಟವಾಗಿ ತಿಳಿಯುವುದಿಲ್ಲ. ಮತ್ತು ಪಕ್ಷಧರ್ಮತಾವು ಸ್ಪಷ್ಟವಾಗಿ ಇರುವುದಿಲ್ಲ. ಆದ್ದರಿಂದ ಜಡತ್ವಹೇತುವಿನಿಂದ ವಕ್ತೃತ್ವಾಭಾವವನ್ನು ಸಾಧನೆ ಮಾಡಿ, ಅನಂತರ ಜಡತ್ವವನ್ನು ಪಕ್ಷದಲ್ಲಿ ಮೃತ್ತ್ವಹೇತುವಿನಿಂದ ಸಾಧನೆ ಮಾಡಬೇಕು. ಹೀಗೆ ಪರಂಪರೆಯನ್ನು ಆಶ್ರಯಿಸಿದಾಗ ಪಕ್ಷಧರ್ಮತಾವು ಸ್ಪಷ್ಟವಾಗುತ್ತದೆ.

**अत एवात्र टीकायां स्फुटव्याप्तिकमस्फुटपक्षधर्मताकं जडत्वं हेतूकृतम् । सुधायां तु स्फुटपक्षधर्मताकमस्फुटव्याप्तिकं मृत्त्वादिकं हेतूकृतम् ।**

ಆದ್ದರಿಂದಲೇ ಟೀಕೆಯಲ್ಲಿ ಸ್ಪಷ್ಟವಾದ ವ್ಯಾಪ್ತಿಯುಳ್ಳ ಅಸ್ಪಷ್ಟವಾದ ಪಕ್ಷಧರ್ಮತಾವುಳ್ಳ ಜಡತ್ವವನ್ನು ಹೇತುವನ್ನಾಗಿ ಮಾಡಿದ್ದಾರೆ. ನ್ಯಾಯಸುಧೆಯಲ್ಲಿ ಸ್ಪಷ್ಟವಾದ ಪಕ್ಷಧರ್ಮತಾವುಳ್ಳ ಅಸ್ಪಷ್ಟವಾದ ವ್ಯಾಪ್ತಿಯುಳ್ಳ ಮೃತ್ತ್ವವನ್ನು ಹೇತುವನ್ನಾಗಿ ಮಾಡಿದ್ದಾರೆ.

सिद्धान्तमाह ।। सिद्धान्तयदित्यादिना ।। अयं भावः —

प्रसिद्धस्य पृथिव्यादेः पक्षत्वे सिद्धसाधनम् ।
देवतायास्तु पक्षत्वे हेत्वसिद्धादिकं भवेत् ।।१।।

ಟೀಕೆಯಲ್ಲಿ ಸಿದ್ಧಾಂತವನ್ನು ಸ್ಥಾಪನೆ ಮಾಡಲು 'ಸಿದ್ಧಾಂತಯತ್' ಇತ್ಯಾದಿ ವಾಕ್ಯವು ಹೊರಟಿದೆ. ಸಿದ್ಧಾಂತದ ಅಭಿಪ್ರಾಯವಿಷ್ಟು -

ಪ್ರಸಿದ್ಧಸ್ಯ ಪೃಥಿವ್ಯಾದೇಃ ಪಕ್ಷತ್ವೇ ಸಿದ್ಧಸಾಧನಮ್ ।
ದೇವತಾಯಾಸ್ತು ಪಕ್ಷತ್ವೇ ಹೇತ್ವಸಿದ್ಧಾದಿಕಂ ಭವೇತ್ ॥

ಪ್ರಸಿದ್ಧವಾದ ಜಡಭೂತವಾದ ಪೃಥಿವ್ಯಾದಿಗಳನ್ನು ಪಕ್ಷವನ್ನಾಗಿ ಮಾಡಿ, ವಕ್ತೃತ್ವಾಭಾವವನ್ನು ಜಡತ್ವ ಹೇತುವಿನಿಂದ ಸಾಧನೆ ಮಾಡಿದರೆ ಸಿದ್ಧಸಾಧನದೋಷವು ಬರುತ್ತದೆ. ಮೃದಭಿಮಾನಿ ದೇವತೆಗಳನ್ನು ಪಕ್ಷವನ್ನಾಗಿ ಮಾಡಿ, ಜಡತ್ವಹೇತುವಿನಿಂದ ವಕ್ತೃತ್ವಾಭಾವವನ್ನು ಸಾಧನೆ ಮಾಡಿದರೆ ಅಸಿದ್ಧಾದಿದೋಷಗಳು ಬರುತ್ತವೆ. ಏಕೆಂದರೆ ದೇವತೆಗಳಲ್ಲಿ ಜಡತ್ವವಾಗಲೀ, ಮೃತ್ತ್ವವಾಗಲೀ ಇರುವುದಿಲ್ಲ.

नहि प्रसिद्धस्य मृदादेः सिद्धान्तेऽपि वक्तृत्वादिकम् ।

ಪ್ರಸಿದ್ಧವಾದ ಮೃದಾದಿಗಳಲ್ಲಿ ವಕ್ತೃತ್ವಾದಿಗಳನ್ನು ಸಿದ್ಧಾಂತದಲ್ಲಿಯೂ ಕೂಡ ಒಪ್ಪಿರುವುದಿಲ್ಲ. ಅದನ್ನು ನೀವು ಪಕ್ಷವನ್ನಾಗಿ ಮಾಡಿದರೆ ಸಿದ್ಧಸಾಧನತಾದೋಷವು ಬರುತ್ತದೆ.

नच धर्मिग्राहकमानेन वक्तृत्वादिना सिद्धायां देवतायां जडत्वमृत्त्वादिकमस्ति।

ಪ್ರಶ್ನೆ - ದೇವತೆಗಳನ್ನು ಪಕ್ಷವನ್ನಾಗಿ ಮಾಡಿದರೂ ಕೂಡ 'ಮೃತ್ ನ ವಕ್ತ್ರೀ ಜಡತ್ವಾತ್' ಇತ್ಯಾದಿಯಾಗಿ ಸಾಧಿಸುತ್ತೇನೆ ?

ಉತ್ತರ - ಧರ್ಮೀಭೂತರಾದ ದೇವತೆಗಳು ಶ್ರುತ್ಯೇಕಸಮಧಿಗಮ್ಯರಾಗಿದ್ದಾರೆ. ಆದಿಕಾಲದ ಮೃದಾದಿಗಳು ಅನುಮಾನದಿಂದ ಸಿದ್ಧವಾಗಬಹುದೇ ಹೊರತು, ಅಭಿಮಾನಿದೇವತೆಗಳು ಯುಕ್ತಿಯಿಂದ ಸಿದ್ಧವಾಗುವುದಿಲ್ಲ. ಶ್ರುತ್ಯೇಕಸಮಧಿಗಮ್ಯರಾದ ಆ ದೇವತೆಗಳಲ್ಲಿ ವಕ್ತೃತ್ವಾದಿಗಳನ್ನೇ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಧರ್ಮಿಗ್ರಾಹಕಪ್ರಮಾಣದಿಂದ ನಿಮ್ಮ ಅನುಮಾನಕ್ಕೆ ವಿರೋಧ ಬರುತ್ತದೆ. ಮತ್ತು ಜಡತ್ವಹೇತು ಪಕ್ಷದಲ್ಲಿಲ್ಲದ ಕಾರಣ ಹೇತ್ವಸಿದ್ಧಿ ಸಂದಿಗ್ಧಾಸಿದ್ಧಿ ಮೊದಲಾದ ದೋಷಗಳೆಲ್ಲವೂ ಬರುತ್ತವೆ.

**अभिमानिदेवता तद्विग्रहतदन्तर्धानशक्त्यादिकं, तस्या एव ''मृदब्रवीत्'' इत्यादौ विवक्षितत्वादिकं चार्थापत्तिसिद्धम् ।**

ಅಭಿಮಾನಿದೇವತೆಗಳು ಮೃದಾದಿಗಳಲ್ಲಿ ಇರುತ್ತಾರೆ. ಮತ್ತು ಅವರು ಮಾತನಾಡಲು ಉಪಯುಕ್ತವಾದ ಇಂದ್ರಿಯಾದಿಗಳನ್ನು ಹೊಂದಿರುತ್ತಾರೆ. ಅದಕ್ಕೆ ಉಪಯುಕ್ತವಾಗಿ ದೇಹವನ್ನು ಪಡೆದಿದ್ದಾರೆ. ಆದರೂ ಕೂಡ ಏಕೆ ಕಾಣಿಸುತ್ತಿಲ್ಲ ಎಂದರೆ ಅಂತರ್ಧಾನಶಕ್ತಿಯನ್ನು ಹೊಂದಿರುತ್ತಾರೆ. 'ಮೃದಬ್ರವೀತ್' ಇತ್ಯಾದಿ ಶಬ್ದಗಳೆಲ್ಲವೂ ಅಂತಹ ದೇವತೆಗಳನ್ನೇ ಪ್ರತಿಪಾದಿಸುತ್ತವೆ. ಈ ಎಲ್ಲಾ ಪ್ರಮೇಯಗಳು ಅರ್ಥಾಪತ್ತಿಯಿಂದ ಸಿದ್ಧವಾಗುತ್ತವೆ. ಏಕೆಂದರೆ ವೇದಪ್ರಾಮಾಣ್ಯವು ಅಪೌರುಷೇಯತ್ವೇನ ಪ್ರಮಿತವಾಗಿದೆ. ಅಂತಹ ವೇದಕ್ಕೂ ಕೂಡ ದೃಢವಾದ ಯುಕ್ತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಇದರ ಅನ್ಯಥಾನುಪಪತ್ತಿಯಿಂದ ಶ್ರುತಿಗಳಿಗೆ ಅರ್ಥಾಂತರವನ್ನು ಮಾಡಬೇಕು.

**नच बहुकल्पनातो वेदाप्रामाण्यकल्पनमेव वरमिति वाच्यम् ।।**

ಪ್ರಶ್ನೆ - ನೀವು ಅನೇಕ ವಿಷಯಗಳನ್ನು ಕಲ್ಪನೆ ಮಾಡುತ್ತಿದ್ದೀರಿ. ಅದಕ್ಕಿಂತಲೂ ವೇದಕ್ಕೆ ಅಪ್ರಾಮಾಣ್ಯವನ್ನು ಮಾತ್ರ ಕಲ್ಪನೆ ಮಾಡುವುದು ಸಾಧುವಲ್ಲವೇ ?

**यतः**

**प्रमितस्य प्रमात्वस्य सिद्धये बहुकल्पना ।**
**युक्ता नतु ततो भीत्या प्रमितस्याप्यपह्नवः ।।१।।**

ಇದು ತಪ್ಪು. ಏಕೆಂದರೆ -

ಪ್ರಮಿತಸ್ಯ ಪ್ರಮಾತ್ವಸ್ಯ ಸಿದ್ಧಯೇ ಬಹುಕಲ್ಪನಾ ।
ಯುಕ್ತಾ ನತು ತತೋ ಭೀತ್ಯಾ ಪ್ರಮಿತಸ್ಯಾಪ್ಯಪಹ್ನವಃ ॥

- ಪ್ರಮಿತಸ್ಯಾಪ್ಯಪಹ್ನವಃ ಪ್ರಮಾಣಸಿದ್ಧವಾದ ವೇದಕ್ಕೆ ಪ್ರಾಮಾಣ್ಯದ ಸಂರಕ್ಷಣೆಗೋಸ್ಕರ ಅನೇಕ ವಿಷಯಗಳನ್ನು ಕಲ್ಪನೆ ಮಾಡುವುದೇ ಯುಕ್ತ. ಅದನ್ನು ಬಿಟ್ಟು, ವೇದಪ್ರಾಮಾಣ್ಯದ ಭಯದಿಂದ ಪ್ರಮಿತವಾದದ್ದನ್ನು ತಿರಸ್ಕರಿಸುವುದು ಅಯುಕ್ತವಾಗುತ್ತದೆ.

**वेदस्य प्रामाण्यं हि निर्दोषत्वात्प्रमितम् । किञ्च भाष्योदाहृतस्मृत्यादि-नाऽप्यभिमान्यादिसिद्धिः ।**

ವೇದದ ಪ್ರಾಮಾಣ್ಯವಾದರೂ ನಿರ್ದೋಷತ್ವದಿಂದ ಪ್ರಮಿತವಾಗಿದೆ. ಮತ್ತು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ-ಸ್ಮೃತಿಗಳಿಂದಲೂ ಅಭಿಮಾನಿದೇವತೆಗಳು ಸಿದ್ಧರಾಗಿದ್ದಾರೆ.

**नच तत्प्रामाण्ये विवादः । तद्बीजस्य युक्तिविरोधस्य तत्राभावात् । न ह्यभिमान्यादिसत्त्वं जडस्य वक्तृत्ववयुक्तिविरुद्धम् ।**

ಪ್ರಶ್ನೆ - ನೀವು ಉದಾಹರಿಸಿದ ಶ್ರುತಿ-ಸ್ಮೃತಿಗಳೆಲ್ಲವೂ ವೇದಪ್ರಾಮಾಣ್ಯವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ವೇದಪ್ರಾಮಾಣ್ಯವಿಷಯದಲ್ಲಿಯೇ ವಿವಾದವಿದೆ.

ಉತ್ತರ - ಇದು ತಪ್ಪು. ಏಕೆಂದರೆ ವೇದಪ್ರಾಮಾಣ್ಯದಲ್ಲಿ ವಿವಾದವುಂಟಾಗಬೇಕಾದರೆ ಯುಕ್ತಿವಿರೋಧವನ್ನು ಹೇಳಬೇಕು. ಆದರೆ ಆ ಎಲ್ಲಾ ಯುಕ್ತಿವಿರೋಧವನ್ನು ನಾವು ಈಗಾಗಲೇ ಪರಿಹರಿಸಿದ್ದೇವೆ.

ಅಭಿಮಾನಿದೇವತೆಗಳೇ ಮೊದಲಾದವರು ಇರುತ್ತಾರೆಂದು ಜಡಪದಾರ್ಥಕ್ಕೆ ವಕ್ತೃತ್ವವನ್ನು ಒಪ್ಪಿದರೆ ಹೇಗೆ ಯುಕ್ತಿವಿರೋಧ ಬರುತ್ತದೋ, ಅದೇರೀತಿಯಾಗಿ ಅಭಿಮಾನ್ಯಾದಿದೇವತೆಗಳಿಗೆ ವಕ್ತೃತ್ವವನ್ನು ಹೇಳಿದರೆ ಯಾವುದೇ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ.

**प्रकाशः –**

''ननु मृदादिवचनाद्यभिधायकवाक्यस्य प्रत्यक्षविरोध एव'' इत्यादिटीकां व्यनक्ति ।। **नन्विति** ।।

''ನನು ಮೃದಾದಿವಚನಾದ್ಯಭಿಧಾಯಕವಾಕ್ಯಸ್ಯ ಪ್ರತ್ಯಕ್ಷವಿರೋಧ ಏವ'' ಮೃತ್ತು ಮೊದಲಾದವುಗಳು ಮಾತನಾಡುತ್ತವೆ ಎಂದು ಹೇಳುವ ಶ್ರುತಿವಾಕ್ಯಗಳಿಗೆ ಪ್ರತ್ಯಕ್ಷವಿರೋಧವೇ ಬರುತ್ತದೆ. ಇತ್ಯಾದಿ ಟೀಕಾವಾಕ್ಯಗಳಂತೆ ಪ್ರಕೃತ ಪ್ರತ್ಯಕ್ಷವಿರೋಧವನ್ನೇ ಶ್ರುತಿವಾಕ್ಯಗಳಿಗೆ ಹೇಳಬಹುದಿತ್ತು. ಯುಕ್ತಿವಿರೋಧವನ್ನೇಕೆ ಹೇಳುತ್ತಿದ್ದಾರೆ ? ಎಂಬ ಆಕ್ಷೇಪಕ್ಕೆ ಉತ್ತರಿಸಲು 'ನನು' ಇತ್ಯಾದಿ ಗ್ರಂಥದಿಂದ ಆಕ್ಷೇಪದ ಟೀಕಾಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः – युक्तीति** ।। विसंवादरूपयुक्तिसिद्ध इत्यर्थः । तथा च तत्र युक्तिविरोधशङ्का युक्तेति भावः ।

ಕಾರೀರ್ಯಾದಿಯಾಗಗಳು ವೃಷ್ಟ್ಯಾದಿಗಳಿಗೆ ಕಾರಣವಲ್ಲ ಎಂಬುದು ವಿಸಂವಾದವೆಂಬ ಯುಕ್ತಿಯಿಂದ ಸಿದ್ಧವಾಗಿದೆ ಎಂಬುದನ್ನು 'ಯುಕ್ತಿ ಸಿದ್ಧಃ' ಎಂಬುದರಿಂದ ಹೇಳಿದ್ದಾರೆ. ವಿಸಂವಾದರೂಪವಾದ ಯುಕ್ತಿಯಿಂದ ಕಾರಣತ್ವಾಭಾವವು ಸಿದ್ಧವಾಗಿದೆ ಎಂದು ಇದರ ಅರ್ಥ. ಆದ್ದರಿಂದ ಪ್ರತ್ಯಕ್ಷವಿರೋಧವನ್ನು ಆಕ್ಷೇಪ ಮಾಡದೇ ಯುಕ್ತಿವಿರೋಧವನ್ನೇ ಆಕ್ಷೇಪ ಮಾಡಿದ್ದು ಯುಕ್ತಿವಿರುದ್ಧವಾಗಿದೆ ಎಂದು ತಿಳಿಯಬೇಕು.

**प्रकाशः** – एतेन टीकायामियं शङ्का पूर्वाधिकरणपूर्वपक्ष एव कुतो न कृतेति चोद्यं निरस्तम् ।

ಹೀಗೆ ಅತೀಂದ್ರಿಯವಾದ ಕಾರ್ಯಕಾರಣಭಾವವಿಷಯದಲ್ಲಿ ಪ್ರತ್ಯಕ್ಷಕ್ಕೆ ಅವಕಾಶವಿಲ್ಲ ಎಂದು ಸಮರ್ಥನೆ ಮಾಡಿದ್ದರಿಂದ ತತ್ವಪ್ರಕಾಶಿಕೆಯಲ್ಲಿ ಹಿಂದಿನ ಅಧಿಕರಣದ ಪೂರ್ವಪಕ್ಷದಲ್ಲಿಯೇ ಪ್ರತ್ಯಕ್ಷವಿರೋಧದ ಆಶಂಕೆಯನ್ನು ಏಕೆ ಮಾಡಿರುವುದಿಲ್ಲ ? ಎಂಬ ಪ್ರಶ್ನೆಯನ್ನು ನಿರಾಕರಿಸಿದಂತಾಯಿತು.

**प्रकाशः** – कारीर्यादेर्वृष्टिहेतुत्वे वाक्यबोध्ये प्रत्यक्षविरोधाप्रसरेण विसंवादरूपयुक्त्यैव कारीर्यादेर्वृष्ट्यादिहेतुत्वाभावस्य वाच्यत्वेन युक्तिविरोधस्यैव कारीर्यादिवाक्ये प्रसरादिति ।

ಕಾರೀರ್ಯಾದಿಯಾಗಗಳು ವೃಷ್ಟ್ಯಾದಿಗಳಿಗೆ ಕಾರಣವಾಗಿವೆ ಎಂಬ ವಿಚಾರವು ಶ್ರುತಿವಾಕ್ಯದಿಂದಷ್ಟೇ ಸಿದ್ಧವಾಗುತ್ತಿದೆ. ಈ ವಿಷಯದಲ್ಲಿ ಪ್ರತ್ಯಕ್ಷವಿರೋಧಕ್ಕೆ ಅವಕಾಶವೇ ಇರುವುದಿಲ್ಲ. ಆದ್ದರಿಂದ ವಿಸಂವಾದವೆಂಬ ಯುಕ್ತಿಯಿಂದಲೇ ಕಾರೀರ್ಯಾದಿಯಾಗಗಳಿಗೆ ವೃಷ್ಟ್ಯಾದಿಗಳ ಕಾರಣತ್ವಾಭಾವವು ಸಿದ್ಧವಾಗಿದೆಯೆಂದು ಹೇಳಬೇಕು. ಆದ್ದರಿಂದ ಕಾರೀರ್ಯಾದಿಯಾಗಗಳನ್ನು ಪ್ರತಿಪಾದಿಸುವ ವಾಕ್ಯಗಳಲ್ಲಿ ಯುಕ್ತಿವಿರೋಧಕ್ಕಷ್ಟೇ ಅವಕಾಶವಿರುತ್ತದೆ. ಪ್ರತ್ಯಕ್ಷವಿರೋಧಕ್ಕೆ ಅವಕಾಶವಿರುವುದಿಲ್ಲ.

**प्रकाशः** – ''तस्मादादिकालीनमृदादिकं पक्ष इति वक्तव्यम् । नच तत्प्रत्यक्षादिसिद्धमिति वेद एवोपजीव्यः'' इत्यादिसुधोक्तशङ्कोत्तरे अत्र टीकायामपि बोध्ये इति भावेन सुधोक्तशङ्कासमाधी व्यनक्ति – **न चादिकालीनेति** ।।

'ತಸ್ಮಾತ್ ಆದಿಕಾಲೀನಮೃದಾದಿಕಂ ಪಕ್ಷ ಇತಿ ವಕ್ತವ್ಯಮ್ । ನಚ ತತ್ಪ್ರತ್ಯಕ್ಷಾದಿಸಿದ್ಧಮಿತಿ ವೇದ ಏವೋಪಜೀವ್ಯಃ' ಆದಿಕಾಲದ ಮೃದಾದಿಗಳನ್ನೇ ಪಕ್ಷವನ್ನಾಗಿ ಮಾಡಿ, ವಕ್ತೃತ್ವಾಭಾವವನ್ನು ಸಾಧನೆ ಮಾಡಬೇಕು. ಆದಿಕಾಲದ ಮೃದಾದಿಗಳಲ್ಲಿ ವಕ್ತೃತ್ವವಿಲ್ಲವೆಂಬುದು ಪ್ರತ್ಯಕ್ಷದಿಂದ ಸಿದ್ಧವಾಗಿರುವುದಿಲ್ಲ. ಆದ್ದರಿಂದ ವೇದವೇ ಯುಕ್ತಿಗೆ ಉಪಜೀವ್ಯವೆಂದು ಹೇಳಬೇಕು. ಅಂತಹ ವೇದದಿಂದ ಮೃದಾದಿಗಳಲ್ಲಿ ವಕ್ತೃತ್ವವೇ ಸಿದ್ಧವಾಗುತ್ತಿದೆ. ಹೀಗೆ ನ್ಯಾಯಸುಧೆಯಲ್ಲಿ ಹೇಳಿದ ಪ್ರಶ್ನೆ ಹಾಗೂ ಉತ್ತರಗಳನ್ನು ಪ್ರಕೃತ ತತ್ವಪ್ರಕಾಶಿಕೆಯಲ್ಲಿಯೂ ತಿಳಿಯಬೇಕು ಎಂಬ ಅಭಿಪ್ರಾಯದಿಂದ ನ್ಯಾಯಸುಧೆಯಲ್ಲಿ ಹೇಳಿದ ಆಶಂಕೆ ಮತ್ತು ಸಮಾಧಾನಗಳನ್ನು 'ನಚ ಆದಿಕಾಲೀನ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – सुधायां मृत्त्वस्येह टीकायां जडत्वस्य हेतूकरणे तात्पर्यं विवरीतुं शङ्कासमाधी आह – **न चैवमिति** ।।

ನ್ಯಾಯಸುಧೆಯಲ್ಲಿ ವಕ್ತೃತ್ವಾಭಾವದ ಸಾಧನೆಗೆ ಮೃತ್ತ್ವವನ್ನು ಹೇತುವನ್ನಾಗಿ ಹೇಳಿದ್ದಾರೆ. ತತ್ವಪ್ರಕಾಶಿಕೆಯಲ್ಲಿ ಜಡತ್ವವನ್ನು ಹೇತುವನ್ನಾಗಿ ಮಾಡಿದ್ದಾರೆ. ಎರಡೂ ಗ್ರಂಥಗಳಲ್ಲಿ ಒಂದೇ ಸಾಧ್ಯಕ್ಕೆ ಬೇರೆ

ಬೇರೆ ಹೇತುಗಳನ್ನು ವಿವಕ್ಷಿಸಲು ಏನು ಕಾರಣ ? ಎಂಬುದನ್ನು ವಿವರಿಸಲು ಆಶಂಕಿಸಿ ಸಮಾಧಾನ ನೀಡಲು'ನ ಚೈವಮ್' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः – अत एवेति ।।** द्वयोस्साध्यत्वादेवेत्यर्थः । टीकायां पूर्ववाद्युक्तेर्दोषोक्तेरस्फुटत्वात्तदनुक्तौ च श्रुत्यप्रामाण्यानिरासादित्यतः ''चेतनपक्षीकारे हेतोरसिद्धेः'' इत्यादि सुधोक्तं दूषणं सङ्गृह्णाह – **अयं भाव इत्यादिना ।।**

'ಅತ ಏವ' ಎಂದರೆ 'ವಕ್ತೃತ್ವಾಭಾವ' ಮತ್ತು 'ಜಡತ್ವ' ಇವೆರಡೂ ಕೂಡ ಸಾಧ್ಯವಾಗಿರುವುದರಿಂದ ಎಂದರ್ಥ. ಟೀಕೆಯಲ್ಲಿ ಪೂರ್ವಪಕ್ಷಿ ಹೇಳಿದ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಅನುಮಾನದಲ್ಲಿ ಯಾವ ದೋಷವಿದೆಯೆಂದು ಸ್ಪಷ್ಟವಾಗಿ ಹೇಳಿರುವುದಿಲ್ಲ. ದೋಷವನ್ನು ಸ್ಪಷ್ಟವಾಗಿ ತಿಳಿಯದಿದ್ದರೆ ಯುಕ್ತಿ ವಿರುದ್ಧವಾದ ಶ್ರುತಿಗೆ ಅಪ್ರಾಮಾಣ್ಯವನ್ನು ನಿರಾಕರಿಸಿದಂತಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಚೇತನಪಕ್ಷೀಕಾರೇ ಹೇತೋರಸಿದ್ಧೇಃ' ಎಂಬ ನ್ಯಾಯಸುಧೆಯಲ್ಲಿ ಹೇಳಿದ ದೋಷವನ್ನು ಟೀಕೆಯಲ್ಲಿ ವಿವಕ್ಷಿಸಬೇಕು. ಚೇತನವನ್ನು ಪಕ್ಷವನ್ನಾಗಿ ಮಾಡಿದರೆ ಹೇತುವಿಗೆ ಅಸಿದ್ಧಿ ಬರುತ್ತದೆ ಎಂದು ಇದರ ಅಭಿಪ್ರಾಯ. ಅದನ್ನೇ 'ಅಯಂ ಭಾವಃ' ಇತ್ಯಾದಿ ಗ್ರಂಥದಿಂದ ಸಂಗ್ರಹಿಸಿ ಹೇಳುತ್ತಿದ್ದಾರೆ.

**प्रकाशः – श्लोकं व्याचष्टे – न हीति ।। धर्मिग्राहकेत्युक्तम् ।।** तत्कथमित्यतः ''सर्वस्यास्यार्थापत्तितस्सिद्धत्वात्'' इत्यादिना सुधायां ''अचेतनानां वचनाद्यदृष्ट्या निर्दोषवाक्यस्याप्रामाण्यादृष्ट्या च तत्कल्पनोपपत्तेः'' इति टीकायां चोक्तमाह – **अभिमानीति ।।**

ಸಿದ್ಧಾಂತದ ಸಂಗ್ರಹ ಶ್ಲೋಕವನ್ನು ಗ್ರಂಥಕಾರರೇ 'ನಹಿ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ ಚ ಧರ್ಮಿಗ್ರಾಹಕಮಾನೇನ' ಇತ್ಯಾದಿ ವಾಕ್ಯದಿಂದ ಧರ್ಮಿಗ್ರಾಹಕವಾದ ಶ್ರುತಿವಿರೋಧವನ್ನು ಯುಕ್ತಿಗೆ ಹೇಳಿರುತ್ತಾರೆ. ಈ ಧರ್ಮಿಗ್ರಾಹಕವಿರೋದವು ಹೇಗೆ ಬರುತ್ತದೆ ? ಎಂಬ ಪ್ರಶ್ನೆಗೆ ನ್ಯಾಯಸುಧೆಯಲ್ಲಿ 'ಸರ್ವಸ್ಯಾಸ್ಯಾರ್ಥಾಪತ್ತಿತಃ ಸಿದ್ಧತ್ವಾತ್' ಇತ್ಯಾದಿಯಾಗಿ ಹೇಳಿದ್ದಾರೆ. ಟೀಕೆಯಲ್ಲಿಯೂ 'ಅಚೇತನಾನಾಂ ವಚನಾದ್ಯದೃಷ್ಟ್ಯಾ ನಿರ್ದೋಷವಾಕ್ಯಸ್ಯಾಪ್ರಾಮಾಣ್ಯದೃಷ್ಟ್ಯಾ ಚ ತತ್ ಕಲ್ಪನೋಪಪತ್ತೇಃ' ಎಂದು ಹೇಳಿದ್ದಾರೆ. ಶ್ರುತಿಯಿಂದ ಪಕ್ಷವು ಸಿದ್ಧವಾಗುವ ಸಂದರ್ಭದಲ್ಲಿಯೇ ವಕ್ತೃತ್ವಾದಿಧರ್ಮಪುರಸ್ಸರವಾಗಿಯೇ ಮೃದಾದಿಗಳು ಸಿದ್ಧವಾಗುತ್ತಿವೆ. ಈ ವಿಷಯದಲ್ಲಿ ಅರ್ಥಾಪತ್ತಿಯೇ ಕಲ್ಪಕವಾಗಿದೆ. ಇದನ್ನು 'ಅಭಿಮಾನಿ' ಇತ್ಯಾದಿ ವಾಕ್ಯವು ವಿವರಿಸುತ್ತಿದೆ.

**प्रकाशः** – आदिपदेन मृदादिशब्दानां तत्र वृत्तिस्तेषामभिमन्यमानव्यापित्वमित्येतद्गृह्यते ।

ಆದಿಪದದಿಂದ ಮೃದಾದಿಶಬ್ದಗಳು ಚೇತನರನ್ನು ಪ್ರತಿಪಾದನೆ ಮಾಡುತ್ತವೆ. ಅಭಿಮಾನಿದೇವತೆಗಳು ಅಭಿಮನ್ಯಮಾನವಾದ ಮೃದಾದಿಗಳಲ್ಲಿ ಸಂಪೂರ್ಣವಾಗಿ ವ್ಯಾಪಿಸಿರುತ್ತಾರೆ ಎಂಬುದನ್ನು ವಿವಕ್ಷಿಸಬೇಕು.

**प्रकाशः** – अचेतनानां वचनस्य निर्दोषवाक्येऽप्रामाण्यस्य चादर्शनेन तदुभयान्यथानुपपत्तिरूपार्थापत्त्या विग्रहादिमदभिमानिचेतनस्य ''मृदब्रवीत्'' इत्यादिश्रुत्यर्थत्वेन कल्पनस्यावश्यकत्वात्तेषामभिमन्यमानपृथिव्याद्यव्यापित्वे तदनधिष्ठितदेशवद्देशान्तरावस्थानोपपत्तौ तद्वैयर्थ्येन व्यापित्वे वाच्ये तदनुपलंभबाधपरिहाराय पिशाचादिवदन्तर्धानशक्त्यादेः कल्प्यत्वादित्यर्थः ।

ಅರ್ಥಾಪತ್ತಿಪ್ರಮಾಣದಿಂದ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಿಗೆ ಅಭಿಮಾನಿಚೇತನರು ಮಾತನಾಡುತ್ತಾರೆ ಎಂಬರ್ಥವನ್ನು ಸ್ವೀಕರಿಸಬೇಕು ಎಂಬುದನ್ನು ಹೀಗೆ ತಿಳಿಯಬೇಕು - ಅಚೇತನಪದಾರ್ಥದಲ್ಲಿ ಮಾತನಾಡುವಿಕೆಯು ಕೂಡುವುದಿಲ್ಲ. ಇದರಂತೆ ನಿರ್ದುಷ್ಟವಾದ ವೇದವಾಕ್ಯಕ್ಕೆ ಅಪ್ರಾಮಾಣ್ಯವೂ ಕೂಡ ಯುಕ್ತವಾಗುವುದಿಲ್ಲ. ಇವೆರಡನ್ನು ಸರಿಹೊಂದಿಸಬೇಕೆಂದರೆ ಉಭಯಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಪ್ರಮಾಣದಿಂದ 'ಮೃದಬ್ರವೀತ್' ಇತ್ಯಾದಿ ಶ್ರುತಿಯು ಶರೀರಾದಿಗಳನ್ನು ಹೊಂದಿರುವ ಅಭಿಮಾನಿಚೇತರನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಕಲ್ಪನೆ ಮಾಡುವುದು ಅತ್ಯಂತ ಅನಿವಾರ್ಯ. ಅರ್ಥಾಪತ್ತಿಪ್ರಮಾಣದಿಂದ ಸಿದ್ಧರಾದ ಅಭಿಮಾನಿಚೇತನರು ಅಭಿಮನ್ಯಮಾನವಾದ ಪೃಥಿವ್ಯಾದಿಗಳಲ್ಲಿ ವ್ಯಾಪಕವಾಗಿ ಇರದಿದ್ದರೆ ಅನುಪಪತ್ತಿಯು ಬರುತ್ತದೆ. ಯಾವಸ್ಥಳದಲ್ಲಿ ಅಭಿಮಾನಿಚೇತನರು ನಿಯಾಮಕರಾಗಿ ಇರದಿದ್ದರೂ ಮೃದಾದಿಪದಾರ್ಥಗಳು ಇರುತ್ತವೆಯೋ, ಅದರಂತೆ ವಿವಾದಕ್ಕೆ ವಿಷಯವಾದ ಸ್ಥಳದಲ್ಲಿಯೂ ಅಭಿಮಾನಿದೇವತೆಗಳನ್ನು ಒಪ್ಪುವ ಅವಶ್ಯಕತೆಯಿಲ್ಲ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಅಭಿಮನ್ಯಮಾನವಾದ ಪದಾರ್ಥಗಳು ಎಲ್ಲೆಲ್ಲಿ ಇರುತ್ತವೆಯೋ, ಅಲ್ಲೆಲ್ಲಾ ಅಭಿಮಾನಿಚೇತನರು ಇದ್ದೇ ಇರುತ್ತಾರೆಂದು ವ್ಯಾಪಕತ್ವವನ್ನು ಒಪ್ಪಬೇಕು. ಎಲ್ಲೆಡೆಯೂ ಇದ್ದ ಮೇಲೆ ನಮ್ಮ ಕಣ್ಣಿಗೆ ಏಕೆ ಕಾಣಿಸುತ್ತಿಲ್ಲ ? ಎಂಬ ಅನುಪಪತ್ತಿ ಪುನಃ ಬರುತ್ತದೆ.ಇದರ ಪರಿಹಾರಕ್ಕಾಗಿ ಪಿಶಾಚಾದಿಗಳು ಎಲ್ಲೆಡೆ ಸಂಚಾರ ಮಾಡುತ್ತಿದ್ದರೂ ಅಂತರ್ಧಾನಶಕ್ತಿಯಿಂದ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲವೋ, ಅದರಂತೆ ಅಭಿಮಾನಿಚೇತನರೂ ಕೂಡ ಎಲ್ಲೆಡೆ ಇದ್ದರೂ ನಮ್ಮ ಕಣ್ಣಿಗೆ ಕಾಣಿಸುತ್ತಿಲ್ಲವೆಂದು ಕಲ್ಪನೆ ಮಾಡಬೇಕು.

**प्रकाशः** – एतेन टीकायां देवतासद्भावेऽपि कुतोऽत्र तद्व्यपदेशकल्पनेति शङ्कानिवर्तकत्वेनार्थापत्त्युक्तिरुपलक्षणम् । सुधोक्तदिशा उक्त सर्वार्थकल्पकत्वसम्भवादिति सूचितम् ।

ಹೀಗೆ ಹೇಳಿದ್ದರಿಂದ ಟೀಕೆಯಲ್ಲಿ ದೇವತೆಗಳಿರಬಹುದು. ಆದರೆ 'ಮೃದಬ್ರವೀತ್' ಎಂಬ ಶ್ರುತಿಯು ಅಭಿಮಾನಿಚೇತನರು ಮಾತನಾಡುತ್ತಾರೆಂದೇ ಹೇಳುತ್ತಿದೆ ಎಂಬ ವ್ಯಾಖ್ಯಾನ ಹೇಗೆ ಸರಿಯಾಗುತ್ತದೆ ? ಎಂಬ ಆಶಂಕೆಯ ಪರಿಹಾರಕ್ಕಾಗಿ ಅರ್ಥಾಪತ್ತಿಯನ್ನು ಪ್ರಮಾಣವನ್ನಾಗಿ ಹೇಳಿದ್ದು ಉಪಲಕ್ಷಣವಾಗಿದೆಯೆಂದು ತಿಳಿಯಬೇಕು. ನ್ಯಾಯಸುಧೆಯಲ್ಲಿ ಹೇಳಿದಂತೆ ಅಭಿಮಾನಿಚೇತನರಲ್ಲಿ ಅಂತರ್ಧಾನಶಕ್ತಿ, ವ್ಯಾಪಕತ್ವ ಮೊದಲಾದ ಧರ್ಮಗಳನ್ನು ಒಪ್ಪುವುದೂ ಕೂಡ ಅತ್ಯಂತ ಅನಿವಾರ್ಯ. ಅರ್ಥಾಪತ್ತಿಪ್ರಮಾಣದಿಂದ

ದೇವತೆಗಳಿದ್ದಾರೆಂಬುದಷ್ಟೇ ಸಿದ್ಧವಾಗುವುದಲ್ಲ. ಅವರಲ್ಲಿ ಅಂತರ್ಧಾನಶಕ್ತಿ, ವ್ಯಾಪಕತ್ವ ಮೊದಲಾದವುಗಳೂ ಕೂಡ ಸಿದ್ಧವಾಗುತ್ತದೆಂದು ಸೂಚಿಸಿದಂತಾಯಿತು.

**प्रकाशः –** एतेन ''मृदाद्यभिमानिनां देवतानामेव तत्र व्यपदेशात्'' इति टीका उपपादिता भवति ।

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ಮೃದಾದ್ಯಭಿಮಾನಿನಾಂ ದೇವತಾನಾಮೇವ ತತ್ರ ವ್ಯಪದೇಶಾತ್' ಮೃದಾದ್ಯಭಿಮಾನಿಗಳಾದ ದೇವತೆಗಳೇ ಮಣ್ಣಿನಲ್ಲಿ ನಿಂತು ಮಾತನಾಡುತ್ತಾರೆ ಇತ್ಯಾದಿ ಟೀಕೆಯನ್ನು ಸರಿಯಾಗಿ ವ್ಯಾಖ್ಯಾನ ಮಾಡಿದಂತಾಯಿತು.

**प्रकाशः –** टीकायां ''नन्वप्रामाणिकदेवताकल्पनात्तासां च विशिष्टसामर्थ्यकल्पनाद्वरं वेदाप्रामाण्यग्रहणमेव । लाघवात्'' इत्याशङ्क्य ''दृश्यते च'' इति सूत्रोक्तमहत्प्रत्यक्षसिद्धत्वेन समाधिरुक्तः ।

ಟೀಕೆಯಲ್ಲಿ 'ನನು ಅಪ್ರಾಮಾಣಿಕದೇವತಾಕಲ್ಪನಾತ್ ತಾಸಾಂ ಚ ವಿಶಿಷ್ಟಸಾಮರ್ಥ್ಯಕಲ್ಪನಾದ್ವರಂ ವೇದಾಪ್ರಾಮಾಣ್ಯಗ್ರಹಣಮೇವ। ಲಾಘವಾತ್' ಅಪ್ರಾಮಾಣಿಕರಾದ ದೇವತೆಗಳನ್ನು ಕಲ್ಪನೆ ಮಾಡಿ, ಅಂತಹ ದೇವತೆಗಳಲ್ಲಿ ವಿಶಿಷ್ಟವಾದ ಸಾಮರ್ಥ್ಯಾದಿಗಳನ್ನು ಕಲ್ಪನೆ ಮಾಡುವುದಕ್ಕಿಂತ ಕೇವಲ ವೇದಕ್ಕೆ ಅಪ್ರಾಮಾಣ್ಯವನ್ನು ಕಲ್ಪನೆ ಮಾಡುವುದೇ ಸೂಕ್ತವಲ್ಲವೇ? ಬಹುಕಲ್ಪನೆಗಳಿಗಿಂತ ವೇದ ಅಪ್ರಾಮಾಣ್ಯವೆಂಬ ಒಂದನ್ನೇ ಕಲ್ಪನೆ ಮಾಡುವುದರಲ್ಲಿ ಲಾಘವವಿದೆಯಲ್ಲವೇ? ಎಂದು ಆಶಂಕಿಸಿ, 'ದೃಶ್ಯತೇ ಚ' ಎಂಬ ಸೂತ್ರದಿಂದ ಉತ್ತರಿಸಿದ್ದಾರೆ. ಮೃದಾದಿಜಡಪದಾರ್ಥಗಳಲ್ಲಿ ಅಭಿಮಾನಿಚೇತನರು ಇರುತ್ತಾರೆಂಬುದು ಜ್ಞಾನಿಜನರ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಆದ್ದರಿಂದ ಅಭಿಮಾನಿಚೇತರನ್ನು ಕಲ್ಪಿಸುವುದು ಅಪ್ರಾಮಾಣಿಕ-ವಲ್ಲವೆಂಬ ಸಮಾಧಾನವನ್ನು ಹೇಳಿದ್ದಾರೆ.

**प्रकाशः –** स तूपलक्षणमिति भावेन वा वक्ष्यमाणदिशा तस्यारुचिग्रस्तत्वाद्वा। परिहारान्तरं विवक्षुरर्थापत्तेरन्यथासिद्धिमाशङ्क्य निराह – **नचेति** ।।

ಟೀಕೆಯಲ್ಲಿ ಹೇಳಿದ ಈ ಸಮಾಧಾನವು ಕೇವಲ ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ 'ನಚ' ಇತ್ಯಾದಿ ವಾಕ್ಯವು ಹೊರಟಿದೆ. ಅಥವಾ ಅಭಿಮಾನಿಚೇತನರ ವಿಷಯದಲ್ಲಿ ಜ್ಞಾನಿಜನರ ಪ್ರತ್ಯಕ್ಷವನ್ನು ಪ್ರಮಾಣವನ್ನಾಗಿ ಹೇಳುವುದಾದರೆ, ಅಂತಹ ಜ್ಞಾನಿಜನರ ಪ್ರತ್ಯಕ್ಷಸಿದ್ಧವಾಗುವುದೂ ಕೂಡ ವೇದದಿಂದಲೇ ಹೊರತು, ಬೇರೆ ಪ್ರಮಾಣದಿಂದ ಸಿದ್ಧವಾಗುವುದಿಲ್ಲ. ಆಗಮವನ್ನೇ ಅಪ್ರಮಾಣವೆಂದು ಪೂರ್ವಪಕ್ಷಗಳು ಹೇಳುತ್ತಿರುವಾಗ ವೇದದಿಂದ ಸಿದ್ಧವಾಗುವ ಜ್ಞಾನಿಜನರ ಪ್ರತ್ಯಕ್ಷವನ್ನು ವಿವಕ್ಷಿಸುವುದು ಅಸ್ವರಸವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ಹೇಳಿದ ದೋಷವು ಅಸ್ವರಸವಾಗಿದೆಯೆಂಬ ದೃಷ್ಟಿಯಿಂದ ಅದನ್ನು ಉಪಲಕ್ಷಣವೆಂದು ತಿಳಿದು ಮತ್ತೊಂದು ಪರಿಹಾರವನ್ನು ಹೇಳುವುದಕ್ಕಾಗಿ ಅರ್ಥಾಪತ್ತಿಗೆ ಅನ್ಯಥಾಸಿದ್ಧಿಯನ್ನು ಆಶಂಕಿಸಿ ನಿರಾಕರಿಸಲು 'ನಚ' ಇತ್ಯಾದಿ ಗ್ರಂಥವು ಹೊರಟಿದೆ. ಅರ್ಥಾಪತ್ತಿ ಪ್ರಮಾಣದಿಂದ ಎಷ್ಟು ಧರ್ಮಗಳನ್ನು

ಕಲ್ಪನೆ ಮಾಡುವುದು ಅನಿವಾರ್ಯವೋ, ಅಷ್ಟನ್ನೂ ಕೂಡ ಕಲ್ಪನೆ ಮಾಡುವುದು ತಪ್ಪಾಗುವುದಿಲ್ಲವೆಂದು ಅಭಿಪ್ರಾಯ.

**प्रकाशः** – ''निर्दोषवाक्यस्याप्रामाण्यादृष्ट्या च'' इति टीकासूचितमेव समाधिमाह – **यत इत्यादिना ।।** श्लोकेनान्वयः ।

'ನಿರ್ದೋಷವಾಕ್ಯಸ್ಯಾಪ್ರಾಮಾಣ್ಯದೃಷ್ಟ್ಯಾ ಚ' ನಿರ್ದುಷ್ಟವಾದ ವಾಕ್ಯಕ್ಕೆ ಅಪ್ರಾಮಾಣ್ಯವು ಎಲ್ಲಿಯೂ ಕಂಡಿಲ್ಲ ಎಂಬ ಟೀಕಾವಾಕ್ಯದಿಂದ ಸೂಚಿತವಾದ ಸಮಾಧಾನವನ್ನು 'ಯತಃ' ಇತ್ಯಾದಿ ವಾಕ್ಯವು ವಿವರಿಸುತ್ತಿದೆ. 'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಯಲ್ಲಿ ಅನ್ವಯವನ್ನು ತಿಳಿಯಬೇಕು.

**प्रकाशः** – प्रमात्वस्य प्रामाण्यस्य । ''तत्तन्नामान एवैते तत्तद्वस्त्वभिमानिनः। सन्ति तेषां विशेषेण शक्तिरन्येभ्य उच्यते'' इत्यत्र सुधायां ''उच्यत इति पृथिव्याद्यभिमानिन्य इत्यागममप्यत्र संवादिनं दर्शयति'' इत्युक्तम् ।

'ಪ್ರಮಾತ್ವಸ್ಯ' ಎಂಬ ಪದಕ್ಕೆ 'ಪ್ರಾಮಾಣ್ಯದ' ಎಂದರ್ಥ.

'ತತ್ತನ್ನಾಮಾನ ಏವೈತೇ ತತ್ತದ್ವಸ್ತ್ವಭಿಮಾನಿನಃ।
ಸಂತಿ ತೇಷಾಂ ವಿಶೇಷೇಣ ಶಕ್ತಿರನ್ಯೇಭ್ಯ ಉಚ್ಯತೇ॥

ಪೃಥಿವೀ, ವರುಣ ಮೊದಲಾದ ಅಭಿಮಾನಿ ದೇವತೆಗಳು ಮೃತ್, ಜಲ, ಮೊದಲಾದ ನಾಮಗಳಿಂದ ಪ್ರತಿಪಾದ್ಯರಾಗುತ್ತಾರೆ. ಮೃದಾದಿನಾಮಗಳಿಗೆ ವರುಣಾದಿಗಳಲ್ಲಿ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾಗಿಲ್ಲ. ಮತ್ತು ಮೃತ್, ಜಲ ಮೊದಲಾದ ವಸ್ತುಗಳಿಗೆ ಇವರೇ ಅಭಿಮಾನಿದೇವತೆಗಳಾಗಿರುತ್ತಾರೆ. ಇಂತಹ ದೇವತೆಗಳಲ್ಲಿ ಉಳಿದವರಿಗಿಂತ ಅತಿಶಯವಾದ ಸಾಮರ್ಥ್ಯವು ಮತ್ತು ವ್ಯಾಪ್ತಿಯು ಇರುತ್ತದೆ.

ಈ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನ್ಯಾಯಸುಧೆಯು 'ಉಚ್ಯತೇ ಇತಿ ಪೃಥಿವ್ಯಾದ್ಯಭಿಮಾನಿನ್ಯ ಇತಿ ಆಗಮಮಪಿ ಅತ್ರ ಸಂವಾದಿನಂ ದರ್ಶಯತಿ' ಎಂದು ಹೇಳಿದೆ. ಇದರ ಅಭಿಪ್ರಾಯ ಹೀಗಿದೆ - ಅನುವ್ಯಾಖ್ಯಾನದಲ್ಲಿ 'ಉಚ್ಯತೇ' ಎಂದು ಹೇಳಿದ್ದರಿಂದ 'ಪೃಥಿವ್ಯಾದ್ಯಭಿಮಾನಿನ್ಯಃ' ಎಂಬ ಆಗಮವನ್ನು ಸಂವಾದಿಯಾಗಿ ತೋರಿಸಿದ್ದಾರೆ ಎಂದು.

**प्रकाशः** – तद्वचनक्ति ।। **किञ्चेति** ।। **तद्बीजस्येति** ।। पूर्वोक्तरीत्या युक्तिविरोधेतरहेतुका प्रामाण्याभावमुपेत्य युक्तिविरोधेनैवाप्रामाण्यशङ्कनादत्र च स्मृतौ तदभावात् ।।

ನ್ಯಾಯಸುಧೆಯ ಈ ವಾಕ್ಯವನ್ನು ಪ್ರಕೃತ ಗ್ರಂಥಕಾರರು 'ಕಿಂಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತದ್‌ಬೀಜಸ್ಯ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಯುಕ್ತಿವಿರೋಧಕ್ಕಿಂತ ಬೇರೆ ಕಾರಣದಿಂದ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಾಗುವುದಿಲ್ಲವೆಂದು ಒಪ್ಪಿ, ಯುಕ್ತಿವಿರೋಧದಿಂದಷ್ಟೇ

ಅಪ್ರಾಮಾಣ್ಯವನ್ನು ಆಶಂಕಿಸಬೇಕು. ಅಂತಹ ಯುಕ್ತಿವಿರೋಧವನ್ನು ಸ್ಮೃತಿವಾಕ್ಯಗಳಲ್ಲಿ ಹೇಳಲು ಸಾಧ್ಯವಿಲ್ಲ ಎಂದು ಇದರ ಅಭಿಪ್ರಾಯ.

**प्रकाशः –**

युक्तिविरोधविहीनेन स्मृतिवाक्येन साधितम् ।
अभिमान्यादिसत्त्वं तदप्रामाण्यं धुनोति हि ।।

इति समाधेयमिति भावः ।।

ಯುಕ್ತಿವಿರೋಧವಿಹೀನೇನ ಸ್ಮೃತಿವಾಕ್ಯೇನ ಸಾಧಿತಮ್ ।
ಅಭಿಮಾನ್ಯಾದಿಸತ್ತ್ವಂ ತದಪ್ರಾಮಾಣ್ಯಂ ಧುನೋತಿ ಹಿ ॥

'ಮೃತ್ ನ ವಕ್ತ್ರೀ ಜಡತ್ವಾತ್' ಇವೇ ಮೊದಲಾದ ಯುಕ್ತಿವಿರೋಧವಿಲ್ಲದ ಸ್ಮೃತಿವಾಕ್ಯಗಳಿಂದ ಅಭಿಮಾನಿಚೇತನರು ಇರುತ್ತಾರೆಂದು ಸಿದ್ಧವಾಗುತ್ತದೆ. ಇಂತಹ ಸ್ಮೃತಿವಾಕ್ಯದಿಂದ 'ಮೃದಬ್ರವೀತ್' ಮೊದಲಾದ ಶ್ರುತಿಗಳ ಅಪ್ರಾಮಾಣ್ಯವು ನಿರಾಕೃತವಾಗುತ್ತದೆ. ಹೀಗೆ ಸಮಾಧಾನವನ್ನು ತಿಳಿಯಬೇಕು.

**प्रकाशः – न हीति ।। अनुपलम्भस्तु पिशाचादिवदुपपन्न इति भावः ।**

ಮೃದಾದಿಪದಾರ್ಥಗಳಲ್ಲಿ ಅಭಿಮಾನಿಚೇತನರು ಇರುತ್ತಾರೆಂಬುದು ಅನುಪಲಂಭವೆಂಬ ಯುಕ್ತಿಯಿಂದ ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ಪಿಶಾಚಾದಿಗಳಲ್ಲಿ ಅನುಪಲಬ್ಧಿ ಇದ್ದರೂ ಅಸತ್ವವು ಇರುವುದಿಲ್ಲ. ಅದರಂತೆ ಅಭಿಮಾನಿದೇವತೆಗಳಲ್ಲಿ ಅನುಪಲಂಭವಿದ್ದ ಮಾತ್ರಕ್ಕೆ ಅವರು ಅತ್ಯಂತ ಅಸತ್ತಾಗಬೇಕಾಗಿಲ್ಲ. ಆದ್ದರಿಂದ ಜಡಪದಾರ್ಥಕ್ಕೆ ವಕ್ತೃತ್ವವಿಲ್ಲ ಎಂಬುದನ್ನು ಯುಕ್ತಿಯಿಂದ ಸಾಧಿಸುವಂತೆ ಅಭಿಮಾನಿಚೇತನರಿಲ್ಲವೆಂಬುದನ್ನು ಯುಕ್ತಿಯಿಂದ ಸಾಧಿಸಲಾಗದು.




'ಮೃದಬ್ರವೀತ್' 'ಮಣ್ಣು ಮಾತನಾಡಿತು' 'ಆಪೋಽಬ್ರುವನ್' 'ನೀರುಗಳು ಮಾತನಾಡಿದವು' 'ತತ್ತೇಜ ಐಕ್ಷತ' 'ಬೆಂಕಿಯು ನೋಡಿತು' 'ಶೃಣೋತ ಗ್ರಾವಾಣಃ' 'ಕಲ್ಲುಗಳು ಕೇಳಿದವು' 'ವಿದುಶೋನುಪ್ರಾಣಾಃ ಅಹಂ ಶ್ರೇಯಸಿ ವ್ಯೂದಿರೇ' 'ಇಂದ್ರಿಯಗಳು ನಾನು ಶ್ರೇಷ್ಠವೆಂದು ವಿವಾದ ಮಾಡಿದವು'. 'ಆಪೋ ವಾ ಅಕಾಮಯಂತ' 'ನೀರುಗಳು ಬಯಸಿದವು' ಇವೇ ಮೊದಲಾದ ವೇದವಾಕ್ಯಗಳು ಜಡಪದಾರ್ಥಗಳಿಗೆ ಚೇತನಧರ್ಮವನ್ನು ಹೇಳುತ್ತಿವೆ. ಯುಕ್ತಿವಿರುದ್ಧವಾದ ವಿಷಯವನ್ನು ಹೇಳುತ್ತಿರುವುದರಿಂದ 'ನೀಲಂ ನಭಃ' ಎಂಬ ಪ್ರತ್ಯಕ್ಷದಂತೆ ಇವುಗಳು ಅಪ್ರಮಾಣವಾಗುತ್ತವೆ. 'ಆಕಾಶವು ವಿಭುವಾದ್ದರಿಂದ ರೂಪರಹಿತವಾಗಿದೆ' ಎಂಬ ಯುಕ್ತಿಗೆ ವಿರುದ್ಧವಾದ್ದರಿಂದ 'ಆಕಾಶವು ನೀಲವಾಗಿದೆ' ಎಂಬ ಪ್ರತ್ಯಕ್ಷವು ಹೇಗೆ ಅಪ್ರಮಾಣವಾಗುತ್ತದೋ, ಅದರಂತೆ, ಮಣ್ಣು ಮಾತನಾಡಿತು. ನೀರುಗಳು ಮಾತನಾಡಿದವು, ತೇಜಸ್ಸು ನೋಡಿತು, ಇತ್ಯಾದಿ ವಾಕ್ಯಗಳೂ ಕೂಡ ಅಪ್ರಮಾಣವಾಗುತ್ತವೆ. ಮಣ್ಣು

ಮಣ್ಣಾದ್ದರಿಂದ ಅಥವಾ ಜಡವಾದ್ದರಿಂದ ಘಟಾದಿಗಳಂತೆ ಮಾತನಾಡುವುದಿಲ್ಲ ಎಂಬ ಯುಕ್ತಿಗೆ ವಿರುದ್ಧವಾದ್ದರಿಂದ ಶ್ರುತಿಯು ಅಪ್ರಮಾಣವಾಗುತ್ತದೆ. ಏಕದೇಶವಾದ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾದರೆ ಸಮಗ್ರ ವೇದಭಾಗಕ್ಕೂ ಕೂಡ ಅಪ್ರಾಮಾಣ್ಯವನ್ನು ಸಾಧಿಸಬಹುದು.

ನ ವಿಲಕ್ಷಣತ್ವಾಧಿಕರಣದಲ್ಲಿ ಹೇಳಿದ ನ್ಯಾಯದಿಂದಲೇ ಈ ವಿರೋಧವೂ ಕೂಡ ಪರಿಹಾರವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಈ ಅಧಿಕರಣದಲ್ಲಿ ಹೇಳುತ್ತಿರುವ ನ್ಯಾಯಕ್ಕೆ ಅಲ್ಲಿ ವ್ಯಭಿಚಾರವಿಲ್ಲ. ನ ವಿಲಕ್ಷಣತ್ವಾಧಿ- ಕರಣದಲ್ಲಿ ವೇದದಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೂ ಕೂಡ ಫಲವು ದೊರೆಯುತ್ತಿಲ್ಲ. ಕಾರೀರ್ಯಾದಿವಾಕ್ಯಗಳೇ ಈ ವಿಷಯದಲ್ಲಿ ದೃಷ್ಟಾಂತವಾಗಿವೆ ಎಂದು ಸಾಧಿಸಲಾಗಿತ್ತು. ಕಾರೀರ್ಯಾದಿಯಾಗಗಳನ್ನು ಪ್ರತಿಪಾದಿಸುವ ವಾಕ್ಯಗಳು ವೃಷ್ಟ್ಯಾದಿಗಳಿಗೆ ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ. ಅಂತಹ ವಾಕ್ಯಗಳಿಗೆ ಪ್ರತ್ಯಕ್ಷ ವಿರೋಧವು ಬರುತ್ತದೆಂದು ಅಲ್ಲಿ ಸಮರ್ಥನೆ ಮಾಡಿದ ವಿಚಾರ. ಆದರೆ ಈ ಅಧಿಕರಣದಲ್ಲಿ 'ಮಣ್ಣು ಮಾತನಾಡಿತು' ಇತ್ಯಾದಿ ವಾಕ್ಯಗಳು ಪ್ರತ್ಯಕ್ಷಕ್ಕೆ ವಿರುದ್ಧವಾದ ವಿಷಯಗಳನ್ನು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಶ್ರುತಿಗೆ ಪ್ರತ್ಯಕ್ಷವಿರೋಧ ಬರುತ್ತದೆಂಬ ಆಕ್ಷೇಪವನ್ನು ಮಾಡಲಾಗಿದೆ. ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಹೇಳುತ್ತಿಲ್ಲ. ನ ವಿಲಕ್ಷಣತ್ವಾಧಿಕರಣದಲ್ಲಿ ಪ್ರತ್ಯಕ್ಷವಿರೋಧವನ್ನು ಹೇಳುತ್ತಿಲ್ಲ. ಹೀಗೆ ಈ ಅಧಿಕರಣದಲ್ಲಿ ಪ್ರತ್ಯಕ್ಷವಿರೋಧವನ್ನು ಪರಿಹರಿಸಲಾಗಿದೆ. ನ ವಿಲಕ್ಷಣತ್ವಾಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ಅಧಿಕರಣಕ್ಕೆ ಸಾರ್ಥಕ್ಯವು ಬರುತ್ತದೆ. (ತತ್ವಪ್ರಕಾಶಿಕೆಯಲ್ಲಿ ಜಡತ್ವವನ್ನು ಹೇತುವೆಂದು ಹೇಳಿರುವುದರಿಂದ ಇಲ್ಲಿ ಜಡತ್ವವು ಹೇತು. ಇದು ಪಕ್ಷದಲ್ಲಿ ಬಾರದ ಕಾರಣ ಅಸಿದ್ಧಿದೋಷ ಹೇಳುವುದು ಹೇಗೆ ? ಎಂದು ಆಶಂಕಿಸಬಾರದು. ಮೃತ್ತ್ವರೂಪ ಹೇತುವಿನಿಂದ ಜಡತ್ವವನ್ನು ಅನುಮಾನ ಮಾಡಬೇಕೆಂದು ಹೇಳಿರುವುದರಿಂದ ಅಸಿದ್ಧಿಗೆ ಅವಕಾಶವಿಲ್ಲ.) ನ್ಯಾಯಸುಧೆಯಲ್ಲಿ ಮೃತ್ತ್ವವನ್ನು ಹೇತು ಮಾಡಿರುವ ಹಾಗೇ, ತತ್ವಪ್ರಕಾಶಿಕೆಯಲ್ಲಿ ಮೃತ್ತ್ವವನ್ನು ಏಕೆ ಹೇತುವನ್ನಾಗಿ ಮಾಡಿಲ್ಲ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ವಕ್ತೃತ್ವಾದಿಗಳಿಂದ ಹೇಗೆ ವಿರೋಧವು ಸ್ಪಷ್ಟವಾಗಿ ತೋರುತ್ತದೋ, ಹಾಗೇ ಮೃತ್ತ್ವಾದಿಗಳಿಗೆ ವಿರೋಧವು ತೋರುವುದಿಲ್ಲ. ಆದ್ದರಿಂದ ಅವಕ್ತೃತ್ವಾದಿಗಳಿಂದ ಮೃತ್ತ್ವಾದಿಗಳಿಗೆ ವ್ಯಾಪ್ತಿಯು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದಲೇ ಇಲ್ಲಿ ವ್ಯಾಪ್ತಿಯನ್ನು ಉಪಪಾದನೆ ಮಾಡಲಾಗಿದೆ. ವ್ಯಾಪ್ತಿಯು ಅಲ್ಲಿ ಸ್ಪಷ್ಟವಾಗಿದ್ದರೂ ಪಕ್ಷಧರ್ಮತಾವನ್ನು ಉಪಪಾದನೆ ಮಾಡುವ ಅವಶ್ಯಕತೆಯಿದೆ. ನ್ಯಾಯಸುಧೆಯಲ್ಲಿ ಪಕ್ಷಧರ್ಮತಾವು ಸ್ಫುಟವಾಗಿದ್ದರೂ ವ್ಯಾಪ್ತಿಯು ಸ್ಪಷ್ಟವಾಗಿರುವುದಿಲ್ಲ. ಹೀಗೆ ಎರಡೂ ಕಡೆ ಒಂದೊಂದರ ಅಗತ್ಯವು ಸಮಾನವಾಗಿರುತ್ತದೆ.

ಈ ಅಧಿಕರಣದ ಸಿದ್ಧಾಂತ ಹೀಗಿದೆ -

ಪ್ರಸಿದ್ಧಸ್ಯ ಪೃಥಿವ್ಯಾದೇಃ ಪಕ್ಷತ್ವೇ ಸಿದ್ಧಸಾಧನಮ್ ।
ದೇವತಾಯಾಸ್ತು ಪಕ್ಷತ್ವೇ ಹೇತ್ವಸಿದ್ಧ್ಯಾದಿಕಂ ಭವೇತ್ ॥

ಪ್ರಸಿದ್ಧವಾದ ಜಡಭೂತವಾದ ಪೃಥಿವ್ಯಾದಿಗಳನ್ನು ಪಕ್ಷವನ್ನಾಗಿ ಮಾಡಿ, ವಕ್ತೃತ್ವಾಭಾವವನ್ನು ಜಡತ್ವ ಹೇತುವಿನಿಂದ ಸಾಧನೆ ಮಾಡಿದರೆ ಸಿದ್ಧಸಾಧನದೋಷವು ಬರುತ್ತದೆ. ಮೃದಭಿಮಾನಿ ದೇವತೆಗಳನ್ನು ಪಕ್ಷವನ್ನಾಗಿ ಮಾಡಿ, ಜಡತ್ವಹೇತುವಿನಿಂದ ವಕ್ತೃತ್ವಾಭಾವವನ್ನು ಸಾಧನೆ ಮಾಡಿದರೆ ಅಸಿದ್ಧ್ಯಾದಿದೋಷಗಳು ಬರುತ್ತವೆ. ಏಕೆಂದರೆ ದೇವತೆಗಳಲ್ಲಿ ಜಡತ್ವವಾಗಲೀ, ಮೃತ್ತ್ವವಾಗಲೀ ಇರುವುದಿಲ್ಲ.

ಅಭಿಮಾನ್ಯಧಿಕರಣ (೨-೧-೩)

ಪ್ರಮಿತಸ್ಯ ಪ್ರಮಾತ್ವಸ್ಯ ಸಿದ್ಧಯೇ ಬಹುಕಲ್ಪನಾ ।
ಯುಕ್ತಾ ತತ್ ತತೋ ಭೀತ್ಯಾ ಪ್ರಮಿತಸ್ಯಾಪ್ಯಪಹ್ನವಃ ॥

ಪ್ರಮಾಣಸಿದ್ಧವಾದ ವೇದಕ್ಕೆ ಪ್ರಾಮಾಣ್ಯದ ಸಂರಕ್ಷಣೆಗೋಸ್ಕರ ಅನೇಕ ವಿಷಯಗಳನ್ನು ಕಲ್ಪನೆ ಮಾಡುವುದೇ ಯುಕ್ತ. ಅದನ್ನು ಬಿಟ್ಟು, ವೇದಪ್ರಾಮಾಣ್ಯದ ಭಯದಿಂದ ಪ್ರಮಿತವಾದದ್ದನ್ನು ತಿರಸ್ಕರಿಸುವುದು ಅಯುಕ್ತವಾಗುತ್ತದೆ.

### ಪ್ರಬಲವಾದ ಶ್ರುತಿ, ದುರ್ಬಲವಾದ ಯುಕ್ತಿ, ಎರಡರ ಗುರಿ ಬೇರೆ ಬೇರೆ

## तात्पर्यचन्द्रिका

**ननु ''उपजीव्यविरोधे तु वेदस्यान्यार्थकल्पन'' इत्यनुव्याख्यान उक्तत्वादादिकालीनमृदादि वक्तृत्वादौ चोपजीव्यप्रत्यक्षाद्यविरोधस्योक्तत्वाद्युक्तिमात्रस्य च श्रुतितो दुर्बलत्वात्तद्बाधेन प्रसिद्धस्यैव मृदादेर्वक्तृत्वादिकं श्रुत्यर्थोऽस्तु किमर्थान्तरकल्पनया ।**

ಪ್ರಶ್ನೆ - ಈ ಹಿಂದೆ ಸೃಷ್ಟಿಯ ಪ್ರಾರಂಭದ ಮಣ್ಣು, ನೀರು ಮೊದಲಾದವುಗಳಲ್ಲಿ ವಕ್ತೃತ್ವಾದಿಗಳನ್ನು ಶ್ರುತಿ ಹೇಳುತ್ತಿದೆಯೆಂದು ವ್ಯಾಖ್ಯಾನ ಮಾಡಿದಿರಿ. ಆದರೆ 'ಉಪಜೀವ್ಯವಿರೋಧೇ ತು ವೇದಸ್ಯಾನ್ಯಾರ್ಥಕಲ್ಪನೇ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಉಪಜೀವ್ಯಪ್ರಮಾಣದ ವಿರೋಧ ಬಂದಾಗ ವೇದಕ್ಕೆ ಅನ್ಯಾರ್ಥವನ್ನೇ ಕಲ್ಪನೆ ಮಾಡಬೇಕೆಂದು ಹೇಳಿದ್ದಾರೆ. ಆದಿಕಾಲದ ಮೃದಾದಿಗಳಲ್ಲಿ ವಕ್ತೃತ್ವಾದಿಗಳನ್ನು ನೀವು ಸಮರ್ಥನೆ ಮಾಡಿದರೆ ಉಪಜೀವ್ಯವಾದ ಪ್ರತ್ಯಕ್ಷದ ವಿರೋಧವನ್ನು ಹೇಳಲಾಗದೆಂದು ನೀವೇ ಹೇಳಿದ್ದೀರಿ. ಕೇವಲ ಯುಕ್ತಿಯ ವಿರೋಧವನ್ನೂ ಕೂಡ ಹೇಳಲು ಸಾಧ್ಯವಿಲ್ಲ. ಕೇವಲ ಯುಕ್ತಿಯು ಶ್ರುತಿಗಿಂತಲೂ ದುರ್ಬಲವಾಗಿದೆ. ಆದ್ದರಿಂದ ಶ್ರುತಿಯಿಂದಲೇ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿಯು ಬಾಧಿತವಾಗುತ್ತದೆ. ಈ ಕಾರಣದಿಂದ ಈಗಿರುವ ಮೃದಾದಿಗಳಲ್ಲಿಯೇ ವಕ್ತೃತ್ವಾದಿಗಳನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆಯೆಂದು ಹೇಳಬಹುದಲ್ಲವೆ? ಅರ್ಥಾಂತರಕಲ್ಪನೆಯನ್ನು ಏಕೆ ಮಾಡುತ್ತಿದ್ದೀರಿ ? ಅರ್ಥಾಂತರವನ್ನು ಕಲ್ಪಿಸಲು ಪ್ರತ್ಯಕ್ಷವಿರೋಧವಾಗಲೀ, ಯುಕ್ತಿಯ ವಿರೋಧವಾಗಲಿ ಇರುವುದಿಲ್ಲವಷ್ಟೇ ?

**इति चेन्न । जडत्वादियुक्तीनामप्यवक्तृत्वादिकं विनाऽनुपपत्त्या निरवकाशत्वात्। अत एवोक्तमनुव्याख्याने ''दृढयुक्त'' इति ।**

ಉತ್ತರ - ಈ ಪ್ರಶ್ನೆ ಅಸಾಧು. 'ಮೃದಬ್ರವೀತ್' ಇತ್ಯಾದಿ ಶ್ರುತಿಗಳಿಗೆ ಯಾವ ಯುಕ್ತಿಗಳ ವಿರೋಧವನ್ನು ನಾವು ಹೇಳುತ್ತಿದ್ದೇವೋ, ಆ ಎಲ್ಲಾ ಯುಕ್ತಿಗಳು ಅತ್ಯಂತ ಬಲಿಷ್ಠವೇ ಆಗಿವೆ. ಅವಕ್ತೃತ್ವ ಎಂಬ ಸಾಧ್ಯವನ್ನು ಬಿಟ್ಟು, ಜಡತ್ವ ಎಂಬ ಹೇತು ಅನುಪಪನ್ನವಾಗುತ್ತದೆ. ಬಲಿಷ್ಠವಾದ

ವ್ಯಾಪ್ತಿಯುಳ್ಳ ಜಡತ್ವಹೇತುವಿನಿಂದ ಈಗಿರುವ ಮೃದಾದಿಗಳಲ್ಲಿ ವಕ್ತೃತ್ವಾಭಾವವೇ ಸಿದ್ಧವಾಗುತ್ತದೆ. ಹೀಗೆ ಯುಕ್ತಿಯು ನಿರವಕಾಶವಾಗಿರುವುದರಿಂದಲೇ ಅನುವ್ಯಾಖ್ಯಾನದಲ್ಲಿ 'ದೃಢಯುಕ್ತಿವಿರೋಧೇ ತು ಸರ್ವತ್ರ ನ್ಯಾಯ ಈದೃಶಃ' ವ್ಯಾಪ್ತಿಪಕ್ಷಧರ್ಮತಾಗಳಿಂದ ಕೂಡಿರುವ ಬಲಿಷ್ಠವಾದ ಯುಕ್ತಿಯ ವಿರೋಧವಿದ್ದಾಗ ಶ್ರುತಿಗಳಿಗೆ ಅರ್ಥಾಂತರವನ್ನೇ ಸ್ವೀಕರಿಸಬೇಕು ಎಂದು ಹೇಳಿರುತ್ತಾರೆ.

**अभिमानिरूपान्यार्थकल्पनेऽप्यभिमन्यमानगतमृत्त्वादि प्रवृत्तिनिमित्तस्याभिमान्यधीनत्वात् ''तदधीनत्वात्'' इति न्यायेन मृदादिशब्दानामभिमानिषु मृदादिभ्योऽपि मुख्यत्वेनामुख्यार्थत्वाभावायुक्तेः श्रुत्यविरोधेन तदबाध्यत्वाच ॥**

'ಮೃದಬ್ರವೀತ್' ಇತ್ಯಾದಿ ಶ್ರುತಿಗಳಲ್ಲಿರುವ ಮೃತ್ ಮೊದಲಾದ ಶಬ್ದಗಳಿಗೆ ಮೃದಭಿಮಾನಿ ದೇವತೆಗಳು ಇತ್ಯಾದಿಯಾಗಿಯೇ ಅರ್ಥವನ್ನು ಹೇಳಬೇಕು. ಹೀಗೆ ಅನ್ಯಾರ್ಥವನ್ನು ಕಲ್ಪನೆ ಮಾಡಿದರೂ ಕೂಡ ಮುಖ್ಯಾರ್ಥವನ್ನೇ ವಿವಕ್ಷಿಸಿದಂತಾಗುತ್ತದೆ. ಅಭಿಮನ್ಯಮಾನವಾದ ಯಾವ ಜಡವಾದ ಮೃದಾದಿಗಳಿವೆಯೋ, ಅವುಗಳಲ್ಲಿ ಮೃತ್ತ್ವವೆಂಬ ಪ್ರವೃತ್ತಿನಿಮಿತ್ತವಿದೆ. ಆದರೆ ಇವುಗಳಲ್ಲಿರುವ ಮೃತ್ತ್ವವು ಅಭಿಮಾನಿಚೇತನರ ಅಧೀನವಾಗಿದೆ. 'ತದಧೀನತ್ವಾತ್' ಎಂಬ ಸೂತ್ರದ ನ್ಯಾಯದಂತೆ ಮೃದಾದಿಗಳಲ್ಲಿ ಪ್ರವೃತ್ತಿನಿಮಿತ್ತಕ್ಕಿಂತಲೂ ತದಭಿಮಾನಿಚೇತನರಲ್ಲಿರುವ ಪ್ರವೃತ್ತಿನಿಮಿತ್ತವು ಮುಖ್ಯವಾಗಿರುತ್ತದೆ. ಆದ್ದರಿಂದ ಯುಕ್ತಿಗೆ ವಿಷಯವಾದದ್ದು ಜಡವಾದ ಮೃದಾದಿಗಳು. ಶ್ರುತಿಗೆ ವಿಷಯವಾದದ್ದು ತದಭಿಮಾನಿಚೇತನರು. ಹೀಗೆ ಎರಡಕ್ಕೂ ವಿಷಯಗಳು ಬೇರೆ ಬೇರೆಯಾಗಿರುವುದರಿಂದ ಶ್ರುತಿಯ ವಿರೋಧವು ಯುಕ್ತಿಗೆ ಬರುವುದೇ ಇಲ್ಲ. ಶ್ರುತಿಯಿಂದ ಬಾಧಿತವೂ ಕೂಡ ಆಗುವುದಿಲ್ಲ.

**प्रबलैर्बाध्यतायां हि हेतुर्दुर्बलतैव न ।**
**किन्तु तत्प्रतिकूलत्वविशिष्टाऽत्र च नास्ति सा ॥१॥**

ಪ್ರಬಲವಾದ ಪ್ರಮಾಣದಿಂದ ಪ್ರಮಾಣಾಭಾಸವು ಬಾಧಿತವಾಗಬೇಕೆಂದರೆ ದುರ್ಬಲತ್ವವಷ್ಟೇ ಕಾರಣವಲ್ಲ. ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವೇ ಕಾರಣವಾಗಿದೆ. ಯುಕ್ತಿಯಲ್ಲಿ ದುರ್ಬಲತ್ವವಿದ್ದರೂ ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವು ಇರುವುದಿಲ್ಲ.

**महाराजकुमारोऽपि स्वस्वाच्छंद्याविरोधिनः ।**
**बाधते नैव लोकेऽपि दुर्बलान् भिक्षुकादिकान् ॥२॥**

ಲೋಕದಲ್ಲಿ ಮಹಾರಾಜನ ಕುಮಾರನು ತನ್ನ ಸ್ವಚ್ಛಂದವಿಹಾರಕ್ಕೆ ಯಾರು ವಿರೋಧ ಮಾಡುತ್ತಾರೋ, ಅವರನ್ನಷ್ಟೇ ನಿಗ್ರಹಿಸುತ್ತಾನೆ. ವಿರೋಧ ಮಾಡದ ಭಿಕ್ಷುಕನು ದುರ್ಬಲನಾಗಿದ್ದರೂ ಅವನನ್ನು ನಿಗ್ರಹಿಸುವುದಿಲ್ಲ.

**नचात्र युक्तेः श्रौतमुख्यार्थविरोधितारूपा प्रतिकूलतास्ति ।**

ಪ್ರಕೃತ 'ಮೃನ್ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿಗೆ ಶ್ರುತಿಯ ಮುಖ್ಯಾರ್ಥವನ್ನು ವಿರೋಧಿಸುವಿಕೆಯೆಂಬ ಪ್ರತಿಕೂಲತ್ವವು ಇರುವುದಿಲ್ಲ.

**मूर्खप्रसिद्धादप्यमुख्यार्थात्तदप्रसिद्धोऽपि प्राज्ञप्रसिद्धो मुख्यार्थः श्रेयान् । प्रयुज्यन्ते हि वेदे बहुषु स्थलेषु तत्तदभिमानिदेवतास्वेव तत्तच्छब्दाः ।**

ಅದು ಹೀಗೆ - ಅಮುಖ್ಯಾರ್ಥವೆನಿಸಿದ ಮೂರ್ಖಪ್ರಸಿದ್ಧಿಗಿಂತಲೂ ಅಪ್ರಸಿದ್ಧವಾಗಿದ್ದರೂ ಪ್ರಾಜ್ಞಪ್ರಸಿದ್ಧಿಯೇ ಶ್ರುತಿಯ ಮುಖ್ಯಾರ್ಥವಾಗುತ್ತದೆ. ವೇದದಲ್ಲಿ ಎಲ್ಲೆಡೆಯು ಅಭಿಮಾನಿದೇವತೆಗಳಲ್ಲಿಯೇ ಜಡವಾಚಕಶಬ್ದಗಳನ್ನು ಹೀಗೆ ಪ್ರಯೋಗಿಸುವುದು ಕಂಡಿದೆ.

**नच प्रबलस्यापि दुर्बलाबाधेनैव स्वारस्ये सम्भवति तद्बाधकता युक्ता ।**

ಶ್ರುತಿಯು ಪ್ರಬಲವಾಗಿದ್ದರೂ ದುರ್ಬಲವಾದ ಯುಕ್ತಿಯನ್ನು ಬಾಧಿಸದೇ ಸ್ವರಸವಾಗಿ ಉಪಪನ್ನವಾಗುವಾಗ ಯುಕ್ತಿಯನ್ನು ಬಾಧಿಸುತ್ತದೆಂದು ಹೇಳುವುದು ಅಯುಕ್ತ.

ಅಭಿಪ್ರಾಯವಿಷ್ಟು- ಯುಕ್ತಿಯು ಜಡವಾದ ಪದಾರ್ಥಗಳಿಗೆ ವಕ್ತೃತ್ವವನ್ನು ನಿಷೇಧ ಮಾಡುತ್ತಿದೆ. ಶ್ರುತಿಯು ಚೇತನರಾದ ಅಭಿಮಾನಿದೇವತೆಗಳಲ್ಲಿ ವಕ್ತೃತ್ವವನ್ನು ವಿಧಿಸುತ್ತಿದೆ. ಭಿನ್ನಭಿನ್ನ ವಿಷಯಕವಾದ್ದರಿಂದ ಪರಸ್ಪರ ವಿರೋಧವೇ ಇರುವುದಿಲ್ಲ. 'ಮೃದಬ್ರವೀತ್'ಎಂಬ ವಾಕ್ಯದಲ್ಲಿರುವ 'ಮೃತ್' ಎಂಬ ಶಬ್ದದಿಂದ ಲೋಕಪ್ರಸಿದ್ಧಿಯಂತೆ ಜಡಪದಾರ್ಥವನ್ನು ವಿವಕ್ಷಿಸಬೇಕೋ? ಅಥವಾ ತದಧೀನತ್ವನ್ಯಾಯದಂತೆ ಅಭಿಮಾನಿಚೇತನರನ್ನು ವಿವಕ್ಷಿಸಬೇಕೋ ? ಎಂಬ ಗೊಂದಲವುಂಟಾದರೆ ಮುಖ್ಯಾಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ ಅಭಿಮಾನಿಚೇತನರೆಂಬ ಅರ್ಥವನ್ನೇ ವಿವಕ್ಷಿಸಬೇಕು. ಯಾವಾಗ ಶ್ರುತಿಗಳಿಂದ ಮುಖ್ಯವಾದ ಅಭಿಮಾನಿಚೇತನರೆಂಬ ಅರ್ಥವನ್ನು ಸ್ವೀಕರಿಸುತ್ತೇವೋ ಆವಾಗ ಯುಕ್ತಿಯು ದುರ್ಬಲವಾಗಿದ್ದರೂ ಕೂಡ ಶ್ರುತಿಯು ವಿರೋಧ ಮಾಡುವುದಿಲ್ಲ. ಮಹಾರಾಜಕುಮಾರನು ತನ್ನ ಸ್ವಚ್ಛಂದಪ್ರವೃತ್ತಿಗೆ ಪ್ರತಿಬಂಧಕರಾದ ದುರ್ಬಲರನ್ನು ನಿಗ್ರಹಿಸುತ್ತಾನೆ ಹೊರತು, ಪ್ರತಿಬಂಧಕವಾಗದ ದುರ್ಬಲನಾದ ಭಿಕ್ಷುಕನನ್ನು ಹೇಗೆ ನಿಗ್ರಹಿಸುವುದಿಲ್ಲವೋ? ಅದರಂತೆ.

**तदधीनत्वादित्यनेनास्यागतार्थता तु तत्रैवोक्तेति ।।**

ಹಾಗಾದರೆ ಅಭಿಮಾನ್ಯಧಿಕರಣವು ತದಧೀನತ್ವಸೂತ್ರದಿಂದಲೇ ಗತಾರ್ಥವಾಯಿತಲ್ಲವೇ? ಎಂಬ ಪ್ರಶ್ನೆಗೆ ಆ ಸೂತ್ರದ ವ್ಯಾಖ್ಯಾನದಲ್ಲಿಯೇ ನಾವು ಉತ್ತರಿಸಿದ್ದಾಗಿದೆ.

ಪರಿಪೂರ್ಣಚಂದ್ರಿಕಾ

**विग्रहस्य ग्राह्यत्वादिति ।। अभिमानिनो व्यपदेश इत्येकवचनान्तविग्रहस्येत्यर्थः।।**

ಟೀಕೆಯ ಕಠಿಣಪದಾರ್ಥ ಹೀಗಿದೆ - 'ವಿಗ್ರಹಸ್ಯ ಗ್ರಾಹ್ಯತ್ವಾತ್' ಎಂಬ ಪದದ ಅರ್ಥವನ್ನು ಸ್ಪಷ್ಟವಾಗಿ ತಿಳಿಯಬೇಕು - ಸೂತ್ರದಲ್ಲಿ 'ಅಭಿಮಾನಿವ್ಯಪದೇಶಾತ್' ಎಂದು ಹೇಳಿದ್ದಾರೆ. 'ಅಭಿಮಾನಿನಃ ವ್ಯಪದೇಶಾತ್' ಎಂದು ಏಕವಚನಾಂತವಾಗಿಯೇ ವಿಗ್ರಹ ಮಾಡಬೇಕು. ಹೊರತು, 'ಅಭಿಮಾನಿನಾಂ ವ್ಯಪದೇಶಾತ್' ಎಂದು ಬಹುವಚನಾಂತವಾಗಿ ವಿಗ್ರಹ ಮಾಡಬಾರದು. ಏಕವಚನಾಂತವಾಗಿ ವಿಗ್ರಹವನ್ನು ಮಾಡಿ, ಸಮುದಾಯಾರ್ಥದಲ್ಲಿ ಏಕತ್ವವು ವಿವಕ್ಷಿತವಾಗಿದೆಯೆಂದೇ ಹೇಳಬೇಕು. ಒಂದುವೇಳೆ ಅನೇಕ ದೇವತೆಗಳನ್ನು ವಿವಕ್ಷಿಸಬೇಕೆಂಬ ದೃಷ್ಟಿಯಿಂದ 'ಅಭಿಮಾನಿನಾಂ ವ್ಯಪದೇಶಾತ್' ಎಂದು ವಿಗ್ರಹ ಮಾಡಿದರೆ, ಮುಂದಿನ ಸೂತ್ರದಲ್ಲಿ 'ದೃಶ್ಯತೇ' ಎಂಬ ಏಕವಚನಪ್ರಯೋಗವು ಅಸಾಧುವಾಗುತ್ತದೆ. ಹಿಂದಿನ ಸೂತ್ರದಲ್ಲಿ ಏಕವಚನಾಂತವಾದ ಅಭಿಮಾನಿಯೆಂಬ ಪದದಿಂದ ವಿವಕ್ಷಿತವಾದದ್ದನ್ನೇ ಮುಂದಿನ 'ದೃಶ್ಯತೇ' ಎಂಬ ಸೂತ್ರದಲ್ಲಿ ಪರಾಮರ್ಶಿಸಲಾಗಿದೆ. ಆದ್ದರಿಂದ ಮುಂದಿನ ಸೂತ್ರದಲ್ಲಿ ಏಕವಚನವು ವಿವಕ್ಷಿತವಾದ್ದರಿಂದ, ಇಲ್ಲಿಯೂ ಕೂಡ ಏಕವಚನವನ್ನೇ ವಿವಕ್ಷಿಸಬೇಕು. ಇಲ್ಲದಿದ್ದರೆ 'ದೃಶ್ಯಂತೇ' ಎಂದು ಹೇಳಬೇಕಾಗಿತ್ತಷ್ಟೇ.

**न तत्र शक्तिमात्रमिति ।। तासां सामर्थ्यमिति भाष्येऽप्युत्तरस्मृत्यनुसारेण देवतापि विवक्षितेत्यर्थः ।**

ದೇವತೆಗಳ ಸಾಮರ್ಥ್ಯವನ್ನಷ್ಟೇ ಜ್ಞಾನಿಜನರು ನೋಡುತ್ತಿಲ್ಲ. ಹೊರತಾಗಿ, ದೇವತೆಗಳನ್ನೂ ಕೂಡ ತಮ್ಮ ದಿವ್ಯಜ್ಞಾನದಿಂದ ಕಾಣುತ್ತಿದ್ದಾರೆ ಎಂದು ವಿವಕ್ಷಿಸಬೇಕು. ಭಾಷ್ಯದಲ್ಲಿಯೂ ಕೂಡ ಉದಾಹರಿಸಿದ ಸ್ಮೃತಿಯಿಂದ ಇದು ಸ್ಪಷ್ಟವಾಗುತ್ತದೆ.

**ननु वेदादिप्रामाण्येऽविवादात्तत्त्यागेन देवतादौ योगिप्रत्यक्षोक्तिरयुक्ता । विवादबीजाभावस्योक्तत्वात् । अन्यथा योगिप्रत्यक्षे स्मृतेः प्रमाणीकरणायोगादिति पूर्वत्रारुच्याऽऽह ।। अथवा विग्रहेति ।।**

ವೇದಾದಿಪ್ರಾಮಾಣ್ಯವಿಷಯದಲ್ಲಿ ಪೂರ್ವಪಕ್ಷಿಗಳು ವಿವಾದ ಮಾಡುತ್ತಿಲ್ಲ. ವೇದವನ್ನು ಪ್ರಮಾಣವೆಂದು ಒಪ್ಪಿ, ಅನ್ಯಾರ್ಥವನ್ನು ಮಾಡಬೇಕೆಂಬುದಷ್ಟೇ ಅವರ ಆಕ್ಷೇಪ. ಹೀಗಿರುವಾಗ ಅಭಿಮಾನಿಚೇತನರೇ ಮೃದಾದಿಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆನ್ನಲು ವೇದಪ್ರಾಮಾಣವನ್ನು ತ್ಯಾಗ ಮಾಡಿ ಯೋಗಿಪ್ರತ್ಯಕ್ಷವನ್ನು ಪ್ರಮಾಣವನ್ನಾಗಿ ಹೇಳುವುದು ಅಯುಕ್ತವಾಗಿದೆ. ವೇದವು ಅಪ್ರಮಾಣವಾಗಿದೆಯೆಂದು ಪೂರ್ವಪಕ್ಷಿ ಹೇಳಲು ಯಾವುದೇ ಕಾರಣವಿಲ್ಲ. ಯಾವುದೇ ಯುಕ್ತಿಯ ವಿರೋಧವು ಬಾರದಿದ್ದಾಗ ಅಪ್ರಾಮಾಣ್ಯವನ್ನು ಅವನಿಂದ ಹೇಳಲಾಗದು. ಹೀಗೊಪ್ಪದಿದ್ದರೆ ಯೋಗಿಪ್ರತ್ಯಕ್ಷ-

ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ಉಲ್ಲೇಖಿಸುವುದೂ ಕೂಡ ಅಯುಕ್ತವಾಗುತ್ತದೆ. ಹೀಗೆ 'ದೃಶ್ಯತೇ ಚ' ಎಂಬ ಸೂತ್ರದ ಪ್ರಥಮವ್ಯಾಖ್ಯಾನದಲ್ಲಿ ಅರುಚಿ ಇರುವುದರಿಂದ ಮತ್ತೊಂದು ವ್ಯಾಖ್ಯಾನವನ್ನು 'ವಿಗ್ರಹ' ಇತ್ಯಾದಿ ವಾಕ್ಯದಿಂದ ಮಾಡಿರುತ್ತಾರೆ.

**अत्र पक्षद्वयेऽपि ''विशेषानुगतिभ्याम्'' इति हेत्वोः ''नच दर्शनप्रसङ्गः'' इत्याद्यध्याहृतसाध्यान्वयादरुच्या ''अभिमानिव्यपदेशः'' इति श्रुतसाध्यान्वयेन मतान्तरमाह – अथवा वस्त्वन्तरमिति ।।**

ಎರಡೂ ಪಕ್ಷಗಳಲ್ಲಿಯೂ 'ವಿಶೇಷಾನುಗತಿಭ್ಯಾಮ್' ಎರಡು ಹೇತುಗಳಿಗೆ ಸಾಧ್ಯದ ಜೊತೆಗೆ ನೇರವಾಗಿ ಅನ್ವಯವಿರುವುದಿಲ್ಲ. 'ನಚ ದರ್ಶನಪ್ರಸಂಗಃ' ಎಂಬುದಾಗಿ ಅಧ್ಯಾಹಾರ ಮಾಡಲ್ಪಟ್ಟ ಸಾಧ್ಯದ ಜೊತೆಗಷ್ಟೇ ಅನ್ವಯವಿರುತ್ತದೆ. ಈ ಅಸ್ವಾರಸ್ಯವಿರುವುದರಿಂದ 'ಅಭಿಮಾನಿವ್ಯಪದೇಶಃ' ಎಂಬ ಸೂತ್ರದಲ್ಲೇ ಇರುವ ಸಾಧ್ಯದ ಜೊತೆಗೆ ಅನ್ವಯವನ್ನು ತಿಳಿಸುವುದಕ್ಕಾಗಿ 'ದೃಶ್ಯತೇ ಚ'ಎಂಬ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವನ್ನು 'ಅಥವಾ ವಸ್ತ್ವಂತರಮ್' ಇತ್ಯಾದಿಯಾಗಿ ಟೀಕೆಯಲ್ಲಿ ಮಾಡಿರುತ್ತಾರೆ.

**अनुपलब्धिबाधपरिहाराय सूत्रमिति ।। योगिभिरप्यनुपलभ्यमानत्वान्नास्त्यभिमानिदेवतेति शङ्कानिरासाय ''दृश्यते च'' इति सूत्रमित्यर्थः ।। छ ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अभिमान्यधिकरणं सम्पूर्णम् ।।३।।**

'ಅನುಪಲಬ್ಧಿಬಾಧಪರಿಹಾರಾಯ ಸೂತ್ರಂ' ಎಂಬುದು ಟೀಕೆಯ ಮಾತು. ಇದರ ಅಭಿಪ್ರಾಯವಿಷ್ಟು - ಯೋಗಿಜನರಿಂದಲೂ ಕೂಡ ಅಭಿಮಾನಿಚೇತನರು ಗೋಚರವಾಗುತ್ತಿಲ್ಲ ಆದ್ದರಿಂದ ಅಭಿಮಾನಿದೇವತೆಗಳೇ ಇರುವುದಿಲ್ಲವೆಂಬ ಆಶಂಕೆಯನ್ನು ನಿರಾಕರಣೆ ಮಾಡಲು 'ದೃಶ್ಯತೇ ಚ' ಎಂಬ ಸೂತ್ರವು ಹೊರಟಿದೆ ಎಂದರ್ಥ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಭಿಮಾನ್ಯಧಿಕರಣವು ಸಂಪೂರ್ಣವಾಯಿತು

**प्रकाशः –**

''श्रुतियुक्त्योः श्रुतेरेव प्राबल्यात्'' इति टीकोक्तशङ्कां बीजोक्तिपूर्वं सुधारीत्या व्यनक्ति – **ननूपजीव्येति** ।। पूर्वाधिकरणानुव्याख्यान इत्यर्थः ।।

ಶ್ರುತಿ ಹಾಗೂ ಯುಕ್ತಿಗಳ ನಡುವೆ ಶ್ರುತಿಯೇ ಪ್ರಬಲವಾಗಿವೆ ಎಂದು 'ಶ್ರುತಿಯುಕ್ತ್ಯೋಃ ಶ್ರುತೇರೇವ ಪ್ರಾಬಲ್ಯಾತ್' ಎಂಬ ಟೀಕೆಯಲ್ಲಿ ಹೇಳಿರುತ್ತಾರೆ. ಹೀಗಿರುವಾಗ ಯುಕ್ತಿಯ ವಿರೋಧವನ್ನು ಶ್ರುತಿಗೆ ಹೇಗೆ ಹೇಳುತ್ತೀರಿ ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಕಾರಣಪುರಸ್ಸರವಾಗಿ ಈ ಆಶಂಕೆಯನ್ನು ನ್ಯಾಯಸುಧೆಯಲ್ಲಿ ಹೇಳಿದಂತೆ ವ್ಯಾಖ್ಯಾನ ಮಾಡಲು 'ನನೂಪಜೀವ್ಯ' ಇತ್ಯಾದಿ ವಾಕ್ಯವು ಹೊರಟಿವೆ. ನ ವಿಲಕ್ಷಣತ್ವಾಧಿಕರಣದಲ್ಲಿ 'ಉಪಜೀವ್ಯವಿರೋಧೇ ತು ವೇದಸ್ಯಾನ್ಯಾರ್ಥಕಲ್ಪನೇ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಉಪಜೀವ್ಯಪ್ರಮಾಣದ ವಿರೋಧ ಬಂದಾಗ ಮಾತ್ರ ವೇದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕೆಂದು ಇದರ ಅಭಿಪ್ರಾಯ.

**प्रकाशः** – उपजीव्यप्रत्यक्षाद्यविरोधस्येति ।। इदानीन्तनमृदादिकारणत्वेनादिकालीनमृदाद्यनुमानेऽपि ''मृदब्रवीत्'' इत्यादिश्रुतिर्न मृदाद्यनुमापकयुक्तिमुपजीव्य प्रवृत्ता । किं त्ववकृत्वसाधकजडत्वयुक्तिमेवेत्यर्थः ।

'ಉಪಜೀವ್ಯಪ್ರತ್ಯಕ್ಷಾದ್ಯವಿರೋಧಸ್ಯ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - ಈಗಿರುವ ಮೃದಾದಿಗಳಿಗೆ ಕಾರಣವಾದದ್ದು ಆದಿಕಾಲದ ಮೃದಾದಿಗಳು ಎಂದು ಅನುಮಾನದಿಂದ ಸಾಧಿಸಲಾಯಿತು. ಆದರೂ ಕೂಡ 'ಮೃದಬ್ರವೀತ್' ಇತ್ಯಾದಿ ಶ್ರುತಿಗಳು ಮೃದಾದ್ಯನುಮಾಪಕಯುಕ್ತಿಯನ್ನು ಉಪಜೀವಿಸಿ ಹೊರಟಿಯೇ ಇಲ್ಲ ಹೊರತು, ಅವಕ್ತೃತ್ವಸಾಧಕವಾದ ಜಡತ್ವಯುಕ್ತಿಯಷ್ಟೇ ಆದಿಕಾಲೀನಮೃದಾದ್ಯನುಮಾನವನ್ನು ಉಪಜೀವಿಸಿ ಹೊರಟಿದೆ. ಆದ್ದರಿಂದ ಉಪಜೀವ್ಯಪ್ರಮಾಣದ ವಿರೋಧವನ್ನು ಹೇಳಲಾಗದು.

**प्रकाशः** – टीकोक्तं समाधिमुपलक्षणं मत्वा ''व्याप्तिपक्षधर्मतोपेताया युक्तेरप्रामाण्यायोगात्'' इति सुधोक्तं तावदाह – जडत्वादीति ।।

ಟೀಕೆಯಲ್ಲಿ ಹೇಳಿದ ಸಮಾಧಾನವು ಉಪಲಕ್ಷಣವಾಗಿದೆಯೆಂದು ತಿಳಿದು 'ವ್ಯಾಪ್ತಿಪಕ್ಷಧರ್ಮತೋಪೇತಾಯಾ ಯುಕ್ತೇರಪ್ರಾಮಾಣ್ಯಾಯೋಗಾತ್' ವ್ಯಾಪ್ತಿ ಹಾಗೂ ಪಕ್ಷಧರ್ಮತಾಗಳಿಂದ ಕೂಡಿರುವ ಯುಕ್ತಿಗೆ ಅಪ್ರಾಮಾಣ್ಯವನ್ನು ಹೇಳುವುದು ಅಯುಕ್ತ ಎಂಬ ಸುಧೆಯ ಮಾತನ್ನು ಜಡತ್ವಾತ್' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः** – अनुपपत्तेरेव व्याप्तिशब्दार्थत्वेन तर्कताण्डवे व्यवस्थापितत्वादिति भावः ।

'ಜಡತ್ವಾದಿಯುಕ್ತೀನಾಂ' ಎಂಬ ವಾಕ್ಯದಲ್ಲಿ ಅವಕ್ತೃತ್ವವನ್ನು ಬಿಟ್ಟು, ಜಡತ್ವವು ಯುಕ್ತವಾಗುವುದಿಲ್ಲವೆಂದು ಹೇಳಿದ್ದಾರೆ. ಇದರಿಂದ ವ್ಯಾಪ್ತಿಯನ್ನು ಹೇಗೆ ಹೇಳಿದಂತಾಯಿತು ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಅನುಪಪತ್ತಿ' ಶಬ್ದಕ್ಕೆ 'ವ್ಯಾಪ್ತಿ' ಎಂದೇ ಅರ್ಥ.[೧]

(೧) 'ಅವಿನಾಭಾವಃ ವ್ಯಾಪ್ತಿಃ' ಎಂಬುದು ನಾವು ಹೇಳುವ ವ್ಯಾಪ್ತಿ ಲಕ್ಷಣ. 'ಸಾಧ್ಯಂವಿನಾ ಹೇತೋಃ ಅಭಾವಃ ಅಭಿಮಾನ್ಯಧಿಕರಣ (೨-೧-೩)

**प्रकाशः** – उपजीव्यविरोधे त्वित्येतत्प्राबल्योपलक्षणमिति सुधायामेवोक्तमिति नात्र तस्य गत्युक्तिः ।

ಶ್ರುತಿಗೆ ಯುಕ್ತಿಯು ಉಪಜೀವ್ಯವೇ ಆಲ್ಲದಿರುವಾಗ ಅನ್ಯಾರ್ಥವನ್ನೇಕೆ ಮಾಡಬೇಕು ಎಂಬುದು ಪ್ರಶ್ನೆಯ ಆಂತರ್ಯ. 'ಉಪಜೀವ್ಯವಿರೋಧೇ ತು' ಎಂಬ ಅನುವ್ಯಾಖ್ಯಾನದಲ್ಲಿ ಪ್ರಾಬಲ್ಯವನ್ನು ಹೇಳಿದ್ದು ಉಪಲಕ್ಷಣವಾಗಿದೆ ಎಂದು ಸುಧೆಯಲ್ಲಿ ವ್ಯಾಖ್ಯಾನ ಮಾಡಿರುವುದರಿಂದ ಇಲ್ಲಿ ಆದನ್ನು ಪುನಃ ವ್ಯಾಖ್ಯಾನಿಸಿಲ್ಲ.

**प्रकाशः** – सुधोक्तेर्मूलमाह – **अत एवेति** ।। सौत्रतुशब्दसूचितं ''अन्यार्थकल्पने मुख्यार्थलाभात्'' इति टीकोक्तं समाधिं सुधोक्तदिशा विवृणोति – **अभिमानीति** ।।

ನಾಯಸುಧೆಯಲ್ಲಿ ಹೇಳಿದ್ದಕ್ಕೆ 'ದೃಢಯುಕ್ತಿವಿರೋಧೇ ತು' ಎಂಬ ಅನುವ್ಯಾಖ್ಯಾನವೇ ಮೂಲಪ್ರಮಾಣವಾಗಿದೆ ಎನ್ನುತ್ತಿದ್ದಾರೆ. ಸೂತ್ರದಲ್ಲಿರುವ 'ಚ' ಶಬ್ದದಿಂದ 'ಅನ್ಯಾರ್ಥಕಲ್ಪನೇ ಮುಖ್ಯಾರ್ಥಲಾಭಾತ್' ಎಂಬ ಟೀಕೆಯಲ್ಲಿ ಹೇಳಿದ ಸಮಾಧಾನವು ಸೂಚಿತವಾಗಿದೆ. ಈ ಸಮಾಧಾನವನ್ನು ನ್ಯಾಯಸುಧೆಯಲ್ಲಿ ಹೇಳಿದಂತೆ 'ಅಭಿಮಾನಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – अयं च परिहारो युक्तेर्दौर्बल्यमुपेत्येति ध्येयम् ।। **तदबाध्यत्वादिति**।। भ्रांतिरेव बाध्यते । नतु श्रुत्यर्थ इत्यर्थः ।

'ಅಭಿಮಾನಿರೂಪ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಪರಿಹಾರವು ಯುಕ್ತಿಗೆ ದೌರ್ಬಲ್ಯವನ್ನು ಒಪ್ಪಿ ಹೊರಟಿದೆ. 'ತದಬಾಧ್ಯತ್ವಾತ್' ಎಂದರೆ ಭ್ರಾಂತಿಯಷ್ಟೇ ಬಾಧಿತವಾಗುತ್ತದೆ ಹೊರತು ಶ್ರುತ್ಯರ್ಥವು ಬಾಧಿತವಾಗುವುದಿಲ್ಲ ಎಂದಭಿಪ್ರಾಯ.

**प्रकाशः** – ननु श्रुतिर्दुर्बलां युक्तिमेव बाधतां किमिति तामनुरुन्ध्यादित्यत आह – **प्रबलैरिति** ।।

ಪ್ರಬಲವಾದ ಶ್ರುತಿಯು ದುರ್ಬಲವಾದ ಯುಕ್ತಿಯನ್ನೇ ಬಾಧಿಸಲಿ, ಯುಕ್ತಿಯು ಶ್ರುತಿಯನ್ನು ಅನುಸರಿಸಲಿ ಎಂಬ ಆಕ್ಷೇಪಕ್ಕೆ 'ಪ್ರಬಲೈಃ' ಎಂಬ ಶ್ಲೋಕದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ''अत्र च नास्ति स'' इत्येतद् व्याचष्टे – **नचेति** ।। ननु

ಅನುಪಪತ್ತಿಃ' ಸಾಧ್ಯವನ್ನು ಬಿಟ್ಟು ಹೇತುವಿನ ಇಲ್ಲದಿರುವಿಕೆಯೇ ಅನುಪಪತ್ತಿ ಎನಿಸಿಕೊಳ್ಳುತ್ತದೆ. 'ಯದ್ದೇಶಕಾಲತ್ವೇನ ಯೇನ ಸಾಧ್ಯೇನ ವಿನಾ ಯದ್ದೇಶಕಾಲತಃ ತಸ್ಯ ಹೇತೋಽನುಪಪತ್ತಿಃ ತಸ್ಯ ತೇನ ಸೈವ ವ್ಯಾಪ್ತಿಃ' ಯಾವ ದೇಶಕಾಲದಲ್ಲಿರುವ ಸಾಧ್ಯವನ್ನು ಬಿಟ್ಟು, ಯಾವ ದೇಶಕಾಲದಲ್ಲಿರುವ ಹೇತು ಅನುಪಪನ್ನವಾಗುತ್ತದೋ, ಅಂತಹ ಸಾಧ್ಯದ ಜೊತೆಗೆ ಹೇತುವಿದ್ದರೆ ಅದನ್ನು ವ್ಯಾಪ್ತಿಯೆನ್ನುತ್ತಾರೆ. ಇದರಿಂದ 'ಸಾಧ್ಯಂವಿನಾ ಹೇತೋಃ ಅನುಪಪತ್ತಿರೇವ ವ್ಯಾಪ್ತಿಃ' ಎಂದು ಹೇಳಿದಂತಾಯಿತು.

मृदादिशब्दानामचेतनेष्वेव मुख्यतया रूढत्वेन तत्त्यागे कथं न श्रुत्यर्थबाध इत्यतः ''बालरूढिं विनैवापि विद्वद्रूढिसमाश्रयात्'' इत्यनुव्याख्यानं हृदि कृत्वाऽऽह – **मूर्खेति ।।**

ಪ್ರತಿಕೂಲತ್ವವಿಶಿಷ್ಟವಾದ ಯುಕ್ತಿಯಷ್ಟೇ ಬಾಧ್ಯವಾಗುತ್ತದೆ. ಕೇವಲ ಯುಕ್ತಿಯು ಬಾಧ್ಯವಾಗುವುದಿಲ್ಲ ಎಂಬುದನ್ನು 'ನ ಚಾರ್ಥ ಯುಕ್ತೇಃ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಮೃದಾದಿಶಬ್ದಗಳು ಅಚೇತನವಾದ ಪದಾರ್ಥಗಳಲ್ಲೇ ಮುಖ್ಯವಾಗಿ ಲೋಕದಿಂದ ಸಿದ್ಧವಾಗಿದೆ. ಈ ಅರ್ಥವನ್ನು ಬಿಟ್ಟರೆ ಶ್ರುತಿಗೆ ಮುಖ್ಯಾರ್ಥವನ್ನು ಬಿಟ್ಟಂತೆ ಆಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಬಾಲರೂಢಿಂ ವಿನೈವಾಪಿ ವಿದ್ವದ್ರೂಢಿಸಮಾಶ್ರಯಾತ್' ಅಜ್ಞಜನರ ರೂಢಿಯನ್ನು ಬಿಟ್ಟು ವಿದ್ವದ್ರೂಢಿಯನ್ನು ಆಶ್ರಯಿಸುವುದರಿಂದ ಮುಖ್ಯಾರ್ಥವನ್ನು ಬಿಟ್ಟಂತಾಗುವುದಿಲ್ಲ ಎಂಬ ಅನುವ್ಯಾಖ್ಯಾನದ ಮಾತಿನಿಂದ ಉತ್ತರಿಸಲು 'ಮೂರ್ಖ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः – दुर्गमवाक्यानामक्षरार्थमाह – विग्रहस्येत्यादिना ।।** पक्षद्वयेऽपीति।। टीकायां पूर्वमुक्तपक्षद्वयेऽपीत्यर्थः । सूत्रक्रमादिकं टीकायां व्यक्तमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अभिमान्यधिकरणं सम्पूर्णम् ।।३।।**

ಟೀಕೆಯಲ್ಲಿರುವ ಕಠಿಣವಾಕ್ಯಗಳ ಅಕ್ಷರಾರ್ಥವನ್ನು 'ವಿಗ್ರಹಸ್ಯ' ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಪಕ್ಷದ್ವಯೇऽಪಿ' ಎಂದರೆ ಟೀಕೆಯಲ್ಲಿ ಹೇಳಿದ ಮೊದಲಿನ ಎರಡು ಪಕ್ಷಗಳಲ್ಲಿಯೂ ಕೂಡ ಎಂದರ್ಥ. ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ. ಮೊದಲಿನ ಸೂತ್ರದ ಅನಂತರವೇ 'ದೃಶ್ಯತೇ ಚ' ಎಂಬ ಸೂತ್ರವು ಬರಲು ಏನು ಕಾರಣ? ಎಂಬ ಪ್ರಶ್ನೆಗೆ ಟೀಕೆಯಲ್ಲಿಯೇ ಉತ್ತರಿಸಿದ್ದಾರೆ. ಪ್ರಥಮಸೂತ್ರದಲ್ಲಿ ಸಾಧಕಪ್ರಮಾಣವನ್ನು ಹೇಳಿದ ಮೇಲೆ ಬರುವಂತಹ ಬಾಧಕಪ್ರಮಾಣವನ್ನು ಎರಡನೆಯ ಸೂತ್ರವು ವಿರೋಧಿಸುತ್ತಿವೆ. ಆದ್ದರಿಂದ ಸೂತ್ರಕ್ರಮದ ವಿನ್ಯಾಸವು ಸ್ವರಸವಾಗಿದೆ ಎಂದು ಸಿದ್ಧವಾಯಿತು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಭಿಮಾನ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




'ಮೃದಬ್ರವೀತ್' ಎಂಬ ವಾಕ್ಯವು ಜಡವಾದ ಮಣ್ಣಿನಲ್ಲಿ ವಕ್ತೃತ್ವವನ್ನು ಹೇಳುತ್ತಿದೆ ಎಂಬ ಉದ್ದೇಶದಿಂದ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿಯು ಶ್ರುತ್ಯರ್ಥವನ್ನು ಬಾಧಿಸಲು ಹೊರಟಿದೆ. ವಿಚಾರ ಮಾಡಿದರೆ ಶ್ರುತಿಯು ಜಡವಾದ ಮಣ್ಣಿಗೆ ವಕ್ತೃತ್ವವನ್ನು ಹೇಳಲು ಹೊರಟಿಲ್ಲ. ತದಭಿಮಾನಿಚೇತನರಲ್ಲಿ ವಕ್ತೃತ್ವವನ್ನು ಸಾರಲು ಹೊರಟಿದೆ. ತಾನು ಕಾಣುತ್ತಿರುವ ವಿಷಯದಲ್ಲಿ ಯುಕ್ತಿಗೆ ಪ್ರವೇಶವೇ ಇಲ್ಲವೆಂಬ ದೃಷ್ಟಿಯಿಂದ ಶ್ರುತಿಯು ಅದನ್ನು ವಿರೋಧ ಮಾಡಲು ಕೂಡ ಹೋಗುವುದಿಲ್ಲ.

ಪ್ರಬಲೈರ್ಬಾಧ್ಯತಾಯಾಂ ಹಿ ಹೇತುರ್ದುರ್ಬಲತೈವ ನ।
ಕಿಂತು ತತ್ಪ್ರತಿಕೂಲತ್ವವಿಶಿಷ್ಟಾऽತ್ರ ಚ ನಾಸ್ತಿ ಸಾ ॥೧॥

ಪ್ರಬಲವಾದ ಪ್ರಮಾಣದಿಂದ ಪ್ರಮಾಣಾಭಾಸವು ಬಾಧಿತವಾಗಬೇಕೆಂದರೆ ದುರ್ಬಲತ್ವವಷ್ಟೇ ಕಾರಣವಲ್ಲ. ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವೇ ಕಾರಣವಾಗಿದೆ. ಯುಕ್ತಿಯಲ್ಲಿ ದುರ್ಬಲತ್ವವಿದ್ದರೂ ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವು ಇರುವುದಿಲ್ಲ.

ಅಭಿಪ್ರಾಯವಿಷ್ಟು - ಯುಕ್ತಿಯು ಜಡವಾದ ಪದಾರ್ಥಗಳಿಗೆ ವಕ್ತೃತ್ವವನ್ನು ನಿಷೇಧ ಮಾಡುತ್ತಿದೆ. ಶ್ರುತಿಯು ಚೇತನರಾದ ಅಭಿಮಾನಿದೇವತೆಗಳಲ್ಲಿ ವಕ್ತೃತ್ವವನ್ನು ವಿಧಿಸುತ್ತಿದೆ. ಭಿನ್ನಭಿನ್ನ ವಿಷಯಕವಾದ್ದರಿಂದ ಪರಸ್ಪರ ವಿರೋಧವೇ ಇರುವುದಿಲ್ಲ. 'ಮೃದಬ್ರವೀತ್'ಎಂಬ ವಾಕ್ಯದಲ್ಲಿರುವ 'ಮೃತ್' ಎಂಬ ಶಬ್ದದಿಂದ ಲೋಕಪ್ರಸಿದ್ಧಿಯಂತೆ ಜಡಪದಾರ್ಥವನ್ನು ವಿವಕ್ಷಿಸಬೇಕೋ? ಅಥವಾ ತದಧೀನತ್ವನ್ಯಾಯದಂತೆ ಅಭಿಮಾನಿಚೇತನರನ್ನು ವಿವಕ್ಷಿಸಬೇಕೋ ? ಎಂಬ ಗೊಂದಲವುಂಟಾದರೆ ಮುಖ್ಯಾಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ ಅಭಿಮಾನಿಚೇತನರೆಂಬ ಅರ್ಥವನ್ನೇ ವಿವಕ್ಷಿಸಬೇಕು. ಯಾವಾಗ ಶ್ರುತಿಗಳಿಂದ ಮುಖ್ಯವಾದ ಅಭಿಮಾನಿಚೇತನರೆಂಬ ಅರ್ಥವನ್ನು ಸ್ವೀಕರಿಸುತ್ತೇವೋ ಆವಾಗ ಯುಕ್ತಿಯು ದುರ್ಬಲವಾಗಿದ್ದರೂ ಕೂಡ ಶ್ರುತಿಯನ್ನು ವಿರೋಧ ಮಾಡಿದಂತಾಗುವುದಿಲ್ಲ. ರಾಜಕುಮಾರನು ತನ್ನ ಸ್ವಚ್ಛಂದಪ್ರವೃತ್ತಿಗೆ ಪ್ರತಿಬಂಧಕರಾದ ದುರ್ಬಲರನ್ನು ನಿಗ್ರಹಿಸುತ್ತಾನೆ ಹೊರತು, ಪ್ರತಿಬಂಧಕವಾಗದ ದುರ್ಬಲನಾದ ಭಿಕ್ಷುಕನನ್ನು ನಿಗ್ರಹಿಸುವುದಿಲ್ಲ.

# ಅಸದಧಿಕರಣ

(೨-೧-೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅಸದಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – असदिति चेन्न प्रतिषेधमात्रत्वात् ।।**

ಜಗತ್ತು ಸೃಷ್ಟಿಯಾಗುವ ಮೊದಲು ಏನೂ ಇರಲಿಲ್ಲ. 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿ ಹೇಳುವಂತೆ ವಿಶ್ವದ ಪ್ರಾಗಭಾವವೇ ಜಗತ್ತಿಗೆ ಕಾರಣವಾಗಿದೆಯೆಂದು ಹೇಳಬೇಕಲ್ಲವೇ?

ಇದು ತಪ್ಪು. ಏಕೆಂದರೆ ಪ್ರಾಗಭಾವವು ಕೇವಲ ನಿಷೇಧಸ್ವರೂಪವಾಗಿರುವುದರಿಂದ ಜಗತ್ಕಾರಣವಾಗಲು ಸಾಧ್ಯವಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – असदिति चेन्न प्रतिषेधमात्रत्वात् ।।** असत् विश्वप्रागभाव एव । जगत्कर्तृ नेश्वर इति चेन्न । कुतः? प्रतिषेधमात्रत्वात् अभावधर्मात्मतामन्तरेण स्वरूपत एव निषेधबुद्धिविषयत्वादित्यर्थः ।।१।।

ಅರ್ಥ -- ಅಸತ್ = ವಿಶ್ವದ ಪ್ರಾಗಭಾವವೇ ಜಗತ್ ಕರ್ತೃವಾಗಿದೆ ಈಶ್ವರನಲ್ಲ. ಇತಿ ಚೇನ್ನ = ಇದು ತಪ್ಪು. ಏಕೆಂದರೆ ಪ್ರತಿಷೇಧಮಾತ್ರತ್ವಾತ್ = ಬೇರೆ ಧರ್ಮದ ಅವಶ್ಯಕತೆಯಿಲ್ಲದೆ ಸ್ವರೂಪತಃ ನಿಷೇಧ ಬುದ್ಧಿಗೆ ವಿಷಯವಾಗುವುದರಿಂದ.

ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'असदेवेदमग्र आसीत्' (छां ६.२.१) 'असतः सदजायत' (ऋ.१०.७२.३) इत्यादिनाऽसतः कारणत्वोक्तेर्विरोध इति ।**

ಅನುವಾದ - ಪ್ರಳಯಕಾಲದಲ್ಲಿ 'ಅಸತ್'ಮಾತ್ರ ಅಸ್ತಿತ್ವವನ್ನು ಹೊಂದಿತ್ತು. ಅಭಾವ ಪದಾರ್ಥದಿಂದ ಭಾವಪದಾರ್ಥವು ಹುಟ್ಟಿತು.

ಅಸತ್‌ಪದಾರ್ಥದಿಂದ ಸತ್‌ಪದಾರ್ಥವು ಹುಟ್ಟಿತು. ಹೀಗೆ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಅಸತ್ತಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳ ಮಾತಿನಿಂದ ವಿಷ್ಣುವಿನ ಜಗತ್ಕಾರಣತ್ವಪ್ರತಿಪಾದಕತ್ವಕ್ಕೆ ವಿರೋಧ ಬರುತ್ತದೆ.

ಪ್ರತಿಪದಾರ್ಥ -- ಪ್ರಾಗಭಾವಕರ್ತೃತ್ವಕ್ಕೆ ಶ್ರುತಿಯ ಬೆಂಬಲವಿದೆ. ಇದರಿಂದ ಬ್ರಹ್ಮನ ಜಗತ್‌ಕರ್ತೃತ್ವಕ್ಕೆ ವಿರೋಧ ಬರುತ್ತದೆ. ಇದನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ. 'ಅಸದಿತಿಚೇತ್' ಎಂಬ ಸೂತ್ರದಿಂದ ಸೂಚಿತವಾದ ಪೂರ್ವಪಕ್ಷವನ್ನು ಮೊದಲು ಭಾಷ್ಯದಲ್ಲಿ ಪ್ರದರ್ಶನ ಮಾಡುತ್ತಿದ್ದಾರೆ. ಅಗ್ರೇ = ಪ್ರಳಯಕಾಲದಲ್ಲಿ, ಅಸದೇವ, ಅಸತ್ = ಪದಾರ್ಥವು ಮಾತ್ರ, ಆಸೀತ್ = ಅಸ್ತಿತ್ವವನ್ನು ಪಡೆದಿತ್ತು. ಅಸತಃ = ಅಸತ್ತಿನ ದೆಸೆಯಿಂದ, ಸತ್ = ಸತ್‌ಪದಾರ್ಥವು, ಅಜಾಯತ = ಹುಟ್ಟಿತು. ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಅಸತಃ = ಅಸತ್‌ಪದಾರ್ಥಕ್ಕೆ, ಕಾರಣತ್ವೋಕ್ತೇಃ = ಅಸತ್ ಕಾರಣತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳ, ವಿರೋಧಃ = ವಿರೋಧವು ಬರುತ್ತದೆ. ಇತಿ = ಇಷ್ಟು ಪೂರ್ವಪಕ್ಷ.

**भाष्यम् – अतो वक्ति –**

**।। असदिति चेन्न प्रतिषेधमात्रत्वात् ।।१।।**

**प्रतिषेधमात्रत्वान्नासतः कारणत्वं युक्तम् ।**

ಅನುವಾದ - ಈ ಪೂರ್ವಪಕ್ಷಕ್ಕೆ ಪರಿಹಾರವನ್ನು ಹೇಳಲು 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರವು ಹೊರಟಿದೆ. ಅಸತ್‌ಪದಾರ್ಥವು ನಿಷೇಧ ಸ್ವಭಾವವಾದ್ದರಿಂದ ಜಗತ್ಕಾರಣವಾಗುವುದಿಲ್ಲ.

ಪ್ರತಿಪದಾರ್ಥ -- ಪರಿಹಾರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅತಃ = ಮೇಲಿನ ಪೂರ್ವಪಕ್ಷಕ್ಕೆ ಉತ್ತರವನ್ನು, ವಕ್ತಿ = ಹೇಳುತ್ತಿದ್ದಾರೆ. ಪ್ರತಿಷೇಧಮಾತ್ರತ್ವಾತ್ =

ನಿಷೇಧಸ್ವರೂಪವಾದ್ದರಿಂದ, ಅಸತಃ = ಅಭಾವಕ್ಕೆ, ಕಾರಣತ್ವಂ = ಜಗತ್ಕಾರಣತ್ವವು, ನ ಯುಕ್ತಮ್ = ಯುಕ್ತಿಯುಕ್ತವಲ್ಲ.

**ಭಾಷ್ಯಮ್ — असतः कारणत्वाद् युक्तिविरुद्धं वेदवाक्यमित्येतदत्र निषिद्ध्यते ।**

ಅನುವಾದ - ಅಸತ್‌ಪದಾರ್ಥವು ಜಗತ್ತಿಗೆ ಕಾರಣವಾಗಿದೆಯೆಂದು 'ಅಸದೇವೇದಮಗ್ರಮಾಸಿತ್' ಎಂಬ ವಾಕ್ಯವು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಬ್ರಹ್ಮನೇ ಕಾರಣನೆಂದು ಹೇಳುವ 'ಸದೇವ ಸೌಮ್ಯೇದಮಗ್ರ ಆಸೀತ್' ಇತ್ಯಾದಿ ವೇದವಾಕ್ಯವು ಯುಕ್ತಿವಿರುದ್ಧವಾಯಿತು. ಎಂಬುದನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಿದ್ದಾರೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಶೂನ್ಯವಾದಿಗಳ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಶ್ರುತಿಪ್ರಾಪ್ತವಾದ ಅಭಾವಕರ್ತೃತ್ವವನ್ನು ನಿರಾಕರಣೆ ಮಾಡುತ್ತಿಲ್ಲ. ಆದ್ದರಿಂದ ಅಸಂಗತಿದೋಷ ಬರುತ್ತದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಸತಃ = ಅಸತ್‌ಪದಾರ್ಥಕ್ಕೆ, ಕಾರಣತ್ವಾದ್ = ಕಾರಣತ್ವವಿರುವುದರಿಂದ, ವೇದವಾಕ್ಯಮ್ = 'ಸದೇವ ಸೌಮ್ಯ' ಎಂಬ ವೇದವು, ಯುಕ್ತಿವಿರುದ್ಧಂ = ಯುಕ್ತಿವಿರುದ್ಧವಾಗಿದೆ, ಇತ್ಯೇತತ್ = ಈ ಶಂಕೆಯನ್ನು, ಅತ್ರ = ಈ ಅಧಿಕರಣದಲ್ಲಿ, ನಿಷಿದ್ಧ್ಯತೇ = ನಿರಾಕರಣೆ ಮಾಡುತ್ತಿದ್ದಾರೆ.

**ಭಾಷ್ಯಮ್ — सर्वशब्दानां ब्रह्मणि समन्वयेऽपि 'तदधीनत्वादर्थवत्' इत्यादिनाऽमुख्यत्वेनान्यस्यापि वाच्यत्वेनाङ्गीकारादसतः प्राप्तिः । तथा श्रुतिप्राप्तमेवासन्मतमत्र निषिद्ध्यते । समयस्योपरि निषेधात् । अर्थाद् युक्तिविरोधोऽपि निराक्रियते ॥१॥**

ಅನುವಾದ - ಪ್ರಥಮಾಧ್ಯಾಯದಲ್ಲಿ ವೈದಿಕವಾದ ಸಕಲಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಸಮರ್ಥಿಸಲಾಗಿದೆ. ಆದರೂ ಕೂಡ 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಅಮುಖ್ಯವಾಗಿ ಬೇರೆ ಪದಾರ್ಥವು ಪ್ರತಿಪಾದ್ಯವಾಗುತ್ತದೆ ಎಂದು ಹೇಳಲಾಗಿದೆ. ಆದ್ದರಿಂದ 'ಅಸದೇವೇದಮಗ್ರಮಾಸಿತ್' ಎಂಬ ವೇದವಾಕ್ಯಕ್ಕೆ 'ಅಭಾವದಿಂದ ಜಗತ್ತು ಹುಟ್ಟಿತು' ಎಂದು ಅರ್ಥೈಸಬಹುದು. ಮತ್ತು ಶ್ರುತಿಯಿಂದ ಪ್ರಾಪ್ತವಾದ ಅಸತ್ಕಾರಣತಾವಾದವನ್ನೇ ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಶೂನ್ಯಮತವೆನಿಸಿದ ಬೌದ್ಧಮತದ ನಿರಾಕರಣೆಯನ್ನು ಇಲ್ಲಿ ಮಾಡುತ್ತಿಲ್ಲ. ಇದನ್ನು ಮುಂದಿನ ಪಾದದಲ್ಲಿ ನಿರಾಕರಿಸುತ್ತಾರೆ.

ಪ್ರತಿಪದಾರ್ಥ -- ಶ್ರುತಿಯಿಂದ ಅಸತ್ಕಾರಣತ್ವವು ಪ್ರಾಪ್ತವಾಗಿಲ್ಲವೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಸರ್ವಶಬ್ದಾನಾಂ = ಸಕಲವಿಧವಾದ ಶಬ್ದಗಳನ್ನು, ಬ್ರಹ್ಮಣಿ = ಪರಬ್ರಹ್ಮನಲ್ಲಿ, ಸಮನ್ವಯೇಽಪಿ = ಸಮನ್ವಯವನ್ನು ಮಾಡಿದರೂ ಕೂಡ, ತದಧೀನತ್ವಾದರ್ಥವತ್ ಇತ್ಯಾದಿನಾ = ತದಧೀನತ್ವಾದರ್ಥವತ್ ಇವೇ ಮೊದಲಾದ

ಸೂತ್ರಗಳಿಂದ, ಅಮುಖ್ಯತ್ವೇನ ಅನ್ಯಸ್ಯ = ಪ್ರಸಿದ್ಧವಾದ ಶಬ್ದಗಳಿಗೆ ಅಮುಖ್ಯವೃತ್ತಿಯಿಂದ, ಅನ್ಯಸ್ಯಾಪಿ = ಭಗವದತಿರಿಕ್ತವಾದ ಜಗತ್ತಿಗೂ, ವಾಚ್ಯತ್ವೇನ = ವಾಚ್ಯತ್ವವನ್ನು, ಅಂಗೀಕಾರಾತ್ = ಅಂಗೀಕಾರ ಮಾಡಿರುವುದರಿಂದ, ಅಸತಃ = ಶೂನ್ಯಕ್ಕೆ ಜಗತ್ಕಾರಣತ್ವವು, ಪ್ರಾಪ್ತಿಃ = ಪ್ರಾಪ್ತವಾಗುತ್ತದೆ. ತಥಾ = ಅದೇ ರೀತಿಯಾಗಿ, ಶ್ರುತಿಪ್ರಾಪ್ತಮೇವ = ಶ್ರುತಿಪ್ರಮಾಣದಿಂದಪ್ರಾಪ್ತವಾಗುವ, ಅಸನ್ಮತಮತ್ರ = ಅಸತ್ ಕಾರಣತ್ವವಾದವನ್ನು, ಅತ್ರ = ಈ ಅಧಿಕರಣದಲ್ಲಿ, ನಿಷಿಧ್ಯತೇ = ನಿಷೇಧ ಮಾಡಲಾಗಿದೆ. ಸಮಯಸ್ಯ = ಶೂನ್ಯಮತದ ನಿರಾಕರಣೆಯನ್ನು, ಉಪರಿ = ಎರಡನೆಯ ಪಾದದಲ್ಲಿ, ನಿಷೇಧಾತ್ = ನಿರಾಕರಿಸುತ್ತಾರೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका –**

**अत्र ब्रह्मणो जगत्कारणत्वे युक्तिविरोधस्य परिह्रियमाणत्वादस्ति शास्त्रादिसङ्गतिः । जगत्कारणत्वं हरेरुक्तम् । तस्य युक्तिविरुद्धत्वे लक्षणासम्भवात्स निराकर्तव्य एव । जगत्कारणत्वमेव विषयः तद्विष्णोर्युक्तमयुक्तं वेति सन्देहः । श्रुतिविगानं सन्देहबीजम् । तत्र पूर्वपक्षयति – असदेवेति ।।**

(೧)ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗುತ್ತದೆ. ಆದ್ದರಿಂದ ಶಾಸ್ತ್ರಾದಿಸಂಗತಿಯು ಈ ಅಧಿಕರಣಕ್ಕೆ ಕೂಡುತ್ತದೆ.

ವಿಷ್ಣುವಿನಲ್ಲಿ ಹೇಳಿದ ಜಗತ್ಕಾರಣತ್ವಲಕ್ಷಣವು ಯುಕ್ತಿವಿರುದ್ಧವಾದರೆ ಕೂಡುವುದಿಲ್ಲವಾದ್ದರಿಂದ, ಯುಕ್ತಿವಿರೋಧವು ಪರಿಹಾರವಾಗಲೇ ಬೇಕು.

ಜಗತ್ಕಾರಣತ್ವವೇ ವಿಷಯ. ವಿಷ್ಣುವಿಗೆ ಯುಕ್ತವೇ ಅಯುಕ್ತವೇ ? ಎಂದು ಸಂದೇಹ. ಪರಸ್ಪರ ಶ್ರುತಿವಿರೋಧವೇ ಸಂದೇಹಕ್ಕೆ ಕಾರಣ. 'ಅಸದೇವ' ಎಂದು ಭಾಷ್ಯದಲ್ಲಿ ಪೂರ್ವಪಕ್ಷ ಮಾಡುತ್ತಾರೆ.

**तत्वप्रकाशिका – न विष्णोर्जगत्कारणत्वम् प्रमाणाभावात् । न च 'यतो वा इमानि' इत्यादिश्रुतिः प्रमाणम् । 'असदेवेदमग्र आसीत्' इत्यादिश्रुत्याऽसतोऽपि**

(೧) ಈ ಅಧಿಕರಣವನ್ನು ಅನುವಾದ ಮಾಡಿದ ದಿನಾಂಕ : ೧೬-೧೨-೨೦೧೦. ಮುದ್ರಣ ಮಾಡಿದ ದಿನಾಂಕ : ೧-೩-೨೦೧೬ ನಮ್ಮ ಇಚ್ಛೆಗೆ ಸ್ವಾತಂತ್ರ್ಯವಿಲ್ಲವೆನ್ನಲು ಇದೂ ನಿದರ್ಶನ.

**कारणत्वोक्तेः । न हि श्रुतित्वाविशेषेऽन्यया ब्रह्मणः कारणत्वं सेत्स्यत्यन्यया तु नासत इति युक्तम् । अतोऽसदेव जगत्कारणमिति न जगत्कारणत्वं ब्रह्मणः । तथा चोक्तं लक्षणं दुष्टमिति भावः । अत्र सर्वत्रासच्छब्देन प्रलयवर्तिविश्वप्रागभावोऽभिधीयते । कारणशब्देन कर्तैत्यवधेयम् । स्यादेतत् । श्रुतिद्वयेन सन्देह एव नान्यतरपक्षावधारणमिति । न, पूर्वपक्षे सयुक्तिकत्वस्य वक्ष्यमाणत्वादिति । सिद्धान्तयत्सूत्रमवतार्याक्षेपांशस्य पूर्वमेव विवृतत्वात् परिहारांशं व्याचष्टे – अत इति ॥**

ವಿಷ್ಣು ಜಗತ್ಕಾರಣನಲ್ಲ. ಆ ವಿಷಯದಲ್ಲಿ 'ಯತೋ ವಾ ಇಮಾನಿ' ಇತ್ಯಾದಿ ಶ್ರುತಿಗಳು ಪ್ರಮಾಣವಾಗಲಾರವು. ಏಕೆಂದರೆ, 'ಅಸದೇವ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳು ಅಸತ್ತನ್ನೂ ಕಾರಣವೆನ್ನುತ್ತಿವೆ. ಈ ಎರಡೂ ಶ್ರುತಿವಾಕ್ಯಗಳಲ್ಲಿ ಶ್ರುತಿತ್ವಧರ್ಮ ಸಾಮಾನ್ಯವಾಗಿರುವಾಗ 'ಯತೋ ವಾ' ಶ್ರುತಿಯಿಂದ ವಿಷ್ಣುವಿಗೆ ಕಾರಣತ್ವ ಸಿದ್ಧವಾಗುತ್ತದೆ. 'ಅಸದೇವ' ಶ್ರುತಿಯಿಂದ ಮಾತ್ರ ಅಸತ್ತಿಗೆ ಕಾರಣತ್ವ ಸಿದ್ಧವಾಗುವುದಿಲ್ಲ ಎನ್ನುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಅಸತ್ತೇ ಜಗತ್ಕಾರಣವಾಗಿದೆ, ಬ್ರಹ್ಮನಿಗೆ ಹೇಳಿದ ಜಗತ್ಕಾರಣತ್ವಲಕ್ಷಣವು ದುಷ್ಟವಾಯಿತೆಂದು ಅಭಿಪ್ರಾಯ.

ಶ್ರುತಿಯಲ್ಲಿ ಎಲ್ಲ ಕಡೆ 'ಅಸತ್' ಶಬ್ದದಿಂದ ಪ್ರಲಯಕಾಲದಲ್ಲಿರುವ ವಿಶ್ವಪ್ರಾಗಭಾವವನ್ನು ಹೇಳಲಾಗಿದೆ. ಕಾರಣಶಬ್ದದಿಂದ ವಿಶ್ವಕರ್ತೃವನ್ನು ಹೇಳಲಾಗಿದೆ ಎಂದು ತಿಳಿಯಬೇಕು.

ಭಿನ್ನಪದಾರ್ಥಗಳಿಗೆ ಕಾರಣತ್ವವನ್ನು ಹೇಳುವ ಎರಡು ಶ್ರುತಿಗಳಿರುವುದರಿಂದ, ಇವೆರಡರಲ್ಲಿ ಯಾವುದಕ್ಕೆ ಜಗತ್ಕಾರಣತ್ವವನ್ನು ಹೇಳಬೇಕೆಂಬ ಸಂದೇಹ ಬರುತ್ತದೆಯೇ ಹೊರತು ಯಾವುದನ್ನೂ ಅವಧಾರಣ ಮಾಡಲು ಬರುವುದಿಲ್ಲ. ಹೀಗಿರುವಾಗ ಅಸತ್ತಿಗೇ ಜಗತ್ಕಾರಣತ್ವವನ್ನು ಸ್ವೀಕಾರ ಮಾಡಿ ಪೂರ್ವಪಕ್ಷ ಮಾಡುವುದು ಹೇಗೆ ಯುಕ್ತವಾಗುತ್ತದೆ ? ಹೀಗೆ ಆಕ್ಷೇಪ ಮಾಡಿದರೆ, ಅದು ಸರಿಯಲ್ಲ. ಪೂರ್ವಪಕ್ಷವಿಷಯದಲ್ಲಿ ಯುಕ್ತಿಗಳಿವೆ ಎಂದು ಮುಂದೆ ಹೇಳುವವರಿದ್ದಾರೆ.

ಸಿದ್ಧಾಂತ ಮಾಡುವ ಸೂತ್ರವನ್ನು ಹೇಳಿ ಸೂತ್ರದಲ್ಲಿನ ಆಕ್ಷೇಪಾಂಶವನ್ನು ಈ ಹಿಂದೆ ವಿವೇಚನೆ ಮಾಡಿರುವುದರಿಂದ, ಪರಿಹಾರಾಂಶವನ್ನು ಮಾಡಿ ವ್ಯಾಖ್ಯಾನ ಮಾಡುತ್ತಾರೆ 'ಅತಃ' ಎಂಬುದರಿಂದ.

**तत्वप्रकाशिका – युक्तमेव विष्णोर्जगत्कारणत्वं न त्वसतः । तस्याभावधर्मात्मतामन्तरेण स्वरूपत एव प्रतिषेधबुद्धिविषयत्वात् । न हि घटप्रागभावस्य कारणत्वं सम्भवतीति भावः (न हि शशविषाणादीनां यत्किञ्चित् प्रति कारणत्वं सम्भवतीति भावः) नन्वेतस्मिन्नधिकरणेऽसतो जगत्कारणत्वं वदतां**

**शून्यवादिनां समयो निराक्रियते न तु श्रुतिप्राप्तमसन्मतम् । 'एतेन सर्वे व्याख्याताः' इत्यसदादिशब्दानां ब्रह्मविषयत्वस्योक्तत्वेनासतः प्राप्त्यभावात् । अतोऽपव्याख्यानमेतदित्यत आह – असत इति ।।**

ವಿಷ್ಣುವಿನಲ್ಲಿ ಮಾತ್ರ ಜಗತ್ಕಾರಣತ್ವ ಬರುತ್ತದೆ ಹೊರತು ಅಸತ್ತಿನಲ್ಲಿ ಅಲ್ಲ. ಏಕೆಂದರೆ ಅಸತ್ ಎಂಬುದು ಅಭಾವತ್ವರೂಪಧರ್ಮದಿಂದ ಪ್ರತೀತವಾಗದೇ ಕೇವಲ ಧರ್ಮಿಸ್ವರೂಪದಿಂದಲೇ ನಿಷೇಧಬುದ್ಧಿಗೆ ವಿಷಯವಾಗುತ್ತದೆ. ಕೇವಲ ಅಭಾವ ಸ್ವರೂಪದಿಂದಲೇ ಬುದ್ಧಿಗೆ ವಿಷಯವಾಗುವ ಶಶವಿಷಾಣಾದಿಗಳಿಗೆ ಅಥವಾ ಘಟಪ್ರಾಗಭಾವಕ್ಕೆ ಯಾವ ಕಾರ್ಯವನ್ನು ಕುರಿತು ಕರ್ತೃತ್ವವು ಸಂಭವಿಸಲಾರದು.

ಈ ಅಧಿಕರಣದಲ್ಲಿ ಅಸತ್ತಿಗೆ (ಶೂನ್ಯಕ್ಕೆ) ಜಗತ್ಕಾರಣತ್ವ ಹೇಳುವ ಬೌದ್ಧಮತದ ನಿರಾಕರಣೆ ಮಾಡಲ್ಪಟ್ಟಿದೆಯೇ ಹೊರತು ಶ್ರುತಿಪ್ರಾಪ್ತ ಅಸತ್ಕಾರಣತ್ವವಾದವನ್ನು ನಿರಾಸ ಮಾಡಿಲ್ಲ - ಏಕೆಂದರೆ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಸೂತ್ರದಲ್ಲಿ ಶ್ರುತಿಯಲ್ಲಿ ಬರುವ ಅಸದಾದಿ ಸರ್ವಶಬ್ದವೂ ಬ್ರಹ್ಮವಾಚಕವೆಂದು ಹೇಳಿರುವುದರಿಂದ ಅಸತ್ಕಾರಣವಾದವೇ ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಭಾಷ್ಯದ ವ್ಯಾಖ್ಯಾನವು ಅಪವ್ಯಾಖ್ಯಾನವೇ ಆಗುತ್ತದೆ. ಈ ಶಂಕೆಗೆ 'ಅಸತಃ' ಎಂಬ ವಾಕ್ಯದಿಂದ ಉತ್ತರ ಕೊಡುತ್ತಾರೆ.

(ಈ ಅಧಿಕರಣದಲ್ಲಿ ಟೀಕಾದ ಪ್ರಕಾರ 'ವಿಶ್ವಪ್ರಾಗಭಾವ ಕಾರಣ' ಎಂದು ಪೂರ್ವಪಕ್ಷ. ಬ್ರಹ್ಮನೇ ಕಾರಣವೆಂದು ಸಿದ್ಧಾಂತ. ಭಾವಬೋಧಕಾರರು 'ಅಸತ್' ಶಬ್ದಕ್ಕೆ ಶೂನ್ಯವೆಂದೇ ಅರ್ಥ - ವಿಶ್ವಪ್ರಾಗಭಾವವಲ್ಲ ಎಂದಿದ್ದಾರೆ. ಆದುದರಿಂದ ಅವರ ಪ್ರಕಾರ 'ಶೂನ್ಯವೇ ಕಾರಣ' ಎಂದು ಪೂರ್ವಪಕ್ಷ. ಟೀಕಾದಲ್ಲಿ ಸಿದ್ಧಾಂತ ನಿರೂಪಿಸುವಾಗ 'ನ ಹಿ ಘಟಪ್ರಾಗಭಾವಸ್ಯ ಕಾರಣತ್ವಂ ಸಂಭವತೀತಿಭಾವಃ' ಎಂದು ಹಾಗೂ ಅದಕ್ಕಿಂತ ಮೊದಲು 'ಅತ್ರ ಸರ್ವತ್ರ ಅಸಚ್ಛಬ್ದೇನ ಪ್ರಲಯವರ್ತಿವಿಶ್ವಪ್ರಾಗಭಾವೋಽಭಿಧೀಯತೇ' ಮುಂತಾದ ಟೀಕಾವಾಕ್ಯಗಳು ಇದನ್ನೇ ಹೇಳುತ್ತವೆ. ಆದರೆ 'ಘಟಪ್ರಾಗಭಾವಸ್ಯ' ಎಂಬ ಶಬ್ದದ ಸ್ಥಾನದಲ್ಲಿ 'ಶಶವಿಷಾಣಾದೀನಾಂ' ಎಂಬ ಟೀಕಾ ಪಾಠಾಂತರವೂ ಉಪಲಬ್ಧವಿದೆ. ಆದ್ದರಿಂದ ಅದನ್ನು ಆಧಾರವಾಗಿಟ್ಟುಕೊಂಡು ಭಾವಬೋಧದಲ್ಲಿ ಶೂನ್ಯಕಾರಣತಾವಾದವನ್ನು ಪೂರ್ವಪಕ್ಷವೆಂದು ಪರಿಗಣಿಸಲಾಗಿದೆ. (ರಾಯರು ಪ್ರಾಗಭಾವಕಾರಣತಾವಾದವನ್ನೇ ಇಟ್ಟುಕೊಂಡು 'ಹೇಗೆ ಶಶವಿಷಾಣವು ಕಾರಣವಾಗಲಾರದೋ ಹಾಗೆ ವಿಶ್ವಪ್ರಾಗಭಾವವು ಕಾರಣವಾಗಲಾರದೆಂದು ಪಾಠಾಂತರವನ್ನು ದೃಷ್ಟಾಂತವಾಗಿ ಪರಿಗಣಿಸಿ ವ್ಯಾಖ್ಯಾನಿಸಿದ್ದಾನೆ).

**तत्वप्रकाशिका – अत्राधिकरणेसऽसतः कारणत्वप्रलयस्थिततत्वाभिधायकश्रुत्या विरुद्धं विष्णोर्जगत्कारणत्वाभिधायकं वेदवाक्यमिति श्रुतिप्राप्तमेवासन्मतं निराक्रियते न तु समय इत्यर्थः । ननूक्तमेवासतो न श्रुतौ प्राप्तिरिति तत्राह –**

**सर्वेति ।।**

ಈ ಅಧಿಕರಣದಲ್ಲಿ ಅಸತ್ತಿಗೆ ವಿಶ್ವಕಾರಣತ್ವ ಮತ್ತು ಪ್ರಲಯಕಾಲಸ್ಥಿತತ್ವಧರ್ಮಗಳನ್ನು ಹೇಳುವ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವ ಪ್ರತಿಪಾದಕ ವೇದವಾಕ್ಯದಿಂದ ವಿರೋಧ ಬರುತ್ತದೆಂಬುದಾಗಿ ಶ್ರುತಿ ಪ್ರಾಪ್ತವಾದ ಅಸದ್ವಾದವನ್ನೇ ನಿರಾಕರಣೆ ಮಾಡಲಾಗಿದೆ ಹೊರತು ಶೂನ್ಯ ಕಾರಣ ಎಂಬ ದರ್ಶನದ ನಿರಾಕರಣೆಯನ್ನು ಇಲ್ಲಿ ಮಾಡಿಲ್ಲ.

ಶ್ರುತಿಯಲ್ಲಿ ಅಸದ್ವಾದದ ಪ್ರಸಕ್ತಿಯೇ ಇಲ್ಲಿ ಬರುವುದಿಲ್ಲವೆಂದು ಹಿಂದೆ ಹೇಳಿದ್ದೇವಲ್ಲ ? ಎಂದರೆ ಭಾಷ್ಯಕಾರರು ಉತ್ತರ ಕೊಡುತ್ತಾರೆ. 'ಸರ್ವ' ಎಂಬ ವಾಕ್ಯದಿಂದ.

**तत्वप्रकाशिका – नन्वस्त्वेवमसतः प्राप्तिस्तथापि समयोऽत्र निराक्रियत इति किं न स्यादित्यत आह – तथेति ।।**

ಈ ರೀತಿಯಾಗಿ ಶ್ರುತ್ಯುಕ್ತವಾದ ಅಸದ್ವಾದದ ಪ್ರಸಕ್ತಿ ಇಲ್ಲಿ ಬಂದರೂ, ಶೂನ್ಯವಾದದ ನಿರಾಕರಣೆ ಇಲ್ಲಿ ಮಾಡಿದ್ದಾರೆಂದು ಏಕೆ ಹೇಳಬಾರದು ? ಎಂದರೆ 'ತಥಾ' ಎಂಬುದರಿಂದ ಉತ್ತರ ಕೊಡುತ್ತಾರೆ.

**तत्वप्रकाशिका – अमुख्यतयेत्यर्थः । शून्यवादिसमयतस्योपरितनपादे निराकरिष्यमाणत्वात् । अत्र श्रुतिप्राप्तमेवासन्मतं निराक्रियत इत्येवाङ्गीकार्यम् । अन्यथा पौनरुक्त्यापातदिति भावः ।। यद्यत्र ब्रह्मणो जगत्कारणत्ववाचिश्रुतेः श्रुतिप्राप्तासन्मतविरोधो निराक्रियते तर्ह्येतदधिकरणं तृतीयपादे निबन्धनीयं न तु युक्तिविरोधपरिहारात्मकेऽस्मिन् पाद इत्यत आह – अर्थादिति ।।**

ಭಾಷ್ಯದಲ್ಲಿ 'ತಥಾ ಶ್ರುತಿಪ್ರಾಪ್ತಮೇವಾಸನ್ಮತಮತ್ರ ನಿಷಿದ್ಧ್ಯತೇ' ಎಂಬ ವಾಕ್ಯದಲ್ಲಿ 'ತಥಾ' ಶಬ್ದಕ್ಕೆ, ಅಮುಖ್ಯವಾಗಿ ಎಂದರ್ಥ. ಇದಕ್ಕೆ 'ಅಸನ್ಮತ' ಎಂಬಲ್ಲಿ ಸಂಬಂಧ. ಅಮುಖ್ಯವಾಗಿ ಶ್ರುತಿ ಪ್ರತಿಪಾದಿತವಾದ ಅಸನ್ಮತ ಎಂದು ಇದರರ್ಥ. ಬೌದ್ಧಸಮಯವನ್ನು ಮುಂದಿನ ಪಾದದಲ್ಲಿ ನಿರಾಕರಣ ಮಾಡುವವರಿದ್ದಾರೆ. ಆದ್ದರಿಂದ ಇಲ್ಲಿ ಶ್ರುತಿಪ್ರಾಪ್ತವಾದ ಅಸತ್ಕಾರಣತ್ವವಾದವನ್ನೇ ನಿರಾಕರಣ ಮಾಡಿದ್ದಾರೆಂದು ಅಂಗೀಕಾರ ಮಾಡಬೇಕು. ಇಲ್ಲದಿದ್ದರೆ, ಒಂದೇ ಸಮಯವನ್ನು ಎರಡು ಕಡೆ ನಿರಾಕರಣ ಮಾಡುವ ಪ್ರಸಂಗ ಬರುವುದರಿಂದ ಸೂತ್ರಕಾರರ ಮೇಲೆ ಪುನರುಕ್ತಿ ದೋಷ ಪ್ರಸಕ್ತಿ ಬರುತ್ತದೆಂದು ಭಾಷ್ಯದ ಅಭಿಪ್ರಾಯ.

ವಿಷ್ಣುವಿಗೆ ಜಗತ್ಕಾರಣತ್ವ ಪ್ರತಿಪಾದನೆ ಮಾಡುವ ಶ್ರುತಿಗೆ ಅನ್ಯಶ್ರುತಿಯಿಂದ ಪ್ರಾಪ್ತವಾದ

ಅಸತ್ಕಾರಣತ್ವಮತದ ವಿರೋಧವನ್ನು ನಿರಾಕರಣ ಮಾಡುವುದಾದರೆ, ಈ ಅಧಿಕರಣವು ಶ್ರುತಿವಿರೋಧಪರಿಹಾರರೂಪವಾದ ಮೂರನೇ ಪಾದದಲ್ಲಿ ಸೇರಿಸಬೇಕಾಗುತ್ತದೆ. ಹೊರತು ಕೇವಲ ಯುಕ್ತಿವಿರೋಧಪರಿಹಾರ ಮಾಡುವ ಈ ಪಾದದಲ್ಲಿ ಸೇರಿಸಲಾಗದು. ಈ ಪ್ರಶ್ನೆಗೆ 'ಅರ್ಥಾತ್' ಎಂಬುದರಿಂದ ಉತ್ತರ ನೀಡುತ್ತಾರೆ.

**तत्वप्रकाशिका – न केवलमत्र श्रुतिविरोधः परिह्रियते, येनासङ्गतिः । किं नाम करणमभिमतं प्रलयेऽसद्भवितुमर्हति वस्तुत्वात् कार्यवदित्याद्यसतः कारणत्व-प्रतिपादकयुक्तिविरोधोऽपीति भावः । तथापि युक्तिविरोधमात्रपरिहारात्मके पादे श्रुतियुक्तिविरोधपरिहारोऽसङ्गत इत्यतोऽर्थादित्युक्तम् । नात्र श्रुतियुक्त्योः स्वतन्त्रं विराधद्वयं परिह्रियते किं तु श्रुतिविरोधपरिहारेणाप्यन्ततो युक्तिविरोध एव । तथा हि – अत्रासतः कारणत्वप्रतिपादकयुक्तिः पूर्ववादिनोपन्यस्यते । तस्याश्च निर्मूलाया असाधकत्वात् तन्मूलभूता च श्रुतिरुच्यते । तथा चानुपपन्नभाषित्वेन श्रुतेरर्थान्तरे प्रामाण्याभाव इति तद्विरोधे परिहृते निर्मूलयुक्तेः स्वत एवाप्रामाण्यमिति। अतोऽत्र श्रुतिविधपरिहारस्य युक्तिविरोधपरिहाराङ्गत्वान्, ना सङ्गतिरिति युक्तमेवोक्तव्याख्यानमिति भावः ।। ८ ।।**

ಈ ಅಧಿಕರಣದಲ್ಲಿ ಕೇವಲ ಶ್ರುತಿವಿರೋಧವನ್ನೇ ಪರಿಹಾರ ಮಾಡುತ್ತಿಲ್ಲ. ಹಾಗಾಗಿದ್ದಲ್ಲಿ ಈ ಪಾದದಲ್ಲಿ ಈ ಅಧಿಕರಣ ಅಸಂಗತವಾಗುತ್ತಿತ್ತು. ಆದರೆ 'ಅಭಿಮತಂ ಕಾರಣಮ್ ಪ್ರಲಯೇ ಅಸದ್ಭವಿತುಮರ್ಹತಿ ವಸ್ತುತ್ವಾತ್ ಕಾರ್ಯವತ್' - ಕಾರಣವೆನಿಸಿರುವುದು ಪ್ರಳಯಕಾಲದಲ್ಲಿ ಅಸತ್ ಆಗಿರಬೇಕು. ಅದು ವಸ್ತುವಾದ್ದರಿಂದ, ಕಾರ್ಯದಂತೆ - ಇತ್ಯಾದಿಯಾಗಿ ಅಸತ್ತಿಗೆ ಕಾರಣ-ಪ್ರತಿಪಾದಕವಾದ ಯುಕ್ತಿವಿರೋಧವನ್ನೂ ಅರ್ಥಾತ್ ಪರಿಹರಿಸಲಾಗಿದೆಯೆಂದು ತಿಳಿಯಬೇಕು. ಆದರೂ ಯುಕ್ತಿವಿರೋಧ ಮಾತ್ರ ಪರಿಹಾರ ಮಾಡುವ ಈ ಪಾದದಲ್ಲಿ ಶ್ರುತಿವಿರೋಧ ಹಾಗೂ ಯುಕ್ತಿವಿರೋಧ ಪರಿಹಾರ ಮಾಡುವುದು ಅಸಂಗತವಲ್ಲವೆ? ಈ ಆಕ್ಷೇಪ ಪರಿಹಾರ ಮಾಡಲೂ ಸಹ ಭಾಷ್ಯಕಾರರು 'ಅರ್ಥಾತ್' ಎಂಬ ಶಬ್ದ ಯೋಜನೆ ಮಾಡಿದ್ದಾರೆ. ಈ ಅಧಿಕರಣದಲ್ಲಿ ಶ್ರುತಿ ಮತ್ತು ಯುಕ್ತಿಗಳಿಗಿರುವ ಸ್ವತಂತ್ರವಾದ ಎರಡು ವಿರೋಧವನ್ನು ಪರಿಹಾರ ಮಾಡಿಲ್ಲ. ಶ್ರುತಿವಿರೋಧ ಪರಿಹಾರದ ಮೂಲಕ ಅರ್ಥಾತ್ ಯುಕ್ತಿವಿರೋಧವನ್ನು ಪರಿಹಾರ ಮಾಡಿದ್ದಾರೆ. ಅದು ಹೀಗೆ - ಇಲ್ಲಿ ಅಸತ್ತಿಗೆ ಜಗತ್ಕಾರಣತ್ವ ವಿಷಯದಲ್ಲಿ ಪೂರ್ವಪಕ್ಷಿಯು ಮೇಲೆ ಹೇಳಿದ ಅನುಮಾನವನ್ನು ಉದಾಹರಿಸುತ್ತಾನೆ. ಈ ಅನುಮಾನಕ್ಕೆ ಮೂಲಭೂತವಾದ ಪ್ರಮಾಣವಿಲ್ಲವಾದರೆ, ಅದರಿಂದ

ಅನುಮಿತಾರ್ಥದ ಸಾಧನೆಯು ಶಕ್ಯವಿಲ್ಲ. ಆದ್ದರಿಂದ ಅದಕ್ಕೆ ಮೂಲ ಪ್ರಮಾಣವಾಗಿ 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯನ್ನು ಹೇಳುತ್ತಾನೆ. ಈ ಶ್ರುತಿಯು ಹೇಳುವ ಅರ್ಥ ಕೂಡದ ಕಾರಣ ಈ ಅರ್ಥದಲ್ಲಿ ಅಪ್ರಮಾಣವಾಗುತ್ತದೆ. ಈ ರೀತಿ ಶ್ರುತಿ ವಿರೋಧ ಪರಿಹಾರ ಮಾಡಿದಾಗ ಪುನಃ ಪೂರ್ವಪಕ್ಷಿಯ ಅನುಮಾನಕ್ಕೆ ಯಾವ ಮೂಲಭೂತವಾದ ಪ್ರಮಾಣವೂ ಇಲ್ಲದ ಕಾರಣ ಅದು ಸ್ವತಃ ಅಪ್ರಮಾಣವೇ ಆಗುತ್ತದೆ. ಆದ್ದರಿಂದ ಈ ಅಧಿಕರಣದಲ್ಲಿ ಶ್ರುತಿವಿರೋಧ ಪರಿಹಾರವು ಯುಕ್ತಿ ವಿರೋಧ ಪರಿಹಾರದ ಅಂಗಭೂತವಾದ್ದರಿಂದ, ಈ ಅಧಿಕರಣವು ಈ ಪಾದಾಂತರ್ಗತವಾಗುತ್ತದೆ. ಯಾವುದೇ ರೀತಿಯ ಅಸಂಗತಿಯೂ ಇಲ್ಲ. ಆದ ಕಾರಣ ಇಲ್ಲಿ ಮಾಡಿರುವ ವ್ಯಾಖ್ಯಾನವು ಯುಕ್ತವೇ ಆಗಿದೆಯೆಂದು ತಿಳಿಯಬೇಕು.

## ಬ್ರಹ್ಮಮೀಮಾಂಸಾಶಾಸ್ತ್ರ

### सूत्रम् – अपीतौ तद्वत्प्रसङ्गादसमञ्जसम् ।।२।।

ಅಭಾವದಿಂದ ಜಗತ್ತು ಹುಟ್ಟುವುದಾದರೆ ಪ್ರಳಯಕಾಲದಲ್ಲಿ ಯಾವುದೂ ಇಲ್ಲವೆಂದಾಗಬೇಕಾದೀತು. ಆದ್ದರಿಂದ ಅಭಾವಕರ್ತೃತ್ವವಾದವು ಸರಿಯಲ್ಲ.

## ಸೂತ್ರದೀಪಿಕಾ

**सूत्रदीपिका – अपीतौ तद्वत्प्रसङ्गादसमञ्जसम् ।। अपीतौ प्रलये । तद्वत्प्रसङ्गात्। असन्मात्रवत्त्वप्रसङ्गात् । असत्कर्तृत्वं असमञ्जसं अयुक्तमित्यर्थः ।।२।।**

ಅರ್ಥ -- ಅಪೀತೌ ತದ್ವತ್‌ಪ್ರಸಂಗಾತ್ = ಪ್ರಳಯಕಾಲದಲ್ಲಿ ಯಾವುದೂ ಇಲ್ಲವೆಂದಾಗಬೇಕಾದೀತು. ಆದುದರಿಂದ ಅಭಾವಕರ್ತೃತ್ವವು, ಅಸಮಂಜಸಮ್ = ಅಭಾವವೇ ಕರ್ತೃವಾಗಿದೆಯೆಂಬ ಮತವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

### भाष्यम् – ।। अपीतौ तद्वत्प्रसङ्गादसमञ्जसम् ।।२।।

ಅನುವಾದ - ಶ್ರುತಿಪ್ರಾಪ್ತವಾದ ಅಸತ್ಕಾರಣತಾವಾದವನ್ನು ನಿರಾಕರಣೆ ಮಾಡಿದ್ದರಿಂದ ಯುಕ್ತಿವಿರೋಧವನ್ನು ಈ ಅಧಿಕರಣದಿಂದ ಪರಿಹರಿಸಿದಂತಾಗುತ್ತದೆ. ಇದು ಅರ್ಥತಃ ಪ್ರಾಪ್ತವಾದ ಪ್ರಯೋಜನ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಪ್ರತಿಪಾದನ ಮಾಡುವ ಶ್ರುತಿಗೆ ಅಸತ್ಕಾರಣತ್ವದ ವಿರೋಧದ ನಿರಾಕರಣೆಯನ್ನು ಮಾಡಲಾಗಿದೆ. ಹಾಗಾದರೆ ಇದಕ್ಕೆ ಮೂರನೆಯ ಪಾದದಲ್ಲಿ ಸಂಗತಿಯು ಬರಬೇಕಿತ್ತು ಯುಕ್ತಿವಿರೊಧಪರಿಹಾರಕವಾದ ಈ ಪಾದದಲ್ಲಿ ಸಂಗತಿಯು ಬರುವುದಿಲ್ಲವಲ್ಲವೇ? ಈ ಪ್ರಶ್ನೆಗೆ 'ಅರ್ಥಾತ್' ಎಂದು ಉತ್ತರಿಸುತ್ತಿದ್ದಾನೆ. ಯುಕ್ತಿವಿರೋಧೋ = ಯುಕ್ತಿಯು ವಿರೋಧವನ್ನು ಕೂಡ, ಅಥಾದ್ = ಪರಿಯವಸಾನದಲ್ಲಿ, ನಿರಾಕ್ರಿಯತೇ = ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

**भाष्यम् – असत उत्पत्तौ प्रलयेऽपि सर्वासत्त्वमेव स्यात् ॥२॥**

ಅನುವಾದ - ಅಸತ್‌ಪದಾರ್ಥದಿಂದ ಜಗತ್ತು ಹುಟ್ಟುವುದಾದರೆ ಪ್ರಳಯಕಾಲದಲ್ಲಿ ಎಲ್ಲವೂ ಕೂಡ ಅಸತ್ತೇ ಆಗಬೇಕಾದೀತು.

ಪ್ರತಿಪದಾರ್ಥ -- ಅಸತಃ = ಅಸತ್‌ಪದಾರ್ಥಕ್ಕೆ, ಉತ್ಪತ್ತೌ = ಜಗತ್ತಿನ ಉತ್ಪತ್ತಿಯ ಕಾರಣತ್ವವನ್ನು ಹೇಳಿದರೆ, ಪ್ರಳಯೇಪಿ = ಪ್ರಳಯಕಾಲದಲ್ಲೂ, ಸರ್ವಾಸತ್ವಮೇವ = ಎಲ್ಲವೂ ಅಸತ್ತೇ ಆಗಿದೆ ಎಂದು, ಸ್ಯಾತ್ = ಆಗಬೇಕಾದೀತು.

## ತತ್ವಪ್ರಕಾಶಿಕಾ

**तत्वप्रकाशिका– यदुक्तं प्रतिषेधमात्रत्वाच्छशविषाणादिवदसतो नकारणत्वमिति न तद्युक्तम्। युक्तिविरुद्धस्यापि श्रुतिबलात् कस्यचिदसतः कारणत्वस्याभ्युपगमे बाधकाभावात्। न च शशविषाणादीनामपि तथात्वप्रसङ्गः। सत्सु वैलक्षण्यवदसत्स्वपि वैलक्षण्योपपत्तेरित्याशङ्कां परिहरत्सूत्रमुपन्यस्य व्याचष्टे – अपीताविति ॥**

ಕೇವಲ ನಿಷೇಧಬುದ್ಧಿಗೆ ಅಸತ್ತು ವಿಷಯವಾಗುವುದರಿಂದ ಮೊಲದ ಕೊಂಬಿನಂತೆ ಅದಕ್ಕೆ ಕಾರಣತ್ವವು ಕೂಡುವುದಿಲ್ಲವೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ, ಯುಕ್ತಿವಿರುದ್ಧವಾದರೂ ಶ್ರುತಿಪ್ರಮಾಣದ ಸಾಮರ್ಥ್ಯದಿಂದ ಯಾವುದಾದರೂ ಒಂದು ಪ್ರಕಾರ ಅಸತ್ತಿಗೆ ಜಗತ್ಕಾರಣತ್ವವನ್ನು ಸ್ವೀಕರಿಸಿದರೆ ಯಾವ ಬಾಧಕವೂ ಬರಲಾರದು. ಹಾಗಾದರೆ ಶಶವಿಷಾಣಾದಿಗಳಿಗೂ ಕಾರಣತ್ವ ಬರಲಿ ಎಂಬ ಆಪತ್ತಿ ಸರಿಯಲ್ಲ. ಏಕೆಂದರೆ ಸತ್‌ಪದಾರ್ಥಗಳಲ್ಲಿ ವೈಲಕ್ಷಣ್ಯ ಇದ್ದಂತೆ ಅಸತ್ ಪದಾರ್ಥಗಳಲ್ಲಿಯೂ ವೈಲಕ್ಷಣ್ಯ ಒಪ್ಪಬೇಕಾಗುತ್ತದೆ. ಈ ಶಂಕೆಯನ್ನು ಪರಿಹಾರ ಮಾಡಲು ಸೂತ್ರವನ್ನು ಹೇಳಿ, ವ್ಯಾಖ್ಯಾನ ಮಾಡುತ್ತಾರೆ. 'ಅಪೀತೌ' ಇತ್ಯಾದಿಯಾಗಿ.

**तत्वप्रकाशिका – असतः सकाशाज्जगदुत्पत्तावभ्युपेतायां प्रलये असन्मात्रावशेषः प्रसज्जेत । कार्यनाशे कारणमात्रावशेषनियमात् । अतोऽसमञ्जसम सन्मतमित्यर्थः ।। ९ ।।**

ಅಸತ್ತಿನಿಂದ ಜಗದುತ್ಪತ್ತಿ ಒಪ್ಪಿದರೆ, ಪ್ರಳಯಕಾಲದಲ್ಲಿ ಏನೂ ಇಲ್ಲವೆಂದೇ ಹೇಳಬೇಕಾದೀತು. ಏಕೆಂದರೆ, ಕಾರ್ಯನಾಶವಾದಾಗ ಕೇವಲ ಕಾರಣವೇ ಇರುತ್ತದೆಂಬ ನಿಯಮವಿರುತ್ತದೆ. ಆದ್ದರಿಂದ ಅಸದ್ವಾದವು ಅಸಮಂಜಸವಾಗಿದೆ.

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – न तु दृष्टान्तभावात् ।।३।।**

ಪ್ರಳಯಕಾಲದಲ್ಲಿಯೂ ಅನೇಕ ತತ್ತ್ವಗಳಿವೆ ಎಂಬ ವಿಷಯದಲ್ಲಿ ಅನುಮಾನ ಪ್ರಮಾಣವಿರುವುದರಿಂದ ಏನೂ ಇರುವುದಿಲ್ಲ ಎಂಬ ಮತವು ಅಯುಕ್ತವಾಗಿದೆ.

## ಸೂತ್ರದೀಪಿಕಾ

**सूत्रदीपिका – न तु दृष्टान्तभावात् ।।** तुशब्दोऽवधारणे । प्रलये सर्वासत्त्वं न युज्यते । कुतः? तदा सर्वपदार्थसत्त्व एव **दृष्टान्तस्य भावात्** सद्भावादित्यर्थः ।।३।।

ಅರ್ಥ -- 'ತು' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ನ = ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲ ಎಂಬುದು ಅಯುಕ್ತವಾಗಿದೆ. ಏಕೆಂದರೆ ಪ್ರಳಯಕಾಲದಲ್ಲಿ ಅನೇಕ ಭಾವಪದಾರ್ಥಗಳು ಇರುತ್ತವೆನ್ನಲು ದೃಷ್ಟಾಂತಭಾವಾತ್ = ಅನುಮಾನಪ್ರಮಾಣವಿರುವುದರಿಂದ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। न तु दृष्टान्तभावात् ।।३।।**

**प्रलये सर्वासत्त्वं भावे दृष्टान्ताभावादेव न युज्यते । सत उत्पत्तिः सशेषविनाशश्च हि लोके दृष्टः ।।३।।**

**ಅನುವಾದ - ಅನೇಕ ತತ್ವಗಳು ಇರುತ್ತವೆಂದು ಅನುಮಾನದಿಂದ ಸಿದ್ಧವಾಗಿದೆ. ಹೀಗಿರುವಾಗ ಯಾವುದೂ ಇಲ್ಲವೆಂದು ಹೇಳಲಾಗದು. ಲೋಕದಲ್ಲಿ ಒಂದು ಬಗೆಯ ಸತ್ಯ ಪದಾರ್ಥದಿಂದ ಮತ್ತೊಂದು ಪದಾರ್ಥವು ಹುಟ್ಟಿದರೆ ಅದರ ಅವಶೇಷಗಳು ಇರುವುದು ಕಂಡಿದೆ. ಆದರೆ ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲವೆನ್ನುವುದಕ್ಕೆ ಯಾವುದೇ ದೃಷ್ಟಾಂತವಿರುವುದಿಲ್ಲ.**

ಪ್ರತಿಪದಾರ್ಥ -- ಪ್ರಲಯೇ = ಪ್ರಳಯಕಾಲದಲ್ಲಿ, ಸರ್ವಾಸತ್ವಂ = ಯಾವುದೇ ಪದಾರ್ಥವು ಇರುವುದಿಲ್ಲವೆಂಬುದು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಏಕೆಂದರೆ ಭಾವೇ = ಪ್ರಳಯಕಾಲದಲ್ಲಿ ಸತ್‌ಪದಾರ್ಥವು ಇದೆ ಎನ್ನಲು, ದೃಷ್ಟಾಂತಭಾವಾತ್ = ದೃಷ್ಟಾಂತವು ಇರುತ್ತದೆ. ಸತಃ = ಸತ್‌ಪದಾರ್ಥದಿಂದ, ಉತ್ಪತ್ತಿಃ = ಉತ್ಪತ್ತಿಯು, ಚ = ಮತ್ತು ಸಶೇಷವಿನಾಶಃ = ಅವಶೇಷಗಳಿಂದ ಸಹಿತವಾಗಿ ನಾಶವನ್ನು ಹೊಂದುವುದು, ಲೋಕೇ = ಲೋಕದಲ್ಲಿ, ದೃಷ್ಟಃ = ಕಂಡಿರುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – अस्माभिरपि प्रलयेऽसन्मात्रावशेषस्याभिलषितत्वात् अनिष्टापादनमेतदित्याशङ्कां परिहरत्सूत्रमुपन्यस्य व्याचष्टे – न त्विति ।**

ಪ್ರಲಯಕಾಲದಲ್ಲಿ ಕೇವಲ ಅಸತ್ತೇ ಇರುತ್ತದೆಂದು ನಮಗೆ ಅಭಿಪ್ರೇತವೇ ಆಗಿದೆ. ಆದ್ದರಿಂದ, ನಮಗೆ ಯಾವ ಅನಿಷ್ಟವೂ ಇಲ್ಲ ಎಂಬ ಆಪಾದನೆಗೆ ಉತ್ತರ ಕೊಡುವ ಸೂತ್ರವನ್ನು ಹೇಳಿ ಅದರ ವ್ಯಾಖ್ಯಾನ ಮಾಡುತ್ತಾರೆ. 'ನ ತು' ಇತ್ಯಾದಿಯಾಗಿ.

**तत्वप्रकाशिका – न प्रलये सर्वासत्त्वं युज्यते । तदा पदार्थसत्त्वस्यैव दृष्टान्तबलेन साधयितुं शक्यत्वात् । अतः परस्येष्टमपि प्रलये सर्वासत्त्वापादनं प्रामाणिकपरित्यागरूपत्वात् भवेदेवानिष्टापादनमिति भावः । कोऽसौ प्रलये पदार्थसत्त्वसाधने दृष्टान्त इति तत्राह – सत इति ।।**

ಪ್ರಲಯಕಾಲದಲ್ಲಿ ಎಲ್ಲವೂ ಅಸತ್ತೇ ಇರುತ್ತದೆಂಬುದು ಸರಿಯಲ್ಲ. ಏಕೆಂದರೆ ಆಗ ಪದಾರ್ಥವು ಸದ್‌ರೂಪದಿಂದ ಇದ್ದೇ ಇರುತ್ತದೆಂಬುದನ್ನು ದೃಷ್ಟಾಂತ ಬಲದಿಂದ ಸಿದ್ಧಮಾಡಲು ಶಕ್ಯವಾಗುತ್ತದೆ. ಆದ್ದರಿಂದ ಸರ್ವಾಸತ್ವಾಪಾದನೆ ಮಾಡುವುದು ಪ್ರತಿಪಕ್ಷಿಗೆ ಇಷ್ಟವಾದರೂ, ಪ್ರಾಮಾಣಿಕ ಸತ್ ಪದಾರ್ಥಸತ್ವತ್ವವಿರುವುದನ್ನು ಅಪಲಾಪ ಮಾಡಿದಂತಾಗುವುದರಿಂದ ಅನಿಷ್ಟಾಪಾದನೆಯೇ ಆಗುತ್ತದೆ. ಪ್ರಲಯಕಾಲದಲ್ಲಿ ಪದಾರ್ಥಸತ್ವ ಸಾಧನವಿಷಯದಲ್ಲಿ ಇರುವ ದೃಷ್ಟಾಂತ ಯಾವುದೆಂದರೆ ಭಾಷ್ಯಕಾರರು ಉತ್ತರಿಸುತ್ತಾರೆ 'ಸತಃ' ಎಂದು.

**तत्वप्रकाशिका – अत्रैतौ प्रयोगो भवतः – 'विप्रतिपन्नोत्पत्तिः सतो भवितुमर्हति उत्पत्तित्वाद् घटोत्पत्तिवत्' 'विमतो विनाशः सशेषो विनाशत्वात् घटविनाशवदिति । एवं विप्रतिपन्नोत्पत्तिविनाशयोः सत्पूर्वकत्वे सशेषत्वे च सिद्धे प्रलये पदार्थसत्त्वमेव सिध्यति ।। १० ।।**

ಈ ವಿಷಯದಲ್ಲಿ ಎರಡು ಅನುಮಾನಗಳನ್ನು ಹೇಳಬಹುದು. ೧. ವಿಪ್ರತಿಪನ್ನವಾದ ವಿಶ್ವೋತ್ಪತ್ತಿಯು ಸತ್ತಿನಿಂದಲೇ ಆಗುತ್ತದೆ. ಉತ್ಪತ್ತಿಯಾದುದರಿಂದ, ಘಟೋತ್ಪತ್ತಿಯಂತೆ. ೨. ವಿಮತವಾದ ವಿಶ್ವನಾಶವು ಅವಶೇಷಸಹಿತವಾಗಿಯೇ ಇರುತ್ತದೆ. ಅದು ನಾಶವಾದುದರಿಂದ ಘಟನಾಶದಂತೆ. ಈ ರೀತಿಯಾಗಿ ವಿವಾದಾಸ್ಪದವಾದ ಉತ್ಪತ್ತಿನಾಶಗಳಿಗೆ ಸತ್ಪೂರ್ವಕತ್ವ ಮತ್ತು ಸಶೇಷತ್ವಗಳು ಸಿದ್ಧವಾಗುವುದರಿಂದ ಪ್ರಳಯಕಾಲದಲ್ಲಿ ಪದಾರ್ಥ ಇದೆಯೆಂದೇ ಸಿದ್ಧವಾಗುತ್ತದೆ.

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – स्वपक्षदोषाच्च ।।**

ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲ ಎಂಬ ಪಕ್ಷದಲ್ಲಿ ಯಾವುದೇ ಪ್ರಮಾಣವಿಲ್ಲ. ಆದ್ದರಿಂದಲೂ ಅಭಾವದಿಂದ ವಿಶ್ವದ ಸೃಷ್ಟಿಯನ್ನು ಹೇಳಲಾಗದು.

## ಸೂತ್ರದೀಪಿಕಾ

**सूत्रदीपिका – स्वपक्षदोषाच्च ।। स्वपक्षे प्रलये सर्वासत्त्वपक्षे । दोषात्** दृष्टान्ताभावाख्यदोषाच्च न तत्पक्षो युक्त इत्यर्थः ।।४।।

ಅರ್ಥ -- ಸ್ವಪಕ್ಷೇ = ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲ ಎಂಬ ಪಕ್ಷದಲ್ಲಿ, ದೋಷಾಚ್ಚ = ಅನುಮಾನವೆಂಬ ಪ್ರಮಾಣವಿಲ್ಲದ ಕಾರಣ ಪ್ರಾಗಭಾವದಿಂದಲೇ ಜಗತ್ತು ಹುಟ್ಟುತ್ತದೆಂಬ ಪಕ್ಷವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। स्वपक्षदोषाच्च ।।४।।**

**दृष्टान्ताभावादेव ।।४।।**

ಅನುವಾದ - ಪ್ರಳಯಕಾಲದಲ್ಲಿ ಯಾವುದೇ ಪದಾರ್ಥವು ಇರಲಿಲ್ಲವೆನ್ನಲು ದೃಷ್ಟಾಂತವಿಲ್ಲ. ಹೀಗಿರುವಾಗ ಅಸತ್ ಪದಾರ್ಥದಿಂದ ಜಗತ್ತು ಹುಟ್ಟಿತು ಎಂದು ಹೇಳುವುದು ಹೇಗೆ ಸರಿ.

ಪ್ರತಿಪದಾರ್ಥ -- ಕೇವಲ ಪ್ರಾಮಾಣಿಕವಾದದ್ದನ್ನು ಪರಿತ್ಯಾಗ ಮಾಡಬೇಕಾದ ಪ್ರಸಂಗ ಬರುವುದರಿಂದ ಪ್ರಳಯಕಾಲದಲ್ಲಿ, ಅಸತ್‌ಪದಾರ್ಥವನ್ನು ಒಪ್ಪುವುದು ಅನಿಷ್ಟವೆಂದಷ್ಟೇ ಅಲ್ಲ. ಅಪ್ರಾಮಾಣಿಕವಾದದ್ದನ್ನು ಸ್ವೀಕಾರ ಮಾಡಿದ ದೋಷವೂ ಬರುತ್ತದೆ. ಇದನ್ನು ಸಮರ್ಥಿಸುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ದೃಷ್ಟಾಂತಾಭಾವಾದೇವ = ಅಸತ್ ಪದಾರ್ಥದಿಂದ ಸತ್‌ಪದಾರ್ಥವು ಹುಟ್ಟಿ ಸಶೇಷನಾಶವನ್ನು ಹೊಂದುತ್ತದೆನ್ನಲು ದೃಷ್ಟಾಂತ ಇರುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका –**

**न केवलं प्रामाणिकपरित्यागप्रास्या प्रलये सर्वासत्त्वमनिष्टमपि त्वप्रामाणिकत्वाच्चेत्यर्थप्रतिपादकसूत्रमुपन्यस्य व्याचष्टे – स्वपक्षेति ।।**

ಕೇವಲ ಪ್ರಾಮಾಣಿಕಪರಿತ್ಯಾಗ ಮಾಡಬೇಕಾಗುವುದರಿಂದಲೇ ಪ್ರಲಯಕಾಲದಲ್ಲಿ ಸರ್ವಪದಾರ್ಥಗಳು ಅಸತ್ತೆಂಬುದು ಅನಿಷ್ಟವೆಂಬುದಷ್ಟೇ ಅಲ್ಲ, ಪ್ರಲಯದಲ್ಲಿ ಏನೂ ಇಲ್ಲವೆಂಬ ವಿಷಯವು ಅಪ್ರಾಮಾಣಿಕವೂ ಆಗುತ್ತದೆ. ಈ ಅರ್ಥವನ್ನು ಪ್ರತಿಪಾದನೆ ಮಾಡುವ ಸೂತ್ರವನ್ನು ಹೇಳಿ ಅದರ ವ್ಯಾಖ್ಯಾನ ಮಾಡುತ್ತಾರೆ 'ಸ್ವಪಕ್ಷ' ಎಂಬುದರಿಂದ.

**तत्वप्रकाशिका – न तावत् प्रलये सर्वासत्वं प्रत्यक्षसिद्धम् । नाप्यागमेन । तस्याभावात् । अनुमानमपि किं 'प्रलयः सर्वासत्त्ववान्' इत्यादिरूपेण साक्षात्, भवेत्यपरम्परया वा । नाद्यः प्रलये सर्वासत्त्वपक्षे दृष्टान्ताभावेनानुमानस्य दुष्टत्वात्। व्यातिरेकेऽतिप्रसङ्गः । एतेन द्वितीयोऽपि परास्तः । अतः प्रलये सर्वासत्त्वस्याप्रामाणिकत्वात् तदभ्युपगमोऽनिष्ट इति भावः ।। ११ ।।**

ಪ್ರಲಯಕಾಲದಲ್ಲಿ ಯಾವ ಪದಾರ್ಥವೂ ಇಲ್ಲ ಎಂದು ಪ್ರತ್ಯಕ್ಷಸಿದ್ಧವಲ್ಲ. ಆಗಮದಿಂದಲೂ ಸಿದ್ಧವಲ್ಲ. ಅಂತಹ ಆಗಮವೇ ಇಲ್ಲ. ಅನುಮಾನದಿಂದ ಸಿದ್ಧವಾಗಬೇಕಾದರೆ ನಾವು ಪ್ರಶ್ನಿಸುತ್ತೇವೆ - ಪ್ರಲಯ ಕಾಲದಲ್ಲಿ ಸರ್ವಪದಾರ್ಥಗಳೂ ಇಲ್ಲ ಎಂದು ನೇರವಾಗಿ ಅನುಮಾನದಿಂದ ಸಾಧಿಸಲಾಗುತ್ತದೋ ? ಅಥವಾ ಪರಂಪರೆಯಿಂದಲೋ ?

ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ ಪ್ರಳಯದಲ್ಲಿ ಸರ್ವಾಭಾವವಿದೆ ಎನ್ನಲು ದೃಷ್ಟಾಂತವೇ ಸಿಗುವುದಿಲ್ಲ. ಆದ್ದರಿಂದ ಈ ಅನುಮಾನವು ದುಷ್ಟವಾಗುತ್ತದೆ. ವ್ಯತಿರೇಕವ್ಯಾಪ್ತಿಯಿಂದ ಸಾಧಿಸುವಾಗ ಅನ್ವಯದೃಷ್ಟಾಂತವಿಲ್ಲದಿರುವುದು ದೋಷವಾಗಲಾರದೆಂದರೆ ವ್ಯತಿರೇಕದೃಷ್ಟಾಂತವಾದ ಒಂದು ಕಾಲದಲ್ಲಿ ಸರ್ವಪದಾರ್ಥಗಳಿಗೂ ಸತ್ತ್ವ ಬರಬೇಕಾದೀತು ಎಂಬ ಅತಿಪ್ರಸಂಗ ಬರುವುದು. ಅಂದರೆ ಎಲ್ಲಿ ಸರ್ವಸತ್ತ್ವಾಭಾವವಿದೆಯೋ ಅಂದರೆ ಸರ್ವಸತ್ತ್ವವಿದೆಯೋ ಅಲ್ಲಿ ಪ್ರಲಯಕಾಲತ್ವಾಭಾವವಿದೆ-ಎಂದು ವ್ಯತಿರೇಕವ್ಯಾಪ್ತಿಯನ್ನು ಹೇಳಿದಾಗ ಪ್ರಲಯಕಾಲಕ್ಕಿಂತ ಬೇರೆಯಾದ ಒಂದು ಕಾಲದಲ್ಲಿ ಸರ್ವಪದಾರ್ಥಗಳೂ ಇರಬೇಕಾದೀತು, ಹಾಗಾಗಿಲ್ಲ. ಪರಂಪರೆಯಿಂದ ಎಂದರೆ ಸರ್ವಪದಾರ್ಥವೂ ಪ್ರಲಯದಲ್ಲಿ ಅಸತ್ತಾಗಿರುತ್ತದೆ. ಪದಾರ್ಥವಾದ್ದರಿಂದ, ನಷ್ಟಭಾವಪದಾರ್ಥದಂತೆ ಎಂದು ಅನುಮಾನದಿಂದ ಅಸತ್ತ್ವವನ್ನು ತಿಳಿಯುವುದು. ಈ ಪಕ್ಷದಲ್ಲಿಯೂ ಸರ್ವಪದಾರ್ಥವೂ ಸ್ಥಿತಿಕಾಲದಲ್ಲಿಯೂ ಅಸತ್ತಾಗಿರುತ್ತದೆ. ಆಗ ಇಲ್ಲದ ಘಟಾದಿಪದಾರ್ಥದಂತೆ ಎಂದು ಅತಿಪ್ರಸಂಗ ಬರುವುದು. ಹೀಗೆ ಎರಡನೆಯ ಪಕ್ಷವೂ ನಿರಸ್ತವಾಯಿತು. ಆದ್ದರಿಂದ ಪ್ರಲಯಕಾಲದಲ್ಲಿ ಸರ್ವಪದಾರ್ಥಗಳಿಲ್ಲವೆಂಬ ವಿಷಯವು ಅಪ್ರಾಮಾಣಿಕವೆಂದು ಸಿದ್ಧವಾಗುವುದರಿಂದ, ಅದನ್ನು ಇಷ್ಟಾಪತ್ತಿ ಎಂದು ಸ್ವೀಕರಿಸುವುದು ಅನಿಷ್ಟವೆಂದು ತಿಳಿಯಬೇಕು.

ವಿವರಣೆ - ಭಾವಬೋಧಕಾರರ ಪ್ರಕಾರ - ಇಲ್ಲಿ 'ಪ್ರಲಯಃ ಸರ್ವಾಸತ್ತ್ವವಾನ್ ಪ್ರಲಯಕಾಲತ್ವಾತ್ - ವ್ಯತಿರೇಕೇಣ ಸ್ಥಿತಿಕಾಲವತ್' - ಪ್ರಲಯಕಾಲದಲ್ಲಿ ಏನೂ ಇಲ್ಲ. ಪ್ರಲಯಕಾಲವಾದುದರಿಂದ, ಹೇತ್ವಭಾವಸಾಧ್ಯಭಾವಗಳೆರಡೂ ಸ್ಥಿತಿಕಾಲದಲ್ಲಿ ಇರುವಂತೆ ಎಂದು ಅನುಮಾನ ಪ್ರಯೋಗದಲ್ಲಿ ವ್ಯತಿರೇಕವ್ಯಾಪ್ತಿ ಹೇಳಿದಾಗ ಅತಿಪ್ರಸಂಗ ಬರುವುದು ಎಂದು ವ್ಯಾಖ್ಯಾನಿಸಿದ್ದಾರೆ. ಎಲ್ಲಿ ಸರ್ವಸತ್ತ್ವಾಭಾವವಿದೆಯೋ ಅಂದರೆ ಸರ್ವಸತ್ತ್ವವಿದೆಯೋ ಅಲ್ಲಿ ಪ್ರಲಯಕಾಲತ್ವಾಭಾವವಿದೆ. ಸ್ಥಿತಿ ಕಾಲವು ಇಲ್ಲಿ ವ್ಯತಿರೇಕ ವ್ಯಾಪ್ತಿಗೆ ದೃಷ್ಟಾಂತ. ಆದರೆ ಸ್ಥಿತಿಕಾಲದಲ್ಲಿ ಯಾವ ಕಾಲದಲ್ಲಿಯೂ ಎಲ್ಲಾ ಪದಾರ್ಥಗಳ ಸತ್ತ್ವವನ್ನು ಹೇಳಲು ಬರುವುದಿಲ್ಲ. ಹಾಗೆ ವ್ಯತಿರೇಕವ್ಯಾಪ್ತಿ ಹೇಳಿದರೆ ಯಾವುದೋ ಒಂದು ಕಾಲದಲ್ಲಿ ಎಲ್ಲಾ ಪದಾರ್ಥಗಳಿಗೆ ಸತ್ತ್ವವು ಬರಬೇಕಾದೀತು. ಇದೇ ಟೀಕಾದಲ್ಲಿ ಹೇಳಿದ ಅತಿಪ್ರಸಂಗ.

ಅಥವಾ - 'ಸ್ಥಿತಿಕಾಲಃ ಅತೀತನಾಗತಸರ್ವಪದಾರ್ಥೋಪೇತಃ, ಸ್ಥಿತಿಕಾಲತ್ವಾತ್, ವ್ಯತಿರೇಕೇಣ ಪ್ರಲಯಕಾಲವತ್' - ವ್ಯತಿರೇಕದಿಂದ ಪ್ರಲಯಕಾಲದಲ್ಲಿ ಹೇಗೆ ಯಾವ ಪದಾರ್ಥಗಳೂ ಇಲ್ಲವೋ, ಹಾಗೆ ಸ್ಥಿತಿಕಾಲದಲ್ಲಿ ಭೂತಭವಿಷ್ಯತ್ ಮುಂತಾದ ಸಕಲಪದಾರ್ಥಗಳೂ ಇರಬೇಕಾದೀತು ಎಂದು ವ್ಯತಿರಿಕ್ತವಾಗಿ ಅನುಮಾನಪ್ರಯೋಗ ಮಾಡಲು ಬರುವುದರಿಂದ ಅತಿಪ್ರಸಂಗ ಬರುವುದು. ಈ ಕಾರಣದಿಂದ ಅನುಮಾನದಿಂದ ಪರಂಪರೆಯಿಂದ ಪ್ರಲಯಕಾಲದಲ್ಲಿ ಯಾವ ಪದಾರ್ಥವೂ ಇಲ್ಲ ಎಂದು ಸಾಧಿಸಲಾಗುವುದು ಎಂಬ ಎರಡನೇ ಪಕ್ಷವನ್ನು ನಿರಾಸ ಮಾಡಿದಂತಾಯಿತು.

ಪರಿಪೂರ್ಣಚಂದ್ರಿಕಾ

೨. ಇಲ್ಲಿ ಭಾವಬೋಧಕಾರರು ಹೀಗೆ ವ್ಯಾಖ್ಯಾನ ಮಾಡುವರು. 'ಈಶ್ವರಾದಿಕಂ ಪ್ರಲಯೇ ಅಸದ್‌ಭವಿತುಮರ್ಹತಿ ಭಾವತ್ವಾತ್ ನಷ್ಟಭಾವವತ್' - ಈಶ್ವರ ಮುಂತಾದ ಭಾವಪದಾರ್ಥಗಳು ಪ್ರಲಯಕಾಲದಲ್ಲಿ ಇರಲಾರವು ಭಾವಪದಾರ್ಥಗಳಾದ್ದರಿಂದ. ನಾಶ ಹೊಂದಿದ ಭಾವಪದಾರ್ಥಗಳಂತೆ ಎಂಬ ಅನುಮಾನದಿಂದ (ಪರಂಪರೆಯಿಂದ) ಪ್ರಲಯಕಾಲದಲ್ಲಿ ಯಾವ ಪದಾರ್ಥವೂ ಇಲ್ಲವೆಂದು ಸಿದ್ಧವಾಗುವುದು ಎಂದು.

## ಬ್ರಹ್ಮಮೀಮಾಂಸಾಶಾಸ್ತ್ರ

## सूत्रम् — तर्काप्रतिष्ठानादप्यन्यथानुमेयमिति चेदेवमप्यनिर्मोक्षप्रसङ्गः ।।

ಅನುಮಾನವು ಕಾಮಚಾರಿಯಾಗಿರುವುದರಿಂದ ಸಿದ್ಧಾಂತಸ್ಥಾಪಕವಾಗಿ ನೀವು ಏನನ್ನು ಅನುಮಾನ ಮಾಡುತ್ತೀರೋ ಅದಕ್ಕೆ ವಿರುದ್ಧವಾಗಿ ಪ್ರತಿತರ್ಕಾನುಮಾನವನ್ನು ಮಾಡಬಹುದು. ಆದ್ದರಿಂದ ಅನುಮಾನದಿಂದ ಸಿದ್ಧಾಂತಿಗಳು ಏನನ್ನೂ ಕೂಡ ಸಾಧಿಸಲು ಬರುವುದಿಲ್ಲ.

ಇದು ತಪ್ಪು. ಎಲ್ಲಾ ಅನುಮಾನಗಳೂ ಕೂಡ ಅಪ್ರಮಾಣವಾಗುವುದಿಲ್ಲ. ಹಾಗಾದಲ್ಲಿ ಮೋಕ್ಷವೆಂಬ ಫಲವೇ ಇಲ್ಲವೆಂದಾಗಬೇಕಾದೀತು.

## ಸೂತ್ರದೀಪಿಕಾ

**सूत्रदीपिका — तर्काप्रतिष्ठानादप्यन्यथाऽनुमेयमिति चेदेवमप्यनिर्मोक्षप्रसङ्गः।।** **तर्काप्रतिष्ठानात्** दृष्टान्ताभावादिरूपतर्कस्याप्रतिष्ठानात् अव्यवस्थितत्वात्। **अन्यथापि** सिद्धान्त्युक्तप्रकारात् । अन्यरूपेणापि प्रतितर्केणा**नुमेयं** साधनीय**मिति चेत्** । नेति शेषः । कुतः? **एवमपि** एवं सति तर्कमात्रस्याप्रामाण्ये सति। **अनिर्मोक्षप्रसङ्गः** सर्वसिद्धान्तिभिः स्वस्वशास्त्रप्रयोजनत्वेनाङ्गीकृतस्यापि मोक्षस्यापि लोपप्रसङ्गः । कुतः? तस्य विप्रतिपन्नं प्रति अनुमानेनवै साधनीयतया तस्याप्येवमप्रामाण्योक्तिसम्भवादित्यर्थः ।।९।।

ಅರ್ಥ -- ತರ್ಕಾಪ್ರತಿಷ್ಠಾನಾತ್ = ಅನುಮಾನವು ಅವ್ಯವಸ್ಥಿತವಾದ್ದರಿಂದ ಅನ್ಯಥಾಪಿ = ಸಿದ್ಧಾಂತ ಸ್ಥಾಪಕ ಅನುಮಾನಕ್ಕಿಂತ ವಿಪರೀತವಾಗಿಯೂ ಪ್ರತಿತರ್ಕ ಮಾಡಿ ಅನುಮೇಯಮ್ = ಅಭಾವವೇ ಜಗತ್ಕಾರಣವೆಂದು

ಸಾಧಿಸಬಹುದು. ಇತಿ ಚೇತ್= ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ 'ಏವಮಪಿ' ಒಂದು ವೇಳೆ ಎಲ್ಲ ಬಗೆಯ ಅನುಮಾನಗಳೂ ಅಪ್ರಮಾಣವಾದಲ್ಲಿ ಅನಿರ್ಮೋಕ್ಷ ಪ್ರಸಂಗಃ = ಸಕಲ ಸಿದ್ಧಾಂತಿಗಳೂ ತಮ್ಮ ತಮ್ಮ ಶಾಸ್ತ್ರಗಳ ಪ್ರಯೋಜನವೆಂದು ಅಂಗೀಕರಿಸಲ್ಪಟ್ಟ ಮೋಕ್ಷವು ಇಲ್ಲವೆಂದಾಗಬೇಕಾದೀತು. ಏಕೆಂದರೆ ವಿಪ್ರತಿಪನ್ನನಾದ ವ್ಯಕ್ತಿಯನ್ನು ಕುರಿತು ಅನುಮಾನದಿಂದಲೇ ಮೋಕ್ಷವನ್ನು ಸಾಧನೆ ಮಾಡಬೇಕು. ಆ ಅನುಮಾನಕ್ಕೆ ಪ್ರತಿತರ್ಕಾನುಮಾನವನ್ನು ಹೇಳಬಹುದಾದ್ದರಿಂದ ಅದೂ ಕೂಡ ಅಪ್ರಮಾಣವಾಗಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। तर्काप्रतिष्ठानादप्यन्यथानुमेयमिति चेदेवमप्यनिर्मोक्षप्रसङ्गः ।।५।।**

**एतावानेव तर्क इति प्रतिष्ठापकप्रमाणाभावाद् उक्तादन्यथाऽप्यनुमेयमिति चेत् —**

ಅನುವಾದ - ಯುಕ್ತಿಯು ಇದನ್ನು ಮಾತ್ರ ಹೇಳುತ್ತದೆ ಎಂಬ ವಿಷಯದಲ್ಲಿ ನಿರ್ದಿಷ್ಟವಾದ ಪ್ರಮಾಣವಿರುವುದಿಲ್ಲ. ಆದ್ದರಿಂದ ಹಿಂದೆ ಹೇಳಿದ ವಿಷಯದಲ್ಲಿ ವಿಪರೀತವಾಗಿಯೂ ಅನುಮಾನವನ್ನು ಮಾಡಲು ಬರುತ್ತದೆ.

ಪ್ರತಿಪದಾರ್ಥ -- ತರ್ಕದಿಂದ ಸತ್‌ಪದಾರ್ಥಕ್ಕೆ ಕಾರಣತ್ವವನ್ನು ಅಸತ್‌ಪದಾರ್ಥಕ್ಕೆ ಕಾರಣತ್ವದ ಇಲ್ಲದಿರುವಿಕೆಯನ್ನು ಹೇಳಿದಿರಿ. ಇದನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಏತಾವಾನೇವ ತರ್ಕಃ = ಈ ವಿಷಯವನ್ನು ಸ್ಥಾಪನೆ ಮಾಡುವುದೇ ತರ್ಕ ಎನಿಸಿಕೊಳ್ಳುತ್ತದೆ. ಇತಿ = ಹೀಗೆ, ಪ್ರತಿಷ್ಠಾಪಕಪ್ರಮಾಣಾಭಾವಾದ್ = ನಿಯಾಮಕಪ್ರಮಾಣವು ಇಲ್ಲದ ಕಾರಣ, ಉಕ್ತಾದ್ = ಹಿಂದೆ ಹೇಳಲ್ಪಟ್ಟ ವಿಷಯಕ್ಕಿಂತಲೂ, ಅನ್ಯಥಾಽಪಿ = ಬೇರೆ ರೀತಿಯಲ್ಲೇ ಅನುಮಾನ ಮಾಡಲು ಸಾಧ್ಯವಿರುತ್ತದೆ. ಇತಿಚೇತ್ = ಇಷ್ಟು ಆಕ್ಷೇಪ.

**भाष्यम् — न, एवं सति प्रमाणसिद्धेऽपि मोक्षेऽन्यथाऽनुमेयत्वादनिर्मोक्षप्रसङ्गः।**

ಅನುವಾದ - ಇದು ಸರಿಯಲ್ಲ ಹೀಗೆ ವಾದ ಮಾಡುವುದಾದರೆ ಪ್ರಮಾಣಸಿದ್ಧವಾದ ಮೋಕ್ಷದ ವಿಷಯದಲ್ಲೂ ಕೂಡ ವಿರುದ್ಧವಾಗಿ ಅನುಮಾನ ಮಾಡಬಹುದಾದ್ದರಿಂದ ಮೋಕ್ಷವೆಂಬ ಪುರುಷಾರ್ಥವೇ ಇಲ್ಲವೆಂದಾಗಬೇಕಾದೀತು.

ಪ್ರತಿಪದಾರ್ಥ -- ನಞ್ ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಪರಿಹಾರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ನ = ಮೇಲಿನ ಆಕ್ಷೇಪವು ಯುಕ್ತವಲ್ಲ. ಏವಂ ಸತಿ = ತರ್ಕವೇ ಬಲಿಷ್ಠವೆಂದು ಹೇಳಿದರೆ, ಪ್ರಮಾಣಸಿದ್ಧೇಽಪಿ = ಪ್ರಮಾಣ ಸಿದ್ಧವಾದ, ಮೋಕ್ಷೇಽಪಿ = ಮೋಕ್ಷದ ವಿಷಯದಲ್ಲೂ ಕೂಡ, ಅನ್ಯಥಾ = ಮತ್ತೊಂದು ಬಗೆಯಲ್ಲಿ,

ಅನುಮೇಯತ್ವಾತ್ = ಅನುಮಾನ ಮಾಡಬಹುದಾದ್ದರಿಂದ, ಅನಿರ್ಮೋಕ್ಷಪ್ರಸಂಗಃ = ಮೋಕ್ಷವೇ ಇಲ್ಲದಿರುವ ಪ್ರಸಂಗ ಬರುತ್ತದೆ.

**भाष्यम् — अतो यावत्प्रमाणसिद्धं तावदेवाङ्गीकर्तव्यं नातोऽन्यच्छङ्क्यम् ।**

ಅನುವಾದ - ಆದ್ದರಿಂದ ಎಷ್ಟು ಪ್ರಮಾಣದಿಂದ ಸಿದ್ಧವಾಗಿದೆಯೋ ಅಷ್ಟನ್ನು ಮಾತ್ರ ಅಂಗೀಕಾರ ಮಾಡಬೇಕು. ಪ್ರಮಾಣವಿಲ್ಲದ್ದರ ಬಗ್ಗೆ ಶಂಕಿಸಬಾರದು.

ಪ್ರತಿಪದಾರ್ಥ -- ಹೀಗೆ ಎಲ್ಲಾ ತರ್ಕಗಳಲ್ಲಿಯೂ ವಿರೋಧಿಯಾಗಿ ಪ್ರತಿ ತರ್ಕವನ್ನು ಹೇಳಬಹುದೆಂದು ಅಂಗೀಕಾರ ಮಾಡಿದರೆ ಅತಿಪ್ರಸಂಗವನ್ನು ಹೇಳಿ ಸೂತ್ರಾಂಶದ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ. ಅತಃ = ಆದ್ದರಿಂದ, ಯಾವತ್ = ಎಷ್ಟು ವಿಷಯವು, ಪ್ರಮಾಣಸಿದ್ಧಂ = ಪ್ರಮಾಣದಿಂದ ಪ್ರಮಿತವಾಗಿದೆಯೋ, ತಾವದೇವ = ಅಷ್ಟನ್ನು ಮಾತ್ರ, ಅಂಗೀಕರ್ತವ್ಯಂ = ಅಂಗೀಕಾರ ಮಾಡಬೇಕು. ಅತಃ = ಆದ್ದರಿಂದ ಪ್ರಮಾಣರಹಿತವಾದ ಅನ್ಯತ್ = ಬೇರೆ ನಿಯಮದ ಬಗ್ಗೆ, ನಶಂಕ್ಯಮ್ = ತರ್ಕದಿಂದ ಆಶಂಕೆ ಮಾಡಬಾರದು.

**भाष्यम् —**

**'यावदेव प्रमाणेन सिद्धं तावदहापयन् ।**
**स्वीकुर्यान्नैव चान्यत्र शक्यं मानमृते क्वचित् ।।' इति वामने ।।९।।**

ಅನುವಾದ - ವಾಮನಪುರಾಣದ ವಚನ ಹೀಗಿದೆ - ಎಷ್ಟು ವಿಷಯವು ಪ್ರಮಾಣದಿಂದ ಸಿದ್ಧವಾಗಿದೆಯೋ ಅಷ್ಟನ್ನು ಮಾತ್ರ ತರ್ಕದಿಂದ ಸ್ವೀಕರಿಸಬೇಕು. ಪ್ರಮಾಣದಿಂದ ಸಿದ್ಧವಾಗದೆ ಇರುವ ವಿಷಯವನ್ನು ತರ್ಕದಿಂದ ಸಾಧನೆ ಮಾಡಬಾರದು. ಏಕೆಂದರೆ ಕೇವಲ ತರ್ಕದಿಂದ ಯಾವುದನ್ನು ಕೂಡ ಸಾಧನೆ ಮಾಡಲು ಅಥವಾ ನಿಷೇಧ ಮಾಡಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸೂತ್ರದಲ್ಲಿರುವ ಅಪಿಶಬ್ದದಿಂದ ಸೂಚಿತವಾದ ಸ್ಮೃತಿಯನ್ನು ಸಂವಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಯಾವದೇವ ಎಷ್ಟು ವಿಷಯವು ಪ್ರಮಾಣೇನ = ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿದೆಯೋ ಅಷ್ಟು ವಿಷಯವನ್ನು ಅಹಾಪಯನ್ = ಬಿಡದೆ, ಸ್ವೀಕುರ್ಯಾತ್ = ತರ್ಕದಿಂದ ಸಾಧನೆ ಮಾಡಬೇಕು. ಚಾನ್ಯತ್ರ = ಪ್ರಮಾಣಸಿದ್ಧವಾಗದಿರುವ ವಿಷಯದಲ್ಲಿ, ನೈವ =ಅನುಮಾನದಿಂದ ಏನನ್ನು ಸಾಧನೆ ಮಾಡಬಾರದು, ಮಾನಮೃತೇ = ಪ್ರತ್ಯಕ್ಷಾದಿ ಪ್ರಮಾಣಗಳಿಲ್ಲದೆ, ಕ್ವಚಿತ್ = ಯಾವುದೇ ಸ್ಥಳದಲ್ಲಿಯೂ, ನ ಶಕ್ಯಂ =ಅನುಮಾನವನ್ನು ಪ್ರಮಾಣವನ್ನಾಗಿ ವಿವಕ್ಷಿಸಬಾರದು.

ತತ್ವಪ್ರಕಾಶಿಕಾ

**तत्वप्रकाशिका – तर्केण सदसतोः कारणत्वसाधनबाधने आक्षिप्य समादधत्सूत्रमुपन्यस्याऽऽक्षेपांशं तावद् व्याचष्टे – तर्केति ।।**

ತರ್ಕದಿಂದ 'ಸತ್' ಎಂಬುದು ವಿಶ್ವಕ್ಕೆ ಕಾರಣ, ಹಾಗೂ 'ಅಸತ್' ಎಂಬುದು ಕಾರಣವಲ್ಲವೆಂದು ಸಿದ್ಧಮಾಡಿದುದರ ಮೇಲೆ ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ಹೇಳಿ, ಸೂತ್ರದ ಆಕ್ಷೇಪ ಭಾಗವನ್ನು ಮೊದಲು ವ್ಯಾಖ್ಯಾನ ಮಾಡುತ್ತಾರೆ - 'ತರ್ಕ' ಎಂಬುದಾಗಿ.

**तत्वप्रकाशिका – यत्तर्कबलेन सतः कारणत्वसाधनमसतश्च तद्बाधनं तदयुक्तम् । यद्यत्तर्केण साध्यते तस्मादुक्तात् तर्केण साधितादन्यथापि प्रतितर्केण साधयितुं शक्यत्वेन तर्कस्याप्रामाण्यात् । न हि प्रतितर्क एतावानेवैतादृशं तर्कं प्रति विरोधितया वर्तते नैतादृशमिति नियामकमस्ति । अतः सर्वानुमानेषु प्रतितर्कस्यानिवारणीयत्वेन तेषामप्रामाण्यान्न तद्बलात्सारणत्वसाधनादि युक्तमिति भावः । परिहारांशं व्याचष्टे – नेति ।।**

ಕೇವಲ ತರ್ಕಬಲದಿಂದ 'ಸತ್' ಎಂಬುದು ವಿಶ್ವಕ್ಕೆ ಕಾರಣ, ಅಸತ್ತಿಗೆ ಕಾರಣತ್ವವು ಬಾಧಿತ - ಎಂದು ಸಾಧನೆ ಮಾಡಿದುದು ಸರಿಯಲ್ಲ. ಯಾವುದನ್ನೆಲ್ಲಾ ತರ್ಕದಿಂದ ಸಾಧನೆ ಮಾಡುತ್ತಾರೋ ಆ ತರ್ಕದಿಂದ ಸಾಧನೆ ಮಾಡಿದ ಧರ್ಮಕ್ಕೆ ವಿಪರೀತವಾಗಿ ಪ್ರತಿಕೂಲತರ್ಕದಿಂದ ಸಾಧನೆ ಮಾಡಲು ಶಕ್ಯವಾಗುತ್ತದೆ. ಹೀಗೆ ತರ್ಕವು ಅಪ್ರಮಾಣವಾಗಿದೆ. ಕೆಲವು ಅನುಮಾನಗಳಿಗೆ ಮಾತ್ರ ಪ್ರತಿತರ್ಕವು ವಿರೋಧಿಯಾಗಿದೆ. ಕೆಲವು ಅನುಮಾನಗಳಿಗೆ ಪ್ರತಿತರ್ಕವೇ ಇಲ್ಲ. ಹೀಗೆ ನಿರ್ಧರಿಸಲು ಯಾವ ಆಧಾರವೂ ಇಲ್ಲ. ಆದ್ದರಿಂದ ಎಲ್ಲಾ ಅನುಮಾನಗಳಲ್ಲಿ ಪ್ರತಿತರ್ಕಗಳು ಅನಿವಾರ್ಯಗಳಾದ್ದರಿಂದ ತರ್ಕಗಳೂ ಪ್ರಮಾಣಗಳಲ್ಲ. ಆದ್ದರಿಂದ ಕೇವಲ ತರ್ಕದಿಂದ ಸತ್ತೇ ವಿಶ್ವಕ್ಕೆ ಕಾರಣವೆಂಬ ವಿಷಯವನ್ನು ಸಾಧನೆ ಮಾಡುವುದಕ್ಕಾಗುವುದಿಲ್ಲವೆಂದು ತಾತ್ಪರ್ಯ. ಸೂತ್ರದಲ್ಲಿರುವ ಪರಿಹಾರಾಂಶವನ್ನು 'ನ' ಎಂಬುದರಿಂದ ವ್ಯಾಖ್ಯಾನ ಮಾಡುತ್ತಾರೆ.

**तत्वप्रकाशिका – तर्कसिद्धं सर्वं प्रतितर्केण दूषयितुं शक्यत इति वदन् प्रष्टव्यो जायते । किं प्रामाणिकं तर्कसिद्धं प्रतितर्केण दूषयितुं शक्यमप्रामाणिकं वेति । द्वितीयस्तु युक्त एव । प्रथमेऽपि प्रष्टव्यं किमेवंवादिनो मते मोक्षोऽस्ति न वेति । न चेन्नासौ वादी प्रयोजनान्तरस्य शास्त्रमन्तरेणापि सिद्धेः । अस्ति चेत् किं विप्रतिपन्नं प्रत्यागमेनैव साध्यते उत तर्केण । नाद्यः अनिर्मोक्षवादिनाऽऽगम-**

**प्रामाण्यानभ्युपगमात् । अतो द्वितीयपक्ष एवाङ्गीकार्यः । तथा च प्रामाणिकस्यापि तर्कसिद्धस्य प्रतितर्केण बाधे सोपि चार्वाकतर्केण बाधितः स्यादिति मतं व्यर्थमेव भवेत् । न च परं प्रति प्रतिपादनोपायाभावेऽपि स्वस्यागमेन मोक्षसिद्धिरिति वाच्यम् । विप्रतिपन्नप्रमेये स्वस्यापि केवलागमेनानध्यवसायादिति भावः । एवं सर्वतर्केऽपि प्रतितर्कः प्रसरतीत्यङ्गीकारेऽतिप्रसङ्गमुक्त्वा विपर्यये पर्यवसानं दर्शयति – अत इति ।।**

ತರ್ಕಸಿದ್ಧವಾದ ಸರ್ವವಿಷಯವನ್ನೂ ಪ್ರತಿತರ್ಕದಿಂದ ದೂಷಣೆ ಮಾಡಬಹುದೆಂದು ಹೇಳುವವನನ್ನು ಕುರಿತು ಹೀಗೆ ಕೇಳುತ್ತೇವೆ - ತರ್ಕದಿಂದ ಸಿದ್ಧವಾಗುವ ಪ್ರಾಮಾಣಿಕ ವಿಷಯವು ಪ್ರತಿತರ್ಕದಿಂದ ದೂಷಿತವಾಗುತ್ತದೋ ? ಅಥವಾ ಅಪ್ರಾಮಾಣಿಕ ವಿಷಯವು ದೂಷಿತವಾಗುತ್ತದೋ? ಇದರಲ್ಲಿ ಎರಡನೇ ಪಕ್ಷ ಯುಕ್ತವೇ ಆಗಿದೆ. ಮೊದಲನೆ ಪಕ್ಷದಲ್ಲಿ ಪುನಃ ಎರಡು ಪ್ರಶ್ನೆ ಬರುತ್ತದೆ - ಅನುಮಾನ ಅಪ್ರಮಾಣವೆಂಬ ನಿಮ್ಮ ಮತದಲ್ಲಿ ಮೋಕ್ಷವಿದೆಯೋ ಇಲ್ಲವೋ ? ಇಲ್ಲವೆಂದರೆ ಅವರು ಈ ಶಾಸ್ತ್ರದಲ್ಲಿ ವಾದಿಯೇ ಆಗಲಾರರು. ಏಕೆಂದರೆ, ಮೋಕ್ಷೇತರಪದಾರ್ಥಗಳು ಶಾಸ್ತ್ರವಿಲ್ಲದೆಯೂ ಸಿದ್ಧವಾಗಬಹುದು. ಮೋಕ್ಷವಿದೆ ಎಂದರೆ, ಮೋಕ್ಷವಿಷಯದಲ್ಲಿ ವಿವಾದ ಮಾಡುವ ಪುರುಷನಿಗೆ ಆಗಮದಿಂದ ಮೋಕ್ಷವನ್ನು ಸಾಧಿಸುತ್ತೀರೋ? ಅಥವಾ ತರ್ಕದಿಂದಲೋ ? ಆಗಮದಿಂದ ಎಂದರೆ ಮೋಕ್ಷ ಒಪ್ಪದ ಅವರು ಆಗಮಪ್ರಾಮಾಣ್ಯವನ್ನೇ ಒಪ್ಪುವುದಿಲ್ಲ. ಆದ್ದರಿಂದ ತರ್ಕದಿಂದ ಮೋಕ್ಷವನ್ನು ಸಾಧಿಸಲಾಗುವುದು ಎಂಬ ದ್ವಿತೀಯ ಪಕ್ಷವನ್ನೇ ಅಂಗೀಕಾರ ಮಾಡಬೇಕು. ಆದ್ದರಿಂದ ಪ್ರಾಮಾಣಿಕವೂ ತರ್ಕಸಿದ್ಧವೂ ಆದ ವಿಷಯವು ಪ್ರತಿತರ್ಕದಿಂದ ಬಾಧಿತವಾಗುತ್ತದೆಂದು ಹೇಳಿದರೆ, ಮೋಕ್ಷವಿಷಯದ ತರ್ಕವೂ ಪ್ರತಿತರ್ಕವಾದ ಚಾರ್ವಾಕತರ್ಕದಿಂದ ಬಾಧಿತವಾಗಬೇಕಾದೀತು. ಹೀಗಾಗಿ ನಿಮ್ಮ ಮತಕ್ಕೆ ಪ್ರಯೋಜನವೇ ಇಲ್ಲವೆಂದಾಗುತ್ತದೆ.

ಮತ್ತೊಬ್ಬನಿಗೆ ಮೋಕ್ಷವನ್ನು ಸಾಧನೆ ಮಾಡುವ ಪ್ರಮಾಣವಿಲ್ಲದಿರಬಹುದು. ಆದರೆ ನನಗೆ ವೇದರೂಪ ಪ್ರಮಾಣದಿಂದ ಮೋಕ್ಷವು ಸಿದ್ಧಿಯಾಗುತ್ತದೆಂದು ಹೇಳಬಹುದಲ್ಲವೇ? ಎಂದರೆ ಹೀಗೆ ಹೇಳಲಾಗುವುದಿಲ್ಲ. ಏಕೆಂದರೆ ಯಾವ ವಿಷಯದಲ್ಲಿ ವಿವಾದವಿದೆಯೋ ಅಲ್ಲಿ ಕೇವಲ ಆಗಮ ಪ್ರಮಾಣದಿಂದ ತನಗೂ ನಿಶ್ಚಯವಾಗುವುದಿಲ್ಲವೆಂದು ತಾತ್ಪರ್ಯ. ಈ ರೀತಿ ಎಲ್ಲಾ ವಿಧ ತರ್ಕಗಳಲ್ಲಿಯೂ ಪ್ರತಿ ತರ್ಕವು ವಿರುದ್ಧವಾಗಿ ನಿಲ್ಲುತ್ತದೆಂಬ ವಿಷಯದಲ್ಲಿ ಅತಿಪ್ರಸಂಗ ಹೇಳಿ ತದ್ವಿರುದ್ಧ ಪಕ್ಷದಲ್ಲಿ ಪರ್ಯವಸಾನವನ್ನು ಹೇಳುತ್ತಾರೆ, 'ಅತಃ' ಎಂಬ ವಾಕ್ಯದಿಂದ.

**तत्वप्रकाशिका – यत एवं प्रामाणिकतर्कस्यापि प्रतितर्केण बाधाभ्युपगमेऽति-प्रसङ्गोऽतः प्रामाणिकमेव तर्केणाङ्गीकार्यमप्रामाणिकं न शङ्क्यम् । प्रमाणसाहाय्ययुक्तः**

**प्रतितर्कोऽप्रामाणिकतर्कं बाधते न त्वप्रामाणिकः प्रामाणिकम् । अत्रैतौ प्रयोगौ भवतः इत्यत्र उक्ततर्कद्वयस्य प्रलयः सर्वासत्त्ववानित्यादिविरुद्धतर्कौ तूभावपि न प्रामाणिकौ । प्रकृततर्कश्च प्रामाणिको नाप्रामाणिकेन निषेद्धुं शक्यत इति भावः । अत्र स्मृतिसंमतिं चाह – यावदिति ।। अन्यत्रान्यत् ।। १२ ।।**

ಪ್ರಾಮಾಣಿಕತರ್ಕವೂ ಪ್ರತಿತರ್ಕದಿಂದ ಬಾಧಿತವಾಗುತ್ತದೆಂದು ಒಪ್ಪಿದಲ್ಲಿ ಅತಿಪ್ರಸಂಗ ಬರುತ್ತದೆಯಾದ್ದರಿಂದ ಪ್ರಾಮಾಣಿಕವಾದದ್ದನ್ನೇ ತರ್ಕದಿಂದ ಸ್ವೀಕರಿಸಬೇಕು. ಅಪ್ರಾಮಾಣಿಕ ವಿಷಯವನ್ನು ತರ್ಕದಿಂದ ಶಂಕಿಸಕೂಡದು. ಪ್ರಮಾಣದ ಸಹಾಯವಿದ್ದರೇನೇ ಆ ಪ್ರತಿತರ್ಕವು ಅಪ್ರಾಮಾಣಿಕ ತರ್ಕವನ್ನು ಬಾಧಿಸುತ್ತದೆ. ಅಪ್ರಾಮಾಣಿಕತರ್ಕವು ಪ್ರಾಮಾಣಿಕ ತರ್ಕವನ್ನು ಬಾಧ ಮಾಡಲಾರದು.

ಈ ವಿಷಯದಲ್ಲಿ ಎರಡು ಅನುಮಾನ ಮಾಡಬಹುದು - ವಿಶ್ವದ ಉತ್ಪತ್ತಿಯು ಸತ್ತಿನಿಂದ ಆಗುತ್ತದೆ, ಮತ್ತು ಕಾರ್ಯದ ನಾಶ ಸಶೇಷವಾಗಿರುತ್ತದೆ ಎಂದು ಹಿಂದೆ ತೋರಿಸಿದ ಎರಡು ಅನುಮಾನಕ್ಕೆ ವಿರುದ್ಧವಾಗಿ ಪ್ರಲಯವು ಸರ್ವಪದಾರ್ಥಗಳಿಗಿಂತ ರಹಿತವಾಗಿದೆ. ಇತ್ಯಾದಿ ಪ್ರತಿಪಕ್ಷಿ ತೋರಿಸಿದ ಎರಡೂ ತರ್ಕಗಳೂ ಪ್ರಮಾಣಿಕವಲ್ಲ. ನಾವು ಹೇಳಿದ ತರ್ಕವೇ ಪ್ರಾಮಾಣಿಕವಾದುದರಿಂದ ಅಪ್ರಾಮಾಣಿಕ ಪ್ರತಿತರ್ಕದಿಂದ ದೂಷಿಸುವುದಕ್ಕಾಗುವುದಿಲ್ಲವೆಂದು ಅಭಿಪ್ರಾಯ. ಈ ವಿಷಯದಲ್ಲಿ 'ಯಾವತ್' ಎಂಬುದರಿಂದ ಸ್ಮೃತಿ ಪ್ರಮಾಣವನ್ನೂ ತೋರಿಸುತ್ತಾರೆ. 'ಅನ್ಯತ್ರ' ಎಂದರೆ 'ಅನ್ಯತ್' ಎಂದರ್ಥ.

## ಬ್ರಹ್ಮಸೂತ್ರಭಾಷ್ಯ

**सूत्रम् – ।। एतेन शिष्टा अपरिग्रहा अपि व्याख्याताः ।।**

ಇದುವರೆಗೂ ಸಾಧಿಸಿದ ಅನುಮಾನ ಪ್ರಮಾಣದಿಂದಲೇ ವೇದದ ಸಮ್ಮತಿಯಿಲ್ಲದ ಹಾಗೂ ವೇದ ವಿರುದ್ಧವಾದ 'ಜೀವನೇ ಕರ್ತೃ' 'ಕಾಲವೇ ಕರ್ತೃ' 'ಸ್ವಭಾವವೇ ಕರ್ತೃ' ಮೊದಲಾದ ವಾದಗಳು ನಿರಾಕರಿಸಲ್ಪಟ್ಟವು.

## ಸೂತ್ರದೀಪಿಕಾ

**सूत्रदीपिका – एतेन शिष्टा अपरिग्रहा अपि व्याख्याताः ।। एतेन** स्वपरपक्षयोः दृष्टान्तभावाभावाख्यहेतुना । **अपरिग्रहाः** वेदपरिग्रहशून्याः । तद्विरुद्धाश्च । **शिष्टाः**

अवशिष्टाः जीवकलास्वभावकर्तृत्वपक्षा अपि । व्याख्याताः प्रत्याख्याताः दूषिता इत्यर्थः ।।६।।

ಅರ್ಥ -- ಏತೇನ = ಸಿದ್ಧಾಂತಪಕ್ಷದಲ್ಲಿ ಅನುಮಾನವಿರುವಿಕೆ ಪರಪಕ್ಷದಲ್ಲಿ ಅನುಮಾನವಿಲ್ಲದಿರುವಿಕೆ ಎಂಬ ಕಾರಣದಿಂದಲೇ, ಅಪರಿಗ್ರಹಾಃ = ವೇದ ಸಮ್ಮತಿಯಿಲ್ಲದ ಮತ್ತು ವೇದ ವಿರುದ್ಧವಾದ ಶಿಷ್ಟಾಃ ಅಪಿ = ಉಳಿದೆಲ್ಲಾ ಜೀವ, ಕಾಲ, ಸ್ವಭಾವ ಕರ್ತೃತ್ವ ಪಕ್ಷಗಳು ಕೂಡ, ವ್ಯಾಖ್ಯಾತಾಃ = ನಿರಾಕೃತವಾದವು.

॥ ಇಲ್ಲಿಗೆ ಸೂತ್ರ ಹಾಗೂ ಸೂತ್ರದೀಪಿಕೆಯಲ್ಲಿ ಅಸದಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् — ।। एतेन शिष्टा अपरिग्रहा अपि व्याख्याताः ।।६।।**

**एतेन दृष्टान्तभावेनाभावेन चावशिष्टा अप्यपरिग्रहा विरुद्धसिद्धान्ता अकर्तृकत्वाचेतनकर्तृकत्वजीवकर्तृकत्वादयोऽपि ।**

ಅನುವಾದ - ಸತ್‌ಪದಾರ್ಥದಿಂದ ಸತ್‌ಪದಾರ್ಥವೇ ಹುಟ್ಟುತ್ತದೆ ಎಂಬ ವಿಷಯದಲ್ಲಿ ದೃಷ್ಟಾಂತವಿರುವುದರಿಂದ ಹಾಗೂ ಅಸತ್ ಪದಾರ್ಥದಿಂದ ಸತ್‌ಪದಾರ್ಥವು ಹುಟ್ಟುವುದರಲ್ಲಿ ದೃಷ್ಟಾಂತ ಇಲ್ಲದಿರುವುದರಿಂದ ವೇದದ ಸಮ್ಮತಿಯಿಲ್ಲದ ಹಾಗೂ ವೇದಕ್ಕೆ ವಿರುದ್ಧವಾದ ವಾದಗಳು ನಿರಾಕೃತವಾದವು. ಜಗತ್ತಿಗೆ ಕರ್ತೃವೇ ಇರುವುದಿಲ್ಲ. ಮತ್ತು ಜಡವಾದ ವಸ್ತು ಜಗತ್ತಿಗೆ ಕರ್ತೃ ಜೀವನೇ ಜಗತ್ತಿಗೆ ಕರ್ತೃ ಇವೆಲ್ಲವೂ ಕೂಡ ವೇದವಿರುದ್ಧವಾದ ಮತಗಳು.

ಪ್ರತಿಪದಾರ್ಥ -- 'ಅಸತ್' ಶಬ್ದದಿಂದ ಪ್ರತಿಪಾದ್ಯವಾದ ಅಭಾವವು ಜಗತ್ತಿಗೆ ಕಾರಣವಾಗುವುದು ಬೇಡ. ಆದರೂ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ 'ವಿಪ್ರತಿಪನ್ನಂ ಜಗತ್ ನಿಷ್ಕಾರಣಕಮ್', ಅಚೇತನಕಾರಣಕಂ, ಜೀವಕಾರಣಕಂ ವಾ, ಕಾರ್ಯತ್ವಾತ್, ಕೂಲಪತನವದ್ ದಧ್ಯಾದಿವತ್' ಇತ್ಯಾದಿ ಅನುಮಾನದಿಂದ ನಿಷ್ಕಾರಣತ್ವವನ್ನು ಸಾಧನೆ ಮಾಡುವ ಯುಕ್ತಿವಿರೋಧವು ಬರುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भाष्यम् — अकस्माद्धीदमाविरासीदकस्मात् तिष्ठत्यकस्माल्लयमभ्युपैति ।**

ಅನುವಾದ - ಕಾರಣವಿಲ್ಲದೆ ಸ್ಥಿತಿಯನ್ನು ಪಡೆಯಿತು. ಕಾರಣವಿಲ್ಲದೆ ನಾಶವಾಯಿತು.

ಪ್ರತಿಪದಾರ್ಥ -- 'ಕಾರಣವಿಲ್ಲದೆ ಜಗತ್ತು ಹುಟ್ಟಿದೆ' ಎನ್ನಲು ಶ್ರುತಿಪ್ರಮಾಣವಿದೆ ಎಂದು ಹೇಳಲಾಯಿತು. ಆ ಶ್ರುತಿಗಳು ಯಾವುದು ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಕಸ್ಮಾತ್ = ಕಾರಣವಿಲ್ಲದೆ, ಇದಂ = ಈ ಜಗತ್ತು, ಅವಿರಾಸೀತ್ = ಹುಟ್ಟಿತು. ಅಕಸ್ಮಾದ್ಧಿ = ಕಾರಣವಿಲ್ಲದೆಯೇ, ತಿಷ್ಠತಿ = ಸ್ಥಿತಿಯನ್ನು ಹೊಂದಿದೆ. ಅಕಸ್ಮಾತ್ = ಕಾರಣವಿಲ್ಲದೆ, ಲಯಂ = ನಾಶವನ್ನು, ಅಭ್ಯುಪೈತಿ = ಹೊಂದುತ್ತದೆ.

**भाष्यम् –**

**'प्रधानादिदमुत्पन्नं प्रधानमधितिष्ठति ।**
**प्रधाने लयमभ्येति न ह्यन्यत् कारणं मतम् ।।'**

ಅನುವಾದ - ಜಡಪ್ರಕೃತಿಯಿಂದ ಈ ಜಗತ್ತು ಹುಟ್ಟಿದೆ. ಜಡಪ್ರಕೃತಿಯಲ್ಲಿಯೇ ಆಶ್ರಿತವಾಗಿದೆ. ಜಡಪ್ರಕೃತಿಯಲ್ಲೇ ನಾಶವನ್ನು ಹೊಂದುತ್ತದೆ. ಜಡಪ್ರಕೃತಿಗಿಂತ ಬೇರೆ ಕಾರಣವು ಇರುವುದಿಲ್ಲ.

ಪ್ರತಿಪದಾರ್ಥ -- ಜಗತ್ತಿಗೆ ಅಚೇತನವೇ ಕಾರಣವಾಗಿದೆ ಎನ್ನಲು ಶ್ರುತಿಪ್ರಮಾಣವನ್ನು ಹೇಳುತ್ತಿದ್ದಾರೆ. ಇದಂ = ಈ ಜಗತ್ತು, ಪ್ರಧಾನಾತ್ = ಅಚೇತನವಾದ ಪ್ರಕೃತಿಯಿಂದ, ಉತ್ಪನ್ನಂ = ಸೃಷ್ಟಿಯನ್ನು ಪಡೆದಿದೆ. ಪ್ರಧಾನೇ = ಜಡಪ್ರಕೃತಿಯಲ್ಲಿ, ಅಧಿತಿಷ್ಠತಿ = ನೆಲೆಸಿದೆ. ಪ್ರಧಾನೇ = ಜಡಪ್ರಕೃತಿಯಲ್ಲಿ, ಲಯಂ ಚ = ಲಯವನ್ನು ಕೂಡ, ಅಭ್ಯೇತಿ = ಹೊಂದುತ್ತದೆ. ಅನ್ಯತ್ = ಜಡ ಪ್ರಕೃತಿಗಿಂತ ಬೇರೆಯಾದ, ಕಾರಣಂ = ಕಾರಣವು ನಹಿ ಮತಂ = ಅಭಿಪ್ರೇತವಾಗಿಲ್ಲ.

**भाष्यम् –**

**'जीवाद् भवन्ति भूतानि जीवे तिष्ठन्त्यचञ्चलाः ।**
**जीवे तु लयमृच्छन्ति न जीवात् कारणं परम् ।'**
**इत्यादिश्रुतिप्राप्ता निराकृताः ।**

ಅನುವಾದ - ಜೀವನಿಂದಲೇ ಪಂಚಭೂತಗಳು ಸೃಷ್ಟಿಯನ್ನು ಪಡೆದಿವೆ. ಜೀವನಿಂದ ಸ್ಥಿತಿಯನ್ನು ಸ್ಥಿರವಾಗಿ ಪಡೆದಿವೆ. ಜೀವನಲ್ಲಿಯೇ ಲಯವನ್ನು ಹೊಂದುತ್ತವೆ.ಜೀವನಿಗಿಂತ ಬೇರೆಯಾದ ಮತ್ತೊಂದುಕಾರಣವಿರುವುದಿಲ್ಲ. ಇವೇ ಮೊದಲಾದಶ್ರುತಿಗಳಿಂದ ಆಕ್ಷೇಪಗಳು ಪ್ರಾಪ್ತವಾಗಿವೆ. ಇವುಗಳೆಲ್ಲವೂ ಈಗ ನಿರಾಕೃತವಾದವು.

ಪ್ರತಿಪದಾರ್ಥ -- ಜೀವನೇ ಜಗತ್ತಿಗೆ ಕಾರಣನಾಗಿದ್ದಾನೆನ್ನಲು ಶ್ರುತಿಪ್ರಮಾಣವನ್ನು ಉಲ್ಲೇಖ ಮಾಡುತ್ತಿದ್ದಾರೆ. ಜೀವಾದ್ = ಜೀವನ ದೆಸೆಯಿಂದ, ಭೂತಾನಿ = ಪೃಥಿವ್ಯಾದಿ ಸಕಲವಿಧವಾದ ಕಾರ್ಯಗಳು, ಭವಂತಿ = ಹುಟ್ಟುತ್ತವೆ. ಜೀವೇ = ಜೀವನಲ್ಲಿ, ಅಚಂಚಲಾಃ = ಸ್ಥಿರವಾಗಿ, ತಿಷ್ಠಂತಿ = ನೆಲೆಗೊಂಡಿವೆ, ಜೀವೇತು = ಜೀವನಲ್ಲಿಯೇ,

ಲಯಂ = ಲಯವನ್ನು, ಋಚ್ಛಂತಿ = ಹೊಂದುತ್ತವೆ. ಜೀವಾತ್ = ಜೀವನಿಗಿಂತ, ಪರಂ = ಬೇರೆ, ಕಾರಣಂ = ಕಾರಣವು, ನ = ಇರುವುದಿಲ್ಲ. ಇತ್ಯಾದಿಶ್ರುತಿಪ್ರಾಪ್ತಾಃ = ಇವೇ ಮೊದಲಾದ ಶ್ರುತಿಗಳಿಂದ ಪ್ರಾಪ್ತವಾದ ಆಕ್ಷೇಪಗಳು, ನಿರಾಕೃತಾಃ = ನಿರಾಕರಿಸಲ್ಪಟ್ಟವು.

**ಭಾಷ್ಯಮ್ – यथा दुःखादिषु जीवस्यास्वातन्त्र्यमेवमन्येष्वपीति दृष्टान्तः ।**

ಅನುವಾದ - ಸುಖದುಃಖ ಮುಂತಾದವುಗಳಲ್ಲಿ ಜೀವನಿಗೆ ಹೇಗೆ ಅಸ್ವಾತಂತ್ರ್ಯವಿದೆಯೋ ಅದರಂತೆ ಉತ್ಪತ್ತಿ, ನಾಶ ಮೊದಲಾದವುಗಳ ವಿಷಯದಲ್ಲೂ ಅಸ್ವಾತಂತ್ರ್ಯವಿದೆ. ಹೀಗೆ ದೃಷ್ಟಾಂತವನ್ನು ತಿಳಿಯಬೇಕು.

ಪ್ರತಿಪದಾರ್ಥ -- ದೃಷ್ಟಾಂತವಿಲ್ಲವೆಂಬ ಹೇತು ಜೀವಕರ್ತೃತ್ವಪಕ್ಷದಲ್ಲಿ ಸಿದ್ಧವಾಗುವುದಿವಷ್ಟೆ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯಥಾ = ಯಾವರೀತಿಯಾಗಿ, ಜೀವಸ್ಯ = ಜೀವನಿಗೆ, ದುಃಖಾದಿಷು = ಸುಖದುಃಖಾದಿಗಳ ಅನುಭವದಲ್ಲಿ, ಅಸ್ವಾತಂತ್ರ್ಯಮ್ = ಅಸ್ವಾತಂತ್ರ್ಯವೇ ಕಂಡಿದೆಯೋ, ಏವಂ = ಮೇಲೆ ಅದರಂತೆ, ಅನ್ಯೇಷ್ವಪಿ = ಪ್ರಕೃತ್ಯಾದಿ ವಿಷಯಗಳಲ್ಲಿ, ಇತಿ = ಹೀಗೆ, ದೃಷ್ಟಾಂತಃ = ದೃಷ್ಟಾಂತವನ್ನು ತಿಳಿಯಬೇಕು.

**ಭಾಷ್ಯಮ್ – श्रुतिगतिस्तु ब्रह्मवाचकत्वेन प्रदर्शिता ।**

ಅನುವಾದ - ಜೀವಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳ ಅಭಿಪ್ರಾಯವನ್ನು ಬ್ರಹ್ಮವಾಚಕತ್ವೇನ ಈ ಹಿಂದೆ ತೋರಿಸಿದ್ದಾಗಿದೆ. ಜೀವ ಮೊದಲಾದ ಶಬ್ದಗಳಿಂದ ಬ್ರಹ್ಮನೇ ಮುಖ್ಯವಾಗಿ ಪ್ರತಿಪಾದ್ಯನೆಂದು ತಿಳಿಯಬೇಕು.

ಪ್ರತಿಪದಾರ್ಥ -- ಶ್ರುತಿಗತಿಸ್ತು = ಜೀವಪ್ರತಿಪಾದ ಶ್ರುತಿಗಳಾದರೂ, ಬ್ರಹ್ಮವಾಕತ್ವೇನ = ಬ್ರಹ್ಮನನ್ನೇ ಹೇಳುವುದಾಗಿ, ಪ್ರದರ್ಶಿತಾ = ಈ ಹಿಂದೆ ತೋರಿಸಲಾಗಿದೆ.

**भाष्यम् – यत्रान्यवाचकत्वेऽप्यविरोधस्तत्रान्यदप्यमुख्यतयोच्यते । यत्र विरोधस्तत्र ब्रह्मैवोच्यते इति नियमः ।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये असदधिकरणम् ।। ४ ।।**

ಅನುವಾದ - ಬ್ರಹ್ಮನಿಗಿಂತಭಿನ್ನವಾದ ಬೇರೆ ಪದಾರ್ಥವು ಪ್ರತಿಪಾದ್ಯವಾಗಿದೆ ಎಂದು ಹೇಳಿದಾಗ ಶ್ರುತಿಯ ವಿರೋಧ ಬಾರದಿದ್ದರೆ ಆವಾಗ ಬೇರೆ ಪದಾರ್ಥವೂ ಕೂಡ ಅಮುಖ್ಯವಾಗಿ ಶ್ರುತಿಪ್ರತಿಪಾದ್ಯವಾಗುತ್ತದೆ. ಎಲ್ಲಿ ವಿರೋಧ ಬರುತ್ತದೋ ಅಂಥ ಸಂದರ್ಭದಲ್ಲಿ ಬ್ರಹ್ಮನು ಮಾತ್ರ ಪ್ರತಿಪಾದ್ಯನಾಗುತ್ತಾನೆ. ಇದು ಶ್ರುತಿಯ ನಿಯಮ.

ಪ್ರತಿಪದಾರ್ಥ -- ಶ್ರುತಿಗಳು ಪರಮಮುಖ್ಯವೃತ್ತಿಯಿಂದ ಬ್ರಹ್ಮನನ್ನು ಪ್ರತಿಪಾದನೆ ಮಾಡಿದರೂ ಮುಖ್ಯವೃತ್ತಿಯಿಂದ ಅಸತ್‌ಪದಾರ್ಥಗಳನ್ನು ಪ್ರತಿಪಾದನೆ

ಮಾಡಬಹುದಲ್ಲವೆ? ಆವಾಗ ವಿಷ್ಣುಕಾರಣತ್ವ ಪ್ರತಿಪಾದಕವಾದ ಶ್ರುತಿಗಳಿಗೆ ಅಸತ್ಕಾರಣಪ್ರತಿಪಾದಕವಾದ ಶ್ರುತಿಯ ವಿರೋಧವು ಬರುತ್ತದಲ್ಲವೆ? ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯತ್ರ = ಯಾವ ಸಂದರ್ಭದಲ್ಲಿ, ಅನ್ಯವಾಚಕತ್ವೇನ = ವಿಷ್ಣುವಿಗಿಂತ ಬೇರೆಯಾದ ಪದಾರ್ಥವು ಪ್ರತಿಪಾದ್ಯವಾಗುತ್ತದೆಂದು ಒಪ್ಪಿದರೆ, ಅವಿರೋಧಃ = ವಿರೋಧವು ಬರುವುದಿಲ್ಲವೋ, ತತ್ರ = ಆ ಸಂದರ್ಭದಲ್ಲಿ, ಅನ್ಯದಪಿ = ಬೇರೆ ವಸ್ತುಗಳೂ ಕೂಡ, ಅಮುಖ್ಯತಯಾ = ಅಮುಖ್ಯವೃತ್ತಿಯಿಂದ, ಉಚ್ಯತೇ = ಪ್ರತಿಪಾದ್ಯವಾಗುತ್ತದೆ. ಯತ್ರ = ಯಾವ ಸಂದರ್ಭದಲ್ಲಿ, ವಿರೋಧಃ = ಅರ್ಥವಿರೋಧವು ಬರುತ್ತದೋ, ಅತ್ರ = ಆ ಸಂದರ್ಭದಲ್ಲಿ, ಬ್ರಹ್ಮೈವ = ಮಹಾವಿಷ್ಣುವೇ, ಉಚ್ಯತೇ = ಪ್ರತಿಪಾದ್ಯನಾಗುತ್ತಾನೆ. ಇತಿ = ಹೀಗೆ, ನಿಯಮಃ = ಶ್ರುತಿಯ ನಿಯಮವಿದೆ.

ಇಲ್ಲಿಗೆ ಅಸದಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – मास्त्वसत्कारणं जगतस्तथापि न विष्णोर्जगत्कारणत्वं सम्भवति । 'विप्रतिपन्नं निष्कारणमचेतनकारणं जीवकारणं वा कार्यत्वात् कूलपतनदध्यादिवदिति निष्कारणत्वादिसाधकयुक्तिविरोधात् । न च निर्मूलयुक्तेरसाधकत्वम् । 'अकस्मात्' इत्यादि श्रुतिमूलत्वादित्याशङ्कां परिहरत्सूत्रमुपन्यस्य व्याचष्टे – एतेनेति ।।**

ಅಸತ್ತು ಜಗತ್ತಿಗೆ ಕಾರಣವಾಗುವುದಿಲ್ಲವೆಂದರೆ ಬೇಡ. ಆದರೂ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ವಿಶ್ವಕ್ಕೆ ಯಾವ ಕಾರಣವೂ ಬೇಕಾಗಿಲ್ಲ. ಅಥವಾ ಅಚೇತನವೋ ಜೀವನೋ ಕಾರಣವಾಗಬಹುದು. ಏಕೆಂದರೆ ಅದು ಕಾರ್ಯವಾಗಿದೆ. ಹೇಗೆಂದರೆ ನದೀದಡ ಬೀಳುವಿಕೆ ಅಥವಾ ಹಾಲು ಮೊಸರಾಗುವಿಕೆ, ಮುಂತಾದವುಗಳಲ್ಲಿ ಹೇಗೋ ಹಾಗೆ ಈ ರೀತಿ ನಿಷ್ಕಾರಣತ್ವಾದಿ ಸಾಧಕ ಯುಕ್ತಿ ವಿರೋಧ ಬರುತ್ತದೆ. ಈ ನಿರ್ಮೂಲಯುಕ್ತಿಗಳಿಗೆ ಸಾಧಕತ್ವವಿಲ್ಲವೆಂದು ಹೇಳಕೂಡದು. ಏಕೆಂದರೆ ಈ ಅನುಮಾನಕ್ಕೆ 'ಅಕಸ್ಮಾತ್' ಇತ್ಯಾದಿ ಶ್ರುತಿಯು ಮೂಲಪ್ರಮಾಣವಾಗಿರುತ್ತದೆ. ಈ ಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಹೇಳಿ ಅದರ ವ್ಯಾಖ್ಯಾನ ಮಾಡುತ್ತಾರೆ; 'ಏತೇನ' ಎಂದು.

**तत्वप्रकाशिका – सत्कारणत्वादौ दृष्टान्तभावेन निष्कारणत्वादौ दृष्यान्ताभावेनेत्यर्थः । कूलपतनादीनामपि निष्कारणत्वादि न सम्मतमिति भावः।।**

**अत्र निष्कारणत्वादिनिरासे वक्ष्यमाणचार्वाकसाख्यनिषेधस्य पौनरुक्त्यं प्रसज्जत इत्यत उक्तम् – श्रुतिप्राप्ता इति ।।**

ವಿಶ್ವದ ಸತ್ಕಾರಣತ್ವಕ್ಕೆ ದೃಷ್ಟಾಂತವಿದೆಯೆಂದೂ ನಿಷ್ಕಾರಣತ್ವದಲ್ಲಿ ದೃಷ್ಟಾಂತವಿಲ್ಲವೆಂದೂ, ಅರ್ಥ. ಕೂಲಪತನಾದಿ (ದಡಬೀಳುವಿಕೆ ಮುಂತಾದ್ದು) ನಿಷ್ಕಾರಣವೆಂದು ನಾವು ಒಪ್ಪುವುದಿಲ್ಲವೆಂದು ಭಾವ. (ಅಲ್ಲಿಯೂ ಈಶ್ವರ ಪ್ರೇರಣೆಯೇ ಕಾರಣವಾಗಿದೆ). ಈ ಅಧಿಕರಣದಲ್ಲಿ ವಿಶ್ವದ ನಿಷ್ಕಾರಣತ್ವದ ನಿರಾಸದಿಂದ ಪುನರುಕ್ತಿ ದೋಷ ಬರುತ್ತದೆ. ಏಕೆಂದರೆ ಮುಂದೆ ಚಾರ್ವಾಕ, ಸಾಂಖ್ಯಾದಿ ಮತನಿಷೇಧ ಮಾಡಿದ್ದಾರಲ್ಲವೆ? ಎಂಬ ಶಂಕೆಯನ್ನು ಪರಿಹಾರ ಮಾಡಲು 'ಶ್ರುತಿಪ್ರಾಪ್ತಾ' ಎಂದು ಹೇಳಿದ್ದಾರೆ.

**तत्वप्रकाशिका – तृतीयानुप्रवेशशदि तु पूर्ववत्परिहरणीयम् । नन्वस्तु सत्कारणत्वादौ घटादिदृष्टान्तभावो निष्कारणत्वादौ दृष्टन्ताभावश्च, तथापि कथमजीवकतृत्वे दृष्टान्तः कथञ्च जीवकतृत्वे दृष्टान्ताभावो घटादीनां जीवकतृत्वदर्शनादित्यत आह – यथेति ।।**

ಇಲ್ಲಿ ಶ್ರುತಿವಿರೋಧದ ಪರಿಹಾರವೇ ಅಭಿಪ್ರೇತವಾಗಿದ್ದರೆ ಈ ಅಧಿಕರಣವನ್ನು ಈ ಅಧ್ಯಾಯದ ಮೂರನೇ ಪಾದದಲ್ಲಿ ಏಕೆ ಹಾಕಲಿಲ್ಲವೆಂದು ಪ್ರಶ್ನೆ ಬಂದರೆ ಇದಕ್ಕೂ ಅರ್ಥಾತ್ ಯುಕ್ತಿವಿರೋಧವನ್ನು ನಿರಾಕರಿಸುವುದರಿಂದ ಈ ಪಾದದಲ್ಲಿರುವುದು ಯುಕ್ತವೇ ಎಂದು ಹಿಂದಿನಂತೆ ತಿಳಿಯಬೇಕು. ಸತ್ಕಾರಣದ ವಿಷಯದಲ್ಲಿ ಘಟಾದಿಗಳು ದೃಷ್ಟಾಂತ. ನಿಷ್ಕಾರಣತ್ವದ ವಿಷಯದಲ್ಲಿ ದೃಷ್ಟಾಂತವಿಲ್ಲ. ಆದರೂ ನಿಮ್ಮ ಅಭಿಪ್ರಾಯದಂತೆ ಅಜೀವ ಕರ್ತೃತ್ವವಿಷಯದಲ್ಲಿ ದೃಷ್ಟಾಂತ ಹೇಗೆ ಸಿಗುತ್ತದೆ ? ಮತ್ತು ಜೀವಕರ್ತೃತ್ವ ವಿಷಯದಲ್ಲಿ ದೃಷ್ಟಾಂತ ಹೇಗೆ ಸಿಗುವುದಿಲ್ಲ ? ಏಕೆಂದರೆ, ಘಟಾದಿಗಳಿಗೆ ಜೀವ ಕರ್ತೃವಾಗಿರುವುದು ಕಂಡಿದೆ. ಈ ಆಕ್ಷೇಪವನ್ನು ಪರಿಹಾರ ಮಾಡಲು 'ಯಥಾ' ಎಂಬ ವಾಕ್ಯವನ್ನು ಹೇಳುತ್ತಾರೆ.

**तत्वप्रकाशिका – दुःखादिकार्येषु जीवस्य कतृत्वाभावेनाजीवकतृत्वेऽस्ति दृष्टान्तः, एमन्येष्वपि कार्येषु तत्साध्यम् । ततश्च जीवकर्तृत्वे दृष्टान्ताभाव इति भावः । घटादीनां जीवकर्तृत्वाभावे न चेतनकर्तृकत्वे दृष्टान्तोऽचेतनकर्तृकत्व-निषेधार्थमित्यतोऽकर्तृत्वमित्यनुक्त्वाऽस्वातन्त्र्यमित्युक्तम् । नन्वेवं चेदसत्कारणत्वादिश्रुतीनां का गतिरित्यत आह – श्रुतीति ।।**

ದುಃಖಾದಿಕಾರ್ಯಗಳಲ್ಲಿ ಜೀವನಿಗೆ ಕರ್ತೃತ್ವವಿಲ್ಲದಿರುವುದರಿಂದ, ಅಜೀವಕರ್ತೃತ್ವ ವಿಷಯದಲ್ಲಿ ದೃಷ್ಟಾಂತವಿರುತ್ತದೆ. ಆದ್ದರಿಂದ ಈ ದೃಷ್ಟಾಂತದ ಮೇಲೆ ಅನ್ಯಕಾರ್ಯಗಳೂ ಅಜೀವಕರ್ತೃಕವಾಗಿವೆ ಎಂಬುದು ಸಿದ್ಧವಾಗುತ್ತದೆ. ಆದ್ದರಿಂದ ಜೀವಕರ್ತೃಕಕಾರ್ಯಗಳ ವಿಷಯದಲ್ಲಿ ದೃಷ್ಟಾಂತವೇ ಸಿಗುವುದಿಲ್ಲವೆಂದು ತಿಳಿಯಬೇಕು.

'ವಿಶ್ವವು ಅಚೇತನಕರ್ತೃಕವಾಗಿದೆ' ಎಂದು ಹೇಳಿದರೆ ಅದನ್ನು ನಿಷೇಧ ಮಾಡಲು 'ವಿಶ್ವವು ಕಾರ್ಯವಾದುದರಿಂದ ಚೇತನಕರ್ತೃಕವಾಗಿದೆ; ಘಟಾದಿಕಾರ್ಯದಂತೆ' ಈ ರೀತಿ ಅನುಮಾನ ಹೇಳಬೇಕಾಗುತ್ತದೆ. ಮತ್ತು ಈ ಅನುಮಾನಗಳಲ್ಲಿ ಜೀವಕರ್ತೃಕ ಘಟಾದಿಗಳನ್ನೇ ದೃಷ್ಟಾಂತವಾಗಿ ಹೇಳಬೇಕಾಗುತ್ತದೆ. ಆಗ ಘಟಾದಿಗಳು ಜೀವಕರ್ತೃಕವಲ್ಲವೆಂದು ಹೇಳಿದರೆ ಆ ಅನುಮಾನದಲ್ಲಿ ಘಟಾದಿಗಳು ದೃಷ್ಟಾಂತವಾಗಲಾರವು. ಆದ್ದರಿಂದ ಇಲ್ಲಿ ಜೀವನು ಘಟಾದಿಕರ್ತನಲ್ಲವೆಂದು ಹೇಳದೇ ಅವನು ಸ್ವತಂತ್ರನಲ್ಲವೆಂದು ಹೇಳಿದ್ದಾರೆ. ಎಂದರೆ, ಅವನು ಕರ್ತನಾದರೂ ಸ್ವತಂತ್ರ ಕರ್ತನಲ್ಲವೆಂದರ್ಥ. ಹೀಗೆ ಹೇಳಿದ್ದರಿಂದ ಯಾವ ದೋಷವೂ ಬರುವುದಿಲ್ಲ. ವಿಶ್ವಕ್ಕೆ ಅಸತ್ಕಾರಣತ್ವವನ್ನು ಒಪ್ಪದಿದ್ದರೆ, ಅಸತ್ಕಾರಣತ್ವಪ್ರತಿಪಾದಕ ಶ್ರುತಿಗೆ ಏನು ಗತಿ ? ಎಂಬ ಪ್ರಶ್ನೆಗೆ 'ಶ್ರುತಿಗತಿಸ್ತು' ಎಂದು ಉತ್ತರ ಕೊಡುತ್ತಾರೆ.

**तत्वप्रकाशिका – श्रुतीनां ब्रह्मवाचकत्वेऽप्यसदादिवाचकत्वममुख्यतयाऽभ्युपगम्यत एवातस्तद्विरोध इत्यत आह – यत्रेति ।।**

ಶ್ರುತಿಯು ಮುಖ್ಯವೃತ್ತಿಯಿಂದ ಬ್ರಹ್ಮವಾಚಕವಾದರೂ ಅಮುಖ್ಯವೃತ್ತಿಯಿಂದ ಅಸತ್ತಾದಿ ಪದಾರ್ಥವಾಚಕವಾಗಿರುತ್ತದೆಂಬ ವಿಷಯ ಸಿದ್ಧಾಂತಿಗೆ ಮಾನ್ಯವೇ ಆಗಿದೆ. ಆದ್ದರಿಂದ ಅಮುಖ್ಯಾರ್ಥತ್ವದಿಂದಲಾದರೂ, ವಿಷ್ಣುಜಗತ್ಕಾರಣನೆಂಬ ವಿಷಯದಲ್ಲಿ ಅಸತ್ಕಾರಣತ್ವವಾದದ ವಿರೋಧ ಬಂದೇ ಬರುತ್ತದೆ. ಈ ಸಂದೇಹವನ್ನು ಪರಿಹಾರ ಮಾಡಲು 'ಯತ್ರ' ಎಂದು ಹೇಳುತ್ತಾರೆ.

**तत्वप्रकाशिका – अतो युक्त्यादेराभासत्वेनाविरोधकत्वायुक्तं जन्मादिकारणत्वं ब्रह्मणो लक्षणमिति स्थितम् ।। १३ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् असदधिकरणम् ।।**

ಆದ್ದರಿಂದ ಅಸತ್ಕಾರಣತ್ವಪ್ರತಿಪಾದನ ಮಾಡುವ ಅನುಮಾನಾದಿಗಳು ಆಭಾಸರೂಪವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವಕ್ಕೆ ವಿರೋಧ ಉಂಟು ಮಾಡುವುದಿಲ್ಲ. ಆದ್ದರಿಂದ ಬ್ರಹ್ಮನ ಜಗತ್ಕಾರಣತ್ವವೆಂಬ ಲಕ್ಷಣವು ಯುಕ್ತವೇ ಆಗಿದೆಯೆಂದು ನಿರ್ಣಯವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಸದಧಿಕರಣ ಮುಗಿಯಿತು

ದ್ವಿತೀಯ ಅಧ್ಯಾಯ-ಪ್ರಥಮ ಪಾದ

## ಅಸದಧಿಕರಣ

(೨-೧-೪)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆ ಸಾರದೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## असदधिकरणम्

ಪ್ರಾಗಭಾಗವಕರ್ತೃತ್ವ ನಿರಾಕರಣೆಗಾಗಿ ಅಸದಧಿಕರಣ

**।। असदिति चेन्न प्रतिषेधमात्रत्वात् ।। अत्र च श्रुत्युपसर्जनकप्रागभाव-कर्तृत्वसाधकयुक्तिविरोधो निरस्यते । नतु समयप्राप्तमसत्कारणत्वम् । तस्य द्वितीये निरसिष्यमाणत्वात् ।**

'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರದಿಂದ ಅಸದಧಿಕರಣವು ಪ್ರಾರಂಭ-ವಾಗುತ್ತಿದೆ. ಈ ಅಧಿಕರಣದಲ್ಲಿ ಶ್ರುತಿಯು ಗೌಣವಾಗಿದೆ, ಯುಕ್ತಿಯು ಪ್ರಬಲವಾಗಿದೆಯೆಂದು ಒಪ್ಪಲಾಗಿದೆ. ಗೌಣವಾದ ಶ್ರುತಿಯ ಸಂವಾದವನ್ನು ಪಡೆದಿರುವ ಯುಕ್ತಿಯು ಜಗತ್ತಿಗೆ ಪ್ರಾಗಭಾವವೇ ಕರ್ತೃವಾಗಿವೆ ಎಂದು ಸಾಧನೆ ಮಾಡುತ್ತದೆ. ಈ ಯುಕ್ತಿಯನ್ನು ನಿರಾಕರಣೆ ಮಾಡುವುದೇ ಅಧಿಕರಣದ ಉದ್ದೇಶ. ಶೂನ್ಯವು ಜಗತ್ತಿಗೆ ಕಾರಣವಾಗುತ್ತದೆಂಬ ಮತವೊಂದಿದೆ. ಅದರ ನಿರಾಕರಣೆ ಈ ಅಧಿಕರಣದ ಉದ್ದೇಶವಲ್ಲ. ಅದನ್ನು ಎರಡನೆಯ ಪಾದವು ನಿರಾಕರಣೆ ಮಾಡುತ್ತದೆ. ಇಲ್ಲಿ ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಣೆ ಮಾಡುವುದೇ ಮುಖ್ಯಉದ್ದೇಶ.

**नापि श्रुतिमात्रप्राप्तम् । तस्य तृतीय एव सङ्गतेः ।**

ಜಗತ್ತಿಗೆ ಪ್ರಾಗಭಾವವು ಕರ್ತೃವಾಗಿದೆ ಎಂಬುದು 'ಅಸತಃ ಸತ್ ಜಾಯತೇ' ಎಂಬ ಶ್ರುತಿಯಿಂದಷ್ಟೇ ಪ್ರಾಪ್ತವಾಗಿಲ್ಲ. ಕೇವಲ ಶ್ರುತಿಯಿಂದ ಪ್ರಾಪ್ತವಾದದ್ದನ್ನು ನಿರಾಕರಣೆ ಮಾಡಲು ಈ ಅಧಿಕರಣ ಹೊರಟರೆ ಅಸಾಂಗತ್ಯ ಬರುತ್ತದೆ. ಶ್ರುತಿಯಿಂದ ಬರುವ ವಿರೋಧಪರಿಹಾರಕ್ಕಾಗಿ ಮೂರನೆಯ ಪಾದವಷ್ಟೇ ಸಂಗತ.

**नापि युक्त्युपसर्जनकश्रुतिप्राप्तम् । तस्य चतुर्थ एव सङ्गतेः ।**

ಶ್ರುತಿ ಹಾಗೂ ಯುಕ್ತಿಗಳ ನಡುವೆ ಯುಕ್ತಿ ದುರ್ಬಲ, ಶ್ರುತಿ ಪ್ರಬಲ ಗೌಣವಾದ ಯುಕ್ತಿಯ ಬೆಂಬಲದಿಂದ ಶ್ರುತಿಯು ಪ್ರಾಗಭಾವಕ್ಕೆ ಕರ್ತೃತ್ವವನ್ನು ಹೇಳುತ್ತಿವೆ. ಅದರ ನಿರಾಕರಣೆಗಾಗಿ ಅಸದಧಿಕರಣ ಹೊರಟಿದೆ ಎಂಬುದೂ ಕೂಡ ಅಸಂಗತ. ಏಕೆಂದರೆ ನಾಲ್ಕನೆಯ ಪಾದ ಹೊರಟಿರುವುದೇ ಗೌಣವಾದ ಯುಕ್ತಿಯ ಬೆಂಬಲ ಹೊಂದಿರುವ ಶ್ರುತಿವಿರೋಧ ಪರಿಹಾರಕ್ಕಾಗಿ. ಪ್ರಥಮಪಾದದಲ್ಲಿ ಅದು ಅನಾವಶ್ಯಕ.

**नापि समप्रधानश्रुतियुक्तिभ्यां प्राप्तम् । तस्य तृतीयेऽपि सङ्गतेः ।**

ಶ್ರುತಿ ಹಾಗೂ ಯುಕ್ತಿಗಳೆರಡು ಸಮಾನಬಲವನ್ನು ಹೊಂದಿವೆ. ಈ ಎರಡು ಪ್ರಮಾಣಗಳಿಂದ ಪ್ರಾಗಭಾವಕ್ಕೆ ಜಗತ್ಕರ್ತೃತ್ವವು ಸಿದ್ಧವಾಗುತ್ತಿವೆ ಎಂದು ಹೇಳುವುದೂ ಕೂಡ ಅಸಂಗತ. ಮೂರನೆಯ ಪಾದದಲ್ಲಿಯೂ ಇಂಥದ್ದೇ ವಿರೋಧ ಪರಿಹಾರವಿದೆ. ಹೀಗಿರುವಾಗ ಇದೇ ಪಾದದಲ್ಲಿ ಸಂಗತವಾಗುತ್ತದೆನ್ನಲು ವಿಶೇಷ ಕಾರಣವಿರುವುದಿಲ್ಲ.

**नापि युक्तिमात्रप्राप्तम् । पूर्वाधिकरणे दृढयुक्तिविरोधे निरस्त इह युक्तिमात्रेण पूर्वपक्षानुदयात् ।**

ಪ್ರಾಗಭಾವಕ್ಕೆ ಕರ್ತೃತ್ವವು ಕೇವಲ ಯುಕ್ತಿಯಿಂದ ಸಿದ್ಧವಾಗುತ್ತಿದೆ ಎನ್ನುವುದೂ ತಪ್ಪು. ಹಿಂದಿನ ಅಭಿಮಾನ್ಯಧಿಕರಣದಲ್ಲಿ ಪ್ರಬಲವಾದ ಯುಕ್ತಿಗಳ ವಿರೋಧವನ್ನು ನಿರಾಕರಿಸಿದ್ದಾಗಿದೆ. ಹೀಗಿರುವಾಗ ಪುನಃ ಸಾಮಾನ್ಯವಾದ ಯುಕ್ತಿಯಿಂದ ಪೂರ್ವಪಕ್ಷ ಹುಟ್ಟಲಾಗದು.

**नापि युक्त्यादिप्राप्तं प्रागभावस्य कारणत्वमात्रम् । तस्य ब्रह्मकर्तृत्वाविरोधित्वेनानिरस नीयत्वात् । तदुक्तमनुव्याख्याने ''अल्पवाक्ययुतायुक्तिर्बहुलैव विरोधिनी'' इति ।**

ಗೌಣವಾದ ಶ್ರುತಿಯ ಸಂವಾದವನ್ನು ಪಡೆದ ಯುಕ್ತಿಯಿಂದ ಪ್ರಾಗಭಾವಕ್ಕೆ ಕಾರಣತ್ವವಷ್ಟೇ ಸಿದ್ಧವಾಗುತ್ತಿಲ್ಲ. ಹಾಗಾದಲ್ಲಿ ಬ್ರಹ್ಮನು ಜಗತ್ತಿಗೆ ಕರ್ತೃವಾಗಿದ್ದಾನೆ ಎಂಬ ಪ್ರಥಮಾಧ್ಯಾಯದ ಪ್ರಮೇಯಕ್ಕೆ ವಿರೋಧವನ್ನು ಮಾಡಿದಂತಾಗುವುದಿಲ್ಲ. ಆದ್ದರಿಂದ ಇದನ್ನೇ ಅನುವ್ಯಾಖ್ಯಾನದಲ್ಲಿ 'ಅಲ್ಪವಾಕ್ಯಯುತಾಯುಕ್ತಿರ್ಬಹುಲೈವ ವಿರೋಧಿನೀ' ಎಂದು ಹೇಳಿದ್ದಾರೆ.

**अत्र ह्यल्पत्वबहुत्वे गुणप्रधानत्वे । अन्यथा ''श्रुतिगुणयुक्तयः'' इत्यनुव्याख्यानविरोधादिति सुधायामुक्तम् ।**

ಅನುವ್ಯಾಖ್ಯಾನದಲ್ಲಿರುವ ಅಲ್ಪಶಬ್ದಕ್ಕೆ ಗೌಣವಾದದ್ದು ಎಂದರ್ಥ. ಬಹುಲಶಬ್ದಕ್ಕೆ ಪ್ರಧಾನವಾದದ್ದು ಎಂದರ್ಥ. ಹೀಗೆ ಅರ್ಥೈಸದಿದ್ದರೆ 'ಶ್ರುತಿಗುಣಯುಕ್ತಯ' ಗುಣಭೂತವಾದ ಶ್ರುತಿಯಿಂದ ಕೂಡಿರುವ ಯುಕ್ತಿಗಳು ಎಂಬ ಅನುವ್ಯಾಖ್ಯಾನದ ವಿರೋಧವು ಬರುತ್ತದೆ. ಹೀಗೆ ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**एवं चेह श्रुतिसूत्रभाष्येष्वसच्छब्दः शतृप्रत्ययस्यासत् अभवनमिति छान्दसेन भावसाधनत्वेन वाऽसदसत्वमिति भावप्रधानत्वेन वाऽभावपरः ।**

ಆದ್ದರಿಂದ ಈ ಅಧಿಕರಣದ 'ಅಸತಃ ಸದಜಾಯತಾ' ಎಂಬ ವಿಷಯವಾಕ್ಯದಲ್ಲಿರುವ ಅಸತ್ ಶಬ್ದವು ಮತ್ತು ಸೂತ್ರ ಭಾಷ್ಯಗಳಲ್ಲಿರುವ ಅಸತ್ ಶಬ್ದವು ಶತೃಪ್ರತ್ಯಯಾಂತವಾಗಿದೆ. ಇದು ಅಭಾವ ಎಂಬರ್ಥದಲ್ಲಿದೆ ಎಂದು ಹೇಳಿದಂತಾಯಿತು. ಶತೃಪ್ರತ್ಯಯವು ಭಾವಸಾಧನವಾಗಿದೆ. 'ಅಸ್' ಧಾತುವಿನ ಮೇಲೆ ಶತೃಪ್ರತ್ಯಯವು ಭಾವಸಾಧನವಾಗಿ ಪ್ರಯುಕ್ತವಾದಾಗ 'ಸತ್' ಶಬ್ದಕ್ಕೆ 'ಇರುವಿಕೆ' ಎಂಬರ್ಥವು ದೊರೆಯುತ್ತದೆ. 'ಅಸತ್'ಶಬ್ದಕ್ಕೆ 'ಇಲ್ಲದಿರುವಿಕೆ' ಎಂಬರ್ಥವು ದೊರೆಯುತ್ತದೆ. ಅಥವಾ ಭಾವಪ್ರಧಾನನಿರ್ದೇಶ ಮಾಡಿದಾಗ ಅಸತ್ ಶಬ್ದಕ್ಕೆ ಅಸತ್ವ ಎಂಬರ್ಥವನ್ನೇ ಹೇಳಿದಂತಾಗುತ್ತದೆ. ಅಸತ್ವಕ್ಕೆ ಅಭಾವ ಎಂದರ್ಥವು ಪ್ರಸಿದ್ಧವೇ ಆಗಿದೆ.

**अत एव टीका "अत्र सर्वत्रासच्छब्देन प्रलयवर्ती प्रागभावोऽभिधीयते । कारणशब्देन च कर्तृ" इति ।**

ಆದ್ದರಿಂದಲೇ ಟೀಕಾದಲ್ಲಿ ಶ್ರುತಿಯಲ್ಲಿರುವ 'ಅತ್ರ ಸರ್ವತ್ರಾಸತ್‌ಶಬ್ದೇನ ಪ್ರಲಯವರ್ತೀ ಪ್ರಾಗಭಾವೋऽಭಿಧೀಯತೇ ಕಾರಣಶಬ್ದೇನ ಚ ಕರ್ತೃ' ಎಲ್ಲೆಡೆ ಇರುವ ಅಸತ್‌ಶಬ್ದದಿಂದ ಪ್ರಲಯಕಾಲದಲ್ಲಿರುವ ಪ್ರಾಗಭಾವವು ವಿವಕ್ಷಿತವಾಗಿದೆ. ಕಾರಣಶಬ್ದದಿಂದ ಕರ್ತೃವಿವಕ್ಷಿತ-ವಾಗಿದೆಯೆಂದು ಹೇಳಿರುತ್ತಾರೆ.

**एवञ्च "इति चेन्न निषेधैकस्वरूपस्य न कर्तृतः" इत्यनुव्याख्यानेनात्रत्य-भाष्यस्याविरोधः ।**

ಹೀಗೆ ವ್ಯಾಖ್ಯಾನ ಮಾಡಿದಾಗ 'ಇತಿ ಚೇನ್ನ ನಿಷೇಧೈಕಸ್ವರೂಪಸ್ಯ ನ ಕರ್ತೃತಃ' ಎಂಬ ಅನುವ್ಯಾಖ್ಯಾನದಲ್ಲಿ ನಿಷೇಧೈಕಸ್ವರೂಪವಾದ ಅಭಾವಕ್ಕೆ ಕರ್ತೃತ್ವವನ್ನು ನಿಷೇಧ ಮಾಡಿದ್ದು ಭಾಷ್ಯಕ್ಕೆ ಅವಿರುದ್ಧವಾಗಿದೆಯೆಂದು ತಿಳಿಸಿದಂತಾಯಿತು.

**नच श्रुतेरुपसर्जनत्वे टीकायां मूलत्वोक्तिविरोधः । राजसेनावच्छ्रुतेर्मूलत्वेन वस्तुतः प्राधान्येऽपि ब्रह्मणः कर्तृत्वनिषेधेनाभीरसेनावद्युक्तेरेवाग्रेसरत्वेन कार्यतः**

**प्राधान्यात् । अत एवोत्तरटीका ''श्रुतिविरोधपरिहारस्य युक्तिविरोधपरिहाराङ्गत्वात्'' इति ।**

ಶ್ರುತಿಯು ಗೌಣವಾಗಿದೆ. ಯುಕ್ತಿಯು ಪ್ರಧಾನವಾಗಿದೆಯೆಂದು ಹೇಳಿದಿರಿ. ಆದರೆ ಟೀಕಾದಲ್ಲಿ ಶ್ರುತಿಯು ಪ್ರಧಾನವಾಗಿದೆಯೆಂದು ಹೇಳಿದ್ದಾರಲ್ಲವೇ ? ಎಂದು ಪ್ರಶ್ನಿಸಬಾರದು. ಏಕೆಂದರೆ ಶ್ರುತಿಯು ರಾಜಸೇನೆಯಂತೆ ಸ್ವರೂಪತಃ ಪ್ರಬಲವಾಗಿದೆ. ಆದರೂ ಕೂಡ ಬ್ರಹ್ಮನಲ್ಲಿರುವ ಕರ್ತೃತ್ವವನ್ನು ನಿಷೇಧ ಮಾಡಲು ಆಭೀರಸೇನೆಯಂತೆ (ಮ್ಲೇಂಛಾದಿ ಜಾತಿಗಳಂತೆ) ವಿಶೇಷಜಾತಿಯನ್ನು ಹೊಂದಿರುವ ಒಂದು ಸೇನೆಯನ್ನು ಆಭೀರಸೇನೆ ಎನ್ನುತ್ತಾರೆ.) ಯುಕ್ತಿಯು ಕಾರ್ಯತಃ ಪ್ರಧಾನವಾಗಿದೆ.

ಅಭಿಪ್ರಾಯವಿಷ್ಟು - ಶ್ರುತಿಯಲ್ಲಿ 'ಅಸತಃ ಸತ್ ಜಾಯತೇ' ಎಂದಷ್ಟೇ ಹೇಳಲಾಗಿದೆ. ಬ್ರಹ್ಮನು ಕಾರಣನಲ್ಲನೆಂದು ಹೇಳುತ್ತಿಲ್ಲ. ಈ ಶ್ರುತಿಯ ಸಹಕಾರದಿಂದ ಯುಕ್ತಿಯು 'ಬ್ರಹ್ಮ ನ ಕರ್ತಾ ಪ್ರಲಯ ಏಕಾಲವರ್ತ್ಯಭಾವಪ್ರತಿಯೋಗಿತ್ವಾತ್' ಎಂಬುದಾಗಿ ಬ್ರಹ್ಮನಲ್ಲಿ ಕರ್ತೃತ್ವವನ್ನು ನಿಷೇಧ ಮಾಡುತ್ತಿದೆ. ಆದ್ದರಿಂದಲೇ ಮುಂದಿನ ಟೀಕೆಯಲ್ಲಿ 'ಶ್ರುತಿವಿರೋಧಪರಿಹಾರಸ್ಯ ಯುಕ್ತಿವಿರೋಧಪರಿಹಾರಾಂಗತ್ವಾತ್' ಶ್ರುತಿವಿರೋಧಪರಿಹಾರವು ಯುಕ್ತಿವಿರೋಧಪರಿಹಾರಕ್ಕೆ ಅಂಗವಾಗಿದೆಯೆಂದು ಹೇಳಿರುತ್ತಾರೆ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः —**

**असदिति चेन्न ।।** अत्र टीकायामधिकरणोपाधेरस्पष्टत्वात्तुच्छकारणताशङ्काप्रतीतेश्च अगतार्थत्वायाधिकरणोपाधिमनुव्याख्यानोक्तं विवृण्वन्नाह **— अत्र चेति ।।**

'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬುದಾಗಿ ಅಸದಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಟೀಕೆಯಲ್ಲಿ ಅಧಿಕರಣದ ಉಪಾಧಿಯನ್ನು ಸ್ಪಷ್ಟವಾಗಿ ಹೇಳಿದಂತೆ ತೋರುವುದಿಲ್ಲ. ಮತ್ತು ಶೂನ್ಯವೇ ಜಗತ್ತಿಗೆ ಕಾರಣವಾಗಿದೆ ಎಂಬುದು ಅಧಿಕರಣದ ಪೂರ್ವಪಕ್ಷವೆಂಬ ಪ್ರತೀತಿ ಬರುತ್ತದೆ. ಹಾಗಾದಲ್ಲಿ ಸಮಯಪಾದದ ಶೂನ್ಯಮತನಿರಾಕರಣೆಯ ಅಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತ್ವದೋಷವು ಬಂದೀತು. ಅದರ ಪರಿಹಾರಕ್ಕಾಗಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಅಧಿಕರಣೋಪಾಧಿಯನ್ನು ಗ್ರಂಥಕಾರರು ಸ್ಪಷ್ಟಪಡಿಸುತ್ತಾ ವಿವರಿಸಲು 'ಅತ್ರ ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಅಸದಧಿಕರಣ (೨-೧-೪)

**प्रकाशः – पदप्रयोजनानि स्वयमेव व्यनक्ति ।। न त्विति ।।** अल्पत्वबहुत्वे गुणप्रधानत्वे इति व्याख्यायां बीजं सुधाभिप्रेतं स्वयमाह – **अन्यथेति ।।**

ಗ್ರಂಥಕಾರರು ಪದವನ್ನು ಪ್ರಯೋಗ ಮಾಡಬೇಕಾದರೆ 'ಶ್ರುತ್ಯುಪಸರ್ಜನಕಪ್ರಾಗಭಾವಕರ್ತೃತ್ವಸಾಧಕ ಯುಕ್ತಿವಿರೋಧಃ' ಎಂದು ಹೇಳಿರುತ್ತಾರೆ. ಶ್ರುತ್ಯುಪಸರ್ಜನಕವಾದ ಯುಕ್ತಿಯಿಂದ ಲಭ್ಯವಾಗುವ ಶೂನ್ಯಕ್ಕೆ ಕರ್ತೃತ್ವವನ್ನು ಹೇಳದೇ ಪ್ರಾಗಭಾವಕ್ಕೆ ಕರ್ತೃತ್ವವನ್ನು ಹೇಳಲು ಪ್ರಾಗಭಾವಕಕರ್ತೃಕ ಎಂದು ಹೇಳಿದರು. ಕಾರಣತ್ವ ಪದವನ್ನು ಪ್ರಯೋಗ ಮಾಡದೇ, ಕರ್ತೃತ್ವಪದವನ್ನೂ ಕೂಡ ಪ್ರಯೋಗ ಮಾಡಿದ್ದಾರೆ. ಈ ಪದಗಳ ಕೃತ್ಯವನ್ನು ಸ್ವತಃ ತಾವೇ 'ನತು' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

'ಅಲ್ಪವಾಕ್ಯಯುತಾಕಾಯುಕ್ತಿಃ ಬಹುಲೈವ ವಿರೋಧಿನೀ' ಎಂಬ ಅನುವ್ಯಾಖ್ಯಾನದಲ್ಲಿರುವ ಅಲ್ಪಶಬ್ದಕ್ಕೆ ಗೌಣವಾದದ್ದು ಎಂದರ್ಥ. ಬಹು ಶಬ್ದಕ್ಕೆ ಪ್ರಧಾನವಾದದ್ದು ಎಂದರ್ಥ. ಹೀಗೆ ವ್ಯಾಖ್ಯಾನಿಸಲು ನ್ಯಾಯಸುಧೆಯ ಸಮ್ಮತಿಯಿದೆ ಎಂದು 'ಅನ್ಯಥಾ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः –**

स्मृतियुक्तिश्रुतिगुणयुक्तयो बहुयुक्तयः ।
एवं चतुर्विधा नैव विरुध्यन्तेऽन्वयं प्रति ।।

इति प्रथमपादेन निर्णीतेऽपि'' इति समयपादीयानुव्याख्याने श्रुतिगुणयुक्तिपदोक्तिविरोधादित्यर्थः । एतच्च पादान्ते स्वयमेव व्याकरिष्यति ।।

ಸ್ಮೃತಿಯುಕ್ತಿಶ್ರುತಿಗುಣಯುಕ್ತಯೋ ಬಹುಯುಕ್ತಯಃ।
ಏವಂ ಚತುರ್ವಿಧಾ ನೈವ ವಿರುಧ್ಯಂತೇऽನ್ವಯಂ ಪ್ರತಿ॥
ಇತಿ ಪ್ರಥಮಪಾದೇನ ನಿರ್ಣೀತೇऽಪಿ''

ಸಕಲ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ಸಿದ್ಧಾಂತಕ್ಕೆ ನಾಲ್ಕು ರೀತಿಯ ವಿರೋಧಗಳು ಬರಬಹುದು. ಶ್ರುತಿಗಳ ವಿರೋಧ, ಯುಕ್ತಿಗಳ ವಿರೋಧ, ಶ್ರುತ್ಯಪಸರ್ಜನಕ ಯುಕ್ತಿವಿರೋಧ, ಬಹುಯುಕ್ತಿಗಳ ವಿರೋಧ ಎಂದು. ಈ ನಾಲ್ಕು ರೀತಿಯ ವಿರೋಧಗಳನ್ನು ಹಿಂದಿನ ಪಾದದ ನಿರಾಕರಣೆ ಮಾಡಿದ್ದಾಗಿದೆ. ಆದರೂ ಕೂಡ ಇಲ್ಲಿ ಪ್ರಬಲವಾದ ಸಮಯಗಳ ವಿರೋಧವು ಪ್ರಾಪ್ತವಾದರೆ ಸಕಲಶಬ್ದಗಳ ಸಮನ್ವಯ ಬ್ರಹ್ಮನಲ್ಲಿ ಕೂಡುವುದಿಲ್ಲವೆಂಬ ಆಶಂಕೆ ಬರುತ್ತದೆ. ಆದಕ್ಕಾಗಿ ಮುಂದಿನ ಅಧಿಕರಣವು ಹೊರಟಿದೆ.

ಹೀಗೆ ಸಮಯಪಾದದ ಪ್ರಾರಂಭದ ರಚನಾನುಪತ್ತ್ಯಧಿಕರಣದಲ್ಲಿ ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಅನುವ್ಯಾಖ್ಯಾನ ಶ್ಲೋಕದಲ್ಲಿ 'ಶ್ರುತಿಗುಣಯುಕ್ತಯಃ' ಎಂದು ಹೇಳಿದ್ದರಿಂದ ಶ್ರುತ್ಯುಪಸರ್ಜನಕವಾದ ಯುಕ್ತಿಗಳ ವಿರೋಧವನ್ನು ಹೇಳಿದ್ದಾರೆ. ಇಲ್ಲಿರುವ ಗುಣಶಬ್ದಕ್ಕೆ ಗೌಣವೆಂದೇ ಅರ್ಥ. ಆದ್ದರಿಂದ ಪ್ರಕೃತದಲ್ಲಿ 'ಅಲ್ಪವಾಕ್ಯಯುತಾಯುಕ್ತಿರ್ಬಹುಲೈವವಿರೋಧಿನೀ'ಎಂಬ

ಅಲ್ಪಶಬ್ದಕ್ಕೆ ಗೌಣವಾದದ್ದು ಎಂಬರ್ಥವನ್ನೇ ತಿಳಿಯಬೇಕು. ಇಲ್ಲದಿದ್ದರೆ ಸಮಯಪಾದದ ಅನುವ್ಯಾಖ್ಯಾನದ ವಿರೋಧವು ಬಂದೀತು. ಈ ಶ್ಲೋಕವನ್ನು ಗ್ರಂಥಕಾರರು ಪಾದದ ಕೊನೆಯಲ್ಲಿ ಸ್ವತಃ ತಾವೇ ವ್ಯಾಖ್ಯಾನ ಮಾಡುತ್ತಾರೆ. ಆದ್ದರಿಂದ ಹೆಚ್ಚು ವಿವರಿಸಿಲ್ಲ.

**प्रकाशः** – प्रागभावकर्तृत्वेत्युक्तं प्रमेयं सूत्राद्यारूढं करोति – **एवञ्चेति** ।। उक्तस्यैवैतदधिकरणप्रमेयत्वे सतीत्यर्थः ।

ಪ್ರಾಗಭಾವವೇ ಜಗತ್ತಿಗೆ ಕರ್ತೃವಾಗಿದೆ ಎಂಬ ಪ್ರಮೇಯವು ಸೂತ್ರದಿಂದ ಹೇಗೆ ತಿಳಿಯುತ್ತದೆ ಎಂಬುದನ್ನು 'ಏವಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಅಸತ್' ಎಂಬ ಶಬ್ದಕ್ಕೆ 'ಪ್ರಾಗಭಾವ' ಎಂದರ್ಥ. 'ಕಾರಣ' ಶಬ್ದಕ್ಕೆ 'ಕರ್ತೃ' ಎಂದರ್ಥ. ಇಲ್ಲಿಯ ತನಕ ಹೇಳಿರುವುದೇ ಅಧಿಕರಣ ಪ್ರಮೇಯವೆಂದು ಸಿದ್ಧವಾದ್ದರಿಂದ ಎಂಬುದಾಗಿ 'ಏವಂಚ' ಎಂಬ ಪದದ ಅರ್ಥವನ್ನು ತಿಳಿಯಬೇಕು.

**प्रकाशः** – अस भुवीत्यस्य ''लटश्शतृशानचावप्रथमासमानाधिकरणे'' इति शतृप्रत्यये ''श्नसोरल्लोप'' इत्यकारलोपे सदिति रूपम् । तस्य नञ्समासेऽसदिति भवति ।

'ಅಸ ಭುವಿ' ಎಂಬ ಧಾತುವಿನ ಮೇಲೆ 'ಲಟಃಶತೃಶಾನಚಾವಪ್ರಥಮಾಸಮಾನಾಧಿಕರಣೇ' ಎಂಬ ಸೂತ್ರದಿಂದ ಶತೃಪ್ರತ್ಯಯವು ಪ್ರಾಪ್ತವಾಗುತ್ತದೆ. ಶತೃಪ್ರತ್ಯಯದಲ್ಲಿ ಶಕಾರವು 'ಶ್ನಸೋರಲ್ಲೋಪಃ' ಎಂಬ ಸೂತ್ರದಿಂದ ಲೋಪವಾಗಿ ರುಕಾರವೂ ಕೂಡ ಲೋಪವಾದಾಗ 'ಅತ್' ಎಂದಷ್ಟೇ ಉಳಿಯುತ್ತದೆ. ಆವಾಗ ಇರುವಿಕೆ ಎಂಬರ್ಥದಲ್ಲಿ ಸತ್ ಎಂಬ ಪದವು ನಿಷ್ಪನ್ನವಾಗುತ್ತದೆ. 'ನ ಸತ್ ಅಸತ್' ಎಂಬ ನಿಷ್ಪತ್ತಿಯಿಂದ ಅಸತ್‌ಶಬ್ದಕ್ಕೆ ಇಲ್ಲದಿರುವಿಕೆ ಎಂಬರ್ಥವು ತಿಳಿಯುತ್ತದೆ. 'ನ ಸತ್ ಅಸತ್'ಎಂಬುದಾಗಿ ನಞ್‌ಸಮಾಸವನ್ನು ಮಾಡಿದಾಗ ಇಲ್ಲದಿರುವಿಕೆ ಎಂಬರ್ಥವು ದೊರೆಯುತ್ತದೆ.

**प्रकाशः** – ननु ''लः कर्मणि च भावे च'' इति विहितकर्त्रर्थकलट्प्रत्ययस्यैव शतृप्रत्ययविधानात्कथमभावार्थत्वमित्यत आह – **छान्दसेनेति** ।।

'ಲಃ ಕರ್ಮಣಿ ಚ ಭಾವೇ ಚ ಅಕರ್ಮಕೇಭ್ಯಃ' ಎಂಬ ಸೂತ್ರದಲ್ಲಿ ಕರ್ತ್ರರ್ಥದಲ್ಲಿ ವಿಹಿತವಾದ ಲಟ್ ಪ್ರತ್ಯಯಕ್ಕೆ ಮಾತ್ರ ಶತೃ ಪ್ರತ್ಯಯವನ್ನು ಆದೇಶವಾಗಿ ವಿಹಿತವಾಗಿದೆ. ಆದ್ದರಿಂದ ಶತೃಪ್ರತ್ಯಯವೂ ಕೂಡ ಕರ್ತರ್ಥದಲ್ಲಿಯೇ ಬರಬೇಕು. ಹೀಗಿರುವಾಗ ನೀವು ಭಾವಾರ್ಥದಲ್ಲಿ ಶತೃ ಪ್ರತ್ಯಯ ಬರುತ್ತದೆಂದು ಹೇಗೆ ಹೇಳಿದಿರಿ ? ಈ ಪ್ರಶ್ನೆಗೆ 'ಛಾಂದಸೇನ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಛಾಂದಸಪ್ರಯೋಗವಾದ್ದರಿಂದ ಭಾವಾರ್ಥದಲ್ಲಿ ಶತೃಪ್ರತ್ಯಯ ಬಂದಿದೆಯೆಂದು ತಿಳಿಯಬೇಕು.

**प्रकाशः** – एतेन ''असच्छब्दोऽत्र भावसाधन'' इति सुधा विवृता ।। **भावेति**।। ''द्व्येकयोर्द्विवचनैकवचने । मुक्तोपसृप्यव्यपदेशात्'' इत्यादाविवेति भावः ।।

ಇದರಿಂದ 'ಅಸತ್‌ಶಬ್ದೋSತ್ರ ಭಾವಸಾಧನಃ' ಅಸತ್ ಶಬ್ದವು ಭಾವಸಾಧನವಾಗಿದೆಯೆಂಬ ಸುಧೆಯನ್ನೂ ಕೂಡ ವಿವರಿಸಿದಂತಾಯಿತು.

ಅಥವಾ ಭಾವಪ್ರಧಾನನಿರ್ದೇಶ ಮಾಡಿದಾಗ ಅಸತ್ವ ಎಂಬರ್ಥವು ದೊರೆಯುತ್ತದೆ. ಈ ರೀತಿಯ ಪ್ರಯೋಗವು ವ್ಯಾಕರಣದಲ್ಲಿಯೂ ಕೂಡ ಇರುತ್ತದೆ. 'ದ್ವ್ಯೇಕಯೋಃ ದ್ವಿವಚನೈಕವಚನೇ' ಎಂಬ ಪಾಣಿನಿ ಸೂತ್ರದಲ್ಲಿ ದ್ವಿ ಮತ್ತು ಏಕ ಎಂಬೆರಡು ಶಬ್ದಗಳಲ್ಲಿ ಭಾವಪ್ರಧಾನವನ್ನು ನಿರ್ದೇಶ ಮಾಡಿ, ದ್ವಿತ್ವ ಮತ್ತು ಏಕತ್ವಗಳು ವಿವಕ್ಷಿತವಾದಾಗ, ದ್ವಿವಚನ ಮತ್ತು ಏಕವಚನಗಳು ಬರುತ್ತವೆಂದು ವ್ಯಾಖ್ಯಾನಿಸಲಾಗಿದೆ. ಒಂದುವೇಳೆ ಭಾವಪ್ರಧಾನನಿರ್ದೇಶ ಮಾಡದಿದ್ದರೆ 'ಏಕೇಷಾಂ' ಎಂದು ಹೇಳಬೇಕಿತ್ತು. ಮತ್ತು 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಲ್ಲಿ ಮುಕ್ತೋಪಸೃಪ್ಯತ್ವವ್ಯಪದೇಶಾತ್ ಎಂಬುದಾಗಿ ಭಾವಪ್ರಧಾನನಿರ್ದೇಶವನ್ನು ಮಾಡಲಾಗಿದೆ.

**प्रकाशः – निषेधैकेति ।।** तुच्छस्य निस्स्वरूपत्वेन निषेधस्वरूपत्वोक्तयाऽभाव परत्वप्रतीतेरिति भावः ।

ಶೂನ್ಯವು ಜಗತ್ತಿಗೆ ಕಾರಣವಾಗಿದೆಯೆಂದು ಆಕ್ಷೇಪ ಮಾಡುವುದಾದರೆ ಅದು ನಿಃಸ್ವರೂಪವಾಗಿದೆ. ಆದ್ದರಿಂದ ನಿಷೇಧೈಕಸ್ವರೂಪಸ್ಯ ಎಂಬುದಾಗಿ ಆಚಾರ್ಯರು ಹೇಳಿರುತ್ತಾರೆ. ತುಚ್ಛಕ್ಕೆ ಸ್ವರೂಪವೇ ಇಲ್ಲದ ಕಾರಣ ನಿಷೇಧೈಕಸ್ವರೂಪತ್ವವನ್ನು ಹೇಳಲಾಗದು. ಆದರೆ ಅಭಾವವು ಸತ್‌ಸ್ವರೂಪವಾದ್ದರಿಂದ ನಿಷೇಧೈಕಸ್ವರೂಪತ್ವವನ್ನು ಹೇಳಬಹುದು. ಹೀಗೆ ನಿಷೇಧೈಕಸ್ವರೂಪಸ್ಯ ಎಂಬ ಅನುವ್ಯಾಖ್ಯಾನದಿಂದಲೇ ಪ್ರಾಗಭಾವಸ್ವರೂಪತ್ವವೇ ಈ ಅಧಿಕರಣದ ಆಕ್ಷೇಪವೆಂದು ತಿಳಿಯುತ್ತದೆ.

**प्रकाशः – अत्रैके चोदयन्ति ।** श्रुत्यादौ सर्वत्रासच्छब्देन शून्यमेवाभिमतम् । नतु प्रागभावः। भाष्ये ''श्रुतिप्राप्तमेवासन्मतमत्र निषिध्यते । समयस्योपरि निषेधात्'' इत्युक्तेः ।

(೧)ಕೆಲವರು ಹೀಗೆ ಪ್ರಶ್ನಿಸುತ್ತಾರೆ - ಶ್ರುತಿಯಲ್ಲಿ ಎಲ್ಲೆಡೆ ಇರುವ ಅಸತ್‌ಶಬ್ದದಿಂದ ಶೂನ್ಯವನ್ನೇ ವಿವಕ್ಷಿಸಬೇಕು ಹೊರತು, ಪ್ರಾಗಭಾವವನ್ನು ವಿವಕ್ಷಿಸಬಾರದು. ಏಕೆಂದರೆ ಭಾಷ್ಯದಲ್ಲಿ ಸ್ಪಷ್ಟವಾಗಿ 'ಶ್ರುತಿಪ್ರಾಪ್ತಮೇವಾಸನ್ಮತಮತ್ರ ನಿಷಿಧ್ಯತೇ । ಸಮಯಸ್ಯೋಪರಿ ನಿಷೇಧಾತ್' ಶ್ರುತಿಪ್ರಾಪ್ತವಾದ

(೧) ಭಾವಬೋಧಕಾರರಾದ ಶ್ರೀರಘೂತ್ತಮತೀರ್ಥಶ್ರೀಪಾದರು, ವಾಕ್ಯಾರ್ಥಮುಕ್ತಾವಳೀಕಾರರಾದ ತಾಮ್ರಪರ್ಣಿ ಆಚಾರ್ಯರು, ಶರ್ಕರಾ ಟಪ್ಪಣಿ ಆಚಾರ್ಯರು, ಮೊದಲಾದವರೆಲ್ಲರೂ ಸೂತ್ರದಲ್ಲಿರುವ 'ಅಸತ್' ಶಬ್ದಕ್ಕೆ 'ಶೂನ್ಯ' ಎಂಬರ್ಥವನ್ನು ಸ್ವೀಕರಿಸಿ, ಶೂನ್ಯಮತದ ನಿರಾಕರಣೆಗೆಂದೇ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಭಾವದೀಪದಲ್ಲಿ ಮತ್ತು ಚಂದ್ರಿಕೆಯಲ್ಲಿ ಪ್ರಾಗಭಾವಕರ್ತೃತ್ವಪಕ್ಷದ ನಿರಾಕರಣೆಯೇ ಈ ಅಧಿಕರಣದ ಉದ್ದೇಶವೆಂದು ಸಮರ್ಥಿಸಿದ್ದಾರೆ. ಹೀಗೆ ಅಸದಧಿಕರಣದಲ್ಲಿ ತತ್ವಪ್ರಕಾಶಿಕೆಯ ಟಪ್ಪಣಿಗಳಲ್ಲಿ ಬಹಳ ವಿವಾದವಿದೆ. ಈ ವಿವಾದವನ್ನೆಲ್ಲಾ ರಾಯರು ಸ್ವತಃ ಅನುವಾದ ಮಾಡಿ ಬಗೆಹರಿಸುತ್ತಿದ್ದಾರೆ.

ಶೂನ್ಯಮತದ ನಿರಾಕರಣೆಯೇ ಈ ಅಧಿಕರಣದ ಉದ್ದೇಶ. ಸಮಯದಿಂದ ಪ್ರಾಪ್ತವಾದ ಶೂನ್ಯಮತವನ್ನು ಮುಂದೆ ದ್ವಿತೀಯಪಾದದಲ್ಲಿ ನಿರಾಕರಿಸುತ್ತಾರೆ ಎಂದು ಹೇಳಿದ್ದಾರೆ.

**प्रकाशः** – नहि प्रागभावकर्तृत्वप्रापकस्समयोऽस्ति । टीकायामपि ''शशविषाणादीनां किञ्चित्प्रति कारणत्वं सम्भवति'' इत्याद्युक्तेश्चेति ।

ನಿಮ್ಮ ಪ್ರಕಾರ ಪ್ರಾಗಭಾವವೇ ಜಗತ್ತಿಗೆ ಕರ್ತೃ ಎಂಬ ಪಕ್ಷವನ್ನು ವಿವಕ್ಷಿಸಲು ಅಂತಹ ಯಾವುದೇ ಸಮಯಗಳು ಇರುವುದಿಲ್ಲ. ಟೀಕೆಯಲ್ಲಿಯೂ ಕೂಡ 'ಶಶವಿಷಾಣಾದೀನಾಂ ಕಿಂಚಿತ್ ಪ್ರತಿ ಕಾರಣತ್ವಂ ಸಂಭವತಿ' ಶಶವಿಷಾಣಾದಿಗಳೆಂಬ ಅಸತ್ ಪದಾರ್ಥವು ಯಾವುದಕ್ಕೂ ಕೂಡ ಕಾರಣವಾಗಲು ಸಾಧ್ಯವಿಲ್ಲ ಎಂದು ಹೇಳಿರುತ್ತಾರೆ. ಆದ್ದರಿಂದ ಪ್ರಾಗಭಾವಕರ್ತೃತ್ವಪಕ್ಷವನ್ನು ನಿರಾಕರಣೆ ಮಾಡುವುದೇ ಈ ಅಧಿಕರಣದ ಉದ್ದೇಶವೆಂದು ಹೇಗೆ ಹೇಳುತ್ತೀರಿ ?

**प्रकाशः** – अत्र समाधिमाहुः । तुच्छमिति पूर्वपक्षे नियतप्राक्सत्वरूप-हेतुत्वायोगात् । ''आसीत्'' इति सत्त्वोक्तिविरोधाच्च ।

ಸಮಾಧಾನ - ಹೀಗೆ ಸಮಾಧಾನವನ್ನು ತಿಳಿಯಬೇಕು - ಸಾಮಾನ್ಯವಾಗಿ ತುಚ್ಛವನ್ನು ಜಗತ್ ಕಾರಣವೆಂದು ಹೇಳುತ್ತಿದ್ದೀರೋ, ಅಥವಾ ತುಚ್ಛವಿಶೇಷವೆನಿಸಿದ ಶೂನ್ಯವನ್ನು ಜಗತ್‌ಕಾರಣವೆಂದು ಹೇಳುತ್ತೀರೋ? ಸಾಮಾನ್ಯವಾದ ತುಚ್ಛವೆಂದರೆ ಕೇವಲ ಅತ್ಯಂತಾಭಾವಪ್ರತಿಯೋಗಿಯಾದ ಪದಾರ್ಥ ಎಂದರ್ಥ. ತುಚ್ಛವೇ ಜಗತ್ತಿಗೆ ಕಾರಣವೆಂದು ಪೂರ್ವಪಕ್ಷ ಮಾಡಲು ಬರುವುದಿಲ್ಲ. ಕಾರಣತ್ವವು ನಿಯತಪ್ರಾಕ್ಸತ್ವರೂಪವಾದದ್ದು. ನಿಯಮೇನ ಕಾರ್ಯಕ್ಕಿಂತ ಪೂರ್ವಭಾವಿಯಾಗಿ ಅಸತ್ತಾಗಿರಬೇಕೆಂದು ಇದರ ಅರ್ಥ. ತುಚ್ಛದಲ್ಲಿ ಸತ್ವವಿರಲು ಸಾಧ್ಯವೇ ಇಲ್ಲದ ಕಾರಣ ಇದಕ್ಕೆ ಕಾರಣತ್ವವನ್ನು ಆಕ್ಷೇಪ ಮಾಡಲು ಸಾಧ್ಯವೇ ಆಗುವುದಿಲ್ಲ. ಮತ್ತು 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ 'ಆಸೀತ್' ಎಂಬ ಪ್ರಯೋಗವಿದೆ. ಯಾವುದು ಮೂರುಕಾಲದಲ್ಲಿಯೂ ಇರುವುದಿಲ್ಲವೋ, ಅತ್ಯಂತಾಭಾವಪ್ರತಿಯೋಗಿ-ಯಾಗಿರುತ್ತದೋ, ಅದರಲ್ಲಿ 'ಆಸೀತ್' ಎಂಬುದಾಗಿ ಸತ್ವವನ್ನು ಹೇಳಿದ್ದು ತಪ್ಪಾಗುತ್ತದೆ.

**प्रकाशः** – तुच्छकारणत्वप्रापकसमयाभावेन भाष्यास्वारस्यस्य तुल्यत्वाच्च ।

ಮತ್ತು ತುಚ್ಛಕಾರಣತ್ವಪ್ರಾಪಕವಾದ ಯಾವುದೇ ಸಮಯವೇ ಇರುವುದಿಲ್ಲ. ಆದ್ದರಿಂದ 'ಶ್ರುತಿಪ್ರಾಪ್ತಮೇವಾಸನ್ನತ್ರಮತ್ರ ನಿಷಿಧ್ಯತೇ' ಎಂಬ ಭಾಷ್ಯದ ವಾಕ್ಯಕ್ಕೆ ಅಸ್ವರಸವಾದ ಅರ್ಥವನ್ನು ನೀವು ಸ್ವೀಕರಿಸಿದಂತಾಗುತ್ತದೆ.

**प्रकाशः** – अत एव शून्यमित्यपि पूर्वपक्षो न युक्तः । हेतुत्वाद्ययोगात् ।

ಇನ್ನು ತುಚ್ಛವಿಶೇಷವೆನಿಸಿದ ಶೂನ್ಯವನ್ನು ವಿವಕ್ಷಿಸಿ ಪೂರ್ವಪಕ್ಷ ಮಾಡಬೇಕು. ಈ ಪಕ್ಷವೂ ಕೂಡ ಅಸಾಧು. ಏಕೆಂದರೆ ನಿಯಮೇನ ಪೂರ್ವಭಾವಿಯಾಗಿ ಸತ್ ಆಗಿರಬೇಕು ಎಂಬ ಕಾರಣತ್ವವು

ಶೂನ್ಯದಲ್ಲಿಯೂ ಕೂಡ ಯುಕ್ತವಾಗುವುದಿಲ್ಲ. ಮತ್ತು ಆಸೀತ್ ಎಂಬ ಪದಪ್ರಯೋಗವೂ ಕೂಡ ಇದರಲ್ಲಿ ಸಾಧುವಾಗುವುದಿಲ್ಲ.

**ಪ್ರಕಾಶಃ** – तस्य तत्वतया शून्यवादाङ्गीकारेण सत्स्वरूपत्वाङ्गीकारे च ''नहि शशविषाण'' इत्यादि टीकानुपपत्तेः ।

ಶೂನ್ಯವು ಸಮಯಪ್ರಾಪ್ತವೆಂದು ಹೇಳುವುದಿಲ್ಲ. ಶ್ರುತಿಪ್ರಾಪ್ತವೆಂದೇ ಹೇಳುತ್ತೇವೆ. ಶ್ರುತಿಯಿಂದಷ್ಟೇ ಪೂರ್ವಪಕ್ಷವನ್ನು ಉಪಪಾದನೆ ಮಾಡುತ್ತೇವೆ. ಶ್ರುತ್ಯುಪಸರ್ಜನಕವಾದ ಯುಕ್ತಿಯಿಂದ ಉಂಟಾಗುವ ಪೂರ್ವಪಕ್ಷವೇ ಈ ಅಧಿಕರಣದಲ್ಲಿ ಇರುತ್ತದೆ. ಈ ಪೂರ್ವಪಕ್ಷದಲ್ಲಿ ಶೂನ್ಯವಾದಿಗಳೆನಿಸಿದ ಮಾಧ್ಯಂದಿನರ ಮತದಂತೆ ಇದನ್ನು ಉಪಪಾದನೆ ಮಾಡಬಹುದು. ಏಕೆಂದರೆ ಶೂನ್ಯವು ಬೌದ್ಧಮತದಲ್ಲಿ ಅತ್ಯಂತ ಅಸತ್ ರೂಪವಾಗಿಲ್ಲ, ತತ್ವವೆಂದು ಒಪ್ಪಲಾಗಿದೆ. ಯಾವಾಗ ಅಸತ್ ಎಂದು ಒಪ್ಪುತ್ತಾರೋ, ಆವಾಗ ಕಾರಣತ್ವವು ಅದರಲ್ಲಿ ಯುಕ್ತವಾಗುತ್ತದೆ.

ಹೀಗೆ ಶೂನ್ಯವನ್ನು ತತ್ವವೆಂದು ವಿವಕ್ಷಿಸಿ ಪೂರ್ವಪಕ್ಷ ಮಾಡಬಾರದು. ಹಾಗಾದರೆ 'ನಹಿ ಶಶವಿಷಾಣಾದೀನಾಮ್' ಎಂಬ ಟೀಕಾವಾಕ್ಯವೇ ಅನುಪಪನ್ನವಾಗುತ್ತದೆ.

**ಪ್ರಕಾಶಃ** – भाष्यं तु समयप्राप्तं शून्यमेवात्राशङ्क्य निषिध्यत इति कुतो नेत्यतः प्रवृत्तमित्युपपन्नम् । टीकायां तथैवावतार्य व्याख्यातत्वात् ।

ಈ ಅಧಿಕರಣದಲ್ಲಿ ಪ್ರಾಗಭಾವಕರ್ತೃತ್ವವನ್ನು ನಿರಾಕರಣೆ ಮಾಡುವ ಉದ್ದೇಶವಿದ್ದರೆ 'ಶ್ರುತಿಪ್ರಾಪ್ತಮೇವ' ಇತ್ಯಾದಿ ಭಾಷ್ಯದ ವಿರೋಧ ಬರುತ್ತದೆ. ಏಕೆಂದರೆ ಪ್ರಾಗಭಾವಕರ್ತೃತ್ವಪಕ್ಷವು ಒಂದು ಸಮಯವೇ ಅಲ್ಲವೆಂದು ಸಮರ್ಥಿಸಲಾಯಿತು. ಇದು ಸರಿಯಲ್ಲ. ಪ್ರಾಗಭಾವಕರ್ತೃತ್ವನಿರಾಕರಣೆಯನ್ನೇ ಸೂತ್ರವು ಏಕೆ ಮಾಡಬೇಕು ? ಸಮಯಪ್ರಾಪ್ತವಾದ ಶೂನ್ಯಮತದ ನಿರಾಕರಣೆಯನ್ನು ಏಕೆ ಮಾಡಬಾರದು ? ಎಂಬ ಆಶಂಕೆಗೆ ಉತ್ತರಿಸಲು 'ಶ್ರುತಿಪ್ರಾಪ್ತಮೇವ' ಎಂಬ ಭಾಷ್ಯವು ಹೊರಟಿದೆ. ಪ್ರಾಗಭಾವಕರ್ತೃತ್ವಪಕ್ಷದ ನಿರಾಕರಣೆಯನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಹೊರತು, ಶೂನ್ಯವಾದದ ನಿರಾಕರಣೆಯನ್ನು ಇಲ್ಲಿ ಮಾಡಿರುವುದಿಲ್ಲ. ಏಕೆಂದರೆ ಅದರ ನಿರಾಕರಣೆಗಾಗಿ ಎರಡನೆಯ ಪಾದದ ಅಧಿಕರಣವು ಹೊರಟಿರುತ್ತವೆ ಎಂಬುದು ಭಾಷ್ಯದ ಅಭಿಪ್ರಾಯ. ಭಾಷ್ಯದ ಈ ಮಾತಿಗೆ ಟೀಕೆಯಲ್ಲಿ ಹೀಗೆಯೇ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಿರುತ್ತಾರೆ.

**ಪ್ರಕಾಶಃ** – ''शशविषाण'' इत्यादिटीकापाठपक्षेऽपि यथा शशविषाणादेर्न कारणत्वं तथा प्रागभावस्यापि न कर्तृत्वमिति दृष्टान्तपरतया युज्यते ।

ಶೂನ್ಯವಾದ ನಿರಾಕರಣೆಯನ್ನು ಈ ಅಧಿಕರಣದ ಉದ್ದೇಶವೆಂದು ಒಪ್ಪದಿದ್ದರೆ 'ನಹಿ 'ಶಶವಿಷಾಣಾದೀನಾಮ್ ಕಿಂಚಿತ್‌ಪ್ರತಿಕಾರಣತ್ವಮ್ ಸಂಭವತಿ' ಎಂಬ ಟೀಕೆಯ ವಿರೋಧ ಬರುತ್ತದೆಂದು ಸಮರ್ಥಿಸಿದ್ದರು. ಇದೂ ಕೂಡ ಸರಿಯಲ್ಲ. ಶೂನ್ಯಮತದ ನಿರಾಕರಣೆಗಾಗಿ ಟೀಕೆಯ ಈ ವಾಕ್ಯ ಹೊರಟಿಯೇ ಇಲ್ಲ. ವಾಸ್ತವಿಕವಾಗಿ ಟೀಕಾದಲ್ಲಿ ಈ ವಾಕ್ಯವು ಪ್ರಕ್ಷಿಪ್ತ. ಒಂದು ವೇಳೆ ಈ ಪಾಠವನ್ನು

ವಿವಕ್ಷಿಸಿದರೂ ಹೀಗೆ ಅರ್ಥೈಸಬೇಕು - ಯಾವರೀತಿಯಾಗಿ ಶಶವಿಷಾಣಾದಿಗಳಿಗೆ ಕಾರಣತ್ವವಿರುವುದಿಲ್ಲವೋ, ಅದರಂತೆ ಪ್ರಾಗಭಾವಕ್ಕೂ ಕೂಡ ಕರ್ತೃತ್ವವಿರುವುದಿಲ್ಲ ಎಂಬ ದೃಷ್ಟಾಂತಕ್ಕೋಸ್ಕರ 'ನಹಿ ಶಶವಿಷಾಣಾದೀನಾಮ್' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ.

**प्रकाशः** – शास्त्रयोनिसूत्रे ''नहि धर्मादिनिश्चयोऽनुमानेन'' इति वाक्यवत् । नहि तत्र तदनुरोधेन धर्मस्य पूर्वपक्षे विषयत्वमस्ति ।

ಶಾಸ್ತ್ರಯೋನಿಸೂತ್ರದಲ್ಲಿ 'ನಹಿ ಧರ್ಮಾದಿನಿಶ್ಚಯೋಽನುಮಾನೇನ' ಎಂಬ ವಾಕ್ಯವಿದೆ. ಪಾಶುಪತಾದಿ ಶಾಸ್ತ್ರಗಳಿಂದ ರುದ್ರಾದಿಗಳಿಗೆ ಜಗತ್‌ಕರ್ತೃತ್ವವು ಸಿದ್ಧವಾಗುತ್ತದಲ್ಲವೇ? ಎಂಬ ಆಕ್ಷೇಪವನ್ನು ಮಾಡುವ ಸಂದರ್ಭದಲ್ಲಿ 'ನಹಿ ಧರ್ಮಾದಿನಿಶ್ಚಯಃ' ಇತ್ಯಾದಿ ವಾಕ್ಯ ಹೊರಟಿದೆ. ಅನುಮಾನದಿಂದ ಧರ್ಮಾದಿಗಳನ್ನು ನಿಶ್ಚಯಿಸಲು ಸಾಧ್ಯವಿಲ್ಲ. ಅದರಂತೆ ಪಾಶುಪತಾದಿಶಾಸ್ತ್ರಗಳಿಂದ ರುದ್ರಾದಿಗಳಿಗೆ ಜಗತ್‌ಕರ್ತೃತ್ವವನ್ನೂ ಕೂಡ ಸಾಧಿಸಲು ಬರುವುದಿಲ್ಲ ಎಂದು ಉದಾಹರಿಸುವುದಕ್ಕಾಗಿ ಮಾತ್ರ ಈ ವಾಕ್ಯವಿದೆ. ಹೊರತು, ಈ ವಾಕ್ಯವನ್ನು ನೋಡಿ, ಧರ್ಮವನ್ನೂ ಕೂಡ ಪೂರ್ವಪಕ್ಷಕ್ಕೆ ವಿಷಯವೆಂದು ಹೇಳಬಾರದು.

**प्रकाशः** – शून्यमिति पक्षेऽपि शशविषाणादीत्यादिवाक्यायोगाच्च ।

ಶೂನ್ಯವೇ ಜಗತ್‌ಕಾರಣವಾಗಿದೆಯೆಂಬ ಪಕ್ಷದಲ್ಲಿಯೂ 'ಶಶವಿಷಾಣಾದೀನಾಮ್ ಕಿಂಚಿತ್ ಪ್ರತಿಕಾರಣತ್ವಮ್' ಇತ್ಯಾದಿ ವಾಕ್ಯವು ಉಪಪನ್ನವಾಗುವುದಿಲ್ಲ.

**प्रकाशः** – नहि शून्यं तुच्छवन्निस्स्वरूपमिति शून्यवादिनोपेयते । तत्त्वमित्यङ्गीकारात् ।

ಏಕೆಂದರೆ ಶೂನ್ಯವಾದಿಗಳು ಶೂನ್ಯವನ್ನು ತುಚ್ಛದಂತೆ ನಿಃಸ್ವರೂಪವೆಂದು ಒಪ್ಪುವುದಿಲ್ಲ. ಸತ್ ಸ್ವರೂಪವಾದ ತತ್ತ್ವವೆನ್ನುತ್ತಾರೆ.

**प्रकाशः** –अत एव ''नासत'' इत्यत्र सुधायां ''अत्र सर्वत्रासत्वमापाद्यम्'' इत्युक्तम् ।

ಆದ್ದರಿಂದಲೇ 'ನಾಸತೋ ದೃಷ್ಟತ್ವಾತ್' ಎಂಬ ಅಧಿಕರಣದ ಸುಧೆಯಲ್ಲಿ 'ಅತ್ರ ಸರ್ವತ್ರಾಸತ್ವಮಾಪಾದ್ಯಮ್' ಎಲ್ಲೆಡೆಯೂ ಅಸತ್ವವನ್ನು ಆಪಾದಿಸಬೇಕು ಎಂದು ಹೇಳಿರುತ್ತಾರೆ.

**प्रकाशः** – एवं चाभावपरसुधावाक्यान्यप्यनुकूलितानि भवन्ति । ''प्रागभावोऽभिधीयत'' इति पूर्वोक्तटीकावाक्यं चानुकूलितं भवति ।

ಹೀಗೆ ವ್ಯಾಖ್ಯಾನ ಮಾಡುವುದರಿಂದ ಪ್ರಾಗಭಾವಪಕ್ಷದಲ್ಲಿ ನ್ಯಾಯಸುಧೆಯಲ್ಲಿರುವ ಅಭಾವಪರವಾದ ವಾಕ್ಯಗಳೆಲ್ಲವೂ ಅನುಕೂಲವಾಗುತ್ತವೆ. 'ಪ್ರಾಗಭಾವೋಽಭಿಧೀಯತೇ' ಎಂಬ ಹಿಂದಿನ ಟೀಕಾವಾಕ್ಯವೂ ಕೂಡ ಅರ್ಥಪೂರ್ಣವಾಗುತ್ತದೆ.

ಅಸದಧಿಕರಣ (೨-೧-೪)

**प्रकाशः – तथा ''न ह्यभावरूपस्य धर्मिणः कारणत्वं दृश्यत'' इत्यादि-सिद्धान्तस्थिततत्वप्रदीपवाक्यान्यप्यनुकूलितानि भवन्तीति ।।**

'ನ ಹ್ಯಭಾವರೂಪಸ್ಯ ಧರ್ಮಿಣಃ ಕಾರಣತ್ವಂ ದೃಶ್ಯತೇ' ಅಭಾವರೂಪವಾದ ಧರ್ಮಿಗೆ ಜಗತ್ ಕಾರಣತ್ವವು ಕಾಣಿಸುತ್ತಿಲ್ಲವಷ್ಟೇ ಇತ್ಯಾದಿಯಾದ ಸಿದ್ಧಾಂತ ಭಾಗದಲ್ಲಿರುವ ತತ್ವಪ್ರದೀಪದ ವಾಕ್ಯಗಳೂ ಕೂಡ ಅತ್ಯಂತ ಸಮಂಜಸವಾಗುತ್ತವೆ. ಪ್ರಾಗಭಾವಕರ್ತೃತ್ವದ ನಿರಾಕರಣೆಯ ಉದ್ದೇಶವಿಲ್ಲದಿದ್ದರೆ ಶೂನ್ಯಮತದ ನಿರಾಕರಣೆಯ ಉದ್ದೇಶವೇ ಇದ್ದರೆ, ಈ ಎಲ್ಲಾ ವಾಕ್ಯಗಳು ಅನುಪಪನ್ನವಾಗುತ್ತವೆ.

## ಸಾರ

'ನ ವಿಲಕ್ಷಣತ್ವಾಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಯಿತು. ಅಭಿಮಾನ್ಯಧಿಕರಣದಲ್ಲಿ ಬಲಿಷ್ಠವಾದ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಈಗ ಈ ಅಸದಧಿಕರಣದಲ್ಲಿ ಶ್ರುತಿಯ ಸಂವಾದವನ್ನು ಹೊಂದಿರುವ ಅತ್ಯಂತ ಬಲಿಷ್ಠವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಕೆಲವರು ಶೂನ್ಯಮತದ ನಿರಾಕರಣೆಗಾಗಿ ಈ ಅಧಿಕರಣ ಹೊರಟಿದೆ ಎನ್ನುತ್ತಾರೆ. ಆದರೆ ಎರಡನೆಯ ಪಾದದಲ್ಲಿ ಶೂನ್ಯಮತನಿರಾಕರಣೆಯು ಪ್ರಸಕ್ತವಾಗುವುದರಿಂದ ಇಲ್ಲಿ ಅದರ ನಿರಾಕರಣೆ ಅಪ್ರಸ್ತುತ. ಶೂನ್ಯಮತವು ಸಮಯದಿಂದ ಪ್ರಾಪ್ತವಾದರೆ ಅದರ ನಿರಾಕರಣೆಗಾಗಿ ಎರಡನೆಯ ಪಾದವಿದೆ. ಶ್ರುತಿಯಿಂದ ಪ್ರಾಪ್ತವಾದ ಶೂನ್ಯಮತನಿರಾಕರಣೆಗಾಗಿ ಈ ಅಧಿಕರಣವು ಸಾರ್ಥಕವಲ್ಲವೇ? ಎಂದು ಪ್ರಶ್ನಿಸಬಾರದು. ಅದಕ್ಕಾಗಿ ಮೂರನೆಯ ಪಾದವೇ ಇರುತ್ತದೆ. ಇದರಂತೆ ಯುಕ್ತಿಯ ಬೆಂಬಲ ಪಡೆದ ಶ್ರುತಿಯಿಂದ ಪ್ರಾಪ್ತವಾದ ಶೂನ್ಯಮತದ ನಿರಾಕರಣೆಯನ್ನು ಈ ಅಧಿಕರಣದ ಉದ್ದೇಶವೆಂದು ಹೇಳಬಾರದು. ಇದೂ ಕೂಡ ನಾಲ್ಕನೆಯ ಪಾದದಲ್ಲಷ್ಟೇ ಸಂಗತವಾಗುತ್ತದೆ. ಯುಕ್ತಾದಿಗಳಿಂದ ಪ್ರಾಪ್ತವಾದ ಪ್ರಾಗಭಾವಕ್ಕೆ ಜಗತ್ಕಾರಣತ್ವವು 'ಅಸತಃ ಸದಜಾಯತೇ' ಎಂಬ ವಾಕ್ಯದಿಂದ ಪ್ರತೀತವಾಗುತ್ತಿದೆ. ಇದರ ನಿರಾಕರಣೆಯೇ ಅಧಿಕರಣದ ಉದ್ದೇಶ.

ಶ್ರುತಿ, ಸೂತ್ರ ಮತ್ತು ಭಾಷ್ಯಗಳಲ್ಲಿರುವ ಅಸತ್ ಶಬ್ದಕ್ಕೆ ಭಾವಪ್ರಧಾನನಿರ್ದೇಶ ಮಾಡಿದಾಗ, ಅಭಾವ ಎಂಬರ್ಥವು ದೊರೆಯುತ್ತದೆ. ಆದ್ದರಿಂದ ಪ್ರಾಗಭಾವಕರ್ತೃತ್ವಪಕ್ಷದ ನಿರಾಕರಣೆಯೇ ಈ ಅಧಿಕರಣದ ಮುಖ್ಯಉದ್ದೇಶವೆಂದು ತಿಳಿಯಬೇಕು. ಕೆಲವರು ಶೂನ್ಯಮತದ ನಿರಾಕರಣೆಗಾಗಿ ಈ ಅಧಿಕರಣವೆನ್ನುತ್ತಾರೆ. ಈ ವಿಷಯದಲ್ಲಿ ಪ್ರಬಲವಾದ ಆಧಾರಗಳಿರುವುದಿಲ್ಲ.

ಪ್ರಾಗಭಾವವು ಜಗತ್ತಿಗೆ ಕಾರಣವಷ್ಟೇ ಅಲ್ಲ, ಕರ್ತೃವೂ ಆಗಿದೆಯೆಂದು ಪೂರ್ವಪಕ್ಷ

**तात्पर्यचन्द्रिका**

**अत्र श्रुत्यसहितयुक्त्यविरोधाय मृदादिशब्दानामन्यार्थतायां श्रुतिसहितयुक्त्यविरोधायासदादिशब्दानामन्यार्थतेति किमु वाच्यमिति पूर्वसिद्धान्तन्यायेन पूर्वपक्षोत्थानादनन्तरसङ्गतिरगतार्थता च ।**

ಶ್ರುತಿಯ ಸಂವಾದವಿಲ್ಲದೇ ಯುಕ್ತಿಗಳ ವಿರೋಧಪರಿಹಾರಕ್ಕಾಗಿ 'ಮೃದಬ್ರವೀತ್' ಇತ್ಯಾದಿ ಶ್ರುತಿಗಳಿಗೆ ಅನ್ಯಾರ್ಥವನ್ನು ಮಾಡಬೇಕೆಂದು ಹಿಂದಿನ ಅಭಿಮಾನ್ಯಧಿಕರಣದಲ್ಲಿ ನಿರ್ಣಯಿಸಿದ್ದಾಯಿತು. ಹೀಗಿರುವಾಗ ಶ್ರುತಿಸಹಿತವಾದ ಯುಕ್ತಿಗಳ ವಿರೋಧ ಪರಿಹಾರಕ್ಕಾಗಿ ಅಸತಃ ಸದಜಾಯತೇ ಇತ್ಯಾದಿ ಶ್ರುತಿಗಳಿರುವ ಅಸದಾದಿ ಶಬ್ದಗಳಿಗೆ ಅನ್ಯಾರ್ಥವನ್ನು ಮಾಡಬೇಕೆಂದು ಪ್ರತ್ಯೇಕವಾಗಿ ಹೇಳಬೇಕೇನು? ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದಿಂದ ಪೂರ್ವಪಕ್ಷವು ಉದಯವಾಗುತ್ತಿರುವುದರಿಂದ ಆನಂತರ್ಯಸಂಗತಿಯನ್ನು ಮತ್ತು ಗತಾರ್ಥತ್ವವನ್ನು ತಿಳಿಯಬೇಕು.

**अत्र विष्णोर्जगत्कर्तृत्वं युक्तिविरुद्धमुत नेति चिन्ता ।**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್‌ಕರ್ತೃತ್ವವು ಯುಕ್ತಿವಿರುದ್ಧವೋ, ಅಲ್ಲವೋ ? ಎಂಬುದು ಪ್ರಧಾನವಾದ ಸಂಶಯ.

**तदर्थं विश्वप्रागभावः किं विश्वकर्तोत नेति ।**

ಅದಕ್ಕಾಗಿ ವಿಶ್ವಪ್ರಾಗಭಾವವು ಜಗತ್ತಿಗೆ ಕರ್ತೃವಾಗುತ್ತದೋ, ಇಲ್ಲವೋ ? ಎಂಬ ಸಂಶಯ ಪರಿಹಾರವಾಗಬೇಕು.

**तदर्थं प्रागभावस्य कर्तृत्वसाधिका वक्ष्यमाणयुक्तिः किं श्रुतिसंवादिन्युत नेति।**

ಅದಕ್ಕಾಗಿ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಮರ್ಥಿಸುವ ಮುಂದೆ ಹೇಳುವ ಯುಕ್ತಿಯು ಶ್ರುತಿಸಂವಾದಿಯಾಗಿದೆಯೋ, ಅಥವಾ ಇಲ್ಲವೋ ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''असद्वा इदमग्र आसीत् तदसदेव सन्मनोऽकुरुत'' इत्यादिश्रुतिः किं प्रागभावस्य सङ्कल्पप्रतिपादिकोतान्यपरेति ।**

ಅದಕ್ಕಾಗಿ 'ಅಸದ್ವಾ ಇದಮಗ್ರ ಆಸೀತ್ ತದಸದೇವ ಸನ್ಮನೋऽಕುರುತ' ಇವೇ ಮೊದಲಾದ ಶ್ರುತಿಗಳು ಪ್ರಾಗಭಾವಕ್ಕೆ ಸಂಕಲ್ಪ, ಇಚ್ಛಾ ಮೊದಲಾದವುಗಳನ್ನು ಪ್ರತಿಪಾದನೆ ಮಾಡುತ್ತಿವೆಯೋ,

ಅಥವಾ ಬೇರೆ ಪದಾರ್ಥಕ್ಕೆ ಸಂಕಲ್ಪಾದಿಗಳನ್ನು ಪ್ರತಿಪಾದನೆ ಮಾಡುತ್ತಿವೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**पूर्वपक्षमाह – तत्र पूर्वपक्षयतीति ।। अयं भावः – विश्वप्रागभावस्तावद्विश्वहेतुः। घटं प्रति घटप्रागभावस्येवानन्यथासिद्धनियतपूर्वक्षणवर्तित्वात् ।**

ಅಧಿಕರಣದ ಪೂರ್ವಪಕ್ಷವನ್ನು ಟೀಕೆಯಲ್ಲಿ 'ತತ್ರ ಪೂರ್ವಪಕ್ಷಯತಿ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ. ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ - ಜಗತ್ತಿಗೆ ಕಾರಣವಾದದ್ದು ಜಗತ್ತಿನ ಪ್ರಾಗಭಾವವೇ ಆಗಿದೆ. ಘಟದ ಪ್ರಾಗಭಾವವು ಅನನ್ಯಥಾಸಿದ್ಧವಾಗಿ ನಿಯತಪೂರ್ವಕ್ಷಣವರ್ತಿಯಾಗಿದೆ. ಆದ್ದರಿಂದಲೇ ಘಟಕ್ಕೆ ಕಾರಣವಾಗಿದೆ. ಅದರಂತೆ ವಿಶ್ವದ ಉತ್ಪತ್ತಿಗಿಂತ ಮೊದಲು ವಿಶ್ವದ ಪ್ರಾಗಭಾವವು ಅನನ್ಯಥಾಸಿದ್ಧವಾಗಿ ನಿಯಮೇನ ಪೂರ್ವಭಾವಿಯಾಗಿರುವುದರಿಂದ ವಿಶ್ವಕ್ಕೆ ಕಾರಣವಾಗುತ್ತದೆ.

**अन्यथा उत्पन्नो घटः पुनरुत्पद्येत । प्रागभावस्य हेतुत्वे तु तदभावादेव नोत्पन्नस्योत्पत्तिः ।**

ಒಂದುವೇಳೆ ಪ್ರಾಗಭಾವವು ಕಾರಣವಾಗದಿದ್ದರೆ ಒಮ್ಮೆ ಹುಟ್ಟಿದ ಘಟವು ಇನ್ನೊಮ್ಮೆ ಹುಟ್ಟಬೇಕಾಗುತ್ತದೆ. ಪ್ರಾಗಭಾವವನ್ನು ಘಟಕ್ಕೆ ಕಾರಣವೆಂದಾಗ ಈ ದೋಷವಿಲ್ಲ. ಏಕೆಂದರೆ ಒಮ್ಮೆ ಘಟ ಹುಟ್ಟಿದ ಮೇಲೆ ಪ್ರಾಗಭಾವವೆಂಬ ಕಾರಣವಿಲ್ಲದ್ದರಿಂದಲೇ ಪುನಃ ಘಟವು ಉತ್ಪತ್ತಿಯಾಗುವುದಿಲ್ಲ.

**प्रागभावस्याहेतुत्वे च पाकजरसादीनां भेदो न स्यात् । कार्यभेदस्य कारणभेदाधीनत्वात् । प्रागभावादन्यस्य च कारणस्य तत्राभेदात् ।**

ಪ್ರಾಗಭಾವವು ಕಾರಣವಲ್ಲವೆಂದರೆ ಮತ್ತೊಂದು ದೋಷ ಬರುತ್ತದೆ. ಒಂದೇ ಪಾಕದಿಂದ ರೂಪರಸಾದಿಗಳು ಉತ್ಪನ್ನವಾಗುತ್ತವೆ. ಕಾರ್ಯದಲ್ಲಿ ವೈಚಿತ್ರ್ಯ ಬರಬೇಕೆಂದರೆ ಕಾರಣದಲ್ಲಿ ವೈಚಿತ್ರ್ಯ ಬರಬೇಕು. ಪಾಕವೆಂಬ ಒಂದೇ ಕಾರಣವಿದ್ದಾಗ ರೂಪರಸಗಳೆಂಬ ಕಾರ್ಯದಲ್ಲಿ ವೈಚಿತ್ರ್ಯವಿದ್ದರೂ ಕಾರಣದಲ್ಲಿ ವೈಚಿತ್ರ್ಯವಿಲ್ಲದ ಕಾರಣ ಕಾರ್ಯಭೇದವು ಕೂಡುವುದಿಲ್ಲ. ಕಾರ್ಯಭೇದವನ್ನು ಉಪಪಾದನೆ ಮಾಡಬೇಕೆಂದರೆ ಪ್ರಾಗಭಾವವನ್ನೇ ಕಾರಣವೆನ್ನಬೇಕು. ಅಂದರೆ ರೂಪದ ಉತ್ಪತ್ತಿಗೆ ರೂಪದ ಪ್ರಾಗಭಾವವು ಕಾರಣ. ರಸದ ಉತ್ಪತ್ತಿಗೆ ರಸದ ಪ್ರಾಗಭಾವವು ಕಾರಣ ಹೊರತು, ಪಾಕ ಕ್ರಿಯೆಯಲ್ಲ. ಆದ್ದರಿಂದ ಪ್ರಾಗಭಾವಕ್ಕಿಂತ ಬೇರೆಯಾದ ಕಾರಣವೇ ಇಲ್ಲವೆಂದು ಹೇಳಿದಾಗ ಮಾತ್ರ ಕಾರ್ಯದಲ್ಲಿರುವ ವೈಚಿತ್ರ್ಯವನ್ನು ಉಪಪಾದನೆ ಮಾಡಬಹುದು.

**श्रूयते च ''असद्वा इदमग्र आसीत्'' इति प्रागभावस्य हेतुता । न ह्यत्रासच्छब्दः शून्यपरः । असतो नियतप्राक्सत्वरूपहेतुत्वायोगात् । आसीदिति सत्त्वोक्तिविरोधाच्च।**

ಮತ್ತು 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಪ್ರಾಗಭಾವಕ್ಕೆ ಹೇತುತ್ವವು ಸ್ಪಷ್ಟವಾಗಿ ತಿಳಿಯುತ್ತಿದೆ. ಇಲ್ಲಿರುವ 'ಅಸತ್' ಶಬ್ದಕ್ಕೆ ಶೂನ್ಯವೆಂದರ್ಥವಲ್ಲ. ಶೂನ್ಯಕ್ಕೆ ನಿಯಮೇನ ಪೂರ್ವಭಾವಿವರ್ತಿತ್ವರೂಪವಾದ ಹೇತುತ್ವವನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ. ಮತ್ತು ಆಸೀತ್ ಎಂಬ ಪದದಿಂದ ಹೇಳಲ್ಪಟ್ಟ ಸತ್ವವಚನವೂ ಕೂಡ ವಿರುದ್ಧವಾಗುತ್ತದೆ.

**एवञ्च सिद्धे प्रागभावस्य हेतुत्वे प्रागभावान्तरेऽदृष्टमपि विश्वप्रागभावस्य कर्तृत्वं विमता भावाः प्रलयेऽसन्तः भावत्वात् कार्यवदित्यनेन प्रलये भावमात्रासत्त्वसिद्धेः कार्यस्य च सकर्तृकत्वनियमात्परिशेषात्सेत्स्यति ।**

ಹೀಗೆ ಕಾರ್ಯಕ್ಕೆ ಪ್ರಾಗಭಾವವೇ ಕಾರಣವೆಂದು ಸಿದ್ಧವಾದ ಮೇಲೆ ಬೇರೆ ಪ್ರಾಗಭಾವದಲ್ಲಿ ಕಾಣದ ಕರ್ತೃತ್ವವೂ ಕೂಡ ವಿಶ್ವಪ್ರಾಗಭಾವದಲ್ಲಿ ಸಿದ್ಧವಾಗುತ್ತದೆ. ಅದು ಹೀಗೆ - 'ವಿಮತಾ ಭಾವಾಃ ಪ್ರಲಯೇಽಸಂತಃ ಭಾವತ್ವಾತ್ ಕಾರ್ಯವತ್' ಕಾರ್ಯವು ಭಾವವಾಗಿದೆ, ಮತ್ತು ಪ್ರಳಯಕಾಲದಲ್ಲಿ ಅಸತ್ತಾಗಿದೆ. ಅದರಂತೆ ವಿವಾದಕ್ಕೆ ವಿಷಯವಾದ ಭಾವಪದಾರ್ಥಗಳಲ್ಲಿ ಭಾವತ್ವವಿರುವುದರಿಂದ ಪ್ರಳಯಕಾಲದಲ್ಲಿ ಸಕಲಭಾವ ಪದಾರ್ಥಗಳು ಸರ್ವಥಾ ಇರುವುದಿಲ್ಲವೆಂದು ಅನುಮಾನದಿಂದ ಸಿದ್ಧವಾಗುತ್ತದೆ. ಆದರೆ ಸಕಲ ಕಾರ್ಯಗಳು ಸಕರ್ತೃಕವಾಗಿರುತ್ತದೆಂಬ ನಿಯಮವಿದೆ. ಹಾಗಾಗಿ ಪ್ರಾಗಭಾವವನ್ನೇ ಪರಿಶೇಷಪ್ರಮಾಣದಿಂದ ಕರ್ತೃವೆಂದು ನಿರ್ಣಯ ಮಾಡಬೇಕು.

**लघु च क्लृप्तस्य प्रागभावस्य कर्तृत्वमात्रकल्पनमीश्वरतत्कर्तृत्वादिकल्पनात् ।**

ಪ್ರಮಾಣದಿಂದ ಸಿದ್ಧವಾದ ಪ್ರಾಗಭಾವದಲ್ಲಿಯೇ ಕರ್ತೃತ್ವವನ್ನು ಸುಲಭವಾಗಿ ಕಲ್ಪಿಸಲು ಬರುವಾಗ ಈಶ್ವರನಿಗೆ ಧರ್ಮಿಯನ್ನು ಒಪ್ಪಿ, ಅವನಲ್ಲಿ ಪುನಃ ಕರ್ತೃತ್ವವನ್ನು ಒಪ್ಪಿದರೆ ಕಲ್ಪನಾಗೌರವ ಬರುತ್ತದೆ.

**दृश्यते चाचेतनेऽपि कर्तरि विहिततृतीयादि ।**

ಅಚೇತನವಾದ ಪ್ರಾಗಭಾವಗಳಿಗೆ ಕರ್ತೃತ್ವವು ಹೇಗೆ ಬರುತ್ತದೆಂದು ಪ್ರಶ್ನಿಸಬಾರದು. 'ವೃಕ್ಷೇಣ ಸ್ಥೀಯತೇ' ಇತ್ಯಾದಿ ಸ್ಥಳಗಳಲ್ಲಿ ಕರ್ತ್ರರ್ಥದಲ್ಲಿರುವ ತೃತೀಯಾವಿಭಕ್ತಿಯನ್ನು ಅಚೇತನವಾದ ವೃಕ್ಷಾದಿಗಳಲ್ಲಿಯೂ ಪ್ರಯೋಗಿಸುವುದು ಕಂಡಿದೆ. ಆದ್ದರಿಂದ ಅಚೇತನದಲ್ಲಿಯೂ ಕರ್ತೃತ್ವವು ಬರಬಹುದು.

**अशरीरत्वेऽपीश्वरस्येवोपादानत्वेऽपि ब्रह्मण इव च जीवस्यापि चेतनत्वेऽपीश्व रमात्रस्येवाभावत्वेऽपि विश्वप्रागभावस्य कर्तृत्वमस्तु ।**

ತಾರ್ಕಿಕರು ಈಶ್ವರನಿಗೆ ಶರೀರವಿಲ್ಲವೆನ್ನುತ್ತಾರೆ. ಆದರೂ ಕೂಡ ಕರ್ತೃತ್ವವನ್ನು ಒಪ್ಪುತ್ತಾರೆ. ಅದ್ವೈತಿಗಳು ಬ್ರಹ್ಮನು ಉಪಾದಾನಕಾರಣವೆನ್ನುತ್ತಾರೆ. ಆದರೂ ಕೂಡ ಜಗತ್ತಿಗೆ ಕರ್ತೃ ಎನ್ನುತ್ತಾರೆ. ಮತ್ತು ಜೀವನು ಚೇತನನಾಗಿದ್ದರೂ ಈಶ್ವರನಿಗಷ್ಟೇ ಕರ್ತೃತ್ವವಿದೆ ಎನ್ನುತ್ತಾರೆ. ಅದೇ ರೀತಿಯಾಗಿ ವಿಶ್ವಪ್ರಾಗಭಾವವು ಅಭಾವವಾಗಿದ್ದರೂ ಕೂಡ ಜಗತ್ತಿಗೆ ಕರ್ತೃವಾಗಬಹುದು.

**''तदसदेव सन्मनोऽकुरुत'' इति श्रुतावसच्छब्दार्थस्य विश्वप्रागभावस्य मनश्शब्देन वा कर्त्रर्थलकारेण वा ज्ञानेच्छाद्युक्तेश्च ।**

'ತದಸದೇವ ಸನ್ಮನೋಽಕುರುತ' ಇತ್ಯಾದಿ ಶ್ರುತಿಗಳಲ್ಲಿ ಅಸತ್ ಶಬ್ದದ ಅರ್ಥವೆನಿಸಿದ ವಿಶ್ವಪ್ರಾಗಭಾವಕ್ಕೆ ಜ್ಞಾನೇಚ್ಛಾದಿಗಳನ್ನು ಹೇಳಲಾಗಿದೆ. ಮನಸ್‌ಶಬ್ದದಿಂದ ಜ್ಞಾನವನ್ನು ಕರ್ತ್ರರ್ಥದಲ್ಲಿರುವ ಲಕಾರದಿಂದ ಇಚ್ಛೆಯನ್ನು ಶ್ರುತಿ ಹೇಳುತ್ತಿದೆ. ಜ್ಞಾನೇಚ್ಛೆಗಳು ಇರುವುದರಿಂದ ಪ್ರಾಗಭಾವವು ಕರ್ತೃವಾಗುತ್ತದೆ.

**शब्दगम्यो ह्यर्थो यथाशब्दमङ्गीकार्यः । (भावविशेषस्य कर्तृत्ववचाभावविशेषस्य तदस्तु इति) कथमन्यथाऽद्वैतिमत इच्छाद्युपाधिभूतं मनः प्रति ब्रह्मणः कर्तृत्वमिति।**

ಶಬ್ದದಿಂದ ಗಮ್ಯವಾದ ಅರ್ಥವನ್ನು ಶಬ್ದಕ್ಕೆ ಅನುಗುಣವಾಗಿ ಒಪ್ಪಬೇಕು. ಪ್ರಾಗಭಾವದಲ್ಲಿ ಕರ್ತೃತ್ವವು ಕಂಡಿಲ್ಲವಾದ್ದರಿಂದ ಒಪ್ಪಬಾರದೆಂದು ಹೇಳಲಾಗದು. ಹೀಗೊಪ್ಪದಿದ್ದರೆ ಅದ್ವೈತ ಮತದಲ್ಲಿ ಇಚ್ಛಾದ್ಯುಪಾಧಿಗಳೆಂಬ ಮನಸ್ಸಿಗೆ ಬ್ರಹ್ಮನು ಹೇಗೆ ತಾನೇ ಕರ್ತೃವಾಗುತ್ತಾನೆ. ಆದ್ದರಿಂದ ಶಬ್ದಗಮ್ಯವಾದ ವಿಷಯದಲ್ಲಿ ಪ್ರತ್ಯಕ್ಷಾದಿಗಳ ವಿರೋಧವನ್ನು ಹೇಳಬಾರದು.

**प्रकाशः –**

**पूर्वसिद्धान्तन्यायेनेति ।।** इयं च ''प्रागभावस्यापि स्वरूपसत्वादिना सदेवेत्या दिप्रयोगविषयत्वोपपत्तेः'' इति सुधाक्तया लब्धा ।

'ಪೂರ್ವಸಿದ್ಧಾಂತನ್ಯಾಯೇನ' ಇತ್ಯಾದಿಯಾಗಿ ಗ್ರಂಥದಲ್ಲಿ ಹೇಳಿರುತ್ತಾರೆ. 'ಪ್ರಾಗಭಾವಸ್ಯಾಪಿ ಸ್ವರೂಪಸತ್ವಾದಿನಾ ಸದೇವೇತ್ಯಾದಿಪ್ರಯೋಗವಿಷಯತ್ವೋಪಪತ್ತೇಃ' ಪ್ರಾಗಭಾವಕ್ಕೂ ಕೂಡ ಸ್ವರೂಪತಃ ತತ್ವವಿರುವುದರಿಂದ 'ಸದೇವ ಸೌಮ್ಯ' ಇತ್ಯಾದಿ ಪ್ರಯೋಗಕ್ಕೆ ವಿಷಯವಾಗಬಹುದು ಎಂಬ ನ್ಯಾಯಸುಧೆಯ ಮಾತಿನ ಆಧಾರದಲ್ಲಿ 'ಪೂರ್ವಸಿದ್ಧಾಂತನ್ಯಾಯೇನ' ಇತ್ಯಾದಿ ವಾಕ್ಯವು ಹೊರಟಿದೆ.

ಪರಿಪೂರ್ಣಚಂದ್ರಿಕಾ

**प्रकाशः –** ''न विलक्षणत्वात्'' इत्यत्र केवलयुक्तिविरोधः । अभिमानीत्यत्र तु दृढयुक्तिविरोधो निरस्तः । अत्र तु श्रुतिसंवादेन सुदृढयुक्तिविरोधो निरस्यत इति सोपानारोहणन्यायेनावान्तरसङ्गतिस्स्पष्टेति तदनुक्तिः । तदुक्तं सुधायां ''इह पुनर्वेदवाक्यसंवादेन सुदृढया युक्त्या विरुद्धत्वात्'' इत्यादि ।

'ನ ವಿಲಕ್ಷಣತ್ವಾಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಯ ವಿರೋಧವನ್ನು ಪರಿಹರಿಸಿದ್ದಾರೆ. ಅಭಿಮಾನ್ಯಧಿಕರಣದಲ್ಲಿ ಪ್ರಬಲವಾದ ಯುಕ್ತಿಯ ವಿರೋಧವನ್ನು ಪರಿಹರಿಸಿದ್ದಾರೆ. ಮುಂದಿನ ಈ ಅಧಿಕರಣದಲ್ಲಿ ಶ್ರುತಿಸಂವಾದದಿಂದ ಅತ್ಯಂತ ಬಲಿಷ್ಠವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆಂದು ಸೋಪಾನಾರೋಹಣನ್ಯಾಯದಿಂದ ಈ ಅಧಿಕರಣಕ್ಕೆ ಸಂಗತಿಯು ಅತ್ಯಂತ ಸ್ಪಷ್ಟವಾಗಿದೆ. ಆದ್ದರಿಂದ ಗ್ರಂಥದಲ್ಲಿ ಪ್ರತ್ಯೇಕವಾಗಿ ಇದನ್ನು ಹೇಳಿಲ್ಲ. ಇದೇ ವಿಷಯವನ್ನು ನ್ಯಾಯಸುಧೆಯಲ್ಲಿ 'ಇಹ ಪುನರ್ವೇದವಾಕ್ಯಸಂವಾದೇನ ಸುದೃಢಯಾ ಯುಕ್ತ್ಯಾ ವಿರುದ್ಧತ್ವಾತ್' ವೇದವಾಕ್ಯದ ಸಂವಾದದಿಂದ ಯುಕ್ತಿಯು ಅತ್ಯಂತ ಬಲಿಷ್ಠವಾಗಿರುವುದರಿಂದ ವಿರುದ್ಧವಾಗಿದೆ ಎಂದು ಹೇಳಿದ್ದಾರೆ.

**प्रकाशः – विषयसंशयटीकां व्यनक्ति – अत्र विष्णोरिति ।। कर्तृत्वमिति ।।** तन्निर्वाहश्चिन्ताफलमिति सूचितम् । यतो वेत्यादिश्रुत्युक्तमिति शेषः ।

ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು ಹೇಳುವ ಟೀಕೆಯನ್ನು 'ಅತ್ರ ವಿಷ್ಣೋಃ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಗ್ರಂಥದಲ್ಲಿ ಸಂಶಯಕೋಟಿಯನ್ನು ತೋರಿಸುವಾಗ 'ವಿಷ್ಣೋಃ ಜಗತ್‌ಕರ್ತೃತ್ವಮ್' ಎಂದು ಹೇಳಿದ್ದಾರೆ. ಏಕೆಂದರೆ ವಿಷ್ಣುವಿಗೆ ಜಗತ್‌ಕರ್ತೃತ್ವವನ್ನು ನಿರ್ವಾಹ ಮಾಡುವುದೇ ಎಲ್ಲಾ ಸಂಶಯಗಳ ಮುಖ್ಯಪ್ರಯೋಜನ. 'ಯತೋ ವಾ' ಇತ್ಯಾದಿ ಶ್ರುತಿಯಿಂದ ವಿಷ್ಣುವಿನಲ್ಲಿ ಇಂತಹ ಜಗತ್‌ಕರ್ತೃತ್ವವು ಹೇಳಲ್ಪಟ್ಟಿದೆ. ಆದ್ದರಿಂದ 'ಯತೋ ವಾ ಇತ್ಯಾದಿ ಶ್ರುತ್ಯುಕ್ತಮ್' ಎಂಬುದನ್ನು ಶೇಷ ಪೂರಣ ಮಾಡಿಕೊಳ್ಳಬೇಕು.

**प्रकाशः –** लयवृत्तिविश्वप्रागभावो महदादिकार्यहेतुः । अन्यत्रानुपक्षीणत्वे सति नियमेन तत्पूर्वभावित्वात् । पटप्रागभाववदिति परिशेषसध्रीचीना भावकर्तृत्वसाधक-युक्तिविरुद्धमित्यर्थः ।

ವಿಷ್ಣುವಿನ ಜಗತ್‌ಕರ್ತೃತ್ವವು ಯುಕ್ತಿವಿರುದ್ಧವೋ ಅಲ್ಲವೋ ? ಎಂದು ಸಂಶಯವನ್ನು ತೋರಿಸಿದ್ದಾರೆ. ಯಾವ ಯುಕ್ತಿಯ ವಿರೋಧವನ್ನು ಹೇಳುತ್ತಿದ್ದಾರೋ, ಆ ಯುಕ್ತಿಯ ಸ್ವರೂಪ ಹೀಗಿದೆ - 'ಲಯವೃತ್ತಿವಿಶ್ವಪ್ರಾಗಭಾವಃ ಮಹದಾದಿಕಾರ್ಯಹೇತುಃ । ಅನ್ಯತ್ರಾನುಪಕ್ಷೀಣತ್ವೇ ಸತಿ ನಿಯಮೇನ ತತ್ ಪೂರ್ವಭಾವಿತ್ವಾತ್ । ಪಟಪ್ರಾಗಭಾವವತ್'' ಪಟಪ್ರಾಗಭಾವವು ಬೇರೆಲ್ಲೂ ಉಪಕ್ಷೀಣವಾಗದೇ ನಿಯಮೇನ ಪಟಪೂರ್ವಭಾವಿಯಾಗಿದೆ. ಮತ್ತು ಪಟವೆಂಬ ಕಾರ್ಯಕ್ಕೆ ಕಾರಣವಾಗಿದೆ. ಈ ದೃಷ್ಟಾಂತದಂತೆ ಪ್ರಳಯಕಾಲದಲ್ಲಿರುವ ವಿಶ್ವಪ್ರಾಗಭಾವವು ಬೇರೆಲ್ಲೂ ಉಪಕ್ಷೀಣವಾಗದೇ ನಿಯಮೇನ ಮಹದಾದಿ-

ತತ್ವಗಳಿಗಿಂತ ಪೂರ್ವಭಾವಿಯಾಗಿದೆ. ಆದ್ದರಿಂದ ಮಹದಾದಿಕಾರ್ಯಗಳಿಗೆ ಕಾರಣವಾಗಿರಲೇಬೇಕೆಂದು ಸಿದ್ಧವಾಗುತ್ತದೆ. ಹೀಗೆ ಪ್ರಾಗಭಾವಕ್ಕೆ ಕಾರಣತ್ವವು ಸಿದ್ಧವಾದ ಮೇಲೆ ಪರಿಶೇಷಪ್ರಮಾಣದಿಂದ ಕರ್ತೃತ್ವವು ಸಿದ್ಧವಾಗುತ್ತದೆ. ಇಂತಹ ಯುಕ್ತಿಯ ವಿರೋಧ ಬರುತ್ತದೆಂದು ತಿಳಿಯಬೇಕು.

**प्रकाशः** – यदि श्रुतिः प्रागभावस्य तथात्वपरा तदा तत्संवादेन युक्तेर्बलवत्त्वात्तया प्रागभावस्य कर्तृत्वसिद्धिसम्भवेन श्रौतं कर्तृत्वं विरुद्धम् ।

ಒಂದು ವೇಳೆ 'ಅಸತಃ ಸದಜಾಯತ' ಎಂಬ ಶ್ರುತಿಯು ಪ್ರಾಗಭಾವಕ್ಕೆ ಮಹದಾದಿಕಾರ್ಯಗಳನ್ನು ಕುರಿತು ಕಾರಣತ್ವವನ್ನು ಹೇಳುವುದಾದರೆ, ಅಂತಹ ಶ್ರುತಿಸಂವಾದದಿಂದ ಯುಕ್ತಿಯು ಮತ್ತಷ್ಟು ಬಲಿಷ್ಠವಾಗುತ್ತದೆ. ಆ ಯುಕ್ತಿಯಿಂದ ಪ್ರಾಗಭಾವಕ್ಕೆ ಕರ್ತೃತ್ವವೇ ಸಿದ್ಧವಾಗುತ್ತದೆ. ಕೇವಲ ಶ್ರುತಿಯಿಂದ ಸಿದ್ಧವಾದ ವಿಷ್ಣುವಿನ ಜಗತ್‌ಕರ್ತೃತ್ವವು ಯುಕ್ತಿಯಿಂದ ಬಾಧಿತವಾಗುತ್ತದೆ.

**प्रकाशः** – यदि त्वन्यपरा तदा तदसंवादियुक्तिमात्रस्य ''यतो वा'' इत्यादि-श्रुतिविरुद्धतया प्रागभावकर्तृत्वसाधनासामर्थ्येन स्वयं दुष्टतया श्रौतं ब्रह्मकर्तृत्वं न युक्तिविरुद्धमिति स्पष्टमिति भावः ।

ಒಂದು ವೇಳೆ 'ಅಸತಃ ಸದಜಾಯತ' ಎಂಬ ಶ್ರುತಿಯು ಪ್ರಾಗಭಾವವನ್ನು ಪ್ರತಿಪಾದನೆ ಮಾಡದಿದ್ದರೆ ಆವಾಗ ಯುಕ್ತಿಗೆ ಶ್ರುತಿಯ ಸಂವಾದವನ್ನು ಹೇಳಲಾಗುವುದಿಲ್ಲ. ಆವಾಗ 'ಯತೋ ವಾ' ಇತ್ಯಾದಿ ಶ್ರುತಿಗೆ ವಿರುದ್ಧವಾಗಿ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಾಧನೆ ಮಾಡುವ ಸಾಮರ್ಥ್ಯವು ಯುಕ್ತಿಗೆ ಇರುವುದಿಲ್ಲ. ಏಕೆಂದರೆ ಯುಕ್ತಿಯೇ ಸ್ವತಃ ದುಷ್ಟವಾಗಿರುವಾಗ ಶ್ರುತಿಯನ್ನೂ ಬಾಧಿಸಲು ಅಸಮರ್ಥವಾಗಿರುತ್ತದೆ. ಆದ್ದರಿಂದ ಬ್ರಹ್ಮಕರ್ತೃತ್ವವು ಯುಕ್ತಿಗೆ ವಿರುದ್ಧವಾಗುವುದಿಲ್ಲ. ಹೀಗೆ ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ಫಲಫಲಿಭಾವವು ಸ್ಪಷ್ಟವಾಗಿ ತಿಳಿಯುತ್ತಿದೆ.

**प्रकाशः** – टीकायां प्रागभावकर्तृत्वसाधकयुक्तेरस्फुटत्वात्सुधोक्तमेव तात्पर्य-विवरणेनाह – **अयं भाव इत्यादिना** ।। समुदायाभिप्रायमेकवचनम् । प्रागभावानामनेकत्वात्।।

ಟೀಕೆಯಲ್ಲಿ ಪ್ರಾಗಭಾವಕರ್ತೃತ್ವಸಾಧಕವಾದ ಯುಕ್ತಿಯು ಸ್ಫುಟವಾಗಿ ಹೇಳಲ್ಪಟ್ಟಿಲ್ಲ. ಆದರೆ ನ್ಯಾಯಸುಧೆಯಲ್ಲಿ ಸ್ಫುಟವಾಗಿದೆ. ಪ್ರಕೃತ ಗ್ರಂಥಕಾರರು ನ್ಯಾಯಸುಧೆಯಲ್ಲಿ ಹೇಳಿದ್ದನ್ನೇ ವಿವಕ್ಷಿಸಿ, ಅದರ ತಾತ್ಪರ್ಯವನ್ನು ವಿವರಿಸುವವರಾಗಿ, 'ಅಯಂ ಭಾವಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಪ್ರಾಗಭಾವಗಳು ಆಯಾ ಕಾರ್ಯಗಳಿಗೆ ಅನುಗುಣವಾಗಿ ಭಿನ್ನಭಿನ್ನವಾಗಿರುವುದರಿಂದ ಅನೇಕವಾಗಿವೆ. ಸಮುದಾಯಾರ್ಥದಲ್ಲಿ ಏಕವಚನವನ್ನು ವಿವಕ್ಷಿಸಿ, ವಾಕ್ಯವನ್ನು ಅರ್ಥೈಸಿಕೊಳ್ಳಬೇಕು.

**प्रकाशः** – **घटं प्रतीति** ।। एतेन यो ''यतः यादृशपूर्ववर्ती स तत्कारणम्। यथा घटप्रागभावः'' इति सामान्यव्याप्तिरित्युक्तं भवति । दृष्टान्ते साध्यवैकल्यमाशङ्क्याह – **अन्ययेति** ।।

ಗ್ರಂಥದಲ್ಲಿ ಘಟಪ್ರಾಗಭಾವವು ಘಟಕ್ಕೆ ಅನನ್ಯಥಾಸಿದ್ಧವಾಗಿ ನಿಯತಪೂರ್ವವರ್ತಿಯಾಗಿದೆ ಎಂದು ಹೇಳಿದ್ದಾರೆ. ಇದರಿಂದ 'ಯೋ ಯತಃ ಯಾದೃಶಪೂರ್ವವರ್ತೀ ಸಃ ತತ್ಕಾರಣಮ್ ಯಥಾ ಘಟಪ್ರಾಗಭಾವಃ' ಯಾವುದು ಯಾವುದಕ್ಕಿಂತ ಪೂರ್ವವರ್ತಿಯಾಗಿರುತ್ತದೋ, ಅದು ಅದಕ್ಕೆ ಕಾರಣವಾಗಿರುತ್ತದೆನ್ನಲು ಘಟಪ್ರಾಗಭಾವವೇ ದೃಷ್ಟಾಂತವಾಗಿದೆ. ಹೀಗೆ ಸಾಮಾನ್ಯಮುಖವ್ಯಾಪ್ತಿಯನ್ನು ತಿಳಿಯಬೇಕು. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಆಶಂಕಿಸಿ 'ಅನ್ಯಥಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः** – सुधायां प्रागभावस्य कारणत्वं तस्यैव परिशेषेण कर्तृत्वं च प्रसाध्य युक्तेः ''सदेव'' इत्यादिश्रुतिविरोधपरिहाराय प्राबल्यसिद्ध्यर्थं ''असदेव'' इत्यादिश्रुती उक्ते ।

ನ್ಯಾಯಸುಧೆಯಲ್ಲಿ ಪ್ರಾಗಭಾವಕ್ಕೆ ಕಾರಣತ್ವವನ್ನು ಪರಿಶೇಷಪ್ರಮಾಣದಿಂದ ಕರ್ತೃತ್ವವನ್ನೂ ಕೂಡ ಸಾಧನೆ ಮಾಡಿ, 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯ ವಿರೋಧವು ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಾಧಿಸುವ ಯುಕ್ತಿಗೆ ಬರುವುದಿಲ್ಲವೆಂದು ಶ್ರುತಿವಿರೋಧವನ್ನು ಪರಿಹರಿಸಲು 'ಅಸದೇವ' ಇತ್ಯಾದಿ ಶ್ರುತಿಯನ್ನು ಉದಾಹರಿಸಿದ್ದಾರೆ. ಇದರಿಂದ ಯುಕ್ತಿಗೆ ಪ್ರಾಬಲ್ಯವನ್ನೂ ಕೂಡ ಸಾಧಿಸಿದಂತಾಗುತ್ತದೆ.

**प्रकाशः** – तत्र हेतुत्वे ''असदेवेदम्'' इति श्रुतिः । कर्तृत्वे च ''असदेव सन्मनोऽकुरुत'' इति श्रुतिस्संवादिनीति भावेनाह – **श्रूयते चेति** ।। एतेन टीकायां श्रुत्या पूर्वपक्षो युक्तिमूलतयेति भाव उक्तो भवति । श्रुतावसच्छब्दादभावलाभः प्रागेवोक्त इति भावः ।

ಪ್ರಾಗಭಾವವು ಜಗತ್ತಿಗೆ ಕಾರಣವಾಗಿದೆಯೆನ್ನಲು 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯು ಸಂವಾದಿಯಾಗಿದೆ. ಪ್ರಾಗಭಾವವು ವಿಶ್ವಕ್ಕೆ ಕರ್ತೃವಾಗಿವೆ ಎಂಬ ವಿಷಯದಲ್ಲಿ 'ಅಸದೇವ ಸನ್ಮನೋಽಕುರುತ' ಎಂಬ ಶ್ರುತಿಯು ಸಂವಾದಿಯಾಗಿದೆ. ಈ ಅಭಿಪ್ರಾಯದಿಂದ 'ಶ್ರೂಯತೇ ಚ' ಇತ್ಯಾದಿ ವಾಕ್ಯವು ಹೊರಟಿದೆ. ಇದರಿಂದ ಟೀಕೆಯಲ್ಲಿ ಶ್ರುತಿಯಿಂದ ಮಾಡಲ್ಪಟ್ಟ ಪೂರ್ವಪಕ್ಷವು ಯುಕ್ತಿಮೂಲಕವಾಗಿದೆಯೆಂದು ಹೇಳಿದಂತಾಯಿತು. ಶ್ರುತಿಯಲ್ಲಿರುವ ಅಸತ್ ಶಬ್ದಕ್ಕೆ ಪ್ರಾಗಭಾವ ಎಂಬರ್ಥವು ಹೇಗೆ ದೊರೆಯುತ್ತದೆಂಬುದನ್ನು ಈ ಹಿಂದೆಯೇ ಹೇಳಿದ್ದಾಗಿದೆ.

**प्रकाशः** – ननु प्रागभावकर्तृत्वमीश्वरकर्तृत्वाप्रतिकूलमित्यादिसुधोक्तशङ्कां हृदि कृत्वा ''स्यादेतदेवं यदीश्वरादीनां प्रलये सत्त्वमेव स्यात्'' इत्यादिसुधोक्तमेव व्यनक्ति ।। **एवञ्चेति** ।। हेतुत्वे सिद्धे सतीत्यर्थः ।।

ಪ್ರಾಗಭಾವಕ್ಕೆ ಜಗತ್ಕರ್ತೃತ್ವವು ಇದ್ದರೂ ಕೂಡ ಈಶ್ವರನ ಜಗತ್ಕರ್ತೃತ್ವಕ್ಕೆ ಯಾವುದೇ ಬಾಧಕವಿಲ್ಲ. ಹೀಗೆ ನಾಯಸುಧೆಯಲ್ಲಿ ಆಶಂಕಿಸಿದ್ದಾರೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು 'ಸ್ಯಾದೇತದೇವಂ ಯದೀಶ್ವರಾದೀನಾಂ ಪ್ರಲಯೇ ಸತ್ವಮೇವ ಸ್ಯಾತ್' ಎಂದು ವೇಳೆ ಈಶ್ವರಾದಿಗಳಿಗೆ ಪ್ರಳಯಕಾಲದಲ್ಲಿ

ಸತ್ವವಿದ್ದರೆ ಹಾಗೇ ಆಕ್ಷೇಪಿಸಬಹುದಿತ್ತು ಇತ್ಯಾದಿಸುಧೆಯಲ್ಲಿ ಹೇಳಿದ್ದನ್ನೇ 'ಏವಂಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಏವಂ ಚ' ಎಂದರೆ 'ಹೇತುತ್ವವು ಸಿದ್ಧವಾಗುತ್ತಿರಲು' ಎಂದರ್ಥ.

**प्रकाशः – कर्तृत्वमिति** ।। परिशेषात्सेत्स्यतीत्यन्वयः । तमेवाह – **विमता इति** ।। परिशेषानुमानेऽनुकूलतर्कमाह – **लघु चेति** ।।

ಪ್ರಾಗಭಾವಕ್ಕೆ ಕಾರಣತ್ವವು ಯುಕ್ತಿಯಿಂದ ಸಿದ್ಧವಾಗುತ್ತದೆ. ಕರ್ತೃತ್ವವು ಪರಿಶೇಷಪರಿಮಾಣದಿಂದ ಸಿದ್ಧವಾಗುತ್ತದೆ. ಆದ್ದರಿಂದ 'ಕರ್ತೃತ್ವಮ್' ಎಂಬ ಪದಕ್ಕೆ 'ಪರಿಶೇಷಾತ್ ಸೇತ್ಸ್ಯತಿ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಅದನ್ನೇ 'ವಿಮತಾಃ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಪರಿಶೇಷಮಾನದಲ್ಲಿ ವಿಮತಾ ಎಂಬುದರಿಂದ ಹೇಳುತ್ತಿದ್ದಾರೆ. ಪರಿಶೇಷಾನುಮಾನದಲ್ಲಿ ಅನುಕೂಲತರ್ಕವನ್ನು ಲಘು ಚ ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

**प्रकाशः** – ननु विश्वप्रागभावानां प्रतियोगिभेदेनानेकत्वादेकस्येश्वरस्यैव कर्तृत्वमस्त्वित्यत उक्तम् ।। **क्लृप्तस्येति** ।।

ಪ್ರಾಗಭಾವವೇ ಜಗತ್ತಿಗೆ ಕಾರಣವೆನ್ನುವುದಾದರೆ, ಪ್ರತಿಯೋಗಿಯಾದ ಪದಾರ್ಥಗಳು ಅನಂತ-ವಾಗಿರುವುದರಿಂದ, ಪ್ರಾಗಭಾವಗಳೂ ಕೂಡ ಅನಂತವಾಗಿರುತ್ತವೆ. ಅನಂತಪ್ರಾಗಭಾವಗಳಿಗೆ ಅನಂತಕಾರಣತ್ವಗಳನ್ನು ಒಪ್ಪುವುದಕ್ಕಿಂತ ಒಬ್ಬನೇ ಈಶ್ವರನನ್ನು ಒಪ್ಪಿ, ಅವನಲ್ಲಿ ಮಾತ್ರ ಕರ್ತೃತ್ವವನ್ನು ಒಪ್ಪಿದರೆ ಲಾಘವ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಕ್ಲೃಪ್ತಸ್ಯ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – ''तथापि प्रागभावस्यैव कारणत्वं कर्तृत्वं च न काप्युपलब्धमिति चेत्'' इति सुधोक्तशङ्कां हृदि कृत्वाऽऽह – **प्रागभावान्तर इति** ।।

'ತಥಾಪಿ ಪ್ರಾಗಭಾವಸ್ಯೈವ ಕಾರಣತ್ವಂ ಕರ್ತೃತ್ವಂ ಚ ನ ಕ್ವಾಪ್ಯುಪಲಬ್ಧಮಿತಿ ಚೇತ್' ಆದರೂ ಕೂಡ ಪ್ರಾಗಭಾವಕ್ಕೆ ಮಾತ್ರ ಕಾರಣತ್ವ ಹಾಗೂ ಕರ್ತೃತ್ವಗಳೆರಡೂ ಇರುವುದು ಎಲ್ಲಿಯೂ ಕೂಡ ಉಪಲಬ್ಧವಾಗಿಲ್ಲವಲ್ಲ ? ಎಂಬ ನ್ಯಾಯಸುಧೆಯಲ್ಲಿ ಹೇಳಿದ ಆಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು 'ಪ್ರಾಗಭಾವಾಂತರ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः** – अदृष्टं कथं कल्प्यमित्यतः ''अलौकिकार्थस्य यथागमं ग्राह्यत्वात्'' इति सुधोक्तिरुपलक्षणं मत्वाऽऽह – **दृश्यते चेति** ।।

ಎಲ್ಲಿಯೂ ಕಾಣದ್ದನ್ನು ಹೇಗೆ ಕಲ್ಪಿಸುತ್ತೀರಿ? ಎಂಬ ಪ್ರಶ್ನೆಗೆ 'ಅಲೌಕಿಕಾರ್ಥಸ್ಯ ಯಥಾಗಮಂ ಗ್ರಾಹ್ಯತ್ವಾತ್' ಕಣ್ಣಿಗೆ ಕಾಣದ ಪದಾರ್ಥಗಳ ವಿಷಯದಲ್ಲಿ ಸ್ಮೃತಿ ಹೇಳಿದಂತೆ ಒಪ್ಪಬೇಕು ಎಂಬ ನ್ಯಾಯಸುಧೆಯ ಮಾತು ಉಪಲಕ್ಷಣವಾಗಿದೆಯೆಂದು 'ದೃಶ್ಯತೇ ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः** – 'चैत्रेण स्थीयते' इत्यादौ ''कर्तृकरणयोस्तृतीया'' इति विहितकर्त्रर्थकतृतीया कर्तृत्वाभावेन स्यादित्यर्थः ।

'ಚೈತ್ರೇಣ ಸ್ಥೀಯತೇ' ಎಂಬ ಪ್ರಯೋಗದಲ್ಲಿ 'ಕರ್ತೃಕರಣಯೋಸ್ತೃತೀಯಾ' ಎಂಬ ಸೂತ್ರಿಯು ಕರ್ತ್ರರ್ಥದಲ್ಲಿ ತೃತೀಯಾವಿಭಕ್ತಿಯನ್ನು ವಿಧಾನ ಮಾಡಿದೆ. ಆದ್ದರಿಂದ ಪ್ರಾಗಭಾವದಲ್ಲಿಯೂ ಕೂಡ ಕರ್ತೃತ್ವವು ಬರಬಹುದು.

**प्रकाशः** – न तृतीयादियोगित्वमात्रं कर्तृत्वम् । किं त्विच्छादियोगित्वमेव प्रकृतोपयुक्तमित्यत आह – **अशरीरत्वेऽपीति** ।। चेतनत्वेऽपि जीवस्य कर्तृत्वं नास्ति । किन्तु ब्रह्मण एव । तद्वदिति भावः ।

ಕೇವಲ ತೃತೀಯಾದಿವಿಭಕ್ತಿಗಳ ಬರುವಿಕೆಯೇ ಕರ್ತೃತ್ವವೆನಿಸಿದರೆ ಇಚ್ಛಾದಿಗಳ ಇರುವಿಕೆಯೂ ಕೂಡ ಆವಶ್ಯಕ. ಇಂತಹ ಇಚ್ಛಾದಿಗಳ ಇರುವಿಕೆಯೇ ಪ್ರಕೃತ ಕರ್ತೃತ್ವಕ್ಕೆ ಉಪಯೋಗವಾಗುತ್ತದೆಂಬ ಆಕ್ಷೇಪವನ್ನು 'ಅಶರೀರತ್ವೇऽಪಿ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಜೀವನು ಚೇತನನಾಗಿದ್ದರೂ ಕೂಡ ಕರ್ತೃತ್ವವಿರುವುದಿಲ್ಲ. ಬ್ರಹ್ಮನಲ್ಲಿ ಮಾತ್ರ ಕರ್ತೃತ್ವವಿರುತ್ತದೆ. ಆದರೂ ಕೂಡ 'ಚೇತನತ್ವೇऽಪಿ' ಇತ್ಯಾದಿ ಪ್ರಯೋಗಗಳು ಹೇಗೆ ಇರುತ್ತವೋ, ಅದರಂತೆ ಪ್ರಾಗಭಾವದಲ್ಲಿ ಅಶರೀರತ್ವವಿಲ್ಲದಿದ್ದರೂ ಕೂಡ ಕರ್ತೃತ್ವವು ಬರಬಹುದು.

**प्रकाशः** – तत्र श्रुतिबलात्तथात्वमुपेयत इत्यत आह – **तदसदेवेति** ।। एतेन टीकायामादि-पदेनेयं श्रुतिरुक्तपरिशेषमूलतया ग्राह्येति सूचितम् ।।

ಶ್ರುತಿಯ ಆಧಾರದಿಂದ ಬ್ರಹ್ಮನಲ್ಲಿ ಶರೀರವಿಲ್ಲದಿದ್ದರೂ ಉಪಾದಾನತ್ವಾದಿಗಳನ್ನು ಒಪ್ಪಬೇಕೆನ್ನುವುದಾದರೆ 'ತದಸದೇವ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಹೀಗೆ ಹೇಳಿದ್ದರಿಂದ ಟೀಕೆಯಲ್ಲಿರುವ ಆದಿಪದದಿಂದ 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯು ಪರಿಶೇಷಪ್ರಮಾಣಮೂಲಕವಾಗಿದೆ ಎಂದು ಸೂಚನೆ ಮಾಡಿದಂತಾಯಿತು.

**प्रकाशः** – **कर्त्रर्थेति** ।। ''लः कर्मणि च भावे चाकर्मकेभ्य'' इत्यत्र चकारात्कर्तर्यपि लकारविधानादिति भावः ।।

'ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ' ಎಂಬ ಸೂತ್ರದಲ್ಲಿ ಚಶಬ್ದದಿಂದ ಕರ್ತ್ರರ್ಥದಲ್ಲಿಯೂ ಕೂಡ ಲಕಾರವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಪ್ರಾಗಭಾವದಲ್ಲಿ ಜ್ಞಾನೇಚ್ಛಾದಿಗಳನ್ನು ಒಪ್ಪಬೇಕಾಗುತ್ತದೆಂದು ಅಭಿಪ್ರಾಯ.

**प्रकाशः** – **मनः प्रतीति** ।। ततः प्राङ्मनसोऽभावेन तन्निमित्तेच्छाभावादिति भावः । एतेन ''अलौकिकार्थस्य यथागमं ग्राह्यत्वात्'' इति सुधा विवृता ।

'ಮನಃ ಪ್ರತಿ ಬ್ರಹ್ಮಣಃ ಕರ್ತೃತ್ವಂ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಮೊದಲು ಮನಸ್ಸೇ ಇಲ್ಲದ ಕಾರಣ ತನ್ನಿಮಿತ್ತಿಕವಾದ ಇಚ್ಛೆಯೂ ಕೂಡ ಇಲ್ಲವೆಂದು ಹೇಳಬೇಕಾಗುತ್ತದೆಂದು. ಇದರಿಂದ 'ಅಲೌಕಿಕಾರ್ಥಸ್ಯ ಯಥಾಗಮಂ ಗ್ರಾಹ್ಯತ್ವಾತ್' ಅತೀಂದ್ರಿಯವಿಷಯಗಳಲ್ಲಿ ವೇದ ಹೇಳಿದಂತೆ ಒಪ್ಪಬೇಕು ಎಂಬ ಸುಧೆಯ ಮಾತನ್ನು ವಿವರಿಸಿದಂತಾಯಿತು.




'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯ ಸಂವಾದದಿಂದ ಪ್ರಳಯಕಾಲದಲ್ಲಿ ಇರುವ ಪ್ರಾಗಭಾವವೇ ಜಗತ್ತಿಗೆ ಕಾರಣವಾಗುತ್ತದೆಂಬ ಯುಕ್ತಿಯು ಅತ್ಯಂತ ಬಲಿಷ್ಠವಾಗಿದೆ. ಇಂತಹ ಯುಕ್ತಿಯಿಂದ ಜನ್ಮಾದ್ಯಧಿಕರಣದಲ್ಲಿ ಸಮರ್ಥಿಸಲ್ಪಟ್ಟ ವಿಷ್ಣುವಿನ ಜಗತ್‌ಕರ್ತೃತ್ವವು ವಿರುದ್ಧವಾಗುತ್ತದೆಂದು ಪೂರ್ವಪಕ್ಷ ಮಾಡಲಾಗಿದೆ. 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಪ್ರಾಗಭಾವವು ಸಂಕಲ್ಪಪೂರ್ವಕವಾಗಿ ಜಗತ್ತನ್ನು ಸೃಷ್ಟಿ ಮಾಡುತ್ತಿದೆ ಎಂದು ಹೇಳುತ್ತಿರುವುದರಿಂದ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಮರ್ಥನೆ ಮಾಡುವ ಯುಕ್ತಿಯು ಶ್ರುತಿಸಂವಾದಿಯಾಗಿದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದಲೇ ವಿಶ್ವಪ್ರಾಗಭಾವವೇ ವಿಶ್ವಕ್ಕೆ ಕರ್ತೃವಾಗಿದೆ, ವಿಷ್ಣುವಿನ ಜಗತ್‌ಕರ್ತೃತ್ವವು ಯುಕ್ತಿವಿರುದ್ಧವಾಗುತ್ತದೆಂಬುದು ಪೂರ್ವಪಕ್ಷದ ಸಾರ.

'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಪ್ರಾಗಭಾವಕ್ಕೆ ಸಂಕಲ್ಪಾದಿಗಳಿರುತ್ತವೆಂದು ಸಮರ್ಥನೆ ಮಾಡುತ್ತಿಲ್ಲ. ಆದ್ದರಿಂದ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಮರ್ಥಿಸಲು ಯುಕ್ತಿಯು ಶ್ರುತಿಸಂವಾದಿಯಾಗುವುದಿಲ್ಲವೆಂದು ತಿಳಿಯಬೇಕು. ಆದ್ದರಿಂದಲೇ ವಿಶ್ವಪ್ರಾಗಭಾವವು ಜಗತ್ತಿಗೆ ಕರ್ತೃವಾಗುವುದಿಲ್ಲ. ವಿಷ್ಣುವಿನ ಜಗತ್‌ಕರ್ತೃತ್ವಕ್ಕೆ ಯುಕ್ತಿವಿರೋಧವೂ ಕೂಡ ಬರುವುದಿಲ್ಲವೆಂಬುದು ಸಿದ್ಧಾಂತದ ಸಾರ.

ಯಾವುದೇ ಪದಾರ್ಥವು ಹುಟ್ಟಬೇಕಾದರೆ ಅದರ ಮೊದಲು ಅದರ ಪ್ರಾಗಭಾವವು ಇದ್ದೇ ಇರುತ್ತದೆ. ಪ್ರತಿಯೊಂದು ಪದಾರ್ಥಗಳ ಹುಟ್ಟುವಿಕೆಯ ಹಿನ್ನೆಲೆಯಲ್ಲಿ ಆಯಾಪದಾರ್ಥಗಳ ಪ್ರಾಗಭಾವವನ್ನು ಒಪ್ಪಲೇಬೇಕು. ಹೀಗೆ ಸಿದ್ಧವಾದ ಪ್ರಾಗಭಾವಕ್ಕೆ ಕಾರಣತ್ವವನ್ನೂ ಕೂಡ ಒಪ್ಪುವುದು ಅನಿವಾರ್ಯ. ಇಲ್ಲದಿದ್ದರೆ ಒಮ್ಮೆ ಹುಟ್ಟಿದ ಘಟವು ಪುನಃ ಹುಟ್ಟಬೇಕಾಗುತ್ತದೆ. ಪ್ರಾಗಭಾವವನ್ನು ಕಾರಣವೆಂದಾಗ, ಘಟ ಹುಟ್ಟಿದ ಮೇಲೆ ಪ್ರಾಗಭಾವವು ನಷ್ಟವಾಗಿರುವುದರಿಂದ ಇನ್ನೊಮ್ಮೆ ಘಟ ಹುಟ್ಟಲು ಸಾಧ್ಯವಿಲ್ಲವೆಂದು ಉತ್ತರಿಸಲು ಬರುತ್ತದೆ. ಅಷ್ಟೇ ಅಲ್ಲದೇ ಪ್ರಾಗಭಾವವು ಕಾರಣವಲ್ಲವೆಂದು ಹೇಳಿದರೆ ಕಾರ್ಯಗಳಲ್ಲಿರುವ ವೈಚಿತ್ರ್ಯವೇ ಯುಕ್ತವಾಗುವುದಿಲ್ಲ. ಕಾರಣದ ವೈಚಿತ್ರ್ಯದಿಂದಷ್ಟೇ ಕಾರ್ಯಗಳಲ್ಲಿ ವೈಚಿತ್ರ್ಯ ಬರುತ್ತದೆ. ಪ್ರತಿಯೊಂದು ಕಾರ್ಯಗಳಿಗೂ ಭಿನ್ನ-ಭಿನ್ನವಾದ ಪ್ರಾಗಭಾವಗಳು ಕಾರಣವಾಗಿರುತ್ತವೆ. ಇಲ್ಲದಿದ್ದರೆ ರೂಪರಸಗಳ ಉತ್ಪತ್ತಿಗೆ ಕೇವಲ ಪಾಕವು ಕಾರಣವೆಂದು ಒಪ್ಪಬೇಕು. ಆವಾಗ ಕಾರ್ಯಗಳಲ್ಲಿ ವೈಚಿತ್ರ್ಯವಿದೆ. ಪಾಕವೆಂಬ ಕಾರಣದಲ್ಲಿ ವೈಚಿತ್ರ್ಯವನ್ನು ಹೇಳಿದಂತಾಗುವುದಿಲ್ಲ. ಆವಾಗ ರೂಪರಸಾದಿಗಳಲ್ಲಿಯೂ ವೈಚಿತ್ರ್ಯವನ್ನು ಏಕೆ ಒಪ್ಪಬೇಕು? ಎಂಬ ಪ್ರಶ್ನೆಗೆ ಉತ್ತರವೂ ಕೂಡ ಸಿಗುವುದಿಲ್ಲ. ಏಕೆಂದರೆ ಕಾರ್ಯವೈಚಿತ್ರ್ಯವು ಕಾರಣವೈಚಿತ್ರ್ಯದ ಆಧೀನವೇ ಆಗಿರುತ್ತದೆ. 'ಅಸದ್ವಾಇದಮಗ್ರ ಆಸೀತ್' ಎಂಬ ಶ್ರುತಿ ಸ್ಪಷ್ಟವಾಗಿ ಪ್ರಾಗಭಾವಕ್ಕೆ ಹೇತುತ್ವವನ್ನು ಸಮರ್ಥನೆ ಮಾಡುತ್ತಿದೆ. ಹೀಗೆ ಪ್ರಾಗಭಾವಕ್ಕೆ ಶ್ರುತಿಯಿಂದ ಕಾರಣತ್ವವು

ಸಿದ್ಧವಾದ ಮೇಲೆ 'ವಿಮತಾ ಭಾವಾಃ ಪ್ರಲಯೇऽಸಂತಃ ಭಾವತ್ವಾತ್ ಕಾರ್ಯವತ್' ಎಂಬ ಪರಿಶೇಷಾನುಮಾನದಿಂದ ವಿಶ್ವಪ್ರಾಗಭಾವಕ್ಕೆ ಕರ್ತೃತ್ವವು ಸಿದ್ಧವಾಗುತ್ತದೆ. ಆದ್ದರಿಂದ ವಿಶ್ವಪ್ರಾಗಭಾವವೇ ಕಾರಣವೆನ್ನಬೇಕು ಹೊರತು, ವಿಷ್ಣುವನ್ನು ಜಗತ್ತಿಗೆ ಕರ್ತೃವೆಂದು ಹೇಳಬಾರದು. ಪ್ರಮಾಣಸಿದ್ಧವಾದ ಪ್ರಾಗಭಾವಕ್ಕೆ ಕರ್ತೃತ್ವವೆಂಬ ಒಂದು ಧರ್ಮವನ್ನು ಕಲ್ಪನೆ ಮಾಡಿದರೆ ಸಾಕು. ಈಶ್ವರನಲ್ಲಿ ಕರ್ತೃತ್ವವನ್ನು ಒಪ್ಪುವುದಾದರೆ ಧರ್ಮಿಯನ್ನು ಹಾಗೂ ಧರ್ಮ ಎರಡನ್ನೂ ಕೂಡ ಕಲ್ಪನೆ ಮಾಡಬೇಕಾಗುತ್ತದೆ. ಪ್ರಾಗಭಾವವು ಜಗತ್ತಿಗೆ ಕರ್ತೃವಾಗುವುದಾದರೆ ಜ್ಞಾನೇಚ್ಛಾದಿಗಳನ್ನೂ ಕೂಡ ಒಪ್ಪಲೇ ಬೇಕು. ಅಭಾವದಲ್ಲಿ ಜ್ಞಾನೇಚ್ಛಾದಿಗಳನ್ನು ಒಪ್ಪುವುದು ಬಹಳ ಕಷ್ಟವಾಗುತ್ತದೆಂಬ ಗೊಂದಲಕ್ಕೆ ಅವಕಾಶವಿಲ್ಲ. ಅಲೌಕಿಕಾರ್ಥದಲ್ಲಿ ವೇದವು ಹೇಳಿದಂತೆ ಕೇಳಬೇಕು. ವೇದವು ಸ್ಪಷ್ಟವಾಗಿ ಜ್ಞಾನೇಚ್ಛಾದಿಗಳನ್ನು 'ತದಸದೇವ ಸನ್ ಮನೋಽಕುರುತ' ಇತ್ಯಾದಿಯಾಗಿ ಹೇಳುತ್ತಿರುವಾಗ ಪುನಃ ಗೊಂದಲ ಮಾಡಿಕೊಂಡು ಪ್ರಾಗಭಾವವು ಕರ್ತೃವಲ್ಲವೆಂದು ಸಾಧನೆ ಮಾಡಬಾರದು. ಆದ್ದರಿಂದ ಪ್ರಾಗಭಾವವೇ ವಿಶ್ವಕ್ಕೆ ಕರ್ತೃ ಎಂದು ಪೂರ್ವಪಕ್ಷ.

### ಪ್ರಾಗಭಾವದಲ್ಲಿ ಕರ್ತೃತ್ವವು ಕೂಡುವುದಿಲ್ಲವೆಂದು ಸಿದ್ಧಾಂತ

## तात्पर्यचन्द्रिका

**सिद्धान्तमाह ।। सिद्धान्तयदिति ।। अयं भावः ।।**

**न तृतीयादियोगित्वं कर्तृतेह विवक्ष्यते ।**
**किन्तु ज्ञानादियोगित्वं तच्चाभावेन युज्यते ।। १ ।।**

ಸಿದ್ಧಾಂತವನ್ನು ಸ್ಥಾಪನೆ ಮಾಡಲು ಟೀಕೆಯಲ್ಲಿ 'ಸಿದ್ಧಾಂತಯತ್' ಇತ್ಯಾದಿ ವಾಕ್ಯಗಳು ಹೊರಟಿವೆ. ಸಿದ್ಧಾಂತದ ಸಾರ ಹೀಗಿದೆ -

ನ ತೃತೀಯಾದಿಯೋಗಿತ್ವಂ ಕರ್ತೃತೇಹ ವಿವಕ್ಷ್ಯತೇ ।
ಕಿಂತು ಜ್ಞಾನಾದಿಯೋಗಿತ್ವಂ ತಚ್ಚಾಭಾವೇನ ಯುಜ್ಯತೇ ॥೧॥

ತೃತೀಯಾದಿವಿಭಕ್ತಿಗಳ ಪ್ರಯೋಗಕ್ಕೆ ಕಾರಣವಾದ ಕರ್ತೃತ್ವವನ್ನು ಶ್ರುತಿಯಲ್ಲಿ ವಿವಕ್ಷಿಸಲಾಗದು. ಅಪರೋಕ್ಷಜ್ಞಾನಚಿಕೀರ್ಷಾದಿಮತ್ವರೂಪವಾದ ಕರ್ತೃತ್ವವೇ ವಿವಕ್ಷಿತವಾಗಿರುತ್ತದೆ. ಇದು ಜಡಭೂತವಾದ ಅಭಾವದಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ.

**नहि जन्मादिसूत्रोक्तं कर्तृत्वं तृतीयादिप्रयोजकं वैयाकरणाभिमतपारिभाषिकं कर्तृत्वम् । किन्तु ज्ञानचिकीर्षादिमत्त्वम् ।**

ಜನ್ಮಾದಿಸೂತ್ರದಲ್ಲಿ ಹೇಳಲ್ಪಟ್ಟ ಕರ್ತೃತ್ವವೆಂದರೆ ತೃತೀಯಾದಿವಿಭಕ್ತಿಗಳಿಗೆ ಪ್ರಯೋಜಕವಾದ ವೈಯಾಕರಣರು ಹೇಳುವಂತಹ ಪಾರಿಭಾಷಿಕವಾದ ಕಾರಕಾಂತರ ಅಪ್ರಯೋಜತ್ವರೂಪವಾದದ್ದಲ್ಲ. 'ಅಪರೋಕ್ಷಜ್ಞಾನಚಿಕೀರ್ಷಾದಿಮತ್ವಂ' ಎಂಬುದನ್ನೇ ವಿವಕ್ಷಿಸಬೇಕು.

**नच चेतनत्वमचेतनप्रभेदे प्रागभावे युक्तम् । अन्यथेश्वरस्यैव प्रागभाव इति संज्ञा स्यात् ।**

ಅಪರೋಕ್ಷಜ್ಞಾನಚಿಕೀರ್ಷ ಮೊದಲಾದವುಗಳೆಲ್ಲವೂ ಚೇತನನ ಧರ್ಮವೇ ಹೊರತು, ಅಚೇತನವಾದ ಅಭಾವದ ಧರ್ಮವಲ್ಲ. 'ಅಪರೋಕ್ಷಜ್ಞಾನಚಿಕೀರ್ಷಾದಿಮತ್ವ' ಎಂದರೆ ಚೇತನತ್ವವೆಂದೇ ಅರ್ಥ. ಇದು ಅಚೇತನಪ್ರಭೇದವಾದ ಪ್ರಾಗಭಾವದಲ್ಲಿ ಸರ್ವಥಾ ಕೂಡುವುದಿಲ್ಲ. ಹಾಗೇನಾದರೂ ಅಭಾವದಲ್ಲಿಯೂ ಇಂತಹ ಕರ್ತೃತ್ವವನ್ನು ಹೇಳುವುದಾದರೆ ಈಶ್ವರನಿಗೆ ಪ್ರಾಗಭಾವ ಎಂಬ ಹೆಸರನ್ನಿಟ್ಟಂತಾಗುತ್ತದೆ. ಇದು ಕೇವಲ ಹೆಸರಿನಲ್ಲಷ್ಟೇ ವಿವಾದ ಹೊರತು, ವಿಷಯದಲ್ಲಿ ಏನು ವ್ಯತ್ಯಾಸವನ್ನು ಹೇಳಿದಂತಾಗುವುದಿಲ್ಲ.

**भावत्वादियुक्तिस्तु विमतोत्पत्तिर्भावाधीना उत्पत्तित्वात् । विमतो विनाशः सशेषः विनाशत्वात् । विमतः कालोभाववान् कालत्वादित्यादि बहुयुक्तिविरुद्धा ।**

ಪ್ರಾಗಭಾವವನ್ನು ಜಗತ್‌ಕರ್ತೃವೆಂದು ಒಪ್ಪದಿದ್ದರೆ ಭಾವತ್ವಾದಿಯುಕ್ತಿಗಳ ವಿರೋಧ ಬರುತ್ತದೆ ಎಂದು ಹಿಂದೆ ಆಕ್ಷೇಪಿಸಲಾಗಿತ್ತು. ಆದರೆ ಈ ಭಾವತ್ವಾದಿಯುಕ್ತಿಗಳು ಬಲಿಷ್ಠವಾದ ಅನೇಕ ಯುಕ್ತಿಗಳಿಂದ ಬಾಧಿತವಾಗಿವೆ. 'ವಿಮತಃ ಉತ್ಪತ್ತಿಃ ಭಾವಾಧೀನಾ ಉತ್ಪತ್ತಿತ್ವಾತ್' ವಿವಾದಕ್ಕೆ ವಿಷಯವಾದ ಸೃಷ್ಟಿಯ ಆರಂಭದ ಉತ್ಪತ್ತಿಯು ಉತ್ಪತ್ತಿಯಾಗಿರುವುದರಿಂದ ಭಾವಪದಾರ್ಥದ ಅಧೀನವೇ ಆಗಿರುತ್ತದೆ. ಮತ್ತು 'ವಿಮತೋ ವಿನಾಶಃ ಸಶೇಷಃ ವಿನಾಶತ್ವಾತ್' ವಿವಾದಕ್ಕೆ ವಿಷಯವಾದ ಕೊನೆಯ ವಿನಾಶವು ವಿನಾಶವಾದ್ದರಿಂದ, ಸಶೇಷವಾಗಬೇಕು ಅಂದರೆ ಯಾವುದೇ ಭಾವಪದಾರ್ಥದಿಂದ ಸಹಿತವಾಗಿರಬೇಕು. ಮತ್ತು 'ವಿಮತಃ ಕಾಲಃ ಭಾವವಾನ್ ಕಾಲತ್ವಾತ್' ವಿವಾದಕ್ಕೆ ವಿಷಯವಾದ ಪ್ರಳಯಕಾಲವು ಕಾಲವಾದ್ದರಿಂದ ಭಾವಪದಾರ್ಥರಹಿತವಾಗಿರುತ್ತದೆ. ಹೀಗೆ ಅನೇಕ ಯುಕ್ತಿಗಳಿಂದ ಭಾವತ್ವಾದಿಯುಕ್ತಿಗಳು ವಿರುದ್ಧವಾಗಿವೆ.

**''असदेव'' इत्यादिश्रुतिस्तु ''सदेव सोम्येदमग्र आसीत् सत्त्वे व सोम्येदमग्र आसीत्,एको नारायण आसीत्'' इत्यादिबहुश्रुतिविरुद्धा ।**

'ಅಸದೇವ ಸೋಮ್ಯ' ಇತ್ಯಾದಿ ಶ್ರುತಿಗಳು ಬಹುಶ್ರುತಿಗಳಿಂದ ವಿರುದ್ಧವಾಗಿವೆ. 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯು 'ಏಕೋ ನಾರಾಯಣ ಆಸೀತ್' ಎಂಬ ಶ್ರುತಿಯು ಪ್ರಳಯಕಾಲದಲ್ಲಿ ಸತ್‌ಪದಾರ್ಥವಿತ್ತೆಂದು ನಾರಾಯಣನೇ ಇದ್ದನೆಂದು ಹೇಳುತ್ತಿದೆ.

**तदुक्तमनुव्याख्याने**

**युक्तेश्च युक्तिबाहुल्यमागमादागमस्य च ।**
**कथं न निर्णयं कुर्यादित्यसत्कारणं नहि ।। इति ।**

ಇದನ್ನೇ ಅನುವ್ಯಾಖ್ಯಾನದಲ್ಲಿ

ಯುಕ್ತೇಶ್ಚ ಯುಕ್ತಿಬಾಹುಲ್ಯಮಾಗಮಾದಾಗಮಸ್ಯ ಚ ।
ಕಥಂ ನ ನಿರ್ಣಯಂ ಕುರ್ಯಾದಿತ್ಯಸತ್ಕಾರಣಂ ನಹಿ ॥

ಪೂರ್ವಪಕ್ಷಿಯುಕ್ತಿಯು ಬಲಿಷ್ಠವಾದ ಯುಕ್ತಿಗಳಿಂದ ವಿರುದ್ಧವಾಗಿದೆ. ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶ್ರುತಿಯು ಬಲಿಷ್ಠವಾದ ಅನೇಕಾಗಮಗಳಿಂದ ವಿರುದ್ಧವಾಗಿದೆ. ಆದ್ದರಿಂದ ಯುಕ್ತಿಯಾಗಲೀ, ಆಗಮವಾಗಲೀ, ನಿರ್ಣಯ ಮಾಡಲು ಸಮರ್ಥವಲ್ಲವೆಂದು ಹೇಳಲು ಹೇಗೆ ಸಾಧ್ಯ ? ಅಸತ್ ಪದಾರ್ಥವು ಜಗತ್ತಿಗೆ ಕರ್ತೃವಾಗುವುದಿಲ್ಲವೆಂದು ಹೀಗೆ ಸಿದ್ಧವಾಗುತ್ತದೆ.

**नच श्रौतासच्छब्दोऽभावे स्वरसः । बाधकादभावपरश्चेत्तत एव ब्रह्मपरोऽस्तु । अन्यथाऽत्यन्तासदेव ज्ञानादिमत्स्यादिति ।**

ಮತ್ತು ಶ್ರುತಿಯಲ್ಲಿರುವ ಸತ್‌ಶಬ್ದವು ಪ್ರಾಗಭಾವ ಎಂಬರ್ಥದಲ್ಲಿ ಸ್ವರಸವಾಗುವುದಿಲ್ಲ. ಅಸತ್ ಶಬ್ದಕ್ಕೆ ವಿಷ್ಣು ಎಂಬರ್ಥದಲ್ಲಿ ಬಾಧಕವಿರುವುದರಿಂದ ಅಭಾವಪರವಾಗುತ್ತದೆನ್ನುವುದಾದರೆ ಅದೇ ಕಾರಣದಿಂದಲೇ ಪ್ರಾಗಭಾವಪರವೂ ಆಗುವುದಿಲ್ಲ. ಬ್ರಹ್ಮಪರವೇ ಆಗುತ್ತದೆಂದು ನಾವು ಸಾಧಿಸುತ್ತೇವೆ. ಹೀಗೊಪ್ಪದಿದ್ದರೆ ಪ್ರಾಗಭಾವವನ್ನೇ ಜಗತ್ತಿಗೆ ಕರ್ತೃವೆಂದು ಏಕೆ ಹೇಳಬೇಕು ? ಅತ್ಯಂತ ಅಸತ್ತಾದ ಪದಾರ್ಥವನ್ನೂ ಕೂಡ ಅಪರೋಕ್ಷಜ್ಞಾನಚಿಕೀರ್ಷಾದಿಗಳನ್ನು ಹೊಂದಿದೆ ಎಂದು ಒಪ್ಪಿ, ಅದಕ್ಕೆ ಕರ್ತೃತ್ವವನ್ನು ಒಪ್ಪಬೇಕಾದೀತು.

**प्रकाशः –**

अत्रोक्तपूर्वपक्ष्यभिप्रायनिरासस्य टीकायामस्पष्टत्वात् ''इति चेन्न निषेधैकस्वरूपस्य न कर्तृता । बुद्धिपूर्वप्रवृत्तिर्हि कर्तृत्वमिति निश्चितम्'' इत्यनुव्याख्यानसुधोक्तमेवाह – **अयं भाव इत्यादिना ।।**

ಈ ಅಧಿಕರಣದ ಪೂರ್ವಪಕ್ಷಿಗಳಿಗೆ ಅಭಿಪ್ರೇತವಾದ ವಿಷಯವನ್ನು ನಿರಾಕರಣೆ ಮಾಡಲು ಉಪಯುಕ್ತವಾದ ಯುಕ್ತಿಗಳು ಟೀಕೆಯಲ್ಲಿ ಸ್ಪಷ್ಟವಾಗಿ ತೋರುವುದಿಲ್ಲ. ಆದ್ದರಿಂದ 'ಇತಿ ಚೇನ್ನ

ನಿಷೇಧೈಕಸ್ವರೂಪಸ್ಯ ನ ಕರ್ತೃತಾ । ಬುದ್ಧಿಪೂರ್ವಪ್ರವೃತ್ತಿರ್ಹಿ ಕರ್ತೃತ್ವಮಿತಿ ನಿಶ್ಚಿತಮ್' ಎಂಬ ಅನುವ್ಯಾಖ್ಯಾನದ ನ್ಯಾಯಸುಧೆಯಲ್ಲಿ ಅತ್ಯಂತ ಸ್ಪಷ್ಟವಾದ ಪೂರ್ವಪಕ್ಷನಿರಾಸಕವಾದ ಯುಕ್ತಿಗಳನ್ನು ಹೇಳಿರುತ್ತಾರೆ. ಅದನ್ನು ಗ್ರಂಥಕಾರರು 'ಅಯಂ ಭಾವಃ' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ.

**प्रकाशः** – एतेन ''युक्तमेव विष्णोर्जगत्कारणत्वं न त्वसत'' इत्यादिटीका आद्यसूत्रभाष्यव्याख्यारूपा विवृता ।

ಹೀಗೆ ಹೇಳಿದ್ದರಿಂದ 'ಯುಕ್ತಮೇವ ವಿಷ್ಣೋರ್ಜಗತ್ಕಾರಣತ್ವಂ ನ ತ್ವಸತಃ' ವಿಷ್ಣುವಿಗೆ ಜಗತ್ ಕಾರಣತ್ವವು ಯುಕ್ತವೇ ಆಗುತ್ತದೆ ಹೊರತು, ಅಸತ್‌ಪದಾರ್ಥಕ್ಕೆ ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ ಇತ್ಯಾದಿ ಟೀಕೆಯು ಪ್ರಥಮಸೂತ್ರಭಾಷ್ಯದ ವ್ಯಾಖ್ಯಾನ ರೂಪವಾಗಿದೆಯೆಂದು ವಿವರಿಸಿದಂತಾಯಿತು.

**प्रकाशः** – पूर्वोक्तयुक्तिविरोध इत्यत आह – **भावत्वादीति** ।। प्रागभावस्य हेतुत्वानुमानमिष्टमेव । कर्तृत्वोपयुक्तं भावत्वादिकं तु प्रतियुक्तिविरुद्धं न कार्यक्षममित्यर्थः ।

ಪೂರ್ವಪಕ್ಷದ ಸಂದರ್ಭದಲ್ಲಿ ಹೇಳಲ್ಪಟ್ಟ ಯುಕ್ತಿಗಳ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಭಾವತ್ವಾದಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಪ್ರಾಗಭಾವಕ್ಕೆ ಕಾರಣತ್ವವನ್ನು ಸ್ಥಾಪನೆ ಮಾಡುವ ಅನುಮಾನವು ನಮಗೆ ಯುಕ್ತವೇ ಆಗಿದೆ. ಆದರೆ ಕರ್ತೃತ್ವಕ್ಕೆ ಉಪಯುಕ್ತವಾದ ಭಾವತ್ವಾದಿ ಹೇತುಗಳು ಪ್ರಬಲವಾದ ಪ್ರತೀಯುಕ್ತಿಗಳಿಂದ ವಿರುದ್ಧವಾಗಿವೆ. ಆದ್ದರಿಂದ ಭಾವತ್ವಾದಿಯುಕ್ತಿಯು ಏನನ್ನೂ ಕೂಡ ಸಮರ್ಥನೆ ಮಾಡುವುದಿಲ್ಲ ಎಂದಭಿಪ್ರಾಯ.

**प्रकाशः** – ननु द्वयोर्युक्तित्वाविशेषे कथं निर्णय इत्यतो बहुयुक्तिविरुद्धेत्युक्तम्। तत्कथमित्यतः ''न तु दृष्टान्तभावात्'' इति सूत्रभाष्याद्युक्तप्रयोगा उक्ताः ।।

ಪೂರ್ವಪಕ್ಷಕಾರರು ಹಾಗೂ ಸಿದ್ಧಾಂತಕಾರರು ಹೇಳುತ್ತಿರುವ ಎರಡೂ ಯುಕ್ತಿಗಳು ಸಮಾನವಾಗಿರುವುದರಿಂದ ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ 'ಬಹುಯುಕ್ತಿವಿರುದ್ಧ' ಎಂದು ಉತ್ತರಿಸಿದ್ದಾರೆ. ಪೂರ್ವಪಕ್ಷದಲ್ಲಿ ಒಂದೇ ಯುಕ್ತಿಯನ್ನು ಹೇಳಿದ್ದಾರೆ. ಸಿದ್ಧಾಂತದಲ್ಲಿ ಬಹುವಾದ ಯುಕ್ತಿಯನ್ನು ಹೇಳಿರುತ್ತಾರೆ. ಆದ್ದರಿಂದ ಅನೇಕ ಯುಕ್ತಿಗಳಿಂದ ಒಂದು ಯುಕ್ತಿಯು ವಿರುದ್ಧವಾಗುತ್ತದೆ. ಇದು ಹೇಗೆ ಎಂಬ ಪ್ರಶ್ನೆಗೆ 'ನ ತು ದೃಷ್ಟಾಂತಭಾವಾತ್' ಇತ್ಯಾದಿ ಸೂತ್ರದ ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟ ಅನುಮಾನ ಪ್ರಯೋಗಗಳನ್ನು ಇಲ್ಲಿ ತಿಳಿದುಕೊಳ್ಳಬೇಕು.

**प्रकाशः** – **विमतोत्पत्तिरिति** ।। भावत्वादियुक्तिमूलश्रुतिविरोध इत्यत आह – **असदेवेत्यादीति** ।। आगमस्य च बाहुल्यमित्यन्वयः ।

ಭಾವತ್ವಾದಿಯುಕ್ತಿಗಳಿಗೆ ಶ್ರುತಿಯೇ ಮೂಲವಾಗಿದೆ. ಅಂತಹ 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಸದೇವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಆಗಮಸ್ಯ ಚ' ಎಂಬುದಕ್ಕೆ 'ಬಾಹುಲ್ಯಮ್' ಎಂಬಲ್ಲಿ ಅನ್ವಯ.

**प्रकाशः** – एतेनैतद्व्याख्यानसुधा च युक्तिश्रुतिबाहुल्योदाहरणेन विवृता ध्येया । ननु श्रौतासदादिशब्दस्य मुख्यार्थत्यागः स्यादित्यत आह – **नचेति** ।। भावसाधनत्वादेरयोगादिति भावः । बाधकात् सत्त्वोक्तयादेरयोगरूपादित्यर्थः ।

ಇದರಿಂದ ನ್ಯಾಯಸುಧೆಯನ್ನು ಬಹಳವಾದ ಯುಕ್ತಿ ಹಾಗೂ ಬಹಳವಾದ ಶ್ರುತಿಗಳ ಉದಾಹರಣೆಯಿಂದ ವಿವರಿಸಿದಂತಾಯಿತು. ಶ್ರುತಿಯಲ್ಲಿರುವ ಅಸದಾದಿ ಶಬ್ದಕ್ಕೆ ಸಿದ್ಧಾಂತಕಾರರು ಮುಖ್ಯಾರ್ಥವನ್ನು ಬಿಡುತ್ತಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಭಾವಸಾಧನತ್ವವನ್ನು ಹೇಳಲಾಗದು ಎಂದಭಿಪ್ರಾಯ. 'ಬಾಧಕಾತ್' ಎಂದರೆ ಸತ್ವವನ್ನು ಹೇಳಿದ್ದು ಅಯುಕ್ತವಾಗುತ್ತದೆಂಬ ಬಾಧಕವಿರುವುದರಿಂದ.




ನ ತೃತೀಯಾದಿಯೋಗಿತ್ವಂ ಕರ್ತೃತೇಹ ವಿವಕ್ಷ್ಯತೇ ।
ಕಿಂತು ಜ್ಞಾನಾದಿಯೋಗಿತ್ವಂ ತಚ್ಚಾಭಾವೇನ ಯುಜ್ಯತೇ ॥೧॥

ತೃತೀಯಾದಿ ವಿಭಕ್ತಿಗಳ ಪ್ರಯೋಗಕ್ಕೆ ಕಾರಣವಾದ ಕರ್ತೃತ್ವವನ್ನು ಶ್ರುತಿಯಲ್ಲಿ ವಿವಕ್ಷಿಸಲಾಗದು. ಅಪರೋಕ್ಷಜ್ಞಾನಚಿಕೀರ್ಷಾದಿಮತ್ವರೂಪವಾದ ಕರ್ತೃತ್ವವೇ ವಿವಕ್ಷಿತವಾಗಿರುತ್ತದೆ. ಇದು ಜಡಭೂತವಾದ ಅಭಾವದಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ.

ಯಾವುದೇ ಒಂದು ಪದಾರ್ಥವು ನಾಶವಾದ ಮೇಲೆ ಅದರ ಅವಶೇಷವು ಇದ್ದೇ ಇರುತ್ತದೆ. ಅದರಂತೆ ಸಮಗ್ರವಿಶ್ವವು ನಾಶವಾದ ಮೇಲೆ ಇದರ ಅವಶೇಷಭಾಗವು ಪ್ರಳಯಕಾಲದಲ್ಲಿರಲೇಬೇಕು ಎಂಬುದಾಗಿ ಯುಕ್ತಿಯಿಂದ ಪ್ರಳಯಕಾಲದಲ್ಲಿ ಭಾವಪದಾರ್ಥವಿರುತ್ತದೆಂದು ಸಾಧಿಸುತ್ತೇವೆ. ಮತ್ತು ಎಲ್ಲಾ ಕಾಲದಲ್ಲಿಯೂ ಭಾವಪದಾರ್ಥವಿರುವುದರಿಂದ ಪ್ರಳಯಕಾಲದಲ್ಲಿಯೂ ಭಾವಪದಾರ್ಥವಿರಬೇಕು ಎಂದು ಸಾಧಿಸುತ್ತೇವೆ. 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯು ಪ್ರಾಗಭಾವದ ಜಗತ್ಕರ್ತೃತ್ವವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಈ ಶ್ರುತಿಗೆ ವಿರುದ್ಧವಾದ 'ಸದೇವ ಸೋಮ್ಯ ಇದಮಗ್ರ ಆಸೀತ್' 'ಏಕೋ ನಾರಾಯಣ ಆಸೀತ್' ಇತ್ಯಾದಿ ಶ್ರುತಿಗಳು ಸತ್ಯಪದಾರ್ಥವೇ ಜಗತ್ತಿಗೆ ಕರ್ತೃವಾಗಿದೆ. ನಾರಾಯಣನೇ ಜಗತ್ತಿಗೆ ಕರ್ತೃವಾಗಿದ್ದಾನೆ ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಿವೆ.

ಯುಕ್ತೇಶ್ಚ ಯುಕ್ತಿಬಾಹುಲ್ಯಮಾಗಮಾದಾಗಮಸ್ಯ ಚ ।
ಕಥಂ ನ ನಿರ್ಣಯಂ ಕುರ್ಯಾದಿತ್ಯಸತ್ಕಾರಣಂ ನಹಿ ॥

ಅಸದಧಿಕರಣ (೨-೧-೪)

ಪೂರ್ವಪಕ್ಷಿಯುಕ್ತಿಯು ಬಲಿಷ್ಠವಾದ ಯುಕ್ತಿಗಳಿಂದ ವಿರುದ್ಧವಾಗಿದೆ. ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶ್ರುತಿಯು ಬಲಿಷ್ಠವಾದ ಅನೇಕಾಗಮಗಳಿಂದ ವಿರುದ್ಧವಾಗಿದೆ. ಆದ್ದರಿಂದ ಯುಕ್ತಿಯಾಗಲೀ, ಆಗಮವಾಗಲೀ, ನಿರ್ಣಯ ಮಾಡಲು ಸಮರ್ಥವಲ್ಲವೆಂದು ಹೇಳಲು ಹೇಗೆ ಸಾಧ್ಯ ? ಅಸತ್ ಪದಾರ್ಥವು ಜಗತ್ತಿಗೆ ಕರ್ತೃವಾಗುವುದಿಲ್ಲವೆಂದು ಹೀಗೆ ಸಿದ್ಧವಾಗುತ್ತದೆ.

### ಟೀಕೆಯ ಕಠಿಣಪದಾರ್ಥ

## तात्पर्यचन्द्रिका

**भावेष्वप्यन्योन्याभावादिधर्मात्मना प्रतिषेधत्वमस्तीति व्यभिचारः स्यात् । अतः सूत्रे मात्रशब्दः ।**

ಭಾವಪದಾರ್ಥಗಳು ಅನ್ಯೋನ್ಯಾಭಾವಾದಿಧರ್ಮಸ್ವರೂಪದಿಂದ ಪ್ರತಿಷೇಧರೂಪವೇ ಆಗಿರುತ್ತದೆ. ಮಹಾವಿಷ್ಣು ಭಾವಸ್ವರೂಪನಾಗಿದ್ದರೂ ಜಡಪ್ರತಿಯೋಗಿಕವಾದ ಭೇದವು ಅವನ ಸ್ವರೂಪವೇ ಆಗಿದೆ. ಜೀವಪ್ರತಿಯೋಗಿಕವಾದ ಭೇದವೂ ಕೂಡ ಅವನ ಸ್ವರೂಪವೇ ಆಗಿದೆ. ಆದ್ದರಿಂದ ಪ್ರತಿಷೇಧತ್ವವು ಅಸತ್‌ಪದಾರ್ಥದಲ್ಲಿ ಬಂದಂತೆ ಮಹಾವಿಷ್ಣುವಿನಲ್ಲಿಯೂ ಕೂಡ ಬರುತ್ತದೆ. ಆದ್ದರಿಂದ 'ಪ್ರಾಗಭಾವಃ ನ ಜಗತ್‌ಕರ್ತಾ ಪ್ರತಿಷೇಧತ್ವಾತ್' ಎಂಬ ಅನುಮಾನಕ್ಕೆ ಮಹಾವಿಷ್ಣುವಿನಲ್ಲಿ ವ್ಯಭಿಚಾರ ಬರುತ್ತದಲ್ಲವೇ?

ಈ ದೋಷದ ಪರಿಹಾರಕ್ಕಾಗಿಯೇ ಸೂತ್ರದಲ್ಲಿ 'ಮಾತ್ರ' ಶಬ್ದವನ್ನು ಪ್ರಯೋಗಿಸಿದ್ದಾರೆ. ಅಸತ್ ಪದಾರ್ಥವು ಕೇವಲ ಪ್ರತಿಷೇಧರೂಪವಾಗಿದೆ. ಮಹಾವಿಷ್ಣು ಕೇವಲ ಪ್ರತಿಷೇಧಮಾತ್ರಸ್ವರೂಪನಾಗಿಲ್ಲ ಭಾವಸ್ವರೂಪನೂ ಆಗಿರುತ್ತಾನೆ. ಆದ್ದರಿಂದ ಹೇತುವೇ ಬಾರದ ಕಾರಣ ವ್ಯಭಿಚಾರ ಬರುವುದಿಲ್ಲ.

**तथाप्यसिद्धिः । अभावस्याप्यभिधेयत्वादिधर्मात्मना भावत्वात् ।**

ವ್ಯಭಿಚಾರ ಬಾರದಿದ್ದರೂ ಅಸಿದ್ಧಿದೋಷ ಬರುತ್ತದೆ. ಏಕೆಂದರೆ ಅಭಾವಪದಾರ್ಥವೂ ಕೂಡ 'ಅಭಿಧೇಯತ್ವಾತ್' 'ಪ್ರಮೇಯತ್ವಾತ್' ಮೊದಲಾದ ಧರ್ಮಸ್ವರೂಪದಿಂದ ಭಾವರೂಪವಾಗಿರುತ್ತದೆ. ಆದ್ದರಿಂದ ಪಕ್ಷದಲ್ಲಿ ಪ್ರತಿಷೇಧಮಾತ್ರತ್ವ ಎಂಬ ಹೇತುವೇ ಬಾರದ ಕಾರಣ ಅಸಿದ್ಧಿ ಬರುತ್ತದಲ್ಲವೇ?

**अतो मात्रशब्दाभिप्रायमाह – स्वरूपत एवेति ।। तस्यैव विवरणमभाव-धर्मात्मतामन्तरेणेति ।।**

ಈ ಪ್ರಶ್ನೆಗೆ ಉತ್ತರಿಸಲು 'ಮಾತ್ರ' ಶಬ್ದದ ಅಭಿಪ್ರಾಯವನ್ನು ಟೀಕೆಯಲ್ಲಿ 'ಸ್ವತರೂಪತಃ ಏವ' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ. 'ಸ್ವರೂಪತಃ ಏವ' ಎಂಬ ಪದದ ಅರ್ಥದ ವಿವರಣೆಯನ್ನೇ

'ಅಭಾವಧರ್ಮಾತ್ಮತಾಮಂತರೇಣ' ಎಂಬುದರಿಂದಲೂ ಮಾಡಿರುತ್ತಾರೆ. ಅಸತ್ ಪದಾರ್ಥವು ಸ್ವರೂಪತಃ ಅಭಾವರೂಪವೇ ಆಗಿದೆ. ಅಭಿಧೇಯತ್ವಾದಿಧರ್ಮಾಂತರದಿಂದ ಭಾವರೂಪವಾಗಿದ್ದರೂ ಅದನ್ನು ಇಲ್ಲಿ ವಿವಕ್ಷಿಸಬಾರದು ಎಂದಭಿಪ್ರಾಯ.

**''कारणत्वायुक्तिविरुद्धम्'' इति भाष्ये कारणत्वादेरुक्तिः श्रुतिः । तद्विरुद्धमिति विग्रहः । नतु कारणत्वाद्धेतोर्युक्तिविरुद्धमिति भिन्नं पदम् । अनन्तरभाष्य-विरोधादित्याह – कारणत्वप्रलयस्थितत्वेति ।।**

'ಕಾರಣತ್ವಾದ್ಯುಕ್ತಿವಿರುದ್ಧಮ್' ಎಂಬ ಭಾಷ್ಯವಾಕ್ಯವನ್ನು ನೋಡಿದಾಗ 'ಅಸತಃ ಕಾರಣತ್ವಾತ್ ಯುಕ್ತಿವಿರುದ್ಧಮ್' ಎಂಬ ಪದಚ್ಛೇದವನ್ನು ಮಾಡಬೇಕೆಂದು ಅನ್ಯಥಾಪ್ರತೀತಿಯು ಬರುತ್ತದೆ. ಆದರೆ ಹೀಗೆ ಪದಚ್ಛೇದವನ್ನು ಮಾಡಬಾರದು. 'ಕಾರಣತ್ವಾದ್ಯುಕ್ತಿವಿರುದ್ಧಮ್' ಎಂಬುದು ಸಮಗ್ರ ಪದವಾಗಿದೆ. 'ಕಾರಣತ್ವಾದಿ' ಎಂಬಲ್ಲಿರುವ ಆದಿಪದದಿಂದ, ಪ್ರಳಯಸ್ಥಿತತ್ವವನ್ನು ವಿವಕ್ಷಿಸಬೇಕು. ಕಾರಣತ್ವ, ಪ್ರಳಯಸ್ಥಿತತ್ವ ಮೊದಲಾದವುಗಳನ್ನು ಹೇಳುವ ಶ್ರುತಿವಾಕ್ಯಗಳಿಂದ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಗಳು ವಿರುದ್ಧವಾಗಿವೆ ಎಂಬರ್ಥವನ್ನೇ ಮಾಡಬೇಕು. ಏಕೆಂದರೆ ಈ ಪಾದದಲ್ಲಿ ಶ್ರುತಿಗೆ ಯುಕ್ತಿಯಿಂದ ವಿರೋಧವನ್ನು ಪರಿಹರಿಸುತ್ತಿದ್ದಾರೆ ಹೊರತು, ಶ್ರುತಿಗೆ ಶ್ರುತಿಯಿಂದ ಬರುವ ವಿರೋಧವನ್ನು ಪರಿಹಾರ ಮಾಡುತ್ತಿಲ್ಲ.

'ವಿಮತೋ ಭಾವಃ ಪ್ರಳಯೇ ಅಸಂತಃ ಭಾವತ್ವಾತ್' ಇವೇ ಮೊದಲಾದ ಯುಕ್ತಿಗಳಿಂದ 'ಯತೋ ವಾ ಇಮಾನಿ' ಇತ್ಯಾದಿ ಶ್ರುತಿಗಳು ಬಾಧಕವಾಗಿವೆ. ಯುಕ್ತಿಗಳೆಲ್ಲವೂ 'ಅಸದೇವ ಸೌಮ್ಯ' ಇತ್ಯಾದಿ ಶ್ರುತಿಗಳ ಬೆಂಬಲವನ್ನು ಪಡೆದಿರುವುದರಿಂದ ಬಲಿಷ್ಠವಾಗಿವೆ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. 'ಅಸದೇವ ಸನ್ಮೋಕರುತ' ಎಂಬ ಶ್ರುತಿಯಲ್ಲಿ ಪ್ರಾಗಭಾವಕ್ಕೆ ಕರ್ತೃತ್ವವು ಹೇಳಲಾಗಿದೆ. 'ಅಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಪ್ರಾಗಭಾವಕ್ಕೆ ಪ್ರಳಯಸ್ಥಿತತ್ವವನ್ನು ಹೇಳಲಾಗಿದೆ. ಇಂತಹ ಶ್ರುತಿಗಳಿಂದ ಕೂಡಿರುವ ಯುಕ್ತಿಗಳಿಂದ 'ಯತೋ ವಾ' ಇತ್ಯಾದಿ ವಾಕ್ಯಗಳು ಬಾಧಿತವಾಗಿವೆ ಎಂದು ತಿಳಿಯಬೇಕು. ಭಾಷ್ಯಕ್ಕೆ 'ಕಾರಣತ್ವಾತ್ ಯುಕ್ತಿವಿರುದ್ಧಂ' ಎಂಬುದಾಗಿ ಪದಚ್ಛೇದ ಮಾಡಿ ಅರ್ಥವನ್ನು ತಿಳಿಯಬಾರದು. ಹಾಗೆ ಪದಚ್ಛೇದ ಮಾಡಿದರೆ ಸಿದ್ಧಾಂತಭಾಷ್ಯದ ವಿರೋಧವು ಬರುತ್ತದೆ. ಇದನ್ನು ತಿಳಿಸಲು ಟೀಕೆಯಲ್ಲಿ 'ಕಾರಣತ್ವಪ್ರಳಯಸ್ಥಿತತ್ವೇ' ಎಂದು ಹೇಳಿರುತ್ತಾರೆ.

**अन्यथा पौनरुक्त्यापातादिति ।। अत्रापि समयप्राप्तस्य निषेधे प्रागभाव-कर्तृत्वप्रापकसमयाभावेन शून्यकारणता निषेधस्यैव प्रसङ्गादिति भावः ।**

ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಣೆ ಮಾಡಲು ಈ ಅಧಿಕರಣ ಹೊರಟಿದೆಯೆಂದು ಏಕೆ ಹೇಳಬೇಕು ? ಶೂನ್ಯಕ್ಕೆ ಜಗತ್‌ಕಾರಣತ್ವವನ್ನು ನಿರಾಕರಣೆ ಮಾಡಲು ಈ ಅಧಿಕರಣ ಹೊರಟಿದೆಯೆಂದು ಏಕೆ ಹೇಳಬಾರದು ಎಂಬ ಆಶಂಕೆಯು ಪ್ರಾಪ್ತವಾದರೆ ಸ್ಥಿತಿಸ್ಥಾಪಕವಾದ ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಣೆ ಮಾಡುವುದಕ್ಕಾಗಿಯೇ ಈ ಅಧಿಕರಣ ಹೊರಟಿದೆ. ಏಕೆಂದರೆ ಸಮಯವನ್ನು ನಿರಾಕರಣೆ ಮಾಡಲು ಎರಡನೆಯ ಪಾದವು ಹೊರಟಿದೆ. ಒಂದು ವೇಳೆ ಇಲ್ಲಿಯೂ ಕೂಡ ಸಮಯದ ನಿರಾಕರಣೆಯೇ ಉದ್ದೇಶವಾದರೆ ಪುನರುಕ್ತಿದೋಷವು ಬರುತ್ತದೆ. ಸಮಯಪ್ರಾಪ್ತವಾದ ಪ್ರಾಗಭಾವಕರ್ತೃತ್ವದ ನಿಷೇಧವು ಈ ಅಧಿಕರಣದ ಉದ್ದೇಶವಾದರೂ ಕೂಡ ಪುನರುಕ್ತಿಯು ಬರುತ್ತದೆ. ಸಮಯಪ್ರಾಪ್ತವಾದದ್ದರ ನಿರಾಕರಣೆಗಾಗಿ ಈ ಅಧಿಕರಣ ಹೊರಡುವುದಾದರೆ, ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಮರ್ಥಿಸುವ ಪ್ರಮೇಯವೇ ಇಲ್ಲದ ಕಾರಣ, ಶೂನ್ಯಕಾರಣತ್ವಕ್ಕೆ ಪ್ರಾಪಕವಾದ ಸಮಯವನ್ನೇ ನಿರಾಕರಣೆ ಮಾಡಬೇಕು. ಆವಾಗ 'ನಾಸತೋ ಅದೃಷ್ಟತ್ವಾತ್' ಇತ್ಯಾದಿ ಎರಡನೆಯ ಪಾದದ ಅಧಿಕರಣಗಳಿಂದ ಪುನರುಕ್ತಿ ಬರುತ್ತದೆಂದು ತಿಳಿಯಬೇಕು.

**तद्वत्प्रसङ्गादिति सूत्राक्षराणि योजयति ।। असन्मात्रावशेषप्रसङ्ग इति ।। अत्र सूत्रे तच्छब्दः सावधारणः । वदिति मतुप्प्रत्ययः । नतु परमत इव वतिरिति भावः ।।**

ಎರಡನೆಯ ಸೂತ್ರದಲ್ಲಿ 'ತದ್ವತ್ವಪ್ರಸಂಗಾತ್' ಎಂಬುದನ್ನು 'ಅಸನ್ಮಾತ್ರಾವಶೇಷಪ್ರಸಂಗಃ' ಎಂಬುದರಿಂದ ಯೋಜನೆ ಮಾಡಿದ್ದಾರೆ. ಸೂತ್ರದಲ್ಲಿರುವ ತತ್‌ಶಬ್ದವು ಸಾವಧಾರಣವಾಗಿದೆ. 'ತನ್ಮಾತ್ರವತ್ವಪ್ರಸಂಗಾತ್' 'ಪ್ರಾಗಭಾವ ಮಾತ್ರ ಇರಬೇಕಾದೀತು' ಎಂದಭಿಪ್ರಾಯ. ಇಲ್ಲಿರುವ ವತ್ ಎಂಬುದು ಮತುಪ್ ಪ್ರತ್ಯಯವಾಗಿದೆ. ಶಂಕರಭಾಷ್ಯದಲ್ಲಿ ಹೇಳಿದಂತೆ ಇವಾರ್ಥದಲ್ಲಿರುವ ವತಿ ಪ್ರತ್ಯಯವಲ್ಲ.

(ಪ್ರಾಗಭಾವ ಕರ್ತೃತ್ವಮತವು ಅಸಾಧುವಾಗಿದೆ. 'ಅಪೀತೌ ತದ್ವತ್‌ಪ್ರಸಂಗಾತ್' ಪ್ರಳಯಕಾಲದಲ್ಲಿ ಯಾವುದೇ ಭಾವಪದಾರ್ಥಗಳಿಲ್ಲವೆಂದು ಹೇಳಿದರೆ, ಕಾಲವೂ ಕೂಡ ಇಲ್ಲವೆಂದು ಹೇಳಿದಂತಾಗುತ್ತದೆ. ಆವಾಗ ಪ್ರಳಯಕಾಲವೇ ಇಲ್ಲವೆಂದು ಒಪ್ಪಿಕೊಂಡಂತಾಗುವುದರಿಂದ ಅಂತಹ ಪ್ರಳಯಕಾಲದಲ್ಲಿ ಪ್ರಾಗಭಾವವು ಮಾತ್ರ ಉಳಿದಿದೆಯೆಂದು ಹೇಗೆ ಸಮರ್ಥಿಸುತ್ತೀರಿ ? ಎಂಬುದು ಎರಡನೆಯ ಸೂತ್ರದ ಅಭಿಪ್ರಾಯ. ಸೂತ್ರದಲ್ಲಿ ತದ್ವತ್‌ಪ್ರಸಂಗಾತ್' ಎಂಬ ಪದಕ್ಕೆ ಟೀಕೆಯಲ್ಲಿ 'ಅಸನ್ಮಾತ್ರಾವಶೇಷಪ್ರಸಂಗಃ' ಎಂಬರ್ಥವನ್ನು ಬರೆದಿದ್ದಾರೆ. 'ತದ್ವತ್' ಎಂಬಲ್ಲಿರುವ ವತ್‌ಪ್ರತ್ಯಯವು ಇವಾರ್ಥದಲ್ಲಿರುವುದಲ್ಲ. ಹೊರತು, ಮತುಪ್ ಪ್ರತ್ಯಯವೆಂದು ತಿಳಿಯಬೇಕು. ತತ್ ಶಬ್ದವು ಸಾವಧಾರಣವಾದ್ದರಿಂದ ಪ್ರಾಗಭಾವವೊಂದೇ ಇರಬೇಕಾದೀತು ಎಂಬರ್ಥವನ್ನು ತಿಳಿಯಬೇಕು. ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಲ್ಲಿ 'ಮುಕ್ತೋಪಸೃಪ್ಯತ್ವವ್ಯಪದೇಶಾತ್' ಎಂದು

ಹೇಗೆ ಮಾಡುತ್ತೇವೋ ಅದರಂತೆ ಇಲ್ಲಿಯೂ ಕೂಡ 'ತದ್ವತ್ಪ್ರಸಂಗಾತ್' ಎಂಬುದಕ್ಕೆ 'ತದ್ವತ್ವಪ್ರಸಂಗಾತ್' ಎಂದೇ ಮಾಡಬೇಕು. ಅಂದರೆ ಪ್ರಳಯಕಾಲದಲ್ಲಿ ಪ್ರಾಗಭಾವವು ಮಾತ್ರ ಇರಬೇಕಾದೀತು ಎಂದರ್ಥ.)

**परंपरया वेति ।। सर्वे भावाः प्रलयेऽसन्तः भावत्वादित्यादिरूपेणेत्यर्थः ।।**

ಪ್ರಾಗಭಾವವು ಜಗತ್ತಿಗೆ ಕರ್ತೃ ಆಗುವುದಾದರೆ ಕೇವಲ ಅಭಾವ ಮಾತ್ರ ಪ್ರಳಯಕಾಲದಲ್ಲಿದೆ ಎಂಬ ಅಪ್ರಾಮಾಣಿಕವಾದ ವಿಚಾರವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಕಾಲಾದಿಗಳು ಇರುವುದಿಲ್ಲವೆಂದು ಪ್ರಾಮಾಣಿಕವಾದದ್ದನ್ನು ಪರಿತ್ಯಾಗ ಮಾಡಬೇಕಾಗುತ್ತದೆ.ಆದ್ದರಿಂದ 'ಪ್ರಳಯಕಾಲಃ ಸರ್ವಾಸತ್ವವಾನ್ ಕಾಲತ್ವಾತ್' ಎಂಬ ಅನುಮಾನದಿಂದ ಸಾಕ್ಷಾತ್ತಾಗಿ ಸರ್ವಾಸತ್ವವನ್ನು ಸಾಧನೆ ಮಾಡಿದರೆ ದೃಷ್ಟಾಂತವೇ ಇರುವುದಿಲ್ಲ. ಪರಂಪರೆಯಿಂದ ಸರ್ವಾಸತ್ವವನ್ನು ಸಾಧನೆ ಮಾಡುವುದೆಂದರೆ 'ಸರ್ವೇ ಭಾವಃ ಪ್ರಳಯೇಽಸಂತಃ ಭಾವತ್ವಾತ್' ಎಂಬುದಾಗಿ ಪ್ರಳಯವನ್ನು ಪಕ್ಷವನ್ನಾಗಿ ಮಾಡದೇ ಸಕಲಭಾವ ಪದಾರ್ಥಗಳನ್ನು ಪಕ್ಷಗಳನ್ನಾಗಿ ಮಾಡಿ ಅವುಗಳ ಅಸತ್ವವನ್ನು ಸಾಧಿಸಬೇಕು. ಟೀಕೆಯಲ್ಲಿರುವ ಪರಂಪರಯಾ ವಾ' ಎಂಬ ಶಬ್ದಕ್ಕೆ 'ಸರ್ವೇ ಭಾವಾಃ ಪ್ರಳಯೇಽಸಂತಃ ಭಾವತ್ವಾತ್' ಎಂಬ ಪರಂಪರೆಯಿಂದ ಸಾಧಿಸುವ ಅನುಮಾನದಿಂದ ಎಂದರ್ಥ.

**आगमप्रामाण्यानभ्युपगमादिति ।। आगमप्रामाण्यसाधनं च तर्केणैव कार्यमिति भावः ।।**

'ಆಗಮಪ್ರಾಮಾಣ್ಯಾನಭ್ಯುಪಗಮಾತ್' ಎಂಬುದರ ಅಭಿಪ್ರಾಯ ಹೀಗಿದೆ - ಜಗತ್ತಿಗೆ ಪ್ರಾಗಭಾವವೇ ಕರ್ತೃವಾಗಿದೆ ಎನ್ನಲು ಯುಕ್ತಿಪ್ರಮಾಣವನ್ನು ನೀವು ಹೇಳುವುದಾದರೆ, ಈಶ್ವರನೇ ಜಗತ್ತಿಗೆ ಕರ್ತೃವಾಗಿದ್ದಾನೆನ್ನಲು ನಾವೂ ಕೂಡ ಯುಕ್ತಿಯನ್ನೇ ಪ್ರಮಾಣವನ್ನಾಗಿ ಹೇಳುತ್ತೇವೆ. ಹಾಗಾದರೆ ಇಬ್ಬರ ಪಕ್ಷದಲ್ಲಿಯೂ ಕೇವಲ ತರ್ಕಪ್ರಮಾಣವನ್ನೇ ಹೇಳಿದಂತಾಯಿತು. ಆದ್ದರಿಂದ ತರ್ಕವು ಹೇಗೆ ಪ್ರಮಾಣವಾಗುತ್ತದೆ? ಎಂದು ಪ್ರಶ್ನಿಸಿದರೆ 'ಆಗಮಪ್ರಾಮಾಣ್ಯಾನಭ್ಯುಗಮಾತ್' ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. ಪ್ರತ್ಯಕ್ಷ ಹಾಗೂ ಆಗಮಗಳ ಮೂಲಕವಾದ ತರ್ಕವು ಪ್ರಮಾಣವಾಗಿದೆ ಎಂದು ಒಪ್ಪಬೇಕು. ಇಲ್ಲದಿದ್ದರೆ ಆಗಮಪ್ರಾಮಾಣ್ಯವನ್ನೇ ಸಾಧಿಸಲಾಗದು. ಆಗಮಕ್ಕೆ ಪ್ರಾಮಾಣ್ಯವನ್ನು ತರ್ಕದಿಂದಷ್ಟೇ ಸಾಧಿಸಬೇಕು ಆದ್ದರಿಂದ ಎಲ್ಲಾ ಬಗೆಯ ತರ್ಕಗಳು ಅಪ್ರಮಾಣವೆಂಬುದು ನಮ್ಮ ಉದ್ದೇಶವಲ್ಲ. ಪೂರ್ವಪಕ್ಷಿಗಳು ಪ್ರಯೋಗಿಸಲ್ಪಟ್ಟ ತರ್ಕವು ಪ್ರತ್ಯಕ್ಷ ಹಾಗೂ ಆಗಮಗಳ ಮೂಲಕವಲ್ಲದ ಕಾರಣ ಅಪ್ರಮಾಣವಲ್ಲವೆಂಬುದು ನಮ್ಮ ಉದ್ದೇಶ.

**विरुद्धतर्काविति ।। प्रमाणेनेति शेषः । घटादीनां जीवकर्तृत्वाभाव इति पदच्छेदः ।**

'ವಿರುದ್ಧತರ್ಕೌ' ಎಂಬ ಶಬ್ದದ ಅಭಿಪ್ರಾಯ ಹೀಗಿದೆ - 'ನಾವು ಹೇಳುವ ತರ್ಕವು ಪ್ರಮಾಣವಾಗಿರುವುದರಿಂದ' ಎಂಬುದನ್ನು ಶೇಷಪೂರಣ ಮಾಡಿಕೊಂಡಾಗ ವಿರುದ್ಧವಾದ ತರ್ಕದಿಂದ ಪ್ರತಿಹತವಾಗುವುದಿಲ್ಲ. ಟೀಕಾಪಂಕ್ತಿಯಲ್ಲಿ 'ಘಟಾದೀನಾಂ ಜೀವಕರ್ತೃತ್ವಾಭಾವೇನ' ಎಂದಿರುತ್ತದೆ. ಇಲ್ಲಿ 'ಘಟಾದೀನಾಂ ಜೀವಕರ್ತೃತ್ವಾಭಾವೇ ನ' ಎಂದು ಪದಚ್ಛೇದ ಮಾಡಬೇಕು.

**प्रकाशः —**

**टीकाक्षरार्थमाह — भावेष्वित्यादिना ।। इत्याहेति ।।** इति भावेन भाष्यार्थमाहेत्यर्थः । कथमयं सौत्रपदलभ्योऽर्थ इत्यत आह — **अत्रेति ।।**

ಟೀಕೆಯ ಕಠಿಣಪದಗಳ ಅರ್ಥವನ್ನು 'ಭಾವೇಷು' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಇತ್ಯಾಹ' ಎಂದರೆ ಈ ಅಭಿಪ್ರಾಯದಿಂದ ಭಾಷ್ಯದ ಅರ್ಥವನ್ನು ಹೇಳುತ್ತಿದ್ದಾರೆ ಎಂದರ್ಥ. ಸೂತ್ರದಲ್ಲಿರುವ ಪದದಿಂದ ಈ ಅರ್ಥವು ಹೇಗೆ ಲಭಿಸುತ್ತದೆ ? ಎಂಬ ಪ್ರಶ್ನೆಗೆ 'ಅತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः — आगमप्रामाण्येति ।।** यद्यपि तत्प्रामाण्येत्येव टीकापाठः । तथापि तत्पदार्थविवरणेन प्रतीकग्रहणमेतत् । तृतीयान्तत्वेऽन्वयायोगादाह — **घटादीनामिति ।।**

ಗ್ರಂಥದಲ್ಲಿ 'ಆಗಮಪ್ರಾಮಾಣ್ಯಾನಭ್ಯುಗಮಾತ್' ಎಂದು ಪ್ರತೀಕವನ್ನು ಗ್ರಹಣ ಮಾಡಿದ್ದಾರೆ. ಆದರೆ ಟೀಕೆಯಲ್ಲಿ 'ತತ್ಪ್ರಾಮಾಣ್ಯಾನಭ್ಯುಗಮಾತ್' ಎಂದೇ ಪಾಠವಿರುತ್ತದೆ. ಆದರೂ ಕೂಡ 'ತತ್' ಎಂಬ ಪದದ ಅರ್ಥವನ್ನು ವಿವರಣೆ ಮಾಡುವ ಮೂಲಕ ಗ್ರಂಥಕಾರರು 'ಆಗಮಪ್ರಾಮಾಣ್ಯ' ಎಂದು ಪ್ರಯೋಗಿಸಿದ್ದಾರೆ.

ಟೀಕೆಯಲ್ಲಿ 'ಜೀವಕರ್ತೃತ್ವಾಭಾವೇನ' ಎಂಬ ಪದವನ್ನು ನೋಡಿದಾಗ ತೃತೀಯಾಂತವಾದ ಶಬ್ದವೆಂದು ಭ್ರಾಂತಿ ಬರುತ್ತದೆ. ಆದರೆ ಹಾಗೇ ವಿವಕ್ಷಿಸಿದರೆ ಅನ್ವಯವು ಕೂಡುವುದಿಲ್ಲ. ಅದಕ್ಕಾಗಿ 'ಜೀವಕರ್ತೃತ್ವಾಭಾವೇ' ಎಂಬುದನ್ನು ಸಪ್ತಮ್ಯಂತಪದವನ್ನಾಗಿ ತಿಳಿಯಬೇಕು. 'ನ' ಎಂಬುದು ನಿಷೇಧಾತ್ಮಕವಾದ ಪ್ರತ್ಯಯ.

ಸೂತ್ರಗಳ ಶಬ್ದಸ್ವಾರಸ್ಯ

**तात्पर्यचन्द्रिका**

**अत्राद्ये सूत्रेऽभाव इति वक्तव्येऽसदिति श्रुत्यनुकरणार्थम् ।**

ಪ್ರಥಮಸೂತ್ರದಲ್ಲಿ ಅಭಾವಪದವನ್ನೇ ಪ್ರಯೋಗಿಸಬಹುದಿತ್ತು. ಆದರೂ 'ಅಸತ್' ಪದವನ್ನು ಏಕೆ ಪ್ರಯೋಗಿಸಿದರು ? ಎಂದರೆ 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯನ್ನು ಅನುಕರಣೆ ಮಾಡುವುದಕ್ಕಾಗಿ.

ಪರಿಪೂರ್ಣಚಂದ್ರಿಕಾ

**असच्छब्दस्य कर्तृसाधनत्वं भवितृप्रधानत्वं वाऽऽश्रित्य भावजातं प्रलयेऽसत् भावत्वात् कार्यवदिति युक्तिसूचनार्थं च ।**

ಮತ್ತು ಅಸತ್‌ಶಬ್ದವು ಎರಡು ಬಾರಿ ಅನ್ವಯವನ್ನು ಹೊಂದುತ್ತದೆ. ಮೊದಲನೆಯ ಬಾರಿ ಕರ್ತೃಸಾಧನವಾಗುತ್ತದೆ. ಎರಡನೆಯ ಬಾರಿ ಭವಿತೃಪ್ರಧಾನವಾಗುತ್ತದೆ. ಯಾವಾಗ ಅಸತ್ ಶಬ್ದಕ್ಕೆ ಅವಿದ್ಯಮಾನ ಎಂಬರ್ಥವನ್ನು ವಿವಕ್ಷಿಸಿದಾಗ ಅಲ್ಲಿರುವ ಶತೃ ಶತೃಪ್ರತ್ಯಯವು ಭಾವಸಾಧನವಾಗುವುದಿಲ್ಲ ಹೊರತು ಕರ್ತೃಸಾಧನವಾಗುತ್ತದೆ. ಮತ್ತು ಭಾವಪ್ರಧಾನನಿರ್ದೇಶವನ್ನು ಮಾಡಬೇಕಾಗಿಲ್ಲ. ಭವಿತೃಪ್ರಧಾನವೆಂದು ವಿವಕ್ಷಿಸಿ, 'ಭಾವಜಾತಂ ಪ್ರಳಯೇ ಸತ್ ಭಾವತ್ವಾತ್ ಕಾರ್ಯವತ್' ಎಂಬ ಯುಕ್ತಿಯನ್ನು ಇದರಿಂದ ಸೂಚಿಸಿದಂತಾಗುತ್ತದೆ.

**द्वितीयसूत्रे ''अपीतौ'' इत्यनेन प्रलये भावमात्रासत्त्वे कालोऽपि न स्यादिति सूचितम् ।**

ಎರನಡೆಯ ಸೂತ್ರದಲ್ಲಿ 'ಅಪೀತೌ' ಎಂಬ ಪದಕ್ಕೆ ಪ್ರಳಯಕಾಲದಲ್ಲಿ ಎಂದರ್ಥ. ಪ್ರಳಯಕಾಲದಲ್ಲಿ ಸಕಲಭಾವಪದಾರ್ಥಗಳು ಅವಿದ್ಯಮಾನವಾಗಿವೆ ಎಂದು ಸಾಧನೆ ಮಾಡುವುದಾದರೆ ಕಾಲವೂ ಕೂಡ ಅವಿದ್ಯಮಾನವಾಗಿದೆ ಎಂದು ಹೇಳಬೇಕಾದೀತು. ಹೀಗೆ 'ಅಪೀತೌ' ಎಂಬ ಪದದಿಂದಲೇ ಕಾಲವೂ ಕೂಡ ನಿಲ್ಲಬೇಕಾದೀತು ಎಂಬ ಆಕ್ಷೇಪವು ಸೂಚಿತವಾಗಿದೆ.

**''एतेन शिष्टा'' इति सूत्रं परेषामिव नास्माकमधिकरणान्तरम् । जीवकर्तृकत्वादि(अचेतनकर्तृकत्वादि)पक्षाणामपि श्रुत्युपसर्जनयुक्तिविरोधत्वरूपै-तदधिकरणोपाध्युपहितत्वात् ।**

'ಏತೇನ ಶಿಷ್ಟಾ' ಇತ್ಯಾದಿ ಸೂತ್ರವನ್ನು ಪರವಾದಿಗಳು ಅಧಿಕರಣಾಂತರವೆನ್ನುತ್ತಾರೆ. ಹಿಂದಿನ ಅಧಿಕರಣದ ಪ್ರಧಾನವಾದ ಸಿದ್ಧಾಂತದ ಮೇಲೆ ಅಧಿಕಾಶಂಕೆಯು ಪ್ರಾಪ್ತವಾದರೆ ಮಾತ್ರ ಅಧಿಕರಣಾಂತರವೆನ್ನಬೇಕು. ಅಂತಹ ಅಭ್ಯಧಿಕಾಶಂಕೆಯು ಇಲ್ಲದ ಕಾರಣ ಇದನ್ನು ಪ್ರತ್ಯೇಕ ಅಧಿಕರಣವೆನ್ನಬಾರದು. ಈ ಅಧಿಕರಣದಲ್ಲಿ ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಣೆ ಮಾಡುವ ಉದ್ದೇಶವಷ್ಟೇ ಅಲ್ಲದೇ, ಜೀವಕರ್ತೃತ್ವ, ಅಚೇತನಕರ್ತೃತ್ವ ಮೊದಲಾದ ಪಕ್ಷಗಳನ್ನೂ ಕೂಡ ನಿರಾಕರಣೆ ಮಾಡುವ ಉದ್ದೇಶವಿದೆ. ಹಾಗಾಗಿ 'ಶ್ರುತ್ಯುಪಸರ್ಜನಯುಕ್ತಿವಿರೋಧತ್ವ' ಎಂಬ ಅಧಿಕರಣದ ಉಪಾಧಿಯನ್ನೇ 'ಏತೇನ ಶಿಷ್ಟಾ' ಇತ್ಯಾದಿ ಸೂತ್ರವೂ ಕೂಡ ವಿವಕ್ಷಿಸಿದೆ.

**दृष्टान्ताभाव (श्रुतिबाहुल्यसहितयुक्तिबाहुल्य) रूपसिद्धान्तमूलहेतोरुपर्यधिका-शङ्काभावाच्च । अतिदेशस्त्वाद्यसूत्रोक्तस्य प्रतिषेधमात्रत्वस्य जीवादावसिद्ध्याशङ्का-सद्भावादिति ।**

ಮತ್ತು ಪ್ರಳಯಕಾಲದಲ್ಲಿ ಯಾವುದೇ ಪದಾರ್ಥವಿರುವುದಿಲ್ಲವೆನ್ನಲು ದೃಷ್ಟಾಂತವೇ ಇರುವುದಿಲ್ಲ ಎಂಬ ಸಿದ್ಧಾಂತ ಹೇತುವಿನ ಮೇಲೆ ಯಾವುದೇ ಅಭ್ಯಧಿಕಾಶಂಕೆಯು ಬರುತ್ತಿಲ್ಲವಾದ್ದರಿಂದ ಇದು ಅಧಿಕರಣಾಂತರವಾಗುವುದಿಲ್ಲ. ಹಾಗಾದರೆ 'ಏತೇನ' ಎಂಬುದಾಗಿ ಅತಿದೇಶವನ್ನೇಕೆ ಮಾಡಿದ್ದಾರೆ? ಎಂದರೆ ಪ್ರಥಮಸೂತ್ರದಲ್ಲಿ ಹೇಳಿದ ಪ್ರತಿಷೇಧಮಾತ್ರತ್ವವು ಜೀವಾದಿಗಳಲ್ಲಿ ಅಸಿದ್ಧ-ವಾಗುತ್ತದಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ಅತಿದೇಶವನ್ನು ಮಾಡಿರುತ್ತಾರೆ.

**प्रकाशः –**

टीकाक्षरार्थमुक्त्वा सूत्राक्षरार्थं विवेचयति ।। **अत्राद्येति** ।। असच्छब्दश्छान्दसभाव-साधनेनाभावपर इति प्रागेवोक्त इति भावः ।

ಟೀಕೆಯ ಕಠಿಣಪದಾರ್ಥಗಳನ್ನು ಹೇಳಿದ್ದಾಯಿತು. ಈಗ ಸೂತ್ರಗಳಲ್ಲಿರುವ ಪದಸ್ವಾರಸ್ಯವನ್ನು ವಿವೇಚನೆ ಮಾಡಲು 'ಅತ್ರಾದ್ಯೇ' ಗ್ರಂಥವು ಹೊರಟಿದೆ. ಅಸತ್‌ಶಬ್ದವು ಛಾಂದಸವಾದ್ದರಿಂದ ಭಾವಸಾಧನವಾದ್ದರಿಂದ ಅಭಾವಪರವಾಗುತ್ತದೆ. ಈ ವಿಚಾರವನ್ನು ಹಿಂದೆಯೇ ತಿಳಿಸಲಾಗಿತ್ತು.

**प्रकाशः –** उक्तं च सुधायां ''अत्रासच्छब्दो भावसाधनः श्रुत्यनुगमार्थमभावे प्रयुक्तः । अपरापि वृत्तिर्भावत्वहेतुना कार्यवदीश्वरादिकमपि प्रलयेऽसदनुमीयत इत्यत्रासच्छब्दः कर्तृसाधन'' इति ।।

ಇದನ್ನು ನ್ಯಾಯಸುಧೆಯಲ್ಲಿ 'ಅತ್ರಾಸತ್‌ಶಬ್ದೋ ಭಾವಸಾಧನಃ ಶ್ರುತ್ಯನುಗಮಾರ್ಥಮಭಾವೇ ಪ್ರಯುಕ್ತಃ । ಅಪರಾಪಿ ವೃತ್ತಿರ್ಭಾವತ್ವಹೇತುನಾ ಕಾರ್ಯವದೀಶ್ವರಾದಿಕಮಪಿ ಪ್ರಳಯೇಽಸತ್ ಅನುಮೀಯತ ಇತ್ಯತ್ರ ಅಸತ್ ಶಬ್ದಃ ಕರ್ತೃಸಾಧನಃ' ಸೂತ್ರದಲ್ಲಿರುವ ಅಸತ್‌ಶಬ್ದವು ಭಾವಸಾಧನವಾಗಿದೆ. ಶ್ರುತಿಯ ಅನುಕರಣೆಗಾಗಿ ಅಭಾವದಲ್ಲಿ ಪ್ರಯೋಗಿಸಲಾಗಿದೆ. ಮತ್ತೊಂದು ಬಗೆಯ ವೃತ್ತಿಯನ್ನು ವಿವಕ್ಷಿಸಿದಾಗ ಅಸತ್‌ಶಬ್ದವು ಕರ್ತೃಸಾಧನವಾಗುತ್ತದೆ. ಈಶ್ವರನು ಪ್ರಳಯಕಾಲದಲ್ಲಿ ಇರುವುದಿಲ್ಲ ಎಂದು ಸಾಧನೆ ಮಾಡಿದಾಗ ಕರ್ತೃಸಾಧನವಾಗುತ್ತದೆ.

**प्रकाशः – भवित्रिति** ।। प्रागुक्तरीत्या भावसाधनत्वेऽपीति भावः ।। **इति सूचितमिति** ।। तथैव सुधोक्तेरिति भावः । तथा च पक्षासिद्ध्या सर्वासत्त्वानुमानं तव न स्यादिति भावः ।

'ಭವಿತೃಪ್ರಧಾನತ್ವಮ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಹಿಂದೆ ಹೇಳಿದ ಪ್ರಕಾರ ಭಾವಸಾಧನ-ವಾಗಿದ್ದರೂ ಕೂಡ ಎಂದು ಇಲ್ಲಿ ವಿವಕ್ಷಿಸಬೇಕು. 'ಇತಿ ಸೂಚಿತಮ್' ಎಂಬುದರಿಂದ ನ್ಯಾಯಸುಧೆಯಲ್ಲಿ

ಹೀಗೆ ಸೂಚನೆ ಮಾಡಿದ್ದಾರೆ ಎಂದು ತಿಳಿಯಬೇಕು. ಆದ್ದರಿಂದ ಪಕ್ಷವೇ ಅಸಿದ್ಧವಾಗುವ ಕಾರಣ ಸಕಲಕ್ಕೂ ಅಸತ್ತ್ವವನ್ನು ಸಾಧಿಸುವ ನಿನ್ನ ಅನುಮಾನವೇ ಯುಕ್ತವಾಗದಿರಬೇಕಾದೀತು ಎಂದಭಿಪ್ರಾಯ.

**प्रकाशः – टीकायामनुक्तेः ''नहि जीवादीनां प्रतिषेधमात्रत्वमस्ति । येनोक्तविरोधस्स्यात्'' इति सुधोक्तामधिकाशङ्कामाह – अतिदेशस्त्विति ।।**

ಟೀಕೆಯಲ್ಲಿ ಅಧಿಕಾಶಂಕೆಯನ್ನು ತೋರಿಸಿರುವುದಿಲ್ಲ. ಆದರೆ ನ್ಯಾಯಸುಧೆಯಲ್ಲಿ 'ನಹಿ ಜೀವಾದೀನಾಂ ಪ್ರತಿಷೇಧಮಾತ್ರತ್ವ ಅಸ್ತಿ ಯೇನೋಕ್ತವಿರೋಧಃ ಸ್ಯಾತ್' ಎಂಬ ವಾಕ್ಯದಿಂದ ಅಧಿಕಾಶಂಕೆಯನ್ನು ತೋರಿಸಿದ್ದಾರೆ. ಇದನ್ನೇ 'ಅತಿದೇಶಸ್ತು' ಇತ್ಯಾದಿಯಾಗಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.




ಪ್ರಥಮಸೂತ್ರದಲ್ಲಿ ಭಾವಬೋಧಕಾರರ ಪ್ರಕಾರ 'ಅಸತ್' ಎಂಬ ಶಬ್ದವು ಸ್ವರಸವಾಗುತ್ತದೆ. ಆದರೆ ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಣೆ ಮಾಡುವ ಉದ್ದೇಶವನ್ನು ಹೊಂದುವುದಾದರೆ ಅಸ್ವರಸವಾಗುತ್ತದೆಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಇದನ್ನು ಚಂದ್ರಿಕೆಯಲ್ಲಿ ವಿಮರ್ಶಿಸಲಾಗಿದೆ. ಅಭಾವಶಬ್ದವನ್ನು ಸೂತ್ರದಲ್ಲಿ ಹೇಳದೇ, ಅಸತ್‌ಶಬ್ದವನ್ನು ಏಕೆ ಪ್ರಯೋಗಿಸಿದ್ದಾರೆಂದರೆ 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯ ಅನುಕರಣೆಗಾಗಿ, ಅಥವಾ ಸಕಲ ಭಾವಪದಾರ್ಥಗಳು ಪ್ರಳಯಕಾಲದಲ್ಲಿ ಭಾವಪದಾರ್ಥವಾದ್ದರಿಂದ ಅಸತ್ತಾಗಿವೆ ಎಂಬ ಯುಕ್ತಿಯನ್ನು ಸೂಚನೆ ಮಾಡುವುದಕ್ಕಾಗಿಯೂ 'ಅಸತ್' ಶಬ್ದವನ್ನೇ ಪ್ರಯೋಗಿಸಿದ್ದಾರೆ. ಎರಡನೆಯ ಸೂತ್ರದಲ್ಲಿ 'ಅಪೀತೌ' ಎಂಬ ಪದದಿಂದ ಪ್ರಾಗಭಾವಪಕ್ಷಕರ್ತೃತ್ವದಲ್ಲಿ ಪ್ರಳಯಕಾಲವು ಇಲ್ಲದಿರಬೇಕಾದೀತು ಎಂಬ ಆಕ್ಷೇಪವು ಸೂಚಿತವಾಗಿದೆ. ಅದ್ವೈತಿಗಳು 'ಏತೇನ ಶಿಷ್ಟಾ ಅಪರಿಗ್ರಹಾ' ಇತ್ಯಾದಿ ಸೂತ್ರವನ್ನು ಪ್ರತ್ಯೇಕ ಅಧಿಕರಣವೆನ್ನುತ್ತಾರೆ. ಆದರೆ ಸಿದ್ಧಾಂತದ ಮುಖ್ಯಯುಕ್ತಿಯ ಮೇಲೆ ಯಾವಾಗ ಅಭ್ಯಧಿಕಾಶಂಕೆಯು ಬರುವುದಿಲ್ಲವೋ, ಆವಾಗ ಅಧಿಕರಣಾಂತರವೆಂದು ಪರಿಗಣಿಸಬಾರದು. ಪ್ರಕೃತ ದೃಷ್ಟಾಂತಾಭಾವ ಎಂಬ ಸಿದ್ಧಾಂತಯುಕ್ತಿಯ ಮೇಲೆ ಯಾವುದೇ ಅಧಿಕಾಶಂಕೆಯನ್ನು ಮಾಡಿಕೊಂಡು, 'ಏತೇನ ಶಿಷ್ಟಾ' ಇತ್ಯಾದಿ ಸೂತ್ರವು ಉತ್ತರಿಸುತ್ತಿಲ್ಲ. ಹೀಗಿರುವಾಗ ಇದನ್ನು ಅಧಿಕರಣಾಂತರವೆಂದು ಪರಿಗಣಿಸಬಾರದು. ಅಷ್ಟೇ ಅಲ್ಲದೇ ಈ ಅಧಿಕರಣದಲ್ಲಿ ಕೇವಲ ಪ್ರಾಗಭಾವಕ್ಕೆ ಮಾತ್ರ ಕರ್ತೃತ್ವವನ್ನು ನಿರಾಕರಣೆ ಮಾಡುವ ಉದ್ದೇಶವಿಲ್ಲ. ಜೀವಕರ್ತೃತ್ವಪಕ್ಷವನ್ನು ಅಚೇತನಕರ್ತೃತ್ವಪಕ್ಷವನ್ನೂ ಕೂಡ ನಿರಾಕರಣೆ ಮಾಡುವ ಉದ್ದೇಶವಿದೆ. ಆದ್ದರಿಂದ 'ಶ್ರುತ್ಯುಪಸರ್ಜನಯುಕ್ತಿವಿರೋಧಿತ್ವ' ಎಂಬ ಈ ಅಧಿಕರಣದ ಉಪಾಧಿಯನ್ನೇ 'ಏತೇನ ಶಿಷ್ಟಾ' ಇತ್ಯಾದಿ ಸೂತ್ರವೂ ಕೂಡ ಹೊಂದಿರುವುದರಿಂದ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಬೇಕಾಗಿಲ್ಲ.

## ಮಾಯವಾದದಲ್ಲಿ ಸೂತ್ರಾರ್ಥ

### तात्पर्यचन्द्रिका

**यदुक्तमुभाभ्यां ''न विलक्षणत्वात्'' इत्यादि ''एवमप्यनिर्मोक्षप्रसङ्ग'' इत्यन्तं सूत्राष्टकमेकाधिकरणम् । ''न विलक्षणत्वात्'' इत्यस्यानन्तरं ''दृश्यते तु'' इति सूत्रं तु नास्त्येव ।**

ಅದ್ವೈತ ಮತದಲ್ಲಿ ಮತ್ತು ರಾಮಾನುಜಮತದಲ್ಲಿ 'ನ ವಿಲಕ್ಷಣತ್ವಾತ್' ಎಂಬ ನಾಕನೆಯ ಸೂತ್ರದಿಂದ ಪ್ರಾರಂಭಿಸಿ 'ತರ್ಕ-ಅಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷ ಪ್ರಸಂಗಃ' ಎಂಬ ಸೂತ್ರದ ತನಕ ಎಂಟು ಸೂತ್ರಗಳು ಸೇರಿ ಒಂದೇ ಅಧಿಕರಣವಾಗುತ್ತವೆ. ಆದರೆ 'ನ ವಿಲಕ್ಷಣಾತ್'ಎಂಬ ಸೂತ್ರದಿಂದ 'ತರ್ಕ ಅಪ್ರತಿಷ್ಠಾನಾತ್' ಎಂಬಲ್ಲಿಯ ತನಕ ಒಟ್ಟು ಒಂಬತ್ತು ಸೂತ್ರಗಳಿವೆ. ಅದ್ವೈತಿಗಳಾಗಲೀ, ರಾಮಾನುಜರಾಗಲೀ 'ನ ವಿಲಕ್ಷಣಾತ್' ಎಂಬ ಸೂತ್ರದ ಅನಂತರವಿರುವ 'ದೃಶ್ಯತೇ ತು' ಎಂಬ ಸೂತ್ರವನ್ನು ಇಲ್ಲವೆಂದು ಹೇಳುತ್ತಾರೆ. ಆದರೆ 'ಅಭಿಮಾನಿವ್ಯಪದೇಶಸ್ತು' ಇತ್ಯಾದಿ ಸೂತ್ರದ ಮುಂದಿನ 'ದೃಶ್ಯತೇ ಚ' ಎಂಬ ಸೂತ್ರ ಇದೆ ಎನ್ನುತ್ತಾರೆ.

**अस्य जगतःस्थौल्यसावयवत्वाचेतनत्वपरिच्छिन्नत्वादिना ब्रह्मविलक्षणत्वान्न ब्रह्मोपादानकत्वम् । तथात्वं च वैलक्षण्यं च ''विज्ञानं चाविज्ञानं च'' इत्यादि-शब्दात्सिद्धमित्याद्यसूत्रेणोक्त्वा**

'ನ ವಿಲಕ್ಷಣಾತ್ವಾದಸ್ಯ ತಥಾತ್ವಂ ಚ ಶಬ್ದಾತ್' - ಅಸ್ಯ = ಈ ಜಗತ್ತು, ವಿಲಕ್ಷಣತ್ವಾತ್ = ಸ್ಥೌಲ್ಯ ಸಾವಯತ್ವ, ಅಚೇತನತ್ವ, ಪರಿಚ್ಛಿನ್ನತ್ವ ಮೊದಲಾದ ಧರ್ಮಗಳನ್ನು ಹೊಂದಿರುವುದರಿಂದ ಬ್ರಹ್ಮನಿಗಿಂತ ವಿಲಕ್ಷಣವಾಗಿರುವುದರಿಂದ, ನ = ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗುವುದಿಲ್ಲ. ತಥಾತ್ವಂ ಚ = ಅಂಥ ವೈಲಕ್ಷಣ್ಯವಾದರೂ, ಶಬ್ದಾತ್ = ವಿಜ್ಞಾನಂ ಚಾವಿಜ್ಞಾನಂ ಚ' ಇತ್ಯಾದಿ ಶ್ರುತಿಗಳಿಂದಲೇ ಸಿದ್ಧವಾಗಿದೆ. ಹೀಗೆ ಪ್ರಥಮ ಸೂತ್ರದಿಂದ ಪೂರ್ವಪಕ್ಷವನ್ನು ಮಾಡಲಾಗಿದೆ.

**नच ''मृदब्रवीत्'' इत्यादिश्रुत्या जगदपि चेतनरूपमेवेति वैलक्षण्यमसिद्धमिति वाच्यम् । तत्राभिमानिदेवताव्यपदेशादिति द्वितीये नोक्तम् ।**

'ಮೃದಬ್ರವೀತ್' 'ಮಣ್ಣು ಮಾತನಾಡಿತು' ಇತ್ಯಾದಿ ಶ್ರುತಿಗಳ ಬಲದಿಂದ ಜಗತ್ತೂ ಕೂಡ ಚೇತನರೂಪವೇ ಆಗಿದೆ. ಆದ್ದರಿಂದ ಬ್ರಹ್ಮನಿಗಿಂತ ವೈಲಕ್ಷಣ್ಯವು ಅಸಿದ್ಧವಾಗಿದೆಯಲ್ಲವೇ? ಎಂಬ ಅವಾಂತರಪ್ರಶ್ನೆಗೂ ಅವಕಾಶವಿಲ್ಲ. ಏಕೆಂದರೆ 'ಅಭಿಮಾನಿವ್ಯಪದೇಶಸ್ತು' = 'ಮೃದಬ್ರವೀತ್'

ಎಂಬಲ್ಲಿ ಮಣ್ಣಿನ ಅಭಿಮಾನಿದೇವತೆ ಮಾತನಾಡಿತು ಎಂದರ್ಥ. ಏಕೆಂದರೆ 'ವಿಶೇಷಾನುಗತಿಭ್ಯಾಂ' = ಉಪನಿಷತ್ತಿನಲ್ಲಿ ಭೋಕ್ತೃಭೋಗ್ಯಗಳ ವಿಭಾಗವನ್ನು ಮಾಡಿರುವುದರಿಂದ ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ. ಹೀಗೆ ಎರಡನೆಯ ಸೂತ್ರದಿಂದ ಅವಾಂತರಶಂಕೆಯನ್ನು ಪರಿಹರಿಸಿ ಪೂರ್ವಪಕ್ಷವನ್ನು ದೃಢಪಡಿಸಲಾಗಿದೆ.

**तथा चैते पूर्वपक्षसूत्रे । एवं प्राप्ते वैलक्षण्येऽपि गोमयवृश्चिकादेः कार्यकारणभावो दृश्यत इति तृतीयसूत्रेण सिद्धान्तयित्वा**

ಹೀಗೆ ಮೊದಲೆರಡು ಸೂತ್ರಗಳಿಂದ ಪೂರ್ವಪಕ್ಷವು ಪ್ರಾಪ್ತವಾದರೆ 'ದೃಶ್ಯತೇ ಚ' ಎಂಬ ಮೂರನೆಯ ಸೂತ್ರದಿಂದ ಸಿದ್ಧಾಂತವನ್ನು ಸ್ಥಾಪಿಸಲಾಗಿದೆ. ದೃಶ್ಯತೇ ಚ = ಕಾರ್ಯಕಾರಣಗಳಿಗೆ ವೈಲಕ್ಷಣ್ಯವು ಇದ್ದರೂ ಕೂಡ ಗೋಮಯ ಹಾಗೂ ವೃಶ್ಚಿಕಗಳಿಗೆ ಕಾರ್ಯಕಾರಣಭಾವವು ಲೋಕದಲ್ಲಿ ಕಂಡಿದೆ. ಅದರಂತೆ ಶುದ್ಧನಾದ ಬ್ರಹ್ಮನಿಂದ ಅಶುದ್ಧವಾದ ಜಗತ್ತು ಹುಟ್ಟಿದೆ ಎಂದು ಹೇಳಿದರೆ ಯುಕ್ತಿವಿರೋಧವು ಬರುವುದಿಲ್ಲ. ಹೀಗೆ ಮೂರನೆಯ ಸೂತ್ರದಿಂದ ಸಿದ್ಧಾಂತವನ್ನು ಸ್ಥಾಪಿಸಲಾಗಿದೆ.

**ननु तर्ह्यचेतनरूपं जगत्प्रागुत्पत्तेरसत्प्रसज्येत । तदा चेतनब्रह्ममात्रावस्थानात्। तच्चानिष्टं सत्कार्यवादिनस्तवेति चेन्न । कार्यस्य कारणाभिन्नतया कारणरूपेण सत्त्वसम्भवात् । सत्कार्यवादप्रतिषेधस्य प्रतिषेधमात्रत्वात्सत्कार्यवादप्रतिषेधासमर्थत्वादिति चतुर्थसूत्रेणोक्त्वा**

'ಅಸದಿತಿಚೇತ್ ನ ಪ್ರತಿಷೇಧಮಾತ್ರತ್ವಾತ್' - ಅಸದಿತಿಚೇತ್ = ಅಚೇತನರೂಪವಾದ ಜಗತ್ತು ಹುಟ್ಟುವ ಮೊದಲು ಇರಲಿಲ್ಲವೆಂದು ನೀವು ಹೇಳಿದಂತಾಯಿತು. ಏಕೆಂದರೆ ಚೇತನಸ್ವರೂಪನಾದ ಬ್ರಹ್ಮನಷ್ಟೇ ಪ್ರಳಯಕಾಲದಲ್ಲಿರುತ್ತಾನೆಂದು ಹೇಳಿದ್ದೀರಿ. ಸತ್ಕಾರ್ಯವಾದಿಗಳಾದ ನಿನಗೆ ಅನಿಷ್ಟವಲ್ಲವೇ? ನ = ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಪ್ರತಿಷೇಧಮಾತ್ರತ್ವಾತ್ = ಕಾರ್ಯವು ಕಾರಣಕ್ಕಿಂತ ಅಭಿನ್ನವಾಗಿರುವುದರಿಂದ ಸೃಷ್ಟಿಯ ಮೊದಲು ಕಾರ್ಯವು ಕಾರಣ-ರೂಪದಿಂದ ಇರುತ್ತದೆಂದು ಹೇಳಬಹುದು. ಸತ್ಕಾರ್ಯವಾದ ಪ್ರತಿಷೇಧವು ಕೇವಲ ಪ್ರತಿಷೇಧ ಮಾತ್ರವಾಗಿದೆ. ಇದನ್ನು ವಾಸ್ತವಿಕವಾಗಿ ನಿರಾಕರಣೆ ಮಾಡಲು ಬರುವುದಿಲ್ಲ ಎಂಬುದಾಗಿ ನಾಲ್ಕನೆಯ ಸೂತ್ರದಿಂದ ಸಮರ್ಥಿಸಲಾಗಿದೆ.

**ननु तर्हि प्रलये कार्यं कारणाविभागमापद्यमानं कारणमात्मीयेन धर्मेण दूषयेदिति कार्यवद्ब्रह्मणोऽप्यशुद्ध्यादिप्रसङ्गादसमञ्जसमिदमिति पञ्चमेन पूर्वपक्षयित्वा**

'ಅಪೀತೌ ತದ್ವತ್ ಪ್ರಸಂಗಾದಸಮಂಜಸಮ್' - ಅಪೀತೌ = ಪ್ರಳಯಕಾಲದಲ್ಲಿ, ತದ್ವತ್ ಪ್ರಸಂಗಾತ್ = ಕಾರ್ಯವೆಲ್ಲವೂ ಬ್ರಹ್ಮಸ್ವರೂಪವೇ ಆಗಬೇಕಾಗುತ್ತದೆ. ಏಕೆಂದರೆ ಘಟವು

ನಾಶವಾದಾಗ ಮಣ್ಣೇ ಆಗುವಂತೆ ಜಗತ್ತು ನಾಶವಾದಾಗ ಬ್ರಹ್ಮಸ್ವರೂಪವೇ ಆಗಬೇಕಾಗುತ್ತದೆ. ಆವಾಗ ಜಗತ್ತು ಹೇಗೆ ಅಶುದ್ಧವಾಗಿದೆಯೋ ? ಬ್ರಹ್ಮನೂ ಕೂಡ ಅಶುದ್ಧನಾಗಬೇಕಾಗುತ್ತದೆ. ಇದರಿಂದ ಬ್ರಹ್ಮನು ಸರ್ವಜ್ಞನಾಗಿದ್ದಾನೆ ಇತ್ಯಾದಿ ಉಪನಿಷತ್ತಿನಲ್ಲಿ ಹೇಳಿದ್ದು ಭಂಗವಾಗುತ್ತದೆ. ಅಸಮಂಜಸಮ್ = ಐದನೆಯ ಸೂತ್ರದಿಂದ ಪೂರ್ವಪಕ್ಷವನ್ನು ಮಾಡಿ, ಆರನೆಯ ಸೂತ್ರದಿಂದ ಸಮಾಧಾನವನ್ನು ನೀಡಲಾಗಿದೆ.

**मैवं शरावमायास्वप्नादिषु प्रलीनेषु तद्धर्माणां मृन्मायाविस्वप्नद्रष्ट्रादिष्वदर्शनेन कारणस्य कार्यदोषासंसर्गे दृष्टान्तसद्भावादिति षष्ठेन सिद्धान्तयित्वा**

'ನ ತು ದೃಷ್ಟಾಂತಭಾವಾತ್' ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಿದಾಗ, 'ನತು' = ಹಿಂದೆ ಹೇಳಿದ ಆಕ್ಷೇಪಗಳು ಬರುವುದಿಲ್ಲ. ಏಕೆಂದರೆ ದೃಷ್ಟಾಂತಭಾವಾತ್ = ಕಾರ್ಯಕಾರಣಗಳಿಗೆ ಅಭೇದವಿದ್ದರೂ ಕೂಡ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುವುದಿಲ್ಲವೆನ್ನಲು ಅನೇಕ ದೃಷ್ಟಾಂತಗಳಿವೆ. ಘಟವು ಮಣ್ಣಾಗಿದ್ದರೂ ಮಣ್ಣನ್ನು ಘಟವೆಂದು ಕರೆಯುವುದಿಲ್ಲ. ಐಂದ್ರಜಾಲಿಕನು ತನ್ನ ಮಾಯಿಕವಾದ ವಿದ್ಯೆಯಿಂದ ಬೇರೆಯವರನ್ನು ಮೋಹಗೊಳಿಸಿದರೂ ತಾನು ಆ ಮೋಹಜಾಲದಲ್ಲಿ ಸಿಲುಕಿಕೊಂಡಿರುವುದಿಲ್ಲ. ಇದರಂತೆ ಬ್ರಹ್ಮನು ಮಾಯೆಯಿಂದ ಜಗತ್ತನ್ನು ಸೃಷ್ಟಿ ಮಾಡಿದರೂ ಅದರ ಗುಣದೋಷಗಳನ್ನು ಅವನು ಪಡೆಯುವುದಿಲ್ಲ. ಸ್ವಪ್ನಕಾಲದಲ್ಲಿ ಬ್ರಹ್ಮನೊಂದಿಗೆ ಜೀವರು ಲಯವನ್ನು ಹೊಂದಿದ್ದರೂ ಪುನಃ ಎಚ್ಚರವಾದ ಮೇಲೆ ಭೋಗ್ಯಪ್ರಪಂಚವನ್ನು ಕಾಣುತ್ತಾರೆ. ಪ್ರಳಯಕಾಲದಲ್ಲಿ ಪರಮಾತ್ಮನಲ್ಲಿ ಲೀನರಾದ ಜೀವರ ಅಜ್ಞಾನ ನಾಶವಾಗುವುದಿಲ್ಲ. ಸೃಷ್ಟಿಕಾಲದಲ್ಲಿ ಭೋಗ್ಯಪ್ರಪಂಚ ಅವರಿಗೆ ಕಾಣಿಸುತ್ತದೆ. (ಮುಕ್ತರಿಗೆ ಅಜ್ಞಾನವು ಸಂಪೂರ್ಣವಾಗಿ ನಾಶವಾಗಿರುವುದರಿಂದ ಅವರಿಗೆ ಪುನಃ ಪ್ರಪಂಚವು ಕಾಣಿಸುವುದಿಲ್ಲ.)

**किञ्च न विलक्षणत्वादनुपादानतेत्यादयो दोषाः सांख्यमतेऽपि समाः । शब्दादिहीनं प्रधानं शब्दादिमज्जगदुपादानमिति सांख्यैः स्वीकारादिति सप्तमेनोक्त्वा**

'ಸ್ವಪಕ್ಷದೋಷಾಚ್ಚ' = ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿರುವುದರಿಂದ, ಉಪಾದಾನ-ಕಾರಣವಲ್ಲವೆಂದು ಹೇಳಬಾರದು ಇತ್ಯಾದಿ ದೋಷಗಳು ಸಾಂಖ್ಯಮತದಲ್ಲಿಯೂ ಕೂಡ ಸಮಾನವಾಗಿವೆ. ಏಕೆಂದರೆ ಶಬ್ದ ಮೊದಲಾದ ಗುಣಗಳನ್ನು ಹೊಂದದ ಪ್ರಕೃತಿಯೂ ಕೂಡ ಶಬ್ದಾದಿಗುಣಗಳನ್ನು ಹೊಂದಿರುವ ಜಗತ್ತಿಗೆ ಉಪಾದಾನಕಾರಣವಾಗಿದೆ ಎಂದು ಸಾಂಖ್ಯರು ಹೇಳುತ್ತಾರೆ. ಹೀಗಿರುವಾಗ ಸಾಂಖ್ಯರಾದರೂ ಪ್ರಕೃತಿ ಜಗತ್ತಿಗೆ ಕಾರಣವೆಂದು ಹೇಗೆ ಹೇಳುತ್ತಾರೆ ?

**किञ्च न तर्केण ब्रह्मणः श्रौतकारणत्वापह्नवो युक्तः । तर्काणामप्रतिष्ठितत्वात्। ननु अन्यथा तर्कस्याप्रतिष्ठा यथा न भवति तथा सूक्ष्मबुद्धिभिरनुमेयमिति**

**चेदेवमपि विषयान्तरे तर्कस्य प्रतिष्ठितत्वेऽप्यतिगम्भीरे शब्दैकगम्ये जगत्कारणे तर्कस्याप्रतिष्ठितत्वदोषादनिर्मोक्ष इत्यष्टमेनोक्तमिति ।**

'ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' - ಶ್ರುತಿಯಿಂದ ಸಿದ್ಧವಾದ ಬ್ರಹ್ಮನ ಜಗತ್‌ಕಾರಣತ್ವವಾದವನ್ನು ನಿರಾಕರಿಸಲು ಸಾಧ್ಯವಿಲ್ಲ. 'ತರ್ಕಾಪ್ರತಿಷ್ಠಾನಾತ್' = ತರ್ಕಗಳೆಲ್ಲವೂ ಬುದ್ಧಿಕೌಶಲ್ಯಾಧೀನವಾದ್ದರಿಂದ ಅರ್ಥನಿಶ್ಚಾಯಕಗಳಲ್ಲ. 'ಅಪಿ ಅನ್ಯಥಾನುಮೇಯಮಿತಿ ಚೇತ್' = ತರ್ಕವು ಅಪ್ರತಿಷ್ಠಿತವಾಗುವಂತೆ ಬುದ್ಧಿಕೌಶಲ್ಯ ಇರುವವರು ಅನುಮಾನವನ್ನು ಮಾಡಬಹುದು. ತರ್ಕವು ಅಪ್ರಮಾಣವಾದರೆ ಲೋಕವ್ಯವಹಾರವೇ ನಡೆಯುವುದಿಲ್ಲ. ಆದ್ದರಿಂದ ದುಷ್ಟತರ್ಕದಂತೆ ಸತ್ತರ್ಕಗಳನ್ನು ಒಪ್ಪಬೇಕಾಗುವುದು ಎಂದರೆ 'ಅನ್ಯಥಾನುಮೇಯಮಿತಿ ಚೇತ್' = ಸತ್ತರ್ಕಗಳು ಇರುತ್ತವೆ. ಆದರೆ ಕೇವಲ ತರ್ಕವೇ ಅರ್ಥನಿಶ್ಚಾಯಕವಾಗುವುದಾದರೆ, ಮೋಕ್ಷಕ್ಕೆ ಕಾರಣವಾದ ತತ್ತ್ವಜ್ಞಾನವು ಒಂದೇ ವಿಧವಾಗಿದ್ದರೂ ಒಬ್ಬೊಬ್ಬರು ಒಂದೊಂದು ವಿಧವಾಗಿ ಏಕೆ ಹೇಳುತ್ತಾರೆ ? ಅನಿರ್ಮೋಕ್ಷಪ್ರಸಂಗಃ = ಎಲ್ಲಾ ತರ್ಕಗಳು ಸರಿಯೇ ಆದರೆ ಎಲ್ಲರ ವಿರುದ್ಧವಾದವು ಸರಿಯಾದುದರಿಂದ ಯಾರಿಗೂ ಮೋಕ್ಷವಾಗದೇ ಇರಬೇಕಾದೀತು. ಆದ್ದರಿಂದ ಅತೀಂದ್ರಿಯವಾದ ವಿಷಯದಲ್ಲಿ ವೇದವೇ ಅರ್ಥನಿಶ್ಚಾಯಕ. ವೇದವು ಹೇಳಿದ್ದನ್ನು ತರ್ಕದಿಂದ ನಿರಾಕರಣೆ ಮಾಡಬಾರದು. ಹೀಗಿರುವಾಗ ಕೇವಲ ತರ್ಕದ ಆಧಾರದಿಂದ ಪ್ರಕೃತಿಯನ್ನು ಜಗತ್ತಿಗೆ ಕಾರಣವೆಂದು ಸಮರ್ಥಿಸಿ, ಶ್ರುತಿಸಿದ್ಧವಾದ ಬ್ರಹ್ಮಕಾರಣತ್ವವಾದವನ್ನು ನಿರಾಕರಣೆ ಮಾಡುವುದು ತಪ್ಪಾಗುತ್ತದೆ.

**प्रकाशः —**

यत्तूक्तमिति ।।

प्रकृत्या सह सारूप्यं विकाराणामवस्थितम् ।
जगद्ब्रह्मस्वरूपं च नेति नो तस्य विक्रिया ।
विशुद्धं चेतनं ब्रह्म जगज्जडमशुद्धिभाक् ।
तेन प्रधानसारूप्यात्प्रधानस्यैव विक्रिया ।। इति भामत्युक्तम् ।

ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

ಪ್ರಕೃತ್ಯಾ ಸಹ ಸಾರೂಪ್ಯಂ ವಿಕಾರಾಣಾಮವಸ್ಥಿತಮ್ ।
ಜಗದ್ಬ್ರಹ್ಮಸ್ವರೂಪಂ ಚ ನೇತಿ ನೋ ತಸ್ಯ ವಿಕ್ರಿಯಾ ।
ವಿಶುದ್ಧಂ ಚೇತನಂ ಬ್ರಹ್ಮ ಜಗಜ್ಜಡಮಶುದ್ಧಿಭಾಕ್ ।
ತೇನ ಪ್ರಧಾನಸಾರೂಪ್ಯಾತ್ ಪ್ರಧಾನಸ್ಯೈವ ವಿಕ್ರಿಯಾ ॥
ಅಸದಧಿಕರಣ (೨-೧-೪)

ಪ್ರಕೃತಿಯು ಜಗತ್ತಿಗೆ ಕಾರಣವಾಗಬಹುದು. ಏಕೆಂದರೆ ಪ್ರಕೃತಿಯಲ್ಲಿರುವ ಧರ್ಮಗಳೆಲ್ಲವೂ ವಿಕಾರವಾದ ಜಗತ್ತಿನಲ್ಲಿಯೂ ಇರುತ್ತದೆ. ಆದರೆ ಜಗತ್ತಿಗೆ ಬ್ರಹ್ಮನು ಕಾರಣನಾಗಲು ಸಾಧ್ಯವಿಲ್ಲ. ಬ್ರಹ್ಮನಲ್ಲಿರುವ ಧರ್ಮಗಳು ಜಗತ್ತಿನಲ್ಲಿ ಕಾಣಿಸುತ್ತಿಲ್ಲ. ಆದ್ದರಿಂದ ಜಗತ್ ಬ್ರಹ್ಮನ ವಿಕಾರವಲ್ಲ. ಬ್ರಹ್ಮನು ಚೇತನನಾಗಿದ್ದಾನೆ. ಮತ್ತು ವಿಶುದ್ಧನಾಗಿದ್ದಾನೆ. ಆದರೆ ಜಗತ್ತು ಜಡವಾಗಿದೆ ಮತ್ತು ಅಶುದ್ಧವಾಗಿದೆ. ಆದ್ದರಿಂದ ಪ್ರಕೃತಿಯ ಸಾರೂಪ್ಯವನ್ನು ಹೊಂದಿರುವ ಜಗತ್ತು ಪ್ರಕೃತಿ ವಿಕಾರವೇ ಆಗಿದೆ ಎಂದು.

**प्रकाशः** – तथा ''अस्य प्रत्यक्षादिभिरचेतनत्वेनाशुद्धत्वेनानीश्वरत्वेन'' इत्यादिरामानुजभाष्योक्तं च हृदि कृत्वा सूत्रार्थमाह – **अस्येति** ।।

'ಅಸ್ಯ ಪ್ರತ್ಯಕ್ಷಾದಿಭಿರಚೇತನತ್ವೇನಾಶುದ್ಧತ್ವೇನಾನೀಶ್ವರತ್ವೇನ' ಪ್ರತ್ಯಕ್ಷಾದಿಗಳಿಂದ ಜಗತ್ತು ಅಚೇತನವಾಗಿದೆ, ಅಶುದ್ಧವಾಗಿದೆ ಮತ್ತು ಅನೀಶ್ವರವಾಗಿದೆ ಎಂದು ತಿಳಿಯುತ್ತಿದೆ. ಆದ್ದರಿಂದ ಬ್ರಹ್ಮನ ವಿಕಾರವಾಗುವುದಿಲ್ಲ. ಹೀಗೆ ರಾಮಾನುಜ ಭಾಷ್ಯದಲ್ಲಿಯೂ ಕೂಡ ಹೇಳಿದ್ದಾರೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಸೂತ್ರಾರ್ಥವನ್ನು ಗ್ರಂಥಕಾರರು 'ಅಸ್ಯ' ಇತ್ಯಾದಿ ವಾಕ್ಯದಿಂದ ಹೇಳಿ, ಅವರ ಪ್ರಕಾರ ಪೂರ್ವಪಕ್ಷಸೂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – अध्याहारेणान्वयमाह – **न ब्रह्मेति** ।। **विज्ञानमिति** ।। विज्ञानादिशब्दानां कारणकार्यपरत्वादिति भावः ।।

ಸೂತ್ರದಲ್ಲಿ 'ನ' ಎಂಬ ನಞ್‌ಗೆ ಆವಶ್ಯಕವಾದ ಪ್ರತಿಯೋಗಿಯನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. 'ಜಗತಃ ಬ್ರಹ್ಮೋಪಾದಾನತ್ವಂ ನ' ಎಂದು. 'ವಿಜ್ಞಾನಂ' ಎಂದರೆ ವಿಜ್ಞಾನಂ ಚಾವಿಜ್ಞಾನಂಚ' ಇತ್ಯಾದಿ ಶ್ರುತಿಗಳಲ್ಲಿರುವ ವಿಜ್ಞಾನ, ನಿರುಕ್ತ ಇವೆಲ್ಲಾ ಶಬ್ದಗಳು ಕಾರಣವನ್ನು ಹೇಳುತ್ತವೆ. ಅವಿಜ್ಞಾನ, ಅನಿರುಕ್ತ ಮೊದಲಾದ ಶಬ್ದಗಳು ಕಾರ್ಯವನ್ನು ಹೇಳುತ್ತವೆಂದು ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ವೈಲಕ್ಷಣ್ಯವು ಶ್ರುತಿಸಿದ್ಧವಾಗಿದೆ ಎಂದು ಅಭಿಪ್ರಾಯ.

**प्रकाशः** – **प्रतिषेधासमर्थत्वादिति** ।। एतच्च ''तदनन्यत्वम्'' इत्यग्रे तद्भाष्यादावुच्यत इति ।

ಸತ್ಕಾರ್ಯವಾದದ ಪ್ರತಿಷೇಧವು, ಪ್ರತಿಷೇಧಕ್ಕೆ ಕಾರಣವೇ ಅಲ್ಲ. ಏಕೆಂದರೆ ಸತ್ಕಾರ್ಯವಾದದ ಪ್ರತಿಷೇಧವು ಪ್ರತಿಷೇಧಮಾತ್ರವಾಗಿದೆ. ಇಂಥ ಸತ್ಕಾರ್ಯವಾದವನ್ನು ನಿಮ್ಮಿಂದ ನಿರಾಕರಣೆ ಮಾಡಲು ಸಾಧ್ಯವಿಲ್ಲ. ಇದನ್ನು 'ತದನನ್ಯತ್ವಮ್' ಎಂಬ ಆರಂಭಣಾಧಿಕರಣದಲ್ಲಿ ಸಮರ್ಥಿಸಲಾಗಿದೆ.

**प्रकाशः** – एतच्चाद्वैतिमते । रामानुजमते तु कार्यकारणयोर्वैलक्षण्ये तयोर्द्रव्यान्तरत्वेन कारणे कार्यं न विद्यत इत्यसत्स्यादित्यसत एव जगदुत्पत्तिस्स्यादिति चेन्न । पूर्वसूत्रे सालक्षण्यनिषेधस्य तन्नियमनिषेधमात्रत्वान्न तदैक्यं नेत्युक्तमित्यर्थः ।।

ಗ್ರಂಥಕಾರರು ಕೇವಲ ಅದ್ವೈತಮತದ ಪ್ರಕಾರ ರಾಮಾನುಜಮತದ ಪ್ರಕಾರ ಬೇರೆ ಅರ್ಥವಿದೆ - ಕಾರ್ಯ ಹಾಗೂ ಕಾರಣಗಳೆರಡು ವಿಲಕ್ಷಣವಾಗಿದ್ದರೂ ಉಪಾದಾನ ಉಪಾದೇಯಭಾವವು ಯುಕ್ತವಾಗುತ್ತದೆಂದು ಹೇಳಿದಿರಿ. ಹಾಗಾದರೆ ಕಾರ್ಯವೇ ಬೇರೆ ದ್ರವ್ಯ, ಕಾರಣವೇ ಬೇರೆ ದ್ರವ್ಯವಾಗುತ್ತದೆ. ಹೀಗಿರುವಾಗ ಕಾರಣದಲ್ಲಿ ಕಾರ್ಯವು ಇದೆ ಎಂದು ಹೇಳಲು ಬರುವುದಿಲ್ಲ. ಆವಾಗ ಅಸತ್ತಾದ ಜಗತ್ತಿಗೆ ಉತ್ಪತ್ತಿಯನ್ನು ನೀವು ಹೇಳಬೇಕು. ರಾಮಾನುಜನೂ ಕೂಡ ಸತ್ಕಾರ್ಯವಾದಿಯೇ ಆಗಿರುವುದರಿಂದ ಸತ್ಕಾರ್ಯವಾದ ಮತವು ನಿರಾಕೃತವಾಗಬೇಕಾದೀತು. ಈ ಪ್ರಶ್ನೆಗೆ ರಾಮಾನುಜರು ಉತ್ತರಿಸುತ್ತಾರೆ. ಹಿಂದಿನ ಸೂತ್ರದಲ್ಲಿ ವೈಲಕ್ಷಣ್ಯವನ್ನು ಒಪ್ಪಿ, ಸಾಲಕ್ಷಣ್ಯನಿಷೇಧವನ್ನು ಮಾಡಿರುತ್ತಾರೆ. ಆದರೆ ನಾವು ಮಾಡಿದ ಸಾಲಕ್ಷಣ್ಯನಿಷೇಧವು ಸಾಲಕ್ಷಣ್ಯಮಾತ್ರಪ್ರತಿಷೇಧರೂಪ. ತಾತ್ಪರ್ಯವೇನೆಂದರೆ ಸರ್ವಾತ್ಮನಾ ಸಾಲಕ್ಷಣ್ಯ-ನಿಷೇಧವನ್ನು ನಾವು ಮಾಡಿರುವುದಿಲ್ಲ. ನಿಯಮವನ್ನಷ್ಟೇ ನಾವು ನಿರಾಕರಣೆ ಮಾಡಿರುತ್ತೇವೆ. ಆದರೆ ಸಾಲಕ್ಷಣ್ಯವನ್ನು ಒಪ್ಪುತ್ತೇವೆ. ಆದ್ದರಿಂದ ಬ್ರಹ್ಮನಿಗೂ ಜಗತ್ತಿಗೂ ಸ್ವಲ್ಪ ಸಾಲಕ್ಷಣ್ಯವು ಇರುತ್ತದೆ.

**प्रकाशः – शरावेति ।।** यथाक्रममन्वयः ।

ಶರಾವಕ್ಕೆ ಮೃತ್‌ನಲ್ಲಿ 'ಮಾಯಾ' ಎಂಬುದಕ್ಕೆ ಮಾಯಾವಿಯಲ್ಲಿ, 'ಸ್ವಪ್ನ'ಕ್ಕೆ ಸ್ವಪ್ನದ್ರಷ್ಟುವಿನಲ್ಲಿ ಅನ್ವಯವನ್ನು ತಿಳಿಯಬೇಕು.

**प्रकाशः** – न विलक्षणत्वादनुपादानतेत्येतदप्यद्वैतिमते । मतान्तरे तु चिदचिच्छरीरकस्य ब्रह्मण एव कार्यकारणभावापन्नत्वेऽपि चिदचिच्छरीरगतदोषाणामात्मन्यनन्वये दृष्टान्तस्य शरीर गतबालत्वयुवत्वाद्यवस्थान्वयरहितजीवस्य सद्भावादिति पूर्वेणोक्त्वा निर्विकारचिन्मात्रपुरुषस्य जगत्प्रवृत्त्याद्यनुपपत्तेः केवलप्रधानकारणत्वपक्षस्य दुष्टत्वाच्चेत्यर्थः ।।

'ಬ್ರಹ್ಮನಿಗಿಂತ ವಿಲಕ್ಷಣವಾಗಿರುವುದರಿಂದ ಉಪಾದಾನನಲ್ಲ' ಎಂಬುದೂ ಕೂಡ ಅದ್ವೈತಮತದಲ್ಲಿ ವಿವಕ್ಷಿತ. ಮತಾಂತರದಲ್ಲಿ 'ನತು ದೃಷ್ಟಾಂತಭಾವಾತ್' ಎಂಬುದಕ್ಕೆ ಹೀಗೆ ಅರ್ಥ - 'ಚಿದಚಿತ್ ಶರೀರಕನಾದ ಬ್ರಹ್ಮನೇ ಕಾರಣನಾಗಿದ್ದಾನೆ. ಮತ್ತು ಕಾರ್ಯನಾಗಿದ್ದಾನೆ. ಆದರೂ ಕೂಡ ಅವನ ಶರೀರದಲ್ಲಿರುವ ದೋಷಗಳು ಶರೀರಿಯಾದ ಬ್ರಹ್ಮನಲ್ಲಿ ಬರುವುದಿಲ್ಲ. ಈ ವಿಷಯದಲ್ಲಿ ದೃಷ್ಟಾಂತವಿದೆ. ಶರೀರದಲ್ಲಿ ಬಾಲತ್ವ, ಯುವತ್ವ ಮೊದಲಾದ ಅವಸ್ಥಾದಿಗಳು ಇರುತ್ತವೆ. ಶರೀರಿಯಾದ ಜೀವನಲ್ಲಿ ಇಂಥ ಅವಸ್ಥೆಗಳು ಇರುವುದಿಲ್ಲ. ಈ ದೃಷ್ಟಾಂತದಂತೆ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರದಿಂದ ಕೇವಲ ಪುರುಷನು ಉಪಾದಾನನೆಂದು ಹೇಳಲಾಗದು. ಕೇವಲ ಪ್ರಧಾನಕ್ಕೂ ಹೇಳಲಾಗದು. ಏಕೆಂದರೆ ಕೇವಲ ಪುರುಷನು ನಿರ್ವಿಕಾರನಾಗಿದ್ದಾನೆ. ಅವನಿಗೆ ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ. ಕೇವಲ ಪ್ರಧಾನವು ಜಡವಾಗಿದೆ. ಅದಕ್ಕೂ ಕೂಡ ಜಗತ್‌ಕಾರಣತ್ವವು ಕೂಡುವುದಿಲ್ಲ. ಆದ್ದರಿಂದ ಪ್ರಧಾನವಿಶಿಷ್ಟನಾದ ಬ್ರಹ್ಮನೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಬೇಕು.

ಅಸದಧಿಕರಣ (೨-೧-೪)

## ಅದ್ವೈತಿಗಳ ವಿಲಕ್ಷಣತ್ವಾಧಿಕರಣದ ನಿರಾಕರಣೆ

### तात्पर्यचन्द्रिका

**तन्न । स्वीयप्रमाणविरोधेन परकीयप्रमाणाप्रामाण्ये पूर्वत्रोक्तेऽत्र स्वीयप्रमाणा प्रामाण्यशङ्कानिरासस्यैव सङ्गतत्वात् ।**

ಅದ್ವೈತಿಗಳ ಶರೀರವಾಗಲೀ, ಸೂತ್ರವ್ಯಾಖ್ಯಾನವಾಗಲೀ ಸಾಧುವಾಗಿಲ್ಲ. ಹಿಂದಿನ ಸ್ಮೃತ್ಯಧಿಕರಣದಲ್ಲಿ ತಾವು ಪ್ರಮಾಣವೆಂದು ಒಪ್ಪಿದ ಸ್ಮೃತಿಗಳಿಂದ, ಪರಕೀಯರು ಒಪ್ಪಿದ ಸ್ಮೃತಿ ಗ್ರಂಥಗಳಿಗೆ ವಿರೋಧ ಬರುವ ಕಾರಣ ಅಪ್ರಾಮಾಣ್ಯವನ್ನು ಸಮರ್ಥಿಸಲಾಯಿತು. ಅನಂತರ ತಮ್ಮದೇ ಆದ ಸ್ಮೃತಿಗ್ರಂಥಗಳಿಗೂ ಕೂಡ ಅದೇ ರೀತಿಯ ಅಪ್ರಾಮಾಣ್ಯವು ಬರುತ್ತದಲ್ಲವೇ? ಎಂಬ ಆಶಂಕೆಯನ್ನು ಮಾಡಿ, ಅದರ ಪರಿಹಾರ ನೀಡಲು ಈ ಅಧಿಕರಣ ಹೊರಡುವುದು ಸಂಗತವಾಗುತ್ತದೆ.

(ಪಂಚರಾತ್ರಾದಿ ಸ್ಮೃತಗಳೆಂಬ ಪ್ರಮಾಣಗಳ ವಿರೋಧವು ಶೈವಸ್ಮೃತಿಗಳಿಗೆ ಕಣಾದಸ್ಮೃತಿಗಳಿಗೆ ಬರುತ್ತದೆಂದು ನಾವು ಸಮರ್ಥಿಸಿದೆವು. ಹೀಗೆ ಸ್ಮೃತ್ಯಧಿಕರಣದಲ್ಲಿ ಸಮರ್ಥನೆ ಮಾಡಿದ ಮೇಲೆ ಅದೇ ರೀತಿಯಲ್ಲಿ ಪರರೂ ಕೂಡ ಆಕ್ಷೇಪ ಮಾಡುತ್ತಾರೆ. ಶೈವಸ್ಮೃತಿಗಳು ಹೇಗೆ ಅಪ್ರಮಾಣವೋ, ಅದರಂತೆ ಪಂಚರಾತ್ರಾದಿ ಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವಲ್ಲವೇ? ಎಂದು. ಈ ಆಶಂಕೆಯ ಪರಿಹಾರಕ್ಕಾಗಿ ಮುಂದಿನ ಅಧಿಕರಣವು ಹೊರಡುತ್ತದೆಂದು ಹೇಳುವುದೇ ಸಂಗತವಾಗುತ್ತದೆ. ಇದನ್ನು ಬಿಟ್ಟು, ಅದ್ವೈತಿಗಳಾದ ನೀವು ಸಂಗತವಾಗದ ಬ್ರಹ್ಮನ ಉಪಾದಾನತ್ವ ಸಮರ್ಥನೆಗಾಗಿ ಮುಂದಿನ ಅಧಿಕರಣವು ಹೊರಟಿದೆ ಎಂದು ಹೇಳುವುದು ತಪ್ಪಾಗುತ್ತದೆ.

**अपि च अस्मद्रीत्या ''अभिमानिव्यपदेश'' इत्यादेरवश्यवक्तव्ययुक्तिश्रुतिसंवादि युक्त्यविरोधोक्तया सिद्धान्तसूत्रत्वेन प्रत्येकमधिकरणत्वे सम्भवति कथमाद्यद्वितीयपञ्चमसूत्राणां पूर्वपक्षत्वेन तृतीयादीनां च सिद्धान्तत्वेनानभिप्रेतस्य ब्रह्मजगतोर्विकारविकारिभावस्योक्तयैकाधिकरणता ।**

ಮತ್ತು ನಾವು ಹೇಳುವಂತೆ ನ ವಿಲಕ್ಷಣತ್ವಾಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಮುಂದಿನ 'ಅಭಿಮಾನಿವ್ಯಪದೇಶಃ' ಎಂಬ ಅಧಿಕರಣದಲ್ಲಿ ದೃಢವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಅನಂತರ ಶ್ರುತಿಸಂವಾದಿಯಾದ ಯುಕ್ತಿಯ ವಿರೋಧವನ್ನು ಪರಿಹರಿಸಬೇಕು. ಹೀಗೆ 'ಯುಕ್ತ್ಯವಿರೋಧ', 'ದೃಢಯುಕ್ತ್ಯವಿರೋಧ', 'ಶ್ರುತಿಸಂವಾದಿ-ಯುಕ್ತ್ಯವಿರೋಧ' ಎಂಬುದಾಗಿ ಬೇರೆ ಬೇರೆ ಉಪಾಧಿಗಳಿರುವುದರಿಂದ ಪ್ರತ್ಯೇಕವಾದ ಅಧಿಕರಣವೆಂದು ಹೇಳಬೇಕು. ಏಕೆಂದರೆ ಪ್ರತಿಯೊಂದು ಸೂತ್ರಗಳೂ ಕೂಡ ಸಿದ್ಧಾಂತಸ್ಥಾಪಕವಾದ

ಸೂತ್ರಗಳೇ ಆಗಿವೆ. ಇದನ್ನು ಬಿಟ್ಟು ಅದ್ವೈತಿಗಳಾದ ನೀವು ಮೊದಲನೆಯ, ಎರಡನೆಯ ಮತ್ತು ಐದನೆಯ ಸೂತ್ರಗಳನ್ನು ಪೂರ್ವಪಕ್ಷಸೂತ್ರಗಳನ್ನಾಗಿ ಪರಿಗಣಿಸಿ ಉಳಿದ ಸೂತ್ರಗಳನ್ನು ಸಿದ್ಧಾಂತ ಸೂತ್ರಗಳನ್ನಾಗಿ ಹೇಳುವುದು ಅಯುಕ್ತವಾಗುತ್ತದೆ. ಮತ್ತು ಅದ್ವೈತಿಗಳಾಗಲೀ, ವಿಶಿಷ್ಟಾದ್ವೈತಿಗಳಾಗಲೀ ಬ್ರಹ್ಮ ಹಾಗೂ ಜಗತ್ತಿಗೆ ವಿಕಾರವಿಕಾರಿಭಾವವನ್ನು ಒಪ್ಪಿರುವುದೇ ಇಲ್ಲ. ಸೂತ್ರಕಾರರಿಗೂ ಕೂಡ ಇದು ಸಮ್ಮತವಲ್ಲ. ಹೀಗೆ ಯಾರಿಗೂ ಕೂಡ ಅಭಿಪ್ರೇತವಲ್ಲದ ವಿಕಾರವಿಕಾರಿಭಾವದ ಸಮರ್ಥನೆಗಾಗಿ ಈ ಅಧಿಕರಣ ಹೊರಡುವುದು ಅತ್ಯಂತ ಅಸಂಗತವಾಗಿದೆ.

**यथा च ''सप्तगतेर्विशेषितत्वाच'' इत्यादौ कारणवाक्यवदन्यत्रापीन्द्रिय-संख्यादिश्रुतौ श्रुत्यन्तराविरोधोक्तिस्तथेहापि कारीर्यादिश्रुतौ युक्तयविरोधोक्तिरस्तु ।**

ಜಗತ್‌ಕಾರಣತ್ವಪ್ರತಿಪಾದಕವಾದ ಶ್ರುತಿಗಳ ವಿಚಾರವನ್ನಷ್ಟೇ ಮಾಡಬೇಕೆಂಬುದು ಅದ್ವೈತಿಗಳ ನಿಲುವು. ಇದೂ ಕೂಡ ಸರಿಯಲ್ಲ. ಏಕೆಂದರೆ ಈಗ ಕಾರೀರ್ಯಾದಿವಾಕ್ಯಗಳಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡುವುದು ತಪ್ಪಾಗುವುದಿಲ್ಲ. ಯಾವರೀತಿಯಾಗಿ 'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಅಧಿಕರಣದಲ್ಲಿ ಜಗತ್‌ಕಾರಣತ್ವ ಪ್ರತಿಪಾದಕವಾದ ವಾಕ್ಯವನ್ನಷ್ಟೇ ವಿಚಾರ ಮಾಡಿಲ್ಲ. ಇಂದ್ರಿಯಗಳು ಏಳು ಎಂದು ಕೆಲವು ಶ್ರುತಿಯಲ್ಲಿದೆ. ಇನ್ನು ಕೆಲವು ಶ್ರುತಿಯಲ್ಲಿ ಐದು ಎಂದಿದೆ. ಈ ಎರಡು ಶ್ರುತಿಗಳಿಗೆ ವಿರೋಧವನ್ನು ಪರಿಹರಿಸುತ್ತಾ ಜ್ಞಾನೇಂದ್ರಿಯಗಳನ್ನು ಸೇರಿಸಿದಾಗ ಒಟ್ಟು ಹನ್ನೆರಡು ಇಂದ್ರಿಯ- ಗಳಾಗುತ್ತವೆ ಎಂಬುದಾಗಿ ಈ ಅಧಿಕರಣದಲ್ಲಿ ಸಮರ್ಥನೆ ಮಾಡಿರುತ್ತಾರೆ. ಅದೇ ರೀತಿಯಾಗಿ ಇಲ್ಲಿಯೂ ಕೂಡ ಕಾರೀರ್ಯಾದಿ ಶ್ರುತಿಗಳ ವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹಾರ ಮಾಡಬಹುದು.

**अन्यथा तद्दृष्टान्तेन कारणवाक्यस्याप्रामाण्यापातात् ।**

ಒಂದುವೇಳೆ ಕಾರೀರ್ಯಾದಿವಾಕ್ಯಗಳ ಯುಕ್ತಿವಿರೋಧವನ್ನು ಪರಿಹಾರ ಮಾಡದಿದ್ದರೆ ಆ ವಾಕ್ಯಗಳು ಅಪ್ರಮಾಣವಾಗುತ್ತವೆ. ಅದೇ ಕಾರೀರ್ಯಾದಿವಾಕ್ಯಗಳ ದೃಷ್ಟಾಂತದಿಂದ ಜಗತ್ ಕಾರಣತ್ವಪ್ರತಿಪಾದಕವಾದ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸಮರ್ಥನೆ ಮಾಡಬಹುದು. ಅದಕ್ಕಾಗಿ ವೇದದಲ್ಲಿರುವ ಯಾವುದೇ ವಾಕ್ಯಗಳಿಗೆ ವಿರೋಧವು ಬಾರದಂತೆ ಸೂತ್ರಗಳಿಂದ ಸಮರ್ಥನೆ ಮಾಡಬೇಕು.

**यदि च तुशब्दयुक्तत्वात्पूर्वसूत्रस्य पूर्वपक्षत्वं तर्हि ''अभिमानिव्यपदेशस्तु विशेषानुगतिभ्याम् । असम्भवस्तु सतोऽनुपपत्तेः'' इत्यादौ तुशब्दश्रवणात्ततः पूर्वसूत्राणां पूर्वपक्षत्वं स्यात् ।**

ಶಾಂಕರಭಾಷ್ಯದಲ್ಲಿ ಯಾವುದೇ ಒಂದು ಸೂತ್ರದಲ್ಲಿ ತುಶಬ್ದವಿದ್ದರೆ ಅದರ ಹಿಂದಿನ ಸೂತ್ರವು ಪೂರ್ವಪಕ್ಷವಾಗುತ್ತದೆಂದು ಸಮರ್ಥಿಸಲಾಗಿದೆ. ಆದ್ದರಿಂದಲೇ 'ದೃಶ್ಯತೇ ತು' ಎಂಬ ಸೂತ್ರದಲ್ಲಿ 'ತು' ಶಬ್ದವಿರುವುದರಿಂದ ಅದರ ಹಿಂದಿರುವ ನ ವಿಲಕ್ಷಣತ್ವಸೂತ್ರ ಹಾಗೂ ಅಭಿಮಾನಿ ಸೂತ್ರಗಳೆರಡು ಪೂರ್ವಪಕ್ಷವಾಗುತ್ತವೆ ಎಂಬುದು ಅದ್ವೈತಿಗಳ ಅಭಿಪ್ರಾಯ. ಇದೂ ಕೂಡ ಸರಿಯಲ್ಲ. ಹಾಗಾದರೆ 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಎಂಬ ಸೂತ್ರದಲ್ಲಿಯೇ 'ತು'ಶಬ್ದವಿದೆ. ಆದ್ದರಿಂದ ಇದರ ಹಿಂದಿನ ನ ವಿಲಕ್ಷಣತ್ವಸೂತ್ರವು ಮಾತ್ರ ಪೂರ್ವಪಕ್ಷವಾಗಬೇಕಾದೀತು. ಆದರೆ ಅದ್ವೈತಿಗಳು 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರವನ್ನೂ ಕೂಡ ಪೂರ್ವಪಕ್ಷ ಸೂತ್ರವನ್ನಾಗಿಯೇ ಪರಿಗಣಿಸಿದ್ದಾರೆ. ಇದರಂತೆ 'ಅಸಂಭವಸ್ತು ಸತೋಽನುಪಪತ್ತೇಃ'ಎಂಬ ಸೂತ್ರದಲ್ಲಿಯೂ 'ತು'ಶಬ್ದವಿರುವುದರಿಂದ ಇದರ ಹಿಂದಿನ ಸೂತ್ರವು ಪೂರ್ವಪಕ್ಷ ಸೂತ್ರವೆನಿಸಬೇಕಾದೀತು.

**यद्यपि पूर्वमीमांसादौ पूर्वपक्षसूत्राणि सन्ति । तथापि तत्राद्याध्यायाद्यपाद एव पूर्वपक्षसद्भावादिह च त्वन्मतेऽपि प्रथमाध्याये तदभावेनान्यत्रापि सूत्रकृतः पूर्वपक्षत्वसूचकजैमिन्यादिग्रहणाभावे व्याकरणकल्पसूत्रादाविव तदकरणशैलीनिश्चये सति**

ವಾಸ್ತವಿಕವಾಗಿ ಪೂರ್ವಮೀಮಾಂಸೆಯಲ್ಲಿ ಪೂರ್ವಪಕ್ಷಸೂತ್ರಗಳು ಬಹಳ ಇವೆ. ಆದರೆ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿಯೇ ಪೂರ್ವಪಕ್ಷ ಸೂತ್ರಗಳಿರುವುದರಿಂದ ಸಮಗ್ರ-ಶಾಸ್ತ್ರದಲ್ಲಿಯೂ ಪೂರ್ವಪಕ್ಷಸೂತ್ರಗಳಿರುತ್ತವೆಂಬುದನ್ನು ತಿಳಿಯಬಹುದು. ಈ ಶಾಸ್ತ್ರದ ಪ್ರಥಮಾಧ್ಯಾಯದಲ್ಲಿ ಅದ್ವೈತಿಗಳ ಪ್ರಕಾರ ಒಂದೇ ಒಂದು ಪೂರ್ವಪಕ್ಷಸೂತ್ರವೂ ಕೂಡ ಇರುವುದಿಲ್ಲ. ಉಳಿದ ಅಧ್ಯಾಯಗಳಲ್ಲಿಯೂ ಕೂಡ ಪೂರ್ವಪಕ್ಷಸೂತ್ರಗಳಿರುತ್ತವೆಂದು ನಿಶ್ಚಯಿಸಲು ಜೈಮಿನಿ, ಕಾಶಕೃತ್ಸ್ನ ಮೊದಲಾದ ಋಷಿಗಳ ಹೆಸರುಗಳನ್ನು ಸೂತ್ರಗಳಲ್ಲಿ ಉಲ್ಲೇಖ ಮಾಡಿರುವುದಿಲ್ಲ. ಆದ್ದರಿಂದ ಸಮಗ್ರ ಶಾಸ್ತ್ರದಲ್ಲಿ ಪೂರ್ವಪಕ್ಷಸೂತ್ರವೇ ಇಲ್ಲವೆಂದು ನಿರ್ಣಯವಾಗುತ್ತದೆ. ವ್ಯಾಕರಣಸೂತ್ರದಲ್ಲಾಗಲೀ, ಕಲ್ಪಸೂತ್ರದಲ್ಲಾಗಲೀ, ಹೇಗೆ ಪೂರ್ವಪಕ್ಷಸೂತ್ರಗಳಿರುವುದಿಲ್ಲವೋ, ಅದರಂತೆ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಯೂ ಕೂಡ ಪೂರ್ವಪಕ್ಷಸೂತ್ರಗಳಿರುವುದಿಲ್ಲ. (ಸೂತ್ರಕಾರರ ಪ್ರಾರಂಭದ ಶೈಲಿಯನ್ನು ನೋಡಿ, ಸಮಗ್ರ ಗ್ರಂಥವು ಏನು ಹೇಳುತ್ತಿದೆ ? ಎಂಬುದನ್ನು ತಿಳಿಯಬಹುದು. ಪ್ರಾರಂಭದ ಅಧ್ಯಾಯದಲ್ಲಿ ಪೂರ್ವಪಕ್ಷಸೂತ್ರವಿಲ್ಲವೆಂದು ನೀವೇ ಒಪ್ಪಿರುವುದರಿಂದ ಸಮಗ್ರಶಾಸ್ತ್ರದಲ್ಲಿಯೂ ಕೂಡ ಪೂರ್ವಪಕ್ಷಸೂತ್ರಗಳನ್ನು ಸೂತ್ರಕಾರರು ಬರೆದಿಲ್ಲವೆಂದು ಶೈಲಿಯಿಂದಲೇ ನಿಶ್ಚಯವಾಗುತ್ತದೆ.)

**सर्वं शास्त्रं-**

**पूर्ववादिमतं किञ्चित्किञ्चिचातत्ववेदकम् ।**
**उपासनापरं किञ्चिदिति कस्माद्विनाश्यते ॥१॥**

ಪೂರ್ವವಾದಿಮತಂ ಕಿಂಚಿತ್ ಕಿಂಚಿಚ್ಚಾತತ್ವವೇದಕವ್ ।
ಉಪಾಸನಾಪರಂ ಕಿಂಚಿತ್ ಇತಿ ಕಸ್ಮಾತ್ ವಿನಾಶ್ಯತೇ ॥೧॥

ಅದ್ವೈತಿಗಳ ಪ್ರಕಾರ ಕೆಲವು ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ. ಇನ್ನು ನೂರಾರು ಸೂತ್ರಗಳು ಅತತ್ವಾವೇದಕವಾಗಿವೆ. ಉಳಿದ ನೂರಾರು ಸೂತ್ರಗಳು ಉಪಾಸನಾಪರವಾಗಿವೆ. ಹೀಗೆ ಸಮಗ್ರ ಬ್ರಹ್ಮಸೂತ್ರಗಳೇ ಸತ್ಯವಾದ ವಿಷಯವನ್ನು ಹೇಳಲು ಸೋತುಬಿದ್ದು ವ್ಯರ್ಥವೆನಿಸುತ್ತವೆ. ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವೇ ಅದ್ವೈತಿಗಳ ಪ್ರಕಾರ ನಾಶವಾಯಿತು.

**अन्यथैकः पादोऽध्यायो वा पूर्वपक्षः पादान्तरमध्यायान्तरं वा सिद्धान्त इति स्यात् ।**

ಒಂದುವೇಳೆ ಬ್ರಹ್ಮಸೂತ್ರದಲ್ಲಿಯೂ ಪೂರ್ವಪಕ್ಷ ಪ್ರಾಪಕವಾದ ಸೂತ್ರಗಳಿವೆ ಎಂದು ಹೇಳುವುದಾದರೆ, ಸಮಗ್ರ ಒಂದು ಪಾದವು ಕೇವಲ ಪೂರ್ವಪಕ್ಷವನ್ನೇ ಮಾಡುತ್ತಿದೆ. ಮತ್ತೊಂದು ಪಾದವು ಸಿದ್ಧಾಂತ ಮಾಡುತ್ತಿದೆ ಎಂದಾದರೆ, ಸಮಗ್ರ ಅಧ್ಯಾಯವು ಪೂರ್ವಪಕ್ಷ ಪ್ರಾಪಕವಾಗಿದೆ. ಮತ್ತೊಂದು ಅಧ್ಯಾಯವು ಸಿದ್ಧಾಂತ ಸ್ಥಾಪಕವಾಗಿದೆ ಎಂದು ಒಪ್ಪಬೇಕಾದೀತು.

**किञ्च वैलक्षण्यादनुपादानत्वमिति शङ्का त्वन्मतेऽदृश्यत्वाद्यधिकरण एव निरस्तेति तेन पुनरुक्तिः ।**

ಜಗತ್ತಿಗೂ ಬ್ರಹ್ಮನಿಗೂ ವೈಲಕ್ಷಣ್ಯವಿರುವುದರಿಂದ ಉಪಾದಾನ ಉಪಾದೇಯಭಾವವನ್ನು ಹೇಳಲು ಸಾಧ್ಯವಿಲ್ಲವೆಂಬ ಆಶಂಕೆಯ ಪರಿಹಾರಕ್ಕಾಗಿ ವಿಲಕ್ಷಣಾಧಿಕರಣ ಹೊರಟಿದೆ ಎಂದು ಹೇಳುವುದೂ ಕೂಡ ಸರಿಯಲ್ಲ. ಈಗಾಗಲೇ ವೈಲಕ್ಷಣ್ಯವಿರುವುದರಿಂದ ಉಪಾದಾನತ್ವವು ಬರುವುದಿಲ್ಲವೆಂಬ ಆಶಂಕೆಯನ್ನು ಅದೃಶ್ಯತ್ವಾಧಿಕರಣದಲ್ಲಿ ನೀವು ಪರಿಹರಿಸಿದ್ದೀರಿ. ಪುನಃ ಈ ಅಧಿಕರಣದಲ್ಲಿಯೂ ಅದನ್ನೇ ಸಮರ್ಥನೆ ಮಾಡಲು ಹೊರಟರೆ, ಪುನರುಕ್ತಿ ದೋಷವು ಬರುತ್ತದೆ.

**अपि च केवलोपादानस्य सालक्षण्यनियमेऽपि त्वन्मते तन्तुं प्रत्यूर्णनाभ्यादेरिव जगत्प्रतिब्रह्मणो वैलक्षण्येऽपि सिद्धान्त्यभिप्रेतस्य निमित्तत्वे सत्युपादानत्वस्य सम्भवेन पूर्वपक्षः सिद्धान्ताविरोधी ।**

ಮತ್ತು ಕೇವಲ ಯಾವುದು ಉಪಾದಾನಕಾರಣವಾಗಿರುತ್ತದೋ, ಅದಕ್ಕೆ ಉಪಾದೇಯದಿಂದ ಸಾಲಕ್ಷಣ್ಯವಿರಬೇಕೆಂಬ ನಿಯಮವಿದೆ. ಆದರೆ ನಿಮ್ಮ ಮತದಲ್ಲಿ ಜಗತ್ತಿಗೆ ಬ್ರಹ್ಮನು ಕೇವಲ ಉಪಾದಾನಕಾರಣನಾಗಿಲ್ಲ. ನಿಮಿತ್ತಕಾರಣನೂ ಕೂಡ ಆಗಿದ್ದಾನೆ. ತಂತುವಿಗೆ ಊರ್ಣನಾಭಿಯು ಕೇವಲ ಉಪಾದಾನಕಾರಣವಷ್ಟೇ ಅಲ್ಲದೇ ನಿಮಿತ್ತಕಾರಣವೂ ಆಗಿರುವಂತೆ. ಆದ್ದರಿಂದ ಜಗತ್ತಿಗಿಂತ ಬ್ರಹ್ಮನು ವಿಲಕ್ಷಣನಾಗಿದ್ದರೂ ನಿಮ್ಮ ಸಿದ್ಧಾಂತಗಳಿಗೆ ಅಭಿಪ್ರೇತವಾದ ನಿಮಿತ್ತತ್ವೇ ಸತಿ ಉಪಾದಾನತ್ವವು ಯುಕ್ತವಾಗುತ್ತದೆ. ಆದ್ದರಿಂದ ಪೂರ್ವಪಕ್ಷವು ಸಿದ್ಧಾಂತಿಗಳಿಗೆ ವಿರುದ್ಧವೇ ಆಗಿರುವುದಿಲ್ಲ.

**किञ्च त्वन्मतेऽविद्यादेरविद्यादिविशिष्टस्यैव चोपादानत्वात्तस्य च जगता सालक्षण्याच्छुद्धस्य च विलक्षणत्वेऽपि जगद्भ्रमाधिष्ठानत्वादात्मनि चाऽनात्मभ्रमस्य सांख्यादिभिरपि स्वीकारात्कथं पूर्वपक्षोदयः ।**

ನಿಮ್ಮ ಮತದಲ್ಲಿ ಜಗತ್ತಿಗೆ ಅವಿದ್ಯೆಯು ಉಪಾದಾನಕಾರಣವಾಗಿದೆ. ಅಥವಾ ಅವಿದ್ಯೆಯಿಂದ ವಿಶಿಷ್ಟನಾದ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ. ಇವೆರಡರಲ್ಲಿ ಯಾವುದೊಂದನ್ನೂ ಕಾರಣವೆಂದು ಹೇಳಿದರೂ ಜಗತ್ತಿನಿಂದ ಸಾಲಕ್ಷಣ್ಯವೇ ಬರುತ್ತದೆ. ಉಪಾದಾನಕಾರಣವಾದ ಅವಿದ್ಯೆಯು ಜಗತ್ತಿನಂತೆ ಜಡವಾಗಿದೆ ಮತ್ತು ಅಸಿದ್ಧವಾಗಿದೆ. ಅವಿದ್ಯಾವಿಶಿಷ್ಟನಾದ ಬ್ರಹ್ಮನೂ ಕೂಡ ಜಗತ್ತಿನಂತೆ ಅಸಿದ್ಧನಾಗಿದ್ದಾನೆ. ಶುದ್ಧನಾದ ಬ್ರಹ್ಮನು ಜಗತ್ತಿಗಿಂತ ವಿಲಕ್ಷಣನಾಗಿದ್ದರೂ ಅವನು ಉಪಾದಾನಕಾರಣನೇ ಅಲ್ಲ ಹೊರತು, ಜಗತ್ತಿನ ಭ್ರಮೆಗೆ ಕೇವಲ ಅಧಿಷ್ಠಾನನಾಗಿದ್ದಾನೆ. ಇದನ್ನೇ ಉಪಾದಾನಕಾರಣವೆಂದು ಹೇಳಲಾಗಿದೆ. ಆತ್ಮನಲ್ಲಿ ಅನಾತ್ಮಭ್ರಮವನ್ನು ಪೂರ್ವಪಕ್ಷಕಾರರಾದ ಸಾಂಖ್ಯಾದಿಗಳೂ ಕೂಡ ಒಪ್ಪಿರುತ್ತಾರೆ. ಹೀಗಿರುವಾಗ ವೈಲಕ್ಷಣ್ಯವನ್ನು ವಿವಕ್ಷಿಸಿ, ಉಪಾದಾನತ್ವವೇ ಕೂಡುವುದಿಲ್ಲವೆಂಬ ಪೂರ್ವಪಕ್ಷವು ಹೇಗೆ ತಾನೇ ಉದಯವಾಗುತ್ತದೆ ?

**किञ्चात्र मम तथात्वशब्दोक्तस्यावैदिकस्मृतिसालक्षण्यस्य निषेध्यता । तव तु तदनुक्तस्य ब्रह्मकारणकत्वस्य ।**

ಅದ್ವೈತಿಗಳ ಪ್ರಕಾರ ಸೂತ್ರವ್ಯಾಖ್ಯಾನವೂ ಕೂಡ ಅಸಾಧುವಾಗಿದೆ. ನ ವಿಲಕ್ಷಣತ್ವಸೂತ್ರದಲ್ಲಿ 'ತಥಾತ್ವ' ಎಂಬ ಶಬ್ದದಿಂದ ಬ್ರಹ್ಮಕಾರಣಕತ್ವವನ್ನು ವಿವಕ್ಷಿಸುತ್ತಾರೆ. ಆದರೆ ಹಿಂದೆ ಪ್ರಸಕ್ತವಾದ ಅವೈದಿಕಸ್ಮೃತಿಸಾಲಕ್ಷಣ್ಯವನ್ನೇ ತಥಾತ್ವಶಬ್ದದಿಂದ ಪರಾಮರ್ಶಿಸಿ ನಿಷೇಧ ಮಾಡಲು ಬರುವಾಗ ಹಿಂದೆ ಪ್ರಸಕ್ತವಾಗದ ಬ್ರಹ್ಮಕಾರಣಕತ್ವವನ್ನು ಪರಾಮರ್ಶಿಸಿ ಅದನ್ನು ಅಲ್ಲಗಳೆಯುವುದು ತಪ್ಪಾಗುತ್ತದೆ.

**तथा मम ''विलक्षणत्वात्'' इत्यत्र ''स्मृत्यनवकाश'' इति प्रकृतस्य प्रतियोगिता । तव तु तदप्रकृतस्य ब्रह्मणः ।**

ಮತ್ತು 'ವಿಲಕ್ಷಣತ್ವಾತ್' ಎಂಬಲ್ಲಿ 'ಸ್ಮೃತ್ಯನವಕಾಶ' ಎಂಬ ಸೂತ್ರದಿಂದ ಪ್ರಕೃತವಾದ ಸ್ಮೃತ್ಯಾದಿಗಳ ವೈಲಕ್ಷಣ್ಯವನ್ನೇ ವಿವಕ್ಷಿಸಲು ಬರುವಾಗ ಅಪ್ರಕೃತವಾದ ಬ್ರಹ್ಮನನ್ನು ವಿವಕ್ಷಿಸುವುದು ತಪ್ಪಾಗುತ್ತದೆ.

**तथा मम ''अस्य'' इतिशब्दः ''नान्यस्मृति'' इति पूर्वप्रस्तुतस्वपक्षप्रमाणपरः। तव त्वप्रस्तुतजगत्परः ।**

ಮತ್ತು 'ಅಸ್ಯ' ಎಂಬ ಪದದಿಂದ ಹಿಂದೆ 'ನಾನ್ಯಸ್ಮೃತಿ' ಎಂಬುದರಿಂದ ಪ್ರಸಕ್ತವಾದ ಸ್ವಪಕ್ಷಪ್ರಮಾಣವನ್ನೇ ವಿವಕ್ಷಿಸಬೇಕು. ಆದರೆ ನೀವು ಅಪ್ರಸ್ತುತವಾದ ಜಗತ್ತನ್ನು ವಿವಕ್ಷಿಸುತ್ತಿದ್ದೀರಿ. ಇದೂ ಕೂಡ ಅಸಂಗತ.

**किञ्च जगतो ब्रह्मवैलक्षण्यस्य प्रत्यक्षत्वात्तत्र शब्दोक्तिरयुक्ता । किञ्च यदि ''विज्ञानम्'' इत्यादि श्रुतिर्वैलक्षण्ये प्रमाणं कथं तर्ह्युपादानत्वे न प्रमाणम् । ''सच्चत्यच्चाभवत्'' इत्यादिपूर्ववाक्येनोपादानत्वप्रतीतेः ।**

ಮತ್ತು ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ ಎಂದು ಪ್ರತ್ಯಕ್ಷದಿಂದಲೇ ತಿಳಿಯುತ್ತಿರುವಾಗ ಈ ವಿಷಯದಲ್ಲಿ ಶಬ್ದಪ್ರಮಾಣವನ್ನು ಉಲ್ಲೇಖಿಸುವುದು ಅಯುಕ್ತವಾಗುತ್ತದೆ. ಮತ್ತು 'ವಿಜ್ಞಾನಮ್' ಇತ್ಯಾದಿ ಶ್ರುತಿಯು 'ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ' ಎಂಬ ವಿಷಯದಲ್ಲಿ ಪ್ರಮಾಣವಾಗುವುದಾದರೆ, ಉಪಾದಾನತ್ವವಿಷಯದಲ್ಲಿ ಏಕೆ ಪ್ರಮಾಣವಾಗಬಾರದು ? 'ಸಚ್ಚತ್ಯಚ್ಚಾಭವತ್' ಇತ್ಯಾದಿ ಪೂರ್ವವಾಕ್ಯದಿಂದ ಸ್ಪಷ್ಟವಾಗಿ ಉಪಾದಾನತ್ವವೇ ಪ್ರತೀತವಾಗುತ್ತಿದೆ.

**अपि च विज्ञानाविज्ञानशब्दौ न कार्यकारणपरौ । किन्तु त्वत्पक्षे सत्त्यदादिशब्दवत्कार्यपरावेव । चशब्दाभ्यां प्रत्येकं भवनक्रिययाऽन्वयप्रतीतेः ।**

ಮತ್ತು ವಿಜ್ಞಾನಂಚಾವಿಜ್ಞಾನಂಚ ಇತ್ಯಾದಿ ಶ್ರುತಿಯಲ್ಲಿರುವ ವಿಜ್ಞಾನಶಬ್ದವು ಕಾರ್ಯಪರವಾಗಿದೆ, ಅವಿಜ್ಞಾನಶಬ್ದವು ಕಾರಣಪರವಾಗಿದೆ ಎಂದು ಹೇಳುವುದೂ ಕೂಡ ಅಯುಕ್ತ. ಹೊರತಾಗಿ, ನಿಮ್ಮ ಪಕ್ಷದಲ್ಲಿ ಯಾವರೀತಿಯಾಗಿ ಸತ್, ತ್ಯತ್ ಮೊದಲಾದ ಶಬ್ದಗಳು ಕೇವಲ ಕಾರ್ಯಪರವೇ ಆಗಿವೆಯೋ, ಅದೇ ರೀತಿಯಾಗಿ ವಿಜ್ಞಾನ ಹಾಗೂ ಅವಿಜ್ಞಾನಗಳೆಲ್ಲವೂ ಕೇವಲ ಕಾರ್ಯಪರವೇ ಆಗಬೇಕು. ವಿಜ್ಞಾನಂ ಚ ಅವಿಜ್ಞಾನಂಚ ಎಂಬ ಶ್ರುತಿಯಲ್ಲಿ ಎರಡು ಬಾರಿ ಚಶಬ್ದವಿರುವುದರಿಂದ ಅಭವತ್ ಎಂಬ ಕ್ರಿಯೆಯಲ್ಲಿ ಪ್ರತ್ಯೇಕವಾಗಿ ಅನ್ವಯವನ್ನು ಹೊಂದುತ್ತವೆ. 'ವಿಜ್ಞಾನಂ ಚ ಅಭವತ್', 'ಅವಿಜ್ಞಾನಂ ಚ ಅಭವತ್' ಎಂದು ಆದ್ದರಿಂದ ವಿಜ್ಞಾನ ಹಾಗೂ ಅವಿಜ್ಞಾನಶಬ್ದಗಳೆರಡು ಕಾರ್ಯಪರವಾಗಿದೆಯೆಂದು ತಿಳಿಯುತ್ತದೆ.

**प्रकाशः –**

**स्वीयप्रमाणेति** ।। ''अन्यस्मृत्यनवकाश'' इति पूर्वसूत्रभागेनेति भावः ।। **अनभिप्रेतस्येति** ।। उभाभ्यां ब्रह्मणो विकारित्वस्यानभ्युपगमादिति भावः ।

ಅದ್ವೈತಿಗಳ ಅಧಿಕರಣವಿಭಾಗವಾಗಲೀ, ಸೂತ್ರವ್ಯಾಖ್ಯಾನವಾಗಲೀ ಸಮಂಜಸವಾಗಿರುವುದಿಲ್ಲ. ಪ್ರಾರಂಭದಲ್ಲಿ 'ನ ವಿಲಕ್ಷಣತ್ವಾತ್' ಎಂಬ ಸೂತ್ರದ ವ್ಯಾಖ್ಯಾನವನ್ನೇ ತಪ್ಪಾಗಿ ಮಾಡಿರುತ್ತಾರೆ. ಹಿಂದಿನ 'ಸ್ಮೃತ್ಯನವಕಾಶ' ಇತ್ಯಾದಿ ಸೂತ್ರದಲ್ಲಿ ಪರಕೀಯರ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಿದ ಮೇಲೆ ಮುಂದಿನ ನ ವಿಲಕ್ಷಣತ್ವಾದಿ ಸೂತ್ರದಲ್ಲಿ ಸ್ವಮತದ ಸ್ಮೃತಿಗಳ ಅಪ್ರಾಮಾಣ್ಯಶಂಕೆಯನ್ನೇ ಪರಿಹರಿಸಿ-ಕೊಳ್ಳುವುದು ಸಂಗತವಾಗುತ್ತದೆ. ಅದನ್ನು ಬಿಟ್ಟು ಅಸಂಗತವಾದ ಬ್ರಹ್ಮನ ಜಗತ್ಕಾರಣತ್ವದ ಮೇಲೆ ಆಕ್ಷೇಪ ಮಾಡುವುದು ಸಾಧುವಾಗುವುದಿಲ್ಲ. ಗ್ರಂಥದಲ್ಲಿರುವ 'ಸ್ವೀಯಪ್ರಮಾಣೇನ ವಿರೋಧೇನ' ಎಂಬಲ್ಲಿ 'ಸ್ಮೃತ್ಯನವಕಾಶಃ' ಎಂಬ ಪೂರ್ವಸೂತ್ರದ ಭಾಗದಿಂದ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

'ಅನಭಿಪ್ರೇತಸ್ಯ' ಎಂಬ ಪದಕ್ಕೆ ಅದ್ವೈತಿಗಳಿಗೆ ಮತ್ತು ವಿಶಿಷ್ಟಾದ್ವೈತಿಗಳಿಗೆ ಅಭಿಪ್ರೇತವಲ್ಲದ ಎಂದರ್ಥ.

**प्रकाशः –** नन्वस्मद्रीत्येत्ययुक्तम् । प्राक्समन्वितकारणवाक्य एव युक्तिविरोध-निरासस्यौचित्येन कारीर्यादिवाक्यविचारस्यानवसरदुष्टत्वादित्यत आह – **यथा चेति** ।।

'ಅಸ್ಮದ್ರೀತ್ಯಾ' ಇತ್ಯಾದಿ ವಾಕ್ಯದಿಂದ ಹಿಂದೆ ನಮ್ಮಂತೆ ನೀವು ವ್ಯಾಖ್ಯಾನ ಮಾಡಬೇಕೆಂದು ಹೇಳಲಾಗಿತ್ತು. ಇದು ತಪ್ಪು. ಏಕೆಂದರೆ ಪ್ರಥಮಾಧ್ಯಾಯದಲ್ಲಿ ಜಗತ್ಕಾರಣತ್ವಪ್ರತಿಪಾದಕವಾದ ವಾಕ್ಯಗಳನ್ನು ಸಮನ್ವಯ ಮಾಡಿದ ಮೇಲೆ ಅದೇ ವಿಷಯದಲ್ಲೇ ಪ್ರಾಪ್ತವಾಗುವ ಯುಕ್ತಿವಿರೋಧವನ್ನು ನಿರಾಕರಣೆ ಮಾಡುವುದೇ ಉಚಿತವಾಗುತ್ತದೆ. ಅದನ್ನು ಬಿಟ್ಟು ಕಾರೀರ್ಯಾದಿವಾಕ್ಯಗಳ ವಿಚಾರವು ಅಪ್ರಸ್ತುತವಾಗುತ್ತದಲ್ಲವೇ? ಈ ಆಶಂಕೆಗೆ 'ಯಥಾ ಚ' ಇತ್ಯಾದಿ ವಾಕ್ಯದಿಂದ ದೃಷ್ಟಾಂತಪುರಸ್ಸರವಾಗಿ ಉತ್ತರಿಸುತ್ತಿದ್ದಾರೆ.

**प्रकाशः –** त्वया वितथास्वीकारादिति भावः ।। **तदभावेनेति** ।। सिद्धान्तसूत्र-निरस्यपूर्वपक्षसूत्राभावेनेत्यर्थः ।। **सर्वं शास्त्रमिति** ।। श्लोकेनान्वयः ।। **अतत्त्वेति** ।। एतच्चाद्वैतिमते ।

ನೀವೂ ಕೂಡ 'ಸಪ್ತಗತೇರ್ವಿಶೇಷಿತತ್ವಾಚ್ಚ' ಇತ್ಯಾದಿ ಸೂತ್ರಕ್ಕೆ ಇಂದ್ರಿಯಪರವಾಗಿಯೇ ವ್ಯಾಖ್ಯಾನ ಮಾಡಿರುತ್ತೀರಿ. 'ತದಭಾವೇನ' ಎಂದರೆ ಸಿದ್ಧಾಂತಸೂತ್ರದಿಂದ ನಿರಾಕೃತವಾಗುವ ಪೂರ್ವಪಕ್ಷಸೂತ್ರವು ಇಲ್ಲದಿರುವುದರಿಂದ ಎಂದರ್ಥ. 'ಸರ್ವಂ ಶಾಸ್ತ್ರಂ' ಎಂಬುದಕ್ಕೆ ಕಸ್ಮಾತ್ವಿನಶ್ಯತೇ ಎಂಬ ಶ್ಲೋಕದಲ್ಲಿ ಅನ್ವಯ ಮಾಡಬೇಕು. 'ಅತತ್ವಾವೇದಕಂ' ಎಂದು ಹೇಳಿದ್ದು ಅದ್ವೈತಿಗಳಿಗೆ ಮಾತ್ರ. ರಾಮಾನುಜರನ್ನು ಕುರಿತು ಹೇಳಿದ್ದಲ್ಲ.

**प्रकाशः** – अधिकरणानुत्थितिमाह – **किञ्च वैलक्षण्यादिति** ।। त्वन्मत इति ।। **अद्वैतिमते** ।। **निमित्तत्वे सतीति** ।। "प्रकृतिश्च" इत्यत्रोभाभ्यां तस्यैवोक्तेरिति भावः ।

ಅದ್ವೈತಿಗಳ ಪ್ರಕಾರ ಅಧಿಕರಣದ ಉತ್ಥಾನವೇ ಆಗುವುದಿಲ್ಲವೆಂದು 'ಕಿಂಚ ವೈಲಕ್ಷಣ್ಯಾತ್' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ತ್ವನ್ಮತೇ' ಎಂಬ ಪದಕ್ಕೆ ಅದ್ವೈತಿಗಳ ಮತದಲ್ಲಿ ಎಂದರ್ಥ. ಹೊರತು ರಾಮಾನುಜ ಮತದಲ್ಲಿ ಎಂದು ತಿಳಿಯಬಾರದು. 'ನಿಮಿತ್ತತ್ವೇ ಸತಿ' ಎಂದು ಗ್ರಂಥದಲ್ಲಿದೆ. 'ಪ್ರಕೃತಿಶ್ಚ' ಇತ್ಯಾದಿ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ನಿಮಿತ್ತಕಾರಣತ್ವ ಹಾಗೂ ಉಪಾದಾನಕಾರಣತ್ವವನ್ನು ಹೇಳಿರುತ್ತಾರೆ.

**प्रकाशः** – अद्वैतिमते दोषान्तरमाह – **किञ्च त्वन्मत इति** ।। **स्वीकारादिति** ।। अन्यथा संसाराभावप्रसङ्गादिति भावः । मतद्वयेऽपि सौत्राक्षरास्वारस्यमाह – **किञ्चात्रेति** ।।

ಅದ್ವೈತಿಗಳಿಗೆ ಹೊಸದೊಂದು ದೋಷವನ್ನು 'ಕಿಂಚ ತ್ವನ್ಮತೇ' ಇತ್ಯಾದಿ ಗ್ರಂಥದಿಂದ ಹೇಳಿರುತ್ತಾರೆ. 'ಸ್ವೀಕಾರಾತ್' ಎಂದು ಗ್ರಂಥದಲ್ಲಿದೆ. ಹಾಗೊಪ್ಪದಿದ್ದರೆ ಸಂಸಾರವೇ ಇಲ್ಲದಾಗುವ ಪ್ರಸಂಗ ಬರುತ್ತದೆಂದು ತಿಳಿಯಬೇಕು. ಇಬ್ಬರ ಮತದಲ್ಲಿಯೂ ಪ್ರತಿಯೊಂದು ಸೂತ್ರಗಳ ವ್ಯಾಖ್ಯಾನವು ಅಸ್ವರಸವಾಗಿವೆ ಎಂಬುದನ್ನು 'ಕಿಂಚಾತ್ರ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – "तथात्वं च शब्दात्" इति सूत्रांशार्थं प्रत्याह – **किञ्च जगत इति** ।। श्रुत्यवगतब्रह्मवैलक्षण्यस्येत्यर्थः । अत एव रामानुजभाष्ये "अस्य प्रत्यक्षादिभिरचेतनत्वेनाशुद्धत्वेनानीश्वरत्वेन दुःखात्मकत्वेनोपलभ्यमानस्य" इत्युक्तम् ।

'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರಭಾಗವನ್ನು ನಿರಾಕರಣೆ ಮಾಡಲು 'ಕಿಂಚ ಜಗತಃ' ಇತ್ಯಾದಿ ವಾಕ್ಯವು ಹೊರಟಿದೆ. 'ಜಗತಃ' ಎಂದರೆ ಶ್ರುತಿಯಿಂದ ತಿಳಿಯಲ್ಪಟ್ಟ ಬ್ರಹ್ಮವೈಲಕ್ಷಣ್ಯವುಳ್ಳ ಜಗತ್ತಿಗೆ ಎಂದರ್ಥ. ಆದ್ದರಿಂದಲೇ ರಾಮಾನುಜಭಾಷ್ಯದಲ್ಲಿ 'ಅಸ್ಯ ಪ್ರತ್ಯಕ್ಷಾದಿಭಿರಚೇತನತ್ವೇನಾಶುದ್ಧತ್ವೇನಾನೀಶ್ವರತ್ವೇನ ದುಃಖಾತ್ಮಕತ್ವೇನೋಪಲಂಭ್ಯಮಾನಸ್ಯ' ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಜಗತ್ತು ಅಚೇತನವೆಂದು, ಅಶುದ್ಧವೆಂದು, ಅನೀಶ್ವರಸ್ವರೂಪವೆಂದು, ದುಃಖಾತ್ಮಕವೆಂದು ಗೋಚರವಾಗುತ್ತಿದೆ ಎಂದು ಹೇಳಲಾಗಿದೆ.

**प्रकाशः** – वैलक्षण्यविशेषज्ञापनार्थं शब्दाचेत्युक्तिरित्यप्ययुक्तम् । व्यर्थत्वादिति भावः । व्याघातं चाह – **किञ्च यदीति** ।।

ಜಗತ್ತಿಗೂ ಬ್ರಹ್ಮನಿಗೂ ಇರುವ ವೈಲಕ್ಷಣ್ಯವಿಶೇಷವನ್ನು ತಿಳಿಸುವುದಕ್ಕಾಗಿ 'ಶಬ್ದಾಚ್ಚ ಇತ್ಯುಕ್ತಿಃ' ಎಂದು ಹೇಳಿರುತ್ತಾರೆ. ಇಂಥ ವೈಲಕ್ಷಣ್ಯವನ್ನು ತೋರಿಸುವುದು ವ್ಯರ್ಥವಾಗಿದೆ ಎಂದು ಅಭಿಪ್ರಾಯ. ವ್ಯಾಘಾತದೋಷವನ್ನು 'ಕಿಂಚ ಯದಿ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ಅಸದಧಿಕರಣ (೨-೧-೪)

**प्रकाशः** – चशब्दाभ्यामिति ।। ''विज्ञानं चाविज्ञानं च'' इति प्रत्येकं श्रुताभ्यामित्यर्थः ।

'ಚಶಬ್ದಾಭ್ಯಾಮ್' ಎಂದರೆ 'ವಿಜ್ಞಾನಂ ಚಾವಿಜ್ಞಾನಂ ಚ' ಎಂಬುದಾಗಿ ಶ್ರುತಿಯಲ್ಲಿ ಎರಡು ಬಾರಿ 'ಚ'ಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಅವನ ಕ್ರಿಯೆಯಲ್ಲಿ ಪ್ರತ್ಯೇಕವಾಗಿ ಅನ್ವಯವನ್ನು ಹೊಂದುತ್ತವೆಂದು ತಿಳಿಯಬೇಕು.




ಅದ್ವೈತಿಗಳ ಅಧಿಕರಣಶರೀರವು ಮತ್ತು ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ನಮ್ಮ ಸಿದ್ಧಾಂತದಲ್ಲಿ ಸ್ಮೃತ್ಯಧಿಕರಣದ ಅನಂತರ 'ನ ವಿಲಕ್ಷಣತ್ವಾತ್' ಎಂಬ ಸೂತ್ರದಿಂದ ಪ್ರಾರಂಭಿಸಿ, 'ಏತೇನ ಶಿಷ್ಟಾ' ಎಂಬ ಸೂತ್ರದ ತನಕ ಮೂರು ಅಧಿಕರಣಗಳನ್ನಾಗಿ ವಿಂಗಡಣೆ ಮಾಡಿದ್ದೇವೆ. ಆದರೆ ಅದ್ವೈತಮತದಲ್ಲಿ ಮತ್ತು ವಿಶಿಷ್ಟಾದ್ವೈತಮತದಲ್ಲಿ ಕೇವಲ ಎರಡು ಅಧಿಕರಣವೆಂಬ ವಿಂಗಡಣೆ ಇದೆ. ನಮ್ಮ ಪ್ರಕಾರ ನ ವಿಲಕ್ಷತ್ವಾಧಿಕರಣದಲ್ಲಿ ಎರಡು ಸೂತ್ರಗಳು, ಅಭಿಮಾನ್ಯಧಿಕರಣದಲ್ಲಿ ಎರಡು ಸೂತ್ರಗಳು, ಅಸದಧಿಕರಣದಲ್ಲಿ ಆರು ಸೂತ್ರಗಳಿವೆ. ಆದರೆ ಅದ್ವೈತಮತದಲ್ಲಿ 'ನ ವಿಲಕ್ಷಣತ್ವಾತ್' ಎಂಬ ಸೂತ್ರದಿಂದ ಪ್ರಾರಂಭಿಸಿ, 'ತರ್ಕ ಅಪ್ರತಿಷ್ಠಾನಾತ್' ಇತ್ಯಾದಿ ಸೂತ್ರದ ಅಧಿಕರಣದ ತನಕ ಒಂದೇ ಅಧಿಕರಣವೆಂದು ಹೇಳಿದ್ದಾರೆ. ಅದಕ್ಕೆ 'ವಿಲಕ್ಷಣತ್ವಾಧಿಕರಣ' ಎಂಬ ಹೆಸರನ್ನಿಟ್ಟಿದ್ದಾರೆ. ಮತ್ತು 'ಏತೇನ ಶಿಷ್ಟಾ ಅಪರಿಗ್ರಹಃ' ಇತ್ಯಾದಿ ಸೂತ್ರವನ್ನು ನಾವು ಅಸದಧಿಕರಣದಲ್ಲೇ ಸೇರಿಸಿದ್ದರೆ, ಅದ್ವೈತಿಗಳು ಶಿಷ್ಟಪರಿಗ್ರಹಾಧಿಕರಣವೆಂಬ ಪ್ರತ್ಯೇಕ ಅಧಿಕರಣವೆಂದು ಹೇಳಿದ್ದಾರೆ. ರಾಮಾನುಜರೂ ಕೂಡ ಹೀಗೆಯೇ.

ಅದ್ವೈತಭಾಷ್ಯದಲ್ಲಿ 'ನ ವಿಲಕ್ಷಣತ್ವಾತ್' ಎಂಬ ಸೂತ್ರದ ಅನಂತರ 'ದೃಶ್ಯತೇ ತು' ಎಂಬ ಸೂತ್ರದ ಪಾಠ ಇರುವುದಿಲ್ಲ. ಮತ್ತು 'ಅಭಿಮಾನಿವ್ಯಪದೇಶಾಚ್ಚ' ಎಂಬ ಸೂತ್ರದ ಅನಂತರವಿರುವ 'ದೃಶ್ಯತೇ ಚ ' ಎಂಬ ಪಾಠದ ಬದಲು 'ದೃಶ್ಯತೇ ತು' ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ವಿಶಿಷ್ಟಾದ್ವೈತಮತದಲ್ಲಿಯೂ ಹೀಗೆಯೇ.

ಮತ್ತು 'ನ ವಿಲಕ್ಷಣತ್ವಾತ್' ಇತ್ಯಾದಿ ಸೂತ್ರವನ್ನು 'ದೃಶ್ಯತೇ ಚ' ಎಂಬ ಸೂತ್ರವನ್ನು ಅದ್ವೈತಿಗಳು ಪೂರ್ವಪಕ್ಷಸೂತ್ರವೆಂದು ಪರಿಗಣಿಸಿದ್ದಾರೆ. ಬ್ರಹ್ಮನು ಚೇತನನಾಗಿದ್ದಾನೆ, ಜಗತ್ತು ಜಡವಾಗಿದೆ ಇವೆರಡಕ್ಕೆ ಉಪಾದಾನ ಉಪಾದೇಯಭಾವವು ಹೇಗೆ ತಾನೇ ಯುಕ್ತವಾಗುತ್ತದೆ ? ಎಂಬ ಆಕ್ಷೇಪವನ್ನು ಇವೆರಡು ಸೂತ್ರಗಳಲ್ಲಿ ಮಾಡಿದ್ದಾರೆ. ಮುಂದಿನ ಮೂರನೆಯ ಹಾಗೂ ನಾಲ್ಕನೆಯ ಸೂತ್ರಗಳಲ್ಲಿ ಸಿದ್ಧಾಂತ ಮಾಡಿದ್ದಾರೆ. ಪುನಃ 'ಅಪೀತೌ ತದ್ವತ್' ಇತ್ಯಾದಿಯಾಗಿ ಐದನೆಯ ಸೂತ್ರದಲ್ಲಿ ಪೂರ್ವಪಕ್ಷವನ್ನೇ ಮಾಡಿದ್ದಾರೆ.

ಇವರ ಈ ಪರಿಕಲ್ಪನೆ ಅಸಾಧುವಾಗಿದೆ. ಈ ಹಿಂದೆ ಸ್ಮೃತ್ಯಧಿಕರಣದಲ್ಲಿ ಪರಕೀಯರ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ನಾವು ಆಶಂಕಿಸಿದಾಗ ಪ್ರತಿಯಾಗಿ ನಾವು ಒಪ್ಪಿರುವ ಶ್ರುತಿಗಳಲ್ಲಿಯೂ ಪೂರ್ವಪಕ್ಷಿಗಳು ಆಕ್ಷೇಪ ಮಾಡುತ್ತಾರೆ. ಅದಕ್ಕೆ ಉತ್ತರವನ್ನು ನೀಡದೇ ಅಪ್ರಸ್ತುತವಾಗಿ ಜಗತ್ತಿಗೂ ಬ್ರಹ್ಮನಿಗೂ ಉಪಾದಾನ ಉಪಾದೇಯಭಾವ ಕೂಡುವುದಿಲ್ಲವೆಂದು ವಿಚಾರ ಮಾಡುವುದು ತಪ್ಪಾಗುತ್ತದೆ. ನವಿಲಕ್ಷಣತ್ವಾಧಿಕರಣದಲ್ಲಿ ಯುಕ್ತಿವಿರೋಧವನ್ನು

ಪರಿಹರಿಸಲು ಉಪಯುಕ್ತವಾದ ಉಪಾಧಿಯು ಇರುತ್ತದೆ. ಮುಂದಿನ ಮತ್ತು 'ಅಭಿಮಾನಿವ್ಯಪದೇಶಃ' ಎಂಬ ಇತ್ಯಾದಿ ಎರಡು ಸೂತ್ರಗಳಲ್ಲಿ ದೃಢವಾದ ಯುಕ್ತಿವಿರೋಧವನ್ನು ಪರಿಹರಿಸಲು ಉಪಯುಕ್ತವಾದ ಉಪಾಧಿಯು ಇರುತ್ತದೆ. 'ಅಸದಿತಿಚೇತ್' ಇತ್ಯಾದಿ ಆರು ಸೂತ್ರಗಳಲ್ಲಿ ಶ್ರುತಿಸಂವಾದಿಯಾದ ಯುಕ್ತಿವಿರೋಧವನ್ನು ಪರಿಹರಿಸಲು ಉಪಯುಕ್ತವಾದ ಉಪಾಧಿಯು ಇರುತ್ತದೆ. ಇವುಗಳನ್ನೆಲ್ಲಾ ಸಿದ್ಧಾಂತಸೂತ್ರವನ್ನಾಗಿ ಪರಿಗಣಿಸಿ ಪ್ರತ್ಯೇಕ ಅಧಿಕರಣವೆಂದೇ ಹೇಳಲು ಬರುತ್ತದೆ. ಇದನ್ನು ಬಿಟ್ಟು ಮೊದಲೆರಡು ಸೂತ್ರಗಳು ಮತ್ತು ಐದನೆಯ ಸೂತ್ರಗಳು ಪೂರ್ವಪಕ್ಷವನ್ನಷ್ಟೇ ಹೇಳುತ್ತಿವೆ ಎಂದು ಪರಿಕಲ್ಪನೆ ಮಾಡಿ, ಉಳಿದ ಸೂತ್ರಗಳು ಬ್ರಹ್ಮನ ಉಪಾದಾನಕಾರಣತ್ವವನ್ನು ಸಮರ್ಥನೆ ಮಾಡುತ್ತಿವೆ ಎಂಬ ಕಲ್ಪನೆಯು ಅತ್ಯಂತ ಅಯುಕ್ತವಾದುದು. ವಿಚಾರ ಮಾಡಿದರೆ ಅದ್ವೈತಿಗಳಾಗಲೀ, ವಿಶಿಷ್ಟಾದ್ವೈತಿಗಳಾಗಲೀ, ಬ್ರಹ್ಮನಿಗೂ ಜಗತ್ತಿಗೂ ವಿಕಾರಿವಿಕಾರ್ಯಭಾವವನ್ನೇ ಒಪ್ಪಿರುವುದಿಲ್ಲ. ಅದ್ವೈತಿಗಳಾದ ನೀವು ಬ್ರಹ್ಮನನ್ನು ಆರೋಪಾಧಿಷ್ಠಾನನೆನ್ನುತ್ತೀರಿ. ವಿಶಿಷ್ಟಾದ್ವೈತಿಗಳು ಜಗತ್ತೆಂಬ ಶರೀರಕ್ಕೆ ಬ್ರಹ್ಮನು ಶರೀರಿಯಾಗಿದ್ದಾನೆಂದು ಒಪ್ಪಿರುತ್ತಾರೆ. ಹೀಗಿರುವಾಗ ಈ ಅಧಿಕರಣದ ಸಾರ್ಥಕ್ಯವೇನೆಂದೇ ನಿಮ್ಮಿಂದ ಸಾಧಿಸಲಾಗದು.

'ದೃಶ್ಯತೇ ತು' ಎಂಬ ಮೂರನೆಯ ಸೂತ್ರದಲ್ಲಿ 'ತು' ಶಬ್ದವಿರುವುದರಿಂದ ಹಿಂದಿನ ಎರಡು ಸೂತ್ರಗಳು ಪೂರ್ವಪಕ್ಷ ಸೂತ್ರವಾಗುತ್ತವೆಂದು ಅದ್ವೈತಭಾಷ್ಯದಲ್ಲಿ 'ತುಶಬ್ದಃ ಪೂರ್ವಪಕ್ಷಂ ವ್ಯಾವರ್ತಯತಿ' ಎಂದು ಹೇಳಲಾಗಿದೆ. ಹೀಗೆ ಹೇಳುವುದಾದರೆ, 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರದಲ್ಲಿಯೂ 'ತು'ಶಬ್ದವಿದೆ. ಆದರಿಂದ ಈ ಸೂತ್ರದ ಹಿಂದಿನ ಸೂತ್ರವಾದ 'ನ ವಿಲಕ್ಷಣತ್ವಾತ್' ಎಂಬ ಸೂತ್ರವಷ್ಟೇ ಪೂರ್ವಪಕ್ಷಸೂತ್ರವೆಂದಾಗಬೇಕಾದೀತು. 'ನ ವಿಲಕ್ಷಣತ್ವಾತ್' ಇತ್ಯಾದಿ ಸೂತ್ರವು 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರವು ಪೂರ್ವಪಕ್ಷಸೂತ್ರವೆಂದು ಸಿದ್ಧವಾಗದಿರಬೇಕಾದೀತು.

ಬ್ರಹ್ಮಮೀಮಾಂಸಾಶಾಸ್ತ್ರದ ಯಾವುದೇ ಒಂದು ಸೂತ್ರ ಸಮಗ್ರವಾಗಿ ಪೂರ್ವಪಕ್ಷವನ್ನು ಮಾಡುತ್ತಲೇ ಇಲ್ಲ. ಪ್ರತಿಯೊಂದು ಸೂತ್ರಗಳೂ ಕೂಡ ಸಿದ್ಧಾಂತಸ್ಥಾಪಕವಾಗಿಯೇ ಆಗಿರುತ್ತವೆ. ಕಲ್ಪಸೂತ್ರದಲ್ಲಿ, ವ್ಯಾಕರಣಸೂತ್ರದಲ್ಲಿ ಪ್ರತ್ಯೇಕವಾಗಿ ಪೂರ್ವಪಕ್ಷಸೂತ್ರವೆಂಬ ವಿಭಾಗವಿರುವುದಿಲ್ಲ. ಅದೇ ರೀತಿಯಾಗಿ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಯೂ ಕೂಡ ಯಾವುದೇ ಒಂದು ಸೂತ್ರವು ಪೂರ್ವಪಕ್ಷಸೂತ್ರಗಳಾಗಿಲ್ಲ. ವಾಸ್ತವಿಕವಾಗಿ ಪೂರ್ವಮೀಮಾಂಸಾಶಾಸ್ತ್ರದಲ್ಲಿ ಕೆಲವು ಪೂರ್ವಪಕ್ಷಸೂತ್ರಗಳಿವೆ. ಆದರೆ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿಯೇ ಜೈಮಿನಿಋಷಿಗಳು ಕೆಲವು ಪೂರ್ವಪಕ್ಷಸೂತ್ರಗಳನ್ನು ಬರೆದಿದ್ದಾರೆ. ಆದ್ದರಿಂದ ಮುಂದಿನ ಪಾದಗಳಲ್ಲಿ ಮತ್ತು ಅಧ್ಯಾಯಗಳಲ್ಲಿ ಅಂತಹ ಪೂರ್ವಪಕ್ಷಸೂತ್ರಗಳಿವೆ ಎಂಬ ಕಲ್ಪನೆಯು ಅವರ ಶೈಲಿಯಿಂದಲೇ ನಮಗೆ ತೀರ್ಮಾನವಾಗುತ್ತದೆ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಥಮಪಾದದಲ್ಲಾಗಲೀ, ಅಥವಾ ಪ್ರಥಮಾಧ್ಯಾಯದಲ್ಲಾಗಲೀ, ಯಾವುದೇ ಒಂದು ಪೂರ್ವಪಕ್ಷಸೂತ್ರಗಳೇ ಇರುವುದಿಲ್ಲವೆಂದು ನೀವೇ ಒಪ್ಪಿದ್ದೀರಿ. ಸಂಪೂರ್ಣ ಪ್ರಥಮಾಧ್ಯಾಯದಲ್ಲಿ ಪೂರ್ವಪಕ್ಷಸೂತ್ರಗಳಿಲ್ಲವೆಂದು ಅಧ್ಯಯನ ಮಾಡುವಾಗ ಮುಂದಿನ ಅಧ್ಯಾಯಗಳಲ್ಲಿಯೂ ಪೂರ್ವಪಕ್ಷಸೂತ್ರಗಳು ಇರುವುದಿಲ್ಲವೆಂಬ ಅಭಿಪ್ರಾಯವು ಸೂತ್ರಕಾರರಿಗಿರುತ್ತದೆ ಎಂದು ಅವರ ಶೈಲಿಯಿಂದಲೇ ನಿರ್ಣಯವಾಗುತ್ತದೆ. ಇಷ್ಟಾದರೂ ಕೂಡ ಪೂರ್ವಪಕ್ಷಸೂತ್ರಗಳಿವೆ ಎಂಬ ಆಗ್ರಹವನ್ನು ಮಾಡುವುದಾದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ನಿಮ್ಮ ಪ್ರಕಾರ ವ್ಯರ್ಥವಾಗುತ್ತದೆ.

ಪೂರ್ವವಾದಿಮತಂ ಕಿಂಚಿತ್ ಕಿಂಚಿಚ್ಚಾತತ್ತ್ವವೇದಕಮ್ ।
ಉಪಾಸನಾಪರಂ ಕಿಂಚಿತ್ ಇತಿ ಕಸ್ಮಾತ್ ವಿನಾಶ್ಯತೇ ॥೧॥
ಅಸದಧಿಕರಣ (೨-೧-೪)

ಅದ್ವೈತಿಗಳ ಪ್ರಕಾರ ಕೆಲವು ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ. ಇನ್ನು ನೂರಾರು ಸೂತ್ರಗಳು ಅತತ್ವಾವೇದಕವಾಗಿವೆ. ಉಳಿದ ನೂರಾರು ಸೂತ್ರಗಳು ಉಪಾಸನಾಪರವಾಗಿದೆ. ಹೀಗೆ ಸಮಗ್ರ ಬ್ರಹ್ಮಸೂತ್ರಗಳೇ ಸತ್ಯವಾದ ವಿಷಯವನ್ನು ಹೇಳಲು ಸೋತುಬಿದ್ದು ವ್ಯರ್ಥವೆನಿಸುತ್ತವೆ. ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವೇ ಅದ್ವೈತಿಗಳ ಪ್ರಕಾರ ನಾಶವಾಯಿತು.

ಪ್ರಾರಂಭದ ಎರಡು ಸೂತ್ರಗಳಲ್ಲಿ ಮಾಡಲ್ಪಟ್ಟ ಪೂರ್ವಪಕ್ಷವೂ ಕೂಡ ಹುರುಳಿಲ್ಲದ್ದು. ಏಕೆಂದರೆ ಜಗತ್ತಿಗಿಂತ ಬ್ರಹ್ಮನು ವಿಲಕ್ಷಣನಾಗಿದ್ದಾನೆಂಬ ಕಾರಣದಿಂದ ಉಪಾದಾನನಲ್ಲ ಎಂಬ ಶಂಕೆಯನ್ನು ಈಗಾಗಲೇ ಅದೃಶ್ಯತ್ವಾಧಿಕರಣದಲ್ಲಿ ನೀವು ಮಾಡಿ ಪರಿಹರಿಸಿದ್ದೀರಿ. ಅದೇ ವಿಷಯವನ್ನು ವಿಲಕ್ಷಣತ್ವಾಧಿಕರಣದಲ್ಲಿಯೂ ಸಮರ್ಥನೆ ಮಾಡುವುದಾದರೆ ಪುನರುಕ್ತಿ ಬರುವುದಿಲ್ಲವೇ ? ಮತ್ತು ಪ್ರಥಮಸೂತ್ರದಲ್ಲಿ ಬ್ರಹ್ಮನಿಗಿಂತ ಜಗತ್ತು ವಿಲಕ್ಷಣವಾಗಿರುವುದರಿಂದ ಬ್ರಹ್ಮನು ಉಪಾದಾನಕಾರಣನಲ್ಲವೆಂದು ಪೂರ್ವಪಕ್ಷವನ್ನು ಮಾಡಿದಾಗ ಏಕೆ ವಿಲಕ್ಷಣನಾಗಿದ್ದಾನೆ ? ಎಂಬ ಪ್ರಶ್ನೆಯು ಬರುತ್ತದೆ ಇದಕ್ಕೆ ಸೂತ್ರಕಾರರು ಉತ್ತರಿಸುತ್ತಾ 'ತಥಾತ್ವಂ ಚ ಶಬ್ದಾತ್' ಜಗತ್ತು ಬ್ರಹ್ಮವಿಲಕ್ಷಣವಾಗಿದೆ ಎಂದು ಹೇಳುತ್ತಿದೆ ಎಂದು ಉತ್ತರಿಸಿದ್ದಾರೆ. ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ ಎಂಬ ವಿಚಾರವು ಪ್ರತ್ಯಕ್ಷದಿಂದಲೇ ತಿಳಿಯುತ್ತಿರುವಾಗ ವೇದದ ಆಧಾರವನ್ನು ಸೂತ್ರಕಾರರು ಹೇಳಬೇಕಾಗಿಲ್ಲ. ಸೂತ್ರಾಕ್ಷರಗಳ ಅರ್ಥದಲ್ಲಿಯೂ ಬಹಳಷ್ಟು ತಪ್ಪುಗಳಿವೆ.

## ಅದ್ವೈತಿಗಳ ಸೂತ್ರವ್ಯಾಖ್ಯಾನ ಅಸಾಧು

### तात्पर्यचन्द्रिका

**अपि च यथा कथंचिद्वैलक्षण्यं हेतुश्चेत् ''मृदब्रवीत्'' इत्यादेरभिमानिपरत्वाभावेऽपि शुद्ध्यशुद्ध्यादिनापि वैलक्षण्यस्य प्रत्यक्षादिनापि सिद्धेस्तदुपपादनार्थं द्वितीयसूत्रं व्यर्थम् ।**

ಹಿಂದೆ ಪೂರ್ವಪಕ್ಷ ಮಾಡುವಾಗ ಜಗತ್ತಿನಿಂದ ಬ್ರಹ್ಮನು ವಿಲಕ್ಷಣನಾಗಿರುವುದರಿಂದ ಉಪಾದಾನಕಾರಣನಾಗುವುದಿಲ್ಲವೆಂದು ಹೇಳಲಾಗಿತ್ತು. ಇದು ಅಯುಕ್ತ. ಯಥಾಕಥಂಚಿತ್ ವೈಲಕ್ಷಣ್ಯವು ಹೇತುವೋ? ಅಥವಾ ಚೇತನಾಚೇತನತ್ವಗಳಿಂದ ವೈಲಕ್ಷಣ್ಯವು ಹೇತುವಾಗಿದೆಯೋ? ಪ್ರಥಮ ಪಕ್ಷದಲ್ಲಿ 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ' ಎಂಬ ಎರಡನೆಯ ಸೂತ್ರವು ವ್ಯರ್ಥವಾಗುತ್ತದೆ. ಏಕೆಂದರೆ ಬ್ರಹ್ಮನು ಹೇಗೆ ಚೇತನನಾಗಿದ್ದಾನೋ, ಅದರಂತೆ ಮೃದಾದಿ ಜಡಪದಾರ್ಥಗಳೂ ಕೂಡ ಚೇತನವೇ ಆಗಿವೆ. ಏಕೆಂದರೆ 'ಮೃದಬ್ರವೀತ್' ಎಂಬ ಶ್ರುತಿಯು ಮೃದಾದಿ ಜಡಪದಾರ್ಥಗಳಲ್ಲಿಯೂ ವಚನಕ್ರಿಯೆಯನ್ನು ಹೇಳುತ್ತಿವೆ. ಆದ್ದರಿಂದ ಮೃದಾದಿಶಬ್ದಗಳು ಜಡಪರವಾಗುವುದಿಲ್ಲ ಎಂದು ಹೇಳಿದ್ದಿರಿ. ಆದರೆ ಹೀಗೆ ನೀವು ಹೇಳಬೇಕಾಗಿಲ್ಲ. ಏಕೆಂದರೆ ಯಥಾ ಕಥಂಚಿತ್ ವೈಲಕ್ಷಣ್ಯವಿದ್ದರೂ ಉಪಾದಾನತ್ವವು ನಾಶವಾಗುತ್ತದೆ ಎಂದು ಹೀಗೆ ಹೇಳುತ್ತಿದ್ದೀರಿ.

ಆದ್ದರಿಂದ ಮೃದಾದಿಶಬ್ದಗಳು ಅಭಿಮಾನಿದೇವತಾಪರ ಆಗುವುದೇ ಬೇಡ. ಪ್ರಸಿದ್ಧವಾದ ಮೃದಾದಿಗಳನ್ನೇ ಹೇಳಲಿ. ಅನ್ಯಥಾನುಪಪತ್ಯಾ ಚೇತನವೂ ಆಗಲಿ. ಬ್ರಹ್ಮನಂತೆ ಮೃದಾದಿಗಳೂ ಕೂಡ ಚೇತನವೇ ಆಗುತ್ತವೆ. ಆದರೂ ಕೂಡ ಬ್ರಹ್ಮನು ಮೃದಾದಿಗಳಿಗೆ ಉಪಾದಾನಕಾರಣನಾಗುವುದಿಲ್ಲ. ಏಕೆಂದರೆ ಜಡತ್ವ ಚೇತನತ್ವ ಎಂಬ ವಿರುದ್ಧಧರ್ಮಗಳಿರುವ ಪ್ರಯುಕ್ತ. ಉಪಾದಾನ-ಉಪಾದೇಯಭಾವವು ಕೂಡದಿರಬಹುದು. ಆದರೆ ಶುದ್ಧ ಹಾಗೂ ಅಶುದ್ಧವೆಂಬ ಕಾರಣದಿಂದ ವೈಲಕ್ಷಣ್ಯವು ಬರುತ್ತದೆ. ಬ್ರಹ್ಮನು ಸಿದ್ಧನುಗಿದ್ದಾನೆ. ಮೃದಾದಿಗಳು ಅಶುದ್ಧವಾಗಿವೆ. ಆದ್ದರಿಂದ ಇವೆರಡಕ್ಕೆ ಉಪಾದಾನ-ಉಪಾದೇಯಭಾವವು ಯುಕ್ತವಾಗುವುದಿಲ್ಲ. ಇಂತಹ ವೈಲಕ್ಷಣ್ಯವು ಪ್ರತ್ಯಕ್ಷಾದಿಗಳಿಂದಲೇ ಸಿದ್ಧವಾಗಿದೆ. ಹೀಗೆ ಸುಲಭವಾಗಿಯೇ ವೈಲಕ್ಷಣ್ಯವನ್ನು ಉಪಪಾದನೆ ಮಾಡಲು ಬರುತ್ತಿರುವಾಗ ಮೃದಾದಿಶಬ್ದಗಳಿಗೆ ಅಭಿಮಾನಿದೇವತಾಪರತ್ವವನ್ನು ಸಮರ್ಥನೆ ಮಾಡಿ, ಪೂರ್ವಪಕ್ಷವನ್ನು ದೃಢಪಡಿಸಲು ಎರಡನೆಯ ಸೂತ್ರ ಹೊರಟದ್ದು ವ್ಯರ್ಥವೇ ಆಗಿದೆ.

ವಿವರಣೆ - 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' - ಉಪನಿಷತ್ತಿನಲ್ಲಿ ಭೋಕ್ತೃ ಹಾಗೂ ಭೋಗ್ಯ ಎಂಬ ವಿಭಾಗವನ್ನು ಮಾಡಲಾಗಿದೆ. ಎಲ್ಲವೂ ಚೇತನ ಪದಾರ್ಥವೇ ಆದರೆ ಭೋಗ್ಯಪದಾರ್ಥವೇ ಇಲ್ಲದಿರುವ ಪ್ರಸಂಗ ಬರುತ್ತದೆ. ಆದ್ದರಿಂದ ಪೃಥಿವ್ಯಾದಿ ಜಡಪದಾರ್ಥಗಳು ಚೇತನವಾಗಲು ಸಾಧ್ಯವಿಲ್ಲ. 'ಮೃದಬ್ರವೀತ್' ಇತ್ಯಾದಿ ಕೆಲವು ವೇದವಾಕ್ಯಗಳು ಮಣ್ಣು, ನೀರು ಮೊದಲಾದವುಗಳಲ್ಲಿಯೂ ಚೇತನಧರ್ಮವಾದ ವಕ್ತೃತ್ವವನ್ನು ಹೇಳುವಂತೆ ಆಪಾತತಃ ತೋರಿದರೂ ಆದೇ ಅರ್ಥವನ್ನು ಸ್ವೀಕರಿಸಬಾರದು. ಹೊರತಾಗಿ, ಅಭಿಮಾನಿಚೇತನರನ್ನು ವಿವಕ್ಷಿಸಬೇಕು. ಹೀಗೆ ಜಗತ್ತು ಜಡಭೂತವಾಗಿದೆ, ಬ್ರಹ್ಮನು ಚೇತನನಾಗಿದ್ದಾನೆ. ಜಡಭೂತವಾದ ಜಗತ್ತಿಗಿಂತಲೂ ಬ್ರಹ್ಮನಲ್ಲಿ ವೈಲಕ್ಷಣ್ಯವಿರುವುದರಿಂದ ಉಪಾದಾನ ಉಪಾದೇಯಭಾಗವು ಯುಕ್ತವಾಗುವುದಿಲ್ಲ. (ಇದೂ ಕೂಡ ಪೂರ್ವಪಕ್ಷ ಸೂತ್ರ)

ಅದ್ವೈತಿಗಳ ಎರಡನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ 'ಮೃದಬ್ರವೀತ್' ಎಂದು ಶ್ರುತಿಯು ಹೇಳುತ್ತಿರುವುದರಿಂದ ಮಣ್ಣು ಚೇತನವಾಗಿದೆ, ಬ್ರಹ್ಮನೂ ಕೂಡ ಚೇತನನಾಗಿದ್ದಾನೆಂದು ತಿಳಿಯುತ್ತದೆ. ಹೀಗಿರುವಾಗ ಬ್ರಹ್ಮನು ಜಗತ್ತಿಗೆ ಉಪಾದಾನನಾಗಬಹುದಲ್ಲವೇ? ಎಂಬ ಪ್ರಶ್ನೆಯು ಪ್ರಾಪ್ತವಾದಾಗ ಇದರ ನಿರಾಕರಣೆಗಾಗಿ ಸೂತ್ರವು ಮಣ್ಣು ಜಡಪದಾರ್ಥವಾಗಿದೆ ಎಂದು ಸಮರ್ಥನೆ ಮಾಡಬೇಕು. ಇದನ್ನು ಬಿಟ್ಟು ಪೂರ್ವಪಕ್ಷಿ ಹೇಳಿದಂತೆ ಮಣ್ಣು ಚೇತನವೆಂದು ಒಪ್ಪಿಕೊಂಡರು ಅದು ಅಶುದ್ಧ, ಬ್ರಹ್ಮನು ಶುದ್ಧರೂಪ ಎಂದು ಸಮರ್ಥನೆ ಮಾಡುತ್ತಿದ್ದೀರಿ. ಹೀಗೆ ಸಮರ್ಥನೆ ಮಾಡಿದ ಮೇಲೆ ಉಪಾದಾನ, ಉಪಾದೇಯಭಾವವು ಯುಕ್ತವೇ ಆಗುವುದಿಲ್ಲ. ಹೀಗಿರುವಾಗ ಮಣ್ಣು, ಚೇತನವೆನ್ನುವ ಪೂರ್ವಪಕ್ಷದ ನಿರಾಕರಣೆ ಅನಾವಶ್ಯಕವಾಗುತ್ತದೆ.

ಅಸದಧಿಕರಣ (೨-೧-೪)

(ಬ್ರಹ್ಮನು ಮೃದಾದಿಗಳಿಗೆ ಉಪಾದಾನನಲ್ಲ ಎಂಬುದು ಪೂರ್ವಪಕ್ಷಿಗಳ ಮುಖ್ಯಉದ್ದೇಶ. ಇದು ಬ್ರಹ್ಮನು ಶುದ್ಧನಾಗಿದ್ದಾನೆ, ಮೃದಾದಿಗಳು ಅಶುದ್ಧವಾಗಿವೆ ಎಂದು ಹೇಳುವುದರಿಂದಲೂ ಯುಕ್ತವಾಗುತ್ತದೆ. ಇದಕ್ಕೋಸ್ಕರ ಮೃದಾದಿಗಳಿಗೆ ಅಭಿಮಾನಿದೇವತಾಪರತ್ವವನ್ನು ಸಮರ್ಥನೆ ಮಾಡುವ ಅವಶ್ಯಕತೆಯಿರುವುದಿಲ್ಲ.)

**चेतनाचेतनत्वाभ्यामेव वैलक्षण्यं हेतुश्चेदचेतनवृश्चिकशरीरादिकं प्रत्येवाचेतनस्य गोमयादेरुपादानतया चेतनस्याचेतनोपादानतायाः क्वाप्यदर्शनात् तृतीयसूत्रायोगः ।**

ಇನ್ನು ಚೇತನಾಚೇತನತ್ವಗಳಿಂದ ವೈಲಕ್ಷಣ್ಯವೇ ಹೇತುವೆಂಬ ಎರಡನೆಯ ಪಕ್ಷವೂ ಕೂಡ ಅಯುಕ್ತವಾಗಿದೆ. ಹೀಗೆ ಹೇಳಿದಾಗ 'ದೃಶ್ಯತೇ ತು' ಎಂಬ ಮೂರನೆಯ ಸೂತ್ರವು ಅಯುಕ್ತವಾಗುತ್ತದೆ. ವೈಲಕ್ಷಣ್ಯವಿದ್ದರೂ ಕೂಡ ಗೋಮಯ ಮತ್ತು ವೃಶ್ಚಿಕಗಳಿಗೆ ಉಪಾದಾನ ಉಪಾದೇಯಭಾವವಿರುವುದು ಕಂಡಿದೆ ಎಂದು ಸಿದ್ಧಾಂತವನ್ನು ಪ್ರಾರಂಭ ಮಾಡಿದ್ದೀರಿ. ಆದರೆ ಗೋಮಯವು ವೃಶ್ಚಿಕದ ಶರೀರಕ್ಕೆ ಉಪಾದಾನಕಾರಣವಾಗಿದೆ ಹೊರತು, ವೃಶ್ಚಿಕವೆಂಬ ಚೇತನಕ್ಕೆ ಉಪಾದಾನಕಾರಣವಾಗಿಲ್ಲ. ಹೀಗಿರುವಾಗ ಗೋಮಯ-ವೃಶ್ಚಿಕದ ದೃಷ್ಟಾಂತದ ಚೇತನಾಚೇತನತ್ವಗಳಿಂದ ಬರುವ ವೈಲಕ್ಷಣ್ಯವೇ ಹೇತುವೆಂದು ಹೇಳಲು ಸಾಧ್ಯವಿಲ್ಲ. ಚೇತನವು ಅಚೇತನಕ್ಕೆ ಉಪಾದಾನಕಾರಣವಾಗಿದ್ದು, ಬೇರೆ ಎಲ್ಲಿಯೂ ಕೂಡ ಕಂಡಿರುವುದಿಲ್ಲ. ಆದ್ದರಿಂದ 'ದೃಶ್ಯತೇ ತು' ಎಂಬ ಸೂತ್ರವು ಸಮರ್ಥನೆ ಮಾಡುವ ವಿಷಯವು ಅಯುಕ್ತವಾಗಿದೆ.

**किञ्च ''मृदब्रवीत्'' इत्यादौ मृदादीनां वक्तृत्वज्ञातृत्वादिसिद्धावपि ''तथात्वं च शब्दात्'' इति पूर्वसूत्रोक्तविज्ञानाविज्ञानत्वादिवैलक्षण्यापरिहारान्मृदादीनां वक्तृत्वे शङ्कायोगाच्च तत्परिहारार्थं द्वितीयसूत्रमित्ययुक्तम् ।**

ಮತ್ತು 'ಅಸ್ಯ ತಥಾತ್ವಂ ಚ ಶಬ್ದಾತ್' ಎಂಬ ಎರಡನೆಯ ಸೂತ್ರದಲ್ಲಿ ಜಗತ್ತಿಗೂ ಬ್ರಹ್ಮನಿಗೂ ವೈಲಕ್ಷಣ್ಯವಿದೆಯೆನ್ನಲು ಶ್ರುತಿಯನ್ನೇ ಪ್ರಮಾಣವನ್ನಾಗಿ ಹೇಳಿದಿರಿ. ಆದರೆ 'ಮೃದಬ್ರವೀತ್' ಇತ್ಯಾದಿ ಶ್ರುತಿಗಳಲ್ಲಿ ಮೃದಾದಿ ಜಡಪದಾರ್ಥಗಳಿಗೂ ವಕ್ತೃತ್ವ ಜ್ಞಾತೃತ್ವ ಮೊದಲಾದವುಗಳನ್ನು ಹೇಳಿದ್ದಾರೆ. ಆದ್ದರಿಂದ ಬ್ರಹ್ಮನಿಗೂ ಉಪಾದೇಯವಾದ ಮೃದಾದಿಗಳಿಗೂ ವೈಲಕ್ಷಣ್ಯವು ಬಾರದೇ ಸಾಲಕ್ಷಣ್ಯವೇ ಬರುತ್ತದಲ್ಲವೇ? ಎಂಬ ಆಶಂಕೆಯೇ ತಪ್ಪು. ಇದು ಅಯುಕ್ತ. 'ಮೃದಬ್ರವೀತ್' ಇತ್ಯಾದಿ ಸೂತ್ರಗಳಲ್ಲಿ ವಕ್ತೃತ್ವ ಜ್ಞಾತೃತ್ವವನ್ನು ಜಡಪದಾರ್ಥಕ್ಕೆ ಹೇಳಿದ್ದರೂ ಕೂಡ ವಿಜ್ಞಾನತ್ವ, ಅವಿಜ್ಞಾನತ್ವ ಎಂಬ ಧರ್ಮದಿಂದಾಗಿ ವೈಲಕ್ಷಣ್ಯವು ಬಂದೇ ಬರುತ್ತದೆ. ಪ್ರಕೃತ ವಿಜ್ಞಾನಂಚ ಅವಿಜ್ಞಾನಂಚ ಎಂಬ ಶ್ರುತಿಯೇ ಪ್ರಸಕ್ತವಾಗಿದೆ. ಮೃದಾದಿಗಳು ವಿಜ್ಞಾನಾತ್ಮಕವಂತೂ ಆಗಿರುವುದಿಲ್ಲ. ಆದ್ದರಿಂದ ಪ್ರಾಣಾತ್ಮಕತ್ವವು

ಮೃದಾದಿಗಳಲ್ಲಿ ಇದೆಯೆಂದು ಹೇಳಲಾಗದು. ವಿಜ್ಞಾನಾತ್ಮಕತ್ವವು ಕೂಡುವುದಿಲ್ಲ. ಆದ್ದರಿಂದ 'ತಥಾತ್ವಂ ಚ ಶಬ್ದಾತ್' ಎಂಬ ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ವಿಜ್ಞಾನ ಅವಿಜ್ಞಾನತ್ವ ಇತ್ಯಾದಿ ರೂಪವಾದ ವೈಲಕ್ಷಣ್ಯವಿದೆ ಎಂಬ ಆಶಂಕೆಯು ಪರಿಹಾರವೇ ಆಗುವುದಿಲ್ಲ. ಮತ್ತು ಮೃದಾದಿ ಜಡಪದಾರ್ಥಗಳಲ್ಲಿ ವಕ್ತೃತ್ವವು ಬರುವುದರಿಂದ ಮಣ್ಣು ಚೇತನವಾಗುತ್ತದೆ ಎಂಬ ಆಶಂಕೆಯೇ ಬರುವುದಿಲ್ಲ. ಪ್ರತ್ಯಕ್ಷವಿರುದ್ಧವಾದ ಆಶಂಕೆಯನ್ನು ಮಾಡಿ, ಅದರ ಪರಿಹಾರಕ್ಕಾಗಿ ಎರಡನೆಯ ಸೂತ್ರ ಹೊರಟಿದೆ ಎಂದು ಹೇಳುವುದು ಅಯುಕ್ತವಾಗಿದೆ.

**तृतीयं चायुक्तम् । गोमयादिवद्ब्रह्मणः पूर्वरूपहानेन जगद्भवनाभावेन तद्दृष्टान्तोक्तययोगात् ।**

'ದೃಶ್ಯತೇ ಚ' ಎಂಬ ಮೂರನೆಯ ಸೂತ್ರವು ಮತ್ತೊಂದು ಕಾರಣದಿಂದಲೂ ಅಯುಕ್ತವಾಗಿದೆ. ಗೋಮಯವು ತನ್ನ ಸ್ವರೂಪವನ್ನು ಕಳಚಿಕೊಂಡು ವೃಶ್ಚಿಕವಾಗುತ್ತದೆ. ಆದರೆ ಬ್ರಹ್ಮನು ತನ್ನ ಸ್ವರೂಪವನ್ನು ಕಳೆದುಕೊಂಡು ಜಗತ್ತಾಗಿ ಪರಿಣಾಮ ಹೊಂದುತ್ತಾನೆಂದು ನೀವೇ ಒಪ್ಪುವುದಿಲ್ಲ. ಆದ್ದರಿಂದ ಗೋಮಯದ ದೃಷ್ಟಾಂತವನ್ನು ಹೇಳಲು ಮೂರನೆಯ ಸೂತ್ರ ಹೊರಟಿದ್ದು ಅಯುಕ್ತವಾಗಿದೆ.

ವಿವರಣೆ - 'ದೃಶ್ಯತೇ ತು' ಕಾರ್ಯಕಾರಣಗಳಿಗೆ ವೈಲಕ್ಷಣ್ಯವು ಲೋಕದಲ್ಲಿ ಕಂಡಿರುವುದರಿಂದ, ಚೇತನನಿಶ್ಚಿತವಾದ ಶರೀರದಿಂದ ಅಚೇತನವಾದ ನಚಕೇಶಾದಿಗಳು ಹೇಗೆ ಹುಟ್ಟುತ್ತವೋ, ಅಚೇತನಾದಿ ಗೋಮಯಗಳಿಂದ ಚೇತನನಿಶ್ಚಿತವಾದ ಚೇಳು ಮೊದಲಾದವುಗಳು ಹೇಗೆ ಹುಟ್ಟುತ್ತವೋ, ಅದರಂತೆ ಚೇತನನಾದ ಮತ್ತು ಶುದ್ಧನೂ ಆದ ಬ್ರಹ್ಮನಿಂದ ಅಚೇತನವಾದ ಮತ್ತು ಅಶುದ್ಧವಾದ ಜಗತ್ತೂ ಕೂಡ ಹುಟ್ಟಬಹುದು.

ಮೂರನೆಯ ಈ ಸೂತ್ರದಲ್ಲಿ ಸಿದ್ಧಾಂತವನ್ನು ಅದ್ವೈತಿಗಳು ಪ್ರಾರಂಭಿಸಿದ್ದಾರೆ. ಇದೂ ಕೂಡ ಸರಿಯಲ್ಲ. ಗೋಮಯದಿಂದ ಚೇಳು ಹುಟ್ಟುವುದೇ ಅಲ್ಲ. ಪಾರ್ಥಿವವಾದ ಗೋಮಯದಿಂದ ಪಾರ್ಥಿವವಾದ ಚೇಳಿನ ಶರೀರವಷ್ಟೇ ಹುಟ್ಟುತ್ತದೆ. ಚೇತನ ಅಚೇತನಗಳಿಗೆ ಉಪಾದಾನ ಉಪಾದೇಯಭಾವವು ಕಂಡಿರುವುದೇ ಇಲ್ಲ.

**चतुर्थेऽपि मम असत्कारणमिति चेन्न । तस्य प्रतिषेधमात्रत्वादिति बह्वध्याहारनैरपेक्ष्येण हेतुसाध्ययोः सामानाधिकरण्येन चान्वयस्साक्षाद्ब्रह्म-कारणत्वाक्षेपश्च । तव तु असत्कार्यं प्रसज्येतेति चेन्न । सत्कार्यप्रतिषेधमात्रत्वादिति बह्वध्याहारेण वैयधिकरण्येन चान्वयस्साक्षात्तदनाक्षेपश्च ।**

ಅಸದಧಿಕರಣ (೨-೧-೪)

'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ನಾಲ್ಕನೆಯ ಸೂತ್ರದ ವ್ಯಾಖ್ಯಾನವು ಅಯುಕ್ತವಾಗಿದೆ. ನಾವು ವ್ಯಾಖ್ಯಾನ ಮಾಡಿದಾಗ ಅನೇಕ ಪದಗಳ ಅಧ್ಯಾಹಾರವು ಇರುವುದಿಲ್ಲ. ಮತ್ತು ಹೇತುಸಾಧ್ಯಗಳಿಗೆ ಸಾಮಾನಾಧಿಕರಣ್ಯವೂ ಕೂಡ ಇರುತ್ತದೆ. ಬ್ರಹ್ಮಕಾರಣತ್ವಕ್ಕೆ ಆಕ್ಷೇಪಕವಾದ ಪ್ರಾಗಭಾವ ಕರ್ತೃತ್ವಕ್ಕೆ ಪೂರಕವಾದ ಅಂಶವೂ ಕೂಡ ಇದೆ. ಏಕೆಂದರೆ ಪ್ರಾಗಭಾವವು ಪ್ರತೀಷೇಧ್ಯೈಕಸ್ವರೂಪವಾಗಿದೆ. 'ಪ್ರಾಗಭಾವಃ ನ ಜಗತ್‌ಕರ್ತಾ ಪ್ರತಿಷೇಧಮಾತ್ರತ್ವಾತ್' ಹೀಗೆ ಸೂತ್ರಾರ್ಥವನ್ನು ಸುಲಭವಾಗಿ ಹೇಳಬಹುದು. ಆದರೆ ನೀವು ಕಾರ್ಯವಾದ ಜಗತ್ತು ಉತ್ಪತ್ತಿಗಿಂತ ಮೊದಲು ಅಸತ್ತಾಗಬೇಕಾದೀತು ಎಂದು ಹೇಳಿದಾಗ 'ಪ್ರಸಜ್ಯೇತ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಉತ್ತರಿಸುವಾಗಲೂ ಸತ್ಕಾರ್ಯಪ್ರತಿಷೇಧಮಾತ್ರತ್ವಾತ್ ಎಂಬುದನ್ನೂ ಕೂಡ ಅಧ್ಯಾಹಾರ ಮಾಡಬೇಕು. ಏಕೆಂದರೆ ಸತ್ಕಾರ್ಯವಾದವನ್ನು ನೈಯಾಯಿಕರು ನಿರಾಕರಣೆ ಮಾಡುತ್ತಾರಲ್ಲವೇ? ಎಂದರೆ ನೈಯಾಯಿಕರು ನಿರಾಕರಣೆ ಮಾಡುವ ಸತ್ಕಾರ್ಯವಾದ ಪ್ರತಿಷೇಧವು ಸತ್ಕಾರ್ಯವಾದ ಪ್ರತಿಷೇಧಕ ಸ್ವರೂಪವಾಗಿದೆ ಎಂದು ಹೇಳುತ್ತೀರಿ. ಹೀಗೆ ಅನೇಕ ಪದಗಳನ್ನು ಅಧ್ಯಾಹಾರ ಮಾಡುತ್ತಿದ್ದೀರಿ. ಮತ್ತು ವೈಯಧಿಕರಣ್ಯವು ಬರುತ್ತದೆ. ಹೇತುವು ಸತ್ಕಾರ್ಯವಾದದ ಪ್ರತಿಷೇಧದಲ್ಲಿ ಇದೆ. 'ಪ್ರಾಗುಕ್ತೇಃ ಅಸದ್ಭವಿತಮರ್ಹತಿ' ಎಂಬ ಸಾಧ್ಯವು ಮತ್ತೊಂದು ಕಡೆ ಇದೆ. ಹೀಗೆ ಹೇತುಸಾಧ್ಯಗಳಿಗೆ ವೈಯಧಿಕರಣ್ಯವು ಬರುತ್ತದೆ. ಜಗತ್ತು ಹುಟ್ಟುವ ಮೊದಲು ಸತ್ವವಾಗಿದೆ ಎಂದಷ್ಟೇ ಹೇಳಿದಂತಾಯಿತು. ಬ್ರಹ್ಮನು ಕಾರಣನಾಗಿದ್ದಾನೆಂಬ ವಿಷಯದಲ್ಲಿ ಯಾವುದೇ ಆಕ್ಷೇಪವನ್ನು ತೋರಿಸಿದಂತಾಗಲಿಲ್ಲ.

ವಿವರಣೆ - 'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಜಗತ್ತಿನಲ್ಲಿ ಅನೇಕ ಗುಣದೋಷಗಳಿವೆ. ಇದಕ್ಕೆ ಕಾರಣನಾದ ಬ್ರಹ್ಮನು ನಿರ್ಗುಣನು, ಶುದ್ಧನಾಗಿದ್ದಾನೆ. ಸೃಷ್ಟಿಯ ಮೊದಲು ಕಾರ್ಯಭೂತವಾದ ಪ್ರಪಂಚವು ಸರ್ವಥಾ ಇರಲಿಲ್ಲ. ಆದ್ದರಿಂದ ಸತ್ಕಾರ್ಯವಾದಕ್ಕೆ ಭಂಗ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಸೃಷ್ಟಿಕಾಲದಲ್ಲಿಯೂ ಜಗತ್ತು ಬ್ರಹ್ಮರೂಪದಿಂದ ಇದೆ ಎಂದು ಒಪ್ಪಬೇಕು. ಆದ್ದರಿಂದ ಸತ್ಕಾರ್ಯವಾದಕ್ಕೆ ಭಂಗವು ಬರುವುದಿಲ್ಲ ಎಂಬುದು ನಾಲ್ಕನೆಯ ಸೂತ್ರ ವ್ಯಾಖ್ಯಾನ.

ಇದೂ ಕೂಡ ತಪ್ಪು. ಪ್ರಾಗಭಾವವು ಜಗತ್ತಿಗೆ ಕಾರಣವಲ್ಲ ಏಕೆಂದರೆ ಅದು ಪ್ರತಿಷೇಧಸ್ವರೂಪವಾಗಿದೆ ಎಂದು ನೇರವಾಗಿಯೇ ಸೂತ್ರಕ್ಕೆ ವ್ಯಾಖ್ಯಾನ ಮಾಡಲು ಬರುವಾಗ ತತ್ಕಾರ್ಯವಾದ ಪ್ರತಿಜ್ಞೆಯನ್ನು ಈ ಸೂತ್ರವು ಮಾಡುತ್ತಿದೆಯೆಂದು ಇಲ್ಲದ ಪದಗಳನ್ನೆಲ್ಲಾ ಅಧ್ಯಾಹಾರ ಮಾಡಿ, ಅರ್ಥೈಸಬೇಕಾಗುತ್ತದೆ. ಇದು ಅತ್ಯಂತ ಅಯುಕ್ತ.

**पञ्चमेऽपि प्रलये ब्रह्मणः कार्यधर्मापत्तौ किं कार्यनाशो हेतुः किं वा कार्यकारणयोरभेदः ।**

'ಅಪೀತೌ ತದ್ವತ್ಪ್ರಸಂಗಾದಸಮಂಜಸಮ್' ಎಂಬ ಐದನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಕಾರ್ಯವು ಸ್ವಯಂ ದುಷ್ಟವಾದ್ದರಿಂದ ಕಾರಣದ ಸಂಶ್ಲೇಷವನ್ನು ಹೊಂದಿದರೆ, ಅದನ್ನೂ ಕೂಡ ದುಷ್ಟವನ್ನಾಗಿ ಮಾಡುತ್ತದೆ. ಜಗತ್ತು ಪ್ರಳಯಕಾಲದಲ್ಲಿ ಬ್ರಹ್ಮನಲ್ಲಿ ಸಂಶ್ಲೇಷವನ್ನು ಹೊಂದುವುದಾದರೆ, ಸ್ವಯಂ ದುಷ್ಟವಾದ ಜಗತ್ತು ಕಾರಣವಾದ ಬ್ರಹ್ಮನನ್ನೂ ಕೂಡ ದುಷ್ಟವನ್ನಾಗಿ ಮಾಡುತ್ತದೆ ಎಂದು ಐದನೆಯ ಸೂತ್ರವು ಕೇವಲ ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದೆ ಎಂದು ವ್ಯಾಖ್ಯಾನ ಮಾಡುತ್ತಿದ್ದೀರಿ.

ಇದು ಅಯುಕ್ತ. 'ಕಾರ್ಯಭೂತವಾದ ಜಗತ್ತು ಬ್ರಹ್ಮನಲ್ಲಿ ಸಂಶ್ಲೇಷವನ್ನು ಹೊಂದಿದಾಗ ತನ್ನಲ್ಲಿರುವ ಧರ್ಮಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾದೀತು' ಎಂದು ನೀವು ಸಾಧನೆ ಮಾಡುತ್ತಿದ್ದೀರಿ. ಇದಕ್ಕೆ ಕಾರ್ಯನಾಶವೇ ಹೇತುವೋ, ಅಥವಾ ಕಾರ್ಯಕಾರಣಗಳಿಗಿರುವ ಅಭೇದವು ಹೇತುವೋ ?

**नाद्यः । कार्यनाशे तद्धर्माणां सुतरां नष्टत्वेन ब्रह्मणस्तदनापत्तेः।**

ಪ್ರಳಯಕಾಲದಲ್ಲಿ 'ಕಾರ್ಯಭೂತವಾದ ಜಗತ್ತೇ ನಾಶವಾಗಿರುವುದರಿಂದ ಜಗತ್ತಿನ ಧರ್ಮಗಳೆಲ್ಲವೂ ಬ್ರಹ್ಮನಲ್ಲೇ ಬರಬೇಕಾದೀತು' ಎಂಬ ಮೊದಲನೇ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ಕಾರ್ಯವೇ ನಾಶವಾದ ಮೇಲೆ ಅದರ ಧರ್ಮಗಳೂ ಕೂಡ ಸುತರಾಂ ನಾಶವನ್ನು ಹೊಂದುತ್ತವೆ. ಹೀಗಿರುವಾಗ ಜಗತ್ತಿನ ಧರ್ಮಗಳು ಬ್ರಹ್ಮನಲ್ಲಿ ಬರಲು ಸಾಧ್ಯವೇ ಆಗುವುದಿಲ್ಲ.

**नान्त्यः । अभेदेन तदापत्तेः स्थितावपि तुल्यत्वेन सूत्रे ''अपीतौ'' इत्यस्य वैयर्थ्यात् ।**

ಕಾರ್ಯ ಹಾಗೂ ಕಾರಣಗಳಿಗೆ ಅಭೇದವಿರುವ ಪ್ರಯುಕ್ತ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುತ್ತದೆಂಬ ಎರಡನೆಯ ಪಕ್ಷವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಕಾರ್ಯಕಾರಣಗಳಿಗೆ ಅಭೇದವು ಉತ್ಪತ್ತಿಯ ಪೂರ್ವದಲ್ಲಷ್ಟೇ ಅಲ್ಲ, ಉತ್ಪತ್ತಿಯ ಅನಂತರದಲ್ಲಿಯೂ ಇದ್ದೇ ಇರುತ್ತದೆ. ಯಾರ ಮತದಲ್ಲಿಯೂ ಕೂಡ ಕಾರ್ಯ ಹಾಗೂ ಕಾರಣಗಳಿಗೆ ಅಭೇದವನ್ನು ಒಪ್ಪದಿರಲು ಸಾಧ್ಯವೇ ಇಲ್ಲ. ಆದ್ದರಿಂದ ಜಗತ್ತಿಗೂ ಬ್ರಹ್ಮನಿಗೂ ಅಭೇದವಿರುವುದರಿಂದ ಕಾರ್ಯಭೂತವಾದ ಜಗತ್ತಿನ ಧರ್ಮಗಳು ಬ್ರಹ್ಮನಲ್ಲಿ ಬರಲಿ ಎಂಬ ಆಕ್ಷೇಪವನ್ನು ಸ್ಥಿತಿಕಾಲದಲ್ಲಿಯೂ ಕೂಡ ಮಾಡಬಹುದು. ಹೀಗಿರುವಾಗ ಸೂತ್ರದಲ್ಲಿ 'ಅಪೀತೌ' = ಪ್ರಳಯಕಾಲದಲ್ಲಿ ಎಂಬ ಪದವನ್ನು ಉಲ್ಲೇಖ ಮಾಡಿದ್ದಕ್ಕೆ ಅರ್ಥವೇ ಇಲ್ಲವೆಂದಾಯಿತು.

ವಿವರಣೆ - 'ಅಪೀತೌ ತದ್ವತ್ಪ್ರಸಂಗಾದಸಮಂಜಸಮ್' - ಜಗತ್ತು ಬ್ರಹ್ಮನಿಂದ ಹುಟ್ಟುವುದಾದರೆ ಘಟನಾಶವಾದಾಗ ಘಟವು ಹೇಗೆ ಮಣ್ಣಾಗುತ್ತದೋ, ಅದರಂತೆ ಈ ಜಗತ್ತೂ ಕೂಡ ನಾಶವಾದಾಗ ಬ್ರಹ್ಮಸ್ವರೂಪವೇ ಆಗಬೇಕು. ಆವಾಗ ಜಗತ್ತಿನಲ್ಲಿರುವ

ಗುಣದೋಷಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾಗುತ್ತದೆ. ಹಾಗೇ ಗುಣದೋಷಗಳನ್ನು ಬ್ರಹ್ಮನಲ್ಲಿ ಹೇಳಿದರೆ 'ನಿರ್ವಿಕಾರ ಸರ್ವಶಬ್ದಃ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. (ಇದು ಪೂರ್ವಪಕ್ಷ ಸೂತ್ರ)

ಇದೂ ಕೂಡ ಅಯುಕ್ತವಾಗಿದೆ. ಏಕೆಂದರೆ ಯಾವಾಗ ಪ್ರಳಯಕಾಲದಲ್ಲಿ ಕಾರ್ಯಭೂತವಾದ ಜಗತ್ತು ನಾಶವಾಗಿದೆಯೋ, ಆದರ ಧರ್ಮಗಳೂ ಕೂಡ ಸುತರಾಂ ನಾಶವಾಗಿದೆಯೆಂದೇ ಸಿದ್ಧವಾಗುತ್ತದೆ. ಮತ್ತು ಪ್ರಳಯಕಾಲದಲ್ಲಿ ಜಗತ್ತು ಬ್ರಹ್ಮಸ್ವರೂಪವಾಗುವುದಾದರೆ, ಸೃಷ್ಟಿಕಾಲದಲ್ಲಿಯೂ ಕೂಡ ಬ್ರಹ್ಮಸ್ವರೂಪವೇ ಆಗಿರಬೇಕು. ಹೀಗಿರುವಾಗ 'ಅಪಿ ತೌ'ಎಂಬ ಪದವು ಅಸ್ವರಸವಾಗುತ್ತದೆ.

ಮತ್ತು 'ನತು ದೃಷ್ಟಾಂತಭಾವಾತ್' - ಐದನೆಯ ಸೂತ್ರದಲ್ಲಿ ಮಾಡಿದ ಪೂರ್ವಪಕ್ಷವು ಅಯುಕ್ತವಾಗಿದೆ. ಜಗತ್ತಿಗೆ ಬ್ರಹ್ಮನು ಕಾರಣನಾಗಿದ್ದಾನೆಂದು ಹೇಳಿದಾಗ ಯಾವ ಆಕ್ಷೇಪಗಳು ಬರುವುದಿಲ್ಲ. ಕಾರ್ಯಕಾರಣಗಳಿಗೆ ಅಭೇದವಿದ್ದರೂ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುವುದಿಲ್ಲ ಎನ್ನಲು ಅನೇಕ ದೃಷ್ಟಾಂತಗಳಿವೆ. ಐಂದ್ರಜಾಲಿಕನು ತನ್ನ ಕಪಟವಾದ ವಿದ್ಯೆಯಿಂದ ಬೇರೆಯವರನ್ನು ಮೋಹಗೊಳಿಸುತ್ತಾನೆ. ಆದರೆ ತಾನು ಆ ಮೋಹಜಾಲದಲ್ಲಿ ಸಿಲುಕುವುದಿಲ್ಲ. ಮಣ್ಣಿನಿಂದ ಘಟವು ಹುಟ್ಟುತ್ತದೆ. ಆದರೆ ಘಟದಲ್ಲಿ ಜಲಾಹರಣಾದಿ ಸಾಮಾರ್ಥ್ಯವಿದ್ದರೂ ಮಣ್ಣಿನಲ್ಲಿ ಅಂತಹ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದ ಕಾರ್ಯದಲ್ಲಿರುವ ಧರ್ಮಗಳೆಲ್ಲವೂ ಕಾರಣದಲ್ಲಿ ಬರಬೇಕೆಂಬ ನಿಯಮವಿರುವುದಿಲ್ಲ.

ಇದೂ ಕೂಡ ತಪ್ಪು. ವಿಲಕ್ಷಣವಾದ ಧರ್ಮಗಳನ್ನು ಹೊಂದಿರುವ ವಸ್ತುಗಳಿಗೆ ಕಾರ್ಯಕಾರಣಭಾವವು ಇರುತ್ತದೆನ್ನಲು ದೃಷ್ಟಾಂತ ಹೇಳಲು ಈ ಸೂತ್ರ ಹೊರಡಬೇಕಾಗಿಲ್ಲ. ಈಗಾಗಲೇ 'ದೃಶ್ಯತೇ ತು' ಎಂಬ ಸೂತ್ರದಿಂದಲೇ ಈ ವಿಷಯವು ಸಿದ್ಧವಾಗಿದೆ. ಅದೇ ವಿಷಯವನ್ನು ಹೇಳಿದರೆ ಪುನರುಕ್ತಿ ಬರುತ್ತದೆ.

**षष्ठेऽपि विलक्षणयोरपि कार्यकारणभावे दृष्टान्तं कथयता ''दृश्यतेतु'' इत्यनेनैव कार्यवृश्चिकधर्माणां कारणे गोमयेनापत्तावपि दृष्टान्तस्योक्तत्वेन तेन पौनरुक्तयम् ।**

'ನತು ದೃಷ್ಟಾಂತಭಾವತ್' ಎಂಬ ಆರನೆಯ ಸೂತ್ರವು ಐದನೆಯ ಸೂತ್ರದ ಪೂರ್ವಪಕ್ಷಕ್ಕೆ ನಿರಾಸಕವಾಗಿ ಹೊರಟಿದೆ ಎನ್ನುತ್ತೀರಿ. ಸ್ವಪ್ನದ್ರಷ್ಟ್ರುವಿನ ಪದಾರ್ಥಗಳು ನಾಶವಾದಾಗ ಅವುಗಳ ಧರ್ಮವು ದ್ರಷ್ಟ್ರುವಿನಲ್ಲಿ ಬರುವುದಿಲ್ಲ. ಐಂದ್ರಜಾಲಿಕನ ಪದಾರ್ಥಗಳು ನಾಶವಾದಾಗ ಅವುಗಳ ಧರ್ಮವು ಐಂದ್ರಜಾಲಿಕನಲ್ಲಿ ಬರುವುದಿಲ್ಲ ಇತ್ಯಾದಿಯಾಗಿ ವೈಲಕ್ಷಣ್ಯವನ್ನು ನೀವು ಹೇಳುತ್ತಾ ವ್ಯಾಖ್ಯಾನ ಮಾಡುತ್ತೀರಿ.

ಇದು ತಪ್ಪು. ವಿಲಕ್ಷಣವಾಗಿದ್ದರೂ ಕಾರ್ಯಕಾರಣಭಾವವಿರಬಹುದೆನ್ನಲು ದೃಷ್ಟಾಂತವನ್ನು ಹೇಳಲು ಈ ಸೂತ್ರವು ಹೊರಡಬೇಕಾಗಿಲ್ಲ. ಈಗಾಗಲೇ 'ದೃಶ್ಯತೇ ತು' ಎಂಬ ಸೂತ್ರದಿಂದಲೇ ವಿಲಕ್ಷಣವಾದ ಪದಾರ್ಥಗಳಿಗೂ ಕಾರ್ಯಕಾರಣಭಾವವು ಕಂಡಿದೆಯೆಂದು ದೃಷ್ಟಾಂತ ಹೇಳಿದ್ದೀರಿ. ವೃಶ್ಚಿಕದ ಧರ್ಮಗಳು ಕಾರಣವಾದ ಗೋಮಯದಲ್ಲಿ ಬರುವುದಿಲ್ಲವೆಂದು ಹೇಳಿದ್ದೀರಿ. ಅದೇ ಸೂತ್ರದಿಂದಲೇ ಈ ಸೂತ್ರದ ಪ್ರಮೇಯವು ಸಿದ್ಧವಾಗುವಾಗ ಪುನಃ 'ದೃಷ್ಟಾಂತಭಾವಾತ್' ಎಂಬ ಸೂತ್ರದಿಂದ ಅದನ್ನೇ ಹೇಳಿದರೆ ಪುನರುಕ್ತಿದೋಷವು ಬರುತ್ತದೆ. ಆದ್ದರಿಂದ ಆರನೆಯ ಸೂತ್ರವು ಅಯುಕ್ತವಾಗಿದೆ.

**ಸಪ್ತಮಮಪ್ಯಯುಕ್ತಮ್ । ಜಲಾಹರಣಾದ್ಯಸಮರ್ಥಸ್ಯಾಪಿ ಮೃನ್ಮಾತ್ರಸ್ಯ ತತ್ಸಮರ್ಥಘಟಂ ಪ್ರತೀವ ಶಬ್ದಾದಿಹೀನಸ್ಯಾಪಿ ಪ್ರಧಾನಸ್ಯ ಶಬ್ದಾದಿಯುಕ್ತಜಗತ್ಪ್ರತ್ಯುಪಾದಾನತ್ವಸಮ್ಭವೇಽಪಿ ನ ಚೇತನಸ್ಯಾಚೇತನೋಪಾದಾನತ್ವಮ್ । ಕಾಪ್ಯದರ್ಶನಾನ್ನಿರ್ವಿಕಾರತ್ವಾಚ್ಚೇತಿ ಪರೇಣ ತ್ವಾಂ ಪ್ರತ್ಯುಕ್ತದೋಷಸ್ಯ ತತ್ಪಕ್ಷೇಽಪ್ರಾಪ್ತೇಃ ।**

'ಸ್ವಪಕ್ಷದೋಷಾಚ್ಚ' ಎಂಬ ಏಳನೆಯ ಸೂತ್ರವ್ಯಾಖ್ಯಾನವೂ ಕೂಡ ಅದ್ವೈತಮತದಲ್ಲಿ ಅಯುಕ್ತವಾಗಿದೆ. ಕೇವಲ ಮಣ್ಣಿಗೆ ಜಲಾಹರಣಾದಿ ಸಾಮರ್ಥ್ಯವು ಇರುವುದಿಲ್ಲ. ಆದರೂ ಕೂಡ ಜಲಾಹರಣಾದಿಗಳಿಗೆ ಸಮರ್ಥವಾದ ಘಟಕ್ಕೆ ಉಪಾದಾನಕಾರಣವಾಗಿದೆ. ಇದರಂತೆ ಶಬ್ದ, ಸ್ಪರ್ಶ, ರೂಪ, ರಸ ಮೊದಲಾದ ಗುಣಗಳು ಪ್ರಕೃತಿಯಲ್ಲಿಲ್ಲದಿದ್ದರೂ ಶಬ್ದಸ್ಪರ್ಶಾದಿಗುಣಗಳನ್ನು ಹೊಂದಿರುವ ಜಗತ್ತಿಗೆ ಪ್ರಕೃತಿಯು ಉಪಾದಾನಕಾರಣವಾಗಬಹುದು. ಆದರೆ ಅಚೇತನಪದಾರ್ಥವು ಚೇತನಪದಾರ್ಥವು ಉಪಾದಾನಕಾರಣವಾಗಲು ಸಾಧ್ಯವೇ ಇಲ್ಲ. ಹಾಗೇ ಎಲ್ಲಿಯೂ ಕೂಡ ಕಂಡಿಲ್ಲ. ಮತ್ತು ನಿಮ್ಮ ಸಿದ್ಧಾಂತದಲ್ಲಿ ಚೇತನನಾದ ಬ್ರಹ್ಮನು ನಿರ್ವಿಕಾರನಾದ್ದರಿಂದ ಉಪಾದಾನ-ಕಾರಣನಾಗಲಾರ. ಆದ್ದರಿಂದ ಸಾಂಖ್ಯನು ಅದ್ವೈತಿಗಳಾದ ನಿಮಗೆ ಯಾವ ದೋಷವನ್ನು ಹೇಳಿದ್ದಾನೋ, ಆ ದೋಷವನ್ನು ಸಾಂಖ್ಯನಿಗೆ ಹೇಳಲು ಬರುವುದಿಲ್ಲ.

ವಿವರಣೆ - 'ಸ್ವಪಕ್ಷದೋಷಾಚ್ಚ' - ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ವಾದಕ್ಕೆ ಸಾಂಖ್ಯರು ದೋಷವನ್ನು ಹೇಳುತ್ತಾರೆ. ಅದೇ ದೋಷವು ಸಾಂಖ್ಯರ ಪ್ರಕೃತಿಕಾರಣವಾದದಲ್ಲಿಯೂ ಕೂಡ ಸಮಾನವಾಗಿದೆ. ಏಕೆಂದರೆ ಪ್ರಕೃತಿಯಲ್ಲಿಯೂ ಕೂಡ ರೂಪರಸಾದಿಗುಣಗಳಿಲ್ಲ. ಅಂತಹ ಪ್ರಕೃತಿಯಿಂದ ರೂಪರಸಾದಿಗುಣಗಳನ್ನು ಹೊಂದಿರುವ ಪ್ರಪಂಚವು ಹುಟ್ಟುತ್ತದೆ. ಹೀಗೆ ಸಾಂಖ್ಯಮತದ ನಿರಾಕರಣೆಗಾಗಿ ಈ ಸೂತ್ರ ಹೊರಟಿದೆ.

ಇದೂ ಕೂಡ ತಪ್ಪು. ಜಲಾಹರಣಾದಿ ಸಾಮರ್ಥ್ಯವನ್ನು ಹೊಂದದ ಮಣ್ಣು, ಮಣ್ಣು ಜಲಾಹರಣಾದಿ ಸಾಮರ್ಥ್ಯವನ್ನು ಹೊಂದಿರುವ ಘಟಕ್ಕೆ ಕಾರಣವಾಗಬಹುದು. ಅದರಂತೆ

ರೂಪರಸಾದಿಧರ್ಮಗಳನ್ನು ಹೊಂದಿರುವ ಜಗತ್ತಿಗೆ, ರೂಪರಸಾದಿಧರ್ಮಗಳನ್ನು ಹೊಂದದ ಪ್ರಧಾನವು ಕಾರಣವಾಗಬಹುದು. ನಮಗೆ ದೃಷ್ಟಾಂತವಿದೆ. ಆದರೆ ಅಚೇತನವಾದ ಜಗತ್ತಿಗೆ ಚೇತನನಾದ ಬ್ರಹ್ಮನು ಉಪಾದಾನಕಾರಣನಾಗುತ್ತಾನೆ ಎಂಬ ವಿಷಯದಲ್ಲಿ ನಿಮ್ಮಿಂದ ಯಾವುದೇ ದೃಷ್ಟಾಂತವನ್ನು ಹೇಳಲಾಗದು.

**अष्टममप्ययुक्तम् । चशब्दाभावेन सिद्धान्तहेत्वन्तरत्वायोग्यस्य त्वयापि ''अन्यथानुमेयम्'' इत्यनेनैकसूत्रत्वेन स्वीकृतस्य च ''तर्काऽप्रतिष्ठानात्'' इत्यस्यास्मदीयरीत्या अन्यथा ''स्वपक्षदोषाच्च'' इति सूत्रोक्ताद्वैपरीत्येनानुमेयम् । तर्काप्रतिष्ठानादित्येकवाक्यतया श्रुतसाध्यान्वयेन शङ्काशेषत्वे सम्भवति श्रौतस्य विलक्षणयोरपि कार्यकारणभावस्य न हानिः । तर्कस्याप्रतिष्ठितत्वादित्येवमध्याहृत-साध्यान्वयेन वाक्यं भित्वा सिद्धान्तशेषत्वोक्त्ययोगादनिर्मोक्षप्रतियोगिनोऽ-नुषञ्जनीयत्वाच्च । प्रसङ्गशब्दवैयर्थ्याच्च ।**

'ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' ಎಂಬ ಎಂಟನೆಯ ಸೂತ್ರವ್ಯಾಖ್ಯಾನವು ಅದ್ವೈತಿಗಳ ಮತದಲ್ಲಿ ಅಯುಕ್ತವಾಗಿದೆ. 'ತರ್ಕಾಪ್ರತಿಷ್ಠಾನಾತ್' ಎಂಬ ಸೂತ್ರವನ್ನು ಸಿದ್ಧಾಂತಶೇಷವೆಂದು 'ಅನ್ಯಥಾನುಮೇಯಮಿತಿ ಚೇತ್' ಎಂಬ ಸೂತ್ರಶೇಷವನ್ನು ಪೂರ್ವಪಕ್ಷಭಾಗವೆಂದು 'ಸ್ಯಾದೇವಮಪ್ಯನಿರ್ಮೋಕ್ಷಪ್ರಸಂಗಃ' ಎಂಬುದನ್ನು ಸಿದ್ಧಾಂತಭಾಗವನ್ನು ಒಪ್ಪಿರುತ್ತಾರೆ. ಆದರೆ ನಮ್ಮ ಮತದಲ್ಲಿ 'ತರ್ಕಾಪ್ರತಿಷ್ಠಾನಾದನ್ಯಥಾನುಮೇಯಮಿತಿ ಚೇತ್' ಎಂಬುದನ್ನು ಸಮಗ್ರವಾಗಿ ಪೂರ್ವಪಕ್ಷಭಾಗವನ್ನಾಗಿಯೇ ಒಪ್ಪಲಾಗಿದೆ. ನಾವು ವ್ಯಾಖ್ಯಾನ ಮಾಡುವಂತೆ ಅದ್ವೈತಿಗಳೂ ಸಹ ಅನಿವಾರ್ಯವಾಗಿ ಸೂತ್ರಕ್ಕೆ ವ್ಯಾಖ್ಯಾನ ಮಾಡಬೇಕು. ಇಲ್ಲದಿದ್ದರೆ ಅನೇಕ ದೋಷಗಳು ಬರುತ್ತವೆ. ತರ್ಕಾಪ್ರತಿಷ್ಠಾನವು ಸಿದ್ಧಾಂತಕ್ಕೆ ಹೇತ್ವಂತರವಾಗಿದೆ ಎಂದು ನೀವು ಹೇಳುವುದಾದರೆ ಸೂತ್ರದಲ್ಲಿ ಚಶಬ್ದವಿರಬೇಕು. ಮತ್ತು 'ಅನ್ಯಥಾನುಮೇಯಮ್' ಎಂಬುದನ್ನು ನೀವು ಬೇರೆ ಸೂತ್ರವೆಂದೂ ಕೂಡ ಪರಿಗಣಿಸಿಲ್ಲ. ಇದೇ ಸೂತ್ರದಲ್ಲಿಯೇ ಸೇರಿಸಿದ್ದೀರಿ. ಹೀಗಿರುವಾಗ ನಾವು ಹೇಳುವಂತೆ ಅನ್ಯಥಾನುಮೇಯಕ್ಕೆ ಹೇತುಸಮರ್ಪಕವಾಗಿ ತರ್ಕಾಪ್ರತಿಷ್ಠಾನವನ್ನೇ ಹೇಳಬೇಕು. 'ಸ್ವಪಕ್ಷದೋಷಾಚ್ಚ' ಇತ್ಯಾದಿ ಸೂತ್ರಗಳಲ್ಲಿ ಸಾಧಿಸಲ್ಪಟ್ಟ ಸತ್ಕಾರಣತ್ವವನ್ನು ಸಮರ್ಥಿಸಲು ಮತ್ತು ಅಸತ್ಕಾರಣತ್ವವನ್ನು ಬಾಧಿಸಲು ನೀವು ಯಾವ ಅನುಮಾನವನ್ನು ಮಾಡುತ್ತೀರೋ ಅದಕ್ಕೆ ವಿಪರೀತವಾಗಿಯೂ ಕೂಡ ಅನುಮಾನವನ್ನು ಮಾಡಬಹುದು ಎಂಬುದನ್ನು 'ಅನ್ಯಥಾನುಮೇಯಮ್' ಎಂಬ ಸೂತ್ರಭಾಗವು ಹೇಳುತ್ತಿದೆ. ಹೀಗೆ 'ಅನ್ಯಥಾನುಮೇಯಮ್' ಎಂಬುದಕ್ಕೆ ಹೇತುಸಮರ್ಪಕವಾಗಿ 'ತರ್ಕಾಪ್ರತಿಷ್ಠಾನಾತ್'ಎಂಬ ಸೂತ್ರಭಾಗವು ಇರುತ್ತದೆ. ಹೀಗೆ 'ತರ್ಕಾಪ್ರತಿಷ್ಠಾನಾತ್' ಎಂಬುದನ್ನು

ಏಕವಾಕ್ಯತ್ವೇನ ಪರಿಗಣಿಸಿ ಸಾಧ್ಯದಲ್ಲಿಯೇ ಅನ್ವಯವನ್ನು ಮಾಡಿ, ಪೂರ್ವಪಕ್ಷಶೇಷವನ್ನಾಗಿಯೇ ವ್ಯಾಖ್ಯಾನ ಮಾಡಲು ಬರುತ್ತಿರುವಾಗ, ಇದನ್ನು ಬಿಟ್ಟು 'ಶ್ರೌತಸ್ಯ ವಿಲಕ್ಷಣಯೋರಪಿ ಕಾರ್ಯಕಾರಣಭಾವಸ್ಯ ನ ಹಾನಿಃ । ತರ್ಕಸ್ಯಾಪ್ರತಿಷ್ಠಿತತ್ವಾತ್' ಎಂಬ ಅಧ್ಯಾಹೃತವಾದ ಸಾಧ್ಯದಲ್ಲಿ ನೀವು ಅನ್ವಯ ಮಾಡುತ್ತಿದ್ದೀರಿ. ಶ್ರುತಿಸಿದ್ಧವಾದ ವಿಚಾರದಲ್ಲಿ ತರ್ಕವು ಪ್ರವೇಶ ಮಾಡಲು ಸಾಧ್ಯವಿಲ್ಲ. ಶ್ರುತಿಯಿಂದ ಬ್ರಹ್ಮನಿಗೂ ಜಗತ್ತಿಗೂ ಕಾರ್ಯಕಾರಣಭಾವವು ಉಪಾದಾನ ಉಪಾದೇಯಭಾವರೂಪವಾಗಿ ಸಿದ್ಧವಾಗಿದೆ. ಈ ವಿಷಯದಲ್ಲಿ ತರ್ಕದ ವಿರೋಧವು ಬರುವುದಿಲ್ಲವೆಂದು ನೀವು ವ್ಯಾಖ್ಯಾನ ಮಾಡಿದ್ದೀರಿ. ಹೀಗೆ ಮಾಡಿದಾಗ ತರ್ಕಾಪ್ರತಿಷ್ಠಾನಾತ್' ಎಂಬುದೇ ಬೇರೆ ವಾಕ್ಯ. 'ಅನ್ಯಥಾನುಮೇಯಮಿತಿ ಚೇತ್' ಎಂಬುದೇ ಬೇರೆ ವಾಕ್ಯವಾಗುತ್ತದೆ. ಮತ್ತು 'ತರ್ಕಾಪ್ರತಿಷ್ಠಾನಾತ್' ಎಂಬುದನ್ನು ಸಿದ್ಧಾಂತಶೇಷವನ್ನಾಗಿಯೂ ಕೂಡ ನಿಮ್ಮಿಂದ ಸಮರ್ಥಿಸಲಾಗದು. 'ಸ್ಯಾದೇವಾನಿರ್ಮೋಕ್ಷಪ್ರಸಂಗಃ' ಎಂಬುದನ್ನು ಸಿದ್ಧಾಂತಭಾಗವನ್ನಾಗಿ ಹೇಳಬೇಕಾದರೆ ಅದಕ್ಕೆ ಪ್ರತಿಯೋಗಿಯಾದ್ದನ್ನು ಅನುಷಂಗ ಮಾಡಿಕೊಳ್ಳಬೇಕಾಗುತ್ತದೆ. ನಮ್ಮ ಪ್ರಕಾರ ಆಗಮದಿಂದ ಉಪೋದ್ಬಲಿತವಾದ ತರ್ಕವು ಪ್ರತಿಷ್ಠಿತವಾಗುತ್ತದೆ. ನಿಮ್ಮ ಪ್ರಕಾರ ಆಗಮದಿಂದ ಉಪೋದ್ಬಲಿತವಾದ ತರ್ಕವೂ ಕೂಡ ಅಸಾಧುವಾಗುವುದಾದರೆ, ಮೋಕ್ಷವೆಂಬ ಪುರುಷಾರ್ಥವೇ ಇಲ್ಲದಿರಬೇಕಾದೀತು. ಯಾವ ಬೌದ್ಧಾದಿಗಳು ವೇದಪ್ರಾಮಾಣ್ಯವನ್ನೇ ಒಪ್ಪುವುದಿಲ್ಲವೋ ಅಂಥವನಿಗೆ ತರ್ಕದಿಂದಲೇ ಮೋಕ್ಷವನ್ನು ಸಮರ್ಥನೆ ಮಾಡಬೇಕು. ಅದು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಪ್ರಸಂಗಶಬ್ದಕ್ಕೆ ಯಾವುದೇ ಅರ್ಥವನ್ನೂ ಕೂಡ ನೀವು ಹೇಳಿರುವುದಿಲ್ಲ. 'ಅಪಿ'ಶಬ್ದವೂ ಕೂಡ ನಿಮ್ಮ ಮತದಲ್ಲಿ ವ್ಯರ್ಥವಾಗಿದೆ.

**किञ्च किं तर्कमात्रस्याप्रतिष्ठितत्वं किं वा श्रुत्याद्यननुगृहीतस्य ।**

ಮತ್ತು ತರ್ಕವು ಅಪ್ರತಿಷ್ಠಿತವಾಗಿದೆ ಎಂಬುದನ್ನು ಸಿದ್ಧಾಂತಶೇಷವನ್ನಾಗಿ ನೀವು ಹೇಳುತ್ತಿದ್ದೀರಿ. ನಿಮ್ಮ ಅಭಿಪ್ರಾಯವೇನೆಂದು ಸ್ಪಷ್ಟವಾಗಿ ತಿಳಿಸಿರಿ. ಎಲ್ಲಾ ಬಗೆಯ ತರ್ಕಗಳು ಅಪ್ರತಿಷ್ಠಿತವಾಗಿದೆಯೆಂದೋ ? ಅಥವಾ ಶ್ರುತ್ಯಾದಿಗಳ ಅನುಗ್ರಹವಿಲ್ಲದ ತರ್ಕವಷ್ಟೇ ಅಪ್ರತಿಷ್ಠಿತವಾಗಿದೆಯೆಂದೋ?

**नाद्यः । तर्काप्रतिष्ठितत्वसाधकतर्कस्याप्यप्रतिष्ठितत्वेन तेन तर्काप्रतिष्ठानासिद्धेः । मीमांसानारम्भापाताच्च । ''मन्तव्यः सोऽन्वेष्टव्यः यस्तर्केणानुसन्धत्ते'' इत्यादिश्रुतिस्मृतिविरोधाच्च ।**

ಸಕಲವಿಧತರ್ಕಗಳು ಅಪ್ರತಿಷ್ಠಿತವಾಗಿವೆ ಎಂಬ ಮೊದಲನೆಯ ಪಕ್ಷವು ಅಸಾಧುವಾಗಿದೆ. ಏಕೆಂದರೆ 'ತರ್ಕಸ್ಯಾಪ್ರತಿಷ್ಠಿತತ್ವಾತ್' ಎಂಬ ಹೇತುವನ್ನು ಸಾಧನೆ ಮಾಡಲು ಯಾವ ತರ್ಕವನ್ನು

ಮಾಡುತ್ತಿದ್ದೀರೋ ಅದೂ ಕೂಡ ಅಪ್ರತಿಷ್ಠಿತವಾಗಿದೆ ಎಂದು ಒಪ್ಪಿಕೊಂಡಂತಾಯಿತು. ಅದರಿಂದ ತರ್ಕಾಪ್ರತಿಷ್ಠಾನವು ಸಿದ್ಧವಾಗುವುದಿಲ್ಲ. ಮತ್ತು ಮೀಮಾಂಸಾಶಾಸ್ತ್ರವೇ ಅನಾರಂಭಣೀಯವಾಗುತ್ತದೆ. ಸಕಲ ಮೀಮಾಂಸಾಸೂತ್ರಗಳು ತರ್ಕದಿಂದಲೇ ಕೂಡಿರುತ್ತವೆಯಷ್ಟೇ.

ಮತ್ತು 'ಶ್ರೋತವ್ಯ ಮಂತವ್ಯಃ' 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಯಸ್ತರ್ಕೇಣಾನುಸಂಧತ್ತೇ' ಇವೇ ಮೊದಲಾದ ಶ್ರುತಿ-ಸ್ಮೃತಿಗಳಲ್ಲಿ ಬ್ರಹ್ಮನ ವಿಷಯದಲ್ಲಿ ತರ್ಕಗಳಿಗೆ ಪ್ರತಿಷ್ಠಿತತ್ವವನ್ನು ಸ್ಪಷ್ಟವಾಗಿ ಹೇಳಲಾಗಿದೆ.

**न द्वितीयः । ब्रह्मणोऽनुपादानत्वसाधकस्य वैलक्षण्यरूपतर्कस्य ''निर्विकारम्'' इत्यादिश्रुत्यनुगृहीतत्वादिति ।**

ಶ್ರುತ್ಯಾದಿಗಳ ಅನುಗ್ರಹವಿಲ್ಲದ ತರ್ಕಗಳು ಬ್ರಹ್ಮನ ವಿಷಯದಲ್ಲಿ ಅಪ್ರತಿಷ್ಠಿತವಾಗುತ್ತಿವೆ ಎಂಬ ಎರಡನೆಯ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಲ್ಲ ಎಂಬುದನ್ನು ಸಾಧನೆ ಮಾಡಲು ಯಾವ ವೈಲಕ್ಷಣ್ಯರೂಪವಾದ ತರ್ಕವನ್ನು ಪ್ರಯೋಗಿಸುತ್ತಿದ್ದೀರೋ ಅದು 'ನಿರ್ವಿಕಾರಮ್' ಇತ್ಯಾದಿ ಶ್ರುತಿಗಳಿಂದ ಅನುಗೃಹೀತವೇ ಆಗಿದೆ.

**यच्चोक्तं एतेन शिष्टैर्मनुव्यासप्रभृतिभिः केनचिदंशेन परिगृहीतस्य वैदिकदर्शनप्रत्यासन्नस्य प्रधानवादस्य निरासेन । तैः केनचिदप्यंशेनापरिगृहीताः वैदिकदर्शनाप्रत्यासन्नाः परमाण्वादिकारणवादाः प्रत्याख्याता इति ''एतेन'' इति सूत्रार्थ इति ।**

ಅದ್ವೈತಿಗಳು 'ಏತೇನ ಶಿಷ್ಟಾಃ ಅಪರಿಗ್ರಹಾಃ ವ್ಯಾಖ್ಯಾತಾಃ' ಎಂಬ ಸೂತ್ರವನ್ನು ವಿಲಕ್ಷಣತ್ವಾಧಿಕರಣದಲ್ಲಿ ಸೇರಿಸುವುದಿಲ್ಲ. ಹೊರತಾಗಿ, ಶಿಷ್ಟಪರಿಗ್ರಹಾಧಿಕರಣವೆಂದು ಪ್ರತ್ಯೇಕ ಅಧಿಕರಣವೆಂದಿದ್ದಾರೆ. ಬ್ರಹ್ಮಕಾರಣತ್ವವಾದವು ವೈದಿಕವಾಗಿರುವುದರಿಂದ, ಮನು, ವ್ಯಾಸ ಮೊದಲಾದ ಶಿಷ್ಟಜನರಿಂದ, ಸ್ವಲ್ಪ ಅಂಶದಿಂದಲಾದರೂ ಪರಿಗೃಹೀತವಾದ ವೈದಿಕದರ್ಶನಕ್ಕೆ ಹತ್ತಿರವಾದ ಸಾಂಖ್ಯಮತವನ್ನು ನಿರಾಕರಣೆ ಮಾಡಿರುವುದರಿಂದ ಕೆಲವು ಅಂಶಗಳಿಂದಲೂ ಕೂಡ ಪರಿಗ್ರಹಿಸಲು ಯೋಗ್ಯವಲ್ಲದ ವೈದಿಕದರ್ಶನಕ್ಕೆ ಹತ್ತಿರವಾಗದ ವೈಶೇಷಿಕರ ಪರಮಾಣ್ವಾದಿಕಾರಣತಾವಾದವು ಪ್ರತ್ಯಾಖ್ಯಾತವಾಯಿತು ಎಂಬುದು ಸೂತ್ರಾರ್ಥ.

**तन्न । ''एतेन सर्वे व्याख्याताः'' इत्यत्रापि त्वयाऽस्यैवार्थस्योक्तत्वेन पुनरुक्तेः।**

ಇದು ತಪ್ಪು. ಈಗಾಗಲೇ 'ಏತೇನ ಸರ್ವೇ ವ್ಯಾಖ್ಯಾತಾಃ'ಎಂಬ ಪ್ರಥಮಾಧ್ಯಾಯದ ಕೊನೆಯ ಸೂತ್ರಕ್ಕೆ ಇದೇ ಅರ್ಥವನ್ನು ನೀವು ಹೇಳಿದ್ದೀರಿ. ಪುನಃ ಆ ಅರ್ಥವನ್ನೇ ಈ ಸೂತ್ರಕ್ಕೆ ಹೇಳಿದರೂ ಕೂಡ ಪುನರುಕ್ತಿ ಬರುತ್ತದೆ.

ವಿವರಣೆ - 'ತರ್ಕಾಪ್ರತಿಷ್ಠಾನದಪ್ಯನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' - ಅತೀಂದ್ರಿಯವಿಷಯದಲ್ಲಿ ನಿತ್ಯವಾದ ವೇದವೇ ನಿಶ್ಚಾಯಕ. ತರ್ಕದಿಂದ ವೇದಸಿದ್ಧವಾದ ವಿಷಯವನ್ನು ಅಲ್ಲಗಳೆಯಬಾರದು. ಆದ್ದರಿಂದಲೇ ಅನುಮಾನದ ಆಧಾರದಿಂದ ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಹೇಳಿ, ಶ್ರುತಿಶುದ್ಧವಾದ ಬ್ರಹ್ಮನ ಜಗತ್ ಕಾರಣತ್ವವಾದವನ್ನು ನಿರಾಕರಣೆ ಮಾಡಬಾರದು. ಈ ಸೂತ್ರದಲ್ಲಿ 'ತರ್ಕಾಪ್ರತಿಷ್ಠಾನಾತ್' ಎಂಬುದು ಸಿದ್ಧಾಂತಭಾಗ, 'ಅನ್ಯಥಾಽನುಮೇಯಮಿತಿ' ಎಂಬುದು ಪೂರ್ವಪಕ್ಷಭಾಗ. ಪುನಃ 'ಏವಮಪ್ಯನಿರ್ಮೋಕ್ಷಪ್ರಸಂಗಃ' ಎಂಬುದು ಸಿದ್ಧಾಂತಭಾಗವಾಗಿದೆ.

ಈ ಸೂತ್ರ ವ್ಯಾಖ್ಯಾನವೂ ಕೂಡ ಅಯುಕ್ತ. 'ಅನ್ಯಥಾಽನುಮೇಯಮ್' ಎಂಬುದಕ್ಕೆ ಶ್ರುತವಾದ 'ತರ್ಕಾಪ್ರತಿಷ್ಠಾನಾತ್' ಎಂಬಲ್ಲಿಯೇ ಅನ್ವಯವನ್ನು ತಿಳಿಯಲು ಬರುವಾಗ 'ಶ್ರೋತಸ್ಯ ವಿಲಕ್ಷಣ್ಯೆವರಪಿ ಕಾರ್ಯಕಾರತ್ವಾಭಾವನಹಾಹಿನಿ ತರ್ಕಸ್ಯಅಪ್ರತಿಷ್ಠಿತತ್ವಾತ್' ಎಂಬುದಾಗಿ ಅಧ್ಯಾಹೃತವಾದ ಸಾಧ್ಯದ ಜೊತೆಗೆ ಅನ್ವಯವನ್ನು ಮಾಡುವುದು ಅಯುಕ್ತವಾಗುತ್ತದೆ. ಪ್ರಸಂಗಶಬ್ದ ಹಾಗೂ ಅಪಿಶಬ್ದಗಳು ವ್ಯರ್ಥವಾಗುತ್ತವೆ. ಎಲ್ಲಾ ಬಗೆಯ ತರ್ಕಗಳನ್ನು ಅಪ್ರಮಾಣವೆನ್ನುವುದಾದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ಅನಾರಂಭಣೀಯವಾಗಬೇಕಾಗುತ್ತದೆ. 'ಯಃ ತರ್ಕೇನ ಅನುಸಂಧತ್ತೇ' ಇತ್ಯಾದಿ ಶ್ರುತಿ-ಸ್ಮೃತಿಗಳ ವಿರೋಧವೂ ಕೂಡ ಪ್ರಾಪ್ತವಾಗುತ್ತದೆ. ಹೀಗೆ ಅದ್ವೈತಿಗಳ ಪ್ರಕಾರ ವಿಲಕ್ಷಣತ್ವಾಧಿಕರಣದಲ್ಲಿರುವ ಎಂಟುಸೂತ್ರಗಳ ವ್ಯಾಖ್ಯಾನವು ಅತ್ಯಂತ ಅಯುಕ್ತವಾಗಿದೆ ಎಂದು ಹೇಳಿದಂತಾಯಿತು.

'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಒಂದೇ ಸೂತ್ರವನ್ನು ಶಿಷ್ಟಪರಿಗ್ರಹಾಧಿಕರಣವೆನ್ನುತ್ತಾರೆ. ಈ ಅಧಿಕರಣದಲ್ಲಿ ಬ್ರಹ್ಮಕಾರಣತ್ವವಾದವು ವೈದಿಕಮತವಾಗಿರುವುದರಿಂದ ವ್ಯಾಸ, ಮನು ಮೊದಲಾದ ಶಿಷ್ಟಜನರಿಂದ ಅನಾದೃತವಾದ ವೈಶೇಷಿಕರ ಪರಮಾಣುವಿನ ಕಾರಣತ್ವವಾದವು ನಿರಾಕೃತವಾಯಿತು ಎಂದು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ.

ಇದೂ ಕೂಡ ಅಯುಕ್ತ. ಪ್ರತ್ಯೇಕಅಧಿಕರಣವೆನ್ನಲು ಯಾವುದೇ ಅಭ್ಯಧಿಕಾ-ಶಂಕೆಯಾಗಲೀ, ಹೊಸದಾದ ಸಿದ್ಧಾಂತಯುಕ್ತಿಗಳಾಗಲೀ ಸೂತ್ರದಲ್ಲಿ ಕಾಣಿಸುತ್ತಿಲ್ಲ. ಮತ್ತು ಪರಮಾಣ್ವಾಧಿಕಾರಣತಾವಾದವನ್ನು ಪ್ರಥಮಾಧ್ಯಾಯದ ಕೊನೆಯ ಸೂತ್ರವೆನಿಸಿದ 'ಏತೇನ ಸರ್ವಾ ವ್ಯಾಖ್ಯಾತಾಃ' ಎಂಬಲ್ಲಿ ನೀವು ನಿರಾಕರಣೆ ಮಾಡಿದ್ದೀರಿ. ಪುನಃ ಅದೇ

ವಿಷಯವನ್ನು ಇಲ್ಲಿಯೂ ಹೇಳಿದರೆ ಪುನರುಕ್ತಿಯು ಬರುತ್ತದೆ. ವೈಶೇಷಿಕರು ಈಶ್ವರನನ್ನು ಒಪ್ಪಿರುವುದರಿಂದ ವ್ಯಾಸಾದಿ ಶಿಷ್ಟರಿಗೆ ಸ್ವಲ್ಪವಾದರೂ ಹತ್ತಿರವಾಗಿದ್ದಾರೆ. ಆದರೆ ಸಾಂಖ್ಯರು ಈಶ್ವರನನ್ನು ಒಪ್ಪದ ಕಾರಣ ಶಿಷ್ಟಜನರಿಂದ ಅತ್ಯಂತ ತಿರಸ್ಕೃತರಾಗಿದ್ದಾರೆ. ಆದರೆ ನೀವು ಇದಕ್ಕೆ ವಿರುದ್ಧವಾಗಿ ಸಾಂಖ್ಯರನ್ನೇ ವ್ಯಾಸಾದಿಶಿಷ್ಟರಿಂದ ಪರಿಗ್ರಹೀತರಾಗಿದ್ದಾರೆಂದು ವ್ಯಾಖ್ಯಾನ ಮಾಡಿರುತ್ತೀರಿ. ಹೀಗೆ ಅದ್ವೈತಮತದಲ್ಲಿ ಪ್ರತಿಯೊಂದು ಸೂತ್ರಗಳ ವ್ಯಾಖ್ಯಾನವೂ ಕೂಡ ಅತ್ಯಂತ ಅಯುಕ್ತವಾಗಿವೆ ಎಂದು ನಿರ್ಣಯವಾಯಿತು.

**निरीशसांख्यवादादपि सेश्वरवैशेषिकादिवादानामेवेश्वरवादिभिः शिष्टैः परिगृहीतत्वादीशकारणत्ववादिवैदिकदर्शनप्रत्यासन्नत्वाच्च । तदुक्तमनुव्याख्याने ''नच शिष्टागृहीतत्वं निरीशादीशवादिनः'' इति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् असदधिकरणं सम्पूर्णम् ।।१।।**

ಸಾಂಖ್ಯಮತವು ವೈದಿಕದರ್ಶನಕ್ಕೆ ಹತ್ತಿರವಾಗಿದೆ. ವೈಶೇಷಿಕರ ಮತವು ವೈದಿಕದರ್ಶನಕ್ಕೆ ದೂರವಾಗಿದೆ ಎಂದು ನೀವು ಹೇಳಿದಿರಿ. ವಿಚಾರ ಮಾಡಿದರೆ ಸಾಂಖ್ಯರು ನಿರೀಶ್ವರವಾದಿಗಳು, ವೈಶೇಷಿಕರು ಸೇಶ್ವರವಾದಿಗಳು. ಮನು, ವ್ಯಾಸ ಮೊದಲಾದವರೂ ಕೂಡ ಸೇಶ್ವರವಾದಿಗಳು. ಸೇಶ್ವರವಾದಿಗಳಾದ ವ್ಯಾಸ ಮೊದಲಾದವರು ಸೇಶ್ವರವಾದಿಗಳೇ ಆದ ವೈಶೇಷಿಕರ ಮತವನ್ನೇ ಸ್ವಲ್ಪಮಟ್ಟಿಗಾದರೂ ಒಪ್ಪಿಕೊಳ್ಳುತ್ತಾರೆ ಹೊರತು, ನಿರೀಶ್ವರವಾದಿಗಳಾದ ಸಾಂಖ್ಯಮತವನ್ನು ಸ್ವಲ್ಪವೂ ಕೂಡ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಮತ್ತು ಯಾರು ಈಶ್ವರನನ್ನು ಒಪ್ಪುತ್ತಾರೋ, ಅವರೇ ವೈದಿಕದರ್ಶನಕ್ಕೆ ಹತ್ತಿರವಾಗುತ್ತಾರೆ. ಆದ್ದರಿಂದ ಸಾಂಖ್ಯರು ವೈದಿಕದರ್ಶನಕ್ಕೆ ದೂರವೇ ಆಗಿದ್ದಾರೆ ಹೊರತು, ಹತ್ತಿರವಾಗಿಲ್ಲ. ಇದನ್ನೇ ಅನುವ್ಯಾಖ್ಯಾನದಲ್ಲಿ 'ನಚ ಶಿಷ್ಟಾಗೃಹೀತತ್ವಂ ನಿರೀಶಾದೀಶವಾದಿನಃ' ನಿರೀಶ್ವರವಾದಿಯಾದ ಸಾಂಖ್ಯನಿಗಿಂತಲೂ ಈಶ್ವರವಾದಿಗಳಾದ ವೈಶೇಷಿಕರು ಶಿಷ್ಟರಿಂದ ಹೆಚ್ಚು ಅಪರೀಗ್ರಹಿತರಲ್ಲ ಎಂದು ಹೇಳಿರುತ್ತಾರೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಸದಧಿಕರಣವು ಸಂಪೂರ್ಣವಾಯಿತು

ಪರಿಪೂರ್ಣಚಂದ್ರಿಕಾ

**प्रकाशः —**

आद्यं सूत्रं निरस्य द्वितीयादि निराह — **अपि चेति** ।। **पूर्वरूपेति** ।। प्रच्युतगोमयत्वाद्यवस्थानामेवावयवानां वृश्चिकादिशरीरोपादानत्वादिति भावः ।

ಅದ್ವೈತಮತದ ಪ್ರಕಾರ ಪ್ರಥಮ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಎರಡನೆಯ ಸೂತ್ರದಿಂದ ಪ್ರಾರಂಭಿಸಿ, ಪ್ರತಿಯೊಂದು ಸೂತ್ರಗಳ ಅದ್ವೈತವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಅಪಿ ಚ' ಇತ್ಯಾದಿ ಗ್ರಂಥದಿಂದ.

'ಪೂರ್ವರೂಪ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಗೋಮಯದಿಂದ ಚೇಳು ಹುಟ್ಟುತ್ತದೆ ಎಂದರೆ ಚೇಳಿನ ಶರೀರವು ಗೋಮಯದಿಂದ ಹುಟ್ಟುತ್ತದೆ ಎಂದರ್ಥ. ಆದ್ದರಿಂದ ಚೇಳಿನ ಶರೀರಕ್ಕಷ್ಟೇ ಗೋಮಯದ ಭಾಗವು ಉಪಾದಾನಕಾರಣವಾಗಿದೆ ಎಂದು ತಿಳಿಯಬೇಕು.

**प्रकाशः — तद्वत्प्रसङ्गेत्यस्यार्थः कार्यधर्मापत्ताविति** ।। **सप्तममपीति** ।। एतच्च परमते ।।

ಸೂತ್ರದಲ್ಲಿ 'ತದ್ವತ್ ಪ್ರಸಂಗಾತ್' ಎಂಬುದಕ್ಕೆ 'ಕಾರ್ಯಧರ್ಮಾಪತ್ತೌ' ಎಂದರ್ಥ. ಕಾರ್ಯದಲ್ಲಿರುವ ಧರ್ಮಗಳೆಲ್ಲವೂ ಬ್ರಹ್ಮನಲ್ಲೇ ಬರಬೇಕಾದೀತು ಎಂದಭಿಪ್ರಾಯ. 'ಸಪ್ತಮಮಪ್ಯಯುಕ್ತಮ್' ಎಂಬುದರಿಂದ ಏಳನೆಯ ಸೂತ್ರ ವ್ಯಾಖ್ಯಾನವು ಅಯುಕ್ತವಾಗಿದೆ ಎಂದು ಹೇಳಿದ್ದಾರೆ. ಇದನ್ನು ಕೇವಲ ಅದ್ವೈತಮತದಲ್ಲಿ ದೋಷವನ್ನು ಹೇಳಿದ್ದಾರೆಂದು ತಿಳಿಯಬೇಕು.

**प्रकाशः** — मतान्तरे तु प्रधानकारणवादे हि निर्विकारपुरुषसन्निधानात्प्रधान-प्रवृत्तावितरेतरधर्माध्यासादयो दुरुपपादाः । अन्यत्रान्यधर्मानुसन्धानरूपोऽध्यासो निर्विकारपुरुषस्य न सम्भवति । अचेतनायाः प्रकृतेरध्यासस्सुतरां न सम्भवतीत्यर्थवर्णनात् ।।

ರಾಮಾನುಜಮತದ ಪ್ರಕಾರ ಈ ರೀತಿಯಾದ ದೋಷವನ್ನು ತಿಳಿಯಬೇಕು. ರಾಮಾನುಜರು ಪ್ರಧಾನದ ಧರ್ಮಗಳೆಲ್ಲವೂ ಪುರುಷರಲ್ಲಿ ಅಧ್ಯಸ್ತವಾಗುತ್ತದೆ. ಪುರುಷನ ಧರ್ಮಗಳೆಲ್ಲವೂ ಪ್ರಧಾನದಲ್ಲಿ ಅಧ್ಯಸ್ತವಾಗುತ್ತವೆ ಎಂದು ಸಾಂಖ್ಯರು ಹೇಳುತ್ತಾರೆ. ಇದು ಯುಕ್ತವಾಗುವುದಿಲ್ಲ. ಏಕೆಂದರೆ ಇಬ್ಬರಿಗೂ ಪರಸ್ಪರ ಸನ್ನಿಧಾನವಿದ್ದರೂ ಅಧ್ಯಾಸವನ್ನು ಮಾಡಲು ಸಾಧ್ಯವಿಲ್ಲ. ಏಕೆಂದರೆ ಮತ್ತೊಂದು ಕಡೆ ಇರುವ ಧರ್ಮದ ಅನುಸಂಧಾನವೇ 'ಅಧ್ಯಾಸ' ಎಂದು ಕರೆಸಿಕೊಳ್ಳುತ್ತದೆ. ನಿರ್ವಿಕಾರನಾದ ಪುರುಷನಲ್ಲಿ ಇಂತಹ ಅಧ್ಯಾಸವನ್ನು ಉಪಪಾದನೆ ಮಾಡಲಾಗದು. ಪ್ರಕೃತಿಯು ಅಚೇತನವಾಗಿರುವುದರಿಂದ, ಅದರಲ್ಲಿಯೂ ಕೂಡ ಅನುಸಂಧಾನರೂಪವಾದ ಅಧ್ಯಾಸವು ಯುಕ್ತವಾಗುವುದಿಲ್ಲ. ಹೀಗೆ ರಾಮಾನುಜರು ಸೂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ.

ಅಸದಧಿಕರಣ (೨-೧-೪)

**प्रकाशः – अष्टममिति ।।** एतच्च मतद्वयेऽपि समम् ।। **एकसूत्रत्वेनेति ।।** एतच्च परमताभिप्रायेण । मतान्तरे तु तर्काप्रतिष्ठानादित्येतद्विभज्य तर्कमूलप्रधानवादप्रत्याख्यानपरत्वेन योजनात् । तत्र च स्वपक्षदोषात्तर्काप्रतिष्ठानाच्चेति विन्यासः स्वरस इत्यपिशब्दो व्यर्थ इति ध्येयम् ।

ಎಂಟನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆಯೆಂದು ಗ್ರಂಥದಲ್ಲಿ ಹೇಳಿದ್ದನ್ನು ಇಬ್ಬರ ಮತ ಪ್ರಕಾರವೂ ತಿಳಿದುಕೊಳ್ಳಬೇಕು. 'ಏಕಸೂತ್ರತ್ವೇನ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ - 'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರವು ಒಂದೇ ಸೂತ್ರ ಎಂಬುದು ಅದ್ವೈತಮತದ ಪ್ರಕಾರ ತಿಳಿಯಬೇಕು. ರಾಮಾನುಜಮತದಲ್ಲಿ 'ತರ್ಕಾಪ್ರತಿಷ್ಠಾನಾತ್' ಎಂಬುದೇ ಬೇರೆ ಸೂತ್ರವಾಗಿದೆ. ತರ್ಕವನ್ನೇ ಆಶ್ರಯಿಸಿ ಹೊರಟಿರುವ ಪ್ರಕೃತಿವಾದದ ಪ್ರತ್ಯಾಖ್ಯಾನಕ್ಕಾಗಿ 'ತರ್ಕಾಪ್ರತಿಷ್ಠಾನಾತ್' ಎಂಬ ಸೂತ್ರವು ಹೊರಟಿದೆಯೆಂದು ರಾಮಾನುಜರು ವ್ಯಾಖ್ಯಾನ ಮಾಡುತ್ತಾರೆ. ಈ ಪಕ್ಷದಲ್ಲಿ ಇವರ ಈ ಸೂತ್ರವಿಭಾಗವೂ ಕೂಡ ಸಾಧುವಲ್ಲ. ಹೀಗೆ ಹೇಳುವುದಾದರೆ 'ಸ್ವಪಕ್ಷದೋಷಾಚ್ಚ' ಎಂಬಲ್ಲಿ 'ಚ'ಶಬ್ದವನ್ನು ಪ್ರಯೋಗ ಮಾಡದೇ 'ತರ್ಕಾಪ್ರತಿಷ್ಠಾನಾತ್' ಎಂಬಲ್ಲಿ 'ಚ'ಶಬ್ದವನ್ನು ಪ್ರಯೋಗ ಮಾಡಬೇಕಿತ್ತು. ಮತ್ತು 'ತರ್ಕಾಪ್ರತಿಷ್ಠಾನಾದಪಿ' ಎಂಬಲ್ಲಿರುವ 'ಅಪಿ' ಶಬ್ದವೂ ಕೂಡ ವ್ಯರ್ಥವಾಗಿದೆ.

**प्रकाशः – अस्मदीयरीत्येत्यादिमतद्वयेऽपि समम् ।। मन्तव्य इति ।।** मननादेस्तर्कानुसंधानरूपत्वादिति भावः । ''यस्तर्केणानुसन्धत्ते स धर्मं वेद नेतर'' इति रामानुजभाष्योक्ता मनुस्मृतिः ।।

'ಅಸ್ಮದೀಯರೀತ್ಯ' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಅಧ್ಯಾಹೃತಸಾಧ್ಯದಲ್ಲಿ ಅನ್ವಯವಿಲ್ಲ. ಶ್ರುತಸಾಧ್ಯದಲ್ಲೇ ಅನ್ವಯವಿದೆ ಇತ್ಯಾದಿಯಾಗಿ ಹೇಳಲ್ಪಟ್ಟ ದೋಷವು ಇಬ್ಬರ ಮತದಲ್ಲಿಯೂ ಕೂಡ ಸಮಾನವಾಗಿದೆ. 'ಮಂತವ್ಯಃ' ಎಂದರೆ ಮನನವನ್ನು ಮಾಡಬೇಕು ಎಂದರ್ಥ. ಮನನವು ತರ್ಕಾನುಸಂಧಾನರೂಪವಾಗಿರುವುದರಿಂದ ಏಕೆಂದರೆ 'ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ' ಎಂಬುದಾಗಿ ರಾಮಾನುಜಭಾಷ್ಯದಲ್ಲಿ ಉದಾಹರಿಸಿದ ಮನುಸ್ಮೃತಿಯ ವಾಕ್ಯವಾಗಿದೆ.

**प्रकाशः – यच्चोक्तमिति ।।** उभाभ्यामिति वर्तते । रामानुजमते ''शिष्टाः परिशिष्टा इत्यर्थ'' इत्येव विशेषः ।। **एतेनेति ।।** एतच्चाद्वैतिमतेन बोध्यम् ।

'ಯಚ್ಚೋಕ್ತಮ್' ಎಂಬಲ್ಲಿ 'ಉಭಾಭ್ಯಾಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅದ್ವೈತಮತದಲ್ಲಿ 'ಶಿಷ್ಟೈಃ ಅಪರಿಗ್ರಹಃ' ಎಂದು ಪದಚ್ಛೇದ, ರಾಮಾನುಜರ ಮತದಲ್ಲಿ 'ಶಿಷ್ಟಾಃ ಅಪರಿಗ್ರಹಃ' ಎಂಬುದಾಗಿ ಎರಡೂ ಕೂಡ ಬೇರೆ ಪದಗಳಾಗಿವೆ. ಇಷ್ಟು ಮಾತ್ರ ವ್ಯತ್ಯಾಸವಿದೆ. 'ಏತೇನ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಪುನರುಕ್ತಿದೋಷವು ಕೇವಲ ಅದ್ವೈತಮತದ ಪ್ರಕಾರ ತಿಳಿಯಬೇಕು.

**प्रकाशः** – सुधोक्तदोषमाह – **निरीश्वरेति** ।। रामानुजमते तु ''महद्दीर्घवद्वा'' इति वक्ष्यमाणेन पौनरुक्त्यं ध्येयम् । निरीश्वरेत्यादिनोक्तमर्थं मूलारूढं करोति ।। **तदुक्तमिति** ।।

ನ್ಯಾಯಸುಧೆಯಲ್ಲಿ ಹೇಳಿದ ದೋಷವನ್ನೇ 'ನಿರೀಶ್ವರ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ರಾಮಾನುಜಮತದಲ್ಲಾದರೂ 'ಮಹದ್ದೀರ್ಘವದ್ವಾ' ಇತ್ಯಾದಿಯಾದ ವಕ್ಷ್ಯಮಾಣಸೂತ್ರದಿಂದ ಪುನರುಕ್ತಿದೋಷ ಬರುತ್ತದೆಂದು ತಿಳಿಯಬೇಕು. 'ನಿರೀಶ್ವರ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಅರ್ಥವನ್ನು ಮೂಲಾರೂಢ ಮಾಡುತ್ತಿದ್ದಾರೆ 'ತದುಕ್ತಮ್' ಇತ್ಯಾದಿಯಾಗಿ.

**प्रकाशः** – एतेन कस्यचिच्छैवस्यापि मतं निरस्तं ध्येयम् । रीतिद्वयान्यतरानुसारित्वात् । एवमग्रेऽपि बोध्यम् । ग्रन्थगौरवभयान्न प्रपञ्च्यते ।।४।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे असदधिकरणं सम्पूर्णम् ।।४।।**

ಹೀಗೆ ರಾಮಾನುಜರನ್ನು ಮತ್ತು ವಿಶಿಷ್ಟಾದ್ವೈತಿಗಳನ್ನು ನಿರಾಕರಣೆ ಮಾಡಿರುವುದರಿಂದಲೇ ಶೈವರ ಮತವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಶೈವರು ಅದ್ವೈತಿಗಳ ಪ್ರಕಾರ ಅಥವಾ ವಿಶಿಷ್ಟಾದ್ವೈತಿಗಳ ಪ್ರಕಾರ ವ್ಯಾಖ್ಯಾನ ಮಾಡಿದ್ದಾರೆ ಹೊರತು ಹೊಸತಾದ ಯಾವ ಅರ್ಥವನ್ನೂ ಕೂಡ ಹೇಳಿರುವುದಿಲ್ಲ. ಇದರಂತೆ ಮುಂದಿನ ಅಧಿಕರಣಗಳಲ್ಲಿಯೂ ಶೈವಮತದ ನಿರಾಕರಣೆಯನ್ನು ಸ್ವತಃ ತಿಳಿದುಕೊಳ್ಳಬೇಕು. ಗ್ರಂಥಗೌರವದ ಭಯದಿಂದ ನಾವು ಮುಂದಿನ ಅಧಿಕರಣಗಳಲ್ಲಿ ಶೈವಮತದ ಅನುವಾದವನ್ನಾಗಲೀ, ನಿರಾಕರಣೆಯನ್ನಾಗಲೀ ವಿಚಾರ ಮಾಡಿರುವುದಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಸದಧಿಕರಣವು ಮುಕ್ತಾಯವಾಯಿತು.




ಎರಡನೆಯ 'ಅಭಿಮಾನಿವ್ಯಪದೇಶಸ್ತು' ಎಂಬುದೂ ಕೂಡ ಪೂರ್ವಪಕ್ಷ ಸೂತ್ರವೆಂದು ಅದ್ವೈತಿಗಳು ಹೇಳಿದ್ದಾರೆ. ಚೇತನನಾದ ಬ್ರಹ್ಮನು ಜಡವಾದ ಜಗತ್ತಿಗೆ ಉಪಾದಾನಕಾರಣವಾಗುವುದಿಲ್ಲವೆಂಬ ಪೂರ್ವಪಕ್ಷವನ್ನೇ ಖಚಿತ ಪಡಿಸಲು ಈ ಸೂತ್ರ ಹೊರಟದೆ ಎಂದು ವ್ಯಾಖ್ಯಾನ ಮಾಡುತ್ತಾರೆ. ಆದರೆ ಈ ಸೂತ್ರಕ್ಕೆ ಪ್ರಸಕ್ತಿಯೇ ಇಲ್ಲ. 'ಮೃದಬ್ರವೀತ್' ಎಂಬ ಅಭಿಮಾನಿದೇವತೆಯನ್ನು ಹೇಳದಿದ್ದರೂ, ಬ್ರಹ್ಮನು ಶುದ್ಧನಾಗಿದ್ದಾನೆ, ಜಗತ್ತು ಅಶುದ್ಧವಾಗಿದೆ ಆದ್ದರಿಂದ ಬ್ರಹ್ಮನಿಗೂ, ಜಗತ್ತಿಗೂ ವೈಲಕ್ಷಣ್ಯವಿದೆಯೆಂಬುದು ಪ್ರತ್ಯಕ್ಷದಿಂದಲೇ ಸಿದ್ಧವಾಗಿರುವಾಗ ಇದರ ಸಮರ್ಥನೆಗಾಗಿ ಎರಡನೆಯ ಸೂತ್ರವು ಅನಗತ್ಯ. ಚೇತನತ್ವ, ಜಡತ್ವ ಎಂಬ ವಿರುದ್ಧ ಧರ್ಮಗಳು ಮಾತ್ರ ಉಪಾದಾನ ಉಪಾದೇಯಭಾವಕ್ಕೆ ವಿರುದ್ಧವಾಗಿವೆ. ಬ್ರಹ್ಮನು ಶುದ್ಧನಾಗಿಯೂ, ಜಗತ್ತು ಅಶುದ್ಧವಾಗಿಯೂ ಇರುವ ಮಾತ್ರದಿಂದ ಉಪಾದಾನ ಉಪಾದೇಯಭಾವವು ಕೂಡಬಾರದೆಂದೇನೂ ಇಲ್ಲ ಎಂದಾದರೆ ಮೂರನೆಯ ಸೂತ್ರವು ಅಯುಕ್ತವಾಗುತ್ತದೆ. ಗೋಮಯದಿಂದ ಚೇಳು ಹುಟ್ಟುತ್ತದೆ. ಆ ಚೇಳಿನ ಶರೀರಕ್ಕೆ ಗೋಮಯವು ಉಪಾದಾನಕಾರಣ. ಆದರೂ ಕೂಡ ಚೇಳಿನ ಶರೀರವು ಚೇತನಕ್ಕೆ ಅಧಿಷ್ಠಾನವಾಗಿದೆ. ಗೋಮಯವು ಚೇತನದಿಂದ ಅಧಿಷ್ಠಿತವಾಗಿಲ್ಲ. ಹೀಗೆ ಎರಡಕ್ಕೂ ವೈಲಕ್ಷಣ್ಯವಿದ್ದರೂ ಉಪಾದಾನ ಉಪಾದೇಯಭಾವವು ಇರುತ್ತದೆ. ಅದರಂತೆ ಬ್ರಹ್ಮನು ಚೇತನನಾಗಿದ್ದು, ಜಗತ್ತು ಅಚೇತನವಾಗಿದ್ದರೂ ಉಪಾದಾನ ಉಪಾದೇಯಭಾವವು ಯುಕ್ತವಾಗುತ್ತದೆಂದು ಸಿದ್ಧಾಂತ ಮಾಡಲಾಗಿದೆ. ಇದೂ ಕೂಡ ಅಸಂಗತ. ಏಕೆಂದರೆ ಚೇತನ ಅಚೇತನಗಳಿಗೆ ಉಪಾದಾನ ಉಪಾದೇಯಭಾವವೇ ಇಲ್ಲವೆಂದು ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿರುವಾಗ ಅಂತಹ ಎರಡು ವಸ್ತುಗಳಿಗೂ ಉಪಾದಾನ ಉಪಾದೇಯಭಾವವನ್ನೇ ತೋರಿಸಬೇಕು. ಹಾಗೇ ತೋರಿಸಿದರೆ ಬೇರೆ ರೀತಿಯ ವೈಲಕ್ಷಣ್ಯವಿರುವ ಎರಡು ವಸ್ತುಗಳಿಗೆ ಉಪಾದಾನ ಉಪಾದೇಯಭಾವವನ್ನು ಹೇಳಿ ಅದರ ಆಧಾರದಿಂದ ಚೇತನನಾದ ಬ್ರಹ್ಮನಿಗೂ, ಅಚೇತನನಾದ ಜಗತ್ತಿಗೂ ಉಪಾದಾನ ಉಪಾದೇಯಭಾವವನ್ನು ಸಾಧಿಸುವುದು ಅಸಂಗತವಾಗುತ್ತದೆ.

'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ನಾಲ್ಕನೆಯ ಸೂತ್ರದಲ್ಲಿ ಸತ್ಕಾರ್ಯವಾದವನ್ನು ಸಮರ್ಥನೆ ಮಾಡುತ್ತಾ ಅಸತ್ಕಾರ್ಯವಾದದ ಆಕ್ಷೇಪವನ್ನು ನಿರಾಕರಿಸಿದ್ದೀರಿ. ಈ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಅಸತ್' ಶಬ್ದಕ್ಕೆ 'ಅಸದಿತಿಚೇನ್ನ' ಎಂಬಲ್ಲಿ ಪ್ರಸಜ್ಯೇತ ಎಂಬ ಪದವನ್ನು 'ಪ್ರತಿಷೇಧಮಾತ್ರತ್ವಾತ್' ಎಂಬಲ್ಲಿ ಸತ್ಕಾರ್ಯವಾದ ಪ್ರತಿಷೇಧಸ್ಯ, ಸತ್ಕಾರ್ಯಪ್ರತಿಷೇಧಮಾತ್ರತ್ವಾತ್' ಎಂಬುದನ್ನು ನೀವು ಅಧ್ಯಾಹಾರ ಮಾಡಿಕೊಳ್ಳಬೇಕು. ನಮ್ಮ ಸಿದ್ಧಾಂತದ ಪ್ರಕಾರ ಬ್ರಹ್ಮನ ಜಗತ್ಕಾರಣತ್ವವನ್ನೇ ನೇರವಾಗಿ ಸೂತ್ರವು ಆಕ್ಷೇಪ ಮಾಡುತ್ತಿದೆ. ನಿಮ್ಮ ಮತದಲ್ಲಿ ಅಸತ್‌ಕಾರ್ಯವಾದವನ್ನು ಆಕ್ಷೇಪ ಮಾಡಲಾಗಿದೆ. ನೇರವಾಗಿ ಬ್ರಹ್ಮಕಾರಣತ್ವವನ್ನೇ ಆಕ್ಷೇಪ ಮಾಡಲು ಬರುವಾಗ, ಅಪ್ರಸ್ತುತವಾದ ಅಸತ್‌ಕಾರ್ಯವಾದವನ್ನು ಆಕ್ಷೇಪ ಮಾಡುವುದು ಅಸಮಂಜಸ.

'ಅಪೀತೌ ತದ್ವತ್ಪ್ರಸಂಗಾದಸಮಂಜಸಮ್' ಎಂಬ ಐದನೆಯ ಸೂತ್ರವು ಕೇವಲ ಪೂರ್ವಪಕ್ಷ ಪ್ರಾಪಕವಾಗಿದೆ ಎಂದು ಹೇಳುತ್ತೇವೆ. ಜಗತ್ತು ಬ್ರಹ್ಮನಿಂದ ಹುಟ್ಟುವುದಾದರೆ ಜಗತ್ತನ್ನು ಹೇಳುವ ಗುಣದೋಷಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾದೀತು. ಆವಾಗ ಬ್ರಹ್ಮನು ನಿರ್ವಿಕಾರನು, ಸರ್ವಜ್ಞನು, ಶುದ್ಧನು ಇತ್ಯಾದಿ ಶ್ರುತಿಗಳ ವಿರೋಧವೂ ಬರುತ್ತದೆ

ಎಂಬುದು ನಿಮ್ಮ ವ್ಯಾಖ್ಯಾನ. ಇದೂ ಕೂಡ ಸರಿಯಿಲ್ಲ. ಕಾರ್ಯಭೂತವಾದ ಜಗತ್ತಿನಲ್ಲಿರುವ ಧರ್ಮಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾಗುತ್ತದೆ ಎನ್ನಲು ಕಾರ್ಯದ ನಾಶವೇ ಕಾರಣವೋ, ಅಥವಾ ಕಾರ್ಯಕಾರಣಗಳಿಗಿರುವ ಅಭೇದವು ಕಾರಣವೋ? ಮೊದಲನೆಯ ಪಕ್ಷದಲ್ಲಿ ಕಾರ್ಯವೇ ನಾಶವಾದ ಮೇಲೆ ಅವುಗಳ ಧರ್ಮವೂ ಕೂಡ ನಾಶವಾಗುತ್ತವೆಂದು ಉತ್ತರ. ಎರಡನೆಯ ಪಕ್ಷದಲ್ಲಿ ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಸ್ಥಿತಿಕಾಲದಲ್ಲಿಯೂ ಕೂಡ ಕಾರ್ಯದಲ್ಲಿರುವ ಧರ್ಮವು ಕಾರಣದಲ್ಲಿ ಬರುತ್ತದೆಂಬ ಆಕ್ಷೇಪವು ಇದ್ದೇ ಇದೆ. ಆದ್ದರಿಂದ ಐದನೆಯ ಸೂತ್ರವು ಯಾವುದೇ ಪೂರ್ವಪಕ್ಷದ ಯುಕ್ತಿಯನ್ನು ಉಪೋದ್ಬಲನೆ ಮಾಡುವುದಿಲ್ಲ.

'ನತು ದೃಷ್ಟಾಂತಭಾವಾತ್' ಎಂಬ ಆರನೆಯ ಸೂತ್ರದಲ್ಲಿ ಕಾರ್ಯಕಾರಣಗಳಿಗೆ ಅಭೇದವಿದ್ದರೂ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುವುದಿಲ್ಲವೆನ್ನಲು ಅನೇಕ ದೃಷ್ಟಾಂತಗಳಿವೆ ಎಂದು ವ್ಯಾಖ್ಯಾನ ಮಾಡಿದ್ದೀರಿ. ಇದೂ ಕೂಡ ಅಯುಕ್ತ. ಈಗಾಗಲೇ 'ದೃಶ್ಯತೇ ತು' ಎಂಬ ಸೂತ್ರದಿಂದಲೇ ಗೋಮಯದ ಕಾರ್ಯವಾದ ಚೇಳಿನಲ್ಲಿರುವ ಧರ್ಮಗಳು ಕಾರಣವಾದ ಗೋಮಯದಲ್ಲಿ ಬರುವುದಿಲ್ಲವೆಂದು ದೃಷ್ಟಾಂತದಿಂದ ಹೇಳಿದ ಮೇಲೆ ಅದೇ ವಿಷಯವನ್ನು ಈ ಸೂತ್ರವು ಹೇಳಿದರೆ ಪುನರುಕ್ತವಾಗುತ್ತದೆ.

'ಸ್ವಪಕ್ಷದೋಷಾಚ್ಚ'ಎಂಬ ಏಳನೆಯ ಸೂತ್ರದಲ್ಲಿ ಜಲಾಹರಣಾದಿಗಳಿಗೆ ಸಮರ್ಥವಾದ ಘಟವನ್ನು ಕುರಿತು ಜಲಾಹರಣಾದಿಗಳಿಗೆ ಸಮರ್ಥವಾಗದ ಮಣ್ಣು ಹೇಗೆ ಉಪಾದಾನವಾಗಿದೆಯೋ, ಅದರಂತೆ ರೂಪರಸಾದಿಗುಣಗಳನ್ನು ಹೊಂದಿರುವ ಜಗತ್ತಿಗೆ ರೂಪರಸಾದಿಗುಣಗಳನ್ನು ಹೊಂದಿರದ ಪ್ರಕೃತಿಯು ಕಾರಣವಾಗುತ್ತದೆ ಎಂದು ಸಾಂಖ್ಯನು ಆಕ್ಷೇಪ ಮಾಡಿದಾಗ ಪ್ರಧಾನವು ಉಪಾದಾನಕಾರಣವಾಗುತ್ತದೆ, ಆದರೆ ಅಚೇತನವಾದ ಜಗತ್ತಿಗೆ ಚೇತನವಾದ ಬ್ರಹ್ಮನು ಉಪಾದಾನಕಾರಣನಾಗುವುದಿಲ್ಲ ಎಂಬ ಸಾಂಖ್ಯರ ಆಕ್ಷೇಪಕ್ಕೆ ನಿಮ್ಮಿಂದ ಉತ್ತರಿಸಲಾಗದು. ಏಕೆಂದರೆ ಅಚೇತನಪದಾರ್ಥಕ್ಕೆ ಚೇತನವು ಉಪಾದಾನಕಾರಣವಾಗಿರುವುದು ಎಲ್ಲಿಯೂ ಕಂಡಿಲ್ಲ. ಅಷ್ಟೇ ಅಲ್ಲದೇ ಬ್ರಹ್ಮನನ್ನು ನೀವು ನಿರ್ವಿಕಾರನೆಂದೂ ಕೂಡ ಹೇಳಿರುತ್ತೀರಿ.

'ತರ್ಕಾಪ್ರತಿಷ್ಠಾನಾದಪ್ಯನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' ಎಂಬ ಎಂಟನೆಯ ಸೂತ್ರದಲ್ಲಿ 'ತರ್ಕಾಪ್ರತಿಷ್ಠಾನಾತ್' ಎಂಬುದನ್ನು ಸಿದ್ಧಾಂತಶೇಷವನ್ನಾಗಿ 'ಅನ್ಯಥಾನುಮೇಯಮ್' ಎಂಬುದನ್ನು ಪೂರ್ವಪಕ್ಷ ಶೇಷವನ್ನಾಗಿ, 'ಅನಿರ್ಮೋಕ್ಷಪ್ರಸಂಗಃ' ಎಂಬುದನ್ನು ಪುನಃ ಸಿದ್ಧಾಂತಶೇಷವನ್ನಾಗಿ ಹೇಳುತ್ತೀರಿ. ಹೀಗೆ ವ್ಯಾಖ್ಯಾನ ಮಾಡಿದಾಗ ವಾಕ್ಯಭೇದ ದೋಷವು ಬರುತ್ತದೆ. ಸೂತ್ರದಲ್ಲಿರುವ 'ಅಪಿ' ಶಬ್ದ, 'ಪ್ರಸಂಗ' ಶಬ್ದಗಳಿಗೆ ವೈಯರ್ಥ್ಯ ಬರುತ್ತದೆ. 'ಅನ್ಯಥಾನುಮೇಯಮ್' ಎಂಬ ಸಾಧ್ಯಕ್ಕೆ ಹೇತುಸಮರ್ಪಕವಾಗಿ 'ತರ್ಕಾಪ್ರತಿಷ್ಠಾನಾತ್' ಎಂಬುದನ್ನೇ ಹೇಳಲು ಬರುವಾಗ ಶ್ರುತಿಸಿದ್ಧವಾದ ವಿಚಾರದಲ್ಲಿ ತರ್ಕಕ್ಕೆ ಅವಕಾಶವಿಲ್ಲ ಎಂಬ ಆಧ್ಯಾಹೃತವಾದ ಸಾಧ್ಯದಲ್ಲಿ ಅನ್ವಯ ಮಾಡುವುದು ಅಯುಕ್ತವಾಗುತ್ತದೆ. ಅಷ್ಟೇ ಅಲ್ಲದೇ ತರ್ಕವು ಅಪ್ರತಿಷ್ಠಿತವೆಂದು ನಿಮ್ಮಿಂದ ಸಾಧನೆ ಮಾಡಲೂ ಕೂಡ ಆಗುವುದಿಲ್ಲ. ಸಕಲವಿಧ ತರ್ಕಗಳು ದುಷ್ಟವಾಗಿವೆ ಎನ್ನುವುದಾದರೆ ಮೀಮಾಂಸಾಶಾಸ್ತ್ರವೇ ಅನಾರಂಭಣೀಯವಾಗಬೇಕಾಗುತ್ತದೆ. ಮತ್ತು 'ಯಃ ತರ್ಕೇನ ಅನುಸಂಧತ್ತೇ' ಇತ್ಯಾದಿ ಶ್ರುತಿವಾಕ್ಯಗಳು 'ಶ್ರೋತವ್ಯಃ ಮಂತವ್ಯಃ' ಇತ್ಯಾದಿ ಶ್ರುತಿವಾಕ್ಯಗಳು ಸತ್ತರ್ಕಗಳಿಂದ ಬ್ರಹ್ಮನನ್ನು ತಿಳಿಯಬೇಕೆಂದು ಹೇಳುತ್ತವೆ. ಆದ್ದರಿಂದ ಶ್ರುತ್ಯಾದಿಗಳ ಅನುಗ್ರಹವಿಲ್ಲದ ತರ್ಕವನ್ನು ದುಷ್ಟವೆಂದು ನೀವು ಹೇಳಬೇಕು. ಆದರೆ ಬ್ರಹ್ಮನು ಉಪಾದಾನನಲ್ಲ ಎನ್ನಲು ಯಾವ ವೈಲಕ್ಷಣ್ಯರೂಪವಾದ ತರ್ಕವನ್ನು ನೀವು ಹೇಳುತ್ತಿದ್ದೀರೋ ಅದು 'ನಿರ್ವಿಕಾರಃ' ಇತ್ಯಾದಿ ಶ್ರುತಿಗಳ ಅನುಗ್ರಹವನ್ನು ಹೊಂದಿರುವುದಿಲ್ಲ. ಆದ್ದರಿಂದ ನಿಮ್ಮ ತರ್ಕವೂ ಕೂಡ ದುಷ್ಟವಾಗಿದೆ ಎಂದಂತಾಯಿತು. ಹೀಗೆ ವಿಲಕ್ಷಣತ್ವಾಧಿ-

ಅಸದಧಿಕರಣ (೨-೧-೪)

ಕರಣದಲ್ಲಿರುವ ಎಂಟು ಸೂತ್ರಗಳ ವ್ಯಾಖ್ಯಾನವೂ ಕೂಡ ಅತ್ಯಂತ ಅಯುಕ್ತವಾಗಿದೆ. ವಿಶಿಷ್ಟಾದ್ವೈತಮತದಲ್ಲಿಯೂ ಕೂಡ ಇದರಂತೆ ತಿಳಿಯಬೇಕು.

''ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬುದನ್ನು ಶಿಷ್ಟಪರಿಗ್ರಹಾಧಿಕರಣವೆಂದು ಪರಿಗಣಿಸಿದ್ದೀರಿ. ಬ್ರಹ್ಮಕಾರಣತಾವಾದವು ವೈದಿಕವಾಗಿರುವುದರಿಂದ ಅದಕ್ಕೆ ಹತ್ತಿರವಾಗಿರುವ ಸಾಂಖ್ಯಮತವು ಶಿಷ್ಟರಾದ ಮನು, ವ್ಯಾಸ ಮೊದಲಾದವರಿಂದ ಸ್ವಲ್ಪವಾದರೂ ಪರಿಗ್ರಹಿತವಾಗಿದೆ. ಆದರೆ ವೈಶೇಷಿಕರ ಪರಮಾಣುಕಾರಣತಾವಾದವು ವೈದಿಕವಲ್ಲದ ಕಾರಣ ಶಿಷ್ಟರಾದ ಮನು, ವ್ಯಾಸ ಮೊದಲಾದವರಿಂದ ತಿರಸ್ಕರಿಸಲ್ಪಟ್ಟಿದೆ ಎಂದು ಈ ಸೂತ್ರಕ್ಕೆ ನೀವು ವ್ಯಾಖ್ಯಾನ ಮಾಡಿದ್ದೀರಿ. ಇದೂ ಕೂಡ ಅಯುಕ್ತ. ಈಗಾಗಲೇ 'ಏತನೇ ಸರ್ವೇ ವ್ಯಾಖ್ಯಾತಾಃ ಎಂಬ ಪ್ರಥಮಾಧ್ಯಾಯದ ಕೊನೆಯ ಸೂತ್ರದಲ್ಲಿ ವೈಶೇಷಿಕರ ಪರಮಾಣುಕಾರಣತಾವಾದವನ್ನು ನಿರಾಕರಣೆ ಮಾಡಿದ ಮೇಲೆ ಅದೇ ವಿಷಯವನ್ನು ಈ ಸೂತ್ರವೂ ಕೂಡ ಹೇಳಿದರೆ ಪುನರುಕ್ತಿ ಬರುತ್ತದೆ. ವಿಚಾರ ಮಾಡಿದರೆ ಸೇಶ್ವರರಾದ ವೇಶೇಷಿಕರಿಗಿಂತಲೂ ನಿರೀಶ್ವರರಾದ ಸಾಂಖ್ಯರು ಶಿಷ್ಟರಿಂದ ತಿರಸ್ಕರಿಸಲ್ಪಡುತ್ತಾರೆ. ವೈಶೇಷಿಕರು ಈಶ್ವರನನ್ನು ಒಪ್ಪಿರುತ್ತಾರೆಂಬ ಕಾರಣದಿಂದ ಸ್ವಲ್ಪವಾದರೂ ಅವರಲ್ಲಿ ವೈದಿಕತ್ವವು ಕಾಣಿಸುತ್ತದೆ. ಆದರೆ ಈಶ್ವರನನ್ನೇ ಒಪ್ಪದ ಸಾಂಖ್ಯರಲ್ಲಿ ವೈದಿಕತ್ವವು ಸ್ವಲ್ಪವೂ ಕೂಡ ಇರುವುದಿಲ್ಲ. ಮತ್ತು ಪ್ರತ್ಯೇಕ ಅಧಿಕರಣವೆಂದು ಕಲ್ಪನೆ ಮಾಡಲು ಹಿಂದಿನ ಸಿದ್ಧಾಂತದ ವಿಷಯದಲ್ಲಿ ಯಾವುದೇ ಪೂರ್ವಪಕ್ಷಯುಕ್ತಿಗಳು ಗೋಚರವಾಗುತ್ತಿಲ್ಲ ಮತ್ತು ಹೊಸದಾದ ಸಿದ್ಧಾಂತ ಯುಕ್ತಿಯೂ ಕೂಡ ಈ ಸೂತ್ರದಲ್ಲಿ ಕಾಣಿಸುತ್ತಿಲ್ಲ. ಆದ್ದರಿಂದ ಶಿಷ್ಟಪರಿಗ್ರಹಾಧಿಕರಣವೆಂಬ ಕಲ್ಪನೆಯೇ ಅಸಾಧುವಾಗಿದೆ.

ಇಲ್ಲಿಗೆ ಅಸದಧಿಕರಣದ ಸಾರ ಮುಗಿಯಿತು

*******

ಇಲ್ಲಿಗೆ ಪರಿಪೂರ್ಣಚಂದ್ರಿಕೆಯಲ್ಲಿ ಹತ್ತನೆಯ ಸಂಪುಟವು ಸಮಾಪ್ತವಾಯಿತು.

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಮಧ್ವೇಶಾರ್ಪಣಮಸ್ತು



ಶಬ್ದ ಶಬ್ದವೂ ಅಮೂಲ್ಯ, ಗುಣ ಗುಣವೂ ಅಮೋಘ.

ಮೊದಲ ಅಧ್ಯಾಯದ ಪ್ರಕೃತ್ಯಧಿಕರಣ

ಈ ಸಂಪುಟದಲ್ಲಿಯೇ ಸಮನ್ವಿತ.

ವಿಷ್ಣುವಿನ ಮಹಿಮೆಗೆ ವಿರೋಧಗಳಿಲ್ಲದಿದ್ದರೆ ಹೇಗೆ !

ಪರಿಹರಿಸುವುದರಿಂದಲೇ ಮಹಾದುಃಖ ಪರಿಹಾರ.

ಮಹಾನಂದಪ್ರಾಪ್ತಿ.

ಯುಕ್ತಿ-ಸಮಯ-ಶ್ರುತಿ-ನ್ಯಾಯೋಪೇತಶ್ರುತಿ

**ವಿರೋಧ** ಪರಿಹರಿಸಿದರೆ

**ಅವಿರೋಧಾ**ಧ್ಯಾಯದ ಮಂಗಳ.

ಅದಕ್ಕಿನ್ನೂ ಸಮಯವಿದೆ.

**ಅಸದಧಿಕರಣಪರ್ಯಂತ ಅಭ್ಯಸಿಸಿ, ಆನಂದಿಸಿ !**